

# ಋಗ್ವೇದಸಂಹಿತಾ

ಭಾಗ—೧೪

ಎರಡನೆಯ ಅಷ್ಟಕದಲ್ಲಿ

ಐದನೆಯ ಮತ್ತು ಆರನೆಯ ಅಧ್ಯಾಯಗಳು.

ಪ್ರಥಮ ಮಂಡಲದ ಸೂಕ್ತಗಳು ೧೮೪–೧೯೧

ದ್ವಿತೀಯ ಮಂಡಲದ ಸೂಕ್ತಗಳು ೧–೨೩



ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೧೪

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದ ಸಂಹಿತಾ

(ಕರ್ಣಾಟಕಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೧೪

ಎರಡನೆಯ ಅಷ್ಟಕದಲ್ಲಿ

ಐದನೆಯ ಮತ್ತು ಆರನೆಯ ಅಧ್ಯಾಯಗಳು.

ಪ್ರಥಮ ಮಂಡಲದ ಸೂಕ್ತಗಳು ೧೮೪–೧೯೧

ದ್ವಿತೀಯ ಮಂಡಲದ ಸೂಕ್ತಗಳು ೧–೨೩

———:O:———

*Translated with Exhaustive Critical Notes*

*by*

ASTHANA MAHAVIDWAN

H. P. VENKATA RAO.

*Editor*.

*Printed at*

SREE VINAYAK PRINTING WORKS, MYSORE.

1952

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore.



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ. ಸಿ. ಬಿ., ಜಿ. ಸಿ. ಎಸ್. ಐ. ರವರು**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನ ವಿದ್ವನ್ಮಂಡಲಿ

ಅಧ್ಯಕ್ಷರು :

ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು.**

—o—

Translator & Editor :

**ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್**

---

**ಸಹಾಯಕ ವಿದ್ವನ್ಮಂಡಲಿ**

1. **ಬ್ರ|| ಶ್ರೀ|| ಜಿ. ವಿಷ್ಣುಮೂರ್ತಿಭಟ್ಟರು,** ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತಮಹಾಪಾಠಶಾಲಾ, ಮೈಸೂರು.
2. **ಆಸ್ಥಾನ ವಿದ್ವಾನ್ ಬ್ರ|| ಶ್ರೀ|| H. ಗಂಗಾಧರಶಾಸ್ತ್ರಿಗಳು,** ಜ್ಯೌತಿಷ ವಿದ್ವಾನ್ ಮತ್ತು ಕರ್ಣಾಟಕ ಭಾಷಾಪಂಡಿತರು,
3. **ಬ್ರ|| ಶ್ರೀ|| ಶ್ರೀನಿವಾಸಶಾಸ್ತ್ರಿಗಳು;** ಋಗ್ವೇದ ಘನಪಾಠಿಗಳು.
4. **ಬ್ರ|| ಶ್ರೀ|| ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು,** ಶ್ರೌತ ವಿದ್ವಾನ್.
5. **ಬ್ರ|| ಶ್ರೀ|| ಹಿಟ್ಟವಳ್ಳಿ ದೇವರಭಟ್ಟರು,** ಮೀಮಾಂಸಾದರ್ಶನ ಪಂಡಿತರು.
6. **ಬ್ರ|| ಶ್ರೀ|| ವೆಂಕಟರಮಣಾಚಾರ್, M. A., B. T.,** ಸಾಹಿತ್ಯವಿದ್ವಾನ್.
7. **ಬ್ರ|| ಶ್ರೀ|| S. ರಂಗನಾಥನ್,** ಸಾಹಿತ್ಯವಿದ್ವಾನ್, ಅರಮನೆ ಸರಸ್ವತೀ ಭಂಡಾರ.
8. **ಬ್ರ|| ಶ್ರೀ|| ಪುತ್ತೂರು ಅನಂತಕೃಷ್ಣಮಾಚಾರ್,** ಸಾಹಿತ್ಯ ವಿದ್ವಾನ್, Govt. Oriental Research Institute. Mysore.
9. **ಬ್ರ|| ಶ್ರೀ|| S. ಸೀತಾರಾಮಶಾಸ್ತ್ರಿಗಳು,** ರಿಟೈರ್ಡ್ ಪಂಡಿತರು. Govt. Oriental Research Institute, Mysore.



ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು**

ವೇದವಿಮರ್ಶನ ವಿದ್ವನ್ಮಂಡಲಿಯ ಅಧ್ಯಕ್ಷರು

# ಮುನ್ನುಡಿ.

ಈ ಭಾಗದಲ್ಲಿ ಪ್ರಥಮಮಂಡಲವು ಮುಗಿದು ದ್ವಿತೀಯಮಂಡಲದಲ್ಲಿ ಸುಮಾರು ಅರ್ಧಭಾಗದಷ್ಟು ಮುಗಿದಿದೆ. ಋಗ್ವೇದದಲ್ಲಿರುವ ಹತ್ತು ಮಂಡಲಗಳಲ್ಲಿ ಪ್ರಥಮಮಂಡಲವೂ ಕೊನೆಯದಾದ ಹತ್ತನೆಯ ಮಂಡಲವೂ ಇತರ ಮಂಡಲಗಳಿಗಿಂತ ಪರಿಮಾಣದಲ್ಲಿ ದೊಡ್ಡದಾಗಿರುವುದಲ್ಲದೆ ಎರಡರಲ್ಲಿಯೂ ಒಟ್ಟು ನೂರತೊಂಭತ್ತೊಂದು ಸೂಕ್ತಗಳೂ ಮಂತ್ರದ್ರಷ್ಟೃಗಳಾದ ಅನೇಕ ಋಷಿಗಳೂ ಇದಾರೆ. ವಿಷಯವೈವಿಧ್ಯತೆಯೂ ಇದೆ, ಈ ಕಾರಣಗಳಿಂದಲೂ ಇತರ ಕಾರಣಗಳಿಂದಲೂ ಋಗ್ವೇದದಲ್ಲಿ ಈ ಎರಡು ಮಂಡಲಗಳಿಗೂ ಪ್ರಾಮುಖ್ಯ ಸ್ಥಾನವಿದೆ. ಆದ್ದರಿಂದಲೇ ನಾವು ಪ್ರಥಮಮಂಡಲವನ್ನು ವಿಸ್ತಾರವಾಗಿ ಬರೆದು ವಿವರಿಸಿದ್ದೇವೆ. ಕನ್ನಡ ಭಾಷೆಯಲ್ಲಾಗಲಿ, ಇತರ ಭಾಷೆಗಳಲ್ಲಾಗಲಿ ಋಗ್ವೇದಕ್ಕೆ ಇಷ್ಟು ವಿಸ್ತಾರವಾದ ಅರ್ಥಾನುವಾದ ವಿವರಣೆಗಳು ಇದುವರೆಗೆ ಎಲ್ಲಿಯೂ ಪ್ರಕಟವಾಗಿಲ್ಲವೆಂದರೆ ಅತಿಶಯೋಕ್ತಿಯೇನಲ್ಲ. ಇನ್ನು ಮುಂದೆ ಕೆಲವು ನಿರ್ದಿಷ್ಟವಿಷಯಗಳಲ್ಲಿ ವಿವರಣೆಯನ್ನು ಆದಷ್ಟು ಸಂಗ್ರಹಮಾಡಿ ಮುದ್ರಿಸಲಾಗುವುದು. ಈ ಕ್ರಮಕ್ಕನುಸಾರವಾಗಿ ಇನ್ನು ಮುಂದೆ ವ್ಯಾಕರಣಭಾಗವನ್ನು ಬಿಟ್ಟು ಬಿಡುವುದಲ್ಲದೆ ಹಿಂದೆ ಪ್ರಸಕ್ತವಾದ ಅನೇಕ ವಿಷಯಗಳು ಪುನಃ ವಿವರಿಸಲ್ಪಡಬೇಕಾದ ಸಂದರ್ಭಗಳಲ್ಲಿ ಹಿಂದಿನ ಭಾಗಗಳಲ್ಲಿ ಆ ವಿಷಯಗಳಿರುವ ಪುಟ ಸಂಖ್ಯೆಯನ್ನು ಮಾತ್ರ ಸೂಚಿಸಲಾಗುವುದು.

ಈ ದೇಶದ ಪೂರ್ವಕಾಲದ ಪಂಡಿತರೂ, ಪಾಶ್ಚಾತ್ಯಪಂಡಿತರೂ ವೇದಗಳ ಸಂಶೋಧನೆ ಮತ್ತು ವಿಮರ್ಶೆಗಳಿಗಾಗಿ ಪಟ್ಟಿರುವ ಶ್ರಮವು ಅಷ್ಟಿಷ್ಟಲ್ಲ. ಅವರ ಅಪಾರವಾದ ಶ್ರಮದ ಫಲರೂಪವಾದ ಅಪೂರ್ವ ಗ್ರಂಥಗಳ ತಿರುಳನ್ನು ಕನ್ನಡ ಭಾಷೆಯಲ್ಲಿ ಪರಿವರ್ತಿಸಿ ಅದರ ಜತೆಗೆ ಸಂಬಂಧಪಟ್ಟ ಅನೇಕ ವಿಷಯಗಳನ್ನೂ ಬಹು ಶ್ರಮದಿಂದ ಹುಡುಕಿ ಸೇರಿಸಿ ಗ್ರಂಥವನ್ನು ಸರ್ವಾದರಣೀಯವನ್ನಾಗಿ ಮಾಡಿ ಕನ್ನಡ ಭಾಷೆಗೂ, ಕನ್ನಡ ಭಾಷೆಯನ್ನಾಡುವ ಜನರಿಗೂ ಪ್ರೋತ್ಸಾಹವಿತ್ತು ವೇದಾರ್ಥಗಳನ್ನು ಸುಲಭವಾಗಿ ತಿಳಿದುಕೊಂಡು ಜನರು ಈಶ್ವರಾನುಗ್ರಹಕ್ಕೆ ಪಾತ್ರರಾಗಬೇಕೆಂಬ ಸದುದ್ದೇಶದಿಂದಲೇ ಶ್ರೀಮನ್ಮಹಾರಾಜರವರೂ ಅವರ ಸರ್ಕಾರದವರೂ ಈ ಬಹು ದ್ರವ್ಯಸಾಧ್ಯವಾದ ಉದ್ಯಮವನ್ನು ಕೈಗೊಂಡಿರುತ್ತಾರೆ. ಇಂತಹ ಸತ್ಕಾರ್ಯದಲ್ಲಿ ನೆರವಾಗಿ ಸಹಕರಿಸಬೇಕಾದುದು ಪ್ರತಿಯೊಬ್ಬರ ಕರ್ತವ್ಯವು.

ಅತಿಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡ ಭಾಷೆಯಲ್ಲಿ ವಿಮರ್ಶಾಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿಯಾದ ಸಕಲಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ, ಕರ್ಣಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂ ಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್** ಜಿ. ಸಿ. ಬಿ., ಜಿ. ಸಿ. ಎಸ್. ಐ. ಮಹಾಪ್ರಭುವರ್ಯರು ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟಣೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು, ಕರ್ಣಾಟಕಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ

ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ (ವೇದಮಂತ್ರಗಳಲ್ಲಿ ಅತಿಮುಖ್ಯವೆಂದು ಪರಿಗಣಿಸಲ್ಪಟ್ಟಿರುವ ಗಾಯತ್ರೀ ಎಂಬ ಮಂತ್ರನಾಮಾಂಕಿತರಾದ) ರಾಜಕುಮಾರಿಗೂ, ದ್ವಿತೀಯ ರಾಜಕುಮಾರಿಗೂ, ಸಮಸ್ತ ಪ್ರಜಾಕೋಟಿಗೂ, ವೇದಪುರುಷನಾದ ಸರ್ವೇಶ್ವರನು ಐಹಿಕಫಲಗಳಾದ ಆಯುರಾರೋಗ್ಯೈಶ್ವರ್ಯಾದಿಸಕಲಸಂಪತ್ತನ್ನೂ ಪಾರಮಾರ್ಥಿಕ ವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ಶ್ರೀಮತ್ಖರನಾಮಸಂವತ್ಸರ ಮಾಘ ಶುದ್ಧ ಸಪ್ತಮೀ ಸ್ಥಿರವಾರ
**2—2—1952.**

ಅನುವಾದಕ
**ಹೆಚ್. ಪಿ. ವೆಂಕಟರಾವ್,**
ಆಸ್ಥಾನ ಮಹಾವಿದ್ವಾನ್

|| ಶ್ರೀಃ ||

# ವಿಷಯಾನುಕ್ರಮಣಿಕೆ

## ಎರಡನೆಯ ಅಷ್ಟಕದಲ್ಲಿ ಐದನೆಯ ಅಧ್ಯಾಯವು

### ಪ್ರಥಮ ಮಂಡಲದಲ್ಲಿ ೧೮೪-೧೯೧ ಸೂಕ್ತಗಳು


ಪುಟಸಂಖ್ಯೆ

೧೮೪. ತಾವಾಮದ್ಯ ಎಂಬ ನೂರಎಂಭತ್ತನಾಲ್ಕನೆಯ ಸೂಕ್ತವು—

| | |
|---|---|
| ಸೂಕ್ತದ ವಿನಿಯೋಗ | 3 |
| ಋಷಿದೇವತಾ ಛಂದಸ್ಸುಗಳು | 4 |
| ಪ್ರಾತರನುವಾಕಮಂತ್ರಗಳ ಸ್ವರೂಪ ಇತ್ಯಾದಿ | 5 |
| ನಾಸತ್ಯಾ ಎಂಬ ಶಬ್ದದ ಅರ್ಥವಿವರಣೆ | 13 |
| ಅರ್ಯಃ ,, | 13 |
| ಮಘವಾನಾ ,, | 14 |
| ಊರ್ಮ್ಯಾ ,, | 19 |
| ಅಸ್ಮೇ ಎಂಬ ಶಬ್ದಕ್ಕೆ ಇರುವ ಸಪ್ತಮಿವಿಭಕ್ತ್ಯರ್ಥ ಪ್ರಯೋಗಗಳು | 20 |
| ಪೂಷನ್ ಶಬ್ದದ ನಾನಾರ್ಥಗಳು | 24 |
| ಸೂರ್ಯಾದೇವಿಯ ವಿವಾಹವಿಷಯ ಇತ್ಯಾದಿ | 26 |
| ಸುದಾನೂ, ಚರ್ಷಣಯಃ, ಮಾನ್ಯಸ್ಯ ಇತ್ಯಾದಿ ಶಬ್ದಗಳ ವಿವರಣೆ | 36 |
| ದೇವಯಾನ, ಪಿತೃಯಾನಗಳ ಸ್ವರೂಪವಿವರಣೆ | 45 |

೧೮೫. ಕತರಾ ಪೂರ್ವಾ ಎಂಬ ನೂರಎಂಭತ್ತೈದನೆಯ ಸೂಕ್ತವು—

| | |
|---|---|
| ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು | 47 |
| ಅಭಿಪ್ಲವವೆಂಬ ಯಾಗದ ವಿಷಯ | 49 |
| ಕವಿ ಶಬ್ದಾರ್ಥವಿವರಣೆ | 58 |
| ಅಭ್ವ ಶಬ್ದಾರ್ಥವಿವರಣೆ ಇತ್ಯಾದಿ | 63 |
| ಅದಿತಿ ಶಬ್ದಾರ್ಥವಿಮರ್ಶೆ | 67 |
| ಸ್ವರ್ವತ್ ಶಬ್ದವಿವರಣೆ | 69 |
| ಯುವತೀ, ಸಮಂತೇ, ಜಾಮಿ, ಭುವನಸ್ಯ ನಾಭಿಂ ಇತ್ಯಾದಿ ಶಬ್ದಗಳವಿವರಣೆ | 79 |
| ಆಗಃ ಎಂಬ ಶಬ್ದದ ವಿವರಣೆ | 90 |

ಪುಟಸಂಖ್ಯೆ

**೧೮೬. ಆ ನ ಇಳಾಭಿಃ ಎಂಬ ನೂರಎಂಭತ್ತಾರಯ ಸೂಕ್ತವು—**


| | |
|---|---|
| ಸೂಕ್ತದ ವಿನಿಯೋಗವು | 99 |
| ಋಷಿದೇವತಾಛಂದಸ್ಸುಗಳು | 100 |
| ವಿಶ್ವೇದೇವತೆಗಳ ವಿಷಯ | 102 |
| ವಿದಥೇ ಎಂಬ ಶಬ್ದದ ಅರ್ಥವಿಮರ್ಶೆ | 104 |
| ವೈಶ್ವಾನರಾಗ್ನಿಯ ವಿಷಯ | 107 |
| ಮಿತ್ರ, ವರುಣ, ಆರ್ಯಮಾ ಎಂಬ ದೇವತೆಗಳ ವಿಷಯ | 119 |
| ಉಷಾಸಾನಕ್ತಾ ಎಂಬ ಶಬ್ದದ ವಿವರಣೆ ಇತ್ಯಾದಿ | 136 |
| ಉಪ ವ ಏಷೇ ಎಂಬ ಋಕ್ಕಿನ ನಿರುಕ್ತವು ಮತ್ತು ಅರ್ಥವಿಮರ್ಶೆ | 137 |
| ಅರ್ಕ ಶಬ್ದದ ನಾನಾರ್ಥಗಳು | 139 |
| ಅಹಿರ್ಬುಧ್ನ್ಯಃ ಎಂಬ ದೇವತೆಯ ವಿಷಯ ಇತ್ಯಾದಿ | 142 |
| ನಪಾತ್ ಶಬ್ದದ ವಿವರಣೆ | 144 |
| ತ್ವಷ್ಟೃವಿನ ವಿಷಯ | 149 |
| ಕಂ, ಈಂ, ಇತ್, ಉ ಎಂಬ ನಿಪಾತಗಳ ವಿಷಯ | 154 |
| ದೇವತೆಗಳ ನಾನಾವಿಧ ವಾಹನಗಳು | 156 |
| ನು ಎಂಬ ಶಬ್ದದ ವಿವರಣೆ | 159 |
| ಇರಿಣಂ ಎಂಬ ಶಬ್ದದ ವಿವರಣೆ | 160 |
| ಪೂಷನ್, ವಿಷ್ಣು ಎಂಬ ದೇವತೆಗಳ ವಿಷಯ | 164 |
| ವಿಷ್ಣುವಿನ ತ್ರಿವಿಕ್ರಮಾವತಾರ ವಿಷಯ | 166 |
| ಅಶ್ವಿನೀದೇವತೆಗಳ ವಿಷಯ | 168 |
| ಅಶ್ವಿನೀದೇವತೆಗಳ ನಾನಾಕಾರ್ಯಗಳು | 170 |


**೧೮೭. ಪಿತುಂ ನು ಸ್ತೋಷಂ ಎಂಬ ನೂರಎಂಭತ್ತೇಳನೆಯ ಸೂಕ್ತವು—**


| | |
|---|---|
| ಸೂಕ್ತದ ಪೀಠಿಕೆ—ಅನ್ನದ ಮಹಿಮೆ ಇತ್ಯಾದಿ | 177 |
| ಸೂಕ್ತದ ವಿನಿಯೋಗ | 185 |
| ಋಷಿದೇವತಾಛಂದಸ್ಸುಗಳು | 186 |
| ಪಿತು ಶಬ್ದಾರ್ಥವಿವರಣೆ | 187 |
| ರಜಃ ಶಬ್ದಾರ್ಥ ಇತ್ಯಾದಿ | 195 |
| ಸೋಮರಸದ ವಿಷಯ ಇತ್ಯಾದಿ | 206 |
| ಸೋಮರಸಕ್ಕೆ ಮಿಶ್ರಮಾಡುವ ಆಶಿರದ್ರವ್ಯಗಳು | 209 |
| ಕರಂಭ, ಓಷಧಿ ಶಬ್ದಗಳ ವಿವರಣೆ | 212 |

ಪುಟಸಂಖ್ಯೆ


೧೮೮. ಸಮಿದ್ಧೋ ಅದ್ಯ ಎಂಬ ನೂರಎಂಭತ್ತೆಂಟನೆಯ ಸೂಕ್ತವು—

ಸೂಕ್ತದ ಪೀಠಿಕೆ, ಆಪ್ರೀ ಸೂಕ್ತಗಳ ವಿಷಯ ಇತ್ಯಾದಿ 216
ಸೂಕ್ತದ ವಿನಿಯೋಗ ಮತ್ತು ಋಷಿದೇವತಾಛಂದಸ್ಸುಗಳು 225
ಸಮಿದ್ಧ ಶಬ್ದದ ವಿವರಣೆ ಇತ್ಯಾದಿ 227
ತನೂನಪಾತ್ ಶಬ್ದದ ವಿವರಣೆ ಇತ್ಯಾದಿ 231
ಈಡ್ಯಃ ಶಬ್ದದ ವಿವರಣೆ ಇತ್ಯಾದಿ 233
ಬರ್ಹಿಃ ಶಬ್ದದ ವಿವರಣೆ ಇತ್ಯಾದಿ 237
ದೇವೀರ್ದ್ವಾರಃ (ದುರಃ) ಶಬ್ದದ ವಿವರಣೆ ಇತ್ಯಾದಿ 239
ಉಷಸೌ (ನಕ್ತೋಷಾಸಾ) ಶಬ್ದದ ವಿವರಣೆ ಇತ್ಯಾದಿ 245
ದೈವ್ಯಾ ಹೋತಾರಾ ಶಬ್ದದ ವಿವರಣೆ ಇತ್ಯಾದಿ 250
ಭಾರತೀಳೇ ಸರಸ್ವತಿ (ತಿಸ್ರೋ ದೇವ್ಯಃ) ಶಬ್ದದ ವಿವರಣೆ ಇತ್ಯಾದಿ 254
ತ್ವಷ್ಟಾ ಶಬ್ದದ ವಿವರಣೆ ಇತ್ಯಾದಿ 261
ವನಸ್ಪತೇ ಶಬ್ದದ ವಿವರಣೆ ಇತ್ಯಾದಿ 266
ಸ್ವಾಹಾಕೃತೀಷು (ಸ್ವಾಹಾಕೃತಯಃ) 271

೧೮೯. ಅಗ್ನೇ ನಯ ಸುಪಥಾ ಎಂಬ ನೂರಎಂಭತ್ತೊಂಭತ್ತನೆಯ ಸೂಕ್ತವು—

ಸೂಕ್ತದ ವಿನಿಯೋಗ 275
ಋಷಿದೇವತಾ ಛಂದಸ್ಸುಗಳು 276
ರಯಿ, ದೇವ, ವಯುನ ಇತ್ಯಾದಿ ಶಬ್ದಗಳ ಅರ್ಥವಿವರಣೆ 277
ಮಾನಸ್ಯ ಸೂನುಃ, ಜೀರದಾನುಂ ಇತ್ಯಾದಿ ಶಬ್ದಗಳ ಅರ್ಥವಿವರಣೆ 295

೧೯೦. ಅನರ್ವಾಣಂ ಎಂಬ ನೂರತೊಂಭತ್ತನೆಯ ಸೂಕ್ತವು—

ಸೂಕ್ತದ ಪೀಠಿಕೆ 299
ಬೃಹಸ್ಪತಿ ಶಬ್ದದ ನಿರ್ವಚನ ಇತ್ಯಾದಿ 299
ಬೃಹಸ್ಪತಿದೇವತೆಗೆ ಸಂಬಂಧಪಟ್ಟ ವಿಷಯಗಳು 300
ದೇವಾಪಿ, ಶಂತನು ಎಂಬ ರಾಜರ ವಿಚಾರ 301
ಬೃಹಸ್ಪತಿಯ ನಾನಾಕಾರ್ಯಗಳ ಸೂಕ್ಷ್ಮಪರಿಚಯ 302
ಸೂಕ್ತದ ವಿನಿಯೋಗ ಇತ್ಯಾದಿ 305
ಋಷಿದೇವತಾಛಂದಸ್ಸುಗಳು 306
ಬೃಹಸ್ಪತಿಯ ಆಯುಧ ವಿಷಯ 318

೧೯೧. ಕೆಂಕತೋ ನ ಎಂಬ ನೂರತೊಂಭತ್ತೊಂದನೆಯ ಸೂಕ್ತವು—

ಸೂಕ್ತದ ವಿನಿಯೋಗ ಇತ್ಯಾದಿ 332

ಪುಟಸಂಖ್ಯೆ

ಋಷಿದೇವತಾಛಂದಸ್ಸುಗಳು 333
ಕಂಕತಃ ಎಂಬ ಶಬ್ದದ ಅರ್ಥವಿವರಣೆ ಇತ್ಯಾದಿ 335
ಹಾವುಗಳಲ್ಲಿರುವ ನಾನಾಭೇದಗಳು ಇತ್ಯಾದಿ 335
ವಿಷನಾಶಕವಾದ ಓಷಧಿಗಳ ಸ್ವರೂಪ ಇತ್ಯಾದಿ 338
ನಾನಾವಿಧದರ್ಭೆಗಳ ವಿಷಯ 340
ಪೃಥಿವ್ಯಂತರಿಕ್ಷ ಸ್ವರ್ಗಗಳಲ್ಲಿರುವ ಸರ್ಪಗಳ ವಿಷಯ 347
ವಿವಿಧಜಾತಿಯ ಸರ್ಪಗಳ ವಿಷಯ 349
ಯಾತುಧಾನ್ಯ ಶಬ್ದಾರ್ಥ ವಿಚಾರ 352
ಸೂರ್ಯನ ವಿಷಪರಿಹಾರಶಕ್ತಿವರ್ಣನೆ ಇತ್ಯಾದಿ 357
ಮಧುವಿದ್ಯದ ಸ್ವರೂಪ 359
ವಿಷಾಪಹಾರಕ ಸಣ್ಣಪಕ್ಷಿಗಳು 361, 363
ನದಿಗಳ ವಿಷಾಪಹರಣಶಕ್ತಿ ಇತ್ಯಾದಿ 367
ಇಯತ್ತಿಕಃ, ಕುಷುಂಭಕಃ ಇತ್ಯಾದಿ ಶಬ್ದಗಳ ವಿವರಣೆ 369
ಈ ಸೂಕ್ತದ ವಿಷಯದಲ್ಲಿ Wilson ಪಂಡಿತನ ಅಭಿಪ್ರಾಯ 372
ಪ್ರಥಮಮಂಡಲದ ಕೊನೆಯಲ್ಲಿ ಪಠಿಸಬೇಕಾದ ಖಿಲಮಂತ್ರಗಳು 373

ಇತಿ ಪ್ರಥಮಂ ಮಂಡಲಂ ಸಮಾಪ್ತಂ

---

## ॥ ಅಥ ದ್ವಿತೀಯಂ ಮಂಡಲಂ ॥

ಎರಡನೆಯ ಮಂಡಲದ ಪೀಠಿಕೆಯು 375
ಮಂಡಲದ್ರಷ್ಟೃವಾದ ಗೃತ್ಸಮದಋಷಿಯ ವೃತ್ತಾಂತ 376

೧. ತ್ವಮಗ್ನೇ ದ್ಯುಭಿಃ ಎಂಬ ಮೊದಲನೆಯ ಸೂಕ್ತವು—
ಸೂಕ್ತದ ವಿನಿಯೋಗವು 378
ಋಷಿದೇವತಾ ಛಂದಸ್ಸುಗಳು 379
ಅಗ್ನಿ ಶಬ್ದನಿರ್ವಚನ ಇತ್ಯಾದಿ 381
ಆಶುಶುಕ್ಷಣಿ ಎಂಬ ಶಬ್ದದ ಅರ್ಥವಿವರಣೆ 382
ಅಗ್ನಿಮಥನ ವಿಚಾರ (ಐತರೇಯಬ್ರಾಹ್ಮಣದಲ್ಲಿ ಹೇಳಿರುವಂತೆ) 384
ಯಜ್ಞದಲ್ಲಿ ಭಾಗವಹಿಸುವ ನಾನಾ ಋತ್ವಿಕ್ಕುಗಳು ಇತ್ಯಾದಿ 394
ರುದ್ರ ಶಬ್ದನಿರ್ವಚನ 402

ಪುಟಸಂಖ್ಯೆ


| | |
|---|---|
| ಅಸುರ ಶಬ್ದದ ನಾನಾರ್ಥಗಳು ಇತ್ಯಾದಿ | 403 |
| ದ್ರವಿಣೋದಾಃ ಎಂಬ ದೇವತೆಯ ವಿಷಯ | 407 |
| **೨. ಯಜ್ಞೇನ ವರ್ಧತ ಎಂಬ ಎರಡನೆಯ ಸೂಕ್ತವು—** | |
| ಸೂಕ್ತದ ವಿನಿಯೋಗ | 427 |
| ಋಷಿದೇವತಾ ಛಂದಸ್ಸುಗಳು | 428 |
| ಯಜ್ಞ, ಜಾತವೇದಾಃ, ಅಗ್ನಿ ಇತ್ಯಾದಿ ಶಬ್ದಗಳ ನಿರ್ವಚನ ಇತ್ಯಾದಿ | 429 |
| ಪಂಚಕೃಷ್ಟಿ ಶಬ್ದಾರ್ಥವಿವರಣೆ | 449 |
| **೩. ಸಮಿದ್ಧೋ ಅಗ್ನಿಃ ಎಂಬ ಮೂರನೆಯ ಸೂಕ್ತವು—** | |
| ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು | 455 |
| ಸೂಕ್ತದ ಪ್ರತಿಪದಾರ್ಥ ಇತ್ಯಾದಿ | 456 |
| **೪, ಹುವೇ ವಃ ಎಂಬ ನಾಲ್ಕನೆಯ ಸೂಕ್ತವು—** | |
| ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು | 470 |
| ಅತಿಥಿ ಶಬ್ದಾರ್ಥ ವಿಚಾರ | 472 |
| ದಾವಾನಲರೂಪದ ಅಗ್ನಿಯ ಸ್ವರೂಪ | 478 |
| ದಾವಾಗ್ನಿಯು ವನವನ್ನು ದಹಿಸುವ ವರ್ಣನೆ ಇತ್ಯಾದಿ | 483 |
| **೫. ಹೋತಾಜನಿಷ್ಟ ಎಂಬ ಐದನೆಯ ಸೂಕ್ತವು—** | |
| ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು | 490 |
| ಪಿತೃ ಶಬ್ದಾರ್ಥವಿವರಣೆ | 491 |
| ವ್ರತ ಶಬ್ದಾರ್ಥವಿವರಣೆ | 498 |
| ಸ್ವಸಾರಃ ಎಂಬ ಶಬ್ದದ ನಾನಾರ್ಥಗಳು | 499 |
| **೬. ಇಮಾಂ ಮೇ ಅಗ್ನೇ ಎಂಬ ಆರನೆಯ ಸೂಕ್ತವು—** | |
| ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು | 506 |
| ಸೂಕ್ತದ ಪ್ರತಿಪದಾರ್ಥ ಇತ್ಯಾದಿ | 507 |
| **೭. ಶ್ರೇಷ್ಠಂ ಯವಿಷ್ಠ ಎಂಬ ಏಳನೆಯ ಸೂಕ್ತವು—** | |
| ಸೂಕ್ತದ ವಿನಿಯೋಗ | 517 |
| ಋಷಿದೇವತಾ ಛಂದಸ್ಸುಗಳು | 518 |
| ಭಾರತ ಶಬ್ದಾರ್ಥವಿವರಣೆ | 519 |
| ಸರ್ಪಿಃ ಶಬ್ದವಿವರಣೆ | 525 |

ಪುಟಸಂಖ್ಯೆ


೮. ವಾಜಯನ್ನಿವ ಎಂಬ ಎಂಟನೆಯ ಸೂಕ್ತವು—

ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 526

ನು ಎಂಬ ನಿಪಾತದ ವಿವಿಧಪ್ರಯೋಗಗಳು 528

ಸ್ವಃ ಎಂಬ ಶಬ್ದದ ವಿವಿಧಾರ್ಥಗಳು 532

ಎರಡನೆಯ ಅಷ್ಟಕದಲ್ಲಿ ಆರನೆಯ ಅಧ್ಯಾಯವು

೯. ನಿ ಹೋತಾ ಹೋತೃಷದನೇ ಎಂಬ ಒಂಭತ್ತನೆಯ ಸೂಕ್ತವು—

ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 538

ಅಗ್ನಿಪ್ರಣಯನವೆಂಬ ಕರ್ಮದ ವಿವರಣೆ (ಐತರೇಯಬ್ರಾಹ್ಮಣದಲ್ಲಿರುವಂತೆ) 541

ತೋಕ, ತನಯ ಎಂಬ ಶಬ್ದಗಳ ವಿವರಣೆ 551

ಅಗ್ನಿಯು ಸ್ವರ್ಗಾಂತರಿಕ್ಷ ಭೂಮಿಗಳಲ್ಲಿರುವ ವಿಚಾರ ಇತ್ಯಾದಿ 553

೧೦. ಜೋಹೂತ್ರೋ ಅಗ್ನಿಃ ಎಂಬ ಹತ್ತನೆಯ ಸೂಕ್ತವು—

ಸೂಕ್ತದ ವಿನಿಯೋಗ 561

ಋಷಿದೇವತಾ ಛಂದಸ್ಸುಗಳು 562

ಜೋಹೂತ್ರಃ, ಇಳೆಸ್ಪದೇ ಎಂಬ ಶಬ್ದಗಳ ವಿವರಣೆ 563

ಇಂದ್ರಾದಿ ದೇವತೆಗಳ ವಿವಿಧವಾಹನಗಳು 566

ಮನುವಿನ ವಿಷಯ 574

೧೧. ಶ್ರುಧೀ ಹವಂ ಎಂಬ ಹನ್ನೊಂದನೆಯ ಸೂಕ್ತವು—

ಸೂಕ್ತದ ವಿನಿಯೋಗವು 576

ಋಷಿದೇವತಾ ಛಂದಸ್ಸುಗಳು 577

ದಾಸ, ದಸ್ಯು ಎಂಬ ಶಬ್ದಗಳ ವಿವರಣೆ 580

ಉಕ್ಥದ ಸ್ವರೂಪ ಇತ್ಯಾದಿ 582

ಸೋಮಗಳ ವಿವರಣೆ 586

ಒಂಭತ್ತುವಿಧ ಸ್ತೋಮಗಳು, ಅವುಗಳ ಸ್ವರೂಪ 587

ದಾನವ ಶಬ್ದವಿವರಣೆ 603

ಇಂದ್ರನ ಸೋಮಪಾನ ವಿಚಾರ 606

ಮಿತ್ರ ಶಬ್ದಾರ್ಥವಿವರಣೆ 614

ಮಾರುತಂ ಶರ್ಧಃ, ಸಜೋಷಃ ಇತ್ಯಾದಿ ಶಬ್ದಗಳ ವಿವರಣೆ 615

ಇಂದ್ರನು ಮರುದ್ದೇವತೆಗಳೊಡನೆ ಸೋಮಪಾನಮಾಡಿದ ವಿಚಾರ 617

ಬರ್ಹಿರಾಸ್ತರಣದ ಕ್ರಮ 620

| | ಪುಟಸಂಖ್ಯೆ |
|---|---|
| ತ್ರಿಕದ್ರುಕೇಷು ಎಂಬ ಶಬ್ದದ ವಿವರಣೆ | 622 |
| ತ್ರಿತನ ವಿಷಯ | 625 |
| ತ್ವಷ್ಟೃಪುತ್ರನಾದ ವಿಶ್ವರೂಪನನ್ನು ಇಂದ್ರನು ಸಂಹಾರಮಾಡಿದ ವಿಷಯ | 626 |
| ಅರ್ಬುದ ಶಬ್ದಾರ್ಥವಿವರಣೆ | 633 |
| ವಲ ಮತ್ತು ಪಣಿಗಳ ವೃತ್ತಾಂತವು | 634 |
| ಅಂಗಿರಸರ ವಿಷಯ | 635 |
| ದಕ್ಷಿಣಾ ಶಬ್ದದ ನಿರ್ವಚನ ಮತ್ತು ನಾನಾರ್ಥಗಳು | 639 |
| **೧೨. ಯೋ ಜಾತ ಏವ ಎಂಬ ಹನ್ನೆರಡನೆಯ ಸೂಕ್ತವು—** | |
| ಸೂಕ್ತದ ವಿನಿಯೋಗ | 642 |
| ಇಂದ್ರನು ಗೃತ್ಸಮದಋಷಿಯ ರೂಪದಲ್ಲಿದ್ದ ವಿಷಯ ಇತ್ಯಾದಿ | 643 |
| ಋಷಿದೇವತಾ ಛಂದಸ್ಸುಗಳು | 644 |
| ಇಂದ್ರನ ನಾನಾವಿಧ ಗುಣಗಳ ವರ್ಣನೆ | 646 |
| ಅಹಿಂ ಎಂಬ ಶಬ್ದದ ನಿರ್ವಚನ ಮತ್ತು ನಾನಾರ್ಥಗಳು | 653 |
| ದಸ್ಯುಗಳೆಂಬ ಕಪ್ಪುಜನರ ವಿಚಾರ | 656 |
| ಗ್ರಾಮ, ರಥ ಇತ್ಯಾದಿ ಶಬ್ದಗಳ ವಿವರಣೆ | 664 |
| ಯಂ ಕ್ರಂದಸೀ ಎಂಬ ಋಕ್ಕಿನ ಅರ್ಥವಿಮರ್ಶೆ | 667 |
| ಶಂಬರಾಸುರನ ವಿಷಯ | 672 |
| ಶರಚ್ಛಬ್ದಾರ್ಥ | 673 |
| ಸಪ್ತರಶ್ಮಿಃ ಎಂಬ ಶಬ್ದದ ವಿವಿಧಾರ್ಥವರ್ಣನೆ | 675 |
| ಅರ್ಥಾನುಸಾರವಾಗಿ ಮಂತ್ರಗಳಲ್ಲಿರುವ ದೈವತಮಂತ್ರ, ಸ್ತುತಿಮಂತ್ರ, ಆಶೀರ್ಮಂತ್ರ ಇತ್ಯಾದಿ ನಾನಾಭೇದಗಳು | 682 |
| **೧೩. ಋತುರ್ಜನಿತ್ರೀ ಎಂಬ ಹದಿಮೂರನೆಯ ಸೂಕ್ತವು—** | |
| ಸೂಕ್ತದ ವಿನಿಯೋಗ | 683 |
| ಋಷಿದೇವತಾ ಛಂದಸ್ಸುಗಳು | 684 |
| ಅಹನ, ಅಂಶು ಇತ್ಯಾದಿ ಶಬ್ದಗಳ ವಿವರಣೆ | 686 |
| ಯಜ್ಞದಲ್ಲಿ ಭಾಗವಹಿಸುವ ಹೋತೃವೊದಲಾದ ಋತ್ವಿಜರ ಕರ್ತವ್ಯವು | 691 |
| ಅಸಿನ್ವನ್ ಎಂಬ ಶಬ್ದಾರ್ಥವಿಮರ್ಶೆ | 695 |
| ನೃಮರ, ಸಹವಸು ಎಂಬ ಅಸುರರ ವಿಷಯ | 704 |
| ದಭೀತಿಯ ವಿಷಯ | 707 |

ಪುಟಸಂಖ್ಯೆ

ಪಂಚಜನರ ವಿಷಯ 710
ಜಾತೂಷ್ಠಿರನ ವಿಷಯ 712
ತುರ್ವೀತಿ, ವಯ್ಯ, ಪರಾವೃಕ್ ಎಂಬುವರ ವಿಷಯ 714

೧೪. ಅಧ್ವರ್ಯವೋ ಭರತ ಎಂಬ ಹದಿನಾಲ್ಕನೆಯ ಸೂಕ್ತವು—
ಸೂಕ್ತದ ವಿನಿಯೋಗ 719
ಋಷಿದೇವತಾ ಛಂದಸ್ಸುಗಳು 720
ಅಧ್ವರ್ಯು ಶಬ್ದಾರ್ಥವಿಮರ್ಶೆ ಇತ್ಯಾದಿ 721
ಅಂಧಃ ಅಮತ್ರ, ಎಂಬ ಶಬ್ದಗಳ ಅರ್ಥವಿವರಣೆ 722
ಅಧ್ವರ್ಯವೋ ಭರತ ಎಂಬ ಋಕ್ಕಿಗೆ ನಿರುಕ್ತವ್ಯಾಖ್ಯಾಕಾರರ ವ್ಯಾಖ್ಯಾನ ಮತ್ತು ಅರ್ಥವಿವರಣೆ 724
ವೃತ್ರ ಶಬ್ದಾರ್ಥವಿವರಣೆ 727
ಇಂದ್ರನು ಉರಣ ಮತ್ತು ಅರ್ಬುದ ಎಂಬ ಅಸುರರನ್ನು ಸಂಹಾರಮಾಡಿದ ವಿಚಾರ 731
ಇಂದ್ರನು ಅಶ್ನ, ಶುಷ್ಣ, ಪಿಪ್ರು, ನಮುಚಿ, ರುಧಿಕ್ರಾ, ಎಂಬ ಅಸುರರನ್ನು ಸಂಹರಿಸಿದ ವಿಚಾರ 733
ನಮುಚಿ ಎಂಬ ಅಸುರನ ಸಂಹಾರ ವರ್ಣನೆ 735
ಶಂಬರನೆಂಬ ಅಸುರನ ನೂರು ಪಟ್ಟಣಗಳನ್ನು ಇಂದ್ರನು ನಾಶಮಾಡಿದ ವಿಚಾರ 739
ಕುತ್ಸ, ಆಯು, ಅತಿಥಿಗ್ವ ಎಂಬುವರ ವಿಷಯ 741
ಸೋಮರಸವನ್ನು ಸಿದ್ಧಪಡಿಸುವ ಕ್ರಮ ಇತ್ಯಾದಿ 744
ಊರ್ದರ, ಕೃದರ ಎಂಬ ಶಬ್ದಗಳ ನಿರ್ವಚನ ಇತ್ಯಾದಿ 750

೧೫. ಪ್ರ ಘಾ ನ್ವಸ್ಯ ಎಂಬ ಹದಿನೈದನೆಯ ಸೂಕ್ತವು—
ಸೂಕ್ತದ ವಿನಿಯೋಗವು 753
ಋಷಿದೇವತಾ ಛಂದಸ್ಸುಗಳು 754
ಸೋಮಪಾನದಿಂದ ಉಂಟಾದ ಹರ್ಷದಿಂದ ಇಂದ್ರನು ಮಾಡಿದ ಅನೇಕ ಸಾಹಸಕೃತ್ಯಗಳ ವರ್ಣನೆ ಇತ್ಯಾದಿ 755
ಇಂದ್ರನು ದಭೀತಿಯನ್ನು ರಕ್ಷಿಸಿದ ವಿಚಾರ 761
ಇಂದ್ರನು ಉಷೋದೇವತೆಯ ರಥವನ್ನು ಧ್ವಂಸಮಾಡಿದ ವಿಚಾರ 766
ಪರಾವೃಕ್ ಎಂಬ ಕುಂಟನೂ, ಕುರುಡನೂ ಆದ ಋಷಿಗೆ ಇಂದ್ರನು ಕಾಲುಗಳನ್ನೂ ಕಣ್ಣುಗಳನ್ನೂ ಕೊಟ್ಟು ರಕ್ಷಿಸಿದ ವಿಚಾರ 769

೧೬. ಪ್ರ ವಃ ಸತಾಂ ಎಂಬ ಹದಿನಾರನೆಯ ಸೂಕ್ತವು—
ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 774

ಪುಟಸಂಖ್ಯೆ

ಇಂದ್ರನು ದೇವತೆಗಳಲ್ಲೆಲ್ಲಾ ಶ್ರೇಷ್ಠನೆಂಬ ವಿಚಾರ 776
ಕ್ಷೋಣಿ ಶಬ್ದಾರ್ಥವಿವರಣೆ 780
ಇಂದ್ರನ ರಥದ ಅಪ್ರತಿಹತವಾದ ಸಂಚಾರಶಕ್ತಿ ಇತ್ಯಾದಿ 781
ವೃಷಭ ಶಬ್ದದವಿವರಣೆ 783
ಉತ್ಸಶಬ್ದದ ನಿರ್ವಚನ ಮತ್ತು ಅರ್ಥವಿವರಣೆ 789
ಶತಕ್ರತು ಶಬ್ದದ ವಿವರಣೆ 792

೧೭. ತದಸ್ಮೈ ನವ್ಯಂ ಎಂಬ ಹದಿನೇಳನೆಯ ಸೂಕ್ತವು—
ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 795
ಅಂಗಿರಸ್ವತ್ ಎಂಬ ಶಬ್ದದ ಅರ್ಥವಿವರಣೆ 797
ಗೋತ್ರ ಶಬ್ದವಿವರಣೆ 798
ಮಜ್ಮನಾ, ಪ್ರವಯಾಃ ಆತ್ ಇತ್ಯಾದಿ ಶಬ್ದಗಳ ವಿವರಣೆ 804
ಇಂದ್ರನು ಪರ್ವತಗಳನ್ನು ಭೂಮಿಯಲ್ಲಿ ಸ್ಥಿರವಾಗಿರುವಂತೆ ಮಾಡಿದ ವಿಚಾರ ಇತ್ಯಾದಿ 807
ಕ್ರಿವಿ ಎಂಬ ಅಸುರನನ್ನು ಇಂದ್ರನು ಸಂಹರಿಸಿದ ವಿಷಯ ಇತ್ಯಾದಿ 810
ಅಮಾಜೂಃ ಎಂಬ ಶಬ್ದದ ಅರ್ಥವಿವರಣೆ 812

೧೮. ಪ್ರಾತಾ ರಥಃ ಎಂಬ ಹದಿನೆಂಟನೆಯ ಸೂಕ್ತವು—
ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 817
ಪ್ರಾತಾ ರಥಃ ಎಂಬ ಋಕ್ಕಿನ ಎರಡುವಿಧವಾದ ಅರ್ಥವಿವರಣೆಯು 819
ತ್ರಿಕಶಃ, ಸಪ್ತರಶ್ಮಿಃ ದಶಾರಿತ್ರಃ ಎಂಬ ಶಬ್ದಗಳ ವಿವರಣೆ 820
ಶುನಹೋತ್ರ ಶಬ್ದಾರ್ಥ 830

೧೯. ಅಸಾಯ್ಯಸ್ಯ ಎಂಬ ಹತ್ತೊಂಭತ್ತನೆಯ ಸೂಕ್ತವು—
ಸೂಕ್ತದ ವಿನಿಯೋಗ 836
ಋಷಿದೇವತಾ ಛಂದಸ್ಸುಗಳು 837
ಅಂಧಃ ಎಂಬ ಶಬ್ದದ ಅರ್ಥವಿವರಣೆ ಇತ್ಯಾದಿ 839
ಏತಶ ಎಂಬ ಋಷಿಯ ವಿಷಯ 845
ಸೂರ್ಯನೊಡನೆ ಹೋರಾಡುತ್ತಿದ್ದ ಏತಶಋಷಿಗೆ ಇಂದ್ರನು ಸಹಾಯಮಾಡಿದ ವಿಷಯ ಇತ್ಯಾದಿ 846
ಪೀಯು ಎಂಬ ಅಸುರನ ವಿಷಯ 851

೨೦. ವಯಂ ತೇ ವಯಃ ಎಂಬ ಇಪ್ಪತ್ತನೆಯ ಸೂಕ್ತವು—
ಸೂಕ್ತದ ವಿನಿಯೋಗ 854

ಪುಟಸಂಖ್ಯೆ


ಋಷಿದೇವತಾ ಛಂದಸ್ಸುಗಳು 855
ಇಂದ್ರನಿಗೂ ಅಂಗಿರಸರಿಗೂ ಇರುವ ಮಿತ್ರತ್ವವಿಷಯ 864
ವೃತ್ರಹನನಾರ್ಥವಾಗಿ ದೇವತೆಗಳು ಇಂದ್ರನಿಗೆ ಬಲವನ್ನು ಕೊಟ್ಟ ವಿಚಾರ 871

೨೧. ವಿಶ್ವಜಿತೇ ಎಂಬ ಇಪ್ಪತ್ತೊಂದನೆಯ ಸೂಕ್ತವು—
ಸೂಕ್ತದ ವಿನಿಯೋಗ 873
ಋಷಿದೇವತಾ ಛಂದಸ್ಸುಗಳು 874
ಜನಂಸಹಃ, ವೃತಂಚಯಃ ಇತ್ಯಾದಿ ಶಬ್ದಗಳ ಅರ್ಥವಿವರಣೆ 881
ಅನಾನುದಃ, ವೃಷಭಃ ಇತ್ಯಾದಿ ಶಬ್ದಗಳ ವಿವರಣೆ 883

೨೨. ತ್ರಿಕದ್ರುಕೇಷು ಎಂಬ ಇಪ್ಪತ್ತೆರಡನೆಯ ಸೂಕ್ತವು—
ಸೂಕ್ತದ ವಿನಿಯೋಗ 890
ಋಷಿದೇವತಾ ಛಂದಸ್ಸುಗಳು 891
ಇಂದ್ರನಿಗೂ ವಿಷ್ಣುವಿಗೂ ಇರುವ ಸಾಹಚರ್ಯ ಇತ್ಯಾದಿ 893
ಇಂದ್ರನು ಕ್ರಿವಿ ಎಂಬ ಅಸುರನನ್ನು ಸಂಹರಿಸಿದ ವಿಷಯ ಇತ್ಯಾದಿ 897

೨೩. ಗಣಾನಾಂ ತ್ವಾ ಎಂಬ ಇಪ್ಪತ್ತಮೂರನೆಯ ಸೂಕ್ತವು—
ಸೂಕ್ತದ ವಿನಿಯೋಗ 902
ಋಷಿದೇವತಾ ಛಂದಸ್ಸುಗಳು 903
ಬ್ರಹ್ಮಣಸ್ಪತಿ ಮತ್ತು ಬೃಹಸ್ಪತಿ ಎಂಬ ದೇವತೆಗಳ ವಿಸ್ತಾರವಾದ ವಿಷಯವಿವರಣೆ ಇತ್ಯಾದಿ 904
ಗಣಪತಿ ಶಬ್ದಕ್ಕೆ ವೇದಗಳಲ್ಲಿ ಮತ್ತು ಪುರಾಣಾದಿಗಳಲ್ಲಿ ಇರುವ ಅರ್ಥವ್ಯತ್ಯಾಸ 912
ಕವಿ ಶಬ್ದದ ನಿರ್ವಚನ ಮತ್ತು ಅರ್ಥವಿವರಣೆ 913
ಬೃಹಸ್ಪತಿಯೇ ಎಲ್ಲಾ ಮಂತ್ರಗಳಿಗೂ ಕರ್ತನು ಎಂಬ ವಿಚಾರ 917
ಪರಿರಪಃ, ಗೋತ್ರಭಿದಂ ಇತ್ಯಾದಿ ಶಬ್ದಗಳ ಅರ್ಥವಿವರಣೆ 919
ಅಂಹಃ ಎಂಬ ಶಬ್ದಾರ್ಥವಿಚಾರ 921
ವ್ರತ ಶಬ್ದದ ನಾನಾರ್ಥಗಳು 925
ಅರಾತಿ, ವೃಕ, ಅನಾಗಸಃ ಎಂಬ ಶಬ್ದಗಳ ನಿರ್ವಚನ ಮತ್ತು ಅರ್ಥವಿವರಣೆ 927
ಬೃಹಸ್ಪತೇ ಅತಿ ಯದರ್ಯಃ ಎಂಬ ಋಕ್ಕಿನ ಅರ್ಥವಿವರಣೆ, ವಿಮರ್ಶೆ ಮತ್ತು ಐತರೇಯ ಬ್ರಾಹ್ಮಣದಲ್ಲಿ ಹೇಳಿರುವಂತೆ ಈ ಋಕ್ಕಿನ ವಿನಿಯೋಗ ಮತ್ತು ಅರ್ಥವಿಮರ್ಶೆ ಇತ್ಯಾದಿ 942
ಸ್ತೇನ ಶಬ್ದನಿರ್ವಚನ ಮತ್ತು ಅರ್ಥವಿವರಣೆ ಇತ್ಯಾದಿ 947
ಸಾಮ ಶಬ್ದದ ನಿರ್ವಚನ ಇತ್ಯಾದಿ 947


ದ್ವಿತೀಯಾಷ್ಟಕದಲ್ಲಿ ಆರನೆಯ ಅಧ್ಯಾಯವು ಸಮಾಪ್ತವು

ವಿಷಯಾನುಕ್ರಮಣಿಕೆ ಸಮಾಪ್ತವು

॥ ಶ್ರೀ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ದ್ವಿತೀಯಾಷ್ಟಕಮಧ್ಯಸ್ಥಶ್ಚತುರ್ಥೋಽಧ್ಯಾಯ ಆದರಾತ್ ।
ವ್ಯಾಖ್ಯಾತಃ ಸಾಯಣಾಚಾರ್ಯೇಣ ಪಂಚಮೋ ವ್ಯಾಕರಿಷ್ಯತೇ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

### ಸಾಯಣಭಾಷ್ಯಸಹಿತಾ

# ಋಗ್ವೇದ ಸಂಹಿತಾ

### ಭಾಗ—೧೪

## ॥ ದ್ವಿತೀಯಾಷ್ಟಕೇ ಪಂಚಮೋಽಧ್ಯಾಯಃ ॥

### ॥ ಎರಡನೆಯ ಅಷ್ಟಕದಲ್ಲಿ ಐದನೆಯ ಅಧ್ಯಾಯವು ॥

## ಪ್ರಥಮಮಂಡಲದಲ್ಲಿ ನೂರ ಎಂಭತ್ತನಾಲ್ಕನೆಯ ಸೂಕ್ತವು

:೦:

ಋಕ್ಸಂಹಿತೆಯಲ್ಲಿ ಎರಡನೇ ಅಷ್ಟಕದ ಐದನೇ ಅಧ್ಯಾಯವು ಮೊದಲನೇ ಮಂಡಲದ ೧೮೪ ನೇ ಸೂಕ್ತದಿಂದ ಪ್ರಾರಂಭವಾಗಿ ಎರಡನೇ ಮಂಡಲದ ೮ ನೇ ಸೂಕ್ತದವರೆಗೆ ಒಟ್ಟು ೧೬ ಸೂಕ್ತವುಳ್ಳದ್ದಾಗಿರುತ್ತದೆ. ಇದರಲ್ಲಿ ಮೊದಲನೇ ಮಂಡಲದ ಸಮಾಪ್ತಿಯವರೆಗೆ ಎಂದರೆ ೧೮೪ ರಿಂದ ೧೯೧ ರ ವರೆಗಿರತಕ್ಕ ಎಂಟು ಸೂಕ್ತಗಳೂ ಅಗಸ್ತ್ಯನಿಂದ ದೃಷ್ಟವಾದವು. ಉಳಿದುವು ಗೃತ್ಸಮದನಿಂದ ದೃಷ್ಟವಾದ ಸೂಕ್ತಗಳು . ಅಗಸ್ತ್ಯ ಮತ್ತು ಗೃತ್ಸಮದ ಈ ಇಬ್ಬರೂ ಪ್ರಸಿದ್ಧರಾದ ಋಷಿಗಳು. ಇಬ್ಬರ ಕೃತಿಗಳೂ ಉತ್ತಮವಾದ ಕಾವ್ಯಶೈಲಿಯಿಂದಲೂ ತಾತ್ತ್ವಿಕದೃಷ್ಟಿಯಿಂದಲೂ ಕೂಡಿವೆ ಪ್ರಕೃತದಲ್ಲಿ ಅಗಸ್ತ್ಯನ ವೈಶಿಷ್ಟ್ಯವೇನೆಂದು ಪರಿಶೀಲಿಸಿ, ಎರಡನೇಮಂಡಲದ ಆರಂಭದಲ್ಲಿ ಗೃತ್ಸಮದನ ಕೃತಿಕೌಶಲವನ್ನು ವಿಮರ್ಶಿಸಲಾಗುತ್ತದೆ.

ಅಗಸ್ತ್ಯನ ಮಹಿಮೆಯು ಅಸಾಧಾರಣವಾದುದೆಂದು ಶ್ರುತಿಸ್ಮೃತಿಪುರಾಣಾದಿಗಳಲ್ಲೆಲ್ಲಾ ಅತಿಪ್ರಸಿದ್ಧ ವಾಗಿದೆ. ಅವನ ಉತ್ಪತ್ತಿಕ್ರಮವೇ ಅವನ ಮಹಿಮೆಯನ್ನು ಸೂಚಿಸುತ್ತದೆ.

ಸತ್ರೇ ಹ ಜಾತಾವಿಷಿತಾ ನಮೋಭಿಃ ಕುಂಭೇ ರೇತಃ ಸಿಷಿಚತುಃ ಸಮಾನಂ ।
ತತೋ ಹ ಮಾನ ಉದಿಯಾಯ ಮಧ್ಯಾತ್ತತೋ ಜಾತಮೃಷಿಮಾಹುರ್ವಸಿಷ್ಠಂ ॥
ಉಕ್ಥಭೃತಂ ಸಾಮಭೃತಂ ಬಿಭರ್ತಿ ಗ್ರಾವಾಣಂ ಬಿಭ್ರತ್ಪ್ರ ವದಾತ್ಯಗ್ರೇ ।
ಉಪೈನಮಾಧ್ವಂ ಸುಮನಸ್ಯಮಾನಾ ಆ ವೋ ಗಚ್ಛಾತಿ ಪ್ರತೃದೋ ವಸಿಷ್ಠಃ ॥

(ಋ. ಸಂ. ೭. ೩೩ ೧೩. ರಿಂದ ೧೪)

ತೇನೈವ ತು ಮುಹೂರ್ತೇನ ವೀರ್ಯವಂತೌ ತಪಸ್ವಿನೌ ।
ಅಗಸ್ತ್ಯಶ್ಚ ವಸಿಷ್ಠಶ್ಚ ತತ್ರರ್ಷೀ ಸಂಬಭೂವತುಃ ॥

(ಬೃ. ದೇ. ೫-೧೫೦)

ದ್ವಾದಶಾದಿತ್ಯರಲ್ಲಿ ಇಬ್ಬರಾದ ಮಿತ್ರಾವರುಣರಿಬ್ಬರೂ ಸಹ ಸತ್ರಕಾಲದಲ್ಲಿ ಅಪ್ಸರಸ್ತ್ರೀಯಾದ ಊರ್ವಶಿ ಯನ್ನು ನೋಡಿ ಮೋಹಗೊಂಡರು. ಆಗ ಅವರ ರೇತಸ್ಸು ಸ್ಖಲಿತವಾಗಿ ವಸತೀವರಿಯಿರತಕ್ಕ ಕುಂಭದೊಳಗೆ ಬಿದ್ದು ಹೋಯಿತು. ಆ ಒಡನೆಯೇ ವಸಿಷ್ಠ ಮತ್ತು ಅಗಸ್ತ್ಯ ಎಂಬಿಬ್ಬರು ತಪಸ್ವಿಗಳೂ ವೀರ್ಯವಂತರೂ ಆದ ಋಷಿಗಳು ಉತ್ಪನ್ನರಾದರು. ಮಹಾತಪಸ್ವಿಯಾದ ಅಗಸ್ತ್ಯನು ಶಮ್ಯಾ ಮಾತ್ರವುಳ್ಳವನಾದನು, ಮತ್ತು ವಸಿಷ್ಠ ಮತ್ತು ಅಗಸ್ತ್ಯ ಇಬ್ಬರೂ ಸಹ ಆದಿತ್ಯನ ತೇಜಸ್ಸುಳ್ಳವರೇ ಆದರು, ಎಂಬ ಸನ್ನಿವೇಶವನ್ನು ವಿವರಿಸುವ ಪ್ರಕರಣವನ್ನು ಬೇರೆ ಕಡೆಯಲ್ಲಿ ತಿಳಿಸಿದೆ.

ಇಹಲೋಕರೂಪಿಯಾದ ಮಿತ್ರನ ಅಂಶವೂ, ದಿವ್ಯಲೋಕರೂಪಿಯಾದ ವರುಣನ ಅಂಶವೂ ಒಟ್ಟಿಗೆ ಸೇರಿ ಅಗಸ್ತ್ಯನ ಉತ್ಪತ್ತಿಗೆ ಕಾರಣವಾದುವು. ಮಿತ್ರನ ಅನ್ನಾತ್ಮಕವಾದ ತೇಜೋರೂಪವೂ ಮತ್ತು ವರುಣನ ಮಹತ್ತಾದ ಓಜೋ ರೂಪವೂ ಅಗಸ್ತ್ಯನಲ್ಲಿ ಪೂರ್ಣವಾಗಿ ಮಿಳಿತವಾಗಿವೆ. ಮತ್ತು ಕ್ರತುದಕ್ಷೌ ಹ ವಾ ಅಸ್ಯ ಮಿತ್ರಾವರುಣೌ (ಶ. ಬ್ರಾ ೪. ೧. ೪. ೧) ಎಂಬ ವಾಕ್ಯಗಳಲ್ಲಿ ವರ್ಣಿತವಾಗಿರುವಂತೆ, ಮಿತ್ರಾವರುಣರಲ್ಲಿ, ಮಿತ್ರನು ಸಂಕಲ್ಪ ರೂಪನು ; ವರುಣನು ಅಧ್ಯಾತ್ಮಶಕ್ತಿಸ್ವರೂಪನು. ಈ ಸಂಕಲ್ಪ ಮತ್ತು ಶಕ್ತಿಗಳೆರಡೂ ಅಗಸ್ತ್ಯನ ಮಹಾಗುಣಗಳು ಅಗಸ್ತ್ಯನು ಮಿತ್ರನಂತೆ ಕಾರ್ಯಸಿದ್ಧಿಗೆ ಸಂಕಲ್ಪವನ್ನು ಮಾಡುವವನೂ ಮತ್ತು ವರುಣನಂತೆ ಅದನ್ನು ಸಾಧಿಸುವವನೂ ಆಗಿದ್ದಾನೆ. ಮಿತ್ರನಂತೆ ಅವನು ಬ್ರಹ್ಮರೂಪನು ಮತ್ತು ವರುಣನಂತೆ ಕ್ರತುರೂಪನು, ಆದುದರಿಂದ ಇವನು ಅತ್ಯು ತ್ತಮವಾದ ಕ್ರತುದಕ್ಷಸ್ವರೂಪನಾಗಿಯೂ ಇದ್ದಾನೆ.

ಅಗಸ್ತ್ಯಃ ಖನಮಾನಃ ಖನಿತ್ರೈಃ ಪ್ರಜಾಮಪತ್ಯಂ ಬಲಮಿಚ್ಛಮಾನಃ ।
ಉಭೌ ವರ್ಣಾವೃಷಿರುಗ್ರಃ ಪುಪೋಷ ಸತ್ಯಾ ದೇವೇಷ್ವಾಶಿಷೋ ಜಗಾಮ ॥

(ಋ. ಸಂ. ೧. ೧೭೯. ೬ )

ಎಂಬ ಋಕ್ಕಿನಲ್ಲಿ ಅಗಸ್ತ್ಯನ ವಿಶೇಷ ಗುಣಗಳೆಲ್ಲವೂ ಮೇಲೆ ಹೇಳಿರುವಂತೆ ವರ್ಣಿತವಾಗಿವೆ. ಯಜ್ಞ, ಸ್ತುತಿ ಮೊದ ಲಾದ ಸಾಧನಗಳಿಂದ ಅಭಿಮತದ ಸಾಧಕನೂ, ಪುತ್ರ, ಭೃತ್ಯ ಮತ್ತು ಬಲಾದಿಗಳ ಕಾಮಿಯೂ, ಅತೀಂದ್ರಿಯ

ದ್ರಷ್ಟೃವೂ ಮತ್ತು ಸಂಸಾರ ಮಗ್ನನಾದವನೂ ಪಾಪರಹಿತನೂ ಆದ ಅಗಸ್ತ್ಯಋಷಿಯು ಮುಖ್ಯವಾದ ಪುರುಷಾರ್ಥಗಳಲ್ಲೆರಡಾದ ಕಾಮ ಮತ್ತು ತಪಸ್ಸುಗಳೆರಡನ್ನೂ ಸಾಧಿಸಿಕೊಂಡು ಬಂದಿದ್ದಾನೆ. ಆದುದರಿಂದಲೇ ದೇವತೆಗಳಿಂದ ಸತ್ಯ ಫಲಗಳಿಂದ ಆಶೀರ್ವಚನಗಳನ್ನೂ ಸಂಪಾದಿಸಿದ್ದಾನೆ ಎಂದು ಅಗಸ್ತ್ಯನ ಪ್ರಭಾವವು ಈ ಮಂತ್ರದಲ್ಲಿ ಪ್ರಶಂಸಿತವಾಗಿದೆ.

ಇಂತಹ ಪ್ರಭಾವಪೂರಿತನೂ ದ್ರಷ್ಟೃವೂ ಆದ ಋಷಿಯಿಂದ ದೃಷ್ಟವೂ ನಿರ್ಮಿತವೂ ಆದ ಸೂಕ್ತಗಳೂ ಸಹ ಗಂಭೀರವಾದ ಭಾವಾಭಿವ್ಯಕ್ತಿಯುಳ್ಳವಾಗಿಯೇ ಇರಬೇಕು. "**ಕತರಾ ಪೂರ್ವಾ ಕತರಾ ಪರಾಯೋಃ**" ( ಋ. ಸಂ. ೧-೧೮೫-೧ ) "**ಇದಂ ದ್ಯಾವಾ ಪೃಥಿವೀ ಸತ್ಯಮಸ್ತು**" ( ಋ. ಸಂ. ೧-೧೮೫-೧೧ ) **ಇತ್ಯಾದಿ** ಮಂತ್ರವಾಕ್ಯಗಳ ತಾತ್ಪರ್ಯವನ್ನು ವಿವರಿಸುವಾಗ ಅಗಸ್ತ್ಯನ ಭಾವಗಳಲ್ಲಿರುವ ಸತ್ಯಸೌಂದರ್ಯಗಳ ಸಾಮರಸ್ಯಸಾಕ್ಷಾತ್ಕಾರವನ್ನು ತಿಳಿಸಲಾಗುವುದು. ವಿಶ್ವಕ್ಕೆಲ್ಲಾ ಪ್ರಭೆಯನ್ನು ಬೀರುವ ಉಷಸ್ಸಿನ ಆವಿರ್ಭಾವವಾದೊಡನೆಯೇ ಜಗಚ್ಚಕ್ಷುಗಳಾದವರೂ ಸೂರ್ಯಚಂದ್ರರೂಪರಾದವರೂ ಆದ ಅಶ್ವಿನೀದೇವತೆಗಳನ್ನು ಸ್ತುತಿಸತಕ್ಕ "**ತಾ ವಾಮದ್ಯ ತಾವಪರಂ**" (ಋ. ಸಂ. ೧-೧೮೪-೧) ಎಂಬಮಂತ್ರದಿಂದ ಈ ಅಧ್ಯಾಯವು ಪ್ರಾರಂಭವಾಗುತ್ತದೆ.

---

**ಸಾಯಣಭಾಷ್ಯಂ**

**ತತ್ರ ತಾ ವಾಮಿತೀದಂ ಪ್ರಥಮಮಂಡಲಸ್ಯ ಚತುರ್ವಿಂಶೇಽನುವಾಕೇ ಪಂಚಮಂ ಸೂಕ್ತಂ । ಪೂರ್ವಸೂಕ್ತೇ ಷಡಿತ್ಯುಕ್ತತ್ವಾತ್ ಸೂಕ್ತಸಂಖ್ಯಾನುವರ್ತತೆ ಇತಿ ಪರಿಭಾಷಿತತ್ವಾತ್ ಷಡೃಚಂ । ಋಷಿಶ್ಚಾನ್ಯಸ್ಮಾದಿತಿ ಪರಿಭಾಷಯಾಗಸ್ತ್ಯಂ । ತಥಾಶ್ವಿನಂ ವಾ ಇತ್ಯುಕ್ತತ್ವಾತ್ತುಹ್ಯಾದಿಪರಿಭಾಷಯೇದಮಾಶ್ವಿನಂ । ಅನಾದೇಶಪರಿಭಾಷಯಾ ತ್ರೈಷ್ಟುಭಂ । ತಾ ವಾಮಿತ್ಯನುಕ್ರಾಂತಂ ॥ ಯುವೋ ರಜಾಂಸೀತ್ಯಾದೀನಾಂ ಪಂಚ ಸೂಕ್ತಾನಾಂ ತೃತೀಯವರ್ಜಿತಾನಾಂ ಪ್ರಾತರನುವಾಕಾಶ್ವಿನಶಸ್ತ್ರಯೋರ್ವಿನಿಯೋಗ ಉಕ್ತಃ । ತತ್ರೇದಂ ಪಂಚಮಂ ॥**

ಅನುವಾದವು—**ತಾವಾಮದ್ಯ** ಎಂಬ ಈ ಸೂಕ್ತವು ಪ್ರಥಮಮಂಡಲದ ಇಪ್ಪತ್ತನಾಲ್ಕನೆಯ ಅನುವಾಕದಲ್ಲಿ ಐದನೆಯ ಸೂಕ್ತವು ಈ ಸೂಕ್ತದಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು ; ಅಶ್ವಿನೀ ದೇವತೆಗಳೇ ದೇವತೆಯು ; ತ್ರಿಷ್ಟುಪ್ ಛಂದಸ್ಸು. **ಯುವೋ ರಜಾಂಸಿ** ಎಂಬ ಸೂಕ್ತದಿಂದ ಮುಂದಿನ ಐದು ಸೂಕ್ತಗಳಿಗೆ (ಮೂರನೆಯ ಸೂಕ್ತ ವಿನಹ) ಪ್ರಾತರನುವಾಕ ಮಂತ್ರಪಠನ ಕಾಲದಲ್ಲಿ ಆಶ್ವಿನಶಸ್ತ್ರಸಂಬಂಧವಾದ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳಿಗಾಗಿ ಈ ಸೂಕ್ತಗಳ ವಿನಿಯೋಗವಿರುವುದೆಂದು ಹಿಂದೆ ಹೇಳಿರುವ ಪ್ರಕಾರ ಈ ಸೂಕ್ತಕ್ಕೂ ಅದೇ ವಿನಿಯೋಗವು. ಆ ಸೂಕ್ತಗಳಲ್ಲಿ ಇದು ಐದನೆಯದು.

—:o:—

॥ ಓಂ ॥

## ಸೂಕ್ತ—೧೮೪

॥ ಮಂಡಲ—೧ ॥ ಅನುವಾಕ—೨೪ ॥ ಸೂಕ್ತ—೧೮೪ ॥

॥ ಅಷ್ಟಕ— ೨ ॥ ಅಧ್ಯಾಯ— ೫ ॥ ವರ್ಗ—೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೬ ॥

॥ ಋಷಿಃ—ಅಗಸ್ತ್ಯಃ ॥

॥ ದೇವತಾ—ಅಶ್ವಿನೌ॥

॥ ಛಂದಃ—ತ್ರಿಷ್ಟುಪ್ ॥

———:o:———

ಸಂಹಿತಾಪಾಠಃ

ತಾ ವಾಮದ್ಯ ತಾವಪರಂ ಹುವೇಮೋಚ್ಛಂತ್ಯಾಮುಷಸಿ ವಹ್ನಿರುಕ್ಥೈಃ ।

ನಾಸತ್ಯಾ ಕುಹ ಚಿತ್ಸಂತಾವರ್ಯೋ ದಿವೋ ನಪಾತಾ ಸುದಾಸ್ತರಾಯ ॥ ೧ ॥

ಪದಪಾಠಃ

ತಾ । ವಾಂ । ಅದ್ಯ । ತೌ । ಅಪರಂ । ಹುವೇಮ । ಉಚ್ಛಂತ್ಯಾಂ । ಉಷಸಿ । ವಹ್ನಿಃ । ಉಕ್ಥೈಃ ।
ನಾಸತ್ಯಾ । ಕುಹ । ಚಿತ್ । ಸಂತೌ । ಅರ್ಯಃ । ದಿವಃ । ನಪಾತಾ । ಸುದಾಃಽತರಾಯ ॥ ೧ ॥

ಸಾಯಣಭಾಷ್ಯಂ

ತಾ ತೌ ರಕ್ಷಕತ್ವೇನ ಪ್ರಸಿದ್ಧೌ ವಾಂ ಯುವಾಮದ್ಯಾಸ್ಮಿನ್ಯಾಗದಿನೇ ಹುವೇಮ । ಆಹ್ವಯಾಮ ಇತ್ಯಾಶೀಃ । ತಥಾಪರಮಪರಸ್ಮಿನ್ನಪಿ ದಿನೇ ತೌ ಯುವಾಂ ಹುವೇಮ । ಅಪರಮಿತ್ಯೇತದಪರಸ್ಮಿನ್ನಿ-ತ್ಯರ್ಥೇ ಸಮಭಿವ್ಯಾಹಾರಾತ್ ಅದ್ಯಾ ಚ ನೋ ಮೃಳಯತಾಪರಂ ಚ । ಋ ೨-೨೯-೨ । ಇತ್ಯಾದಿ-ಮಂತ್ರಾಂತರೇ ತಥಾ ದರ್ಶನಾಚ್ಚ । ಅಪರಯೋಗಂ ಪ್ರತ್ಯಪೀತಿ ವಾ । ಕಸ್ಮಿನ್ಕಾಲೇ । ಉಷಸ್ಯುಷೋ-ದೇವತಾಯಾಮುಚ್ಛಂತ್ಯಾಂ ತಮೋ ವಿವಾಸಯಂತ್ಯಾಂ ಸತ್ಯಾಂ । ಉಷಃಕಾಲೇ ಹಿ ಪ್ರಾತರನುವಾಕಾಶ್ವಿನ-ಶಸ್ತ್ರೇ ಪ್ರಯುಜ್ಯೇತೇ । ಉಕ್ತೇ ಕಾಲೇ ಹೇ ನಾಸತ್ಯಾಸತ್ಯರಹಿತೌ ದಿವೋ ನಪಾತಾ ದ್ಯುಲೋಕಸ್ಯ

ನಪಾತಯಿತಾರೌ ನಪ್ತೃಸ್ಥಾನೀಯೌ ವಾ ಕುಹ ಚಿತ್ಸಂತೌ ಕುತ್ರಚಿದ್ದೇಶೇ ವರ್ತಮಾನೌ ಯುವಾಂ ವಹ್ನಿಃ ಸ್ತುತೇರ್ವೋಢಾರ್ಯೋ ಈರಯಿತಾ ಸ್ತುತೇರೀಶ್ವರೋ ವಾ ಈದೃಶೋಽಹಂ ಹೋತಾ ಸುದಾಸ್ತರಾಯಾ-ತ್ಯರ್ಥಂ ಶೋಭನಹವಿರ್ದಾತ್ರೇ ಯಜಮಾನಾಯ ತದರ್ಥಂ ತೌ ಯುವಾಮುಕ್ಥೈಃ ಶಸ್ತ್ರೈರ್ಹುವೇಮೇತಿ ಸಂಬಂಧಃ । ಅತ್ರಾಽಖ್ಯಾತಂ ಪದಮೇಕವಚನತಯಾ ನೇತವ್ಯಂ । ವಹ್ನಿರರ್ಯಶಬ್ದೌ ವಾ ಬಹುವಚನತ್ವೇನ ನೇತವ್ಯೌ । ಅಥವಾ ವಾಕ್ಯದ್ವಯಂ । ಯಸ್ಮಾದ್ವಹ್ನಿರರ್ಯೋ ಹೋತೋಕ್ತಗುಣಕೌ ಯುವಾಂ ಶಂಸತಿ ತಸ್ಮಾದ್ವಯಂ ಯಜಮಾನಾಸ್ತೌ ಯುವಾಮಾಹ್ವಯಾಮ ಇತಿ ॥

। ಪ್ರತಿಪದಾರ್ಥ ।

ನಾಸತ್ಯಾ—ಅಸತ್ಯರಹಿತರಾದ ಎಲೈ ಅಶ್ವಿನಿದೇವತೆಗಳೇ । ತಾ ವಾಂ—ರಕ್ಷಕರೆಂದು ಪ್ರಸಿದ್ಧರಾದ ನಿಮ್ಮನ್ನು । ಅದ್ಯ—ಈ ಯಾಗದ ದಿನದಲ್ಲಿ । ಉಷಸಿ—ಉಷೋದೇವತೆಯು । ಉಚ್ಛಂತ್ಯಾಂ—ತಮಸ್ಸನ್ನು ನಿವಾರಣೆ ಮಾಡುವ ವೇಳೆಯಲ್ಲಿ । ಹುವೇಮ—ಪ್ರಾರ್ಥಿಸಿ ಕರೆಯುತ್ತೇವೆ (ಹಾಗೆಯೇ) । ಅಪರಂ—ಬೇರೆ ಯಾಗದಿನಗಳಲ್ಲೂ ಸಹ । ತಾ—ಆ ನಿಮ್ಮಿಬ್ಬರನ್ನು (ಕರೆಯುತ್ತೇವೆ) । ದಿವಃ ನಪಾತಾ—ಎಲೈ ದ್ಯುಲೋಕದ ಪೌತ್ರರಾದ ಅಶ್ವಿನೀ ದೇವತೆಗಳೇ । ಕುಹ ಚಿತ್ ಸಂತೌ—ನೀವು ಯಾವ ಪ್ರದೇಶದಲ್ಲಿದ್ದರೂ ಸಹ । ವಹ್ನಿಃ—ಸ್ತುತಿವಾಹಕನೂ । ಅರ್ಯಃ—ಸ್ತುತಿ ಪ್ರೇರಕನೂ ಆದ ನಾನು (ಹೋತೃವು) । ಸುದಾಸ್ತರಾಯ—ಶ್ರೇಷ್ಠವಾದ ಹವಿಸ್ಸನ್ನು ಅರ್ಪಿಸತಕ್ಕ ಯಜಮಾನನಿಗಾಗಿ । ಉಕ್ಥೈಃ—ಶಸ್ತ್ರ ಮಂತ್ರಗಳಿಂದ ಪ್ರಾರ್ಥಿಸಿ ಕರೆಯುತ್ತೇನೆ ।

ಭಾವಾರ್ಥ

ದ್ಯುಲೋಕದ ಪೌತ್ರರೂ, ಅಸತ್ಯರಹಿತರೂ ಆದ ಅಶ್ವಿನೀದೇವತೆಗಳೇ, ರಕ್ಷಕರೆಂದು ಪ್ರಸಿದ್ಧರಾದ ನಿಮ್ಮನ್ನು ಈ ಯಾಗದ ದಿನದಲ್ಲಿ ಉಷೋ ದೇವತೆಯು ತಮಸ್ಸನ್ನು ನಿವಾರಣೆಮಾಡುವ ಕಾಲದಲ್ಲೂ, ಬೇರೆ ಯಾಗದಿನಗಳಲ್ಲೂ ಸಹ ನೀವು ಯಾವ ಪ್ರದೇಶದಲ್ಲಿದ್ದರೂ ನಿಮ್ಮನ್ನು ಪ್ರಾರ್ಥಿಸಿ ಸ್ತುತಿವಾಹಕನೂ, ಸ್ತುತಿಪ್ರೇರಕನೂ ಆದ ನಾನು (ಹೋತೃವು) ಶ್ರೇಷ್ಠವಾದ ಹವಿಸ್ಸನ್ನು ಅರ್ಪಿಸತಕ್ಕ ಯಜಮಾನನಿಗೋಸ್ಕರ ಶಸ್ತ್ರರೂಪವಾದ ಮಂತ್ರಗಳಿಂದ ಪ್ರಾರ್ಥಿಸಿ ಕರೆಯುತ್ತೇನೆ.

## English Translation

We invoke you two, (Ashwins), to-day; the same two on any other day: when the morning dawns. Nasatyas, grandsons of heaven, wherever you may be, the pious reciter (of the hymn) invokes you with praises on behalf of the liberal donor (of the offering).

ವಿಶೇಷವಿಷಯಗಳು

ಪ್ರಾತರನುವಾಕ, ಶಸ್ತ್ರಮಂತ್ರಗಳು ಇವುಗಳ ಸ್ವರೂಪವನ್ನೂ ಅವುಗಳನ್ನು ಪಠಿಸತಕ್ಕ ಸಂದರ್ಭ, ಯಾರು ಪಠಿಸಬೇಕು, ಪಠಿಸಬೇಕಾದ ಕಾಲ ಮೊದಲಾದ ವಿವರಗಳನ್ನು ನಾವು ಹಿಂದೆಯೇ ಎಂದರೆ ಋ. ಸಂ. ಭಾಗದ ೧ ರಲ್ಲಿ ವಿವರಿಸಿದ್ದೇವೆ.

ಪ್ರಾತರನುವಾಕಾಶ್ವಿನಶಸ್ತ್ರಮಂತ್ರಗಳಲ್ಲಿ ಪ್ರಕೃತವಾದ ಸೂಕ್ತಕ್ಕೆ ವಿನಿಯೋಗವಿದೆಯೆಂದು ಸಾಯಣ ಭಾಷ್ಯದಲ್ಲಿ ತಿಳಿಸಿದೆ. ಆಶ್ವಿನ ಶಸ್ತ್ರಕ್ಕೆ ಸಂಬಂಧಿಸಿದ ಕಥಾಸಂದರ್ಭವು ಐತರೇಯ ಬ್ರಾಹ್ಮಣದಲ್ಲಿ ಈ ರೀತಿ ಉಕ್ತವಾಗಿದೆ.

> ಪ್ರಜಾಪತಿರ್ವೈ ಸೋಮಾಯ ರಾಜ್ಞೇ ದುಹಿತರಂ ಪ್ರಾಯಚ್ಛತ್ಸೂರ್ಯಾಂ ಸಾವಿತ್ರೀಂ ತಸ್ಯೈ ಸರ್ವೇ ದೇವಾ ವರಾ ಆಗಚ್ಛಂಸ್ತಸ್ಯಾ ಏತತ್ಸಹಸ್ರಂ ವಹತುಮನ್ವಾಕರೋದ್ಯದೇತದಾಶ್ವಿನಮಿತ್ಯಾ-ಚಕ್ಷತೇಽನಾಶ್ವಿನಂ ಹೈವ ತದ್ಯದರ್ವಾಕ್ಸಹಸ್ರಂ ತಸ್ಮಾತ್ತತ್ಸಹಸ್ರಂ ವೈವ ಶಂಸೇದ್ಭೂಯೋ ವಾ ಪ್ರಾಶ್ಯ ಘೃತಂ ಶಂಸೇದ್ಯಥಾ ಹ ವಾ ಇದಮನೋ ವಾ ರಥೋ ವಾಕ್ತೋ ವರ್ತತ ಏವಂ ಹೈ ವಾಕ್ತೋ ವರ್ತತೇ । ಶಕುನಿರಿವೋತ್ಪತಿಷ್ಯನ್ನಾಹ್ವಯೀತ ।
>
> (ಐ. ಬ್ರಾ. ೧೬-೧)

ಪೂರ್ವದಲ್ಲಿ ಪ್ರಜಾಪತಿಯು ತನ್ನ ಮಗಳಾದ ಸೂರ್ಯೆಯನ್ನು ಸೋಮನಿಗೆ ವಿವಾಹಾರ್ಥವಾಗಿ ಕೊಡಲು ನಿಶ್ಚಯಿಸಿದಾಗ ಸಕಲದೇವತೆಗಳೂ ಅವಳನ್ನು ತಾವು ವರಿಸಬೇಕೆಂಬ ಅಪೇಕ್ಷೆಯಿಂದ ಬಂದರು. ಆಗ ಪ್ರಜಾಪತಿಯು ಆಶ್ವಿನ ಶಸ್ತ್ರವೆಂದು ಪ್ರಸಿದ್ಧವಾದ ಸಹಸ್ರ ಮಂತ್ರಗಳನ್ನು ಪಠಿಸಬೇಕೆಂದೂ ಅದಕ್ಕೆ ಕಡಿಮೆಯಾಗಬಾರದೆಂದೂ ಒಂದು ನಿಯಮವನ್ನು ಗೊತ್ತುಮಾಡಿದನು. ಲೋಕದಲ್ಲಿ ರಥಚಕ್ರವು ತೈಲಸಿಂಚಿತವಾದನಂತರ ಹೇಗೆ ಸುಲಭವಾಗಿ ಚಲಿಸಬಲ್ಲದೋ ಹಾಗೆ ಘೃತಪಾನಾನಂತರ ಸುಲಭವಾಗಿ ಮಂತ್ರಗಳನ್ನು ಪಠಿಸಬಹುದಾದುದರಿಂದ ಮೊದಲು ಘೃತಪಾನವನ್ನು ಮಾಡಿ ನಂತರ ಪಠಿಸಬೇಕು. ಮತ್ತು ಪಕ್ಷಿಯು ಹಾರುವುದಕ್ಕೆ ಸಿದ್ಧವಾದಾಗ ತನ್ನ ದೇಹವನ್ನು ಲಘುವಾಗಿ ಮಾಡಿಕೊಳ್ಳುವಂತೆ ಇವಳನ್ನು ಮೋಹಿಸುವ ವರನೂ ಆ ಗುಣವನ್ನು ಹೊಂದಿರಬೇಕೆಂದನು

> ತಸ್ಮಿನ್ದೇವಾ ನ ಸಮಜಾನತ ಮಮೇದಮಸ್ತು ಮಮೇದಮಸ್ತ್ವಿತಿ ತೇ ಸಂಜಾನಾನಾ ಅಬ್ರು-ವನ್ನಾಜಿಮಸ್ಯಾಯಾಮಹೈ ಸ ಯೋ ನ ಉಜ್ಜೇಷ್ಯತಿ ತಸ್ಯೇದಂ ಭವಿಷ್ಯತೀತಿ ತೇಽಗ್ನೇರೇ-ವಾಧಿ ಗೃಹಪತೇರಾದಿತ್ಯಂ ಕಾಷ್ಠಾಮಕುರ್ವತ ತಸ್ಮಾದಾಗ್ನೇಯಿ ಪ್ರತಿಪದ್ಭವತ್ಯಾಶ್ವಿನ-ಸ್ಯಾಗ್ನಿರ್ಹೋತಾ ಗೃಹಪತಿಃ ಸ ರಾಜೇತಿ ।
>
> (ಐ. ಬ್ರಾ. ೧೬-೧)

ಆಗ ದೇವತೆಗಳು ಪರಸ್ಪರವಾಗಿ ಹೋರಾಟಮಾಡಲಿಷ್ಟಪಡದೆ ಎಲ್ಲರೂ ಸೇರಿ ಒಂದು ಪಂದ್ಯದಲ್ಲಿ ಭಾಗವಹಿಸಬೇಕೆಂದೂ, ಆ ಪಂದ್ಯದಲ್ಲಿ ಯಾರು ಜಯಿಸುತ್ತಾರೆಯೋ ಅವರು ಇವಳನ್ನು ವರಿಸಲು ಅರ್ಹರೆಂದೂ ಒಟ್ಟಿಗೆ ಒಂದು ತೀರ್ಮಾನಕ್ಕೆ ಬಂದರು. ಆಗ ಗೃಹಪತಿಯಾದ ಅಗ್ನಿಯಿಂದ ಪ್ರಾರಂಭಿಸಿ ಸೂರ್ಯನ ವರೆಗೆ ಓಡಿದರು.

> ತಾಸಾಂ ವೈ ದೇವತಾನಾಮಾಜಿಂ ಧಾವಂತೀನಾಮಭಿಸೃಷ್ಟಾನಾಮಗ್ನಿರ್ಮುಖಂ ಪ್ರಥಮಃ ಪ್ರತ್ಯಪದ್ಯತ ತಮಶ್ವಿನಾವನ್ವಾಗಚ್ಛತಾಂ ತಮಬ್ರೂತಾಮಪೋದಿಹ್ಯಾವಾಂ ವಾ ಇದಂ ಜೇಷ್ಯಾವ ಇತಿ ಸ ತಥೇತ್ಯಬ್ರವೀತ್ತಸ್ಯ ವೈ ಮನೇಹಾಪ್ಯಸ್ತ್ವಿತಿ ತಥೇತಿ ತಸ್ಮಾ ಅಪ್ಯತ್ರಾ-ಕುರುತಾಂ ತಸ್ಮಾದಾಗ್ನೇಯಮಾಶ್ವಿನೇ ಶಸ್ಯತೇ ।
>
> (ಐ ಬ್ರಾ. ೧೬-೨)

ಸಕಲದೇವತೆಗಳೂ ಈ ಪಂದ್ಯದಲ್ಲಿ ಭಾಗವಹಿಸಿ ಓಡುತ್ತಿದ್ದಾಗ ಅಗ್ನಿಯು ಎಲ್ಲರಿಗಿಂತಲೂ ಮುಂದಾದನು. ಆಗ ಅಶ್ವಿನೀದೇವತೆಗಳು ಅಗ್ನಿಯನ್ನು ಸಮೀಪಿಸಿ ನಮಗೆ ದಾರಿಯನ್ನು ಬಿಡು, ಈ ಪಂದ್ಯದಲ್ಲಿ ನಾವು ಜಯಿಸಲು

ನಮಗೆ ಸಹಾಯವನ್ನು ಮಾಡು ಎಂದು ಕೇಳಿಕೊಂಡರು. ಆಗ ಅಗ್ನಿಯು ಅದಕ್ಕೆ ಒಪ್ಪಿದನು. ಆದರೆ ಆ ಜಯ ದಲ್ಲಿ ತನಗೂ ಒಂದು ಭಾಗವನ್ನು ಕೊಡಬೇಕೆಂದು ಕೇಳಿಕೊಂಡನು. ಆದುದರಿಂದಲೇ ಆಶ್ವಿನಶಸ್ತ್ರಮಂತ್ರಗಲ್ಲಿ ಅವನಿಗೂ ಒಂದು ಭಾಗವಿದೆ.

ಈ ಸಂದರ್ಭದಲ್ಲಿ ಇನ್ನೊಂದು ಆಕ್ಷೇಪವನ್ನು ಹೇಳಿ ಅದಕ್ಕೆ ಸಮಾಧಾನವನ್ನೂ ತಿಳಿಸಿದೆ.

**ತದಾಹುರ್ಯಚ್ಛಸ್ಯತ ಆಗ್ನೇಯಂ ಶಸ್ಯತ ಉಷಸ್ಯಂ ಶಸ್ಯತ ಐಂದ್ರಮಥ ಕಸ್ಮಾದೇತದಾಶ್ವಿನ-ಮಿತ್ಯಾಚಕ್ಷತ ಇತ್ಯಶ್ವಿನೌ ಹಿ ತದುದಜಯತಾಮಶ್ವಿನಾವಾಶ್ನುವಾತಾಂ ಯದಶ್ವಿನಾ ಉದ-ಜಯತಾಮಶ್ವಿನಾವಾಶ್ನುವಾತಾಂ ತಸ್ಮಾದೇತದಾಶ್ವಿನಮಿತ್ಯಾಚಕ್ಷತೇ ।**

(ಐ. ಬ್ರಾ. ೧೬-೨)

ಈ ಸಂದರ್ಭದಲ್ಲಿ ಅಗ್ನಿಯನ್ನೂ, ಇಂದ್ರನನ್ನೂ, ಉಷಸ್ಸನ್ನೂ ಉದ್ದೇಶಿಸಿ ಮಂತ್ರಗಳನ್ನೂ ಪಠಿಸಬೇಕಾಗಿರುವುದ ರಿಂದ ಇವಕ್ಕೆಲ್ಲಾ ಆಶ್ವಿನಶಸ್ತ್ರವೆಂಬ ಹೆಸರು ಹೇಗೆ ಬಂದಿತು ಎಂಬ ಆಕ್ಷೇಪಣೆಯು ಬಂದರೆ ಆಗ ಇದು ಮುಖ್ಯವಾಗಿ ಅಶ್ವಿನಿದೇವತೆಗಳ ಜಯವನ್ನು ಕುರಿತು ಪಠಿತವಾಗಿರುವುದರಿಂದ ಈ ಮಂತ್ರಗಳಿಗೆ ಈ ಹೆಸರು ಎಂಬುದೇ ಸಮಾಧಾನವು.

ಈ ಸಂದರ್ಭದಲ್ಲಿ ಪ್ರಾತರನುವಾಕವೆಂದರೇನೆಂಬುದನ್ನು ವಿವರಿಸುವುದು ಆವಶ್ಯವಾಗಿದೆ. ಅಗ್ನಿಷ್ಟೋಮ ಯಾಗವನ್ನು ಮಾಡುವಾಗ ಸೋಮರಸವನ್ನು ಹಿಂಡಿ ತೆಗೆಯುವ ದಿನಕ್ಕೆ ಸುತ್ಯಾದಿನ ಅಥವಾ ಸ್ತುತ್ಯಾದಿನವೆಂದು ಹೆಸರು. ಈ ದಿವಸದ ಪ್ರಾತಃಕಾಲದಲ್ಲಿ ಸೂರ್ಯೋದಯವಾಗುವುದಕ್ಕೆ ಮುಂಚೆ ಅಧ್ವರ್ಯುವು **ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನುಬ್ರೂಹಿ** ಎಂಬ ಪ್ರೈಷಮಂತ್ರವನ್ನು ಪಠಿಸಿದ ಕೂಡಲೇ ಹೋತೃವು ಕೆಲವು ಮಂತ್ರಗಳನ್ನು ಪಠಿಸುವನು. ಇವುಗಳಿಗೆ ಪ್ರಾತರನುವಾಕಮಂತ್ರಗಳೆಂದು ಹೆಸರು. ಹೋತೃವು ಈ ಪ್ರಾತರನು ವಾಕಮಂತ್ರಗಳನ್ನು ಪಠಿಸಬೇಕು. ಇದನ್ನು **ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನುಬ್ರೂಹೀತ್ಯಾ-ಹಾಧ್ವರ್ಯುಃ ।** (ಐ. ಬ್ರಾ ೨. ೧೫.) ಎಂದು ಐತರೇಯ ಬ್ರಾಹ್ಮಣದಲ್ಲಿಯೇ ಹೇಳಿದೆ.

ಪ್ರಾತರನುವಾಕಮಂತ್ರಗಳನ್ನು ಪಠಿಸುವಾಗ ಹೋತೃವು ಅನುಸರಿಸುವ ಕ್ರಮವನ್ನು ಸೂಕ್ಷ್ಮವಾಗಿ ವಿವರಿಸ ಲಾಗುತ್ತದೆ. ಯಜ್ಞದಲ್ಲಿ ಪ್ರಧಾನಋತ್ವಿಕ್ಪಾತ್ರವನ್ನು ವಹಿಸಿರುವ ಅಧ್ವರ್ಯುವು ಇತರ ಋತ್ವಿಕ್ಕುಗಳನ್ನುದ್ದೇಶಿಸಿ "ಇಂತಹ ಕಾರ್ಯವನ್ನು ನೀನು ಮಾಡಬೇಕು" ಇತ್ಯಾದಿಯಾಗಿ ಪದೇಪದೇ ಹೇಳಬೇಕಾಗಿರುತ್ತದೆ ಇಂತಹ ವಾಕ್ಯಗಳಿಗೆ ಪ್ರೈಷಗಳೆಂದು ಹೆಸರು. ಪ್ರಕೃತಸಂದರ್ಭದಲ್ಲಿ ಅಧ್ವರ್ಯುವು ಹೋತೃವನ್ನುದ್ದೇಶಿಸಿ **ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನುಬ್ರೂಹಿ ।** ಎಲೈ ಹೋತೃವೇ, ದೇವತೆಗಳನ್ನುದ್ದೇಶಿಸಿ ಪ್ರಾತರನುವಾಕಮಂತ್ರ ಗಳನ್ನು ಹೇಳು ಎಂದು ಹೇಳುವನು. ಆಗ ಹೋತೃವು ಅಗ್ನೀಧ್ರವೆಂಬ ಅಗ್ನಿಕುಂಡದ ಸಮೀಪಕ್ಕೆ ಹೋಗಿ ಅಲ್ಲಿ ವಾಕ್ಯುದ್ಧಿಗಾಗಿ ಒಂದು ಆಜ್ಯಾಹುತಿಯನ್ನೂ, ಆಹವನೀಯಾಗ್ನಿಯಲ್ಲಿ ಎರಡು ಆಜ್ಯಾಹುತಿಗಳನ್ನೂ, ವಿಧ್ಯುಕ್ತಮಂತ್ರ ಗಳಿಂದ ಹೋಮಮಾಡುವನು. ಬಳಿಕ ಹವಿರ್ಧಾನವೆಂಬ ಶಾಲೆಯನ್ನು ಪೂರ್ವದ್ವಾರದಿಂದ ಪ್ರವೇಶಿಸಿ ಅಲ್ಲಿರುವ ಗಾಡಿಗಳ ನೊಗದ ಸಮೀಪದಲ್ಲಿ ಕುಳಿತು ಮೊದಲು ಈ ಮಂತ್ರವನ್ನು ಪಠಿಸುತ್ತಾನೆ.

**ಆಪೋ ರೇವತೀಃ ಕ್ಷಯಥಾ ಹಿ ವಸ್ವಃ ಕ್ರತುಂ ಚ ಭದ್ರಂ ಬಿಭೃಥಾಮೃತಂ ಚ ।**
**ರಾಯಶ್ಚ ಸ್ಥ ಸ್ವಪತ್ಯಸ್ಯ ಪತ್ನೀಃ ಸರಸ್ವತೀ ತದ್ಗೃಣತೇ ವಯೋ ಧಾತ್ ॥**

(ಋ. ಸಂ. ೧೦. ೩೦. ೧೨.)

ಆನಂತರ ಅಗ್ನಿ, ಉಷಸ್ಸು, ಅಶ್ವಿನೀದೇವತೆಗಳು ಇವರನ್ನುದ್ದೇಶಿಸಿ ಪ್ರಾತರನುವಾಕ ಮಂತ್ರಗಳ್ನು ಪಠಿಸುವನು. ಇವು ಮೂರು ಭಾಗಗಳಾಗಿವೆ. ಅಗ್ನಿಯನ್ನುದ್ದೇಶಿಸಿ ಹೇಳುವ ಮಂತ್ರಗಳಿಗ ಆಗ್ನೇಯಕ್ರತುವೆಂದೂ. ಉಷಸ್ಸನ್ನು ದ್ದೇಶಿಸಿ ಪಠಿಸುವ ಮಂತ್ರಗಳಿಗೆ ಉಷಸ್ಯಕ್ರತುವೆಂದೂ ಅಶ್ವಿನೀದೇವತೆಗಳನ್ನುದ್ದೇಶಿಸಿ ಪಠಿಸುವ ಮಂತ್ರಗಳಿಗೆ ಆಶ್ವಿನ ಕ್ರತುವೆಂದೂ ಹೆಸರು. ಇಲ್ಲಿ ಪ್ರತಿದೇವತೆಯನ್ನೂ ಉದ್ದೇಶಿಸಿದ ಮಂತ್ರಗಳು ಏಳು ಛಂದಸ್ಸುಗಳಿಂದಲೂ ಕೂಡಿರ ಬೇಕೆಂದು ತಿಳಿಸಲು ಸಪ್ತಭಿಃ ಸಪ್ತಭಿಃ ಛಂದೋಭಿಃ ಎಂಬ ವೀಪ್ಸೆಯಿದೆ. (ದ್ವಿರುಕ್ತವಾಗಿದೆ.) ಅದರಂತೆ ಈ ಮಂತ್ರಗಳ ವಿವರಣೆಯು ಈ ರೀತಿಯಿದೆ.

ಉಪ ಪ್ರಯಂತಃ (ಋ. ಸಂ. ೧-೭೪-೧) ಇತ್ಯಾದಿಷು ಚ್ಛಂದೋ ಗಾಯತ್ರಂ ।
ತ್ವಮಗ್ನೇ ವಸೂನ್ (ಋ. ಸಂ. ೧-೪೫-೧) ,, ಅನುಷ್ಟುಪ್ ಛಂದಃ ।
ಅಬೋಧ್ಯಗ್ನಿಃ ( ,, ೫-೧-೧ ) ,, ತ್ರಿಷ್ಟುಪ್ ,, ।
ಏನಾ ವೋ ಅಗ್ನಿಂ ( ,, ೭-೧೬-೧) ,, ಬೃಹತೀ ,, ।
ಅಗ್ನೇ ವಾಜಸ್ಯ ( ,, ೧-೭೯-೪) ,, ಉಷ್ಣಿಕ್ ,, ।
ಜನಸ್ಯ ಗೋಪಾ ( ,, ೫-೧೧-೧) ,, ಜಗತೀ ,, ।
ಅಗ್ನಿಂ ತಂ ಮನ್ಯೇ ( ,, ೫-೬-೧ ) ,, ಪಂಕ್ತಿಃ ,, ।

ತಾನ್ಯೇತಾನಿ ಸಪ್ತಚ್ಛಂದಾಸ್ಯಾಗ್ನೇಯೇ ಕ್ರತೌ ಪ್ರಾತರನುವಾಕೇ ದ್ರಷ್ಟವ್ಯಾನಿ । ಏಳು ಛಂದಸ್ಸುಗಳಿಂದ ಕೂಡಿದ ಈ ಏಳು ಸೂಕ್ತಮಂತ್ರಗಳೂ ಅಗ್ನಿದೇವತೆಯನ್ನುದ್ದೇಶಿಸಿದ ಪ್ರಾತರನುವಾಕದಲ್ಲಿ ಆಗ್ನೇಯಕ್ರತುಸಂಬಂಧ ವಾದ ಮಂತ್ರಗಳು.

ಪ್ರತಿ ಷ್ಯಾ ಸೂನರೀ (ಋ. ಸಂ. ೪-೫೨-೧) ಇತ್ಯಾದಿಷು ಗಾಯತ್ರೀ ಛಂದಃ ।
ಉಷೋ ಭದ್ರೇಭಿಃ ( ,, ೧-೪೯-೧) ,, ಅನುಷ್ಟುಪ್ ,, ।
ಇದಂ ಶ್ರೇಷ್ಠಂ ( ,, ೧-೧೧೩-೧) ,, ತ್ರಿಷ್ಟುಪ್ ,, ।
ಪ್ರತ್ಯು ಅದರ್ಶಿ ( ,, ೭-೮೨-೧) ,, ಬೃಹತೀ ,, ।
ಉಷಸ್ತಚ್ಚಿತ್ರಮಾಭರ( ,, ೧-೯೨-೧೩) ,, ಉಷ್ಣಿಕ್ ,, ।
ಏತಾ ಉ ತ್ಯಾ ( ,, ೧-೯೨-೧) ,, ಜಗತೀ ,, ।
ಮಹೇ ನೋ ಅದ್ಯ ( ,, ೫-೭೯-೧) ,, ಪಂಕ್ತಿಃ ,, ।

ತಾನ್ಯೇತಾನ್ಯುಷಸಃ ಪ್ರಾತರನುವಾಕೇ ಸಪ್ತಚ್ಛಂದಾಂಸಿ ಈ ಏಳೂ ಉಷೋದೇವತೆಯನ್ನುದ್ದೇಶಿಸಿದುದೂ, ಪ್ರಾತರನುವಾಕದಲ್ಲಿ ಉಷಸ್ಯಕ್ರತು ಸಂಬಂಧವಾದುದೂ ಆದ ಮಂತ್ರಗಳು, ಮತ್ತು,

ಏಷೋ ಉಷಾ (ಋ ಸಂ. ೧-೪೬-೧) ಇತ್ಯಾದಿಷು ಗಾಯತ್ರೀ ಚ್ಛಂದಃ ।
ಯದದ್ಯ ( ,, ೫-೭೩-೧) ,, ಅನುಷ್ಟುಪ್ ,, ।
ಆಭಾತ್ಯಗ್ನಿಃ ( ,, ೫-೭೬-೧) ,, ತ್ರಿಷ್ಟುಪ್ ,, ।
ಇಮಾ ಉ ವಾಂ ( ,, ೭-೭೪-೧) ,, ಬೃಹತೀ ,, ।
ಅಶ್ವಿನಾ ವರ್ತಿಃ ( ,, ೧-೯೨-೧೬) ,, ಉಷ್ಣಿಕ್ ,, ।

| | | | | |
|---|---|---|---|---|
| ಅಬೋಧ್ಯಗ್ನಿರ್ಜ್ಮ( | ,, ೧-೫೭-೧) | ,, | ಜಗತೀ | ,, । |
| ಪ್ರತಿ ಪ್ರಿಯತಮಂ( | ,, ೫-೭೫-೧) | ,, | ಪಂಕ್ತಿಃ | ,, । |

ತಾನ್ಯೇತಾನ್ಯಾಶ್ವಿನೇ ಪ್ರಾತರನುವಾಕೇ ಸಪ್ತಚ್ಛಂದಾಂಸಿ । ಈ ಏಳು ಅಶ್ವಿನೀದೇವತೆಗಳನ್ನುದ್ದೇಶಿಸಿದ ಮತ್ತು ಆಶ್ವಿನಕ್ರತುಸಂಬಂಧವಾದ ಪ್ರಾತರನುವಾಕಮಂತ್ರಗಳು. ಈ ಪ್ರಾತರನುವಾಕಮಂತ್ರಗಳ ಮಾಹಾತ್ಮ್ಯವನ್ನು ಐತರೇಯ ಬ್ರಾಹ್ಮಣದಲ್ಲಿ ಅದರ ಆಧ್ಯಾತ್ಮಿಕವಾದ ಹಿನ್ನೆಲೆಯನ್ನು ಕೆಳಗೆ ಕಂಡಂತೆ ತಿಳಿಸಿದೆ.

> ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನುಬ್ರೂಹೀತ್ಯಾಹಾಧ್ವರ್ಯುಃ । ಏತೇ ವಾವ ದೇವಾಃ ಪ್ರಾತರ್ಯಾವಾಣೋ ಯದಗ್ನಿರುಷಾ ಅಶ್ವಿನೌ ತ ಏತೇ ಸಪ್ತಭಿಃ ಸಪ್ತಭಿಶ್ಛಂದೋಭಿರಾಗಚ್ಛಂತಿ । ಆಸ್ಯ ದೇವಾಃ ಪ್ರಾತರ್ಯಾವಾಣೋ ಹವಂ ಗಚ್ಛಂತಿ ಯ ಏವಂ ವೇದ । ಪ್ರಜಾಪತೌ ವೈ ಸ್ವಯಂ ಹೋತರಿ ಪ್ರಾತರನುವಾಕಮನುವಕ್ಷ್ಯತ್ಯುಭಯೇ ದೇವಾಸುರಾ ಯಜ್ಞಮುಪಾವಸನ್ನಸ್ಮಭ್ಯಮನುವಕ್ಷ್ಯತ್ಯಸ್ಮಭ್ಯಮಿತಿ ಸ ವೈ ದೇವೇಭ್ಯ ಏವಾನ್ವಬ್ರವೀತ್ । ತತೋ ವೈ ದೇವಾ ಅಭವನ್ಪರಾಸುರಾಃ ಭವತ್ಯಾತ್ಮನಾ ಪರಾಸ್ಯ ದ್ವಿಷನ್ ಪಾಪ್ಮಾ ಭ್ರಾತೃವ್ಯೋ ಭವತಿ ಯ ಏವಂ ವೇದ। ಪ್ರಾತರ್ವೈ ಸ ತಂ ದೇವೇಭ್ಯೋಽನ್ವಬ್ರವೀದ್ಯತ್ಪ್ರಾತರನುವಾಕಸ್ಯ ಪ್ರಾತರನುವಾಕತ್ವಂ । ಮಹತಿ ರಾತ್ರ್ಯಾ ಅನೂಚ್ಯಃ ಸರ್ವಸ್ಯೈ ವಾಚಃ ಸರ್ವಸ್ಯ ಬ್ರಹ್ಮಣಃ ಪರಿಗೃಹೀತ್ಯೈ ಯೋ ವೈ ಭವತಿ ಯಃ ಶ್ರೇಷ್ಠತಾಮಶ್ನುತೇ ತಸ್ಯ ವಾಚಂ ಪ್ರೋದಿತಾಮನು-ಪ್ರವದಂತಿ ತಸ್ಮಾನ್ಮಹತಿ ರಾತ್ರ್ಯಾ ಅನೂಚ್ಯಃ .... .... .... .... .... .... .... .... .... ....
> ಯದಾ ವಾ ಅಧ್ವರ್ಯುರುಪಾಕರೋತಿ ವಾಚೈವೋಪಾಕರೋತಿ ವಾಚಾ ಹೋತಾನ್ವಾಹ ವಾಗ್ಘಿ ಬ್ರಹ್ಮ ತತ್ರ ಸ ಕಾಮ ಉಪಾಪ್ತೋ ಯೋ ವಾಚಿ ಚ ಬ್ರಹ್ಮಣಿ ಚ ॥
>
> (ಐ ಬ್ರಾ. ೭-೫)

ಅಗ್ನಿ, ಉಷಸ್ಸು ಮತ್ತು ಅಶ್ವಿನೀದೇವತೆಗಳು ಇವರೇ ಪ್ರಾತಃಕಾಲದಲ್ಲಿ ಸಂಚರಿಸತಕ್ಕ ದೇವತೆಗಳು. ಇವರಲ್ಲಿ ಪ್ರತಿಯೊಂದುದೇವತೆಯೂ ಸಪ್ತಚ್ಛಂದಸ್ಸನ್ನುಳ್ಳವರಾಗಿದ್ದಾರೆ. ಈ ತತ್ತ್ವವನ್ನರಿತ ಮಾನವನಲ್ಲಿಗೆ ಇವರು ಬಂದು ಸೇರುತ್ತಾರೆ. ಒಂದು ಸಲ ಪ್ರಜಾಪತಿಯೇ ಹೋತೃವಾಗಿದ್ದಾಗ ದೇವತೆಗಳು ಒಂದು ಕಡೆಯೂ ಅಸುರರು ಇನ್ನೊಂದುಕಡೆಯೂ ಯಜ್ಞದೀಕ್ಷಿತರಾಗಿದ್ದು ಪ್ರಜಾಪತಿಯು ತಮ್ಮ ಯಾಗಕ್ಕೆ ಪ್ರಾತರನುವಾಕವನ್ನು ಪಠಿಸುವನೆಂದು ಎರಡು ಗುಂಪಿನವರೂ ಭಾವಿಸಿಕೊಂಡರು. ಆದರೆ ಪ್ರಜಾಪತಿಯು ದೇವತೆಗಳಿಗಾಗಿ ಮಾತ್ರ ಪಠಿಸಿದನು. ದೇವತೆಗಳು ಇದರಿಂದ ಜಯಿಸಿದರು. ಅಸುರರು ಪರಾಜಿತರಾದರು. ಇದನ್ನು ಪ್ರಾತಃಕಾಲದಲ್ಲಿ ಪಠಿಸಿದ್ದರಿಂದ ಪ್ರಾತರನುವಾಕನೆಂದು ಪ್ರಸಿದ್ಧವಾಯಿತು ಮತ್ತು ಇದರ ಪ್ರಭಾವವು ಪೂರ್ಣವಾಗಿ ತೋರಬೇಕಾದರೆ ಗಭೀರವಾದ ಮಧ್ಯರಾತ್ರಿಯ ಅನಂತರ ಬೆಳಕು ಹರಿಯುವುದರೊಳಗೆ ಇದನ್ನು ಪಠಿಸಬೇಕು. ವಾಕ್ಕೇ ಬ್ರಹ್ಮಸ್ವರೂಪವಾದ್ದರಿಂದ ಇದನ್ನು ಪಠಿಸಿದರೆ ಇಷ್ಟಾರ್ಥವು ಲಭಿಸುತ್ತದೆ.

> ಪ್ರಜಾಪತೌ ಸ್ವಯಂ ಹೋತರಿ ಪ್ರಾತರನುವಾಕಮನುವಕ್ಷ್ಯತಿ ಸರ್ವಾ ದೇವತಾ ಆಶಂಸಂತ-ಮಾಮಭಿ ಪ್ರತಿಪತ್ಸ್ಯತಿ ಮಾಮಭೀತಿ ಸ ಪ್ರಜಾಪ್ರತಿರೈಕ್ಷತ ಯದ್ಯೇಕಾಂ ದೇವತಾಮಾದಿಷ್ಟಾ

ಮಭಿ ಪ್ರತಿಪತ್ಸ್ಯಾಮೀತರಾಮೇಕೇನ ದೇವತಾ ಉಪಾಪ್ತಾ ಭವಿಷ್ಯಂತೀತಿ ಸ ಏತಾಮೃಚಮಪಶ್ಯದಾಪೋ ರೇವತೀರಿತ್ಯಾಪೋ ವೈ ಸರ್ವಾ ದೇವತಾ ರೇವತ್ಯಃ ಸರ್ವಾ ದೇವತಾಃ ಸ ಏತಯರ್ಚಾ ಪ್ರಾತರನುವಾಕಂ ಪ್ರತ್ಯಪದ್ಯತ ತಾಃ ಸರ್ವಾ ದೇವತಾಃ ಪ್ರಾಮೋದಂತ ಮಾಮಭಿಪ್ರತ್ಯಪಾದಿ ಮಾಮಭೀತಿ । ಸರ್ವಾ ಹಾಸ್ಮಿನ್ ದೇವತಾಃ ಪ್ರಾತರನುವಾಕಮನುಬ್ರುವತಿ ಪ್ರಮೋದಂತೇ ಸರ್ವಾಭಿರ್ಹಾಸ್ಯ ದೇವತಾಭಿಃ ಪ್ರಾತರನುವಾಕಃ ಪ್ರತಿಪನ್ನೋ ಭವತಿ ಯ ಏವಂ ವೇದ ।

(ಐ. ಬ್ರಾ. ೭-೬)

ಪ್ರಜಾಪತಿಯು ಹೋತೃವಾಗಿದ್ದಾಗ ಪ್ರಾತರನುವಾಕವನ್ನು ಪಠಿಸಲು ಸಿದ್ಧವಾದಾಗ ದೇವತೆಗಳಲ್ಲಿ ಪ್ರತಿಯೊಬ್ಬರೂ ತಮ್ಮನ್ನುದ್ದೇಶಿಸಿ ಪಠಿಸುವನು ಎಂದು ಕುತೂಹಲದಿಂದ ನಿರೀಕ್ಷಿಸುತ್ತಿದ್ದರು. ಆಗ ಪ್ರಜಾಪ್ರತಿಗೆ ಸಂದಿಗ್ಧಾವಸ್ಥೆಯುಂಟಾಯಿತು. ಒಂದು ದೇವತೆಯನ್ನು ಮಾತ್ರ ಉದ್ದೇಶಿಸಿದರೆ ಇನ್ನೊಂದು ದೇವತೆಯನ್ನು ಪಡೆಯುವುದು ಹೇಗೆ ಎಂದು ಯೋಚಿಸಿ ಕೊನೆಗೆ ಸಕಲ ದೇವತಾತ್ಮಕವಾದ (ಜಲ) ಅಪ್ಪನ್ನುದ್ದೇಶಿಸಿ,

ಆಪೋ ರೇವತೀಃ ಕ್ಷಯಥಾ ಹಿ ವಸ್ವಃ ಕ್ರತುಂ ಚ ಭದ್ರಂ ಬಿಭೃಥಾಮೃತಂ ಚ ।
ರಾಯಶ್ಚ ಸ್ಥ ಸ್ವಪತ್ಯಸ್ಯ ಪತ್ನೀಃ ಸರಸ್ವತೀ ತದ್ಗೃಣತೇ ವಯೋಧಾತ್ ॥

(ಋ. ಸಂ. ೧೦. ೩೦. ೧೨)

ಎಂಬ ಮಂತ್ರವನ್ನು ಪಠಿಸಿದನು. ಇದರಿಂದ ಸಕಲ ದೇವತೆಗಳೂ ತೃಪ್ತರಾದರು. ಆದುದರಿಂದ ಈ ತತ್ವವನ್ನರಿತು ಪ್ರಾತರನುವಾಕಮಂತ್ರವನ್ನು ಪಠಿಸತಕ್ಕ ಸ್ತುತಿಕರ್ತನು ಸಕಲ ದೇವತೆಗಳ ಅನುಗ್ರಹಕ್ಕೂ ಒಟ್ಟಿಗೆ ಪಾತ್ರನಾಗಿ ಸಕಲವಾದ ಅಭೀಷ್ಟವನ್ನೂ ಪಡೆಯುತ್ತಾನೆ.

ತಿಸ್ರೋ ದೇವತಾ ಅನ್ವಾಹ ತ್ರಯೋ ವಾ ಇಮೇ ತ್ರಿವೃತೋ ಲೋಕಾ ಏಷಾಮೇವ ಲೋಕಾನಾಮಭಿಜಿತ್ಯೈ ।

(ಐ. ಬ್ರಾ ೭-೮)

ಅಗ್ನಿ, ಉಷಸ್ಸು ಮತ್ತು ಅಶ್ವಿನಿದೇವತೆಗಳು ಈ ಮೂವರೇ ಮೂರು ಲೋಕಗಳಿಗೂ ಅಧಿಪತಿಗಳಾಗಿರುವುದರಿಂದ ಇವರನ್ನುದ್ದೇಶಿಸಿ ಪಠಿಸಿದ ಮಂತ್ರಗಳು ಮೂರು ಲೋಕಗಳ ಅವಾಪ್ತಿಗೂ ಸಾಧನವಾಗುವುವು, ಎಂದಿರುವಾಗ ಇಲ್ಲಿ ಇನ್ನೊಂದು ಸಂಶಯವು ತಲೆದೋರುತ್ತದೆ. ಆ ಸಂಶಯವನ್ನು ನಿರೀಕ್ಷಿಸಿ ಅದಕ್ಕೆ ಈ ರೀತಿ ಸಮಾಧಾನವನ್ನು ಹೇಳಿದೆ

ತದಾಹುಃ ಕಥಮನೂಚ್ಯಃ ಪ್ರಾತರನುವಾಕ ಇತಿ । ಯಥಾಚ್ಛಂದಸಮನೂಚ್ಯಃ ಪ್ರಾತರನುವಾಕಃ ಪ್ರಜಾಪತೇರ್ವಾ ಏತಾನ್ಯಂಗಾನಿ ಯಚ್ಛಂದಾಂಸ್ಯೇಷ ಉ ಏವ ಪ್ರಜಾಪತಿರ್ಯೋ ಯಜತೇ ಯದ್ಯಜಮಾನಾಯ ಹಿತಂ । ಪಚ್ಛೋಽನೂಚ್ಯಃ ಪ್ರಾತರನುವಾಕಶ್ಚತುಷ್ಪಾದಾ ವೈ ಪಶವಃ ಪಶೂನಾಮವರುದ್ಧ್ಯೈ । . . . . . . . . . ಆಹುತಿಭಾಗಾ ವಾ ಅನ್ಯಾ ದೇವತಾ ಅನ್ಯಾಃ ಸ್ತೋಮಭಾಗಾಶ್ಛಂದೋಭಾಗಾಸ್ತಾ ಯಾ ಅಗ್ನಾವಾಹುತಯೋ ಹೂ-

ಯೆಂತೇ ತಾಭಿರಾಹುತಿಭಾಗಾಃ ಪ್ರೀಣಾತ್ಯಥ ಯತ್‌ಸ್ತುವಂತಿ ಚ ಶಂಸಂತಿ ಚ ತೇನ ಸ್ತೋಮಭಾಗಾಶ್ಛಂದೋಭಾಗಾಃ। ಉಭಯ್ಯೋ ಹಾಸ್ಯೈತಾ ದೇವತಾಃ ಪ್ರೀತಾ ಅಭೀಷ್ಟಾ ಭವಂತಿ ಯ ಏವಂ ವೇದ।

(ಐ. ಬ್ರಾ. ೭-೮)

ಪ್ರಾತರನುವಾಕವನ್ನು ಪಠಿಸುವ ಕ್ರಮವಾವುದು ಎಂಬ ಪ್ರಶ್ನೆಗೆ ಛಂದೋಬದ್ಧವಾಗಿಯೂ, ನಿಯಮಿತವಾದ ಛಂದಸ್ಸುಗಳ ಕ್ರಮವನ್ನನುಸರಿಸಿಯೂ ಪಠಿಸುವುದೇ ಶಾಸ್ತ್ರೀಯವಾದ ಕ್ರಮವು. ಏತಕ್ಕೆಂದರೆ, ಛಂದಸ್ಸುಗಳು ಪ್ರಜಾಪತಿಯ ಅಂಗಗಳು. ಪ್ರಜಾಪತಿಯೇ ಯಜ್ಞಕರ್ತನು, ಮತ್ತು ಪಶುಗಳು ಪಾದಚಾರಿಗಳಾದುದರಿಂದ ಅದನ್ನು ಪಡೆಯಬೇಕಾದರೆ ಪ್ರಾತರನುವಾಕವನ್ನು ಪಾದಕ್ರಮದಿಂದಲೇ ಪಠಿಸಬೇಕು. ಇತ್ಯಾದಿಯಾಗಿ ಪಠನದ ಕ್ರಮವನ್ನು ತಿಳಿಸಿ ಇನ್ನೊಂದು ಸಂದೇಹವನ್ನು ನಿರೀಕ್ಷಿಸಿದೆ. ಅದೇನೆಂದರೆ,

ಅಭೂದುಷಾ ರುಶತ್ಪಶುರಿತ್ಯುತ್ತಮಯಾ ಪರಿದಧಾತಿ। ತದಾಹುರ್ಯತ್ತ್ರೀನ್ಕ್ರತೂನನ್ವಾಹಾ-ಗ್ನೇಯಮುಷಸ್ಯಮಾಶ್ವಿನಂ ಕಥಮಸ್ಯೈಕಯರ್ಚಾ ಪರಿದಧತಃ ಸರ್ವೇ ತ್ರಯಃ ಕ್ರತವಃ ಪರಿಹಿತಾ ಭವಂತೀತಿ। ಅಭೂದುಷಾ ರುಶತ್ಪಶುರಿತ್ಯುಷಸೋ ರೂಪಮಾಗ್ನಿರಧಾಯ್ಯೃತ್ವಿಯ ಇತ್ಯಗ್ನೇರಯೋಜಿ ವಾಂ ವೃಷಣ್ವಸೂ ರಥೋ ದಸ್ರಾವಮರ್ತ್ಯೋ ಮಾಧ್ವೀ ಮಮ ಶ್ರುತಂ ಹವಮಿತ್ಯಶ್ವಿನೋರೇವಮುಹಾಸ್ಯೈಕಯರ್ಚಾ ಪರಿದಧತಃ ಸರ್ವೇ ತ್ರಯಃ ಕ್ರತವಃ ಪರಿಹಿತಾ ಭವಂತಿ ಭವಂತಿ।

(ಐ. ಬ್ರಾ. ೭-೮)

ಪ್ರಾತರನುವಾಕವನ್ನು ಅಗ್ನಿ, ಉಷಸ್ಸು, ಮತ್ತು ಅಶ್ವಿನೀದೇವತೆಗಳು ಎಂಬ ಈ ಎಲ್ಲಾ ದೇವತೆಗಳನ್ನೂ ಉದ್ದೇಶಿಸಿ ಪಠಿಸಬೇಕಾಗಿರುವುದರಿಂದ ಪ್ರಕೃತದಲ್ಲಿ.

" ಅಭೂದುಷಾ ರುಶತ್ಪಶುರಾಗ್ನಿರಧಾಯ್ಯೃತ್ವಿಯಃ। "

(ಋ. ಸಂ. ೫. ೭೫ ೯)

ಎಂಬ ಒಂದೇ ಮಂತ್ರದಿಂದ ಸಮಾಪ್ತಿಯನ್ನು ಹೇಳುವಾಗ ಎಲ್ಲಾ ದೇವತೆಗಳನ್ನೂ ಉದ್ದೇಶಿಸಿದ ಎಲ್ಲಾ ಕರ್ಮಗಳೂ ಹೇಗೆ ಪೂರ್ಣಗೊಳ್ಳುತ್ತವೆ ಎಂಬ ಪ್ರಶ್ನೆಯು ಬಂದರೆ ಆಗ ಈ ಮಂತ್ರದಲ್ಲೇ ಮೂರು ದೇವತೆಗಳ ಸ್ತುತಿಯೂ ಇದೆ ಯೆಂಬುದನ್ನು ವಿವರಿಸಿ ತೋರಿಸಿದೆ. ಇದು ಪ್ರಾತರನುವಾಕದ ಮಹಿಮೆಯು ಈ ಮಹಿಮೆಯಿಂದ ಕೂಡಿದ ಮಂತ್ರಗಳನ್ನು ಉಷಃಕಾಲದಲ್ಲಿ ಪಠಿಸಬೇಕಾಗಿರುವುದರಿಂದ ಸಾಯಣರು ಪ್ರಕೃತವಾದ ಋಕ್ಕಿನ ವಿವರಣೆಯಲ್ಲಿ " ಉಷಃ ಕಾಲೇ ಹಿ ಪ್ರಾತರನುವಾಕಾಶ್ವಿನಶಸ್ತ್ರೇ ಪ್ರಯುಜ್ಯೇತೇ " ಎಂದು ತಿಳಿಸಿದ್ದಾರೆ.

ಉಷಸಿ ಉಚ್ಛಂತ್ಯಾಂ ಎಂದು ಅಶ್ವಿನೀದೇವತೆಗಳನ್ನುದ್ದೇಶಿಸಿದ ಪ್ರಾರ್ಥನೆಯನ್ನು ತಿಳಿಸಿದೆ. ಯಾಗ ಭೂಮಿಗೆ ಅವರ ಪ್ರಯಾಣ ಕಾಲವನ್ನು ಸೂಚಿಸತಕ್ಕ,

ಅಬೋಧ್ಯಗ್ನಿರ್ಜ್ಮ ಉದೇತಿ ಸೂರ್ಯೋ ವ್ಯು೧ ಷಾಶ್ಚಂದ್ರಾ ಮಹ್ಯಾವೋ ಅರ್ಚಿಷಾ।
ಆಯುಕ್ಷಾತಾಮಶ್ವಿನಾ ಯಾತವೇ ರಥಂ ಪ್ರಾಸಾವೀದ್ದೇವಃ ಸವಿತಾ ಜಗತ್ಪೃಥಕ್॥

(ಋ. ಸಂ. ೧. ೧೫೭. ೧)

ಎಂಬ ಋಕ್ಕಿನಲ್ಲಿ ಈ ರೀತಿ ಪ್ರಾರ್ಥಿಸಿದೆ. ವೇದಿಕೆಯ ಮೇಲೆ ಅಗ್ನಿಯು ಪ್ರಜ್ವಲಿಸುತ್ತಿದ್ದಾನೆ. ಆದಿತ್ಯನೂ ಉದಯಿಸುತ್ತಾನೆ. ಮಹಾತ್ಮಳಾದ ಉಷೋದೇವಿಯೂ ತನ್ನ ಪ್ರಭೆಯೊಡನೆ ಜಗತ್ತಿಗೆಲ್ಲಾ ಹರ್ಷವನ್ನುಂಟುಮಾಡುತ್ತಿದ್ದಾಳೆ. ಆದುದರಿಂದ ಎಲೈ ಅಶ್ವಿನೀದೇವತೆಗಳೇ, ಯಜ್ಞಭೂಮಿಗೆ ಹೋಗುವುದಕ್ಕಾಗಿ ನಿಮ್ಮ ರಥವನ್ನು ಕುದುರೆಗಳೊಡನೆ ಸೇರಿಸಿ ಕಟ್ಟಿರಿ ಎಂದು ಪ್ರಾರ್ಥಿಸಿರುವಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಪ್ರಾರ್ಥಿಸಿದೆ. ಮತ್ತು ಯಜ್ಞಭೂಮಿಗಾಗಿ ಅವರ ಪ್ರಯಾಣಕಾಲವನ್ನು ತಿಳಿಸುವಾಗಲೆಲ್ಲಾ ಅಗ್ನಿಯ ಪ್ರಜ್ವಲನವನ್ನೂ, ಉಷಸ್ಸಿನ ಆವಿರ್ಭಾವವನ್ನೂ ಮತ್ತು ಸೂರ್ಯನ ಉದಯವನ್ನೂ ಸೂಚಿಸಿದೆ. ಇದೇ ಅಂಶವನ್ನು ಐತರೇಯಬ್ರಾಹ್ಮಣದಲ್ಲಿ ತಿಳಿಸುತ್ತಾ,

> **ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನುಬ್ರೂಹಿತ್ಯಾಹಾಧ್ವರ್ಯುಃ । ಏತೇ ವಾವ ದೇವಾಃ ಪ್ರಾತರ್ಯಾವಾಣೋ ಯದಗ್ನಿರುಷಾ ಅಶ್ವಿನೌ ತ ಏತೇ ಸಪ್ತಭಿಃ ಸಪ್ತಭಿಶ್ಛಂದೋಭಿರಾಗಚ್ಛಂತಿ ॥**
>
> (ಐ ಬ್ರಾ. ೭-೫)

ಎಂದು ಮೇಲೆ ಉದಾಹರಿಸುವ ಮಂತ್ರದಲ್ಲಿ ಅಗ್ನಿ, ಉಷಸ್ಸು ಮತ್ತು ಅಶ್ವಿನೀದೇವತೆಗಳನ್ನು ಪ್ರಾತರನುವಾಕಮಂತ್ರಗಳಿಂದ ಉಷಃಕಾಲದಲ್ಲಿ ಯಜ್ಞಗೃಹಕ್ಕೆ ಬರಲು ಪ್ರಾರ್ಥಿಸಬೇಕೆಂದು ಅಧ್ವರ್ಯುವು ಹೋತೃವಿಗೆ ಆದೇಶವನ್ನು ಕೊಡುತ್ತಾನೆಂದು ಹೇಳಿದೆ. ಅದೇ ಅಂಶವನ್ನು ಪ್ರಕೃತವಾದ ಋಕ್ಕಿನಲ್ಲಿ ವರ್ಣಿಸುತ್ತಾ ಉಷಸ್ಸಿನ ಆವಿರ್ಭಾವವನ್ನು ತಿಳಿಸಿದೆ.

**ಉಷಸಿ ಉಚ್ಛಂತಿ** ಈ ಪದಕ್ಕೆ ಕತ್ತಲನ್ನು ಚದುರಿಸಿ ನಾಶಮಾಡುತ್ತಾ ಎಂಬುದಾಗಿ ಒಂದರ್ಥವೂ ಅಥವಾ ಕಾಂತಿಯಿಂದ ಪ್ರಕಾಶಿಸುತ್ತಾ ಎಂಬ ಇನ್ನೊಂದರ್ಥವೂ ಸಾಧ್ಯವಾಗುತ್ತದೆ. **ಉಷಾ** ಎನ್ನುವ ಶಬ್ದದ ರೂಪನಿಷ್ಪತ್ತಿಯೂ ಸಹ **ಉಚ್ಛತಿ** ಎನ್ನುವುದರ ಮೂಲಕವಾಗಿಯೇ ಆಗಿದೆ. **ಉಷಾಃ ಕಸ್ಮಾದುಚ್ಛತೀತಿ ಸತ್ಯಾ ರಾತ್ರೇರಪರಃ ಕಾಲಃ** ಎಂಬ ವಾಕ್ಯದಿಂದ ನಿರುಕ್ತಕಾರರು ಈ ನಿರ್ವಚನವನ್ನು ಹೇಳಿದ್ದಾರೆ. (ನಿ. ೨. ೧೮) ಆದರೆ **ಉಷಾ ವಷ್ಟೇಃ ಕಾಂತಿಕರ್ಮಣ ಉಚ್ಛತೇರಿತರಾ ಮಾಧ್ಯಮಿಕಾ** (ನಿ ೧೨ ೭.) ಎಂಬ ವಾಕ್ಯದಿಂದ **ಉಚ್ಛತಿ** ಶಬ್ದವು **ವಶ ಕಾಂತೌ** ಎಂಬ ಧಾತುವಿನಿಂದಾಗಲಿ, ಅಥವಾ **ಉಚ್ಛೀ ವಿವಾಸೇ** ಎಂಬ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದೆಂದೂ ಸಹ ನಿರುಕ್ತಕಾರರು ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ **ಉಷಸಿ ಉಚ್ಛಂತ್ಯಾಂ** ಎಂಬ ಪದಗಳಿಗೆ ಕತ್ತಲನ್ನು ಪೂರ್ಣವಾಗಿ ಚದುರಿಸಿ ಹೊರಕ್ಕೆ ಆವಿರ್ಭವಿಸುವ **ಉಷಸ್ಸು** ಎಂದಾಗಲಿ ಅಥವಾ ಕಾಂತಿಯಿಂದ ಪ್ರಕಾಶಿಸುತ್ತಿರುವ **ಉಷಸ್ಸು** ಎಂದಾಗಲಿ ಅರ್ಥವಾಗಬಹುದು.

**ದಿವಃ ನಪಾತಾ**—**ನಪಾತ್** ಎಂಬ ಪದಕ್ಕೆ ಪುತ್ರನೆಂದೂ ಪೌತ್ರನೆಂದೂ ಅರ್ಥವಾಗುತ್ತದೆ. ನಿರುಕ್ತಕಾರರು "**ನಪಾದಿತ್ಯನಂತರಾಯಾಃ ಪ್ರಜಾಯಾಃ ನಾಮಧೇಯಂ**" ಸಾಕ್ಷಾತ್ಪುತ್ರನಲ್ಲವೆಂದೂ ಪೌತ್ರಾದಿಗಳೆಂದೂ ಈ ಪದಕ್ಕೆ ಅರ್ಥವನ್ನು ಹೇಳಿದ್ದಾರೆ. (ನಿ. ೮. ೫.) ಪ್ರಕೃತದಲ್ಲಿ **ದಿವಃ ನಪಾತಾ** ಎನ್ನುವುದಕ್ಕೆ ಸಾಯಣರು **ದ್ಯುಲೋಕಸ್ಯ ನಪ್ತೃಸ್ಥಾನೀಯೌ** ಎಂದರ್ಥ ಹೇಳಿದ್ದಾರೆ. ಅಶ್ವಿನೀ ದೇವತೆಗಳ ಉತ್ಪತ್ತಿಸ್ವರೂಪವನ್ನು ಒಂದೊಂದು ಕಡೆ ಒಂದೊಂದು ವಿಧವಾಗಿ ಹೇಳಿದೆ. ಉದಾಹರಣೆಗೆ,

ಇಹೇಹ ಜಾತಾ ಸಮವಾವಶೀತಾಮರೇಪಸಾ ತನ್ವಾ೩ ನಾಮಭಿಃ ಸ್ವೈಃ ।
ಜಿಷ್ಣುರ್ವಾಮನ್ಯಃ ಸುಮಖಸ್ಯ ಸೂರಿರ್ದಿವೋ ಅನ್ಯಃ ಸುಭಗಃ ಪುತ್ರ ಊಹೇ ॥

(ಋ. ಸಂ. ೧. ೧೮೧. ೪)

ಎಂಬ ಋಕ್ಕಿನಲ್ಲಿ ಅಶ್ವಿನೀದೇವತೆಗಳಲ್ಲಿ ಒಬ್ಬನು ಮಧ್ಯಮಲೋಕದ ಪುತ್ರನಾಗಿ ಚಂದ್ರರೂಪನಾಗಿಯೂ ಇನ್ನೊಬ್ಬನು ದ್ಯುಲೋಕದ ಪುತ್ರನಾಗಿ ಸೂರ್ಯರೂಪದಲ್ಲಿಯೂ ಲೋಕರಕ್ಷಕರಾಗಿರುವರು ಎಂದು ವರ್ಣಿಸಿದೆ. ಇವರಿಬ್ಬರಲ್ಲಿ ಒಬ್ಬ ದೇವತೆಗೆ ನಾಸತ್ಯನೆಂದೂ ಇನ್ನೊಬ್ಬ ದೇವತೆಗೆ ದಸ್ರನೆಂದೂ ಹೆಸರಿರುವುದಾಗಿ ಇನ್ನೂ ಕೆಲವು ಸನ್ನಿವೇಶಗಳಲ್ಲಿ ತಿಳಿಯುತ್ತದೆ. ಈ ವಿವರಣೆಯನ್ನು ಹಿಂದೆ ಋ ಸಂ. ೧. ೧೮೧. ೪ ನೇ ಋಕ್ಕಿನ ವಿಶೇಷ ವಿಷಯದಲ್ಲಿ ತಿಳಿಸಿದೆ.

ನಾಸತ್ಯಾ—ನಾಸತ್ಯಾ ಚಾಶ್ವಿನೌ । ಸತ್ಯಾ ವೇವ ನಾಸತ್ಯಾವಿತ್ಯೌರ್ಣವಾಭಃ ಸತ್ಯಸ್ಯ ಪ್ರಣೇತಾರಾ ವಿತ್ಯಾಗ್ರಾಯಣಃ । ನಾಸಿಕಾ ಪ್ರಭವೌ ಬಭೂವತುರಿತಿ ವಾ ।

(ನಿ. ೬. ೧೩)

ಔರ್ಣನಾಭರ ಮತದಂತೆ ಸತ್ಯಾತ್ಮಕರೂ ಅಸತ್ಯರಲ್ಲದವರೂ ಆದವರೇ ನಾಸತ್ಯರೆಂದೂ, ಆಗ್ರಾಯಣರ ಮತದಂತೆ ಸತ್ಯವನ್ನು ಸೃಷ್ಟಿಸಿ ವೃದ್ಧಿಪಡಿಸುವವರಾದುದರಿಂದ ನಾಸತ್ಯರೆಂದೂ, ಅಥವಾ ನಾಸಿಕದಿಂದ ಉತ್ಪನ್ನ ರಾದುದರಿಂದ ನಾಸತ್ಯರೆಂದೂ, ಅಶ್ವಿನೀ ದೇವತೆಗಳಿಗೆ ಈ ವಿಶೇಷವಿರಲು ಒಬ್ಬೊಬ್ಬರ ಮತದಂತೆ ಒಂದೊಂದು ವಿಧ ವಾಗಿ ನಿರುಕ್ತಕಾರರು ತಿಳಿಸಿದ್ದಾರೆ.

ಅರ್ಯಃ - ಈರಯಿತಾ ಸ್ತುತೇರೀಶ್ವರೋ ವಾ ; ಸ್ತುತಿಪ್ರೇರಕನು ಅಥವಾ ಸ್ತುತಿನಿರ್ಮಾಣಕ್ಕೆ ಈಶ್ವರನು ಎಂಬರ್ಥವೆಂದು ವಿವರಿಸಿದೆ. ಇದು ಹೋತೃವಿಗೆ ವಿಶೇಷಣವಾಗಿದೆ. ಅತ್ಯಂತ ಶ್ರೇಷ್ಠವಾಗಿ ಸ್ತುತಿಸತಕ್ಕ ತಾನು ಎಂದು ಹೋತೃವು ತನ್ನ ಭಕ್ತಿಯನ್ನೂ ಶ್ರದ್ಧೆಯನ್ನೂ ಈ ವಿಶೇಷಣದ ಮೂಲಕ ತಿಳಿಸುತ್ತಾನೆ.

ನಿರುಕ್ತಕಾರರು ಈ ಪದವನ್ನು ಈಶ್ವರನಾಮಗಳಲ್ಲಿ ಪಠಿಸಿದ್ದಾರೆ. (ನಿ ೩. ೧೧) ಮತ್ತು ಈ ಪದವನ್ನು ಈಶ್ವರನೆಂಬ ಅರ್ಥದಲ್ಲಿ ಪ್ರಯೋಗಿಸಿರುವ—.

ಪ್ರತತ್ತೇ ಅದ್ಯ ಶಿಪಿವಿಷ್ಟ ನಾಮಾರ್ಯಃ ಶಂಸಾಮಿ ವಯುನಾನಿ ವಿದ್ವಾನ್ ।
ತಂ ತ್ವಾ ಗೃಣಾಮಿ ತವಸಮತವ್ಯಾನ್ ಕ್ಷಯಂತಮಸ್ಯ ರಜಸಃ ಪರಾಕೇ ॥

(ಋ. ಸಂ. ೭. ೧೦೦ ೫)

ಎಂಬ ಋಕ್ಕನ್ನುದಾಹರಿಸಿ, " ಅರ್ಯೋಽಹಮೀಶ್ವರಃ ಸ್ತೋಮಾನಾಮರ್ಯಸ್ತ್ವಮಸೀತಿ ವಾ " (ನಿ. ೫. ೯) ಎಂದು ವಿವರಿಸಿದ್ದಾರೆ. ಇಲ್ಲಿ ವೃತ್ತಿಕಾರರು " ಯಸ್ಮಾದರ್ಯೋಽಹಮಸ್ಮಿ ಈಶ್ವರಃ ಸ್ತುತೀನಾಮುದೀರಣೇ ಯುಷ್ಮದ್ಗುಣಾಭಿಜ್ಞಃ ಅಥವಾ ಅರ್ಯಸ್ತ್ವಮಸಿ ಅರ್ಯ ಈಶ್ವರಃ ಮದನುಗ್ರಹಾಯ ಸಮರ್ಥಃ । ಸ್ತುತಿ ಮಾಡಲು ನಿನ್ನ ಗುಣಗಳನ್ನೂ ನಾನು ತಿಳಿಯಲು ಸಮರ್ಥನಾಗಿರುವೆನು. ಅಥವಾ ಅನುಗ್ರಹ ಮಾಡಲು ನೀನು ಸಮರ್ಥನಾಗಿದ್ದೀಯೆ ಎಂದೂ ಆಗಬಹುದೆಂದು ವಿವರಿಸಿದ್ದಾರೆ. ಪೂಜ್ಯನು ಎಂಬರ್ಥದಲ್ಲಿಯೂ ಈ ಪದದ ಪ್ರಯೋಗವು ಅನೇಕಕಡೆಗಳಲ್ಲಿರುತ್ತದೆ. ಉದಾಹರಣೆಗೆ,

**ಪೃಥೂ ರಥೋ ದಕ್ಷಿಣಾಯಾ ಅಯೋಜ್ಯೈನಂ ದೇವಾಸೋ ಅಮೃತಾಸೋ ಅಸ್ಥುಃ ।**
**ಕೃಷ್ಣಾದುದಸ್ಥಾದರ್ಯಾ ೩ ವಿಹಾಯಾಶ್ಚಿಕಿತ್ಸಂತೀ ಮಾನುಷಾಯ ಕ್ಷಯಾಯ ॥**

(ಋ. ಸಂ. ೧. ೧೨೩. ೧.)

ಎಂಬ ಋಕ್ಕಿನಲ್ಲಿ ಪ್ರಕರಣದಿಂದ ಗಮ್ಯವಾದ ಉಷೋದೇವತೆಯ ಗುಣಗಳನ್ನು ವರ್ಣಿಸುತ್ತಾ **ಅರ್ಯಾ** ಎಂಬ ವಿಶೇಷಣವಿದೆ. ಈ ಪದಕ್ಕೆ ಸಾಯಣರು **ಪೂಜ್ಯಾ** ಎಂದರ್ಥ ಮಾಡಿದ್ದಾರೆ, ಮತ್ತು, ಇದರ ಪ್ರಯೋಗವು ಸರ್ವೇಶ್ವರ ಎಂಬರ್ಥದಲ್ಲಿಯೇ ಅಧಿಕವಾಗಿದೆ.

**ಮಘವಾನಾ**—ಈ ವಿಶೇಷಣಕ್ಕೆ ಸಾಯಣರು **ಹವಿರ್ಲಕ್ಷಣಾನ್ನಯುಕ್ತೌ** ಹವಿಸ್ಸಿನ ರೂಪದ ಅನ್ನದಿಂದ ಕೂಡಿದ (ಅಶ್ವಿನೀದೇವತೆಗಳು) ಎಂದರ್ಥ ಮಾಡಿದ್ದಾರೆ. ಸಾಧಾರಣವಾಗಿ **ಮಘವನ್** ಎಂಬ ವಿಶೇಷಣವು ಇಂದ್ರನ ಪರವಾಗಿಯೇ ಇದ್ದರೂ ಸಹ, ಇತರ ದೇವತೆಗಳ ಗುಣಗಳನ್ನು ವರ್ಣಿಸುವಾಗಲೂ ಸಹ ಈ ವಿಶೇಷಣವು ಋಕ್ಸಂಹಿತೆಯಲ್ಲಿ ಅಲ್ಲಲ್ಲಿ ಪ್ರಯೋಗಿಸಲ್ಪಟ್ಟಿದೆ.

ಅಥವಾ **ಮಘ** ಶಬ್ದವನ್ನು ಧನ ನಾಮಗಳಲ್ಲಿ ಪಠಿಸಿರುವುದರಿಂದ (ನಿ ೩. ೯.) ಇಲ್ಲಿ ಅನ್ನರೂಪವಾದ ಧನವೆಂದು ಹೇಳಬಹುದು. ನಿರುಕ್ತಕಾರರು **ಮಘಮಿತಿ ಧನನಾಮಧೇಯಂ ಮಂಹತೇರ್ದಾನಕರ್ಮಣಃ ।** ಎಂದು ಮಘಶಬ್ದದ ನಿಷ್ಪತ್ತಿಯನ್ನು ತಿಳಿಸಿ **ಮಘೋನೀ** ಎಂಬ ಪದದ ಅರ್ಥವನ್ನು ವಿವರಿಸಿದ್ದಾರೆ (ನಿ ೧ ೭) ಆದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಮಘವಾನಾ** ಎಂಬ ವಿಶೇಷಣಕ್ಕೆ ನಿರ್ವಚನವನ್ನು ಹೇಳಬಹುದು. ಅಥವಾ,

**ಮಘವಾನಾ** ಎಂದರೆ ವಿಷ್ಣುವಿನೊಡಗೂಡಿರುವ ಅಶ್ವಿನೀದೇವತೆಗಳು ಎಂದು ಅರ್ಥಮಾಡಿದರೂ ತಪ್ಪಾಗಲಾರದು. ಹೇಗೆಂದರೆ, ಶತಪಥಬ್ರಾಹ್ಮಣಾದಿಗಳಲ್ಲಿ, ವಿಷ್ಣುವಿಗೂ ಮಖಕ್ಕೂ ತಾದಾತ್ಮ್ಯವನ್ನೂ ಹೇಳಿರುವ ವಿಷಯವನ್ನು ಹಿಂದೆ ತಿಳಿಸಿದೆ. (ಶ. ಬ್ರಾ. ೧೪. ೧. ೧. ೧೩) ಅಶ್ವಿನೀದೇವತೆಗಳಿಗೂ **ಮಖ** ರೂಪನಾದ ವಿಷ್ಣುವಿಗೂ ಇರುವ ಸಾಹಚರ್ಯವೂ ಪ್ರಸಿದ್ಧವಾದುದು. ಈ ವಿಷಯವನ್ನು ಸಹ ಹಿಂದೆ,

**ತಮಸ್ಯ ರಾಜಾ ವರುಣಸ್ತಮಶ್ವಿನಾ ಕ್ರತುಂ ಸಚಂತ ಮಾರುತಸ್ಯ ವೇಧಸಃ ।**
**ದಾಧಾರ ದಕ್ಷಮುತ್ತಮಮಹರ್ವಿದಂ ವ್ರಜಂ ಚ ವಿಷ್ಣುಃ ಸಖಿವಾँ ಅಪೋರ್ಣುತೇ ॥**

(ಋ. ಸಂ. ೧. ೧೫೬. ೪.)

ಎಂಬ ಋಕ್ಕಿನ ವಿಶೇಷವಿಷಯಗಳನ್ನು ।ವಿವರಿಸುವಾಗ ತಿಳಿಸಿದೆ. (ಋಗ್ವೇದ ಸಂಹಿತಾ, ಭಾಗ ೧೧ ; ಪುಟ 656-657) ಅಲ್ಲದೆ, ಋಕ್ಸಂತೆಯಲ್ಲಿಯೂ ಸಹ ಇದೇ ಸಾಹಚರ್ಯವನ್ನು ಈ ರೀತಿ ವರ್ಣಿಸಿದೆ.

**ಯದಿಂದ್ರೇಣ ಸರಥಂ ಯಾಥೋ ಅಶ್ವಿನಾ ಯದ್ವಾ ವಾಯುನಾ ಭವಥಃ ಸಮೋಕಸಾ ।**
**ಯದಾದಿತ್ಯೇಭಿರ್ಋಭುಭಿಃ ಸಜೋಷಸಾ ಯದ್ವಾ ವಿಷ್ಣೋರ್ವಿಕ್ರಮಣೇಷು ತಿಷ್ಠಥಃ ॥**

(ಋ ಸಂ. ೮. ೯. ೧೨.)

ಇತ್ಯಾದಿ ಋಕ್ಕುಗಳಲ್ಲಿಯೂ ಸಹ ಅಶ್ವಿನೀದೇವತೆಗಳು ವಿಷ್ಣುವಿನ ಸಾಹಚರ್ಯವನ್ನು ಹೊಂದಿರುವ ವಿಷಯವು ತಿಳಿಸಲ್ಪಟ್ಟಿದೆ. ಈ ಕಾರಣದಿಂದ **ಮಘೋನಾನಾ** ಎಂದರೆ ವಿಷ್ಣುವಿನೊಡಗೂಡಿದ ಅಶ್ವಿನೀದೇವತೆಗಳು ಎಂದು ಅರ್ಥ ಮಾಡಿದರೂ ಮಾಡಬಹುದು. ಆದರೆ ಪ್ರಕೃತವಾದ ಸನ್ನಿವೇಶದಲ್ಲಿ ಸಾಯಣರು ಹೇಳಿರುವಂತೆ ಹವಿಸ್ಸಿನ ರೂಪದ ಅನ್ನ ಸಂಪತ್ತಿನಿಂದ ಕೂಡಿದವರು ಎಂದು ಅರ್ಥವನ್ನು ಹೇಳುವ ಸಂದರ್ಭಕ್ಕೆ ಉಚಿತವಾಗಿರುವುದಾಗಿ ತೋರುತ್ತದೆ.

**ಸುವೃಕ್ತಿ—ಸುಷ್ಠು ಪಾಪವರ್ಜನಂ ಯಥಾಭವತಿ ತಥಾ । ಯದ್ವಾ । ಸುಸಮಾಪ್ತಿ**—ಪಾಪದಿಂದ ಪೂರ್ಣವಾಗಿ ಬಿಡುಗಡೆಯನ್ನು ಹೊಂದಿರುವುದು ಅಥವಾ ಶುದ್ಧವಾದ ಸಮಾಪ್ತಿಯುಳ್ಳದ್ದು ಎಂದರ್ಥ. ಈ ಪದವು ಸ್ತೋಮಃಶಬ್ದಕ್ಕೆ ವಿಶೇಷಣವಾಗಿದೆ. ಈ ವಿಶೇಷಣವು ಒಂದೊಂದು ಕಡೆಯಲ್ಲಿ ಒಂದೊಂದರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ನಿರುಕ್ತಕಾರರು,

**ಇಯಂ ಶುಷ್ಮೇಭಿರ್ಬಿಸಖಾ ಇವಾರುಜತ್ಸಾನು ಗಿರೀಣಾಂ ತವಿಷೇಭಿರೂರ್ಮಿಭಿಃ ।**
**ಪಾರಾವತಘ್ನೀಮವಸೇ ಸುವೃಕ್ತಿಭಿಃ ಸರಸ್ವತೀಮಾ ವಿವಾಸೇಮ ಧೀತಿಭಿಃ ॥**

(ಋ. ಸಂ ೬ ೬೧. ೨)

ಎಂಬ ಋಕ್ಕನ್ನುದಾಹರಿಸಿ ಅಲ್ಲಿರುವ **ಸುವೃಕ್ತಿಭಿಃ** ಎಂಬ ಪದಕ್ಕೆ **ಸುಪ್ರವೃತ್ತಾಭಿಃ ಶೋಭನಾಭಿಃ ಸ್ತುತಿಭಿಃ** ಎಂದು ಶ್ರೇಷ್ಠವಾದ ಸ್ತುತಿಯೆಂದೇ ಅರ್ಥಮಾಡಿದ್ದಾರೆ. **ವೃಕ್ತಿ**ಶಬ್ದವು ವರ್ಜನಾರ್ಥಕವಾಗಿಯೂ ಸಹ ಬೇರೆ ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟಿದೆ. ಉದಾಹರಣೆಗೆ,

**ಕುವಿದಂಗ ಯವಮಂತೋ ಯವಂ ಚಿದ್ಯಥಾ ದಾಂತ್ಯನುಪೂರ್ವಂ ವಿಯೂಯ ।**
**ಇಹೇಹೈಷಾಂ ಕೃಣುಹಿ ಭೋಜನಾನಿ ಯೇ ಬರ್ಹಿಷೋ ನಮೋವೃಕ್ತಿಂ ನ ಜಗ್ಮುಃ ॥**

(ಋ ಸಂ. ೧೦. ೧೩೧. ೨)

ಎಂಬಲ್ಲಿ **ನಮೋವೃಕ್ತಿಂ ನಮಸಃ ಹವಿರ್ಲಕ್ಷಣಸ್ಯಾನ್ನಸ್ಯ ನಮಸ್ಕಾರಾತ್ಮಕಸ್ಯ ಸ್ತೋತ್ರಸ್ಯ ವಾ ವರ್ಜನಮ-ಕರಣಂ ನ ಜಗ್ಮುಃ ।** ನಮಸ್ಕಾರಾತ್ಮಕವಾದ ಸ್ತುತಿಯನ್ನು ಬಿಟ್ಟುಬಿಡಲಿಲ್ಲ ಎಂದು ಇಂದ್ರನನ್ನು ಪ್ರಾರ್ಥಿಸಿದೆ. ಇಲ್ಲಿ ವೃಕ್ತಿಶಬ್ದವು ವರ್ಜನಾರ್ಥಕವಾಗಿ ಉಪಯೋಗಿಸಲ್ಪಟ್ಟಿದೆ. ಆದರೆ ಈ ಪದವು ಸ್ತುತ್ಯರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುವುದೇ ಅತ್ಯಧಿಕವಾಗಿದೆ. ಉದಾಹರಣೆಗೆ,

**ಅಸ್ಮಾ ಇದು ತ್ಯಮುಪಮಂ ಸ್ವರ್ಷಾಂ ಭರಾಮ್ಯಾಂಗೂಷಮಾಸ್ಯೇನ ।**
**ಮಂಹಿಷ್ಠಮಚ್ಛೋಕ್ತಿಭಿರ್ಮತೀನಾಂ ಸುವೃಕ್ತಿಭಿಃ ಸೂರಿಂ ವಾವೃಧಧ್ಯೈ ॥**

(ಋ. ಸಂ. ೧. ೬೧. ೩.)

ಇತ್ಯಾದಿಕಡೆಗಳಲ್ಲೆಲ್ಲಾ ಶ್ರೇಷ್ಠವಾದ ಸ್ತುತಿಯೆಂದೇ ಅರ್ಥ.

**ವರ್ತಿಃ—ವರ್ತನಹೇತುಭೂತಂ ಗೃಹಂ ।** ವಾಸಮಾಡಲು ಆಧಾರಭೂತವಾದ ಮನೆಯೆಂದರ್ಥವೆಂದು ಸಾಯಣರು ಈ ಪದವು ಬರುವೆಡೆಗಳಲ್ಲೆಲ್ಲಾ ಅರ್ಥಮಾಡಿಮಾಡಿದ್ದಾರೆ. ಆದರೆ ಸ್ಕಂದಸ್ವಾಮಿಗಳು ಸಾಧಾರಣವಾಗಿ ಎಲ್ಲಾ ಕಡೆಗಳಲ್ಲೂ ಸಹ ಪ್ರಸಿದ್ಧವಾದ ಮಾರ್ಗವೆಂದರ್ಥ ಮಾಡಿದ್ದಾರೆ. ಉದಾಹರಣೆಗೆ,

**ತ್ರಿರ್ವರ್ತಿರ್ಯಾತಂ ತ್ರಿರನುವ್ರತೇ ಜನೇ ತ್ರಿಃ ಸುಪ್ರಾವ್ಯೇ ತ್ರೇಧೇವ ಶಿಕ್ಷತಂ ।**
**ತ್ರಿರ್ನಾಂದ್ಯಂ ವಹತಮಶ್ವಿನಾ ಯುವಂ ತ್ರಿಃ ಪೃಕ್ಷೋ ಅಸ್ಮೇ ಅಕ್ಷರೇವ ಪಿನ್ವತಂ ॥**

(ಋ. ಸಂ. ೧. ೩೪. ೪.)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ವರ್ತಿಯೆಂಬುದಕ್ಕೆ ಸಾಯಣರು ಗೃಹವೆಂದೂ ಸ್ಕಂದಸ್ವಾಮಿಗಳು ಪಥವೆಂದೂ ಅರ್ಥ ಮಾಡಿದ್ದಾರೆ. ಹೀಗೆ ತ್ರಿರ್ವರ್ತಿಃ, ಅಶ್ವಿನಾವರ್ತಿಃ ಇತ್ಯಾದಿಯಾಗಿ ವರ್ತಿಶಬ್ದಪ್ರಯೋಗವಿರುವ ೧. ೧೧೬. ೧೮ ; ೧. ೧೧೭. ೨ ; ೧. ೧೧೯. ೪. ಇತ್ಯಾದಿ ಋಕ್ಕುಗಳಿರುವ ಸೂಕ್ತಗಳೆಲ್ಲವೂ ಅಶ್ವಿನೀ ದೇವತೆಗಳ ಪರವಾದವೇ ಆಗಿವೆ ಯೆಂಬುದು ಒಂದು ವಿಶೇಷವಿಷಯ, ಆದರೆ,

**ಇಷಂ ದುಹನ್ತ್ಸುದುಘಾಂ ವಿಶ್ವಧಾಯಸಂ ಯಜ್ಞಪ್ರಿಯೇ ಯಜಮಾನಾಯ ಸುಕ್ರತೋ ।**
**ಅಗ್ನೇ ಘೃತಸ್ನುಸ್ತ್ರಿರ್ಋತಾನಿ ದೀದ್ಯದ್ವರ್ತಿರ್ಯಜ್ಞಂ ಪರಿಯನ್ತ್ಸುಕ್ರತೂಯಸೇ ॥**

(ಋ. ಸಂ. ೧೦. ೧೨೨. ೬.)

ಎಂಬ ಋಕ್ಕಿನಲ್ಲಿ ಮಾತ್ರ ಅಗ್ನಿಪರವಾದ ಮಂತ್ರದಲ್ಲಿ ಈ ಪದದ ಪ್ರಯೋಗವಿರುತ್ತದೆ. ಇಲ್ಲಿ ಯಜ್ಞಗೃಹವೆಂದರ್ಥ ಮಾಡಿದೆ. ಸಾಯಣರೂ ಸಹ ಕೆಲವೆಡೆಗಳಲ್ಲಿ ಈ ಪದಕ್ಕೆ ಮಾರ್ಗವೆಂದರ್ಥಮಾಡಿದ್ದಾರೆ. ಉದಾಹರಣೆಗೆ,

**ಯೋ ಹ ಸ್ಯ ವಾಂ ರಥಿರಾ ವಸ್ತ ಉಸ್ರಾ ರಥೋ ಯುಜಾನಃ ಪರಿಯಾತಿ ವರ್ತಿಃ ।**
**ತೇನ ನಃ ಶಂಯೋರುಷಸೋ ವ್ಯುಷ್ಟೌ ನ್ಯಶ್ವಿನಾ ವಹತಂ ಯಜ್ಞೇ ಅಸ್ಮಿನ್ ॥**

(ಋ. ಸಂ. ೭. ೬೯. ೫.)

ಎಂಬಲ್ಲಿ ವರ್ತಿಃ ಮಾರ್ಗಂ ಎಂದರ್ಥಮಾಡಿದೆ. ಇದು ಅಶ್ವಿನೀದೇವತೆಗಳನ್ನೇ ಉದ್ದೇಶಿಸಿ ಪ್ರಾರ್ಥಿಸಿದ ಮಂತ್ರ ವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಗೃಹವೆಂದರ್ಥ. ಸಾಧಾರಣವಾಗಿ ಇದು ಯಜ್ಞಗೃಹಕ್ಕೆ ಪರ್ಯಾಯಪದ ವಾಗಿರುತ್ತದೆ.

### ವ್ಯಾಕರಣಪ್ರಕ್ರಿಯಾ

**ತಾ**—ತದ್ ಶಬ್ದ ದ್ವಿವಚನ (ಔ) ಪರವಾದಾಗ **ತ್ಯದಾದೀನಾಮಃ** ಎಂಬುದರಿಂದ ಅತ್ವ. **ಅತೋಗುಣೇ** ಸೂತ್ರದಿಂದ ಪರರೂಪ. **ಸುಪಾಂಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

**ಹುವೇಮ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಲಿಙ್ ಉತ್ತಮಪುರುಷ ಬಹುವಚನಾಂತ ರೂಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಉಚ್ಛಂತ್ಯಾಮ್**—ಉಛೀ ವಿವಾಸೇ ಧಾತು. ಲಟಿಗೆ ಶತ್ರಾದೇಶ. **ತುದಾದಿಭ್ಯಃ ಶಃ** ಎಂಬುದರಿಂದ ಶ ವಿಕರಣ. ಸ್ತ್ರೀತ್ವದಲ್ಲಿ **ಉಗಿತಶ್ಚ** (ಪಾ. ಸೂ, ೪-೧-೬) ಎಂಬುದರಿಂದ ಙೀಪ್. ವಿಕರಣಸ್ವರ ಉಳಿಯುತ್ತದೆ. ಸಪ್ತಮೀ ಏಕವಚನಾಂತರೂಪ.

**ವಹ್ನಿಃ**—ವಹ ಪ್ರಾಪಣೇ ಧಾತು **ವಹಿ ಶ್ರಿ ಶ್ರುಯುದ್ರು**—(ಉ ಸೂ ೪-೫೧) ಎಂಬುದರಿಂದ ನಿ ಪ್ರತ್ಯಯ ನಿತ್ವ ವಿಧಾನಮಾಡಿರುವುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸಂತೌ—ಅಸ ಭುವಿ. ಧಾತು ಲಟಿಗೆ ಶತ್ರಾದೇಶ. ವಿಕರಣಕ್ಕೆ ಲುಕ್. ಶ್ನಸೋರಲ್ಲೋಪಃ (ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ದ್ವಿವಚನ ಪರವಾದಾಗ ಉಗಿತ್ತಾದುದರಿಂದ ನುಮಾಗಮ. ಅದಕ್ಕೆ ಅನುಸ್ವಾರ ಪರಸವರ್ಣ.

ಅರ್ಯೇಃ—ಋ ಗತೌ ಧಾತು ಅರ್ಯಃ ಸ್ವಾಮಿವೈಶ್ಯಯೋಃ (ಪಾ. ಸೂ. ೩-೧-೧೦೩) ಎಂಬುದರಿಂದ ಸ್ವಾಮಿರೂಪಾರ್ಥದಲ್ಲಿ ಯತ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ರಪರವಾಗಿ ಬರುತ್ತದೆ.

ಸುದಾಸ್ತರಾಯ—ಶೋಭನಂ ದದಾತೀತಿ ಸುದಾಃ. ಡುದಾಞ್ ದಾನೇ- ಧಾತು. ಅಸುನ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಇದರಮೇಲೆ ಅತಿಶಯಾರ್ಥದಲ್ಲಿ ತರಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಸಕಾರಕ್ಕೆ ಪದಾಂತದಲ್ಲಿ ರುತ್ವ ವಿಸರ್ಗ, ಸತ್ವ- ಚತುರ್ಥೀ ಏಕವಚನಾಂತ ರೂಪ.॥ ೧ ॥

———— :o: ————

ಸಂಹಿತಾಪಾಠಃ

ಅಸ್ಮೇ ಊ ಷು ವೃಷಣಾ ಮಾದಯೇಥಾಮುತ್ಪಣೀರ್ಹತಮೂರ್ಮ್ಯಾ ಮದಂತಾ ।
ಶ್ರುತಂ ಮೇ ಅಚ್ಛೋಕ್ತಿಭಿರ್ಮತೀನಾಮೇಷ್ಟಾ ನರಾ ನಿಚೇತಾರಾ ಚ ಕರ್ಣೈಃ ॥ ೨ ॥

ಪದಪಾಠಃ

ಅಸ್ಮೇ ಇತಿ । ಊಂ ಇತಿ । ಸು । ವೃಷಣಾ । ಮಾದಯೇಥಾಂ । ಉತ್ । ಪಣೀನ್ । ಹತಂ । ಊರ್ಮ್ಯಾ । ಮದಂತಾ ।
ಶ್ರುತಂ । ಮೇ । ಅಚ್ಛೋಕ್ತಿಽಭಿಃ । ಮತೀನಾಂ । ಏಷ್ಟಾ । ನರಾ । ನಿಽಚೇತಾರಾ । ಚ । ಕರ್ಣೈಃ ॥ ೨ ॥

ಸಾಯಣಭಾಷ್ಯಂ

ಹೇ ವೃಷಣಾ ಕಾಮಾನಾಂ ವರ್ಷಕಾವಶ್ವಿನೌ ಯುವಾಮಸ್ಮೇ ಉ ಅಸ್ಮಾಸ್ವೇವ ಸು ಮಾದ- ಯೇಥಾಂ । ಸುಷ್ಠು ತೃಪ್ಯತಂ । ಅಸ್ಮಭ್ಯಂ ತರ್ಪಯತಮಭಿಮತಂ । ತಥಾ ಪಣೀನ್ವಣಿಜೋ ಲುಬ್ಧ- ಕಾನಯಷ್ಟ್ವನುದುನ್ಮೂಲ್ಯ ಹತಂ । ನಾಶಯತಂ । ಕೀದೃಶೌ ಯುವಾಂ । ಊರ್ಮ್ಯಾ ರಾತ್ರಿನಾ- ಮೈತತ್ । ರಾತ್ರ್ಯಾ ಮದಂತಾ ಮಾದ್ಯಂತೌ । ಯದ್ವಾ । ಊರ್ಮಿರಿತಿ ಸೋಮನಾಮ । ಊರ್ಮಿ- ರ್ಯಸ್ತೇ ಪವಿತ್ರ ಆ । ಋ. ೯-೬೪-೧೧ । ಇತ್ಯಾದಿಷು ತಥಾ ಪ್ರಯೋಗಾತ್ । ಅಸ್ಮದೀಯೇನ

ಸೋಮೇನ ಮದಂತೌ । ತಾದೃಶೌ ಯುವಾಂ ಮೇ ಮನೂಚ್ಛೋಕ್ತಿಭಿರಾಭಿಮುಖ್ಯಕರೈರ್ನಿರ್ಮಲವೇದ-ವಾಕ್ಯೈಃ ರಚಿತಾ ಮತೀನಾಂ ॥ ಕರ್ಮಣಿ ಷಷ್ಠೀ ॥ ಮನನಸಾಧನಾಃ ಸ್ತುತೀಃ ಕರ್ಣೈರಾಕರ್ಣನಸಾಧನೈಃ ಶ್ರೋತ್ರೈಃ ಶ್ರುತಂ । ಶೃಣುತಂ । ಹೇ ನರಾ ನೇತಾರೌ ಯುವಾಂ ಖಲ್ವೇಷ್ಟಾನ್ವೇಷ್ಟಾರಾವಸ್ಮತ್ಸ್ತುತೀನಾಂ ತಥಾ ನಿಚೇತಾರಾ ಲಬ್ಧಾನಾಂ ತಾಸಾಂ ಸಂಚಯಕರ್ತಾರೌ । ನಿರಿತ್ಯೇಷ ಸಮಿತ್ಯೇತಸ್ಯ ಸ್ಥಾನೇ । ಯಸ್ಮಾದೇವಂವಿಧೌ ತಸ್ಮಾಚ್ಛೃಣುತಮಿತಿ ॥

ಪ್ರತಿಪದಾರ್ಥ

**ಊರ್ಮ್ಯಾ**—ರಾತ್ರಿಯ ವೇಳೆಯಲ್ಲಿ (ಅಥವಾ ನಮ್ಮಿಂದ ಅರ್ಪಿತವಾದ ಸೋಮಗಳಲ್ಲಿ) । **ಮದಂತಾ**—ತೃಪ್ತಿಯನ್ನು ಪಡೆಯುವವರೂ । **ವೃಷಣಾ**—ಕಾಮವರ್ಷಕರೂ ಆದ ಎಲೈ ಅಶ್ವಿನೀದೇವತೆಗಳೇ । **ಅಸ್ಮೇ ಉ**—ನಮ್ಮಲ್ಲಿಯೇ (ಅಥವಾ ನಮ್ಮ ತೃಪ್ತಿಗಾಗಿಯೇ) । **ಸು ಮಾದಯೇಥಾಂ**—ನೀವೂ ಸಹ ಪೂರ್ಣವಾದ ತೃಪ್ತಿಯನ್ನು ಹೊಂದಿರಿ । **ತಥಾ**—(ಹಾಗೆಯೇ) । **ಪಣೀನ್**—ಯಜ್ಞಮಾಡದಿರತಕ್ಕ ಲೋಭಿಗಳನ್ನು । **ಉತ್ ಹತಂ**—ನಿರ್ಮೂಲಮಾಡಿ ನಾಶಮಾಡಿರಿ । **ನರಾ**—ನೇತೃಗಳಾದ ಅಶ್ವಿನೀದೇವತೆಗಳೇ। **ಏಷ್ಟಾ**—(ನಮ್ಮ ಸ್ತುತಿಗಳನ್ನು) ನಿರೀಕ್ಷಿಸುವವರೂ । **ನಿಚೇತಾರಾ ಚ**—(ಲಬ್ಧವಾದ ಸ್ತುತಿಗಳನ್ನು) ಶೇಖರಿಸುವವರೂ ಆದ ನೀವು । **ಅಚ್ಛೋಕ್ತಿಭಿಃ**—(ನಿಮ್ಮ ಅನುಗ್ರಹವನ್ನು ಪಡೆಯಲು) ವೇದವಾಕ್ಯಗಳಿಂದ ನಿರ್ಮಿತವಾದ । **ಮೇ**—ನನ್ನ (ನನ್ನಿಂದ ರಚಿತವಾದ) **ಮತೀನಾಂ**—ಧ್ಯಾನಾತ್ಮಕವಾದ ಸ್ತುತಿಗಳನ್ನು । **ಕರ್ಣೈಃ**—ನಿಮ್ಮ ಕಿವಿಗಳಿಂದ । **ಶ್ರುತಂ**—ಕೇಳಿರಿ ।

ಭಾವಾರ್ಥ

ನಮ್ಮಿಂದ ಅರ್ಪಿತವಾದ ಸೋಮರಸಗಳಲ್ಲಿ ತೃಪ್ತಿಯನ್ನು ಪಡೆಯುವವರೂ, ಕಾಮವರ್ಷಕರೂ ಆದ ಎಲೈ ಅಶ್ವಿನೀದೇವತೆಗಳೇ, ನಮಗೆ ತೃಪ್ತಿಯನ್ನುಂಟುಮಾಡುವ ಸಲುವಾಗಿ ನೀವೂ ಸಹ ಪೂರ್ಣವಾದ ತೃಪ್ತಿಯನ್ನು ಪಡೆಯಿರಿ. ಹಾಗೆಯೇ ಯಜ್ಞಮಾಡದಿರತಕ್ಕ ಲೋಭಿಗಳನ್ನು ನಿರ್ಮೂಲಮಾಡಿ ನಾಶಮಾಡಿರಿ. ನೇತೃಗಳಾದ ಅಶ್ವಿನೀದೇವತೆಗಳೇ, ನಮ್ಮ ಸ್ತುತಿಗಳನ್ನು ನಿರೀಕ್ಷಿಸುವವರೂ, ಲಬ್ಧವಾದ ಸ್ತುತಿಗಳನ್ನು ಶೇಖರಿಸುವವರೂ ಆದ ನೀವು, ನಿಮ್ಮ ಅನುಗ್ರಹವನ್ನು ಪಡೆಯಲು ವೇದವಾಕ್ಯಗಳಿಂದ ನಿರ್ಮಿತವಾದುದೂ, ಧ್ಯಾನಾತ್ಮಕವಾದುದೂ ಆದ ನನ್ನ ಸ್ತುತಿವಾಕ್ಯಗಳನ್ನು ಪ್ರೀತಿಯಿಂದ ಕೇಳಿರಿ.

English Translation

Showerers (of benefits), rejoicing in (our) libations, make us happy and destroy the niggard (withholder) of offerings ; hear, leaders, with your ears, my praises addressed to you with pure words, for you are seekers (after praise), you are retentive (of laudation).

ವಿಶೇಷವಿಷಯಗಳು

**ಊರ್ಮ್ಯಾ—ರಾತ್ರಿನಾಮೈತತ್ । ಯದ್ವಾ । ಊರ್ಮಿರಿತಿ ಸೋಮನಾಮ ।** ನಿರುಕ್ತಕಾರರು ಈ ಪದವನ್ನು ರಾತ್ರಿನಾಮಗಳಲ್ಲಿ ಸೇರಿಸಿ ಪಠಿಸಿರುತ್ತಾರೆ. (ನಿ. ೨-೧೮) ಆದುದರಿಂದ ಇಲ್ಲಿಯೂ ರಾತ್ರಿಯೆಂದರ್ಥ

ವಾಗಬಹುದು ಎಂಬುದು ಒಂದು ವಿಕಲ್ಪ. ಈ ಅರ್ಥವನ್ನು ಹೇಳಿದರೆ ಊರ್ಮ್ಯಪದದ ರೂಪನಿಷ್ಪತ್ತಿಯು ಹೇಗೆ ಎಂದು ತಿಳಿಸುತ್ತಾ ಸಾಯಣರು ಬೇರೆ ಕಡೆಯಲ್ಲಿ ಈ ಪದವು ಪ್ರಯೋಗಿಸಲ್ಪಟ್ಟಿರುವಾಗ ಆ ಉದಾಹರಣೆಯನ್ನು ತೋರಿಸುತ್ತಾ ಈ ರೀತಿ ವಿವರಿಸಿದ್ದಾರೆ.

**ಅಸ್ಮಾ ಉಷಾಸ ಆತಿರಂತ ಯಾಮಮಿಂದ್ರಾಯ ನಕ್ತಮೂರ್ಮ್ಯಾಃ ಸುವಾಚಃ ।**
**ಅಸ್ಮಾ ಆಪೋ ಮಾತರಃ ಸಪ್ತ ತಸ್ಥುರ್ನೃಭ್ಯಸ್ತರಾಯ ಸಿಂಧವಃ ಸುಪಾರಾಃ ॥**

(ಋ. ಸಂ ೮-೯೬-೧)

ಎಂಬ ಋಕ್ಕಿನಲ್ಲಿರುವ ಊರ್ಮ್ಯ ಶಬ್ದದ ಅರ್ಥವನ್ನು ಹೇಳುವಾಗ **ರಾತ್ರಿನಾಮೈತತ್ । ಋ ಗತಿಪ್ರಾಪಣಯೋಃ। "ಅರ್ತೇರೂ ಚ" (ಉ ಸೂ. ೪-೪೮೪) ಇತಿ 'ಮಿ' ಪ್ರತ್ಯಯಃ ಸರ್ವೈರಭಿಗಂತವ್ಯಃ। ರಾತ್ರೌ ಹಿ ಸರ್ವೇ ಸ್ವನಿವಾಸಂ ಗಚ್ಛಂತಿ। ಸ್ವನಿಲಯಪ್ರಾಪ್ತಿಹೇತುಭೂತಾ ರಾತ್ರಯಃ।** ಗತ್ಯರ್ಥಕವಾದುದೂ ಮತ್ತು ಪ್ರಾಪಕಾರ್ಥವುಳ್ಳದ್ದೂ ಆದ ಋ ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆ. ರಾತ್ರಿಕಾಲದಲ್ಲಿ ಸಕಲಪ್ರಾಣಿಗಳೂ ತಮ್ಮ ತಮ್ಮ ನಿವಾಸಕ್ಕೆ ಹೋಗಿ ಸೇರಿಕೊಳ್ಳುತ್ತವೆ. ಸ್ವಸ್ಥಾನಗಳಿಗೆ ಎಲ್ಲವನ್ನೂ ಸೇರಿಸುವುದರಿಂದ ರಾತ್ರಿಗೆ ಊರ್ಮ್ಯಯೆಂಬ ಹೆಸರು ಪ್ರಸಿದ್ಧವಾಗಿದೆ ಎಂದು ವಿವರಿಸಿದ್ದಾರೆ ಈ ಪದಕ್ಕೆ ಪ್ರಕೃತವಾದ ಋಕ್ಕಿನಲ್ಲಿ ಸಾಯಣರು, **ಯದ್ವಾ ಊರ್ಮ್ಯರಿತಿ ಸೋಮನಾಮ**--ಅಥವಾ ಊರ್ಮ್ಯಯೆಂದರೆ ಸೋಮವೆಂದರ್ಥವಾಗಬಹುದು ಎಂದು ಎರಡನೆಯ ವಿಕಲ್ಪವನ್ನು ಹೇಳಿದ್ದಾರೆ- ಈ ವ್ಯಾಖ್ಯಾನವನ್ನು ಸಮರ್ಥಿಸುವುದಕ್ಕಾಗಿ,

**ಊರ್ಮ್ಯರ್ಯಸ್ತೇ ಪವಿತ್ರ ಆ ದೇವಾವೀಃ ಪರ್ಯಕ್ಷರತ್ । ಸೀದನ್ನೃತಸ್ಯ ಯೋನಿಮಾ ॥**

(ಋ. ಸಂ. ೯-೬೪-೧೧)

ಎಂಬ ಋಕ್ಕನ್ನುದಾಹರಿಸಿ ಅಲ್ಲಿ ಊರ್ಮ್ಯಯೆಂಬುದಕ್ಕೆ ಸೋಮವೆಂದರ್ಥವಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಅರ್ಥವಾಗಬಹುದೆಂದು ತಿಳಿಸಿದ್ದಾರೆ. ಇಲ್ಲಿ ಇನ್ನೊಂದಂಶವನ್ನು ಗಮನಿಸಬೇಕು. ಊರ್ಮ್ಯಯೆಂಬುದಕ್ಕೆ ಸೋಮವೆಂದರ್ಥವಾಗುವುದಿಲ್ಲ ಊರ್ಮ್ಯಯೆಂದರೆ ಜಲತರಂಗವೆಂದರ್ಥ. ಉದಾಹೃತವಾದ ಋಕ್ಕಿನಲ್ಲಿ ಸೋಮವನ್ನು ಉದ್ದೇಶಿಸಿ ಪ್ರಾರ್ಥಿಸಿರುವುದರಿಂದ ತರಂಗರೂಪವಾದ ಸೋಮರಸವೆಂದರ್ಥವು ಗಮ್ಯವಾಗುತ್ತದೆ. ನಿರುಕ್ತಕಾರರು ಇದೇ ಅರ್ಥದಲ್ಲಿ ಎಂದರೆ ಜಲತರಂಗವೆಂಬರ್ಥದಲ್ಲಿ ಈ ಪದವನ್ನು ಪ್ರಯೋಗಿಸಿರುವ,

**ಮಾ ನಃ ಸಮಸ್ಯ ದೂಢ್ಯಃ ಪರಿದ್ವೇಷಸೋ ಅಂಹತಿಃ । ಊರ್ಮಿರ್ನ ನಾವಮಾ ವಧೀತ್ ॥**

(ಋ. ಸಂ. ೮-೭೫-೯)

ಎಂಬ ಋಕ್ಕನ್ನುದಾಹರಿಸಿ **ಊರ್ಮಿರೂರ್ಣೋತೇಃ ।** ಆಚ್ಛಾದನೆ ಮಾಡು, ಮುಚ್ಚು, ಆವರಿಸು ಎಂಬರ್ಥವನ್ನು ಕೊಡುವ ಊರ್ಣ್ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತಿಳಿಸಿದ್ದಾರೆ (ನಿ. ೫-೨೩). ತರಂಗ ಅಥವಾ ಜಲಸಂಘಾತವೆಂದರ್ಥ. ಜಲಸಮೂಹ ಅಥವಾ ಜಲಸಂಘಾತವೆಂಬರ್ಥದಲ್ಲೂ ಸಹ ಈ ಪದದ ಪ್ರಯೋಗವಿದೆ.

**ಧನ್ವನ್ಸ್ರೋತಃ ಕೃಣುತೇ ಗಾತುಮೂರ್ಮಿಂ ಶುಕ್ರೈರೂರ್ಮಿಭಿರಭಿ ನಕ್ಷತಿ ಕ್ಷಾಂ ।**
**ವಿಶ್ವಾ ಸನಾನಿ ಜಠರೇಷು ಧತ್ತೇಽಂತರ್ನವಾಸು ಚರತಿ ಪ್ರಸೂಷು ॥**

(ಋ. ಸಂ. ೧-೯೫-೧೦)

ಎಂಬಲ್ಲಿ ಊರ್ಮಿಂ ಕೃಣುತೇ. ಊರ್ಮಿಭಿಃ ಅಭಿನಕ್ಷತಿ ಎಂದಿದೆ. ಇಲ್ಲಿ, ಅಗ್ನಿಯು ಅಂತರಿಕ್ಷದಲ್ಲಿ ಜಲಸಂಘಾತ ವನ್ನು ಪ್ರವಾಹರೂಪವಲ್ಲಿ ಹರಿಯುವಂತೆ ಮಾಡುತ್ತಾನೆ. ನಿರ್ಮಲವಾದ ಆ ಅಲೆಯ ರೂಪದ ಜಲಸಮೂಹಗಳಿಂದ ಭೂಮಿಯನ್ನು ನೀರಿನಿಂದ ತೊಯ್ಯುವಂತೆ ಮಾಡುತ್ತಾನೆ ಎಂದಿದೆ. ಪ್ರಕೃತವಾದ ಋಕ್ಕಿನಲ್ಲಿ ರಾತ್ರಿಯೆಂದಾಗಲಿ ಅಥವಾ ತರಂಗರೂಪವಾದ ಸೋಮರಸವೆಂದಾಗಲಿ ಅರ್ಥವಾಗುತ್ತದೆ.

**ಪಣೀನ್**—**ಪಣಿ** ಶಬ್ದಕ್ಕೆ **ವ್ಯಯೋಸಹಿಷ್ಣವೋ ವಣಿಜಃ** ಖರ್ಚುಮಾಡಲು ಹಿಂಜರಿಯುತಕ್ಕ ವೈಶ್ಯರು (ವ್ಯಾಪಾರಿಗಳು) ಎಂದು ಸಾಯಣರು ವಿವರಿಸಿ, ಅನಂತರ **ಪಣಿರ್ವಣಿಗ್ಭವತೀತಿ ಯಾಸ್ಕಃ** ಎಂದು ಯಾಸ್ಕರ ಮತವನ್ನುದಾಹರಿಸಿದ್ದಾರೆ ನಿರುಕ್ತಕಾರರು ಈ ಪದದ ಅರ್ಥವನ್ನು ವಿವರಿಸುವಾಗ,

**ಇಂದ್ರೋ ವಿಶ್ವಾನ್ಬೇಕನಾಟಾ ಅಹರ್ದೃಶ ಉತ ಕ್ರತ್ವಾ ಪಣೀಂರಭಿ ।**

(ಋ ಸಂ ೮-೬೬-೧೦)

ಎಂಬ ಋಕ್ಕನ್ನುದಾಹರಿಸಿ ಅಲ್ಲಿರುವ ಪಣಿ ಶಬ್ದಕ್ಕೆ **ವಣಿಜಃ** ವ್ಯಾಪಾರವನ್ನು ಮಾಡುವವರು ಎಂಬರ್ಥವನ್ನು ಹೇಳಿದ್ದಾರೆ. (ನಿ. ೬-೨೬) ಮತ್ತು **ಪಣಿಃ ಪಣನಾತ್ । ವಣಿಕ್ ಪಣ್ಯಂ ನೇನೇಕ್ತಿ** ವ್ಯಾಪಾರವನ್ನು ಮಾಡುವುದರಿಂದ ವೈಶ್ಯನಿಗೆ ಪಣಿಯೆಂದು ಹೆಸರು. ಮತ್ತು ಆ ವ್ಯಾಪಾರಿಯು ಯಾವಾಗಲೂ ತನ್ನ ಪದಾರ್ಥವು ವ್ಯಾಪಾರಕ್ಕೆ ಯೋಗ್ಯವಾಗಿರಲೆಂದು ಶುದ್ಧವಾಗಿಟ್ಟಿರುತ್ತಾನೆಂದು ವಿವರಿಸಿದೆ (ನಿ. ೨-೧೭). ಇದಲ್ಲದೆ, ಇನ್ನೂ ಕೆಲವೆಡೆಗಳಲ್ಲಿ ಸಾಯಣರು ಈ ಪದಕ್ಕೆ **ಪಣಯ ಇತಿ ಲುಬ್ಧಕಾ ಅಬುಧ್ಯಮಾನಾ ಯಾಗಾದೀನಕುರ್ವಾಣಾ ಅದಾನಶೀಲಾ ಅಸ್ಮಚ್ಛತ್ರವಃ**—ಲೋಭಿಗಳೂ, ಯಾಗಾದಿಕರ್ಮಗಳನ್ನು ನೆರವೇರಿಸದವರೂ ದಾನಾದಿಕರ್ಮರಹಿತರೂ ಆದ ಶತ್ರುಗಳೆಂದೂ ವಿವರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ **ಲುಬ್ಧಕಾನಯಷ್ಟ್ರ್ವಾನ್** ಎಂದರ್ಥಮಾಡಿದ್ದಾರೆ. (ಪಣಿಗಳೆಂಬ ಅಸುರರ ಗುಂಪಿನ ವಿಷಯವನ್ನು ಮುಂದೆ ತಿಳಿಸಲಾಗುತ್ತದೆ).

**ಅಸ್ಮೇ ಉ**—ಎಂಬ ಪದಕ್ಕೆ **ಅಸ್ಮಾಸ್ವೇವ** ಎಂದರ್ಥಮಾಡಿದೆ ಅಸ್ಮೇ ಎಂಬ ಪದವು ರೂಪದಲ್ಲಿ ಒಂದೇ ವಿಧವಾಗಿದ್ದರೂ ಎಲ್ಲಾ ವಿಭಕ್ತ್ಯರ್ಥಗಳಲ್ಲಿಯೂ ಈ ಪದದ ಪ್ರಯೋಗವಿದೆಯೆಂದು ನಿರುಕ್ತಕಾರರು ತಿಳಿಸಿದ್ದಾರೆ. (ನಿ. ೬-೭) ಈ ಪದದಂತೆಯೇ ಅಸ್ಮಾಕಂ ಎಂಬ ಪದವೂ ಸಹ ಸರ್ವವಿಭಕ್ತಿಗಳಲ್ಲಿಯೂ ಪ್ರಯೋಗಿಸಲ್ಪಟ್ಟಿರುವುದನ್ನು ಹಿಂದೆ ತಿಳಿಸಿದೆ.

ದುರ್ಗಾಚಾರ್ಯರು ಈ ಸಂದರ್ಭದಲ್ಲಿ ವ್ಯಾಖ್ಯಾನಮಾಡುತ್ತಾ (ನಿ. ೬-೭). **ಅಸ್ಮೇ ಇತ್ಯೇತತ್ಪದಂ ಸರ್ವವಿಭಕ್ತ್ಯಂತಂ । ತಸ್ಮಾದನೇಕಾರ್ಥಂ । ಏಕಮೇವ ಹ್ಯೇತಚ್ಛಬ್ದರೂಪಂ ಸಪ್ತಸ್ವಪಿ ವಿಭಕ್ತ್ಯರ್ಥೇಷು ವರ್ತತೇ । ಪ್ರಕರಣಾದಿವಶಾತ್ ತಸ್ಯ ನಿಯಮೋ ಭವತಿ । ತದ್ಯಥಾ - ಪ್ರಥಮಾಯಾಸ್ತಾವತ್ ಅಸ್ಮೇ ತೇ ಬಂಧುಃ । ವಯಮಿತ್ಯರ್ಥಃ.**

ಏಳು ವಿಭಕ್ತಿಗಳಲ್ಲಿಯೂ ಪ್ರಯೋಗವಿರತಕ್ಕ **ಅಸ್ಮೇ** ಎಂಬ ಪದವನ್ನು ಆಯಾಯ ಪ್ರಕರಣಾನುಸಾರವಾಗಿ ಅರ್ಥಮಾಡಬೇಕೆಂದು ತಿಳಿಸಿದ್ದಾರೆ. ಅದರಲ್ಲಿ **ಅಸ್ಮೇ ತೇ ಬಂಧುಃ** ಎಂಬುದು ಪ್ರಥಮಾವಿಭಕ್ತಿಗೆ ಉದಾಹರಣೆಯಾಗಿದೆ. ಮತ್ತು ಇದೇ ರೀತಿಯಲ್ಲಿ,

ಆ ಶ್ಯೇನಸ್ಯ ಜವಸಾ ನೂತನೇನಾಸ್ಮೇ ಯಾತಂ ನಾಸತ್ಯಾ ಸಜೋಷಾಃ ।
ಹವೇ ಹಿ ವಾಮಶ್ವಿನಾ ರಾತಹವ್ಯಾ ಶಶ್ವತ್ತಮಾಯಾ ಉಷಸೋ ವ್ಯುಷ್ಟೌ ॥
(ಋ. ಸಂ. ೧-೧೧೮-೧೧)

ಎಂಬ ಋಕ್ಕನ್ನು ನಿರುಕ್ತಕಾರರು ಉದಾಹರಿಸಿ ಅಸ್ಮೇ ಎಂಬ ಪದಕ್ಕೆ ಅಸ್ಮಾನ್ ಇತ್ಯರ್ಥಃ । ಇಲ್ಲಿ ದ್ವಿತೀಯಾ ವಿಭಕ್ತ್ಯರ್ಥದಲ್ಲಿ ಈ ಪದದ ಪ್ರಯೋಗವಿದೆಯೆಂದೂ,

ಭೂರಿ ಚಕರ್ಥ ಯುಜ್ಯೇಭಿರಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ ।
ಭೂರೀಣಿ ಹಿ ಕೃಣವಾಮಾ ಶವಿಷ್ಠೇಂದ್ರ ಕ್ರತ್ವಾ ಮರುತೋ ಯದ್ವಶಾಮ ॥
(ಋ. ಸಂ ೧-೧೬೫-೭)

ಎಂಬ ಋಕ್ಕನ್ನುದಾಹರಿಸಿ ಅಸ್ಮಾಭಿಃ ಎಂದು ತೃತೀಯಾ ವಿಭಕ್ತ್ಯರ್ಥವೆಂದೂ,

ಅಸ್ಮೇ ಪ್ರಯಂಧಿ ಮಘವನ್ನೃಜೀಷಿನ್ನಿಂದ್ರ ರಾಯೋ ವಿಶ್ವವಾರಸ್ಯ ಭೂರೇಃ ।
ಅಸ್ಮೇ ಶತಂ ಶರದೋ ಜೀವಸೇ ಧಾ ಅಸ್ಮೇ ವೀರಾಞ್ಛಶ್ವತ ಇಂದ್ರ ಶಿಪ್ರಿನ್ ॥
(ಋ. ಸಂ. ೩-೩೬-೧೦)

ಎಂಬಲ್ಲಿ ಅಸ್ಮಭ್ಯಂ ಎಂದರೆ ನನಗಾಗಿ ಎಂದು ಚತುರ್ಥೀವಿಭಕ್ತ್ಯರ್ಥವೆಂದೂ ತಿಳಿಸಿದೆ. ಮತ್ತು,

ತಸ್ಯ ವಯಂ ಸುಮತೌ ಯಜ್ಞಿಯಸ್ಯಾಪಿ ಭದ್ರೇ ಸೌಮನಸೇ ಸ್ಯಾಮ ।
ಸ ಸುತ್ರಾಮಾ ಸ್ವವಾँ ಇಂದ್ರೋ ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು ॥
(ಋ. ಸಂ. ೬-೪೭-೧೩)

ಎಂಬಲ್ಲಿ ಅಸ್ಮತ್ ನಮ್ಮ ದೆಸೆಯಿಂದ ಎಂದು ಪಂಚಮೀ ವಿಭಕ್ತ್ಯರ್ಥವೆಂದೂ,

ಆ ನೋ ಭರ ಭಗಮಿಂದ್ರ ದ್ಯುಮಂತಂ ನಿ ತೇ ದೇಷ್ಣಸ್ಯ ಧೀಮಹಿ ಪ್ರರೇಕೇ ।
ಊರ್ವ ಇವ ಪಪ್ರಥೇ ಕಾಮೋ ಅಸ್ಮೇ ತಮಾ ಪೃಣ ವಸುಪತೇ ವಸೂನಾಂ ॥
(ಋ. ಸಂ. ೩-೩೦-೧೯)

ಎಂಬ ಋಕ್ಕಿನಲ್ಲಿ ಅಸ್ಮಾಕಂ ಎಂದರೆ ನಮ್ಮ ಎಂದು ಷಷ್ಠೀವಿಭಕ್ತ್ಯರ್ಥವೆಂದೂ ಹೀಗೆಯೇ,

ಅಗ್ನೇಃ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।
ಅಸ್ಮೇ ಧೇಹಿ ಜಾತವೇದೋ ಮಹಿ ಶ್ರವಃ ॥
(ಋ. ಸಂ. ೧-೭೯-೪)

ಎಂಬಲ್ಲಿ ಸಪ್ತಮೀವಿಭಕ್ತ್ಯರ್ಥದಲ್ಲಿಯೂ ಇರುವುದೆಂದೂ ಹೀಗೆ ಎಲ್ಲಾ ವಿಭಕ್ತಿಗಳಲ್ಲಿಯೂ ಸಹ ಒಂದೇ ರೂಪದ ಪ್ರಯೋಗವಿದೆಯೆಂದೂ ತಿಳಿಸಿದ್ದಾರೆ. (ನಿ. ೬-೭).

**ಮತೀನಾಂ— ಮನನಸಾಧನಾಃ ಸ್ತುತೀಃ** — ಧ್ಯಾನಾತ್ಮಕವಾದ ಸ್ತುತಿಯೆಂದರ್ಥ. ದ್ವಿತೀಯಾ ವಿಭಕ್ತ್ಯರ್ಥದಲ್ಲಿ ಷಷ್ಠೀ ವಿಭಕ್ತಿಯ ಪ್ರಯೋಗವಿದೆ. ನಮ್ಮ ಧ್ಯಾನಾತ್ಮಕವಾದ ಸ್ತುತಿಗಳನ್ನು ಕೇಳಿರಿ ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಅಸ್ಮೇ**—ಅಸ್ಮದ್ ಶಬ್ದ. **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮೀ ಬಹು ವಚನಕ್ಕೆ ಶೇ ಆದೇಶ.

**ಮಾದಯೇಥಾಮ್**—ಮದ ತೃಪ್ತಿಯೋಗೇ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ ತಿಙಂತ ನಿಘಾತಸ್ವರ ಬರುತ್ತದೆ

**ಹತಮ್**—ಹನ ಹಿಂಸಾಗತ್ಯೋಃ. ಧಾತು. ಲೋಟ್ ಮಧ್ಯಮಪುರುಷದ್ವಿವಚನಕ್ಕೆ ತಮಾದೇಶ. ವಿಕ ರಣಕ್ಕೆ ಲುಕ್. **ಅನುದಾತ್ತೋಪದೇಶವನತಿತನೋ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಅನು ನಾಸಿಕ ನಕಾರಕ್ಕೆ ಲೋಪ. ತಿಙಂತ ನಿಘಾತಸ್ವರ ಬರುತ್ತದೆ.

**ಊರ್ಮ್ಯಾ**—**ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮೀಏಕವಚನಕ್ಕೆ ಆಕಾರಾದೇಶ. ಯಣಾದೇಶ. ಏಕಾದೇಶದಿಂದ ವಿಭಕ್ತಿಯೂ ಉದಾತ್ತವಾಗುತ್ತದೆ

**ಮದಂತಾ**—ಮದ ತೃಪ್ತಿಯೋಗೇ. ಧಾತು. ಲಟಿಗೆ ಶತ್ರಾದೇಶ. ದ್ವಿವಚನಕ್ಕೆ **ಸುಪಾಂ ಸುಲುಕ್** ಸೂತ್ರದಿಂದ ಆಕಾರಾದೇಶ. **ತಾಸ್ಯನುದಾತ್ತೇತ್** ಎಂಬ ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಶ್ರುತಮ್**—ಶ್ರು ಶ್ರವಣೇ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನಕ್ಕೆ ತಮಾದೇಶ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯಕ್ಕೆ ಙಿತ್ವಾತಿದೇಶವಿರುವುದರಿಂದ ಗುಣ ಬರುವುದಿಲ್ಲ. ಪಾದಾದಿ ಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ

**ಮತೀನಾಮ್**—**ನಾಮನ್ಯತರಸ್ಯಾಮ್** (ಪಾ ಸೂ ೬-೧-೧೭೭) ಎಂಬುದರಿಂದ ನಾಮ್‌ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಕರ್ಮಾರ್ಥದಲ್ಲಿ ಷಷ್ಠೀ.

**ಏಷ್ಟಾ**—ಇಷ ಗತೌ. ಧಾತು. ಕರ್ತರಿಯಲ್ಲಿ ತೃನ್‌ಪ್ರತ್ಯಯ. ಧಾತುವಿನ ಲಘೂಪಧೆಗೆ ಅದನ್ನು ನಿಮಿತ್ತೀಕರಿಸಿ ಗುಣ. ಪ್ರತ್ಯಯಕ್ಕೆ ಷ್ಟುತ್ವ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ನಿಚೇತಾರಾ**—ಚಿಞ್ ಚಯನೇ. ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ **ಸಾರ್ವಧಾತುಕಾರ್ಧ-ಧಾತುಕಯೋಃ** ಎಂಬುದರಿಂದ ಧಾತು ಇಕಾರಕ್ಕೆ ಗುಣ. ನಿ ಎಂಬ ಉಪಸರ್ಗವು ವ್ಯತ್ಯಯದಿಂದ ಸಮ್ ಎಂಬ ಉಪಸರ್ಗಾರ್ಥವನ್ನು ಕೊಡುತ್ತದೆ. ದ್ವಿವಚನಕ್ಕೆ **ಸುಪಾಂ ಸುಲುಕ್** ಎಂಬುದರಿಂದ ಆಕಾರಾದೇಶ. ॥ ೨ ॥

———೩೦೩———

ಸಂಹಿತಾಪಾಠಃ

ಶ್ರಿಯೇ ಪೂಷನ್ನಿಷುಕೃತೇವ ದೇವಾ ನಾಸತ್ಯಾ ವಹತುಂ ಸೂರ್ಯಾಯಾಃ।
ವಚ್ಯಂತೇ ವಾಂ ಕಕುಹಾ ಅಪ್ಸು ಜಾತಾ ಯುಗಾ ಜೂರ್ಣೇವ ವರುಣಸ್ಯ
ಭೂರೇಃ ॥ ೩ ॥

ಪದಪಾಠಃ

ಶ್ರಿಯೇ । ಪೂಷನ್ । ಇಷುಕೃತಾಽಇವ । ದೇವಾ । ನಾಸತ್ಯಾ । ವಹತುಂ । ಸೂರ್ಯಾಯಾಃ ।
ವಚ್ಯಂತೇ । ವಾಂ । ಕಕುಹಾಃ । ಅಪ್ಽಸು । ಜಾತಾಃ । ಯುಗಾ । ಜೂರ್ಣಾಽಇವ । ವರುಣಸ್ಯ ।
ಭೂರೇಃ ॥ ೩ ॥

ಸಾಯಣಭಾಷ್ಯಂ

ಸವಿತಾ ಸೂರ್ಯೋ ದುಹಿತರಂ ಸೂರ್ಯಾಖ್ಯಾಂ ಪ್ರದಾತುಮನಾ ದೇವಾನಾಹೂಯ ಸಾಮರ್ಥ್ಯ-ಸಮೀಕ್ಷಣಾಯಾಜಿಂ ಪರಿಕಲ್ಪ್ಯ ಯ ಇಮಂ ಜ್ಯೇಷ್ಯತಿ ಸ ಏಷಾಂ ಕನ್ಯಕಾಮ್ಯಕ್ಸಹಸ್ರಕ್ಲೃಪ್ತಂ ಸ್ತೋತ್ರಂ ಚ ಲಭತ ಇತ್ಯಕಲ್ಪಯತ್ । ತಮಗ್ನಿಃ ಪ್ರಥಮಮಜಯತ್ ತಮನ್ವಶ್ವಿನಾವಪಿ ಜಿತ್ವಾಗ್ನಿಂ ಪ್ರಧೃಷ್ಯರ್ಕ್ಸ-ಹಸ್ರಂ ಕನ್ಯಕಾಂ ಚಾಲಭೇತಾಂ । ತತ ಇಂದ್ರ ಉಷಾಶ್ಚಾಜಯತಾಂ । ತೌ ಚ ತೈರಗ್ನ್ಯಾದಿಭಿಃ ಪ್ರಾರ್ಥಿತೌ ಸ್ವಶಸ್ತ್ರಸ್ಯ ಕಂಚಿತ್ಕಂಚಿದ್ಭಾಗಂ ತೇಭ್ಯಃ ಪರಿಕಲ್ಪ್ಯ ಸೂರ್ಯಾಂ ಸ್ವರಥೇಽಧಾರಯತಾಮಿತಿ । ಅಯಮಿತಿ-ಹಾಸೋ ಬ್ರಾಹ್ಮಣೇ ಪ್ರಜಾಪತಿರ್ವೈ ಸೋಮಾಯ ರಾಜ್ಞೇ । ಐ. ಬ್ರಾ. ೪-೭ । ಇತ್ಯತ್ರಾಮ್ನಾತೋಽ-ಸ್ಮಾಭಿಃ ಪ್ರಥಮಾಷ್ಟಕೇ ಆ ವಾಂ ಪತಿತ್ವಂ ಸಖ್ಯಾಯ ( ಋ. ೧-೧೧೯-೫ ) ಇತ್ಯತ್ರ ಪ್ರಪಂಚಿತಃ । ಅತ್ರಾಹ । ಹೇ ಪೂಷನ್ ಪೋಷಕ ಸೂರ್ಯ । ಏತಚ್ಚಂದ್ರಸ್ಯಾಪ್ಯುಪಲಕ್ಷಣಂ ಸೂರ್ಯಾಚಂದ್ರಮಸೋ-ರೇವಾಶ್ವಿತ್ವಾತ್ । ಸೂರ್ಯಾಚಂದ್ರಮಸಾವಿತ್ಯೇಕೇ । ನಿ. ೧೨-೧ । ಇತಿ ಯಾಸ್ಕೇನೋಕ್ತತ್ವಾತ್ । ಅತಃ ಪೂಷನ್ನಿತ್ಯುಕ್ತೇ ಹೇ ಪೋಷಕಾವಶ್ವಿನಾವಿತ್ಯುಕ್ತಂ ಭವತಿ । ಹೇ ಪೋಷಕೌ ಹೇ ನಾಸತ್ಯಾಸತ್ಯರಹಿತೌ ದೇವಾ ದೇವೌ ಯುವಾಂ ಶ್ರಿಯೇ ಶ್ರೇಯಸೇ । ಶಸ್ತ್ರಸ್ಯ ಕನ್ಯಾಯಾಶ್ಚ ಲಾಭಾಯೇತ್ಯರ್ಥಃ । ಇಷು-ಕೃತೇವ । ಇವಶಬ್ದ ಏವಾರ್ಥೇ । ಆಜಿಧಾವನಾಯೇಷುವಚ್ಛೀಘ್ರಮೃಜುಗಾಮಿನೌ ಕೃತಾವೇವ ಸಂತೌ ಸೂರ್ಯಾಯಾ ಏತನ್ನಾಮಿಕಾಯಾಃ ಸವಿತುಃ ಪುತ್ರ್ಯಾಃ ॥ ಕರ್ಮಣಿ ಷಷ್ಠೀ ॥ ಸೂರ್ಯಾಂ ವಹತುಂ ರಥೇ ಧಾರಯಿತುಂ । ಆಜಿಮುದಜಯತಾಮಿತ್ಯರ್ಥಃ । ಯಸ್ಮಾದೇವಂ ತಸ್ಮಾದಪ್ಸು ಜಾತಾಃ ಕರ್ಮಸು ಸಂಪಾದಿತಾಃ ಕಕುಹಾಃ ಶಸ್ತ್ರರೂಪಾಃ ಸ್ತುತಯೋ ಭೂರೇರವಿಚ್ಛಿನ್ನಪ್ರವಾಹಸ್ಯ ವರುಣಸ್ಯ ಫಲಪ್ರತಿ-ಬಂಧಕಪಾಪನಿವಾರಕಸ್ಯ ಯಾಗಸ್ಯ ಸಿದ್ಧ್ಯರ್ಥಂ ತತ್ಸಂಬಂಧಿನ್ಯೋ ವಾಂ ಪ್ರತಿ ವಚ್ಯಂತೇ ಹೋತ್ರಾ-ದಿಭಿಃ । ಯುವಾಮೇವ ಶಸ್ತ್ರಗತಮಂತ್ರೈರ್ಯಾಗಕಾಲೇ ಚ ಸ್ತುವಂತೀತ್ಯರ್ಥಃ । ಯುಗಾ ಜೂರ್ಣೇವ ಜೀರ್ಣಾನಿ ಯುಗಾನೀವ । ಇವಶಬ್ದಃ ಸಂಪ್ರತ್ಯರ್ಥಃ । ಪುರಾತನಾ ಯಾಗಕಾಲಾ ಯಥಾ ತದ್ವದದ್ಯತನಾ ಅಪೀತ್ಯರ್ಥಃ । ಪೂರ್ವಕಾಲೇ ಯಥಾ ಯುವಾಮೇವ ಸ್ತುವಂತಿ ತದ್ವದಿದಾನೀಮಪೀತಿ ತಾತ್ಪರ್ಯಂ ॥

॥ ಪ್ರತಿಪದಾರ್ಥ ॥

**ನಾಸತ್ಯಾ**—ಅಸತ್ಯರಹಿತರೂ । **ಪೂಷನ್**—(ಸೂರ್ಯ ಮತ್ತು ಚಂದ್ರರೂಪರಾಗಿ) ಜಗತ್ಪೋಷಕರೂ । **ದೇವಾ**—ದೇವತಾತ್ಮರೂ ಆದ ಎಲೈ ಅಶ್ವಿನೀದೇವತೆಗಳೇ।**ಶ್ರಿಯೇ**—ಶಸ್ತ್ರ ಮಂತ್ರರೂಪವಾದ ಶ್ರೇಯಸ್ಸಿಗಾಗಿಯೂ (ಮತ್ತು) **ಸೂರ್ಯಾಯಾಃ**—ಸೂರ್ಯಪುತ್ರಿಯನ್ನು । **ವಹತುಂ**—ರಥದಲ್ಲಿ ಕುಳ್ಳಿರಿಸಿಕೊಂಡು ಬರುವುದಕ್ಕಾಗಿಯೂ । **ಇಷು ಕೃತಾ ಇವ**—ಬಾಣದಂತೆ ವೇಗವಾಗಿಯೂ, ನೇರವಾಗಿಯೂ (ಯುದ್ಧಕ್ಕೆ ಹೊರಟಿರಿ) । **ವಾಂ**—(ಅಂತಹ) ನಿಮ್ಮನ್ನುದ್ದೇಶಿಸಿ । **ಅಪ್ಸುಜಾತಾಃ**—ಯಾಗಾದಿ ಕರ್ಮಗಳಲ್ಲಿ ಸಂಪಾದಿತವಾದವೂ । **ಕಕುಹಾಃ**—ಶಸ್ತ್ರಮಂತ್ರ ರೂಪವೂ ಆದ ಸ್ತುತಿಗಳು । **ಭೂರೇಃ**—ಅವಿಚ್ಛಿನ್ನವಾದುದೂ । **ವರುಣಸ್ಯ**—(ಫಲಪ್ರತಿಬಂಧಕವಾದ ಪಾಪವನ್ನು) ನಿವಾರಿಸತಕ್ಕದ್ದೂ ಆದ ಯಾಗದ ಸಿದ್ಧಿಗಾಗಿ । **ಜೂರ್ಣಾ ಇವ ಯುಗಾಃ**।—ಪುರಾತನವಾದ ಯಾಗಕಾಲಗಳಲ್ಲಿ ನಿಮ್ಮನ್ನು ಸ್ತುತಿಸಿ ಪಠಿತವಾಗುತ್ತಿದ್ದಂತೆಯೇ । **ವಚ್ಯಂತೇ**—(ಈಗಲೂ) ಪಠಿಸಲ್ಪಡುತ್ತವೆ.

ಭಾವಾರ್ಥ

ಅಸತ್ಯರಹಿತರೂ, ಸೂರ್ಯಾಚಂದ್ರಮಸರೂಪರಾಗಿ ಜಗತ್ಪೋಷಕರೂ, ದೇವತಾತ್ಮರೂ ಆದ ಎಲೈ ಅಶ್ವಿನೀ ದೇವತೆಗಳೇ, ಶಸ್ತ್ರಮಂತ್ರರೂಪವಾದ ಶ್ರೇಯಸ್ಸಿಗಾಗಿಯೂ, ಸೂರ್ಯಪುತ್ರಿಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಬರುವುದಕ್ಕಾಗಿಯೂ ಬಾಣದಂತೆ ವೇಗವಾಗಿಯೂ, ನೇರವಾಗಿಯೂ ಯುದ್ಧಕ್ಕೆ ಹೊರಟಿರಿ. ಅಂತಹನಿಮ್ಮನ್ನು ಉದ್ದೇಶಿಸಿ ಯಾಗಾದಿ ಕರ್ಮಗಳಲ್ಲಿ ಸಂಪಾದಿತವಾದವೂ, ಶಸ್ತ್ರ ಮಂತ್ರರೂಪವೂ ಆದ ಸ್ತುತಿಗಳು ಅವಿಚ್ಛಿನ್ನವಾದುದೂ, ಫಲಪ್ರತಿ ಬಂಧಕವಾದ ಪಾಪವನ್ನು ನಿವಾರಿಸತಕ್ಕದ್ದೂ ಆದ ಯಾಗದ ಸಿದ್ಧಿಗಾಗಿ ಪುರಾತನವಾದ ಯಾಗಕಾಲಗಳಲ್ಲಿ ನಿಮ್ಮನ್ನು ಸ್ತುತಿಸಿ ಪಠಿತವಾಗುತ್ತಿದ್ದಂತೆಯೇ ಈಗಲೂ ಪಠಿಸಲ್ಪಡುತ್ತವೆ.

English Translation

Divine Ashwins, in whom is no untruth, (darting) like arrows to acquire glory, and to carry off Surya, to you are addressed the prayers that are recited at holy rites, for (the completion of) the uninterrupted, sin-removing (sacrifice), as ancient sages (offered them).

। ವಿಶೇಷವಿಷಯಗಳು ।

**ಪೂಷನ್**— ಈ ಪದವು ಅಶ್ವಿನೀ ದೇವತೆಗಳಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. ಜಗತ್ಪೋಷಕ ರಾದುದರಿಂದ ಈ ವಿಶೇಷಣದಿಂದ ಅವರ ಗುಣವನ್ನೂ ಕಾರ್ಯವನ್ನೂ ಪ್ರಶಂಸಿದೆ. ಈ ಪದದ ನಿರ್ವಚನದಿಂದಲೇ ದ್ವಾದ ಶಾದಿತ್ಯರಲ್ಲಿ ಒಬ್ಬನಾದ ಪೂಷದೇವನ ಗುಣವೂ ವರ್ಣಿತವಾಗಿದೆ.

**ಪೂಷಾ— ಯದ್ರಶ್ಮಿಪೋಷಂ ಪುಷ್ಯತಿ ತತ್ ಪೂಷಾ ಭವತಿ ।**

(ನಿ. ೧೨-೧೬)

ರಶ್ಮಿಗಳಿಂದ ಪೋಷಿಸುವವನಾದುದರಿಂದ ಆದಿತ್ಯನಿಗೆ **ಪೂಷಾ** ಎಂಬ ಹೆಸರು ಎಂದು ನಿರುಕ್ತಕಾರರ ನಿರ್ವಚನವಿದೆ. ಶತಪಥ ಬ್ರಾಹ್ಮಣದಲ್ಲಿಯೂ ಸಹ,

ಇಯಂ ವೈ ಪೂಷಾ ಪೂಷೇಯಂ ಹೀದಂ ಸರ್ವಂ ಪುಷ್ಯತಿ ಯದಿದಂ ಕಿಂ ಚ ।
(ಶ. ಬ್ರಾ. ೧೪-೪-೨-೨೫)

ಈ ದೇವತೆಯು ಎಲ್ಲವನ್ನೂ ಪೋಷಿಸುವವನಾದುದರಿಂದ ಪೂಷನೆಂದು ಕರೆಯಲ್ಪಟ್ಟಿದ್ದಾನೆ ಎಂದು ಹೇಳಿದೆ. ಈ ವಿಧವಾದ ಅರ್ಥವು ಆದಿತ್ಯಪರವಾಗಿಯೂ ಆಗಬಹುದು. ಅಥವಾ ಹವ್ಯವಾಹನನಾಗಿ ದೇವಮಾನವಾದಿ ಸಕಲರ ಪೋಷಣೆಗೂ ಕಾರಣನಾದುದರಿಂದ ಅಗ್ನಿಪರವಾಗಿಯೂ ಆಗಬಹುದು. ಅಥವಾ ಆದಿತ್ಯನೇ ಅಗ್ನಿಯ ರೂಪಾಂತರಗಳಲ್ಲಿ ಒಂದು ಎಂದರ್ಥಮಾಡಿದರೆ ಆಗ ಕ್ಲೇಶವೇ ಇರುವುದಿಲ್ಲ. ಆದರೂ ಸಹ ಅಶ್ವಿನೀದೇವತೆಗಳಿಗೆ ಈ ವಿಶೇಷಣವು ಹೇಗೆ ಉಚಿತವಾಗಿರುತ್ತದೆ ಎಂಬ ಆಶಂಕೆಯು ಸಾಧ್ಯವಾದರೆ, ಅದಕ್ಕೆ ಉತ್ತರವಾಗಿ,

ಸೂರ್ಯಾಚಂದ್ರಮಸಾವಿತ್ಯೇಕೇ ।
(ನಿ. ೧೨-೧)

ಎಂಬ ನಿರುಕ್ತವಾಕ್ಯದಂತೆ ಅಶ್ವಿನೀದೇವತೆಗಳೇ ಸೂರ್ಯಾಚಂದ್ರ ಮಸ್ಸುಗಳಾಗಿರುವರು ಎಂದೂ ಒಂದು ಮತವಿರುವುದರಿಂದ ಈ ವಿಶೇಷಣವು ಇವರಿಗೆ ಸಹಜವಾಗಿ ಅನ್ವಯಿಸಲೇ ಬೇಕಾಗಿರುತ್ತದೆ. ಇದೇ ನಿರ್ವಚನವನ್ನು ಹೇಳುತ್ತಾ,

ಪುಷ್ಯನ್ ಕ್ಷಿತಿಂ ಪೋಷಯತಿ ಪ್ರಣುದನ್ ರಶ್ಮಿಭಿಸ್ತಮಃ ।
ತೇನೈನಮಸ್ತೌತ್ಪೂಷೇತಿ ಭರದ್ವಾಜಸ್ತು ಪಂಚಭಿಃ ॥
(ಬೃ. ದೇ. ೨-೬೩)

ಕತ್ತಲನ್ನು ನಾಶಮಾಡುತ್ತಾ ಪೃಥ್ವಿಯು ವೃದ್ಧಿಯನ್ನು ಹೊಂದುವಂತೆ ಅದನ್ನು ಪೋಷಿಸುವುದರಿಂದ **ಪೂಷನ್** ಎಂದು ಹೆಸರು ಎಂಬ ಬೃಹದ್ದೇವತಾವಾಕ್ಯವೂ ಸಹ ಇದೇ ಅಭಿಪ್ರಾಯವನ್ನು ತಿಳಿಸುತ್ತದೆ. ಅಲ್ಲದೇ,

ತ್ವಂ ವಾತೈರರುಣೈರ್ಯಾಸಿ ಶಂಗಯಸ್ತ್ವಂ ಪೂಷಾ ವಿಧತಃ ಪಾಸಿ ನು ತ್ಮನಾ ।
(ಋ. ಸಂ. ೨-೧-೬)

ತ್ವಮಗ್ನೇ ದ್ರವಿಣೋದಾ ಅರಂಕೃತೇ ತ್ವಂ ದೇವಃ ಸವಿತಾ ರತ್ನಧಾ ಅಸಿ ।
ತ್ವಂ ಭಗೋ ನೃಪತೇ ವಸ್ವ ಈಶಿಷೇ ತ್ವಂ ಪಾಯುರ್ದಮೇ ಯಸ್ತೇಽವಿಧತ್ ॥
(ಋ. ಸಂ ೨-೧-೭)

ಇತ್ಯಾದಿ ಋಕ್ಕುಗಳಲ್ಲಿ ಪೂಷ, ಭಗ, ಸವಿತೃ, ಅದಿತ್ಯ ಇವರುಗಳಿಗೆಲ್ಲಾ ತಾದಾತ್ಮ್ಯವನ್ನು ಹೇಳಿದೆ. ಆದಿತ್ಯರೆಲ್ಲಾ ಅಗ್ನಿಸ್ವರೂಪರು. ಮತ್ತು ಅಶ್ವಿನೀದೇವತೆಗಳು ಆದಿತ್ಯರೂಪರು. ಆದುದರಿಂದ **ಪೂಷನ್** ಎಂಬ ವಿಶೇಷಣವು ಅವರ ಜಗತ್ಪೋಷಕತ್ವವನ್ನು ತಿಳಿಸಿದೆ. ಅಲ್ಲದೇ,

ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇ ।
(ನಿ. ೧೨-೧)

ಇವರೇ ದ್ಯಾವಾಪೃಥಿವಿಗಳೆಂದು ಒಂದು ಮತವಿರುವುದರಿಂದ ದ್ಯಾವಾಪೃಥಿವಿಗಳ ರೂಪದಲ್ಲಿ ಜಗತ್ಪೋಷಕರಾಗಿರುವರೆಂದೂ, ಆದುದರಿಂದ ಈ ವಿಶೇಷಣವು ಉಚಿತವಾಗಿರುವುದೆಂದೂ ಹೇಳಬಹುದು. ಆದುದರಿಂದ ಸಾಯಣರೂ ಸಹ ಹೇ ಪೂಷಕ ಸೂರ್ಯ ಇತ್ಯಾದಿಯಾಗಿ ಪ್ರಕೃತವಾದ ಋಕ್ಕಿನಲ್ಲಿ ಈ ಪದದ ಅರ್ಥವನ್ನು ವಿವರಿಸಿದ್ದಾರೆ.

**ಸೂರ್ಯಾಯಾಃ ವಹತುಂ—ಸೂರ್ಯಾಯಾಃ ಏತನ್ನಾಮಿಕಾಯಾಃ ಸವಿತುಃ ಪುತ್ರ್ಯಾಃ ರಥೇ ಧಾರಯಿತುಂ** । ಸವಿತೃಪುತ್ರಿಯಾದ ಸೂರ್ಯಾ ಎಂಬ ಕನ್ನಿಕೆಯನ್ನು ರಥದಲ್ಲಿ ಕುಳ್ಳಿರಿಸಲು ಎಂದರ್ಥವನ್ನು ವಿವರಿಸುತ್ತಾ ಈ ಸಂದರ್ಭದ ಕಥೆಯನ್ನು ಸಾಯಣರು ಈ ರೀತಿ ಹೇಳಿದ್ದಾರೆ.

> **ಸವಿತಾ ಸೂರ್ಯೋ ದುಹಿತರಂ ಸೂರ್ಯಾಖ್ಯಾಂ ಪ್ರದಾತುಮನಾಃ ದೇವಾನಾಹೂಯ ಸಾಮರ್ಥ್ಯ-ಸಮೀಕ್ಷಣಾಯ ಆಜಿಂ ಪರಿಕಲ್ಪ್ಯ ಯ ಇಮಂ ಜೇಷ್ಯತಿ ಸ ಏತಾಂ ಕನ್ಯಕಾಮೃಕ್ಸಹ-ಸ್ರಕ್ಲೃಪ್ತಂ ಸ್ತೋತ್ರಂ ಚ ಲಭತೇ ಇತ್ಯಕಲ್ಪಯತ್ । ತಮಗ್ನಿಃ ಪ್ರಥಮಮಜಯತ್ । ತಮನ್ವಶ್ವಿನಾವಪಿ ಜಿತ್ವಾ ಅಗ್ನಿಂ ಪ್ರಧೃಷ್ಯ ಋಕ್ಸಹಸ್ರಂ ಕನ್ಯಕಾಂ ಚ ಚಾಲಭೇತಾಂ । ತತ ಇಂದ್ರ ಉಷಾಶ್ಚಾಲಭೇತಾಂ । ತೌ ಚ ತೈರಗ್ನ್ಯಾದಿಭಿಃ ಪ್ರಾರ್ಥಿತೌ ಸ್ವಶಸ್ತ್ರಸ್ಯ ಕಂಚಿತ್ಕಂ-ಚಿದ್ಭಾಗಂ ತೇಭ್ಯಃ ಪರಿಕಲ್ಪ್ಯ ಸೂರ್ಯಃ ಸ್ವರಥೇ ಅಧಾರಯತಾಂ ಇತಿ ।**

ಸವಿತೃವು ತನ್ನ ಮಗಳಾದ ಸೂರ್ಯೆಯನ್ನು ವಿವಾಹಾರ್ಥವಾಗಿ ಕೊಡಲು ದೇವತೆಗಳನ್ನು ಕರೆಯಿಸಿ ಅವರ ಸಾಮರ್ಥ್ಯವನ್ನು ಅಳೆಯುವುದಕ್ಕಾಗಿ ಒಂದು ಸ್ಪರ್ಧೆಯನ್ನೇರ್ಪಡಿಸಿದನು. ಅದರಲ್ಲಿ ಜಯಿಸಿದವರಿಗೆ ತನ್ನ ಪುತ್ರಿಯನ್ನೂ ಮತ್ತು ಸಹಸ್ರಋಕ್ಪರಿಮಿತವಾದ ಶಸ್ತ್ರವನ್ನೂ ಒಪ್ಪಿಸುವುದಾಗಿ ಪ್ರಕಟಿಸಿದನು. ಆಗ ಅಗ್ನಿಯು ಅದನ್ನು ಜಯಿಸಿದಾಗ ಅಶ್ವಿನೀ ದೇವತೆಗಳು ಅವನನ್ನು ಪ್ರತಿಭಟಿಸಿ ಅವೆರಡನ್ನೂ ತಾವೇ ತೆಗೆದುಕೊಂಡರು. ಅನಂತರ ಇಂದ್ರನೂ ಮತ್ತು ಉಷಸ್ಸೂ ಸಹ ಆ ಸ್ಪರ್ಧೆಯನ್ನು ಜಯಿಸಿದಾಗ ಅವರಿಂದಲೂ ಅಗ್ನಿಯಿಂದಲೂ ಪ್ರಾರ್ಥಿತನಾಗಿ ತನ್ನ ಶಸ್ತ್ರದಲ್ಲಿ ಅವರಿಗೂ ಕೊಂಚ ಭಾಗವನ್ನು ಕಲ್ಪಿಸಿ ಸೂರ್ಯೆಯನ್ನು ತಮ್ಮ ರಥದಲ್ಲಿ ಕುಳ್ಳಿರಿಸಿಕೊಂಡರು ಎಂಬ ಕಥೆಯನ್ನು ತಿಳಿಸಿದ್ದಾರೆ. ಇದೇ ವಿಷಯವನ್ನು ಹಿಂದೆ ಇದೇ ಭಾಗದಲ್ಲಿ ೧-೧೮೪-೧ ನೇ ಋಕ್ಕಿನಲ್ಲಿ ಆಶ್ವಿನ ಶಸ್ತ್ರದ ಮಹತ್ತ್ವವನ್ನು ತಿಳಿಸುವಾಗ "**ಪ್ರಜಾಪತಿರ್ವೈ ಸೋಮಾಯ ರಾಜ್ಞೇ**" ಎಂಬ ಐತರೇಯಬ್ರಾಹ್ಮಣದ ವಾಕ್ಯಗಳನ್ನುದಾಹರಿಸಿ (ಐ. ೪-೭) ಅಲ್ಲಿ ವಿವರಿಸಿರುವ ಕಥೆಯನ್ನು ತಿಳಿಸಿದೆ. ಋಕ್ಸಂಹಿತೆಯಲ್ಲಿ **ಸೂರ್ಯಾ** ವಿವಾಹವನ್ನು ವರ್ಣಿಸುವ ಸೂಕ್ತವೇ ಪ್ರತ್ಯೇಕವಾಗಿರುತ್ತದೆ. (ಋ. ಸಂ. ೧೦-೮೫). ಆ ವಿವರಣೆಯನ್ನು ತಿಳಿಯುವುದಕ್ಕೆ ಮೊದಲು **ಸೂರ್ಯಾ** ಎಂಬ ದೇವಕನ್ಯೆಯ ಅಥವಾ ದೇವತೆಯ ಸ್ವರೂಪವನ್ನು ಎಲ್ಲೆಲ್ಲಿ ಹೇಗೆ ಹೇಗೆ ವರ್ಣಿಸಿದೆ ಎಂಬುದನ್ನು ತಿಳಿಯುವುದು ಅತ್ಯವಶ್ಯವಾಗಿರುತ್ತದೆ. ಸೂರ್ಯೆಯ ಸ್ವರೂಪವನ್ನು ಬೃಹದ್ದೇವತೆಯಲ್ಲಿ ಈ ರೀತಿ ತಿಳಿಸಿದೆ

> **ತಸ್ಯ ಮುಖ್ಯತಮೌ ದೇವಾವಶ್ವಿನೌ ಸೂರ್ಯಮಾಶ್ರಿತೌ ।**
> **ವೃಷಾಕಪಾಯೀ ಸೂರ್ಯೋಷಾಃ ಸೂರ್ಯಸ್ಯೈವ ತು ಪತ್ನಯಃ ॥**
> **ಅಮುತೋಽರ್ವಾಙ್ ನಿವರ್ತಂತೇ ಪ್ರತಿಲೋಮಾಸ್ತದಾಶ್ರಯಾಃ ।**
> **ಪುರೋದಯಾತ್ತ್ವಾಮುಷಸಂ ಸೂರ್ಯಾಂ ಮಧ್ಯಂದಿನೇ ಸ್ಥಿತೇ ॥**
> **ವೃಷಾಕಪಾಯೀಂ ಸೂರ್ಯಸ್ಯ ತಾಮೇವಾಹುಸ್ತು ನಿಮ್ರುಚಿ ।**
> **ತಸ್ಯಾಶ್ರಯೇ ಸರಣ್ಯೂಶ್ಚ ಭಗಃ ಪೂಷಾ ವೃಷಾಕಪಿಃ ॥**
>
> (ಬೃಹದೇ. ೨. ೮ ರಿಂದ ೧೦)

ಅಶ್ವಿನೀದೇವತೆಗಳಿಬ್ಬರೂ ಸೂರ್ಯಸಂಬಂಧಿಯಾದ ದೇವತೆಗಳು. ವೃಷಾಕಪಾಯೀ ಸೂರ್ಯಾ ಮತ್ತು ಉಷಸ್ಸು ಈ ಮೂವರೂ ಸೂರ್ಯಪತ್ನಿಯರು. ಅಂತರಿಕ್ಷಲೋಕದ ಅವರು ಸೂರ್ಯಸಂಬಂಧವನ್ನು ಪಡೆದು ಈ ಲೋಕದ

ಅಭಿಮುಖವಾಗಿ ಹಿಂತಿರುಗುತ್ತಾರೆ ಒಂದೇ ದೇವತೆಯು ಮೂರು ಸ್ವರೂಪವಾಗಿ ಸೂರ್ಯೋದಯಕ್ಕೆಪೂರ್ವದಲ್ಲಿ **ಉಷಸ್ಸೆಂದೂ**, ಮಾಧ್ಯಂದಿನ ಕಾಲದಲ್ಲಿ **ಸೂರ್ಯಾ** ಎಂದೂ, ಮತ್ತು ಸೂರ್ಯಾಸ್ತಮಯಕಾಲದಲ್ಲಿ **ವೃಷಾಕಪಾಯೀ** ಎಂದೂ ನಾಮಧೇಯವುಳ್ಳವಳಾಗಿದ್ದಾಳೆ, ಎಂದು ಹೇಳಿ ಪುನಃ ಸೂರ್ಯಾಸೂಕ್ತದ ವಿಷಯವನ್ನು ತಿಳಿಸುವಾಗ ಈ ವಿಧವಾಗಿ ವರ್ಣಿಸಿದೆ.

**ಸಾವಿತ್ರೀ ಚೈವ ಸೂರ್ಯಾ ಚ ಸೈವ ಪತ್ನೀ ವಿವಸ್ವತಃ ।**
**ಸ್ತುತಾ ವೃಷಾಕಪಾಯೀತಿ ಉಷಾ ಇತಿ ಚ ಯೋಚ್ಯತೇ ।**
**ಉಷಾ ಏಷಾ ತ್ರಿಧಾತ್ಮಾನಂ ವಿಭಜ್ಯ ಪ್ರೈತಿ ಗೋಪತಿಂ ॥**
**ಉಷಾಃ ಪುರೋದಯೋದ್ಭೂತ್ವಾ ಸೂರ್ಯಾ ಮಧ್ಯಂದಿನೇ ಸ್ಥಿತೇ ।**
**ಭೂತ್ವಾ ವೃಷಾಕಪಾಯೀ ಚ ದಿನಾಂತೇಽಸ್ತವಗಚ್ಛತಿ ॥**

(ಬೃ. ದೇ. ೭. ೧೧೯ ರಿಂದ ೧೨೧)

ಸಾವಿತ್ರೀ ಮತ್ತು ಸೂರ್ಯಾ ಇವರಿಬ್ಬರೂ ಸಹ ವಿವಸ್ವಂತನ ಪತ್ನಿಯರು. ಇದೇ ಸೂರ್ಯೆಯನ್ನು ವೃಷಾಕಪಾಯಿ ಮತ್ತು ಉಷಸ್ಸು ಎಂಬುದಾಗಿಯೂ ಸಹ ಕರೆಯುತ್ತಾರೆ ಎಂದು ಹಿಂದೆ ಹೇಳಿರುವ ವಿಷಯವನ್ನೇ ಪುನಃ ತಿಳಿಸಿ ಈ ಸೂರ್ಯೆಯ ವಿವಾಹದ ವಿಷಯವನ್ನೂ ವರ್ಣಿಸುವ ವಿಷಯವನ್ನು ಸೂರ್ಯಾಸೂಕ್ತದ ವೈಶಿಷ್ಟ್ಯವನ್ನೂಪ್ರಶಂಸಿಸಿದೆ. ಹೀಗೆ **ಸೂರ್ಯಾ** ಎಂಬ ಕನ್ಯೆಯ ವರ್ಣನೆಯಿರುವಾಗ ಅವಳಿಗೂ ಸೂರ್ಯನಿಗೂ ಸಂಬಂಧವೇನು ಮತ್ತು ಅವಳು ಅಶ್ವಿನೀ ದೇವತೆಗಳನ್ನು ವರಿಸಿದಳು ಎಂಬುದರ ಅರ್ಥವೇನು ಎಂಬುದನ್ನು ತಿಳಿಯುವುದು ಆವಶ್ಯವಾಗಿರುತ್ತದೆ. ಸೂರ್ಯಾ ಸೂಕ್ತದಿಂದ ಕೆಳಗೆ ಉದಾಹರಿಸಿರುವ ಋಕ್ಕುಗಳಲ್ಲಿ ಸೂರ್ಯೆಯು ಅಶ್ವಿನೀದೇವತೆಗಳೊಂದಿಗೆ ವಿವಾಹಾರ್ಥವಾಗಿ ಸೇರಿಕೊಂಡುದು ವರ್ಣಿತವಾಗಿದೆ.

**ಯದಶ್ವಿನಾ ಪೃಚ್ಛಮಾನಾವಯಾತಂ ತ್ರಿಚಕ್ರೇಣ ವಹತುಂ ಸೂರ್ಯಾಯಾಃ ।**
**ವಿಶ್ವೇ ದೇವಾ ಅನು ತದ್ವಾಮಜಾನನ್ ಪುತ್ರಃ ಪಿತರಾವವೃಣೀತ ಪೂಷಾ ॥**

(ಋ ಸಂ. ೧೦. ೮೫. ೧೪)

ಎಂಬ ಋಕ್ಕಿನಲ್ಲಿ, " ಎಲೈ ಅಶ್ವಿನೀ ದೇವತೆಗಳೇ, ಸೂರ್ಯೆಯನ್ನು ಪಾಣಿಗ್ರಹಣ ಮಾಡುವುದಕ್ಕಾಗಿ ನೀವು ನಿಮ್ಮ ತ್ರಿಚಕ್ರಾತ್ಮಕವಾದ ರಥದಲ್ಲಿ ಬಂದಾಗ ನಿಮ್ಮ ವಿವಾಹವನ್ನು ಸಕಲವಾದ ದೇವತೆಗಳೂ ಸಹ ಅನುಮೋದಿಸಿದರು. ಮತ್ತು ನಿಮ್ಮ ಪುತ್ರನಾದ ಪೂಷನು ನಿಮ್ಮನ್ನು ಪಿತೃವನ್ನಾಗಿ ಆರಿಸಿಕೊಂಡನು." ಎಂದು ಪ್ರಕೃತವಾದ ಋಕ್ಕಿನಲ್ಲಿ ಉಪಯೋಗಿಸಿರುವ **ವಹತುಂ ಸೂರ್ಯಾಯಾಃ** ಎಂಬ ಪದಗಳನ್ನೇ ಉಪಯೋಗಿಸಿದೆ. ಇದಲ್ಲದೇ,

**ಸ್ತೋಮಾ ಆಸನ್ಪ್ರತಿಧಯಃ ಕುರೀರಂ ಛಂದ ಓಪಶಃ ।**
**ಸೂರ್ಯಾಯಾ ಅಶ್ವಿನಾ ವರಾಗ್ನಿರಾಸೀತ್ಪುರೋಗವಃ ॥**

(ಋ. ಸಂ ೧೦. ೮೫. ೮)

**ಯದಯಾತಂ ಶುಭಸ್ಪತೀ ವರೇಯಂ ಸೂರ್ಯಾಮುಪ ।**
**ಕ್ವೈಕಂ ಚಕ್ರಂ ವಾಮಾಸೀತ್ಕ್ವ ದೇಷ್ಟ್ರಾಯ ತಸ್ಥಥುಃ ॥**

(ಋ. ಸಂ. ೧೦ ೮೫. ೧೫)

ಎಂಬ ಋಕ್ಕುಗಳಲ್ಲಿಯೂ ಸಹ ಇದೇ ವರ್ಣನೆಯಿರುತ್ತದೆ. ಇದಲ್ಲದೇ,

ಅಧಿ ಶ್ರಿಯೇ ದುಹಿತಾ ಸೂರ್ಯಸ್ಯ ರಥಂ ತಸ್ಥೌ ಪುರುಭುಜಾ ಶತೋತಿಂ ।
ಪ್ರ ಮಾಯಾಭಿರ್ಮಾಯಿನಾ ಭೂತಮತ್ರ ನರಾ ನೃತೂ ಜನಿಮನ್ಯಜ್ಞಿಯಾನಾಂ ॥

(ಋ ಸಂ. ೬ ೬೩. ೫)

ಓ ತ್ಯಮಹ್ವ ಆ ರಥಮದ್ಯಾ ದಂಸಿಷ್ಠಮೂತಯೇ ।
ಯಮಶ್ವಿನಾ ಸುಹವಾ ರುದ್ರವರ್ತನೀ ಆ ಸೂರ್ಯಾಯೈ ತಸ್ಥಥುಃ ॥

(ಋ. ಸಂ. ೮. ೨೨. ೧.)

ಕೋ ವ್ಯಾಂ ಕತಮ ಆಗಮಿಷ್ಠೋ ದೇವಾನಾಮು ಕತಮಃ ಶಂಭವಿಷ್ಠಃ ।
ರಥಂ ಕಮಾಹುರ್ದ್ರವದಶ್ವಮಾಶುಂ ಯಂ ಸೂರ್ಯಸ್ಯ ದುಹಿತಾವೃಣೀತ ॥

(ಋ. ಸಂ. ೪. ೪೩. ೨.)

ಇತ್ಯಾದಿ ಸನ್ನಿವೇಶಗಳಲ್ಲೆಲ್ಲಾ ಸೂರ್ಯೆಯು ಅಶ್ವಿನೀ ದೇವತೆಗಳನ್ನುಸ್ವಯಂವರಾರ್ಥವಾಗಿ ವರಿಸಿದುದು ಪ್ರಸಿದ್ಧವಾಗಿದೆ ಮೇಲೆ ಉದಾಹೃತವಾಗಿರುವ ೬. ೬೩. ೫ ನೇ ಋಕ್ಕಿನಲ್ಲಿ ಅಶ್ವಿನೀದೇವತೆಗಳು ತಮ್ಮ ತ್ರಿಚಕ್ರಾತ್ಮಕವಾದ ರಥದಲ್ಲಿ ಕುಳಿತು ದೇವತೆಗಳಿಗಾಗಿ ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ಜಯವನ್ನು ಪಡೆದರೆಂದಿದೆ. ಆದರೆ, ಸೂಕ್ತಮಂತ್ರಗಳಿಂದ ಮೇಲೆ ಉದಾಹೃತವಾಗಿರುವ ೧೦. ೮೫. ೧೫ ನೇ ಋಕ್ಕಿನಲ್ಲಿ ಅವರು ಸೂರ್ಯೆಯನ್ನು ಸಮೀಪಿಸಲು ಹೊರಟಾಗ ಅವರ ಒಂದು ರಥಚಕ್ರವು ಅದೃಶ್ಯವಾಯಿತು ಎಂದು ವರ್ಣಿಸಿಡೆ. ಇದರ ತಾತ್ಪರ್ಯವೇನು ಎಂದು ವಿವರಿಸುತ್ತಾ Maryla Falk ಎಂಬ ಆಂಗ್ಲಪಂಡಿತರು ತಮ್ಮ ಅಭಿಪ್ರಾಯವನ್ನು ಈ ರೀತಿ ತಿಳಿಸಿದ್ದಾರೆ.

"What were the three wheels of the Aswin's car? The twin gods are most frequently said to come at early dawn, but this is not the only time of their coming. The express statement repeatedly occurs that they are invoked both in the morning and in the evening. (VIII. 22-14; X. 39-1; X. 40-4.). Once it is said that they come also at noon (V. 76-3.) It remains undecided what specific natural phenomenon they were supposed to represent, but their connection with the transition between light and darkness is certain. They may thus have been meant to represent the morning and evening star as they are said to have been born separately. (V. 73-4). Their path is red or golden — it is dawn and sunset. Their car runs also by day and by night since it is said to move round the whole of the sky (I. 180-10) to cover the whole expanse of heaven in its course (IV. 43-5) to compass Heaven and Earth in one day' (III. 58-8). But at those times, it is not seen. In its nightly course it separates the extreme points of heaven and at that time' ಸೂರ್ಯಾ enfolds the Aswin's brightness. (VII. 69-3 & 4). The other, more obvious, moment of their marriage with ಸೂರ್ಯಾ is when they cross the path of the Sun at the zenith: This was when the Sun mounted on their car and when the third, the middle or noontide wheel of that car disappeared, [according to the 15th stanza of the ಸೂರ್ಯಾಸೂಕ್ತ] cr was promptly arrested, [according to the 3rd stanza of the hymn V 73.] One beautiful wheel you

promptly arrested for the sake of the beauty (of ಸೂರ್ಯಾ). whereas round the other spheres you fly powerfully ''. The 5th stanza of the same hymn explains that, when ಸೂರ್ಯಾ mounted on their ever swift-running car, they were encompassed by the flaming rays of the Sun's glow. The wheel of the Sun, of the flaming ಸೂರ್ಯಾ, absorbed the wheel of the Aswins, made it disappear in its rays.

[ The Indian Historical Quarterly Vol. XVIII. No. 1.March 1942. p. 28. ]

ಈ ಅಭಿಪ್ರಾಯದ ಸಾರಾಂಶವು ಈರೀತಿಯಲ್ಲಿದೆ.

**ಯೋ ವಾಂ ಪರಿಜ್ಮಾ ಸುವೃದಶ್ವಿನಾ ರಥೋ ದೋಷಾಮುಷಾಸೋ ಹವ್ಯೋ ಹವಿಷ್ಮತಾ ।**
**ಶಶ್ವತ್ತಮಾಸಸ್ತಮು ವಾಮಿದಂ ವಯಂ ಪಿತುರ್ನ ನಾಮ ಸುಹವಂ ಹವಾಮಹೇ ॥**

(ಋ. ಸಂ. ೧೦-೩೯-೧)

ಇತ್ಯಾದಿ ಋಕ್ಕುಗಳಲ್ಲಿ ಅಶ್ವಿನೀದೇವತೆಗಳು ಉಷಃಕಾಲದಲ್ಲಿಯೂ ಮತ್ತು ಸಾಯಂಸಂಧ್ಯಾಕಾಲದಲ್ಲಿಯೂ ಆಹೂತರಾಗುವರೆಂದು ತಿಳಿಸಿದೆ ಅಷ್ಟೇ ಅಲ್ಲದೇ,

**ಉತಾ ಯಾತಂ ಸಂಗವೇ ಪ್ರಾತರಹ್ನೋ ಮಧ್ಯಂದಿನ ಉದಿತಾ ಸೂರ್ಯಸ್ಯ ।**
**ದಿವಾ ನಕ್ತಮವಸಾ ಶಂತಮೇನ ನೇದಾನೀಂ ಪೀತಿರಶ್ವಿನಾ ತತಾನ ॥** (ಋ. ಸಂ. ೫. ೭೬. ೩.)

ಇತ್ಯಾದಿ ಮಂತ್ರಗಳಿಂದ ಅವರನ್ನು ಮಾಧ್ಯಂದಿನಸವನಕ್ಕೂ ಆಹ್ವಾನಿಸಿದೆ. ಈ ರೀತಿ ಸವನತ್ರಯದಲ್ಲೂ ಪ್ರಾಮುಖ್ಯವನ್ನು ಹೊಂದಿರುವ ಅಶ್ವಿನೀದೇವತೆಗಳ ಸ್ವರೂಪವೇನೆಂಬುದನ್ನು ನಿಷ್ಕೃಷ್ಟವಾಗಿ ತಿಳಿಸಲು ಸಾಧ್ಯವಿಲ್ಲವೆಂದೂ, ಒಬ್ಬೊಬ್ಬರೂ ಒಂದೊಂದಭಿಪ್ರಾಯವನ್ನು ಹೇಳುವರು ಎಂಬುದಾಗಿಯೂ ನಿರುಕ್ತಕಾರರು ಸ್ಪಷ್ಟಪಡಿಸಿದ್ದಾರೆ. (ನಿ. ೧೨-೧) ಮತ್ತು

**ನಾನಾ ಜಾತಾವರೇಪಸಾ ಸಮಸ್ಮೇ ಬಂಧುಮೇಯಥುಃ ।** (ಋ-ಸಂ-೫-೭೩-೪)

ಇತ್ಯಾದಿ ಕಡೆಗಳಲ್ಲಿ **ನಾನಾ ಜಾತಾ । ಪೃಥಗೇವ ಸಮ್ಬೃದ್ಧೌ** ಎಂಬುದಾಗಿ ಅವರ ವೈಯಕ್ತಿಕವಾದ ಉತ್ಪತ್ತಿಯನ್ನೂ ವೃದ್ಧಿಯನ್ನೂ ತೋರಿಸಿದೆ. ಕೆಲವಡೆಗಳಲ್ಲಿ **ನಾಸತ್ಯ**, **ದಸ್ರ** ಎಂಬ ಎರಡು ಹೆಸರುಗಳೂ ಅಶ್ವಿನೀದ್ವಯದ ಬೇರೆ ಬೇರೆ ವೈಯಕ್ತಿಕವಾದ ರೂಪಗಳು ಎಂದೂ ತಿಳಿಸಿದೆ. (Journal of Oriental Research, Madras Vol XV) ಪ್ರಭಾತಕಾಲದಲ್ಲೂ ಸಾಯಂಕಾಲದಲ್ಲೂ ಪ್ರಕಾಶಿಸತಕ್ಕ ದೇವತೆಗಳು ಎಂದು ತಿಳಿಯುತ್ತದೆ. ಆದುದರಿಂದಲೇ **ಹಿರಣ್ಯಯೀಃ ವಾಂ ಪವಯಃ** (೧-೧೮೦-೧) ಇತ್ಯಾದಿ ಅವರ ರಥದ ಮತ್ತು ರಥಚಕ್ರದ ಸಂಧ್ಯಾರಾಗದ ವರ್ಣವು ವರ್ಣಿತವಾಗಿದೆ. ಇಂತಹ ಸ್ವರೂಪವುಳ್ಳ ಅಶ್ವಿನೀದೇವತೆಗಳನ್ನು,

**ಯುವೋಃ ಶ್ರಿಯಂ ಪರಿಯೋಷಾವೃಣೀತ ಸೂರೋ ದುಹಿತಾ ಪರಿತಕ್ಮ್ಯಾಯಾಂ ।**
**ಯದ್ದೇವಯಂತಮವಥಃ ಶಚೀಭಿಃ ಪರಿ ಘ್ರಂಸಮೋಮನಾ ವಾಂ ವಯೋ ಗಾತ್ ॥**

(ಋ-ಸಂ-೭-೬೯-೪)

ಎಂಬಲ್ಲಿ, ಹೀಗೆ ಪ್ರಶಂಸಿಸಿದೆ. "ಎಲೈ ಅಶ್ವಿನಿದೇವತೆಗಳೇ, ಯಾವಾಗಲೂ ನಿಮ್ಮ ಸೌಂದರ್ಯದ ಸೇವೆಯಲ್ಲಿಯೇ ಆಸಕ್ತಳಾದ ಸೂರ್ಯದುಹಿತೆಯು ಸವನಕಾಲಗಳಲ್ಲಿ ನಿಮ್ಮನ್ನು ಸೇರಿ ನಿಮ್ಮಲ್ಲಿ ವ್ಯಾಪಿಸುತ್ತಾಳೆ" ಎಂಬ ವರ್ಣನೆಯಲ್ಲದೇ, ಇದೇ ಸೂರ್ಯದುಹಿತೆಯು ಅಶ್ವಿನಿದೇವತೆಗಳನ್ನು ಅವರು ಅಂತರಿಕ್ಷದಲ್ಲಿ ಸೂರ್ಯಪಥಕ್ಕೆ ಮಧ್ಯವರ್ತಿಗಳಾದಾಗ ಆಕ್ರಮಿಸಿ ಅವರನ್ನು ಸೇರುತ್ತಾಳೆ ಎಂದೂ ಸಹ ಕೆಲವೆಡೆಗಳಲ್ಲಿ ತಿಳಿಸಿದೆ. ಇಂತಹ ಕಾಲಗಳಲ್ಲಿ,

**ಈರ್ಮಾನ್ಯದ್ವಪುಷೇ ವಪುಶ್ಚಕ್ರಂ ರಥಸ್ಯ ಯೇಮಥುಃ ।**
**ಪರ್ಯನ್ಯಾ ನಾಹುಷಾ ಯುಗಾ ಮಹ್ನಾ ರಜಾಂಸಿ ದೀಯಥಃ ॥**

(ಋ-ಸಂ-೫-೭೩-೩)

ಇತ್ಯಾದಿ ಮಂತ್ರಗಳಿಂದ ಅಶ್ವಿನೀದೇವತೆಗಳ ರಥದ ಮೂರನೆಯ ಚಕ್ರವೂ, ಅದರ ಪ್ರಕಾಶವೂ ವರ್ಣಿತವಾಗಿದೆ. ಇಂತಹ ರಥಚಕ್ರವುಳ್ಳ ಅಶ್ವಿನೀದೇವತೆಗಳನ್ನು ಸೂರ್ಯೆಯು ಸೇರಿಕೊಳ್ಳುತ್ತಾಳೆ ಎಂದು,

**ಆ ಯದ್ವಾಂ ಸೂರ್ಯಾ ರಥಂ ತಿಷ್ಠದ್ರಘುಷ್ಯದಂ ಸದಾ ।**

(ಋ-ಸಂ-೫-೭೩-೫)

ಮುಂತಾದ ಕಡೆ ಸ್ತುತಿಸಿದೆ. ಮತ್ತು ಇದೇ ಮಂತ್ರದಲ್ಲಿ, ಸೂರ್ಯೆಯು ಅಶ್ವಿನೀದೇವತೆಗಳ ರಥವನ್ನು ಏರಿದೊಡನೆಯೇ ಅವರ ರಥವು ಸೂರ್ಯನ ಸ್ವರ್ಣಮಯವಾದ ಪ್ರಭೆಗಳಿಂದ ಪೂರಿತವಾಯಿತು ಎಂದು " **ಪರಿ ವಾಮರುಷಾ ವಯೋ ಘೃಣಾವರಂತ ಆತಪಃ** " ಎಂಬ ವಾಕ್ಯದಿಂದ ಪ್ರಶಂಸಿಸಿದೆ. ಎಂದರೆ ಸೂರ್ಯೆಯ ಪ್ರಭೆಯು ಅವರ ರಥಚಕ್ರವನ್ನು ಮರೆಸುವಂತೆ ಮಾಡಿತು ಎಂದರ್ಥವಾಗುತ್ತದೆ.

ಮೇಲೆ ಉದಾಹರಿಸಿರುವ Maryla Falk ಎಂಬ ಪಂಡಿತರ ಅಭಿಪ್ರಾಯಗಳಲ್ಲಿ ಕೆಲವು ವಿಮರ್ಶಾತ್ಮಕವಾಗಿಯೂ ಸಂಪ್ರದಾಯಕ್ಕೆ ಅನುಗುಣವಾದ ವಿವರಣೆಯಾಗಿಯೂ ಇರುತ್ತದೆ. ಆದರೆ ಆ ಲೇಖನದ ಇನ್ನು ಕೆಲವು ವಿವರಣೆಗಳು ಕೇವಲ ಕಲ್ಪಿತವಾದವಾಗಿವೆ. ಅವು ಯಾವ ರೀತಿ ಸಂಪ್ರದಾಯಕ್ಕೆ ವಿರೋಧವಾಗಿದೆಯೆಂಬುದನ್ನು ಮುಂದೆ ಸೂರ್ಯಾಸೂಕ್ತವನ್ನು ವಿವರಿಸುವಾಗ ವಿಶದವಾಗಿ ತಿಳಿಸಲಾಗುತ್ತದೆ. ಪ್ರಕೃತದಲ್ಲಿ ಸೂರ್ಯೆಯ ವಿವಾಹದ ವಿಷಯದಲ್ಲಿ ಸ್ಥೂಲವಾದ ದೃಷ್ಟಿಗೆ ತೋರತಕ್ಕ ಒಂದೆರಡು ವಿರೋಧಾಂಶಗಳನ್ನು ಗಮನಿಸಿ ಅನಂತರ ಸೂರ್ಯೆಯೊಂದಿಗೆ ತಾದಾತ್ಮ್ಯವನ್ನು ತೋರಿಸಿ ವರ್ಣಿಸಿರುವ ಉಳಿದ ದೇವತೆಗಳಾರು, ಅವರ ಸ್ವರೂಪವೇನು, ಎಂಬುದನ್ನು ಗಮನಿಸಬೇಕಾಗುತ್ತದೆ. ಮತ್ತು ಸ್ಥೂಲವಾದ ದೃಷ್ಟಿಗೆ ತೋರತಕ್ಕ ಈ ವಿರೋಧಾಂಶಗಳಲ್ಲಿ ಯಾವ ವಿಧವಾದ ಸಾಮರಸ್ಯವಿದೆ ಎಂಬುದನ್ನು ಮುಂದೆ ತಿಳಿಸಲಾಗುತ್ತದೆ

**ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ ।**
**ಉತಾಶ್ವಿನಾವಭರದ್ಯತ್ತದಾಸೀದಜಹಾದು ದ್ವಾ ಮಿಥುನಾ ಸರಣ್ಯೂಃ ॥**

(ಋ-ಸಂ-೧೦-೧೭-೨)

ಎಂಬ ಋಕ್ಕಿನಲ್ಲಿ ದೇವತೆಗಳು ಸರಣ್ಯುವನ್ನು ವಿವಸ್ವಂತನಿಗೆ ಕೊಟ್ಟು ವಿವಾಹ ಮಾಡಿದರೆಂದೂ, ಅಶ್ವರೂಪಿಯಾದ ಅವಳು ಅಶ್ವಿನೀದೇವತೆಗಳನ್ನು ಹಡೆದಳು ಎಂದೂ ವರ್ಣನೆಯಿದೆ. ಎಂದರೆ ಅಶ್ವಿನೀದೇವತೆಗಳು ವಿವಸ್ವಂತನ ಪುತ್ರರೆಂದು ಇದರಿಂದ ತಿಳಿಯುತ್ತದೆ. ಆದರೆ ಮೇಲೆ ಉದಾಹರಿಸಿರುವ,

**ಸಾವಿತ್ರೀ ಚೈವ ಸೂರ್ಯಾ ಚ ಸೈವಪತ್ನೀ ವಿಶೇಷತಃ ।**

(ಬೃ. ದೇ. ೭-೧೧೯)

ಎಂಬ ಬೃಹದ್ದೇವತಾವಾಕ್ಯದಿಂದ ಸೂರ್ಯೆಯು ವಿವಸ್ವಂತನ ಪತ್ನಿಯೆಂದು ತಿಳಿಯುತ್ತದೆ. ಅವಳನ್ನೇ ಅಶ್ವಿನೀದೇವತೆಗಳು ವರಿಸಿದರು ಎಂಬುದರ ಅಭಿಪ್ರಾಯವೇನು ? ಹೀಗೆಯೇ,

ಸೋಮೋ ವಧೂಯುರಭವದಶ್ವಿನಾಸ್ತಾಮುಭಾ ವರಾ ।
ಸೂರ್ಯಾಂ ಯತ್ಪತ್ಯೇ ಶಂಸಂತೀಂ ಮನಸಾ ಸವಿತಾದದಾತ್ ॥
(ಋ ಸಂ ೧೦-೮೫-೯)

ಎಂಬಲ್ಲಿ ಸವಿತೃವು ತನ್ನ ಪುತ್ರಿಯಾದ ಸೂರ್ಯೆಯನ್ನು ಸೋಮನಿಗೆ ಕೊಟ್ಟು ವಿವಾಹವನ್ನು ಮಾಡಿದನು. ಆಗ ಅಶ್ವಿನೀ ದೇವತೆಗಳು ಕೇವಲ ವೀಕ್ಷಕರಾಗಿ ಮಾತ್ರವಾಗಿದ್ದರು. ವಿವಾಹವಾದನಂತರ ಸೂರ್ಯೆಯು ಭರ್ತೃವಾದ ಸೋಮನ ಗೃಹಕ್ಕೆ ಹೋಗಿ ಸೇರಿದಳು ಎಂದಿದೆ. ಇಲ್ಲಿ ಯಾವ ವಿಧವಾಗಿ ತಾತ್ಪರ್ಯವನ್ನು ಹೇಳಬೇಕು ಇತ್ಯಾದಿಗಳನ್ನು ಸೂರ್ಯಾ ಸೂಕ್ತದ ವಿವರಣೆಯಲ್ಲಿ ವಿಶದವಾಗಿ ತಿಳಿಸಿ ಈ ವಿರೋಧಾಂಶಗಳಿಗೆ ಸಾಮರಸ್ಯವನ್ನು ತಿಳಿಸಲಾಗುತ್ತದೆ.

ಋಕ್ಸಂಹಿತೆಯಲ್ಲಿ ಸೂರ್ಯಾಸೂಕ್ತದಲ್ಲಿ ವಿವರಿಸಿರುವ ಸೂರ್ಯಾ ಮತ್ತು ಅವಳ ವಿವಾಹದ ವರ್ಣನೆಯಲ್ಲಿ ಗಹನವಾದ ಆಧ್ಯಾತ್ಮಿಕತತ್ತ್ವವು ಅಡಗಿದೆ. ಈ ಅಂಶವನ್ನು ಸೂರ್ಯಾಸೂಕ್ತದ ಕೆಲವು ಮಂತ್ರಗಳು ತಿಳಿಸುತ್ತವೆ. ಉಪನಿಷದ್ವಾಕ್ಯಗಳಲ್ಲಿ ವರ್ಣಿತವಾಗಿರುವ ತತ್ತ್ವವು ಈ ಮಂತ್ರಗಳಿಂದ ತಿಳಿಸಲ್ಪಟ್ಟವೆ. ಉದಾಹರಣೆಗೆ,

ಮನೋ ಅಸ್ಯಾ ಅನ ಆಸೀದ್ದ್ಯೌರಾಸೀದುತ ಚ್ಛದಿಃ ।
ಶುಕ್ರಾವನಡ್ವಾಹಾವಾಸ್ತಾಂ ಯದಯಾತ್ಸೂರ್ಯಾ ಗೃಹಂ ॥
ಋಕ್ಸಾಮಾಭ್ಯಾಮಭಿಹಿತೌ ಗಾವೌ ತೇ ಸಾಮನಾವಿತಃ ।
ಶ್ರೋತ್ರಂ ತೇ ಚಕ್ರೇ ಆಸ್ತಾಂ ದಿವಿ ಪಂಥಾಶ್ಚರಾಚರಃ ॥
(ಋ. ಸಂ. ೧೦. ೮೫. ೧೦, ೧೧)

ಇತ್ಯಾದಿ ಋಕ್ಕುಗಳಲ್ಲಿ ಸೂರ್ಯೆಯ ಕೇವಲ ಭೌತಿಕವಾದ ಶರೀರದ ವರ್ಣನೆಯು ಮಾತ್ರವಿಲ್ಲ ಸೂರ್ಯೆಯು ವಿಶ್ವತತ್ತ್ವವನ್ನು ಪ್ರತಿಬಿಂಬಿಸುವ ಒಂದು ಶಕ್ತಿಯೆಂಬರ್ಥವನ್ನು ಕೊಡುವ ವರ್ಣನೆಯಿದೆ. ಈ ವರ್ಣನೆಯಂತೆ, ಮನಸ್ಸೇ ಅವಳ ರಥವು ; ಅಂತರಿಕ್ಷವೇ ಮೇಲುಹೊದ್ದಿಕೆಯು. ಅಂತರಿಕ್ಷದಲ್ಲಿ ಪ್ರಕಾಶಿಸುವ ಎರಡು ಪ್ರಭಾಮಂಡಲಗಳೇ ಅವಳ ವಾಹನಗಳು. ಋಕ್ಕಿನಿಂದಲೂ ಮತ್ತು ಸಾಮದಿಂದಲೂ ಆಹಿತವಾದ ಆ ವಾಹನಗಳು ಸೂರ್ಯೆಯನ್ನು ವಹಿಸಿದುವು. ಆ ರಥಚಕ್ರಗಳೇ ಅವಳ ಕರ್ಣಗಳು. ಅವಳು ಸಂಚರಿಸುವ ಮಾರ್ಗವು ಅಂತರಿಕ್ಷಸ್ಥವಾಗಿದ್ದಿತು. ಇಂತಹ ವಿವಾಹ ನೇಪಥ್ಯಗಳಿಂದ ಅಲಂಕೃತಳಾದ ಸೂರ್ಯೆಯನ್ನು ವರಿಸಲು ಅಶ್ವಿನೀದೇವತೆಗಳು ಬಂದಾಗ ದೇವತೆಗಳೆಲ್ಲರೂ ಅನುಮೋದಿಸಿದರು ಎಂದಿದೆ.

ಇನ್ನು ಕೆಲವು ವರ್ಣನೆಗಳಿಂದ ಸೂರ್ಯೆಗೂ ಶಬ್ದಬ್ರಹ್ಮಾತ್ಮಿಕಾವಾಕ್ಕಿಗೂ ತಾದಾತ್ಮ್ಯವನ್ನು ಹೇಳಿರುವುದು ತಿಳಿಯುತ್ತದೆ. ಇದನ್ನೇ ಬೃಹದ್ದೇವತೆಯಲ್ಲಿ ತಿಳಿಸುತ್ತಾ,

ಯದಾ ತು ವಾಗ್ಭವತ್ಯೇಷಾ ಸೂರ್ಯಾಮುಂ ಲೋಕಮಾಶ್ರಿತಾ ।
ತಥಾ ಸೂಕ್ತಮುಷಾ ಭೂತ್ವಾ ಸೂರ್ಯಾ ಚ ಭಜತೇಽಖಿಲಂ ॥
(ಬೃ. ದೇ. ೨. ೭೯)

ಸೂರ್ಯಾಮೇವ ಸತಿಮೇತಾಂ ಗೌರೀಂ ವಾಚಂ ಸರಸ್ವತೀಂ ।
ಪಶ್ಯಾಮೋ ವೈಶ್ವದೇವೇಷು ನಿಪಾತೇಷ್ವೈವ ಕೇವಲಾಃ ॥
(ಬೃ. ದೇ. ೨. ೮೧)

ಎಂಬ ಶ್ಲೋಕಗಳಿಂದ ಶಬ್ದಬ್ರಹ್ಮಾತ್ಮಿಕವಾದ ವಾಕ್ಕೇ ಸೂರ್ಯಾರೂಪದಲ್ಲಿ ಅಂತರಿಕ್ಷಸ್ಥಳಾಗಿರುವಳು. ಇವಳೇ ಸೂರ್ಯೆಯು, ಇವಳೇ ಉಷೋದೇವತೆಯು, ಗೌರಿಯು ಮತ್ತು ಸರಸ್ವತಿಯು ಎಂಬುದಾಗಿ ವರ್ಣಿಸಿದೆ. ಈ ವಾಕ್ಕಿನ ಮಹತ್ತ್ವವನ್ನು ಹಿಂದೆ ೧. ೧೬೪. ४೧ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರವಾಗಿ ತಿಳಿಸಿದೆ. ಈ ರೀತಿ ವಾಕ್ಕಿನೊಡನೆ ತಾದಾತ್ಮ್ಯವನ್ನು ಹೇಳಿರುವುದರಿಂದ ಸೂರ್ಯೆಗೂ ಗಂಧರ್ವನಿಗೂ ಇರತಕ್ಕ ದಾಂಪತ್ಯಸಂಬಂಧವೂ ಅರ್ಥವಾಗುತ್ತದೆ. ಸೂರ್ಯಾಸೂಕ್ತದ, ಕೊನೆಯ ಋಕ್ಕುಗಳಲ್ಲಿ ಸೋಮನನ್ನು ಪಡೆದ ಗಂಧರ್ವನಿಗೆ ಸೂರ್ಯೆಯು ಲಭಿಸಿದುದು ಹೇಗೆ ಎಂಬುದು ಈ ರೀತಿ ವರ್ಣಿತವಾಗಿದೆ.

> ತುಭ್ಯಮಗ್ರೇ ಪರ್ಯವಹನ್ತ್ಸೂರ್ಯಾಂ ವಹತುನಾ ಸಹ ।
> ಪುನಃ ಪತಿಭ್ಯೋ ಜಾಯಾಂ ದಾ ಅಗ್ನೇ ಪ್ರಜಯಾ ಸಹ ॥
> ಪುನಃ ಪತ್ನೀಮಗ್ನಿರದಾದಾಯುಷಾ ಸಹ ವರ್ಚಸಾ ।
> ದೀರ್ಘಾಯುರಸ್ಯಾ ಯಃ ಪತಿರ್ಜೀವಾತಿ ಶರದಃ ಶತಂ ॥
> ಸೋಮಃ ಪ್ರಥಮೋ ವಿವಿದೇ ಗಂಧರ್ವೋ ವಿವಿದ ಉತ್ತರಃ ।
> ತೃತೀಯೋ ಅಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯಜಾಃ ।
> ಸೋಮೋ ದದದ್ಗಂಧರ್ವಾಯ ಗಂಧರ್ವೋ ದದದಗ್ನಯೇ ।
> ರಯಿಂ ಚ ಪುತ್ರಾಂಶ್ಚಾದಾದಗ್ನಿರ್ಮಹ್ಯಮಥೋ ಇಮಾಂ ॥
> (ಋ. ಸಂ ೧೦-೮೫-೩೮ ರಿಂದ ४೧)

ಎಂಬ ಋಕ್ಕುಗಳಲ್ಲಿ ಸೂರ್ಯೆಯು ಅಗ್ನಿಗೆ ಪ್ರಥಮತಃ ದತ್ತಳಾಗಿ ಅನಂತರ ಅಗ್ನಿಯಿಂದ ಸೋಮನಿಗೂ, ಸೋಮನಿಂದ ಗಂಧರ್ವನಿಗೂ, ಗಂಧರ್ವನಿಂದ ಪುನಃ ಅಗ್ನಿಗೂ ಸೇರಿದುದೂ ತಿಳಿಸಿದೆ. ಈ ಗಂಧರ್ವನಿಗೂ ಸೋಮನಿಗೂ ಇರುವ ಸಂಬಂಧವು ಬೇರೆ ಕಡೆಯಲ್ಲಿ ತಿಳಿಸಲ್ಪಡುತ್ತದೆ. ಸೋಮನು ವಾಗ್ದೇವಿಯನ್ನು ಗಂಧರ್ವನಿಗೆ ಒಪ್ಪಿಸಿದ ಕಥೆಯು ಐತರೇಯಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

> ಸೋಮೋ ವೈ ರಾಜಾ ಗಂಧರ್ವೇಷ್ವಾಸೀತ್ತಂ ದೇವಾಶ್ಚ ಋಷಯಶ್ಚಾಭ್ಯಧ್ಯಾಯನ್ಕಥಮಯಮಸ್ಮಾನ್ಸೋಮೋ ರಾಜಾಗಚ್ಛೇದಿತಿ ಸಾ ವಾಗಬ್ರವೀತ್ ಸ್ತ್ರೀಕಾಮಾ ವೈ ಗಂಧರ್ವಾ ಮಯೈವ ಸ್ತ್ರಿಯಾ ಭೂತಯಾ ಪಣಧ್ವಮಿತಿ ನೇತಿ ದೇವಾ ಅಬ್ರುವನ್ಕಥಂ ವಯಂ ತ್ವದೃತೇ ಸ್ಯಾಮೇತಿ ಸಾಽಬ್ರವೀತ್ಕ್ರೀಣೀತೈವ ಯರ್ಹಿ ವಾವ ವೋ ಮಯಾರ್ಥೋ ಭವಿತಾ ತರ್ಹ್ಯೇವ ವೋಽಹಂ ಪುನರಾಗಂತಾಸ್ಮೀತಿ ತಥೇತಿ ತಯಾ ಮಹಾನಗ್ನ್ಯಾ ಭೂತಯಾ ಸೋಮಂ ರಾಜಾನಮಕ್ರೀಣನ್ ।
> (ಐ. ಬ್ರಾ. ೫-೨)

ಸೋಮರಾಜನು ಗಂಧರ್ವರ ಗುಂಪಿನಲ್ಲಿದ್ದನು. ದೇವತೆಗಳೂ ಋಷಿಗಳೂ ಸಹ ಅವನನ್ನು ಪಡೆಯುವ ಬಗೆ ಹೇಗೆ ಎಂದು ಯೋಚಿಸುತ್ತಿದ್ದರು. ಆಗ ವಾಗ್ದೇವಿಯು ಗಂಧರ್ವರ ಸ್ತ್ರೀವ್ಯಾಮೋಹವನ್ನು ಅರಿತು ತಾನು ಸುಂದರ ಸ್ತ್ರೀಯಾಗುವುದಾಗಿಯೂ ತನ್ನನ್ನು ಗಂಧರ್ವರಿಗರ್ಪಿಸಿ ಸೋಮನನ್ನು ಪಡೆಯಬಹುದೆಂದೂ ತಿಳಿಸಿದಳು. ಆಗ ದೇವತೆಗಳು ಅವಳನ್ನು ಬಿಟ್ಟಿರಲಿಷ್ಟಪಡಲಿಲ್ಲ. ಆಗ ಅವಳು ಪುನಃ ಅಪೇಕ್ಷಿತಳಾದಾಗ ಅವರನ್ನು ಸೇರುವುದಾಗಿ ಭರವಸೆಯನ್ನು ಕೊಟ್ಟಾಗ ಅವಳನ್ನು ನಗ್ನಸ್ತ್ರೀಯನ್ನಾಗಿ ಪರಿವರ್ತಿಸಿ ಗಂಧರ್ವರಿಗೆ ಒಪ್ಪಿಸಿ ಸೋಮನನ್ನು ಪಡೆದರು

ಎಂಬ ಕಥೆಯಿದೆ. ಈ ಗಂಧರ್ವಲೋಕವಾವುದು, ಸೂರ್ಯೆಯು ವಾಗ್ರೂಪದಲ್ಲಿ ಈ ಲೋಕವನ್ನು ಸೇರಿದಳು ಎಂದರ್ಥವೇನು ಎಂಬುದನ್ನೂ ಸಹ ೧೦-೮೫ ನೇ ಸೂಕ್ತದಲ್ಲಿ ತಿಳಿಸಿರುವುದು. ಈ ಸೂರ್ಯಾಗಂಧರ್ವರ ಸಂಬಂಧವನ್ನು Eggeling ಎಂಬ ಪಂಡಿತನು ಈ ರೀತಿ ಹೇಳಿದ್ದಾನೆ

The Rigvedic Gandharva was primarily wedded to the hypercosmic ಸೂರ್ಯಾ—the original immortal abode of Soma—and the wedding of king Soma who was derived from the Gandharva to ಸೂರ್ಯಾ—in other words, the return of the moon to the hypercosmic sphere of the nocturnal Sun—is the happy ending of the Gandharva's drama so tragically started. Soma's dying is not a death. for he is actually re-born through his union with ಸೂರ್ಯಾ ಈ ರೀತಿ ಸೋಮಪತ್ನಿಯೆಂದೂ, ಗಂಧರ್ವಪತ್ನಿಯೆಂದೂ, ಮೇಲೆ ವಿವರಿಸಿದಂತೆ ಒಂದೊಂದು ಸಲ ಸೂರ್ಯಪತ್ನಿಯೆಂದೂ, ಸೂರ್ಯೆಯ ಸಂಬಂಧವನ್ನು ತಿಳಿಸಿದೆ. ಅಶ್ವಿನೀದೇವತೆಗಳೇ ಸೂರ್ಯಾಚಂದ್ರಮಸ್ಸುಗಳೆಂದೂ ಹೇಳಿದೆ. ಪ್ರಕೃತವಾದ ಋಕ್ಕಿನಲ್ಲಿ **ಸೂರ್ಯಾಂ ವಹತುಂ** ಎಂದು ಅಶ್ವಿನೀದೇವತೆಗಳು ಸೂರ್ಯೆಯನ್ನು ತಮ್ಮ ತ್ರಿಚಕ್ರಾತ್ಮಕವಾದ ರಥದಲ್ಲಿ ಕುಳ್ಳಿರಿಸಿಕೊಳ್ಳುವ ವಿಷಯವು ತಿಳಿಸಲ್ಪಟ್ಟಿದೆ.

**ಅಪ್ಸು ಜಾತಾಃ**--ಪ್ರಕೃತವಾದ ಋಕ್ಕಿನಲ್ಲಿ ಅಪ್ ಶಬ್ದಕ್ಕೆ ಯಜ್ಞಕರ್ಮವೆಂದರ್ಥಮಾಡಿದೆ. **ಆಪಃ ಇತ್ಯಂತರಿಕ್ಷನಾಮ** (ನಿ ೨-೧೦) ಎಂದು ಸಾಯಣರು ನಿರುಕ್ತವಾಕ್ಯದ ಆಧಾರದ ಮೇಲೆ ೧-೯೫-೩ ಇತ್ಯಾದಿ ಕಡೆಗಳಲ್ಲಿ ಅಪ್ಸು ಎಂಬುದಕ್ಕೆ ಅಂತರಿಕ್ಷದಲ್ಲಿ ಎಂದರ್ಥಮಾಡಿದ್ದಾರೆ ೧-೧೦೪-೬ ಇತ್ಯಾದಿ ಋಕ್ಕುಗಳಲ್ಲಿ ಅಬ್ದೇವತೆಯೆಂದೇ ಅರ್ಥ. ಋ. ಸಂ ೧-೧೬೩-೪ ನೇ ಋಕ್ಕಿನಲ್ಲಿ **ಅಪ್ಸು ತ್ರೀಣಿ** ಎಂದಿರುವಾಗ **ಅಬುಪಜೀವಿತ್ವಾತ್ ಭೂಲೋಕೋಽಪಿ ಅಪ್‌ಶಬ್ದೇನಾಭಿಧೀಯತೇ** ಎಂದು ಅಪ್ ಶಬ್ದಕ್ಕೆ ಪೃಥ್ವಿಯೆಂದರ್ಥವನ್ನ ಹೇಳಿದೆ. ಅಲ್ಲದೇ **ಆಪಃ ಅಪ್ನಃ** ಇತ್ಯಾದಿ ೨೬ ಕರ್ಮನಾಮಗಳಲ್ಲಿಯೂ ಈ ಶಬ್ದವು ಪಠಿತವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ, ಯಜ್ಞಕರ್ಮವೆಂದರ್ಥ.

**ಕಕುಹಾಃ**—**ಕುಕುಹ** ಶಬ್ದವು ನಿರುಕ್ತದಲ್ಲಿ ಮಹನ್ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩) ಪ್ರಕೃತವಾದ ಋಕ್ಕಿನಲ್ಲಿ ಪೂಜ್ಯವಾದ ಸ್ತುತಿಗಳೆಂದರ್ಥ

॥ ವ್ಯಾಕರಣಪ್ರಕ್ರಿಯಾ ॥

**ಶ್ರಿಯೇ**—ಶ್ರಿಞ್ ಸೇವಾಯಾಂ ಧಾತು. **ಕ್ವಿಬ್ವಚಿಪ್ರಚ್ಛಿ**—(ಉ. ಸೂ, ೨-೨೫) ಎಂಬುದರಿಂದ ಕ್ವಿಪ್‌ಪ್ರತ್ಯಯ. ದೀರ್ಘ. ಚತುರ್ಥೀಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಇಷುಕೃತಾ ಇವ**—ಡುಕೃಞ್ ಕರಣೇ ಧಾತು ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯ ಪಿತಿ ಕೃತಿ ತುಕ್** (ಪಾ. ಸೂ. ೬-೧-೭೧) ಎಂಬುದರಿಂದ ತುಕಾಗಮ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ದ್ವಿವಚನಕ್ಕೆ **ಸುಪಾಂ ಸುಲುಕ್** ಎಂಬುದರಿಂದ ಆಕಾರಾದೇಶ. ಮುಂದೆ ಎರಡು ಶಬ್ದಗಳಲ್ಲಿಯೂ ಹೀಗೆ ಆಕಾರಾದೇಶ ಬರುತ್ತದೆ.

**ವಹತುಮ್**—ವಹ ಪ್ರಾಪಣೇ ಧಾತು **ತುಮುಣ್ಣುಲೌ**—(ಪಾ. ಸೂ. ೩.೩-೧೦) ಎಂಬುದರಿಂದ ತುಮುನ್ ಪ್ರತ್ಯಯ ವ್ಯತ್ಯಯದಿಂದ ಅದಕ್ಕೆ ಅಡಾಗಮ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಸೂರ್ಯಾಯಾಃ** — ಸೂರ್ಯಸ್ಯ ಇಯಂ ಸೂರ್ಯಾ, ತಸ್ಯಾಃ **ಸೂರ್ಯಾದ್ದೇವತಾಯಾಂ ಚಾಬ್ವಾಚ್ಯಃ** (ಪಾ. ಸೂ ೪-೧-೪೮-೨) ಎಂಬುದರಿಂದ ದೇವತಾರೂಪಾರ್ಥತೋರುವುದರಿಂದ ಟಾಪ್ ಪ್ರತ್ಯಯ. **ಕರ್ತೃಕರ್ಮಣೋಃ ಕೃತಿ** (ಪಾ. ಸೂ. ೨-೩-೬೫) ಎಂಬುದರಿಂದ ಕರ್ಮಾರ್ಥದಲ್ಲಿ ಷಷ್ಠೀ ಬಂದಿದೆ.

**ವಚ್ಯಂತೇ**—ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು ಕರ್ಮಣಿಯಲ್ಲಿ ಲಟ್. **ಸಾರ್ವಧಾತುಕೇ ಯಕ್** (ಪಾ. ಸೂ. ೩-೧-೬೭) ಎಂಬುದರಿಂದ ಯಕ್. **ಬ್ರುವೋ ವಚಿಃ** (ಪಾ. ಸೂ. ೨-೪-೫೩) ಸೂತ್ರದಿಂದ ಆರ್ಧಧಾತುಕಯಕ್ ಪರದಲ್ಲಿರುವುದರಿಂದ ಧಾತುವಿಗೆ ವಚ್ಯಾದೇಶ, ಯಕ್ ಕಿತ್ತಾದುದರಿಂದ **ವಚಿಸ್ವಪಿಯಜಾ**-(ಪಾ. ಸೂ. ೬-೧-೧೫) ಎಂಬುದರಿಂದ ವಕಾರಕ್ಕೆ ಸಂಪ್ರಸಾರಣ ಉಕಾರಾದೇಶ. **ಸಂಪ್ರಸಾರಣಾಚ್ಚ** ಎಂಬಲ್ಲಿ **ವಾ ಛಂದಸಿ** (ಪಾ. ಸೂ. ೬-೧-೧೦೬) ಎಂಬುದರಿಂದ ಪರಕ್ಕೆ ಪೂರ್ವರೂಪ ಬರುವುದಿಲ್ಲ. ಅಚ್ ಪರದಲ್ಲಿರುವುದರಿಂದ **ಇಕೋ ಯಣಚಿ** ಎಂಬುದರಿಂದ ಉಕಾರಕ್ಕೆ ವಕಾರರೂಪ, ಯಣಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತ ಸ್ವರ ಬರುವುದಿಲ್ಲ. ಯಕ್‌ಸ್ವರ ಉಳಿಯುತ್ತದೆ.

**ಜೂರ್ಣಾ ಇವ**—ಜ್ಯಾಷ್ ವಯೋಹಾನೌ ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಕರ್ಮಣಿಯಲ್ಲಿ ಕ್ತ ಪ್ರತ್ಯಯ- **ಶ್ರ್ಯುಕಃ ಕಿತಿ** (ಪಾ. ಸೂ. ೭-೨-೧೧) ಎಂಬುದರಿಂದ ಏಕಾಚಾದುದರಿಂದ ಇಡಾಗಮನಿಷೇಧ ಬರುತ್ತದೆ. **ಬಹುಲಂ ಛಂದಸಿ** ಎಂಬುದರಿಂದ ಉತ್ವ. ರಪರವಾಗಿ ಬರುತ್ತದೆ. **ಹಲಿಚ** (ಪಾ. ಸೂ. ೮-೨-೭೭) ಎಂಬುದರಿಂದ ರೇಫಾಂತ ಉಪಧೆಗೆ ದೀರ್ಘ. **ರದಾಭ್ಯಾಂ ನಿಷ್ಠಾತಃ**-(ಪಾ. ಸೂ. ೮-೨-೪೨) ಎಂಬುದರಿಂದ ರೇಫದ ಪರದಲ್ಲಿ ನಿಷ್ಠಾತಕಾರ ಬಂದುದರಿಂದ ನತ್ವ. **ರಷಾಭ್ಯಾಂ**—ಸೂತ್ರದಿಂದ ಣತ್ವ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ನಪುಂಸಕ ಬಹುವಚನದಲ್ಲಿ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

---:o:---

ಸಂಹಿತಾಪಾಠಃ

**ಅಸ್ಮೇ ಸಾ ವಾಂ ಮಾಧ್ವೀ ರಾತಿರಸ್ತು ಸ್ತೋಮಂ ಹಿನೋತಂ ಮಾನ್ಯಸ್ಯ ಕಾರೋಃ ।**

**ಅನು ಯದ್ವಾಂ ಶ್ರವಸ್ಯಾ ಸುದಾನೂ ಸುವೀರ್ಯಾಯ ಚರ್ಷಣಯೋ ಮದಂತಿ ॥ ೪ ॥**

ಪದಪಾಠಃ

**ಅಸ್ಮೇ ಇತಿ । ಸಾ । ವಾಂ । ಮಾಧ್ವೀ ಇತಿ । ರಾತಿಃ । ಅಸ್ತು । ಸ್ತೋಮಂ । ಹಿನೋತಂ । ಮಾನ್ಯಸ್ಯ । ಕಾರೋಃ ।**

ಅನು । ಯತ್ । ವಾಂ । ಶ್ರವಸ್ಯಾ । ಸುದಾನೂ ಇತಿ ಸುऽದಾನೂ । ಸುऽವೀರ್ಯಾಯ । ಚರ್ಷಣಯಃ ।

ಮದಂತಿ ॥ ೪ ॥

ಸಾಯಣಭಾಷ್ಯಂ

ಹೇ ಮಾಧ್ವೀ ಮಧುಪೂರ್ಣಪಾತ್ರಯುಕ್ತಾವಶ್ವಿನೌ ವಾಂ ಯುವಯೋಃ ಸಂಬಂಧಿನೀ ಸಾ ಪ್ರಸಿದ್ಧಾ ರಾತಿರ್ದಾನಮಸ್ಮೇ ಅಸ್ಮಾಕಮಸ್ತು ಭವತು । ತದರ್ಥಂ ಮಾನ್ಯಸ್ಯ ಮನನೀಯಸ್ಯ ಕಾರೋಃ ಸ್ತೋತುರಗಸ್ತ್ಯಸ್ಯ ಸ್ತೋಮಂ ಸ್ತುತಿಂ ಹಿನೋತಂ। ಪ್ರೀಣಯತಂ । ಹೇ ಸುದಾನೂ ಶೋಭನಫಲದಾನೌ ವಾಂ ಯುವಾಂ ಶ್ರವಸ್ಯಾ ಕೀರ್ತೇರನ್ನಸ್ಯ ವೇಚ್ಛಯಾ ಯದ್ಯಸ್ಮಾತ್ಸುವೀರ್ಯಾಯ ಯಜಮಾನಾಯ ಶೋಭನಬಲಾಯ ವಾ ಚರ್ಷಣಯೋ ಮನುಷ್ಯಾ ಋತ್ವಿಗ್ರೂಪಾ ಅನು ಮದಂತಿ । ಅನುಕ್ರಮೇಣ ಮಾದ್ಯಂತಿ ಯುವಾಭ್ಯಾಂ ಸಹ ಸ್ವಯಂ ವಾ ॥

ಪ್ರತಿಪದಾರ್ಥ

ಸುದಾನೂ—ಶೋಭನಾತ್ಮಕವಾದ ಫಲಗಳನ್ನು ಕೊಡತಕ್ಕ ಎಲೈ ಅಶ್ವಿನೀದೇವತೆಗಳೇ । ಯತ್--ಯಾವ ನಿಮಿತ್ತವಾಗಿ । ಚರ್ಷಣಯಃ—ಋತ್ವಿಗ್ರೂಪರಾದ ಮಾನವರು । ಸುವೀರ್‍ಯಾಯ—(ಯಜಮಾನನಿಗಾಗಿ ಅಥವಾ) ಶ್ರೇಷ್ಠವಾದ ಫಲಕ್ಕಾಗಿಯೂ । ಶ್ರವಸ್ಯಾ—ಅನ್ನೇಚ್ಛೆಯಿಂದಲೂ । ವಾಂ—ನಿಮ್ಮಿಬ್ಬರನ್ನೂ । ಅನು ಮದಂತಿ—ಕ್ರಮವಾಗಿ ತೃಪ್ತಿಪಡಿಸುತ್ತಾರೆಯೋ (ಆದ್ದರಿಂದ) । ಮಾನ್ಯಸ್ಯ—ಸಂಭಾವಿತನೂ । ಕಾರೋಃ—ಸ್ತುತಿಕರ್ತನೂ ಆದ ಅಗಸ್ತ್ಯನ । ಸ್ತೋಮಂ—ಸ್ತುತಿಯನ್ನು । ಹಿನೋತಂ—ಕೇಳಿ ತೃಪ್ತಿಪಡಿರಿ । ಮಾಧ್ವೀ—ಮಧುಪೂರ್ಣವಾದ ಪಾತ್ರೆಯಿಂದ ಕೂಡಿದ ಎಲೈ ಅಶ್ವಿನೀದೇವತೆಗಳೇ । ವಾಂ-ನಿಮ್ಮಿಂದ ಬರತಕ್ಕದ್ದೂ । ಸಾ—ಪ್ರಸಿದ್ಧವಾದುದೂ ಆದ । ರಾತಿಃ—ದಾನವು । ಅಸ್ಮೇ—ನಮಗೆ । ಅಸ್ತು—ಇರಲಿ.

ಭಾವಾರ್ಥ

ಶೋಭನಾತ್ಮಕವಾದ ಫಲಗಳನ್ನು ಕೊಡತಕ್ಕ ಎಲೈ ಅಶ್ವಿನೀದೇವತೆಗಳೇ, ಯಾವಕಾರಣದಿಂದ ಋತ್ವಿಗ್ರೂಪರಾದ ಮಾನವರು ಶ್ರೇಷ್ಠವಾದ ಫಲಕ್ಕಾಗಿಯೂ, ಅನ್ನೇಚ್ಛೆಯಿಂದಲೂ ಕ್ರಮವಾಗಿ ನಿಮ್ಮಿಬ್ಬರನ್ನೂ ತೃಪ್ತಿಪಡಿಸುತ್ತಾರೆಯೋ ಆದ್ದರಿಂದ ಸಂಭಾವಿತನೂ, ಸ್ತುತಿಕರ್ತನೂ ಆದ ಅಗಸ್ತ್ಯನ ಸ್ತುತಿಯನ್ನು ಕೇಳಿ ತೃಪ್ತಿಪಡಿರಿ. ಮಧುಪೂರ್ಣವಾದ ಪಾತ್ರೆಯಿಂದ ಕೂಡಿದ ಎಲೈ ಅಶ್ವಿನೀದೇವತೆಗಳೇ, ನಿಮ್ಮಿಂದ ದತ್ತವಾಗತಕ್ಕದ್ದೂ ಪ್ರಸಿದ್ಧವಾದುದೂ ಆದ ದಾನವು ನಮಗಿರಲಿ

English Translation

Receivers of ihe oblation, may your liberality be displayed towards us : be pleased with the hymn of the venerable author, so that men may honour the institutor of the ceremony, as (they honour) you, liberal donors, for the sake of renown.

### ವಿಶೇಷವಿಷಯಗಳು

**ಸುದಾನೂ—ಶೋಭನಫಲದಾನೌ,** ಮಂಗಳಾತ್ಮಕವಾದ ಫಲಗಳನ್ನು ದಾನಮಾಡತಕ್ಕವರು ಎಂದು ಅಶ್ವಿನೀದೇವತೆಗಳ ಗುಣವನ್ನು ಪ್ರಶಂಸಿಸಿದೆ. **ದಾನು**ಶಬ್ದವು **ರಸ**ವೆಂಬರ್ಥದಲ್ಲಿ ಅನೇಕ ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟಿದೆ. **ಸುದಾನವಃ** ಎಂಬುದಕ್ಕೆ **ರಸಭರಿತರು** ಅಥವಾ **ರಸದಾತರು** ಎಂಬರ್ಥವೂ ಉಂಟು. ಈ ಪದವು ಮರುತ್ತುಗಳಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಾಗ ಸಾಧಾರಣವಾಗಿ **ರಸದಾತರು** ಎಂದರೆ ಉತ್ತಮವಾದ ವೃಷ್ಟ್ಯುದಕವನ್ನು ಸುರಿಸುವವರು ಎಂದರ್ಥವಾಗುತ್ತದೆ.

**ಪಿನ್ವಂತ್ಯಪೋ ಮರುತಃ ಸುದಾನವಃ ಪಯೋ ಘೃತವದ್ವಿದಥೇಷ್ವಾಭುವಃ ।**

(ಋ. ಸಂ. ೧-೬೪-೬)

ಇತ್ಯಾದ್ಯನೇಕ ಕಡೆಗಳಲ್ಲಿ ಮರುತ್ತುಗಳಿಗೆ ವಿಶೇಷಣವಾಗಿ ಮೇಲಿನ ಅರ್ಥವನ್ನು ಕೊಡುತ್ತದೆ. ಮತ್ತು ಉದಾರವಾದ ದಾನವು ದೇವತೆಗಳ ಕಾರ್ಯವೇ ಅಲ್ಲದೆ ಯಜ್ಞಕರ್ತರ ಗುಣವಾಗಿಯೂ ಇರಬಹುದು.

**ಇಷಂ ಪೃಂಚಂತಾ ಸುಕೃತೇ ಸುದಾನವ ಆ ಬರ್ಹಿಃ ಸೀದತಂ ನರಾ ।**

(ಋ. ಸಂ. ೧-೪೭-೮)

**ಸೇದಗ್ನೇ ಅಸ್ತು ಸುಭಗಃ ಸುದಾನುರ್ಯಸ್ತ್ವಾ ನಿತ್ಯೇನ ಹವಿಷಾ ಯ ಉಕ್ಥೈಃ ।**

(ಋ. ಸಂ. ೪-೪-೭)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಶ್ರೇಷ್ಠವಾದ ದಾನಿಗಳೆಂದು ಯಜ್ಞಕರ್ತರಿಗೆ ವಿಶೇಷಣವಾಗಿದೆ. ೧೮-೪೩-೭ ಇತ್ಯಾದಿ ಋಕ್ಕುಗಳಲ್ಲಿ ದಾನು ಶಬ್ದಕ್ಕೆ ಸೋಮರಸವೆಂದೂ ಅರ್ಥವಾಗಬಹುದು. ಅಲ್ಲದೇ,

**ಉತ್ತರಾ ಸೂರಧರಃ ಪುತ್ರ ಆಸೀದ್ದಾನುಃ ಶಯೇ ಸಹವತ್ಸಾ ನ ಧೇನುಃ ।**

(ಋ. ಸಂ. ೧-೩೨-೯)

ಇತ್ಯಾದಿ ಋಕ್ಕುಗಳಲ್ಲಿ **ದಾನು** ಶಬ್ದಕ್ಕೆ ವೃತ್ರಮಾತೆಯಾದ ಅಸುರಸ್ತ್ರೀಯೆಂದರ್ಥವಾಗುತ್ತದೆ. ಈ ಪದದ ವಿಶೇಷಾರ್ಥವನ್ನು **ಜೀರದಾನು** ಎಂಬ ಪದದ ನಿರ್ವಚನವನ್ನೂ, ವಿಶೇಷಪ್ರಯೋಗಗಳನ್ನೂ ಹಿಂದೆಯೇ ತಿಳಿಸಿದೆ

**ಚರ್ಷಣಯೋಃ**— ಋ. ಸಂ. ೧-೧೯-೫ನೇ ಋಕ್ಕಿನಲ್ಲಿರುವ **ಚರ್ಷಣೀ** ಶಬ್ದಕ್ಕೆ ಅರ್ಥವನ್ನು ವಿವರಿಸುವಾಗ ಸಾಯಣರು **ಸರ್ವಸ್ಯ ದ್ರಷ್ಟಾರೌ ಇಂದ್ರಾಗ್ನೀ** ಎಂದರ್ಥಮಾಡಿದ್ದಾರೆ. ಸ್ಕಂದಸ್ವಾಮಿಗಳೂ ಈ ಅರ್ಥವನ್ನು ಮೊದಲು ಹೇಳಿ ಅನಂತರ **ಮನುಷ್ಯನಾಮ ವಾ ಚರ್ಷಣೀಶಬ್ದಃ** (ನಿ ೩-೭) **ಮನುಷ್ಯಾಕಾರೌ ವಾ ದ್ರಷ್ಟಾರೌ ವಾ ಸರ್ವಾರ್ಥಾನಾಂ । ಚರ್ಷಣಿಶಬ್ದವು** ಮನುಷ್ಯನಾಮಗಳಲ್ಲಿ ಪಠಿತವಾಗಿರುವುದರಿಂದ ಮಾನವಾಕಾರದಲ್ಲಿ ಎಲ್ಲವನ್ನೂ ನೋಡತಕ್ಕವರು ಎಂದಾದರೂ ಆಗಬಹುದೆಂದರ್ಥಮಾಡಿದ್ದಾರೆ. ಪುನಃ ೧-೧೯-೬ ನೇ ಋಕ್ಕಿನಲ್ಲಿ **ಚರ್ಷಣಿ** ಶಬ್ದಕ್ಕೆ ಸಾಯಣರು ಮಾನವರೆಂದೇ ಅರ್ಥಮಾಡಿದ್ದಾರೆ.

Monier Williams ಎಂಬ ಪಂಡಿತನು ಕೃಷ್ ಎಂಬ ಧಾತುವಿನಿಂದ ನಿಷ್ಪನ್ನವಾದುದೆಂದೂ, Griffith ಎಂಬುವನು ಚರ್ ಎಂಬ ಧಾತುವಿನಿಂದ ನಿಷ್ಪನ್ನವಾದುದೆಂದೂ ತಿಳಿಸಿದ್ದಾರೆ. ಇದರ ವಿವರಣೆಯನ್ನು ಋಗ್ವೇದ ಸಂಹಿತಾ ಭಾಗ ೨ ಮತ್ತು ಪುಟ ೪ ರಲ್ಲಿ ವಿವರವಾಗಿ ತಿಳಿಸಿದೆ.

**ಮಾನ್ಯಸ್ಯ**—ಈ ಪದದ ವಿಶೇಷಾರ್ಥವನ್ನು ಋಗ್ವೇದಸಂಹಿತೆಯ ೧೨ನೇ ಭಾಗದಲ್ಲಿ (ಪುಟ 725) ಸೂಕ್ಷ್ಮವಾಗಿ ತಿಳಿಸಿದೆ. ಅಲ್ಲಿ ಎಂದರೆ ಋ ಸಂ. ೧-೧೬೫-೧೫ನೇ ಋಕ್ಕಿನಲ್ಲಿರುವ ಪದಕ್ಕೆ ಸಾಯಣರು ಪೂಜ್ಯನೆಂದರ್ಥ ಮಾಡಿದ್ದಾರೆ. ಮತ್ತು ಅಗಸ್ತ್ಯನಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. ಬೃಹದ್ದೇವತೆಯಲ್ಲಿ ಅಗಸ್ತ್ಯನ ಉತ್ಪತ್ತಿಯ ಕ್ರಮವನ್ನು ತಿಳಿಸುವಾಗ ಈ ರೀತಿ ಹೇಳಿದೆ—

**ಮಾನೇನ ಸಮ್ಮಿತೋ ಯಸ್ಮಾತ್ ತಸ್ಮಾನ್ಮಾನ್ಯ ಇಹೋಚ್ಯತೇ ।**
**ಯದ್ವಾ ಕುಂಭಾದೃಷಿರ್ಜಾತಃ ಕುಂಭೇನಾಪಿ ಹಿ ಮೀಯತೇ ॥**

(ಬೃ. ದೇ- ೫-೧೫೩)

ಪೂಜಾರ್ಹನಾಗಿರುವುದರಿಂದಲೂ ಅಥವಾ **ಮಾನ** (ಅಳತೆ) ದ ಪ್ರಕಾರವನ್ನು ತಿಳಿಸುವ ಕುಂಭದಲ್ಲಿ ಉತ್ಪನ್ನನಾದುದರಿಂದ ಎಂದರೆ ಕುಂಭರೂಪವಾದ ಮಾನದಲ್ಲಿ ಉತ್ಪನ್ನನಾದುದರಿಂದಲೂ ಅಗಸ್ತ್ಯನಿಗೆ ಮಾನ್ಯನೆಂದು ಹೆಸರು ಪ್ರಸಿದ್ಧವಾಗಿದೆಯೆಂದು ಹೇಳಬಹುದು ಎಂದು ತಿಳಿಸಿದೆ ಅಗಸ್ತ್ಯನಿಗೆ **ಮಾಂದಾರ್ಯಸ್ಯ, ಮಾನ್ಯಸ್ಯ** ಎಂಬ ವಿಶೇಷಣಗಳು ಅನೇಕಕಡೆಗಳಲ್ಲಿವೆ. Max Muller ಎಂಬ ಪಂಡಿತನು ೧-೧೬೫-೧೫ನೇ ಋಕ್ಕಿಗೆ ಅರ್ಥವನ್ನು ವಿವರಿಸುವಾಗ ಈ ರೀತಿ ತಿಳಿಸಿದ್ದಾನೆ-

I translate ಮಾನ್ಯ, the son of ಮಾನ, because the poet is so called in I-189-8 is in all probability the same as our ಮಾಂದಾರ್ಯ, ಮಾನ್ಯ. But it may also be ಮಾನ್ಯ, descendant of ಮಾಂದಾರಿ.

(S. B. E XXXII. P. 206)

**ಮಾನ** ಎಂಬ ಅಂಕಿತನಾಮವು ಒಂದು ಸಂತತಿಯ ಮೂಲಪುರುಷನ ಹೆಸರು ಎಂದು ಆಂಗ್ಲ ಪಂಡಿತರು ಅಭಿಪ್ರಾಯಪಡುತ್ತಾರೆ. ಉದಾಹರಣೆಗೆ Keith ಎಂಬುವನೂ ಸಹ ಈ ರೀತಿ ತಿಳಿಸಿದ್ದಾನೆ.-

ಮಾನ is the name of man occuring in several passages of the Rig-veda. In one place, express mention is made of his son (ಸೂನು) by whom ಅಗಸ್ತ್ಯ must have been meant. In another passage, apparently the same meaning applies to ಮಾನ — ie. ಅಗಸ್ತ್ಯ as ಮಾನ.
[ Index to Vedic names and subjects by Madconell & Keith. Vol. II. p. 152.]
ಎಂದರೆ,

**ಅವೋಚಾಮ ನಿವಚನಾನ್ಯಸ್ಮಿನ್ಮಾನಸ್ಯ ಸೂನುಃ ಸಹಸಾನೇ ಅಗ್ನೌ ॥**
**ವಯಂ ಸಹಸ್ರಮೃಷಿಭಿಃ ಸನೇಮ ವಿದ್ಯಾಮೇಷಂ ವೃಜನಂ ಜೀರದಾನುಂ ॥**

(ಋ. ಸಂ. ೧-೧೮೯-೮)

ಎಂಬ ಋಕ್ಕಿನಲ್ಲಿ ಮಾನಸ್ಯ ಸೂನುಃ ಎಂದರೆ ಮಾನ ಎಂಬ ಋಷಿಪುತ್ರನಾದ ಅಗಸ್ತ್ಯ ಎಂಬುದಾಗಿ ಆಂಗ್ಲಪಂಡಿತರ ಅಭಿಪ್ರಾಯವು. ಆದರೆ, ಸಾಯಣರು ಇದೇ ಋಕ್ಕಿನಲ್ಲಿ ಈ ಪದಕ್ಕೆ ಅರ್ಥವನ್ನು ಹೇಳುವಾಗ ಈ ರೀತಿ ವ್ಯಾಖ್ಯಾನ ವನ್ನು ಮಾಡಿದ್ದಾರೆ.

ಮಾನಸ್ಯ ಸೂನುಃ; ಮೀಯತೆ ಇತಿ ಮಾನಃ ಮಂತ್ರಃ । ತಸ್ಯಸೂನುಃ ಅಗ್ನಿಃ ಮಂತ್ರೇಣಉತ್ಪಾ-
ದ್ಯಮಾನತ್ವಾತ್ । ಮಾನಸ್ಯ ಸೂನೌ ಅಗ್ನೌ ॥

(ಋ. ಭಾ. ೧-೧೮೯-೮)

ಮಾನವೆಂದರೆ ಮಂತ್ರ. ಇದರ ಮಗ ಅಗ್ನಿ. ಆದುದರಿಂದ ಮಾನಸ್ಯ ಸೂನುಃ ಎಂದರೆ ಅಗ್ನಿಯೆಂದರ್ಥ, ಎಂದು ವಿವರಿಸಿದ್ದಾರೆ. ಇದರಂತೆಯೇ,

ಸತ್ರೇ ಹ ಜಾತಾವಿಷಿತಾ ನಮೋಭಿಃ ಕುಂಭೇ ರೇತಃ ಸಿಷಿಚತುಃ ಸಮಾನಂ ।
ತತೋ ಹ ಮಾನ ಉದಿಯಾಯ ಮಧ್ಯಾತ್ತತೋ ಜಾತಮೃಷಿಮಾಹುರ್ವಸಿಷ್ಠಂ ॥

(ಋ. ಸಂ. ೭-೩೩-೧೩)

ಎಂಬಲ್ಲಿಯೂ ಸಹ ಅಗಸ್ತ್ಯನೆಂದೇ ಅರ್ಥವಾದರೂ ಸಹ ಮಾನ ಎಂಬುದಕ್ಕೆ ಸಾಯಣರು ಅಂಕಿತನಾಮವೆಂದು ತಿಳಿಸಿಲ್ಲ. ಆದುದರಿಂದ ಮಾನ್ಯಸ್ಯ ಎಂಬ ಪದವಿರುವಾಗಲೆಲ್ಲಾ ಆಂಗ್ಲ ಪಂಡಿತರು ಅರ್ಥಮಾಡುವುದಕ್ಕೂ ಸಾಯಣರು ವಿವರಿಸುವುದಕ್ಕೂ ವ್ಯತ್ಯಾಸವಿದ್ದೇ ಇರುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಮಾನಪುತ್ರನಾದ ಅಗಸ್ತ್ಯ ನೆಂದಾಗಲಿ ಅಥವಾ ಸಂಭಾವಿತನೂ ಪೂಜ್ಯನೂ ಆದ ಅಗಸ್ತ್ಯನೆಂದಾಗಲಿ ಅರ್ಥವಾಗುತ್ತದೆ.

ಕಾರೋಃ—ಸ್ತೋತುಃ ಅಗಸ್ತ್ಯಸ್ಯ । ಸ್ತುತಿಕರ್ತನಾದ ಅಗಸ್ತ್ಯನ ಎಂದರ್ಥಮಾಡಿದೆ. ನಿರುಕ್ತಕಾರರ್ರು ಕಾರುಶಬ್ದವನ್ನುಸ್ತೋತ್ರ ನಾಮುಗಳಲ್ಲಿ ಪಠಿಸಿದ್ದಾರೆ. (ನಿ, ೩-೧೯) ಬೃಹದ್ದೇವತಾಕಾರರು ಈ ಪದವನ್ನು ಕವಿಗಳು, ಸೂಕ್ತದ್ರಷ್ಟೃಗಳಾದ ಋಷಿಗಳು ಎಂಬರ್ಥದಲ್ಲಿ ಉಪಯೋಗಿಸಿದ್ದಾರೆ.

ಅಗ್ನೇಸ್ತು ಯಾನಿ ಸೂಕ್ತಾನಿ ಪಂಚನಾಮಾನಿ ಕಾರವಃ ।
ಷಡ್ತ್ರಿಂಶತಿಸ್ತಥೇಂದ್ರಸ್ಯ ಪ್ರಾಹುಃ ಸೂರ್ಯಸ್ಯ ಸಪ್ತ ಚ ॥

(ಬೃ. ದೇ. ೨-೨೨)

ಪೃಥಕ್ತ್ವೇನ ಸಮಾಸೈಸ್ತು ಯಜ್ಞೇ ಯಚ್ಛಸ್ಯತೇ ನೃಭಿಃ ।
ಸ್ತುವಂತ್ಯಾಪ್ರೀಷು ತೇನೇಮಂ ನರಾಶಂಸಂ ತು ಕಾರವಃ ॥

(ಬೃ. ದೇ. ೨-೨೮)

ಎಂಬ ವಾಕ್ಯಗಳಲ್ಲಿ ಕಾರುಗಳು ಸ್ತುತಿಸುತ್ತಾರೆ ಎಂದು ಕವಿಪರ್ಯಾಯವಾದ ಪದವಾಗಿ ಉಪಯೋಗಿಸುತ್ತಾರೆ. ಋಕ್ಸಂಹಿತೆಯಲ್ಲಿಯೂ ಸಹ,

ಪ್ರದಕ್ಷಿಣಿದಭಿ ಗೃಣಂತಿ ಕಾರವೋ ವಯೋ ವದಂತ ಋತುಥಾ ಶಕುಂತಯಃ ।

(ಋ. ಸಂ. ೨-೪೩-೧)

ಇತ್ಯಾದಿಋಕ್ಕುಗಳಲ್ಲೂ ಕವಿಯೆಂಬರ್ಥದಲ್ಲಿ ಈ ಪದದ ಪ್ರಯೋಗವಿರುವುದನ್ನು ಹಿಂದೆ ವಿಸ್ತಾರವಾಗಿ ತಿಳಿಸಿದೆ.

### ವ್ಯಾಕರಣಪ್ರಕ್ರಿಯಾ

**ಅಸ್ಮೇ—ಸುಪಾಂ ಸುಲುಕ್**—ಸೂತ್ರದಿಂದ ಷಷ್ಠೀ ಬಹುವಚನಕ್ಕೆ ಶೇ ಆದೇಶ

**ಮಾಧ್ವೀ—ಮಧೋರಞ್ ಚ** (ಪಾ. ಸೂ. ೪-೧೫೯) ಎಂಬುದರಿಂದ ಮತ್ವರ್ಥದಲ್ಲಿ ಮಧು ಶಬ್ದದ ಮೇಲೆ ಅಞ್ ಪ್ರತ್ಯಯ. ಇದು ಪರವಾದಾಗ **ಋತ್ವ್ಯವಾಸ್ತ್ವ್ಯ**—(ಪಾ ಸೂ. ೬-೪-೧೭೫) ಎಂಬುದರಿಂದ ಗುಣಕ್ಕೆ ಅಪವಾದವಾಗಿ ಯಣಾದೇಶವು ನಿಪಾತಿತವಾಗಿದೆ. ಆಮಂತ್ರಿತನಿಘಾತಸ್ವರ ಬರುತ್ತದೆ.

**ರಾತಿಃ—ಮಂತ್ರೇವೃಷೇಷಪಚ**—(ಪಾ. ಸೂ. ೩-೩-೯೬) ಕ್ತಿನ್ ಪ್ರತ್ಯಯವು ಉದಾತ್ತವಾಗುತ್ತದೆ.

**ಹಿನೋತಮ್**—ಹಿ ಗತೌ ವೃದ್ಧೌ ಚ ಧಾತು. ಸ್ವಾದಿ. ಲೋಟ್ ಮಧ್ಯಮಪುರುಷ ದ್ವಿವಚನಕ್ಕೆ **ತಸ್ತಸಪ್ತನ**—(ಪಾ. ಸೂ. ೭-೧-೪೫) ಎಂಬುದರಿಂದ ತಬಾದೇಶ. **ಸ್ವಾದಿಭ್ಯಃಶ್ನುಃ** (ಪಾ. ಸೂ. ೩-೧-೭೩) ಎಂಬುದರಿಂದ ಶ್ನು ವಿಕರಣ. ಪ್ರತ್ಯಯ ಪಿತ್ತಾದುದರಿಂದ ಅದಕ್ಕೆ ಗುಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

**ಕಾರೋಃ**—ಡುಕೃಞ್ ಕರಣೇ ಧಾತು **ಕೃವಾಪಾ**—(ಉ. ಸೂ ೧-೧) ಎಂಬುದರಿಂದ **ಉಣ್** ಪ್ರತ್ಯಯ. ಅಚೋಞ್ಣಿತಿ ಎಂಬುದರಿಂದ ಋಕಾರಕ್ಕೆ ವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಶ್ರವಸ್ಯಾ**--ಶ್ರವಃ ಆತ್ಮನಃ ಇಚ್ಛತಿ ಶ್ರವಸ್ಯತಿ. **ಸುಪಆತ್ಮನಃಕ್ಯಚ್** (ಪಾ. ಸೂ. ೩-೧ ೮) ಎಂಬುದರಿಂದ ಕ್ಯಚ್. **ಅಪ್ರತ್ಯಯಾತ್** ಎಂಬುದರಿಂದ ಕ್ಯಜಂತದ ಮೇಲೆ ಅಕಾರ ಪ್ರತ್ಯಯ. ಸ್ತ್ರೀತ್ವದಲ್ಲಿ ಟಾಪ್. ತೃತೀಯಾ ಏಕವಚನ ಪರವಾದಾಗ **ಸುಪಾಂ ಸುಲುಕ್** - ಎಂಬುದರಿಂದ ಪೂರ್ವಸವರ್ಣದೀರ್ಘ

**ಸುವೀರ್ಯಾಯ**—ಶೋಭನಂ ವೀರ್ಯಂ ಯಸ್ಯ ಸಃ ತಸ್ಮೈ. **ವೀರ್ಯವೀರ್ಯೌಚ** (ಪಾ. ಸೂ. ೬-೨-೧೨೦) ಎಂಬುದರಿಂದ ಸುಸ್ವರಕ್ಕೆ ಬಾಧಕವಾಗಿ ಉತ್ತರ ಪದಾದ್ಯುದಾತ್ತಸ್ವರ ಬರುತ್ತದೆ. **ಚತುರ್ಥೀ** ಏಕ ವಚನಾಂತರೂಪ.

**ಚರ್ಷಣಯಃ**—ಕೃಷ ವಿಲೇಖನೇ. ಧಾತು. **ಕೃಷೇರಾದೇಶ್ಚಚಃ** (ಉ. ಸೂ. ೨-೬೧) ಎಂಬುದರಿಂದ ಅನಿ ಪ್ರತ್ಯಯ. ಆದಿಯ ಕಕಾರಕ್ಕೆ ಚಕಾರಾದೇಶ. ಪ್ರತ್ಯಯನಿಮಿತ್ತವಾಗಿ ಧಾತು ಋಕಾರಕ್ಕೆ ಗುಣ. **ಅಟ್-ಕುಪ್ವಾಙ್**—ಎಂಬುದರಿಂದ ಪ್ರತ್ಯಯ ನಕಾರಕ್ಕೆ ಣತ್ವ ಪ್ರಥಮಾ ಬಹುವಚನಾಂತರೂಪ

**ಮದಂತಿ**—ಮದೀ ಹರ್ಷಗ್ಲೇಪನಯೋಃ ಧಾತು. ಲಟ್‌ಪ್ರಥಮಪುರುಷ ಬಹುವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರಬರುವುದಿಲ್ಲ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದ ರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

———:o:———

ಸಂಹಿತಾಪಾಠಃ

ಏಷ ವಾಂ ಸ್ತೋಮೋ ಅಶ್ವಿನಾವಕಾರಿ ಮಾನೇಭಿರ್ಮಘವಾನಾ ಸುವೃಕ್ತಿ।
ಯಾತಂ ವರ್ತಿಸ್ತನಯಾಯ ತ್ಮನೇ ಚಾಗಸ್ತ್ಯೇ ನಾಸತ್ಯಾ ಮದಂತಾ ॥ ೫ ॥

ಪದಪಾಠಃ

ಏಷಃ । ವಾಂ । ಸ್ತೋಮಃ । ಅಶ್ವಿನೌ । ಅಕಾರಿ । ಮಾನೇಭಿಃ । ಮಘsವಾನಾ । ಸುsವೃಕ್ತಿ ।
ಯಾತಂ । ವರ್ತಿಃ । ತನಯಾಯ । ತ್ಮನೇ । ಚ । ಅಗಸ್ತ್ಯೇ । ನಾಸತ್ಯಾ । ಮದಂತಾ ॥ ೫ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಹೇ ಮಘವಾನಾ ಹವಿರ್ಲಕ್ಷಣಾನ್ನವಂತೌ ವಾಂ ಯುವಾಭ್ಯಾಮೇಷ ಸ್ತೋಮಃ ಸ್ತೋತ್ರಂ ಸುವೃಕ್ತಿ ಸುಷ್ಠು ಪಾಪವರ್ಜನಂ ಯಥಾ ಭವತಿ ತಥಾ ಯದ್ವಾ ಸುಸಮಾಪ್ತ್ಯಕಾರಿ । ಕೃತಃ । ಕೀದೃಶೋsಯಂ । ಮಾನೇಭಿರ್ಮಾನ್ಯೈರ್ಹವಿಷ್ಪ್ರದಾನರೂಪೈಃ ಸಹಿತಃ । ಹೇ ನಾಸತ್ಯಾಸತ್ಯರಹಿತೌ ಯುವಾಮಗಸ್ತ್ಯ ಏತನ್ನಾಮ್ನಿ ಮಹರ್ಷೌ ಮಯಿ ಮದಂತಾ ಮಾದ್ಯಂತೌ ಸಂತೌ ವರ್ತಿರ್ಗೃಹಂ ಯಜ್ಞಸಂಬಂಧಿ ಯಾತಂ । ಪ್ರಾಪ್ನುತಂ । ಕಿಮರ್ಥಂ । ತನಯಾಯ ಪುತ್ರಾದಿಲಾಭಾಯ ತ್ಮನ ಆತ್ಮನೇ ಚ ಹಿತಾಯ ॥

। ಪ್ರತಿಪದಾರ್ಥ ।

ಮಘವಾನಾ– ಹವಿಸ್ಸಿನ ರೂಪದ ಅನ್ನದಿಂದ ಯುಕ್ತರಾದ । ಅಶ್ವಿನೌ—ಎಲೈ ಅಶ್ವಿನೀದೇವತೆಗಳೇ । ವಾಂ—ನಿಮಗಾಗಿ । ಮಾನೇಭಿಃ—ಹವಿಷ್ಪ್ರದಾನದಿಂದ ಕೂಡಿದುದೂ । ಸುವೃಕ್ತಿ—ಪಾಪವನ್ನು ಪರಿಹರಿಸುವ ಶಕ್ತಿಯುಳ್ಳದ್ದೂ (ಅಥವಾ ಪೂರ್ಣವಾದದ್ದೂ) ಆದ । ಏಷಃ ಸ್ತೋಮಃ—ಈ ಸ್ತುತಿಯು । ಅಕಾರಿ—ನಿರ್ಮಿತವಾಗಿದೆ । ನಾಸತ್ಯಾ—ಅಸತ್ಯರಹಿತರಾದ ಎಲೈ ಅಶ್ವಿನೀದೇವತೆಗಳೇ, (ನೀವಿಬ್ಬರೂ) । ಅಗಸ್ತ್ಯೇ—ಅಗಸ್ತ್ಯನೆಂದು ಪ್ರಸಿದ್ಧನಾದ ನನ್ನಲ್ಲಿ (ನನ್ನ ಸ್ತುತಿಯಿಂದ) । ಮದಂತಾ—ತೃಪ್ತಿಯನ್ನು ಹೊಂದಿದವರಾಗಿ । ತನಯಾಯ—ಪುತ್ರಾದಿ ಲಾಭಕ್ಕಾಗಿಯೂ । ತ್ಮನೇ ಚ—ಆತ್ಮಹಿತಕ್ಕಾಗಿಯೂ । ವರ್ತಿಃ—ಯಜ್ಞಗೃಹಕ್ಕೆ । ಯಾತಂ—ಬನ್ನಿರಿ.

ಭಾವಾರ್ಥ

ಹವಿಸ್ಸಿನ ರೂಪದ ಅನ್ನದಿಂದ ಕೂಡಿದ ಎಲೈ ಅಶ್ವಿನೀದೇವತೆಗಳೇ, ನಿಮಗಾಗಿ ಹವಿಷ್ಪ್ರದಾನದಿಂದ ಕೂಡಿದುದೂ, ಪಾಪವನ್ನು ಪರಿಹರಿಸುವ ಶಕ್ತಿಯುಳ್ಳದ್ದೂ ಮತ್ತು ಪೂರ್ಣವಾದದ್ದೂ ಆದ ಸ್ತುತಿಯು ನಿರ್ಮಿತವಾಗಿದೆ. ಅಸತ್ಯರಹಿತರಾದ ಎಲೈ ಅಶ್ವಿನೀದೇವತೆಗಳೇ, ಅಗಸ್ತ್ಯನೆಂಬ ಹೆಸರಿನಿಂದ ಪ್ರಸಿದ್ಧನಾದ ನನ್ನ ಸ್ತುತಿಯಿಂದ ತೃಪ್ತರಾಗಿ ಪುತ್ರಾದಿ ಲಾಭಕ್ಕಾಗಿಯೂ ಮತ್ತು ಆತ್ಮಹಿತಕ್ಕಾಗಿಯೂ ಸಹ ನನ್ನ ಯಜ್ಞಗೃಹಕ್ಕೆ ಬನ್ನಿರಿ.

## English Trnslation

Ashwins, possessors of wealth, this sin-removing hymn has been addressed to you, together with respectful (oblations): Nasatyas, be favourable to Agastya ; come to his dwelling for (conferring on him) progeny, and for his own (good).

। ವಿಶೇಷವಿಷಯಗಳು ।

**ಮಘವಾನಾ**—ಈ ವಿಶೇಷಣಕ್ಕೆ ಸಾಯಣರು **ಹವಿರ್ಲಕ್ಷಣಾನ್ನಯುಕ್ತೌ** ಹವಿಸ್ಸಿನ ರೂಪದ ಅನ್ನದಿಂದ ಕೂಡಿದ (ಅಶ್ವನೀದೇವತೆಗಳು) ಎಂದರ್ಥ ಮಾಡಿದ್ದಾರೆ. ಸಾಧಾರಣವಾಗಿ **ಮಘವಾನ್** ಎಂಬ ವಿಶೇಷಣವು ಇಂದ್ರನ ಪರವಾಗಿಯೇ ಇದ್ದರೂ ಸಹ, ಇತರ ದೇವತೆಗಳ ಗುಣಗಳನ್ನು ವರ್ಣಿಸುವಾಗಲೂ ಸಹ ಈ ವಿಶೇಷಣವು ಋಕ್ಸಂಹಿತೆಯಲ್ಲಿ ಅಲ್ಲಲ್ಲಿ ಪ್ರಯೋಗಿಸಲ್ಪಟ್ಟಿದೆ.

ಅಥವಾ **ಮಘ** ಶಬ್ದವನ್ನು ಧನನಾಮಗಳಲ್ಲಿ ಪಠಿಸಿರುವುದರಿಂದ (ನಿ. ೩-೯) ಇಲ್ಲಿ ಅನ್ನರೂಪವಾದ ಧನವೆಂದು ಹೇಳಬಹುದು. ನಿರುಕ್ತಕಾರರು **ಮಘಮಿತಿ ಧನನಾಮಧೇಯಂ ಮಂಹತೇರ್ದಾನಕರ್ಮಣಃ ।** ಎಂಬ ಮಘಶಬ್ದದ ನಿಷ್ಪತ್ತಿಯನ್ನು ತಿಳಿಸಿ **ಮಘೋನೀ** ಎಂಬ ಪದದ ಅರ್ಥವನ್ನು ವಿವರಿಸಿದ್ದಾರೆ. (ನಿ. ೧-೭). ಆದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಮಘವಾನಾ** ಎಂಬ ವಿಶೇಷಣಕ್ಕೆ ನಿರ್ವಚನವನ್ನು ಹೇಳಬಹುದು. ಅಥವಾ,

ಮಘವಾನಾ ಎಂದರೆ ವಿಷ್ಣುವಿನೊಡಗೂಡಿರುವ ಅಶ್ವಿನೀದೇವತೆಗಳು ಎಂದು ಅರ್ಥಮಾಡಿದರೂ ತಪ್ಪಾಗಲಾರದು. ಹೇಗೆಂದರೆ, ಶತಪಥಬ್ರಾಹ್ಮಣಾದಿಗಳಲ್ಲಿ, ವಿಷ್ಣುವಿಗೂ ಮಖಕ್ಕೂ ತಾದಾತ್ಮ್ಯವನ್ನೂ ಹೇಳಿರುವ ವಿಷಯವನ್ನು ಹಿಂದೆ ತಿಳಿಸಿದೆ. (ಶ. ಬ್ರಾ. ೧೪-೧ ೧-೧೩) ಅಶ್ವಿನೀದೇವತೆಗಳಿಗೂ **ಮಖ** ರೂಪನಾದ ವಿಷ್ಣುವಿಗೂ ಇರುವ ಸಾಹಚರ್ಯವೂ ಪ್ರಸಿದ್ಧವಾದುದು. ಈ ವಿಷಯವನ್ನು ಸಹ ಹಿಂದೆ,

**ತಮಸ್ಯ ರಾಜಾ ವರುಣಸ್ತಮಶ್ವಿನಾ ಕ್ರತುಂ ಸಚಂತ ಮಾರುತಸ್ಯ ವೇಧಸಃ ।**
**ಧಧಾರ ದಕ್ಷಮುತ್ತಮಮಹರ್ವಿದಂ ವ್ರಜಂ ಚ ವಿಷ್ಣುಃ ಸಖಿವಾँ ಅಪೋರ್ಣುತೇ ॥**

(ಋ. ಸಂ. ೧-೧೫೬-೪)

ಎಂಬ ಋಕ್ಕಿನ ವಿಶೇಷವಿಷಯಗಳನ್ನು ವಿವರಿಸುವಾಗ ತಿಳಿಸಿದೆ. (ಋಗ್ವೇದ ಸಂಹಿತಾ ಭಾಗ ೧೧: ಪುಟ 656-657) ಅಲ್ಲದೆ, ಋಕ್ಸಂಹಿತೆಯಲ್ಲಿಯೂ ಸಹ ಇದೇ ಸಾಹಚರ್ಯವನ್ನು ಈ ರೀತಿ ವರ್ಣಿಸಿದೆ.

**ಯದಿಂದ್ರೇಣ ಸರಥಂ ಯಾಥೋ ಅಶ್ವಿನಾ ಯದ್ವಾ ವಾಯುನಾ ಭವಥಃ ಸಮೋಕಸಾ ।**
**ಯದಾದಿತ್ಯೇಭಿರ್ಋಭುಭಿಃ ಸಜೋಷಸಾ ಯದ್ವಾ ವಿಷ್ಣೋರ್ವಿಕ್ರಮಣೇಷು ತಿಷ್ಠಥಃ ॥**

(ಋ. ಸಂ. ೮-೯-೧೨)

ಇತ್ಯಾದಿಋಕ್ಕುಗಳಲ್ಲಿಯೂ ಸಹ ಅಶ್ವಿನೀದೇವತೆಗಳು ವಿಷ್ಣುವಿನ ಸಾಹಚರ್ಯವನ್ನು ಹೊಂದಿರುವ ವಿಷಯವು ತಿಳಿಸಲ್ಪಟ್ಟಿದೆ. ಈ ಕಾರಣದಿಂದ **ಮಘವಾನಾ** ಎಂದರೆ ವಿಷ್ಣುವಿನೊಡಗೂಡಿದ ಅಶ್ವಿನೀದೇವತೆಗಳು ಎಂದು ಅರ್ಥ ಮಾಡಿದರೂ ಮಾಡಬಹುದು. ಆದರೆ ಪ್ರಕೃತವಾದ ಸನ್ನಿವೇಶದಲ್ಲಿ ಸಾಯಣರು ಹೇಳಿರುವಂತೆ ಹವಿಸ್ಸಿನ ರೂಪದ ಅನ್ನಸಂಪತ್ತಿನಿಂದ ಕೂಡಿದವರು ಎಂದು ಅರ್ಥವನ್ನು ಹೇಳುವುದೇ ಸಂದರ್ಭಕ್ಕೆ ಉಚಿತವಾಗಿರುವುದಾಗಿ ತೋರುತ್ತದೆ.

**ಸುವೃಕ್ತಿ—ಸುಷ್ಠು ಪಾಪವರ್ಜನಂ ಯಥಾಭವತಿ ತಥಾ । ಯದ್ವಾ । ಸುಸಮಾಪ್ತಿ**— ಪಾಪದಿಂದ ಪೂರ್ಣವಾಗಿ ಬಿಡುಗಡೆಯನ್ನು ಹೊಂದಿರುವುದು,ಅಥವಾ ಶುದ್ಧವಾದ ಸಮಾಪ್ತಿಯುಳ್ಳದ್ದು ಎಂದರ್ಥ. ಈ ಪದವು ಸ್ತೋಮಶಬ್ದಕ್ಕೆ ವಿಶೇಷಣವಾಗಿದೆ ಈ ವಿಶೇಷಣವು ಒಂದೊಂದು ಕಡೆಯಲ್ಲಿ ಒಂದೊಂದರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ನಿರುಕ್ತಕಾರರು,

**ಇಯಂ ಶುಷ್ಮೇಭಿರ್ಬಿಸಖಾ ಇವಾರುಜತ್ಸಾನು ಗಿರೀಣಾಂ ತವಿಷೇಭಿರೂರ್ಮಿಭಿಃ ।**
**ಪಾರಾವತಘ್ನೀಮವಸೇ ಸುವೃಕ್ತಿಭಿಃ ಸರಸ್ವತೀಮಾ ವಿವಾಸೇಮ ಧೀತಿಭಿಃ ॥**

(ಋ. ಸಂ. ೬. ೬೧. ೨)

ಎಂಬ ಋಕ್ಕನ್ನುದಾಹರಿಸಿ ಅಲ್ಲಿರುವ **ಸುವೃಕ್ತಿಭಿಃ** ಎಂಬ ಪದಕ್ಕೆ **ಸುಪ್ರವೃತ್ತಾಭಿಃ ಶೋಭನಾಭಿಃ ಸ್ತುತಿಭಿಃ** ಎಂದು ಶ್ರೇಷ್ಠವಾದ ಸ್ತುತಿಯೆಂದೇ ಅರ್ಥಮಾಡಿದ್ದಾರೆ. ವೃಕ್ತಿಶಬ್ದವು ವರ್ಜನಾರ್ಥಕವಾಗಿಯೂ ಸಹ ಬೇರೆ ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟಿದೆ. ಉದಾಹರಣೆಗೆ,

**ಕುವಿದಂಗ ಯವಮಂತೋ ಯವಂ ಚಿದ್ಯಥಾ ದಾಂತ್ಯನುಪೂರ್ವಂ ವಿಯೂಯ ।**
**ಇಹೇಹೈಷಾಂ ಕೃಣುಹಿ ಭೋಜನಾನಿ ಯೇ ಬರ್ಹಿಷೋ ನಮೋವೃಕ್ತಿಂ ನ ಜಗ್ಮುಃ ॥**

(ಋ. ಸಂ. ೧೦–೧೩೧–೨)

ಎಂಬಲ್ಲಿ **ನಮೋವೃಕ್ತಿಂ ನಮಸಃ ಹವಿರ್ಲಕ್ಷಣಸ್ಯಾನ್ನಸ್ಯ ನಮಸ್ಕಾರಾತ್ಮಕಸ್ಯ ಸ್ತೋತ್ರಸ್ಯ ವಾ ವರ್ಜನಮ ಕರಣಂ ನ ಜಗ್ಮುಃ ।** ನಮಸ್ಕಾರಾತ್ಮಕವಾದ ಸ್ತುತಿಯನ್ನು ಬಿಟ್ಟುಬಿಡಲಿಲ್ಲ ಎಂದು ಇಂದ್ರನನ್ನು ಪ್ರಾರ್ಥಿಸಿದೆ. ಇಲ್ಲಿ ವೃಕ್ತಿಶಬ್ದವು ವರ್ಜನಾರ್ಥಕವಾಗಿ ಉಪಯೋಗಿಸಲ್ಪಟ್ಟಿದೆ. ಆದರೆ ಈ ಪದವು ಸ್ತುತ್ಯರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುವುದೇ ಅತ್ಯಧಿಕವಾಗಿದೆ. ಉದಾಹರಣೆಗೆ,

**ಅಸ್ಮಾ ಇದು ತ್ಯಮುಪಮಂ ಸ್ವರ್ಷಾಂ ಭರಾಮ್ಯಾಂಗೂಷಮಾಸ್ಯೇನ ।**
**ಮಂಹಿಷ್ಠಮಚ್ಛೋಕ್ತಿಭಿರ್ಮತೀನಾಂ ಸುವೃಕ್ತಿಭಿಃ ಸೂರಿಂ ವಾವೃಧಧ್ಯೈ ॥**

(ಋ ಸಂ ೧-೬೧-೩)

ಇತ್ಯಾದಿ ಕಡೆಗಳಲ್ಲೆಲ್ಲಾ ಶ್ರೇಷ್ಠವಾದ ಸ್ತುತಿಯೆಂದೇ ಅರ್ಥ.

**ವರ್ತಿಃ—ವರ್ತನಹೇತುಭೂತಂ ಗೃಹಂ ।** ವಾಸಮಾಡಲು ಆಧಾರಭೂತವಾದ ಮನೆಯೆಂದರ್ಥವೆಂದು ಸಾಯಣರು ಈ ಪದವು ಬರುವೆಡೆಗಳಲ್ಲೆಲ್ಲಾ ಅರ್ಥಮಾಡಿದ್ದಾರೆ. ಆದರೆ ಸ್ಕಂದಸ್ವಾಮಿಗಳು ಸಾಧಾರಣವಾಗಿ ಎಲ್ಲಾ ಕಡೆಗಳಲ್ಲೂ ಸಹ ಪ್ರಸಿದ್ಧವಾದ ಮಾರ್ಗವೆಂದರ್ಥ ಮಾಡಿದ್ದಾರೆ. ಉದಾಹರಣೆಗೆ,

**ತ್ರಿರ್ವರ್ತಿರ್ಯಾತಂ ತ್ರಿರನುವ್ರತೇ ಜನೇ ತ್ರಿಃ ಸುಪ್ರಾವ್ಯೇ ತ್ರೇಧೇವ ಶಿಕ್ಷತಂ ।**
**ತ್ರಿರ್ನಾಂದ್ಯಂ ವಹತಮಶ್ವಿನಾ ಯುವಂ ತ್ರಿಃ ಪೃಕ್ಷೋ ಅಸ್ಮೇ ಅಕ್ಷರೇವ ಪಿನ್ವತಂ ॥**

(ಋ. ಸಂ. ೧. ೩೪. ೪.)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ವರ್ತಿಯೆಂಬುದಕ್ಕೆ ಸಾಯಣರು ಗೃಹವೆಂದೂ ಸ್ಕಂದಸ್ವಾಮಿಗಳು ಪಥವೆಂದೂ ಅರ್ಥ ಮಾಡಿದ್ದಾರೆ. ಹೀಗೆ ತ್ರಿರ್ವರ್ತಿಃ, ಅಶ್ವಿನಾವರ್ತಿಃ ಇತ್ಯಾದಿಯಾಗಿ ವರ್ತಿಶಬ್ದಪ್ರಯೋಗವಿರುವ ೧. ೧೧೬. ೧೮ ; ೧. ೧೧೭. ೨ ; ೧. ೧೧೯. ೪. ಇತ್ಯಾದಿ ಋಕ್ಕುಗಳಿರುವ ಸೂಕ್ತಗಳೆಲ್ಲವೂ ಅಶ್ವಿನೀದೇವತೆಗಳ ಪರವಾದವೇ ಆಗಿವೆ. ಯೆಂಬುದು ಒಂದು ವಿಶೇಷವಿಷಯ, ಆದರೆ,

**ಇಷಂ ದುಹನ್ತ್ಸುದುಘಾಂ ವಿಶ್ವಧಾಯಸಂ ಯಜ್ಞಪ್ರಿಯೇ ಯಜಮಾನಾಯ ಸುಕ್ರತೋ ।**
**ಅಗ್ನೇ ಘೃತಸ್ನುಸ್ತ್ರಿರ್ಋತಾನಿ ದೀದ್ಯದ್ವರ್ತಿರ್ಯಜ್ಞಂ ಪರಿಯನ್ತ್ಸುಕ್ರತೂಯಸೇ ॥**

(ಋ. ಸಂ. ೧೦. ೧೨೨. ೬ )

ಎಂಬ ಋಕ್ಕಿನಲ್ಲಿ ಮಾತ್ರ ಅಗ್ನಿಪರವಾದ ಮಂತ್ರದಲ್ಲಿ ಈ ಪದದ ಪ್ರಯೋಗವಿರುತ್ತದೆ. ಇಲ್ಲಿ ಯಜ್ಞಗೃಹವೆಂದರ್ಥ ಮಾಡಿದೆ. ಸಾಯಣರೂ ಸಹ ಕೆಲವೆಡೆಗಳಲ್ಲಿ ಈ ಪದಕ್ಕೆ ಮಾರ್ಗವೆಂದರ್ಥಮಾಡಿದ್ದಾರೆ. ಉದಾಹರಣೆಗೆ,

**ಯೋ ಹ ಸ್ಯ ವಾಂ ರಥಿರಾ ವಸ್ತ ಉಸ್ರಾ ರಥೋ ಯುಜಾನಃ ಪರಿಯಾತಿ ವರ್ತಿಃ ।**
**ತೇನ ನಃ ಶಂಯೋರುಷಸೋ ವ್ಯುಷ್ಟೌ ನ್ಯಶ್ವಿನಾ ವಹತಂ ಯಜ್ಞೇ ಅಸ್ಮಿನ್ ॥**

(ಋ. ಸಂ. ೭. ೬೯. ೫.)

ಎಂಬಲ್ಲಿ ವರ್ತಿಃ ಮಾರ್ಗಂ ಎಂದರ್ಥಮಾಡಿದೆ. ಇದು ಅಶ್ವಿನೀದೇವತೆಗಳನ್ನೇ ಉದ್ದೇಶಿಸಿ ಪ್ರಾರ್ಥಿಸಿದ ಮಂತ್ರ ವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಗೃಹವೆಂದರ್ಥ. ಸಾಧಾರಣವಾಗಿ ಇದು ಯಜ್ಞಗೃಹಕ್ಕೆ ಪರ್ಯಾಯಪದ ವಾಗಿರುತ್ತದೆ.

### ವ್ಯಾಕರಣಪ್ರಕ್ರಿಯಾ

**ಅಕಾರಿ** — ಡುಕೃಞ್ ಕರಣೇ ಧಾತು ಕರ್ಮಣಿಯಲ್ಲಿ ಲುಙ್ ಪ್ರಥಮಪುರುಷಏಕವಚನಾಂತರೂಪ ತಿಙಂತನಿಘಾತಸ್ವರ ಬರುತ್ತದೆ.

**ಮಾನೇಭಿಃ**—ಮನ ಜ್ಞಾನೇ. ಧಾತು. ಘಞ್ ಪ್ರತ್ಯಯ. **ಅತಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಭಿಸ್ ಪರವಾದಾಗ **ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ ಐಸ್ ವಿಕಲ್ಪವಾದುದರಿಂದ ಬರುವುದಿಲ್ಲ ಏತ್ವ.

**ಮಘವಾನಾ**—**ಛಂದಸೀವನಿಪೌ**—ಎಂಬುದರಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. ಸಂಬೋಧ ನಾದ್ವಿವಚನಕ್ಕೆ **ಸುಪಾಂ ಸುಲುಕ್**—ಸೂತ್ರದಿಂದ ಆಕಾರಾದೇಶ. ಆಮಂತ್ರಿತನಿಘಾತಸ್ವರ ಬರುತ್ತದೆ

**ಸುವೃಕ್ತಿ**—ವೃಜೀ ವರ್ಜನೇ. ಧಾತು. ಭಾವಾರ್ಥದಲ್ಲಿ ಕ್ತಿನ್‌ಪ್ರತ್ಯಯ. **ಚೋಃಕುಃ** ಎಂಬುದರಿಂದ ಜಕಾರಕ್ಕೆ ಕುತ್ವ ಖರಿಚ ಎಂಬುದರಿಂದ ಚರ್ತ್ವ. ಶೋಭನಂ ವೃಕ್ತಿ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ. ಸುವೃಕ್ತಿ **ನಞ್‌ಸುಭ್ಯಾಮ್** (ಪಾ. ಸೂ. ೬-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಯಾತಮ್**—ಯಾ ಪ್ರಾಪಣೇ. ಧಾತು. ಲೋಟ್ ಮಧ್ಯಮಪುರುಷದ್ವಿ ವಚನಾಂತರೂಪ. ಪಾದಾದಿ ಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವರ್ತಿಃ**—ವೃತು ವರ್ತನೇ. ಧಾತು. ಹೃಪಿಷಿರುಹಿ—(ಉ. ಸೂ. ೪-೫೫೮) ಎಂಬುದರಿಂದ ಇ ಪ್ರತ್ಯಯ ಇದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ರಪರವಾಗಿ ಬರುತ್ತದೆ

**ತ್ಮನೇ**—ಮಂತ್ರೇಷ್ವಾಙ್ಯಾದೇರಾತ್ಮನಃ (ಪಾ. ಸೂ. ೬-೪-೧೪೧) ಎಂಬುದರಿಂದ ಆದಿಯ ಆಕಾರಕ್ಕೆ ಲೋಪಬರುತ್ತದೆ.

**ಮದಂತಾ**—ಮದ ತೃಪ್ತಿಯೋಗೇ. ಧಾತು. ಲಟಿಗೆ ಶತ್ರಾದೇಶ. ವ್ಯತ್ಯಯದಿಂದ ಶಪ್ ವಿಕರಣ. ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ದ್ವಿವಚನಕ್ಕೆ ಸುಪಾಂ ಸುಲುಕ್ ಸೂತ್ರ ದಿಂದ ಆಕಾರಾದೇಶ.

———— :0: ————

ಸಂಹಿತಾಪಾಠಃ

ಅತಾರಿಷ್ಮ ತಮಸಸ್ಪಾರಮಸ್ಯ ಪ್ರತಿ ವಾಂ ಸ್ತೋಮೋ ಅಶ್ವಿನಾವಧಾಯಿ ।
ಏಹ ಯಾತಂ ಪಥಿಭಿರ್ದೇವಯಾನೈರ್ವಿದ್ಯಾಮೇಷಂ ವೃಜನಂ ಜೀರ-
ದಾನುಂ ॥ ೬ ॥

ಪದಪಾಠಃ

ಅತಾರಿಷ್ಮ । ತಮಸಃ । ಪಾರಂ । ಅಸ್ಯ । ಪ್ರತಿ । ವಾಂ । ಸ್ತೋಮಃ । ಅಶ್ವಿನಾ । ಅಧಾಯಿ ।
ಆ । ಇಹ । ಯಾತಂ । ಪಥಿऽಭಿಃ । ದೇವऽಯಾನೈಃ । ವಿದ್ಯಾಮ । ಇಷಂ । ವೃಜನಂ । ಜೀರऽದಾನುಂ ॥
॥ ೬ ॥

ಸಾಯಣಭಾಷ್ಯಂ

ಅತಾರಿಷ್ಮೇತಿ ಷಷ್ಠೀ ವ್ಯಾಖ್ಯಾತಾ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಅಸ್ಯ ತಮಸಃ—(ಶ್ರೇಯಸ್ಸಿಗೆ ವಿಘ್ನಕಾರಿಯಾದ) ಈ ದುಃಖದ । ಪಾರಂ—ಕೊನೆಯನ್ನು । ಅತಾರಿಷ್ಮ—(ನಿಮ್ಮ ಅನುಗ್ರಹದಿಂದ) ದಾಟಿದ್ದೇವೆ । ವಾಂ ಪ್ರತಿ—ನಿಮ್ಮನ್ನುದ್ದೇಶಿಸಿ । ಸ್ತೋಮಃ—ಸ್ತುತಿಯು । ಅಧಾಯಿ—ನಿರ್ಮಿತವಾಗಿದೆ (ನಿರ್ದಿಷ್ಟವಾಗಿದೆ) । ದೇವಯಾನೈಃಪಥಿಭಿಃ—ದೇವತೆ

ಗಳು ಸಂಚರಿಸತಕ್ಕ ಮಾರ್ಗಗಳಿಂದ । ಇಹ—ಈ ಯಜ್ಞಕ್ಕೆ । ಆ ಯಾತಂ—ಬನ್ನಿರಿ । (ವಯಂ—ನಾವು) । ಇಷಂ—ಅನ್ನವನ್ನೂ । ವೃಜನಂ—ಬಲವನ್ನೂ । ಜೀರದಾನುಂ—ದೀರ್ಘಾಯುಷ್ಯವನ್ನೂ । ವಿದ್ಯಾಮ—ಪಡೆಯುವಂತಾಗಲಿ ।

### ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಶ್ರೇಯಸ್ಸಿಗೆ ವಿಘ್ನಕಾರಿಯಾದ ಈ ದುಃಖದ ಅಂತವನ್ನು ನಿಮ್ಮ ಅನುಗ್ರಹದಿಂದ ದಾಟಿದ್ದೇವೆ. ನಿಮ್ಮನ್ನು ಉದ್ದೇಶಿಸಿ ಈ ಸ್ತುತಿಯು ನಿರ್ದಿಷ್ಟವಾಗಿದೆ. ದೇವತೆಗಳು ಸಂಚರಿಸತಕ್ಕ ಮಾರ್ಗಗಳಿಂದ ಈ ಯಜ್ಞಕ್ಕೆ ಬನ್ನಿರಿ. ನಾವು ಅನ್ನವನ್ನೂ, ಬಲವನ್ನೂ, ದೀರ್ಘಾಯುಷ್ಯವನ್ನೂ ಪಡೆಯುವಂತಾಗಲಿ.

### English Translation

(Through your aid), Ashwins, we cross over the limit of darkness : to you this (our hymn) has been addressed : come hither by the path traversed by the gods, that we may obtain food, strength, and long life.

### ವಿಶೇಷವಿಷಯಗಳು

**ದೇವಯಾನೈಃ ಪಥಿಭಿಃ—ದೇವಗಂತವ್ಯೈರ್ಮಾರ್ಗೈಃ ।** ದೇವತೆಗಳು ಸಂಚರಿಸುವ ಮಾರ್ಗಗಳಿಂದ ಎಂದು ಭೌತಿಕವಾದ ಅರ್ಥವನ್ನು ಹೇಳಿದೆ. ಉಪನಿಷತ್ತುಗಳಲ್ಲಿ **ದೇವಯಾನ, ಪಿತೃಯಾನ** ಎಂಬ ಪದಗಳಿಗೆ ಪಾರಿಭಾಷಿಕವಾದ ಅರ್ಥವಿದೆ. ಆದರೆ ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ **ದೇವಯಾನವೆಂಬ** ಪದಕ್ಕೆ ದೇವತೆಗಳು ಸಂಚರಿಸುವ ಮಾರ್ಗವೆಂದೇ ಅರ್ಥವಾಗುತ್ತದೆ. ಕೆಲವೆಡೆಗಳಲ್ಲಿ ಮಾತ್ರ ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ಆಧ್ಯಾತ್ಮಿಕವಾದ ತಾತ್ಪರ್ಯವೂ ಸೂಚಿತವಾಗಿದೆ.

ಉಪನಿಷತ್ತುಗಳಲ್ಲಿ **ದೇವಯಾನ** ಮತ್ತು **ಪಿತೃಯಾನ** ಎಂಬ ಪದಗಳಿಂದ ಪುರುಷನ ಮರಣಾನಂತರ ಅವನ ದೇಹವು ಭಸ್ಮವಾಗಿ ನಿತ್ಯನಾಗಿರುವ ಆತ್ಮನು ಸಂಚರಿಸತಕ್ಕ ಮಾರ್ಗಗಳೆರಡು ಎಂದು ಪ್ರಸಿದ್ಧವಾಗಿದೆ. ಸತ್ಕರ್ಮಕ್ಕೆ ಫಲವನ್ನನುಭವಿಸಲು ಹೋಗತಕ್ಕ ಮಾರ್ಗಗಳಲ್ಲಿ ಒಂದು ದೇವಯಾನ ಇನ್ನೊಂದು ಪಿತೃಯಾನ. ಒಂದು ದೇವತೆಗಳ ಮಾರ್ಗ; ಮತ್ತೊಂದು ಪಿತೃಗಳ ಮಾರ್ಗ. **ಪಂಚಾಗ್ನಿವಿದ್ಯೆಯನ್ನರಿತು** ಸತ್ಯದಲ್ಲೇ ಶ್ರದ್ಧೆಯನ್ನಿಟ್ಟಿರುವರು ದೇವಮಾರ್ಗದಲ್ಲಿ ಹೊರಟು ಪರಬ್ರಹ್ಮನನ್ನು ಸೇರುತ್ತಾರೆ. ಇವರ ಮರಣಾನಂತರ ಆತ್ಮನು ಜ್ವಾಲೆಯನ್ನು ಪ್ರವೇಶಿಸಿ ತನ್ಮೂಲಕ ಅಹಸ್ಸನ್ನೂ, ಶುಕ್ಲಪಕ್ಷವನ್ನೂ, ಉತ್ತರಾಯಣವನ್ನೂ, ಸಂವತ್ಸರವನ್ನೂ, ಆದಿತ್ಯನನ್ನೂ, ವಿದ್ಯುತ್ತನ್ನೂ ಪ್ರವೇಶಿಸಿ ತನ್ಮೂಲಕ ಅಮಾನವನಾದ ಪುರುಷನ ಸಹಾಯದಿಂದ ಪರಬ್ರಹ್ಮನನ್ನು ಪಡೆಯುತ್ತಾನೆ–ಎಂಬ ವಿಷಯವನ್ನು ಉಪನಿಷತ್ತುಗಳಲ್ಲಿ ವರ್ಣಿಸಿದೆ.

ಯಾರು ಕೇವಲ ಯಜ್ಞದಿಂದಲೂ ದಾನಾದಿಗಳಿಂದಲೂ ಲೋಕವನ್ನು ತೃಪ್ತಿಗೊಳಿಸುತ್ತಾರೆಯೋ ಎಂದರೆ ಪಂಚಾಗ್ನಿವಿದ್ಯೆಯನ್ನರಿಯದೇ ಕೇವಲ ಸತ್ಕರ್ಮನಿರತರಾಗಿರುವರೋ ಅಂತಹವರು ಮರಣಾನಂತರ ಬೇರೆ ಮಾರ್ಗದಲ್ಲಿ ಸಂಚರಿಸುತ್ತಾರೆ. ದೇಹವು ದಗ್ಧವಾದನಂತರ ಆತ್ಮನು ಧೂಮದೊಂದಿಗೆ ಸೇರಿ ಅನಂತರ ರಾತ್ರಿಯನ್ನೂ, ತನ್ಮೂಲಕ

ಕೃಷ್ಣಪಕ್ಷವನ್ನೂ, ತದ್ದ್ವಾರಾ ದಕ್ಷಿಣಾಯನವನ್ನೂ ಅನಂತರ ಪಿತೃಲೋಕವನ್ನೂ ಕೊನೆಗೆ ಚಂದ್ರಲೋಕವನ್ನೂ ಸೇರುತ್ತಾರೆ. ಅದೇ ಅವರ ಚರಮಸ್ಥಾನವು. ಈ ಲೋಕದಲ್ಲಿ ಅವರ ಸತ್ಕರ್ಮಗಳಿಗನುಗುಣವಾದ ಫಲಗಳನ್ನು ಪೂರ್ಣವಾಗಿ ಅನುಭವಿಸಿ, ಪಿತೃಗಳೊಂದಿಗಿದ್ದು, ತಮ್ಮ ಕರ್ಮದ ಸಂಸ್ಕಾರವು ಮುಗಿದೊಡನೆಯೇ ಪುನಃ ಅದೇ ಧೂಮಮಾರ್ಗವಾಗಿ ಪೃಥ್ವಿಗೆ ಹಿಂತಿರುಗುತ್ತಾರೆ. ಇದೇ ಉಪನಿಷತ್ತುಗಳಲ್ಲಿ ವರ್ಣಿಸಿರತಕ್ಕ **ದೇವಯಾನ** ಮತ್ತು **ಪಿತೃಯಾನ**ಗಳ ಸ್ವರೂಪವು.

ಪ್ರಕೃತದಲ್ಲಿ ನಾವು ಗಮನಿಸಬೇಕಾದುದೇನೆಂದರೆ, ಮೇಲೆ ವಿವರಿಸಿದಂತೆ ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ಭಾವವೆಲ್ಲವೂ ಪೂರ್ಣವಾಗಿ ಋಕ್ಸಂಹಿತೆಯಲ್ಲಿ ಉಪಯೋಗಿಸುವ **ದೇವಯಾನ** ಪದದಿಂದ ಸೂಚಿತವಾಗುತ್ತದೆಯೇ ಅಥವಾ ಕೇವಲ ದೇವತೆಗಳು ಸಂಚರಿಸತಕ್ಕ ಭೌತಿಕವಾದ ಮಾರ್ಗವೆಂದರ್ಥವಾಗುತ್ತದೆಯೇ ಎಂಬುದು. ಇದರಂತೆಯೇ, ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ **ಪಿತೃಯಾನ** ಶಬ್ದಕ್ಕೂ ಸಹ ಯಾವ ಅರ್ಥ ಎಂಬುದನ್ನೂ ಪ್ರಕೃತದಲ್ಲಿ ವಿಮರ್ಶಿಸಬೇಕಾಗಿದೆ.

ಋಕ್ಸಂಹಿತೆಯಲ್ಲಿ **ದೇವಯಾನ** ಎಂಬ ಪದವು ಒಟ್ಟು ಹದಿಮೂರುಸಲ ಪ್ರಯೋಗಿಸಲ್ಪಟ್ಟಿದೆ. [೧-೭೨-೭; ೧. ೧೬೨-೪; ೧. ೧೮೩-೬, ೧-೧೮೪-೬ ೪. ೩೭-೧; ೫ ೪೩-೬; ೭. ೩೮-೮ ೭. ೭೬-೨; ೧೦. ೧೮-೧; ೧೦. ೫೧-೨; ೧೦-೫೧-೫; ೧೦. ೯೮-೧೧; ೧೦. ೧೮೧-೩.] ಈ ಸಂದರ್ಭಗಳಲ್ಲೆಲ್ಲಾ ಸಾಯಣರು ಪ್ರಧಾನವಾಗಿ ಎರಡು ಅರ್ಥಗಳನ್ನು ಮಾತ್ರ ಹೇಳಿದ್ದಾರೆ. ಅವರ ವಿವರಣೆಯ ಪ್ರಕಾರ ಮೊದಲನೆಯದಾಗಿ ಯಜ್ಞಕರ್ತರಾದ ಮಾನವರು ತಮ್ಮ ಹವಿಸ್ಸುಗಳೊಂದಿಗೆ ದೇವತೆಗಳನ್ನು ಸಮೀಪಿಸಲು ಹೋಗತಕ್ಕ ಮಾರ್ಗವೆಂದೂ ಎರಡನೆಯದಾಗಿ ದೇವತೆಗಳು ತಮ್ಮ ಹವಿಸ್ಸಿನ ಸ್ವೀಕಾರಕ್ಕಾಗಿ ಪೃಥ್ವಿಗೆ ಬರತಕ್ಕ ಮಾರ್ಗವೆಂದೂ ಅರ್ಥವಾಗುತ್ತದೆ.

**ಪಿತೃಯಾನ**ವೆಂಬ ಪದವು ಋಕ್ಸಂಹಿತೆಯಲ್ಲಿ ಕೇವಲ ಒಂದು ಸಲ ಮಾತ್ರ ಪ್ರಯೋಗಿಸಲ್ಪಟ್ಟಿದೆ. ಆ ಪ್ರಯೋಗವು ಯಾವ ಸಂದರ್ಭದಲ್ಲೆಂದರೆ,

**ಯಂ ತ್ವಾ ದ್ಯಾವಾಪೃಥಿವೀ ಯಂ ತ್ವಾಪಸ್ತ್ವಷ್ಟಾ ಯಂ ತ್ವಾ ಸುಜನಿಮಾ ಜಜಾನ ।**
**ಪಂಥಾಮನು ಪ್ರವಿದ್ವಾನ್ ಪಿತೃಯಾಣಂ ದ್ಯುಮದಗ್ನೇ ಸಮಿಧಾನೋ ವಿ ಭಾಹಿ ॥**

(ಋ. ಸಂ. ೧೦-೨-೭)

ಎಂಬ ಋಕ್ಕಿನಲ್ಲಿ ದ್ಯಾವಾಪೃಥಿವಿಗಳಿಂದಲೂ ಅಪ್ಪುಗಳಿಂದಲೂ, ಸೃಷ್ಟಿಕರ್ತನಿಂದಲೂ, ತ್ವಷ್ಟೃವಿನಿಂದಲೂ, ಪ್ರಜ್ವಲಿತನಾದವನೂ ಮತ್ತು **ಪಿತೃಯಾಣದ** ಸ್ವರೂಪವನ್ನು ಪೂರ್ಣವಾಗಿ ಅರಿತವನೂ ಆದ ಅಗ್ನಿಯು ಪ್ರಜ್ವಲಿತನಾದೊಡನೆಯೇ ಪ್ರಕಾಶಿತನಾಗಲಿ ಎಂದು ಪ್ರಾರ್ಥಿಸಿದೆ. ಋಕ್ಕಿನಲ್ಲಿ ಮೂರನೇ ಪಾದದಲ್ಲಿರುವ ಈ ಪದಕ್ಕೆ ಸಾಯಣರ ವಿವರಣೆಯಂತೆ **" ಪಿತೃಯಾಣಂ ಪಿತರೋ ಯೇನ ಮಾರ್ಗೇಣ ಗಚ್ಛಂತಿ ತಂ "** ಪಿತೃಗಳು ಯಾವ ಮಾರ್ಗದಲ್ಲಿ ಸಂಚರಿಸುವರೋ ಆ ಮಾರ್ಗವೆಂದರ್ಥ.

———:o:———

# ನೂರ ಎಂಭತ್ತೈದನೆಯ ಸೂಕ್ತವು.

---

ಕತರಾ ಪೂರ್ವೇತ್ಯೇಕಾದಶರ್ಚಂ ಷಷ್ಠಂ ಸೂಕ್ತಮಾಗಸ್ತ್ಯಂ ತ್ರೈಷ್ಟುಭಂ । ಕತರೈಕಾದಶ ದ್ಯಾವಾಪೃಥಿವೀಯಮಿತ್ಯನುಕ್ರಾಂತಂ ॥ ಆಭಿಪ್ಲವಿಕೇ ಷಷ್ಠೇಽಹನಿ ವೈಶ್ವದೇವಶಸ್ತ್ರೇ ದ್ಯಾವಾಪೃಥಿವ್ಯ-ನಿವಿದ್ಧಾನಮಿದಂ । ತೃತೀಯಸ್ಯೇತಿ ಖಂಡೇ ಸೂತ್ರಿತಂ । ಕತರಾ ಪೂರ್ವೋಷಾಸಾನಕ್ತೇತಿ ವೈಶ್ವದೇವಂ । ಅ. ೭-೭ । ಇತಿ ॥ ಮಹಾವ್ರತೇಽಪಿ ವೈಶ್ವದೇವಶಸ್ತ್ರ ಇದಮೇವ ದ್ಯಾವಾಪೃಥಿವ್ಯನಿವಿದ್ಧಾನಂ । ಉತ್ತ-ಮಾದಾಭಿಪ್ಲವಿಕಾತ್ತೃತೀಯಸವನಂ ।ಐ. ಆ ೫-೩-೨ । ಇತ್ಯತಿದೇಶಾತ್ ॥

ಅನುವಾದವು—ಕತರಾ ಪೂರ್ವಾ ಎಂಬ ಈ ಸೂಕ್ತವು ಇಪ್ಪತ್ತನಾಲ್ಕನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು ; ದ್ಯಾವಾಪೃಥಿವಿಗಳು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಕತರೈಕಾದಶ ದ್ಯಾವಾಪೃಥಿವೀಯಂ ಎಂದು ಹೇಳಿರುವುದು ಅಭಿಪ್ಲವಯಾಗದ ಆರನೆಯ ದಿವಸ ವೈಶ್ವದೇವಶಸ್ತ್ರಮಂತ್ರಗಳನ್ನು ಪಠಿಸುವಾಗ ದ್ಯಾವಾಪೃಥಿವೀ ದೇವತೆಗಳ ನಿವಿದ್ಧಾನ (ಗುಣಾಶಂಸನ) ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಅಶ್ವಲಾಯನ ಶ್ರೌತ ಸೂತ್ರದ ತೃತೀಯಸ್ಯ ಎಂಬ ಖಂಡದ ಕತರಾಪೂರ್ವೋಷಾಸಾನಕ್ತೇತಿ ವೈಶ್ವದೇವಂ ಎಂಬ ಸೂತ್ರದಿಂದ ವಿವೃತವಾಗಿರುವುದು (ಅ. ೭-೭). ಮತ್ತು ಮಹಾವ್ರತದಲ್ಲಿ ವೈಶ್ವದೇವಶಸ್ತ್ರಮಂತ್ರ ಪಠನಮಾಡುವಾಗ ದ್ಯಾವಾಪೃಥಿವೀ ಸಂಬಂಧವಾದ ನಿವಿದ್ಧಾನ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವು ಐತರೇಯಾರಣ್ಯಕದ (ಐ. ೫-೩-೨) ಉತ್ತಮಾದಾಭಿಪ್ಲವಿಕಾತ್ತೃತೀಯಸವನಂ ಎಂಬ ವಾಕ್ಯದಿಂದ ನಿರ್ದಿಷ್ಟವಾಗಿರುವುದು

---

॥ ಓಂ ॥

## ಸೂಕ್ತ—೧೮೫

॥ ಮಂಡಲ—೧ ॥ ಅನುವಾಕ—೨೪ ॥ ಸೂಕ್ತ—೧೮೫ ॥

॥ ಅಷ್ಟಕ— ೨ ॥ ಅಧ್ಯಾಯ— ೫ ॥ ವರ್ಗ—೨-೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೧೧ ॥

॥ ಋಷಿಃ—ಅಗಸ್ತ್ಯಃ ॥

॥ ದೇವತಾ—ದ್ಯಾವಾಪೃಥಿವ್ಯೌ ॥

॥ ಛಂದಃ—ತ್ರಿಷ್ಟುಪ್ ॥

---

ಸಂಹಿತಾಪಾಠಃ

ಕತರಾ ಪೂರ್ವಾ ಕತರಾಪರಾಯೋಃ ಕಥಾ ಜಾತೇ ಕವಯಃ ಕೋ ವಿ ವೇದ ।
ವಿಶ್ವಂ ತ್ಮನಾ ಬಿಭೃತೋ ಯದ್ಧ ನಾಮ ವಿ ವರ್ತೇತೇ ಅಹನೀ ಚಕ್ರಿಯೇವ ॥ ೧ ॥

। ಪದಪಾಠಃ ।

ಕತರಾ । ಪೂರ್ವಾ । ಕತರಾ । ಅಪರಾ । ಅಯೋಃ । ಕಥಾ । ಜಾತೇ ಇತಿ । ಕವಯಃ । ಕಃ । ವಿ ವೇದ ।
ವಿಶ್ವಂ । ತನಾ । ಬಿಭೃತಃ । ಯತ್ । ಹ । ನಾಮ । ವಿ । ವರ್ತೇತೇ ಇತಿ । ಅಹನೀ ಇತಿ । ಚಕ್ರಿಯಾऽಇವ ॥ ೧ ॥

ಸಾಯಣಭಾಷ್ಯಂ

ಅಯೋರೇನಯೋರ್ದ್ಯಾವಾಪೃಥಿವ್ಯೋರ್ಮಧ್ಯೇ ಕತರಾ ಪೂರ್ವಾ ಪೂರ್ವಮುತ್ಪನ್ನಾ । ಕತರಾ ವಾಪರಾ ಪಶ್ಚಾದ್ಭಾವಿನೀ । ಏವಂ ಪೌರ್ವಾಪರ್ಯಪ್ರಶ್ನಃ । ಉಭಯೋರವಿನಾಭಾವೇನ ಸಹೈವ ವರ್ತಮಾನತ್ವಾದಿತಿ ಭಾವಃ । ತಥಾ ಕಥಾ ಕೇನ ಹೇತುನಾ ಜಾತೇ । ಕಿಮನಯೋರುತ್ಪಾದನನಿಮಿತ್ತಮಿತ್ಯರ್ಥಃ । ಹೇ ಕವಯಃ ಕ್ರಾಂತದರ್ಶಿನೋऽತೀಂದ್ರಿಯಜ್ಞಾಃ ಯೂಯಂ ವದತ ಕೋ ವಿ ವೇದ। ಪೌರ್ವಾಪರ್ಯಂ ಕಾರಣಂ ಚ ವಿಶೇಷೇಣ ವಿವಿಚ್ಯ ವಾ ಜಾನಾತಿ । ನ ಕೇನಾಪಿ ಜ್ಞಾಯತ ಇತ್ಯರ್ಥಃ । ಅಜ್ಞಾನೇ ಕಾರಣಮಾಹ । ಯದ್ಧ ಯಸ್ಮಾತ್ಖಲು ಹೇತೋರ್ನಾಮ ಪ್ರಸಿದ್ಧಂ ವಿಶ್ವಂ ಕೃತ್ಸ್ನಮಪಿ ಜಗದವಿಶೇಷೇಣ ತ್ಮನಾತ್ಮನೈವಾನ್ಯನೈರಪೇಕ್ಷ್ಯೇಣೈವ ಬಿಭೃತಃ ಧಾರಯತಃ । ಯದ್ವಾ । ಯದ್ಧ ನಾಮ ಯತ್ಕಿಂಚಿತ್ಪದಾರ್ಥಜಾತಮಸ್ತಿ ವಿಶ್ವಂ ತತ್ಸರ್ವಮಾತ್ಮನಾ ಬಿಭೃತಃ । ಅನೇನ ಯತ್ಕಾರಣಂ ಬ್ರೂಮಸ್ತದಪ್ಯಾಭ್ಯಾಮೇವ ಧ್ರಿಯತ ಇತಿ ಕಾರಣಾಭಾವಃ ಪ್ರತಿಪಾದಿತಃ । ಉತ್ತರೇಣ ಪೌರ್ವಾಪರ್ಯಭಾವ ಉಚ್ಯತೇ । ಅಹನೀ ಏತೇ ದ್ಯಾವಾಪೃಥಿವ್ಯೌ ಚಕ್ರಿಯೇವ ಚಕ್ರಯುಕ್ತೇ ಇವ ವಿ ವರ್ತೇತೇ । ಅತ್ರ ಕತರಾ ಪೂರ್ವಾ ಕತರಾಪರೈನಯೋರಿತ್ಯಾದಿ ನಿರುಕ್ತಂ ದ್ರಷ್ಟವ್ಯಂ । ನಿ. ೩-೨೨ ॥

ಪ್ರತಿಪದಾರ್ಥ

ಅಯೋಃ— ಈ ದ್ಯಾವಾಪೃಥಿವಿಗಳೆರಡರಲ್ಲಿ । ಕತರಾ—ಯಾವುದು । ಪೂರ್ವಾ—ಮೊದಲು ಉತ್ಪನ್ನವಾಯಿತು । ಕತರಾ—ಯಾವುದು । ಅಪರಾ—ಅನಂತರ ಉತ್ಪನ್ನವಾಯಿತು । ಕಥಾ—ಯಾವ ಉಪಾದಾನ ಕಾರಣದಿಂದ । ಜಾತೇ—ಇವೆರಡೂ ಉತ್ಪನ್ನವಾದವು । ಕವಯಃ—ಕ್ರಾಂತದರ್ಶಿಗಳಾದ ಎಲೈ ಋಷಿಗಳೇ । ಕಃ—

ಯಾವನು ತಾನೇ । ವಿ ವೇದ—ಈ ತತ್ತ್ವವನ್ನು ಪೂರ್ಣವಾಗಿ ಅರಿತಿದ್ದಾನೆ । ಯದ್ಧ—ಇವುಗಳಿಗೆ ಕಾರಣವೆಂದು ಹೇಳಬಹುದಾದ ಯಾವ ಪದಾರ್ಥಸಮೂಹವಿದೆಯೋ । (ತತ್) ವಿಶ್ವಂ—ಆ ಸಮಸ್ತ ಪದಾರ್ಥಗಳನ್ನೊಳಗೊಂಡ ವಿಶ್ವವೆಲ್ಲವನ್ನೂ । ತ್ಮನಾ—(ಇತರ ಸಹಾಯದ ಅಪೇಕ್ಷೆಯಿಲ್ಲದೇ ದ್ಯಾವಾಪೃಥಿವಿಗಳು) ತಾವೇ। ಬಿಭೃತಃ—ಧರಿಸಿವೆ। ಅಹನೀ—(ಇವುಗಳಿಗೆ ಸಂಬಂಧಿಸಿದ) ಅಹೋರಾತ್ರಗಳೆರಡೂ ಸಹ । ಚಕ್ರಿಯಾ ಇವ—ಚಕ್ರಯುಕ್ತವಾಗಿದ್ದರೆ ಹೇಗೋ ಹಾಗೆ । ವಿ ವರ್ತೇತೇ—ಆವೃತ್ತಿರೂಪದಿಂದ ಪರಿಭ್ರಮಣವನ್ನು ಹೊಂದುತ್ತಿವೆ.

### ಭಾವಾರ್ಥ

ಈ ದ್ಯಾವಾಪೃಥಿವಿಯಲ್ಲಿ ಯಾವುದು ಮೊದಲು ಉತ್ಪನ್ನವಾಯಿತು ? ಯಾವುದು ಅನಂತರ ಉತ್ಪನ್ನವಾಯಿತು ? ಯಾವ ಉಪಾದಾನಕಾರಣದಿಂದ ಇವೆರಡೂ ಉತ್ಪನ್ನವಾದವು ? ಕ್ರಾಂತದರ್ಶಿಗಳಾದ ಎಲೈ ಋಷಿಗಳೇ, ಯಾವನು ತಾನೇ ಈ ತತ್ತ್ವವನ್ನು ಪೂರ್ಣವಾಗಿ ಅರಿತಿದ್ದಾನೆ ? ಇವುಗಳಿಗೆ ಕಾರಣವೆಂದು ಹೇಳಬಹುದಾದ ಯಾವ ಪದಾರ್ಥಸಮೂಹವಿದೆಯೋ ಆ ಸಮಸ್ತಪದಾರ್ಥಗಳನ್ನೊಳಗೊಂಡ ವಿಶ್ವವೆಲ್ಲವನ್ನೂ ದ್ಯಾವಾಪೃಥಿವಿಗಳು ಇತರ ಸಹಾಯವಿಲ್ಲದೇ ತಾವೇ ಧರಿಸಿವೆ, ಇವುಗಳಿಗೆ ಸಂಬಂಧಿಸಿದ ಅಹೋರಾತ್ರಗಳೆರಡೂ ಸಹ ಚಕ್ರಯುಕ್ತವಾಗಿದ್ದರೆ ಹೇಗೋ ಹಾಗೆ ಆವೃತ್ತಿರೂಪದಿಂದ ಪರಿಭ್ರಮಣವನ್ನು ಹೊಂದುತ್ತಿವೆ.

## English Translation

Which of these two, (Heaven and Earth), is prior, which posterior ? how were they engendered ? (declare), sages, who knows this ? Verily, you uphold the Universe of itself, and the days (and nights) revolve as if they had wheels.

### ವಿಶೇಷವಿಷಯಗಳು

೧-೧೮೫ ನೆಯ ಈ ಸೂಕ್ತದ ವಿನಿಯೋಗವನ್ನು ತಿಳಿಸುತ್ತಾ ಸಾಯಣರು, " **ಆಭಿಪ್ಲವಿಕೇ ಷಷ್ಠೇಽಹನಿ ವೈಶ್ವದೇವಶಸ್ತ್ರೇ ದ್ಯಾವಾಪೃಥಿವ್ಯನಿವಿದ್ಧಾನಮಿದಂ" "ಮಹಾವ್ರತೇಪಿ ವೈಶ್ವದೇವಶಸ್ತ್ರೇ ಇದಮೇವ ದ್ಯಾವಾಪೃಥಿವ್ಯನಿವಿದ್ಧಾನಂ "** ಆಭಿಪ್ಲವಿಕವಾದ ವೈಶ್ವದೇವಶಸ್ತ್ರದಲ್ಲೂ ಮತ್ತು ಮಹಾವ್ರತದ ವೈಶ್ವದೇವಶಸ್ತ್ರದಲ್ಲೂ ಇದರ ಪಠನವು ವಿಹಿತವಾಗಿದೆಯೆಂದು ಆಶ್ವಲಾಯನ ಸೂತ್ರವನ್ನು ಉದಾಹರಿಸಿ (ಆ-ಶ್ರೌ-೭-೭) ತಿಳಿಸಿದ್ದಾರೆ. ದ್ಯಾವಾಪೃಥಿವಿಗಳನ್ನು ಸ್ತುತಿಸತಕ್ಕ ಮಂತ್ರಗಳು ಅಭಿಪ್ಲವಾಖ್ಯವಾದ ಕರ್ಮಕಾಲದಲ್ಲೂ ಮಹಾವ್ರತದ ಕಾಲದಲ್ಲೂ ಪಠಿತವಾಗಬೇಕಾದರೆ, ಆ ಎರಡು ಕರ್ಮಗಳ ಸ್ವರೂಪವೇನು ? ಆ ಕಾಲದಲ್ಲಿ ಈ ಮಂತ್ರಗಳ ಪಠನೆಯ ಮಹತ್ವವೇನು ಎಂಬುದನ್ನು ಅರಿಯಬೇಕು.

ಗತ್ಯರ್ಥಕವಾದ ಪ್ಲು ಧಾತುವಿಗೆ ಅಭಿ ಎಂಬ ಉಪಸರ್ಗವು ಸೇರಿದಾಗ ದಾಟು ಎಂಬ ಅರ್ಥವಾಗುವುದು ಮತ್ತು ಈ ಅರ್ಥದಲ್ಲಿ ಇದರ ಪ್ರಯೋಗವೂ ಸಾಧಾರಣವಾಗಿಯೇ ಇದೆ. ಇದರಂತೆಯೇ, ಅಭಿಪ್ಲವ ಪದವು ಕರ್ಮಸಂಬಂಧವಾಗಿರುವ ಪಾರಿಭಾಷಿಕವಾದ ಪ್ರಯೋಗವಿರುವಾಗಲೂ ಸಹ ಇದೇ ತಾತ್ಪರ್ಯವನ್ನು ಕೊಡುವುದೆಂದು ಶ್ರುತಿ

ವಾಕ್ಯಗಳಿಂದಲೇ ತಿಳಿಯುತ್ತದೆ. ಬ್ರಾಹ್ಮಣಾದಿಗಳಲ್ಲಿ ಈ ಪದದ ನಿರ್ವಚನವು ಯಾವರೀತಿ ಹೇಳಲ್ಪಟ್ಟಿದೆಯೆಂದು ತಿಳಿದು ಅನಂತರ ಈ ಕರ್ಮದ ರೂಪವೇನು ಎಂಬುದನ್ನು ಪರಿಶೀಲಿಸೋಣ.

ತೇ ದೇವಾ ಏತಮಭಿಪ್ಲವಂ ಸಮಭರನ್ । ತೇನಾಭ್ಯಪ್ಲವಂತ । ತದಭಿಪ್ಲವಸ್ಯಾಭಿಪ್ಲವತ್ವಂ ।
(ಜೈಮಿನೀಯ ಬ್ರಾಹ್ಮಣ. II. 440. 3)

ಎಂಬ ಈ ವಾಕ್ಯಗಳಿಂದ ಅಭಿಪ್ಲವಶಬ್ದದ ತಾತ್ಪರ್ಯವನ್ನು ಜೈಮಿನೀಯಬ್ರಾಹ್ಮಣದಲ್ಲಿ ತಿಳಿಸಿದೆ. ಪಣಿಯೆಂಬ ಗುಂಪಿಗೆ ಸೇರಿದ ಅಸುರರು ಗೋವುಗಳನ್ನು ಅಪಹರಿಸಿದಾಗ ಇಂದ್ರನು ಆ ಗೋವುಗಳ ಅನ್ವೇಷಣಕ್ಕಾಗಿ ಸರಮೆಯೆಂಬ ದೇವಶುನಿಯನ್ನು ಕಳುಹಿಸಿದನು. ಅವಳು ಆ ಅಸುರರ ಸ್ಥಾನವನ್ನು ಕಂಡುಹಿಡಿದು ಅವರೊಡನೆ ಸಂಭಾಷಣೆಯನ್ನು ನಡೆಸಿ ಅನಂತರ ಆ ಸಮಾಚಾರವನ್ನು ದೇವತೆಗಳಿಗೆ ತಿಳಿಸಿದ ವಿಷಯವನ್ನು ಬೇರೆ ಕಡೆಯಲ್ಲಿ ತಿಳಿಸಿದೆ. ಇದೇ ಸರಮೆಯು ದೇವತೆಗಳಿಗೆ ಅನುಕೂಲವಾಗಿ ವರ್ತಿಸಿದಳು ಎಂದು ಕೆಲವು ಕಡೆಯೂ, ದೇವತೆಗಳಲ್ಲಿ ವಿರೋಧವಾಗುವಂತೆ ತನ್ನ ಸ್ವಾರ್ಥದೃಷ್ಟಿಯಿಂದ ವರ್ತಿಸಿದಳು ಎಂದು ಇನ್ನು ಕೆಲವು ಕಡೆ ವರ್ಣಿಸಿರುವುದೆಂದೂ ಕೆಲವರ ಅಭಿಪ್ರಾಯವಿರುವುದು. ಪ್ರಕೃತದಲ್ಲಿ, ಮೇಲೆ ಉದಾಹರಿಸಿರುವ ಜೈಮಿನೀಯಬ್ರಾಹ್ಮಣದ ವಾಕ್ಯದಲ್ಲಿ ಸರಮೆಯ ಸಹಾಯದಿಂದ ದೇವತೆಗಳು ತಮ್ಮ ಕಷ್ಟದಿಂದ ದಾಟಿದರು ಮತ್ತು ತಮ್ಮ ಅಭಿಪ್ಲವಕ್ಕೆ ಸಹಾಯಕವಾದುದರಿಂದ ಅವರು ಅಭಿಪ್ಲವ ಯಾಗವನ್ನು ನೆರವೇರಿಸಿದರು ಎಂದು ಹೇಳಿದೆ. ಈ ಯಾಗವನ್ನು ನೆರವೇರಿಸಿ ತಮ್ಮ ಆಪತ್ತನ್ನು ದಾಟಿದರು ಎಂದಿರೋಣದರಿಂದಲೇ ಇದಕ್ಕೆ ಅಭಿಪ್ಲವವೆಂದು ಹೆಸರು ಎಂದು ಇದರ ತಾತ್ಪರ್ಯವನ್ನೂ ಪ್ರಯೋಜನವನ್ನೂ ತಿಳಿಸಿದೆ. ಇದರಂತೆಯೇ,

ತ ಆದಿತ್ಯಾಃ । ಚತುರ್ಭಿಸ್ತೋಮೈಶ್ಚತುರ್ಭಿಃ ಪೃಷ್ಠೈರ್ಲಘುಭಿಃ ಸಾಮಭಿಃ
ಸ್ವರ್ಗಂ ಲೋಕಮಭ್ಯಪ್ಲವಂತ ಯದಭ್ಯಪ್ಲವಂತ ತಸ್ಮಾದಭಿಪ್ಲವಾಃ ।
(ಶ. ಬ್ರಾ. ೧೨ ೨-೨-೧೦)

ಅಭಿಪ್ಲವಯಾಗದಿನಗಳಲ್ಲಿ ನಾಲ್ಕು ಪೃಷ್ಠಸಾಮಗಳ ಪಠನದಿಂದ ದೇವತೆಗಳು ಸ್ವರ್ಗಲೋಕವನ್ನು ದಾಟಿದರು ಈ ರೀತಿ ದಾಟಿದುದರಿಂದಲೇ (ಯದಭ್ಯಪ್ಲವಂತ) ಈ ಕರ್ಮಕ್ಕೆ ಅಭಿಪ್ಲವವೆಂದು ಹೆಸರು ಬಂದಿತು ಎಂದು ಕಥಾಸಂದರ್ಭಸೂಚಕವಾದ ಒಂದು ತಾತ್ಪರ್ಯವನ್ನು ಹೇಳಿದೆ. ಇದೊಂದು ವಿಧವಾದ ನಿರ್ವಚನವಲ್ಲದೇ ಇದಕ್ಕೆ ಈ ಹೆಸರು ಬರಲು ಇನ್ನೊಂದು ಕಾರಣವೂ ಇದೆಯೆಂದು ತೋರಿಸುತ್ತಾ ಇನ್ನೊಂದು ವಿಧವಾದ ಅರ್ಥವನ್ನು ಹೇಳಿದೆ.

ಏತದ್ಧಸ್ಮ ವೈ ತದ್ವಿದ್ವಾನಾಹ ಪೈಂಗ್ಯಃ । ಪ್ಲವಂತ ಇವ ವಾ ಅಭಿಪ್ಲವಾಸ್ತಿಷ್ಠತೀವ ಪೃಷ್ಠ್ಯ
ಇತಿ ಪ್ಲವತ ಇವ ಹ್ಯಯಮುಂಗೈಸ್ತಿಷ್ಠತೀವಾತ್ಮನೇತಿ ।

(ಶ. ಬ್ರಾ. ೧೨-೨-೪-೮)

ಯಾಜ್ಞವಲ್ಕ್ಯ ಶಿಷ್ಯನಾದ ಪೈಂಗ್ಯನು ಅಭಿಪ್ಲವದ ಮತ್ತು ಪೃಷ್ಠ್ಯದ ಸ್ವರೂಪಗಳನ್ನು ತಿಳಿದಿದ್ದಾನೆ. ಇವುಗಳ ಮರ್ಮವನ್ನು ತಿಳಿದು "ಪ್ಲವನಾತ್ಮಕವಾದ ಸ್ವರೂಪವುಳ್ಳದ್ದರಿಂದ ಅಭಿಪ್ಲವವೆಂದೂ, ಸ್ಥಿರವಾದ ಸ್ವರೂಪವುಳ್ಳದ್ದರಿಂದ ಪೃಷ್ಠ್ಯವೆಂದೂ ಈ ಎರಡು (ಅಭಿಪ್ಲವ ಮತ್ತು ಪೃಷ್ಠ್ಯ) ಕರ್ಮಗಳಿಗೂ ಈ ಹೆಸರು" ಎಂಬುದಾಗಿ ಹೇಳಿದ್ದಾನೆಂದು ಈ ತಾತ್ಪರ್ಯವನ್ನೂ ಶತಪಥಬ್ರಾಹ್ಮಣದಲ್ಲಿ ವಿವರಿಸಿದೆ. ಒಟ್ಟಿನಲ್ಲಿ ದೇವತೆಗಳಾಗಲಿ, ಮಾನವರಾಗಲಿ, ಈ

ಕರ್ಮವನ್ನು ನೆರವೇರಿಸುವುದರಿಂದ ಆಪತ್ತನ್ನು ದಾಟುತ್ತಾರೆಂದು ಇದರ ಮಹತ್ವವನ್ನು ಸೂಚಿಸತಕ್ಕ ನಿರ್ವಚನವು ಹೇಳಲ್ಪಟ್ಟಿದೆ. ಪ್ರಕೃತವಾದ ಸೂಕ್ತದಲ್ಲಿಯೂ ಸಹ " **ದ್ಯಾವಾ ರಕ್ಷತಂ ಪೃಥಿವೀ ನೋ ಅಭ್ವಾತ್** " ಎಂಬ ಪ್ರಾರ್ಥನೆಯಲ್ಲಿ " ನಮ್ಮನ್ನು ಮಹದ್ಭಯದಿಂದ ರಕ್ಷಿಸಿ " ಎಂಬ ಮೊರೆಯಿರುವುದರಿಂದ **ಅಭಿಪ್ಲವ** ಯಾಗ ಕಾಲದಲ್ಲಿ ಈ ಮಂತ್ರಗಳನ್ನು ಪಠಿಸಿದರೆ ಆಪತ್ತಿನಿಂದ ದಾಟಬಹುದು. ಈ **ಅಭಿಪ್ಲವವು** ಆಧ್ಯಾತ್ಮಿಕವಾದ ದೃಷ್ಟಿಯಿಂದಲೂ ಸಹ ಪ್ರಧಾನವಾದ ಸ್ಥಾನವನ್ನು ಹೊಂದಿದೆ. ಇದು '' **ಗವಾಮಯನಂ** " ಎಂಬ ಯಾಗದ ಅಂಗವು. " **ಗವಾಮಯನವು** " ಸಂವತ್ಸರಾತ್ಮಕವಾದುದು. ಪುರುಷನೂ ಸಂವತ್ಸರಾತ್ಮಕನು. ಸಂವತ್ಸರಾತ್ಮಕವಾದ **ಗವಾಮಯನಕ್ಕೆ ಅಭಿಪ್ಲವವು** ಅಂಗವಾದರೆ, ಸಂವತ್ಸರಾತ್ಮಕವಾದ ಪುರುಷತತ್ತ್ವದ ಅಂಗವಾಗಿಯೂ ಇರಬೇಕು. ಇದನ್ನೇ ವರ್ಣಿಸುತ್ತಾ, ಶತಪಥದಲ್ಲಿ " **ಪುರುಷೋ ವೈ ಸಂವತ್ಸರಃ . . . . ಉರೋಽಭಿಪ್ಲವಃ** " ಸಂವತ್ಸರವೇ ಪುರುಷತತ್ತ್ವವನ್ನು ಪ್ರತಿಬಿಂಬಿಸಿದರೆ ಆಗ ಅಭಿಪ್ಲವವು ಅವನ ಉರಸ್ಸು-ಇತ್ಯಾದಿಯಾಗಿ ಇದರ ವರ್ಣನೆಯನ್ನು ಹೇಳಿದೆ (ಶ. ಬ್ರಾ ೧೨-೧-೪-೧). ಸಂವತ್ಸರಾತ್ಮಕವಾದ ಸಾಗರವನ್ನು (ಸತ್ರರೂಪವಾದ ಸಾಗರವನ್ನು ದಾಟಲು ಮುಖ್ಯವಾದ ಸಾಧನವೇ **ಅಭಿಪ್ಲವವು.** '' **ಪ್ರಸ್ನೇಯೋಽಭಿಪ್ಲವಃ** " (ಶ. ಬ್ರಾ. ೧೨-೨-೧-೧) **ಆರುಣೇಯ ಶ್ವೇತಕೇತವು** ಈ ಸಂವತ್ಸರತತ್ತ್ವವನ್ನರಿತವನಾಗಿ **ಅಭಿಪ್ಲವದ** ಮಹತ್ತ್ವವನ್ನು ತಿಳಿಸುತ್ತಾ,

> **ತದಾಹುಃ । ಕಸ್ಮಾದುಭಯತೋ ಜ್ಯೋತಿಷೋಽಭಿಪ್ಲವಾ ಭವಂತ್ಯನ್ಯತೋ ಜ್ಯೋತಿಃ ಪೃಷ್ಠ್ಯ ಇತೀಮೇ ವೈ ಲೋಕಾ ಅಭಿಪ್ಲವಾ ಉಭಯತೋ ಜ್ಯೋತಿಷೋ ವಾ ಇಮೇ ಲೋಕಾಃ ॥**
>
> (ಶ. ಬ್ರಾ. ೧೨-೨-೨-೧)

**ಅಭಿಪ್ಲವವು** ಉಭಯರೂಪವಾದ ಜ್ಯೋತಿಯಿಂದ ಬೆಳಗುತ್ತಿದೆ. ಈ **ಲೋಕಗಳೇ** (ದ್ಯಾವಾಪೃಥಿವ್ಯಂತರಿಕ್ಷಗಳೇ) ಅಭಿಪ್ಲವವು. ಪಾರ್ಥಿವಾಗ್ನಿರೂಪವಾದ ಜ್ಯೋತಿಯಿಂದ ಪೃಥ್ವಿಯ ಭಾಗದಿಂದಲೂ ಮತ್ತು ಆದಿತ್ಯರೂಪವಾದ ಜ್ಯೋತಿಯಿಂದ ದಿವ್ಯಲೋಕದ ಭಾಗದಿಂದಲೂ ಈ ಅಭಿಪ್ಲವವು ಬೆಳಗುತ್ತಿದೆ. " **ತೆ ಆದಿತ್ಯಾಃ ಸ್ವರ್ಗಂ ಲೋಕಮುಭ್ಯಪ್ಲವಂತ** " ಈ ಅಭಿಪ್ಲವರೂಪವಾದ ನಾವೆಯಿಂದಲೇ ಆದಿತ್ಯರು ( ಅಂಗಿರಸ್ಸುಗಳೊಡನೆ ) ದಿವ್ಯಲೋಕವನ್ನು ಸೇರಿದರು ಇತ್ಯಾದ್ಯನೇಕ ಪ್ರಕಾರವಾಗಿ ಅಭಿಪ್ಲವದ ಸ್ವರೂಪವನ್ನೂ ವರ್ಣಿಸಿದೆ. ದ್ಯಾವಾಪೃಥಿವಿಗಳೇ ಅಭಿಪ್ಲವರೂಪವಾಗಿರುವುದರಿಂದ ಈ ಕರ್ಮಕಾಲದಲ್ಲಿ ದ್ಯಾವಾಪೃಥಿವಿಗಳ ವರ್ಣನವೂ ಸ್ತುತಿಯೂ ಸಹಜವಾಗಿರುತ್ತದೆ. ಅಲ್ಲದೇ, ಅಭಿಪ್ಲವಾಂಗಗಳಾದ ಜ್ಯೋತಿಷ್ಟೋಮಾದಿಗಳಿಗೂ ದ್ಯಾವಾಪೃಥಿವಿಗಳಿಗೂ ತಾದಾತ್ಮ್ಯವನ್ನು ಹೇಳುತ್ತಾ ಐತರೇಯ ಬ್ರಾಹ್ಮಣದಲ್ಲಿ ಈ ರೀತಿ ವರ್ಣಿಸಿದೆ.

> **ಜ್ಯೋತಿರ್ಗೌರಾಯುರಿತಿ ಸ್ತೋಮೇಭಿರ್ಯಂತ್ಯಯಂ ವೈ ಲೋಕೋ ಜ್ಯೋತಿರಂತರಿಕ್ಷಂ ಗೌರಸೌ ಲೋಕ ಆಯುಃ ಸ ಏವೈಷ ಉತ್ತರಸ್ತ್ರ್ಯಹಃ ಜ್ಯೋತಿರ್ಗೌರಾಯುರಿತಿ ತ್ರೀಣ್ಯಹಾನಿ ಗೌರಾಯುರ್ಜ್ಯೋತಿರಿತಿ ತ್ರೀಣಿ । ಅಯಂ ವೈ ಲೋಕೋ ಜ್ಯೋತಿರಸೌ ಲೋಕೋ ಜ್ಯೋತಿಸ್ತೇ ಏತೇ ಜ್ಯೋತಿಷೀ ಉಭಯತಃ ಸಂಲೋಕೇತೇ । ತೇನೈತೇನೋಭಯತೋ ಜ್ಯೋತಿಷಾ ಷಳಹೇನ ಯಂತಿ ತದ್ಯದೇತೇನೋಭಯತೋ ಜ್ಯೋತಿಷಾ ಷಳಹೇನ ಯಂತ್ಯನಯೋರೇವ ತಲ್ಲೋಕಯೋರುಭಯತಃ ಪ್ರತಿತಿಷ್ಠಂತೋ ಯಂತ್ಯಸ್ಮಿಂಶ್ಚ ಲೋಕೇಽಮುಷ್ಮಿಂಶ್ಚೋಭಯೋಃ ॥**　(ಐ. ಬ್ರಾ. ೧೮-೧)

ಷಡಹಾತ್ಮಕವಾದ ಅಭಿಪ್ಲವಕ್ಕೆ ಮೊದಲನೆಯದಾಗಿ, **ಜ್ಯೋತಿಷ್ಟೋಮ, ಗೋಷ್ಟೋಮ** ಮತ್ತು **ಆಯುಷ್ಟೋಮ** ಎಂಬ ಮೂರು ಅಹಸ್ಸುಗಳಲ್ಲಿ ಜ್ಯೋತಿಷ್ಟೋಮವೇ ಪೃಥ್ವಿಯು, ಗೋಷ್ಟೋಮವೇ ಅಂತರಿಕ್ಷವು ಮತ್ತು ಆಯುಷ್ಟೋಮವೇ ದ್ಯುಲೋಕವು. ಎರಡನೆಯ ಭಾಗವಾದ ತ್ರ್ಯಹಗಳಲ್ಲಿ ಪುನಃ **ಗೋಷ್ಟೋಮ ಆಯುಷ್ಟೋಮ** ಮತ್ತು **ಜ್ಯೋತಿಷ್ಟೋಮ**ಗಳೆಂಬ ಕ್ರಮವಿದೆ. ಮೊದಲನೆಯ ಗುಂಪಿಗೆ ಸೇರಿದ ಯಾವ **ಜ್ಯೋತಿ** (ಷ್ಟೋಮ) ಯು ಪೃಥ್ವೀರೂಪವಾಗಿದೆಯೋ ಅದೇ (ಎರಡನೆಯ ಭಾಗಕ್ಕೆ ಸೇರಿದ) **ಜ್ಯೋತಿಯು** ದ್ಯುಲೋಕರೂಪವಾಗಿದೆ. ಈ ಅಭಿಪ್ಲವರೂಪವಾದ ಯಾಗವನ್ನು ಎರಡು ಕಡೆಗಳಲ್ಲಿಯೂ ಜ್ಯೋತೀ ರೂಪವಾದ ಎರಡು ಲೋಕಗಳ ನಡುವೆಯೂ ಸಹ ಷಡಂಗಗಳೊಡನೆ ನೆರವೇರಿಸುತ್ತಾರೆ. (ಜ್ಯೋತಿಷ್ಟೋಮ, ಗೋಷ್ಟೋಮ, ಆಯುಷ್ಟೋಮ ಎಂಬ ಮೂರೂ ಮೊದಲನೆಯ ಗುಂಪಿಗೆ ಸೇರಿದವು. ಗೋಷ್ಟೋಮ, ಆಯುಷ್ಟೋಮ ಮತ್ತು ಜ್ಯೋತಿಷ್ಟೋಮ ಎಂಬ ಮೂರೂ ಎರಡನೆಯ ಗುಂಪಿಗೆ ಸೇರಿದ ಕ್ರಮವು. ಆದುದರಿಂದಲೇ (ಅಭಿಪ್ಲವಕ್ಕೆ ಷಡಹವೆಂಬ ಹೆಸರು). ಎರಡು ಕಡೆಗಳಲ್ಲಿಯೂ ಜ್ಯೋತಿಯನ್ನು ಬೆಳಗಿಸಿ ಷಡಹರೂಪವಾದ ಈ ಅಭಿಪ್ಲವವನ್ನು ನೆರವೇರಿಸುತ್ತಾ ಎರಡು ಲೋಕಗಳ ಸ್ಥಿತಿಗೂ ಸಹಾಯವನ್ನು ಮಾಡುತ್ತಾರೆ. ಮತ್ತು,

> **ಪರಿಯದ್ವಾ ಏತದ್ದೇವಚಕ್ರಂ ಯದಭಿಪ್ಲವಃ ಷಳಹಸ್ತಸ್ಯ ಯಾವಭಿತೋಽಗ್ನಿಷ್ಟೋಮೌ ತೌ ಪ್ರಧೀ ಯೇ ಚತ್ವಾರೋ ಮಧ್ಯ ಉಕ್ಥ್ಯಾಸ್ತನ್ನಭ್ಯಂ । ಗಚ್ಛತಿ ವೈ ವರ್ತಮಾನೇನ ಯತ್ರ ಕಾಮಯತೇ ತತ್ಸ್ವಸ್ತಿ ಸಂವತ್ಸರಸ್ಯ ಪಾರಮಶ್ನುತೇ ಯ ಏವಂ ವೇದ । ಯೋ ವೈ ತದ್ವೇದ ಯತ್ಪ್ರಥಮಃ ಷಳಹಃ ಸ ವೈ ಸ್ವಸ್ತಿ ಸಂವತ್ಸರಸ್ಯ ಪಾರಮಶ್ನುತೇ ಯಸ್ತದ್ವೇದ ಯದ್ದ್ವಿತೀಯೋ ಯಸ್ತದ್ವೇದ ಯತ್ತೃತೀಯೋ ಯಸ್ತದ್ವೇದ ಯಚ್ಚತುರ್ಥೋ ಯಸ್ತದ್ವೇದ ಯತ್ಪಂಚಮಃ ॥**
>
> (ಐ. ಬ್ರಾ. ೧೮-೧೫)

ಷಡಹಾತ್ಮಕವಾದ ಈ ಅಭಿಪ್ಲವವು ದೇವತೆಗಳಿಗೆ ವಲಯಾತ್ಮಕವಾದ ಚಕ್ರರೂಪವಾಗಿದೆ. ಎರಡು ಕಡೆಗಳಲ್ಲೂ ಇರುವ ಅಗ್ನಿಷ್ಟೋಮಗಳೇ ಎರಡು ಚಕ್ರನೇಮಿಗಳು. ಮಧ್ಯದಲ್ಲಿರುವ ನಾಲ್ಕು ಉಕ್ಥ್ಯಗಳೇ ನಾಭಿರೂಪವು. ಯಾವನು ಈ ತತ್ತ್ವವನ್ನರಿತಿದ್ದಾನೆಯೋ ಅವನು ಈ ಚಕ್ರದ ಸಹಾಯದಿಂದ ಸಂವತ್ಸರದ ಪಾರವನ್ನು ದಾಟುತ್ತಾನೆ. ಹೀಗೆಯೇ ಅಭಿಪ್ಲವದ ಪೂರ್ಣವಾದ ಸ್ವರೂಪವನ್ನು ತಿಳಿದು ಅದನ್ನು ವಿಧ್ಯುಕ್ತವಾಗಿ ನೆರವೇರಿಸಿದರೆ ಅವನಿಗೆ ಸಂವತ್ಸರದ ಪೂರ್ತ ಸಕಲವಾದ ಇಷ್ಟಾರ್ಥಗಳೂ ಸಿದ್ಧಿಸುವುವು ಎಂದು ಅಭಿಪ್ಲವದ ಮಹಿಮೆಯು ಪ್ರಶಂಸಿತವಾಗಿದೆ. ಅಲ್ಲದೇ,

> **ಸಾ ಯಥಾ ಸ್ರುತಿರಂಜಸಾಯನ್ಯೇವಮಭಿಪ್ಲವಃ ಷಳಹಃ ಸ್ವರ್ಗಸ್ಯ ಲೋಕಸ್ಯಾಥ ಯಥಾ ಮಹಾಪಥಃ ಪರ್ಯಾಣ ಏವಂ ಪೃಷ್ಠ್ಯಃ ಷಳಹಃ ಸ್ವರ್ಗಸ್ಯ ಲೋಕಸ್ಯ ತದ್ಯದುಭಾಭ್ಯಾಂ ಯಂತ್ಯುಭಾಭ್ಯಾಂ ವೈ ಯನ್ನ ರಿಷ್ಯತ್ಯುಭಯೋಃ ಕಾಮಯೋರುಪಾಪ್ತ್ಯೈ ಯಶ್ಚಾಭಿಪ್ಲವೇ ಷಳಹೇ ಯಶ್ಚ ಪೃಷ್ಠ್ಯೇ ।**
>
> (ಐ ಬ್ರಾ. ೧೮-೩)

ಈ **ಅಭಿಪ್ಲವಷಡಹವೇ** ಸ್ವರ್ಗಕ್ಕೆ ಕರೆದುಕೊಂಡು ಹೋಗತಕ್ಕ ನೇರವಾದ ದಾರಿಯಾಗಿದೆ. **ಪೃಷ್ಠ್ಯವು** ಬಳಸಾದ ದಾರಿಯು. ಈ ಎರಡು ಸಾಧನಗಳಿಂದಲೂ ಸಹ ಮುಂದುವರೆದು ಯಜ್ಞಕರ್ತನು ತನ್ನ ಇಷ್ಟಾರ್ಥಪ್ರಾಪ್ತಿ

ಗಾಗಿ ಪ್ರಯತ್ನಿಸಬಹುದು. ಈ ಷಡಹಗಳಲ್ಲಿ ಜ್ಯೋತಿಷ್ಟೋಮ, ಗೋಷ್ಟೋಮ ಮತ್ತು ಆಯುಷ್ಟೋಮಗಳ ಸ್ಥಾನವೇನು ಎಂಬುದನ್ನು ಮುಂದೆ ಸಂದರ್ಭಬಂದಾಗ ತಿಳಿಸಲಾಗುವುದು. ಇದೇ ಷಡಹದ ಮಹಿಮೆಯನ್ನು ಕೌಷೀತಕೀಬ್ರಾಹ್ಮಣದಲ್ಲಿ ಪ್ರಶಂಸಿಸುತ್ತಾ ಈ ರೀತಿ ತಿಳಿಸಿದೆ. "ಸಂವತ್ಸರವು ದೇವತೆಗಳಿಗೆ ಅಮರ್ತ್ಯವಾದ ಚಕ್ರರೂಪವಾಗಿದೆ. ಅದರಲ್ಲಿ ಸಖ್ಯಾದಿಗಳೇ ಆದ ಆರುವಿಧವಾದ ಅನ್ನವು ಅಂತರ್ಗತವಾಗಿದೆ. ಈ ಚಕ್ರದ ಆಧಾರದ ಮೇಲೆ ನಿಂತು ಅವರು ಅಭಿಪ್ಲವರೂಪವಾದ ಯಾಗವನ್ನು ನೆರವೇರಿಸುವರು. ಈ ಯಜ್ಞವನ್ನು ನೆರವೇರಿಸುವ ಸಕಲ ದೇವಮಾನವರೂ ಸಹ ಸಂವತ್ಸರರೂಪವಾದ ಈ ಚಕ್ರದ ಆಧಾರದ ಮೇಲೆ ನಿಂತು ಆರು ವಿಧವಾದ ಅನ್ನವನ್ನೂ ಪಡೆಯುತ್ತಾರೆ. ಜ್ಯೋತಿಷ್ಟೋಮಾದಿಗಳನ್ನು ಎರಡೆರಡು ಸಲ ನೆರವೇರಿಸುವುದರಿಂದ ಈ ಆರುವಿಧವಾದ ಅನ್ನವನ್ನೂ ಸಹ ದ್ವಿಗುಣವಾಗಿ ಪಡೆಯುತ್ತಾನೆ" ಎಂದಿದೆ.

**ಮಹಾವ್ರತವೂ** ಸಹ 'ಗವಾಂ ಅಯನ' ಸತ್ರದ ಒಂದಂಗವಾಗಿರುತ್ತದೆ. ಪೂರ್ಣವಾಗಿ ಒಂದು ಸಂವತ್ಸರದ ವರೆಗೂ (360 ದಿನ) ನೆರವೇರಿಸಲ್ಪಡತಕ್ಕ ಗವಾಮಯನಾತ್ಮಕವಾದ ಸತ್ರಕ್ಕೆ **ಪ್ರಾಯಣೀಯ ಅತಿರಾತ್ರ** ಎಂಬುದು ಆರಂಭದ ದಿನವು ಮತ್ತು **ಉದಯನೀಯ ಅತಿರಾತ್ರವು** ಕೊನೆಯ ದಿನವು. ಅತ್ಯಂತ ಕೊನೆಯದಾದ **ಉದಯನೀಯ ಅತಿರಾತ್ರಕ್ಕೆ** ಮೊದಲನೆಯ ಕಾರ್ಯಕಲಾಪಗಳಿಗೆ **ಮಹಾವ್ರತವೆಂದು** ಹೆಸರು. (ಇದು ಅಗ್ನಿಷ್ಟೋಮಾತ್ಮಕವಾದುದು) ಈ ಮಹಾಸತ್ರಕ್ಕೆ **ಚತರ್ವಿಂಶವು** ಆರಂಭಕರ್ಮವಾಗಿರುವಂತೆಯೇ **ಮಹಾವ್ರತವು** ಸಮಾಪ್ತಿರೂಪವಾದ ಕರ್ಮವಾಗಿರುತ್ತದೆ. **ಮಹಾವ್ರತದ** ಕಲಾಪವನ್ನು ಐತರೇಯ ಬ್ರಾಹ್ಮಣದಲ್ಲಿ ಈ ರೀತಿ ವಿವರಿಸಿದೆ

> **ಯದ್ವೈ ಚತುರ್ವಿಂಶಂ ತನ್ಮಹಾವ್ರತಂ ಬೃಹದ್ದಿವೇನಾತ್ರ ಹೋತಾ ರೇತಃ ಸಿಂಚತಿ ತದದೋ ಮಹಾವ್ರತೀಯೇನಾಹ್ನಾ ಪ್ರಜನಯತಿ ಸಂವತ್ಸರೇ ಸಂವತ್ಸರೇ ವೈ ರೇತಃ ಸಿಕ್ತಂ ಜಾಯತೇ ತಸ್ಮಾತ್ಸಮಾನಂ ಬೃಹದ್ದಿವಃ . . . . . . . . . ಯ ಏವಂ ವಿದ್ವಾನೇತದಹರುಪೈತಿ ।**
>
> (ಐ. ಬ್ರಾ. ೧೭-೮)

"ಗವಾಂ ಅಯನದ" ಪ್ರಾರಂಭದಲ್ಲಿ **ಚತುರ್ವಿಂಶಕ್ಕಿರತಕ್ಕ** ಪ್ರಾಧಾನ್ಯವೇ ಕೊನೆಯಲ್ಲಿ **ಮಹಾವ್ರತಕ್ಕಿರುತ್ತದೆ.** ಬೃಹದ್ದಿವ ಮಂತ್ರಗಳೊಡನೆ ಹೋತೃವು ಬೀಜರೂಪವಾದ ರೇತಸ್ಸನ್ನು ಸುರಿದು ಮಹಾವ್ರತದ ದಿನ ಪ್ರಜನನಕ್ರಿಯೆಗೆ ಸಾಹಾಯ್ಯಕನಾಗುತ್ತಾನೆ. ಯಾವ ಬೀಜವಾಗಲಿ ಒಂದು ವತ್ಸರದೊಳಗೆ ಫಲರೂಪವಾಗಿ ಪರಿಣಮಿಸುತ್ತದೆ. ಈ ತತ್ವವನ್ನರಿತವನು ವತ್ಸರದ ಪಾಶವನ್ನು ದಾಟಿ ಅನ್ನಸಂಪತ್ತನ್ನೂ ಸಂತಾನಸಂಪತ್ತನ್ನೂ ಪಡೆಯುವನು ಎಂಬ ಈ ವಿವರಣೆಯಿಂದ ಮುಖ್ಯವಾದ ಒಂದಂಶವು ತಿಳಿಯುವುದೇನೆಂದರೆ, **ಪ್ರವರ್ಗ್ಯಕರ್ಮದಂತೆಯೇ ಮಹಾವ್ರತ** ರೂಪವಾದ ಕರ್ಮದಿಂದಲೂ ಸಹ ಯಜ್ಞಬೀಜವನ್ನು ವತ್ಸರದವರೆಗೆ ರಕ್ಷಿಸಿ ನಂತರ ಅದು ಫಲಜನಕವಾಗುವಂತೆ ಮಾಡುವುದೇ ಈ ಕರ್ಮದ ಉದ್ದಿಶ್ಯವಾಗಿದೆಯೆಂದು ಹೇಳಬಹುದು. ಕಳೆದು ಹೋಗುತ್ತಿರುವ ವತ್ಸರಕ್ಕೂ ಆಗಾಮಿಯಾದ ವತ್ಸರಕ್ಕೂ ಒಂದು ಅನುಸ್ಯೂತವಾದ ಸಂಬಂಧವನ್ನು ಸಹ ಈ ಕರ್ಮವು ತೋರಿಸುತ್ತದೆ

ಈ ಕರ್ಮಕಾಲದಲ್ಲಿ **ಮಹದುಕ್ಥ** ರೂಪವಾದ ಸಾಮಪಠನವೇ ಪ್ರಧಾನವಾಗಿರುತ್ತದೆ. ಇದು **ಮಹಾವ್ರತ-ಗ್ರಹ** ವನ್ನು ಪ್ರಶಂಸಿಸುವುದಾಗಿರುತ್ತದೆ. ಪ್ರಥಮದಲ್ಲಿ **ಮಹಾವ್ರತ ಸಾಮಪಠನವೂ** ಅನಂತರ **ಮಹದುಕ್ಥ** ಪಠನವೂ

ಸಹ ಮಹಾವ್ರತದ ಮಹತ್ತ್ವವನ್ನು ತಿಳಿಸುತ್ತವೆ. ಈ ಪಠನದಲ್ಲಿ ಅಗ್ನಿ-ಪ್ರಜಾಪತಿಗಳ ರಹಸ್ಯತತ್ತ್ವವು ಅಡಗಿದೆ. ಈ ಮಹದುಕ್ಥವು ಐದು ವಿಭಾಗಗಳಿಂದ ಕೂಡಿದ್ದು ಅಗ್ನಿ-ಪ್ರಜಾಪತಿಸಂಯೋಗರೂಪವಾದುದೂ ಆದ ದೇಹತತ್ತ್ವದ ಐದು ವಿಭಾಗಗಳನ್ನು ಪ್ರತಿಬಿಂಬಿಸುತ್ತದೆ. ಅದು ಹೇಗೆಂದರೆ,

(೧) ಪಕ್ಷಿರೂಪವಾದದ್ದೂ ಆದ **ಗಾಯತ್ರಸಾಮವು** ತ್ರಿವೃತ್‌ಸ್ತೋಮಾತ್ಮಕವಾಗಿದ್ದು ತಲೆಯನ್ನೂ, (೨) **ರಥಂತರಸಾಮವು** ಪಂಚದಶಸ್ತೋಮಾತ್ಮಕವಾಗಿದ್ದು ಬಲಭಾಗದ ಪಕ್ಷವನ್ನೂ (೩) **ಬೃಹತ್ಸಾಮವು** ಸಪ್ತದಶಸ್ತೋಮಾತ್ಮಕವಾಗಿದ್ದು ಎಡಭಾಗದ ಪಕ್ಷವನ್ನೂ, (೪) **ಭದ್ರಸಾಮವು** ಏಕವಿಂಶಸ್ತೋಮಾತ್ಮಕವಾಗಿದ್ದು ಪುಚ್ಛವನ್ನೂ ಮತ್ತು (೫) **ರಾಜನ್ಯ ಸಾಮವು** ಪಂಚವಿಂಶಸ್ತೋಮಾತ್ಮಕವಾಗಿದ್ದು ಆತ್ಮನನ್ನೂ ಪ್ರತಿಬಿಂಬಿಸುತ್ತವೆ. **ಮಹಾವ್ರತ ಮಹಾವ್ರತಸಾಮ** ಮತ್ತು **ಮಹದುಕ್ಥ** ಇವುಗಳ ಮಹಾತ್ಮ್ಯವನ್ನೂ ಆಧ್ಯಾತ್ಮಿಕತತ್ತ್ವವನ್ನೂ ವಿವರಿಸುತ್ತಾ ಇವುಗಳ ಮಹಿಮೆಯನ್ನು ಶತಪಥ ಬ್ರಾಹ್ಮಣದಲ್ಲಿ ಈ ರೀತಿ ಪ್ರಶಂಸಿಸಿದೆ.

**ಪ್ರಜಾಪತಿರಿಮಾನ್ಲೋಕಾನ್ಸಿಸೃಕ್ಷತ್ । ಸ ಏತಂ ವಯೋವಿಧಮಾತ್ಮಾನಮಪಶ್ಯದಗ್ನಿಂ ತಂ ವ್ಯಧತ್ತ ತೇನೇಮಂ ಲೋಕಮಾಪ್ನೋತ್ಸ ದ್ವಿತೀಯಂ ವಯೋವಿಧಮಾತ್ಮಾನಮಪಶ್ಯನ್ಮಹಾವ್ರತಂ ತದ್ವ್ಯಧತ್ತ ತೇನಾಂತರಿಕ್ಷಮಾಪ್ನೋತ್ಸ ತೃತೀಯಂ ವಯೋವಿಧಮಾತ್ಮಾನಮಪಶ್ಯನ್ಮಹದುಕ್ಥಂ ತದ್ವ್ಯಧತ್ತ ತೇನ ದಿವಮಾಪ್ನೋತ್।**

ಪ್ರಜಾಪತಿಯು ಈ ಲೋಕಗಳನ್ನೆಲ್ಲಾ ಪಡೆಯುವ ಉದ್ದಿಶ್ಯವನ್ನು ಹೊಂದಿದನು. ಆಗ ಪಕ್ಷಿರೂಪನಾದ ಅಗ್ನಿಯನ್ನು (ಅಗ್ನಿಚಿತಿಯನ್ನು) ಸೃಷ್ಟಿಸಿದನು. ಅನಂತರ ಅದನ್ನು ನಿರ್ಮಿಸಿ ಐಹಿಕಲೋಕವನ್ನು ಪಡೆದನು. ಅನಂತರ ಅವನಿಗೆ ಎರಡನೇ ಪಕ್ಷಿರೂಪದ ಮಹಾವ್ರತದ ದರ್ಶನವಾಗಿ ಅದನ್ನು ನಿರ್ಮಿಸಿ ಅಂತರಿಕ್ಷಲೋಕವನ್ನು ಪಡೆದನು. ಕೊನೆಗೆ ಮೂರನೆಯ ಪಕ್ಷಿರೂಪದ ಮಹದುಕ್ಥದ ದರ್ಶನವಾಗಿ ಅದನ್ನು ನಿರ್ಮಿಸಿದನಂತರ ದ್ಯುಲೋಕವನ್ನು ಪಡೆದನು.

**ಅಯಂ ವಾವ ಲೋಕ ಏಷೋಽಗ್ನಿಶ್ಚಿತಃ । ಅಂತರಿಕ್ಷಂ ಮಹಾವ್ರತಂ ದ್ಯೌರ್ಮಹದುಕ್ಥಂ ತಸ್ಮಾದೇತಾನಿ ಸರ್ವಾಣಿ ಸಹೋಪೇಯಾದಗ್ನಿಂ ಮಹಾವ್ರತಂ ಮಹದುಕ್ಥಗ್ಂ ಸಹ ಹೀಮೇ ಲೋಕಾ ಅಸೃಜ್ಯಂತ ಇತ್ಯಧಿದೇವತಂ ।**

ಪ್ರಜಾಪತಿನಿರ್ಮಿತವಾದ ಈ ಅಗ್ನಿಚಿತಿಯೇ ಪಾರ್ಥಿವವಲೋಕವು. ಮಹಾವ್ರತವೇ ಅಂತರಿಕ್ಷವು. ಮಹದುಕ್ಥವೇ ದ್ಯುಲೋಕವು. ಈ ಲೋಕಗಳೆಲ್ಲವೂ ಪ್ರಜಾಪತಿಯಿಂದ ಒಟ್ಟಿಗೆ ಸೃಷ್ಟವಾದುದರಿಂದ ಅಗ್ನಿಚಿತಿ, ಮಹಾವ್ರತ ಮತ್ತು ಮಹದುಕ್ಥಗಳ ಸ್ವರೂಪಗಳನ್ನು ಒಟ್ಟಿಗೇ ಅರಿಯಬೇಕು. ಅವುಗಳಲ್ಲೂ ಪೃಥ್ವಿಯೇ ಪ್ರಥಮತಃ ಸೃಷ್ಟವಾದುದರಿಂದ ಪೃಥ್ವಿದೇವತೆಯಾದ ಅಗ್ನಿಚಿತಿಯೇ ಮೊದಲು ನಿರ್ಮಿವಾಯಿತು. ಇದು ದೇವತಾಸ್ವರೂಪವನ್ನು ವಿವರಿಸುವ ವರ್ಣನೆಯಾಯಿತು ಇದರಂತೆಯೇ ದೇಹತತ್ತ್ವವನ್ನು ವಿವರಿಸುತ್ತಾ,

**ಅಥಾಧ್ಯಾತ್ಮಂ । ಮನ ಏವಾಗ್ನಿಃ ಪ್ರಾಣೋ ಮಹಾವ್ರತಂ ವಾಙ್ಮಹದುಕ್ಥಂ . . . . . .**
**ಆತ್ಮೈವಾಗ್ನಿಃ । ಪ್ರಾಣೋ ಮಹಾವ್ರತಂ ವಾಙ್ಮಹದುಕ್ಥಂ . . . . . . .**
**ಶಿರ ಏವಾಗ್ನಿಃ । ಪ್ರಾಣೋ ಮಹಾವ್ರತಮಾತ್ಮಾ ಮಹದುಕ್ಥಂ . . . . . . .**

(ಶ. ಬ್ರಾ. ೧೦-೧-೨-೧ ರಿಂದ ೯)

ಅಧ್ಯಾತ್ಮತತ್ತ್ವವನ್ನು ವಿವರಿಸುತ್ತಾ, ಮನಸ್ಸೇ ಅಗ್ನಿಚಿತಿಯು, ಪ್ರಾಣವೇ ಮಹಾವ್ರತವು ಮತ್ತು ವಾಕ್ಕೇ ಮಹದುಕ್ಥವೆಂದೂ, ದೇಹತತ್ತ್ವವನ್ನು ವಿವರಿಸುತ್ತಾ—ಆತ್ಮನೇ ಅಗ್ನಿಚಿತಿಯೆಂದೂ, ಪ್ರಾಣವೇ ಮಹಾವ್ರತವೆಂದೂ ವಾಕ್ಕೇ ಮಹದುಕ್ಥವೆಂದೂ ಸಹ ವರ್ಣಿಸಿದೆ. ಮತ್ತು ಮಹಾವ್ರತದ ನಿರ್ವಚನವನ್ನು ತಿಳಿಸುತ್ತಾ,

" . . . . . . . ಯಜುಷ್ಟಃ ಪ್ರಾಣ ಏವ ಮಹಾಂಸ್ತಸ್ಯಾನ್ನಮೇವ ವ್ರತಂ
ತನ್ಮಹಾವ್ರತಗ್ಂ ಸಾಮತಃ ಪ್ರಾಣ ಉ ಏವೋಕ್ ತಸ್ಯಾನ್ನಮೇವ ಥಂ ತದುಕ್ಥಂ . . .

(ಶ್ರ. ಬ್ರಾ. ೧೦-೪-೧-೨೩)

ಯಜ್ಞಾಧ್ಯಕ್ಷನಾದ ಅಗ್ನಿಯೇ ಮಹಾನ್, ಅವನ ಅನ್ನವೇ ವ್ರತವು, ಆದುದರಿಂದ ಮಹಾವ್ರತವೆಂದೂ, ಪ್ರಾಣವೇ ಉಕ್, ಮತ್ತು ಅದರ ಅನ್ನವೇ ಥವು ಆದುದರಿಂದಲೇ ಉಕ್ಥವೆಂದೂ ಪ್ರಸಿದ್ಧವಾದುವು ಎಂದು ಅಧ್ಯಾತ್ಮಪಕ್ಷದ ನಿರ್ವಚನವನ್ನು ತಿಳಿಸಿದೆ. ಮತ್ತು ಮಹಾವ್ರತ (ಗ್ರಹ)ದ ಮಹಿಮೆಯನ್ನು ಸಹ ಈ ರೀತಿ ಪ್ರಶಂಸಿಸಿದೆ.

ಅಥಾತೋ ಮಹಾವ್ರತೀಯಸ್ಯೈವ । ಪ್ರಜಾಪತೇರ್ಹ ವೈ ಪ್ರಜಾಃ ಸಸೃಜಾನಸ್ಯ ಪರ್ವಾಣಿ ವಿಸಸ್ರಗ್ಂ ಸುಃ ಸ ವಿಸ್ರಸ್ತೈಃಪರ್ವಭಿರ್ನಶಶಾಕ ಸಂಹಾತುಂ ತತೋ ದೇವಾ ಅರ್ಚಂತಃ ಶ್ರಾಮ್ಯಂತಶ್ಚೇರುಸ್ತ ಏತಂ ಮಹಾವ್ರತೀಯಂ ದದೃಶುಸ್ತಮಸ್ಮಾ ಅಗೃಹ್ಣಂಸ್ತೇನಾಸ್ಯ ಪರ್ವಾಣಿ ಸಮದಧುಃ ।

ಪ್ರಜಾಪತಿಯು ಪ್ರಜೆಗಳನ್ನೆಲ್ಲಾ ಸೃಷ್ಟಿಸಿದನಂತರ ಆ ಶ್ರಮದಿಂದ ಅವನ ದೇಹದ ಸಂಧಿಗಳೆಲ್ಲಾ ಶಿಥಿಲಿತವಾದವು. ಆದುದರಿಂದ ಅವನಿಗೆ ಮೇಲಕ್ಕೇಳುವುದೇ ಶ್ರಮವಾಯಿತು. ದೇವತೆಗಳೆಲ್ಲರೂ ತಮ್ಮ ಶ್ರದ್ಧಾಪೂರ್ವಕವಾದ ಪ್ರಾರ್ಥನೆಯಿಂದ ಮಹಾವ್ರತಗ್ರಹದ ದರ್ಶನವನ್ನು ಪಡೆದು ಅವನನ್ನುದ್ದೇಶಿಸಿ ತೆಗೆದುಕೊಂಡು ಹೋಗಿ ಅರ್ಪಿಸಿದರು. ಆಗ ವನ ಸಂಧಿಗಳೆಲ್ಲವೂ ಸರಿಹೋದವು,

ಸ ಸಗ್ಂಹಿತೈಃ ಪರ್ವಭಿಃ।ಇದಮನ್ನಾದ್ಯಮಭ್ಯುತ್ತಿಸ್ಥೌ ಯದಿದಂ ಪ್ರಜಾಪತೇರನ್ನಾದ್ಯಂ ಯದ್ವೈ ಮನುಷ್ಯಾಣಾಮಶನಂ ತದ್ದೇವಾನಾಂ ವ್ರತಂ ಮಹದ್ವಾ ಇದಂ ವ್ರತಮಭೂದ್ಯೇನಾಯಗ್ಂ ಸಮಹಾಸ್ತೇತಿ ತಸ್ಮಾನ್ಮಹಾವ್ರತೀಯೋ ನಾಮ ।

(ಶ. ಬ್ರಾ. ೪-೬-೪-೧ ರಿಂದ ೨)

ಪ್ರಜಾಪತಿಯು ಸಂಧಿಗಳು ಸರಿಹೋದಾಗ ಮಹಾವ್ರತೀಯಗ್ರಹರೂಪವಾದ ಈ ಅನ್ನವನ್ನು ಸ್ವೀಕರಿಸಿದನು. ಪ್ರಜಾಪತಿಗೂ ಅವನಿಂದ ಸೃಷ್ಟವಾದ ಪ್ರಜೆಗಳಿಗೂ ಯಾವುದು ಅನ್ನವೋ ಅದೇ ದೇವತೆಗಳಿಗೂ ಸಹ ವ್ರತರೂಪವಾದ ಅನ್ನವು. ಪ್ರಜಾಪತಿಗೂ ಸಹ ದೇಹಯಾತನೆಯನ್ನು ಸರಿಪಡಿಸಿ ಅವನು ಚೈತನ್ಯಯುಕ್ತನಾಗುವಂತೆ ಮಾಡುವ ಮಹತ್ತ್ವವುಳ್ಳೋಣದರಿಂದಲೇ ಇದಕ್ಕೆ ಮಹಾವ್ರತ ವೆಂಬ ಹೆಸರು ಪ್ರಸಿದ್ಧವಾಯಿತು ಎಂದು ಇದರ ಸ್ತುತಿಯಿದೆ. ಇಂತಹ ಮಹತ್ತ್ವವುಳ್ಳ ಮಹಾವ್ರತದ ಲಕ್ಷಣವೇನು ಎಂಬುದನ್ನು ಐತರೇಯಾರಣ್ಯಕದಲ್ಲಿ ಬಹಳ ವಿಸ್ತೃತವಾಗಿ ತಿಳಿಸಿದೆ. ಪ್ರಕೃತದಲ್ಲಿ ಅದರ ವಿವರಣೆಯನ್ನು ಪೂರ್ಣವಾಗಿ ತಿಳಿಸಲು ಸಾಧ್ಯವಿಲ್ಲದುದರಿಂದ ಸಂಕ್ಷೇಪವಾಗಿ ತಿಳಿಸಲಾಗುತ್ತದೆ. ವಿಶೇಷಾಂಶವನ್ನು ಮುಂದೆ ತಿಳಿಸಲಾಗುವುದು.

**ಅಥ ಮಹಾವ್ರತಂ । ಇಂದ್ರೋ ವೈ ವೃತ್ರಂ ಹತ್ವಾ ಮಹಾನಭವದ್ಯನ್ಮಹಾನಭವತ್ತನ್ಮಹಾವ್ರತೇ-ಮಭವತ್ತನ್ಮಹಾವ್ರತಸ್ಯ ಮಹಾವ್ರತತ್ವಂ ।**

(ಐತರೇಯ ಆರಣ್ಯಕಂ ೧-೧)

ಇಂದ್ರನು ವೃತ್ರನನ್ನು ಕೊಂದು ತನ್ನ ಮಹತ್ತ್ವವನ್ನು ಪ್ರಕಟಿಸಿದನು. ಅನಂತರ ಆ ಮಾಹಾತ್ಮ್ಯವನ್ನು ಕೊಂಡಾಡುವ ಮಹಾವ್ರತವು ಆರಂಭವಾಯಿತು. ಆದುದರಿಂದಲೇ ಮಹಾವ್ರತವೆಂಬ ಕರ್ಮಕ್ಕೂ ಇದೇ ಹೆಸರು ಬಂದಿತು. ವೃತ್ರಾಸುರಹನನರೂಪವಾದ ಈ ಕರ್ಮದಿಂದಲೇ ಇಂದ್ರನಿಗೆ **ಮಹೇಂದ್ರನೆಂಬ** ಹೆಸರೂ ಪ್ರಸಿದ್ಧ ವಾಯಿತು ಎಂಬ ಕಥಾಸನ್ನಿವೇಶವು "**ಇಂದ್ರೋ ವೈ ವೃತ್ರಂ ಹತ್ವಾ . . . . .ಯನ್ಮಹಾನಿಂದ್ರೋಽಭವತ್ತನ್ಮ-ಹೇಂದ್ರಸ್ಯಮಹೇಂದ್ರತ್ವಂ**" ಇತ್ಯಾದಿ ವಾಕ್ಯಗಳಿಂದ ಐತರೇಯ ಬ್ರಾಹ್ಮಣದಲ್ಲೂ (೧೨-೧೦) ಮತ್ತು ತೈತ್ತರೀಯ ಸಂಹಿತೆಯಲ್ಲೂ (೬-೫-೫-೩) ವಿವೃತವಾಗಿದೆ. ಐತರೇಯಾರಣ್ಯಕದಲ್ಲಿ "**ತನ್ಮಹಾವ್ರತಸ್ಯ ಮಹಾವ್ರತತ್ವಂ**" ಎಂಬ ವಾಕ್ಯದಿಂದ ಇಂದ್ರನ ಮಹತ್ತ್ವವನ್ನು ಕೊಂಡಾಡುವ ಸನ್ನಿವೇಶವನ್ನು ಹೇಳಿದ್ದರೂ ಸಹ ಸಾಯಣರು ಈ ಸಂದರ್ಭದಲ್ಲಿ ವ್ಯಾಖ್ಯಾನವನ್ನು ಹೇಳುವಾಗ ತೈತ್ತಿರೀಯಬ್ರಾಹ್ಮಣದಲ್ಲಿ ಉಕ್ತವಾಗಿರುವ ನಿರ್ವಚನವನ್ನೇ ತಿಳಿಸಿ ದ್ದಾರೆ. ಮೇಲೆ ಶತಪಥಬ್ರಾಹ್ಮಣದಿಂದ ಉದಾಹೃತವಾಗಿರುವ ವಾಕ್ಯಗಳಲ್ಲಿ ಪ್ರಜಾಪತಿಯ ಶ್ರಮಪರಿಹಾರಕ್ಕಾಗಿ ಮಹಾವ್ರತದ ಅರ್ಪಣೆಯ ಸನ್ನಿವೇಶವನ್ನು ವಿವರಿಸಿರುವಂತೆಯೇ ತೈತ್ತಿರೀಯಬ್ರಾಹ್ಮಣದಲ್ಲೂ ಅದೇ ವಿಷಯವನ್ನು ತಿಳಿಸಿದೆ. ಆ ವಿವರಣೆಯ ಕ್ರಮವು ಈ ರೀತಿಯಲ್ಲಿದೆ. ಮತ್ತು ಶತಪಥದ ವಿವರಣೆಗಿಂತ ಕೊಂಚ ವ್ಯತ್ಯಸ್ತವಾಗಿದೆ.

**ಪ್ರಜಾಪತಿಃ ಪ್ರಜಾಃ ಸೃಷ್ಟ್ವಾ ವೃತ್ತೋಽಶಯತ್ । ತಂ ದೇವಾ ಭೂತಾನಾಗ್ಂ ರಸಂ ತೇಜಃ ಸಂಭೃತ್ಯ । ತೇನೈನಮಭಿಷಜ್ಯನ್ । ಮಹಾನವವರ್ತೀತಿ । ತನ್ಮಹಾವ್ರತಸ್ಯ ಮಹಾವ್ರತತ್ತ್ವಂ । ಮಹದ್ವ್ರತಮಿತಿ । ತನ್ಮಹಾವ್ರತಸ್ಯ ಮಹಾವ್ರತತ್ವಂ । ಮಹತೋ ವ್ರತಮಿತಿ । ತನ್ಮಹಾವ್ರತಸ್ಯ ಮಹಾವ್ರತತ್ವಂ ॥**

(ತೈ ಬ್ರಾ. ೧-೨-೬-೧)

ಎಂಬ ವಿವರಣೆಯಲ್ಲಿ ಸೃಷ್ಟಿವ್ಯಾಪಾರದಿಂದ ಶಾಂತನಾದ ಪ್ರಜಾಪತಿಯು ಶ್ರಮದಿಂದ ಬಳಲಿ ಬಿದ್ದುಕೊಂ ಡಾಗ ದೇವತೆಗಳು ಸಕಲ ಪ್ರಜೆಗಳ ಸಾರಭೂತವಾವ ತೇಜಸ್ಸನ್ನು ಸಂಪಾದಿಸಿ ಅದರ ಸಹಾಯದಿಂದ ಅವನ ಶ್ರಮ ವನ್ನು ಪರಿಹರಿಸಿದರು ಆದುದರಿಂದ ಪ್ರಜಾಪತಿಯು **ಮಹಾನ್** ಆದನು. ಸಾರಭೂತವಾದ ಈ ತೇಜಸ್ಸೇ ಮಹಾವ್ರತ ಕಾಲದಲ್ಲಿ ಅರ್ಪಿಸಲ್ಪಡತಕ್ಕ ಹವಿಸ್ಸಾಗಿದೆಯೆಂದು ತಿಳಿಸಿ, ಮಹಾವ್ರತಕ್ಕೆ ಈ ಹೆಸರು ಏತಕ್ಕೆ ಪ್ರಸಿದ್ಧ ವಾಯಿತು ಎಂಬುದನ್ನು ವಿವರಿಸಿರುತ್ತಾರೆ.

**ಮಹಾನವರ್ತಿಷ್ಟ ಅನೇನ ಕರ್ಮಣಾ ಇತಿ ವ್ಯುತ್ಪತ್ತ್ಯಾ ತಸ್ಯ ಕರ್ಮಣಃ ಮಹಾವ್ರತಮಿತಿ ನಾಮ ಸಂಪನ್ನಂ । ಯದ್ವಾ ಕರ್ಮಣೋಽಸ್ಯ ಮಹಾಫಲಹೇತುತ್ವೇನ ಮಹತ್ವಾನ್ ಮಹಚ್ಚ ತದ್ವ್ರತಮಿತಿ ತದ್ವ್ಯುತ್ಪತ್ತಿಃ । ಅಥವಾ ಮಹತಃ ಪ್ರಜಾಪತೇರೌಷಧರೂಪತ್ವಾನ್ಮಹತೋ ವ್ರತಮಿತಿ ವ್ಯುತ್ಪತ್ತಿಃ ॥**

ಹವಿಸ್ಸಿನ ಅರ್ಪಣರೂಪವಾದ ಕರ್ಮದಿಂದ ಪ್ರಜಾಪತಿಯು ಮಹಾನ್ ಆದನು ಎಂಬ ತಾತ್ಪರ್ಯವಿರುವುದರಿಂದಾಗಲಿ ಅಥವಾ ಮಹಾಫಲವನ್ನು ಕೊಡುವ ಸಾಮರ್ಥ್ಯವೂ ಸ್ವರೂಪಯೋಗ್ಯತೆಯೂ ಇರುವ ಕರ್ಮವಾಗಿರುವುದರಿಂದಾಗಲಿ ಅಥವಾ ಮಹಾನ್ ಆದ ಪ್ರಜಾಪತಿಗೆ ಔಷಧರೂಪವಾದುದರಿಂದಾಗಲಿ ಈ ಕರ್ಮಕ್ಕೆ ಮಹಾವ್ರತವೆಂದು ಹೆಸರು ಎಂದು ಸಾಯಣರು ತಿಳಿಸಿದ್ದಾರೆ. ಇಂತಹ ಮಹಾವ್ರತದ ಕಾಲದಲ್ಲಿ ಪ್ರಕೃತವಾದ ಸೂಕ್ತದ ಪಠನವು ವಿಧ್ಯುಕ್ತವಾಗಿರುತ್ತದೆ. ಇದನ್ನೇ,

**ಕತರಾ ಪೂರ್ವಾ ಕತರಾಪರಾಯೋರಿತಿ ದ್ಯಾವಾಪೃಥಿವೀಯಂ ಸಮಾನೋದರ್ಕಂ ಸಮಾನೋದರ್ಕಂ ವಾ ಏತದಹರೇತಸ್ಯಾಹ್ನೋ ರೂಪಂ ||**

(ಐ. ಆ. ೧-೫-೩)

ಎಂಬ ವಾಕ್ಯಗಳಲ್ಲಿ ತಿಳಿಸಿದೆ ಪ್ರಕೃತವಾದ ಋಕ್ಕಿಗೆ ನಿರುಕ್ತಕಾರರ ನಿರ್ವಚನವು ಈ ರೀತಿಯಲ್ಲಿದೆ.

**ಕತರಾ ಪೂರ್ವಾ ಕತರಾಪರಾ | ಏನಯೋಃ ಕಥಂ ಜಾತೇ ಕವಯಃ ಕ ಏನೇ ವಿಜಾನಾತಿ | ಸರ್ವಮಾತ್ಮನಾ ಬಿಭೃತೋ ಯದ್ಧೈನಯೋಃ ಕರ್ಮ ವಿವರ್ತೇತೇ ಚೈನಯೋರಹನೀ ಅಹೋರಾತ್ರೇ ಚಕ್ರಿಯೇವ ಚಕ್ರಯುಕ್ತೇ ಇವೇತಿ ದ್ಯಾವಾಪೃಥಿವ್ಯೋರ್ಮಹಿಮಾನಮಾಚಷ್ಟ ಆಚಷ್ಟೇ**

(ನಿ. ೩-೨೨)

ಈ ಎರಡುದೇವತೆಗಳಲ್ಲಿ ಪೂರ್ವಭಾವಿಯಾದ ದೇವತೆಯು ಯಾರು ? ಇವರ ಉತ್ಪತ್ತಿಯ ಕ್ರಮವೇನು ? ಎಲೈ ಋಷಿಗಳೇ, ನಿಮ್ಮಲ್ಲಿ ಯಾರಿಗೆ ಈ ರಹಸ್ಯವು ಗೊತ್ತಿದೆ ? ವಿಶ್ವದ ಸಕಲ ಭೂತಗಳಿಗೂ ಇವರೇ ಆಧಾರವು. ರಥದ ಎರಡು ಚಕ್ರಗಳಂತೆ ಅಹೋರಾತ್ರಗಳೆರಡೂ ಸಹ ಇವರನ್ನು ಅನುಸ್ಯೂತವಾಗಿ ಸುತ್ತುತ್ತಿವೆ ಎಂಬುದಾಗಿ ವಿವರಿಸಿದೆ. " **ಕತರಾ ಪೂರ್ವಾ ಕತರಾ ಅಪರಾ** " ಎಂಬುದಕ್ಕೆ ದುರ್ಗಾಚಾರ್ಯರು ವಿವರಣೆಯನ್ನು ಹೇಳುತ್ತಾ, " **ಕಿಂ ಪೌರ್ವಾಪರ್ಯೇಣ, ಉತ ಯುಗಪತ್ ಭವೇತಾಂ** " ಒಬ್ಬರಾದ ನಂತರ ಇನ್ನೊಬ್ಬರು ಉತ್ಪನ್ನರಾದರೇ ಅಥವಾ ಇಬ್ಬರೂ ಒಟ್ಟಿಗೆ ಜನಿಸಿದರೇ ಎಂಬುದೇ ಪ್ರಶ್ನೆಯೆಂದು ತಿಳಿಸಿದ್ದಾರೆ. ಈ ದೇವತೆಗಳ ಉತ್ಪತ್ತಿಯ ವಿಷಯದಲ್ಲಿ ಒಂದೊಂದು ಸಲ ಆಶ್ಚರ್ಯವೂ, ಕೆಲವು ಸಲ ಅನಿಶ್ಚಿತವಾದ ಊಹೆಯೂ ಸ್ವಾಭಾವಿಕವಾಗಿದೆ.

**ಕಿಂ ಸ್ವಿದ್ವನಂ ಕ ಉ ಸ ವೃಕ್ಷ ಆಸ ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ |**
**ಸಂತಸ್ಥಾನೇ ಅಜರೇ ಇತ ಊತೀ ಅಹಾನಿ ಪೂರ್ವೀರುಷಸೋ ಜರಂತ ||**

(ಋ. ಸಂ. ೧೦-೩೧-೭)

ಅಸಂಖ್ಯಾತವಾದ ಅಹಸ್ಸುಗಳೂ ಉಷಸ್ಸುಗಳೂ ಸಹ ಉರುಳಿಹೋಗುತ್ತಿರುವಾಗ ನಾಶರಹಿತವಾಗಿಯೂ ಅವಿಚ್ಛಿನ್ನವಾಗಿಯೂ ಸ್ಥಿರವಾಗಿಯೂ ನಿಂತಿರತಕ್ಕ ಈ ದ್ಯಾವಾಪೃಥಿವಿಗಳನ್ನು ಯಾವ ವನದ ಯಾವ ವೃಕ್ಷಗಳಿಂದ ನಿರ್ಮಿಸಿದೆ ಎಂದು ಋಷಿಯು ತನ್ನ ಪ್ರಶಂಸಾಪೂರ್ವಕವಾದ ಆಶ್ಚರ್ಯವನ್ನು ವ್ಯಕ್ತಪಡಿಸಿದ್ದಾನೆ.

" **ಕ್ವಿಂ ಸ್ವಿದ್ವನಂ** " ಎಂಬ ಋಕ್ಕಿನಲ್ಲಿ (ಋ. ಸಂ. ೧೦-೩೧-೭) ವ್ಯಕ್ತಪಡಿಸಿರುವ ಜಿಜ್ಞಾಸೆಯನ್ನು ಇನ್ನೂ ಅನೇಕ ಕಡೆಗಳಲ್ಲಿ ಸೂಚಿಸಿದೆ. ಕೆಲವೆಡೆಗಳಲ್ಲಿ ತಕ್ಕ ಉತ್ತರವೂ ಹೇಳಲ್ಪಟ್ಟಿದೆ. ಉದಾಹರಣೆಗೆ,

ಕಿಂಸ್ವಿದಾಸೀದಧಿಷ್ಠಾನಮಾರಂಭಣಂ ಕಥಮತ್ಸ್ವಿತ್ಕಥಾಸೀತ್ ।
ಯತೋ ಭೂಮಿಂ ಜನಯನ್ ವಿಶ್ವಕರ್ಮಾ ವಿ ದ್ಯಾಮೌರ್ಣೋನ್ಮಹಿನಾ ವಿಶ್ವಚಕ್ಷಾಃ ॥

(ಋ. ಸಂ. ೧೦-೮೧-೨)

ಪೃಥ್ವಿಯನ್ನು ಸೃಷ್ಟಿಸಿ ಅಂತರಿಕ್ಷವನ್ನು ವಿಸ್ತರಿಸಿ ಹರಡುವಂತೆ ಮಾಡಿದ ವಿಶ್ವಚಕ್ಷುಸ್ಸುಳ್ಳ ವಿಶ್ವಕರ್ಮನಿಗೆ ಇವುಗಳ ನಿರ್ಮಾಣಕ್ಕೆ ಇದ್ದ ಆಧಾರವೇನು ಎಂದು ಪ್ರಶ್ನಿಸಿದೆ. ಇದಕ್ಕೆ ಉತ್ತರರೂಪದಲ್ಲಿ,

ಕಿಗ್ಂ ಸ್ವಿದ್ವನಂ ಕ ಉ ಸ ವೃಕ್ಷ ಆಸೀತ್। ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ। ಮನೀಷಿಣೋ ಮನಸಾ ಪೃಚ್ಛತೇದು ತತ್ । ಯದಧ್ಯತಿಷ್ಠದ್ಭುವನಾನಿ ಧಾರಯನ್ । ಬ್ರಹ್ಮ ವನಂ ಬ್ರಹ್ಮ ಸ ವೃಕ್ಷ ಆಸೀತ್ । ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ । ಮನೀಷಿಣೋ ಮನಸಾ ವಿಬ್ರವೀಮಿ ವಃ । ಬ್ರಹ್ಮಾಧ್ಯತಿಷ್ಠದ್ಭುವನಾನಿ ಧಾರಯನ್ ॥

(ತೈ. ಬ್ರಾ. ೨-೮-೯-೬-೭)

ಈ ದ್ಯಾವಾಪೃಥಿವಿಗಳ ಸೃಷ್ಟಿಗೆ ಬ್ರಹ್ಮನೇ ( ನಾಶವಿಲ್ಲದ ಬ್ರಹ್ಮನೆಂಬ ವಸ್ತುವೇ ) ವನವು. ಮತ್ತು ಬ್ರಹ್ಮನೇ ವೃಕ್ಷವು. ಅದರಿಂದಲೇ ಇವುಗಳ ನಿರ್ಮಾಣವು. ಎಂದು ತೈತ್ತಿರೀಯಬ್ರಾಹ್ಮಣದಲ್ಲಿ ತಿಳಿಸಿದೆ.

ಕವಯಃ—ಕ್ರಾಂತದರ್ಶನಃ—ಅತೀಂದ್ರಿಯಜ್ಞಾಃ । ಎಂದು ಕವಿಶಬ್ದಕ್ಕೆ ಅರ್ಥವನ್ನು ಹೇಳಿದ್ದಾರೆ. "ಮೇಧಾವೀ ಕವಿಃ ಕ್ರಾಂತದರ್ಶನೋ ಭವತಿ ಕವತೇರ್ವಾ" (ನಿ. ೧೨-೧೩) ಎಂಬ ನಿರುಕ್ತಕಾರರ ವಾಕ್ಯವನ್ನುದಾಹರಿಸಿ ಹಿಂದೆ ಕವಿಶಬ್ದದ ನಿರ್ವಚನವನ್ನು ತಿಳಿಸಿದೆ. ಕವಿಯ ಸ್ವರೂಪವೇನು ಮತ್ತು ಅವನ ಶಕ್ತಿಯೇನು ಯಾವ ಸ್ವರೂಪ ಮತ್ತು ಶಕ್ತಿಗಳನ್ನು ತಿಳಿಸಲು ಋಕ್ಸಂಹಿತೆಯಲ್ಲಿ ಕವಿ ಶಬ್ದದ ಪ್ರಯೋಗವಿದೆ ಎಂಬುದನ್ನು ಸಹ ಹಿಂದೆ ಸೂಕ್ಷ್ಮವಾಗಿ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ವಿಶ್ವತತ್ತ್ವವನ್ನು ಪ್ರತಿಬಿಂಬಿಸುವ ದ್ಯಾವಾಪೃಥಿವಿಗಳ ರಹಸ್ಯವನ್ನು ಅರಿತಿರುವವನು ಯಾರು ? ಎಂದು ಪ್ರಶ್ನಿಸಿ, "ಕವಯಃ, ಕೋ ವಿವೇದ" ಅತೀಂದ್ರಿಯಜ್ಞರಾದ ಎಲೈ ಋಷಿಗಳೇ, ಈ ತತ್ತ್ವವನ್ನು ಯಾವನು ಪೂರ್ಣವಾಗಿ ಅರಿತಿದ್ದಾನೆ ಎಂದು ಕೇಳಿದೆ. ಎಂದರೆ ಕೇವಲ ಸಾಧಾರಣವಾದುದೂ ಭೌತಿಕವಾದುದೂ ಆದ ದೃಷ್ಟಿಗೆ ಈ ರಹಸ್ಯವು ತಿಳಿಯತಕ್ಕದ್ದಲ್ಲ. ಈ ರಹಸ್ಯವನ್ನು ಭೇದಿಸಿ ಅರ್ಥ ಮಾಡಿಕೊಳ್ಳಲು ಯೋಗ್ಯತೆಯುಳ್ಳ ಅಸಾಧಾರಣವಾದ ಶಕ್ತಿಯಿರಬೇಕು. ಅಂತಹ ಅಸಾಧಾರಣವಾದ ದರ್ಶನಶಕ್ತಿಯುಳ್ಳವನೇ ಕವಿಯೆಂದು ಕರೆಯಲ್ಪಡುತ್ತಾನೆ.

ಸಮಾನಂ ನೀಳಂ ವೃಷಣೋ ವಸಾನಾಃ ಸಂ ಜಗ್ಮಿರೇ ಮಹಿಷಾ ಅರ್ವತೀಭಿಃ ।
ಋತಸ್ಯ ಪದಂ ಕವಯೋ ನಿ ಪಾಂತಿ ಗುಹಾ ನಾಮಾನಿ ದಧಿರೇ ಪರಾಣಿ ।

(ಋ. ಸಂ. ೧೦-೫-೨)

ಇತ್ಯಾದಿ ಋಕ್ಕುಗಳಲ್ಲಿ ಕವಿಯ ನಿಜವಾದ ಸ್ವರೂಪವನ್ನು ವರ್ಣಿಸಿದೆ. ಕವಿಗಳು ಋತದ ಪಥವನ್ನು ಪ್ರವೇಶಿಸಿ ಅತ್ಯಂತ ಗೂಢವಾದ ಹೃದಯದಲ್ಲಿ ಅತ್ಯುತ್ತಮವಾದ ರಹಸ್ಯದ ನಾಮಗಳನ್ನು ಧರಿಸಿದ್ದಾರೆ. ಮತ್ತು ಅದನ್ನು ಪ್ರಕಾಶಪಡಿಸಿ ಲೋಕಕ್ಕೆ ತಿಳಿಯುವಂತೆ ಮಾಡುತ್ತಾರೆ ಎಂದು ವರ್ಣಿತವಾಗಿದೆ. ಎಂದರೆ ಗೂಢವಾಗಿ ಅಡಗಿ ಲೋಕದ

ದೃಷ್ಟಿಗೆ ಗೋಚರವಾಗದಿರುವ ಅಂಶಗಳನ್ನು ತನ್ನ ಅಂತರ್ದೃಷ್ಟಿಯಿಂದ ಅರಿತು ಲೋಕದ ದೃಷ್ಟಿಗೂ ಕೊಂಚ ತಿಳಿಯು ವಂತೆ ಮಾಡಬಲ್ಲ ಸಾಮರ್ಥ್ಯವುಳ್ಳವನೆಂಬರ್ಥದಲ್ಲಿ ಈ ಪದದ ಪ್ರಯೋಗವಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಇಂತಹ ಅತೀಂದ್ರಿಯಜ್ಞಾನವನ್ನು ಪಡೆದಿರುವ ಋಷಿಗಳನ್ನು ಸಂಬೋಧಿಸಿ ದ್ಯಾವಾಪೃಥಿವಿಗಳ ರಹಸ್ಯತತ್ತ್ವವೇನು? ಎಂದು ಪ್ರಶ್ನಿಸಿದೆ.

**ವಿಶ್ವಂ ತ್ಮನಾ ಬಿಭೃತಃ**—ವಿಶ್ವಪಾಲಕರಾದ ದ್ಯುಲೋಕಾಧಿದೇವತೆಯೂ ಭೂದೇವಿಯೂ ಸಹ ಸಕಲ ಲೋಕಗಳನ್ನೂ ತಮ್ಮಲ್ಲೇ ಧರಿಸಿದ್ದಾರೆ ಮತ್ತು ತಾವೇ ಅವನ್ನೆಲ್ಲಾ ಭರಿಸುತ್ತಾರೆ ಎಂದು ಸ್ತುತಿಸಿದೆ.

> **ನಮೋ ದ್ಯಾವಾಪೃಥಿವೀಭ್ಯಾಮಿತಿ ತದಾಭ್ಯಾಂ ದ್ಯಾವಾಪೃಥಿವೀಭ್ಯಾಂ ನಿಹ್ನುವತೇ ಯಯೋರಿದಂ ಸರ್ವಮಧಿ ।**
>
> (ಶ. ಬ್ರಾ. ೩-೪-೩-೨೧)

ಇತ್ಯಾದ್ಯನೇಕ ಕಡೆಗಳಲ್ಲಿ ಸಕಲ ಲೋಕಗಳ ಸ್ಥಿತಿಯೂ, ಭರಣವೂ ಮತ್ತು ಸಕಲವಾದ ರಕ್ಷಣಾವ್ಯಾಪಾರವೂ ದ್ಯಾವಾಪೃಥಿವಿಗಳನ್ನೇ ಆಶ್ರಯಿಸಿವೆ ಎಂದು ಹೇಳಿರುವ ವಿಷಯವನ್ನು ತಿಳಿಸಿದೆ. ಇದೇ ಭಾವವನ್ನು ಹಿಂದೆ,

> **ಉರುವ್ಯಚಸಾ ಮಹಿನೀ ಅಸಶ್ಚತಾ ಪಿತಾ ಮಾತಾ ಚ ಭುವನಾನಿ ರಕ್ಷತಃ ।**
> **ಸುಧೃಷ್ಟಮೇ ವಪುಷ್ಯೇ೩ ನ ರೋದಸೀ ಪಿತಾ ಯತ್ಸೀಮಭಿ ರೂಪೈರವಾಸಯತ್ ॥**
>
> (ಋ. ಸಂ ೧-೧೬೦-೨)

ಎಂಬ ಋಕ್ಕಿನ ವಿಶೇಷ ವಿಷಯಗಳನ್ನು ತಿಳಿಸುವಾಗ ವಿವರಿಸಿದೆ.

### ವ್ಯಾಕರಣಪ್ರಕ್ರಿಯಾ

**ಕತರಾ**—ಕಿಮ್ ಶಬ್ದ. **ಕಿಂಯತ್ತದೋಃ ನಿರ್ಧಾರಣೇದ್ವಯೋಃ** (ಪಾ. ಸೂ. ೫-೩-೯೨) ಎಂಬುದ ರಿಂದ ನಿರ್ಧಾರಣಾರ್ಥ ತೋರುವಾಗ ಡತರಚ್ ಪ್ರತ್ಯಯ. ಡಿತ್ತಾದುದರಿಂದ ಟಿಗೆ (ಅ ಇಮ್) ಲೋಪ. **ಚಿತಃ** (ಪಾ. ಸೂ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಅದಂತವಾದುದರಿಂದ ಸ್ತ್ರೀತ್ವದಲ್ಲಿ ಟಾಪ್.

**ಅಯೋಃ**—ಅನಯೋಃ ಎಂದು ರೂಪವಾದಾಗ ಛಾಂದಸವಾಗಿ ನಕಾರಕ್ಕೆ ಲೋಪ.

**ಕಥಾ—ಥಾಹೇತೌ ಚ ಛಂದಸಿ** (ಪಾ ಸೂ. ೫-೩-೩೬) ಎಂಬುದರಿಂದ ಕಿಮ್ ಶಬ್ದಕ್ಕೆ ಥಾ ಪ್ರತ್ಯಯ. ವಿಭಕ್ತಿ ಸಂಜ್ಞಾ ಇರುವುದರಿಂದ **ಕಿಮಃ ಕಃ** ಸೂತ್ರದಿಂದ ಕಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಕವಯಃ**—ಕು ಶಬ್ದೇ. ಧಾತು. **ಅಚಇಃ** ಎಂಬುದರಿಂದ ಇ ಪ್ರತ್ಯಯ. **ಸಾರ್ವಧಾತುಕಾರ್ಧ-ಧಾತುಕಯೋಃ** ಎಂಬುದರಿಂದ ಉಕಾರಕ್ಕೆ ಅವಾದೇಶ. ಸಂಬೋಧನಾ ಬಹುವಚನಾಂತರೂಪ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ತ್ಮನಾ—ಮಂತ್ರೇಷ್ವಾಙ್ಯಾದೇರಾತ್ಮನಃ** (ಪಾ. ಸೂ. ೬-೪-೧೪೧) ಎಂಬುದರಿಂದ ಆದಿಯ ಆಕಾರಕ್ಕೆ ಲೋಪ.

**ವರ್ತೇತೇ**—ವೃತು ವರ್ತನೇ. ಧಾತು. ಲಟ್ ಪ್ರಥಮಪುರುಷದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ

**ಚಕ್ರಿಯಾಇವ** — ವ್ಯತ್ಯಯದಿಂದ ಮತ್ವರ್ಥದಲ್ಲಿ. **ಮತೌಚ** (ಪಾ. ಸೂ ೪-೪-೧೩೬) ಎಂಬುದರಿಂದ ಘ ಪ್ರತ್ಯಯ. **ಆಯನೇಯೀ**—ಸೂತ್ರದಿಂದ ಅದಕ್ಕೆ ಇಯಾದೇಶ. **ಸುಪಾಂ ಸುಲುಕ್** ಸೂತ್ರದಿಂದ ದ್ವಿವಚನಪರವಾದಾಗ ಅದಕ್ಕೆ ಆಕಾರಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

———— o ————

ಸಂಹಿತಾಪಾಠಃ

ಭೂರಿಂ ದ್ವೇ ಅಚರಂತೀ ಚರಂತಂ ಪದ್ವಂತಂ ಗರ್ಭಮಪದೀ ದಧಾತೇ ।
ನಿತ್ಯಂ ನ ಸೂನುಂ ಪಿತ್ರೋರುಪಸ್ಥೇ ದ್ಯಾವಾ ರಕ್ಷತಂ ಪೃಥಿವೀ ನೋ
ಅಭ್ವಾತ್ ॥ ೨ ॥

ಪದಪಾಠಃ

ಭೂರಿಂ । ದ್ವೇ ಇತಿ । ಅಚರಂತೀ ಇತಿ । ಚರಂತಂ । ಪತ್ಽವಂತಂ । ಗರ್ಭಂ । ಅಪದೀ ಇತಿ । ದಧಾತೇ ಇತಿ ।
ನಿತ್ಯಂ । ನ । ಸೂನುಂ । ಪಿತ್ರೋಃ । ಉಪಽಸ್ಥೇ । ದ್ಯಾವಾ । ರಕ್ಷತಂ । ಪೃಥಿವೀ ಇತಿ । ನಃ । ಅಭ್ವಾತ್ ॥೨॥

ಸಾಯಣಭಾಷ್ಯಂ

ಅಚರಂತೀ ಅವಿಚಲೇ ದ್ವೇ ಏವೈತೇ ದ್ಯಾವಾಪೃಥಿವ್ಯೌ ಭೂರಿಂ ಬಹುತರಂ ಚರಂತಂ ಪದ್ವಂತಂ ಪಾದಯುಕ್ತಂ ಗರ್ಭಂ ಗರ್ಭವದಾಶ್ರಿತಂ ಕೃತ್ಸ್ನಂ ಪ್ರಾಣಿಜಾತಮಪದೀ ಸ್ವಯಂ ಪಾದರಹಿತೇ ದಧಾತೇ ಧಾರಯತಃ । ಅನಯೋರ್ಮಧ್ಯೇ ಖಲು ಸರ್ವಂ ಜಗತ್ಕ್ಷೇಮೇಣ ವರ್ತತೇ । ಧಾರಣೇ ದೃಷ್ಟಾಂತಃ । ಪಿತ್ರೋರ್ಮಾತಾಪಿತ್ರೋರುಪಸ್ಥ ಉತ್ಸಂಗೇ ವರ್ತಮಾನಂ ನಿತ್ಯಂ ಧ್ರುವಮಾತ್ಮಜಂ ಸೂನುಂ ನ ಪುತ್ರಮಿವ ಯಥಾ ಸ್ನೇಹೇನ ವರ್ಧಯಂತೌ ಧಾರಯಂತೌ ಮಾತಾಪಿತರೌ ತದ್ವತ್ । ಅಥ ಪ್ರತ್ಯಕ್ಷೇಣಾಹ । ಹೇ ದ್ಯಾವಾ ಪೃಥಿವೀ ದ್ಯಾವಾಪೃಥಿವ್ಯೌ । ಇತರೇತರಾಪೇಕ್ಷಯಾ ದ್ವಿತ್ವಮುಭಯೋಃ । ನೋಽಸ್ಮಾನಭ್ವಾನ್ಮಹತೋ ಭಯಹೇತೋಃ ಪಾಪಾದ್ರಕ್ಷತಂ ಪಾಲಯತಂ । ಯದ್ವಾ । ಅಭ್ವಾದಭ್ವಂ ಮಹತ್ । ಅತ್ಯರ್ಥಮಿತ್ಯರ್ಥಃ । ಅಭ್ವೇತಿ ಮಹನ್ನಾಮ ॥ ದ್ವಂದ್ವೇ ಕೃತದ್ಯಾವಾದೇಶಸ್ಯ ದ್ಯಾವಾಪೃಥಿವೀಶಬ್ದಸ್ಯ ಮಧ್ಯೇ ರಕ್ಷತಮಿತಿ ಪದಪ್ರಯೋಗಶ್ಛಾಂದಸಃ । ಆಮಂತ್ರಿತಸ್ಯಾವಿದ್ಯಮಾನತ್ವೇನ ನಿಘಾತಾಭಾವಃ ॥

। ಪ್ರತಿಪದಾರ್ಥ ।

**ಪಿತ್ರೋಃ**—ಮಾತಾಪಿತೃಗಳ । **ಉಪಸ್ಥೇ**—ತೊಡೆಯಮೇಲೆ ಬೆಳೆಯುವ । **ನಿತ್ಯಂ ಸೂನುಂ ನ**—ಔರಸಪುತ್ರನನ್ನು (ಮಾತಾಪಿತೃಗಳು) ಪ್ರೀತಿಯಿಂದ ಧರಿಸಿ ಪಾಲಿಸುವಂತೆ । **ಅಚರಂತೀ**—ಸ್ವಯಂ ಚಲನರಹಿತವಾದವೂ । **ಅಪದೀ**—ಪಾದರಹಿತವಾದವೂ ಆದ । **ದ್ವೇ**—ದ್ಯಾವಾಪೃಥಿವಿಗಳೆರಡೂ ಸಹ । **ಭೂರಿಂ**—ಬಹುವಿಧವಾದವೂ । **ಪದ್ವಂತಂ**—ಪಾದಯುಕ್ತವಾದವೂ । **ಚರಂತಂ**—ಸಂಚರಿಸತಕ್ಕವೂ ಆದ । **ಗರ್ಭಂ**—ಮಾತೃವನ್ನಾಶ್ರಯಿಸಿರುವ ಗರ್ಭದಂತೆ ಇವೆರಡನ್ನೂ ಆಶ್ರಯಿಸಿರುವ ಪ್ರಾಣಿಜಾತವನ್ನು । **ದಧಾತೇ**—ಧರಿಸಿರುತ್ತವೆ । **ದ್ಯಾವಾಪೃಥಿವೀ**—ಎಲೈ ದ್ಯಾವಾಪೃಥಿವಿಗಳೇ । **ನಃ**—ನಮ್ಮನ್ನು । **ಅಭ್ವಾತ್**—ಮಹತ್ತಾದುದೂ, ಭಯಹೇತುವಾದುದೂ ಆದ ಪಾಪದಿಂದ । **ರಕ್ಷತಂ**—ರಕ್ಷಿಸಿರಿ.

ಭಾವಾರ್ಥ

ಮಾತಾಪಿತೃಗಳ ತೊಡೆಯಮೇಲೆ ಬೆಳೆಯುವ ಔರಸಪುತ್ರನನ್ನು ಮಾತಾಪಿತೃಗಳು ಪ್ರೀತಿಯಿಂದ ಧರಿಸಿ ಪಾಲಿಸುವಂತೆ ಸ್ವಯಂ ಚಲನರಹಿತವಾದವೂ, ಪಾದರಹಿತವಾದವೂ ಆದ ದ್ಯಾವಾಪೃಥಿವಿಗಳೆರಡೂ ಸಹ ಬಹುವಿಧವಾದವೂ, ಪಾದಯುಕ್ತವಾದವೂ ಸಂಚರಿಸತಕ್ಕವೂ, ಗರ್ಭವು ಮಾತೃವನ್ನು ಆಶ್ರಯಿಸುವಂತೆ ತಮ್ಮನ್ನು ಆಶ್ರಯಿಸಿರುವುವೂ ಆದ ಸಕಲಪ್ರಾಣಿಜಾತವನ್ನೂ ಧರಿಸಿರುತ್ತವೆ. ಎಲೈ ದ್ಯಾವಾಪೃಥಿವಿಗಳೇ ನಮ್ಮನ್ನು ಮಹತ್ತಾದುದೂ, ಭಯಹೇತುವಾದುದೂ ಆದ ಪಾಪದಿಂದ ರಕ್ಷಿಸಿರಿ

English Trnslation

Footless and motionless, they sustain numerous moving and footed races, as a son is even (nursed) on the lap of his parents: defend us, Heaven and Earth, from great (danger).

। ವಿಶೇಷವಿಷಯಗಳು ।

ಈ ಋಕ್ಕಿನಲ್ಲಿ ದ್ಯಾವಾಪೃಥಿವಿಗಳಿಗೂ ಉಳಿದ ಪ್ರಾಣಿಜಾತಕ್ಕೂ ಇರುವ ಸಂಬಂಧವನ್ನೂ ಮತ್ತು ಆವೆರಡಕ್ಕೂ ಇರುವ ವ್ಯತ್ಯಾಸವನ್ನೂ ತಿಳಿಸಿದೆ. **ಅಚರಂತೀ ಅಪದೀ** ಎಂಬ ಎರಡು ವಿಶೇಷಣಗಳಿಂದ ದ್ಯಾವಾಪೃಥ್ವಿಗಳ ಸ್ಥೈರ್ಯವನ್ನೂ, **ಪದ್ವಂತಂ ಚರಂತಂ** ಎಂಬ ವಿಶೇಷಣಗಳಿಂದ ಸಕಲಪ್ರಾಣಿಗಳ ಗಮನಾದಿಕ್ರಿಯೆಯನ್ನೂ ಅಥವಾ ಹಾಗೆಯೇ ಚಾಂಚಲ್ಯವನ್ನೂ ತಿಳಿಸಿದೆ. **ಪಿತ್ರೋಃ ಉಪಸ್ಥೇ ನಿತ್ಯಂ ಸೂನುಂ** ಎಂಬ ಪದಗಳಿಂದ ಲೋಕಸಾಧಾರಣವಾದ ಉಪಮಾನವನ್ನು ತೋರಿಸಿನರೂ ಸಹ ಮುಂದೆ **ಗರ್ಭಂ** ಎಂಬ ಪದದಿಂದ ಗರ್ಭರೂಪವಾದ ಸಕಲಪ್ರಾಣಿಜಾತಗಳು ಎಂದರ್ಥವಾಗುವುದರಿಂದ **ಪಿತ್ರೋಃ** ಎಂಬ ಪದಕ್ಕೆ ಮಾತಾಪಿತೃರೂಪವಾದ ದ್ಯಾವಾಪೃಥ್ವಿಗಳು ಎಂದೂ ಅರ್ಥಮಾಡಬಹುದು. ಲೋಕದಲ್ಲಿ ಔರಸಪುತ್ರನನ್ನು ಮಾತಾಪಿತೃಗಳು ತಮ್ಮ ತೊಡೆಯಮೇಲೆ ಧರಿಸಿ ಪಾಲಿಸುವಂತೆ, ತಮ್ಮದ್ದೇ ಗರ್ಭಾತ್ಮಕವಾದ ಪ್ರಾಣಿಜಾತಗಳನ್ನು ವಿಶ್ವಕ್ಕೇ ಮಾತಾಪಿತೃಗಳಾದ ದ್ಯಾವಾಪೃಥಿವಿಗಳು ಧರಿಸಿ ಪಾಲಿಸುತ್ತವೆಯೆಂದರ್ಥ.

ಪಿತ್ರೋಃ ಎಂಬ ಪದಕ್ಕೆ ಮಾತಾಪಿತೃರೂಪರಾದ ದ್ಯಾವಾಪೃಥಿವಿಗಳು ಎಂದರ್ಥಮಾಡಿದರೆ, ಆಗ ಅವರಲ್ಲಿ ಪಿತೃವಾರು ಮತ್ತು ಮಾತೃವಾರು ಎಂಬ ಪ್ರಶ್ನೆಯು ಬರುತ್ತದೆ. ಪಿತುಃ—ಪಿತೃಸ್ಥಾನೀಯಾಯಾಃ ಪೃಥಿವ್ಯಾಃ ಮಾತುಃ—ಮಾತಾಂತರಿಕ್ಷಂ ನಿರ್ಮೀಯಂತೇಽಸ್ಮಿನ್ ಭೂತಾನಿ (ನಿ. ೨-೮) ಎಂಬುದಾಗಿ ನಿರುಕ್ತಕಾರರು ವಿವರಿಸಿದ್ದಾರೆ. ಪಾಲನಾರ್ಥಕವಾದ ಪಾ ಧಾತುವಿನಿಂದ ನಿಷ್ಪನ್ನವಾಗಿ ಸಕಲ ಭೂತಗಳನ್ನೂ ಪಾಲಿಸತಕ್ಕ ಪೃಥಿವಿಗೆ ಪಿತೃವೆಂದೂ, ಅಂತರಿಕ್ಷದಲ್ಲೇ ಸಕಲಭೂತಗಳೂ ನಿರ್ಮಿತವಾಗುವುದರಿಂದ ಅಂತರಿಕ್ಷಕ್ಕೆ ಮಾತೃವೆಂದೂ ಹೆಸರು ಪ್ರಸಿದ್ಧವಾಗಿದೆಯೆಂದು ನಿರುಕ್ತಕಾರರ ವಿವರಣೆಯಿಂದ ತಿಳಿಯುತ್ತದೆ. ಈ ವಿವರಣೆಯು ಒಂದು ವಿಧದಲ್ಲಿ ಶಬ್ದನಿರ್ವಚನದ ದೃಷ್ಟಿಯಿಂದ ಸಾಧುವಾಗಿದೆಯೇ ವಿನಹ ಸಾಂಪ್ರದಾಯಕವಾದ ಅರ್ಥಕ್ಕೆ ಹೊಂದಲಾರದು. ಸಾಧಾರಣವಾಗಿ ಅಂತರಿಕ್ಷಕ್ಕೆ ಪಿತೃವೆಂದೂ ಪೃಥ್ವಿಗೆ ಮಾತೃವೆಂದೂ ನಿರ್ದೇಶಿಸುವ ವಾಕ್ಯಗಳೇ ಪ್ರಸಿದ್ಧವಾಗಿವೆ.

ತನ್ನೋ ವಾತೋ ಮಯೋಭು ವಾತು ಭೇಷಜಂ ತನ್ಮಾತಾ ಪೃಥಿವೀ ತತ್ ಪಿತಾ ದ್ಯೌಃ ।
ತದ್ಗ್ರಾವಾಣಃ ಸೋಮಸುತೋ ಮಯೋಭುವಸ್ತದಶ್ವಿನಾ ಶೃಣುತಂ ಧಿಷ್ಣ್ಯಾ ಯುವಂ ॥

(ಋ. ಸಂ. ೧-೮೯-೪)

ಇತ್ಯಾದ್ಯನೇಕಸಂದರ್ಭಗಳಲ್ಲಿ ಅಂತರಿಕ್ಷವನ್ನು ಪಿತೃವೆಂದೂ ಪೃಥ್ವಿಯನ್ನು ಮಾತೃವೆಂದೂ ನಿರ್ದೇಶಿಸಿರುವುದನ್ನು ಹಿಂದೆ ವಿಶದವಾಗಿ ತಿಳಿಸಿದೆ, " ಮಧುದ್ಯೌರಸ್ತು ನಃ ಪಿತಾ " (ಋ. ಸಂ ೧-೯೦-೭) ಇತ್ಯಾದಿ ವಾಕ್ಯಗಳಲ್ಲಿ ಸಹ ದ್ಯುಲೋಕಾಧಿದೇವತೆಗೆ ಪಿತೃವೆಂಬ ವಿಶೇಷಣವು ರೂಢವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಒಟ್ಟಿಗೆ ಮಾತಾಪಿತೃಗಳೆಂದರ್ಥಮಾಡಬಹುದು. ಇಂತಹ ಮಾತಾಪಿತೃಗಳ ಉತ್ಸಂಗದಲ್ಲಿ (ತೊಡೆಯಮೇಲೆ) ಪ್ರಾಣಿಜಾತಗಳು ಬೆಳೆಯುತ್ತವೆಯೆಂದರ್ಥ.

ಉಪಸ್ಥೇ—ಉಪಸ್ಥಶಬ್ದವನ್ನು ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗಿಸಿದೆ. ಅನೇಕ ಕಡೆಗಳಲ್ಲಿ ಸಾಯಣರು ಉಪಸ್ಥಃ ಯಜ್ಞಃ, ಆಹವನೀಯೋ ವಾ ಅಂತರಿಕ್ಷಂ ವಾ ಇತ್ಯಾದಿಯಾಗಿ ಅರ್ಥಮಾಡಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಪಿತೃಗಳ ಉತ್ಸಂಗದಲ್ಲಿ ಎಂದರ್ಥವಾಗುತ್ತದೆ.

ಸಾಧಾರಣವಾಗಿ ಪಿತ್ರೋಃ ಉಪಸ್ಥೇ ಎಂಬ ಪದಗಳನ್ನು ಅಗ್ನಿಗೂ ದ್ಯಾವಾಪೃಥಿವಿಗಳಿಗೂ ಇರುವ ಸಂಬಂಧವನ್ನು ಸೂಚಿಸಲು ಉಪಯೋಗಿಸಿದೆ. ಉದಾಹರಣೆಗೆ,

ತ್ರಿಮೂರ್ಧಾನಂ ಸಪ್ತರಶ್ಮಿಂ ಗೃಣೀಷೇಽನೂನಮಗ್ನಿಂ ಪಿತ್ರೋರುಪಸ್ಥೇ ।
ನಿಷತ್ತಮಸ್ಯ ಚರತೋ ಧ್ರುವಸ್ಯ ವಿಶ್ವಾ ದಿವೋ ರೋಚನಾಪಪ್ರಿವಾಂಸಂ ॥

(ಋ. ಸಂ. ೧-೧೪೬-೧)

ಎಂಬಲ್ಲಿ ಪಿತ್ರೋಃ ಉಪಸ್ಥೇ ನಿಷತ್ತಂ ಅಗ್ನಿಂ । ತನ್ನ ಪಿತೃಗಳಾದ ದ್ಯಾವಾಪೃಥಿವಿಗಳ ತೊಡೆಯಮೇಲೆ ಕುಳಿತಿರುವ ಅಗ್ನಿಯನ್ನು ಎಂದರ್ಥವಾಗುತ್ತದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಸಕಲಭೂತಜಾತಗಳಿಗೂ ದ್ಯಾವಾಪೃಥಿವಿಗಳಿಗೂ ಇರುವ ಸಂಬಂಧವನ್ನು ಮಾತ್ರ ಹೇಳಿದೆ.

ನಿತ್ಯಂ ಸೂನುಂ ಎನ್ನುವಾಗ ನಿತ್ಯ ಶಬ್ದಕ್ಕೆ ಧ್ರುವವೆಂದರ್ಥಮಾಡಿದೆ ಪ್ರಕೃತದಲ್ಲಿ ದ್ಯಾವಾಪೃಥಿವಿಗಳ ಧ್ರುವತ್ವವನ್ನೂ ಪ್ರಾಣಿಜಾತಗಳ ಅಧ್ರುವವನ್ನೂ ವರ್ಣಿಸಿ, ಅವುಗಳರತಕ್ಕ ವ್ಯತ್ಯಾಸವನ್ನು ತಿಳಿಸಿದೆ. ಆದುದರಿಂದ

ಇಲ್ಲಿ ನಿತ್ಯ ಶಬ್ದಕ್ಕೆ ಧ್ರುವವೆನ್ನುವ ಅರ್ಥಕ್ಕಿಂತಲೂ ತಮ್ಮದೇ ಆದ ಎಂಬರ್ಥವು ಉಚಿತವಾಗಿರುತ್ತದೆ. **ಸಹಜವಾದ** ಎಂಬರ್ಥದಲ್ಲೂ ನಿತ್ಯಶಬ್ದದ ಪ್ರಯೋಗವು ಅನೇಕ ಕಡೆಗಳಲ್ಲಿರುತ್ತದೆ. ಪ್ರಕೃತದಲ್ಲಿ ಔರಸಪುತ್ರನೆಂದರ್ಥಮಾಡಬಹುದು

ಪ್ರಕೃತವಾದ ಋಕ್ಕಿನಲ್ಲಿ ದ್ಯಾವಾಪೃಥಿವಿಗಳ ಮಾತಾಪಿತೃತ್ವರೂಪವಾದ ಸಂಬಂಧವನ್ನು ಹೇಳುವುದು ಮಾತ್ರ ವಲ್ಲದೇ ಜಗತ್ತನ್ನು ಮಹದ್ಭಯದಿಂದ ರಕ್ಷಿಸಬೇಕೆಂದು ಪ್ರಾರ್ಥಿಸಲಾಗಿದೆ. **“ ದ್ಯಾವಾ ರಕ್ಷತಂ ಪೃಥಿವೀ ನೋ ಅಭ್ವಾತ್ ”** ಎಂಬ ಪಲ್ಲವಿಯು ಸೂಕ್ತದ ೨-೮ ಋಕ್ಕುಗಳಲ್ಲಿರುವುದು.

**ಅಭ್ವಾತ್**—ಅಭ್ವಶಬ್ದವು **ಉದಕನಾಮಗಳಲ್ಲಿಯೂ,** (ನಿ. ನಿ. ೨೪) **ಮಹನ್ನಾಮಗಳಲ್ಲಿಯೂ** (ನಿ. ೩-೨೩) ಪಠಿತವಾಗಿದೆ. ಆದರೆ ಈ ಎರಡು ಅರ್ಥಗಳೇ ಅಲ್ಲದೇ ಬೇರೆ ಅರ್ಥಗಳಲ್ಲಿಯೂ ಈ ಪದದ ಪ್ರಯೋಗ ವಿರುವುದರಿಂದ ಸಾಯಣರೂ ಸಹ ಈ ಪದಕ್ಕೆ ಸಂದರ್ಭಾನುಸಾರವಾಗಿ ಅರ್ಥವನ್ನು ಹೇಳಿದ್ದಾರೆಂದು ತಿಳಿದರೆ ಅನಂತರ ಪ್ರಕೃತವಾದ ಋಕ್ಕಿನಲ್ಲಿ ಇದರ ಸರಿಯಾದ ಅರ್ಥವನ್ನು ನಿಷ್ಕರ್ಷಿಸಬಹುದು.

**ನಹಿ ತೇ ಕ್ಷತ್ರಂ ನ ಸಹೋ ನ ಮನ್ಯುಂ ವಯಶ್ಚನಾಮೀ ಪತಯಂತ ಆಪುಃ ।**
**ನೇಮಾ ಆಪೋ ಅನಿಮಿಷಂ ಚರಂತೀರ್ನ ಯೇ ವಾತಸ್ಯ ಪ್ರಮಿನಂತ್ಯಭ್ವಂ ॥**

(ಋ. ಸಂ. ೧-೨೪-೬)

ಎಂಬ ಋಕ್ಕಿನಲ್ಲಿ **ವರುಣನ** ಸ್ತುತಿಯಿದೆ. ಇಲ್ಲಿ **ವಾತಸ್ಯ ಯೇ ಗತಿವಿಶೇಷಾಃ ತೇ ತ್ವದೀಯಂ ಅಭ್ವಂ ವೇಗಂ ನ ಹಿಂಸಂತಿ** ವಾಯುವಿನ ಗತಿವೇಗವೂ ಸಹ ವರುಣನ ವೇಗವನ್ನು ತಡೆಯಲಾರವು ಎಂದು **ಅಭ್ವ** ಶಬ್ದಕ್ಕೆ **ವೇಗವೆಂದರ್ಥ**ಮಾಡಿದ್ದಾರೆ. ಮತ್ತು,

**ಯುಷ್ಮೇಷಿತೋ ಮರುತೋ ಮರ್ತ್ಯೇಷಿತ ಆ ಯೋ ನೋ ಅಭ್ವ ಈಷತೇ ।**
**ವಿ ತಂ ಯುಯೋತ ಶವಸಾ ವ್ಯೋಜಸಾ ವಿ ಯುಷ್ಮಾಕಾಭಿರೂತಿಭಿಃ ॥**

(ಋ ಸಂ. ೧-೩೯-೮)

ಎಂಬಲ್ಲಿ ಮರುತ್ತುಗಳನ್ನು ಸ್ತುತಿಸಿದೆ. ಇಲ್ಲಿ **ಯಃ ಕಶ್ಚಿದಭ್ವಃ ಶತ್ರುಃ ನಃ ಪ್ರಾಪ್ನೋತಿ ತಂ ಶವಸಾ ವಿ ಯುಯೋತ** ಎಂದು ವಿವರಿಸಿ **ಅಭ್ವ** ಶಬ್ದಕ್ಕೆ **ಶತ್ರು**ವೆಂದು ಅರ್ಥಮಾಡಿದೆ.

**ಅಸೂತ ಪೃಶ್ನಿರ್ಮಹತೇ ರಣಾಯ ತ್ವೇಷಮಯಾಸಾಂ ಮರುತಾಮನೀಕಂ ।**
**ತೇ ಸಪ್ಸರಾಸೋಽಜನಯಂತಾಭ್ವಮಾದಿತ್ಸ್ವಧಾಮಿಷಿರಾಂ ಪರ್ಯಪಶ್ಯನ್ ॥**

(ಋ. ಸಂ. ೧-೧೬೮-೯)

ಎಂಬ ಋಕ್ಕಿನಲ್ಲಿ **ಅಭ್ವಂ ಮೇಘಂ ಜನಯಂತಿ ।** ಎಂದು **ಅಭ್ವ** ಶಬ್ದಕ್ಕೆ **ಮೇಘ**ವೆಂದೂ,

**ಆ ಯನ್ಮೇ ಅಭ್ವಂ ವನದಃ ಪನಂತೋಶಿಗ್ಭ್ಯೋ ನಾಮಿಮೀತ ವರ್ಣಂ।**
**ಸ ಚಿತ್ರೇಣ ಚಿಕಿತೇ ರಂಸು ಭಾಸಾ ಜಜುರ್ವಾ ಯೋ ಮುಹುರಾ ಯುವಾ ಭೂತ್ ॥**

(ಋ. ಸಂ. ೨-೪-೫)

ಎಂಬ ಸ್ಥಳದಲ್ಲಿ ಅಭ್ವ ಪದವು ಅಗ್ನಿಯ ಮಹತ್ತ್ವವನ್ನು ಸ್ತುತಿಸುವುದಾಗಿದೆ. ಇಲ್ಲಿ ಅಭ್ವವೆಂದರೆ ಮಹತ್ತ್ವವೆಂದರ್ಥವಾಗುತ್ತದೆ. ಇದರಂತೆಯೇ,

**ಅರ್ಹನ್ಬಿಭರ್ಷಿ ಸಾಯಕಾನಿ ಧನ್ವಾರ್ಹನ್ನಿಷ್ಕಂ ಯಜತಂ ವಿಶ್ವರೂಪಂ ।**
**ಅರ್ಹನ್ನಿದಂ ದಯಸೇ ವಿಶ್ವಮಭ್ವಂ ನ ವಾ ಓಜೀಯೋ ರುದ್ರ ತ್ವದಸ್ತಿ ॥**

(ಋ. ಸಂ. ೨-೩೩-೧೦)

ಎಂಬ ಋಕ್ಕಿನಲ್ಲಿ ವಿಶ್ವಂ ಅಭ್ವಂ । ಮಹನ್ನಾಮೈತತ್ । ಅತಿವಿಸ್ತೃತಂ ಜಗತ್ । ಮಹನ್ನಾಮಗಳಲ್ಲಿ ಪಠಿತವಾಗಿರುವುದರಿಂದ ಅತ್ಯಂತ ವಿಸ್ತೃತವಾದ ಜಗತ್ತೆಂದು ಸಾಯಣರು ಅರ್ಥಮಾಡಿದ್ದಾರೆ. ಎಂದರೆ ಮೇಲೆ ಉದಾಹೃತವಾದ ೨-೪-೫ ರಲ್ಲಿ ಅಗ್ನಿಯ ಆಧ್ಯಾತ್ಮಿಕವಾದ ಮಹತ್ತ್ವವನ್ನು ಸೂಚಿಸುತ್ತದೆ. ಇಲ್ಲಿ ಎಂದರೆ ೨-೩೩-೧೦ನೇ ಋಕ್ಕಿನಲ್ಲಿ ಜಗತ್ತಿನ ಭೌತಿಕವಾದ ವಿಸ್ತೃತಿಯನ್ನು ಸೂಚಿಸುತ್ತದೆ.

ಅಭ್ವ ಶಬ್ದಕ್ಕೆ ಮೂಲಾರ್ಥವಾವುದು, ಆ ಮೂಲಾರ್ಥದ ಮೇಲೆ ಈ ಪರಂಪರೆಯಾದ ಅರ್ಥಗಳು ಹೇಗೆ ಸಾಧ್ಯವಾಗುತ್ತವೆ ಎಂಬುದನ್ನು ತಿಳಿಯಬೇಕಾದರೆ ಶತಪಥಬ್ರಾಹ್ಮಣದ ವಾಕ್ಯದಲ್ಲಿ ಪ್ರಯೋಗಿಸಿರುವ ಅಭ್ವಶಬ್ದವನ್ನು ಗಮನಿಸಿದರೆ ಈ ಮೂಲಾರ್ಥವು ತಿಳಿಯುತ್ತದೆ.

**ಅಥ ಬ್ರಹ್ಮೈವ ಪರಾರ್ಧಮಗಚ್ಛತ್ । ತತ್ಪರಾರ್ಧಂ ಗತ್ವೈಕ್ಷತ ಕಥಂ ನ್ವಿಮಾನ್ಲೋಕಾನ್ಪ್ರತ್ಯವೇಯಾಮಿತಿ ತದ್ದ್ವಾಭ್ಯಾಮೇವ ಪ್ರತ್ಯವೈದ್ರೂಪೇಣ ಚೈವ ನಾಮ್ನಾ ಚ ಸ ಯಸ್ಯ ಕಸ್ಯ ಚ ನಾಮಾಸ್ತಿ ತನ್ನಾಮ ಯಸ್ಯೋಽಪಿ ನಾಮ ನಾಸ್ತಿ ಯದ್ವೇದ ರೂಪೇಣೇದಗ್ಂ ರೂಪಮಿತಿ ತದ್ರೂಪಮೇತಾವದ್ವಾ ಇದಂ ಯಾವದ್ರೂಪಂ ಚೈವ ನಾಮ ಚ । ತೇ ಹೈತೇ ಬ್ರಹ್ಮಣೋ ಮಹತೀ ಅಭ್ವೇ । ಸ ಯೋ ಹೈತೇ ಬ್ರಹ್ಮಣೋ ಮಹತೀ ಅಭ್ವೇ ವೇದ ಮಹದ್ಧೈವಾಭ್ವಂ ಭವತಿ ॥**

(ಶ. ಬ್ರಾ. ೧೧-೨-೩-೩)

ಎಂಬ ವಾಕ್ಯಗಳಲ್ಲಿ ನಾಮ ಮತ್ತು ರೂಪಗಳು ಬ್ರಹ್ಮನ ಮಹತ್ತಾದ ಅಭ್ವಗಳೆಂದು ಹೇಳಿದೆ. ಬ್ರಹ್ಮನ ಅಭ್ವವು **ಮೂರ್ತ** (Concrete), **ಅಮೂರ್ತ** (Abstract) ಎಂದು ಎರಡು ವಿಧವಾಗಿದೆ. ಆದುದರಿಂದ ಬ್ರಹ್ಮನ ಮಹತ್ತಾದ **ಮೂರ್ತಶಕ್ತಿ, ಅಮೂರ್ತಶಕ್ತಿ** ಎಂದು ಎರಡು ವಿಧವಾದ ಶಕ್ತಿಗಳೂ ವಿಶ್ವವನ್ನು ವ್ಯಾಪಿಸಿವೆಯೆಂದರ್ಥ. ಈ ಮೂಲಾರ್ಥಗಳಿಂದ ಉಳಿದ ತಾತ್ಪರ್ಯಗಳು ನಿಷ್ಪನ್ನವಾಗುತ್ತವೆ. ಈ ವಿಧವಾಗಿ ಮೂರ್ತಾಮೂರ್ತರೂಪವಾದ ವಿಶ್ವತತ್ತ್ವವೆಂಬ ವ್ಯಾಪಕವಾದ ಅರ್ಥವು,

**ಉದೂ ಅಯಾँ ಉಪವಕ್ತೇವ ಬಾಹೂ ಹಿರಣ್ಯಯಾ ಸವಿತಾ ಸುಪ್ರತೀಕಾ ।**
**ದಿವೋ ರೋಹಾಂಸ್ಯರುಹತ್ಪೃಥಿವ್ಯಾ ಅರೀರಮತ್ಪತಯತ್ಕಚ್ಚಿದಭ್ವಂ ॥**

(ಋ ಸಂ. ೬-೭೧-೫)

ಎಂಬ ಋಕ್ಕಿನಲ್ಲಿರುವ ಅಭ್ವಶಬ್ದದಲ್ಲಿ ಅಡಕವಾಗಿದೆ ಈ ಪದದ ಅರ್ಥವನ್ನು ಸಾಯಣರು ವಿವರಿಸುತ್ತಾ "ಅಭ್ವಂ ಮಹತ್ ಸರ್ವಂ ವಸ್ತುಜಾತಂ" ಎಂದು ಅದರ ವ್ಯಾಪಕವಾದ ತಾತ್ಪರ್ಯವನ್ನು ಹೇಳಿದ್ದಾರೆ. ಕೆಲವು

ಕಡೆಗಳಲ್ಲಿ ವ್ಯಾಪಕವಾದ ಸಚ್ಛಕ್ತಿಯೂ ಇನ್ನು ಕೆಲವು ಕಡೆಗಳಲ್ಲಿ ದುಷ್ಟಶಕ್ತಿಯೂ ಸೂಚಿತವಾಗುತ್ತದೆ. ಈ ಎರಡರ್ಥಗಳಲ್ಲಿಯೂ ಋಕ್ಸಂಹಿತೆಯಲ್ಲಿ ಈ ಪದದ ಪ್ರಯೋಗವಿದೆ

**ಪ್ರ ಯೇ ವಸುಭ್ಯ ಈವದಾ ನಮೋ ದುರ್ಯೇ ಮಿತ್ರೇ ವರುಣೇ ಸೂಕ್ತವಾಚಃ ।**
**ಅವೈತ್ವಭ್ವಂ ಕೃಣುತಾ ವರೀಯೋ ದಿವಸ್ಪೃಥಿವ್ಯೋರವಸಾ ಮದೇಮ ॥**

(ಋ. ಸಂ. ೫-೪೯-೫)

ಎಂಬಲ್ಲಿ ಅಭ್ವಂ ಮಹದ್ಧನಂ ತೇಜೋ ವಾ । ಮಹತ್ತಾದ ತೇಜಶ್ಶಕ್ತಿಯೆಂದೂ,

**ದ್ಯಾವೋ ನ ಯಸ್ಯ ಪನಯಂತ್ಯಭ್ವಂ ಭಾಸಾಂಸಿ ವಸ್ತೇ ಸೂರ್ಯೋ ನ ಶುಕ್ರಃ ।**
**ವಿ ಯ ಇನೋತ್ಯಜರಃ ಪಾವಕೋಽಶ್ನಸ್ಯ ಚಿಚ್ಛಿಶ್ನಥತ್ಪೂರ್ವಾಣಿ ॥**

(ಋ. ಸಂ, ೬-೪-೩)

ಎಂಬಲ್ಲಿ **ಅಭ್ವಂ ಮಹತ್ಕರ್ಮ** । ಎಂದು ಮಹತ್ತಾದ ಕರ್ಮಶಕ್ತಿಯೆಂದೂ ಅರ್ಥವಾಗುತ್ತದೆ ಈ ಎರಡು ಸಂದರ್ಭಗಳಲ್ಲೂ ಸಹ ಸಚ್ಛಕ್ತಿಯೆಂಬರ್ಥದಲ್ಲಿ ಈ ಪದದ ಪ್ರಯೋಗವಿದೆ.

**ತಾ ಇನ್ವೇ೩ ಇವ ಸಮನಾ ಸಮಾನೀರಮೀತವರ್ಣಾ ಉಷಸಶ್ಚರಂತಿ ।**
**ಗೂಹಂತೀರಭ್ವಮಸಿತಂ ರುಶದ್ಭಿಃ ಶುಕ್ರಾಸ್ತನೂಭಿಃ ಶುಚಯೋ ರುಚಾನಾಃ ॥**

(ಋ. ಸಂ. ೪-೫೧-೯)

ಎಂಬ ಋಕ್ಕಿನಲ್ಲಿ **ಅತಿಮಹತ್ಕೃಷ್ಣಂ ರೂಪಂ** । ಮಹತ್ತಾದ ಕಗ್ಗತ್ತಲೆಯೆಂದರ್ಥವಾಗುತ್ತದೆ. ಹೀಗೆ ವಿಕಾರವಾದುದೂ, ಹಿಂಸಾತ್ಮಕವಾದುದೂ ಆದ ಭೂತಶಕ್ತಿಯನ್ನು ಸೂಚಿಸುವಾಗ **ಅಭ್ವ** ಶಬ್ದವು ಪ್ರಯೋಗಿಸಲ್ಪಟ್ಟಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಅದರ ಪ್ರಯೋಗವಿದೆ ಇಲ್ಲಿ **ನಃ ಅಸ್ಮಾನ್ ಅಭ್ವಾತ್ ಮಹತೋ ಭಯಹೇತೋಃ ಪಾಪಾತ್ ರಕ್ಷತಂ ಪಾಲಯತಂ** । ನಮ್ಮನ್ನು ಮಹತ್ತಾದುದೂ, ಭಯಹೇತುವಾದುದೂ ಆದ ಪಾಪದಿಂದ ರಕ್ಷಿಸಿರಿ. ಎಂದು ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಆಚರಂತೀ**—ಚರ ಗತಿಭಕ್ಷಣಯೋಃ ಧಾತು ಲಟಿಗೆ ಶತ್ರಾದೇಶ. **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಸ್ತ್ರೀತ್ವದಲ್ಲಿ **ಙೀಪ್** ನಞ್ ತತ್ಪುರುಷ ಸಮಾಸವಾದಾಗ. **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಪದ್ವಂತಮ್**—ಪತ್ ಪಾದಃ ಅಸ್ಯ ಅಸ್ತಿ ಇತಿ ಪದ್ವಾನ್. **ತದಸ್ಯಾಸ್ತಿ**—ಸೂತ್ರದಿಂದ ಮತುಪ್. **ಝಯಃ** (ಪಾ. ಸೂ. ೮-೨-೧೦) ಎಂಬುದರಿಂದ ಮಕಾರಕ್ಕೆ ವತ್ವ. ವ್ಯತ್ಯಯದಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ. ದ್ವಿತೀಯಾಏಕವಚನದಲ್ಲಿ ಉಗಿತ್ತಾದುದರಿಂದ ನುಮಾಗಮ.

**ಅಪದೀ**—ನ ವಿದ್ಯತೇ ಪಾದಃ ಯಯೋಸ್ತೇ. **ನಞ್ಸುಭ್ಯಾಮ್** (ಪಾ. ಸೂ ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಪಾದಶಬ್ದಕ್ಕೆ ಪದಾದೇಶ. **ಪಾದೋಽನ್ಯತರಸ್ಯಾಮ್** (ಪಾ. ಸೂ. ೪-೧-೮) ಎಂಬುದರಿಂದ **ಙೀಪ್**. **ಸುಪಾಂ ಸುಲುಕ್**—ಸೂತ್ರದಿಂದ ದ್ವಿವಚನಪರವಾದಾಗ ಪೂರ್ವಸವರ್ಣದೀರ್ಘ.

**ದಧಾತೇ**—ಡುಧಾಞ್ ಧಾರಣಪೋಷಣಯೋಃ ಧಾತು. ಲಟ್ ಪ್ರಥಮಪುರುಷ ದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ದ್ಯಾವಾಪೃಥಿವೀ**—ದ್ಯೌಶ್ಚ ಪೃಥಿವೀಚ ದ್ಯಾವಾಪೃಥಿವ್ಯೌ. **ದಿವೋದ್ಯಾವಾ** (ಪಾ. ಸೂ. ೬-೩-೨೯) ಎಂಬುದರಿಂದ ದ್ವಂದ್ವದಲ್ಲಿ ದ್ಯಾವಾದೇಶ. ಛಾಂದಸವಾಗಿ ದ್ವಂದ್ವಮಧ್ಯದಲ್ಲಿ ರಕ್ಷತಮ್ ಎಂಬ ತಿಙಂತವು ಪ್ರಯುಕ್ತವಾಗಿದೆ. **ಸುಪಾಂ ಸುಲುಕ್**—ಸೂತ್ರದಿಂದ ದ್ವಿವಚನಪರವಾದಾಗ ಪೂರ್ವಸವರ್ಣದೀರ್ಘ. ಪಾದಾದಿಯಲ್ಲಿರುವುದರಿಂವ ನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** ( ಪಾ. ಸೊ. ೬-೧-೧೯೮ ) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರಕ್ಷತಮ್**—ರಕ್ಷಪಾಲನೇ ಧಾತು. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. **ಆಮಂತ್ರಿತಂ ಪೂರ್ವಮವಿದ್ಯಮಾನವತ್** (ಪಾ. ಸೂ ೮-೧-೭೨) ಎಂಬುದರಿಂದ ಪೂರ್ವಪದಕ್ಕೆ ಅವಿದ್ಯಮಾನವದ್ಭಾವವಿರುವುದರಿಂದ ಅತಿಙಂತಪರದಲ್ಲಿಲ್ಲದಿರುವುದರಿಂದ ತಿಙಂತನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

———:o:———

**ಸಂಹಿತಾಪಾಠಃ**

ಅನೇಹೋ ದಾತ್ರಮದಿತೇರನರ್ವಂ ಹುವೇ ಸ್ವರ್ವದವಧಂ ನಮಸ್ವತ್ ।

ತದ್ರೋದಸೀ ಜನಯತಂ ಜರಿತ್ರೇ ದ್ಯಾವಾ ರಕ್ಷತಂ ಪೃಥಿವೀ ನೋ

ಅಭ್ವಾತ್ ॥ ೩ ॥

**। ಪದಪಾಠಃ ।**

ಅನೇಹಃ । ದಾತ್ರಂ । ಅದಿತೇಃ । ಅನರ್ವಂ । ಹುವೇ । ಸ್ವಃऽವತ್ । ಅವಧಂ । ನಮಸ್ವತ್ ।

ತತ್ । ರೋದಸೀ ಇತಿ । ಜನಯತಂ । ಜರಿತ್ರೇ । ದ್ಯಾವಾ । ರಕ್ಷತಂ । ಪೃಥಿವೀ ಇತಿ । ನಃ ।

ಅಭ್ವಾತ್ ॥ ೩ ॥

**ಸಾಯಣಭಾಷ್ಯಂ**

ಅದಿತೇಃ । ಏತದಂತರಿಕ್ಷಸ್ಯಾಪ್ಯುಪಲಕ್ಷಣಂ । ಅಖಂಡನೀಯಾಯೋಃ ಪೃಥಿವ್ಯಾಸ್ತಾದೃಶಸ್ಯಾಂತರಿಕ್ಷಸ್ಯ ಚ ಸಂಬಂಧಿ ದಾತ್ರಂ ಧನಂ ಹುವೇ । ಆಹ್ವಯಾಮಿ । ಸ್ಪೃಹಯಾಮೀತ್ಯರ್ಥಃ । ಕೀದೃಶಂ ತದ್ಧನಂ । ಅನೇಹೋಽಪಾಪಂ ದುಃಖರಹಿತಂ ಸುಖಾತ್ಮಕಂ ಅನರ್ವಮನರಣಂ । ಅಕ್ಷೀಣಮಿತ್ಯರ್ಥಃ ।

ಸ್ವರ್ವತ್ ಸರ್ವತಃ ಫಲಭೂತೇನ ಸ್ವರ್ಗೇಣ ತದ್ವತ್ ಅವಧಮಹಿಂಸಿತಂ ನಮಸ್ವದನ್ನವತ್ । ಈದೃಶಂ ಧನಂ ಹುವೇ । ತದಸ್ಮಾಭಿಃ ಕಾಂಕ್ಷಿತಮುಕ್ತಲಕ್ಷಣಂ ಧನಂ ಹೇ ರೋದಸೀ ದ್ಯಾವಾಪೃಥಿವ್ಯಾ ಜರಿತ್ರೇ ಸ್ತೋತ್ರೇ ಯಜಮಾನಾಯ ಜನಯತಂ । ಉತ್ಪಾದಯತಂ । ದ್ಯಾವೇತ್ಯಾದಿ ವ್ಯಾಖ್ಯಾತಂ ॥

ಪ್ರತಿಪದಾರ್ಥ

**ಅದಿತೇಃ**—ಖಂಡರಹಿತವಾದ (ಪೂರ್ಣವಾದ) ಅಂತರಿಕ್ಷಕ್ಕೂ ಪೃಥ್ವಿಗೂ ಸಂಬಂಧಿಸಿದುದೂ । **ಅನೇಹಃ**—ದುಃಖರಹಿತವಾದುದೂ (ಆದುದರಿಂದಲೇ ಸುಖಾತ್ಮಕವಾದುದೂ) । **ಅನರ್ವಂ**—ಕ್ಷಯರಹಿತವಾದುದೂ । **ಸ್ವರ್ವತ್**—ಫಲಭರಿತವಾದ ಸ್ವರ್ಗಕ್ಕೆ ಸಮಾನವಾದುದೂ । **ಅವಧಂ**—ಅಹಿಂಸಿತವಾದುದೂ । **ನಮಸ್ವತ್**—ಅನ್ನಯುಕ್ತವಾದುದೂ ಆದ । **ದಾತ್ರಂ**—ಧನವನ್ನು । **ಹುವೇ**—ಅಪೇಕ್ಷಿಸುತ್ತೇನೆ । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ । **ತತ್**—ನಮ್ಮಿಂದ ಕಾಂಕ್ಷಿತವಾದ ಆ ಧನವನ್ನು । **ಜರಿತ್ರೇ**—ಸ್ತುತಿಕರ್ತನಾದ ಯಜಮಾನನಿಗೆ । **ಜನಯತಂ**—ಉಂಟುಮಾಡಿರಿ । **ದ್ಯಾವಾಪೃಥಿವೀ**—ಎಲೈ ಪೃಥಿವ್ಯಂತರಿಕ್ಷಗಳೇ । **ಅಭ್ವಾತ್**—ಭಯಕ್ಕೆ ಹೇತುವಾದ ಪಾಪದಿಂದ । **ನಃ**—ನಮ್ಮನ್ನು । **ರಕ್ಷತಂ**—ರಕ್ಷಿಸಿರಿ.

ಭಾವಾರ್ಥ

ಪೂರ್ಣಸ್ವರೂಪವುಳ್ಳ ಪೃಥ್ವಿಗೂ ಅಂತರಿಕ್ಷಕ್ಕೂ ಸಂಬಂಧಿಸಿದುದೂ, ದುಃಖಾಭಾವದಿಂದ ಸುಖಾತ್ಮಕವಾದುದೂ ಕ್ಷಯರಹಿತವಾದುದೂ, ಫಲಭರಿತವಾದ ಸ್ವರ್ಗಕ್ಕೆ ಸಮಾನವಾದುದೂ, ಅಹಿಂಸಿತವಾದುದೂ, ಅನ್ನಯುಕ್ತವಾದುದೂ ಆದ ಧನವನ್ನು ಅಪೇಕ್ಷಿಸುತ್ತೇನೆ. ಎಲೈ ದ್ಯಾವಾಪೃಥಿವಿಗಳೇ, ನಮ್ಮಿಂದ ಕಾಂಕ್ಷಿತವಾದ ಆ ಧನವನ್ನು ಸ್ತುತಿಕರ್ತನಾದ ಯಜಮಾನನಿಗೆ ಉಂಟುಮಾಡಿರಿ. ಭಯಕ್ಕೆ ಹೇತುವಾದ ಪಾಪದಿಂದ ನಮ್ಮನ್ನು ರಕ್ಷಿಸಿರಿ.

English Translation

I solicit of Aditi wealth, without pain or decay, like heaven (in its fullness of enjoyment), exempt from injury, and abounding in food : grant, Heaven and Earth, such wealth to him who praises you : defend us, Heaven and Earth, from great (danger).

ವಿಶೇಷವಿಷಯಗಳು

ಈ ಋಕ್ಕಿನಲ್ಲಿ **ದಾತ್ರಂ ಹುವೇ**—ಧನವನ್ನು ಅಪೇಕ್ಷಿಸುತ್ತೇನೆ ಎಂಬ ಪ್ರಾರ್ಥನೆಯಿದೆ. ಮತ್ತು **ಅದಿತೇಃ, ಅನೇಹಃ, ಅನರ್ವಂ, ಸ್ವರ್ವತ್, ಅವಧಂ, ನಮಸ್ವತ್** ಇವೆಲ್ಲವೂ **ದಾತ್ರಂ** ಎಂದರೆ ಧನದ ಸ್ವರೂಪವನ್ನು ವರ್ಣಿಸುವ ವಿಶೇಷಣಪದಗಳಾಗಿವೆ.

**ಅದಿತೇಃ**- ಈ ಪದಕ್ಕೆ ಸಾಯಣರು ಈ ರೀತಿ ಅರ್ಥವನ್ನು ಹೇಳಿದ್ದಾರೆ. ಏತದಂತರಿಕ್ಷಸ್ಯಾಪ್ಯುಪಲಕ್ಷಣಂ । ಅಖಂಡನೀಯಯೋಃ ಪೃಥಿವ್ಯಾಃ ತಾದೃಶಸ್ಯಾಂತರಿಕ್ಷಸ್ಯ ಚ ಸಂಬಂಧಿ ದಾತ್ರಂ । ಅದಿತಿಯೆಂಬ ಪದವು ಅಂತರಿಕ್ಷಪರ್ಯಾಯವಾಗಬಹುದು. ಮತ್ತು ಅಖಂಡಾತ್ಮಕವಾದ ಪೃಥಿವಿಯ ಸ್ವರೂಪವನ್ನು ತಿಳಿಸಬಹುದು.

ಪ್ರಕೃತವಾದ ಋಕ್ಕಿನಲ್ಲಿ ಪೃಥಿವ್ಯಂತರಿಕ್ಷಗಳೆರಡಕ್ಕೂ ವಿಶೇಷಣಪದವಾಗಿ, ಅಖಂಡಾತ್ಮಕವಾದ ಪೃಥಿವ್ಯಂತರಿಕ್ಷಗಳೆರಡಕ್ಕೂ ಸೇರಿದ ಧನವೆಂದರ್ಥಮಾಡಿದೆ.

ನಿರುಕ್ತಕಾರರು ಅದಿತಿಶಬ್ದಕ್ಕೆ ಅದೀನಾ (ನಿ. ೪-೨೩), ದೀನವಲ್ಲದ್ದು, ಅಖಂಡಾತ್ಮಕವಾಗಿರತಕ್ಕದ್ದು, ಕ್ಷಯಿಸದಿರುವುದು ಎಂಬರ್ಥವನ್ನು ಹೇಳಿದ್ದಾರೆ. ಇದು ಅಗ್ನಿ, ಅದಿತಿಯೆಂಬ ದೇವಮಾತಾ ಇತ್ಯಾದಿಗಳ ಅನಂತತ್ವವನ್ನು ತಿಳಿಸತಕ್ಕ ವಿಶೇಷಣ ಪದವಾಗಿರುತ್ತದೆ. ಈ ಪದಕ್ಕಿರತಕ್ಕ ತಾತ್ಪರ್ಯದ ವೈಶಿಷ್ಟ್ಯವನ್ನು ಕುರಿತು Max-Muller ಎಂಬ ಪಂಡಿತನು ಈ ರೀತಿ ತಿಳಿಸಿದ್ದಾನೆ

"Aditi, an ancient God or Goddess is in reality, the earliest name invented to express the infinite. That was called A-diti, the unbound, the un-bounded. It is derived from Diti, bond and the negative particle and meant there-fore, originally what is free from bonds of any kind whether of space or time, free from physical weakness, free from moral guilt."

( S. B. E. Vol. XXXII. p. 241. )

ಅನಂತವಾದುದು, ದೇಶಕಾಲಾದಿಗಳಿಂದ ಪರಿಮಿತವಾಗದಿರುವುದು, ಅಪ್ರಮೇಯವಾದುದು ಎಂಬ ಯಾವತತ್ತ್ವವಿದೆಯೋ ಆ ತತ್ತ್ವದ ಸ್ವರೂಪವನ್ನು ತಿಳಿಸಲು ಈ ಪದದ ಪ್ರಯೋಗವು ಋಕ್ಸಂಹಿತೆಯಲ್ಲಿ ಅನೇಕಕಡೆಗಳಲ್ಲಿದೆ. ಸೂಕ್ತದ್ರಷ್ಟೃಗಳಾದ ಋಷಿಗಳು ಈ ಪದದ ಪ್ರಯೋಗದಿಂದ ಒಂದು ಗಭೀರವಾದ ಭಾವವನ್ನು ವ್ಯಕ್ತಪಡಿಸಿದ್ದಾರೆ. ಬಂಧಿತವಾಗುವುದು, ಪರಿಚ್ಛಿನ್ನವಾಗುವುದು, ನಿಯಮಿತವಾಗುವುದು ಎಂಬರ್ಥವುಳ್ಳ ದಿತಿ ಶಬ್ದದ ನಿಷೇದಾರ್ಥವನ್ನು ತಿಳಿಸುತ್ತಾ ಭೌತಿಕವಾದ ಪರಿಮಿತಿಯಾಗಲಿ, ನೈತಿಕವಾದ ನ್ಯೂನತೆಯಾಗಲಿ ಇಲ್ಲದಿರುವ ಅನಂತವಾದ ತತ್ತ್ವೋದ್ಯೋತಕವಾದ ಪದವಿದು ಎಂದು ಹೇಳಿದ್ದಾನೆ

**ಅದಿತಿರ್ದ್ಯೌರದಿತಿರಂತರಿಕ್ಷಮದಿತಿರ್ಮಾತಾ ಸ ಪಿತಾ ಸ ಪುತ್ರಃ ।**
**ವಿಶ್ವೇ ದೇವಾ ಅದಿತಿಃ ಪಂಚ ಜನಾ ಅದಿತಿರ್ಜಾತಮದಿತಿರ್ಜನಿತ್ವಂ ॥**

(ಋ. ಸಂ ೧-೮೯-೧೦)

ಇತ್ಯಾದಿಋಕ್ಕುಗಳಲ್ಲಿ ವರ್ಣಿತವಾಗಿರುವಂತೆ ಅದಿತಿಯು ವಿಶ್ವಮಾತೆ ಮತ್ತು ವಿಶ್ವಾತ್ಮಕಳು. ಇಂತಹ ಜಗನ್ಮಾತೆಯಾದ ದೇವತೆಯು ಸಕಲವಾದ ಭೌತಿಕಜಗತ್ತಿಗೂ ನೈತಿಕವ್ಯವಹಾರಗಳಿಗೂ ಅಧ್ಯಕ್ಷಳು ಎಂದು ಹೇಳಬಹುದು. ಆದರೆ ಅದಿತಿಪದವು ಪ್ರತ್ಯೇಕವಾದ ಒಂದು ದೇವತೆಯ ಸ್ವರೂಪವನ್ನು ತಿಳಿಸುವುದೇ ಅಥವಾ ಅದಿತ್ಯಾತ್ಮಕವಾದ ಸ್ವರೂಪವುಳ್ಳ ದ್ಯಾವಾಪೃಥಿವ್ಯಾದಿಗಳಿಗೆ ವಿಶೇಷಣಪದವೇ ಎಂಬುದನ್ನು ಪರಿಶೀಲಿಸಬೇಕು. ಋ. ಸಂ. ೧೦-೭೨ನೇ ಸೂಕ್ತವನ್ನುಳಿದು ಇತರ ಕಡೆಗಳಲ್ಲೆಲ್ಲಾ ಅದಿತಿಶಬ್ದವು ಅದಿತಿಪುತ್ರರಾದ ಆದಿತ್ಯಾದಿಗಳ ಸ್ವರೂಪವನ್ನೇ ತಿಳಿಸುತ್ತದೆ ಎಂದೂ ಒಂದು ಮತವಿದೆ. ಉದಾಹರಣೆಗೆ,

"Aditi is not a prominent deity in the Veda, she is celebrated rather in her sons, Adityas, than in her own person . . . . . . . ."

( S. B. E. XXXII. p. 243 )

ಇತ್ಯಾದಿಯಾಗಿ Max Muller ಮುಂತಾದ ಪಂಡಿತರ ಅಭಿಪ್ರಾಯವಿದೆ  ಪ್ರಕೃತದಲ್ಲಿ ಆ ವಿಮರ್ಶೆಯು ಅಷ್ಟು ಅಗತ್ಯವಾಗಿರುವುದಿಲ್ಲವಾದುದರಿಂದ ಮುಂದೆ ಉಚಿತವಾದ ಸಂದರ್ಭದಲ್ಲಿ ಈ ವಿಷಯವನ್ನು ವಿಮರ್ಶಿಸಲಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅನಂತವೂ ಅಖಂಡವೂ ಆದ ಸ್ವರೂಪವುಳ್ಳ ದ್ಯಾವಾಪೃಥಿವಿಸಂಬಂಧಿಯಾದ ಅಪರಿಮಿತವಾದ ಧನವು ಲಭಿಸಲಿ ಎಂದು ಪ್ರಾರ್ಥನೆಯಿದೆ.

**ಅನೇಹಃ**—ಈ ಪದಕ್ಕೆ ಸಾಯಣರು **ಅಪಾರಂ; ದುಃಖರಹಿತಂ, ಸುಖಾತ್ಮಕಂ** ಎಂದರ್ಥಮಾಡಿದ್ದಾರೆ. ಕೆಲವೆಡೆಗಳಲ್ಲಿ ಶತ್ರುರಹಿತವಾದುದು ಎಂದೂ ಅರ್ಥವಾಗುತ್ತದೆ.

**ಅನರ್ವಂ—ಅನರಣಂ, ಅಕ್ಷೀಣಂ** । ಕ್ಷಯರಹಿತವಾದುದು ಎಂದರ್ಥವೆಂದು ತಿಳಿಸಿದೆ. **"ಅನರ್ವಾ-ಪ್ರತ್ಯೃತೋಽನ್ಯಸ್ಮಿನ್"** (ನಿ.೬-೨೩) ಇತರರ ಆಶ್ರಯವೂ, ಅಧೀನತೆಯೂ ಇಲ್ಲದಿರುವುದೆಂದು ಒಂದರ್ಥವೂ, ಜರಾಮರಣಾದಿಗಳಿಲ್ಲದೆ ಶಾಶ್ವತವಾದುದು ಎಂಬ ಇನ್ನೊಂದರ್ಥವೂ ಸಾಧ್ಯವಾಗುತ್ತದೆ- **"ತ್ರಿನಾಭಿ ಚಕ್ರಮಜರ ಮನರ್ವಂ"** (ಋ. ಸಂ. ೧-೧೬೪-೨) ಎಂಬ ಋಕ್ಕಿನಲ್ಲಿ ಹೇಳಿರುವ ಅರ್ಥವೇ ಪ್ರಕೃತವಾದ ಮಂತ್ರದಲ್ಲಿರುವ ಅನರ್ವಪದಕ್ಕೂ ಆಗಿರುತ್ತದೆ. ಇದರ ವಿಶೇಷಾರ್ಥಗಳನ್ನು **ಅನರ್ವನ್, ಅನರ್ವಾಣಂ** ಇತ್ಯಾದಿ ಪ್ರಯೋಗ ಗಳಿರುವೆಡೆಗಳಲ್ಲಿ ವಿವರಿಸಲಾಗುತ್ತದೆ.

**ಸ್ವರ್ವತ್**—ಫಲಭರಿತವಾದ ಸ್ವರ್ಗಕ್ಕೆ ಸಮಾನವಾದುದು ಎಂದು **ದಾತ್ರಂ** ಎಂಬುದಕ್ಕೆ ವಿಶೇಷಣವಾಗಿದೆ. **ಸ್ವರ್** ಎಂಬ ಪದದ ಮೂಲಧಾತುವೇನು, ಈ ಪದದ ನಿಷ್ಪತ್ತಿಯು ಹೇಗೆ ಎಂಬುದನ್ನು **ಸ್ವಃ ಆದಿತ್ಯೋ ಭವತಿ ; ಸು ಅರಣಃ** ಇತ್ಯಾದಿ ನಿರುಕ್ತಕಾರರ ನಿರ್ವಚನದೊಂದಿಗೆ (ನಿ. ೨-೧೪) ಹಿಂದೆ ವಿವರಿಸಿ, ಬೇರೆ ಬೇರೆ ಅರ್ಥಗಳಲ್ಲಿ ಸ್ವಃ ಎಂಬ ಪದದ ಪ್ರಯೋಗವಿರುವುದನ್ನು ತಿಳಿಸಿದೆ. **ಸ್ವರ್ವತ್** ಎಂಬ ಪದವಿರುವಂತೆಯೇ, **ಸ್ವರ್ದೃಶಃ, ಸ್ವರ್ವಿದ್** ಇತ್ಯಾದಿ ಪ್ರಯೋಗಗಳೂ ಅನೇಕ ಕಡೆಗಳಲ್ಲಿದ್ದು ಆಯಾಸಂದರ್ಭಗಳಿಗೆ ತಕ್ಕ ವಿಶೇಷಾರ್ಥಗಳನ್ನು ಕೊಡುತ್ತವೆ. ಪ್ರಕೃತದಲ್ಲಿ **ಸ್ವರ್ವತ್** ಎಂಬ ಪ್ರಯೋಗವಿರುವ ಕೆಲವು ಸಂದರ್ಭಗಳನ್ನು ಮಾತ್ರ ಉದಾಹರಿಸಿ ಇದರ ಅರ್ಥವನ್ನು ವಿವರಿಸಲಾಗುತ್ತದೆ.

**ಯೋ ಇಂದ್ರ ಭುಜ ಆಭರಃ ಸ್ವರ್ವಾँ ಅಸುರೇಭ್ಯಃ ।**
**ಸ್ತೋತಾರಮಿನ್ಮಘವನ್ನಸ್ಯ ವರ್ಧಯ ಯೇ ಚ ತ್ವೇ ವೃಕ್ತಬರ್ಹಿಷಃ ॥**

(ಋ ಸಂ ೮-೯೭-೧)

ಎಂಬಲ್ಲಿ **ಸ್ವರ್ವಾನ್—ಸುಖವಾನ್ ; ಸ್ವರ್ಗವಾನ್ ವಾ । ಅಥವಾ ಸ್ವಃ ಶಬ್ದಃ ಸರ್ವಪರ್ಯಾಯಃ । ಸರ್ವಂ ಭೂತಜಾತಂ ಆತ್ಮನ ಏವೋತ್ಪನ್ನತ್ವಾತ್ ತದ್ವಾನ್॥** ಎಂದರೆ, ಸ್ವಃ ಎಂಬ ಪದಕ್ಕೆ ಸ್ವರ್ಗ, ಸುಖ ಅಥವಾ ಸಮಸ್ತ ಎಂಬರ್ಥಗಳಾಗುವುದರಿಂದ **ಸ್ವರ್ವಾನ್** ಎಂದರೆ ಸುಖವಂತ, ಸ್ವರ್ಗವಂತ ಅಥವಾ ಸರ್ವಸ್ವವನ್ನೂ ಪಡೆದಿರುವವನು ಎಂದರ್ಥವಾಗುತ್ತದೆ.

**ತಂ ಶಿಶೀತಾ ಸ್ವಧ್ವರಂ ಸತ್ಯಂ ಸತ್ವಾನಮೃತ್ವಿಯಂ ।**
**ಉತೋ ನು ಚಿದ್ಯ ಓಹತ ಆಂಡಾ ಶುಷ್ಣಸ್ಯ ಭೇದತ್ಯಜೈಃ ಸ್ವರ್ವತೀರಪೋನಭಂತಾಮನ್ಯಕೇ ಸಮೇ ॥**

(ಋ. ಸಂ. ೮-೪೦-೧೧)

ಇತ್ಯಾದಿ ಸ್ಥಳಗಳಲ್ಲಿ **ಸ್ವರ್ವತೀಃ ಅಪಃ** ಎಂದು ಉದಕಕ್ಕೆ ವಿಶೇಷಣವಾಗಿರುವಾಗ **ದಿವ್ಯಾನಿ** ಎಂದರೆ ದಿವ್ಯಲೋಕದಲ್ಲಿ (ಸ್ವರ್ಗದಲ್ಲಿ) ಉತ್ಪನ್ನವಾದ ಉದಕವೆಂದರ್ಥ. ಇದೇ ವಿಶೇಷಣವು ಅಗ್ನ್ಯಾದಿಇತರದೇವತೆಗಳ ಸ್ವರೂಪಗಳನ್ನೂ ವರ್ಣಿಸುತ್ತದೆ. ಉದಾಹರಣೆಗೆ,

**ಜ್ಯೋತಿಷ್ಮತೀಮದಿತಿಂ ಧಾರಯತ್ ಕ್ಷಿತಿಂ ಸ್ವರ್ವತೀಮಾ ಸಚೇತೇ ದಿನೇದಿನೇ ಜಾಗೃವಾಂಸಾ ದಿವೇದಿವೇ ।**

**ಜ್ಯೋತಿಷ್ಮತ್ ಕ್ಷತ್ರಮಾಶಾತೇ ಆದಿತ್ಯಾ ದಾನುನಸ್ಪತೀ ॥**

(ಋ. ಸಂ. ೧-೧೩೬-೩)

ಎಂಬಲ್ಲಿ ಸ್ವರ್ವತೀ ಎಂಬ ಪದವು ಅದಿತಿಗೆ ವಿಶೇಷಣವಾಗಿದೆ. ಇಲ್ಲಿ, **ಯಜ್ಞನಿಷ್ಪತ್ತಿದ್ವಾರಾ ಸ್ವರ್ಗವತೀಂ** ಎಂದರ್ಥವನ್ನು ಹೇಳಿದೆ

**ಆ ತೇ ಶುಷ್ಮೋ ವೃಷಭ ಏತು ಪಶ್ಚಾದೋತ್ತರಾದಧರಾದಾ ಪುರಸ್ತಾತ್ ।**

**ಆ ವಿಶ್ವತೋ ಅಭಿ ಸಮೇತ್ವರ್ವಾಙಿಂದ್ರ ದ್ಯುಮ್ನಂ ಸ್ವರ್ವದ್ಧೇಹ್ಯಸ್ಮೇ ॥**

(ಋ. ಸಂ. ೬-೧೯-೯)

ಇತ್ಯಾದಿ ಸಂದರ್ಭಗಳಲ್ಲಿ **ಸುಖಯುಕ್ತಂ ಧನಂ** ಎಂಬರ್ಥವೆಂದು ತಿಳಿಸಿದ್ದಾರೆ. ಇದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸ್ವರ್ಗಕ್ಕೆ ಸಮಾನವಾದುದು ಎಂದರೆ ಸ್ವರ್ಗದಲ್ಲಿ ಲಭಿಸುವ ಸುಖದಂತೆ ಸುಖದಾಯಿಯಾದ ದಾತ್ರ (ಧನ) ವೆಂದರ್ಥ.

**ರೋದಸೀ**—ಈ ಪದದ ನಿರ್ವಚನವನ್ನೂ ತಾತ್ಪರ್ಯವನ್ನೂ ಹಿಂದೆ ಸೂಕ್ಷ್ಮವಾಗಿ ತಿಳಿಸಿದೆ. ಇನ್ನೂ ವಿಸ್ತೃತವಾಗಿ ಇದರ ವಿಶೇಷಾರ್ಥಗಳನ್ನು ಮುಂದೆ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ.

### ವ್ಯಾಕರಣಪ್ರಕ್ರಿಯಾ

**ಅನೇಹಃ**—ಹನ ಹಿಂಸಾಗತ್ಯೋಃ ಧಾತು. **ನಞಿ ಹನ ಏಹ ಚ** ((ಉ. ಸೂ. ೪-೬೬೩) ಎಂಬುದರಿಂದ ಅಸಿಪ್ರತ್ಯಯ. ಧಾತುವಿಗೆ ಏಹಾದೇಶ. **ನಲೋಪೋ ನಞಃ** ಎಂಬುದರಿಂದ ನಞಿನ ನಕಾರಕ್ಕೆ ಲೋಪ **ತಸ್ಮಾನ್ನುಡಚಿ** ಸೂತ್ರದಿಂದ ಪರದ ಉಕಾರಕ್ಕೆ ನುಡಾಗಮ. ದ್ವಿತೀಯಾ ದ್ವಿವಚನ ಪರವಾದಾಗ ನಪುಂಸಕದಲ್ಲಿ **ಸ್ವಮೋರ್ನಪುಂಸಕಾತ್** (ಪಾ. ಸೂ. ೭-೧-೨೩) ಎಂಬುದರಿಂದ ವಿಭಕ್ತಿಗೆ ಲೋಪ. ಕೃದುತ್ತರಪದ ಪ್ರಕೃತಿಸ್ವರದಿಂದ ಅಂತೋದಾತ್ತವಾಗುತ್ತದೆ.

**ದಾತ್ರಮ್**—ಡುದಾಞ್ ದಾನೇ ಧಾತು. **ದಾದಿಭ್ಯಶ್ಛಂದಸಿ** (ಉ. ಸೂ. ೪-೬೦೯) ಎಂಬುದರಿಂದ ತ್ರನ್ ಪ್ರತ್ಯಯ. ವ್ಯತ್ಯಯದಿಂದ ಅಂತೋದಾತ್ತವಾಗುತ್ತದೆ.

**ಹುವೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಲಟ್ ಉತ್ತಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸ್ವರ್ವತ್**—ಸ್ವರ್ ಸ್ವರ್ಗಃ ಅಸ್ಯ ಅಸ್ತಿ ಇತಿ ಸ್ವರ್ವತ್. ಮತುಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ **ನಞ್ಸ್ವರೌ ಸ್ವರಿತೌ** (ಫಿ ಸೂ. ೭೪) ಎಂಬುದರಿಂದ ಸ್ವರ್ ಎಂಬುದಕ್ಕೆ ಸ್ವರಿತಸ್ವರ ಬರುತ್ತದೆ.

**ಅವಧಮ್**—ಹನ ಹಿಂಸಾಗತ್ಯೋಃ ಧಾತು. ಅಪ್‌ಪ್ರತ್ಯಯ ಸನ್ನಿಯೋಗದಿಂದ ಧಾತುವಿಗೆ ವಧಾದೇಶ. ನ ವಿದ್ಯತೇ ವಧಃ ಯಸ್ಯ ತತ್. ನಞ್‌ಸುಭ್ಯಾಮ್ (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋ-ದಾತ್ತಸ್ವರ ಬರುತ್ತದೆ.

**ಜನಯತಮ್**—ಜನೀ ಪ್ರಾದುರ್ಭಾವೇ. ಧಾತು. ಹೇತುಮತಿ ಚ ಎಂಬುದರಿಂದ ಣಿಚ್. ಜನೀಜೄಷ್-ಕ್ನಸುರಂಜೋಽಮಾಂತಾಶ್ಚ ಎಂಬುದರಿಂದ ಮಿತ್‌ಸಂಜ್ಞಾ ಇರುವುದರಿಂದ ಮಿತಾಂ ಹ್ರಸ್ವಃ (ಪಾ. ಸೂ. ೬-೪-೯೨) ಎಂಬುದರಿಂದ ಉಪಧಾಹ್ರಸ್ವ ಬರುತ್ತದೆ. ಣಿಜಂತದಮೇಲೆ ಲೋಟ್ ಮಧ್ಯಮಪುರುಷದ್ವಿವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

———:o:———

ಸಂಹಿತಾಪಾಠಃ

ಅತಪ್ಯಮಾನೇ ಅವಸಾವಂತೀ ಅನು ಷ್ಯಾಮ ರೋದಸೀ ದೇವಪುತ್ರೇ ।
ಉಭೇ ದೇವಾನಾಮುಭಯೇಭಿರನ್ಹಾಂ ದ್ಯಾವಾ ರಕ್ಷತಂ ಪೃಥಿವೀ
ನೋ ಅಭ್ವಾತ್ ॥ ೪ ॥

ಪದಪಾಠಃ

ಅತಪ್ಯಮಾನೇ ಇತಿ । ಅವಸಾ । ಅವಂತೀ ಇತಿ । ಅನು । ಸ್ಯಾಮ । ರೋದಸೀ ಇತಿ । ದೇವ-
ಪುತ್ರೇ ಇತಿ ದೇವಽಪುತ್ರೇ ।
ಉಭೇ ಇತಿ । ದೇವಾನಾಂ । ಉಭಯೇಭಿಃ । ಅನ್ಹಾಂ । ದ್ಯಾವಾ । ರಕ್ಷತಂ । ಪೃಥಿವೀ ಇತಿ ।
ನಃ । ಅಭ್ವಾತ್ ॥ ೪ ॥

ಸಾಯಣಭಾಷ್ಯಂ

ಅವಸಾ ಸ್ವತೋಽಧಿಕೇನ ಕೇನಚಿತ್ಕೃತೇನಾವನೇನ ಸಮೃದ್ಧ್ಯಾತಪ್ಯಮಾನೇ ಅನೀಶ್ವರೇ ॥ ತಪ ಐಶ್ವರ್ಯೇ ಕರ್ಮಣಿ ಇದಂ ರೂಪಂ ॥ ಅತಪ್ಯಮಾನೇ ಅನ್ಯೈರಪೀಡ್ಯಮಾನೇ । ಅವಸಾನ್ನೇನಾ-ವಂತೀ ತರ್ಪಯಂತ್ಯೌ ದೇವಪುತ್ರೇ ದೇವಾ ವ್ಯವಹರ್ತಾರೋ ಮನುಷ್ಯಾಃ ಪುತ್ರಸ್ಥಾನೀಯಾ ಯಯೋ-ಸ್ತಾದೃಶ್ಯೌ । ಲೋಕದ್ವಯಸ್ಥಾ ಮನುಷ್ಯಾಶ್ಚ ದೇವಾಶ್ಚ ತದುಪಜೀವ್ಯತ್ವಾತ್ಪುತ್ರಾ ಇತ್ಯುಚ್ಯಂತೇ ।

ಈದೃಶಾವುಭೇ ರೋದಸೀ ದ್ಯಾವಾಪೃಥಿವ್ಯೌ ದೇವಾನಾಮುಹ್ನಾಂ | ಏತದ್ರಾತ್ರೇರಪ್ಯುಪಲಕ್ಷಣಂ | ದ್ಯೋತಮಾನಾನಾಮುಹ್ನಾಂ ರಾತ್ರೀಣಾಂ ಚ ಸಂಬಂಧಿಭಿರುಭಯವಿಧೈಃ ಶೀತೋಷ್ಣಾದಿರೂಪೈರ್ವಿಲಕ್ಷಣೈ- ರ್ಧರ್ಮೈರ್ನಿಮಿತ್ತಭೂತೈಃ | ತೇಷಾಂ ಲಾಭಾಯೇತ್ಯರ್ಥಃ | ತದರ್ಥಂ ಯುವಾಮನು ಸ್ಯಾಮ | ಅನು- ಭವೇಮ | ಶಿಷ್ಟೋ ವ್ಯಾಖ್ಯಾತಃ ||

ಪ್ರತಿಪದಾರ್ಥ

ಅವಸಾ—ಸಮೃದ್ಧವಾದ ಐಶ್ವರ್ಯದಿಂದ | ಅತಪ್ಯಮಾನೇ—ತಮಗಿಂತಲೂ ಉತ್ತಮವಾದ ಈಶ್ವರರೇ- ಇಲ್ಲದಿರುವವರೂ | [ಅಥವಾ ಅತಪ್ಯಮಾನೇ—ಇತರರಿಂದ ಹಿಂಸಿಸಲ್ಪಡದವರೂ | ಅವಸಾ—ಅನ್ನದಿಂದ | ಅವಂತೀ—(ಸಮಸ್ತವನ್ನೂ) ತೃಪ್ತಿಪಡಿಸುವವರೂ | ] ದೇವಪುತ್ರೇ—ದೇವತೆಗಳನ್ನೂ (ಮಾನವರನ್ನೂ) ಪುತ್ರರ ನ್ನಾಗಿ ಹೊಂದಿರುವವರೂ | ದೇವಾನಾಂ—ದ್ಯೋತಮಾನಗಳಾದ | ಅಹ್ನಾಂ—ಅಹೋರಾತ್ರಗಳ | ಉಭ- ಯೇಭಿಃ—ಶೀತೋಷ್ಣವೇ ಮುಂತಾದ ಉಭಯಲಕ್ಷಣಗಳಿಂದ ಕೂಡಿರುವವರೂ ಆದ | ಉಭೇ ರೋದಸೀ— ದ್ಯಾವಾಪೃಥಿವಿಗಳಿಬ್ಬರನ್ನೂ | ಅನು ಸ್ಯಾಮ—ಭಕ್ತಿಯಿಂದ ಸೇವಿಸೋಣ | ದ್ಯಾವಾಪೃಥಿವೀ—ಎಲೈ ದ್ಯಾವಾ ಪೃಥಿವಿಗಳೇ | ಅಭ್ವಾತ್—ಭಯಂಕರವಾದ ವಿಪತ್ತಿನಿಂದ | ನಃ—ನಮ್ಮನ್ನು | ರಕ್ಷತಂ—ರಕ್ಷಿಸಿರಿ.

ಭಾವಾರ್ಥ

ಇತರರಿಂದ ಹಿಂಸಿಸಲ್ಪಡದವರೂ, ಅನ್ನದಿಂದ ಸಮಸ್ತರನ್ನೂ ತೃಪ್ತಿಪಡಿಸುವವರೂ, ದೇವತೆಗಳನ್ನೂ ಮಾನ ವರನ್ನೂ ಪುತ್ರರನ್ನಾಗಿ ಹೊಂದಿರುವವರೂ, ದ್ಯೋತಮಾನಗಳಾದ ಅಹೋರಾತ್ರಗಳ ಶೀತೋಷ್ಣವೇ ಮುಂತಾದ ಉಭಯಲಕ್ಷಣಗಳಿಂದ ಕೂಡಿರುವವರೂ ಆದ ದ್ಯಾವಾಪೃಥಿವಿಗಳಿಬ್ಬರನ್ನೂ ಸಹ ಭಕ್ತಿಯಿಂದ ಸೇವಿಸೋಣ. ಎಲೈ ದ್ಯಾವಾಪೃಥಿವಿಗಳೇ, ನಮ್ಮನ್ನು ಭಯಂಕರವಾದ ವಿಪತ್ತಿನಿಂದ ರಕ್ಷಿಸಿರಿ.

English Translation

May we ever be (devoted to) that Heaven and Earth, who are not subject to annoyance, who satisfy (all beings) with food, who have the gods (and men) for sons, and who are both endowed with the double (condition) of the divine days (and nights): defend us, Heaven and Earth, from great (danger).

ವಿಶೇಷವಿಷಯಗಳು

ಅವಸಾ—ಅವಸ್ ಶಬ್ದವನ್ನು ಅನ್ನನಾಮಗಳಲ್ಲಿ ಪಠಿಸಿದೆ. (ನಿ. ೩-೮). ಅದರ ಆಧಾರದಮೇಲೆ ಪ್ರಕೃತವಾದ ಋಕ್ಕಿನಲ್ಲಿ ಅನ್ನರೂಪವಾದ ಐಶ್ವರ್ಯದಿಂದ ಎಂದು ಒಂದರ್ಥವನ್ನು ಹೇಳಬಹುದು. ಅಥವಾ ನಿರುಕ್ತ ಕಾರರು ಬೇರೊಂದು ಕಡೆಯಲ್ಲಿ ಉದಾಹರಿಸಿರುವ (ನಿ. ೧೦-೩) ಋಕ್ಸಂಹಿತೆಯ,

ಹಿರಣ್ಯಸ್ತೂಪಃ ಸವಿತರ್ಯಥಾ ತ್ವಾಂಗಿರಸೋ ಜುಹ್ವೇ ವಾಜೇ ಅಸ್ಮಿನ್ |
ಏವಾ ತ್ವಾರ್ಚನ್ನವಸೇ ವಂದಮಾನಃ ಸೋಮಸ್ಯೇವಾಂಶುಂ ಪ್ರತಿ ಜಾಗರಾಹಂ ||

(ಋ. ಸಂ. ೧೦-೧೪೯-೫)

ಎಂಬಲ್ಲಿ **ಅವಸೇ** ಎಂಬ ಪದಕ್ಕೆ **ಅವನಾಯ** ಎಂದರೆ **ರಕ್ಷಣಾಯ** ಎಂಬರ್ಥವನ್ನು ಹೇಳಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ (ಅನ್ನರೂಪವಾದ) ರಕ್ಷಣೆಯಿಂದ ಎಂದು ಹೇಳಬಹುದು. ಸಾಯಣರು ಈ ಸಂದರ್ಭದಲ್ಲಿ ಎರಡುವಿಧವಾಗಿ ಅರ್ಥವನ್ನು ಹೇಳಿದ್ದಾರೆ. ಮೊದಲನೆಯದಾಗಿ, **ಅತೆಪ್ಯಮಾನೇ** ಎಂಬ ಪದಕ್ಕೆ ಅನೀಶ್ವರೇ ಎಂದರ್ಥವನ್ನು ಹೇಳಿದ್ದಾರೆ. ಅದು ಹೇಗೆಂಬುದನ್ನು ವಿವರಿಸುತ್ತಾ, **ತಪೇಃ ಐಶ್ವರ್ಯಕರ್ಮಣಃ ಇದಂ ರೂಪಂ ।** ಐಶ್ವರ್ಯಾರ್ಥಕವಾದ **ತಪ್** ಧಾತುವಿನ ರೂಪವಿದು ಎಂದು ವಿವರಿಸಿದ್ದಾರೆ. ಬೇರೆ ಯಾವ ಈಶ್ವರನಿಗೂ ಅಧೀನ ವಲ್ಲದೇ ಸ್ವತಃ ಸಕಲ ಜಗತ್ತಿಗೂ ಈಶ್ವರರಾದ ಎಂದರ್ಥ. ಆಗ, **ಅವಸಾ ಅತೆಪ್ಯಮಾನೇ** ಎಂದರೆ ಸಂಪತ್ಸ ಮೃದ್ಧಿಯಿಂದ ಜಗದೀಶ್ವರರು ಎಂದು ತಾತ್ಪರ್ಯವಾಗುತ್ತದೆ. ಎರಡನೆಯದಾಗಿ; **ಅತೆಪ್ಯಮಾನೇ ಅನ್ಯೈರಪೀಡ್ಯ ಮಾನೇ ।** ಇತರರಿಂದ ಹಿಂಸಿಸಲ್ಪಡದಿರುವವರಾಗಿ **ಅವಸಾ ಅವಂತೀ ।** ರಕ್ಷಣೆಗಳೊಂದಿಗೆ ಜಗತ್ತನ್ನು ರಕ್ಷಿಸು ವವರು ಎಂದರ್ಥವು.

**ದೇವಪುತ್ರೇ—ದೇವಾಃ, ವ್ಯವಹರ್ತಾರೋ ಮನುಷ್ಯಾಃ ಪುತ್ರಸ್ಥಾನೀಯಾಃ ಯಯೋಸ್ತಾದೃಶ್ಯೌ। ಲೋಕದ್ವಯಸ್ಥಾಃ ಮನುಷ್ಯಾಶ್ಚ ದೇವಾಶ್ಚ ತದುಪಜೀವ್ಯತ್ವಾತ್ ಪುತ್ರಾ ಇತ್ಯುಚ್ಯಂತೇ ।** ದ್ಯುಲೋಕವನ್ನು ನಂಬಿಕೊಂಡು ಅದರ ವೃಷ್ಟ್ಯಾದ್ಯನುಗ್ರಹದಿಂದ ಮಾನವರೂ, ಯಜ್ಞಾಹುತಿಗಳ ಅರ್ಪಣೆಯಿಂದ ಪೃಥ್ವಿಯನ್ನು ನಂಬಿ ದೇವತೆಗಳೂ ಇವುಗಳಿಗೆ ಉಪಜೀವಿಗಳಾಗಿರುವುದರಿಂದ ಇವರನ್ನೆಲ್ಲಾ ಪುತ್ರರನ್ನಾಗಿ ಉಳ್ಳವರು ಎಂದು ದ್ಯಾವಾ ಪೃಥಿವಿಗಳನ್ನು ಸಂಬೋಧಿಸಿದೆ.

> **ಇಮೌ ವೈ ಲೋಕೌ ಸಹಾಸ್ತಾಂ ತೌ ವ್ಯೈತಾಂ ನಾವರ್ಷನ್ನ ಸಮುಪತತ್ತೇ ಪಂಚಜನಾ ನ ಸಮು-**
> **ಜಾನತ ತೌ ದೇವಾಃ ಸಮನಯಂಸ್ತೌ ಸಂಯಂತಾವೇತಂ ದೇವವಿವಾಹಂ ವ್ಯವಹೇತಾಂ ।**
>
> (ಐ, ಬ್ರಾ, ೧೯-೫)

ಎಂಬ ವಾಕ್ಯದಲ್ಲಿ ವಿವರಿಸಿರುವ ದ್ಯಾವಾಪೃಥಿವಿಗಳ ದಾಂಪತ್ಯಸಂಬಂಧವನ್ನೂ, ಸಮಸ್ತಲೋಕಗಳ ವ್ಯವಹಾರಕ್ಕೂ ಸಹ ಇವರೇ ಆಧಾರಭೂತರಾಗಿರುವರೆಂದು ತಿಳಿಸಿರುವ ಅಂಶವನ್ನೂ ಸಹ ಹಿಂದೆ ತಿಳಿಸಿದೆ.

> **ಯ ಇಮೇ ದ್ಯಾವಾಪೃಥಿವೀ ಜನಿತ್ರೀ ರೂಪೈರಪಿಂಶದ್ಭುವನಾನಿ ವಿಶ್ವಾ ।**
> **ತಮದ್ಯ ಹೋತರಿಷಿತೋ ಯಜೀಯಾನ್ ದೇವಂ ತ್ವಷ್ಟಾರಮಿಹ ಯಕ್ಷಿ ವಿದ್ವಾನ್ ॥**
>
> (ಋ. ಸಂ. ೧೧-೧೧೦-೯)

ಎಂಬಲ್ಲಿ ದ್ಯಾವಾಪೃಥಿವಿಗಳು ಸಮಸ್ತವಿಶ್ವಕ್ಕೂ ಜನನೀಜನಕರೆಂದು ವರ್ಣಿತವಾಗಿದೆ. ದೇವಮಾನವಾದಿಜಗತ್ತಿಗೆಲ್ಲಾ ಜನಯಿತ್ರಿಯರೆಂದರ್ಥ. ಹೀಗೆಯೇ,

> **ಉಪಹೂತೇ ದ್ಯಾವಾಪೃಥಿವೀ ಪೂರ್ವಜೇ ಋತಾವರೀ ದೇವೀ ದೇವಪುತ್ರೇ ಇತಿ ।**
>
> (ಶ. ಬ್ರಾ. ೧-೮-೧-೩೯)

ಇತ್ಯಾದಿ ಬ್ರಾಹ್ಮಣವಾಕ್ಯಗಳಲ್ಲೂ ಸಹ ದ್ಯಾವಾಪೃಥಿವಿಗಳನ್ನು **ದೇವಪುತ್ರೇ** ಎಂದು ನಿರ್ದೇಶಿಸಿರುವ ವಿಶೇಷಣವು ರೂಢವಾಗಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಅಂಶವನ್ನು ತಿಳಿಸಿದೆ. ಮತ್ತು "ದ್ಯಾವಾಪೃಥಿವಿಗಳು ಸಕಲ ವಿಶ್ವಕ್ಕೂ ಆಶ್ರಯಭೂತರೂ, ರಕ್ಷಕರೂ ಆದ ಮಾತಾಪಿತೃಗಳು" ಎಂದು ಇವರ ಮಹತ್ವದ ವರ್ಣನೆಯು ಶ್ರುತ್ಯಂತ

ರಗಳಲ್ಲಿ ಹೇಗೆ ವರ್ಣಿತವಾಗಿದೆಯೆಂಬುದನ್ನು ಇದೇ ಭಾಗದಲ್ಲಿ ಮುಂದೆ ೧-೧೮೫-೬ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ.

ವ್ಯಾಕರಣಪ್ರಕ್ರಿಯಾ

**ಅತಪ್ಯಮಾನೇ**—ತಪ ಐಶ್ವರ್ಯೇ ಧಾತು. ದಿವಾದಿ ಲಟಿಗೆ ಶಾನಚಾದೇಶ. **ದಿವಾದಿಭ್ಯಃ ಶ್ಯನ್** ಎಂಬುದರಿಂದ ಶ್ಯನ್ ವಿಕರಣ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. ನಞ್‌ತತ್ಪುರುಷ ಸಮಾಸವಾದಾಗ **ತತ್ಪುರುಷೇ ತುಲ್ಯಾರ್ಥ**—ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ. ದ್ವಿವಚನಾಂತರೂಪ.

**ಅವಂತೀ** — ಅವ ರಕ್ಷಣೇ ಧಾತು. ಲಟಿಗೆ ಶತ್ರಾದೇಶ. ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಙೀಪ್. ದ್ವಿವಚನ (ಔ) ಪರವಾದಾಗ **ಸುಪಾಂ ಸುಲುಕ್**—ಸೂತ್ರದಿಂದ ಪೂರ್ವಸವರ್ಣದೀರ್ಘ.

**ಸ್ಯಾಮ**—ಅಸ ಭುವಿ. ಧಾತು. ಲಿಙ್ ಉತ್ತಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. **ಉಪಸರ್ಗಪ್ರಾದುರ್ಭ್ಯಾಂ**—(ಪಾ. ಸೂ. ೮-೩-೮೭) ಎಂಬುದರಿಂದ ಧಾತು ಸಕಾರಕ್ಕೆ ಷತ್ವ ಬರುತ್ತದೆ.

**ದೇವಪುತ್ರೇ**—ದೇವಾಃ ಪುತ್ರಾಃ ಯಯೋಸ್ತೇ ದೇವಪುತ್ರೇ. ಬಹುವ್ರೀಹೌ ಪ್ರಕೃತ್ಯಾಪೂರ್ವ-**ಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ದ್ವಿವಚನಾಂತರೂಪ.

**ಉಭಯೇಭಿಃ**—**ಉಭಯೋಽನ್ಯತ್ರ** ಎಂಬುದರಿಂದ ಉಭಶಬ್ದಕ್ಕೆ ಅಯಚ್ ಪ್ರತ್ಯಯ. **ಬಹುಲಂ-ಛಂದಸಿ** ಎಂಬುದರಿಂದ ಭಿಸಿಗೆ ಐಸ್‌ಭಾವ ವಿಕಲ್ಪವಿಧಾನ ಮಾಡಿರುವುದರಿಂದ ಬರುವುದಿಲ್ಲ. ಏತ್ವ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

———— :O: ————

ಸಂಹಿತಾಪಾಠಃ

ಸಂಗಚ್ಛಮಾನೇ ಯುವತೀ ಸಮಂತೇ ಸ್ವಸಾರಾ ಜಾಮೀ ಪಿತ್ರೋರುಪಸ್ಥೇ ।
ಅಭಿಜಿಘ್ರಂತೀ ಭುವನಸ್ಯ ನಾಭಿಂ ದ್ಯಾವಾ ರಕ್ಷತಂ ಪೃಥಿವೀ ನೋ
ಅಭ್ವಾತ್ ॥ ೫ ॥

ಪದಪಾಠಃ

ಸಂಗಚ್ಛಮಾನೇ ಇತಿ ಸಂऽಗಚ್ಛಮಾನೇ । ಯುವತೀ ಇತಿ । ಸಮಂತೇ ಇತಿ ಸಂऽಅಂತೇ । ಸ್ವಸಾರಾ ।
ಜಾಮೀ ಇತಿ । ಪಿತ್ರೋಃ । ಉಪऽಸ್ಥೇ ।

ಅಭಿಜಿಘ್ರಂತೀ ಇತ್ಯಭಿऽಜಿಘ್ರಂತೀ । ಭುವನಸ್ಯ । ನಾಭಿಂ । ದ್ಯಾವಾ । ರಕ್ಷತಂ । ಪೃಥಿವೀ ಇತಿ । ನಃ ।

ಅಭ್ವಾತ್ ॥ ೫ ॥

ಸಾಯಣಭಾಷ್ಯಂ

ಸಂಗಚ್ಛಮಾನೇ ಪರಸ್ಪರಮುಪಕಾರಿತ್ವೇನ ಸಹ ಯುಜ್ಯಮಾನೇ । ವೃಷ್ಟಿಹವಿಷೋಶ್ಚ ಪರಸ್ಪರಮುಪಕಾರ್ಯೋಪಕಾರಕಭಾವಃ । ಯದ್ವಾ । ಪೂರ್ವಂ ಸಂಸೃಷ್ಟೇ ಏವ ಸತ್ಯೌ ಪಶ್ಚಾದ್ವಿಯುಜ್ಯ ವೃಷ್ಟಿಹವಿಷೀ ಅಕುರ್ವಂತ್ಯೌ ಪಶ್ಚಾನ್ಮನುಷ್ಯೈಃ ಪ್ರಾರ್ಥಿತೈರ್ದೇವೈರ್ವಿವಾಹಿತೇ ಸತ್ಯೌ ಸಂಗತೇ ಅಭೂತಾಮಿತ್ಯಾಹುಃ । ಅಯಮುಥೋ ದ್ಯಾವಾಪೃಥಿವೀ ಸಹಾಸ್ತಾಂ । ತೈ. ಬ್ರಾ. ೧-೧-೩-೨ । ಇತ್ಯಾದಿ ಬ್ರಾಹ್ಮಣೇ ಸಮಾಮ್ನಾತಃ । ಯುವತೀ ನಿತ್ಯತರುಣ್ಯೌ ಮಿಶ್ರಯಂತ್ಯೌ ವಾ ಸರ್ವೇಷು ಭಾವೇಷು ಸಮಂತೇ ಸಮಾನಾಂತಿಕೇ ಸಮಾನಪರ್ಯಂತೇ ವಾ ಸ್ವಸಾರಾ ಪರಸ್ಪರಂ ಸ್ವಸೃಭೂತೇ ಜಾಮಿ ಬಂಧುಭೂತೇ । ಪ್ರಜಾಪತೇಃ ಸಕಾಶಾತ್ಸಹೋತ್ಪನ್ನತ್ವಾತ್ಪರಸ್ಪರಂ ಜಾಮಿತ್ವಂ । ತಥಾ ಚ ನಿಗಮೌ ದಿವಂ ಚ ಪೃಥಿವೀಂ ಚಾಂತರಿಕ್ಷಮಥೋ ಸ್ವಃ । ಋ. ೧೦-೧೯೦-೩ । ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ । ಋ. ೧೦-೩೧-೭ । ಇತಿ । ಪಿತ್ರೋಃ ಸರ್ವಸ್ಯ ಪಿತೃಸ್ಥಾನೀಯಯೋಃ ಪಾಲಕಯೋಸ್ತಯೋರುಪಸ್ಥ ಉತ್ಸಂಗೇ ಸ್ಥಿತಂ ಭುವನಸ್ಯ ಭೂತಜಾತಸ್ಯ ನಾಭಿಂ ಬಂಧಕಮುದಕಮಭಿಜಿಘ್ರಂತೀ ಆಭಿಘ್ರಾಣಂ ಕುರ್ವಂತ್ಯೌ ಸ್ಪೃಶಂತ್ಯೌ । ಸಮಾನಮೇತದುದಕಂ । ಋ. ೧-೧೬೪-೫೧ । ಇತ್ಯಾದಿಮಂತ್ರವರ್ಣಾದುಭಯೋರುದಕಪ್ರದತ್ವಂ ಪ್ರಸಿದ್ಧಂ । ಈದೃಶ್ಯೌ ನೋ ರಕ್ಷತಂ ॥

॥ ಪ್ರತಿಪದಾರ್ಥ ॥

**ಸಂಗಚ್ಛಮಾನೇ**—(ಪರಸ್ಪರ ಉಪಕಾರಮಾಡುವ ಇಚ್ಛೆಯಿಂದ) ಯಾವಾಗಲೂ ಜತೆಯಲ್ಲಿಯೇ ಇರತಕ್ಕವರೂ । **ಯುವತೀ**—ನಿತ್ಯಕರ್ಮರೂ । **ಸಮಂತೇ**—ಸಮಾನವ್ಯಾಪ್ತಿಯುಳ್ಳವರೂ । **ಸ್ವಸಾರಾ**—ಅಕ್ಕತಂಗಿಯರಂತೆ ಪರಸ್ಪರ ಪ್ರೀತಿಯುಕ್ತರೂ । **ಜಾಮಿ**—(ಪ್ರಜಾಪತಿಯ ಮಕ್ಕಳಾದ್ದರಿಂದ) ಪರಸ್ಪರ ಬಂಧುತ್ವವುಳ್ಳವರೂ । **ಪಿತ್ರೋಃ**—ತಂದೆತಾಯಿಗಳ ಅಥವಾ ಪಾಲಕರ । **ಉಪಸ್ಥೇ**—ಅಂಕದಲ್ಲಿ (ತೊಡೆಯಮೇಲೆ) ಇರುವ । **ಭುವನಸ್ಯ**—ಲೋಕದಲ್ಲಿರುವ ಸಮಸ್ತಪ್ರಾಣಿಗಳಿಗೆ । **ನಾಭಿಂ**—ಆಧಾರಭೂತವಾದ ಉದಕವನ್ನು । **ಅಭಿಜಿಘ್ರಂತೀ**—ಸ್ಪರ್ಶ ಮಾಡತಕ್ಕವರೂ (ಧರಿಸಿರುವವರೂ) ಆದ । **ದ್ಯಾವಾಪೃಥಿವೀ**—ಎಲೈ ದ್ಯಾವಾಪೃಥಿವಿಗಳೇ । **ಅಭ್ವಾತ್**—ಮಹದ್ಭಯದಿಂದ । **ನಃ**—ನಮ್ಮನ್ನು । **ರಕ್ಷತಂ**—ರಕ್ಷಿಸಿರಿ.

ಭಾವಾರ್ಥ

ಎಲೈ ದ್ಯಾವಾಪೃಥಿವಿಗಳೇ, ನೀವಿಬ್ಬರೂ ಯಾವಾಗಲೂ ಜತೆಯಲ್ಲಿಯೇ ಇರತಕ್ಕವರು, ನಿತ್ಯತರುಣರು. ಪ್ರಜಾಪತಿಯ ಮಕ್ಕಳಾದ್ದರಿಂದ ನೀವಿಬ್ಬರೂ ಅಕ್ಕತಂಗಿಯರಂತೆ ಪ್ರೀತಿಯುಕ್ತರೂ ಬಂಧುಗಳೂ ಆಗಿರುವಿರಿ. ಸಮಸ್ತ ಪ್ರಾಣಿಗಳಿಗೂ ಆಧಾರಭೂತವಾದ ಉದಕವನ್ನು ನೀವು ಧರಿಸಿದ್ದೀರಿ. ಇಂತಹ ನೀವು ನಮ್ಮನ್ನು ಮಹದ್ಭಯದಿಂದ ರಕ್ಷಿಸಿರಿ.

## English Translation

Going always together, equally young, and of the like termination, sisters, and kindred, and scenting the navel of the world, placed on their lap as its parents : defend us, Heaven and Earth, from great danger.

### ವಿಶೇಷವಿಷಯಗಳು

ಅಗಸ್ತ್ಯಋಷಿಯು ಈ ಸೂಕ್ತದಲ್ಲಿ ತನ್ನ ರಚನಾಕೌಶಲ್ಯವನ್ನು ಚೆನ್ನಾಗಿ ಪ್ರಕಾಶಪಡಿಸಿದ್ದಾನೆ. ಈ ಸೂಕ್ತದ ದೇವತೆಗಳಾದ ದ್ಯಾವಾಪೃಥಿವಿಗಳ ಅಸಾಧಾರಣವಾದ ಕೃತ್ಯಗಳೂ, ಲೋಕರಕ್ಷಣೆಯೂ ಅತ್ಯುತ್ತಮವಾದ ಮತ್ತು ಸಹಜವಾದ ಶಬ್ದಸಮೂಹದಿಂದ ವರ್ಣಿತವಾಗಿದೆ. ಎಂದರೆ, ಈ ದೇವತೆಗಳನ್ನು ವರ್ಣಿಸುವಾಗ ಅಥವಾ ಸ್ತುತಿಸುವಾಗ **ಅತಪ್ಯಮಾನೇ, ಅವಂತೀ, ದೇವಪುತ್ರೇ, ಸಂಗಚ್ಛಮಾನೇ, ಯುವತೀ, ಸಮಂತೇ, ಸ್ವಸಾರಾ, ಜಾಮೀ, ಅಭಿಜಿಘ್ರಂತೀ, ಉರ್ವೀ, ಸದ್ಮನೀ, ಬೃಹತೀ, ಜನಿತ್ರೀ, ಸುಪ್ರತೀಕೇ, ಪೃಥ್ವೀ, ಬಹುಲೇ, ದೂರೇಅಂತೇ, ಸುಭಗೇ, ಸುಪ್ರತೂರ್ತೀ** ಎಂಬ ಶಬ್ದಗಳನ್ನು ಉಪಯೋಗಿಸಲಾಗಿದೆ. ಈ ಶಬ್ದಗಳು ಸಹಜವಾಗಿಯೂ, ಗಂಭೀರಾರ್ಥವುಳ್ಳದ್ದಾಗಿಯೂ ಸಂದರ್ಭೋಚಿತವಾಗಿಯೂ ಇರುವುವಲ್ಲದೆ ದೇವತೆಗಳ ಗುಣಗಳನ್ನು ಸ್ತುತಿಸುವಾಗ ಈ ಶಬ್ದಗಳ ಪ್ರಯೋಗವು ಕವಿತ್ವಕ್ಕೆ ಗಾಂಭೀರ್ಯವನ್ನೂ, ಭಕ್ತಿಭಾವವನ್ನೂ ಉಂಟುಮಾಡುತ್ತದೆ. ಆದ್ದರಿಂದ ಈ ಸೂಕ್ತದ ಋಕ್ಕುಗಳ ರಚನೆಯು ಬಹು ಉನ್ನತಮಟ್ಟದಲ್ಲಿರುವುದೆಂದು ಪ್ರತ್ಯೇಕವಾಗಿ ಹೇಳಬೇಕಾದ ಆವಶ್ಯಕತೆಯಿಲ್ಲ. ಇದಲ್ಲದೆ ಈ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಪ್ರಶ್ನೋತ್ತರರೂಪದಿಂದ ಪ್ರತಿಪಾದಿತವಾಗಿರುವ ಗಹನವಾದ ತತ್ತ್ವಗಳೂ, ಅಲ್ಲಲ್ಲಿ ಉಪಯೋಗಿಸಿರುವ ಉಪಮಾನಗಳೂ ಋಷಿಯ ಕವಿತ್ವದ ರಚನಾಕೌಶಲ್ಯಕ್ಕೆ ಶ್ರೇಷ್ಠವಾದ ನಿದರ್ಶನಗಳಾಗಿವೆ.

**ಸಂಗಚ್ಛಮಾನೇ**—ಈ ಶಬ್ದಕ್ಕೆ ಜತೆಯಲ್ಲಿ ಹೋಗುವವರು ಅಥವಾ ಇರುವವರು ಎಂದರ್ಥವು. ಸಾಯಣರು ತಮ್ಮ ಭಾಷ್ಯದಲ್ಲಿ—**ಪರಸ್ಪರಮುಪಕಾರಿತ್ವೇನ ಸಹ ಯುಜ್ಯಮಾನೇ । ವೃಷ್ಟಿಹವಿಷೋರ್ಹಿ ಪರಸ್ಪರಮುಪಕಾರ್ಯೋಪಕಾರಕಭಾವಃ । ಯದ್ವಾ । ಪೂರ್ವಂ ಸಂಸೃಷ್ಟೇ ಏವ ಸತ್ಯೌ ಪಶ್ಚಾದ್ವಿಯುಜ್ಯ ವೃಷ್ಟಿಹವಿಷೀ ಅಕುರ್ವಂತ್ಯೌ ಪಶ್ಚಾನ್ಮನುಷ್ಯೈಃ ಪ್ರಾರ್ಥಿತೈರ್ದೇವೈರ್ವಿವಾಹಿತೇ ಸತ್ಯೌ ಸಂಗತೇ ಅಭೂತಾಮಿತ್ಯಾಹುಃ ।** ಎಂದು ಹೇಳಿರುವರು. ಎಂದರೆ ಪರಸ್ಪರ ಉಪಕಾರಮಾಡುವುದಕ್ಕಾಗಿ ಜತೆಯಲ್ಲಿರುವವು ಇಲ್ಲಿ ಉಪಕಾರವೆಂದರೆ ಉದಕವೃಷ್ಟಿ (ಮಳೆ) ಮತ್ತು ದೇವತೆಗಳಿಗೆ ಅರ್ಪಿಸುವ ಹವಿಸ್ಸು. ಮಳೆಯಾಗುವುದರಿಂದ ಸಸ್ಯಾದಿಗಳು ಉತ್ಪನ್ನವಾಗಿ ಹವಿಸ್ಸಿಗೆ ಬೇಕಾದ ಧಾನ್ಯಾದಿಗಳು ದೊರೆಯುವುದರಿಂದ ವೃಷ್ಟಿಹವಿಸ್ಸುಗಳು ಪರಸ್ಪರ ಸಹಕಾರದಿಂದ ಲಭಿಸುವುವೆಂದು ಇಲ್ಲಿ ವರ್ಣಿತವಾಗಿದೆ. ದ್ಯಾವಾಪೃಥಿವಿಗಳಿಗೂ ವೃಷ್ಟಿಗೂ ಏನು ಸಂಬಂಧ ಎಂದರೆ ಅದನ್ನೂ ಈ ಋಕ್ಕಿನಲ್ಲಿಯೇ **ಅಭಿಜಿಘ್ರಂತೀ ಭುವನಸ್ಯ ನಾಭಿಂ** ಎಂಬ ವಾಕ್ಯದಿಂದ ಋಷಿಯು ವಿವರಿಸಿರುವನು. ಎಂದರೆ ಅಂತರಿಕ್ಷದಲ್ಲಿ (ದ್ಯಾವಾ) ಮೇಘಗಳು ಒಟ್ಟಾಗಿ ಸೇರಿ ವೃಷ್ಟಿಯನ್ನು ಉಂಟುಮಾಡುವುದರಿಂದ ಭೂಮಿಯ ಮೇಲೆ (ಪೃಥಿವೀ) ಸಸ್ಯಾದಿಗಳು ಬೆಳೆಯುವವು. ಆದುದರಿಂದ ಈ ದ್ಯಾವಾಪೃಥಿವಿಗಳು ವೃಷ್ಟಿಗೂ, ಸಸ್ಯಾದಿಗಳ ಉತ್ಪತ್ತಿಗೂ ಪರಸ್ಪರ ಸಹಾಯಭೂತವಾಗಿರುವವು ಎಂದು ಅಭಿಪ್ರಾಯವು.

ಅಥವಾ ಪ್ರಜಾಪತಿಯು ಈ ದ್ಯಾವಾಪೃಥಿವಿಗಳನ್ನು ಒಟ್ಟಿಗೆ ಎಂದರೆ ಏಕಕಾಲದಲ್ಲಿ ಸೃಷ್ಟಿಮಾಡಿದ್ದರೂ ಅವುಗಳು ಕಾರಣಾಂತರಗಳಿಂದ ಬೇರೆ ಬೇರೆಯಾಗಿ ಪ್ರತ್ಯೇಕವಾಗಿದ್ದು ಲೋಕಕ್ಕೆ ಅತ್ಯವಶ್ಯಕವಾದ ವೃಷ್ಟಿಯನ್ನು

ಉಂಟುಮಾಡದಿರುವಾಗ ಮನುಷ್ಯರ ಪ್ರಾರ್ಥನೆಯಂತೆ ದೇವತೆಗಳು ಈ ದ್ಯಾವಾಪೃಥಿವಿಗಳ ವಿವಾಹವನ್ನು ನೆರವೇರಿಸಿ ಅವರು ಒಂದಾಗುವಂತೆ ಮಾಡಿದರು ಎಂದು ಇನ್ನೊಂದರ್ಥವನ್ನು ಸಾಯಣರು ಹೇಳಿರುವರು. ಈ ದ್ಯಾವಾಪೃಥಿವಿಗಳು ಒಂದಾಗಿದ್ದರು ಎಂಬ ವಿಷಯದಲ್ಲಿ ಸಾಯಣರು—

**ದ್ಯಾವಾಪೃಥಿವೀ ಸಹಾಸ್ತಾಂ । ತೇ ವಿಯತೀ ಅಬ್ರೂತಾಂ ॥**

(ತೈ. ಬ್ರಾ ೧-೧-೩ ೨)

ಎಂಬ ತೈತ್ತಿರೀಯ ಬ್ರಾಹ್ಮಣವಾಕ್ಯವನ್ನು ಉದಾಹರಿಸಿರುವರು. ಪ್ರಜಾಪತಿಯು ದ್ಯಾವಾಪೃಥಿವಿಗಳನ್ನು ಸೃಷ್ಟಿಸಿದನೆಂಬ ವಿಷಯದಲ್ಲಿ—

**ಪ್ರಜಾಪತಿರಕಾಮಯತ ಪ್ರಜಾಯೇಯ ಭೂಯಾನ್ತ್ಸ್ಯಾಮಿತಿ ಸತಪೋಽತಪ್ಯತ ಸ ತಪಸ್ತಪ್ತ್ವೇಮಾಁಲ್ಲೋಕಾನಸೃಜತ ಪೃಥಿವೀಮಂತರಿಕ್ಷಂ ದಿವಂ।**

(ಐ ಬ್ರಾ. ೨೫-೭)

ಎಂಬ ಐತರೇಯಬ್ರಾಹ್ಮಣ ವಾಕ್ಯವಿರುವುದು. ಪ್ರಜಾಪತಿಯು (ಬ್ರಹ್ಮನು) ಸೃಷ್ಟಿಮಾಡಬೇಕೆಂದು ಅಪೇಕ್ಷೆಯುಳ್ಳವನಾಗಿ ತಪಸ್ಸನ್ನು ಮಾಡಿದನು. ಅನಂತರ ಆ ತಪೋಮಹಿಮೆಯಿಂದ ಈ ಲೋಕಗಳನ್ನು ಎಂದರೆ ಪೃಥಿವೀ, ಅಂತರಿಕ್ಷ, ಸ್ವರ್ಗ ಎಂಬ ಲೋಕಗಳನ್ನು ಸೃಷ್ಟಿಮಾಡಿದನು ಎಂದು ಈ ಮಂತ್ರದ ಅಭಿಪ್ರಾಯವು. ಈ ವಿಷಯವು ಋಗ್ವೇದ ಸಂಹಿತೆಯಲ್ಲಿಯೇ ಎಂದರೆ,

**ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್ ।**
**ದಿವಂ ಚ ಪೃಥಿವೀಂ ಚಾಂತರಿಕ್ಷಮಥೋ ಸ್ವಃ ॥**

(ಋ ಸಂ. ೧೦-೧೯೦-೩)

ಎಂಬ ಋಕ್ಕಿನಲ್ಲಿ ಬ್ರಹ್ಮನು ಎಂದರೆ ಸೃಷ್ಟಿಕರ್ತನು ಸೃಷ್ಟಿಮಾಡುವಾಗ ಸೂರ್ಯಚಂದ್ರರನ್ನು ಸ್ವರ್ಗ, ಭೂಮಿ, ಅಂತರಿಕ್ಷ ಎಂಬ ಲೋಕಗಳನ್ನು ಸೃಷ್ಟಿಸಿದನೆಂದು ಹೇಳಿದೆ. ಇದಲ್ಲದೇ,

**ಜನಿತಾ ದಿವೋ ಜನಿತಾ ಪೃಥಿವ್ಯಾಃ ಪಿಬಾ ಸೋಮಂ ಮದಾಯ ಕಂ ಶತಕ್ರತೋ ।**

(ಋ ಸಂ. ೮-೩೬-೪)

**ಯನ್ಮಾತರಂ ಚ ಪಿತರಂ ಚ ಸಾಕಮಜನಯಥಾಸ್ತನ್ವಃ ಸ್ವಾಯಾಃ ।**

(ಋ. ಸಂ. ೧೦-೫೪-೩)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನೇ ದ್ಯಾವಾಪೃಥಿವಿಗಳನ್ನು ಸೃಷ್ಟಿಮಾಡಿದನೆಂದು ಹೇಳಿದೆ. ಆದರೆ ಅನೇಕ ಸಂದರ್ಭಗಳಲ್ಲಿ ಇಂದ್ರನಿಗೂ ಪ್ರಜಾಪತಿಗೂ ತಾದಾತ್ಮ್ಯವನ್ನು ಹೇಳಿರುವುದರಿಂದ ಇದರಲ್ಲಿ ವಿರೋಧವೇನೂ ಇರುವುದಿಲ್ಲ. ಮತ್ತು—

**ಸೋಮಾಪೂಷಣಾ ಜನನಾ ರಯೀಣಾಂ ಜನನಾ ದಿವೋ ಜನನಾ ಪೃಥಿವ್ಯಾಃ ।**
**ಜಾತೌ ವಿಶ್ವಸ್ಯ ಭುವನಸ್ಯ ಗೋಪೌ ದೇವಾ ಅಕೃಣ್ವನ್ನಮೃತಸ್ಯ ನಾಭಿಂ ।**

(ಋ. ಸಂ. ೨-೪೦-೧)

ಎಂಬ ಋಕ್ಕಿನಲ್ಲಿ ಸೋಮ ಮತ್ತು ಪೂಷನ್ ಎಂಬ ದೇವತೆಗಳು ದ್ಯಾವಾಪೃಥಿವಿಗಳನ್ನು ಉತ್ಪತ್ತಿಮಾಡಿದರೆಂದು ಹೇಳಿದೆ

ಸ ವಾಂ ಯಜ್ಞೇಷು ಮಾನವೀ ಇಂದುರ್ಜನಿಷ್ಟ ರೋದಸೀ ।

(ಋ. ಸಂ. ೯-೯೮-೯)

ಪ್ರ ಹಿನ್ವಾನೋ ಜನಿತಾ ರೋದಸ್ಯೋ ರಥೋ ನ ವಾಜಂ ಸನಿಷ್ಯನ್ನಯಾಸೀತ್ ।

(ಋ. ಸಂ. ೯-೯೦-೧)

ಸೋಮಃ ಪವತೇ ಜನಿತಾ ಮತೀನಾಂ ಜನಿತಾ ದಿವೋ ಜನಿತಾ ಪೃಥಿವ್ಯಾಃ ।

(ಋ. ಸಂ. ೯-೯೬-೫)

ಇತ್ಯಾದಿ ಋಕ್ಕುಗಳಲ್ಲಿ ಸೋಮದೇವತೆಯೇ ದ್ಯಾವಾಪೃಥಿವಿಗಳನ್ನು ಸೃಷ್ಟಿಸಿದನೆಂದು ಹೇಳಿದೆ.

ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ ।

ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ತಥಾ ಲೋಕಾँ ಅಕಲ್ಪಯನ್ ॥

(ಋ. ಸಂ. ೧೦-೯೦-೧೪)

ಎಂಬ ಋಕ್ಕಿನಲ್ಲಿ ಪರಮಪುರುಷನ ನಾಭಿಪ್ರದೇಶದಿಂದ ಅಂತರಿಕ್ಷಲೋಕವೂ, ಶಿರಸ್ಸಿನಿಂದ ಸ್ವರ್ಗಲೋಕವೂ, ಪಾದಗಳಿಂದ ಭೂಲೋಕವೂ ಉತ್ಪತ್ತಿಯಾದವೆಂದು ಹೇಳಿದೆ. ಕೆಲವು ಋಷಿಗಳು ದ್ಯಾವ್ಯಾಪೃಥಿವಿಗಳ ವಿಷಯದಲ್ಲಿ ಆಶ್ಚರ್ಯಚಕಿತರಾಗಿ, ಇವನ್ನು ನಿರ್ಮಿಸಿದವರಾರು, ಹೇಗೆ ನಿರ್ಮಿಸಿದರು, ಯಾವ ವಸ್ತುವಿನಿಂದ ನಿರ್ಮಿಸಿದರು ಎಂದು ಸಂದೇಹವನ್ನು ಸೂಚಿಸಿರುತ್ತಾರೆ.

ಕಿಂ ಸ್ವಿದ್ವನಂ ಕ ಉ ಸ ವೃಕ್ಷ ಆಸ ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ ।

(ಋ. ಸಂ. ೧೦-೩೧-೭)

ಎಂಬ ಋಕ್ಕಿನಲ್ಲಿ ಕವಷ ಐಲೂಷನೆಂಬ ಋಷಿಯೂ,

ಕಿಂ ಸ್ವಿದ್ವನಂ ಕ ಉ ಸ ವೃಕ್ಷ ಆಸ ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ ।

(ಋ. ಸಂ. ೧೦-೮೧-೪)

ಎಂಬ ಋಕ್ಕಿನಲ್ಲಿ ವಿಶ್ವಕರ್ಮಾ ಭೌವನನೆಂಬ ಋಷಿಯೂ-ಯಾವ ವನದ, ಯಾವ ವೃಕ್ಷದಿಂದ (ಮರದಿಂದ) ದ್ಯಾವಾ ಪೃಥಿವಿಗಳನ್ನು ನಿರ್ಮಿಸಿದರು ? ಎಂದು ಸಂಶಯಾಶ್ಚರ್ಯಗಳನ್ನು ಸೂಚಿಸುತ್ತಾರೆ. ಈ ಪ್ರಶ್ನೆಗೆ ಉತ್ತರವಾಗಿ ಅದೇ ಸೂಕ್ತದ ೨ ಮತ್ತು ೩ ಋಕ್ಕುಗಳಲ್ಲಿ—

ಕಿಂ ಸ್ವಿದಾಸೀದಧಿಷ್ಠಾನಮಾರಂಭಣಂ ಕತಮತ್ಸ್ವಿತ್ ಕಿಮಾಸೀತ್ ।
ಯತೋ ಭೂಮಿಂ ಜನಯನ್ ವಿಶ್ವಕರ್ಮಾ ವಿದ್ಯಾಮೌರ್ಣೋನ್ಮಹಿನಾ ವಿಶ್ವಚಕ್ಷಾಃ ।
ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ ವಿಶ್ವತೋ ಬಾಹುರುತ ವಿಶ್ವತಸ್ಪಾತ್ ।
ಸಂ ಬಾಹುಭ್ಯಾಂ ಧಮತಿ ಸಂ ಪತತ್ರೈರ್ದ್ಯಾವಾಭೂಮೀ ಜನಯನ್ ದೇವ ಏಕಃ ॥

(ಋ. ಸಂ. ೧೦-೮೧-೨, ೩)

ಸೃಷ್ಟಿಗೆ ಪೂರ್ವದಲ್ಲಿ ಯಾವವಸ್ತುವಿದ್ದಿತು ? ಆ ಪ್ರಾರಂಭಕಾಲದಲ್ಲಿದ್ದ ವಸ್ತುವಿನ ಸ್ವರೂಪವೆಂಥಾದ್ದು ? ವಿಶ್ವಕರ್ಮ ನಾಮಕವಾದ ಪರಬ್ರಹ್ಮನು ಯಾವ ವಸ್ತುವಿನಿಂದ ದ್ಯಾವಾ ಪೃಥಿವಿಗಳನ್ನು ತನ್ನ ಮಹಿಮೆಯಿಂದ ಸೃಷ್ಟಿಸಿದನು ?

ಎಂದು ತನಗೆ ತಾನೇ ಪ್ರಶ್ನೆಮಾಡುತ್ತಾ ಅದಕ್ಕುತ್ತರವನ್ನೂ—ಎಲ್ಲೆಲ್ಲಿಯೂ ಕಣ್ಣುಗಳುಳ್ಳ ಎಂದರೆ ಸಮಸ್ತವನ್ನೂ ಎಲ್ಲಾ ಕಾಲದಲ್ಲಿಯೂ ಎಲ್ಲೆಡೆಗಳನ್ನೂ ನೋಡುವ ಸಾಮರ್ಥ್ಯವುಳ್ಳ, ಸಮಸ್ತ ದಿಕ್ಕುಗಳಲ್ಲಿಯೂ ಮುಖ, ಬಾಹು, ಪಾದಗಳು ಇವುಗಳನ್ನುಳ್ಳ ಎಂದರೆ ಸರ್ವಶಕ್ತನಾದ ಆ ಒಬ್ಬನೇ ಆದ ದೇವನು (ವಿಶ್ವಕರ್ಮನಾಮಕನಾದ ಪರಮಾತ್ಮನು) ಈ ದ್ಯಾವಾಪೃಥಿವಿಗಳನ್ನು ಸೃಷ್ಟಿಸಿದನು ಎಂದು ಉತ್ತರವನ್ನು ಋಷಿಯು ಅಲ್ಲಿಯೇ ಹೇಳಿರುವನು-

ದ್ಯಾವಾಪೃಥಿವಿಗಳ ವಿವಾಹ ವಿಚಾರದಲ್ಲಿ ಐತರೇಯಬ್ರಾಹ್ಮಣದಲ್ಲಿ ಈ ರೀತಿ ಹೇಳಿರುವುದು—

**ಇಮೇ ವೈ ಲೋಕೌ ಸಹಾಸ್ತಾಂ ತೌ ವ್ಯೇತಾಂ ನಾವರ್ಷನ್ನ ಸಮತಪತ್ತೇ ಪಂಚಜನಾ ನ ಸಮಜಾನತ ತೌ ದೇವಾಃ ಸಮನಯಂಸ್ತೌ ಸಂಯಂತಾವೇತಂ ದೇವವಿವಾಹಂ ವ್ಯವಹೇತಾಂ ॥**

(ಐ. ಬ್ರಾ ೧೯-೫)

ಎಂದರೆ ಪೂರ್ವದಲ್ಲಿ ಈ ಲೋಕಗಳು ಎಂದರೆ ದ್ಯಾವಾಪೃಥಿವಿಗಳು ಒಟ್ಟಿಗೆ ಒಂದೇ ಕಡೆಯಲ್ಲಿದ್ದುವು ಕಾರಣಾಂತರದಿಂದ ಅವು ಬೇರೆಬೇರೆಯಾದವು. ಆಗ ಮಳೆ ಬರುವುದು ನಿಂತುಹೋಯಿತು. ಬಿಸಿಲೂ ಇಲ್ಲವಾಯಿತು ಆಗ ಪಂಚಜನರು ಎಂದರೆ ಬ್ರಾಹ್ಮಣಾದಿವರ್ಣದವರೂ ಸಮಸ್ತಪ್ರಾಣಿಗಳೂ ತಲ್ಲಣಿಸಿಹೋದರು. ಅವರಿಗೆ ಸುಖವಿಲ್ಲವಾಯಿತು. ಆಗ ದೇವತೆಗಳು ಲೋಕಕಲ್ಯಾಣಕ್ಕಾಗಿ ಈ ದ್ಯಾವಾಪೃಥಿವಿಗಳಿಗೆ ದೇವನಿಯಮದಂತೆ ವಿವಾಹವನ್ನು ಮಾಡಿ ಅವರನ್ನು ಒಂದುಗೂಡಿಸಿ ಲೋಕಕ್ಕೆ ಸುಖವನ್ನುಂಟು ಮಾಡಿದರು. ಎಂದು ಹೇಳಿದೆ. ಇದನ್ನೇ ಸಾಯಣರು ತಮ್ಮ ಭಾಷ್ಯದಲ್ಲಿ ಹೇಳಿರುವರು.

**ಯುವತೀ**—ಯುವಕರು, ತರುಣರು. ಸಾಧಾರಣವಾಗಿ ಋಷಿಗಳು ಎಲ್ಲಾ ದೇವತೆಗಳನ್ನೂ ಯುವಕರೆಂದು ಎಂದರೆ ಮುಪ್ಪಿನ ವಿಕಾರಗಳಿಗೆ ಒಳಗಾಗದೆ ಸದಾ ಶಕ್ತಿಯುಕ್ತರಾಗಿಯೂ, ಸೌಂದರ್ಯವುಳ್ಳವರಾಗಿಯೂ ಇರುವರೆಂದು ವರ್ಣಿಸುವುದು ರೂಢಿಯಾಗಿದೆ. ಅದರಲ್ಲಿಯೂ ಮುಖ್ಯವಾಗಿ ಅಗ್ನಿ, ಇಂದ್ರ, ಉಷಸ್ಸು, ಅಶ್ವಿನೀದೇವತೆಗಳು, ದ್ಯಾವಾಪೃಥಿವೀ ಮೊದಲಾದ ದೇವತೆಗಳ ವಿಷಯದಲ್ಲಿಯೇ ಈ ವಿಶೇಷಣವು ಹೆಚ್ಚಾಗಿ ಉಪಯೋಗಿಸಲ್ಪಟ್ಟಿದೆ.

**ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ ।**

(ಋ. ಸಂ. ೧-೧೨-೬)

ಎಂಬ ಋಕ್ಕಿನಲ್ಲಿ ಈ ಶಬ್ದವು ಅಗ್ನಿಪರವಾಗಿಯೂ,

**ಪುರಾಂ ಭಿಂದುರ್ಯುವಾ ಕವಿರಮಿತೌಜಾ ಅಜಾಯತ ।**

ಎಂಬಲ್ಲಿ ಇಂದ್ರನ ಪರವಾಗಿಯೂ,

(ಋ. ಸಂ. ೧-೧೧-೪)

**ಯುವಂ ತುಗ್ರಾಯ ಪೂರ್ವ್ಯೇಭಿರೇವೈಃ ಪುನರ್ಮನ್ಯಾವಭವತಂ ಯುವಾನಾ ।**

(ಋ. ಸಂ. ೧-೧೧೭-೧೪)

ಎಂಬಲ್ಲಿ ಅಶ್ವಿನೀದೇವತೆಗಳ ಪರವಾಗಿಯೂ,

**ಆ ನೋ ಜನೇ ಶ್ರವಯತಂ ಯುವಾನಾ ಶ್ರುತಂ ಮೇ ಮಿತ್ರಾವರುಣಾ ಹವೇಮಾ ।**

(ಋ. ಸಂ. ೭-೬೨-೫)

ಇತ್ಯಾದಿ ಋಕ್ಕುಗಳಲ್ಲಿ ಮಿತ್ರಾವರುಣರ ಪರವಾಗಿಯೂ,

**ಏಷಾ ದಿವೋ ದುಹಿತಾ ಪ್ರತ್ಯದರ್ಶಿ ವ್ಯುಚ್ಛಂತೀ ಯುವತಿಃ ಶುಕ್ರವಾಸಾಃ ।**

(ಋ. ಸಂ. ೧-೧೧೩-೭)

ಇತ್ಯಾದಿ ಋಕ್ಕುಗಳಲ್ಲಿ ಉಷೋದೇವತೆಯ ಪರವಾಗಿಯೂ,

**ಉತ ಸ್ವಸಾರಾ ಯುವತೀ ಭವಂತೀ ಆದು ಬ್ರುವಾತೇ ಮಿಥುನಾನಿ ನಾಮ ।**

(ಋ. ಸಂ. ೩-೫೪-೭)

ಇತ್ಯಾದಿಋಕ್ಕುಗಳಲ್ಲಿ ದ್ಯಾವಾಪೃಥಿವಿಗಳ ಪರವಾಗಿಯೂ ಈ ಶಬ್ದದ ಪ್ರಯೋಗವಿರುವುದು.

**ಸಮಂತೇ—ಸಮಾನಾಂತಿಕೇ ಸಮಾನಪರ್ಯಂತೇ ವಾ ।** ದ್ಯಾವಾಪೃಥಿವಿಗಳೆಂಬ ಎರಡು ಲೋಕಗಳು ಒಂದೇ ಕೊನೆಯುಳ್ಳದ್ದು ಅಥವಾ ಸಮಾನವ್ಯಾಪ್ತಿಯುಳ್ಳದ್ದು ಎಂದರೆ ಒಂದು ಲೋಕಕ್ಕಿರುವ ವಿಸ್ತಾರದಷ್ಟೇ ಇನ್ನೊಂದು ಲೋಕವೂ ಇರುವುದು. ಎರಡರ ವಿಸ್ತಾರವೂ ಒಂದೇ ಆಗಿರುವುದೆಂದಭಿಪ್ರಾಯವು. ತೈತ್ತಿರೀಯ ಸಂಹಿತೆಯಲ್ಲಿ (ಯಜುರ್ವೇದದಲ್ಲಿ)—

**ಅಂತರ್ಹಿತೋ ಹಿ ದೇವಲೋಕೋ ಮನುಷ್ಯಲೋಕಾತ್ ।**

(ತೈ. ಸಂ. ೬-೧-೧.೧)

ಎಂದರೆ ಮನುಷ್ಯಲೋಕವೂ (ಭೂಮಿಯು) ದೇವಲೋಕವೂ (ಸ್ವರ್ಗ) ಒಂದರಲ್ಲೊಂದು ಓತಪ್ರೋತವಾಗಿರುವುದೆಂದು ಹೇಳಿದೆ. ಎಂದರೆ ಭೂಮಿಯೂ, ಸ್ವರ್ಗವೂ (ಅಂತರಿಕ್ಷವೂ) ಸಮಾನವಿಸ್ತೀರ್ಣವುಳ್ಳವುಗಳೆಂದಭಿಪ್ರಾಯವು.

**ಸ್ವಸಾರಾ—ಪರಸ್ಪರಂ ಸ್ವಸೃಭೂತೇ ।** ಇಲ್ಲಿ ಸ್ವಸೃಶಬ್ದಪ್ರಯೋಗವು ಅಕ್ಕತಂಗಿಯರೆಂಬ ಅರ್ಥವನ್ನು ಸೂಚಿಸುವುದಿಲ್ಲ. ಆದರೆ ಅಕ್ಕತಂಗಿಯರಂತೆ ಪರಸ್ಪರ ಪ್ರೀತಿಯುಕ್ತರೂ, ಸಮಾನಸ್ಥಾನ (ಪದವಿ) ವುಳ್ಳವರೂ ಎಂದಭಿಪ್ರಾಯವು ಪ್ರಕೃತವಾದ ಋಕ್ಕಿನಲ್ಲಿರುವ **ಯುವತೀ, ಸಮಂತೇ, ಸ್ವಸಾರಾ,** ಇವು ೭ ನೇ ಋಕ್ಕಿನಲ್ಲಿರುವ **ದೂರೇಅಂತೇ** ಮೊದಲಾದ ದ್ಯಾವಾಪೃಥಿವಿಗಳ ವಿಶೇಷಣಪದಗಳ ಅರ್ಥವನ್ನೇ ಸೂಚಿಸುವ ಶಬ್ದಗಳು—

**ಸಮಾನ್ಯಾ ವಿಯುತೇ ದೂರೇ ಅಂತೇ ಧ್ರುವೇ ಪದೇ ತಸ್ಥತುರ್ಜಾಗರೂಕೇ ।**
**ಉತ ಸ್ವಸಾರಾ ಯುವತೀ ಭವಂತೀ ಆದು ಬ್ರುವಾತೇ ಮಿಥುನಾನಿ ನಾಮ ॥**

(ಋ. ಸಂ. ೩-೫೪-೭)

ಮೊದಲಾದ ಋಕ್ಕುಗಳಲ್ಲಿಯೂ ಕಂಡುಬರುವುದು.

**ಜಾಮೀ—**ಪರಸ್ಪರ ಬಂಧುತ್ವವುಳ್ಳವರು. ಪ್ರಜಾಪತಿಯು ದ್ಯಾವಾಪೃಥಿವಿಗಳನ್ನು ಒಂದೇಕಾಲದಲ್ಲಿ ಒಬ್ಬನೇ ಸೃಷ್ಟಿಸಿರುವುದರಿಂದ ಪರಸ್ಪರ ಬಂಧುತ್ವವಿರುವುದೆಂದು ವಿವರಿಸಲಾಗಿದೆ. ಜಾಮಿಶಬ್ದವು ಉದಕನಾಮಗಳಲ್ಲಿ ಪಠಿತವಾಗಿದೆ (ನಿ. ೨-೨೪) ಆದರೆ ಇಲ್ಲಿ ಭಾಷ್ಯಕಾರರು ಬಂಧುತ್ವವೆಂದು ಅರ್ಥಮಾಡಿರುವರು.- ಯಾಸ್ಕರು ತಮ್ಮ ನಿರುಕ್ತದಲ್ಲಿ—

**ನ ಜಾಮಯೋ ಭಗಿನ್ಯೈ । ಜಾಮಿರನ್ಯೇಽಸ್ಯಾಂ ಜನಯಂತಿ ಜಾಮಪತ್ಯಂ । ಜಮತೇರ್ವಾ ಸ್ಯಾದ್ಗತಿಕರ್ಮಣೋ ನಿರ್ಗಮನಪ್ರಾಯಾ ಭವತಿ ॥**

(ನಿ. ೩-೭)

ಎಂದರೆ ಜಾಮಿಶಬ್ದಕ್ಕೆ ಭಗಿನೀ (ಸಹೋದರೀ) ಎಂದರ್ಥವು ಏಕೆಂದರೆ ಈ ಸ್ತ್ರೀಯಲ್ಲಿ ಇತರರು ಎಂದರೆ ಭರ್ತೃವು ಪುತ್ರರನ್ನು ಉತ್ಪಾದನೆ ಮಾಡುವುದರಿಂದ ಜಾಮಿ ಎಂದು ಹೆಸರು. ಅಥವಾ ಜಾಮಿಶಬ್ದಕ್ಕೆ ಗಮನಾರ್ಥವಿರುವುದರಿಂದ, ಎಂದರೆ ಈ ಸ್ತ್ರೀಯು ವಿವಾಹಾನಂತರ ತಾನು ಹುಟ್ಟಿದ ತಂದೆಯ ಮನೆಯನ್ನು ಬಿಟ್ಟು ಭರ್ತೃವಿನ (ಗಂಡನ)

ಮನೆಗೆ ಹೋಗುವವಳಾದ್ದರಿಂದ ಸಹೋದರಿಗೆ ಜಾಮಿಯೆಂದು ಹೆಸರು ಎಂದು ನಿರ್ವಚನವನ್ನು ಹೇಳಿರುವರು. ಈ ಋಕ್ಕಿನಲ್ಲಿ ಬಂಧುತ್ವವೆಂದು ಸಾಮಾನ್ಯಾರ್ಥವನ್ನು ಹೇಳಿರುವುದು ಸಮಂಜಸವಾಗಿದೆ.

ಪಿತ್ರೋಃ ಉಪಸ್ಥೇ—ಪಿತ್ರೋಃ ಸರ್ವಸ್ಯ ಪಿತೃಸ್ಥಾನಿಯಯೋಃ ಪಾಲಕಯೋಸ್ತಯೋರುಪಸ್ಥ ಉತ್ಸಂಗೇ ಸ್ಥಿತಂ । ಲೋಕದಲ್ಲಿರುವ ಸಮಸ್ತ ಪ್ರಾಣಿಗಳಿಗೂ ತಂದೆ ತಾಯಿಗಳಂತೆ ಪಾಲಕರಾಗಿರುವ ಈ ದ್ಯಾವಾ ಪೃಥಿವಿಗಳ ಅಂಕದಲ್ಲಿರುವ ಎಂದು ಅರ್ಥಮಾಡಿರುವರು. ಈ ದ್ಯಾವಾಪೃಥಿವಿಗಳು ಲೋಕಕ್ಕೆ ತಂದೆತಾಯಿಗಳಾಗಿರು ವರೆಂಬ ವಿಷಯದಲ್ಲಿ-

ಉರುವ್ಯಚಸಾ ಮಹಿನೀ ಅಸಶ್ಚತಾ ಪಿತಾ ಮಾತಾ ಚ ಭುವನಾನಿ ರಕ್ಷತಃ ।

(ಋ. ಸಂ. ೧-೧೬೦-೨)

ತನ್ನೋ ವಾತೋ ಮಯೋಭು ವಾತು ಭೇಷಜಂ ತನ್ಮಾತಾ ಪೃಥಿವೀ ತತ್ಪಿತಾ ದ್ಯೌಃ ।

(ಋ. ಸಂ. ೧-೮೯-೪)

ಇದಂ ದ್ಯಾವಾಪೃಥಿವೀ ಸತ್ಯಮಸ್ತು ಪಿತರ್ಮಾತರ್ಯದಿಹೋಪಬ್ರುವೇ ವಾಂ ।

(ಋ. ಸಂ. ೧-೧೮೫-೧೧)

ಆ ಸುಷ್ಟುತೀ ನಮಸಾ ವರ್ತಯಧ್ಯೈ ದ್ಯಾವಾ ವಾಜಾಯ ಪೃಥಿವೀ ಅಮೃಧ್ರೇ ।
ಪಿತಾ ಮಾತಾ ಮಧುವಚಾಃ ಸುಹಸ್ತಾ ಭರೇಭರೇ ನೋ ಯಶಸಾವವಿಷ್ಟಾಂ ॥

(ಋ. ಸಂ. ೫-೪೩-೨)

ಇತ್ಯಾದ್ಯನೇಕ ಋಕ್ಕುಗಳಲ್ಲಿ ಪೃಥಿವಿಯು ಲೋಕಕ್ಕೆಲ್ಲಾ ತಾಯಿಯೆಂದೂ, ಸ್ವರ್ಗವು (ಅಂತರಿಕ್ಷವು) ತಂದೆಯೆಂದೂ ವಿವರಿಸಿರುವುದು. ತಂದೆತಾಯಿಗಳು ತಮ್ಮ ಪುತ್ರರನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳುವಂತೆ ಲೋಕಕ್ಕೆ ತಂದೆ-ತಾಯಿಗಳಾದ ದ್ಯಾವಾಪೃಥಿವಿಗಳು ಪುತ್ರಸ್ಥಾನೀಯವಾದ ವೃಷ್ಟಿಗಾಗಿ ಶೇಖರಿಸಲ್ಪಟ್ಟಿರುವ ಮೇಘಗಳ ಉದಕವನ್ನು ತಮ್ಮ ತೊಡೆಯ ಮೇಲೆ ಎಂದರೆ ಅಂತರಿಕ್ಷದಲ್ಲಿ ಲೋಕಪೋಷಣೆಗಾಗಿ ಧರಿಸಿರುವರೆಂದು ಋಷಿಯು ವರ್ಣಿಸಿರುವನು.

ಅಭಿಜಿಘ್ರಂತೀ—ಅಭಿಘ್ರಾಣಂ ಕುರ್ವಂತ್ಯೌ, ಸ್ಪೃಶಂತ್ಯೌ । ಮೂಸಿನೋಡುವವರು ಎಂದರೆ ಸ್ಪರ್ಶ ಮಾಡುವವರು ಎಂದು ಸಾಯಣರ ವಿವರಣೆಯು. ಆದರೆ ಇಲ್ಲಿ ಈ ಅರ್ಥ ಹೊಂದುವುದಿಲ್ಲ ಮತ್ತು ಈ ಶಬ್ದವನ್ನು ಋಷಿಯು ಏತಕ್ಕಾಗಿ ಉಪಯೋಗಿಸಿರುವನು, ಅವನ ಆಶಯವೇನು ಎಂಬುದು ಸ್ಪಷ್ಟವಾಗಿ ತಿಳಿಯುವಂತಿಲ್ಲ. ಈ ಶಬ್ದಪ್ರಯೋಗವು ಋಗ್ವೇದದಲ್ಲಿ ಇನ್ನೆಲ್ಲಿಯೂ ಇಲ್ಲವಾದ್ದರಿಂದ ಈ ಶಬ್ದಾರ್ಥವಿಷಯದಲ್ಲಿ ಇತರ ಋಷಿಗಳ ಅಭಿಪ್ರಾಯವೇನೆಂಬುದನ್ನು ತಿಳಿಯಲು ಸಾಧ್ಯವಿಲ್ಲ. ಪ್ರಾಯಶಃ ಲೋಕದಲ್ಲಿ ಜನರು ತಮಗೆ ಪ್ರೀತಿಪಾತ್ರವಾದ ವಸ್ತುವನ್ನು ಮೂಸಿನೋಡಿ ಅದನ್ನು ತಮ್ಮಲ್ಲಿ ಭದ್ರವಾಗಿಟ್ಟುಕೊಳ್ಳುವುದು ಅಲ್ಲಲ್ಲಿ ಕಂಡುಬರುವುದರಿಂದ ಈ ದ್ಯಾವಾ-ಪೃಥಿವಿಗಳು ಮೇಘಸಂಘಾತದಲ್ಲಿರುವ ಉದಕವನ್ನು ಜನಗಳ ಉಪಯೋಗಕ್ಕಾಗಿ ತಮ್ಮಲ್ಲಿ ಪ್ರೀತಿಯಿಂದ ಧರಿಸಿರು ರೆಂದು ಋಷಿಯ ಆಶಯವಿರಬಹುದು.

ಭುವನಸ್ಯ ನಾಭಿಂ—ಭುವನಶಬ್ದವು ಉದಕನಾಮಗಳಲ್ಲಿ (ನಿ ೨-೨೪) ಪಠಿತವಾಗಿದೆ. ಮತ್ತು,

**ನೀಚೀನಬಾರಂ ವರುಣಃ ಕವಂಧಂ ಪ್ರ ಸಸರ್ಜ ರೋದಸೀ ಅಂತರಿಕ್ಷಂ।**
**ತೇನ ವಿಶ್ವಸ್ಯ ಭುವನಸ್ಯ ರಾಜಾ ಯವಂ ನ ವೃಷ್ಟಿರ್ವ್ಯುನತ್ತಿ ಭೂಮ ॥**

(ಋ ಸಂ. ೫–೮೫–೩)

ಎಂಬ ಋಕ್ಕಿನಲ್ಲಿರುವ ಭುವನಸ್ಯ ಎಂಬ ಶಬ್ದಕ್ಕೆ ಯಾಸ್ಕರು-ಸರ್ವಸ್ಯ ಭುವನಸ್ಯ (ಭೂತಜಾತಕಸ್ಯೋದಕಸ್ಯ ವಾ) ಎಂದು ನಿರ್ವಚನವನ್ನು ಹೇಳಿರುವರು. (ನಿ. ೧೦–೪) ಭುವನವೆಂದರೆ ಲೋಕ ಅಥವಾ ಲೋಕದ ಪ್ರಾಣಿಗಳು ಎಂದರ್ಥ. ಆದರೆ ಇಲ್ಲಿ ಭಾಷ್ಯಕಾರರು ಉದಕವೆಂಬ ಅರ್ಥವನ್ನೇ ಪರಿಗ್ರಹಿಸಿರುವರು. ನಾಭಿ ಶಬ್ದಕ್ಕೆ ಯಾಸ್ಕರು—

**ಸಂಬಂಧನಾನ್ನಾಭಿಃ ಸನ್ನಹನಾನ್ನಾಭ್ಯಾ ಸನ್ನದ್ಧಾ ಗರ್ಭಾ ಜಾಯಂತೆ ಇತ್ಯಾಹುರೇತಸ್ಮಾದೇವ ಜ್ಞಾತೀನ್ ಸನಾಭಯ ಇತ್ಯಾಚಕ್ಷತೇ ।**

(ನಿ. ೪-೨೧)

ಎಂದು ನಿರ್ವಚನವನ್ನು ಹೇಳಿರುವರು. ಎಂದರೆ ನಾಭಿಶಬ್ದಕ್ಕೆ ಒಟ್ಟುಗೂಡಿಸುವ ಮಧ್ಯಪ್ರದೇಶವೆಂದು ಅರ್ಥವನ್ನು ಹೇಳಬಹುದು. ಸಾಯಣರು,

**ಪೃಚ್ಛಾಮಿ ತ್ವಾ ಪರಮಂತಂ ಪೃಥಿವ್ಯಾಃ ಪೃಚ್ಛಾಮಿ ಯತ್ರ ಭುವನಸ್ಯ ನಾಭಿಃ ।**

(ಋ. ಸಂ. ೧-೧೬೪-೩೪)

ಎಂಬ ಋಕ್ಕನ್ನು ವಿವರಿಸುವಾಗ **ಭುವನಸ್ಯ ಭೂತಜಾತಸ್ಯ ನಾಭಿಃ ಸಂನಾಹೋ ಬಂಧನಂ । ಯತ್ರ ಸರ್ವಂ ಸಂನದ್ಧಂ ಭವತಿ ತಮಿತ್ಯರ್ಥಃ** ಎಂದರೆ ಸಮಸ್ತವೂ ಎಲ್ಲಿ ಒಟ್ಟುಗೂಡಿ ಸೇರುವುದೋ ಆದಕ್ಕೆ ನಾಭಿಯೆಂದು ಹೆಸರು ಎಂದು ವಿವರಿಸಿರುವರು. ಪ್ರಕೃತ ಋಕ್ಕಿನಲ್ಲಿ ಮೇಘಗಳ ಜಲವು ವೃಷ್ಟ್ಯರ್ಥವಾಗಿ ಒಂದುಕಡೆ ಒಟ್ಟುಗೂಡಿ ಸೇರಿರುವುದನ್ನು ಎಂದರೆ ಒಟ್ಟುಗೂಡಿರುವ ಉದಕವನ್ನು ಎಂದಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ಸಂಗಚ್ಛಮಾನೇ**—ಗಮ್ಲೃ ಗತೌ. ಧಾತು. ಸಮ್ ಉಪಸರ್ಗಸಂಬಂಧವಿರುವುದರಿಂದ **ಸಮೋಗಮ್ಯೃಚ್ಛಿಭ್ಯಾಮ್** (ಪಾ. ಸೂ. ೧–೩–೨೯) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಟಿಗೆ ಶಾನಚಾದೇಶ. **ತಾಸ್ಯನುದಾತ್ತೇತ್**—ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್.

**ಯುವತೀ**—**ಯೂನಸ್ತಿಃ** (ಪಾ. ಸೂ. ೪-೧-೭೭) ಎಂಬುದರಿಂದ ಯುವನ್ ಶಬ್ದಕ್ಕೆ ಸ್ತ್ರೀತ್ವದಲ್ಲಿ ತಿಪ್ರತ್ಯಯ. **ಅನ್** (ಪಾ ಸೂ. ೬-೪-೧೬೭) ಎಂಬುದರಿಂದ ಪ್ರಕೃತಿಭಾವ ಬರುವುದರಿಂದ ಟಿಲೋಪ ಬರುವುದಿಲ್ಲ. **ನಲೋಪಃ ಪ್ರಾತಿಪದಿಕಾಂತಸ್ಯ** (ಪಾ ಸೂ ೮-೨-೭) ಎಂಬುದರಿಂದ ನಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿವಚನಪರವಾದಾಗ **ಸುಪಾಂ ಸುಲುಕ್** ಸೂತ್ರದಿಂದ ಪೂರ್ವಸವರ್ಣ ದೀರ್ಘ.

**ಸಮಂತೇ**—ಸಮಾನಂ ಅಂತಿಕಂ ಯಯೋಸ್ತೇ ಸಮಂತೇ. ಅಂತಿಕಶಬ್ದದ ಕಕಾರಕ್ಕೆ ಲೋಪ. **ಸಮಾನಸ್ಯ ಛಂದಸ್ಯ**—(ಪಾ. ಸೂ ೬-೩-೮೪) ಎಂಬುದರಿಂದ ಸಮಾನಶಬ್ದಕ್ಕೆ ಸಭಾವ. **ಬಹುವ್ರೀಹೌಪ್ರಕೃತ್ಯಾ**—(ಪಾ. ಸೂ ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

ಸ್ವಸಾರಾ—ಸುಪಾಂ ಸುಲುಕ್—ಸೂತ್ರದಿಂದ ದ್ವಿವಚನ ಔಕಾರ. ವಿಭಕ್ತಿಗೆ ಆಕಾರಾದೇಶ.

ಅಭಿಜಿಘ್ರಂತೀ—ಘ್ರಾ ಗಂಧೋಪಾದಾನೇ. ಧಾತು. ಲಟಿಗೆ ಶತ್ರಾದೇಶ. ಪಾಘ್ರಾಧ್ಮಾ—(ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಶತ್ರಾದೇಶ. ಸ್ತ್ರೀತ್ವದಲ್ಲಿ ಉಗಿತಶ್ಚ ಎಂಬುದರಿಂದ ಙೀಪ್. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಸುಪಾಂ ಸುಲುಕ್ ಸೂತ್ರದಿಂದ ದ್ವಿವಚನಪರವಾದಾಗ ಪೂರ್ವಸವರ್ಣದೀರ್ಘ. ॥ ೫ ॥

———— o ————

ಸಂಹಿತಾಪಾಠಃ

ಉರ್ವೀ ಸದ್ಮನೀ ಬೃಹತೀ ಋತೇನ ಹುವೇ ದೇವಾನಾಮವಸಾ ಜನಿತ್ರೀ ।
ದಧಾತೇ ಯೇ ಅಮೃತಂ ಸುಪ್ರತೀಕೇ ದ್ಯಾವಾ ರಕ್ಷತಂ ಪೃಥಿವೀ ನೋ
ಅಭ್ವಾತ್ ॥ ೬ ॥

ಪದಪಾಠಃ

ಉರ್ವೀ ಇತಿ । ಸದ್ಮನೀ ಇತಿ । ಬೃಹತೀ ಇತಿ । ಋತೇನ । ಹುವೇ । ದೇವಾನಾಂ । ಅವಸಾ । ಜನಿತ್ರೀ ಇತಿ ।

ದಧಾತೇ ಇತಿ । ಯೇ ಇತಿ । ಅಮೃತಂ । ಸುಪ್ರತೀಕೇ ಇತಿ ಸುಽಪ್ರತೀಕೇ । ದ್ಯಾವಾ । ರಕ್ಷತಂ । ಪೃಥಿವೀ ಇತಿ । ನಃ । ಅಭ್ವಾತ್ ॥ ೬ ॥

ಸಾಯಣಭಾಷ್ಯಂ

ಉರ್ವೀ ವಿಸ್ತೀರ್ಣೇ ಸದ್ಮನೀ ಸದನಾಧಾರಭೂತೇ ಬೃಹತೀ ಮಹತ್ಯೌ ಮಹಾನುಭಾವೇ ದೇವಾನಾಂ । ಉಪಲಕ್ಷಣಮೇತತ್ । ದೇವಮನುಷ್ಯಾದೀನಾಮವಸಾ ಪ್ರೀತ್ಯಾ ನಿಮಿತ್ತೇನ ಜನಿತ್ರೀ ವೃಷ್ಟಿಸಸ್ಯಯೋರ್ಜನಿತ್ರ್ಯೌ । ವೃಷ್ಟ್ಯಾದೇರ್ದೇವಾನಾಮವಸಾ ತರ್ಪಣೇನ ನಿಮಿತ್ತೇನ ಋತೇನ ಯಜ್ಞೇನ ಚ ನಿಮಿತ್ತಭೂತೇನ ಹುವೇ । ಆಹ್ವಯಾಮಿ । ದೇವಾನಾಂ ಹವಿರರ್ಥಮಸ್ಮದ್ಯಜ್ಞಾಯೇತ್ಯರ್ಥಃ । ಯೇ ಸುಪ್ರತೀಕೇ ಶೋಭನರೂಪೇ ಅಮೃತಮುದಕಂ ದಧಾತೇ ಧಾರಯತಃ ತೇ ಯುವಾಮಾಹ್ವಯಾಮಿ । ಶಿಷ್ಟಂ ಸ್ಪಷ್ಟಂ ॥

**। ಪ್ರತಿಪದಾರ್ಥ ।**

**ಉರ್ವೀ**—ಅತ್ಯಂತ ವಿಸ್ತೃತರೂ । **ಸದ್ಮನೀ**—ಸಮಸ್ತಕ್ಕೂ ಆಧಾರಭೂತರೂ । **ಬೃಹತೀ**—ಮಹಾನುಭಾವರೂ । **ಜನಿತ್ರೀ**—(ವೃಷ್ಟಿ ಮತ್ತು ಸಸ್ಯಾದಿಗಳಿಗೆ) ಜನನಿಯರೂ । (ಮತ್ತು) **ಯೇ**—ಯಾರು । **ಸುಪ್ರತೀಕೇ**—ಸುಂದರವಾದ ರೂಪವುಳ್ಳವರಾಗಿ । **ಅಮೃತಂ**—ಅಮೃತಕ್ಕೆ ಸದೃಶವಾದ ವೃಷ್ಟ್ಯುದಕವನ್ನು । **ದಧಾತೇ**—ಧರಿಸಿದ್ದಾರೆಯೋ ಅಂತಹವರೂ ಆದ ದ್ಯಾವಾಪೃಥಿವಿಗಳನ್ನು । **ದೇವಾನಾಂ**—ದೇವತೆಗಳ (ಮತ್ತು ಮಾನವರ) । **ಅವಸಾ**—ತೃಪ್ತಿಕಾರಣವಾದ । **ಋತೇನ**—ಯಜ್ಞನಿಮಿತ್ತವಾಗಿ । **ಹುವೇ**—ಸ್ತುತಿಪೂರ್ವಕವಾಗಿ । ಕರೆಯುತ್ತೇನೆ । **ದ್ಯಾವಾಪೃಥಿವೀ**—ಎಲೈ ದ್ಯಾವಾಪೃಥಿವಿಗಳೇ । **ಅಭ್ವಾತ್**—ಮಹದ್ಭಯದಿಂದ । **ನಃ**—ನಮ್ಮನ್ನು । **ರಕ್ಷತಂ**—ರಕ್ಷಿಸಿರಿ.

**ಭಾವಾರ್ಥ**

ಅತ್ಯಂತ ವಿಸ್ತೃತರೂ, ಸಮಸ್ತಕ್ಕೂ ಆಧಾರಭೂತರೂ, ಮಹಾನುಭಾವರೂ, ವೃಷ್ಟಿ ಮತ್ತು ಸಸ್ಯಾದಿಗಳಿಗೆ ಜನನಿಯರೂ, ಸುಂದರರೂಪವುಳ್ಳವರೂ, ಅಮೃತಕ್ಕೆ ಸದೃಶವಾದ ವೃಷ್ಟ್ಯುದಕವನ್ನು ಧರಿಸಿರುವವರೂ ಆದ ದ್ಯಾವಾಪೃಥಿವಿಗಳನ್ನು ದೇವತೆಗಳ ಮತ್ತು ಮಾನವರ ತೃಪ್ತಿಗೆ ಹೇತುವಾದ ಯಜ್ಞನಿಮಿತ್ತವಾಗಿ ಪ್ರಾರ್ಥಿಸಿ ಕರೆಯುತ್ತೇನೆ. ಎಲೈ ದ್ಯಾವಾಪೃಥಿವಿಗಳೇ, ನಮ್ಮನ್ನು ಮಹಾವಿಪತ್ತಿನಿಂದ ತಪ್ಪಿಸಿ ರಕ್ಷಿಸಿರಿ.

## English Translation

I Invoke to the sacrifice, for the preservation of gods (and men), the two vast, all supporting, and mighty parents (of the rain and corn); who, beautiful in form, sustain ambrosial (showers); defend us, Heaven and Earth, from great danger.

**ವಿಶೇಷವಿಷಯಗಳು**

ಹಿಂದಿನ ಋಕ್ಕಿನಂತೆ ಈ ಋಕ್ಕಿನಲ್ಲಿಯೂ ದ್ಯಾವಾಪೃಥಿವಿಗಳ ಗುಣಗಳ ವರ್ಣನೆ ಇದೆ. ದ್ಯಾವಾಪೃಥಿವಿಗಳಿಂದಲೇ ವೇದಗಳಲ್ಲಿ ಕಂಡುಬರುವ ಅಚ್ಚುಮೆಚ್ಚಿನ ಪದಗಳ ಜೋಡಣೆ ಪ್ರಾರಂಭವಾಗಿದೆಯೆನ್ನಬಹುದು. ಪ್ರಕೃತಿಯಲ್ಲಿ ದ್ಯಾವಾಪೃಥಿವಿಗಳಷ್ಟು ದೃಢವಾಗಿ ಸಂಬಂಧಹೊಂದಿರುವ ವಸ್ತುಗಳು ಬೇರೆ ಇಲ್ಲ. ಆದುದರಿಂದ ಇದು ಕ್ರಮೇಣ ಅವೆರಡೂ ದಂಪತಿಗಳೆಂಬ ಭಾವನೆಗೆ ಅವಕಾಶ ಕೊಟ್ಟಿತು. ಋಗ್ವೇದದಲ್ಲಿ ದ್ಯಾವಾಪೃಥಿವೀದ್ಯೋತಕವಾದ ಸೂಕ್ತಗಳು ಆರು ಮಾತ್ರ ಇರುವುವು. ದ್ಯುದೇವತೆಯನ್ನೊಂದನ್ನು ಮಾತ್ರ ಸ್ತುತಿಸುವ ಸೂಕ್ತವಿಲ್ಲ ಮೂರು ಋಕ್ಕಿನ ಒಂದು ಸಣ್ಣ ಸೂಕ್ತವು ಮಾತ್ರ (ಋ. ಸಂ. ೫-೮೪-೩) ಪೃಥಿವಿಯನ್ನು ಸ್ತುತಿಸುತ್ತದೆ. ಅದರಲ್ಲಿಯೂ ದ್ಯುದೇವತೆಗೆ ನಿರ್ದೇಶವಿದ್ದೇ ಇದೆ.

**ಉರ್ವೀ**—ಉರು ಶಬ್ದದಿಂದ ಉರ್ವೀ ಎಂಬ ಶಬ್ದವು ನಿಷ್ಪನ್ನವಾಗಿದೆ. **ಉರು** ಎಂಬ ಶಬ್ದವು ಬಹುನಾಮಗಳಲ್ಲಿ ಉಕ್ತವಾಗಿದೆ. (ನಿ. ೨-೧೩). ಅತ್ಯಂತ ವಿಸ್ತಾರವಾದ ಎಂದರ್ಥವು.

**ಸದ್ಮನೀ**—ಸದ್ಮ ಶಬ್ದವನ್ನು ಯಾಸ್ಕರು ಗೃಹನಾಮಗಳಲ್ಲಿ ಪಠಿಸಿದ್ದಾರೆ. (ನಿ. ೩-೧೩). ಇಲ್ಲಿ ಸದ್ಮನೀ ಎಂದರೆ ವಾಸಮಾಡುವುದಕ್ಕೆ ಯೋಗ್ಯವಾದ ಗೃಹಗಳುಳ್ಳ ಪೃಥಿವೀ ಎಂದರ್ಥವು.

**ಬೃಹತೀ**—ದೊಡ್ಡದಾದ ಅಥವಾ ಹೆಚ್ಚಾದ ಮಹಿಮೆಯುಳ್ಳವರು

**ದೇವನಾಮವಸಾ ಜನಿತ್ರೀ**—ದೇವತೆಗಳ (ಮತ್ತು ಮನುಷ್ಯರ) ರಕ್ಷಣೆಗಾಗಿ ವೃಷ್ಟಿಯನ್ನು ಸುರಿಸಿ ಆ ಮೂಲಕ ಸಸ್ಯೋತ್ಪತ್ತಿಯನ್ನುಂಟುಮಾಡುವವರು ಎಂದು ಸಾಯಣರ ವಿವರಣೆಯು. **ಜನಿತ್ರೀ** ಶಬ್ದಕ್ಕೆ ಉತ್ಪತ್ತಿ ಮಾಡುವ ಎಂದರ್ಥವಾಗುವುದರಿಂದ ಪ್ರಜೆಗಳನ್ನೂ ಪ್ರಾಣಿಗಳನ್ನೂ ಸಸ್ಯಾದಿಗಳನ್ನೂ ಉತ್ಪತ್ತಿಮಾಡುವವರು ಎಂದು ಅರ್ಥವಾಗಬಹುದು.

**ಋತೇನ**—ಋತಶಬ್ದದ ವಿಸ್ತಾರವಾದ ಅರ್ಥಾನುವಾದವನ್ನು ನಾವು ಹಿಂದೆ ಅನೇಕಾವರ್ತಿ ವಿವರಿಸಿದ್ದೇವೆ. ಋತಶಬ್ದಕ್ಕೆ ಸತ್ಯ, ಉದಕ, ಯಜ್ಞ ಇತ್ಯಾದ್ಯರ್ಥಗಳಿದ್ದರೂ ಇಲ್ಲಿ ಈ ಶಬ್ದಕ್ಕೆ ಯಜ್ಞವೆಂಬ ಅರ್ಥವನ್ನು ಸಾಯಣರು ಹೇಳಿದ್ದಾರೆ.

**ದಧಾತೇ ಯೇ ಅಮೃತಂ**—ಅಮೃತ ಶಬ್ದವು ಉದಕನಾಮಗಳಲ್ಲಿಯೂ (ನಿ. ೨-೧೪) ಹಿರಣ್ಯನಾಮಗಳಲ್ಲಿಯೂ (ನಿ. ೨-೧೦) ಪಠಿತವಾಗಿದೆ. ಇದಲ್ಲದೆ ಯಾಸ್ಕರು—

**ರುಶದ್ವತ್ಸಾ ರುಶತೀ ಶ್ವೇತ್ಯಾಗಾದಾರೈಗು ಕೃಷ್ಣಾ ಸದನಾನ್ಯಸ್ಯಾಃ ।**
**ಸಮಾನಬಂಧೂ ಅಮೃತೇ ಅನೂಚೀ ದ್ಯಾವಾ ವರ್ಣಂ ಚರತ ಆಮಿನಾನೇ ॥**

(ಋ. ಸಂ. ೧-೧೧೩-೨)

ಎಂಬ ಋಕ್ಕನ್ನುದಹರಿಸಿ **ಅಮೃತೇ** ಎಂಬ ಪದಕ್ಕೆ **ಅಮರಧರ್ಮಾಣೌ**—ಯಾವಾಗಲೂ ಮರಣವನ್ನು ಹೊಂದದೇ ಇರುವವರು ಎಂದೂ, (ನಿ. ೨-೨೦)

**ಯತ್ರಾ ಸುಪರ್ಣಾ ಅಮೃತಸ್ಯ ಭಾಗಮನಿಮೇಷಂ ವಿದಥಾಭಿಸ್ವರಂತಿ ।**
**ಇನೋ ವಿಶ್ವಸ್ಯ ಭುವನಸ್ಯ ಗೋಪಾಃ ಸ ಮಾ ಧೀರಃ ಪಾಕಮತ್ರಾ ವಿವೇಶ ॥**

(ಋ. ಸಂ. ೧-೧೬೪-೨೧)

ಎಂಬ ಋಕ್ಕನ್ನುದಹರಿಸಿ **ಅಮೃತಸ್ಯ ಉದಕಸ್ಯ** ಎಂದೂ ಅರ್ಥವನ್ನು ವಿವರಿಸಿದ್ದಾರೆ. (ನಿ. ೩-೧೧). ಪ್ರಕೃತವಾದ ಋಕ್ಕಿನಲ್ಲಿ ಅಮೃತವೆಂದರೆ ಉದಕವೆಂದೇ ಅರ್ಥವು. ಸಮಸ್ತ ಪ್ರಾಣಿಗಳಿಗೂ ಆಧಾರಭೂತವಾದ ವೃಷ್ಟ್ಯುದಕವನ್ನು (ಅಂತರಿಕ್ಷದಲ್ಲಿ ಮೇಘರೂಪದಿಂದ) ಧರಿಸಿರುವವರೆಂದಭಿಪ್ರಾಯವು

**ಸುಪ್ರತೀಕೇ—ಪ್ರತೀಕಂ ಮುಖಂ ಪ್ರಕಾಶಾಖ್ಯಂ ದರ್ಶನಂ ವಾ ।** ಪ್ರತೀಕ ಶಬ್ದಕ್ಕೆ ಮುಖವೆಂದಾಗಲಿ, ಕಾಂತಿಯುತವಾದ ಆವಿರ್ಭಾವವೆಂದಾಗಲಿ ಅರ್ಥವಾಗುತ್ತದೆ. ನಿರುಕ್ತಕಾರರು—

**ಯಾವನ್ಮಾತ್ರಮುಷಸೋ ನ ಪ್ರತೀಕಂ ಸುಪರ್ಣ್ಯೋ೩ ವಸತೇ ಮಾತರಿಶ್ವಃ ।**
**ತಾವದ್ದಧಾತ್ಯುಪ ಯಜ್ಞಮಾಯನ್ ಬ್ರಾಹ್ಮಣೋ ಹೋತುರವರೋ ನಿಷೀದನ್ ॥**

(ಋ ಸಂ. ೧೦-೮೮-೧೯)

ಎಂಬ ಋಕ್ಕನ್ನು ಉದಹರಿಸಿ ಕಾಂತಿಯುತವಾದ ಆವಿರ್ಭಾವವೆಂಬರ್ಥವನ್ನು ಹೇಳಿದ್ದಾರೆ. ಇಲ್ಲಿ ಜಲಸಸ್ಯಾದಿಗಳಿಂದ ಪೂರ್ಣವಾಗಿ ನಯನಮನೋಹರವಾದ ಶೋಭನರೂಪವುಳ್ಳವರೆಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಸದ್ಮನೀ**—ಷದ್‌ಲೃ ವಿಶರಣಗತ್ಯವಸಾದನೇಷು. ಧಾತು. ಅನ್ಯೇಭ್ಯೋಽಪಿದೃಶ್ಯಂತೇ (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಬೃಹತೀ**—ಬೃಹನ್ಮಹತೋರುಪಸಂಖ್ಯಾನಂ ಎಂಬುದರಿಂದ ಙೀಪಿಗೆ ಉದಾತ್ತಸ್ವರ ಬರುತ್ತದೆ. **ಸುಪಾಂ ಸುಲುಕ್**—ಸೂತ್ರದಿಂದ ದ್ವಿವಚನಪರವಾದಾಗ ಪೂರ್ವಸವರ್ಣದೀರ್ಘ ಏಕಾದೇಶವಾಗಿ ಬರುತ್ತದೆ.

**ಜನಿತ್ರೀ**—ಜನೀ ಪ್ರಾದುರ್ಭಾವೇ. ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ಇಡಾಗಮ. **ಋನ್ನೇಭ್ಯೋ ಙೀಪ್** (ಪಾ. ಸೂ. ೪-೧-೫) ಎಂಬುದರಿಂದ ಸ್ತ್ರೀತ್ವದಲ್ಲಿ ಙೀಪ್. ಯಣಾದೇಶ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದಧಾತೇ**—ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಸುಪ್ರತೀಕೇ**—ಶೋಭನಂ ಪ್ರತೀಕಂ ಯಯೋಸ್ತೇ. ಸುಪ್ರತೀಕೇ. ಪರಾದಿಶ್ಛಂದಸಿ ಬಹುಲಮ್ (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

---

ಸಂಹಿತಾಪಾಠಃ

**ಉರ್ವೀ ಪೃಥ್ವೀ ಬಹುಲೇ ದೂರೇಅಂತೇ ಉಪ ಬ್ರುವೇ ನಮಸಾ ಯಜ್ಞೇ ಅಸ್ಮಿನ್ ।**

**ದಧಾತೇ ಯೇ ಸುಭಗೇ ಸುಪ್ರತೂರ್ತೀ ದ್ಯಾವಾ ರಕ್ಷತಂ ಪೃಥಿವೀ ನೋ ಅಭ್ವಾತ್ ॥ ೭ ॥**

ಪದಪಾಠಃ

ಉರ್ವೀ ಇತಿ । ಪೃಥ್ವೀ ಇತಿ । ಬಹುಲೇ ಇತಿ । ದೂರೇಅಂತೇ ಇತಿ ದೂರೇಽಅಂತೇ । ಉಪ । ಬ್ರುವೇ । ನಮಸಾ । ಯಜ್ಞೇ । ಅಸ್ಮಿನ್ ।

ದಧಾತೇ ಇತಿ । ಯೇ ಇತಿ । ಸುಭಗೇ ಇತಿ ಸುಽಭಗೇ । ಸುಪ್ರತೂರ್ತೀ ಇತಿ ಸುಽಪ್ರತೂರ್ತೀ । ದ್ಯಾವಾ । ರಕ್ಷತಂ । ಪೃಥಿವೀ ಇತಿ । ನಃ । ಅಭ್ವಾತ್ ॥ ೭ ॥

### ಸಾಯಣಭಾಷ್ಯಂ

ಉರ್ವೀ ಉರ್ವ್ಯೌ ಮಹತ್ಯೌ ಪೃಥ್ವೀ ಪೃಥಿವ್ಯೌ ಬಹುಲೇ ಅನೇಕಪ್ರಕಾರೇಣ ಪ್ರಥಮಾನೇ ಬಹ್ವಾಕಾರೇ ದೂರೇಅಂತೇ ವಿಪ್ರಕೃಷ್ಟಾಂತದೇಶೇ । ಅಪಾರೇ ಇತ್ಯರ್ಥಃ । ಈದೃಶ್ಯೌ ಯುವಾಮಸ್ಮಿನ್ಯಜ್ಞೇ ನಮಸಾ ನಮಸ್ಸಾಧನೇನ ಸ್ತೋತ್ರೇಣೋಪ ಬ್ರುವೇ । ಉಪೇತ್ಯ ಬ್ರವೀಮಿ । ಸ್ತೌಮಿತ್ಯರ್ಥಃ । ಪುನಃ ಕೀದೃಶ್ಯೌ । ಯೇ ಸುಭಗೇ ಶೋಭನಭಾಗ್ಯೇ ಸುಪ್ರತೂರ್ತೀ ಸುಪ್ರತರಣೇ ಶೋಭನದಾನೇ ದಧಾತೇ ವಿಶ್ವಂ ಜಗತ್ ತೇ ಯುವಾಮುಪ ಬ್ರುವೇ ಸ್ತೌಮಿ ॥

### ಪ್ರತಿಪದಾರ್ಥ

ಉರ್ವೀ—ಮಹತ್ತಾದ ಆಕಾರವುಳ್ಳವರೂ । ಪೃಥ್ವೀ—ಅತ್ಯಂತ ವಿಸ್ತೃತರೂ । ಬಹುಲೇ—ನಾನಾ ರೂಪವಾದ ಆಕಾರವುಳ್ಳವರೂ । ದೂರೇಅಂತೇ—ಅನಂತರೂ (ಮತ್ತು) । ಯೇ—ಯಾರು । ಸುಭಗೇ—ಶೋಭ ನಾತ್ಮಕರಾಗಿಯೂ । ಸುಪ್ರತೂರ್ತೀ—ಶೋಭನದಾತೃಗಳಾಗಿಯೂ ಆಗಿ । ದಧಾತೇ—(ಸಕಲಜಗತ್ತನ್ನೂ) ಧರಿಸಿ ದ್ದಾರೆಯೋ ಅಂತಹವರೂ ಆದ ದ್ಯಾವಾಪೃಥಿವಿಗಳನ್ನು । ಅಸ್ಮಿನ್ ಯಜ್ಞೇ—ಈ ಯಜ್ಞದಲ್ಲಿ । ನಮಸಾ—ನಮಸ್ಕಾರಪೂರ್ವಕವಾದ ಸ್ತುತಿಯಿಂದ । ಉಪಬ್ರುವೇ—ಸಮೀಪಿಸಿ ಪ್ರಾರ್ಥಿಸುತ್ತೇನೆ । ದ್ಯಾವಾಪೃಥಿವೀ—ಎಲೈ ದ್ಯಾವಾಪೃಥಿವಿಗಳೇ । ನಃ—ನಮ್ಮನ್ನು । ಅಭ್ವಾತ್—ಮಹದ್ಭಯದಿಂದ । ರಕ್ಷತಂ—ರಕ್ಷಿಸಿರಿ.

### ಭಾವಾರ್ಥ

ಮಹತ್ತಾದ ಆಕಾರವುಳ್ಳವರೂ, ಅತ್ಯಂತ ವಿಸ್ತೃತರೂ, ನಾನಾರೂಪವಾದ ಆಕಾರವುಳ್ಳವರೂ, ಅನಂತರೂ, ಶೋಭನಾತ್ಮಕರೂ, ಶೋಭನದಾತೃಗಳೂ ಮತ್ತು ಸಮಸ್ತಜಗತ್ತನ್ನೂ ಧರಿಸಿರುವವರೂ ಆದ ದ್ಯಾವಾಪೃಥಿವಿಗಳನ್ನು ಈ ಯಜ್ಞದಲ್ಲಿ ನಮಸ್ಕಾರ ಪೂರ್ವಕವಾದ ಸ್ತುತಿಯಿಂದ ಸಮೀಪಿಸಿ ಪ್ರಾರ್ಥಿಸುತ್ತೇನೆ. ಎಲೈ ದ್ಯಾವಾಪೃಥಿವಿಗಳೇ, ನಮ್ಮನ್ನು ಭಯಂಕರವಾದ ಪಾಪದಿಂದ ತಪ್ಪಿಸಿ ರಕ್ಷಿಸಿರಿ.

### English Trnslation

I glorify with reverence, at this sacrifice, (the two), who are vast, expansive, multiform, infinite, auspicious; who support (all beings) by their bounty : defend us, Heaven and Earth, from great danger.

### । ವಿಶೇಷವಿಷಯಗಳು ।

ಬಹುಲೇ—ಪರ್ವತಗಳು, ನದಿಗಳು, ವನಗಳು, ವೃಕ್ಷಗಳು, ಗೃಹಗಳು ಮೊದಲಾದ ಅನೇಕ ಪ್ರಕಾರ ದೃಶ್ಯ ಗಳಿಂದ ಬಹುವಿಧಾಕಾರವುಳ್ಳ ಎಂದರ್ಥ.

ದೂರೇ ಅಂತೇ—ಅಂತವೆಂದರೆ ಕೊನೆಯು. ಇದರ ಕೊನೆಯು ಬಹು ದೂರದಲ್ಲಿರುವುದು ಎಂದರೆ ಬಹು ದೂರದವರಿಗೂ ವಿಸ್ತಾರಗೊಂಡು ಅಪಾರವಾಗಿರುವುದೆಂದಭಿಪ್ರಾಯವು. ಈ ಶಬ್ದ ಪ್ರಯೋಗವು ಋಗ್ವೇದದಲ್ಲಿ. ಈ ಋಕ್ಕಿನಲ್ಲಿಯೂ—

ಸಮಾನ್ಯಾ ವಿಯುತೇ ದೂರೇ ಅಂತೇ ಧ್ರುವೇ ಪದೇ ತಸ್ಥತುರ್ಜಾಗರೂಕೇ ।
ಉತ ಸ್ವಸಾರಾ ಯುವತೀ ಭವಂತೀ ಆದು ಬ್ರುವಾತೇ ಮಿಥುನಾನಿ ನಾಮ ॥

(ಋ. ಸಂ. ೩-೫೪-೭)

ಎಂಬ ಋಕ್ಕಿನಲ್ಲಿಯೂ ಮಾತ್ರವಿರುವುದು. ಇನ್ನೆಲ್ಲಿಯೂ ಇಲ್ಲ. ಅಲ್ಲಿಯೂ ಸಹ ದ್ಯಾವಾಪೃಥಿವಿಗಳ ಗುಣವನ್ನೇ ಪ್ರಶಂಸಿಸುವುದಾಗಿದೆ.

**ದಧಾತೇ**—ಈ ಶಬ್ದಕ್ಕೆ ಧರಿಸುವುದು ಎಂದು ಮಾತ್ರ ಅರ್ಥವಿದ್ದರೂ ಇಲ್ಲ ಸಮಸ್ತಜಗತ್ತನ್ನೂ ಪೋಷಣಾದಿಗಳಿಂದ ಧರಿಸಿರುವವರು ಎಂದು ಅಭಿಪ್ರಾಯವು.

**ಸುಪ್ರತೂರ್ತೀ**—ಶೋಭನದಾನವುಳ್ಳವರು ಎಂದರೆ ಜಗತ್ಪ್ರಾಣಿಗಳಿಗೆ ಅತ್ಯವಶ್ಯಕವಾದ ವೃಷ್ಟಿ (ಮಳೆ) ಸಸ್ಯಾದಿಗಳು, ಆಹಾರ ಮುಂತಾದ ಸಕಲಸಾಧನಸಂಪತ್ತುಗಳನ್ನು ಒದಗಿಸಿಕೊಡುವವರು ಎಂದಭಿಪ್ರಾಯವು.

**ನಮಸಾ**—ನಮಃಶಬ್ದಕ್ಕೆ ಸಮಸ್ಕಾರ, ಅನ್ನ, ಸ್ತೋತ್ರಗಳೆಂಬ ಅನೇಕಾರ್ಥಗಳಿರುವುವು. ಇಲ್ಲಿ ಸ್ತೋತ್ರವೆಂಬ ಅರ್ಥವನ್ನು ಭಾಷ್ಯಕಾರರು ಪರಿಗ್ರಹಿಸಿರುವರು.

ವ್ಯಾಕರಣಪ್ರಕ್ರಿಯಾ

**ಉರ್ವೀ**—ಉರು ಶಬ್ದವು ಗುಣವಾಚಕವಾಗಿ ಅದಂತವಾಗಿದೆ. **ವೋತೋಗುಣವಚನಾತ್** (ಪಾ. ಸೂ. ೪-೧-೪೪) ಎಂಬುದರಿಂದ ಸ್ತ್ರೀತ್ವದಲ್ಲಿ ಙೀಷ್ ಯಣಾದೇಶ. **ಉದಾತ್ತಯಣೋಹಲ್‌ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ಈಕಾರ ಉದಾತ್ತವಾಗುತ್ತದೆ. ದ್ವಿವಚನಪರವಾದಾಗ **ಸುಪಾಂ ಸುಲುಕ್**—ಸೂತ್ರದಿಂದ ಪೂರ್ವಸವರ್ಣದೀರ್ಘ. ಇಕಾರಾಂತಶಬ್ದಗಳಲ್ಲಿ ಇಲ್ಲಿ ಎಲ್ಲಾಕಡೆಯಲ್ಲಿಯೂ ಪೂರ್ವಸವರ್ಣದೀರ್ಘ ಬಂದಿದೆ.

**ಬ್ರುವೇ**—ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು. ಲಟ್ ಉತ್ತಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸುಭಗೇ**—**ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಸುಪ್ರತೂರ್ತೀ**—ಶೋಭನಾ ಪ್ರತೂರ್ತಿಃ ದಾನಂ ಯಯೋಸ್ತೇ. **ಪರಾದಿಶ್ಛಂದಸಿ ಬಹುಲಮ್** (ಪಾ. ಸೂ. ೬-೨-೧೯೯) ಎಂಬುದರಿಂದ ಉದುತ್ತರಪದಾದ್ಯುದಾತ್ತಸ್ವರ ಬರುತ್ತದೆ. ಹಿಂದಿನಂತೆ ದ್ವಿವಚನದಲ್ಲಿ ಪೂರ್ವಸವರ್ಣದೀರ್ಘ. ॥ ೭ ॥

ಸಂಹಿತಾಪಾಠಃ

ದೇವಾನ್ವಾ ಯಚ್ಚಕೃಮಾ ಕಚ್ಚಿದಾಗಃ ಸಖಾಯಂ ವಾ ಸದಮಿಜ್ಜಾಸ್ಪತಿಂ ವಾ ।

ಇಯಂ ಧೀರ್ಭೂಯಾ ಅವಯಾನಮೇಷಾಂ ದ್ಯಾವಾ ರಕ್ಷತಂ ಪೃಥಿವೀ
ನೋ ಅಭ್ವಾತ್ ॥ ೮ ॥

॥ ಪದಪಾಠಃ ॥

ದೇವಾನ್ । ವಾ । ಯತ್ । ಚಕೃಮ । ಕತ್ । ಚಿತ್ । ಆಗಃ । ಸಖಾಯಂ । ವಾ । ಸದಂ । ಇತ್ ।
ಜಾಃಪತಿಂ । ವಾ ।

ಇಯಂ । ಧೀಃ । ಭೂಯಾಃ । ಅವಯಾನಂ । ಏಷಾಂ । ದ್ಯಾವಾ । ರಕ್ಷತಂ । ಪೃಥಿವೀ ಇತಿ । ನಃ ।
ಅಭ್ವಾತ್ ॥ ೮ ॥

ಸಾಯಣಭಾಷ್ಯಂ

ಹೇ ದ್ಯಾವಾಪೃಥಿವ್ಯೌ ವಯಂ ದೇವಾನ್ ದೇವಾನ್ಪ್ರತಿ ಯತ್ಕಚ್ಚಿದಾಗೋಽಪರಾಧಂ ತತ್ತದ್ಯಾಗಕಾಲೇ ತೇಷಾಂ ತೇಷಾಮಯಾಗಲಕ್ಷಣಂ ಸದಮಿತ್ಸರ್ವದೈವ ಚಕೃಮ ಕೃತವಂತೋ ವಯಂ । ಸಖಾಯಂ ವಾ ಪ್ರಿಯಂ ಮಿತ್ರಂ ವಾ ಪ್ರತಿ ಯಚ್ಚಕೃಮ । ಜಾಸ್ಪತಿಂ । ಜಾಃ ಪುತ್ರ್ಯಃ । ತಾಸಾಂ ಪತಿಂ ಜಾಮಾತರಂ ವಾ ಜಾಯಾಪತಿಂ ಪ್ರತಿ ದೋಷಾರೋಪಣಕಲಹೋತ್ಪಾದನಾದಿರೂಪಂ ಯತ್ಸರ್ವದೈವ ಚಕೃಮ । ಏಷಾಮುಕ್ತರೂಪಾಣಾಂ ಪಾಪಾನಾಮಪಗಮಂ ಕರ್ತುಮಿಯಂ ಧೀರ್ಯುಷ್ಮತ್ಸ್ತುತಿರೂಪಮಿದಂ ಕರ್ಮ ಭೂಯಾಃ । ಭೂಯಾತ್ । ಭವತು । ದ್ಯಾವೇತ್ಯಾದಿ ಗತಂ । ಅತ್ರ ಸರ್ವತ್ರ ಪ್ರಕಾರಾಂತರೇಣ ಮಂತ್ರಮುಂತರೇಣ ರಕ್ಷತಂ ರಕ್ಷತಮಿತಿ ಪ್ರಾರ್ಥನಂ ತಯೋರಶ್ವಿನ್ಯಾದಿಬಹುಮನನಾಸಂಭವಾದುಚಿತಮೇವ । ತಸ್ಮಾತ್ಸ್ವಸ್ಥಾನ ಏವ ಸ್ಥಿತೇ ಅನುಕೂಲೇ ಭವತಮಿತ್ಯೇವಂ ಪ್ರಾರ್ಥ್ಯತೇ ॥

॥ ಪ್ರತಿಪದಾರ್ಥ ॥

(ಎಲೈ ದ್ಯಾವಾಪೃಥಿವಿಗಳೇ) ವಯಂ—ನಾವು । ದೇವಾನ್ ವಾ—ದೇವತೆಗಳ ವಿಷಯದಲ್ಲಾಗಲಿ । ಯತ್ಕಚ್ಚಿದಾಗಃ—ಲೋಪ ಅಥವಾ ದೋಷರೂಪವಾದ ಯಾವುದೇ ಆದ ಅಪರಾಧವನ್ನು । ಸದಮಿತ್—ಯಾವಾಗಲೂ । ಚಕೃಮ—ಮಾಡಿರಬಹುದೋ (ಹಾಗೆಯೇ) । ಸಖಾಯಂ ವಾ—ಮಿತ್ರರ ವಿಷಯದಲ್ಲಾಗಲಿ । ಜಾಸ್ಪತಿಂ ವಾ—ಜಾಮಾತೃವಿನ ವಿಷಯದಲ್ಲಾಗಲಿ (ಯಾವ ಅಪರಾಧವನ್ನು ಮಾಡಿದ್ದರೂ ಸಹ) ಏಷಾಂ—ಇಂತಹ ಅಪರಾಧಗಳಿಗೆ । ಅವಯಾನಂ—ಪರಿಹಾರಸಾಧನವಾಗಿ । ಇಯಂ ಧೀಃ—ಸ್ತುತಿಪೂರ್ವಕವಾದ ಈ ಕರ್ಮವು । ಭೂಯಾಃ—ಆಗಲಿ । ದ್ಯಾವಾಪೃಥಿವೀ—ಎಲೈ ದ್ಯಾವಾಪೃಥಿವಿಗಳೇ । ನಃ—ನಮ್ಮನ್ನು । ಅಭ್ವಾತ್—ಮಹದ್ಭಯದಿಂದ । ರಕ್ಷತಂ—ರಕ್ಷಿಸಿರಿ.

### ಭಾವಾರ್ಥ

ಎಲೈ ದ್ಯಾವಾಪೃಥಿವಿಗಳೇ, ನಾವು ನೆರವೇರಿಸುವ ಯಜ್ಞಕಾಲಗಳಲ್ಲೆಲ್ಲಾ ದೇವತೆಗಳ ವಿಷಯದಲ್ಲಿ ಯಾವ ಯಾವ ಅಪರಾಧಗಳನ್ನು ಮಾಡಿರುವೆವೋ ಹಾಗೆಯೇ ಸುಹೃತ್ತುಗಳ ಮತ್ತು ಜಾಮಾತೃಗಳ ವಿಷಯದಲ್ಲಿ ಯಾವ ಅಪರಾಧಗಳನ್ನು ಮಾಡಿರುವೆವೋ ಅಂತಹ ಸಮಸ್ತ ಅಪರಾಧಗಳಿಗೂ ಸ್ತುತ್ಯಾತ್ಮಕವಾದ ಈ ಕರ್ಮವು ಪರಿಹಾರ ರೂಪವಾಗಿರಲಿ. ಎಲೈ ದ್ಯಾವಾಪೃಥಿವಿಗಳೇ, ನಮ್ಮನ್ನು ಭಯಂಕರವಾದ ಪಾಪದಿಂದ ತಪ್ಪಿಸಿ ರಕ್ಷಿಸಿರಿ.

### English Translation

May this sacrifice be the means of expiating those offences which we may have committed against the gods, against a friend at any time, against a sun-in-law : defend us, Heaven and Earth, from great danger·

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಋಷಿಯು ತಾನು ಮಾಡುವ ಅಥವಾ ಈಗ ಮಾಡುತ್ತಿರುವ ಯಜ್ಞರೂಪವಾದ ಕರ್ಮದಲ್ಲಿ ಸಂಭವಿಸಬಹುದಾದ ಅನೇಕ ಲೋಪದೋಷಗಳನ್ನೂ, ಅಪರಾಧಗಳನ್ನೂ ಮನ್ನಿಸಬೇಕೆಂದು ದೇವತೆಗಳನ್ನು ವಿನೀತನಾಗಿ ಪ್ರಾರ್ಥಿಸುತ್ತಾನೆ.

ಆಗಃ—ಪಾಪ, ಅಪರಾಧ ಎಂದರ್ಥವು. ಯಾಸ್ಕರು ಈ ಶಬ್ದದ ನಿರ್ವಚನವನ್ನು ಹೇಳುತ್ತಾ—

ಯಸ್ಮೈ ತ್ವಂ ಸುದ್ರವಿಣೋ ದದಾಶೋಽನಾಗಾಸ್ತ್ವಮದಿತೇ ಸರ್ವತಾತಾ ।
ಯಂ ಭದ್ರೇಣ ಶವಸಾ ಚೋದಯಾಸಿ ಪ್ರಜಾವತಾ ರಾಧಸಾ ತೇ ಸ್ಯಾಮ ॥

(ಋ. ಸಂ. ೧-೯೪-೧೫)

ಎಂಬ ಋಕ್ಕನ್ನುದಾಹರಿಸಿ, ಆಗ ಆಙ್ಪೂರ್ವಾದ್ಗಮೇಃ (ಅವಶ್ಯಮೇವೈತದಾಗಚ್ಛತಿ ಕರ್ತಾರಮಿತ್ಯಾಗಃ) ಏನ ಏತೇಃ. ಕಿಲ್ಬಿಷಂ ಸುಕೃತಕರ್ಮಣೋ ಭಯಂ ಕೀರ್ತಿಮಸ್ಯ ಭಿನತ್ತೀತಿ ವಾ । ಎಂದು ನಿರ್ವಚನವನ್ನು ಹೇಳಿರುವರು. ಯಜ್ಞಾದಿಕರ್ಮಗಳಲ್ಲಿ ಯಜಮಾನನು ಆಚರಿಸಬಹುದಾದ ಲೋಪದೋಷಗಳಿಗೆ ಸಂಭವಿಸಬಹುದಾದ ಪಾಪವು ಯಜಮಾನನ್ನು ಅನುಸರಿಸಿ ಬಂದೇ ಬರುವುದಾದ್ದರಿಂದ ಇಂತಹ ಪಾಪ ಅಥವಾ ಅಪರಾಧಕ್ಕೆ ಆಗಃ ಎಂದು ಹೆಸರು ಎಂದು ವಿವರಿಸಿ ಇದರಂತೆ ಕಿಲ್ಬಿಷಶಬ್ದಾರ್ಥವೂ ಇರುವುದೆಂದು ಪ್ರಾಸ್ತಾವಿಕವಾಗಿ ಅದರರ್ಥವನ್ನೂ ಹೇಳಿದಾರೆ.

ಋಷಿಯು ಪ್ರಸ್ತಾಪ ಮಾಡಿರುವ ಅಪರಾಧವು ದೇವತೆಗಳಿಗೆ ಮಾತ್ರ ಸಂಬಂಧ ಪಟ್ಟಿರುವುದೆಂದು ಭಾವಿಸಬೇಕಾಗಿಲ್ಲವೆಂದೂ, ಯಜ್ಞಕರ್ಮಗಳಲ್ಲಿ ಭಾಗವಹಿಸುವ, ಋತ್ವಿಗಾದಿ ಜನರು, ಸ್ನೇಹಿತರು, ಅಳಿಯ ಮೊದಲಾದ ಇತರ ಬಂಧುಬಾಂಧವರ ವಿಷಯದಲ್ಲಿಯೂ ಪಶ್ಚಾತ್ತಾಪವನ್ನು ಸೂಚಿಸುವುದಾಗಿಯೂ ಉಕ್ತವಾಗಿದೆ. ಜನರ ವಿಷಯದಲ್ಲಿ ಅಪರಾಧವೇನೆಂದರೆ-ಪರಸ್ಪರ ದೋಷಾರೋಪಣೆ, ಕಲಹ, ಇತ್ಯಾದಿಗಳು ಪ್ರಾಪ್ತವಾಗುವ ಸಂಭವವಿರುವುದರಿಂದ ಅವುಗಳನ್ನು ಮನ್ನಿಸಬೇಕೆಂದು ಋಷಿಯು ಪ್ರಾರ್ಥಿಸಿರುವನು.

ಜಾಸ್ಪತಿಂ—ಜಾಃ ಎಂಬ ಶಬ್ದವು ಅಪತ್ಯನಾಮಗಳಲ್ಲಿ ಪಠಿತವಾಗಿದೆ (ನಿ. ೩. ೨.) ಪುತ್ರಿಯೆಂದರ್ಥವು. ಪುತ್ರಿಯ ಪತಿಗೆ ಜಾಸ್ಪತಿ ಅಥವಾ ಜಾಮಾತಾ ಎಂದು ಹೆಸರು ಪ್ರಸಿದ್ಧವು. ಜಾಮಾತಾಶಬ್ದದ ನಿರ್ವಚನವನ್ನು

ಯಾಸ್ಕರು ಜಾಮಾತಾ ಜಾ ಅಪತ್ಯಂ ತನ್ನಿರ್ಮಾತಾ ಎಂದು ಹೇಳಿರುತ್ತಾರೆ. ಇದಕ್ಕೆ ದುರ್ಗಾಚಾರ್ಯರು ತಮ್ಮ ವ್ಯಾಖ್ಯಾನದಲ್ಲಿ—ಜಾ ಅಪತ್ಯಂ ಸ್ತ್ರೀತ್ವಂ ಹಿ ಮೈಥುನೇನ ವ್ಯವಹಾರೇಣಾಸೌ ನಿರ್ಮಿಣೋತಿ ತೇನಾಸೌ ದುಹಿತುಃ ಪತಿರ್ಜಾಮಾತಾ ಭವತಿ (ನಿ. ೬-೯) ಎಂದು ಹೇಳಿದಾರೆ. ಪುತ್ರಿಯಲ್ಲಿ ಸಂತಾನವನ್ನು ಉತ್ಪಾದನೆ ಮಾಡುವುದರಿಂದ ಅಳಿಯನಿಗೆ ಜಾಮಾತಾ ಎಂದು ಹೆಸರು.

**ಧೀಃ**—ಇಯಂ ಧೀರ್ಯುಷ್ಮತ್ಸ್ತುತಿರೂಪಂ ಕರ್ಮ | ಧೀಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ. ೩-೨) ದ್ಯಾವಾಪೃಥಿವಿಗಳಾದ ನಿಮ್ಮ ವಿಷಯದಲ್ಲಿ ನಾನು ಮಾಡುತ್ತಿರುವ ಸ್ತುತಿರೂಪವಾದ ಕರ್ಮವೆಂದು ಋಷಿಯು ಹೇಳಿರುವನು.

ವ್ಯಾಕರಣಪ್ರಕ್ರಿಯಾ

**ಚಕ್ರವು**—ಯದ್ಯೋಗವಿರುವುದರಿಂದ ತಿಙಂತನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಜಾಸ್ಪತಿಮ್**—ಜಾಯಂತೇ ಇತಿ ಜಾಃ. ದೃಶಿಗ್ರಹಣಸಾಮರ್ಥ್ಯದಿಂದ ಉಪಪದವಿಲ್ಲವಾದರೂ ಡ ಪ್ರತ್ಯಯ. ಡಿತ್ತಾದುದರಿಂದ ಟಿಲೋಪ. ಶಬ್ದಸ್ವಭಾವದಿಂದ ಬಹುವಚನ. ಜಾನಾಂ ಪತಿಃ ತಮ್. ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಆಗಃ**—ಇಣ್ ಗತೌ ಧಾತು. **ಇಣ ಆಗೋಽಪರಾಧೇಚ** (ಉ. ಸೂ. ೪-೬೫೧) ಎಂಬುದರಿಂದ ಅಸುನ್ ಪ್ರತ್ಯಯ. ಧಾತುವಿಗೆ ಆಗಾದೇಶ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಭೂಯಾಃ**—ಭೂ ಸತ್ತಾಯಾಂ ಧಾತು. **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಲಿಙ್ ಪ್ರಥಮಪುರುಷ ಏಕವಚನ ಸ್ಥಾನಕ್ಕೆ ಮಧ್ಯಮಪುರುಷ ಏಕವಚನ ಪ್ರತ್ಯಯ ಬರುತ್ತದೆ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

---

ಸಂಹಿತಾಪಾಠಃ

**ಉಭಾ ಶಂಸಾ ನರ್ಯಾ ಮಾಮವಿಷ್ಟಾಮುಭೇ ಮಾಮೂತೀ ಅವಸಾ ಸಚೇತಾಂ ।**

**ಭೂರಿ ಚಿದರ್ಯಃ ಸುದಾಸ್ತರಾಯೇಷಾ ಮದಂತ ಇಷಯೇಮ ದೇವಾಃ ॥ ೯ ॥**

ಪದಪಾಠಃ

**ಉಭಾ । ಶಂಸಾ । ನರ್ಯಾ । ಮಾಂ । ಅವಿಷ್ಟಾಂ । ಉಭೇ ಇತಿ । ಮಾಂ । ಊತೀ ಇತಿ । ಅವಸಾ । ಸಚೇತಾಂ ।**

ಭೂರಿ । ಚಿತ್ । ಅರ್ಯಃ । ಸುದಾಃಽತರಾಯ । ಇಷಾ । ಮದಂತಃ । ಇಷಯೇಮ । ದೇವಾಃ ॥ ೯ ॥

ಸಾಯಣಭಾಷ್ಯಂ

ಉಭಾ ಶಂಸಾ ದ್ಯಾವಾಪೃಥಿವ್ಯೋರುಭಯೋರ್ವಿಷಯಾವುಭಾವಪಿ ಶಂಸೌ ನರ್ಯಾ ನರೇಭ್ಯೋ ಹಿತಾವೀದೃಶ್ಯಾವುಭಯಾತ್ರ್ಯಯೇ ಸ್ತುತೀ ಮಾಮವಿಷ್ಟಾಂ । ರಕ್ಷತಾಂ । ಯದ್ವಾ । ದ್ಯಾವಾಪೃಥಿವ್ಯಭಿಮಾನಿದೇವಯೋರೇವ ಶಂಸಶಬ್ದೇನಾಭಿಧಾನಾತ್ಪುಲ್ಲಿಂಗತಾ । ತಥೋಭೇ ಊತೀ ರಕ್ಷಿಕೇ ದ್ಯಾವಾಪೃಥಿವ್ಯೌ ಮಾಮವಸಾ ರಕ್ಷಣೇನ ಸಚೇತಾಂ । ಯದ್ವಾ । ಪ್ರಾಣಿಭ್ಯೋ ಹಿತಕರಾವುಭಾವೈಹಿಕಾಮುಷ್ಮಿಕವಿಷಯೌ ಶಂಸೌ ಮಾಮವಿಷ್ಟಾಂ । ಪ್ರಾಪ್ನುತಾಂ । ತಥೋಭೇ ಅಪ್ಯೂತೀ ತಯೋಃ ಸಂಬಂಧಿನ್ಯೋರಭಿಮಾನಿದೇವತಯೋರವಸಾಸ್ಮತ್ತರ್ಪಣೇನ ನಿಮಿತ್ತೇನ ಸಚೇತಾಂ । ಹೇ ದೇವಾ ದ್ಯಾವಾಪೃಥಿವ್ಯೋರಂತರ್ಭೂತಾಃ ಸರ್ವೇಽಪಿ ದೇವಾಃ ಅರ್ಯಃ ಸ್ತೋತಾರೋ ವಯಂ ಸುದಾಸ್ತರಾಯಾತಿಶಯೇನ ಶೋಭನದಾತೃತ್ವಾಯೇಷಾನ್ನೇನ ಸೋಮಲಕ್ಷಣೇನ ಮದಂತೋ ಮಾದಯಂತಃ ಸಂತೋ ಭೂರಿ ಚಿತ್ । ಚಿತ್ ಪೂಜಾಯಾಂ । ಅಭಿಪೂಜಿತಂ ಧನಮಿಷಯೇಮ । ಇಚ್ಛೇಮ । ಯದ್ವಾ । ಅರ್ಯ ಇತಿ ಷಷ್ಠ್ಯಾ ರೂಪಂ । ಈಶ್ವರಾದ್ರಾಜಾದೇರಪಿ ಸುದಾಸ್ತರಾಯೇತ್ಯರ್ಥಃ । ಶಿಷ್ಟಂ ಸಮಾನಂ ॥

ಪ್ರತಿಪದಾರ್ಥ

**ನರ್ಯಾ**—ನರರಿಗೆ ಹಿತವನ್ನುಂಟುಮಾಡುವವರೂ । **ಉಭಾ ಶಂಸಾ**—ಉಭಯಾತ್ಮಕವಾದ ಸ್ತುತಿಗಳಿಗೂ ವಿಷಯರಾಗಿರುವವರೂ ಆದ ದ್ಯಾವಾಪೃಥಿವಿಗಳು ಅಥವಾ ದ್ಯಾವಾಪೃಥಿವಿಗಳಿಬ್ಬರನ್ನೂ ಉದ್ದೇಶಿಸಿ ಪಠಿಸಿದ ಈ ಸ್ತುತಿಗಳು । **ಮಾಂ**—ನನ್ನನ್ನು । **ಅವಿಷ್ಟಾಂ**—ರಕ್ಷಿಸಲಿ । **ಉಭೇ ಊತೀ**—ರಕ್ಷಕರಾದ ಈ ಇಬ್ಬರೂ । **ಮಾಂ**—ನನ್ನನ್ನು । **ಅವಸಾ**—ರಕ್ಷಣೆಯ ಕರ್ಮದಿಂದ । **ಸಚೇತಾಂ**—ಸೇರಿಕೊಳ್ಳಲಿ । **ದೇವಾಃ** — (ದ್ಯಾವಾಪೃಥಿವಿಗಳ ನಡುವೆ ಅಂತರ್ಗತರಾದ) ಸಕಲ ದೇವತೆಗಳೇ । **ಅರ್ಯಃ**—ಸ್ತೋತೃಗಳಾದ ನಾವು । **ಇಷಾ**—ಹವಿಸ್ಸಿನ ರೂಪವಾದ ಅನ್ನದಿಂದ । **ಮದಂತಃ**—ನಿಮನ್ನು ತೃಪ್ತಿಪಡಿಸುತ್ತಾ । **ಸುದಾಸ್ತರಾಯ**—ಶ್ರೇಷ್ಠವಾದ ದಾನಗಳನ್ನು ಮಾಡುವುದಕ್ಕಾಗಿ । **ಭೂರಿಚಿತ್**—ಅತ್ಯಧಿಕವಾದ ಧನವನ್ನು । **ಇಷಯೇಮ**—ಇಚ್ಛಿಸುತ್ತೇವೆ.

ಭಾವಾರ್ಥ

ನರರಿಗೆ ಹಿತವನ್ನುಂಟುಮಾಡುವವರೂ, ಉಭಯಾತ್ಮಕವಾದ ಸ್ತುತಿಗಳಿಗೂ ಪಾತ್ರರಾಗಿರುವವರೂ ಆದ ದ್ಯಾವಾಪೃಥಿವಿಗಳು ನನ್ನನ್ನು ರಕ್ಷಿಸಲಿ. ರಕ್ಷಕರಾದ ಈ ಇಬ್ಬರೂ ನನ್ನನ್ನು ರಕ್ಷಣೆಯ ಕರ್ಮದಿಂದ ಸೇರಿಕೊಳ್ಳಲಿ. ದ್ಯಾವಾಪೃಥಿವಿಗಳ ನಡುವೆ ಅಂತರ್ಗತರಾದ ಸಕಲದೇವತೆಗಳೇ, ಸ್ತೋತೃಗಳಾದ ನಾವು ಹವಿಸ್ಸಿನ ರೂಪದ ಅನ್ನದಿಂದ ನಿಮ್ಮನ್ನು ತೃಪ್ತಿಪಡಿಸುತ್ತಾ ಶ್ರೇಷ್ಠರಾದ ದಾತೃಗಳಾಗುವ ಉದ್ದಿಶ್ಯದಿಂದ ಅತ್ಯಧಿಕವಾದ ಧನವನ್ನು ಅಪೇಕ್ಷಿಸುತ್ತೇವೆ.

## English Translation

May both these, accepting praise, and friendly to man, be favourable to me: may they both be associated as guardians for my protection: deities,

we your adorers, propitiating you with (sacrificial) food, desire ample (wealth), for the sake of making liberal donations.

ವಿಶೇಷವಿಷಯಗಳು

**ಚಿತ್**—ಈ ಶಬ್ದವು ಯಾಸ್ಕರು ಹೇಳಿರುವಂತೆ **ಚಿದಿತ್ಯೇಷೋಽನೇಕಕರ್ಮಾ** ಅನೇಕ ವಿಧಾರ್ಥಗಳಲ್ಲಿ ಪ್ರಯೋಗಿಸಲ್ಪಡುವುದು. **ಆಚಾರ್ಯಶ್ಚಿದಿದಂ ಬ್ರೂಯಾದಿತಿ ಪೂಜಾಯಾಂ** ಆಚಾರ್ಯನೇ ಇದನ್ನು ಹೇಳಿರುವನು ಎಂಬಲ್ಲಿ ಈ ಶಬ್ದವು ಪೂಜ್ಯತ್ವವನ್ನು ಸೂಚಿಸುವುದು. **ದಧಿಚಿದಿತ್ಯುಪಮಾರ್ಥೇ** (ನಿ. ೧-೪) ಮೊಸರಿನಂತೆ ಎಂಬಲ್ಲಿ ಈ ಪದವು ಉಪಮಾರ್ಥವನ್ನು ಸೂಚಿಸುವುದು. ಪ್ರಕೃತವಾದ ಋಕ್ಕಿನಲ್ಲಿ ಪೂಜ್ಯಾರ್ಥವನ್ನು ಹೇಳಿರುವರು.

**ಅರ್ಯಃ**—ಈರಯಿತಾ ಸ್ತುತೇರೀಶ್ವರೋ ವಾ । ಸ್ತುತಿಪ್ರೇರಕನು ಅಥವಾ ಸ್ತುತಿನಿರ್ಮಾಣಕ್ಕೆ ಈಶ್ವರನು ಎಂಬರ್ಥವನ್ನು ವಿವರಿಸಿದೆ. ಪ್ರಕೃತ ಋಕ್ಕಿನಲ್ಲಿ ಸ್ತೋತ್ರಮಾಡುತ್ತಿರುವ ನಾವು ಎಂದರ್ಥವು. ನಿರುಕ್ತಕಾರರು ಈ ಶಬ್ದವನ್ನು ಈಶ್ವರನಾಮಗಳಲ್ಲಿ ಪಠಿಸಿದ್ದಾರೆ (ನಿ. ೩-೧೧) ಮತ್ತು ಈ ಪದವನ್ನು ಈಶ್ವರನೆಂಬ ಅರ್ಥದಲ್ಲಿ ಪ್ರಯೋಗಿಸಿರುವ—

**ಪ್ರತತ್ತೇ ಅದ್ಯ ಶಿಪಿವಿಷ್ಟ ನಾಮಾರ್ಯಃ ಶಂಸಾಮಿ ವಯುನಾನಿ ವಿದ್ವಾನ್ ।**
**ತಂ ತ್ವಾ ಗೃಣಾಮಿ ತವಸಮತವ್ಯಾನ್ ಕ್ಷಯಂತಮಸ್ಯ ರಜಸಃ ಪರಾಕೇ ॥**

(ಋ. ಸಂ. ೭-೧೦೦-೫)

ಎಂಬ ಋಕ್ಕನ್ನುದಾಹರಿಸಿ -- **ಅರ್ಯೋಽಹಮಸ್ಮೀಶ್ವರಃ ಸ್ತೋಮಾನಾಮರ್ಯಸ್ತ್ವಮಸೀತಿ ವಾ** (ನಿ. ೫-೯) ಎಂದು ವಿವರಿಸಿದ್ದಾರೆ. ಇಲ್ಲಿ ವೃತ್ತಿಕಾರರು **ಯಸ್ಮಾದಯೋಽಹಮಸ್ಮಿ ಈಶ್ವರಃ ಸ್ತುತೀನಾಮುದೀರಣೇ ಯುಷ್ಮದ್ಗುಣಾಭಿಜ್ಞಃ ಅಥವಾ ಅರ್ಯಸ್ತ್ವಮಸಿ ಅರ್ಯ ಈಶ್ವರಃ ಮದನುಗ್ರಹಾಯ ಸಮರ್ಥಃ ।** ಸ್ತುತಿಮಾಡಲು ನಿನ್ನ ಗುಣಗಳನ್ನು ನಾನು ತಿಳಿಯಲು ಸಮರ್ಥನಾಗಿರುವೆನು. ಅಥವಾ ಅನುಗ್ರಹಮಾಡಲು ನೀನು ಸಮರ್ಥನಾಗಿದ್ದೀಯೆ ಎಂದೂ ಆಗಬಹುದೆಂದು ವಿವರಿಸಿದ್ದಾರೆ. ಪೂಜ್ಯನೂ ಎಂಬರ್ಥದಲ್ಲಿಯೂ ಈ ಪದದ ಪ್ರಯೋಗವು ಅನೇಕಕಡೆಗಳಲ್ಲಿರುತ್ತದೆ. ಉದಾಹರಣೆಗೆ—

**ಪೃಥೂ ರಥೋ ದಕ್ಷಿಣಾಯಾ ಅಯೋಜ್ಯೈನಂ ದೇವಾಸೋ ಅಮೃತಾಸೋ ಅಸ್ಥುಃ ।**
**ಕೃಷ್ಣಾದುದಸ್ಥಾದರ್ಯಾ ೩ ವಿಹಾಯಾಶ್ಚಿಕಿತ್ಸಂತೀ ಮಾನುಷಾಯ ಕ್ಷಯಾಯ ।**

(ಋ. ಸಂ. ೧-೧೨೩-೧)

ಎಂಬ ಋಕ್ಕಿನಲ್ಲಿ ಪ್ರಕರಣದಿಂದ ಗಮ್ಯವಾದ ಉಷೋದೇವತೆಯ ಗುಣಗಳನ್ನು ವರ್ಣಿಸುತ್ತಾ ಅರ್ಯಾ ಎಂಬ ವಿಶೇಷಣವಿದೆ. ಈ ಪದಕ್ಕೆ ಸಾಯಣರು **ಪೂಜ್ಯಾ** ಎಂದರ್ಥಮಾಡಿದ್ದಾರೆ. ಮತ್ತು ಇದರ ಪ್ರಯೋಗವು ಸರ್ವೇಶ್ವರ ಎಂಬರ್ಥದಲ್ಲಿಯೇ ಅಧಿಕವಾಗಿದೆ.

ವ್ಯಾಕರಣಪ್ರಕ್ರಿಯಾ

**ಉಭಾ—ಸುಪಾಂ ಸುಲುಕ್**—(ಪಾ. ಸೂ ೭-೧-೩೯) ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ. ಮುಂದಿನ ಶಬ್ದಗಳಲ್ಲಿಯೂ ಹೀಗೆಯೇ ಆಕಾರಾದೇಶ.

**ಅವಿಷ್ಟಾಮ್**—ಅವ ರಕ್ಷಣೇ ಧಾತು. ಲೋಟ್ ಪ್ರಥಮಪುರುಷ ದ್ವಿವಚನಕ್ಕೆ —ತಸ್‌ಥಸ್‌ಥಮಿಪಾಂ- (ಪಾ. ಸೂ. ೩-೪-೧೦೧) ಎಂಬುದರಿಂದ ತಾಮಾದೇಶ. **ಸಿಬ್ಬಹುಲಂ ಲೇಟಿ** (ಪಾ ಸೂ. ೩-೧-೩೪) ಎಂಬಲ್ಲಿ ಬಹುಲಗ್ರಹಣ ಸಾಮರ್ಥ್ಯದಿಂದ ಲೋಟನಲ್ಲಿಯೂ ಸಿಪ್. **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಸೂತ್ರದಿಂದ ಅದಕ್ಕೆ ಇಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಚೇತಾಮ್**—ಷಚ ಸಮವಾಯೇ. ಧಾತು. **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ವ. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಅರ್ಯಃ**—ಋ ಗತೌ. ಧಾತು. **ಅರ್ಯಃ ಸ್ವಾಮಿವೈಶ್ಯಯೋಃ ಅರ್ಯಸ್ಯಸ್ವಾಮ್ಯಾಖ್ಯಾ ಚೇತ್** (ಫಿ. ಸೂ. ೧೭) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸುದಾಸ್ತರಾಯ**—ಶೋಭನಂ ದದಾತೀತಿ ಸುದಾಃ. ಡುದಾಞ್ ದಾನೇ ಧಾತು. ಅಸುನ್ ಪ್ರತ್ಯಯ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಇದರ ಮೇಲೆ ಅತಿಶಯಾರ್ಥದಲ್ಲಿ ತರಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಮದಂತಃ**—ಮದ ತೃಪ್ತಿಯೋಗೇ. ಧಾತು. ಣಿಜರ್ಥ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾಗಿದೆ. ಲಟಿಗೆ ಶತ್ರಾದೇಶ. **ತಾಸ್ಯನುದಾತ್ತೇತ್**—ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಇಷಯೇಮ**—ಇಷು ಇಚ್ಛಾಯಾಮ್. ಧಾತು. ಣಿಜಂತದ ಮೇಲೆ ಲಿಙ್. ಉತ್ತಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ.

---

ಸಂಹಿತಾಪಾಠಃ

ಋತಂ ದಿವೇ ತದವೋಚಂ ಪೃಥಿವ್ಯಾ ಅಭಿಶ್ರಾವಾಯ ಪ್ರಥಮಂ ಸುಮೇಧಾಃ ।

ಪಾತಾಮವದ್ಯಾದ್ದುರಿತಾದಭೀಕೇ ಪಿತಾ ಮಾತಾ ಚ ರಕ್ಷತಾಮವೋಭಿಃ ॥ ೧೦ ॥

। ಪದಪಾಠಃ ।

ಋತಂ । ದಿವೇ । ತತ್ । ಅವೋಚಂ । ಪೃಥಿವ್ಯೈ । ಅಭಿಽಶ್ರಾವಾಯ । ಪ್ರಥಮಂ । ಸುಽಮೇಧಾಃ ।

ಪಾತಾಂ । ಅವದ್ಯಾತ್ । ದುಃಽಇತಾತ್ । ಅಭೀಕೇ । ಪಿತಾ । ಮಾತಾ । ಚ । ರಕ್ಷತಾಂ । ಅವಃಽಭಿಃ ॥ ೧೦ ॥

ಸಾಯಣಭಾಷ್ಯಂ.

ಋತಂ ದಿವ ಇತಿ ದ್ವೇ ದ್ಯಾವಾಪೃಥಿವೀಯೇ ಪಶೌ ಪುರೋಡಾಶಹವಿಷೋರನುವಾಕ್ಯೇ । ಅಗ್ನೀಷೋಮಾವಿತಿ ಖಂಡೇ ಸೂತ್ರಿತಂ । ಋತಂ ದಿವೇ ತದವೋಚಂ ಪೃಥಿವ್ಯಾ ಇತಿ ದ್ವೇ । ಆ. ೩-೮ । ಇತಿ ॥

ಸುಮೇಧಾಃ ಶೋಭನಪ್ರಜ್ಞೋಽಹಂ ದಿವೇ ದ್ಯುದೇವತಾಯೈ ಪೃಥಿವ್ಯೈ ಪೃಥಿವೀದೇವತಾಯೈ ತತ್ತ್ರಪ್ರೀತಿಕರಮೃತಂ ಸ್ತೋತ್ರಂ ಪ್ರಥಮಂ । ಮುಖ್ಯನಾಮೈತತ್।ಪ್ರತಮಂ ಪ್ರಕೃಷ್ಟತಮಮವೋಚಂ। ಬ್ರವೀಮಿ । ಕಿಮರ್ಥಂ । ಅಭಿಶ್ರಾವಾಯಾಭಿತಃ ಸರ್ವತಃ ಶ್ರವಣಾಯ । ಕಿಂಚ ಪಿತಾ ಪಾಲಕೋ ದ್ಯುಲೋಕೋ ಮಾತಾ ಸಸ್ಯಾದೇರ್ನಿರ್ಮಾತ್ರೀ ಪೃಥಿವೀ ಚೋಭೇ ಅವದ್ಯಾನ್ನಿಂದಿತಾದ್ದುಃಖಪ್ರಾಪಕಾದಂಹಸಃ ಸಕಾಶಾತ್ಪಾತಾಂ । ರಕ್ಷತಾಂ । ತಥಾಭೀಕೇ । ಅಂತಿಕನಾಮೈತತ್ । ಸಮೀಪ ಏವಾವೋಭಿರಭಿಮತತರ್ಪಣೈ ರಕ್ಷತಾಂ । ಪಾಲಯತಾಂ ॥

ಪ್ರತಿಪದಾರ್ಥ

**ಸುಮೇಧಾಃ**—ಶ್ರೇಷ್ಠವಾದ ಪ್ರಜ್ಞೆಯುಳ್ಳ ನಾನು । **ದಿವೇ**—ದ್ಯುದೇವತೆಯನ್ನೂ । **ಪೃಥಿವ್ಯೈ**—ಪೃಥಿವಿಯನ್ನೂ ಉದ್ದೇಶಿಸಿ । **ತತ್**—ಪ್ರೀತಿಕರವೂ । **ಪ್ರಥಮಂ**—ಅತಿಮುಖ್ಯವೂ ಆದ । **ಋತಂ**—ಸ್ತೋತ್ರವನ್ನು । **ಅಭಿಶ್ರಾವಾಯ**—ಸರ್ವತ್ರ ಶ್ರುತವಾಗುವುದಕ್ಕಾಗಿ । **ಅವೋಚಂ**—ಪಠಿಸುತ್ತೇನೆ। **ಪಾತಾ** – ಪಾಲಕನಾಡ ದ್ಯುದೇವತೆಯೂ। **ಮಾತಾ ಚ**—ಜಗನ್ನಿರ್ಮಾತ್ರಿಯಾದ ಪೃಥಿವಿಯೂ।**ಅವದ್ಯಾತ್**—ನಿಂದಿತವಾದ। **ದುರಿತಾತ್**—ಪಾಪದಿಂದ । **ಪಾತಾಂ**—(ನಮ್ಮನ್ನು) ರಕ್ಷಿಸಲಿ. (ಹಾಗೆಯೇ) । **ಅಭೀಕೇ**—ನಮ್ಮ ಸಮೀಪದಲ್ಲಿಯೇ ಇದ್ದು । **ಅವೋಭಿಃ**—ರಕ್ಷಣಾಕರ್ಮಗಳಿಂದ । **ರಕ್ಷತಾಂ**—ರಕ್ಷಿಸಲಿ.

ಭಾವಾರ್ಥ

ಶ್ರೇಷ್ಠವಾದ ಪ್ರಜ್ಞೆಯುಳ್ಳ ನಾನು ದ್ಯುದೇವತೆಯನ್ನೂ, ಪೃಥಿವಿಯನ್ನೂ ಉದ್ದೇಶಿಸಿ ಪ್ರೀತಿಕರವೂ ಅತಿ ಮುಖ್ಯವೂ ಆದ ಸ್ತೋತ್ರವನ್ನು ಸರ್ವತ್ರ ಶ್ರುತವಾಗುವುದಕ್ಕಾಗಿ ಪಠಿಸುತ್ತೇನೆ. ಪಾಲಕನಾದ ದ್ಯುದೇವತೆಯೂ ಜಗನ್ನಿರ್ಮಾತ್ರಿಯಾದ ಪೃಥಿವಿಯೂ ನಿಂದಿತವಾದ ಪಾಪದಿಂದ ನಮ್ಮನ್ನು ರಕ್ಷಿಸಲಿ. ಹಾಗೆಯೇ ನಮ್ಮ ಸಮೀಪದಲ್ಲಿಯೇ ಇದ್ದು ರಕ್ಷಣಾಕರ್ಮಗಳಿಂದ ನಮ್ಮನ್ನು ರಕ್ಷಿಸಲಿ—

## English Translation

Endowed with understanding, I repeat to Heaven and Earth this initial praise, to be heard around: may paternal (heaven) and maternal (earth) preserve us from reprehensible iniquity; and ever nigh defend us with their protection.

ವಿಶೇಷವಿಷಯಗಳು

**ಋತಂ ದಿವ** ಎಂಬ ಈ ಋಕ್ಕೂ **ಇದಂ ದ್ಯಾವಾಪೃಥಿವೀ** ಎಂಬ ಮುಂದಿನ ಋಕ್ಕೂ ಪಶುಯಾಗದಲ್ಲಿ ಪುರೋಡಾಶಹವಿಸ್ಸುಗಳನ್ನು ಅಗ್ನಿಯಲ್ಲಿ ಹೋಮಮಾಡುವಾಗ ದ್ಯಾವಾಪೃಥಿವೀದೇವತಾಕವಾದ ಪುರೋನುವಾಕ್ಯಾ ಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಗ್ನೀಷೋಮೌ** ಎಂಬ ಖಂಡದ **ಋತಂ ದಿವೇ ತದವೋಚಂ ಪೃಥಿವ್ಯಾ ಇತಿದ್ವೇ** (ಆ. ೩-೮) ಎಂಬ ಸೂತ್ರದಿಂದ ವಿವೃತವಾಗಿರುವುದು.

**ಋತಂ**—ಋತಶಬ್ದಕ್ಕೆ, ಸತ್ಯ, ಯಜ್ಞ, ಧರ್ಮ, ಮೊದಲಾದ ಅನೇಕಾರ್ಥಗಳಿದ್ದರೂ ಇಲ್ಲಿ ಭಾಷ್ಯಕಾರರು ಸ್ತೋತ್ರವೆಂದು ಅರ್ಥಮಾಡಿದ್ದಾರೆ.

**ಪ್ರಥಮಂ**—ಈ ಶಬ್ದಕ್ಕೆ ಯಾಸ್ಕರು **ಪ್ರಥಮ ಇತಿ ಮುಖ್ಯನಾಮ ಪ್ರತಮೋ ಭವತಿ** (ನಿ. ೨-೨೨) ಎಂದರೆ ಪ್ರಥಮ ಶಬ್ದಕ್ಕೆ ಮುಖ್ಯವೆಂದು ಅರ್ಥವಾಗುವುದು ಎಂದು ನಿರ್ವಚನವನ್ನು ಹೇಳಿದ್ದಾರೆ.

ಋಷಿಯು ಈ ಋಕ್ಕಿನಲ್ಲಿ ದ್ಯಾವಾಪೃಥಿವಿಗಳನ್ನು ಮಾತಾಪಿತೃಗಳೆಂದು ಸಂಬೋಧಿಸಿ ದುಃಖವನ್ನುಂಟು ಮಾಡುವ ಪಾಪದಿಂದ ತನ್ನನ್ನೂ ಕಾಪಾಡಬೇಕೆಂದು ಪ್ರಾರ್ಥಿಸಿರುವನು. ದ್ಯಾವಾಪೃಥಿವಿಗಳಲ್ಲಿ ಸಾಧಾರಣವಾಗಿ ದ್ಯುದೇವತೆಯು ತಂದೆಯೆಂದೂ ಪೃಥಿವಿಯು ತಾಯಿಯೆಂದೂ ಕರೆಯುವುದೇ ರೂಢಿಯಾಗಿದೆ.—

**ತನ್ನೋ ವಾತೋ ಮಯೋಭು ವಾತು ಭೇಷಜಂ ತನ್ಮಾತಾ ಪೃಥಿವೀ ತತ್ಪಿತಾ ದ್ಯೌಃ ।**

(ಋ. ಸಂ. ೧-೮೯-೪)

**ಉರುವ್ಯಚಸಾ ಮಹಿನೀ ಅಸಶ್ಚತಾ ಪಿತಾ ಮಾತಾ ಚ ಭುವನಾನಿ ರಕ್ಷತಃ ।**

(ಋ. ಸಂ. ೧-೧೬೦-೨)

**ಇದಂ ದ್ಯಾವಾಪೃಥಿವೀ ಸತ್ಯಮಸ್ತು ಪಿತರ್ಮಾತರ್ಯದಿಹೋ ಪಬ್ರುವೇ ವಾಂ ।**

(ಋ. ಸಂ ೧-೧೮೫-೧೧)

**ಆ ಸುಷ್ಟುತೀ ನಮಸಾ ವರ್ತಯಧ್ಯೈ ದ್ಯಾವಾ ವಾಜಾಯ ಪೃಥಿವೀ ಅಮೃಧ್ರೇ ।**
**ಪಿತಾಮಾತಾ ಮಧುವಚಾಃ ಸುಹಸ್ತಾ ಭರೇಭರೇ ನೋ ಯಶಸಾವವಿಷ್ಟಾಂ ॥**

(ಋ. ಸಂ. ೫-೪೩-೨)

ಎಂಬ ಋಕ್ಕುಗಳಲ್ಲಿಯೂ ಮತ್ತು ಋ ಸಂ. ೫-೪೩-೧೫ ; ೬-೫೧-೫ ; ೬-೭೦-೬ ; ೬-೭೨-೨ ; ೮-೯೨-೨ ; ೧೦-೫೪-೩ ; ೧೦-೮೮-೧೫ ; ಅಥ. ವೇ ೨-೨೮-೪ ; ೩-೨೩-೬ ; ೬-೪-೩ ; ೬-೧೨೦-೨ ; ೮-೭-೨, ೧೨-೧-೧೦ ಇತ್ಯಾದಿ ಋಕ್ಕುಗಳಲ್ಲೆಲ್ಲಾ ದ್ಯಾವ್ಯಾಪೃಥಿವಿಗಳನ್ನು ತಂದೆತಾಯಿಗಳೆಂದು ಸ್ತುತಿಸಲಾಗಿದೆ.

ವ್ಯಾಕರಣಪ್ರಕ್ರಿಯಾ

**ದಿವೇ—ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ (ಚತುರ್ಥೀ) ಉದಾತ್ತಸ್ವರ ಬರುತ್ತದೆ.

**ಅವೋಚಮ್**—ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು. **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲಡರ್ಥದಲ್ಲಿ ಲಙ್. ಉತ್ತಮಪುರುಷ ಏಕವಚನಾಂತರೂಪ ತಿಙಂತನಿಘಾತಸ್ವರ ಬರುತ್ತದೆ.

**ಅಭಿಶ್ರಾವಾಯ**—ಶ್ರು ಶ್ರವಣೇ ಧಾತು. ಪಚಾದಿನಿಬಂಧನವಾಗಿ ಅಚ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಉಕಾರಕ್ಕೆ ಗುಣ ಅವಾದೇಶ. ಶ್ರವ ಏವ ಶ್ರಾವಃ **ಪ್ರಜ್ಞಾದಿಭ್ಯಶ್ಚ** (ಪಾ ಸೂ. ೫-೪-೩೮) ಸೂತ್ರದಿಂದ ಸ್ವಾರ್ಥದಲ್ಲಿ ಅಣ್ ಪ್ರತ್ಯಯ. **ಯಸ್ಯೇತಿ ಚ** ಸೂತ್ರದಿಂದ ಅಕಾರಲೋಪ ಬಂದಾಗ **ಅತಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾಕಾರಕ್ಕೆ ವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

**ಸುಮೇಧಾಃ**—ಶೋಭನಂ ಮೇಧಃ ಯಸ್ಯ. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಪಾತಾಮ್**—ಪಾ ರಕ್ಷಣೇ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಅವದ್ಯಾತ್**—ವದ ವಕ್ತ್ರಾಯಾಂ ವಾಚಿ ಧಾತು. ಇದಕ್ಕೆ ನಞ್ ಉಪಪದವಾಗಿರುವಾಗ **ಅವದ್ಯ ಪಣ್ಯವರ್ಯಾಗರ್ಹ್ಯ** — (ಪಾ ಸೂ ೩-೧-೧೦೧) ಎಂಬುದರಿಂದ ಗರ್ಹಾರ್ಥದಲ್ಲಿ ಯತ್‌ಪ್ರತ್ಯಯಾಂತವಾಗಿ ನಿಪಾತಿತವಾಗಿದೆ

———— :೦: ————

**ಸಂಹಿತಾಪಾಠಃ**

ಇದಂ ದ್ಯಾವಾಪೃಥಿವೀ ಸತ್ಯಮಸ್ತು ಪಿತರ್ಮಾತರ್ಯದಿಹೋಪಬ್ರುವೇ ವಾಂ ।
ಭೂತಂ ದೇವಾನಾಮವಮೇ ಅವೋಭಿರ್ವಿದ್ಯಾಮೇಷಂ ವೃಜನಂ ಜೀರದಾನುಂ ॥ ೧೧ ॥

**ಪದಪಾಠಃ**

ಇದಂ । ದ್ಯಾವಾಪೃಥಿವೀ ಇತಿ । ಸತ್ಯಂ । ಅಸ್ತು । ಪಿತಃ । ಮಾತಃ । ಯತ್ । ಇಹ । ಉಪಬ್ರುವೇ । ವಾಂ ।
ಭೂತಂ । ದೇವಾನಾಂ । ಅವಮೇ ಇತಿ । ಅವಃಭಿಃ । ವಿದ್ಯಾಮ । ಇಷಂ । ವೃಜನಂ । ಜೀರದಾನುಂ ॥ ೧೧ ॥

**ಸಾಯಣಭಾಷ್ಯಂ**

ಹೇ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಇದಮಸ್ಮಾಭಿಃ ಕ್ರಿಯಮಾಣಂ ಸ್ತೋತ್ರಂ ಸತ್ಯಮಸ್ತು । ಅವಿತಥಂ ಭವತು । ಫಲವದ್ಭವತ್ವಿತ್ಯರ್ಥಃ । ಇದಮಿತ್ಯುಕ್ತಂ ಕಿಂ ತದಿತ್ಯಾಹ । ಹೇ ಪಿತರ್ದ್ಯೌಃ ಹೇ

ಮಾತಃ ಪೃಥಿವಿ ವಾಂ ಯುವಾಂ ಪ್ರತೀಹಾಸ್ಮಿನ್ಯಜ್ಞೇ ಯತ್ಸ್ತೋತ್ರಮುಪಬ್ರುವೇ ಉಪೇತ್ಯ ಬ್ರವೀಮಿ ತತ್ಸತ್ಯಮಸ್ತು । ದೇವಾನಾಂ ಸ್ತೋತೄಣಾಮಸ್ಮಾಕಮವಮೇ । ಅಂತಿಕನಾಮೈತತ್ । ನಿತ್ಯಸಂನಿಹಿತೇ ಯುವಾಮವೋಭಿಸ್ತರ್ಪಣೈರ್ಯುಕ್ತೇ ಭೂತಂ । ಭವತಂ । ಅವಶಿಷ್ಟಂ ಗತಂ ॥

ಪ್ರತಿಪದಾರ್ಥ

**ಪಿತಃ**—ಪಿತೃಸ್ವರೂಪನೂ । **ಮಾತಃ** —ಮಾತೃಸ್ವರೂಪಳೂ ಆದ । **ದ್ಯಾವಾಪೃಥಿವೀ**—ಎಲೈದ್ಯಾವಾಪೃಥಿವಿಗಳೇ । **ವಾಂ**—ನಿಮ್ಮಿಬ್ಬರನ್ನೂ ಉದ್ದೇಶಿಸಿ । **ಇಹ**—ಈ ಯಜ್ಞದಲ್ಲಿ । **ಯತ್**–ಯಾವ ಸ್ತೋತ್ರವನ್ನು । **ಉಪಬ್ರುವೇ** (ನಿಮ್ಮನ್ನು) ಸಮೀಪಿಸಿ ಪಠಿಸುತ್ತೇನೆಯೋ । **ಇದಂ**—ಅಂತಹ ಈ ಸ್ತುತಿಯು । **ಸತ್ಯಂ**—ಸತ್ಯರೂಪವಾದ ಫಲವನ್ನು ಕೊಡತಕ್ಕುದಾಗಿ । **ಅಸ್ತು**—ಆಗಲಿ । **ದೇವಾನಾಂ**—ಸ್ತೋತೃಗಳಾದ ನಮಗೆ । **ಅವಮೇ**—ಸಮೀಪಸ್ಥರಾದ ನೀವಿಬ್ಬರೂ । **ಅವೋಭಿಃ**—ರಕ್ಷಣೆಯ ಕರ್ಮಗಳಿಂದ ಕೂಡಿದವರಾಗಿ । **ಭೂತಂ**—ಆಗಿರಿ । **ಇಷಂ**—ಅನ್ನವನ್ನೂ । **ವೃಜನಂ**—ಬಲವನ್ನೂ । **ಜೀರದಾನುಂ**—ದೀರ್ಘಾಯುಷ್ಯವನ್ನೂ । **ವಿದ್ಯಾಮ**—(ನಾವು) ಪಡೆಯುವಂತಾಗಲಿ.

ಭಾವಾರ್ಥ

ಸಕಲ ಜಗತ್ತಿಗೂ ಮಾತಾಪಿತೃಭೂತರಾದ ಎಲೈ ದ್ಯಾವಾಪೃಥಿವಿಗಳೇ, ಈ ಯಜ್ಞದಲ್ಲಿ ನಿಮ್ಮಿಬ್ಬರನ್ನೂ ಉದ್ದೇಶಿಸಿ ಪಠಿಸತಕ್ಕ ಸ್ತುತಿಯು ನಮಗೆ ಸತ್ಯರೂಪವಾದ ಫಲವನ್ನು ಕೊಡುವಂತಹುದಾಗಲಿ. ನೀವಿಬ್ಬರೂ ಸ್ತೋತೃಗಳಾದ ನಮ್ಮ ಸಮೀಪಸ್ಥರಾಗಿಯೇ ಇದ್ದು ರಕ್ಷಣೆಯ ಕರ್ಮದಿಂದ ಕೂಡಿರಿ. ನಿಮ್ಮ ಅನುಗ್ರಹದಿಂದ ನಾವು ಅನ್ನವನ್ನೂ, ಬಲವನ್ನೂ, ದೀರ್ಘಾಯುಷ್ಯವನ್ನೂ ಪಡೆಯುವಂತಾಗಲಿ—

English Translation

May this (hymn), Heaven and Earth, be successful ; (the hymn) which, Father and Mother, I repeat to you both on this occasion ; be ever with your protection in the proximity of those who praise you, that we may obtain food, strength, and long life.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಋಷಿಯು ತಾನು ಪಠಿಸಿರುವ ಈ ಸ್ತೋತ್ರದಲ್ಲಿ ವಿವರಿಸಿರುವ ರಕ್ಷಣಾದಿಕಾರ್ಯಗಳೆಲ್ಲವೂ ಸತ್ಯವಾಗಲಿ, ದೇವತಾಸಾನ್ನಿಧ್ಯವುಂಟಾಗಲಿ, ಅನ್ನ ಬಲ ದೀರ್ಘಾಯುಸ್ಸು ಉಂಟಾಗಲಿ, ಎಂದು ದೇವತೆಗಳನ್ನು ಪ್ರಾರ್ಥಿಸಿ ಸೂಕ್ತವನ್ನು ಉಪಸಂಹಾರಮಾಡುವನು.

**ಪಿತಃ ಮಾತಃ**— ಹಿಂದಿನ ಋಕ್ಕಿನಲ್ಲಿ ಹೇಳಿರುವಂತೆ ಈ ಋಕ್ಕಿನಲ್ಲಿಯೂ ದ್ಯಾವಾಪೃಥಿವಿಗಳನ್ನು ಪಿತಃ ಮಾತಃ (ತಂದೆತಾಯಿಗಳು) ಎಂಬ ಗೌರವಸೂಚಕವಾದ ಮತ್ತು ಸಹಜವಾದ ಶಬ್ದಗಳಿಂದ ದೇವತೆಗಳನ್ನು ಭಕ್ತಿಭಾವದಿಂದ ಪ್ರಾರ್ಥಿಸಿರುವನು.

**ಯತ್ ಇಹ ಉಪಬ್ರುವೇ ವಾಂ ಇದಂ ಸತ್ಯಮಸ್ತು**–ಎಲೈ ದೇವತೆಗಳೇ, ನಾನು ನಿಮ್ಮನ್ನು ಸಮೀಪಿಸಿ ನಿಮ್ಮ ವಿಷಯವಾಗಿ ಹೇಳುವ (ಪಠಿಸುವ) ಈ ಸ್ತೋತ್ರವು ಸತ್ಯಫಲವನ್ನುಂಟುಮಾಡಲಿ ಎಂದು ತನ್ನ ಮನಸ್ಸಿನಲ್ಲಿರುವ ಭಕ್ತಿಭಾವವನ್ನೂ, ಅಭೀಷ್ಟವನ್ನೂ ಸ್ಪಷ್ಟವಾಗಿ ತಿಳಿಸಿರುವನು

**ದೇವಾನಾಂ**—ಈ ಶಬ್ದಕ್ಕೆ ಸಾಯಣರು ಸ್ತೋತ್ೄಣಾಮಸ್ಮಾಕಂ–ಸ್ತೋತ್ರಮಾಡುತ್ತಿರುವ ಯಜಮಾನರಾದಿಯಾದ ನಮ್ಮ ಎಂದು ಅರ್ಥಮಾಡಿರುವರು.

**ಅವಮೇ–ತಳಿತ್, ಅಸಾತ್**—ಮೊದಲಾದ ಹನ್ನೊಂದು ಅಂತಿಕನಾಮುಗಳ ಮಧ್ಯದಲ್ಲಿ ಅವಮೇ ಎಂಬ ಶಬ್ದವು ಪಠಿತವಾಗಿರುವುದರಿಂದ ಈ ಶಬ್ದಕ್ಕೆ ಸಮೀಪದಲ್ಲಿ ಎಂದು ಅರ್ಥವು. (ನಿ. ೩–೯)

॥ ವ್ಯಾಕರಣಪ್ರಕ್ರಿಯಾ ॥

**ದ್ಯಾವಾಪೃಥಿವೀ**—ದ್ಯೌಶ್ಚ ಪೃಥಿವೀ ಚ. ದ್ಯಾವಾಪೃಥಿವೀ. **ದಿವೋದ್ಯಾವಾ** ಎಂಬದರಿಂದ ದ್ಯಾವಾದೇಶ. ಸಂಬೋಧನಾದ್ವಿವಚನಪರವಾದಾಗ **ಸುಪಾಂ ಸುಲುಕ್**—(ಪಾ ಸೂ. ೭-೧-೩೯) ಸೂತ್ರದಿಂದ ಪೂರ್ವಸವರ್ಣದೀರ್ಘ. **ಆ ಮಂತ್ರಿತಸ್ಯ ಚ** (ಪಾ. ಸೂ ೮–೧–೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸತ್ಯಮ್**—ಸತ್ಸು ಸಾಧು ಸತ್ಯಮ್. **ಸತ್ಯಾದಶಪಥೇ** (ಪಾ. ಸೂ· ೫–೪–೬೬) ಎಂಬುದರಿಂದ ಅಂತೋದಾತ್ತವಾಗಿ ನಿಪಾತಿತವಾಗಿದೆ.

**ಉಪಬ್ರುವೇ**—ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು ಲೋಟ್ ಉತ್ತಮಪುರುಷ ಏಕವಚನಾಂತ–ರೂಪ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮–೧–೬೬) ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುವುದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. **ತಿಙಃಚೋದಾತ್ತವತಿ** (ಪಾ. ಸೂ. ೮–೧–೭೧) ಎಂಬುದರಿಂದ ಗತಿಗೆ (ಉ ಪ) ಸರ್ವಾನುದಾತ್ತಸ್ವರ ಬರುತ್ತದೆ.

**ಭೂತಮ್**—ಭೂ ಸತ್ತಾಯಾಂ ಧಾತು- **ಲೋಟ್** ಮಧ್ಯಮಪುರುಷ ದ್ವಿವಚನಕ್ಕೆ ತಮಾದೇಶ. ಬಹುಲಂ ಛಂದಸಿ ಎಂಬುದರಿಂದ ವಿಕರಣಕ್ಕೆ ಲುಕ್. **ಭೂಸುವೋಸ್ತಿಙಃ** (ಪಾ. ಸೂ. ೭–೩–೮೮) ಎಂಬುದರಿಂದ ಗುಣನಿಷೇಧ ಬರುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

:o:

## ನೂರ ಎಂಭತ್ತಾರನೆಯ ಸೂಕ್ತವು.

**ಆ ನ ಇಳಾಭಿರಿತಿ ಸಪ್ತಮಂ ಸೂಕ್ತಮೇಕಾದಶರ್ಚಮಾಗಸ್ತ್ಯಂ ತ್ರೈಷ್ಟುಭಂ ವೈಶ್ವದೇವಂ। ಆ ನೋ ವೈಶ್ವದೇವಮಿತ್ಯನುಕ್ರಾಂತಂ॥ ವಿನಿಯೋಗೋ ಲೈಂಗಿಕಃ॥**

ಅನುವಾದವು—**ಆ ನ ಇಳಾಭಿಃ** ಎಂಬ ಈ ಸೂಕ್ತವು ಇಪ್ಪತ್ತನಾಲ್ಕನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು; ವಿಶ್ವೇದೇವತೆಗಳೇ ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಆ ನೋ ವೈಶ್ವದೇವಂ** ಎಂದು ಹೇಳಿರುವುದು. ಈ ಸೂಕ್ತದ ವಿನಿಯೋಗವು ಲೈಂಗಿಕವು.

॥ ಓಂ ॥

## ಸೂಕ್ತ—೧೮೬

॥ ಮಂಡಲ—೧ ॥ ಅನುವಾಕ—೨೪ ॥ ಸೂಕ್ತ—೧೮೬ ॥
॥ ಅಷ್ಟಕ— ೨ ॥ ಅಧ್ಯಾಯ— ೫ ॥ ವರ್ಗ-೪-೫ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೧೧ ॥
॥ ಋಷಿಃ—ಅಗಸ್ತ್ಯಃ ॥
॥ ದೇವತಾ—ವಿಶ್ವೇ ದೇವಾಃ ॥
॥ ಛಂದಃ—ತ್ರಿಷ್ಟುಪ್ ॥

---

ಸಂಹಿತಾಪಾಠಃ

ಆ ನ ಇಳಾಭಿರ್ವಿದಥೇ ಸುಶಸ್ತಿ ವಿಶ್ವಾನರಃ ಸವಿತಾ ದೇವ ಏತು ।
ಅಪಿ ಯಥಾ ಯುವಾನೋ ಮತ್ಸಥಾ ನೋ ವಿಶ್ವಂ ಜಗದಭಿಪಿತ್ವೇ
ಮನೀಷಾ ॥ ೧ ॥

ಪದಪಾಠಃ

ಆ । ನಃ । ಇಳಾಭಿಃ । ವಿದಥೇ । ಸುऽಶಸ್ತಿ । ವಿಶ್ವಾನರಃ । ಸವಿತಾ । ದೇವಃ । ಏತು ।
ಅಪಿ । ಯಥಾ । ಯುವಾನಃ । ಮತ್ಸಥ । ನಃ । ವಿಶ್ವಂ । ಜಗತ್ । ಅಭಿऽಪಿತ್ವೇ । ಮನೀಷಾ ॥ ೧ ॥

ಸಾಯಣಭಾಷ್ಯಂ

ನೋ ವಿದಥೇಽಸ್ಮದೀಯೇ ಯಜ್ಞೇ ಸುಶಸ್ತಿ ॥ ಸುಪೋ ಲುಕ್ ॥ ಸುಶಸ್ತಿಭಿಃ ಶೋಭನಶಂಸನೈಃ ಸ್ತುತಿಭಿಃ ಪ್ರದೇಯೈ ರತ್ನೈಃ ಸಹ । ಯದ್ವಾ । ಇಳಾಭಿಃ । ತದಾಶ್ರಿತೇಷು ತಾಚ್ಛಬ್ದ್ಯಂ । ಭೂಮಿಸ್ಥಾನಾಭಿರ್ದೇವತಾಭಿಃ ಸಹ। ವಿಶ್ವಾನರಃ ಸರ್ವಪ್ರಾಣಿಹಿತಕಾರ್ಯಗ್ನಿಃ ಸವಿತಾ ಪ್ರೇರಕ ಆದಿತ್ಯಶ್ಚ ದೇವ ಏತು । ಆಗಚ್ಛತು । ಹೇ ಯುವಾನೋ ನಿತ್ಯತರುಣಾ ಯಜ್ಞಸ್ಯ ಮಿಶ್ರಯಿತಾರೋ ವಾ ಯೂಯಂ ನೋಽಸ್ಮಾನಭಿಪಿತ್ವೇಽಭಿಪತನೀಯೇಽಸ್ಮದ್ಯಜ್ಞೇ ಮನೀಷಾ ಮನೀಷಯಾ ಮನಸ ಈಶಿತೃತ್ವೇನ । ಸ್ವೇಚ್ಛಯೇತ್ಯರ್ಥಃ । ಅಪಿಃ ಸಂಭಾವನಾಯಾಂ । ಅಪ್ಯಸ್ಮಾನ್ಮತ್ಸಥ । ಮಾದಯಥ । ಯಥಾ ವಿಶ್ವಂ ಜಗತ್ । ಏತಚ್ಛಬ್ದಃ ಸ್ಥಾವರಸ್ಯಾಪ್ಯುಪಲಕ್ಷಣಂ । ಯದ್ವಾ । ಕೃತ್ಸ್ನಂ ಪ್ರಪಂಚಂ ಮತ್ಸಥ ತಥಾಸ್ಮಾನಪಿ । ಯದ್ವಾ । ಜಗಚ್ಛಬ್ದೋ ಯಜಮಾನರೂಪಮನುಷ್ಯವಾಚೀ । ಸರ್ವಾನಪಿ ಯಜಮಾನಾನ್ಯಥಾ ಮತ್ಸಥ ತಥೇತ್ಯರ್ಥಃ ॥

ಪ್ರತಿಪದಾರ್ಥ

ವಿಶ್ವಾನರಃ—ಸರ್ವಲೋಕಕ್ಕೂ ಹಿತಕಾರಿಯಾದ ಅಗ್ನಿಯೂ । **ಸವಿತಾ ದೇವಃ**—ದೇವತಾತ್ಮನಾದ ಸವಿತೃವೂ । **ಇಳಾಭಿಃ**—ಭೂಮಿಸ್ಥಾನಾಭಿಮಾನಿದೇವತೆಗಳೊಡನೆ ಕೂಡಿ । **ನಃ ವಿದಥೇ**—ನಮ್ಮ ಈ ಯಜ್ಞಕ್ಕೆ । **ಸುಶಸ್ತಿ**—ಪ್ರಶಸ್ಯವಾದ ರತ್ನಗಳೊಡನೆ। **ಏತು**—ಬರಲಿ। **ಯುವಾನಃ**—ನಿತ್ಯತರುಣರಾದ ಎಲೈ ವಿಶ್ವೇದೇವತೆಗಳೇ। **ಅಭಿಪಿತ್ವೇ**—ಸದ್ಯಃ ನೆರವೇರಿಸಲ್ಪಡುವ ಯಜ್ಞದಲ್ಲಿ । **ಮನೀಷಾ**—ನಿಮ್ಮ ಆತ್ಮಸಂತೋಷದಿಂದ । **ಯಥಾ ವಿಶ್ವಂ ಜಗತ್**—ಸಮಸ್ತ ಪ್ರಪಂಚವನ್ನು ಅಥವಾ ಸಮಸ್ತ ಯಜ್ಞಕರ್ತರನ್ನೂ ಸಂತೋಷಪಡಿಸುವಂತೆ । **ನಃ ಅಪಿ**—ನಮ್ಮನ್ನೂ ಸಹ । **ಮತ್ಸಥ**—ತೃಪ್ತಿಪಡಿಸಿರಿ ।

ಭಾವಾರ್ಥ

ಸರ್ವಲೋಕಕ್ಕೂ ಹಿತಕಾರಿಯಾದ ಅಗ್ನಿಯೂ, ದೇವತಾತ್ಮನಾದ ಸವಿತೃವೂ ಭೂಮಿಸ್ಥಾನಾಭಿಮಾನಿ ದೇವತೆಗಳೊಡನೆ ಕೂಡಿ ನಮ್ಮ ಈ ಯಜ್ಞಕ್ಕೆ ಪ್ರಶಸ್ಯವಾದ ರತ್ನಗಳೊಡನೆ ಬರಲಿ- ನಿತ್ಯತರುಣರಾದ ಎಲೆ ವಿಶ್ವೇದೇವತೆಗಳೇ, ಸದ್ಯಃ ನೆರವೇರಿಸಲ್ಪಡುವ ಯಜ್ಞದಲ್ಲಿ ನಿಮ್ಮ ಆತ್ಮಸಂತೋಷದಿಂದ ಸಮಸ್ತಯಜ್ಞಕರ್ತರನ್ನೂ ಸಂತೋಷಪಡಿಸುವಂತೆ ನಮ್ಮನ್ನೂ ಸಹ ತೃಪ್ತಿಪಡಿಸಿರಿ.

## English Translation

May the divine Savitri, the benefactor of all men, come benignantly to our solemniy, togther with the divinities of earth, and do you, who are (always) young, willingly present at our sacrifice, lexhilarate us, as (you exhilarate) the whole world.

ವಿಶೇಷವಿಷಯಗಳು

**ಸಜೋಷಾಃ**—ಜುಷೀ ಪ್ರೀತಿಸೇವನಯೋಃ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಯಾಸ್ಕರು ತಮ್ಮ ನಿರುಕ್ತದಲ್ಲಿ—

**ಅಜುಹ್ವಾನ ಈಡ್ಯೋ ವಂದ್ಯಶ್ಚಾಯಾಹ್ಯಗ್ನೇ ವಸುಭಿಃ ಸಜೋಷಾಃ ।**
**ತ್ವಂ ದೇವನಾಮಸಿ ಯಹ್ವ ಹೋತಾ ಸ ಏನಾನ್ ಯಕ್ಷೀಷಿತೋ ಯಜೀಯಾನ್ ॥**

(ಋ. ಸಂ. ೧೦-೧೧೦-೩)

ಎಂಬ ಋಕ್ಕನ್ನುದಹರಿಸಿ **ಸಜೋಷಾಃ-ಸಹ ಜೋಷಣಃ (ಸಮಾನಪ್ರೀತಿರ್ಭೂತ್ವಾ)** ಎಂದರೆ ಸಮಾನಪ್ರೀತಿ ಯುಕ್ತನಾಗಿ ಎಂದು ಅರ್ಥವಿವರಣೆ ಮಾಡಿರುವರು.

**ಶವಃ**—**ಶವಃ** ಎಂಬ ಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪) ಬಲನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿರುವುದರಿಂದ ಶವಃ ಎಂದರೆ ಬಲವೆಂದರ್ಥ. ಇಲ್ಲಿ ಭಾಷ್ಯಕಾರರು ಬಲವನ್ನುಂಟುಮಾಡತಕ್ಕ (ಪುಷ್ಟಿಪ್ರದ ವಾದ) ಅನ್ನವೆಂದು ಅರ್ಥಮಾಡಿರುವರು

**ವಿಶ್ವೇ ದೇವತೆಗಳು**—ಅಶ್ವಿನೌ ಮೊದಲಾದ ದೇವತಾವಿಶೇಷಗಳನ್ನು ಸೂಚಿಸುವ ಮೂವತ್ತೊಂದು ನಾಮಗಳ ಮಧ್ಯದಲ್ಲಿ ಈ ದೇವತೆಗಳ ಹೆಸರು ಪಠಿತವಾಗಿರುವುದು. ಇವರು ಪ್ರತ್ಯೇಕವಾದ ವಿಶೇಷದೇವತೆಗಳೆಂದು ಭಾಷ್ಯಕಾರರು ಹೇಳುವರು. ಕೆಲವರು ಎಲ್ಲಾ ದೇವತೆಗಳೆಂದು ಹೇಳುವರು. ಆದರೆ ವಿಶ್ವೇದೇವತೆಗಳೆಂದು ಪ್ರತ್ಯೇಕವಾದ ದೇವತೆಗಳನ್ನು ಋಷಿಗಳು ಆರಾಧಿಸುತ್ತಿದ್ದರೆಂದು ಇತರ ಸೂಕ್ತಗಳಲ್ಲಿರುವ ವಿಷಯಗಳಿಂದ ಸ್ಪಷ್ಟವಾಗಿ ಹೇಳಬಹುದು. ಈ ವಿಚಾರದಲ್ಲಿ ಯಾಸ್ಕರು ಓಮಾಸಃ ಎಂಬ ಋಕ್ಕಿಗೆ ವಿವರಣೆಯನ್ನು ಬರೆದಿರುವರು— **ಅವಿತಾರೋ ವಾವನೀಯಾ ವಾ ಮನುಷ್ಯಧೃತಃ ಸರ್ವೇ ದೇವಾ ಇಹಾಗಚ್ಛತ ದತ್ತವಂತೋ ದತ್ತವತಃ ಸುತಮಿತಿ, ತದೇತತೇಕಮೇವ ವೈಶ್ವದೇವಂ ಗಾಯತ್ರಂ ತೃಚಂ ದಶತಯೀಷು ವಿದ್ಯತೇ ಯತ್ತು ಕಿಂಚಿದ್ಬಹುದೈವತಂ ತದ್ವೈಶ್ವದೇವಾನಾಂ ಸ್ಥಾನೇ ಯುಜ್ಯತೇ ಯದೇವ ವಿಶ್ವಲಿಂಗಮಿತಿ ಶಾಕಪೂಣಿಃ** (ನಿ. ೧೨-೪೦) ಈ ಋಕ್ಕಿನ ಅರ್ಥವಿಚಾರದಲ್ಲಿ ನಾವು ಹೇಳಿರುವ ಅರ್ಥಕ್ಕೂ ಯಾಸ್ಕರ ಅರ್ಥಕ್ಕೂ ಏನೂ ವ್ಯತ್ಯಾಸವಿಲ್ಲ. ಆದರೆ ಯಾಸ್ಕರ ಅಭಿಪ್ರಾಯದಂತೆ ವಿಶ್ವೇದೇವಾಃ ಎಂದರೆ ಎಲ್ಲಾ ದೇವತೆಗಳು ಎಂದೂ, ಮತ್ತು ವಿಶ್ವೇದೇವರೆಂದರೆ ಆ ಹೆಸರಿನಿಂದ ಕರೆಯಲ್ಪಡುವ ವಿಶೇಷದೇವತೆಗಳೆಂದೂ ಶಾಕಪೂಣಿ ಎಂಬುವರ ಮತವೆಂದು ಯಾಸ್ಕರೇ ಹೇಳಿರುವರು. ಆದುದರಿಂದ ಅವರ ಕಾಲದಲ್ಲಿಯೇ ಈ ವಿಚಾರದಲ್ಲಿ ಭಿನ್ನಾಭಿಪ್ರಾಯವಿತ್ತೆಂದು ದೃಢವಾಗಿ ಹೇಳಬಹುದು. ಈಗ ಗೃಹ್ಯಾದಿಕರ್ಮಗಳಲ್ಲಿ ರೂಢಿಯಿರುವಂತೆ ಹೇಳುವುದಾದರೆ ಈ ವಿಶ್ವೇದೇವತೆಗಳು ಸಾಧಾರಣದೇವತೆಗಳ ಗುಂಪಿಗೆ ಸೇರಿದವರಲ್ಲವೆಂದೂ, ಇವರದೇ ಹದಿಮೂರು ಜನರ ವಿಶೇಷ ಗುಂಪೆಂದೂ ತಿಳಿದುಬರುವುದು. ಅದು ಹೇಗಾದರೂ ಇರಲಿ. ಋಗ್ವೇದದಲ್ಲಿ ವರ್ಣಿಸಿರುವ ವಿಶ್ವೇದೇವತೆಗಳು ಪ್ರತ್ಯೇಕವಾದ ದೇವತೆಗಳ ಗುಂಪಿಗೆ ಸೇರಿದವರೆಂದು ಹೇಳುವುದೇ ಯುಕ್ತವಾಗಿ ತೋರುವುದು

ಋಗ್ವೇದದಲ್ಲಿ ವಿಶ್ವೇದೇವತೆಗಳನ್ನು ಮಾತ್ರ ಸ್ತೋತ್ರಮಾಡಿರುವ ೬೩ ಸೂಕ್ತಗಳಿವೆ. ಇದಲ್ಲದೆ ಋ. ಸಂ. ೧-೧೬೪ ನೆಯ ಸೂಕ್ತದಲ್ಲಿ ಮೊದಲನೆಯ ೪೧ ಋಕ್ಕುಗಳು ವಿಶ್ವೇದೇತೆಗಳ ಪರವಾಗಿವೆ. ಇವುಗಳಲ್ಲೆಲ್ಲಾ— ಋ. ಸಂ. ೧೦-೧೫೫ ಈ ಸೂಕ್ತವನ್ನು ಬಿಟ್ಟು—ಉಳಿದ ಎಲ್ಲಾ ಸೂಕ್ತಗಳಲ್ಲಿಯೂ ಅನೇಕದೇವತೆಗಳನ್ನು ಎಂದರೆ ಇತರ ಸೂಕ್ತಗಳಲ್ಲಿರುವಂತೆ ಅಗ್ನಿ, ಇಂದ್ರ ಮೊದಲಾದ ದೇವತೆಗಳನ್ನು ಸ್ತುತಿಸಿರುವುದಲ್ಲದೆ ವೃಕ್ಷಗಳು, ನದಿಗಳು ಪರ್ವತಗಳು, ಗೋವುಗಳು, ಅಶ್ವಗಳು ಮೊದಲಾದುವುಗಳೂ ಪ್ರತಿಪಾದಿಸಲ್ಪಟ್ಟಿವೆ. ಇವುಗಳಲ್ಲದೆ ಇತರ ದೇವತಾಕವಾದ ಸೂಕ್ತಗಳಲ್ಲಿ ಅನೇಕ ಕಡೆ ಒಟ್ಟು ೧೭ ಋಕ್ಕುಗಳು ವಿಶ್ವೇದೇವತಾಕವಾಗಿವೆ. ಈ ಸ್ಥಳಗಳಲ್ಲೆಲ್ಲಾ ವಿಶ್ವೇದೇವತೆಗಳೇ ಈ ಋಕ್ಕುಗಳಿಗೆ ದೇವತೆಗಳೆಂದು ಹೇಳಲ್ಪಟ್ಟಿದೆ. ಮತ್ತು ಋ. ಸಂ. ೧೦-೧೨೫-೧ ನೆಯ ಮಂತ್ರದಲ್ಲಿ ವಿಶ್ವೇದೇವತೆಗಳ ಜೊತೆಯಲ್ಲಿ ವಸುರುದ್ರಾದಿತ್ಯರೂ ಸೇರಿದ್ದಾರೆ.

ವಾಜಸನೇಯ ಸಂಹಿತೆಯ (ಶುಕ್ಲಯಜುರ್ವೇದ) ೨-೨೨ ನೆಯ ಮಂತ್ರದಲ್ಲಿ ಇಂದ್ರನು, ಆದಿತ್ಯರು, ವಸುಗಳು, ಮರುತ್ತು ವಿಶ್ವೇದೇವತೆಗಳೊಡನೆ ಸೇರಬೇಕೆಂದು ಪ್ರಾರ್ಥಿಸಲ್ಪಟ್ಟಿರುವರು. ಅದೇ ಸಂಹಿತೆಯ ೩೩-೪೫ ರಿಂದ ೪೭ ಮಂತ್ರಗಳಲ್ಲಿ ಇಂದ್ರ, ವಾಯು ಮತ್ತು ಇತರ ದೇವತೆಗಳು ವಿಶ್ವೇದೇವತೆಗಳ ಜೊತೆಯಲ್ಲಿ ಸ್ತುತಿಸಲ್ಪಟ್ಟಿದ್ದಾರೆ.

ಅಥರ್ವಣವೇದದ ೨೦-೬೨-೬ ನೆಯ ಮಂತ್ರದಲ್ಲಿ ವಿಶ್ವೇದೇವತೆಗಳನ್ನು ಏಕವಚನದಲ್ಲಿ ಸೂಚಿಸಲಾಗಿದೆ ಮತ್ತು ವಿಶ್ವೇದೇವತೆಗಳ ಪರವಾದ ಅನೇಕ ಸೂಕ್ತಗಳು ಅಥರ್ವಣವೇದದಲ್ಲಿವೆ.

ಬ್ರಾಹ್ಮಣಗಳಲ್ಲಿಯೂ ಸಹ ವಿಶ್ವೇದೇವತೆಗಳ ಹೆಸರು ಅಲ್ಲಲ್ಲಿ ಸೂಚಿತವಾಗಿದೆ. ಕೌಷೀತಕೀ ಬ್ರಾಹ್ಮಣದ ೯–೧೪, ಗೋಪಥ ಬ್ರಾಹ್ಮಣದ ೧–೨೦ ನೆಯ ಮಂತ್ರಗಳಲ್ಲಿ ಎಲ್ಲಾ ದೇವತೆಗಳನ್ನೂ ವಿಶ್ವೇದೇವತೆಗಳೆಂಬ ಹೆಸರಿನಿಂದಲೇ ಸಂಬೋಧನೆಮಾಡಲಾಗಿದೆ. ಶತಪಥ ಬ್ರಾಹ್ಮಣದ ೩–೯–೨–೬ ನೆಯ ಮಂತ್ರದಲ್ಲಿ ವಿಶ್ವೇದೇವತೆಗಳ ಸೂರ್ಯನ ಕಿರಣಗಳೆಂದೂ, ಶ. ಬ್ರಾ. ೧೪–೨–೨–೩೭ ರಲ್ಲಿ ಪ್ರಾಣಾದಿವಾಯುಗಳೆಂದೂ ಶ. ಬ್ರಾ. ೬–೧–೧–೪೨ ರಲ್ಲಿ ಯಜ್ಞಕರ್ಮಗಳೆಂದೂ, ಶ. ಬ್ರಾ. ೨–೪–೪–೧೩ ರಲ್ಲಿ ಇಂದ್ರಾಗ್ನಿಗಳೆಂದೂ ಕರೆಯಲ್ಪಟ್ಟದಾರೆ. ತೈತ್ತಿರೀಯ ಆರಣ್ಯಕದಲ್ಲಿ (ತೈ. ಆ. ೫–೧–೬) ವಿಶ್ವೇದೇವತೆಗಳ ಜೊತೆಯಲ್ಲಿ ಇಂದ್ರಾಗ್ನಿಗಳು ಸ್ತುತಿಸಲ್ಪಟ್ಟದಾರೆ.

ಪುರಾಣಗಳಲ್ಲಿ ಕೆಲವು ಕಡೆ ಈ ವಿಶ್ವೇದೇವತೆಗಳು ದಿಕ್ಕುಗಳಿಗೆ ಅಧಿಪತಿಗಳೆಂದು ಹೇಳಲ್ಪಟ್ಟದೆ. ನಿರುಕ್ತದಲ್ಲಿ (ನಿ. ೧೨-೩೯) ವಿಶ್ವೇದೇವತೆಗಳೆಂದರೆ ಎಲ್ಲಾ ದೇವತೆಗಳೂ ಎಂದಿದೆ. ನಿರುಕ್ತದ ಭಾಷ್ಯಕಾರರಾದ ದುರ್ಗಾಚಾರ್ಯರೆಂಬುವರು ವಿಶ್ವೇದೇವತೆಗಳೆಂದರೆ ಸೂರ್ಯನ ಕಿರಣಗಳೆಂದು ಅರ್ಥಮಾಡಿದಾರೆ. ನಿರುಕ್ತಕಾರರಾದ ಯಾಸ್ಕರು ವಿಶ್ವೇದೇವತೆಗಳೆಂದರೆ ಸಮಸ್ತ ದೇವತೆಗಳು ಎಂದು ತಮ್ಮ ಅಭಿಪ್ರಾಯವನ್ನು ಹೇಳಿರುವುದಲ್ಲದೆ ಶಾಕಪೂಣಿ ಎಂಬುವರ ಅಭಿಪ್ರಾಯವನ್ನು ಸೂಚಿಸಿರುವರು. ಶೌನಕರು ತಮ್ಮ ಬೃಹದ್ದೇವತಾ ಎಂಬ ಗ್ರಂಥದಲ್ಲಿ (ಬೃ. ದೇ. ೨-೧೪೮ ರಿಂದ ೧೩೪ ಶ್ಲೋಕಗಳು) ವಿಶ್ವೇದೇವತೆಗಳ ವಿಷಯವಾಗಿ ಹೇಳುವಾಗ, ವಿಶ್ವೇದೇವಾಃ ಎಂದರೆ ಸಮಸ್ತದೇವತೆಗಳು ಎಂದು ಯಾಸ್ಕರು ಮತ್ತು ಶಾಂಡಿಲ್ಯರು ಅಭಿಪ್ರಾಯಪಡುವರೆಂದು ಹೇಳಿದಾರೆ. ಶೌನಕರ ಮತವೂ ಅದೇ ರೀತಿ ಇದೆ.

ಸಾಯಣಾಚಾರ್ಯರು ಈ ಋಕ್ಕಿಗೆ ವ್ಯಾಖ್ಯಾನಮಾಡುವಾಗ ವಿಶ್ವೇದೇವರೆಂದರೆ ಅಶ್ವಿನೀದೇವತೆಗಳೇ ಮೊದಲಾದ ಮೂವತ್ತೊಂದು ಮಂದಿ ದೇವತೆಗಳು ಸೇರಿ ವಿಶ್ವೇದೇವತೆಗಳೆಂದು ಕರೆಯಲ್ಪಡುವರೆಂಬುದಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದಾರೆ.

ಪಾಶ್ಚಾತ್ಯಪಂಡಿತರಲ್ಲಿ Langlois, Kaegi, Hopkins ಎಂಬುವರು ವಿಶ್ವೇದೇವತೆಗಳೆಂದರೆ ಸಮಸ್ತದೇವತೆಗಳು ಎಂದೂ Wilson, Griffith, Macdonell ಎಂಬುವರು ವಿಶ್ವೇದೇವತೆಗಳೆಂದರೆ ಸಮಸ್ತದೇವತೆಗಳು ಅಥವಾ ವಿಶ್ವೇದೇವತೆಗಳೆಂಬ ಪ್ರತ್ಯೇಕವಾದ ದೇವತೆಗಳ ಸಮೂಹ ಎಂಬ ಎರಡು ವಿಧವಾದ ಅರ್ಥವನ್ನೂ ಅನುಮೋದಿಸಿರುವರು.

ಮುಖ್ಯಾಭಿಪ್ರಾಯವೇನೆಂದರೆ—ಪೂರ್ವದಲ್ಲಿ ಎಂದರೆ ಬಹುಪ್ರಾಚೀನಕಾಲದಲ್ಲಿ ವಿಶ್ವೇದೇವತೆಗಳೆಂದರೆ ಸಮಸ್ತದೇವತೆಗಳೆಂಬ ಅರ್ಥವೇ ರೂಢಿಯಲ್ಲಿದ್ದು, ಕಾಲಕ್ರಮೇಣ ವಿಶ್ವೇದೇವರೆಂದರೆ, ಆ ಹೆಸರಿನ ಪ್ರತ್ಯೇಕ ದೇವತೆಗಳ ಸಮೂಹವೆಂದು ಭಾವಿಸುವುದು ಬಳಕೆಗೆ ಬಂತೆಂದೂ ಹೇಳಬಹುದು. ಅನೇಕ ಬ್ರಾಹ್ಮಣಗಳಲ್ಲಿಯೂ ಪುರಾಣಗಳಲ್ಲಿಯೂ ವಿಶ್ವೇದೇವತೆಗಳೇ ಒಂದು ಪ್ರತ್ಯೇಕವಾದ ದೇವತೆಗಳ ಗುಂಪೆಂದು ಸೂಚಿಸಲ್ಪಟ್ಟದೆ. ಆದರೆ ಯಾಸ್ಕರ ಕಾಲದಲ್ಲಿಯೂ ಸಹ ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿತ್ತೆಂದು ಯಾಸ್ಕರ ನಿರುಕ್ತದಿಂದಲೇ ತಿಳಿದುಬರುತ್ತದೆ.

ಋಗ್ವೇದದಲ್ಲಿ ವಿಶ್ವೇದೇವತೆಗಳ ಪರವಾದ ಋಕ್ಕುಗಳು ಅಲ್ಲಲ್ಲಿ ಬರುವುದಲ್ಲದೆ ವಿಶ್ವೇದೇವತಾಕವಾದ ಪ್ರತ್ಯೇಕ ಸೂಕ್ತಗಳೇ ೫೮ ಇರುವವು ಋ ಸಂ. ಪ್ರಥಮಮಂಡಲದಲ್ಲಿ ೧೪, ೮೯, ೯೦, ೧೦೫, ೧೦೬, ೧೦೭, ೧೨೨,

೧೨೨ ನೇ ಸೂಕ್ತಗಳು ; ಎರಡನೆಯ ಮಂಡಲದಲ್ಲಿ - ೨೯, ೩೧ ನೆಯಸೂಕ್ತಗಳು ; ಮೂರನೆಯ ಮಂಡಲದಲ್ಲಿ–೫೪ ನೆಯ ಸೂಕ್ತವು ; ನಾಲ್ಕನೆಯ ಮಂಡಲದಲ್ಲಿ—೫೫ ನೆಯ ಸೂಕ್ತವು ; ಐದನೆಯ ಮಂಡಲದಲ್ಲಿ—೪೧, ೪೨, ೪೩, ೪೪, ೪೫, ೪೬, ೪೮, ೪೯, ೫೦, ೫೧ ; ಆರನೆಯ ಮಂಡಲದಲ್ಲಿ–೪೯, ೫೦, ೫೧, ೫೨ ; ಏಳನೆಯ ಮಂಡಲದಲ್ಲಿ ೩೫, ೩೬, ೩೭, ೩೯, ೪೦, ೪೨, ೪೩ ; ಎಂಟನೆಯ ಮಂಡಲದಲ್ಲಿ-೨೭, ೨೮, ೨೯, ೩೦, ೫೮, ೮೩ ; ಹತ್ತನೆಯ ಮಂಡಲದಲ್ಲಿ-೩೧, ೩೨, ೩೫, ೩೬, ೬೪, ೬೫, ೬೬, ೯೨, ೯೩, ೧೦೦, ೧೦೧, ೧೦೯, ೧೧೪, ೧೨೬, ೧೨೮, ೧೩೭, ೧೪೧, ೧೫೭, ೧೮೧, ಎಂಬ ಸೂಕ್ತಗಳು ವಿಶ್ವೇದೇವತಾಕವು.

ವಿದಥೇ—ಯಜ್ಞೇ । ಯಜ್ಞದಲ್ಲಿ ಎಂದರೆ ಯಜ್ಞಸ್ಥಾನದಲ್ಲಿ ಎಂದರ್ಥ. **ವೇದಯಿತೃಷು ಸ್ತೋತೃಷು ನಿಮಿತ್ತಭೂತೇಷು** ಎಂಬುದರಿಂದ ವಿದಥ ಶಬ್ದದ ನಿರ್ವಚನವನ್ನು ತೋರಿಸಿದೆ. ಇಲ್ಲಿ ನಿರುಕ್ತಕಾರರ ನಿರ್ವಚನಗಳಲ್ಲಿ ಒಂದನ್ನು ಮಾತ್ರ ಅನುಸರಿಸಿದೆ. **ಯಜ್ಞಃ, ವೇನಃ** ಇತ್ಯಾದಿ ಯಜ್ಞನಾಮಗಳಲ್ಲಿ ಪಠಿತವಾಗಿದೆ. (ನಿ ೩-೧೯), ಮತ್ತು **ವಿಧಥಾನಿ ವೇದನಾನಿ** । ವಿದಥ ಶಬ್ದಕ್ಕೆ ಜ್ಞಾನವೆಂದರ್ಥವೆಂಬುದನ್ನು ತೋರಿಸಲು (ನಿ. ೬-೭).

**ಹೋತಾ ದೇವೋ ಅಮರ್ತ್ಯಃ ಪುರಸ್ತಾದೇತಿ ಮಾಯಯಾ । ವಿದಥಾನಿ ಪ್ರಚೋದಯನ್ ॥**

(ಋ. ಸಂ. ೩-೨೭-೭)

ಎಂಬ ಋಕ್ಕನ್ನುದಹರಿಸಿ ಅಲ್ಲಿ ಜ್ಞಾನಾರ್ಥಕವಾದ ವಿದ್ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತಿಳಿಸಿದ್ದಾರೆ. ಇಲ್ಲಿ ಸಾಯಣರು **ವಿದಥಾನಿ ವೇದಿತವ್ಯಾನಿ ಕರ್ಮಾಣಿ** । ಅರಿಯಲ್ಪಡಬೇಕಾದ ಕರ್ಮಗಳು ಎಂದರ್ಥಮಾಡಿದ್ದಾರೆ. ಈ ಪದಕ್ಕೆ ನಿಷ್ಕೃಷ್ಟವಾದ ಅರ್ಥವನ್ನು ಹೇಳಬೇಕೆಂದು ಕೆಲವು ಪಂಡಿತರು ಪ್ರಯತ್ನಿಸಿ ಎಲ್ಲರೂ ತಮ್ಮ ವೈಯಕ್ತಿಕವಾದ ಅಭಿಪ್ರಾಯವನ್ನು ತಿಳಿಸಿರುವರು. ಒಬ್ಬೊಬ್ಬರೂ ಒಂದೊಂದು ವಿಧವಾದ ಈ ಪದದ ನಿರ್ವಚನವನ್ನು ತೋರಿಸಿ ಬೇರೆಬೇರೆ ಅರ್ಥಮಾಡಿರುವುದರಿಂದ ಆ ಎಲ್ಲಾ ಅರ್ಥಗಳೂ ಸಂದರ್ಭಾನುಸಾರವಾಗಿ ಹೊಂದಿಕೊಳ್ಳುವುವು ಎಂದು ತಿಳಿಯುತ್ತದೆ. Max Muller ಎಂಬ ಪಂಡಿತನು,

**ಅಮಾದೇಷಾಂ ಭಿಯಸಾ ಭೂಮಿರೇಜತಿ ನೌರ್ನ ಪೂರ್ಣಾ ಕ್ಷರತಿ ವ್ಯಥಿರ್ಯತೀ।**
**ದೂರೇದೃಶೋ ಯೇ ಚಿತಯಂತ ಏಮಭಿರಂತರ್ಮಹೇ ವಿದಥೇ ಯೇತಿರೇ ನರಃ ॥**

(ಋ. ಸಂ. ೫-೫೯-೨)

ಎಂಬ ಋಕ್ಕನ್ನು ವಿವರಿಸುವಾಗ ವಿದಥೇ ಎಂಬ ಪದಕ್ಕೆ (ಯಜ್ಞ)ಸಭೆ(the great sacrificial assembly) ಯೆಂದು ಅರ್ಥಮಾಡಿದ್ದಾನೆ. ಮತ್ತು ಇದರ ವಿವರಣೆಯನ್ನು ಕೊಡುತ್ತಾ ಇತರ ಜರ್ಮನ್ ಪಂಡಿತರು ಈ ಪದಕ್ಕೆ ಹೇಳಿರುವ ಅರ್ಥವನ್ನೂ ಇದರ ಮೂಲಧಾತುವಿನ ವಿಷಯದಲ್ಲಿ ಅವರ ಅಭಿಪ್ರಾಯಗಳನ್ನೂ ಕೊನೆಗೆ Vidatha may have been the name of a sacred act. as Veda is of sacred knowledge. But the fact remains that it is best translated by assembly, particularly an assembly for sacrificial purposes.

(Sacred Books of the East. Vol. 32 p. 349-50)

ಪವಿತ್ರವಾದ ಜ್ಞಾನವೆಂಬುದು ವೇದಶಬ್ದಾರ್ಥವಾಗುವಂತೆ ಪವಿತ್ರವಾದ ಕ್ರಿಯೆಯೆಂಬುದು ವಿದಥಶಬ್ದಾರ್ಥವೆಂದು ಕೆಲವರು ಹೇಳಿರುವರು. ಆದರೆ **ಯಜ್ಞಸಭೆಯೆಂಬುದೇ** ಈ ಪದದ ಮುಖ್ಯಾರ್ಥವೆಂಬುದರಲ್ಲಿ ಸಂಶಯವಿಲ್ಲವೆಂದು ನಿಷ್ಕರ್ಷಿಸಿದ್ದಾನೆ.

Hermann Oldenberg ಎಂಬ ಪಂಡಿತನು Vedic Hymns ಎಂಬ ಗ್ರಂಥದಲ್ಲಿ ಋ. ಸಂ. ೧-೩೧-೬ನೇ ಋಕ್ಕಿನಲ್ಲಿರುವ ವಿದಥೇ ಎಂಬ ಪದಕ್ಕೆ ಅರ್ಥವನ್ನು ವಿವರಿಸುವಾಗ ತನ್ನ ಅಭಿಪ್ರಾಯವನ್ನು ಈರೀತಿ ತಿಳಿಸಿದ್ದಾನೆ. ಅವನ ವಾಕ್ಯಗಳನ್ನು ಉದಹರಿಸಿ ಅನಂತರ ಅವನ ಅಭಿಪ್ರಾಯಗಳನ್ನು ತಿಳಿಸಲಾಗುತ್ತದೆ.

On the derivation and meaning of ವಿದಥ Various opinions have been pronounced in the last years which have been collected by prof. Max Muller in his note on R. V. V-59-2 (S. B. E. Vol. 32 p. 349 sq.) without trying to discuss here all different theories, I proceed to state my own opinion-

I propose to derive ವಿದಥ from ವಿ+ಧಾ ; The Verb ವಿ+ಧಾ means 'to distribute, to arrange, to ordain;' thus the original meaning of ವಿದಥ must be like the meaning of ವಿಧಾನ, 'distribution, disposition, ordinance ; In V. 3-6, we read ವಿದಥೇಷು ಅಹ್ನಾಂ : this phrase receives its explanation by VII. 66-11 we may call attention also to VI. 51-2 within the sphere of the Vedic poets' thoughts, the most prominent example of something most artificially ವಿಹಿತ was the secrifice. ಯಜ್ಞ and ವಿದಥ, Sacrifice and ordinance became nearly synonymous. (III 3-3) .... .... .... .... .... finally ವಿದಥ seems to mean 'the act of disposing of any business' or the like ; this meaning appears, I believe, in some passages like the well-known phrase, ಬೃಹದ್ವದೇಮ ವಿದಥೇ ಸುವೀರಾ:—may we with Valiant men mightily raise our voice in the determining of ordinances. Thus the word ವಿದಥ and ಸಭಾ approach each other in their meaning; a person influential in council is called both ವಿದಥ್ಯ and ಸಭೇಯ ".

(Sacred Books of the East. Vol. 46. p. 27)

ಈ ಲೇಖನದ ಮುಖ್ಯ ಸಾರಾಂಶವೇನೆಂದರೆ,

ವಿದಥ ಶಬ್ದವು ಧಾ ಧಾತುವಿಗೆ ವಿ ಎಂಬ ಉಪಸರ್ಗವನ್ನು ಸೇರಿಸುವುದರಿಂದ ನಿಷ್ಪನ್ನವಾಗಿದೆ. ವಿಧಾ ಎಂದರೆ ಹಂಚು, ನಿಯಮಿಸು ಎಂದರ್ಥವಾಗುತ್ತದೆ. ನಿಯಮಪಾಲನೆಯೆಂದೂ ಅರ್ಥವಾಗಬಹುದು. ವಿದಥ ಮತ್ತು ವಿಧಾ ಈ ಎರಡು ಪದಗಳ ಅರ್ಥಗಳೂ ಒಂದೇ ಎಂಬ ಅಂಶವನ್ನು ,

ವಯಮಗ್ನೇ ವನುಯಾಮ ತ್ವೋತಾ ವಸೂಯವೋ ಹವಿಷಾ ಬುಧ್ಯಮಾನಾಃ ।
ವಯಂ ಸಮರ್ಯೇ ವಿದಥೇಷ್ವಹ್ನಾಂ ವಯಂ ರಾಯಾ ಸಹಸಸ್ಪುತ್ರ ಮರ್ತಾನ್ ॥

(ಋ. ಸಂ. ೫-೩-೬)

ಎಂಬ ಋಕ್ಕಿನಲ್ಲಿರುವ ವಿದಥೇಷ್ವಹ್ನಾಂ ಎಂಬ ಪದಗಳಿಗೂ,

ವಿ ಯೇ ದಧುಃ ಶರದಂ ಮಾಸಮಾದಹರ್ಯಜ್ಞಮಕ್ತುಂ ಚಾದೃಚಂ ।
ಅನಾಪ್ಯಂ ವರುಣೋ ಮಿತ್ರೋ ಅರ್ಯಮಾ ಕ್ಷತ್ರಂ ರಾಜಾನ ಆಶತ ॥

(ಋ. ಸಂ.೭-೬೬-೧೧)

ಎಂಬ ಋಕ್ಕಿನಲ್ಲಿರುವ ವಿ—ದಧುಃ ಎಂಬ ಪದಗಳಿಗೂ ಇರತಕ್ಕ ಸಮಾನಾರ್ಥದಿಂದ ತಿಳಿಯುತ್ತದೆ. ಮತ್ತು, ವಿಹಿತ ವಿದಥ ಎಂಬ ಪದಗಳ ಅರ್ಥಗಳೂ ಒಂದೇ ಆಗಿ, ಶಾಸ್ತ್ರವಿಹಿತವಾದ ಯಜ್ಞವೇ ವಿದಥವೆಂಬ ಹೆಸರಿನಿಂದ

ಕರೆಯಲ್ಪಟ್ಟಿತು. ಯಜ್ಞ ಅಥವಾ ಯಜ್ಞಸಭೆ ಎಂಬ ಅರ್ಥವು ಕೊನೆಯಲ್ಲಿ ಉಳಿಯಿತು ಎಂದು ಈ ಪಂಡಿತನು ವಿವರಿಸಿದ್ದಾನೆ.

ವಿದಥವೆಂದರೆ ಸಭೆಯೆಂದಾಗುವುದೇ ಇಲ್ಲ. ವೈಯಕ್ತಿಕವಾದ ಗೃಹ ಎಂಬರ್ಥವೇ ಸರಿಯಾದುದು ಎಂದು Bloomfield ಎಂಬ ಪಂಡಿತನು Max Muller ಮತ್ತು Oldenberg ಎಂಬಿಬ್ಬರೂ ಹೇಳಿರುವ ಅರ್ಥದಲ್ಲಿರುವ ದೋಷಗಳನ್ನು ತೋರಿಸಿದ್ದಾನೆ. ಅವನ ಅಭಿಪ್ರಾಯವು ಈ ರೀತಿಯಿದೆ.—

The word ವಿದಥ contains the root ವಿದ್ in its ordinary sense of 'get, acquire'. Instead of this, the radical idea underlying the word was generally felt to be 'come to-gether,' 'assemble'. Again, the false start from the notion of 'assemblage' resulted in an approximation of the word to other words for assemblage, especially to ಸಭಾ with which ವಿದಥ was almost identified. We shall see that there are decided points of contact between the words ವಿದಥ and ಸಭಾ but the contact is that of extreme opposites in a way. ವಿದಥ refers to home matters; ಸಭಾ generally to public matters.

In the interpretation of a term that figures prominently in the mystic—hieratic sphere of the Veda it is peculiarly necessary to search for its uses outside of that sphere, if there be such uses. In X—85-26, the bride after the wedding ceremoney proper, as the newly married couple are about to travel to their new home is addressed with the words "May Pushan taking thee by the hand lead thee home, may the Aswins lead thee forth on their car. Go to your house in order that thou mayst be mistress of the house".

Now ವಿದಥ here, can but have one meaning, 'household' or something very like it. It certainly cannot refer to anything in the nature of a public gathering similar to the ಸಭಾ. In the phrase ಬೃಹದ್ವದೇಮ ವಿದಥೇ ಸುವೀರಾಃ (R. V. 2-1-16), the word ಸುವೀರಾಃ refers to family relations not to public life.

Thus far, it may not be doubted, the word appears in the language of ordinary life. But it is found to a very much greater extent in the sacerdotal sphere: indeed, as all interpreters from Yaska on, have agreed, it often has a meaning very close to Yagna 'Sacrifice' itself. This is as it should be. In as much as the sacrifice is a private, home affair, it is very natural ವಿದಥ the house, the premises, the establishment, should figure prominently in connection with the sacrifice. ಈ ಲೇಖನದ ಸಾರಾಂಶವೇನೆಂದರೆ ವಿದಥ ಶಬ್ದಕ್ಕೆ ಸಭಾ ಎಂಬ ಅರ್ಥವನ್ನು ಕೆಲವರು ಹೇಳಿರುವುದು ಸರಿಯಲ್ಲ. ಈ ಶಬ್ದಕ್ಕೆ ವೈಯಕ್ತಿಕವಾದ ಗೃಹವೆಂದರ್ಥ. ಈ ಅರ್ಥದಲ್ಲಿಯೇ ಈ ಪದದ ಪ್ರಯೋಗವಿರುವುದನ್ನು ಅನೇಕ ಕಡೆಗಳಲ್ಲಿ ಗಮನಿಸಬಹುದು. ಉದಾಹರಣೆಗೆ—

ಪೂಷಾ ತ್ವೇತೋ ನಯತು ಹಸ್ತಗೃಹ್ಯಾಶ್ವಿನಾ ತ್ವಾ ಪ್ರ ವಹತಾಂ ರಥೇನ ।

**ಗೃಹಾನ್ ಗಚ್ಛ ಗೃಹಪತ್ನೀ ಯಥಾಸೋ ವಶಿನೀ ತ್ವಂ ವಿದಥಮಾ ವದಾಸಿ ||**

(ಋ. ಸಂ. ೧೦-೮೫-೨೬)

ಎಂಬ ಋಕ್ಕಿನಲ್ಲಿ ಪೂಷನೂ, ಅಶ್ವಿನೀದೇವತೆಗಳೂ ನಿನ್ನನ್ನು ಪತಿಗೃಹಕ್ಕೆ ಕ್ಷೇಮದಿಂದ ಕರೆದೊಯ್ಯಲಿ ಎಂಬರ್ಥ ವಿರುವುದು ವಿಶದವಾಗಿದೆ. ಅಲ್ಲದೆ,

**ಯೇ ಸ್ತೋತೃಭ್ಯೋ ಗೋಅಗ್ರಾಮಶ್ವಪೇಶಸಮಗ್ನೇ ರಾತಿಮುಪಸೃಜಂತಿ ಸೂರಯಃ |**
**ಅಸ್ಮಾಞ್ಚ ತಾಂಶ್ಚ ಪ್ರ ಹಿ ನೇಷಿ ವಸ್ಯ ಆ ಬೃಹದ್ವದೇಮ ವಿದಥೇ ಸುವೀರಾಃ ||**

(ಋ. ಸಂ. ೨-೧-೧೬)

ಎಂಬ ಋಕ್ಕಿನಲ್ಲಿಯೂ ಸಹ **ಸುವೀರಾಃ** ಎಂದರೆ **ಶೋಭನಪುತ್ರಾದಿಸಹಿತಾಃ** ಎಂದರ್ಥಮಾಡಿರುವುದರಿಂದ ಗೃಹವೆಂದರ್ಥ. ಆದರೆ ಗೃಹದಲ್ಲಿ ಯಜ್ಞಕಾರ್ಯವು ನಡೆಯುವುದರಿಂದ ಪ್ರಕೃತದಲ್ಲಿ **ಯಜ್ಞಗೃಹ**ವೆಂದಾಗುತ್ತದೆ. ಯಾಸ್ಕಾದಿಗಳು **ಯಜ್ಞ**ಪರ್ಯಾಯಶಬ್ದವೆಂದು ಹೇಳಿರುವುದರಲ್ಲಿಯೂ ಇದೇ ಅರ್ಥವಿದೆ. ಹೀಗೆಂಬುದಾಗಿ ಪಾಶ್ಚಾತ್ಯರಲ್ಲಿ ಅನೇಕ ಪಂಡಿತರು ತಮ್ಮ ತಮ್ಮ ವೈಯಕ್ತಿಕವಾದ ಅಭಿಪ್ರಾಯಗಳನ್ನು ಕೊಟ್ಟಿದ್ದಾರೆ.

ಹೀಗೆ ಗೃಹ, ಯಜ್ಞ, ಸಭಾ ಎಂಬ ಬೇರೆ ಬೇರೆ ಅರ್ಥಗಳೆಲ್ಲವೂ ಹೊಂದಿಕೊಳ್ಳುವುದರಿಂದ ಇವುಗಳಲ್ಲಿ ಯಾವುದೂ ತಪ್ಪೆಂದು ಹೇಳುವುದಕ್ಕಾಗುವುದಿಲ್ಲ. ಸಾಯಣಭಾಷ್ಯದಲ್ಲಿಯೇ ಈ ಅರ್ಥಗಳೆಲ್ಲವೂ ಇವೆ. ಉದಾಹರಣೆಗೆ ೧೦-೮೫-೨೬ ಮತ್ತು ೨೭; ೭-೮೪-೩ ಇತ್ಯಾದಿಋಕ್ಕುಗಳಲ್ಲಿ ಗೃಹವೆಂದೂ, ೧೦-೧೦೦-೬, ೧೦-೧೧೦-೭ ಇತ್ಯಾದ್ಯನೇಕ ಋಕ್ಕುಗಳಲ್ಲಿ ಯಜ್ಞವೆಂದೂ ಅರ್ಥಮಾಡಿದ್ದಾರೆ. ಯಜ್ಞಗೃಹವೆಂದೂ ಮತ್ತು ಯಜ್ಞ ಸಭಾ ಎಂದೂ ಸಹ ಅರ್ಥವಾಗುತ್ತದೆ

ಇಳಾಭಿಃ—ಇಳಾ ಶಬ್ದವು ಪೃಥಿವೀನಾಮಗಳಲ್ಲಿಯೂ (ನಿ. ೨-೫) ವಾಙ್ನಾಮಗಳಲ್ಲಿಯೂ (ನಿ. ೨-೨೩) ಅನ್ನನಾಮಗಳಲ್ಲಿಯೂ (ನಿ ೩-೯) ಗೋನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿರುವುದರಿಂದ ಇಳಾ ಶಬ್ದಕ್ಕೆ ಪೃಥಿವೀ, ವಾಕ್ಕು, ಅನ್ನ, ಗೋವು ಎಂದು ಬೇರೆ ಬೇರೆ ಅರ್ಥಗಳಿರುವುವು ಇಲ್ಲಿ ಭಾಷ್ಯಕಾರರು ಪೃಥಿವೀ ಎಂಬ ಅರ್ಥವನ್ನು ಸ್ವೀಕರಿಸಿ **ಇಳಾಭಿಃ—ಭೂಮಿಸ್ಥಾನಾಭಿರ್ದೇವತಾಭಿಃ |** ಭೂಮಿಯನ್ನು ಆಶ್ರಯಿಸಿರುವ ದೇವತೆಗಳಿಂದ ಎಂದು ಅರ್ಥವಿವರಣೆಮಾಡಿದ್ದಾರೆ.

ವಿಶ್ವಾನರಃ—**ಸರ್ವಪ್ರಾಣಿಹಿತಕಾರ್ಯಗ್ನಿಃ |** ಸರ್ವ ಪ್ರಾಣಿಗಳಿಗೂ ಹಿತವನ್ನುಂಟುಮಾಡುವ ಅಗ್ನಿಯೆಂದು ಭಾಷ್ಯಕಾರರ ಅರ್ಥವಿವರಣೆಯು. ಯಾಸ್ಕರು ತಮ್ಮ ನಿರುಕ್ತದಲ್ಲಿ—

**ವೈಶ್ವಾನರಃ | ವೈಶ್ವಾನರಃ ಕಸ್ಮಾದ್ವಿಶ್ವಾನ್ನರಾನ್ನಯತಿ | ವಿಶ್ವಏನಂ ನರಾ ನಯಂತೀತಿ ವಾ |**
**ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ |**

(ನಿ. ೭-೨೧)

ವೈಶ್ವಾನರನೆಂದರೆ ಏನು ? ಈ ಹೆಸರು ಈ ದೇವತೆಗೆ ಏತಕ್ಕೆ ಬಂದಿತು ? ಎಂದು ಪ್ರಶ್ನೆಮಾಡಿ ಅದಕ್ಕೆ ಉತ್ತರವಾಗಿ ಈ ದೇವತೆಯು (ಅಗ್ನಿಯು) ಸಮಸ್ತರನ್ನೂ ಒಯ್ಯುವುದರಿಂದ ಎಂದರೆ ಸಮಸ್ತರಿಗೂ ಮಾರ್ಗದರ್ಶಕನಾಗಿರುವು-ರಿಂದ ಅಥವಾ ಯಜ್ಞಾದಿಕರ್ಮಗಳಲ್ಲಿ ಯಜಮಾನಋತ್ವಿಕ್ಕುಗಳು ಈ ಅಗ್ನಿಯನ್ನು ಪೂರ್ವವೇದಿಯಿಂದ ಆಹವನೀಯಾಗ್ನಿ ಸ್ಥಾನಕ್ಕೆ ಒಯ್ಯುವುದರಿಂದ ವೈಶ್ವಾನರನೆಂಬ ಹೆಸರು. ಮತ್ತು ಈ ಅಗ್ನಿಯು ಸಕಲ ಪ್ರಾಣಿಗಳನ್ನೂ

ಪ್ರವೇಶಿಸುವುದರಿಂದ ಎಂದರೆ ಸಕಲ ಪ್ರಾಣಿಗಳಲ್ಲಿಯೂ ಜಾಠರಾಗ್ನಿರೂಪದಿಂದ ಅಂತಃಪ್ರವಿಷ್ಟನಾಗಿರುವುದರಿಂದ ಈ ಅಗ್ನಿಗೆ ವೈಶ್ವಾನರನೆಂದು ಹೆಸರು. ವಿಶ್ವಾನರನೇ ವೈಶ್ವಾನರನು ಎಂದು ನಿರ್ವಚನವನ್ನು ಹೇಳಿರುವರು.

ವೈಶ್ವಾನರ ಶಬ್ದಕ್ಕೆ **ವಿಶ್ವೇ ಸರ್ವೇ ನರಾ ಏನಮಗ್ನಿಂ ಯಜ್ಞಾದೌ ಪ್ರಣಯಂತೀತಿ ವಿಶ್ವೇನರಾಃ ತತ್ಸಂಬಂಧಾದ್ವೈಶ್ವಾನರಃ** ಎಂಬುದಾಗಿಯೂ, **ವಿಶ್ವೇಷಾಂ ನರಾಣಾಂ ಲೋಕಾಂತರಂ ಪ್ರತಿ ನೇತೃತಯಾ ಸಂಬಂಧೀ ವೈಶ್ವಾನರಃ** ಎಂದೂ **ವಿಶ್ವಾನ್ ಸರ್ವಾನ್ ಪ್ರಾಣಿನಃ ಪ್ರತ್ಯೃತೋ ಗಚ್ಛತ ಇತಿ ವೈಶ್ವಾನರೌ, ಮಧ್ಯಮೋತ್ತಮೌ, ತಾಭ್ಯಾಮುತ್ಪನ್ನಃ ವೈಶ್ವಾನರಃ** ಎಂಬುದಾಗಿಯೂ, ಮೂರು ರೀತಿಯಿಂದ ವೈಶ್ವಾನರ ಶಬ್ದವನ್ನು ನಿರ್ವಚನಮಾಡಿದ್ದಾರೆ. ಮೇಘಾವರಕನಾದ ವೃತ್ರನನ್ನು ಕೊಂದವನೂ, ವೃಷ್ಟಿಪ್ರದನೂ, ರಾಕ್ಷಸನಾಶಕನೂ ಆದ ವೈಶ್ವಾನರನ ಮಹಿಮೆಯನ್ನು ವರ್ಣಿಸಿರುವ ಭಾವವು ಉಕ್ತವಾಗಿದೆ. ಇದೇ ತಾತ್ಪರ್ಯವನ್ನು ಸೂಚಿಸುವ ನಿರುಕ್ತವು ಈ ರೀತಿ ಇದೆ. **ಪ್ರಬ್ರವೀಮಿ ತನ್ಮಹಿತ್ವಂ ಮಹಾಭಾಗ್ಯಂ ವೃಷಭಸ್ಯ ವರ್ಷಿತುರಪಾಂ ಯಂ ಪೂರವಃ ಪೂರಯಿತವ್ಯಾ ಮನುಷ್ಯಾ ವೃತ್ರಹಣಂ ಮೇಘಹನಂ ಸಚಂತೇ ಸೇವಂತೇ ವರ್ಷಕಾಮಾ ದಸ್ಯುರ್ದಸ್ಯತೇಃ ಕ್ಷಯಾರ್ಥಾದುಪದಸ್ಯಂತ್ಯಸ್ಮಿನ್ ರಸಾ ಉಪದಾಸಯತಿ ಕರ್ಮಾಣಿ ತಮಗ್ನಿರ್ವೈಶ್ವಾನರೋ ಘ್ನನ್ನವಾಧೂನೋದಪಃ ಕಾಷ್ಠಾ ಅಭಿನಚ್ಛಂಬರಂ ಮೇಘಂ** (ನಿರು. ೭-೨೦) ಇದರ ಮೇಲೆ ಇಲ್ಲಿ ಹೇಳಲ್ಪಟ್ಟಿರುವ ವೈಶ್ವಾನರನು ಯಾರು ಎಂದು ವಿಚಾರಮಾಡಿದ್ದಾರೆ. ಆಗ ಕೆಲವರು ಮಧ್ಯಮಸ್ಥಾನದಲ್ಲಿರುವ ವಾಯುವನ್ನೋ, ಇಂದ್ರನನ್ನೋ ವೈಶ್ವಾನರನೆನ್ನಬೇಕು ಎಂದಿರುವರು. ಏಕೆಂದರೆ ಅವರಿಬ್ಬರಿಗೆ ವರ್ಷಕರ್ಮದಲ್ಲಿ ಅಧಿಕಾರವಿರುವುದು. ವೃಷ್ಟಿಪ್ರಾಪ್ತಿಯ ವಿಷಯದಲ್ಲಿ ಸಾಮಾನ್ಯವಾಗಿ ಅವರನ್ನೇ ಸ್ತುತಿಸಬೇಕು. ಅಗ್ನಿಗೆ ಪೃಥಿವಿಯನ್ನೇ ಸ್ಥಾನವನ್ನಾಗಿ ಹೇಳಿರುವುದರಿಂದ ಅದು ಸಾಧ್ಯವಿಲ್ಲ ಎಂದು ಸಮರ್ಥಿಸಿರುವರು. ಮತ್ತೆ ಕೆಲವರು ಇಲ್ಲಿ ಹೇಳಲ್ಪಟ್ಟಿರುವ ವೈಶ್ವಾನರ ಶಬ್ದವು ಸೂರ್ಯನನ್ನು ಸೂಚಿಸುವುದು ಎಂದು ಹೇಳುತ್ತಾರೆ. ಏಕೆಂದರೆ, ಪ್ರಾತಸ್ಸವನ, ಮಾಧ್ಯಂದಿನಸವನ, ಸಾಯಂಸವನಗಳನ್ನು ಕ್ರಮವಾಗಿ ಭೂಲೋಕ, ಭುವರ್ಲೋಕ, ಸ್ವರ್ಗಲೋಕಗಳೆಂದು ನಿರೂಪಿಸಿ, ಆಯಾಸವನಗಳ ಅನುಷ್ಠಾನದಿಂದ ಆಯಾ ಲೋಕಗಳು ದೊರೆಯುವವೆಂದೂ ತೀರ್ಮಾನಿಸಿದ್ದಾರೆ. ಆಗ ತೃತೀಯಸವನಾನುಷ್ಠಾನದಿಂದ ಸ್ವರ್ಗಪ್ರಾಪ್ತಿಯಾಗುವುದು. ಮತ್ತು ಭೂಮಿಯಿಂದ ಸಂಪೂರ್ಣವಾಗಿ ಚ್ಯುತಿಯೊದಗುವುದು. ಅಂತಹ ಪ್ರಚ್ಯುತಿಪರಿಹಾರಕ್ಕಾಗಿ ಅಗ್ನಿಮಾರುತಾತ್ಮಕವಾದ ಕೊನೆಯ ಶಸ್ತ್ರದಿಂದ ಮತ್ತೆ ಭೂಮಿಗೆ ಬರಲು ಆ ಶಸ್ತ್ರಮಂತ್ರವನ್ನು ಪಠಿಸುವರು. ಆ ಶಸ್ತ್ರಮಂತ್ರವು ವೈಶ್ವಾನರ ಸೂಕ್ತದಿಂದ ಆರಂಭವಾಗುವುದು. ಅನಂತರ ಮಧ್ಯಮಸ್ಥಾನಸಂಬಂಧವಾದ ರುದ್ರದೇವತೆ ಮತ್ತು ಮರುದ್ದೇವತೆಯರನ್ನು ತದ್ದೇವತಾಕವಾದ ಸೂಕ್ತಪಾಠದಿಂದ ಅವರೋಹಿಸುವರು ಅಗ್ನಿಗೆ ಪೃಥಿವೀ ಸ್ಥಾನವಿರುವುದರಿಂದ, ಇಲ್ಲಿ ವೈಶ್ವಾನರಶಬ್ದಕ್ಕೆ ಸೂರ್ಯವಾಚಕತ್ವವಿಲ್ಲದಿದ್ದರೆ, ಪೃಥಿವಿಗೆ ಅವರೋಹಣವು ಹೇಗೆತಾನೆ ಸಂಬಂಧಿಸೀತು ? ಎಂದು ಸಿದ್ಧಾಂತಮಾಡಿ ವೈಶ್ವಾನರಶಬ್ದಕ್ಕೆ ಸೂರ್ಯನೆಂದು ಅರ್ಥಮಾಡಿರುವರು. ಆದರೆ ಸಾಯಣಚಾರ್ಯರ ಅಭಿಪ್ರಾಯವು ಮಾತ್ರ ವೈಶ್ವಾನರ ಶಬ್ದಕ್ಕೆ ಮಧ್ಯಮಸ್ಥಾನಗತವಾದ ವಿದ್ಯುತ್ಸಂಬಂಧವಾದ ಅಗ್ನಿ ಎಂದಾಗಿದೆ.

**॥ ವೈಶ್ವಾನರಾಗ್ನಿಯ ಮಹಿಮೆ ॥**

**ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ ।**
**ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥**

(ಋ. ಸಂ. ೧-೧೬೪-೪೬)

**ಇಮಮೇವಾಗ್ನಿಂ ಮಹಾಂತಮಾತ್ಮಾನಮೇಕಮಾತ್ಮಾನಂ ಬಹುಧಾ ಮೇಧಾವಿನೋ ವದಂತಿ ॥ ಅಗ್ನಿಃ ಸರ್ವಾ ದೇವತಾಃ ಇತಿ ಬ್ರಾಹ್ಮಣಮಪಿ ಭವತಿ.** (ನಿ. ೭-೧೮) ಮಹಾತ್ಮನೂ ವಿಶ್ವಾತ್ಮನೂ ಆದ ಈ ಅಗ್ನಿಯನ್ನೇ ಇಂದ್ರಾದಿ ಬೇರೆ ಬೇರೆ ಹೆಸರುಗಳಿಂದ ಉದ್ದೇಶಿಸಿ ಎಲ್ಲರೂ ಪೂಜಿಸುತ್ತಾರೆ. ಮತ್ತು ಬೇರೆ ಬೇರೆ ಸನ್ನಿವೇಶಗಳಲ್ಲಿ ರೂಪಾಂತರಗಳಿಂದ ಆವಿರ್ಭವಿಸುವ ಎಲ್ಲಾ ಅಗ್ನ್ಯಂಶಗಳಿಗೂ ಈ ವೈಶ್ವಾನರಾಗ್ನಿಯೇ ಮೂಲ, ಉಳಿದ ರೂಪಗಳೆಲ್ಲಾ ಈ ವೈಶ್ವಾನರಾಗ್ನಿಯ ಶಾಖೆಗಳು ಎಂದೂ ಸಹ ಶ್ರುತಿವಾಕ್ಯಗಳಿವೆ.

**ವಯಾ ಇದಗ್ನೇ ಅಗ್ನಯಸ್ತೇ ಅನ್ಯೇ ತ್ವೇ ವಿಶ್ವೇ ಅಮೃತಾ ಮಾದಯಂತೇ ।**
**ವೈಶ್ವಾನರ ನಾಭಿರಸಿ ಕ್ಷಿತೀನಾಂ ಸ್ಥೂಣೇವ ಜನಾँ ಉಪಮಿದ್ಯಯಂಥ ॥**

(ಋ. ಸಂ. ೧-೫೯-೧)

ವೈಶ್ವಾನರಾಗ್ನಿಯೇ ದೇವಮಾನವಾದಿ ಸಕಲ ಜಗತ್ತಿನ ಸ್ಥಿತಿಗಳಿಗೂ ಹೇತುಭೂತನಾಗಿ ವಿಶ್ವದ ವ್ಯವಹಾರಗಳಿಗೆಲ್ಲಾ ನೇತೃವಾಗಿರುತ್ತಾನೆ ಆದುದರಿಂದ ಆತ್ಮಕಲ್ಯಾಣವನ್ನೂ ಜಗತ್ಕಲ್ಯಾಣವನ್ನೂ ಅಪೇಕ್ಷಿಸುವ ಸಕಲ ಭೂತಗಳೂ ವಿಶ್ವಾತ್ಮನಾದ ಈ ವೈಶ್ವಾನರಾಗ್ನಿಯ ಸ್ವರೂಪವನ್ನು ಅರಿತು ಉಪಾಸನೆಯನ್ನು ಮಾಡಬೇಕು ಎಂಬುದಾಗಿ ಕರ್ಮಾನುಷ್ಠಾನಗಳನ್ನು ಬೋಧಿಸತಕ್ಕ ಶ್ರುತಿಗಳೂ, ಆಧ್ಯಾತ್ಮಿಕವಾದ ಜ್ಞಾನವನ್ನುಪದೇಶಿಸತಕ್ಕ ಶ್ರುತಿಗಳೂ, ಒಂದೇ ವಿಧವಾಗಿ ವೈಶ್ವಾನರಾಗ್ನಿಯ ಉಪಾಸನೆಯ ಆವಶ್ಯಕತೆಯನ್ನು ತಿಳಿಸುತ್ತವೆ. **ವೈಶ್ವಾನರಸ್ಯ ಸುಮತೌ ಸ್ಯಾಮ** (ಋ. ಸಂ. ೧-೯೮-೧) ಎಂದು ಋಗಾದಿಸಂಹಿತೆಗಳೂ, **ಸ ಯೋ ಹ್ಯೇತಮೇವಮಗ್ನಿಂ ವೈಶ್ವಾನರಂ ಪುರುಷವಿಧಂ ಪುರುಷೇಽಂತಃ ಪ್ರತಿಷ್ಠಿತಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ।** ಪುರುಷಾಂತರ್ಹಿತನೂ ಪುರುಷರೂಪನೂ ಆಗಿರುವ ಈ ವೈಶ್ವಾನರಾಗ್ನಿಯ ಸ್ವರೂಪವನ್ನು ತಿಳಿಯುವ ಸಕಲರೂ ಮೃತ್ಯುವನ್ನು ಜಯಿಸಿ ಪೂರ್ಣವಾದ ಆಯುಸ್ಸನ್ನು ಪಡೆಯುತ್ತಾರೆ (ಶ. ಬ್ರಾ. ೧೦-೬-೧-೧೧) ಎಂದು ಶತಪಥಾದಿ ಬ್ರಾಹ್ಮಣಗಳೂ, **ಅಥ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ತಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸು ಹುತಂ ಭವತಿ ।** ಹೀಗೆ ವೈಶ್ವಾನರಾಗ್ನಿಯ ಸ್ವರೂಪವನ್ನು ತಿಳಿದು ಯಾವ ಪುರುಷನು ಅಗ್ನಿಹೋತ್ರವನ್ನೂ ನೆರವೇರಿಸುತ್ತಾನೆಯೋ ಅವನು ಸಕಲ ಭೂತಗಳಲ್ಲಿಯೂ ಸಕಲಲೋಕಗಳಲ್ಲಿಯೂ ಸಕಲವಾದ ಆತ್ಮಗಳಲ್ಲಿಯೂ ಹುತಮಾಡಿದಂತೆಯೇ (ಛಾ. ಉ. ೫-೨೪-೨) ಎಂಬುದಾಗಿ ಛಾಂದೋಗ್ಯಾದಿ ಉಪನಿಷತ್ತುಗಳೂ ವೈಶ್ವಾನರಾಗ್ನಿಯ ಉಪಾಸನೆಯ ಮಹತ್ವವನ್ನು ಹೇಳಿವೆ. ಆದುದರಿಂದ ಈ ದೇವತೆಯ ಸ್ವರೂಪವೇನು, ಕರ್ಮಾನುಷ್ಠಾನಕ್ಕೂ ಆಧ್ಯಾತ್ಮಿಕವಾದ ಜ್ಞಾನಸಂಪಾದನೆಗೂ ಈ ದೇವತೆಗೂ ಇರತಕ್ಕ ಸಂಬಂಧವೇನು ಎಂಬುದನ್ನು ಈ ಸಂದರ್ಭದಲ್ಲಿ ತಿಳಿಯಬೇಕಾದುದು ಅತ್ಯವಶ್ಯಕವಾಗಿರುತ್ತದೆ. ಮೇಲಿನ ಋಕ್ಕಿನಲ್ಲಿ **ರಾಜಾ ಹಿ ಕಂ ಭುವನಾನಾಮಭಿಶ್ರೀಃ ।** ವೈಶ್ವಾನರನು ಸಕಲ ಭೂತಗಳಿಗೂ ಪೂಜ್ಯನಾದ ಪ್ರಭುವಾಗಿದ್ದಾನೆಂದು ವರ್ಣಿಸಿದೆ. ಆದರೆ ಆ ವೈಶ್ವಾನರು ಯಾರು ಎಂಬ ಪ್ರಶ್ನೆಯೂ ಜೊತೆಯಲ್ಲಿಯೇ ಹುಟ್ಟಿ ನಿರುಕ್ತಕಾರರು ಈ ಋಕ್ಕನ್ನೇ ವಿವರಿಸುವಾಗ ಅನೇಕ ಉದಾಹರಣೆಗಳನ್ನು ತೆಗೆದುಕೊಂಡು ವೈಶ್ವಾನರನು ಪ್ರಾರ್ಥಿವಾಗ್ನಿಯೆಂದು ನಿಷ್ಕರ್ಷೆಮಾಡಿರುತ್ತಾರೆ. ಅವರ ವಿವರಣೆಯು ಈ ರೀತಿಯಿದೆ.

**ವೈಶ್ವಾನರಃ ಕಸ್ಮಾದ್ವಿಶ್ವಾನ್ನರಾನ್ನಯತಿ । ವಿಶ್ವ ಏನಂ ನರಾ ನಯಂತೀತಿ ವಾ ।**

**ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ ||**

(ನಿ. ೭-೨೧-)

ಇವನು ಎಲ್ಲರಿಗೂ ನೇತೃವಾಗಿ ಮಾರ್ಗದರ್ಶಕನಾದುದರಿಂದಲೂ, ಅಥವಾ ಇವನನ್ನು ಎಲ್ಲರೂ ಯಜ್ಞದಲ್ಲಿ ಪ್ರಧಾನ ದೇವತೆಯಾಗಿ ಕರೆದೊಯ್ಯುವುದರಿಂದಲೂ, ಅಥವಾ ಸರ್ವತ್ರ ವ್ಯಾಪಿಸಿ ಸಕಲ ಭೂತಗಳಲ್ಲಿಯೂ ಪ್ರವೇಶಿಸಿರುವುದರಿಂದಲೂ, **ವೈಶ್ವಾನರಸ್ಯ ಸುಮತೌ ಸ್ಯಾಮ** ಎಂಬ ಪ್ರಕೃತವಾದ ಋಕ್ಕನ್ನು ವಿವರಿಸಿ ಈ ದೇವತೆಯ ಸ್ವರೂಪವನ್ನು ತಿಳಿಸಿದ್ದಾರೆ. **ಇತೋ ಜಾತಃ ಸರ್ವಮಿದಮಭಿಪಶ್ಯತಿ ವೈಶ್ವಾನರಃ ಸಂಯತತೇ ಸೂರ್ಯೇಣ ರಾಜಾ ಯಃ । ಸರ್ವೇಷಾಂ ಭೂತಾನಾಮಭಿಶ್ರಯಣೀಯಸ್ತಸ್ಯ ವಯಂ ವೈಶ್ವಾನರಸ್ಯ ಕಲ್ಯಾಣ್ಯಾಂ ಮತೌ ಸ್ಯಾಮೇತಿ ।** ಸಕಲರಿಗೂ ಪ್ರಭುವಾಗಿರುವುದರಿಂದಲೂ, ಸರ್ವರಿಗೂ ಆಶ್ರಯನಾಗಿರುವುದರಿಂದಲೂ ನಾವೆಲ್ಲರೂ ಈ ವೈಶ್ವಾನರನ ಅನುಗ್ರಹಾತ್ಮಕವಾದ ದೃಷ್ಟಿಗೆ ಯೋಗ್ಯರಾಗಿರೋಣ. ಪಾರ್ಥಿವಾಗ್ನಿಯ ರೂಪದಲ್ಲಿ ಉತ್ಪನ್ನನಾಗಿ ಇವನು ವಿಶ್ವವನ್ನೆಲ್ಲಾ ವೀಕ್ಷಿಸುತ್ತಾನೆ ಮತ್ತು ಸೂರ್ಯನೊಡನೆ ಒಂದಾಗುತ್ತಾನೆ ಎಂದು ಋಕ್ಕಿನ ಅರ್ಥವನ್ನು ವಿವರಿಸಿ,

**ತತ್ಕೋ ವೈಶ್ವಾನರಃ ।** ಈ ವೈಶಾನರನು ಯಾರು (ನಿ. ೭-೨೨) ಎಂಬ ಪ್ರಶ್ನೆಯನ್ನು ಹಾಕಿ ಆಗಮಗಳ ವಿಪ್ರತಿಪತ್ತಿಯನ್ನು ಚರ್ಚಿಸಿ ತಾವು ಕೊನೆಯಲ್ಲಿ ನಿಷ್ಕೃಷ್ಟವಾದ ಅಭಿಪ್ರಾಯವನ್ನು ತಿಳಿಸುತ್ತಾರೆ. ತಮ್ಮ ಚರ್ಚೆಯಲ್ಲಿ ಮೊದಲನೆಯದಾಗಿ ವೈಶ್ವಾನರನು ಅಂತರಿಕ್ಷಸ್ಥನಾದ ದೇವತೆಯೆಂದು ನಿರ್ದೇಶಿಸುವ ಅಭಿಪ್ರಾಯಗಳಲ್ಲಿರುವ ದೋಷವನ್ನು ತಿಳಿಸುತ್ತಾರೆ.

. **ಮಧ್ಯಮ ಇತ್ಯಾಚಾರ್ಯಾಃ । ವರ್ಷಕರ್ಮಣಾ ಹ್ಯೇನಂ ಸ್ತೌತಿ । ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ।** (ಋ. ಸಂ. ೧-೫೯-೬) ಎಂಬ ಋಕ್ಕಿನಲ್ಲಿ ವರ್ಣಿಸುವಂತೆ ವೃಷ್ಟಿಕರ್ಮಕ್ಕೆ ಹೇತುಭೂತನೆಂದು ಪ್ರಶಂಸಿಸಿರುವುದರಿಂದ ಅಂತರಿಕ್ಷಸ್ಥನಾದ ದೇವತೆಯೆಂದು ಆಚಾರ್ಯರು ಅಭಿಪ್ರಾಯಪಡುವರು. ಅಲ್ಲದೇ,

**ಏಷಾಂ ಲೋಕಾನಾಂ ರೋಹೇಣ ಸವನಾನಾಂ ರೋಹ ಆಮ್ನಾತೋ ರೋಹಾತ್ ಪ್ರತ್ಯವರೋಹಶ್ಚಿಕೀರ್ಷಿತಸ್ತಾಮನುಕೃತಿಂ ಹೋತಾಗ್ನಿಮಾರುತೇ ಶಸ್ತ್ರೇ ವೈಶ್ವಾನರೀಯೇಣ ಸೂಕ್ತೇನ ಪ್ರತಿಪದ್ಯತೇ ।**

**ಸೂರ್ಯಪ್ರಸೂತಾವಗ್ನೀ ತು ದೃಷ್ಟ್ವಾ ಪಾರ್ಥಿವಮಧ್ಯಮೌ ।**
**ಏತೇಷಾಮೇವ ಲೋಕಾನಾಂ ತ್ರಯಾಣಾಮಧ್ವರೇಽಧ್ವರೇ ॥**
**ರೋಹಾತ್ಪ್ರತ್ಯವರೋಹೇಣ ಚಿಕೀರ್ಷನ್ನಗ್ನಿಮಾರುತಂ ।**
**ಶಸ್ತ್ರಂ ವೈಶ್ವಾನರೀಯೇಣ ಸೂಕ್ತೇನ ಪ್ರತಿಪದ್ಯತೇ ॥**

(ಬೃ. ದೇ. ೧-೧೦೧ : ೧-೧೦೨)

ಆಹುತಿಗಳ ಆಧಿಕ್ಯವು ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಎಂಬ ಆರೋಹಣಕ್ರಮವನ್ನನುಸರಿಸಬೇಕೆಂಬ ವಿಧಿವಾಕ್ಯವಿದೆ. ಆರೋಹಣಕ್ರಮವಾದಮೇಲೆ ಅವರೋಹಣಕ್ರಮವನ್ನು ನಿರ್ವಹಿಸಬೇಕು. ಈ ಸರಣಿಯನ್ನನುಸರಿಸಿ ಯಜ್ಞಕರ್ತನು ಅಗ್ನಿಯನ್ನೂ ಮರುತ್ತುಗಳನ್ನೂ ಉದ್ದೇಶಿಸಿ ಪಠಿಸಿರುವ ಈ ವೈಶ್ವಾನರೀಯಸೂಕ್ತದಲ್ಲಿ ಅವರೋಹಣಕ್ರಮದಿಂದ ಮೊದಲು ವೈಶ್ವಾನರನನ್ನು ಸ್ತುತಿಸಿದ್ದಾನೆ. ಈ ಅಭಿಪ್ರಾಯದಿಂದಲೇ ಇಲ್ಲಿ ನಿರ್ದೇಶಿ

ಸಿರುವ ವೈಶ್ವಾನರನನ್ನು **ಅಥಾಸಾವಾದಿತ್ಯ ಇತಿ ಪೂರ್ವೇ ಯಜ್ಞಿಕಾಃ** । ಆದಿತ್ಯನೆಂದು ಪ್ರಾಚೀನರಾದ ಯಜ್ಞ ಕರ್ತರು ಅಭಿಪ್ರಾಯಪಡುತ್ತಾರೆ ಎಂದು ಪೂರ್ವಪಕ್ಷವನ್ನು ವಿವರಿಸಿ ನಂತರ,

> **ಸೋಽಪಿ ನ ಸ್ತೋತ್ರಿಯಮಾದ್ರಿಯೇತಾಗ್ನೇಯೋ ಹಿ ಭವತಿ । ತತ ಆಗಚ್ಛತಿ ಮಧ್ಯಸ್ಥಾನಾ ದೇವತಾ ರುದ್ರಂ ಚ ಮರುತಶ್ಚ ತತೋಽಗ್ನಿಮಿಹಸ್ಥಾನಮತ್ರ ವೈ ಸ್ತೋತ್ರಿಯಂ ಶಂಸತಿ ।**

ಈ ಸೂಕ್ತವು ಮುಖ್ಯವಾಗಿ ಅಗ್ನಿಯನ್ನೇ ಉದ್ದೇಶಿಸಿರುವುದರಿಂದಲೂ, ಅನಂತರ ರುದ್ರನನ್ನೂ ಮರುತ್ತುಗಳನ್ನೂ ನಿರ್ದೇಶಿಸಿ ಪುನಃ ಯಜ್ಞಕರ್ತನು ಯಾವ ಪಾರ್ಥಿವವಾದ ಯಜ್ಞಶಾಲೆಯಲ್ಲಿ ಈ ಸೂಕ್ತವನ್ನು ಪಠಿಸುತ್ತಾನೆಯೋ ಆ ಪಾರ್ಥಿವ ಲೋಕಕ್ಕೇ ಸೇರಿದ ಅಗ್ನಿಯನ್ನೇ ಪುನಃ ಉದ್ದೇಶಿಸಿ ಸ್ತುತಿಸಿರುತ್ತಾನೆ. ಆದುದರಿಂದ ಇಲ್ಲಿ ನಿರ್ದೇಶಿಸಿರುವ ವೈಶ್ವಾನರಾಗ್ನಿಯು ಪಾರ್ಥಿವಸ್ಥವಾದ ದೇವತೆಯೇ ಹೊರತು ಅಂತರಿಕ್ಷಸ್ಥವಾದುದಲ್ಲ ಎಂದು ಮೇಲಿನ ಅಭಿಪ್ರಾಯವನ್ನು ನಿರಾಕರಿಸಿರುವರು. ಮತ್ತು ಈ ವೈಶ್ವಾನರಾಗ್ನಿಯು ಪಾರ್ಥಿವಸ್ಥವಾದ ದೇವತೆ ಎಂದು ತಮ್ಮ ವಾದವನ್ನು ಸಮರ್ಥಿಸುತ್ತಾ ಅದಕ್ಕೆ ತಕ್ಕ ಶ್ರುತಿವಾಕ್ಯಗಳನ್ನೂ ಉದಹರಿಸಿದ್ದಾರೆ.

> **ಅಥಾಪ್ಯಾಹ – ಇತೋ ಜಾತೋ ವಿಶ್ವಮಿದಂ ವಿ ಚಷ್ಟೇ ವೈಶ್ವಾನರೋ ಯತತೇ ಸೂರ್ಯೇಣ ॥**
> (ಋ. ಸಂ. ೧-೯೮-೧)

> **ನ ಚ ಪುನರಾತ್ಮನಾತ್ಮಾ ಸಂಯತತೇಽನ್ಯೇನೈವಾನ್ಯಃ ಸಂಯತೇತ ಇತ ಇಮಮಾದಧಾತ್ಯಮುತೋಽಮುಷ್ಯ ರಶ್ಮಯಃ ಪ್ರಾದುರ್ಭವಂತೀತೋಽಸ್ಯಾರ್ಚಿಷಸ್ತಯೋರ್ಭಾಸೋಃ ಸಂಸಂಗಂ ದೃಷ್ಟ್ವೈವಮವಕ್ಷ್ಯತ್ ॥**

ವೈಶ್ವಾನರನು ತಾನು ವಿಸ್ತಾರವಾಗಿ ಪ್ರಸರಿಸಿ ಸೂರ್ಯನೊಡನೆ ಸೇರಿಕೊಳ್ಳುತ್ತಾನೆ ಎಂದು ಸಂಹಿತಾವಾಕ್ಯವಿರುವುದೂ ಈ ಸಮರ್ಥನೆಗೆ ಸಹಾಯಮಾಡುತ್ತದೆ. ವೈಶ್ವಾನರನೂ ಸೂರ್ಯನೇ ಆದರೆ ತಾನೇ ಪ್ರಸರಿಸಿ ತನ್ನಲ್ಲೇ ಸೇರಿಕೊಳ್ಳುವನೆಂಬುದು ಅಸಂಭವ. ಒಂದು ವಸ್ತುವು ತಾನು ವಿಸ್ತರಿಸಿಕೊಂಡು ಇನ್ನೊಂದರೊಂದಿಗೆ ಸೇರಿಕೊಳ್ಳುತ್ತದೆ ಎಂದು ಹೇಳುವುದು ಸಹಜವಾಗಿದೆ. ಯಜ್ಞಕರ್ತನು ಪೃಥ್ವಿಯಲ್ಲಿ ಅಗ್ನಿಯನ್ನು ಪ್ರಜ್ವಲಿತನನ್ನಾಗಿ ಮಾಡಿದಮೇಲೆ ಅದರ ಕಿರಣಗಳು ಮೇಲಿನ ಲೋಕಕ್ಕೆ ಹರಡಿ ಅಲ್ಲೂ ಆವಿರ್ಭವಿಸುತ್ತವೆ. ಅಂತರಿಕ್ಷಲೋಕದಲ್ಲಿ ವ್ಯಾಪಿಸಿರುವ ಆದಿತ್ಯನ ಕಿರಣಗಳೊಂದಿಗೆ ಸೇರಿಕೊಂಡು ಎರಡೂ ಒಂದಾಗುವುದನ್ನು ನೋಡಿ **ಯತತೇ ಸೂರ್ಯೇಣ** ಎಂದು ವರ್ಣಿಸಲ್ಪಟ್ಟದೆ. ಅದೂ ಅಲ್ಲದೆ,

> **ಅಥ ಯಾನ್ಯೇತಾನ್ಯೌತ್ತಮಿಕಾನಿ ಸೂಕ್ತಾನಿ ಭಾಗಾನಿ ವಾ ಸಾವಿತ್ರಾಣಿ ವಾ ಸೌರ್ಯಾಣಿ ವಾ ಪೌಷ್ಣಾನಿ ವಾ ವೈಷ್ಣವಾನಿ ವಾ ವೈಶ್ವದೇವ್ಯಾನಿ ವಾ ತೇಷು ವೈಶ್ವಾನರೀಯಾಃ ಪ್ರವಾದಾ ಅಭವಿಷ್ಯನ್ನಾದಿತ್ಯಕರ್ಮಣಾ ಚೈನಮಸ್ತೋಷ್ಯನ್ನಿತ್ಯುದೇಷೀತ್ಯಸ್ತಮೇಷೀತಿ ವಿಪರ್ಯೇಷೀತಿ ।**

ವೈಶ್ವಾನರನು ಸೂರ್ಯನೇ ಆಗಿದ್ದರೆ ಆಗ **ಸವಿತೃ, ಪೂಷ, ವಿಷ್ಣು, ವಿಶ್ವೇದೇವ** ಇತ್ಯಾದಿ ಅಂತರಿಕ್ಷಸ್ಥರಾದ ದೇವತೆಗಳ ಸ್ವರೂಪವೂ, ಕ್ರಿಯೆಯೂ ಇವನಲ್ಲಿ ಅಧ್ಯಾಹೃತವಾಗಿ ವರ್ಣಿಸಲ್ಪಡಬೇಕಾಗಿದ್ದಿತು, ಮತ್ತು ಉದಯಿಸುತ್ತಾನೆ, ಅಸ್ತಮಿಸುತ್ತಾನೆ, ಪರಿಭ್ರಮಣವನ್ನು ಹೊಂದುತ್ತಾನೆ ಇತ್ಯಾದಿ ವರ್ಣನೆಗಳೂ ಇರಬೇಕಾಗಿದ್ದಿತು ಆದರೆ

ಇಲ್ಲಿ ಅಗ್ನಿದೇವತಾಕವಾದ ವರ್ಣನೆಗಳು ಮಾತ್ರವಿರುವುದರಿಂದ ಪಾರ್ಥಿವವಾದ ಅಗ್ನಿಪರ್ಯಾಯವೆಂಬುದು ದೃಢವಾಗಿ ಗೊತ್ತಾಗುತ್ತದೆ. ಇವೇ ಮೊದಲಾದ ಆಧಾರಗಳಿಂದ,

**ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರೂಪ್ಯತೇಽಯಮೇವ ಸೋಽಗ್ನಿರ್ವೈಶ್ವಾನರಃ ।**
ಸೂಕ್ತದಲ್ಲಿ ಪಠಿತವಾದ ಸ್ತೋತ್ರವೂ, ಹವಿಸ್ಸಿನ ಅರ್ಪಣೆಯೂ ವೈಶ್ವಾನರರೂಪದ ಅಗ್ನಿಯನ್ನೇ ಉದ್ದೇಶಿಸಿ ಅರ್ಪಿಸಲ್ಪಟ್ಟವೆಯೆಂದು ಖಚಿತವಾಗಿ ಹೇಳಬಹುದು. (ನಿ. ೭-೨೨.ರಿಂದ ೭-೩೧) ಈ ವೈಶ್ವಾನರಾಗ್ನಿಯ ಆವಿರ್ಭಾವವು ಪೃಥ್ವಿಯಲ್ಲಾದರೂ ಸಹ ಇವನೇ, **ರಾಜಾ ಹಿ ಕಂ ಭುವನಾನಾಮಭಿಶ್ರೀಃ ।** ಸಕಲಭೂತಜಾತಗಳಿಗೂ ಪ್ರಭುವಾಗಿಯೂ ಆಶ್ರಯನಾಗಿಯೂ ಇದ್ದಾನೆ. ಆದುದರಿಂದಲೇ ದೇವಮಾನವಾದಿಸಕಲರೂ ಇವನ ಉಪಾಸನೆಯಿಂದಲೇ ಶ್ರೇಯಸ್ಸನ್ನು ಹೊಂದಲು ಸಾಧ್ಯವೆಂದು ಸ್ಪಷ್ಟವಾಗಿ ಅನೇಕಕಡೆ ತಿಳಿಸಿದ್ದಾರೆ. ಕರ್ಮಾನುಷ್ಠಾನಗಳಿಂದ ಇವನ ಪಾರ್ಥಿವಸ್ವರೂಪವನ್ನರಿತು ಉಪಾಸನೆಯನ್ನು ಮಾಡುವುದು ಒಂದು ಕ್ರಮವಾದರೆ, ಇವನು ವಿಶ್ವವ್ಯಾಪಿಯಾದುದೂ, ಸರ್ವಜಗತ್ತಿನ ಚೇತನಾಚೇತನಗಳಲ್ಲಿಯೂ ಅಂತರ್ಗತವಾಗಿರುವುದೂ ಆದ ಮಾಹಾತ್ಮ್ಯವನ್ನರಿಯುವ ಆಧ್ಯಾತ್ಮರೂಪವಾದ ಜ್ಞಾನದಿಂದ ಮಾಡತಕ್ಕ ಉಪಾಸನೆಯು ಇನ್ನೊಂದುವಿಧವಾಗಿರುವುದು. ಕರ್ಮಾನುಷ್ಠಾನಕ್ಕೂ ಜ್ಞಾನೋಪಾಸನೆಗೂ ಇರುವ ಸಂಬಂಧವನ್ನು ತಿಳಿಸಿ ವಿಶ್ವಾತ್ಮನಾದ ವೈಶ್ವಾನರಾಗ್ನಿಯ ಮಹಿಮೆಯನ್ನು ಶತಪಥಾದಿಬ್ರಾಹ್ಮಣಗಳಲ್ಲಿಯೂ, ಛಾಂದೋಗ್ಯಾದಿಉಪನಿಷತ್ತುಗಳಲ್ಲಿಯೂ ವಿವರಿಸಿದೆ. ಇವನ ನಿಜವಾದ ಸ್ವರೂಪವನ್ನರಿಯಲು ಉತ್ತಮವಾದ ಗುರುವನ್ನು ಆರಿಸಿಕೊಂಡು ಹೋದ ಋಷಿಗಳ ಕಥೆಯನ್ನು ಶತಪಥ ಬ್ರಾಹ್ಮಣದಲ್ಲಿ ವಿವರಿಸಿದೆ. (೧೦-೬-೧-೧ ರಿಂದ ೧೧)

**ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ ।**
(ನಿ. ೭-೨೧) ಸರ್ವತ್ರ ವ್ಯಾಪಿಸಿ ಸಕಲ ಭೂತಗಳಲ್ಲಿಯೂ ಅಂತರ್ಗತನಾಗಿರುವವನು ಎಂಬ ನಿರುಕ್ತಕಾರರ ನಿರ್ವಚನದಂತೆ ಸರ್ವಾಂತರ್ಯಾಮಿಯಾದ ವಿಶ್ವಾನರನ ಸ್ವರೂಪವನ್ನು ಈ ಕಥೆಯು ತಿಳಿಸುತ್ತದೆ.—

**ಅಥ ಹೈತೇಽರುಣೇ ಔಪವೇಶೌ ಸಮಾಜಗ್ಮುಃ ಸತ್ಯಯಜ್ಞಃ ಪೌಲುಷಿರ್ಮಹಾಶಾಲೋ ಜಾಬಾಲೋ ಬುಡಿಲ ಆಶ್ವತರಾಶ್ವಿರಿಂದ್ರದ್ಯುಮ್ನೋ ಭಾಲ್ಲವೇಯೋ ಜನಃ ಶಾರ್ಕರಾಕ್ಷ್ಯಸ್ತೇ ಹ ಸಮಾಸತ ತೇಷಾಂ ಹ ವೈಶ್ವಾನರೇ ನ ಸಮಿಯಾಯ ॥೧॥**

ಸತ್ಯಯಜ್ಞಪೌಲುಷಿಯೂ, ಮಹಾಶಾಲಜಾಬಾಲನೂ, ಬುಡಿಲ, ಅಶ್ವತರ ಅಶ್ವಿ, ಇಂದ್ರದ್ಯುಮ್ನ, ಭಾಲ್ಲವೇಯನೂ, ಜನಶಾರ್ಕರಾಕ್ಷ್ಯನೂ ಒಟ್ಟಿಗೆ ಆರುಣಔಪವೇಶಿಯ ಗೃಹದಲ್ಲಿ ಸೇರಿ ವೈಶ್ವಾನರಾಗ್ನಿಯ ಸ್ವರೂಪವನ್ನು ತಿಳಿಯಲು ಎಲ್ಲರೂ ಕಲೆತು ಚರ್ಚಿಸಿದರೂ ಸಹ ಅವರಿಗೆ ನಿಷ್ಕರ್ಷವಾದ ತಿಳಿವಳಿಕೆಯುಂಟಾಗದೆ ಪರಸ್ಪರ ಅಭಿಪ್ರಾಯದಲ್ಲಿ ಭೇದವುಂಟಾಯಿತು. ವಿಪ್ರತಿಪತ್ತಿಯುಂಟಾಯಿತು. ॥ ೧ ॥

**ತೇ ಹೋಚುಃ । ಅಶ್ವಪತಿರ್ವಾಯಂ ಕೈಕೇಯಃ ಸಂಪ್ರತಿ ವೈಶ್ವಾನರಂ ವೇದ ತಂ ಗಚ್ಛಾಮೇತಿ ತೇ ಹಾಶ್ವಪತಿಂ ಕೈಕೇಯಮಾಜಗ್ಮುಸ್ತೇಭ್ಯೋ ಹ ಪೃಥಗಾವಸಥಾನ್ಪೃಥಗಪಚಿತೀಃ ಪೃಥಕ್-ಸಾಹಸ್ರಾನ್ಸೋಮಾನ್ಪ್ರೋವಾಚ ತೇ ಹ ಪ್ರಾತರಸಂವಿದಾನಾ ಏವ ಸಮಿತ್ಪಾಣಯಃ ಪ್ರತಿ-ಚಕ್ರಮಿರ ಉಪತ್ವಾಯಾಮೇತಿ ॥೨॥**

ಆಗ ಅವರೆಲ್ಲರೂ ಸೇರಿ ವೈಶಾನರಾಗ್ನಿಯ ಸ್ವರೂಪವನ್ನು ಸಂಪೂರ್ಣವಾಗಿ ತಿಳಿದುಕೊಂಡಿರುವ ಅಶ್ವಪತಿ ಕೈಕೇಯನಲ್ಲಿಗೆ ಹೋದರು. ಅವನು ಅಲ್ಲಿಗೆ ಬಂದ ಈ ಅತಿಥಿಗಳಿಗೆಲ್ಲಾ ಪ್ರತ್ಯೇಕವಾದ ವಾಸಸ್ಥಾನಗಳನ್ನೂ, ವೈಯಕ್ತಿಕವಾದ ಗೌರವಗಳನ್ನೂ, ಸಹಸ್ರಾರು ಪಾನಗಳನ್ನೂ ಅರ್ಪಿಸಿ ಅವರನ್ನು ಸತ್ಕರಿಸಿದನು ಮರುದಿನ ಪ್ರಾತಃಕಾಲ ಅವರೆಲ್ಲರೂ ತಮ್ಮ ಅಭಿಪ್ರಾಯಭೇದಗಳನ್ನೇ ಇಟ್ಟುಕೊಂಡು ತಮ್ಮ ಕೈಯಲ್ಲಿ ಸಮಿತ್ತುಗಳನ್ನು ಹಿಡಿದು 'ನಾವು ನಿಮ್ಮ ಶಿಷ್ಯರಾಗಬೇಕೆಂದಿದ್ದೇವೆ'. ಎಂದು ವಿಜ್ಞಾಪಿಸಿಕೊಂಡರು. ॥ ೨ ॥

ಸ ಹೋವಾಚ । ಯನ್ನು ಭಗವಂತೋಽನೂಚಾನಾ ಅನೂಚಾನಪುತ್ರಾಃ ಕಿಮಿದಮಿತಿ ತೇ ಹೋಚುರ್ವೈಶ್ವಾನರಂ ಹ ಭಗವಾನ್ತ್ಸಂಪ್ರತಿ ವೇದ ತಂ ನೋ ಬ್ರೂಹೀತಿ ಸ ಹೋವಾಚ ಸಂಪ್ರತಿ ಖಲು ನ್ವಾ ಅಹಂ ವೈಶ್ವಾನರಂ ವೇದಾಭ್ಯಾಧತ್ತ ಸಮಿಧ ಉಪೇತಾ ಸ್ಥೇತಿ ॥೩॥

ಆಗ ಅವನು, ನೀವೆಲ್ಲರೂ ಸಕಲಶಾಸ್ತ್ರಪಾರಂಗತರಾದವರ ಪುತ್ರರಾಗಿಯೂ ಅಧ್ಯಯನವನ್ನು ಮಾಡಿದವರಾಗಿಯೂ ಇದ್ದುಕೊಂಡು ನನ್ನಲ್ಲಿಗೆ ಶಿಷ್ಯವೃತ್ತಿಗೆ ಬಂದಿರುವುದೇನು? ಎಂದು ಆಶ್ಚರ್ಯಪಟ್ಟು ಅವರನ್ನು ಪ್ರಶ್ನಿಸಿದನು. ಆಗ ಅವರು– ನೀವು ವೈಶ್ವಾನರಾಗ್ನಿಯ ಸ್ವರೂಪವನ್ನು ಚೆನ್ನಾಗಿ ತಿಳಿದಿದ್ದೀರಿ. ನಮಗೂ ಅದರ ರಹಸ್ಯವನ್ನು ಉಪದೇಶಿಸಿ ಎಂದು ವಿಜ್ಞಾಪಿಸಿಕೊಂಡಾಗ ಅವನು 'ನನಗೆ ಆ ರಹಸ್ಯವು ಗೊತ್ತಿದೆ ನಿಮಗೂ ಅದನ್ನು ತಿಳಿಸುತ್ತೇನೆ. ಅಗ್ನಿಗೆ ಸಮಿತ್ತುಗಳನ್ನು ಅರ್ಪಿಸಿ ಇಂದಿನಿಂದ ನೀವು ನನ್ನ ಶಿಷ್ಯರಾಗಿದ್ದೀರಿ' ಎಂದನು. ॥೩॥

ಸ ಹೋವಾಚಾರುಣಮೌಪವೇಶಿಂ । ಗೌತಮ ಕಂ ತ್ವಂ ವೈಶ್ವಾನರಂ ವೇತ್ಥೇತಿ ಪೃಥಿವೀಮೇವ ರಾಜನ್ನಿತಿ ಹೋವಾಚೋಮಿತಿ ಹೋವಾಚೈಷ ವೈ ಪ್ರತಿಷ್ಠಾ ಏತಂ ರಯಿಂ ವೈಶ್ವಾನರ ಏತಂ ಹಿ ವೈತ್ವಂ ಪ್ರತಿಷ್ಠಾ ವೈಶ್ವಾನರಂ ವೇತ್ಥ ತಸ್ಮಾತ್ತ್ವಂ ಪ್ರ ತಿಷ್ಠಿತಃ ಪ್ರಜ್ಞಯಾ ಪಶುಭಿರಸಿ ಯೋ ವಾ ಏತಂ ಪ್ರತಿಷ್ಠಾಂ ವೈಶ್ವಾನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ಪಾದೌ ತ್ವಾ ಏತೌ ವೈಶ್ವಾನರಸ್ಯ ಪಾದೌ ತೇಽಮ್ಲಾಸ್ಯತಾಂ ಯದಿ ಹ ನಾಗಮಿಷ್ಯ ಇತಿ ಪಾದೌ ತೇಽವಿದಿತಾವಭವಿಷ್ಯತಾಂ ಯದಿ ಹ ನಾಗಮಿಷ್ಯ ಇತಿ ವಾ ॥೪॥

ಅನಂತರ ಅರುಣ ಔಪವೇಶಿಯನ್ನು ಕುರಿತು 'ಗೌತಮನೇ, ನಿನಗೆ ಗೊತ್ತಿರುವಂತೆ ವೈಶ್ವಾನರನಾರು?' ಎಂದು ಪ್ರಶ್ನಿಸಿದಾಗ 'ಪೃಥಿವಿಯೇ ವೈಶ್ವಾನರನೆಂದು' ಅವನು ಹೇಳಿದನು. ಆಗ ದೊರೆಯು 'ಹೌದು' ಸರ್ವಾಧಾರನಾದ ವೈಶ್ವಾನರನೇ ಅದು. ನೀನು ಈ ರಹಸ್ಯವನ್ನು ತಿಳಿದಿರುವುದರಿಂದ ಪಶುಪುತ್ರಾದಿಗಳೊಂದಿಗೆ ಸ್ಥಿರನಾಗಿ ಪ್ರತಿಷ್ಠಿತನಾಗಿದ್ದೀಯೆ! ಇದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುತ್ತಾನೆ ಆದರೆ ಸತ್ಯವಾಗಿಯೂ ಇವು ವೈಶ್ವಾನರನ ಪಾದಗಳು ಮಾತ್ರ. ನೀನು (ವೈಶ್ವಾನರನ ಪೂರ್ಣವಾದ ಸ್ವರೂಪವನ್ನು ತಿಳಿಯಲು) ಇಲ್ಲಿಗೆ ಬರದೇ ಇದ್ದಿದ್ದರೆ ನಿನ್ನ ಪಾದಗಳು ಸಡಿಲವಾಗಿ ಕ್ಷೀಣಿಸಿಬಿಡುತ್ತಿದ್ದವು ಅಥವಾ ನಿನ್ನ ಗೋಚರಕ್ಕೇ ಬೀಳುತ್ತಿರಲಿಲ್ಲ' ಎಂದನು. ॥೪॥

ಅಥ ಹೋವಾಚ ಸತ್ಯಯಜ್ಞಂ ಪೌಲುಷಿಂ । ಪ್ರಾಚೀನಯೋಗ್ಯ, ಕಂ ತ್ವಂ ವೈಶ್ವಾನರಂ ವೇತ್ಥೇತ್ಯಪ ಏವ ರಾಜನ್ನಿತಿ ಹೋವಾಚೋಮಿತಿ ಹೋವಾಚೈಷ ವೈ ರಯಿರ್ವೈಶ್ವಾನರ ಏತಂ ಹಿ ವೈತ್ವಂ ರಯಿಂ ವೈಶ್ವಾನರಂ ವೇತ್ಥ ನಸ್ಮಾತ್ತ್ವಂ ರಯಿಮಾನ್ಪುಷ್ಟಿಮಾನಸಿ ಯೋ ವಾ ಏತಂ ರಯಿಂ ವೈಶ್ವಾನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ವಸ್ತಿಸ್ತ್ವಾ ಏಷ ವೈಶ್ವಾನರಸ್ಯ ವಸ್ತಿಸ್ತ್ವಾಽಹಾಸ್ಯದ್ಯದಿ ಹ ನಾಗಮಿಷ್ಯ ಇತಿ ವಸ್ತಿಸ್ತೇಽವಿದಿತೋಽಭವಿಷ್ಯದ್ಯದಿ ಹನಾಗಮಿಷ್ಯ ಇತಿ ವಾ ॥೫॥

ಆಮೇಲೆ ಸತ್ಯಯಜ್ಞಪೌಲೂಷಿಯನ್ನು ಕುರಿತು ಎಲೈ ಪ್ರಾಚೀನಯೋಗ್ಯನೇ, ವೈಶ್ವಾನರನಾರೆಂಬುದಾಗಿ ನೀನುತಿಳಿದಿದ್ದೀಯೆ ಎಂದು ಪ್ರಶ್ನಿಸಲು ಅವನು ಅಪ್ಸೇ (ಉದಕ) ವೈಶ್ವಾನರನೆಂದನು. ಅದನ್ನೂ ಅನುಮೋದಿಸಿ ದೊರೆಯು ಅದು ವೈಶ್ವಾನರೀಯವಾದ ಧನವು. ನೀನು ಆ ಧನದ ಸ್ವರೂಪವನ್ನು ತಿಳಿದುದರಿಂದ ನೀನು ಧನಿಕನಾಗಿಯೂ ಉಚ್ಛ್ರಾಯಸ್ಥಿತಿಯನ್ನು ಹೊಂದಿದವನಾಗಿಯೂ ಇದ್ದೀಯೆ. ಅದನ್ನು ತಿಳಿದವನು ಮೃತ್ಯವನ್ನು ಜಯಿಸಿ ಪೂರ್ಣವಾದ ಆಯುಸ್ಸನ್ನು ಖಂಡಿತವಾಗಿಯೂ ಪಡೆಯುತ್ತಾನೆ. ಆದರೆ ಇದು ವೈಶ್ವಾನರನ ಅಂತಃಕೋಶಮಾತ್ರವಾಗಿದೆ. ನೀನು ಇಲ್ಲಿಗೆ ಬರದೇ ಇದ್ದಿದ್ದರೆ ನಿನ್ನ ಕೋಶವೂ ಅಪ್ರಯೋಜಕವಾಗುತ್ತಿತ್ತು ಅಥವಾ ನಿನ್ನ ಗೋಚರಕ್ಕೆ ಅದು ಬೀಳುತ್ತಿರಲೇ ಇಲ್ಲ ಎಂದನು. ||೫||

**ಅಥ ಹೋವಾಚ ಮಹಾಶಾಲಂ ಜಾಬಾಲಂ । ಔಪಮನ್ಯವ ಕಂ ತ್ವಂ ವೈಶ್ವಾನರಂ ವೇತ್ಥೇತ್ಯಾ-ಕಾಶಮೇವ ರಾಜನ್ನಿತಿ ಹೋವಾಚೋಮಿತಿ ಹೋವಾಚೈಷ ವೈ ಬಹುಲೋ ವೈಶಾನರ ಏತಂ ಹಿ ವೈ ತ್ವಂ ಬಹುಲಂ ವೈಶ್ವಾನರಂ ವೇತ್ಥ ತಸ್ಮಾ ತ್ತ್ವಂ ಬಹು ಪ್ರಜಯಾ ಪಶುಭಿರಸಿ ಯೋ ವಾ ಏತಂ ಬಹುಲಂ ವೈಶ್ವಾನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯು-ರೇತ್ಯಾತ್ಮಾ ತ್ವಾ ಏಷ ವೈಶ್ವಾನರಸ್ಯಾತ್ಮಾ ತ್ವಾಹಾಸ್ಯದ್ಯದಿ ಹ ನಾಗಮಿಷ್ಯ ಇತ್ಯಾತ್ಮಾ ತೇಽವಿದಿತೋಽಭವಿಷ್ಯದ್ಯದಿ ಹ ನಾಗಮಿಷ್ಯ ಇ ತಿವಾ ||೬||**

ಅನಂತರ ಮಹಾಶಾಲಜಾಬಾಲನನ್ನು ಕುರಿತು ಎಲೈ ಔಪಮನ್ಯವನೇ, ವೈಶ್ವನರನಾರೆಂಬುದಾಗಿ ನೀನು ತಿಳಿದಿದ್ದೀಯೆ ಎಂದನು. **ಆಕಾಶವೆಂದು** ಅವನು ಉತ್ತರವನ್ನು ಕೊಡಲು ಅದನ್ನೂ ಒಪ್ಪಿ ಅದು ವೈಶ್ವಾನರಬಹುಲ (ಸಮೃದ್ಧ) ವೆಂದೂ ಇದನ್ನು ತಿಳಿದುಕೊಂಡಿರುವುದರಿಂದಲೇ ನೀನು ಪಶುಪುತ್ರಾದಿಗಳ ಬಾಹುಳ್ಯವನ್ನು ಹೊಂದಿರುವೆ. ಇದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣವಾದ ಆಯುಸ್ಸನ್ನು ಪಡೆಯುತ್ತಾನೆ. ಆದರೆ ಇದು ವೈಶ್ವಾನರನ ಪ್ರಧಾನ ಕಾಂಡಮಾತ್ರವಾಗಿರುವುದು ನೀನು ಇಲ್ಲಿಗೆ ಬರದಿದ್ದರೆ ನಿನ್ನ ದೇಹದ ಮುಖ್ಯತತ್ತ್ವವೇ ಅಪ್ರಯೋಜಕವಾಗುತ್ತಿತ್ತು. ಅಥವಾ ನಿನಗೆ ಅದು ತಿಳಿಯುತ್ತಲೇ ಇರಲಿಲ್ಲ ಎಂದನು. ||೬||

**ಅಥ ಹೋಚ ಬುಡಿಲಮಾಶ್ವತರಾಶ್ವಿಂ । ವೈಯಾಘ್ರಪದ್ಯ ಕಂ ತ್ವಂ ವೈಶ್ವಾನರಂ ವೇತ್ಥೇತಿ ವಾಯುಮೇವ ರಾಜನ್ನಿತಿ ಹೋವಾಚೋಮಿತಿ ಹೋವಾಚೈಷ ವೈ ಪೃಥಗ್ವರ್ತ್ಮಾ: ವೈಶ್ವಾನರ ಏತಂ ಹಿ ವೈ ತ್ವಂ ಪೃಥಗ್ವರ್ತ್ಮಾನಂ ವೈಶ್ವಾನರಂ ವೇತ್ಥ ತಸ್ಮಾತ್ತ್ವಾಂ ಪೃಥಗ್ರಥಶ್ರೇಣಯೋಽ-ನುಯಾಂತಿ ಯೋ ವಾ ಏತಂ ಪೃಥಗ್ವರ್ತ್ಮಾನಂ ವೈಶ್ವಾನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ಪ್ರಾಣಸ್ತ್ವ ಏಷ ವೈಶ್ವಾನರಸ್ಯ ಪ್ರಾಣಸ್ತ್ವಾಹಾಸ್ಯದ್ಯದಿ ಹ ನಾಗಮಿಷ್ಯ ಇತಿ ಪ್ರಾಣಸ್ತೇಽವಿದಿತೋಽಭವಿಷ್ಯದ್ಯದಿ ಹ ನಾಗಮಿಷ್ಯ ಇತಿ ವಾ || ೭ ||**

ಪುನಃ ಬುಡಿಲ ಆಶ್ವತರಾಶ್ವಿಯನ್ನು ಕುರಿತು ಎಲೈ ವೈಯಾಘ್ರಪದ್ಯನೇ, ವೈಶ್ವಾನರನಾರೆಂಬುದಾಗಿ ನೀನು ತಿಳಿದಿದ್ದೀಯೆ ಎನ್ನಲು ಅವನು **ವಾಯುವೇ** ವೈಶ್ವಾನರನೆಂದನು. ಅದನ್ನೂ ಒಪ್ಪಿಕೊಂಡು ಆ ರಾಜರ್ಷಿಯು ವಾಯುವು ವೈಶ್ವಾನರನ ಮಾರ್ಗವೈವಿಧ್ಯವು. ನೀನು ಇದನ್ನು ತಿಳಿದುದರಿಂದಲೇ ನಾನಾಮಾರ್ಗಗಳಲ್ಲಿ ಸಂಚರಿಸತಕ್ಕ ರಥಗಳು ನಿನ್ನನ್ನು ಹಿಂಬಾಲಿಸುತ್ತವೆ. ಇದನ್ನು ತಿಳಿದವನು ಖಂಡಿತವಾಗಿಯೂ ಮೃತ್ಯುವನ್ನು ಜಯಿಸಿ ಪೂರ್ಣಾಯುಸ್ಸನ್ನು

ಪಡೆಯುತ್ತಾನೆ. ಆದರೆ ಇದು ವೈಶ್ವಾನರನ ಉಸಿರು ಮಾತ್ರವಾಗಿದೆ. ನೀನು ನನ್ನಲ್ಲಿಗೆ ಬರದಿದ್ದರೆ ನಿನಗೆ ನಿನ್ನ ಉಸಿರೂ ಅಪ್ರಯೋಜಕವಾಗುತ್ತಿತ್ತು ಅಥವಾ ನಿನಗೆ ಅದರ ಅರಿವೇ ಇರುತ್ತಿರಲಿಲ್ಲ ಎಂದನು. ||೭||

**ಅಥ ಹೋವಾಚೇಂದ್ರದ್ಯುಮ್ನಂ ಭಾಲ್ಲವೇಯಮ್। ವೈಯಾಘ್ರಪದ್ಯ ಕಂ ತ್ವಂ ವೈಶ್ವಾನರಂ ವೇತ್ಥೇ-ತ್ಯಾದಿತ್ಯಮೇವ ರಾಜನ್ನಿತಿ ಹೋವಾಚೋಮಿತಿ ಹೋವಾಚೈಷ ವೈ ಸುತತೇಜಾ ವೈಶ್ವಾನರ ಏತಂ ಹಿ ವೈ ತ್ವಾಂ ಸುತತೇಜಸಂ ವೈಶ್ವಾನರಂ ವೇತ್ಥ ತಸ್ಮಾತ್ತ್ವೈಷ ಸುತೋಽದ್ಯಮಾನಃ ಪಚ್ಯಮಾನೋಽಕ್ಷೀಯಮಾಣೋ ಗೃಹೇಷು ತಿಷ್ಠತಿ ಯೋ ವಾ ಏತಂ ಸುತತೇಜಸಂ ವೈಶ್ವಾ-ನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ಚಕ್ಷುಸ್ತ್ವೇತದ್ವೈಶ್ವಾನರಸ್ಯ ಚಕ್ಷುಸ್ತ್ವಾಹಾಸ್ಯದ್ಯದಿ ಹ ನಾಗಮಿಷ್ಯ ಇತಿ ಚಕ್ಷುಸ್ತೇಽವಿದಿತಮಭವಿಷ್ಯದ್ಯದಿ ಹ ನಾಗಮಿಷ್ಯ ಇತಿ ವಾ ||೮||**

ಅನಂತರ ಇಂದ್ರದ್ಯುಮ್ನ ಭಾಲ್ಲವೇಯನನ್ನು ಕುರಿತು ವೈಶ್ವಾನರನಾರೆಂದು ನೀನು ತಿಳಿದ್ದೀಯೆ ಎಂದು ಪ್ರಶ್ನಿಸಲಾಗಿ ಅವನು ಆದಿತ್ಯನೇ ವೈಶ್ವಾನರನೆಂದನು. ಅದನ್ನೂ ಅನುಮೋದಿಸಿ ನಿಜವಾಗಿಯೂ, ಸೋಮನ ತೇಜಸ್ಸೇ ವೈಶ್ವಾನರನು. ನೀನು ಇದನ್ನು ತಿಳಿದಿರುವುದರಿಂದಲೇ ನಿನ್ನ ಗೃಹದಲ್ಲಿ ಯಾವಾಗಲೂ ಸೋಮರಸವೂ ಅದರ ಪಾಕವೂ ಇಲ್ಲದೇ ಇರುವುದೇ ಇಲ್ಲ. ಇದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುತ್ತಾನೆ. ಆದರೆ ಇದು ವೈಶ್ವಾನರನ ನೇತ್ರಮಾತ್ರವಾಗಿದೆ. ನೀನು ನನ್ನಲ್ಲಿಗೆ ಬರದಿದ್ದರೆ ನಿನ್ನ ನೇತ್ರವೂ ಅಪ್ರಯೋಜಕವಾಗುತ್ತಿತ್ತು. ಅಥವಾ ನಿನಗೆ ಅದರ ಅರಿವೇ ಇರುತ್ತಿರಲಿಲ್ಲ ಎಂದನು. ||೮||

**ಅಥ ಹೋವಾಚ ಜನಂ ಶಾರ್ಕರಾಕ್ಷ್ಯಂ । ಸಾಯವಸ ಕಂ ತ್ವಂ ವೈಶ್ವಾನರಂ ವೇತ್ಥೇತಿ ದಿವಮೇವ ರಾಜನ್ನಿತಿ ಹೋವಾಚ ಓಮಿತಿ ಹೋವಾಚೈಷ ವಾಽಅತಿಷ್ಠಾ ವೈಶ್ವಾನರ ಏತಂ ಹಿ ವೆ ತ್ವಮತಿಷ್ಠಾ ವೈಶ್ವಾನರಂ ವೇತ್ಥ ತಸ್ಮಾತ್ತ್ವಂ ಸಮಾನಾನತಿತಿಷ್ಠಸಿ ಯೋ ವಾ ಏತಮತಿಷ್ಠಾಂ ವೈಶ್ವಾನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ಮೂರ್ಧಾ ತ್ವಾ ಏಷ ವೈಶ್ವಾನರಸ್ಯ ಮೂರ್ಧಾ ತ್ವಾಹಾಸ್ಯದ್ಯದಿ ಹ ನಾಗಮಿಷ್ಯ ಇತಿ ಮೂರ್ಧಾ ತೇಽವಿದಿತೋಽ-ಭವಿಷ್ಯದ್ಯದಿ ಹ ನಾಗಮಿಷ್ಯ ಇತಿ ವಾ ||೯||**

ಆಮೇಲೆ, ಜನಶರ್ಕರಾಕ್ಷ್ಯನನ್ನು ಕುರಿತು ಎಲೈ ಸಾಯವಸನೇ, ವೈಶ್ವಾನರನಾರೆಂಬುದಾಗಿ ನೀನು ತಿಳಿದಿದ್ದೀಯೆ ಎಂದು ಪ್ರಶ್ನಿಸಲು ಅವನು ಅಂತರಿಕ್ಷವೆಂದು ಹೇಳಿದನು. ಅದನ್ನೂ ಅನುಮೋದಿಸುತ್ತ ಅಂತರಿಕ್ಷವೇ ವೈಶ್ವಾನರನ ಸರ್ವೋತ್ಕೃಷ್ಟವಾದ ಅಂಶ. ನೀನು ಅದನ್ನು ತಿಳಿದಿರುವುದರಿಂದಲೇ ನೀನು ನಿನ್ನ ಸಮಾನರಾದವರಲೆಲ್ಲಾ ಅತ್ಯುತ್ಕೃಷ್ಟನಾಗಿದ್ದೀಯೆ. ಇದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುತ್ತಾನೆ. ಆದರೆ ಇದು ವೈಶ್ವಾನರನ ಶಿರೋಭಾಗಮಾತ್ರವಾಗಿದೆ. ನೀನು ನನ್ನಲ್ಲಿಗೆ ಬರದಿದ್ದರೆ ನಿನ್ನ ಶಿರಸ್ಸೂ ಅಪ್ರಯೋಜಕವಾಗುತ್ತಿತ್ತು ಅಥವಾ ನಿನಗೆ ಅದರ ತಿಳಿವಳಿಕೆಯೇ ಇರುತ್ತಿರಲಿಲ್ಲ ಎಂದನು. ||೯||

**ತಾನ್ ಹೋವಾಚ ಏತೇ ವೈ ಯೂಯಂ ಪೃಥಗ್ವೈಶ್ವಾನರಾನ್ವಿದ್ವಾಂಸಃ ಪೃಥಗನ್ನಮಘಸ್ತ್ರಂ ಪ್ರಾದೇಶಮಾತ್ರಮಿವ ಹ ವೈ ದೇವಾಃ ಸುವಿದಿತಾ ಅಭಿಸಂಪನ್ನಾಸ್ತಥಾ ತು ವ ಏನಾನ್ವಕ್ಷ್ಯಾಮಿ ಯಥಾ ಪ್ರಾದೇಶಮಾತ್ರಮೇವಾಭಿಸಂಪಾದಯಿಷ್ಯಾಮೀತಿ ||೧೦||**

ಕೊನೆಯಲ್ಲಿ ಅವರೆಲ್ಲರನ್ನೂ ಒಟ್ಟಿಗೆ ಉದ್ದೇಶಿಸಿ ನಿಮ್ಮಲ್ಲಿ ಪ್ರತಿಯೊಬ್ಬರೂ ವೈಶ್ವಾನರನ ಬೇರೆ ಬೇರೆ ಅಂಶಗಳನ್ನು ಮಾತ್ರ ಗ್ರಹಿಸಿದ್ದೀರಿ. ಆದುದರಿಂದಲೇ ಬೇರೆ ಬೇರೆ ಅನ್ನವನ್ನು ಭುಜಿಸುತ್ತಿದ್ದೀರಿ. ಸುವಿದಿತರಾದ ಈ ದೇವತೆಗಳು ಪ್ರಾದೇಶವರ್ತಿಗಳಾಗಿ (Measure of a span) ಮಾತ್ರ ಇರುವುದರಿಂದ ನಿನುಗೆ ಆಯಾ ದೇವತೆಗಳು ಪ್ರಾದೇಶ ವರ್ತಿಗಳಾಗಿ ಮಾತ್ರವಿರುವಂತೆ ನಿಮಗೆ ವಿವರಿಸುತ್ತೇನೆ ಎಂದನು ॥೧೦॥

**ಸ ಹೋವಾಚ । ಮೂರ್ಧಾನಮುಪದಿಶನ್ನೇಷ ವಾ ಅತಿಷ್ಠಾ ವೈಶಾನರ ಇತಿ, ಚಕ್ಷುಷೀ ಉಪ-ದಿಶನ್ನುವಾಚೈಷ ವೈ ಸುತತೇಜಾ ವೈಶ್ವಾನರ ಇತಿ, ನಾಸಿಕೇऽಉಪದಿಶನ್ನುವಾಚೈಷ ವೈ ಪೃಥ-ಗ್ವರ್ತ್ಮಾ ವೈಶ್ವಾನರ ಇತಿ, ಮುಖ್ಯಮಾಕಾಶಮುಪದಿಶನ್ನುವಾಚೈಷ ವೈ ಬಹುಲೋ ವೈಶ್ವಾನರ ಇತಿ ಮುಖ್ಯಾ ಅಪ ಉಪದಿಶನ್ನುವಾಚೈಷ ವೈ ರಯಿರ್ವೈಶ್ವಾನರ ಇತಿ ಛುಬುಕಮುಪದಿಶನ್ನು-ವಾಚೈಷ ವೈ ಪ್ರತಿಷ್ಠಾ ವೈಶ್ವಾನರ ಇತಿ, ಸ ಏಷೋऽಗ್ನಿರ್ವೈಶ್ವಾನರೋ ಯತ್ಪುರುಷಃ ಸ ಯೋ ಹೈತಮೇವಮಗ್ನಿಂ ವೈಶ್ವಾನರಂ ಪುರುಷವಿಧಂ ಪುರುಷೇऽಂತಃ ಪ್ರತಿಷ್ಠಿತಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ನ ಹಾಸ್ಯ ಬ್ರುವಾಣಂ ಚ ನ ವೈಶ್ವಾನರೋ ಹಿನಸ್ತಿ ॥೧೧॥**

ಕೊನೆಯಲ್ಲಿ ತಲೆಯನ್ನು ನಿರ್ದೇಶಿಸಿ ಇದು ವೈಶ್ವಾನರನ ಉತ್ಕೃಷ್ಟವಾದ ಅಂಶವೆಂದೂ, ಕಣ್ಣುಗಳನ್ನು ತೋರಿಸಿ ಇದು ವೈಶ್ವಾನರನ ಅಂಶವಾದ **ಸೋಮ ತೇಜಸ್ಸೆಂದೂ,** ನಾಸಿಕದ ಕಡೆ ತೋರಿಸಿ ಇದು ವೈಶ್ವಾನರನ ಮಾರ್ಗಗಳ ವೈವಿಧ್ಯವೆಂದೂ, ಆಕಾಶವನ್ನು ನಿರ್ದೇಶಿಸಿ ಇದು ಸಮೃದ್ಧ ವೈಶ್ವಾನರನೆಂದೂ, ಮುಖೋದಕದ ಕಡೆ ತೋರಿಸಿ ಇದು ವೈಶ್ವಾನರಧನವೆಂದೂ, ಗಡ್ಡವನ್ನು ತೋರಿಸಿ, ಇದು ವೈಶ್ವಾನರನ ಆಧಾರವೆಂದೂ ಹೇಳಿದನು. ಈ ವೈಶ್ವಾನರಾಗ್ನಿಯು ಪುರುಷಶ್ರೇಷ್ಠನಲ್ಲದೆ ಬೇರೆ ಯಾರೂ ಅಲ್ಲವೆಂದೂ, ಮತ್ತು ಪುರುಷರೂಪನೂ, ಪುರುಷನ ಅಂತಸ್ಥನಾಗಿ ಪ್ರತಿಷ್ಠಿತನಾಗಿರುವವನೂ ಆದ ಈ ವೈಶ್ವಾನರಾಗ್ನಿಯನ್ನು ತಿಳಿದವನು ಮರಣವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುವನೆಂದೂ, ಇವನ ಪ್ರಶಂಸೆಯನ್ನು ಯಾವಾಗಲೂ ಮಾಡುವವನಿಗೆ ಯಾವ ತೊಂದರೆಯೂ ಆಗಲಾರದೆಂದೂ ವಿವರಿಸಿದನು ॥೧೧॥

(ಶ. ಬ್ರಾ. ೧೦, ೬-೧-೧ರಿಂದ ೧೧)

**ಅಭಿಪಿತ್ವೇ**—ಈ ಶಬ್ದಕ್ಕೆ ಸಾಯಣರು **ಅಭಿಪತನೀಯೇ** ಈಗ ನಡೆಯುತ್ತಿರುವ ಅಥವಾ ಈಗ ಪ್ರಾಪ್ತವಾಗಿರುವ ಎಂದು ಅರ್ಥವಿವರಣೆಮಾಡಿರುವರು. **ಯಾಸ್ಕರು** ನಿರುಕ್ತದಲ್ಲಿ (ನಿ ೩-೧೫) **ಅಭಿಪಿತ್ವಂ ಅಭಿಪ್ರಾಪ್ತಿಂ** ಎಂದರೆ ಈಗ ನಡೆಯುತ್ತಿರುವ ಅಥವಾ ಈಗ ಮಾಡುತ್ತಿರುವ ಎಂಬರ್ಥವನ್ನೇ ಹೇಳಿರುವರು.

**ವಿಶ್ವಂ ಜಗತ್**—ಈ ಪದಗಳಿಗೆ ಸಾಯಣರು ಎರಡು ವಿಧವಾದ ಅರ್ಥವನ್ನು ಹೇಳಿರುವರು **ಏತತ್ಸ್ಥಾವರಸ್ಯಾಪ್ಯುಲಪಕ್ಷಣಂ । ಕೃತ್ಸ್ನಂ ಪ್ರಪಂಚಂ ।** ಎಂದರೆ ಚಲಿಸದಿರುವ ಸಮಸ್ತ ಜಗತ್ತು ಎಂದು ಒಂದು ವಿಧವಾದ ಅರ್ಥವನ್ನೂ **ಯದ್ವಾ ಜಗಚ್ಛಬ್ದೋ ಯಜಮಾನರೂಪಮನುಷ್ಯವಾಚೀ । ಸರ್ವಾನಪಿ ಯಜಮಾನಾನ್** ಅಥವಾ ಜಗಚ್ಛಬ್ದವು ಯಜಮಾನರೂಪದಿಂದಿರುವ ಮನುಷ್ಯರನ್ನು ಎಂಬ ಅರ್ಥವನ್ನೂ ಸೂಚಿಸುವುದು. ಆದುದರಿಂದ ಇಲ್ಲಿ **ವಿಶ್ವಂ ಜಗತ್** ಎಂದರೆ ಸಮಸ್ತ ಯಜಮಾನರನ್ನೂ ಎಂದು ಎರಡನೆಯ ಅರ್ಥವನ್ನು ಹೇಳಿರುವರು

**ಮನೀಷಾ—ಮನೀಷಯಾ । ಮನಸ ಈಶಿತೃತ್ವೇನ । ಸ್ವೇಚ್ಛಯೇತ್ಯರ್ಥಃ ।** ತನ್ನ ಮನಸ್ಸು ಹೇಳಿದಂತೆ ಅಥವಾ ಒಪ್ಪಿದಂತೆ ಎಂದರೆ ಆತ್ಮಸಂತೋಷದಿಂದ ಎಂದಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ಇಳಾಭಿಃ**—ಈಡ ಸ್ತುತೌ. ಧಾತು. ಛಾಂದಸವಾಗಿ ಹ್ರಸ್ವ ಬರುತ್ತದೆ. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಧಾತುಸ್ವರ ಉಳಿಯುತ್ತದೆ. **ಟಾಪಂಚಾಪಿ ಹಲಂತಾನಾಂ ಯಥಾ ವಾಚಾ ದಿಶಾ ನಿಶಾ** (ಕೌ ೨-೪-೮೨) ಎಂಬುದರಿಂದ ಹಲಂತವಾದರೂ ಸ್ತ್ರೀತ್ವದಲ್ಲಿ ಟಾಪ್ ಬರುತ್ತದೆ. ತೃತೀಯಾ ಬಹುವಚನಾಂತರೂಪ.

**ಸುಶಸ್ತಿ**—ಶಂಸು ಸ್ತುತೌ. ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಕ್ತಿನ್ ಪ್ರತ್ಯಯ. **ಅನುದಾತ್ತೋಪದೇಶವನತಿ**—(ಪಾ. ಸೂ. ೬-೪-೩೭) ಎಂಬುದರಿಂದ ಅನುನಾಸಿಕಲೋಪ. ಶೋಭನಾಃ ಶಸ್ತಯಃ ಯಾಸು ತಾಃ ಸುಶಸ್ತಿ. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ತೃತೀಯಾ ಬಹುವಚನ ಪರವಾದಾಗ ಅದಕ್ಕೆ ಲುಕ್.

**ವಿಶ್ವಾನರಃ**—**ನರೇ ಸಂಜ್ಞಾಯಾಂ** (ಪಾ. ಸೂ. ೬-೩-೧೨೯) ಎಂಬುದರಿಂದ ನರ ಶಬ್ದಪರವಾದುದರಿಂದ ಪೂರ್ವದಲ್ಲಿರುವ ವಿಶ್ವ ಶಬ್ದಕ್ಕೆ ದೀರ್ಘಬರುತ್ತದೆ.

**ಏತು**—ಇಣ್ ಗತೌ ಧಾತು. ಲೋಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಮತ್ಸಥ**—ಮದೀ ಹರ್ಷಗ್ಲೇಪನಯೋಃ ಧಾತು. ಅಂತರ್ಭಾವಿತಣ್ಯರ್ಥಕವಾಗಿದೆ. ಲಟ್ ಮಧ್ಯಮಪುರುಷ ಬಹುವಚನದಲ್ಲಿ ಥ ಪ್ರತ್ಯಯ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬಲ್ಲಿ ಬಹುಲಗ್ರಹಣ ಸಾಮರ್ಥ್ಯದಿಂದ ಇಲ್ಲಿಯೂ ಸಿಪ್. **ಖರಿ ಚ** ಎಂಬುದರಿಂದ ಧಾತು ದಕಾರಕ್ಕೆ ಚರ್ತ್ವ. ಯಥಾ ಎಂಬುದು ಹಿಂದೆ ಇರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್** (ಪಾ. ಸೂ ೬-೧-೧೮೬) ಎಂಬುದರಿಂದ ಲಸಾರ್ವಧಾತುಕ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ಮನೀಷಾ**—**ಸುಪಾಂ ಸುಲುಕ್** ಸೂತ್ರದಿಂದ ತೃತೀಯಾ ಏಕವಚನಪರವಾದಾಗ ಅದಕ್ಕೆ ಲುಕ್.

---

ಸಂಹಿತಾಪಾಠಃ

**ಆ ನೋ ವಿಶ್ವ ಆಸ್ಕ್ರಾ ಗಮಂತು ದೇವಾ ಮಿತ್ರೋ ಅರ್ಯಮಾ ವರುಣಃ ಸಜೋಷಾಃ ।**

**ಭುವನ್ಯಥಾ ನೋ ವಿಶ್ವೇ ವೃಧಾಸಃ ಕರನ್ತ್ಸುಷಾಹಾ ವಿಥುರಂ ನ ಶವಃ ॥ ೨ ॥**

॥ ಪದಪಾಠಃ ॥

ಆ । ನಃ । ವಿಶ್ವೇ । ಅಸ್ಕ್ರಾಃ । ಗಮಂತು । ದೇವಾಃ । ಮಿತ್ರಃ । ಅರ್ಯಮಾ । ವರುಣಃ । ಸಽಜೋಷಾಃ ।

ಭುವನ್ । ಯಥಾ । ನಃ । ವಿಶ್ವೇ । ವೃಧಾಸಃ । ಕರನ್ । ಸುಽಸಹಾ । ವಿಥುರಂ । ನ । ಶವಃ ॥ ೨ ॥

ಸಾಯಣಭಾಷ್ಯಂ

ವೈಶ್ವದೇವೇ ಪಶಾವಾ ನೋ ವಿಶ್ವ ಇತ್ಯೇಷಾ ಹವಿಷಃ ಪುರೋನುವಾಕ್ಯಾ । ಆ ನೋ ದೇವಾನಾಮುಪವೇತು ಶಂಸ ಆ ನೋ ವಿಶ್ವ ಆಸ್ಕ್ರಾ ಗಮಂತು ದೇವಾಃ । ಅ. ೩-೭ । ಇತಿ ॥

ನೋಽಸ್ಮಾಕಂ ಯಜ್ಞಂ ವಿಶ್ವೇ ಸರ್ವೇ ದೇವಾ ಅಸ್ಕ್ರಾಃ ಶತ್ರೂಣಾಮಾಸ್ಕಂದಯಿತಾರ ಆಕ್ರಮಿತಾರೋ ವಾ ಆ ಗಮಂತು । ಆಗಚ್ಛಂತು । ಕೇ ತೇ । ಮಿತ್ರೋಽರ್ಯಮಾ ವರುಣಶ್ಚ ತ್ರಯೋಽಪಿ ಸಜೋಷಾಃ ಸಮಾನಪ್ರೀತಯಃ ಸಂತ ಆಗಚ್ಛಂತು । ಕಿಂತು ವಿಶ್ವೇ ದೇವಾ ನೋಽಸ್ಮಾಕಂ ವೃಧಃಸೋ ವರ್ಧಯಿತಾರೋ ಯಥಾ ಭುವನ್ ಭವೇಯುಃ ತಥಾ ಸುಷಾಹಾ ಸುಷ್ಠು ಶತ್ರೂಣಾಮಭಿಭವೇನ ನೋಽಸ್ಮದೀಯಂ ಶವೋಽನ್ನಂ ವಿಥುರಂ ಹೀನಂ ಯಥಾ ನ ಕರನ್ ನ ಕುರ್ಯುಃ ತಥಾಗಚ್ಛಂತು ॥

ಪ್ರತಿಪದಾರ್ಥ

ವಿಶ್ವೇ (ದೇವಾಃ)—ವಿಶ್ವೇ ದೇವತೆಗಳು । ನಃ—ನಮಗೆ । ವೃಧಾಸಃ—ವೃದ್ಧಿಕಾರಕರಾಗಿ । ಯಥಾ ಭುವನ್—ಹೇಗೆ ಆದರೋ (ಮತ್ತು) । ಸುಷಾಹಾ—ಶತ್ರುಗಳನ್ನು ಸೋಲಿಸಿ ನಾಶಪಡಿಸುವುದರ ಮೂಲಕ । ನಃ—ನಮ್ಮ । ಶವಃ—ಅನ್ನವನ್ನು । ವಿಥುರಂ—ಹೀನವಾದುದನ್ನಾಗಿ । (ಯಥಾ) ನ ಕರನ್—ಹೇಗೆ ಮಾಡುವುದಿಲ್ಲವೋ (ಹಾಗೆ) । ಮಿತ್ರಃ—ಮಿತ್ರನೂ । ಅರ್ಯಮಾ—ಅರ್ಯಮನೂ । ವರುಣಃ—ವರುಣನೂ । ವಿಶ್ವೇ ದೇವಾಃ—ಈ ಸಕಲ ದೇವತೆಗಳೂ । ಸಜೋಷಾಃ—ಸಮಾನವಾದ ಪ್ರೀತಿಯಿಂದ ಕೂಡಿದವರಾಗಿಯೂ । ಅಸ್ಕ್ರಾಃ— (ನಮ್ಮ ಶತ್ರುಗಳನ್ನು) ಪ್ರತಿಭಟಿಸುವವರಾಗಿಯೂ । ನಃ — ನಮ್ಮ ಯಾಗವನ್ನುದ್ದೇಶಿಸಿ । ಆ ಗಮಂತು—ಬರಲಿ.

ಭಾವಾರ್ಥ

ವಿಶ್ವೇ ದೇವತೆಗಳು ನಮಗೆ ವೃದ್ಧಿಕಾರಕರಾಗಿ ಆಗಿರುವಂತೆಯೂ ನಮ್ಮ ಶತ್ರುಗಳನ್ನು ಸೋಲಿಸಿ ನಾಶಪಡಿಸುವುದರ ಮೂಲಕ ನಮ್ಮ ಅನ್ನವನ್ನು ಇಲ್ಲದಂತೆ ಮಾಡದೇ ವೃದ್ಧಿಮಾಡುವಂತಹವರಾಗಿಯೂ ಆಗಿ ಮಿತ್ರನೂ, ಅರ್ಯಮನೂ, ವರುಣನೂ, ಈ ಸಕಲ ದೇವತೆಗಳೂ ಸಹ ಸಮಾನವಾದ ಪ್ರೀತಿಯಿಂದ ಕೂಡಿದವರಾಗಿಯೂ, ನಮ್ಮ ಶತ್ರುಗಳನ್ನು ಪ್ರತಿಭಟಿಸುವವರಾಗಿಯೂ ಸಹ ನಮ್ಮ ಯಾಗವನ್ನುದ್ದೇಶಿಸಿ ಬರಲಿ.

English Trnslation

May all the triumphant gods, Mitra, Aryaman, Varuna equally well pleased, come (to our rite) : may they all be propitious to us : may they not leave us in want of food, after overcoming (our foes).

## ವಿಶೇಷವಿಷಯಗಳು

ಪಶುಯಾಗದಲ್ಲಿ ವಿಶ್ವೇದೇವತಾಕವಾದ ಹವಿಸ್ಸನ್ನು ಹೋಮಮಾಡುವಾಗ **ಆ ನೋ ವಿಶ್ವೇ** ಎಂಬ ಈ ಋಕ್ಕನ್ನು ಪುರೋನುವಾಕ್ಯಾ ಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಆ ನೋ ದೇವಾನಾಮುಪವೇತು ಶಂಸ ಆ ನೋ ವಿಶ್ವ ಆಸ್ಕ್ರಾಗಮಂತು ದೇವಾಃ** ಎಂಬ ಸೂತ್ರದಿಂದ (ಆ. ೩-೭) ವಿವೃತವಾಗಿರುವುದು.

**ಆಸ್ಕ್ರಾಃ**—ಶತ್ರುಗಳನ್ನು ಸೋಲಿಸುವವರು ಅಥವಾ ಆಕ್ರಮಿಸುವವರು. ದೇವತೆಗಳು ನಮ್ಮ ಶತ್ರುಗಳನ್ನು ಸೋಲಿಸಿ ನಮ್ಮ ಯಜ್ಞಭೂಮಿಗೆ ಬಂದು ನಮಗೆ ಅನ್ನಾದ್ಯಾಹಾರಗಳನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಲಾಗಿದೆ.

**ವಿಶ್ವೇ ದೇವಾಃ**—ಎಲ್ಲಾ ದೇವತೆಗಳೂ ಇಲ್ಲಿ ಮಿತ್ರ, ಅರ್ಯಮ, ವರುಣ ಎಂಬ ದೇವತೆಗಳೊಡನೆ ಸೇರಿ ಬರಬೇಕೆಂದು ಪ್ರಾರ್ಥಿಸಿದೆ. ಎಲ್ಲಾ ದೇವತೆಗಳು ಎಂದು ಹೇಳುವಾಗ ಮಿತ್ರ, ಅರ್ಯಮ, ವರುಣ ಎಂಬ ದೇವತೆಗಳು ಅವರಲ್ಲಿ ಸೇರಿಹೋಗಲಿಲ್ಲವೇ ಎಂದರೆ, ಹಾಗೆ ಸೇರಿದ್ದರೂ ಮುಖ್ಯವಾಗಿ ಈ ಮೂರು ದೇವತೆಗಳೂ ಬಂದೇಬರಬೇಕೆಂದು ಒತ್ತಿ ಹೇಳುವುದಕ್ಕಾಗಿ ಈ ಮೂರು ದೇವತೆಗಳ ಹೆಸರನ್ನು ಪ್ರತ್ಯೇಕವಾಗಿ ಸೂಚಿಸಿದೆ.

**ಮಿತ್ರಃ ಅರ್ಯಮಾ, ವರುಣಃ**—ಈ ಮೂರುದೇವತೆಗಳೂ ಪ್ರತ್ಯೇಕದೇವತೆಗಳೆಂದು ಭಾವಿಸಲ್ಪಟ್ಟಿದ್ದರೂ ಇವರು ಸೂರ್ಯನ ಅನೇಕ ರೂಪಗಳಾದ ಎಂದರೆ ದ್ವಾದಶಾದಿತ್ಯದಲ್ಲಿ ಈ ಹೆಸರಿನ ಅಂಶದೇವತೆಗಳೆಂದು ಇಲ್ಲಿ ವಿವರಿಸಲ್ಪಟ್ಟಿರುವಂತೆ ತೋರುತ್ತದೆ. ಇದಲ್ಲದೆ ಈ ಮೂರು ದೇವತೆಗಳೂ ಅಗ್ನಿಯ ಬೇರೆ ರೂಪಗಳೆಂದು ಕೆಲವು ಕಡೆ ಹೇಳಿದೆ.

**ತ್ವಮಗ್ನೇ ವರುಣೋ ಜಾಯಸೇ ಯತ್ತ್ವಂ ಮಿತ್ರೋ ಭವಸಿ ಯತ್ಸಮಿದ್ಧಃ ।**

((ಋ. ಸಂ. ೫-೩-೧)

**ತ್ವಮರ್ಯಮಾ ಭವಸಿ ಯತ್ಕನೀನಾಂ ನಾಮ ಸ್ವಧಾವನ್ ಗುಹ್ಯಂ ಬಿಭರ್ಷಿ ।**

(ಋ. ಸಂ. ೫-೩-೨)

ಎಂಬ ಋಕ್ಕುಗಳಲ್ಲಿ ಅಗ್ನಿಯು ಉತ್ಪನ್ನವಾದಾಗ ಅವನಿಗೆ ವರುಣನೆಂದೂ, ಚೆನ್ನಾಗಿ ಹೊತ್ತಿಸಲ್ಪಟ್ಟು ಧಗಧಗನೆ ಉರಿಯುತ್ತಿರುವಾಗ ಆ ಅಗ್ನಿಗೆ ಮಿತ್ರನೆಂದೂ, ಕನ್ಯಾಸಂಬಂಧವಾದ ಹೋಮಾದಿಗಳಲ್ಲಿ ಅರ್ಯಮಾ ಎಂದೂ ಅಗ್ನಿಗೆ ಈ ಮೂರು ಹೆಸರುಗಳಿವೆಯೆಂದು ಹೇಳಿದೆ. ಇದಲ್ಲದೆ ತೈತ್ತಿರೀಯ ಬ್ರಾಹ್ಮಣದಲ್ಲಿ—

**ಮಿತ್ರೋಽಸಿ ವರುಣೋಽಸೀತ್ಯಾಹ । ಮೈತ್ರಂ ವಾ ಅಹಃ । ವಾರುಣೀ ರಾತ್ರಿಃ । ಅಹೋರಾತ್ರಾಭ್ಯಾಮೇವೈನಮುಪಾವಹರತಿ ॥**

(ತೈ. ಬ್ರಾ. ೧-೭-೧೦-೧)

ಮಿತ್ರನು ಹಗಲಿಗೆ ಅಧಿಪತಿಯೆಂದೂ, ವರುಣನು ರಾತ್ರಿಗೆ ಅಧಿಪತಿಯೆಂದೂ ಹೇಳಿದೆ. ಆದುದರಿಂದ ಈ ಮೂರು ದೇವತೆಗಳೂ ಕೆಲವುಕಡೆ ಸೂರ್ಯನ ಅಂಶದೇವತೆಗಳೆಂದೂ ಕೆಲವುಕಡೆ ಅಗ್ನಿಯ ಬೇರೆಬೇರೆ ಹೆಸರುಗಳೆಂದೂ ಹೇಳಿರುವುದನ್ನು ಗಮನಿಸಬೇಕು.

ಪುರಾಣಾದಿಗಳಲ್ಲಿ ಮಿತ್ರನು ದ್ವಾದಶಾದಿತ್ಯರಲ್ಲಿ ಒಬ್ಬನು. ಋಗ್ವೇದದಲ್ಲಿ ಮಿತ್ರನು ಸೂರ್ಯನ ಬೇರೊಂದು ಹೆಸರಾದರೂ ಮಿತ್ರನಿಗೇ ಸ್ಪಷ್ಟವಾದ ವೈಶಿಷ್ಟ್ಯವಿದೆ ಎಂದರೆ ವೈಯಕ್ತಿಕಪ್ರಾಧಾನ್ಯವಿದೆ. ಋಗ್ವೇದದಲ್ಲಿ ಮಿತ್ರ, ವರುಣ, ಅರ್ಯಮಾ ಎಂಬುವರು ಅದಿತಿಯ ಪುತ್ರರೆಂದು ಹೇಳಿದೆ. ಆದ್ದರಿಂದ ಇವರನ್ನು ಆದಿತ್ಯರೆಂದು ಅನೇಕ ಕಡೆಗಳಲ್ಲಿ ಕರೆದಿದೆ. ಈ ಆದಿತ್ಯರು ಎಂದರೆ ಅದಿತಿಪುತ್ರರು ಆರು ಜನರೆಂದು—

ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಃ ಸನಾದ್ರಾಜಭ್ಯೋ ಜುಹ್ವಾ ಜುಹೋಮಿ ।
ಶೃಣೋತು ಮಿತ್ರೋ ಅರ್ಯಮಾ ಭಗೋ ನಸ್ತುವಿಜಾತೋ ವರುಣೋ ದಕ್ಷೋ ಅಂಶಃ ॥

(ಋ ಸಂ. ೨-೨೭-೧)

ಎಂದರೆ ಮಿತ್ರ, ಅರ್ಯಮಾ, ಭಗ, ವರುಣ, ದಕ್ಷ, ಅಂಶ ಎಂದು ಆರು ಜನರ ಹೆಸರನ್ನು ಮಾತ್ರ ಹೇಳಿದೆ.

ದೇವಾ ಆದಿತ್ಯಾ ಯೇ ಸಪ್ತ ತೇಭಿಃ ಸೋಮಾಭಿ ರಕ್ಷ ನ ಇಂದ್ರಾಯೇಂದೋ ಪರಿ ಸ್ರವ ।

(ಋ. ಸಂ ೯-೧೧೪-೩)

ಎಂಬ ಋಕ್ಕಿನಲ್ಲಿ ಅದಿತಿಪುತ್ರರು ಏಳು ಜನರೆಂದಿದೆ

ಅಷ್ಟೌ ಪುತ್ರಾಸೋ ಅದಿತೇರ್ಯೇ ಜಾತಾಸ್ತನ್ವ೧ ಸ್ಪರಿ ।
ದೇವಾ ಉಪಪ್ರೈತ್ಸಪ್ತಭಿಃ ಪರಾ ಮಾರ್ತಂಡಮಾಸ್ಯತ್ ।
ಸಪ್ತಭಿಃ ಪುತ್ರೈರದಿತಿರುಪ ಪ್ರೈತ್ಪೂರ್ವ್ಯಂ ಯುಗಂ ।
ಪ್ರಜಾಯೈ ಮೃತ್ಯವೇ ತ್ವತ್ಪುನರ್ಮಾರ್ತಂಡಮಾಭರತ್ ॥

(ಋ. ಸಂ ೧೦-೭೨-೮, ೯)

ಎಂಬ ಋಕ್ಕುಗಳಲ್ಲಿ ಅದಿತಿಗೆ ಮೊದಲು ಏಳು, ಅನಂತರ ಮಾರ್ತಂಡನೆಂದು ಒಟ್ಟು ಎಂಟು ಮಂದಿ ಪುತ್ರರಿದ್ದರೆಂದು ಹೇಳಿದೆ. ಇದಲ್ಲದೆ ತೈತ್ತಿರೀಯ ಆರಣ್ಯಕದಲ್ಲಿ—

ಅಷ್ಟಾ ಪುತ್ರಾಸೋ ಅದಿತೇಃ । ಯೇ ಜಾತಾಸ್ತನ್ವಃ ಪರಿ । ದೇವಾ ಉಪಪ್ರೈತ್ಸಪ್ತಭಿಃ । ಪರಾಮಾರ್ತಂಡಮಾಸ್ಯತ್ । ಸಪ್ತಭಿಃ ಪುತ್ರೈರದಿತಿಃ । ಉಪಪ್ರೈತ್ಪೂರ್ವ್ಯಂ ಯುಗಂ । ಪ್ರಜಾಯೈ ಮೃತ್ಯವೇ ತತ್ । ಪರಾಮಾರ್ತಂಡಮಾಭರದಿತಿ । ತಾನನುಕ್ರಮಿಷ್ಯಾಮಃ । ಮಿತ್ರಶ್ಚ ವರುಣಶ್ಚ । ಧಾತಾ ಚಾರ್ಯಮಾ ಚ । ಅಗ್‌ಂಶಶ್ಚ ಭಗಶ್ಚ । ಇಂದ್ರಶ್ಚ ವಿವಸ್ವಾಗ್-ಶ್ಚೇತ್ಯೇತೇ ।

(ತೈ. ಆ. ೧-೧೩-೩)

ಅದಿತಿಗೆ ಇದ್ದ ಎಂಟು ಮಂದಿ ಪುತ್ರರ ಹೆಸರನ್ನೂ ಹೇಳಿದೆ. ಮಿತ್ರ, ವರುಣ, ಧಾತಾ, ಅರ್ಯಮಾ, ಅಂಶ, ಭಗ, ಇಂದ್ರ, ವಿವಸ್ವಾನ್ ಎಂಬುವರೇ ಆ ಎಂಟು ಜನರು ಎಂದಿದೆ. ಇದೇ ವಿಷಯವು ತೈತ್ತಿರೀಯಬ್ರಾಹ್ಮಣದಲ್ಲಿ—

ಅದಿತಿಃ ಪುತ್ರಕಾಮಾ । ಸಾಧ್ಯೇಭ್ಯೋ ದೇವೇಭ್ಯೋ ಬ್ರಹ್ಮೌದನಮುಪಚತ್ । ತಸ್ಯಾ ಉಚ್ಛೇ-ಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯೈ ಧಾತಾ ಚಾರ್ಯಮಾ ಚಾಜಾ-

ಯೇತಾಂ । ಸಾ ದ್ವಿತೀಯಮುಪಚೇತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ ।
ಸಾ ರೇತೋಧತ್ತ । ತಸ್ಯೈ ಮಿತ್ರಶ್ಚ ವರುಣಶ್ಚಾಜಾಯೇತಾಂ । ಸಾ ತೃತೀಯಮುಪಚೇತ್ ।
ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯಾ ಅಗ್ಂಶಶ್ಚ
ಭಗಶ್ಚಾಜಾಯೇತಾಂ । ಸಾ ಚತುರ್ಥಮುಪಚೇತ್ । ತಸ್ಯಾ ಉಚ್ಛೇಷಣಮದದುಃ ।
ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯಾ ಇಂದ್ರಶ್ಚ ವಿವಸ್ವಾಗ್ಂಶ್ಚಾಜಾಯೇತಾಂ

(ತೈ. ಬ್ರಾ. ೧-೧-೯-೧, ೨, ೩.)

ಉಕ್ತವಾಗಿದೆ. ಅದಿತಿಯು ಎಂಟು ಮಂದಿ ಪುತ್ರರನ್ನು ಪಡೆದ ವಿಷಯವು ಇಲ್ಲಿ ಸ್ಪಷ್ಟವಾಗಿ ವಿವರಿಸಿದೆ. ಈ ಎಂಟು ಮಂದಿಯಲ್ಲಿ ಮಿತ್ರ, ವರುಣ, ಅರ್ಯಮಾ ಎಂಬ ಮೂರುಮಂದಿಯೇ ಋಗ್ವೇದದಲ್ಲಿ ವಿಶೇಷವಾಗಿ ಪ್ರಸಿದ್ಧರಾದವರು. ಋ. ಸಂ ೨-೨೭ನೇ ಸೂಕ್ತದಲ್ಲಿ ಮಿತ್ರ, ವರುಣ, ಅರ್ಯಮಾ ಎಂಬುವರ ಲೋಕೋಪಕಾರಕವಾದ ಸಾಹಸಕೃತ್ಯಗಳ ವಿಸ್ತಾರವಾದ ವರ್ಣನೆ ಇದೆ.

ಮಿತ್ರಃ—ಮಿತ್ರಶಬ್ದದ ನಿರ್ವಚನವನ್ನು ಯಾಸ್ಕರು ತಮ್ಮ ನಿರುಕ್ತದಲ್ಲಿ ಈ ರೀತಿ ತಿಳಿಸಿದ್ದಾರೆ.—
ಮಿತ್ರಃ ಪ್ರಮೀತೇಸ್ತ್ರಾಯತೇ । ಸಂಮಿನ್ವಾನೋ ದ್ರವತೀತಿ ವಾ । ಮೇದಯತೇರ್ವಾ ।

(ನಿ. ೧೦-೨೧)

ಮಿತ್ರಶಬ್ದಕ್ಕೆ ಅರ್ಥವೇನು ಎಂದರೆ—ಮಿತ್ರಃ ಕಸ್ಮಾತ್ । ಸ ಹಿ ಪ್ರಮೀತೇಃ ತ್ರಾಯತೇ । ಪ್ರಮೀತಿಃ ಮರಣಂ । ತತಃ ಸರ್ವಲೋಕಂ ತ್ರಾಯತೇ ವರ್ಷದ್ವಾರೇಣ । ಪ್ರಮೀತಿ ಎಂದರೆ ಮರಣವು. ಲೋಕದಲ್ಲಿ ಜನರಿಗೆ ವೃಷ್ಟಿಯನ್ನುಂಟುಮಾಡಿ ಆ ಮೂಲಕ ಅನ್ನಾದ್ಯಾಹಾರಗಳನ್ನು ಒದಗಿಸಿ, ಹಸಿವಿನಿಂದ ಉಂಟಾಗಬಹುದಾದ ಮರಣಭಯವನ್ನು ತಪ್ಪಿಸಿ ರಕ್ಷಿಸುತ್ತಾನಾದ್ದರಿಂದ ಈ ದೇವತೆಗೆ ಮಿತ್ರನೆಂದು ಹೆಸರು.

ಸಮಂತತೋ ಮಿನ್ವಾನಃ ಉದಕೇನ ದ್ರವತಿ ಅಂತರಿಕ್ಷಲೋಕೇ । ಈ ದೇವತೆಯು ಉದಕಕ್ಕೆ ಅಧಿಪತಿಯಾಗಿ ಅಂತರಿಕ್ಷದಲ್ಲಿ ಇದ್ದುಕೊಂಡು ಮೇಘಗಳ ಮೂಲಕ ಸುತ್ತಲೂ ಎಂದರೆ ಸಮಸ್ತಪ್ರದೇಶವನ್ನು ತೊಯ್ದುಹೋಗುವಂತೆ ಎಂದರೆ ನೀರಿನಿಂದ ನೆನೆಯುವಂತೆ ಮಾಡುವುದರಿಂದ ಈ ದೇವತೆಗೆ ಮಿತ್ರನೆಂದು ಹೆಸರು

ಅಥವಾ-ಸ್ನೇಹನಾರ್ಥಸ್ಯ ಸರ್ವಂ ಹ್ಯಸಾವುದಕೇನ ಸ್ನೇಹಯತಿ । ಈ ದೇವತೆಯು ಉದಕದಿಂದ ಸಮಸ್ತವನ್ನೂ ಅಂಟಿಕೊಳ್ಳುವಂತೆ, ಎಂದರೆ ಒಂದಾಗಿ ಸೇರಿಕೊಳ್ಳುವಂತೆ ಮಾಡುತ್ತಾನಾದ್ದರಿಂದ ಈ ದೇವತೆಗೆ ಮಿತ್ರನೆಂದು ಹೆಸರು ಎಂದು ಮೂರುವಿಧವಾದ ನಿಷ್ಪತ್ತಿಯನ್ನು ಹೇಳಿ ಅದನ್ನು ಸಮರ್ಥಿಸುವುದಕ್ಕಾಗಿ—

ಮಿತ್ರೋ ಜನಾನ್ ಯಾತಯತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ ।
ಮಿತ್ರಃ ಕೃಷ್ಟೀರನಿಮಿಷಾಭಿ ಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ ॥

(ಋ. ಸಂ. ೩-೫೯-೧)

ಎಂಬ ಋಕ್ಕನ್ನು ಉದಾಹರಣೆಗಾಗಿ ಕೊಟ್ಟಿರುವರು. ಈ ಋಕ್ಕಿನಲ್ಲಿ ಮಿತ್ರನು ಕೃಷ್ಯಾದಿಕರ್ಮಗಳಿಗೆ ಸಹಾಯಕನಾಗಿ ವೃಷ್ಟ್ಯಾದಿಗಳನ್ನು ಸುರಿಸಿ ಜನರಿಗೆ ಅನ್ನಾದ್ಯಾಹಾರಗಳನ್ನು ಒದಗಿಸುತ್ತಾ ಭೂಲೋಕದ ಜನರನ್ನೂ ಸ್ವರ್ಗನಿವಾಸಿಗಳನ್ನೂ ಧರಿಸುವನು ಎಂದರೆ ಪೋಷಿಸುವನು. ಎಲೈ ಮನುಷ್ಯರೇ

ಇಂತಹ ಮಿತ್ರದೇವನಿಗೆ ಘೃತಮಿಶ್ರಿತವಾದ ಹವಿರಾದಿಗಳನ್ನು ಅರ್ಪಿಸಿ ಎಂದು ಮಿತ್ರನ ಅಸಾಧಾರಣಗುಣಗಳನ್ನೂ, ಲೋಕೋಪಕಾರವನ್ನೂ ಬಹು ಚೆನ್ನಾಗಿ ವರ್ಣಿಸಿದೆ. ಋಗ್ವೇದದಲ್ಲಿ ಮಿತ್ರನ ಪರವಾಗಿ ಇರುವ ಸೂಕ್ತವೆಂದರೆ ೯ ಋಕ್ಕುಗಳುಳ್ಳ ಈ ಸೂಕ್ತಮಾತ್ರ (ಋ ಸಂ. ೩-೫೯) ಇತರ ಕಡೆ ಮಿತ್ರನು ವರುಣ ಮೊದಲಾದ ಇತರ ದೇವತೆಗಳ ಜೊತೆಯಲ್ಲಿ ಸ್ತುತನಾಗಿದ್ದಾನೆ.

ಮಿತ್ರ ಮತ್ತು ವರುಣರ ಸಾಹಚರ್ಯವು ಬಹಳ ಹೆಚ್ಚಾಗಿರುವುದರಿಂದ ಮಿತ್ರನೊಬ್ಬನೇ ದೇವತೆಯಾಗಿವುಳ್ಳ ಸೂಕ್ತವು ಋಗ್ವೇದದಲ್ಲಿ ಹಿಂದೆ ಹೇಳಿದಂತೆ ಒಂದು ಮಾತ್ರವಿರುವುದು (ಋ. ಸಂ. ೩-೫೯) ಅಲ್ಲಿಯೂ ಆ ದೇವತೆಯ ಸ್ತುತಿಭಾಗವು ಅಸ್ಪಷ್ಟ. ಆದರೆ ಮೊದಲನೆಯ ಋಕ್ಕಿನಲ್ಲಿ ಮಾತ್ರ ಮಿತ್ರನ ವೈಶಿಷ್ಟ್ಯವು ಚೆನ್ನಾಗಿ ಹೇಳಲ್ಪಟ್ಟದೆ. ಅದೇ ಸೂಕ್ತದ ಐದನೆಯ ಋಕ್ಕಿನಲ್ಲಿ—

**ಮಹಾಁ ಆದಿತ್ಯೋ ನಮಸೋಪಸದ್ಯೋ ಯಾತಯಜ್ಜನೋ ಗೃಣತೇ ಸುಶೇವಃ ।**

(ಋ. ಸಂ. ೩-೫೯-೫)

ಈ ಮಿತ್ರನನ್ನು ಮನುಷ್ಯರನ್ನೆಲ್ಲಾ ಒಟ್ಟಾಗಿ ಸೇರಿಸುವ ಮಹನೀಯನಾದ ಆದಿತ್ಯನೆಂದು ಕರೆದಿದೆ. ಈ ಅರ್ಥವನ್ನು ಕೊಡುವ ಯಾತಯಜ್ಜನ ಎಂಬ ಶಬ್ದವು—

**ವ್ರತೇನ ಸ್ಥೋ ಧ್ರುವಕ್ಷೇಮಾ ಧರ್ಮಣಾ ಯಾತಯಜ್ಜನಾ ।**

(ಋ. ಸಂ. ೫-೭೨-೨)

ಎಂಬ ಋಕ್ಕಿನಲ್ಲಿ ಮಿತ್ರಾವರುಣರಿಬ್ಬರ ಪರವಾಗಿಯೂ

**ಮಿತ್ರಸ್ತಯೋರ್ವರುಣೋ ಯಾತಯಜ್ಜನೋಽರ್ಯಮಾ ಯಾತಯಜ್ಜನಃ ।**

(ಋ. ಸಂ. ೧-೧೩೬-೩)

ಎಂಬ ಋಕ್ಕಿನಲ್ಲಿ ಮಿತ್ರ, ವರುಣ, ಅರ್ಯಮಾ ಎಂದು ಮೂರುಮಂದಿಯ ಪರವಾಗಿಯೂ ಪ್ರಯುಕ್ತವಾಗಿದೆ ಮೇಲೆ ಹೇಳಿದ ಋ. ಸಂ ೩-೫೯ ನೆಯ ಸೂಕ್ತದ ಪ್ರಕಾರ ಮಿತ್ರನು ಸ್ವರ್ಗ ಮತ್ತು ಭೂಮಿಗಳಿಗೆ ಆಧಾರನಾಗಿದಾನೆ. ಮನುಷ್ಯರ ಐದು ಪಂಗಡಗಳು (ಪಂಚಜನಾಃ) ಅವನಿಗೆ ವಿಧೇಯರಾಗಿದಾರೆ, ಇತರ ದೇವತೆಗಳಿಗೆಲ್ಲಾ ಅವನು ಜೀವನಾಧಾರವಾಗಿದಾನೆ, ಎಂದು ಮಿತ್ರನ ಗುಣವರ್ಣನೆಯಿದೆ. ಋ. ಸಂ. ೫-೮೧-೪ ರಲ್ಲಿ ಸವಿತೃ ಮತ್ತು ಮಿತ್ರರು ಒಂದೇ ಎಂದೂ, ವಾಜಸನೇಯಸಂಹಿತೆಯಲ್ಲಿ (ವಾ. ಸಂ. ೪-೩) ಮಿತ್ರನ ನಿಯಮಗಳನ್ನನುಸರಿಸಿಯೇ ವಿಷ್ಣುವು ಮೂರು ಹೆಜ್ಜೆಗಳನ್ನಿಟ್ಟನೆಂದೂ ಋ. ಸಂ. ೧೦-೮-೪ ರಲ್ಲಿ ಉಷಃಕಾಲಕ್ಕೆ ಮುಂಚೆ ಸ್ಥಾಪಿತನಾದ ಅಗ್ನಿಯು ಮಿತ್ರನನ್ನು ತಾನೇ ತನಗೋಸ್ಕರ ಉತ್ಪತ್ತಿಮಾಡುತ್ತಾನೆಂದೂ, ಋ. ಸಂ. ೩-೫-೪ ರಲ್ಲಿ ದೀಪ್ತನಾದ ಅಗ್ನಿಯೇ ಮಿತ್ರನು ಎಂದೂ, ಋ. ಸಂ. ೫-೩-೧ ರಲ್ಲಿ ಅಗ್ನಿಯು ಜನಿತನಾದಾಗ ವರುಣನು, ದೀಪ್ತನಾದಾಗ ಮಿತ್ರನು ಎಂದೂ,

**ಮಿತ್ರೋ ಅಗ್ನಿರ್ಭವತಿ ಯತ್ಸಮಿದ್ಧೋ ಮಿತ್ರೋ ಹೋತಾ ವರುಣೋ ಜಾತವೇದಾಃ ।**
**ಮಿತ್ರೋ ಅಧ್ವರ್ಯುರಿಷಿರೋ ದಮೂನಾ ಮಿತ್ರಃ ಸಿಂಧೂನಾಮುತ ಪರ್ವತಾನಾಂ ॥**

(ಋ. ಸಂ. ೩-೫-೪)

ಎಂಬಲ್ಲಿ ಚೆನ್ನಾಗಿ ಪ್ರಜ್ವಲಿತನಾದ ಅಗ್ನಿಯೇ ಮಿತ್ರನೆಂದೂ, ಈ ಮಿತ್ರನೇ ಯಜ್ಞದಲ್ಲಿ ಹೋತೃವೂ, ಅಧ್ವರ್ಯುವೂ, ವರುಣನೂ, ಜಾತವೇದಸ್ಸೆಂಬ ಅಗ್ನಿಯೂ, ಆಗಿರುವನೆಂದೂ, ಇವನು ನದಿಗಳಿಗೂ ಪರ್ವತಗಳಿಗೂ ಮಿತ್ರ (ಸ್ನೇಹಿತ, ಹಿತಕಾರಿ) ನೆಂದೂ ಮಿತ್ರನ ಗುಣಗಳ ವರ್ಣನೆ ಇದೆ.

**ವರುಣಃ—ವರುಣೋ ವೃಣೋತೀತಿ ಸತಃ** (ನಿ. ೧೦-೨) ಮೇಘ ಸಮೂಹದಿಂದ ಆವೃತನಾದ್ದರಿಂದ ಈ ದೇವತೆಗೆ ವರುಣನೆಂದು ಹೆಸರು ಎಂದು ಯಾಸ್ಕರ ನಿರ್ವಚನವಿದೆ

ವರುಣನು ಅತಿ ಶ್ರೇಷ್ಠನಾದ ದೇವತೆ, ಸಾಮರ್ಥ್ಯಾದಿಗಳಲ್ಲಿ ಇಂದ್ರನಿಗೆ ಸಮಾನನು. ವರುಣ ದೇವತಾಕವಾದ ಮಂತ್ರಗಳ ಸಂಖ್ಯೆ ಬಹಳ ಕಡಿಮೆ. ವರುಣದೇವತಾಕವಾದ ಸೂಕ್ತಗಳು ಋಗ್ವೇದದಲ್ಲಿ ಹನ್ನೆರಡಿವೆ. ಆದರೆ ಮಿತ್ರಾವರುಣರನ್ನು ಒಟ್ಟಾಗಿ ಸ್ತುತಿಸುವ ಸೂಕ್ತಗಳು ಇಪ್ಪತ್ತುನಾಲ್ಕು ಇವೆ

ವರುಣನಿಗೆ ಮಾನುಷದೇಹ, ಮಾನುಷವ್ಯಾಪಾರಗಳುಂಟು. ಆದರೆ ಭೌತಿಕ ಶರೀರ ಮತ್ತು ವ್ಯಾಪಾರಗಳಿಗಿಂತ ಹೆಚ್ಚಾಗಿ ಅವನ ನೈತಿಕವ್ಯಾಪಾರಾದಿಗಳ ಮತ್ತು ಕಾರ್ಯಗಳ ವರ್ಣನೆಯೇ ಹೆಚ್ಚಾಗಿ ಸೂಚಿತವಾಗಿದೆ. ಅವನಿಗೆ ಮುಖ, ಕಣ್ಣು, ತೋಳುಗಳು, ಕೈಗಳು ಮತ್ತೂ ಪಾದಗಳಿವೆ ; ರಥ ನಡೆಯಿಸುತ್ತಾನೆ, ಕುಳಿತುಕೊಳ್ಳುತ್ತಾನೆ, ತಿನ್ನುತ್ತಾನೆ, ಪಾನಮಾಡುತ್ತಾನೆ ಇತ್ಯಾದಿ ಅವನ ಶರೀರವ್ಯಾಪಾರಗಳ ವಿವರಣೆ ಇದೆ. ಅಗ್ನಿ, ಮಿತ್ರ ಮತ್ತು ವರುಣರಿಗೆ ಸೂರ್ಯನೇ ನೇತ್ರನೆಂದು,

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।**

(ಋ. ಸಂ. ೧-೧೧೫-೧)

**ಉದು ತ್ಯಚ್ಚಕ್ಷುರ್ಮಹಿ ಮಿತ್ರಯೋರಾँ ಏತಿ ಪ್ರಿಯಂ ವರುಣಯೋರದಬ್ಧಂ ।**

(ಋ. ಸಂ. ೬-೫೧-೧)

**ಉದ್ವಾಂ ಚಕ್ಷುರ್ವರುಣ ಸುಪ್ರತೀಕಂ ದೇವಯೋರೇತಿ ಸೂರ್ಯಸ್ತತನ್ವಾನ್ ।**

(ಋ ಸಂ. ೭-೬೧-೧)

**ಚಕ್ಷುರ್ಮಿತ್ರಸ್ಯ ವರುಣಸ್ಯ ದೇವಶ್ಚರ್ಮೇವ ಯಃ ಸಮವಿವ್ಯಕ್ ತಮಾಂಸಿ ।**

(ಋ. ಸಂ. ೭-೬೩-೧)

**ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹೋ ದೇವಾಯ ತದೃತಂ ಸಪರ್ಯತ ।**

(ಋ. ಸಂ. ೧೦-೩೭-೧)

ಎಂಬ ಋಕ್ಕುಗಳಲ್ಲಿ ಸ್ಪಷ್ಟವಾಗಿ ಹೇಳಿದೆ. ಸೂರ್ಯನು ಇವನಿಗೆ ನೇತ್ರಪ್ರಾಯನೆಂಬ ವಿಷಯವು ಮಿತ್ರಾವರುಣ ದೇವತಾಕವಾದ ಸೂಕ್ತಗಳ ಮೊದಲನೆಯ ಋಕ್ಕಿನಲ್ಲಿಯೇ ಇರುವುದರಿಂದ ಮಿತ್ರಾವರುಣರ ಪ್ರಸ್ತಾಪ ಬಂದಾಗಲೆಲ್ಲಾ ಮೊದಲು ಗೋಚರವಾಗುವುದೇ ಈ ಅಂಶವೆಂದು ತೋರುತ್ತದೆ. ಮತ್ತು ಋ. ಸಂ. ೭-೬೬-೧೦ ನೆಯ ಋಕ್ಕಿನಲ್ಲಿ ಅರ್ಯಮಾ, ಮಿತ್ರ, ವರುಣರು ಸೂರ್ಯನೇತ್ರರೆಂದು ಹೇಳಿದೆ. ವರುಣನು ದೂರದೃಷ್ಟಿಯುಳ್ಳವನು (**ಉರು ಚಕ್ಷಸಂ**) ಎಂದು ಋ. ಸಂ. ೧-೨೫-೫ ; ೧-೨೫-೧೬ ; ಮೊದಲಾದ ಋಕ್ಕುಗಳಲ್ಲಿ ಹೇಳಿದೆ.

**ಆ ನೋ ಬರ್ಹೀ ರಿಶಾದಸೋ ವರುಣೋ ಮಿತ್ರೋ ಅರ್ಯಮಾ। ಸೀದಂತು ಮನುಷೋ ಯಥಾ॥**

(ಋ. ಸಂ. ೧-೨೬-೪)

**ವ್ರತೇನ ಸ್ಥೋ ಧ್ರುವಕ್ಷೇಮಾ ಧರ್ಮಣಾ ಯಾತಯಜ್ಜನಾ । ನಿ ಬರ್ಹಿಷಿ ಸದತಂ ಸೋಮಪೀತಯೇ ॥**

(ಋ. ಸಂ. ೫-೭೨-೨)

ಇತ್ಯಾದಿಋಕ್ಕುಗಳಲ್ಲಿ ಸೋಮಪಾನಕ್ಕಾಗಿ ಮಿತ್ರ, ವರುಣ, ಆರ್ಯಮರನ್ನು ಯಜ್ಞವೇದಿಯಲ್ಲಿ ಹಾಸಿರುವ ದರ್ಭೆಯ ಮೇಲೆ ಬಂದು ಕುಳಿತುಕೊಳ್ಳಬೇಕೆಂದು ಪ್ರಾರ್ಥಿಸಲಾಗಿದೆ.

**ಯದೀ ಸಖಾಯಾ ಸಖ್ಯಾಯ ಸೋಮ್ಯೈಃ ಸುತೇಭಿಃ ಸುಪ್ರಯಸಾ ಮಾದಯೈತೇ ।**

(ಋ. ಸಂ. ೪-೪೧-೩)

ಇತ್ಯಾದಿಋಕ್ಕುಗಳಲ್ಲಿ ವರುಣನು ಇಂದ್ರಾದಿದೇವತೆಗಳೊಡನೆ ಸೋಮಪಾನಮಾಡುತ್ತಾನೆಂದು ಹೇಳಿದೆ.

**ಬಿಭ್ರದ್ದ್ರಾಪಿಂ ಹಿರಣ್ಯಯಂ ವರುಣೋ ವಸ್ತ ನಿರ್ಣಿಜಂ । ಪರಿ ಸ್ಪಶೋ ನಿ ಷೇದಿರೇ ।**

(ಋ ಸಂ- ೧-೨೫-೧೩)

ಎಂಬ ಋಕ್ಕಿನಲ್ಲಿ ವರುಣನು ಸುವರ್ಣಮಯವಾದ ಮೇಲುಹೊದಿಕೆ ಅಥವಾ ನಿಲುವಂಗಿಯನ್ನೂ ಮತ್ತು ಹೊಳೆಯುವ ಉಡುಪನ್ನೂ ಧರಿಸುತ್ತಾನೆಂಬ ವರ್ಣನೆಯಿದೆ. ವರುಣನ ರಥವು ಸುವರ್ಣಮಯವಾದುದು, ಮತ್ತು ಸೂರ್ಯನಂತೆ ಕಾಂತಿಯುಕ್ತವಾದದ್ದು ಮತ್ತು ಅದರಲ್ಲಿ ಅಶ್ವಪ್ರಚೋದಕವಾದ ಚಾವಟಿಗಳಿವೆ. ಮಿತ್ರಾವರುಣರು ಆಕಾಶದಲ್ಲಿ ಬಹಳ ಎತ್ತರವಾದ ಪ್ರದೇಶದಲ್ಲಿ ರಥಾರೋಹಣಮಾಡುತ್ತಾರೆ (ಋ ಸಂ ೫-೬೩-೧) ಇತ್ಯಾದಿ ವರ್ಣನೆಗಳಿವೆ.

ಮಿತ್ರಾವರುಣರ ವಾಸಗೃಹವು ಸುವರ್ಣಮಯವಾದುದು ಮತ್ತು ಅದು ಮೇಲುಲೋಕದಲ್ಲಿದೆ. ಮತ್ತು ವರುಣನು ತನ್ನ ಪ್ರಾಸಾದದಲ್ಲಿ ಕುಳಿತು—

**ನಿ ಷಸಾದ ಧೃತವ್ರತೋ ವರುಣಃ ಪಸ್ತ್ಯಾಸ್ವಾ । ಸಾಮ್ರಾಜ್ಯಾಯ ಸುಕ್ರತುಃ ।**

**ಅತೋ ವಿಶ್ವಾನ್ಯದ್ಭುತಾ ಚಿಕಿತ್ವಾँ ಅಭಿ ಪಶ್ಯತಿ । ಕೃತಾನಿ ಯಾ ಚ ಕರ್ತ್ವಾ ॥**

(ಋ. ಸಂ. ೧-೨೫-೧೦, ೧೧)

ಪ್ರಪಂಚದಲ್ಲಿ ನಡೆಯುವುದನ್ನೆಲ್ಲಾ ನೋಡುತ್ತಾನೆ. ಮಿತ್ರಾವರುಣರ ವಾಸಸ್ಥಾನವು ಬಹಳ ದೊಡ್ಡದು, ಬಹಳ ಎತ್ತರವಾದುದು, ಸಹಸ್ರಸ್ತಂಭಗಳನ್ನಾಶ್ರಯಿಸಿ ದೃಢವಾಗಿದೆ. ಮತ್ತು ಅವರ ಮನೆಗೆ ಸಹಸ್ರದ್ವಾರಗಳಿವೆ. (ಋ. ಸಂ. ೭-೮೮-೫) ಸರ್ವದರ್ಶಿಯಾದ ಸೂರ್ಯನು ತನ್ನವಾಸಸ್ಥಾನದಿಂದ ಹೊರಟು ಮಿತ್ರಾವರುಣರ ಮನೆಗೆ ಮನುಷ್ಯರ ಕೆಲಸಗಳನ್ನು ತಿಳಿಸಲು ಹೋಗುತ್ತಾನೆ. ಮತ್ತು ಅವರ ಪ್ರಿಯವಾದ ಮನೆಯನ್ನು ಪ್ರವೇಶಿಸುತ್ತಾನೆ. ಇತ್ಯಾದಿ ವರ್ಣನೆಗಳೂ ಇವೆ.

ವರುಣನು ಒಂಟಿಯಾಗಿ ಅಥವಾ ಮಿತ್ರಸಹಿತನಾಗಿ ಇತರ ದೇವತೆಗಳಂತೆ ಅನೇಕ ಕಡೆ ರಾಜನೆಂದು ಕರೆಯಲ್ಪಟ್ಟಿದಾನೆ.—

**ಅಬುಧ್ನೇ ರಾಜಾ ವರುಣೋ ವನಸ್ಯೋರ್ಧ್ವಂ ಸ್ತೂಪಂ ದದತೇ ಪೂತದಕ್ಷಃ ।**

(ಋ. ಸಂ. ೧-೨೪-೭)

**ತ್ವಂ ವಿಶ್ವೇಷಾಂ ವರುಣಾಸಿ ರಾಜಾ ಯೇ ಚ ದೇವಾ ಅಸುರ ಯೇ ಚ ಮರ್ತಾಃ ।**

(ಋ. ಸಂ. ೨-೨೭-೧೦)

**ತೇನ ವಿಶ್ವಸ್ಯ ಭುವನಸ್ಯ ರಾಜಾ ಯವಂ ನ ವೃಷ್ಟಿರ್ವ್ಯನತ್ತಿ ಭೂಮ ।**

(ಋ ಸಂ. ೫-೮೫-೩)

ಇತ್ಯಾದಿಋಕ್ಕುಗಳಲ್ಲಿ ವರುಣನು ಮನುಷ್ಯರಿಗೆ ಮಾತ್ರವೇ ಅಲ್ಲ, ದೇವತೆಗಳಿಗೂ ಸಕಲ ಲೋಕಗಳಿಗೂ ರಾಜನೆಂದು ಹೇಳಿದೆ. ವರುಣನಲ್ಲದೆ ಇಂದ್ರ, ಯಮ, ಸೋಮ ಮೊದಲಾದ ದೇವತೆಗಳಿಗೂ ರಾಜನೆಂಬ ಗೌರವಸೂಚಕವಾದ ಹೆಸರಿದೆ.

ಇಂದ್ರನ ಸಂಬಂಧವಾದ ಕಥೆಗಳು ಅನೇಕವಿವೆ. ಆದರೆ ವರುಣನ ವಿಷಯದಲ್ಲಿ ಇದಕ್ಕೆ ತೀರಾ ವಿರುದ್ಧ ವಾಗಿದೆ. ಒಂದಾದರೂ ಕಥೆಗಳಿಲ್ಲ. ವರುಣನು ಭೌತಿಕ ಮತ್ತು ನೈತಿಕ ವಿಧಿಗಳ (**ವರುಣಸ್ಯ ವ್ರತಾನಿ**) ನಿಯಾಮಕನೆಂದು ಬಹಳವಾಗಿ ಹೊಗಳಿದೆ. ಮಿತ್ರಾವರುಣರ ದೈವಶಕ್ತಿಯನ್ನು **ಮಾಯೊ** ಎಂಬ ಪದದಿಂದ ವರ್ಣಿಸಿದೆ. ಇದು ದೇವತೆಗಳಿಗೆ ಅನ್ವಯಿಸಿದರೆ ಒಳ್ಳೆಯದನ್ನು ಮಾಡಲು ಅವರಿಗಿರುವ ಗೂಢವಾದ ಶಕ್ತಿ ಎಂತಲೂ, ರಾಕ್ಷಸರಿಗೆ ಅನ್ವಯಿಸುವ ಸಂದರ್ಭದಲ್ಲಿ ಅದೇ ಪದಕ್ಕೆ ಕೆಟ್ಟದ್ದನ್ನು ಮಾಡಲು ಅವರಿಗಿರುವ ಗೂಢವಾದ ಶಕ್ತಿ ಎಂತಲೂ ಅರ್ಥ. ಒಳ್ಳೆಯ ಅರ್ಥದಲ್ಲಿ ಮಿತ್ರಾವರುಣರಿಗೆ ಈ ಪದವು ಸಲ್ಲುತ್ತದೆ. ಕೆಟ್ಟ ಅರ್ಥದಲ್ಲಿ ರಾಕ್ಷಸ ರಿಗೆ ಅನ್ವಯಿಸುತ್ತದೆ. ಅಸುರಶಬ್ದಾರ್ಥದಂತೆ ಮಾಯಾ ಶಬ್ದಕ್ಕೂ ಎರಡರ್ಥಗಳಲ್ಲಿಯೂ ಪ್ರಯೋಗವಿದೆ. ತನ್ನಲ್ಲಿ ನಿಗೂಢವಾದ ಈ ಮಾಯಾಶಕ್ತಿಯಿಂದ ವರುಣನು ವಾಯುಮಂಡಲದಲ್ಲಿ ನಿಂತು ಅಳತೆಕಡ್ಡಿಯಿಂದ ಅಳೆಯುವಂತೆ ಸೂರ್ಯನಿಂದ ಭೂಮಿಯನ್ನು ಅಳೆಯುತ್ತಾನೆ. ಸೂರ್ಯನು ಅಂತರಿಕ್ಷವನ್ನು ದಾಟುವಂತೆ ಮಾಡಿ ಅವನನ್ನು ಮಳೆ ಮೋಡಗಳಿಂದ ಮುಸಕಾಗುವಂತೆ ಮಾಡುತ್ತಾನೆ. ಆಗ ಮಧುಮಿಶ್ರಿತವಾದ (ಸಿಹಿಯಾದ) ಹನಿಗಳು ಉದುರುತ್ತವೆ. (ಋ. ಸಂ. ೫-೬೩-೪) ಆಕಾಶವು ಮಳೆಗರೆಯುವಂತೆ ಮಾಡುತ್ತಾನೆ. ಆದ್ದರಿಂದ ಈ **ಮಾಯೊ** ಎಂಬ ಪದವು ಋ. ಸಂ. ೬-೪೮-೧೪ ; ೭-೨೮-೪ ; ೧೦-೯೯-೧೦ ; ೧೦-೧೪೭-೫ ; ಮೊದಲಾದ ಋಕ್ಕುಗಳೆಲ್ಲಲ್ಲಾ ದೇವತೆಗಳಲ್ಲಿ ಮುಖ್ಯವಾಗಿ ವರುಣನಿಗೇ ಹೇಳಿದೆ.

ಪ್ರಕೃತಿನಿಯಮಗಳನ್ನು ವಿಧಿಸುವವನು ವರುಣನು- ಅವನೇ ಭೂಮಿ ಮತ್ತು ಸ್ವರ್ಗಗಳನ್ನು ಸ್ಥಾಪಿಸಿ ದನು. ಮತ್ತು

**ಆಸೀದದ್ವಿಶ್ವಾ ಭುವನಾನಿ ಸಂರಾಡ್ವಿಶ್ವೇತ್ತಾನಿ ವರುಣಸ್ಯ ವ್ರತಾನಿ ।**

(ಋ. ಸಂ. ೮-೪೨-೧)

ಎಂಬ ಋಕ್ಕಿನಲ್ಲಿ ವರುಣನು ಸಮಸ್ತ ಲೋಕಗಳಲ್ಲಿಯೂ ವಾಸಮಾಡುವನೆಂದೂ, ಅವನ ನಿಯಮಾದಿಗಳು ಅಲ್ಲೆಲ್ಲಾ ಆಚರಿಸಲ್ಪಡುವುವೆಂದೂ,

**ತಿಸ್ರೋ ದ್ಯಾವೋ ನಿಹಿತಾ ಅಂತರಸ್ಮಿನ್ ತಿಸ್ರೋ ಭೂಮೀರುಪರಾಃ ಷಡ್ವಿಧಾನಾಃ ।**

(ಋ. ಸಂ. ೭-೮೭-೫)

ಎಂಬಲ್ಲಿ ಮೂರು ಊರ್ಧ್ವಲೋಕಗಳೂ, ಮೂರು ಭೂಲೋಕಗಳೂ (ಅಧೋಲೋಕಗಳು) ಅವನ ವಶದಲ್ಲಿವೆಯೆಂದೂ ಹೇಳಿದೆ. ವರುಣ ಮತ್ತು ಮಿತ್ರರು ಪ್ರಪಂಚವೆಲ್ಲವನ್ನೂ ಆಳುತ್ತಾರೆ. (ಋ. ಸಂ. ೫-೬೩-೭) ಅವರೇ ಸಮಸ್ತ ಜಗತ್ತಿಗೂ ರಕ್ಷಕರು. (ಋ. ಸಂ. ೨-೨೭-೪) ವರುಣನು ಸ್ವರ್ಗ, ಭೂಮಿ, ಆಕಾಶಗಳಿಗೆ ಆಧಾರಭೂತನಾಗಿದ್ದಾನೆ. (ಋ. ಸಂ. ೫-೬೯-೧, ೪) ಅವನು ಉದಕದಲ್ಲಿ ಅಗ್ನಿಯನ್ನೂ, ಆಕಾಶದಲ್ಲಿ ಸೂರ್ಯನನ್ನೂ, ಕಲ್ಲಿನಮೇಲೆ ಸೋಮ ವನ್ನೂ ಇಟ್ಟಿದ್ದಾನೆ. ಸೂರ್ಯನಿಗೋಸ್ಕರ ಅಗಲವಾದ ದಾರಿಯನ್ನು ಮಾಡಿದ್ದಾನೆ. ವರುಣ, ಮಿತ್ರ ಮತ್ತು

ಆರ್ಯಮರು ಸೂರ್ಯನಿಗೋಸ್ಕರ ದಾರಿಯನ್ನು ಬಿಡಿಸುತ್ತಾರೆ. (ಋ ಸಂ. ೭-೬೦-೪). ಇತ್ಯಾದನೇಕ ಋಕ್ಕು ಗಳಲ್ಲಿ ವರುಣನ ಅಧಿಕಾರ ವರ್ಣನೆ ಇದೆ.

ತೈತ್ತರೀಯ ಸಂಹಿತೆಯಲ್ಲಿ (ತೈ ಸಂ. ೬-೪-೮-೩) ಮಿತ್ರೋಽಹರಜನಯದ್ವರುಣೋ ರಾತ್ರಿಂ-ಎಂದರೆ ಮಿತ್ರನು ಹಗಲನ್ನೂ, ವರುಣನು ರಾತ್ರಿಯನ್ನೂ ಸೃಷ್ಟಿಮಾಡಿದರೆಂದಿದೆ. ಆದ್ದರಿಂದ—ಮೈತ್ರಂ ವಾ ಅಹಃ। ವಾರುಣೀ ರಾತ್ರಿಃ —ಎಂದರೆ ಮಿತ್ರನು ಹಗಲಿಗೆ ಅಧಿಪತಿಯೆಂದೂ, ವರುಣನು ರಾತ್ರಿಗೆ ಅಧಿಪತಿಯೆಂದೂ ಅನೇಕ ಕಡೆಗಳಲ್ಲಿ ಹೇಳಿದೆ. (ತೈ ಸಂ. ೨-೧-೭-೪) ಒಂದು ಸ್ಥಳದಲ್ಲಿ ವರುಣನು ಋತುಗಳನ್ನು ವಿಭಜಿಸಿದನೆಂದು ಹೇಳಿದೆ.

**ವೇದ ಮಾಸೋ ಧೃತವ್ರತೋ ದ್ವಾದಶ ಪ್ರಜಾವತಃ। ವೇದಾ ಯ ಉಪಜಾಯತೇ।**

(ಋ ಸಂ. ೧-೨೫-೮)

ಎಂಬಲ್ಲಿ ವರುಣನಿಗೆ ಹನ್ನೆರಡು ತಿಂಗಳೂ ತಿಳಿದಿವೆಯೆಂದೂ,

**ವಿ ಯೇ ದಧುಃ ಶರದಂ ಮಾಸಮಾದಹರ್ಯಜ್ಞಮಕ್ತುಂ ಚಾದೃಚಂ।**
**ಅನಾಪ್ಯಂ ವರುಣೋ ಮಿತ್ರೋ ಅರ್ಯಮಾ ಕ್ಷತ್ರಂ ರಾಜಾನ ಆಶತ॥**

(ಋ. ಸಂ ೭-೬೬-೧೧)

ಎಂಬ ಋಕ್ಕಿನಲ್ಲಿ ಮಿತ್ರ, ವರುಣ, ಆರ್ಯಮರು, ಶರತ್ಕಾಲ, ತಿಂಗಳು, ಹಗಲು ಮತ್ತು ರಾತ್ರಿಗಳನ್ನು ವಿಂಗಡಿಸಿದರು ಎಂದು ಹೇಳಿದೆ.

ಉದಕವನ್ನು ಕ್ರಮಪಡಿಸುವವನೂ ಅವನೇ ಎಂದು ಅನೇಕ ಕಡೆಗಳಲ್ಲಿ ಹೇಳಿದೆ. ನದಿಗಳು ಹರಿಯುವಂತೆ ಮಾಡಿದವನೂ ಅವನೇ. ಅವನ ಅಪ್ಪಣೆಮೇರೆಯೇ ಅವು ಸತತವಾಗಿ ಪ್ರವಹಿಸುತ್ತವೆ. (ಋ. ಸಂ. ೨-೨೮-೪) ನದಿಗಳು ವೇಗವಾಗಿ ಸಮುದ್ರದೊಳಕ್ಕೆ ನೀರು ತಂದು ಸುರಿಯುತ್ತಿದ್ದರೂ ಅದನ್ನು ತುಂಬದಿರುವುದು ಅವನ ಹುದುಗಿದ ಶಕ್ತಿಯಿಂದಲೇ (ಋ. ಸಂ. ೫-೮೫-೬) ವರುಣ ಮತ್ತು ಮಿತ್ರರು ನದಿಗಳಿಗೆ ಒಡೆಯರು ವರುಣನು ಸಾಗರಗಳಿಗೆ ಒಡೆಯನೆಂಬುದು ಸಿದ್ಧವಾದ ಅಂಶವಾದರೂ ಋಗ್ವೇದದಲ್ಲಿ ಬರುವುದು ಬಹಳ ಅಪರೂಪ. ಪ್ರಾಯಶಃ ಇದು ಅಮುಖ್ಯವೆಂಬುದೇ ಇದಕ್ಕೆ ಕಾರಣವಿರಬಹುದು. ಪುರಾಣಾದಿಗಳಲ್ಲಿ ವರುಣನು ಜಲಾಧಿಪತಿಯೆಂದು ಪ್ರಸಿದ್ಧ ನಾಗಿದಾನೆ. ಮತ್ತು ವರುಣನು ಅಷ್ಟದಿಕ್ಪಾಲಕರಲ್ಲಿ ಒಬ್ಬನಾಗಿ ಪಶ್ಚಿಮ ದಿಕ್ಕಿಗೆ ಅಧಿಪತಿಯೆಂಬುದು ಪುರಾಣಾದಿ ಗಳಲ್ಲಿ ಹೇಳಿರುವ ವಿಷಯ. ಋಗ್ವೇದದಲ್ಲಿ ಅದಕ್ಕೆ ಯಾವ ಸಮರ್ಥನೆಯೂ ಇಲ್ಲ. ಸಾಧಾರಣವಾಗಿ ವರುಣನಿಗೆ ಸಂಬಂಧವಿರುವುದೆಲ್ಲಾ ವಾಯುಮಂಡಲದಲ್ಲಿ ಇರುವ ನೀರಿನೊಡನೆಯೇ ವೃಷ್ಟಿಗಾಗಿ ಪ್ರಾರ್ಥಿಸಲ್ಪಡುವ ದೇವತೆ ಗಳಲ್ಲಿ ವರುಣ ಮತ್ತು ಮಿತ್ರರೇ ಪ್ರಮುಖರು. ಪರ್ವತಗಳೆಲ್ಲಾ ಮೋಡಗಳಿಂದ ಆವೃತವಾಗಿರುವಾಗ ಬುಡಮೇಲಾದ ಬಾನಿಯಿಂದ (ಮೋಡದಿಂದ) ಸ್ವರ್ಗ, ಭೂಮಿ ಮತ್ತು ಆಕಾಶಗಳಿಗೆ ನೀರ್ಗರೆದು ಭೂಮಿಯನ್ನೆಲ್ಲಾ ವರುಣನು ತೇವವಾಗಿ ಮಾಡುವನು ಎಂದು ಋ. ಸಂ. ೫-೮೫-೩, ೪ನೆಯ ಋಕ್ಕುಗಳಲ್ಲಿ ಹೇಳಿದೆ ಒಂದು ಇಡೀ ಸೂಕ್ತವೆ (ಎಂದರೆ ಋ. ಸಂ ೫-೬೩ನೆಯ ಸೂಕ್ತವು) ಅವರ ಮಳೆಗರೆಯುವ ಶಕ್ತಿಯನ್ನೂ ಸೂಚಿಸುತ್ತದೆ. ಯಜುರ್ವೇದ ಸಂಹಿತೆಯಲ್ಲಿ (ತೈ. ಸಂ ೫-೫ ೪-೧) ಆಪೋ ವರುಣಸ್ಯ ಪತ್ನಯ ಆಸನ್—ನೀರುಗಳು ವರುಣನ ಪತ್ನಿಯು ರೆಂದೂ ತೈ. ಸಂ. ೬-೪-೩-೨) ಮಿತ್ರಾವರುಣೌ ವಾ ಅಪಾಂ ನೇತಾರೌ—ಮಿತ್ರಾವರುಣರು ನೀರಿಗೆ ನಾಯಕರು, ಎಂದೂ ಹೇಳಿದೆ.

ವರುಣನ ಶಾಸನಗಳು ಚೆನ್ನಾಗಿ ಸ್ಥಾಪಿತವಾಗಿವೆಯೆಂದು ಪದೇ ಪದೇ ಹೇಳಲ್ಪಟ್ಟವೆ. ಈ ಕಾರಣದಿಂದಲೇ ಅವನಿಗೆ ಧೃತವ್ರತ ಎಂದು ಹೆಸರು. ಮಿತ್ರಾವರುಣರಿಬ್ಬರಿಗೂ ಈ ವಿಶೇಷಣವು ಸಂದಿದೆ.

**ಪರಿ ಧಾಮಾನಿ ಮರ್ತ್ಯೋ ವರುಣಸ್ಯ ಪುರೋ ಗಯೇ ವಿಶ್ವೇ ದೇವಾ ಅನು ವ್ರತಂ ನಭಂತಾಮನ್ಯಕೇ ಸಮೇ ॥**

(ಋ. ಸಂ. ೮-೪೧-೭)

**ನ ವಾಂ ದೇವಾ ಅಮೃತಾ ಆ ಮಿನಂತಿ ವ್ರತಾನಿ ಮಿತ್ರಾವರುಣಾ ಧ್ರುವಾಣಿ ।**

(ಋ. ಸಂ. ೫-೬೯-೪)

ಇತ್ಯಾದಿಋಕ್ಕುಗಳಲ್ಲಿ ದೇವತೆಗಳೇ ಮಿತ್ರಾವರುಣಾರ್ಯಮರ ಅಪ್ಪಣೆಗಳನ್ನು ಪಾಲಿಸುತ್ತಾರೆಂದೂ ಅನಾದಿ ದೇವತೆಗಳೂ ಕೂಡ ಅವರ ಧೃತವ್ರತಗಳನ್ನು ಮೀರಲಾರರೆಂದೂ ಹೇಳಿದೆ. ಮಿತ್ರಾವರುಣರು ನಿಯಮ (ಋತ) ಮತ್ತು ಬೆಳಕಿಗೆ ನಿಯಾಮಕರು. ಈ ಶಾಸನಗಳ ಬಲದಿಂದಲೇ ಅವರು ನಿಯಮಗಳಿಗೆ ಬೆಂಬಲಕೊಡಲು ಸಾಧ್ಯವಾಗಿದೆ. ಈ ಗುಣವು ವಿಶೇಷವಾಗಿ ಇವರಿಬ್ಬರಲ್ಲಿ, ಒಂದೊಂದು ವೇಳೆ ಆದಿತ್ಯರಲ್ಲಿ, ಅಥವಾ ಇತರ ಸಾಧಾರಣ ದೇವತೆಗಳಲ್ಲಿಯೂ ಕಂಡುಬರುತ್ತದೆ. ಅವರು ಸತ್ಯ (ಋತ) ಮತ್ತು ನ್ಯಾಯವನ್ನೂ ಅಭಿವೃದ್ಧಿಗೊಳಿಸುವವರು (**ಋತಸ್ಯ ಗೋಪಾಃ**) ಎಂದರೆ ನಿಯಮಗಳನ್ನು ಪಾಲಿಸುವವರು (ಅಥವಾ ಪಾಲಿಸುವಂತೆ ಮಾಡುವವರು) ಎಂಬ ವಿಶೇಷಣವು ಮಿತ್ರಾವರುಣರಿಗೆ ಅನೇಕ ವೇಳೆ ಪ್ರಯೋಗಿಸಿರುವುದು ಕಂಡು ಬರುತ್ತದೆ.

ವರುಣನ ಶಕ್ತಿಯು ಅಗಾಧವಾದುದು. ಹಾರುವ ಪಕ್ಷಿಗಳಾಗಲಿ, ಹರಿಯುವ ನದಿಗಳಾಗಲಿ ಅವನ ರಾಜ್ಯದ ಗಡಿಯ ಮೇರೆಯನ್ನು ಸೇರಲಾರವು. ಅವನ ಶಕ್ತಿಯನ್ನು ಮೀರಲಾರವು ; ಅವನ ಕೋಪವನ್ನು ತಡೆಯಲಾರವು. ಮಿತ್ರಾ ವರುಣರ ಸೀಮೆಯ ಎಲ್ಲೆ ಕಟ್ಟನ್ನು ಆಕಾಶ ಮತ್ತು ನದಿಗಳು ಕೂಡ ತಲಪಿಲ್ಲ. ಸಮಸ್ತವೂ ವರುಣನಲ್ಲಿಯೇ ಅಡಗಿವೆ. ಎಲ್ಲಾ ಪ್ರಾಣಿಗಳ ವಸತಿಗಳೂ ಮೂರು ಸ್ವರ್ಗಲೋಕಗಳೂ ಮೂರು ಭೂಲೋಕಗಳೂ ಅವಲ್ಲಿಯೇ ನಿಹಿತ ವಾಗಿವೆ. ವರುಣನು ಸರ್ವಜ್ಞನು. ಆಕಾಶದಲ್ಲಿ ಪಕ್ಷಿಗಳ ಹಾರಾಟ, ಸಮುದ್ರದಲ್ಲಿ ನಾವೆಗಳ ಸಂಚಾರ, ದೂರಗಾಮಿಯಾದ ವಾಯುವಿನ ಗತಿ ಇವೆಲ್ಲವೂ ಅವನಿಗೆ ತಿಳಿದಿದೆ. ಹಿಂದೆ ಕಳೆದುಹೋದ ಅಥವಾ ಮುಂದೆಬರುವ ಎಲ್ಲಾ ಪದಾರ್ಥಗಳನ್ನೂ ಅವನು ನೋಡುತ್ತಾನೆ. ಮನುಷ್ಯರ ಸತ್ಯಾಸತ್ಯಕರ್ಮಗಳ ಸಾಕ್ಷಿಯಾಗಿದ್ದಾನೆ. ಪ್ರತಿಯೊಬ್ಬ ಮನುಷ್ಯನು ಮಾಡುವ ಕಾರ್ಯಗಳು, ಯೋಚನೆಗಳು, ಉಪಾಯಗಳು ಎಲ್ಲವೂ ವರುಣನಿಗೆ ತಿಳಿಯುತ್ತವೆ. ಸ್ವರ್ಗ ಮತ್ತು ಭೂಲೋಕಗಳಲ್ಲಿ ಮತ್ತು ಅವುಗಳಿಂದಾಚೆ ಇರುವುದೆಲ್ಲವನ್ನೂ ಅವನು ಗ್ರಹಿಸಬಲ್ಲನು. ಆಕಾಶದಾಚೆ ಎಷ್ಟೋ ದೂರ ಓಡಿಹೋದರೂ ಯಾರೂ ವರುಣನ ದೃಷ್ಟಿಪಥವನ್ನು ಬಿಟ್ಟುಹೋಗಲಾಗುವುದಿಲ್ಲ.

ನೀತಿನಿಯಾಮಕನಾದುದರಿಂದ ವರುಣನಿಗೆ ಪಾಪವೆಂದರೆ ಬಹಳ ಕೋಪಬರುತ್ತದೆ. ಅವನ ನಿಯಮಗಳನ್ನುಲ್ಲಂಘಿಸಿದರೂ ಕೋಪ, ಇವೆರಡಕ್ಕೂ ಅವನು ಬಹಳ ಕ್ರೂರಶಿಕ್ಷೆಯನ್ನು ವಿಧಿಸುತ್ತಾನೆ. ಪಾಪಿಗಳನ್ನು ಬಂಧಿಸುವ ವರುಣನ ಪಾಶವು ಋ. ಸಂ. ೧-೨೪-೧೫ ; ೧-೨೫-೧೧ ; ೬-೭೪-೪ ೧೦-೮೫-೨೪ ಮೊದಲಾದ ಋಕ್ಕುಗಳಲ್ಲಿ ಉಕ್ತವಾಗಿದೆ ಆ ಪಾಶವು ಅನೃತವಾದಿಯನ್ನು ಬಂಧಿಸುತ್ತದೆ. ಸತ್ಯವಾದಿಯನ್ನು ಬಿಟ್ಟುಬಿಡುತ್ತದೆ.

**ಯುವೋ ರಾಷ್ಟ್ರಂ ಬೃಹದಿನ್ವತಿ ದ್ಯೌರ್ಯೌ ಸೇತೃಭಿರರಜ್ಜುಭಿಃ ಸಿನೀಥಃ ।**

**ಪರಿ ಣೋ ಹೇಳೋ ವರುಣಸ್ಯ ವೃಜ್ಯಾ ಉರುಂ ನ ಇಂದ್ರಃ ಕೃಣವದು ಲೋಕಂ ॥**
(ಋ. ಸಂ. ೭-೮೪-೨)

ಎಂಬ ಋಕ್ಕಿನಲ್ಲಿ ಇಂದ್ರಸಹಚರಿತನಾದ ವರುಣನು ಹಗ್ಗವಲ್ಲದ ಬಂಧನಗಳಿಂದ ಕಟ್ಟುತ್ತಾನೆ ಎಂದು ಹೇಳಿದೆ. ಈ ಪಾಶವೆಂಬ ಶಬ್ದವು ಇಡೀ ಋಗ್ವೇದದಲ್ಲಿ ಒಂದು ಕಡೆ ಮಾತ್ರ ಅಗ್ನಿದೇವತಾಕವಾದ ಮಂತ್ರದಲ್ಲಿ ಬಂದಿದೆ. ಅದೂ ಅವನ ಭಕ್ತರನ್ನು ಬಂಧಿಸಿರುವ ಪಾಶವನ್ನು ಬಿಡಿಸು ಎಂದು ಪ್ರಾರ್ಥಿಸುವ ಸಂದರ್ಭದಲ್ಲಿ. ಆದ್ದರಿಂದ ಈ ಪಾಶ ಬಂಧನ ಮತ್ತು ಮೋಚನ (ಪಾಶಬಿಡಿಸುವ) ಕಾರ್ಯಗಳು ವರುಣನಿಗೆ ಮಾತ್ರ ಸಂಬಂಧ್ದಿಸಿದೆಂದು ಹೇಳಬಹುದು. ಮಿತ್ರನಿಂದ ಕೂಡಿದ ವರುಣನು ಅನೃತವನ್ನು ಓಡಿಸುವವನು, ದ್ವೇಷಿಸುವವನು ಮತ್ತು ಶಿಕ್ಷಿಸುವವನು. ಮಿತ್ರಾ ವರುಣರು ತಮ್ಮ ಪೂಜೆಯ ವಿಷಯದಲ್ಲಿ ತಾತ್ಸಾರದಿಂದಿರುವವರನ್ನು ಶಿಕ್ಷಿಸುತ್ತಾರೆ. ಆದರೆ ವರುಣನು ಪಶ್ಚಾತ್ತಾಪ ಪಡುವವರನ್ನು ಮನ್ನಿಸುತ್ತಾನೆ. ಹಗ್ಗದಂತೆ ಬಿಚ್ಚುತ್ತಾನೆ, ಮತ್ತು ಪಾಪಪರಿಹಾರಮಾಡುತ್ತಾನೆ ; ಸ್ವತಃ ಮಾಡಿದ ಪಾಪದಿಂದ ಮಾತ್ರವಲ್ಲ. ಅವನ ಪೂರ್ವಿಕರು ಮಾಡಿದ ಪಾಪದಿಂದಲೂ ಮನುಷ್ಯನನ್ನು ಬಿಡುಗಡೆ ಮಾಡುತ್ತಾನೆ. ತನ್ನಿಂದ ವಿಧಿಸಲ್ಪಟ್ಟ ನಿಯಮಗಳನ್ನೇ ಪ್ರತಿನಿತ್ಯವೂ ಉಲ್ಲಂಘಿಸಿ ಅನಂತರ ಪಶ್ಚಾತ್ತಾಪಪಡುವವರನ್ನೂ ಉಳಿಸಿ ಕೊಡುತ್ತಾನೆ. ಮತ್ತು ತನ್ನ ಆಜ್ಞೆಗಳನ್ನು ವಿಸ್ಮೃತಿಯಿಂದ ಉಲ್ಲಂಘಿಸಿದವರಲ್ಲಿ ಕನಿಕರತೋರಿಸುತ್ತಾನೆ. ವರುಣನಲ್ಲಿ ನೂರುಗಟ್ಲೆ, ಸಾವಿರಗಟ್ಟಲೆ ಔಷಧಿಗಳಿವೆ. ಅವನು ಮೃತ್ಯುವನ್ನು ದೂರಮಾಡುತ್ತಾನೆ. ಮತ್ತು ಪಾಪವನ್ನು ಪರಿಹಾರಮಾಡುತ್ತಾನೆ. ಅವನು ಪ್ರಾಣಾಪಹಾರಮಾಡಬಲ್ಲನು, ಜೀವದಾನವನ್ನೂ ಮಾಡಬಲ್ಲನು. ನಿತ್ಯತ್ವ ವನ್ನು ರಕ್ಷಣೆಮಾಡುವುವರಲ್ಲಿ ಬಹಳ ಕುಶಲನು ಇತ್ಯಾದಿಯಾಗಿ ವರುಣನ ಗುಣವರ್ಣನೆಯು ಅನೇಕ ಋಕ್ಕು ಗಳಲ್ಲಿವೆ. ಇಲ್ಲಿ ನಾವು ಅದನ್ನು ಅತಿಸೂಕ್ಷ್ಮವಾಗಿ ವಿವರಿಸಿದ್ದೇವೆ. ಉಚಿತ ಸಂದರ್ಭದಲ್ಲಿ ಅದನ್ನು ವಿಸ್ತಾರವಾಗಿ ವಿವರಿಸುತ್ತೇವೆ.

ತೈತ್ತಿರೀಯಸಂಹಿತೆಯಲ್ಲಿ–**ಫಲ್ಗುನೀನಕ್ಷತ್ರಮರ್ಯಮಾ ದೇವತಾ** .... .... .... .... **ಅನೂರಾಧಾ ನಕ್ಷತ್ರಂ ಮಿತ್ರೋ ದೇವತಾ** .... .... .... .... (ತೈ. ಸಂ. ೪-೪-೧೦-೨)—ಎಂದರೆ ಅರ್ಯಮನು ಪೂರ್ವ ಫಲ್ಗುನೀ ನಕ್ಷತ್ರಕ್ಕೂ ಮಿತ್ರನು ಅನೂರಾಧಾನಕ್ಷತ್ರಕ್ಕೂ ಅಧಿಪತಿಗಳೆಂದು ಹೇಳಿದೆ.

**ಅರ್ಯಮಾ**—ಆದಿತ್ಯರ ಪರವಾದ ಸೂಕ್ತಗಳಲ್ಲಿ ಸಾಧಾರಣವಾಗಿ ಆದಿತ್ಯರೆಂದರೆ ಮಿತ್ರ, ವರುಣ ಮತ್ತು ಅರ್ಯಮರೇ ಉದ್ದಿಷ್ಟರು. ನಾವು ಹಿಂದೆ ತಿಳಿಸಿದಂತೆ ಋಗ್ವೇದದಲ್ಲಿ (ಋ. ಸಂ. ೨-೨೭-೧) ಮಿತ್ರ, ಅರ್ಯಮ, ಭಗ, ವರುಣ, ದಕ್ಷ, ಅಂಶ ಎಂಬ ಆರು ಜನರ ಹೆಸರುಮಾತ್ರವಿದೆ. ಋ. ಸಂ. ೯-೧೧೪-೩ ನೆಯ ಋಕ್ಕಿನಲ್ಲಿ ಆದಿತ್ಯರ ಸಂಖ್ಯೆ ಏಳೆಂದೂ, ಋ. ಸಂ. ೧೦-೭೨-೮ ರಲ್ಲಿ ಅದಿತಿಯು ಮೊದಲು ಏಳು ಜನ ಪುತ್ರರನ್ನು ದೇವತೆಗಳಿಗೆ ಒಪ್ಪಿಸಿ ಎಂಟನೆಯ ಮಾರ್ತಂಡನನ್ನು ಅನಂತರ ಪಡೆದಳೆಂದೂ ಇದೆ. ಅ. ವೇ. ೮-೯-೨೧ ರಲ್ಲಿಯೂ ತೈ. ಬ್ರಾ. ೧-೧-೯-೧ ರಲ್ಲಿಯೂ ಅದಿತಿಗೆ ಮಿತ್ರ, ಅರ್ಯಮಾ, ವರುಣ, ಅಂಶ, ಭಗ, ಧಾತೃ, ಇಂದ್ರ, ವಿವಸ್ವಾನ್ ಎಂಬ ಎಂಟು ಮಂದಿ ಪುತ್ರರೆಂದು ಹೇಳಿದೆ. ಶತಪಥಬ್ರಾಹ್ಮಣದಲ್ಲಿ (ಶ. ಬ್ರಾ. ೬-೧-೨-೮ ; ೧೧-೬-೩-೮) ಆದಿತ್ಯರು ತಿಂಗಳಿಗೊಬ್ಬರಂತೆ ಹನ್ನೆರಡು ಜನರೆಂದು ಹೇಳಿದೆ. ಪುರಾಣಾದಿಗಳಲ್ಲಿಯೂ ಆದಿತ್ಯರು ಹನ್ನೆರಡುಮಂದಿಯೆಂದೇ ಇದೆ.

**ಅರ್ಯಮಾ** ಎಂಬ ದೇವತೆಯ ಹೆಸರು ಋಗ್ವೇದದಲ್ಲಿ ಸುಮಾರು ನೂರುಕಡೆ ಬಂದಿದ್ದರೂ, ಸಂಪೂರ್ಣ ವಾಗಿ ವ್ಯಕ್ತಿತ್ವವಿಲ್ಲದಿರುವುದರಿಂದ ಯಾಸ್ಕರು ತಮ್ಮ ನಿರುಕ್ತದಲ್ಲಿ (ನಿಘಂಟುವಿನಲ್ಲಿ) ದೇವತೆಗಳ ಹೆಸರುಗಳ ರೂಪ ನಿಷ್ಪತ್ತಿಯನ್ನು ವಿವರಿಸುವಾಗ ಈ ಅರ್ಯಮಾದೇವತೆಯ ಹೆಸರನ್ನು ಬಿಟ್ಟಿದಾರೆ. ಎರಡು ಮಂತ್ರಗಳಲ್ಲಿ ಹೊರತಾಗಿ

ಬಾಕಿ ಕಡೆಗಳಲ್ಲೆಲ್ಲಾ ಬೇರೆ ದೇವತೆಗಳ ಜೊತೆಯಲ್ಲಿಯೇ ಪ್ರಸ್ತಾಪ ; ಅದೂ ಹೆಚ್ಚಾಗಿ ಮಿತ್ರ ಮತ್ತು ವರುಣರ ಜೊತೆಯಲ್ಲಿಯೆ. ಅಗ್ನಿಯನ್ನುದ್ದೇಶಿಸಿ ಕನ್ಯೆಯರನ್ನು ಒಲಿಸಿಕೊಳ್ಳುವಾಗ,

**ತ್ವಮರ್ಯಮಾ ಭವಸಿ ಯತ್ಕನೀನಾಂ ನಾಮ ಸ್ವಧಾವನ್ ಗುಹ್ಯಂ ಬಿಭರ್ಷಿ ।**

(ಋ. ಸಂ. ೫-೩-೨)

ನೀನೇ ಅರ್ಯಮಾ ಎಂದು ಹೇಳಿದೆ.

**ಭಗೋ ಅರ್ಯಮಾ ಸವಿತಾ ಪುರಂಧಿರ್ಮಹ್ಯಂ ತ್ವಾದುರ್ಗಾರ್ಹಪತ್ಯಾಯ ದೇವಾಃ ।**

(ಋ. ಸಂ. ೧೦-೮೫-೩೬)

ಎಂಬ ಋಕ್ಕಿನಲ್ಲಿ—ಎಲೈ ದೇವತೆಗಳೇ, ಭಗ, ಅರ್ಯಮಾ, ಸವಿತೃ, ಪುರಂಧಿ ಇವರುಗಳು ಈ ವಧುವನ್ನು ನನ್ನ ಗೃಹಸ್ಥಾಶ್ರಮಕ್ಕೆ ನೆರವಾಗುವುದಕ್ಕಾಗಿ ನನಗೆ ಕೊಟ್ಟರು ಎಂದು ವರನು ಹೇಳುತ್ತಾನೆ.

**ನ ತಮಂಹೋ ನ ದುರಿತಂ ದೇವಾಸೋ ಅಷ್ಟ ಮರ್ತ್ಯಂ ।**
**ಸಜೋಷಸೋ ಯಮರ್ಯಮಾ ಮಿತ್ರೋ ನಯಂತಿ ವರುಣೋ ಅತಿ ದ್ವಿಷಃ ॥**

(ಋ. ಸಂ. ೧೦-೧೨೬-೧)

**ಶುನಮಸ್ಮಭ್ಯಮೂತಯೇ ವರುಣೋ ಮಿತ್ರೋ ಅರ್ಯಮಾ ।**
**ಶರ್ಮ ಯಚ್ಛಂತು ಸಪ್ರಥ ಆದಿತ್ಯಾಸೋ ಯದೀಮಹೇ ಅತಿ ದ್ವಿಷಃ ॥**

(ಋ. ಸಂ. ೧೦-೧೨೬-೬)

ಋ. ಸಂ. ೧೦-೧೨೬ನೆಯ ಸೂಕ್ತದಲ್ಲಿ ದೇವತೆಗಳು ವಿಶ್ವೇದೇವತೆಗಳೆಂದು ಹೇಳಿದ್ದರೂ ಮೇಲೆ ಉದಹರಿಸಿರುವ ಋಕ್ಕುಗಳಿಂದ ಮುಖ್ಯವಾಗಿ ಆದಿತ್ಯರನ್ನೇ ಇಲ್ಲಿ ಸ್ತುತಿಸಲಾಗಿದೆ. ಇದಲ್ಲದೆ **ದೇವಾಸಃ ಅಷ್ಟ** ಎಂದು ಮೊದಲನೆಯ ಋಕ್ಕಿನಲ್ಲಿ ಹೇಳಿರುವುದು ಎಂಟು ಮಂದಿ ಆದಿತ್ಯರನ್ನೇ (ವೇದದಲ್ಲಿ ಆದಿತ್ಯರ ಸಂಖ್ಯೆ ಎಂಟು ಮಂದಿಗಿಂತ ಹೆಚ್ಚಾಗಿ ಎಲ್ಲಿಯೂ ಹೇಳಿಲ್ಲ) ಉದ್ದೇಶಿಸಿದೆ. ಇದಲ್ಲದೆ ೬ ನೇ ಋಕ್ಕಿನಲ್ಲಿ **ಆದಿತ್ಯಾಸಃ** ಎಂಬ ಶಬ್ದವೂ ಇದನ್ನೇ ಸ್ಪಷ್ಟವಾಗಿ ತಿಳಿಸುತ್ತದೆ. ಈ ಸೂಕ್ತದ ಪ್ರತಿ ಋಕ್ಕಿನಲ್ಲಿಯೂ (ಕೊನೆಯ ಋಕ್ಕುಹೊರತು) ವರುಣೋ ಮಿತ್ರೋ ಅರ್ಯಮಾ ಎಂದು ಮಿತ್ರಾವರುಣಾರ್ಯಮರ ಹೆಸರು ಪಲ್ಲವಿಯಂತೆ ಪುನಃ ಪುನಃ ಪಠಿತವಾಗಿರುವುದು ಆದಿತ್ಯರಲ್ಲಿ ಈ ಮಿತ್ರಾವರುಣಾರ್ಯಮರು ಪ್ರಧಾನಸ್ಥಾನವನ್ನು ಪಡೆದಿರುವುದನ್ನು ಸೂಚಿಸುವುದಾಗಿದೆ. ಅರ್ಯಮನ ವಿಷಯವು ಋಗ್ವೇದದಲ್ಲಿ ಹೆಚ್ಚಾಗಿ ವಿವರಿಸಲ್ಪಟ್ಟಿಲ್ಲವಾದ್ದರಿಂದ ವಿಶೇಷ ವಿವರಣೆಯು ಸಾಧ್ಯವಿಲ್ಲ.

### ವ್ಯಾಕರಣಪ್ರಕ್ರಿಯಾ

**ಗಮಂತು**—ಗಮ್ಲೃ ಗತೌ. ಧಾತು. ಲೋಟ್ ಪ್ರಥಮಪುರುಷಬಹುವಚನ ಪರವಾದಾಗ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಅತಿಙಂತದ ಪರವಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಭುವನ್**—ಭೂ ಸತ್ತಾಯಾಂ ಧಾತು. ಲಿಙ್ ಪರವಾದಾಗ ಲಿಙ್ಯಾಶಿಷ್ಯಙ್ (ಪಾ. ಸೂ. ೩-೧-೮೬) ಎಂಬುದರಿಂದ ಅಙ್ ಪ್ರತ್ಯಯ. ಅದು ಙಿತ್ತಾದುದರಿಂದ ಧಾತುವಿನ ಉಕಾರಕ್ಕೆ ಗುಣ ಬರುವುದಿಲ್ಲ. **ಅಚಿಶ್ನು-ಧಾತುಭ್ರುವಾಂ** ಎಂಬುದರಿಂದ ಉವಙಾದೇಶ **ಆಗಮಶಾಸ್ತ್ರಮನಿತ್ಯಮ್** (ಪರಿ. ೯೩ ೨) ಎಂಬುದರಿಂದ

ಯಾಸುಟಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ.

**ವೃಧಾಸಃ**—ವೃಧು ವೃದ್ಧೌ ಧಾತು. **ಇಗುಪಧಜ್ಞಾಪ್ರೀಕಿರಃ ಕಃ** ಎಂಬುದರಿಂದ ಕ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಇದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ- ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಕರನ್**—ಡುಕೃಞ್ ಕರಣೇ. ಧಾತು. **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲಿಙರ್ಥದಲ್ಲಿ ಲುಙ್. **ಕೃಮೃದೃರುಹಿಭ್ಯಃ**—(ಪಾ. ಸೂ. ೩-೧-೫೯) ಎಂಬುದರಿಂದ ಚ್ಲಿಗೆ ಅಙಾದೇಶ. **ಋದೃಶೋಽಙಿ ಗುಣಃ** (ಪಾ ಸೂ. ೭-೪-೧೬) ಎಂಬುದರಿಂದ ಅಙ್ ಪರವಾದಾಗ ಧಾತುವಿನ ಋಕಾರಕ್ಕೆ ಗುಣ ರಪರವಾಗಿ ಬರುತ್ತದೆ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಸುಸಾಹಾ**—ಷಹ ಮರ್ಷಣೇ. ಧಾತು. ಕ್ವಿಪ್ ಪ್ರತ್ಯಯ. ಪ್ರಾದಿಸಮಾಸದಲ್ಲಿ ಕೃದುತ್ತರ ಪದಪ್ರಕೃತಿ ಸ್ವರ ಬರುತ್ತದೆ. ತೃತೀಯಾಏಕವಚನಾಂತರೂಪ. ಸಂಹಿತಾದಲ್ಲಿ ಛಾಂದಸವಾಗಿ ದೀರ್ಘ ಬರುತ್ತದೆ.

**ವಿಥುರವ್**—ವ್ಯಥ ಭಯಸಂಚಲನಯೋಃ ಧಾತು. **ವ್ಯಥೇಃ ಸಂಪ್ರಸಾರಣಂ ಕಿಚ್ಚ** (ಉ ಸೂ. ೧-೩೯) ಎಂಬುದರಿಂದ ಉರಚ್ ಪ್ರತ್ಯಯ. **ನ ಸಂಪ್ರಸಾರಣೇ ಸಂಪ್ರಸಾರಣವ್** ಎಂದು ನಿಷೇಧವಿರುವುದರಿಂದ ಯಕಾರಕ್ಕೆ ಇಕಾರರೂಪ ಸಂಪ್ರಸಾರಣ ಬರುತ್ತದೆ, ಪರಕ್ಕೆ ಪೂರ್ವರೂಪ. ಪ್ರತ್ಯಯ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

———— :o: ————

**ಸಂಹಿತಾಪಾಠಃ**

**ಪ್ರೇಷ್ಠಂ ವೋ ಅತಿಥಿಂ ಗೃಣೀಷೇ ಽಗ್ನಿಂ ಶಸ್ತಿಭಿಸ್ತುರ್ವಣಿಃ ಸಜೋಷಾಃ ।**
**ಅಸದ್ಯಥಾ ನೋ ವರುಣಃ ಸುಕೀರ್ತಿರಿಷಶ್ಚ ಪರ್ಷದರಿಗೂರ್ತಃ ಸೂರಿಃ ॥ ೩ ॥**

**ಪದಪಾಠಃ**

**ಪ್ರೇಷ್ಠಂ । ವಃ । ಅತಿಥಿಂ । ಗೃಣೀಷೇ । ಅಗ್ನಿಂ । ಶಸ್ತಿಽಭಿಃ । ತುರ್ವಣಿಃ । ಸಽಜೋಷಾಃ ।**
**ಅಸತ್ । ಯಥಾ । ನಃ । ವರುಣಃ । ಸುಽಕೀರ್ತಿಃ । ಇಷಃ । ಚ । ಪರ್ಷತ್ । ಅರಿಽಗೂರ್ತಃ । ಸೂರಿಃ ॥ ೩ ॥**

### ಸಾಯಣಭಾಷ್ಯಂ

ಹೇ ದೇವಾಃ ವೋ ಯುಷ್ಮಾಕಂ ಪ್ರೇಷ್ಠಂ ಪ್ರಿಯತಮಂ । ಸರ್ವೇಷಾಮಾಹ್ವಾತೃತ್ವಾದ್ಧವಿರ್ವಹನಾಚ್ಚಾಗ್ನಿರ್ದೇವಾನಾಂ ಪ್ರಿಯತಮಃ । ತಮತಿಥಿಂ ಗೃಣೀಷೇ । ಗೃಣೇ । ಸ್ತೌಮಿ ॥ ವ್ಯತ್ಯಯೇನ ಮಧ್ಯಮಃ ॥ ಕೇನ ಸಾಧನೇನ । ಶಸ್ತಿಭಿಃ ಶಂಸನೈಃ ಸ್ತುತಿಭಿಃ । ಕೀದೃಶೋಽಹಂ । ತುರ್ವಣಿಸ್ತೂರ್ಣವನಿಃ ಶೀಘ್ರಂ ಸಂಭಕ್ತಾ ಸಜೋಷಾ ಯುಷ್ಮಾಭಿಃ ಸಹ ಪ್ರೀಯಮಾಣಃ । ಯದ್ವಾ । ಏತೇ ಅಗ್ನಿವಿಶೇಷಣೇ । ಯಸ್ತುರ್ವಣಿಃ ಶೀಘ್ರಂ ಯಜ್ಞಸ್ಯ ಸಂಭಕ್ತಾ ಸಜೋಷಾ ಯುಷ್ಮಾಭಿಃ ಸಹ ಪ್ರಿಯಮಾಣಃ ತಮಗ್ನಿಂ ಗೃಣಿಷೇ । ಯಥಾ ಯೇನ ಪ್ರಕಾರೇಣ ನೋಽಸ್ಮಾಕಂ ವರುಣ ಏತನ್ನಾಮಕೋ ದೇವಃ ಸುಕೀರ್ತಿಃ ಶೋಭನಕೀರ್ತಿಮಾನಸತ್ । ಸುಕೀರ್ತಿಂ ಭಿಕ್ಷೇ ವರುಣಸ್ಯ ಭೂರೇಃ । ಋ. ೨-೨೮-೧ । ಇತ್ಯಾದಿಮಂತ್ರವರ್ಣೇಷು ವರಣಾತ್ಸುಕೀರ್ತಿರೇವೈಷಣೀಯಾ । ಅರಿಗೂರ್ತೋಽರಿಷ್ವದಾತೃಷು ಸದಾ ಶಬ್ದಿತಃ ಅರೀಣಾಂ ಹನನಾ- ಯೋದ್ಯುಕ್ತೋ ವಾ ಸೂರಿಃ ಪ್ರೇರಯಿತಾಽಯಂ ವರುಣ ಇಷಶ್ಚಾನ್ನಾನಿ ಪರ್ಷತ್ । ಪೂರಯೇತ್ । ತಥಾ ತಮಪಿ ಸ್ತುಮ ಇತ್ಯರ್ಥಃ ॥

### ಪ್ರತಿಪದಾರ್ಥ

**ದೇವಾಃ**—ಎಲೈ ದೇವತೆಗಳೇ । **ತುರ್ವಣಿಃ**—ಯಾಗವನ್ನು ಮಾಡಿ ದೇವತೆಗಳನ್ನು ತೃಪ್ತಿಪಡಿಸುವ ಆತುರವುಳ್ಳವನೂ । **ಸಜೋಷಾಃ**—ದೇವತೆಗಳಿಗೆಲ್ಲಾ ಸಮಾನವಾದ ಪ್ರೀತಿಪಾತ್ರನೂ ಆದ ನಾನು । [ಅಥವಾ (**ಯಃ**—ಯಾವ ಅಗ್ನಿಯು) । **ತುರ್ವಣಿಃ**—ದೇವತೆಗಳಿಗೆ ಹವಿಸ್ಸನ್ನು ವಹಿಸಲು ಆತುರವುಳ್ಳವನೂ। **ಸಜೋಷಾಃ**-ದೇವತೆಗಳಲ್ಲಿ ಸಮಾನವಾದ ಪ್ರೀತಿಪಾತ್ರನೂ] ಆಗಿದ್ದಾನೋ ಅಂತಹವನೂ, ಮತ್ತು । **ವಃ**—ನಿಮಗೆ। **ಪ್ರೇಷ್ಠಂ**—ಅತ್ಯಂತ ಪ್ರೀತಿಪಾತ್ರನೂ । **ಅತಿಥಿಂ**—ಅತಿಥಿಪ್ರಾಯನೂ ಆದ । **ಅಗ್ನಿಂ**—ಅಗ್ನಿಯನ್ನು । **ಶಸ್ತಿಭಿಃ**—ಸ್ತೋತ್ರಗಳಿಂದ । **ಗೃಣೀಷೇ**—ಸ್ತುತಿಸುತ್ತೇನೆ । **ಯಥಾ**—ಯಾವ ಪ್ರಕಾರವಾಗಿ । **ಅರಿಗೂರ್ತಃ**—ಅದಾತೃಗಳಾದ ಅರಿಗಳನ್ನು ನಾಶಮಾಡುವವನೂ । **ಸೂರಿಃ**—ಮಾನವರಿಗೆ ಕರ್ಮಪ್ರೇರಕನೂ ಆದ । **ವರುಣಃ**—ವರುಣನು । **ಸುಕೀರ್ತಿಃ**—ಶ್ರೇಷ್ಠವಾದ ಕೀರ್ತಿಕಾರಕನಾಗಿ । **ಅಸತ್**—ಆಗುತ್ತಾನೆಯೋ, (ಮತ್ತು) । **ಇಷಶ್ಚ**—ಅನ್ನವನ್ನೂ । **ಪರ್ಷತ್**—ತುಂಬಿಕೊಡುವಂತಾಗುವನೋ (ಆ ರೀತಿಯಲ್ಲಿ ವರುಣನನ್ನೂ ಸ್ತುತಿಸುತ್ತೇನೆ).

### ಭಾವಾರ್ಥ

ಎಲೈ ದೇವತೆಗಳೇ, ಯಾಗವನ್ನು ಮಾಡಿ ದೇವತೆಗಳನ್ನು ತೃಪ್ತಿಪಡಿಸಲು ಆತುರವುಳ್ಳವನೂ, ದೇವತೆಗಳಿಗೆಲ್ಲಾ ಸಮಾನವಾದ ಪ್ರೀತಿಪಾತ್ರನೂ ಆದ ನಾನು ದೇವತೆಗಳಿಗೆ ಅತ್ಯಂತ ಪ್ರಿಯನೂ, ಅತಿಥಿಪ್ರಾಯನೂ ಆದ ಅಗ್ನಿಯನ್ನು ಸ್ತೋತ್ರಗಳಿಂದ ಸ್ತುತಿಸುತ್ತೇನೆ. ಮತ್ತು ಅದಾತೃಗಳನ್ನು ನಾಶಮಾಡುವವನೂ, ಮಾನವರಿಗೆ ಕರ್ಮಪ್ರೇರಕನೂ ಆದ ವರುಣನು ನಮಗೆ ಶ್ರೇಷ್ಠವಾದ ಕೀರ್ತಿಕಾರಕನಾಗುವಂತೆಯೂ ಮತ್ತು ನಮಗೆ ಅನ್ನವನ್ನು ತುಂಬಿಕೊಡುವಂತೆಯೂ ಆಗುವುದಕ್ಕಾಗಿ ಅವನನ್ನೂ ಸ್ತುತಿಸುತ್ತೇನೆ.

### English Translation

I praise with hymns, (O gods), your best beloved guest, Agni, who is prompt (to partake of the oblation), and who is well pleased along (with you); so that (thereby) Varuna, the possessor of renown, the subduer of foes, the animator (of men), may fill us with food.

ವಿಶೇಷವಿಷಯಗಳು

ಈ ಸೂಕ್ತಕ್ಕೆ ವಿಶ್ವೇದೇವತೆಗಳೇ ದೇವತೆಯೆಂದು ಹೇಳಿದೆ. ಆದ್ದರಿಂದ ಈ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಮುಖ್ಯವಾಗಿ ಸವಿತೃದೇವತೆಯನ್ನೂ, ಎರಡನೆಯ ಋಕ್ಕಿನಲ್ಲಿ ಮಿತ್ರ, ವರುಣ, ಅರ್ಯಮಾ ಎಂಬ ದೇವತೆಗಳನ್ನೂ (ಆದಿತ್ಯರನ್ನೂ) ಸ್ತುತಿಸಿ, ಈ ಪ್ರಕೃತವಾದ ಮೂರನೆಯ ಎಂದರೆ ಪ್ರೇಷ್ಠಂ ವೋ ಅತಿಥಿಂ ಎಂಬ ಋಕ್ಕಿನಲ್ಲಿ ಅಗ್ನಿಯನ್ನೂ , ವರುಣನನ್ನೂ ಋಷಿಯು ಸ್ತುತಿಸುವನು.

**ಪ್ರೇಷ್ಠಂ — ಪ್ರಿಯತಮಂ । ಸರ್ವೇಷಾಮಾಹ್ವಾತೃತ್ವಾದ್ಧವಿರ್ವಹನಾಚ್ಚಾಗ್ನಿರ್ದೇವಾನಾಂ ಪ್ರಿಯತಮಃ ।** ಅತ್ಯಂತ ಪ್ರೀತಿಪಾತ್ರನಾದ ಅಗ್ನಿಯನ್ನು ಎಂದರ್ಥವು. ದೇವತೆಗಳಿಗೆ ಅಗ್ನಿಯು ಹೇಗೆ ಪ್ರೀತಿ-ಪಾತ್ರನು ಎಂದರೆ, ಮನುಷ್ಯರು ಮಾಡುವ ಯಜ್ಞಾದಿಗಳಲ್ಲಿ ಅಗ್ನಿಯು ಹೋತೃತ್ವವನ್ನು ವಹಿಸಿ, ಯಜಮಾನರು ಉದ್ದೇಶಿಸಿರುವ ದೇವತೆಗಳನ್ನು ಆಹ್ವಾನಮಾಡಿ ಯಜ್ಞಭೂಮಿಗೆ ಕರೆತರುವುದರಿಂದಲೂ ಮತ್ತು ಯಜಮಾನರು ದೇವತೆಗಳನ್ನುದ್ದೇಶಿಸಿ ಅಗ್ನಿಯಲ್ಲಿ ಹೋಮಮಾಡುವ ಹವಿರಾದಿಗಳನ್ನು ವಹಿಸಿ ದೇವತೆಗಳಿಗೆ ತಲಪುವಂತೆ ಮಾಡುವುದರಿಂದಲೂ, ಅಗ್ನಿಯು ದೇವತೆಗಳಿಗೆ ಪ್ರೀತಿಪಾತ್ರನೆಂದು ಹೇಳುವುದು ಸಹಜವಾಗಿದೆ.

ಯಾಗಗಳಲ್ಲಿಯೂ ಸಹ ಅಗ್ನಿಗೂ ಮನುಷ್ಯರ ದೈನಂದಿನ ಜೀವನಕ್ಕೂ ನಿಕಟಬಾಂಧವ್ಯವಿರುವುದು. ಅಗ್ನಿಯು ಮನುಷ್ಯರಿಂದ ಹುತವಾದುದನ್ನು (ಅಗ್ನಿಯಲ್ಲಿ ಹೋಮಮಾಡಿದುದನ್ನು) ದೇವತೆಗಳಿಗೆ ಸಲ್ಲಿಸುತ್ತಾನೆ. ಆದುದರಿಂದಲೇ ಅವನಿಗೆ ಹವ್ಯವಾಟ್ ಎಂಬ ಹೆಸರಿದೆ. ಅವನಿಲ್ಲದೆ ದೇವತೆಗಳಿಗೆ ಸಂತೋಷವೇ ಉಂಟಾಗುವುದಿಲ್ಲ. ವೆಂದು,

**ಮಹಾँ ಅಸ್ಯಧ್ವರಸ್ಯ ಪ್ರಕೇತೋ ನ ಋತೇ ತ್ವದಮೃತಾ ಮಾದಯಂತೇ ।**

(ಋ ಸಂ ೭-೧೧-೧)

ಎಂಬ ಋಕ್ಕಿನಲ್ಲಿ ಹೇಳಿದೆ. ಮತ್ತು ಅಗ್ನಿಯು ದೇವತೆಗಳನ್ನು ಕರೆತರುವ ಮತ್ತು ಅವರಿಗೆ ಹವಿಸ್ಸನ್ನು ಒಯ್ಯುವ ವಿಚಾರದಲ್ಲಿಯೂ—

**ಅಗ್ನಿಂ ದೂತಂ ವೃಣೀಮಹೇ ಹೋತಾರಂ ವಿಶ್ವವೇದಸಂ ।**

(ಋ. ಸಂ. ೧-೧೨-೧)

ಎಂಬ ಋಕ್ಕಿನಲ್ಲಿ ದೇವತೆಗಳನ್ನು ಯಜ್ಞಭೂಮಿಗೆ ಕರೆತರುವ ಮತ್ತು ಅವರನ್ನು ಆಹ್ವಾನಮಾಡುವ ದೂತನೆಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ.

**ಅಗ್ನೇ ದೇವಾँ ಇಹಾವಹ ಜಜ್ಞಾನೋ ವೃಕ್ತಬರ್ಹಿಷೇ । ಅಸಿ ಹೋತಾ ನ ಈಡ್ಯಃ ।**

(ಋ. ಸಂ. ೧-೧೨-೩)

ಎಂಬ ಋಕ್ಕಿನಲ್ಲಿ-ಎಲೈ ಅಗ್ನಿಯೇ ನೀನು ದೇವತೆಗಳನ್ನು ಕರೆತರುವ ಹೋತೃವಾಗಿರುವುದರಿಂದ ನೀನು ದೇವತೆಗಳನ್ನು ಈ ಯಜ್ಞಭೂಮಿಗೆ ಕರೆದುಕೊಂಡು ಬಾ ಎಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ. ಋ. ಸಂ. ೧-೧೪-೧ ರಲ್ಲಿ **ದೇವೇಭಿರ್ಯಾಹಿ** ದೇವತೆಗಳೊಡನೆ ಈ ನಮ್ಮ ಯಜ್ಞಕ್ಕೆ ಬಾ ಎಂದು ಪ್ರಾರ್ಥಿಸಿದೆ. ಅಗ್ನಿಯು ಭೂಮಿಗೆ ಮತ್ತು ದೇವತೆಗಳ ಸಮೀಪಕ್ಕೆ ಹೋಗುವ ಎರಡು ದಾರಿಗಳಲ್ಲಿಯೂ ಹೋಗುತ್ತಾನೆ. ಅದರಿಂದಲೇ ಅವನಿಗೆ ದೂತನೆಂತಲೇ ಕರೆಯುವುದು ವಾಡಿಕೆಯಾಗಿದೆ.

ಯಾಗಗಳಲ್ಲಿ ಕರ್ಮಗಳನ್ನು ಸಾಧಿಸುವುದರಲ್ಲಿ ಅಗ್ನಿಯು ಅತಿಮುಖ್ಯ ಪಾತ್ರವಹಿಸಿರುವನೆಂದು ಹೇಳಿರುವುದರಿಂದ ಮನುಷ್ಯರಲ್ಲಿ ಪುರೋಹಿತರಿಗೆ ಕೊಟ್ಟಿರುವ ಸ್ಥಾನವೇ ದೇವತೆಗಳಲ್ಲಿ ಅಗ್ನಿಗೆ ಕೊಡಲ್ಪಟ್ಟಿದೆ. ಆದುದರಿಂದ ಅವನಿಗೆ ಋತ್ವಿಕ್, ವಿಪ್ರ, ಪುರೋಹಿತ, ಹೋತಾ ಮೊದಲಾದ ವಿಶೇಷಣಗಳಿವೆ. ಇವುಗಳೆಲ್ಲಕ್ಕಿಂತಲೂ ಅಗ್ನಿಯನ್ನು ಹೋತಾ (ದೇವತೆಗಳನ್ನು ಆಹ್ವಾನಿಸುವವನು ಅಥವಾ ಹೋಮನಿಷ್ಪಾದಕನು) ಎಂದು ಕರೆಯುವುದೇ ವಿಶೇಷವಾಗಿದೆ. ಅವನು ಹೋತೃಗಳಲ್ಲೆಲ್ಲಾ ಅತ್ಯಂತ ಪ್ರೀತಿಪಾತ್ರನು ಮತ್ತು ಶ್ರೇಷ್ಠನು. ಹವ್ಯವಾಹನನ ಕೆಲಸವೇ ಅಗ್ನಿಯ ಮುಖ್ಯ ಕೆಲಸ. ಆದುದರಿಂದ ಅಗ್ನಿಯು ದೇವತೆಗಳಿಗೆ ಅತ್ಯಂತ ಪ್ರೀತಿಪಾತ್ರನೆಂದು ಋಷಿಯು ವರ್ಣಿಸಿದ್ದಾನೆ.

**ಅತಿಥಿಂ**—ಮನುಷ್ಯನು ಅಗ್ನಿಯನ್ನು ದೇವತೆಗಳ ವರಪ್ರಸಾದದಿಂದ ಪಡೆಯುತ್ತಾನೆ ಮತ್ತು ಮಾತರಿಶ್ವನು ಅಗ್ನಿಯನ್ನು ಮೊದಲು ಕಂಡು ಭೂಮಿಗೆ ಕರೆತರುತ್ತಾನೆ ಎಂದು ಹೇಳಿರುವುದರಿಂದ ಅಗ್ನಿಯು ಸ್ವರ್ಗಲೋಕದವನೇ ಎಂಬುದು ಸಿದ್ಧವಾದಂತಾಯಿತು. ಇದೇ ಅರ್ಥದಲ್ಲಿಯೇ ಅಗ್ನಿಯು ಮನುಷ್ಯರ ಅತಿಥಿ ಎಂದು ಹೇಳಿರಬಹುದು ಅಥವಾ ಅತಿಥಿಯು ಯಾವಾಗಲೂ ಪೂಜ್ಯನೂ ಗೌರವಾರ್ಹನೂ ಆಗಿರುವುದರಿಂದ ಅದರಂತೆ ಅಗ್ನಿಯೂ ಪೂಜಾರ್ಹನಾದ್ದರಿಂದ ಅತಿಥಿಯೆಂಬ ವಿಶೇಷಣದಿಂದ ಸ್ತುತಿಸಿರಬಹುದು.

**ತುರ್ವಣಿಃ**—**ತುರ್ವಣಿಸ್ತೂರ್ಣವನಿಃ** ಎಂದು ಯಾಸ್ಕರು ಈ ಶಬ್ದದ ನಿರ್ವಚನವನ್ನು ಹೇಳಿದ್ದಾರೆ. (ನಿ. ೬-೧೪) **ವನ ಷಣ ಸಂಭಕ್ತೌ** ಎಂಬ ಧಾತುವಿನಿಂದ ನಿಷ್ಪನ್ನವಾಗಿರುವ ಈ ಶಬ್ದಕ್ಕೆ **ತೂರ್ಣಂ ಹಿ ಯಃ ಸಂಭಜತೇ ಸ ತೂರ್ಣವನಿರಿತ್ಯುಕ್ತಃ ।** ಜಾಗ್ರತೆಯಾಗಿ ಬರುವವನು ಎಂದರ್ಥವು. ಪ್ರಕೃತವಾದ ಋಕ್ಕಿನಲ್ಲಿ **ತುರ್ವಣಿಃ ಸಜೋಷಾಃ** ಎಂದರೆ ಇತರ ದೇವತೆಗಳಿಂದ ಪ್ರೀತಿಸಲ್ಪಡುವವನಾಗಿ ಅಥವಾ ಇತರದೇವತೆಗಳೊಡನೆ ಸಹಿತನಾಗಿ ಈ ನಮ್ಮ ಯಜ್ಞಭೂಮಿಗೆ ಬೇಗನೆ ಬರುವವನೆಂದು ಅಗ್ನಿಯನ್ನು ಸ್ತುತಿಸಲಾಗಿದೆ.

**ಸಜೋಷಾಃ**—ಈ ಶಬ್ದಕ್ಕೆ ಭಾಷ್ಯಕಾರರು ಎರಡು ವಿಧವಾದ ಅರ್ಥವನ್ನು ಹೇಳಿದ್ದಾರೆ. **ಸಜೋಷಾ ಯುಷ್ಮಾಭಿಃ ಸಹ ಪ್ರೀಯಮಾಣಃ** ಎಂದರೆ ಎಲೈ ದೇವತೆಗಳೇ, ಪ್ರೀತಿಪಾತ್ರನಾದ ಅಗ್ನಿಯನ್ನು ನಿಮ್ಮೊಡನೆ ಬರಬೇಕೆಂದು ಸ್ತುತಿಸುತ್ತೇನೆ ಎಂದು ಒಂದು ವಿಧವಾದ ಅರ್ಥವನ್ನು ಹೇಳಿ, **ಯಸ್ತುರ್ವಣಿಃ ಶೀಘ್ರಂ ಯಜ್ಞಸ್ಯ ಸಂಭಕ್ತಾ ಸಜೋಷಾ ಯುಷ್ಮಾಭಿಃ ಸಹ ಪ್ರೀಯಮಾಣಸ್ತಮಗ್ನಿಂ ಗೃಣೀಷೇ**—ಎಲೈ ದೇವತೆಗಳೇ, ಯಾವ ಅಗ್ನಿಯನ್ನು ನೀವು ಪ್ರೀತಿಸುತ್ತೀರೋ ಶೀಘ್ರವಾಗಿ ಯಜ್ಞಭೂಮಿಗೆ ಬರುವ ಆ ಅಗ್ನಿಯನ್ನು ಸ್ತುತಿಸುತ್ತೇನೆ ಎಂದು ಇನ್ನೊಂದು ವಿಧವಾಗಿಯೂ ಅರ್ಥವಿವರಣೆ ಮಾಡಿದ್ದಾರೆ.

**ವರುಣಃ ಸುಕೀರ್ತಿಃ**—ಯಾವ ಪ್ರಕಾರವಾಗಿ ವರುಣನು ಒಳ್ಳೆಯ ಕೀರ್ತಿವಂತನಾಗಿ ನಮಗೆ ಕೀರ್ತಿಯನ್ನುಂಟುಮಾಡಬೇಕೆಂದು ಪ್ರಾರ್ಥಿತನಾದನೋ ಆ ಪ್ರಕಾರವಾಗಿ ಎಂದು ಸಾಯಣರ ವಿವರಣೆಯು. ಈ ವಿಷಯದಲ್ಲಿ

**ಅತಿ ಯೋ ಮಂಧ್ರೋ ಯಜಥಾಯ ದೇವಃ ಸುಕೀರ್ತಿಂ ಭಿಕ್ಷೇ ವರುಣಸ್ಯ ಭೂರೇಃ ।**

(ಋ. ಸಂ ೨-೨೮-೧)

ಎಂಬ ಋಕ್ಕನ್ನು ಉದಹರಿಸಿರುವರು. ಈ ಋಕ್ಕಿನಲ್ಲಿ ವರುಣನಿಂದ ಹೆಚ್ಚಾಗಿ ಕೀರ್ತಿಯನ್ನು ಅಪೇಕ್ಷಿಸಿ ಸ್ತುತಿಸಿರುವುದು ವಿಶದವಾಗಿದೆ.

**ಅರಿಗೂರ್ತಃ**—ಈ ಶಬ್ದವು ಋಗ್ವೇದದಲ್ಲಿ ಈ ಋಕ್ಕಿನಲ್ಲಿ ಮಾತ್ರ ಪಠಿತವಾಗಿರುವುದು. ಬೇರೆಲ್ಲಿಯೂ ಇಲ್ಲ. ಇದಕ್ಕೆ ಸಾಯಣರು **ಅರಿಗೂರ್ತೋಽರಿಷ್ವದಾತೃಷು ಸದಾ ಶಬ್ದಿತಃ ಅರೀಣಾಂ ಹನನಾಯೋದ್ಯುಕ್ತೋ ವಾ**—ಎಂದರೆ ದಾನಮಾಡದೆ ಇರುವ ಎಂದರೆ ಯಾರಿಗೂ ಏನನ್ನೂ ಕೊಡದಿರುವ ಲೋಭಿಗಳ ವಿಚಾರದಲ್ಲಿ ಯಾವಾಗಲೂ ಶಬ್ದಮಾಡುವ ಎಂದರೆ ನಿಂದಿಸುವ ಎಂದೂ ಅಥವಾ ಶತ್ರುಗಳನ್ನು ಸಂಹಾರಮಾಡಲು ಉದ್ಯುಕ್ತನಾದ ಎಂದೂ ಇನ್ನೊಂದು ಅರ್ಥವೂ ಸಾಧ್ಯವಾಗುತ್ತದೆಂದು ವಿವರಿಸಿರುವರು.

**ಸೂರಿಃ**—ಸೂರಿಶಬ್ದವು ಸ್ತೋತೃನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೯) ಸ್ತೋತ್ರಮಾಡತಕ್ಕವನು ಎಂದರ್ಥ. ಮತ್ತು ಯಾಸ್ಕರು—

**ಇಹೇಹ ಜಾತಾ ಸಮವಾವಶೀತಾಮರೇಪಸಾ ತನ್ವಾ ೩ ನಾಮಭಿಃ ಸ್ವೈಃ ।**
**ಜಿಷ್ಣುರ್ವಾಮನ್ಯಃ ಸುಮಖಸ್ಯ ಸೂರಿರ್ದಿವೋ ಅನ್ಯಃ ಸುಭಗಃ ಪುತ್ರ ಊಹೇ ॥**
(ಋ. ಸಂ. ೧-೧೮೧-೪)

ಎಂಬ ಋಕ್ಕನ್ನುದಾಹರಿಸಿ ಅದರಲ್ಲಿರುವ ಸೂರಿಶಬ್ದಕ್ಕೆ **ಈರಯಿತಾ** ಎಂದರೆ **ಪ್ರೇರಯಿತಾ** ಎಂದು ಅರ್ಥವಿವರಣೆ ಮಾಡಿರುವರು. (ನಿ. ೧೨-೩) ಭಾಷ್ಯಕಾರರೂ ಈ ಅರ್ಥವನ್ನೇ ಪ್ರಕೃತವಾದ ಋಕ್ಕಿನಲ್ಲಿ ಪರಿಗ್ರಹಿಸಿ **ಸೂರಿಃ** ಎಂದರೆ **ಪ್ರೇರಯಿತಾ ಅಯಂ ವರುಣಃ**-ಪ್ರೇರಕನಾದ ವರುಣನು ಎಂದೇ ಅರ್ಥಮಾಡಿರುವರು.

ವ್ಯಾಕರಣಪ್ರಕ್ರಿಯಾ

**ಪ್ರೇಷ್ಠಮ್**—ಅತಿಶಯೇನ ಪ್ರಿಯಃ ಶ್ರೇಷ್ಠಃ ತವ್. **ಅತಿಶಾಯನೇ ತಮಬಿಷ್ಠನೌ** ಎಂಬುದರಿಂದ ಇಷ್ಠನ್ ಪ್ರತ್ಯಯ. **ಪ್ರಿಯಸ್ಥಿರ ಸ್ಫಿರ**—(ಪಾ. ಸೂ. ೬-೪-೧೫೭) ಎಂಬುದರಿಂದ ಪ್ರಿಯ ಎಂಬುದಕ್ಕೆ ಪ್ರ ಆದೇಶ. **ಪ್ರಕೃತ್ಯೈಕಾಚ್** (ಪಾ. ಸೂ. ೬-೩-೧೬೩) ಎಂಬುದರಿಂದ ಪ್ರಕೃತಿಭಾವ ಬರುವುದರಿಂದ ಟಿಲೋಪ ಬರುವುದಿಲ್ಲ. ಗುಣ. ಪ್ರತ್ಯಯನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅತಿಥಿನ್**—ಅತ ಸಾತತ್ಯಗಮನೇ. ಧಾತು. **ಋತನ್ಯಂಜಿ**—(ಉ. ಸೂ. ೪-೪೫೨) ಎಂಬುದರಿಂದ ಇಥಿನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಗೃಣೀಷೇ**—ಗೄ ಶಬ್ದೇ. ಕ್ರ್ಯಾದಿ. **ವ್ಯತ್ಯಯೋ ಬಹುಲಮ್** ಎಂಬುದರಿಂದ ಲಟ್ ಉತ್ತಮಪುರುಷ ಏಕವಚನಕ್ಕೆ ಮಧ್ಯಮಪುರುಷ ಏಕವಚನ ಪ್ರತ್ಯಯ ಬರುತ್ತದೆ. **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾವಿಕರಣ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಸೂತ್ರದಿಂದ ಧಾತುವಿಗೆ ಹ್ರಸ್ವ. **ಈ ಹಲ್ಯಘೋಃ** (ಪಾ. ಸೂ. ೬-೪-೧೧೩) ಸೂತ್ರದಿಂದ ವಿಕರಣದ ಆಕಾರಕ್ಕೆ ಈಕಾರಾದೇಶ ಋಕಾರದ ಪರದಲ್ಲಿರುವುದರಿಂದ ಣತ್ವ. ತಿಙಂತ ನಿಘಾತಸ್ವರ ಬರುತ್ತದೆ.

**ತುರ್ವಣಿಃ**—ತುರ್ವೀ ಹಿಂಸಾಯಾಂ ಧಾತು. ಇದಕ್ಕೆ ಔಣಾದಿಕ ಅನಿಪ್ರತ್ಯಯ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಅಸತ್**—ಅಸ ಭುವಿ. ಧಾತು. ಲೇಟ್. ಪ್ರಥಮಪುರುಷ ಏಕವಚನದಲ್ಲಿ ತಿಪ್. **ಇತಶ್ಚಲೋಪಃ** ಸೂತ್ರದಿಂದ ಅಂತ್ಯ ಇಕಾರಕ್ಕೆ ಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾ

ಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಗಮ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ಸುಕೀರ್ತಿಃ**—ಶೋಭನಾ ಕೀರ್ತಿಃ ಯಸ್ಯ ಸಃ ಸುಕೀರ್ತಿಃ ನಞ್ಸುಭ್ಯಾಮ್ (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಪರ್ಷತ್**—ಪೄ ಪಾಲನಪೂರಣಯೋಃ ಧಾತು. ಲೇಟ್. ಪ್ರಥಮಪುರುಷ ಏಕವಚನದಲ್ಲಿ ತಿಪ್. ಇಕಾರಲೋಪ. ಅಡಾಗಮ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. ಅದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. ರೇಫನಿಮಿತ್ತವಾಗಿ ಸಿಪಿನ ಸಕಾರಕ್ಕೆ ಷತ್ವ. ತಿಙಂತ ನಿಘಾತಸ್ವರ ಬರುತ್ತದೆ.

——— :0: ———

ಸಂಹಿತಾಪಾಠಃ

ಉಪ ವ ಏಷೇ ನಮಸಾ ಜಿಗೀಷೋಷಾಸಾನಕ್ತಾ ಸುದುಘೇವ ಧೇನುಃ ।
ಸಮಾನೇ ಅಹನ್ವಿಮಿಮಾನೋ ಅರ್ಕಂ ವಿಷುರೂಪೇ ಪಯಸಿ ಸಸ್ಮಿನ್ನೂಧನ್ ॥ ೪ ॥

ಪದಪಾಠಃ

ಉಪ । ವಃ । ಆ । ಈಷೇ । ನಮಸಾ । ಜಿಗೀಷಾ । ಉಷಸಾನಕ್ತಾ । ಸುದುಘಾಽಇವ । ಧೇನುಃ ।
ಸಮಾನೇ । ಅಹನ್ । ವಿಽಮಿಮಾನಃ । ಅರ್ಕಂ । ವಿಷುಽರೂಪೇ । ಪಯಸಿ । ಸಸ್ಮಿನ್ । ಊಧನ್ ॥ ೪ ॥

ಸಾಯಣಭಾಷ್ಯಂ

ಹೇ ದೇವಾಃ ವೋ ಯುಷ್ಮಾಕಂ ನಮಸಾ ಹವಿಷಾ ನಮಸ್ಕಾರೇಣ ವೋಪೋಪೇತ್ಯ ಜಿಗೀಷಾ ಪಾಪಾನಾಂ ಜಿಗೀಷಯೇಷೇ ಇಚ್ಛಾಮಿ ॥ ಇಷ ಗತಾವಿತ್ಯಸ್ಯ ವೇಷತೇರ್ವಾ ಗತ್ಯಾದ್ಯರ್ಥಸ್ಯ ಲಿಟ್ಯುತ್ತಮೈಕವಚನ ಇದಂ ರೂಪಂ ॥ ಭಜಾಮಿ । ಕಸ್ಮಿನ್ಕಾಲೇ । ಉಷಾಸಾನಕ್ತಾಽಹನಿ ರಾತ್ರೌ ಚ । ಯದ್ವಾ । ಅಹೋರಾತ್ರದೇವತೇ ಅಪ್ಯಭಿಗಚ್ಛಾಮಿ । ಗತೌ ದೃಷ್ಟಾಂತಃ । ಸುದುಘಾ ಧೇನುರಿವ ಸುದೋಗ್ಧ್ರೀ ಧೇನುರ್ಯಥಾ ದೋಹಾಯ ದೋಗ್ಧುರ್ಗೃಹಮಾಗಚ್ಛತಿ ತದ್ವತ್ । ಕಿಂ ಕುರ್ವನ್ । ಸಸ್ಮಿನ್ ಸಮಾನ ಊಧನ್ನೂಧಸ್ಯುತ್ಪನ್ನೇ ವಿಷುರೂಪೇ ನಾನಾರೂಪೇ ಪಯಸಿ ಕ್ಷೀರಘೃತಾದಿಕೇಽರ್ಕಮರ್ಚನೀಯಮನ್ನಂ ಚರುಪುರೋಡಾಶಾದಿಕಂ ವಿಮಿಮಾನೋ ವಿವಿಧಂ ಮಿಮಾನಃ। ಕಸ್ಮಿನ್ಕಾಲೇ। ಸಮಾನೇಽಹನ್ ಷಷ್ಠೇಽಹನಿ। ಏಕಸ್ಮಿನ್ನೇವಾಹನಿ ಂ ರ್ವದೈವ ವೇತ್ಯರ್ಥಃ । ಏಕಸ್ಮಿನ್ನೇವಾಹನಿ ಸಮಾನ ಊಧಸ್ಯುತ್ಪನ್ನೇ ನಾನಾರೂಪೇ

**ಪಯಸಿ ಕ್ಷೈದರ್ಥಂ ಹವಿರ್ವಿಮಿಮಾನ ಉಪಗಚ್ಛಾಮೀತ್ಯರ್ಥಃ । ಯದ್ವಾ । ಸಸ್ಮಿನ್ ಸರ್ವಸ್ಮಿನ್ನೂಧಸಿ ಫಲಾಖ್ಯಕ್ಷೀರೋತ್ಪಾದಕೇ ಯಜ್ಞೇ ನಿಮಿತ್ತಭೂತೇ ಸತಿ ವಿಷುರೂಪೇ ಪಯಸಿ ನಾನಾರೂಪೇ ಸೋಮ-ಲಕ್ಷಣೋದಕೇಽರ್ಕಮನ್ನಸಾಧನಂ ಸ್ತೋತ್ರಂ ವಿಮಿಮಾನೋಽಹಂ ಯುಷ್ಮಾನಭಿಗಚ್ಛಾಮಿ ॥**

॥ ಪ್ರತಿಪದಾರ್ಥ ॥

(ಎಲೈ ದೇವತೆಗಳೇ) **ಸಮಾನೇ ಅಹನ್**—ಒಂದೇ (ಆರನೆಯ) ದಿನದಲ್ಲಿ ಅಥವಾ ಸಮಸ್ತಕಾಲದಲ್ಲಿಯೂ। **ಸಸ್ಮಿನ್**—ಸಮಾನವಾದ (ಒಂದೇ ಅದ) । **ಊಧನ್**—ಕೆಚ್ಚಲಿನಿಂದ ಉತ್ಪನ್ನವಾದುದೂ । **ವಿಷುರೂಪೇ**—ನಾನಾ ರೂಪಗಳಲ್ಲಿ ಪರಿಣಾಮವನ್ನು ಹೊಂದುವುದೂ ಆದ । **ಪಯಸಿ**—ಕ್ಷೀರದಲ್ಲಿ । **ಅರ್ಕಂ**—ಅರ್ಚನೀಯವಾದ ಚರ್ವಾದ್ಯನ್ನವನ್ನು । **ವಿಮಿಮಾನಃ**—ಮಿಶ್ರಮಾಡತಕ್ಕ ನಾನು । **ಜಿಗೀಷಾ**—ಪಾಪವನ್ನು ಜಯಿಸುವ ಆಸೆಯಿಂದ। **ಸುದುಘಾ**—ಚೆನ್ನಾಗಿ ಹಾಲನ್ನು ಕರೆಯುವ । **ಧೇನುಃ ಇವ**—ಹಸುವು ದೋಹನಕ್ಕೆ ತಾನಾಗಿಯೇ ಬರುವಂತೆ । **ಉಷಾಸಾನಕ್ತಾ**—ಅಹೋರಾತ್ರವೂ । **ನಮಸಾ**—ಹವಿಸ್ಸಿನಿಂದ ಕೂಡಿಯೂ ಮತ್ತು ನಮಸ್ಕಾರ ಪೂರ್ವಕವಾಗಿಯೂ । **ವಃ**—ನಿಮ್ಮನ್ನು । **ಉಪ**—ಸಮೀಪಿಸಿ । **ಏಷೇ** -(ನಿಮ್ಮ ಸಾನ್ನಿಧ್ಯವನ್ನು) ಇಚ್ಛಿಸುತ್ತೇನೆ-

ಭಾವಾರ್ಥ

ಎಲೈ ದೇವತೆಗಳೇ, ಯಜ್ಞದ ಆರನೆಯ ದಿನದಲ್ಲಿ ಒಂದೇ ಕೆಚ್ಚಲಿನಿಂದ ಲಬ್ಧವಾದುದೂ ಮತ್ತು ನಾನಾ ರೂಪಗಳಲ್ಲಿ ಪರಿಣಾಮವನ್ನು ಹೊಂದುವುದೂ ಆದ ಕ್ಷೀರದಲ್ಲಿ ಪೂಜ್ಯವಾದ ಚರುಪುರೋಡಾಶಾದ್ಯನ್ನವನ್ನು ಮಿಶ್ರ ಮಾಡತಕ್ಕ ನಾನು ಪಾಪವನ್ನು ಜಯಿಸುವ ಆಸೆಯಿಂದ ಚೆನ್ನಾಗಿ ಹಾಲನ್ನು ಕರೆಯುವ ಹಸುವು ದೋಹನಕ್ಕೆ ತಾನಾಗಿಯೇ ಬರುವಂತೆ ಅಹೋರಾತ್ರವೂ ಹವಿಸ್ಸಿನಿಂದ ಕೂಡಿಯೂ ಮತ್ತು ನಮಸ್ಕಾರ ಪೂರ್ವಕವಾಗಿಯೂ ಸಹ ನಿಮ್ಮನ್ನು ಸಮೀಪಿಸಿ ನಿಮ್ಮ ಸಾನ್ನಿಧ್ಯವನ್ನಿಚ್ಛಿಸುತ್ತೇನೆ.

English Translation

I approach you, (deities), with reverence, night and day, in the hope of overcoming (sin), as (willingly) as a gentle cow (comes to be milked)' mixing (for you) on the appropriate day the (sacrificial) food, (consisting) of multiform (preparations) of milk (generated) from the same udder.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ದೇವತೆಗಳನ್ನು ಪ್ರಾರ್ಥಿಸಿದ್ದರೂ ಉಷಾಸಾನಕ್ತಾ ಎಂಬ ದೇವತೆಯನ್ನಲ್ಲದೆ ಇತರ ದೇವತೆಗಳನ್ನೂ ಸಾಮಾನ್ಯವಾಗಿ ಎಂದರೆ ಸಮಷ್ಟಿರೂಪದಿಂದ ಸ್ತುತಿಸಲಾಗಿದೆ

**ನಮಸಾ—ಹವಿಷಾ ನಮಸ್ಕಾರೇಣ ವಾ ।** ಹವಿಸ್ಸಿನಿಂದ ಅಥವಾ ನಮಸ್ಕಾರಪೂರ್ವಕವಾಗಿ ದೇವತೆಗಳಾದ ನಿಮ್ಮನ್ನು ಸಮೀಪಿಸುತ್ತೇನೆಂದಭಿಪ್ರಾಯವು.

**ಉಷಾಸಾನಕ್ತಾ—ಅಹನಿ ರಾತ್ರೌ ಚ । ಯದ್ವಾ । ಅಹೋರಾತ್ರದೇವತೇ ಅಪ್ಯಭಿಗಚ್ಛಾಮಿ ।** ಹಗಲಿನಲ್ಲಿಯೂ ಮತ್ತು ರಾತ್ರಿಯಲ್ಲಿಯೂ ಸಹ ಎಂದು ಒಂದು ವಿಧವಾದ ಅರ್ಥವನ್ನೂ, ಅಹೋರಾತ್ರಾಭಿಮಾನಿಗಳಾದ **ಉಷಾಸಾನಕ್ತಾ** ಎಂಬ ದೇವತೆಗಳನ್ನು ಎಂದು ಇನ್ನೊಂದು ವಿಧವಾದ ಅರ್ಥವನ್ನೂ, ಭಾಷ್ಯಕಾರರು ವಿವರಿಸಿರುವರು.

ಈ ಋಕ್ಕಿನಲ್ಲಿ ನಕ್ತೋಷಾಸಾ ಎಂಬ ರಾತ್ರಿ ಮತ್ತು ಪ್ರಾತಃಕಾಲದ ಅಭಿಮಾನಿದೇವತೆಗಳು ಆಹ್ವಾನ ಮಾಡಲ್ಪಟ್ಟಿರುವರು. ನಕ್ತೋಷಸಾ ಎಂಬ ಶಬ್ದಕ್ಕೆ ಯಾಸ್ಕರ ವಿವರಣೆಯು ಈ ರೀತಿ ಇರುವುದು—

ಉಷಾಸಾನಕ್ತಾ । ಉಷಾಸಾನಕ್ತೋಷಾಶ್ಚ ನಕ್ತಾ ಚೋಷಾ ವ್ಯಾಖ್ಯಾತಾ । ನಕ್ತೇತಿ ರಾತ್ರಿನಾಮಾನಕ್ತಿ ಭೂತಾನ್ಯವಶ್ಯಾಯೇನಾಪಿ ವಾ ನಕ್ತಾವ್ಯಕ್ತವರ್ಣಾ ॥

ನಕ್ತೋಷಾಸಾ, ಉಷಾಸಾನಕ್ತಾ ಎಂದು ಎರಡು ವಿಧವಾಗಿ ಪಠಿಸಿದರೂ, ಅರ್ಥಮಾತ್ರ ಒಂದೇ ಆಗಿರುವುದು. ಉಷಾಃ ಶಬ್ದದ ವಿವರಣೆಯನ್ನು ಹಿಂದೆಯೇ ಹೇಳಿರುವೆವು. ನಕ್ತಾ ಎಂದರೆ ರಾತ್ರಿಯ ಹೆಸರು. ಏಕೆಂದರೆ, ನಕ್ತಾ ಎಂದರೆ ಅವ್ಯಕ್ತವರ್ಣಾ ಕತ್ತಲೆಯಾಗಿರುವುದರಿಂದ ವಸ್ತುಗಳು ಅವ್ಯಕ್ತವಾಗಿರುವವು ಎಂದರೆ ಚೆನ್ನಾಗಿ ಕಾಣಿಸಿದೆ ಇರುವುವು. ಆದುದರಿಂದ ಕತ್ತಲೆಯಿಂದ ಕೂಡಿದ ರಾತ್ರಿಗೆ ನಕ್ತಾ ಎಂದು ಹೆಸರು. ಮತ್ತು ಈ ರಾತ್ರಿಕಾಲದಲ್ಲಿ ಪ್ರಾಣಿಗಳು ತಮ್ಮ ತಮ್ಮ ವ್ಯಾಪಾರಗಳನ್ನು ಮಾಡಲಸಮರ್ಥವಾಗಿರುವುವು. ಅನಕ್ತಿ, ಕ್ಲೇದಯತಿ ಭೂತಾನಿ ಅವಶ್ಯಾಯೇನ ಇತಿ । ಅಪಿ ವಾನಕ್ತಾ ಅವ್ಯಕ್ತವರ್ಣಾ । ಯಥಾ ಅಹಃ ಸರ್ವಮಭಿವ್ಯಕ್ತರೂಪಂ ಭವತಿ ನ ತಥಾ ರಾತ್ರಿಃ ॥ ಕತ್ತಲೆಯು ಪ್ರಾಣಿಗಳ ವ್ಯಾಪಾರಾದಿಗಳು ಸರಿಯಾಗಿ ನಡೆಯಲು ಅವಕಾಶವಿಲ್ಲದಂತೆ ಅವುಗಳಿಗೆ ತೊಂದರೆ ಕೊಡುವುದರಿಂದ ಅಂತಹ ಕತ್ತಲೆಯಿಂದ ಕೂಡಿದ ರಾತ್ರಿಗೆ ನಕ್ತಾ ಎಂದು ಹೆಸರು. ಅಥವಾ ಯಾವುದೂ ಚೆನ್ನಾಗಿ ಕಾಣಿಸದಂತೆ ಅವ್ಯಕ್ತವಾಗಿರುವುದರಿಂದ ನಕ್ತಾ ಎಂದು ಹೆಸರು. ಹಗಲಿನಲ್ಲಿ ಸಮಸ್ತವಸ್ತುಗಳ ರೂಪಗಳು ಸ್ಪಷ್ಟವಾಗಿ ಕಾಣಿಸುವವು. ರಾತ್ರಿಯಲ್ಲಿ ಆರೀತಿ ಕಾಣಿಸುವುದಿಲ್ಲ. ಆದುದರಿಂದ ರಾತ್ರಿಕಾಲಕ್ಕೆ ನಕ್ತಾ ಎಂದು ಹೆಸರು ಎಂದು ಅರ್ಥವಿವರಣೆ ಮಾಡಿರುವರು. (ನಿ. ೮-೧೧).

ಉಷಾಃ ಎಂಬ ಶಬ್ದಕ್ಕೆ ಅರ್ಥವಿವರಣೆಯನ್ನು ಹಿಂದೆಯೇ ಮಾಡಿರುವೆವು ಎಂದು ಹೇಳಿರುವರಷ್ಟೆ. ಆ ವಿವರಣೆಯು ಈ ರೀತಿ ಇರುವುದು—

ವಿಭಾವರೀ, ಸೂದರೀ ಮೊದಲಾದ ಹದಿನಾರು ಶಬ್ದಗಳು ಉಷೋನಾಮ ಶಬ್ದಗಳು (ನಿ. ೨-೧೯) ಮತ್ತು

ಉಷಾಃ ಕಸ್ಮಾದುಚ್ಛತೀತಿ ಸತ್ಯಾ ರಾತ್ರೇರಪರಃ ಕಾಲಃ ॥

ರಾತ್ರಿಕಾಲದ ತಮಸ್ಸನ್ನು (ಕತ್ತಲೆಯನ್ನು) ನಿವಾರಣೆ ಮಾಡುವುದರಿಂದ ಉಷಾಃ ಎಂದು ಹೆಸರು ಎಂದರೆ ರಾತ್ರಿಯ ಅಪರಕಾಲವು, ಕೊನೆಯ ಭಾಗವು. ಈ ಅರ್ಥವನ್ನು ಸಮರ್ಥಿಸುವುದಕ್ಕಾಗಿ ಒಂದು ಉದಾಹರಣೆಯನ್ನು ಕೊಟ್ಟಿರುವರು.

ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಾಚ್ಚಿತ್ರಃ ಪ್ರಕೇತೋ ಅಜನಿಷ್ಟ ವಿಭ್ವಾ ।
ಯಥಾ ಪ್ರಸೂತಾ ಸವಿತುಃ ಸವಾಯಁ ಏವಾ ರಾತ್ರ್ಯುಷಸೇ ಯೋನಿಮಾರೈಕ್ ॥

(ಋ. ಸಂ. ೧-೧೧೩-೧)

ಈ ಋಕ್ಕಿನ ನಿರುಕ್ತವು—

ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಮತ್ । ಚಿತ್ರಂ ಪ್ರಕೇತನಂ ಪ್ರಜ್ಞಾತತಮಮಜನಿಷ್ಟ ವಿಭೂತತಮಂ ಯಥಾ ಪ್ರಸೂತಾ ಸವಿತುಃಪ್ರಸವಾಯ ರಾತ್ರಿರಾದಿತ್ಯಸ್ಯ

**ಏವಂ ರಾತ್ರ್ಯುಷಸೇ ಯೋನಿಮರಿಚೇತ್ ಸ್ಥಾನಂ । ಸ್ತ್ರೀಯೋನಿರಭಿಯುತ ಏನಾಂ ಗರ್ಭಃ ॥**

ಸೂರ್ಯನ ಉತ್ತಮವಾದ ಮತ್ತು ಅತಿಪ್ರಕಾಶಮಾನವಾದ ಬೆಳಕು ಉದಯಿಸುತ್ತಿರುವುದು. ಇಂತಹ ಸೂರ್ಯನ ಪ್ರಕಾಶಕ್ಕೆ ಪೂರ್ವಭಾವಿಯಾಗಿರುವ ಉಷಃಕಾಲವು ಆ ಪ್ರಕಾಶದ ನಿಕೇತನ (ಧ್ವಜದಂತೆ) ದಂತೆ ಬೆಳಕಿಗೆ ಮುಂಚೆಯೇ ತಲೆದೋರುವುದು. ಹೇಗೆಂದರೆ, ಸೂರ್ಯನ ಬೆಳಕು ಹಗಲೆಲ್ಲಾ ಪ್ರಕಾಶಿಸಿ ಅಸ್ತಮಾನ ಕಾಲದಲ್ಲಿ ರಾತ್ರಿಗೆ ಯೋನಿಭೂತವಾಗಿ ಎಂದರೆ ಕಾರಣವಾಗಿರುವಂತೆ. ರಾತ್ರಿಯು ತನ್ನ ಅವಸಾನಕಾಲದಲ್ಲಿ ಉಷಃಕಾಲಕ್ಕೆ ಯೋನಿಭೂತವಾಗಿರುವುದು ಎಂದರೆ ಕಾರಣಭೂತವಾಗಿರುವುದು ಯೋನಿಯೆಂದರೆ ಜನ್ಮ ಸ್ಥಾನವು ಹಗಲಿನ ಕೊನೆಯಲ್ಲಿ ರಾತ್ರಿಯೂ, ರಾತ್ರಿಯ ಕೊನೆಯಲ್ಲಿ ಉಷಃಕಾಲವೂ, ಒಂದಾಗುತ್ತಲೊಂದು ಪರಿವರ್ತನರೂಪದಿಂದ ಪ್ರಾಪ್ತವಾಗುವುವು ಎಂದು ಮುಖ್ಯಾಭಿಪ್ರಾಯವು. ಆದುದರಿಂದ ಉಷಃ ಎಂದರೆ ರಾತ್ರಿ ಕಳೆದನಂತರ ಸೂರ್ಯೋದಯಕ್ಕೆ ಪೂರ್ವದಲ್ಲಿ ಸಮಸ್ತ ದಿಕ್ಕುಗಳನ್ನೂ ವ್ಯಾಪಿಸಿ ತಲೆದೋರುವ ಪ್ರಕಾಶವು, ಬೆಳಕು ಎಂದರ್ಥವು.

ಭಾಷ್ಯಕಾರರ (ಸಾಯಣರ) ಅರ್ಥವಿವರಣೆಯು-**ನಕ್ತಶಬ್ದಃ ಉಷಶ್ಯಬ್ದಶ್ಚ ಲೋಕೇ ಕಾಲವಿಶೇಷವಾಚಿನೌ । ಇಹ ತು ತತ್ಕಾಲಾಭಿಮಾನಿವಹ್ನಿಮೂರ್ತಿದ್ವಯೇ ಪ್ರಯುಜ್ಯೇತೇ । ನಕ್ತೋಷಾಸಾ ನಕ್ತೋಷೋನಾಮಿಕೇ ವಹ್ನಿಮೂರ್ತೀ**-ಎಂದರೆ ನಕ್ತ (ರಾತ್ರಿ) ಉಷಃ (ಪ್ರಾತಃಕಾಲ) ಎಂಬ ಈ ಎರಡು ಶಬ್ದಗಳಿಗೆ ಲೋಕ ವ್ಯವಹಾರದಲ್ಲಿ ರಾತ್ರಿ, ಪ್ರಾತಃಕಾಲ ಎಂಬ ಕಾಲವಿಶೇಷಗಳನ್ನು ಸೂಚಿಸುವ ಅರ್ಥವಿರುವುದು. ಇಲ್ಲಿ ಎಂದರೆ ಈ ಋಕ್ಕಿನಲ್ಲಿ ಅಥವಾ ಋಗ್ವೇದದಲ್ಲಿ, ಈ ಶಬ್ದಗಳು ರಾತ್ರಿ ಮತ್ತು ಪ್ರಾತಃಕಾಲಾಭಿಮಾನಿದೇವತೆಗಳೆಂಬ ಅರ್ಥವನ್ನು ಪ್ರತಿಪಾದಿಸುವುವು. ಆದುದರಿಂದ **ನಕ್ತೋಷಾಸಾ** ಅಥವಾ **ಉಷಾಸಾನಕ್ತಾ** ಎಂಬ ಶಬ್ದಗಳು ರಾತ್ರಿ ಮತ್ತು ಉಷಃಕಾಲಾಭಿಮಾನಿದೇವತೆಗಳಾದ ಅಗ್ನಿಯ ಎರಡುಮೂರ್ತಿ (ರೂಪಗಳು) ಗಳೆಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿವೆ. ಈ ಋಕ್ಕಿನಲ್ಲಿ ಉಪಯೋಗಿಸಿರುವ **ಸುಪೇಶಸಾ** (ಒಳ್ಳೆಯ ರೂಪ ಅಥವಾ ಆಕಾರ ವುಳ್ಳ) ಎಂಬ ಶಬ್ದವು ಈ ಅರ್ಥವನ್ನು ಸಮರ್ಥಿಸುವುದು ಏಕೆಂದರೆ ರಾತ್ರಿ ಮತ್ತು ಪ್ರಾತಃಕಾಲಗಳು ಕಾಲ ವಿಭಾಗಗಳಾದ್ದರಿಂದ ಅವುಗಳಿಗೆ ರೂಪವಾಗಲೀ ಆಕಾರವಾಗಲೀ ಇರುವುದಿಲ್ಲ. ಆಕಾಲದ ಅಭಿಮಾನಿದೇವತೆ ಗಳೆಂದು ಹೇಳುವ ಪಕ್ಷದಲ್ಲಿ ಆ ದೇವತೆಗಳಿಗೆ ರೂಪವನ್ನು ನಿರ್ದೇಶಿಸಬಹುದು ಈ ಋಕ್ಕಿನಲ್ಲಿ ಆ ರೀತಿ ನಿರ್ದೇಶವಿರುವುದರಿಂದ ಇಲ್ಲಿ ಆಕಾಲಗಳ ಅಭಿಮಾನಿದೇವತೆಗಳನ್ನೇ ಪ್ರತಿಪಾದಿಸಿರುವುವೆಂದು ತಿಳಿಯಬೇಕು, ನಕ್ತೋಷಸಾ ಎಂಬ ಶಬ್ದದಲ್ಲಿರುವ ಷಕಾರವು ಛಂದಸ್ಸಿನ ಅನುಕೂಲಕ್ಕಾಗಿ ದೀರ್ಘವಾಗಿರುವುದು

**ಸುದುಘೇವ ಧೇನುಃ** ದೇವತೆಗಳನ್ನುದ್ದೇಶಿಸಿ ನಿಮ್ಮ ಸಮೀಪಕ್ಕೆ ಬರಲು ಇಚ್ಛಿಸುತ್ತೇನೆಂದು ಋಷಿಯು ಹೇಳುವಾಗ ಅದಕ್ಕೊಂದು ಉಪಮಾನವನ್ನು ಹೇಳಿರುವನು. ಚೆನ್ನಾಗಿ ಹಾಲುಕರೆಯುವ ಹಸುವು ಸಾಯಂಕಾಲ ವಾಗುತ್ತಲೇ ಹೊರಗೆ ಮೇಯುತ್ತಿರುವುದನ್ನು ಬಿಟ್ಟು ತನ್ನ ಯಜಮಾನನ ಮನೆಗೆ ಬರುವಂತೆ ಎಂದು ಉಪಮಾರ್ಥ ವನ್ನು ವಿವರಿಸಿರುವುದು.

**ಈಷೇ**—**ಈಷೇ** ಎಂಬ ಶಬ್ದವು **ಇಷ ಗತೌ** ಎಂಬ ಗತ್ಯರ್ಥಕವಾದ ಇಷ ಧಾತುವಿನಿಂದಾಗಲಿ, ಅದೇ ಅರ್ಥವನ್ನು ಕೊಡತಕ್ಕ ಈಷ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದೆಂದು ಭಾಷ್ಯಕಾರರ ವಿವರಣೆ ಇದೆ. ಈಷೇ ಎಂದರೆ ಇಚ್ಛಾಮಿ ಅಪೇಕ್ಷಿಸುತ್ತೇನೆ ಅಥವಾ (ನಿಮ್ಮ) ಸಮೀಪಕ್ಕೆ ಬರಲು ಅಪೇಕ್ಷಿಸುತ್ತೇನೆ ಎಂದರ್ಥವು.

**ಸಮಾನೇ ಪಯಸಿ ಊಧನ್ ವಿಷುರೂಪೇ**—ಈ ಶಬ್ದಗಳಿಗೆ ಎರಡು ವಿಧವಾದ ಅರ್ಥವು ಸಾಧ್ಯವಾಗುವುದು. ಒಂದೇ ದಿನಸದಲ್ಲಿ ಕರೆದ ಹಾಲಿನಿಂದ ನಾನಾವಿಧವಾದ ಹಾಲು, ಮೊಸರು, ತುಪ್ಪ, ಹವಿಸ್ಸು ಮೊದಲಾದವು ಎಂದು ಒಂದು ಅರ್ಥವೂ, ಕ್ಷೀರವೇ ಫಲವಾಗಿವುಳ್ಳ ಯಜ್ಞದಲ್ಲಿ ನಾನಾವಿಧವಾದ ಪಯೋವಿಕಾರಗಳಿಂದ ಯುಕ್ತವಾದ ಎಂದರೆ (ಗವಾಶಿರ, ದಧ್ಯಾಶಿರ ಮೊದಲಾದ) ಸೋಮರಸಗಳಿಂದ ಯುಕ್ತವಾದ ಎಂದು ಮತ್ತೊಂದು ಅರ್ಥವೂ ಸಾಧ್ಯವಾಗುವುದೆಂದು ಭಾಷ್ಯಕಾರರು ವಿವರಿಸಿದ್ದಾರೆ. ಮುಖ್ಯಾಭಿಪ್ರಾಯವೇನೆಂದರೆ—ಎಲ್ಲಾ ಗೋವುಗಳ ಸ್ತನಗಳಿಂದಲೂ ಒಂದೇ ವಿಧವಾದ ಹಾಲು ಒಂದೇಕಾಲದಲ್ಲಿ ಉತ್ಪನ್ನವಾದರೂ ಅವು ಹಾಲು, ಮೊಸರು, ತುಪ್ಪ ಮೊದಲಾದ ಬೇರೆ ಬೇರೆ ರೂಪಗಳನ್ನು ಹೊಂದುವುದು. ಈ ವಿಧವಾದ ಪಯೋವಿಕಾರಗಳಿಂದ ಕೂಡಿದ ಚರುವು ಪುರೋಡಾಶಾದಿರೂಪವಾದ ಅನ್ನಕ್ಕೆ ಅಥವಾ ಸೋಮರಸಕ್ಕೆ ಸಾಧನವಾದ ಸ್ತೋತ್ರವನ್ನು ಪಠಿಸುತ್ತಾ ನಿಮ್ಮ ಸಮಿಾಪಕ್ಕೆ ಬರುವೆನು ಎಂದು ಋಷಿಯು ವರ್ಣಿಸಿರುವನು.

**ವಿಷುರೂಪೇ—ನಾನಾರೂಪೇ ।** ನಾನಾರೂಪಗಳುಳ್ಳ ಎಂದರೆ ಹಾಲು ಒಂದೇ ಆದರೂ ಅದರಿಂದ ಉತ್ಪನ್ನವಾಗುವ ವಸ್ತುಗಳು, ಹಾಲು, ಮೊಸರು, ತುಪ್ಪ ಎಂದು ಅನೇಕ ವಿಧವಾಗಿರುವುವು.

**ಅರ್ಕಂ—ಅನ್ನಸಾಧನಂ ಸ್ತೋತ್ರಂ** ಎಂದು ಭಾಷ್ಯಕಾರರು ಅರ್ಕ ಶಬ್ದಕ್ಕೆ ಅನ್ನವೆಂಬ ಅರ್ಥವನ್ನು ಇಲ್ಲಿ ಹೇಳಿರುವರು. ಯಾಸ್ಕರು ತಮ್ಮ ನಿರುಕ್ತದಲ್ಲಿ—

**ಅರ್ಕೋ ದೇವೋ ಭವತಿ ಯದೇನಮರ್ಚಂತಿ ।**
**ಅರ್ಕೋ ಮಂತ್ರೋ ಭವತಿ ಯದನೇನಾರ್ಚಂತಿ ।**
**ಅರ್ಕಮನ್ನಂ ಭವತ್ಯರ್ಚತಿ ಭೂತಾನಿ ।**
**ಅರ್ಕೋ ವೃಕ್ಷೋ ಭವತಿ ಸಂವೃತ್ತಃ ಕಟುಕಿಮ್ನಾ ।**

(ನಿ. ೫–೪)

ಎಂದು ಅರ್ಕಶಬ್ದಕ್ಕೆ ನಾಲ್ಕು ವಿಧವಾದ ನಿರ್ವಚನವನ್ನು ಹೇಳಿದ್ದಾರೆ. ಎಂದರೆ—(೧) **ದೇವಃ । ತಾವತ್ಸರ್ವ ಏವಾರ್ಕ ಇತ್ಯುಚ್ಯತೇ ಯತ್-ಯಸ್ಮಾತ್ ಏನಂ ದೇವಂ ಅರ್ಚಂತಿ ಸ್ತೋತಾರಃ ।** ಅರ್ಕ ಎಂದರೆ ದೇವತೆಯು ಏಕೆಂದರೆ ಇದರಿಂದ ಭಕ್ತ ಯಾರನ್ನು ಪೂಜಿಸುವುದಕ್ಕೆ ಉಪಯೋಗಿಸುವರೋ ಅಂತಹ ವ್ಯಕ್ತಿ ಅಥವಾ ದೇವನು, ಎಂದರೆ ಭಕ್ತನು ಪೂಜಿಸುವ ವಸ್ತುವಿಗೆ (ದೇವತೆಗೆ) ಅರ್ಕವೆಂದು ಹೆಸರು.

(೨) **ಅರ್ಕೋ ಮಂತ್ರೋ ಭವತಿ । ಯತ್ ಯಸ್ಮಾತ್ ಅನೇನ ಮಂತ್ರೇಣ ಅರ್ಚಂತಿ ಸ್ತೋತಾರಃ ತಸ್ಮಾದರ್ಕಃ ।** ಅರ್ಕವೆಂದರೆ ಮಂತ್ರವೆಂದೂ ಅರ್ಥವಾಗುವುದು. ಏಕೆಂದರೆ ಸ್ತೋತ್ರಮಾಡುವವರು ಇದರಿಂದ (ಅರ್ಕದಿಂದ, ಋಕ್ಕಿನಿಂದ, ಮಂತ್ರದಿಂದ) ದೇವತೆಯನ್ನು ಅರ್ಚಿಸುವರು. ಆದುದರಿಂದ ಅರ್ಕಶಬ್ದಕ್ಕೆ ಮಂತ್ರವೆಂದೂ ಹೆಸರು.

(೩) **ಅರ್ಕಮನ್ನಂ ಭವತಿ । ತದ್ಧಿ ಅರ್ಚತಿ ಭೂತಾನಿ, ಯೋ ಹಿ ಪೂಜ್ಯಃ ತಸ್ಯಾನ್ನಮಪಿ ಸಂಸ್ಕಾರವಿಶೇಷೇಣ ಸಂಸ್ಕೃತಂ ಪೂಜಾಯಾಂ ಕ್ರಿಯತೇ, ಪೂಜ್ಯಂ ಚ ಸರ್ವಸ್ಯೈವಾನ್ನಂ ।** ಅರ್ಕವೆಂದರೆ ಅನ್ನವೆಂದೂ ಅರ್ಥವಾಗುವುದು. ಅನ್ನವು (ಆಹಾರವು) ಸಮಸ್ತಪ್ರಾಣಿಗಳಿಗೂ ಅವಶ್ಯಕವಾಗಿರುವುದರಿಂದ ಅನ್ನ

ವನ್ನು ಎಲ್ಲರೂ ಆದರದಿಂದ ಗೌರವಿಸಿ ಅಪೇಕ್ಷಿಸುವರು. ಎಂದರೆ ಎಲ್ಲರೂ ಪ್ರೀತ್ಯಾದರಗಳಿಂದ ಗೌರವಿಸಿ ಬಯಸುವುದರಿಂದ ಅರ್ಕಶಬ್ದಕ್ಕೆ ಅನ್ನವೆಂದೂ ಅರ್ಥವಾಗುವುದು.

(೪) **ಅರ್ಕೋ ವೃಕ್ಷೋ ಭವತಿ ಯ ಏಷ ಪ್ರಸಿದ್ಧಃ । ಸಂವೃತ್ತಃ ಹಿ ಸಂಗತಃ ಸಂವ್ಯಾಪ್ತಃ ಕಟುಕಿಮ್ನಾ ಕಟುಕಭಾವೇನ ಭವತಿ ।** ಇನ್ನು ಅರ್ಕಶಬ್ದಕ್ಕೆ ಒಂದುವಿಧವಾದ ವೃಕ್ಷವೆಂಬ ಹೆಸರು ಪ್ರಸಿದ್ಧವಾಗಿಯೇ ಇದೆ. ಅರ್ಕವೃಕ್ಷವೆಂದರೆ ಎಕ್ಕದ ಗಿಡವೆಂದು ಕರ್ನಾಟಕ ಭಾಷೆಯಲ್ಲಿ ಹೇಳುವರು. ಇದರ ಸಮಿತ್ತುಗಳನ್ನು ಹೋಮಗಳಲ್ಲಿ ಉಪಯೋಗಿಸುವುದರಿಂದಲೂ, ಇದನ್ನು ಔಷಧಾದಿಗಳಲ್ಲಿ ಬಳಸುವ ರೂಢಿಯಿರುವುದರಿಂದಲೂ ಅರ್ಕವೃಕ್ಷವು ಎಲ್ಲರಿಗೂ ತಿಳಿದ ವಸ್ತುವಾಗಿದೆ. ಇದು ಕಹಿಯಾಗಿರುವುದರಿಂದ ಕಟುಕಿಮ್ನಾ ಎಂದು ಹೇಳುವರು

ಅರ್ಕಶಬ್ದದ ವಿವರಣೆಯ ಉದಾಹರಣೆಗಾಗಿ ಯಾಸ್ಕರು **ಗಾಯಂತಿ ತ್ವಾ** ಎಂಬ ಋಕ್ಕನ್ನು ಉದಾಹರಿಸಿ ಅದಕ್ಕೆ ನಿರ್ವಚನವನ್ನು ಹೇಳಿರುವರು ಅದು ಇಲ್ಲಿ ಅನಾವಶ್ಯಕವಾದ್ದರಿಂದ ವಿವರಿಸಿಲ್ಲ. (ಋ. ಸಂ. ಭಾಗ ೨ ಪೇಜುಗಳು 345ನ್ನು ನೋಡಿ).

॥ ವ್ಯಾಕರಣಪ್ರಕ್ರಿಯಾ ॥

**ಈಷೇ**—ಇಷ ಗತೌ ಧಾತು. **ಛಂದಸಿಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಉತ್ತಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಜಿಗೀಷಾ**—ಜೇತುಮಿಚ್ಛಾ ಜಿಗೀಷಾ ತಯಾ. ಜಿ ಜಯೇ ಧಾತು. **ಧಾತೋಃ ಕರ್ಮಣಃ ಸಮಾನ**- (ಪಾ. ಸೂ. ೩-೧ ೭) ಎಂಬುದರಿಂದ ಇಚ್ಛಾರ್ಥದಲ್ಲಿ ಸನ್. **ಸನ್ಯಙೋಃ** ಸೂತ್ರದಿಂದ ದ್ವಿತ್ವ. **ಅಜ್ಝನಗಮಾಂ ಸನಿ** (ಪಾ. ಸೂ. ೬-೪-೧೬) ಎಂಬುದರಿಂದ ಸನ್ ಪರವಾದಾಗ ಧಾತುವಿನ ಇಕಾರಕ್ಕೆ ದೀರ್ಘ. **ಸನ್‌ಲಿಟೋರ್ಜೇಃ** (ಪಾ. ಸೂ ೭-೩-೫೭) ಎಂಬುದರಿಂದ ಜಕಾರಕ್ಕೆ ಕುತ್ವ. **ಅಪ್ರತ್ಯಯಾತ್** (ಪಾ. ಸೂ. ೩-೩-೧೦೨) ಎಂಬುದರಿಂದ ಸನ್ನಂತದ ಮೇಲೆ ಅಪ್ ಪ್ರತ್ಯಯ. ಸ್ತ್ರೀತ್ವದಲ್ಲಿ ಟಾಪ್. **ಸುಪಾಂ ಸುಲುಕ್** ಸೂತ್ರದಿಂದ ತೃತೀಯಾ ಏಕವಚನಕ್ಕೆ ಲುಕ್. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಉಷಾಸಾನಕ್ತಾ**—ಉಷಾಶ್ಚ ನಕ್ತಂ ಚ. **ಉಷಾಸೋಷಸಃ** (ಪಾ ಸಾ. ೬-೩-೩೧) ಎಂಬುದರಿಂದ ದ್ವಂದ್ವದಲ್ಲಿ ಪೂರ್ವಪದಕ್ಕೆ ಉಷಾಸಾದೇಶ. **ದೇವತಾದ್ವಂದ್ವೇ ಚ** (ಪಾ. ಸೂ. ೬-೨-೧೪೧) ಎಂಬುದರಿಂದ ಉಭಯಪದ ಪ್ರಕೃತಿಸ್ವರ ಬರುತ್ತದೆ. **ಸುಪಾಂ ಸುಲುಕ್**—ಸೂತ್ರದಿಂದ ದ್ವಿವಚನಕ್ಕೆ ಆಕಾರಾದೇಶ.

**ಅಹನ್**—**ಸುಪಾಂ ಸುಲುಕ್** ಸೂತ್ರದಿಂದ ಸಪ್ತಮೀಏಕವಚನ ಪರವಾದಾಗ ಅದಕ್ಕೆ ಲುಕ್. **ನ ಙಿ ಸಂಬುದ್ಧ್ಯೋಃ** ಎಂಬುದರಿಂದ ನಕಾರಕ್ಕೆ ಲೋಪ ಬರುವುದಿಲ್ಲ.

**ವಿಮಿಮಾನಃ**—ಮಾಙ್ ಮಾನೇ. ಧಾತು. ಲಟಿಗೆ ಶಾನಚಾದೇಶ. ಶ್ಲುವಿಕರಣ ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಭೃಞಾಮಿತ್** (ಪಾ. ಸೂ. ೭-೪-೭೬) ಎಂಬುದರಿಂದ ಅಭ್ಯಾಸಕ್ಕೆ ಇತ್ವ. **ಅಭ್ಯಸ್ತಾನಾಮಾದಿಃ**

(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ವಿಷುರೂಪೇ—ವಿಷು ನಾನಾ ರೂಪಾಣಿ ಯಸ್ಯ ತತ್- ತಸ್ಮಿನ್. ಬಹುವ್ರೀಹೌ ಪ್ರ—ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

---

### ಸಂಹಿತಾಪಾಠಃ

ಉತ ನೋಽಹಿರ್ಬುಧ್ನ್ಯಃ ಶೃಣೋತ್ವಜ ಏಕಪಾತ್ಪೃಥಿವೀ ಸಮುದ್ರಃ ।

ಉತ ನೋಽಹಿರ್ಬುರ್ಧ್ನ್ಯೋ ಮಯಸ್ಕಃ ಶಿಶುಂ ನ ಪಿಪ್ಯುಷೀವ ವೇತಿ ಸಿಂಧುಃ ।

ಯೇನ ನಪಾತಮಪಾಂ ಜುನಾಮ ಮನೋಜುವೋ ವೃಷಣೋ ಯಂ ವಹಂತಿ ॥ ೫ ॥

### ಪದಪಾಠಃ

ಉತ । ನಃ । ಅಹಿಃ । ಬುಧ್ನ್ಯಃ । ಮಯಃ । ಕರಿತಿ ಕಃ । ಶಿಶುಂ । ನ । ಪಿಪ್ಯುಷೀಽಇವ । ವೇತಿ । ಸಿಂಧುಃ ।

ಯೇನ । ನಪಾತಂ । ಅಪಾಂ । ಜುನಾಮ । ಮನಃಽಜುವಃ । ವೃಷಣಃ । ಯಂ । ವಹಂತಿ ॥ ೫ ॥

### ಸಾಯಣಭಾಷ್ಯಂ

ಉತಾಪಿ ಚ ನೋಽಸ್ಮಾಕಮಹಿರಂತರಿಕ್ಷಗಾಮ್ಯುಹಂತಾ ವಾಹೀನೋ ವಾಹನ್ಯಮಾನೋ ವೈತನ್ನಾಮಕೋ ದೇವಃ ಸ ಏವ ಬುಧ್ನ್ಯಃ । ಬುಧ್ನಂ ಬಂಧಕಮಂತರಿಕ್ಷಂ । ತದರ್ಹತೀತಿ ಬುಧ್ನ್ಯೋಽಂತರಿಕ್ಷಚಾರ್ಯೇತನ್ನಾಮಕೋ ದೇವೋ ಮಯಃ ಸುಖಂ ಕಃ । ಕರೋತು ॥ ಕರೋತೇರ್ಲಙಿ ರೂಪಂ ॥ ಕಿಂಚ ಪಿಪ್ಯುಷೀ । ಇವಶಬ್ದ ಏವಾರ್ಥಃ ಪೂರಣೋ ವಾ । ಅಸ್ಮಾನ್ರಸೇನಾಪ್ಯಾಯಯಂತೀ ಸಿಂಧುರ್ನಾಮ ನದೀ ವೇತು । ಆಗಚ್ಛತು । ತತ್ರ ದೃಷ್ಟಾಂತಃ । ಶಿಶುಂ ನ ಯಥಾ ಶಿಶುಂ ಪ್ಯಾಯಯಂತೀ ಗೌರ್ಗಚ್ಛತಿ ತದ್ವತ್ । ಅಪಾಂ ನಪಾತಮುದಕಾನಾಮುಪಾತಯಿತಾರಂ ವರ್ಷಕಮೇತನ್ನಾಮಕಂ ಯದ್ವೋದಕಾನಾಂ ನಪ್ತಾರಂ ತೃತೀಯಂ ಪುತ್ರಂ । ಅದ್ಭ್ಯ ಓಷಧಿವನಸ್ಪತಯಃ ತೇಭ್ಯೋಽಗ್ನಿರಿತಿ ನಪ್ತೃತ್ವಂ । ತಾದೃಶಮಗ್ನಿಂ ಜುನಾಮ । ಸ್ತುತಿಭಿಃ ಸಂಗಚ್ಛೇಮ ॥ ಜು ಇತಿ ಸೌತ್ರೋ ಧಾತುರ್ಗತ್ಯರ್ಥಃ ॥ ಯಂ ದೇವಂ ಮನೋಜುವೋ ಮನೋವೇಗಾ ವೃಷಣೋ ವರ್ಷಕಾ ಮೇಘಾ ಅಶ್ವಾ ವಹಂತಿ ಸ ಸುಖಂ ಕರೋತು ॥

। ಪತಿಪದಾರ್ಥ ।

**ಉತ**—ಮತ್ತು । **ಅಹಿರ್ಬುಧ್ನ್ಯಃ**—ಅಂತರಿಕ್ಷಸಂಚಾರಿಯಾದ ಅಹಿರ್ಬುಧ್ನ್ಯ ದೇವತೆಯು । **ನಃ**—ನಮಗೆ । **ಮಯಃ**—ಸುಖವನ್ನು । **ಕಃ**—ಉಂಟುಮಾಡಲಿ । **ಯಂ**—ಯಾವ ಅಗ್ನಿಯನ್ನು । **ಮನೋಜುವಃ**—ಮನೋವೇಗದಂತೆ ವೇಗವುಳ್ಳವೂ । **ವೃಷಣಃ**—ವರ್ಷಕಗಳೂ ಆದ ಮೇಘಗಳು ಅಥವಾ ಅಶ್ವಗಳು । **ವಹಂತಿ**—ವಹಿಸಿ ತರುತ್ತವೆಯೋ । **ತಂ ಅಪಾಂ ನಪಾತಂ**—ಅಂತಹವನೂ ಮತ್ತು ಅಪ್ಪುಗಳ ಪೌತ್ರನೂ ಆದ ಅಗ್ನಿಯನ್ನು । **ಯೇನ**—ಯಾವ ದೇವತೆಯ ಸಹಾಯದಿಂದ । **ಜುನಾಮ**—ಸ್ತುತಿಯುಕ್ತರಾಗಿ ಸಮೀಪಿಸುತ್ತೇವೆಯೋ ಅಂತಹ ದೇವತೆಯೂ ನಮಗೆ ಸುಖವನ್ನುಂಟುಮಾಡಲಿ । **ಪಿಪ್ಯುಷೀ ಇವ**—ನಮ್ಮನ್ನು (ಸರ್ವದಾ) ಪೋಷಿಸುವವಳೇ ಆದ । **ಸಿಂಧುಃ**—ಸಿಂಧುದೇವತೆಯೂ । **ಶಿಶುಂ ನ**—ವತ್ಸವನ್ನು (ಕರುವನ್ನು) ತೃಪ್ತಿಪಡಿಸಲು ಹೋಗುವ ಗೋವಿನಂತೆ । **ವೇತಿ**—ನಮ್ಮ ಸಮೀಪಕ್ಕೆ ಬರಲಿ.

ಭಾವಾರ್ಥ

ಅಂತರಿಕ್ಷ ಸಂಚಾರಿಯಾದ ಅಹಿರ್ಬುಧ್ನ್ಯದೇವತೆಯು ನಮಗೆ ಸುಖವನ್ನುಂಟುಮಾಡಲಿ. ಯಾವ ಅಗ್ನಿಯನ್ನು ಮನೋವೇಗದಂತೆ ವೇಗವುಳ್ಳವೂ, ವರ್ಷಕಗಳೂ ಆದ ಮೇಘಗಳು (ಅಥವಾ ಅಶ್ವಗಳು) ವಹಿಸಿ ತರುತ್ತವೆಯೋ ಅಂತಹವನೂ ಮತ್ತು ಅಪ್ಪುಗಳ ಪೌತ್ರನೂ ಆದ ಅಗ್ನಿಯನ್ನು ಯಾವ ದೇವತೆಯ ಸಹಾಯದಿಂದ ಸ್ತುತಿಯುಕ್ತರಾಗಿ ಸಮೀಪಿಸುತ್ತೇವೆಯೋ ಅಂತಹ ದೇವತೆಯೂ ನಮಗೆ ಸುಖವನ್ನುಂಟುಮಾಡಲಿ. ನಮ್ಮನ್ನು ಸರ್ವದಾ ಪೋಷಿಸುವವಳೇ ಆದ ಸಿಂಧುದೇವತೆಯೂ ಸಹ ವತ್ಸವನ್ನು ತೃಪ್ತಿಪಡಿಸಲು ಹೋಗುವ ಗೋವಿನಂತೆ ನಮ್ಮಲ್ಲಿಗೆ ಬಂದು ನಮ್ಮನ್ನು ತೃಪ್ತಿಪಡಿಸಲಿ.

English Translation

May Ahirbudhnya grant us happiness: may Sindhu come, nourishing us as a (cow her) calf, whereby we may propitiate the grandson of the waters (Agni), whom the clouds, swift as thought, convey.

ವಿಶೇಷವಿಷಯಗಳು

**ಅಹಿಃ ಬುಧ್ನ್ಯಃ** -- ಅಹಿಃ ಎಂಬ ಶಬ್ದವು ಮೂವತ್ತು ಮೇಘನಾಮುಗಳಲ್ಲಿಯೂ, (ನಿ. ೨-೨೧) ನೂರೊಂದು ಉದಕನಾಮುಗಳಲ್ಲಿಯೂ (ನಿ. ೨-೨೪) ಪಠಿತವಾಗಿದೆ. **ಬುಧ್ನಮಂತರಿಕ್ಷಂ ಬದ್ಧಾ ಅಸ್ಮಿನ್, ಧೃತಾ ಆಪ ಇತಿ ವಾ । ಬದ್ಧಾ ಅಸ್ಮಿನ್ ಧೃತಾಃ ಪ್ರಾಣಾ ಇತಿ** (ನಿ. ೧೦-೪೪) ಎಂದರೆ ಬುಧ್ನಶಬ್ದಕ್ಕೆ ಅಂತರಿಕ್ಷವೆಂದರ್ಥವು. ಏತಕ್ಕೆಂದರೆ, ಈ ಅಂತರಿಕ್ಷದಲ್ಲಿ ನೀರು ಮೇಘರೂಪದಿಂದ ಕಟ್ಟಲ್ಪಡುತ್ತದೆ ಅಥವಾ ಧರಿಸಲ್ಪಡುತ್ತದೆ ಆದ್ದರಿಂದ ಅಂತರಿಕ್ಷಕ್ಕೆ ಬುಧ್ನವೆಂದು ಹೆಸರು ಅಥವಾ ಪ್ರಾಣಗಳು ಧರಿಸಲ್ಪಡುವ ಶರೀರಕ್ಕೂ ಬುಧ್ನ ಎಂದು ಹೆಸರು ಎಂದು ಯಾಸ್ಕರು ನಿರ್ವಚನವನ್ನೂ ಹೇಳಿದ್ದಾರೆ. ಮತ್ತು,

**ಅಹಿರ್ಬುಧ್ನ್ಯಃ । ಯೋಽಹಿಃ ಸ ಬುಧ್ನ್ಯೋ ಬುಧ್ನಮಂತರಿಕ್ಷಂ ತನ್ನಿವಾಸಾತ್ ॥**

(ನಿ. ೧೦-೪೪)

ಅಹಿರ್ಬುಧ್ನ್ಯಃ ಎಂಬ ಶಬ್ದಕ್ಕೆ ನಿರ್ವಚನವನ್ನು ಹೇಳುತ್ತಾ-ಬುಧ್ನಶಬ್ದಕ್ಕೆ ಇರುವ ಅಂತರಿಕ್ಷವೆಂಬ ಅರ್ಥವೇ ಅಹಿ ಶಬ್ದಕ್ಕೂ ಇರುವುದು. ಆ ಅಂತರಿಕ್ಷದಲ್ಲಿ ವಾಸವಾಗಿ ಇರುವ ದೇವತೆಗೆ ಅಹಿರ್ಬುಧ್ನ್ಯನೆಂದು ಹೆಸರು ಎಂದು ಯಾಸ್ಕರು, ಹೇಳಿ ಅದರ ಸಮರ್ಥನೆಗಾಗಿ

**ಮಾ ನೋಽಹಿರ್ಬುರ್ಧ್ನ್ಯೋ ರಿಷೇ ಧಾನ್ಮಾ ಯಜ್ಞೋ ಅಸ್ಯ ಸ್ರಿಧದೃತಾಯೋಃ ।**
(ಋ. ಸಂ. ೭-೩೪-೧೭)

ಎಂಬ ಋಕ್ಕನ್ನುದಾಹರಿಸಿ ಅರ್ಥವಿವರಣೆಮಾಡಿರುವರು. ಈ ಅಹಿರ್ಬುಧ್ನ್ಯ ಎಂಬ ಶಬ್ದವು ಋಗ್ವೇದದಲ್ಲಿ ೧-೮೬-೫ ; ೨-೩೧-೬ ; ೫-೪೧-೧೬ ; ೬-೪೯-೧೪ ; ೬-೫೦-೧೪ ; ೭-೩೫-೧೩ ; ೭-೩೮-೫ ; ೧೦-೬೪-೪ ; ೧೦-೬೬-೧೧ ; ೧೦-೯೨-೧೨ ; ೧೦-೯೩-೫ ಎಂಬ ಋಕ್ಕುಗಳಲ್ಲಿ ಪಠಿತವಾಗಿರುವುದು. ಕೆಲವು ಕಡೆ ಈ ದೇವತೆಯ ಜೊತೆಯಲ್ಲಿ ಅಜ ಏಕಪಾತ್ ಎಂಬ ದೇವತೆಯ ಹೆಸರೂ ಉಕ್ತವಾಗಿರುವುದು.

ಅಹಿರ್ಬುಧ್ನ್ಯ ಎಂದರೆ ಸಮುದ್ರದ ಅಥವಾ ಪಾತಾಳಲೋಕದ ಸರ್ಪವೆನ್ನಬಹುದು. ಈ ಹೆಸರು ವಿಶೇಷವಾಗಿ ವಿಶ್ವೇದೇವತಾಕವಾದ ಸೂಕ್ತಗಳಲ್ಲಿ ಬರುತ್ತದೆ. ಒಟ್ಟು ಋಗ್ವೇದದಲ್ಲಿ ಈ ದೇವತೆಯ ಹೆಸರು ಹನ್ನೆರಡು ಸಲ ಮಾತ್ರ ಉಪಯೋಗಿಸಿರುವುದು. ಐದು ಸಲ ಅಜಏಕಪಾದದೊಡನೆಯೂ, ಮೂರು ಸಲ ಅಪಾಂನಪಾತನೊಡನೆಯೂ ಮೂರು ಸಲ ಸಮುದ್ರದೊಡನೆಯೂ ಎರಡು ಸಲ ಸವಿತೃವಿನೊಡನೆಯೂ ಹೇಳಿದೆ. ಇತರ ದೇವತೆಗಳ ಜತೆಯಲ್ಲಲ್ಲದೆ ಈ ಹೆಸರು ಒಂದೇ ಮೂರು ಋಕ್ಕುಗಳಲ್ಲಿ (ಋ. ಸಂ. ೫-೪೧-೧೬ ; ೭-೩೪-೧೬, ೧೭) ಮಾತ್ರ ಬಂದಿರುವುದು. ಸಾಧಾರಣವಾಗಿ ಈ ದೇವತೆಯ ಜೊತೆಯಲ್ಲಿ ಬರುವ ದೇವತೆಯೆಂದರೆ ಅಜ ಏಕಪಾತ್ ಅಥವಾ ಅಪಾಂನಪಾತ್. ಅಜಏಕಪಾತ್ ಮತ್ತು ಅಹಿರ್ಬುಧ್ನ್ಯ ಇವೆರಡೂ ಸಾಧಾರಣವಾಗಿ ಅಕ್ಕಪಕ್ಕದಲ್ಲಿ ಜೋಡಿಸಿದಂತಿರುತ್ತವೆ. ಅಹಿರ್ಬುಧ್ನ್ಯನು ಅಂತರಿಕ್ಷದ ದೇವತೆಗಳಲ್ಲಿ ಒಬ್ಬನೆಂದೇ ನಿರುಕ್ತದಲ್ಲಿ (ನಿ. ೫-೪) ಪರಿಗಣಿತನಾಗಿದಾನೆ. ಅಂತರಿಕ್ಷದ ಪ್ರವಾಹದ ತಳದಲ್ಲಿ ಕುಳಿತಿರುವ, ನೀರಿನಲ್ಲೇ ಜನಿಸಿದ ಸರ್ಪವನ್ನೂ ಗಾನದಿಂದ ಸ್ತುತಿಸುತ್ತೇನೆ ಎಂದು ಋ. ಸಂ. ೭-೩೪-೧೬ ; ೧೦-೯೩-೫ ಋಕ್ಕುಗಳಲ್ಲಿ ಹೇಳಿರುವುದರಿಂದ ಈ ದೇವತೆಯು ಆಕಾಶದ ಜಲರಾಶಿಯಲ್ಲಿ ವಾಸಿಸುತ್ತಾನೆ ಎಂದು ಸೂಚಿತವಾಗುತ್ತದೆ. ಋ. ಸಂ ೭-೩೪-೧೭ ರಲ್ಲಿ ಅವನನ್ನು ಪೂಜಿಸುವವರನ್ನೂ ಹಿಂಸಿಸಬಾರದೆಂಬ ಪ್ರಾರ್ಥನೆಯಿದೆ. ಋ. ಸಂ. ೫-೪೧-೧೬ರಲ್ಲಿಯೂ ಇದೇ ವಿಷಯದ ಪ್ರಸ್ತಾಪವಿದೆ. ಈ ವಾಕ್ಯಗಳಿಂದ ಅವನ ಸ್ವಭಾವದಲ್ಲಿ ದೌಷ್ಟ್ಯವಡಗಿದೆಯೆಂದು ವ್ಯಕ್ತವಾಗುತ್ತದೆ. ಅಹಿ ಎಂಬ ಶಬ್ದವು ಸಾಧಾರಣವಾಗಿ ವೃತ್ರನ ವಿಷಯದಲ್ಲಿ ಉಪಯೋಗಿಸಲ್ಪಟ್ಟಿದೆ. ವೃತ್ರನೂ ಇದೇ ರೀತಿ ನೀರನ್ನು ಆವರಿಸಿಕೊಂಡಿದ್ದನು. ನೀರು ಅವನನ್ನು ಅತಿಕ್ರಮಿಸಿ ಹರಿಯಿತು. ಅಥವಾ ನೀರಿನಲ್ಲಿ ಅಥವಾ ವಾಯುಮಂಡಲದ ತಳದಲ್ಲಿ ಬಿದ್ದಿದ್ದನು ಎಂದು ವರ್ಣನೆ ಇದೆ. ಆದ್ದರಿಂದ ಅಹಿರ್ಬುಧ್ನ್ಯ, ಅಹಿರ್ವೃತ್ರ ಈ ಇಬ್ಬರೂ ಒಂದೇ ಆಗಿದ್ದರೆಂಬ ಭಾವನೆಗೆ ಅವಕಾಶವಿದೆ. ಅಹಿರ್ಬುಧ್ನ್ಯನು ಕ್ರಮೇಣ ದೇವತೆಯೆಂಬ ಭಾವನೆ ಬಂದರೂ, ಅವನ ದುಷ್ಟಸ್ವಭಾವ ಸೂಕ್ಷ್ಮವಾಗಿ ಸೂಚಿತವಾಗಿದೆ. ತೈತ್ತಿರೀಯ ಸಂಹಿತೆಯಲ್ಲಿ (ತೈ. ಸಂ. ೪-೪-೧೦-೩) **ಪ್ರೋಷ್ಠಪದಾನಕ್ಷತ್ರಮಜ ಏಕಪಾದ್ದೇವತಾ ಪ್ರೋಷ್ಠಪದಾನಕ್ಷತ್ರಮಹಿರ್ಬುಧ್ನಿಯೋ ದೇವತಾ**—ಪೂರ್ವಾಭಾದ್ರನಕ್ಷತ್ರಕ್ಕೆ ಅಜ ಏಕಪಾತ್ ಎಂಬ ದೇವತೆಯು ಅಧಿಪತಿಯೆಂದೂ, ಉತ್ತರಾಭಾದ್ರನಕ್ಷತ್ರಕ್ಕೆ ಅಹಿರ್ಬುಧ್ನ್ಯನು ದೇವತೆಯೆಂದೂ ಹೇಳಿದೆ. ಪುರಾಣಾದಿಗಳಲ್ಲಿ ಅಹಿರ್ಬುಧ್ನ್ಯ ಎಂಬುದು ರುದ್ರನ ನಾಮಗಳಲ್ಲಿ ಒಂದೆಂದು ಪ್ರಸಿದ್ಧವಾಗಿದೆ.

**ಮಯಃ**—**ಮಯಃ** ಎಂಬ ಶಬ್ದವು **ಶಿಂಬಾತಾ, ಶತರಾ** ಮೊದಲಾದ ಇಪ್ಪತ್ತು ಸುಖನಾಮಗಳಲ್ಲಿ ಪಠಿತವಾಗಿರುವುದರಿಂದ **ಮಯಃ** ಎಂದರೆ ಸುಖವು ಎಂದರ್ಥ. (ನಿ. ೩-೯)

**ಶಿಶುಂ ನ ಪಿಪ್ಯುಷೀ**—ಗೋವು ತನ್ನ ಕರುವನ್ನು ಹಾಲನ್ನು ಕೊಟ್ಟು ಪೋಷಿಸುವಂತೆ ಎಂದು ಸಿಂಧುನದಿಗೆ ಉಪಮಾರ್ಥವನ್ನು ಹೇಳಿದೆ. ಎಂದರೆ ಗೋವು ತನ್ನ ಕರುವಿಗೆ ಹಾಲನ್ನು ಕೊಟ್ಟು ಕಾಪಾಡುವಂತೆ ಸಿಂಧು ನದಿಯು

ಜನರಿಗೆ ಕೃಷ್ಯಾದಿಕೆಲಸಗಳಿಗೂ ಅನ್ನಪಾನಾದಿಗಳಿಗೂ ಸಮೃದ್ಧಿಯಾದ ನೀರನ್ನು ಒದಗಿಸಿ ಕೊಟ್ಟು ಕಾಪಾಡುವುದೆಂಬ ದೃಷ್ಟಾಂತವನ್ನು ಇಲ್ಲಿ ಸೂಚಿಸಿದೆ. ಇಲ್ಲಿ ವಿಶೇಷವೇನೆಂದರೆ ಒಂದು ಹಸುವು ತನ್ನ ಒಂದು ಕರುವಿಗೆ ಮಾತ್ರ ಕ್ಷೀರವನ್ನು ಕೊಟ್ಟು ಪೋಷಿಸುವುದು. ಆದರೆ ಸಿಂಧುನದಿಯು ಅನೇಕ ಜನಗಳಿಗೆ ಪೋಷಣೆಯನ್ನು ಉಂಟುಮಾಡುವುದು.

**ಸಿಂಧುಃ**—ಸಿಂಧುಶಬ್ದವು ನದೀನಾಮಗಳಲ್ಲಿ ಪಠಿತವಾಗಿದೆ (ನಿ.೨-೨೪) ಸಿಂಧುವೆಂದರೆ ಸ್ಯಂದನಶೀಲಾ—ಹರಿಯುವ, ಪ್ರವಹಿಸುವ ನದಿಯೆಂದರ್ಥವು. ಋಗ್ವೇದದಲ್ಲಿ ಈ ಅರ್ಥದಲ್ಲಿಯೇ,

**ಸುದೇವೋ ಅಸಿ ವರುಣ ಯಸ್ಯ ತೇ ಸಪ್ತ ಸಿಂಧವಃ ।**
**ಅನುಕ್ಷರಂತಿ ಕಾಕುದಂ ಸೂರ್ಮ್ಯಂ ಸುಷಿರಾಮಿವ ॥**

(ಋ. ಸಂ. ೮-೬೯-೧೨)

**ತಮೂ ಷು ಸಮನಾ ಗಿರಾ ಪಿತೄಣಾಂ ಚ ಮನ್ಮಭಿಃ ।**
**ನಾಭಾಕಸ್ಯ ಪ್ರಶಸ್ತಿಭಿರ್ಯಃ ಸಿಂಧೂನಾಮುಪೋದಯೇ ಸಪ್ತಸ್ವಸಾ ಸ ಮಧ್ಯಮೋ ನಭಂತಾಮನ್ಯಕೇ ಸಮೇ ॥**

(ಋ. ಸಂ. ೮-೪೧-೨)

ಇತ್ಯಾದಿಋಕ್ಕುಗಳಲ್ಲಿರುವ ಸಿಂಧು ಶಬ್ದಕ್ಕೆ ಪ್ರವಹಸುತ್ತಿರುವ ನದಿಗಳೆಂದೂ ಪ್ರಕೃತವಾದ ಉತ ನೋ ಎಂಬ ಈ ಋಕ್ಕಿನಲ್ಲಿಯೂ ಮತ್ತು,

**ಅಮಂದಾನ್ ಸ್ತೋಮಾನ್ಪ್ರ ಭರೇ ಮನೀಷಾ ಸಿಂಧಾವಧಿ ಕ್ಷಿಯತೋ ಭಾವ್ಯಸ್ಯ ।**

(ಋ. ಸಂ. ೧-೧೨೬-೧)

ಇತ್ಯಾದಿ ಋಕ್ಕುಗಳಲ್ಲಿ ಸಿಂಧೂನದಿಯೆಂದೂ,

**ಶ್ರೋತು ನಃ ಶ್ರೋತುರಾತಿಃ ಸುಶ್ರೋತುಃ ಸುಕ್ಷೇತ್ರಾ ಸಿಂಧುರದ್ಭಿಃ ।**

(ಋ. ಸಂ. ೧-೧೨೨-೬)

**ಇಂದ್ರೋ ದ್ಯಾವಾಪೃಥಿವೀ ಸಿಂಧುರದ್ಭಿರಾದಿತ್ಯೈರ್ನೋ ಅದಿತಿಃ ಶರ್ಮ ಯಂಸತ್ ।**

(ಋ. ಸಂ. ೮-೩೪-೬)

ಎಂಬ ಋಕ್ಕುಗಳಲ್ಲಿ ಜಲಾಭಿಮಾನಿ ದೇವತೆಯೆಂದೂ ಭಾಷ್ಯಕಾರರು ಅರ್ಥವಿವರಣೆ ಮಾಡಿರುವರು.

**ಅಪಾಂ ನಪಾತಂ**— ಅಪಾಂ ಉದಕಾನಾಂ ನಪಾತಂ ನಪಾತಯಿತಾರಂ ತಾಸಾಂ ನಪ್ತಾರಂ ವಾ ಅಗ್ನಿಂ । ಅದ್ಭ್ಯ ಓಷಧಿವನಸ್ಪತಯಃ ತಾಭ್ಯಃ ಅಗ್ನಿಃ ಇತ್ಯಪಾಂ ನಪ್ತೃತ್ವಮಗ್ನೇಃ । ಉದಕಗಳಿಂದ ಓಷಧಿವನಸ್ಪತಿಗಳು ಉತ್ಪನ್ನವಾಗಿ ಅವುಗಳಿಂದ ಅಗ್ನಿಯು ಜನಿಸುವುದರಿಂದ ಅಗ್ನಿಗೆ ( ಉದಕಗಳ ಪೌತ್ರ ) **ಅಪಾಂ ನಪಾತ್** ಎಂಬ ಹೆಸರು ಪ್ರಸಿದ್ಧವಾಗಿದೆಯೆಂದು ಸಾಯಣರು ವಿವರಿಸಿದ್ದಾರೆ.

**ನಪಾತ್**—ಎಂಬ ಪದಕ್ಕೆ ಪುತ್ರನೆಂದೂ ಪೌತ್ರನೆಂದೂ ಅರ್ಥವಾಗುತ್ತದೆ. ಈ ಎರಡು ಅರ್ಥಗಳಲ್ಲಿಯೂ ಈ ಶಬ್ದದ ಪ್ರಯೋಗವಿದೆ. ಆದರೆ ನಿರುಕ್ತಕಾರರು ನಪಾದಿತ್ಯನಂತರಾಯಾಃ ಪ್ರಜಾಯಾ ನಾಮಧೇಯಂ । ಸಾಕ್ಷಾತ್ಪುತ್ರನಲ್ಲವೆಂದೂ ಪೌತ್ರಾದಿಗಳೆಂದೂ ಈ ಶಬ್ದದ ಅರ್ಥವೆಂದು ಹೇಳಿದ್ದಾರೆ. (ನಿ. ೮-೫) ಮತ್ತು **ತನೂನಪಾತ್** ಎಂಬ ಶಬ್ದದ ನಿರ್ವಚನವನ್ನು ಹೇಳುವಾಗ ಆಪಃ ಅತ್ರ ತನ್ವ ಉಚ್ಯಂತೇ । ತತಾ ಅಂತರಿಕ್ಷೇ

ತಾಭ್ಯಃ ಓಷಧಿವನಸ್ಪತಯಃ ಜಾಯಂತೇ ಓಷಧಿವನಸ್ಪತಿಭ್ಯ ಏಷ ಜಾಯತೇ । ಎಂದು ವಿವರಿಸಿ ಉದಕಗಳ ಪೌತ್ರನೆಂದೂ ಮತ್ತು ಶಾಕಪೂಣಿಯ ಮತದಂತೆ ಅಗ್ನಿಯ ಪರ್ಯಾಯನಾಮವೆಂದೂ ಹೇಳಿದ್ದಾರೆ.

**ಅನಂತರಂ ಪ್ರಜಾಮಾಹುರ್ನಪಾದಿತಿ ಕೃಪಣ್ಯವಃ ।**
**ನಪಾದವಮುಷ್ಯ ಚೈವಾಯಮಗ್ನಿಸ್ತೇನ ತನೂನಪಾತ್ ॥**

ಎಂದು ಬೃಹದ್ದೇವತೆಯಲ್ಲಿಯೂ ಇದೇ ಅಭಿಪ್ರಾಯವನ್ನನುಸರಿಸಿದ್ದಾರೆ ಇಲ್ಲಿ ಅಪಾಂನಪಾತ್ ಎಂಬುದು ಅಗ್ನಿಪರ್ಯಾಯನಾಮವೇ ಅಥವಾ ಬೇರೆ ದೇವತೆಯ ಹೆಸರೇ ಎಂಬ ವಿಷಯದಲ್ಲಿ ಅಭಿಪ್ರಾಯಭೇದವಿರುವುದನ್ನು ಅಗ್ನಿರಿತಿ ಶಾಕಪೂಣಿಃ ಎಂಬ ನಿರುಕ್ತಕಾರರ ವಚನದಿಂದ ತಿಳಿಯಬಹುದು. ಅಥವಾ ಅಪಾಂ ನ ಪಾತಯಿತಾ ವೈದ್ಯುತಾಗ್ನಿರೂಪೇಣ ಪ್ರವರ್ಷಕತ್ವಾದಿತಿ ಭಾವಃ ಎಂಬ ವ್ಯುತ್ಪತ್ತಿಯನ್ನು ತೋರಿಸಿ ವೈದ್ಯುತಾಗ್ನಿಗೆ ಈ ಹೆಸರೆಂದು ಸಾಯಣರು ವಿವರಿಸಿದ್ದಾರೆ. ನಿರುಕ್ತಕಾರರು **ಅಪಾಂನಪಾತ್** ಎಂಬುದರ ವಿವರಣೆಯು **ತನೂನಪಾತ್** ಎಂಬುವರ ವಿವರಣೆಯಂತೆಯೇ ಆಗುತ್ತದೆಂದು ಹೇಳಿದ್ದಾರೆ.

**ತನೂನಪಾದಯಂ ತ್ವೇವ ನಾಮ್ನಾ ಯಚ್ಛತ್ಯಸೌ ತನುಂ ।**
**ನಪಾದಿತಿ ಪ್ರಜಾಮಾಹುರಮುತೋಽಸ್ಯ ಚ ಸಂಭವಾತ್ ॥**

(ಬೃ. ದೇ. ೩-೧)

ತಸ್ಮಿಂದ ತಾನೇ ಹುಟ್ಟಿದುದರಿಂದ ತನ್ನ ಪುತ್ರನೇ ಆಗಿ ತನೂನಪಾತ್ ಎಂಬ ಹೆಸರು ಪ್ರಸಿದ್ಧವಾಗಿದೆಯೆಂದು ಅನೇಕಕಡೆ ಹೇಳಿರುವಂತೆ **ಅಪಾಂನಪಾತ್** ಎಂಬುದಕ್ಕೂ ಇದೇ ವಿವರಣೆಯು. ಅಥವಾ—

**ಅಪಾಂ ನಪಾತಂ । ಜಲಸ್ಯ ನ ಪಾಲಕಂ । ಜಲಸ್ಯ ಶೋಷಕಂ ।** ಜಲಕ್ಕೆ ವಿರೋಧಿಯಾಗಿ, ಜಲವನ್ನು ಒಣಗಿಸುವವನಾದುದರಿಂದ ಸೂರ್ಯನಿಗೆ ಅಪಾಂನಪಾತ್ ಎಂದು ಹೆಸರು ಎಂಬರ್ಥವನ್ನು ಭಾಷ್ಯಕಾರರು ಋ. ಸಂ. ೧-೨೨-೬ನೆಯ ಋಕ್ಕಿನ ಭಾಷ್ಯದಲ್ಲಿ ಹೇಳಿದ್ದಾರೆ. ಆದರೆ ಯಾಸ್ಕರು **ಅಪಾಂನಪಾತ್** ಎಂಬ ಶಬ್ದವೂ, **ತನೂನಪಾತ್** ಎಂಬ ಶಬ್ದವೂ ಒಂದೇ ಅರ್ಥವುಳ್ಳ ಶಬ್ದಗಳೆಂದು ಹೇಳಿ, ತನೂನಪಾತ್ ಶಬ್ದಕ್ಕೆ ಆಜ್ಯ (ಕರಗಿಸಿದ ತುಪ್ಪ) ವೆಂದೂ, ಅಗ್ನಿಯೆಂದೂ ಎರಡುವಿಧವಾದ ಅರ್ಥವನ್ನು ಹೇಳಿರುವರು. (ನಿ ೧೦-೮ ಮತ್ತು ೮-೫). ಈಗ **ಅಪಾಂನಪಾತ್** ಎಂಬ ದೇವತೆಯು ಅಗ್ನಿಗಿಂತ ಬೇರೆಯೇ, ಅಥವಾ ಅಗ್ನಿಯ ಅಂಶವೇ ಎಂಬ ವಿಷಯದಲ್ಲಿ ಅಭಿಪ್ರಾಯಭೇದವಿದೆ ಋ ಸಂ. ೧-೧೪೨ ನೆಯ ಸೂಕ್ತದಲ್ಲಿ ಆಪ್ರೀದೇವತೆಯಾದ **ತನೂನಪಾತ್** ಎಂಬ ದೇವತೆಯ ವಿಷಯವನ್ನು ವಿಮರ್ಶಿಸುತ್ತಾ ಈ ದೇವತೆಯು **ಅಗ್ನಿಯ** ರೂಪಾಂತರವೆಂದು ಹೇಳಿರುವ ಬೃಹದ್ದೇವತಾ ವಾಕ್ಯಾದಿಗಳನ್ನು ಉದಹರಿಸಿ ಇದೊಂದು ಪ್ರತ್ಯೇಕವಾದ ದೇವತೆಯಲ್ಲವೆಂದು ತಿಳಿಸಿದೆ. **ಋಕ್ಸಂಹಿತೆಯಲ್ಲಿಯೇ** ಇರುವ ಇನ್ನು ಕೆಲವು ಆಧಾರಗಳಿಂದ ಪ್ರಾರಂಭದ ದೆಸೆಯಲ್ಲಿ ಇದೊಂದು ಪ್ರತ್ಯೇಕವಾದ ದೇವತೆಯಂತೆ ಪರಿಗಣಿಸಲ್ಪಟ್ಟು ಅನಂತರ ಅಗ್ನಿಯೊಂದಿಗೆ ಐಕ್ಯವಾಗಿ ಅಗ್ನಿಯ ಅಂಶವೆಂದು ಪರಿಗಣಿತವಾಗಿರಬೇಕೆಂದು ಹೇಳಲೂ ಅವಕಾಶವಿದೆ. ನಿರುಕ್ತಕಾರರ ಮತದಂತೆ **ಅಪಾಂನಪಾತ್** ದೇವತೆಯೂ, **ತನೂನಪಾತ್** ದೇವತೆಯೂ, ಒಂದೇ ಆದುದರಿಂದ ಒಂದೇ ವಿಧವಾದ ವಿವರಣೆಯು ಎರಡು ದೇವತೆಗಳ ಸ್ವರೂಪವನ್ನೂ ತಿಳಿಸುತ್ತದೆ. ಪ್ರಕೃತದಲ್ಲಿ **ಅಪಾಂನಪಾತ್** ಎಂಬ ದೇವತೆಗೆ ಋಕ್ಸಂಹಿತೆಯಲ್ಲಿ ಯಾವ ಸ್ಥಾನವಿದೆಯೆಂಬುದನ್ನು ಪರಿಶೀಲಿಸಿದರೆ ವಿಶ್ವೇದೇವತೆಗಳನ್ನುದ್ದೇಶಿಸಿರುವ ಸೂಕ್ತಗಳಲ್ಲಿ **ಅಪಾಂನಪಾತ್** ದೇವತೆಯು ಅನೇಕ ಸಲ ಆಹ್ವಾನಿತನಾಗಿದ್ದಾನೆ ಎಂಬ ಅಂಶವು ತಿಳಿದುಬರುವುದು.

ಪ್ರ ನಃ ಪೂಷಾ ಚರಥಂ ವಿಶ್ವದೇವ್ಯೋಽಪಾಂ ನಪಾದವತು ವಾಯುರಿಷ್ಟಯೇ ।
ಆತ್ಮಾನಂ ವಸ್ಯೋ ಅಭಿ ವಾತಮರ್ಚತ ತದಶ್ವಿನಾ ಸುಹವಾ ಯಾಮನಿ ಶ್ರುತಂ ॥

(ಋ. ಸಂ ೧೦-೯೨-೧೩)

ಎಂಬ ಋಕ್ಕಿನಲ್ಲಿ ವಿಶ್ವೇದೇವತೆಗಳೊದಿಂಗೆ **ಪೂಷನೂ** ಅನಂತರ **ಅಪಾಂನಪಾತನೂ** ಪ್ರಾರ್ಥಿತವಾಗಿದ್ದಾರೆ. ಈ ಸೂಕ್ತದ ಎರಡನೆಯ ಋಕ್ಕಿನಲ್ಲಿ (ಋ. ಸಂ. ೧೦-೯೨-೨) ಅಗ್ನಿಯು ಯಜ್ಞದ ವರ್ಧಕನೆಂದು ಸ್ತುತನಾಗಿದ್ದಾನೆ. ೭ನೆಯ ಮಂಡಲದ ೩೫ನೆಯ ಸೂಕ್ತದ ೧೩ನೇ ಋಕ್ಕಿನಲ್ಲಿ **ಅಜಏಕಪಾತ್** ಅಹಿರ್ಬುಧ್ನ್ಯ, ಸಮುದ್ರ, ಅಪಾಂನ-ಪಾತ್ ಮತ್ತು ಪೃಶ್ನಿ ಎಂಬ ಈ ದೇವತೆಗಳು ಒಟ್ಟಿಗೂ, ಇಂದ್ರಾಗ್ನಿಗಳು ಮೊದಲನೆಯ ಋಕ್ಕಿನಲ್ಲಿಯೂ, ನಾಲ್ಕನೆಯ ಋಕ್ಕಿನಲ್ಲಿ ಅಗ್ನಿಯು ಮಾತ್ರವೂ ಆಹ್ವಾನಿತರಾಗಿದ್ದಾರೆ. ೬ನೆಯ ಮಂಡಲದ ೫೨ನೆಯ ಸೂಕ್ತದ ೧೪ನೆಯ ಋಕ್ಕಿನಲ್ಲಿ ಅಪಾಂನಪಾತನೊಂದಿಗೆ ಇತರದೇವತೆಗಳು ಆಹ್ವಾನಿತರಾಗಿದ್ದಾರೆ. ೬ ಮತ್ತು ೧೨ನೆಯ ಋಕ್ಕುಗಳಲ್ಲಿ ಅಗ್ನಿಯು ಪ್ರಾರ್ಥಿತನಾಗಿದಾನೆ. ಇದರಂತೆ ೨ನೆಯ ಮಂಡಲದ ೩೧ನೆಯಸೂಕ್ತದಲ್ಲಿಯೂ ೬ನೆಯ ಮಂಡಲದ ೫೦ನೆಯಸೂಕ್ತದಲ್ಲಿಯೂ **ಅಗ್ನಿಯನ್ನೂ, ಅಪಾಂನಪಾತನನ್ನೂ** ಬೇರೆ ಬೇರೆ ನಿರ್ದೇಶಮಾಡಿದೆ. ಇವುಗಳಲ್ಲಿ ಯಾವ ಋಕ್ಕಿನಲ್ಲಿಯೂ ಸಹ ಅಗ್ನಿಯೂ ಅಪಾಂನಪಾತನೂ ಒಂದೇ ದೇವತೆಯೆಂದು ತಾದಾತ್ಮ್ಯವನ್ನು ಹೇಳುವುದಕ್ಕಾಗುವುದಿಲ್ಲ.

೨ನೆಯಮಂಡಲದ ೩೫ನೆಯ ಸೂಕ್ತವು ಕೇವಲ ಅಪಾಂನಪಾದ್ದೇವತಾಕವೇ ಆಗಿದೆ. ೧೫ನೆಯ ಋಕ್ಕಿನಲ್ಲಿ ಮಾತ್ರ ಅಗ್ನಿಯನ್ನು ಉದ್ದೇಶಿಸಿದೆಯೇ ಹೊರತು ಉಳಿದ ಋಕ್ಕುಗಳಲ್ಲಿ ಕೊನೆಯವರೆಗೆ ಅಗ್ನಿಯ ಹೆಸರೇ ಇಲ್ಲ. ಆದರೂ ಸಹ ಅಗ್ನಿಪರವಾಗಿ ಅರ್ಥಮಾಡಬಹುದಾದರೆ ೧೧ ಮತ್ತು ೧೨ನೆಯ ಋಕ್ಕುಗಳು ಮಾತ್ರವಾಗಿವೆ. ಆದರೆ ಅಲ್ಲಿಯ ವರ್ಣನೆಯೂ ಸಹ ಸಾಕ್ಷಾದಗ್ನಿಗೆ ಅನ್ವಯಿಸುವುದಿಲ್ಲ. ಈ ಉದಾಹರಣೆಗಳನ್ನು ತೆಗೆದುಕೊಂಡು Bloomfield ಎಂಬ ಪಂಡಿತನು ಈರೀತಿ ತನ್ನ ಅಭಿಪ್ರಾಯವನ್ನು ಕೊಟ್ಟಿರುತ್ತಾನೆ.—

While Agni became more and more conspicious. Apan Napat seems to have waned in popularity, until he was so far forgotten that a confusion arose concerning the two uses of the expression ಅಪಾಂನಪಾತ್ "the son of the waters" was swallowed up in Agni, a son of the waters as he was occasionally (twice in the Rik) called, since he too. because of his original lightning nature, was supposed to have been born of the rain-clouds. To the same source is to be traced the myth of his hiding in the waters, for this myth probably had no connection originally with Apan Napat, beyond the mere fact that both he and Agni were forms of lightning which, appearing when the thunderstorm was at its hight seemed to disppear in the clouds from which they came.

The conclusion seems to be warranted, therefore, that Agni and Apan Napat were once distinct Gods—Gods, of the lightning, who were, however, associated with each other and were much alike in certain particulars and that this association, and resemblance ulti-

mately resulted, possibly at the close of the Vedic Period, in a confusion and union of the two, as a result of which Apan Napat was absorbed by Agni.

(Journal of American Oriental Society Vol. XIX (2) p. 144)

**ಮನೋಜುವಃ—ಮನ ಇವ ವೇಗಯುಕ್ತಃ |** ಮನಸ್ಸಿನಂತೆ ವೇಗವುಳ್ಳವನು. ಮನಸ್ಸು ಎಷ್ಟುದೂರದಲ್ಲಿರುವ ವಸ್ತುವನ್ನಾಗಲಿ ಕ್ಷಣಮಾತ್ರದಲ್ಲಿ ಚಿಂತಿಸಬಲ್ಲುದು. ಆದುದರಿಂದ ಬಹುವೇಗವನ್ನು ನಿರ್ದೇಶಿಸುವಾಗ ಮನೋವೇಗದಂತೆ ವೇಗವುಳ್ಳ ಎಂಬ ಉಪಮಾನವನ್ನು ಹೇಳುವ ರೂಢಿಯು ಋಗ್ವೇದದಲ್ಲಿ ಕಂಡುಬರುವುದು.

**ಇಂದ್ರವಾಯೂ ಮನೋಜುವಾ ವಿಪ್ರಾ ಹವಂತ ಊತಯೇ | ಸಹಸ್ರಾಕ್ಷಾ ಧಿಯಸ್ಪತೀ ||**

**(ಋ ಸಂ. ೧-೨೩-೩)**

ಇತ್ಯಾದಿಋಕ್ಕುಗಳಲ್ಲಿ ಮನೋಜುವ ಎಂಬ ಶಬ್ದವು ಮೇಲೆ ಹೇಳಿದ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುವುದು.

**ವೃಷಣಃ—ವರ್ಷಕಾ ಮೇಘಾಃ |** ವೃಷ್ಟಿಯನ್ನು ಸುರಿಸುವ ಮೇಘಗಳು ಎಂದು ಸಾಯಣರ ವಿವರಣೆಯು.

### ವ್ಯಾಕರಣಪ್ರಕ್ರಿಯಾ

**ಅಹಿಃ**—ಹನ ಹಿಂಸಾಗತ್ಯೋಃ ಧಾತು. **ಆಙಿ ಶ್ರಿಹನಿಭ್ಯಾಂಹ್ರಸ್ವಶ್ಚ** (ಉ ಸೂ. ೪-೫೩೭) ಎಂಬುದರಿಂದ ಇದಕ್ಕೆ ಇಣ್ ಪ್ರತ್ಯಯ. ಆಙಿಗೆ ಹ್ರಸ್ವ. ಪ್ರತ್ಯಯಕ್ಕೆ ಡಿತ್ವವಿಧಾನಮಾಡಿರುವುದರಿಂದ ಧಾತುವಿನ ಟಿಗೆ (ಅನ್) ಲೋಪ. ಅಹಿ ಎಂದು ರೂಪವಾಗುತ್ತದೆ.

**ಬುಧ್ನ್ಯಃ**—ಬುಧ್ನಮರ್ಹತೀತಿ ಬುಧ್ನ್ಯಃ ಅರ್ಹಾರ್ಥದಲ್ಲಿ ಛಾಂದಸ ಯತ್ ಪ್ರತ್ಯಯ. **ಯಸ್ಯೇತಿ ಚ** ಸೂತ್ರದಿಂದ ಅಕಾರಲೋಪ. **ತಿತ್ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ಕಃ**—ಡುಕೃಞ್ ಕರಣೇ. ಧಾತು. **ಛಂದಸಿ ಲುಙ್ಲಙ್ಲಿಟಃ** ಎಂಬುದರಿಂದ ಲೋಡರ್ಥದಲ್ಲಿ **ಲಙ್.** ತಿಪ್ ಬಂದಾಗ **ಇತಶ್ಚ** ಸೂತ್ರದಿಂದ ಇಕಾರಲೋಪ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ತಿಪ್** ನಿಮಿತ್ತವಾಗಿ ಧಾತುವಿನ ಋಕಾರಕ್ಕೆ ಗುಣ ರಪರವಾಗಿ ಬಂದಾಗ **ಹಲ್ಙ್ಯಾಭ್ಯೋದೀರ್ಘಾತ್**—(ಪಾ ಸೂ. ೬-೧-೬೮) ಎಂಬುದರಿಂದ ತಿಪಿಗೆ ಲೋಪ. ರೇಫಕ್ಕೆ ಅವಸಾನನಿಮಿತ್ತವಾಗಿ ವಿಸರ್ಗ. ಛಾಂದಸವಾಗಿ ಅಡಾಗಮ ಬರುವುದಿಲ್ಲ ನಿಘಾತಸ್ವರ ಬರುತ್ತದೆ.

**ಪಿಪ್ಯುಷೀ**—ಓಪ್ಯಾಯೀ ವೃದ್ಧೌ. ಧಾತು. ಛಾಂದಸವಾಗಿ ಲಿಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಅದಕ್ಕೆ ಕ್ವಸು ಆದೇಶ **ಲಿಡ್ಯಙೋಶ್ಚ** (ಪಾ. ಸೂ. ೬-೧-೨೯) ಎಂಬುದರಿಂದ ಧಾತುವಿಗೆ ಪೀ ಆದೇಶ. ಪ್ರತ್ಯಯ ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಙೀಪ್. ಭಸಂಜ್ಞಾ ಇರುವುದರಿಂದ ಪ್ರತ್ಯಯವಕಾರಕ್ಕೆ ಸಂಪ್ರಸಾರಣ, ಪೂರ್ವರೂಪ. ಧಾತು ಈಕಾರಕ್ಕೆ ಯಣಾದೇಶ. **ಶಾಸಿವಸಿಘಸೀನಾಂ ಚ** (ಪಾ. ಸೂ, ೮-೩-೬೦) ಎಂಬುದರಿಂದ ಪ್ರತ್ಯಯಸಕಾರಕ್ಕೆ ಷತ್ವ ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ.

ವೇತಿ— ವೀ ಗತ್ಯಾದಿಷು ಧಾತು. ಲೇಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

ನಪಾತಮ್— ನಭ್ರಾಣ್ನಪಾತ್—(ಪಾ. ಸೂ. ೬-೩-೭೫) ಎಂಬುದರಿಂದ ನಲೋಪಾಭಾವವು ನಿಪಾತಿತ ವಾಗಿದೆ. ನಞ್ಪೂರ್ವಪದಪ್ರಕೃತಿಸ್ವರ ಬರುತ್ತದೆ.

ಅಪಾಮ್— ಊಡಿದಂಪದಾದಿ—(ಪಾ. ಸೂ. ೬-೧-೧೭೧) ಎಂಬುದರಿಂದ ಷಷ್ಠೀಬಹುವಚನಕ್ಕೆ ಉದಾತ್ತಸ್ವರ ಬರುತ್ತದೆ.

ಜುನಾಮ— ಜು ಗತೌ. ಧಾತು. (ಸೂತ್ರಮಾತ್ರ ನಿರ್ದಿಷ್ಟವಾಗಿದೆ) ಕ್ರ್ಯಾದಿ ಲೋಟ್. ಉತ್ತಮ ಪುರುಷ ಬಹುವಚನಾಂತರೂಪ. ಯದ್ವೃತ್ತಾನ್ನಿತ್ಯಮ್ ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ವಿಕರಣಸ್ವರದಿಂದ ಮಧ್ಯೋದಾತ್ತವಾಗುತ್ತದೆ.

ವಹಂತಿ— ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ತಾಸ್ಯನುದಾತ್ತೇತ್—(ಪಾ. ಸೂ. ೬-೧-೧೮೬) ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

---

ಸಂಹಿತಾಪಾಠಃ

ಉತ ನ ಈಂ ತ್ವಷ್ಟಾ ಗಂತ್ವಚ್ಛಾ ಸ್ಮತ್ಸೂರಿಭಿರಭಿಪಿತ್ವೇ ಸಜೋಷಾಃ ।

ಆ ವೃತ್ರಹೇಂದ್ರಶ್ಚರ್ಷಣಿಪ್ರಾಸ್ತುವಿಷ್ಟಮೋ ನರಾಂ ನ ಇಹ ಗಮ್ಯಾಃ ॥ ೬ ॥

ಪದಪಾಠಃ

ಉತ । ನಃ । ಈಂ । ತ್ವಷ್ಟಾ । ಆ । ಗಂತು । ಅಚ್ಛ । ಸ್ಮತ್ । ಸೂರಿऽಭಿಃ । ಅಭಿऽಪಿತ್ವೇ । ಸಽಜೋಷಾಃ ।

ಆ । ವೃತ್ರऽಹಾ । ಇಂದ್ರಃ । ಚರ್ಷಣಿऽಪ್ರಾಃ । ತುವಿಃऽತಮಃ । ನರಾಂ । ನಃ । ಇಹ । ಗಮ್ಯಾಃ ॥ ೬ ॥

ಸಾಯಣಭಾಷ್ಯಂ

ತ್ವಷ್ಟಾ ದೇವೋऽಪಿ ನೋऽಸ್ಮಾನಚ್ಛಾಭಿಪ್ರಾಪ್ತುಮೀಮಿದಾನೀಮಿಮಂ ಯಜ್ಞಂ ವಾ ಗಂತು । ಆಗತ್ಯ ಚ । ಸ್ಮತ್ಸಹಾರ್ಥೇ ಪ್ರಾಶಸ್ತ್ಯೇ ವಾ ವರ್ತತೇ । ಅತ್ರ ಪ್ರಶಂಸಾಯಾಂ । ಪ್ರಶಸ್ತಂ ಯಥಾ ತಥಾಭಿಪಿತ್ವೇऽಭಿಗಂತವ್ಯೇ ಯಜ್ಞೇ ನಿಮಿತ್ತಭೂತೇ ಸತಿ ಸೂರಿಭಿಃ ಸ್ತೋತೃಭಿರ್ಋತ್ವಿಗ್ಭಿಃ ಸಜೋಷಾಃ ಸಮಾನಪ್ರೀತಿರ್ಭವತ್ವಿತಿ ಶೇಷಃ । ತಥಾ ವೃತ್ರಹಾ ವೃತ್ರಘಾತೀ ಚರ್ಷಣಿಪ್ರಾಃ । ಚರ್ಷಣಯೋ ಮನುಷ್ಯಾ ಯಜಮಾನಾಃ । ಕಾಮೈಸ್ತೇಷಾಂ ಪೂರಕಸ್ತುವಿಷ್ಟಮೋ ಬಹುತಮೋ ಮಹತ್ತಮ ಇಹಾಸ್ಮಿನ್ಕರ್ಮಣಿ ನರಾಂ ನೃಣಾಂ ನೋऽಸ್ಮಾಕಮುಕ್ತಗುಣೋಪೇತಃ ಸನ್ನಾ ಗಮ್ಯಾಃ । ಆಗಚ್ಛತು ॥

ಪ್ರತಿಪದಾರ್ಥ

**ಉತ**—ಮತ್ತು । **ತ್ವಷ್ಟಾ**—ತ್ವಷ್ಟೃನಾಮಕದೇವತೆಯು । **ನಃ ಅಭಿ**— ನಮ್ಮ ಅಭಿಮುಖವಾಗಿ । **ಈಂ**—ಈ ಯಜ್ಞಕ್ಕೆ । **ಆ ಗಂತು**—ಬರಲಿ (ಅನಂತರ) **ಅಭಿಪಿತ್ವೇ**—ಸದ್ಯಃ ನೆರವೇರಿಸಲ್ಪಡುವ ಈ ಯಜ್ಞದಲ್ಲಿ । **ಸೂರಿಭಿಃ**—ಅವನ ಸ್ತೋತ್ರಗಳಿಂದ ಋತ್ವಿಕ್ಕುಗಳೊಡನೆ । **ಸಜೋಷಾಃ**—ಸಮಾನವಾದ ಪ್ರೀತಿಯಿಂದ ಕೂಡಿದವನಾಗಿ । **ಸ್ಮತ್**—ಯಜ್ಞವು ಪ್ರಶಸ್ಯವಾಗುವಂತೆ ಮಾಡಲಿ । **ಚರ್ಷಣಿಪ್ರಾಃ**—ಮಾನವರ ಇಷ್ಟಾರ್ಥಗಳನ್ನು ಪೂರೈಸುವವನೂ । **ತುವಿಷ್ಟಮಃ**—ಅತ್ಯಂತಮಹತ್ತ್ವವುಳ್ಳವನೂ । **ವೃತ್ರಹಾ**—ವೃತ್ರಹಂತಕನೂ ಆದ । **ಇಂದ್ರಃ**—ಇಂದ್ರನು । **ಇಹ**—ಈ ಕರ್ಮದಲ್ಲಿ । **ನರಾಂ ನಃ**—ಮಾನವರಾದ ನಮ್ಮನ್ನುದ್ದೇಶಿಸಿ । **ಆ ಗಮ್ಯಾಃ**—ಬರಲಿ.

ಭಾವಾರ್ಥ

ತ್ವಷ್ಟೃನಾಮಕವಾದ ದೇವತೆಯು ನಮ್ಮ ಅಭಿಮುಖವಾಗಿ ಈ ಯಜ್ಞಕ್ಕೆ ಬರಲಿ. ಈಗಲೇ ನೆರವೇರಿಸಲ್ಪಡುವ ಈ ಯಜ್ಞದಲ್ಲಿ ಅವನ ಸ್ತೋತೃಗಳಾದ ಋತ್ವಿಕ್ಕುಗಳೊಡನೆ ಸಮಾನವಾದ ಪ್ರೀತಿಯಿಂದ ಕೂಡಿದವನಾಗಿ ಯಜ್ಞವು ಪ್ರಶಸ್ಯವಾಗುವಂತೆ ಮಾಡಲಿ. ಮಾನವರ ಇಷ್ಟಾರ್ಥಗಳನ್ನು ಪೂರ್ತಿಮಾಡಿ ರಕ್ಷಿಸುವವನೂ, ಅತ್ಯಂತ ಮಹತ್ತ್ವವುಳ್ಳವನೂ, ವೃತ್ರಹಂತನೂ ಆದ ಇಂದ್ರನು ಈ ಕರ್ಮದಲ್ಲಿ ಮಾನವರಾದ ನಮ್ಮನ್ನುದ್ದೇಶಿಸಿ ಬರಲಿ.

## English Translation

Or may Twashtri come to this sacrifice, equally well pleased with those who praise (him) at the excellent (rite) at which he is present : may the most potent Indra the protector of man, the destroyer of Vritra, come to the (solemnity) of our leadrs.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ತ್ವಷ್ಟೃವನ್ನೂ ಇಂದ್ರನನ್ನೂ ಸ್ತುತಿಸಲಾಗಿದೆ. ದೇವಶಿಲ್ಪಿಯೆಂದು ಪ್ರಸಿದ್ಧನಾದ ತ್ವಷ್ಟೃವಿನ ವಿಷಯವನ್ನು ನಾವು ಹಿಂದೆಯೇ ಹೇಳಿದ್ದೇವೆ.

**ತ್ವಷ್ಟಾ**— ಈ ಶಬ್ದಕ್ಕೆ ಯಾಸ್ಕರು ತಮ್ಮ ನಿರುಕ್ತದಲ್ಲಿ ಈ ರೀತಿ ನಿರ್ವಚನವನ್ನು ಹೇಳಿರುವರು --

> **ತ್ವಷ್ಟಾ ತ್ವಷ್ಟಾ ತೂರ್ಣಮಶ್ನುತ ಇತಿ ನೈರುಕ್ತಾಃ । ತ್ವಿಷೇರ್ವಾಸ್ಯಾದ್ದೀಪ್ತಿಕರ್ಮಣಸ್ತ್ವಕ್ಷತೇರ್ವಾಸ್ಯಾತ್ಕರೋತಿಕರ್ಮಣಃ। ಮಾಧ್ಯಮಿಕಸ್ತ್ವಷ್ಟೇತ್ಯಾಹುರ್ಮಧ್ಯಮೇ ಚ ಸ್ಥಾನೇ ಸಮಾಮ್ನಾತಃ । ಅಗ್ನಿರಿತಿ ಶಾಕಪೂಣಿಃ ॥**
>
> (ನಿ. ೮-೧೪)

ಎಂದರೆ ತ್ವಷ್ಟಾ ಎಂಬ ಶಬ್ದಕ್ಕೆ ಜಾಗ್ರತೆಯಾಗಿ ವ್ಯಾಪಿಸುವವನು ಎಂದು ನಿರುಕ್ತಕಾರರು ಹೇಳುವರು. ಅಥವಾ ಪ್ರಕಾಶಮಾನನಾಗಿರುವವನು ಅಥವಾ ಕರ್ಮಗಳನ್ನು (ಶಿಲ್ಪಕರ್ಮಗಳನ್ನೂ) ಮಾಡುವವನು, ಮಾಧ್ಯಮಿಕನೆಂದೂ ಕೆಲವರು ಹೇಳುವರು. ಎಂದರೆ ದ್ಯಾವಾಪೃಥಿವಿಗಳ ಮಧ್ಯದಲ್ಲಿ ಇರುವವನು ಎಂದರ್ಥವು. ಅಗ್ನಿಯೆಂದು ಶಾಕಪೂಣಿಯು ಹೇಳುವನು.

ತ್ವಷ್ಟೃವು ವಿಶ್ವಕರ್ಮನಂತೆ ದೇವತೆಗಳ ಶಿಲ್ಪಿಯೆಂದೂ ಕೆಲವರು ಹೇಳುವರು. ಏಕೆಂದರೆ ಯಾಸ್ಕರು ಉದಾಹರಣೆಗಾಗಿ ಕೊಟ್ಟಿರವ ಋಕ್ಕಿನಲ್ಲಿ—

**ಯ ಇಮೇ ದ್ಯಾವಾಪೃಥಿವೀ ಜನಿತ್ರೀ ರೂಪೈರಪಿಂಶದ್ಭುವನಾನಿ ವಿಶ್ವಾ ।**
**ತಮದ್ಯ ಹೋತರಿಷಿತೋ ಯಜೀಯಾನ್ದೇವಂ ತ್ವಷ್ಟಾರಮಿಹ ಯಕ್ಷಿ ವಿದ್ವಾನ್ ।**

(ಋ. ಸಂ. ೧೦-೧೧೦-೯)

ತ್ವಷ್ಟೃವು ದ್ಯಾವಾಪೃಥಿವಿಗಳ ನಿರ್ಮಾಪಕನು ಮತ್ತು ಸಮಸ್ತಲೋಕಗಳಲ್ಲಿರುವ ಪ್ರಾಣಿಗಳಿಗೆ ಅವರವರಿಗೆ ಯೋಗ್ಯವಾದ ರೂಪ, ಸೌಂದರ್ಯ, ಋದ್ಧಿ, ವೃದ್ಧಿ, ಮೊದಲಾದುವುಗಳಿಗೆ ಕಾರಣಕರ್ತನು ಎಂದು ಹೇಳಿರುವುದು. ಇದಲ್ಲದೆ **ತ್ವಷ್ಟಾ ವೈ ಪಶೂನಾಂ ಮಿಥುನಾನಾಗ್ಂ ರೂಪಕೃತ್** (ತೈ. ಸಂ. ೬-೧-೮-೫) **ತ್ವಷ್ಟಾ ರೂಪಾಣಾಮಧಿಪತಿಃ** (ತೈ ಸಂ. ೩-೩) **ತ್ವಷ್ಟಾ ರೂಪಾಣಿ ವಿಕರೋತಿ** ಎಂದು ಮೊದಲಾದ ಶ್ರುತಿ (ಯಜುರ್ವೇದ) ವಾಕ್ಯಗಳು ತ್ವಷ್ಟೃವಿನ ವಸ್ತುನಿರ್ಮಾಣ ಕುಶಲತೆಯನ್ನು ಪ್ರತಿಪಾದಿಸುವವು ಮತ್ತು.

**ಮಹ್ಯಂ ತ್ವಷ್ಟಾ ವಜ್ರಮತಕ್ಷದಾಯಸಂ ಮಯಿ ದೇವಾಸೋಽವೃಜನ್ನಪಿ ಕ್ರತುಂ ।**

(ಋ. ಸಂ. ೧೦-೪೮-೩)

ತ್ವಷ್ಟೃವು ತನಗೆ ಉಕ್ಕಿನಿಂದ ವಜ್ರಾಯುಧವನ್ನು ನಿರ್ಮಾಣಮಾಡಿಕೊಟ್ಟನು ಎಂದು ಇಂದ್ರನು ಹೇಳಿರುವನು-ದೇವತೆಗಳಿಗೆ ಅವಶ್ಯಕವಾದ ಯಜ್ಞಸಾಮಗ್ರಿಗಳನ್ನೂ ಇತರ ಅನೇಕವಸ್ತುಗಳನ್ನೂ ನಿರ್ಮಿಸಿಕೊಟ್ಟಿರುವನೆಂದು ಋಗ್ವೇದದ ಅನೇಕ ಮಂತ್ರಗಳಲ್ಲಿ ಹೇಳಿದೆ. ತ್ವಷ್ಟೃವು ಬಹಳ ಕುಶಲನಾದ ಕೆಲಸಗಾರನು. ತನ್ನ ದಕ್ಷತೆಯನ್ನು ವ್ಯಕ್ತಪಡಿಸುವ ನಾನಾಪದಾರ್ಥಗಳನ್ನು ಮಾಡಿದ್ದಾನೆ. ವಾಸ್ತವವಾಗಿ ಅವನಷ್ಟು ದಕ್ಷರಾದ ಕೆಲಸಗಾರರೇ ಇಲ್ಲ. ಆದುದರಿಂದ—

**ತ್ವಷ್ಟಾ ಯದ್ವಜ್ರಂ ಸುಕೃತಂ ಹಿರಣ್ಯಯಂ ಸಹಸ್ರಭೃಷ್ಟಿಂ ಸ್ವಪಾ ಅವರ್ತಯತ್ ।**
**ಧತ್ತೆ ಇಂದ್ರೋ ನರ್ಯಪಾಂಸಿ ಕರ್ತವೇಽಹನ್ ವೃತ್ರಂ ನಿರಪಾಮೌಬ್ಜದರ್ಣವಂ ॥**

(ಋ. ಸ. ೧-೮೫-೯)

ಎಂಬ ಋಕ್ಕಿನಲ್ಲಿ ತ್ವಷ್ಟೃವು ಬಹಳ ಉತ್ತಮವಾದುದೂ ಸುವರ್ಣದಂತೆ ಥಳಥಳಿಸುವುದೂ ಸಾವಿರ ಅಲಗುಗಳುಳ್ಳದ್ದೂ ಆದ ವಜ್ರಾಯುಧವನ್ನು ನಿರ್ಮಿಸಿ ಇಂದ್ರನಿಗೆ ಕೊಟ್ಟನೆಂದೂ ಅದರಿಂದ ಇಂದ್ರನು ವೃತ್ರನನ್ನು ಸಂಹಾರಮಾಡಿದನೆಂದೂ ಹೇಳಿದೆ.

**ತ್ವಷ್ಟಾ ಮಾಯಾ ವೇದಪಸಾಮಪಸ್ತಮೋ ಬಿಭ್ರತ್ಪಾತ್ರಾ ದೇವಪಾನಾನಿ ಶಂತಮಾ ।**
**ಶಿಶೀತೇ ನೂನಂ ಪರಶುಂ ಸ್ವಾಯಸಂ ಯೇನ ವೃಶ್ಚಾದೇತಶೋ ಬ್ರಹ್ಮಣಸ್ಪತಿಃ ॥**

(ಋ. ಸಂ. ೧೦-೫೩-೯)

ಎಂಬ ಋಕ್ಕಿನಲ್ಲಿ ತ್ವಷ್ಟೃವು ಬಹಳಬುದ್ಧಿವಂತನಾದ ಕೆಲಸಗಾರನಾದ್ದರಿಂದ ದೇವತೆಗಳಿಗೆ ಸೋಮಪಾನಮಾಡುವುದಕ್ಕಾಗಿ ಪಾನಪಾತ್ರೆಗಳನ್ನು ಮಾಡಿರುವುದಲ್ಲದೆ ಬ್ರಹ್ಮಣಸ್ಪತಿಯ ಉಕ್ಕಿನ ಕೊಡಲಿಯನ್ನು ಹರಿತವನ್ನಾಗಿ ಮಾಡಿ

ಕೊಟ್ಟನೆಂಬ ವರ್ಣನೆ ಇದೆ. ತ್ವಷ್ಟೃವಿನ ಸಂಬಂಧವಾದ ವಿಷಯಗಳು ಬಹಳವಾಗಿರುವುದರಿಂದ ಮುಂದೆ ವಿಸ್ತಾರ ವಾಗಿ ವಿವರಿಸಲಾಗುವುದು.

**ಸೂರಿಭಿಃ–ಸೂರಿಸ್ತವ ಸ್ತೋತಾ । ಸ್ತೋತೃವೆಂದರ್ಥ. ರೇಭಃ, ಜರಿತಾ, ಕಾರುಃ** ಇತ್ಯಾದಿ ೧೩ ಸ್ತೋತೃ ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೯) **ಸೂರಯಃ** ಎಂದರೆ ಸ್ತುತಿಕಾರರು, ಸ್ತೋತ್ರವನ್ನು ಪಠಿಸತಕ್ಕ ಭಕ್ತರು ಎಂದರ್ಥ. ಪ್ರಾಜ್ಞರು, ವಿವೇಕಿಗಳು, ಮೇಧಾವಿಗಳು ಎನ್ನುವ ಅರ್ಥವನ್ನು ಕೊಡತಕ್ಕ ಸಂದರ್ಭಗಳಲ್ಲಿಯೂ **ಸೂರಿ** ಶಬ್ದವನ್ನು ಅನೇಕಕಡೆ ಉಪಯೋಗಿಸಿದೆ. ದೇವತೆಗಳ ತತ್ತ್ವಸ್ವರೂಪಗಳನ್ನೂ, ವಿಶ್ವದ ರಹಸ್ಯತತ್ತ್ವಗಳನ್ನೂ ಗ್ರಹಿಸುವ ಅಲೌಕಿಕವಾದ ಚಾಕ್ಷುಷವೂ ಮಾನಸಿಕವೂ ಆದ ದರ್ಶನಶಕ್ತಿಯನ್ನು ಪಡೆದಿರುವ ಋಷಿಗಳ ಪರವಾಗಿ ಉಪಯೋಗಿಸಿದಾಗ ಈ ವಿಶೇಷಣವು ಒಂದು ವಿಶೇಷಾರ್ಥವನ್ನು ಕೊಡುತ್ತದೆ.

**ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಂ ॥**

(ಋ. ಸಂ. ೧-೨೨-೨೦)

ಇತ್ಯಾದಿ ಸನ್ನಿವೇಶಗಳಲ್ಲಿ ಕೇವಲ ಸ್ತೋತ್ರಮಾಡತಕ್ಕವರೆಂದು ಮಾತ್ರವಾಗದೆ ಋಷಿಗಳ ಅಸಾಧಾರಣವಾದ ದರ್ಶನ ಶಕ್ತಿಯನ್ನೂ ಸೂಚಿಸುತ್ತದೆ. ಮತ್ತು ಋಷಿಗಳ ಪರವಾಗಿ ಮಾತ್ರವಲ್ಲದೇ ಇಂದ್ರಾದೇವತೆಗಳಿಗಳಿಗೂ ವಿಶೇಷಣ ವಾಗಿಯೂ ಉಪಯೋಗಿಸಲ್ಪಟ್ಟಿದೆ.

**ಮಹಿಷ್ಠಮುಚ್ಥೋಕ್ತಿಭಿರ್ಮತೀನಾಂ ಸುವೃಕ್ತಿಭಿಃ ಸೂರಿಂ ವಾವೃಧಧ್ಯೈ ॥**

(ಋ. ಸಂ. ೧-೬೩-೩)

ಇತ್ಯಾದಿ ಋಕ್ಕುಗಳಲ್ಲಿ ವಿಪಶ್ಚಿತಮಿಂದ್ರಂ ಎಂದು ಇಂದ್ರಾದಿದೇವತೆಗಳ ಪ್ರಾಜ್ಞತ್ವವನ್ನು ತಿಳಿಸುತ್ತದೆ. ಇದಲ್ಲದೇ, ಪ್ರಭು, ಪ್ರೇರಕ, ಸನ್ಮಾರ್ಗಪ್ರವರ್ತಕ ಎಂಬ ಅರ್ಥವನ್ನೂ ಸೂಚಿಸುವಾಗಲೂ **ಸೂರಿಶಬ್ದದ** ಪ್ರಯೋಗವಿದೆ. ಉದಾಹರಣೆಗೆ

**ಜನೋ ಯಃ ಪಜ್ರೇಭ್ಯೋ ವಾಜಿನೀವಾನಶ್ವಾವತೋ ರಥಿನೋ ಮಹ್ಯಂ ಸೂರಿಃ ।**

(ಋ. ಸಂ. ೧-೧೨೨-೮)

**ಅಸದ್ಯಥಾ ಜರಿತ್ರ ಉತ ಸೂರಿರಿಂದ್ರೋ ರಾಯೋ ವಿಶ್ವವಾರಸ್ಯ ದಾತಾ ।**

(ಋ ಸಂ. ೬-೨೩-೧೦)

**ಮುಹ್ಯಂತ್ವನ್ಯೇ ಅಭಿತೋ ಜನಾಸ ಇಹಾಸ್ಮಾಕಂ ಮಘವಾ ಸೂರಿರಸ್ತು ॥**

(ಋ. ಸಂ. ೧೦-೮೧-೬)

ಎಂಬಿವೇ ಮುಂತಾದ ಸನ್ನಿವೇಶಗಳಲ್ಲಿ ಪ್ರಭುಗಳೂ, ಸನ್ಮಾರ್ಗಪ್ರವರ್ತಕರೂ ಆದ ದೇವತೆಗಳನ್ನು ಕುರಿತು ಈ ವಿಶೇಷಣವು ಇಂದ್ರಾದಿಗಳ ಗುಣಗಳನ್ನೂ ವರ್ಣಿಸುತ್ತದೆ.

**ಆದಸ್ಯ ತೇ ಕೃಷ್ಣಾಸೋ ದಕ್ಷಿ ಸೂರಯಃ ಶೂರಸ್ಯೇವ ತ್ವೇಷಥಾದೀಷತೇ ವಯಃ ।**

(ಋ. ಸಂ. ೧-೧೪೧-೮)

ಇತ್ಯಾದಿ ಒಂದೊಂದು ಕಡೆಗಳಲ್ಲಿ ಮಾತ್ರ **ಮಾರ್ಗವೆಂಬ** ಅರ್ಥವಾಗುತ್ತದೆ.

ವ್ಯಾಕರಣಪ್ರಕ್ರಿಯಾ

**ತ್ವೆಷ್ಟಾ**—ತ್ವಕ್ಷೂ ತನೂಕರಣೇ. ಧಾತು. ಕರ್ತರಿಯಲ್ಲಿ ತೃಸ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತ ಸ್ವರ ಬರುತ್ತದೆ. ಪ್ರಥಮಾಏಕವಚನಾಂತರೂಪ.

**ಗಂತು**—ಗಮ್ಲೃ ಗತೌ. ಧಾತು. ಲೋಟ್. ಪ್ರಥಮಪುರುಷ ಏಕವಚನಕ್ಕೆ ಅಂತಾದೇಶ. **ಏರುಃ** ಎಂಬುದರಿಂದ ಉತ್ವ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಧಾತುಮಕಾರಕ್ಕೆ ಅನುಸ್ವಾರ, ಪರಸವರ್ಣ. ತಿಙಂತನಿಘಾತಸ್ವರ ಬರುತ್ತದೆ.

**ಅಚ್ಛ**—**ನಿಪಾತಸ್ಯ ಚ** (ಪಾ. ಸೂ. ೬-೩-೧-೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಸಜೋಷಾಃ**—ಜುಷೀ ಪ್ರೀತಿಸೇವನಯೋಃ ಧಾತು. ಔಣಾದಿಕ ಅಸುನ್ ಪ್ರತ್ಯಯ. ಸಮಾನಂ ಜೋಷಃ ಯಸ್ಯ ಸಃ. **ಸಮಾನಸ್ಯ ಛಂದಸಿ**—ಸೂತ್ರದಿಂದ ಸಮಾನ ಎಂಬುದಕ್ಕೆ ಸಭಾವ. ಪ್ರಥಮಾಏಕವಚನಾಂತರೂಪ.

**ವೃತ್ರಹಾ**—ಹನ ಹಿಂಸಾಗತ್ಯೋಃ. ಧಾತು. **ಬ್ರಹ್ಮಭ್ರೂಣ**—(ಪಾ. ಸೂ. ೩-೨-೮೭) ಎಂಬುದರಿಂದ ವೃತ್ರಶಬ್ದ ಉಪಪದವಾಗಿರುವಾಗ ಕ್ವಿಪ್. ವೃತ್ರಂ ಹತವಾನ್ ವೃತ್ರಹಾ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿ-ಸ್ವರ ಬರುತ್ತದೆ.

**ಚರ್ಷಣಿಪ್ರಾಃ**—ಪ್ರಾ ಪೂರಣೇ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್‌ಪ್ರತ್ಯಯ. ಆಕಾರಾಂತಶಬ್ದ ವಾಗುತ್ತದೆ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ನರಾಮ್**—ನೃ ನಯೇ. ಧಾತು. ಕ್ವಿಪ್ ಪ್ರತ್ಯಯ. ಷಷ್ಠೀಬಹುವಚನಾಂತರೂಪ. **ಸಾವೇಕಾಚಸ್ತೃ-ತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಗಮ್ಯಾಃ**—ಗಮ್ಲೃ ಗತೌ ಧಾತು. ಲಿಙ್. **ವ್ಯತ್ಯಯೋ ಬಹುಲಮ್** ಎಂಬುದರಿಂದ ಪ್ರಥಮಪುರುಷ ಏಕವಚನ ಪ್ರತ್ಯಯಕ್ಕೆ ಮಧ್ಯಮಪುರುಷ ಏಕವಚನಪ್ರತ್ಯಯ ಬರುತ್ತದೆ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಸಿಪಿಗೆ ಯಾಸುಟಾಗಮ. ಸಕಾರಕ್ಕೆ ರುತ್ವವಿಸರ್ಗ. ತಿಙಂತನಿಘಾತಸ್ವರ ಬರುತ್ತದೆ.

---

ಸಂಹಿತಾಪಾಠಃ

**ಉತ ನ ಈಂ ಮತಯೋಽಶ್ವಯೋಗಾಃ ಶಿಶುಂ ನ ಗಾವಸ್ತರುಣಂ ರಿಹಂತಿ ।**

**ತಮೀಂ ಗಿರೋ ಜನಯೋ ನ ಪತ್ನೀಃ ಸುರಭಿಷ್ಟಮಂ ನರಾಂ ನಸಂತ ॥ ೭ ॥**

॥ ಪದಪಾಠಃ ॥

**ಉತ । ನಃ । ಈಂ । ಮತಯಃ । ಅಶ್ವಯೋಗಾಃ । ಶಿಶುಂ । ನ । ಗಾವಃ । ತರುಣಂ । ರಿಹಂತಿ ।**

ತಂ । ಈಂ । ಗಿರಃ । ಜನಯಃ । ನ । ಪತ್ನೀಃ । ಸುರಭಿಃತಮಂ । ನರಾಂ । ನಸಂತೆ ॥ ೭ ॥

ಸಾಯಣಭಾಷ್ಯಂ

ಉತಾಪಿ ಚೇಮೇನಂ ತರುಣಂ ನಿತ್ಯಯುವಾನಮಿಂದ್ರಂ ಮತಯೋಽಸ್ಮದ್ಬುದ್ಧಯೋಽಶ್ವಯೋಗಾ ಅಶ್ವಸಮಾನಪ್ರಾಪ್ತಯೋ ರಿಹಂತಿ । ಆಸ್ವಾದಯಂತಿ । ಸ್ತುವಂತೀತ್ಯರ್ಥಃ । ತತ್ರ ದೃಷ್ಟಾಂತಃ ಗಾವೋ ದೋಗ್ಧ್ರ್ಯೋ ಧೇನವಃ ಶಿಶುಂ ನ ಶಿಶುಮಿವ ವತ್ಸಮಿವ ತಂ ಯಥಾ ಲಿಹಂತಿ ತದ್ವತ್ । ತದೇವಾಹ । ತಮೀಂ ತಮೇವೈನಂ ನರಾಂ ನರಾಣಾಂ ಯಜಮಾನಾನಾಂ ಸುರಭಿಷ್ಟಮಮತಿಶಯೇನ ಸುರಭಿಂ ಜನಯಃ ಫಲಸ್ಯೋತ್ಪಾದಯಿತ್ರ್ಯೋ ಗಿರಃ ಸ್ತುತಯೋ ನಸಂತೆ । ವ್ಯಾಪ್ನುವಂತಿ । ನಸತಿರ್ವ್ಯಾಪ್ತಿಕರ್ಮಾ । ತತ್ರ ದೃಷ್ಟಾಂತಃ । ಜನಯೋ ನೋತ್ಪಾದಯಿತ್ರ್ಯಃ ಪತ್ನೀಃ ಪತ್ನ್ಯಃ ಪತಿಮಿವ ॥

ಪ್ರತಿಪದಾರ್ಥ

**ಉತ**—ಮತ್ತು । **ಈಂ ತರುಣಂ**—ನಿತ್ಯತರುಣನಾದ ಈ ಇಂದ್ರನನ್ನು । **ಅಶ್ವಯೋಗಾಃ**—ಅಶ್ವಗಳಂತೆ ಒಟ್ಟಿಗೆ ಸಂಯೋಜಿತಗಳಾಗಿರುವ । **ನಃ ಮತಯಃ**—ನಮ್ಮ ಬುದ್ಧಿಗಳು । **ಗಾವಃ**—ಕರೆಯುವ ಧೇನುಗಳು । **ಶಿಶುಂ ನ**—ತಮ್ಮ ಕರುಗಳನ್ನು ನೆಕ್ಕುವಂತೆ । **ರಿಹಂತಿ**—ನೆಕ್ಕುತ್ತವೆ. (ಇಂದ್ರನನ್ನು ಅಕ್ಕರೆಯಿಂದ ಸ್ತುತಿಸುತ್ತವೆ.) **ತಂ ಈಂ**—ಅದೇ ಇಂದ್ರನನ್ನೇ । **ನರಾಂ**—ಯಜ್ಞಕರ್ತರಾದ ಮಾನವರ । **ಸುರಭಿಷ್ಟಮಂ**—ಅತ್ಯಂತ ಪರಿಮಳದಿಂದ ಕೂಡಿದ ಫಲವನ್ನು । **ಜನಯಃ**—ಉತ್ಪತ್ತಿಮಾಡುವ । **ಗಿರಃ**—ಸ್ತುತಿವಾಕ್ಕುಗಳು । (**ಜನಯಃ**—ಪುತ್ರೋತ್ಪತ್ತಿಗೆ ಸಾಮರ್ಥ್ಯವನ್ನು ಹೊಂದಿರುವ) । **ಪತ್ನೀಃ ನ**—ಪತ್ನಿಯರು ತಮ್ಮ ಪತಿಗಳನ್ನು ಸೇರಿಕೊಳ್ಳುವಂತೆ । **ನಸಂತೆ**—ವ್ಯಾಪಿಸುತ್ತವೆ.

ಭಾವಾರ್ಥ

ನಿತ್ಯತರುಣನಾದ ಈ ಇಂದ್ರನನ್ನು ಅಶ್ವಗಳಂತೆ ಒಟ್ಟಿಗೆ ಸಂಯೋಜಿತವಾಗಿರುವ ನಮ್ಮ ಬುದ್ಧಿಗಳು ಕರೆಯುವ ಧೇನುಗಳು ತಮ್ಮ ವತ್ಸಗಳನ್ನು ನೆಕ್ಕುವಂತೆ ಅಕ್ಕರೆಯಿಂದ ವ್ಯಾಪಿಸಿ ಸ್ತುತಿಸುತ್ತವೆ. ಅದೇ ಇಂದ್ರನನ್ನೇ ಅತ್ಯಂತಪರಿಮಳದಿಂದ ಕೂಡಿದ ಫಲವನ್ನು ಉತ್ಪತ್ತಿಮಾಡುವ ಮಾನವರ ಸ್ತುತಿವಾಕ್ಕುಗಳು ಪುತ್ರೋತ್ಪತ್ತಿಗೆ ಸಾಮರ್ಥ್ಯವನ್ನು ಹೊಂದಿರುವ ಪತ್ನಿಯರು ತಮ್ಮ ಪತಿಗಳನ್ನು ಸೇರಿಕೊಳ್ಳುವಂತೆ ವ್ಯಾಪಿಸುತ್ತವೆ.

## English Translation

For our minds, yoked together like horses, tend to the ever youthful Indra, as cows to their calves : and the praises of men, (addressed) to him, are generating most fragrant (fruit), as wives bear (children to their husbands).

ವಿಶೇಷವಿಷಯಗಳು

**ಅಶ್ವಯೋಗಾಃ**—ಅಶ್ವಗಳು ರಥಕ್ಕೆ ಯಾವರೀತಿ ಸಂಯೋಜಿತಗಳಾಗಿ ಒಟ್ಟಿಗೆ ಇರುತ್ತವೆಯೋ ಅದರಂತೆ ನಮ್ಮ ಬುದ್ಧಿಗಳು ಇಂದ್ರನಲ್ಲಿ ಆಸಕ್ತಿಯಿಂದ ನೆಲಸಲಿ ಅಥವಾ ಸ್ತುತಿಸಲಿ ಎಂದು ಮುಖ್ಯಾಭಿಪ್ರಾಯವು

**ಗಾವಃ ಶಿಶುಂ ನ ರಿಹಂತಿ**—ಹಾಲು ಕರೆಯುವ ಹಸುಗಳು ತಮ್ಮ ಕರುಗಳನ್ನು ಪ್ರೀತಿಯಿಂದ ಯಾವ ರೀತಿ ನೆಕ್ಕುತ್ತವೆಯೋ ಅದೇ ರೀತಿ ನಮ್ಮ ಬುದ್ಧಿಗಳು ಇಂದ್ರನನ್ನು ಸೇವಿಸಲಿ ಎಂದು ದೃಷ್ಟಾಂತವನ್ನು ಹೇಳಿದೆ.

**ತರುಣಂ—ನಿತ್ಯಯುವಾನಮಿಂದ್ರಂ** । ಯಾವಾಗಲೂ ಯುವಕನಂತಿರುವ ಅಥವಾ ನಿತ್ಯತರುಣನಾದ ಇಂದ್ರನನ್ನು. ಇಂದ್ರನು ಯುವಕನೆಂಬ ವಿಚಾರದಲ್ಲಿ—

**ಪುರಾಂ ಭಿಂದುರ್ಯುವಾ ಕವಿರಮಿತೌಜಾ ಅಜಾಯತ** ।

(ಋ. ಸಂ. ೧-೧೧-೪)

ಇತ್ಯಾದಿಋಕ್ಕುಗಳಲ್ಲಿ ಇಂದ್ರನು ಯುವಕನೂ, ಅತ್ಯಂತ ತೇಜಶ್ಶಾಲಿಯೂ ಆಗಿರುವನೆಂದು ಹೇಳಿದೆ.

**ಈಂ**—**ಕಂ, ಈಂ, ಇತ್, ಉ** ಎಂಬ ಮಿತಾಕ್ಷರ ಶಬ್ದಗಳು ಪಾದಪೂರಣಾರ್ಥವಾಗಿ ಉಪಯೋಗಿಸಲ್ಪಡುವುವು. ಈ ವಿಷಯದಲ್ಲಿ ಯಾಸ್ಕರು—

**ಅಥ ಯೇ ಪ್ರವೃತ್ತೇಽರ್ಥೇಽಮಿತಾಕ್ಷರೇಷು ಗ್ರಂಥೇಷು ವಾಕ್ಯಪೂರಣಾ ಆಗಚ್ಛಂತಿ ಪದಪೂರಣಾಸ್ತೇ ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತಿ** ॥

(ನಿ. ೧-೯)

**ಕಂ, ಈಂ, ಇತ್, ಉ** ಎಂಬ ಶಬ್ದಗಳು ಛಂದೋಬದ್ಧವಲ್ಲದ (ಅಮಿತಾಕ್ಷರ) ವಾಕ್ಯಗಳಲ್ಲಿ ವಾಕ್ಯಪೂರಣಾರ್ಥವಾಗಿಯೂ, ಛಂದೋಬದ್ಧವಾದ ಋಕ್ಕುಗಳಲ್ಲಿ ಅಥವಾ ಮಂತ್ರಗಳಲ್ಲಿ (ಮಿತಾಕ್ಷರ) ಪಾದಪೂರಣಾರ್ಥವಾಗಿಯೂ ಉಪಯೋಗಿಸಲ್ಪಡುವುವು. ಆದ್ದರಿಂದ ಈ ಶಬ್ದಗಳಿಗೆ ನಿರ್ದಿಷ್ಟವಾದ ಯಾವ ಅರ್ಥವೂ ಇರಬೇಕಾದುದಿಲ್ಲ ಎಂದು ವಿವರಿಸಿದ್ದಾರೆ.

ಈ ಋಕ್ಕಿನಲ್ಲಿ ಇಂದ್ರನನ್ನು ಸ್ತುತಿಸಲಾಗಿದೆ.

**ಗಿರಃ**—ವಾಕ್ಯಗಳು ಎಂದರೆ ಸ್ತುತಿರೂಪವಾದ ವಾಕ್ಯಗಳು. ಯಾಸ್ಕರು **ಸ್ತುತಯಃ ಗಿರೋ ಗೃಣಾತೇಃ** (ನಿ. ೧-೧೦) ಎಂದು ಗಿರಃ ಎಂಬ ಶಬ್ದಕ್ಕೆ ನಿರ್ವಚನವನ್ನು ಹೇಳಿ ಗಿರಃ ಎಂದರೆ ಸ್ತುತಿಗಳು ಎಂದರ್ಥವನ್ನು ಹೇಳಿದ್ದಾರೆ.

**ಜನಯಃ — ನೋತ್ಪಾದಯಿತ್ರ್ಯಃ** । ಇನ್ನೂ ಮಕ್ಕಳಾಗದಿರುವ ಆದರೆ ಮಕ್ಕಳನ್ನು ಪಡೆಯುವ ಸಾಮರ್ಥ್ಯವುಳ್ಳ ಎಂದರೆ ಯುವತಿಯರಾದ ಸ್ತ್ರೀಯರೆಂದರ್ಥವು. ಇಂತಹ ಪತ್ನಿಯರು ಯಾವರೀತಿ ತಮ್ಮ ಪತಿಯನ್ನು ಮನೋಭಿಲಾಷೆಯಿಂದ ಸೇರುವರೋ ಅದರಂತೆ ನಮ್ಮ ಸ್ತುತಿಗಳೂ ಇಂದ್ರನನ್ನು ಸೇರಲಿ ಎಂದು ದೃಷ್ಟಾಂತವನ್ನು ಹೇಳಿದೆ.

ವ್ಯಾಕರಣಪ್ರಕ್ರಿಯಾ

**ಅಶ್ವಯೋಗಾಃ**—ಅಶ್ವಸ್ಯ ಯೋಗ ಇವ ಯೋಗಃ ಯಾಸಾಂ ತಾಃ ಅಶ್ವಯೋಗಾಃ. **ಬಹುವ್ರೀಹೌ ಪ್ರಕೃತ್ಯಾ**—ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ತರುಣ**—ತೄ ಪ್ಲವನತರಣಯೋಃ ಧಾತು. **ತ್ರೋರಶ್ಚ ಲೋವಾ** (ಉ. ಸೂ ೪-೩೩೪) ಎಂಬುದರಿಂದ ಉನನ್ ಪ್ರತ್ಯಯ. ಧಾತುವಿಗೆ ಅದನ್ನು ನಿಮಿತ್ತೀಕರಿಸಿ ಗುಣ ರಪರವಾಗಿ ಬಂದಾಗ ವಿಕಲ್ಪವಾಗಿ ರೇಫಕ್ಕೆ

ಲಕಾರಾದೇಶ. ಅಟ್ ಕುಪ್ವಾಙ್—ಸೂತ್ರದಿಂದ ನಕಾರಕ್ಕೆ ಣತ್ವ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ರಿಹಂತಿ—ಲಿಹ ಆಸ್ವಾದನೇ. ಧಾತು. ಅದಾದಿ. ಲಟ್, ಪ್ರಥಮಪುರುಷ ಬಹುವಚನಾಂತರೂಪ. ವ್ಯತ್ಯಯದಿಂದ ಧಾತುರೇಫಕ್ಕೆ ಲಕಾರಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಜನಯಃ—ಜನೀ ಪ್ರಾದುರ್ಭಾವೇ. ಧಾತು. ಸರ್ವಧಾತುಭ್ಯ ಇನ್ ಎಂಬುದರಿಂದ ಇನ್‌ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ-

ಸುರಭಿಷ್ಟಮಮ್—ಅತಿಶಾಯನೇ ತಮಬಿಷ್ಠನೌ ಎಂಬುದರಿಂದ ತಮಪ್‌ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

ನಸಂತ—ಣಸ ಕೌಟಿಲ್ಯೇ. ಧಾತು. ಭ್ವಾದಿ. ಣೋನಃ ಎಂಬುದರಿಂದ ಆದಿಗೆ ನತ್ವ. ಛಂದಸಿ ಲುಙ್-ಲಙ್‌ಲಿಟಃ (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷಬಹುವಚನಾಂತ ರೂಪ ಬಹುಲಂ ಛಂದ—ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಉತ ನ ಈಂ ಮರುತೋ ವೃದ್ಧಸೇನಾಃ ಸ್ಮದ್ರೋದಸೀ ಸಮನಸಃ ಸದಂತು ।
ಪೃಷದಶ್ವಾಸೋಽವನಯೋ ನ ರಥಾ ರಿಶಾದಸೋ ಮಿತ್ರಯುಜೋ ನ ದೇವಾಃ ॥ ೮ ॥

॥ ಪದಪಾಠಃ ॥

ಉತ । ನಃ । ಈಂ । ಮರುತಃ । ವೃದ್ಧಽಸೇನಾಃ । ಸ್ಮತ್ । ರೋದಸೀ ಇತಿ । ಸಽಮನಸಃ । ಸದಂತು । ಪೃಷತ್ಽಅಶ್ವಾಸಃ । ಅವನಯಃ । ನ । ರಥಾಃ । ರಿಶಾದಸಃ । ಮಿತ್ರಽಯುಜಃ । ನ । ದೇವಾಃ ॥ ೮ ॥

ಸಾಯಣಭಾಷ್ಯಂ

ಉತಾಪಿ ಚ ನೋಽಸ್ಮದೀಯಮೀಮಿದಾನೀಮೇನಂ ಯಾಗಂ ವಾ ಮರುತಃ ಸ್ಮತ್ ಸಹಾಪಿ ಸದಂತು । ಗಚ್ಛಂತು । ಕುತೋ ದೇಶಾತ್ । ರೋದಸೀ ರೋದಸ್ಯೋರ್ದ್ಯಾವಾಪೃಥಿವ್ಯೋಃ ಸಕಾಶಾತ್ । ಯದ್ವಾ । ರೋದಸ್ಯಾವಪಿ ಗಚ್ಛತಾಂ । ಕೀದೃಶಾಸ್ತೇ ಮರುತಃ । ವೃದ್ಧಸೇನಾಃ ಪ್ರವೃದ್ಧಬಲಾಃ ಸಮನಸಃ ಸಮಾನಮನಸ್ಕಾಃ ಪೃಷದಶ್ವಾಸಃ ಪೃಷದ್ವರ್ಣಾಶ್ವಾಃ । ಪೃಷತ್ಯೋ ಮರುತಾಮಿತಿ ಯಾಸ್ಕಃ । ಅವನಯೋ ನ ಯಥೈವ ನಮನಸ್ವಭಾವಾ ರಥಾ ರಂಹಣಸ್ವಭಾವಾ ರಥವಂತೋ ವಾ ॥ ಮತ್ವರ್ಥೋ ಲುಪ್ಯತೇ ॥

**ಯದ್ವಾ । ಅವನಯೋ ರಕ್ಷಕಾ ರಥಾ ಇವ ಸ್ಥಿತಾಃ । ರಿಶಾದಸಃ । ರಿಶಾಃ ಶತ್ರವಃ । ತೇಷಾಮತ್ತಾರೋ ಮಿತ್ರಯುಜೋ ದೇವಾ ನ ಮೈತ್ರೀಯುಕ್ತಾ ವ್ಯವಹರ್ತಾರ ಋತ್ವಿಜ ಇವ । ಯದ್ವಾ । ಮೈತ್ರೀಯುಕ್ತಾ ಅನ್ಯೇ ದೇವಾ ಯಥಾ ಗಚ್ಛಂತಿ ತದ್ವತ್ ॥**

**ಪ್ರತಿಪದಾರ್ಥ**

**ಉತ**—ಮತ್ತು । **ವೃದ್ಧಸೇನಾಃ**—ಪ್ರವೃದ್ಧವಾದ ಬಲವುಳ್ಳವರೂ । **ಸಮನಸಃ**—ಸಮಾನಮನಸ್ಕರೂ । **ಪೃಷದಶ್ವಾಸಃ**—ಚಿತ್ರವರ್ಣದ ಅಶ್ವಗಳುಳ್ಳವರೂ । **ಅವನಯಃ ರಥಾಃ ನ**—ರಕ್ಷಕವಾದ ರಥಗಳಂತಿರುವವರೂ ಅಥವಾ ರಥಗಳನ್ನು ಹೊಂದಿರುವವರೂ । **ರಿಶಾದಸಃ**—ಶತ್ರುಭಕ್ಷಕರೂ ಆದ । **ಮರುತಃ ಸ್ಮತ್**—ಮರುದ್ದೇವತೆಗಳೂ ಸಹ । **ಮಿತ್ರಯುಜಃ**—ಮಿತ್ರರೊಡನೆ ಕೂಡಿದ । **ದೇವಾಃ ನ**—ಇತರ ದೇವತೆಗಳಂತೆ । **ರೋದಸೀ**—ಭೂಮ್ಯಂತರಿಕ್ಷಗಳ ಕಡೆಯಿಂದ । **ನಃ**—ನಮ್ಮ । **ಈಂ**—ಈ ಯಜ್ಞಕ್ಕೆ । **ಸದಂತು**—ಬರಲಿ । (**ರೋದಸೀ ಸದಂತು**— ದ್ಯಾವಾಪೃಥಿವಿಗಳೂ ಬರಲಿ) ।

**ಭಾವಾರ್ಥ**

ಪ್ರವೃದ್ಧವಾದ ಬಲವುಳ್ಳವರೂ, ಸಮಾನವಾದ ಮನಸ್ಸುಳ್ಳವರೂ, ಚಿತ್ರವರ್ಣದ ಅಶ್ವವುಳ್ಳವರೂ, ರಕ್ಷಕವಾದ ರಥಗಳನ್ನು ಹೊಂದಿರುವವರೂ, ಶತ್ರುಭಕ್ಷಕರೂ ಆದ ಮರುದ್ದೇವತೆಗಳೂ ಸಹ ಮಿತ್ರರೊಡನೆ ಕೂಡಿದ ಇತರ ದೇವತೆಗಳಂತೆ ಭೂಮ್ಯಂತರಿಕ್ಷಗಳ ಕಡೆಯಿಂದ ನಮ್ಮ ಈ ಯಜ್ಞಕ್ಕೆ ಬರಲಿ. ಅವರೊಡನೆ ದ್ಯಾವಾಪೃಥಿವಿಗಳೂ ಬರಲಿ.

## English Translation

Or may the Maruts, being of one mind, come from heaven and earth (to the sacrifice); they who are a mighty host, who have parti-coloured steeds, who are like protecting chariots, and who are devourers of foes, may they come like friendly deities.

**। ವಿಶೇಷವಿಷಯಗಳು ।**

ಈ ಋಕ್ಕಿನಲ್ಲಿ ಮರುದ್ದೇವತೆಗಳನ್ನೂ ಮತ್ತು ದ್ಯಾವಾಪೃಥಿವಿಗಳನ್ನೂ ಸ್ತುತಿಸಲಾಗಿದೆ.

**ಪೃಷದಶ್ವಾಸಃ**—ಪೃಷದ್ವರ್ಣಾಶ್ವಾಃ । ನಾನಾವಿಧವಾದ ಬಣ್ಣಗಳುಳ್ಳ ಪೃಷತೀ ಎಂಬ ಅಶ್ವಗಳುಳ್ಳವರು ಎಂದರ್ಥ. ನಾನಾ ದೇವತೆಗಳ ವಾಹನಗಳ ವಿಷಯದಲ್ಲಿ ಯಾಸ್ಕರು—

> **ಹರೀ ಇಂದ್ರಸ್ಯ । ರೋಹಿತೋಽಗ್ನೇಃ । ಹರಿತ ಆದಿತ್ಯಸ್ಯ । ರಾಸಭಾವಶ್ವಿನೋಃ । ಅಜಾಃ ಪೂಷ್ಣಃ । ಪೃಷತ್ಯೋ ಮರುತಾಂ । ಅರುಣ್ಯೋ ಗಾವ ಉಷಸಃ । ಶ್ಯಾವಾಃ ಸವಿತುಃ । ವಿಶ್ವರೂಪಾ ಬೃಹಸ್ಪತೇಃ । ನಿಯುತೋ ವಾಯೋಃ ।**
>
> (ನಿ. ೨-೨೮)

ಎಂದು ಹೇಳಿರುವುದರಿಂದ ಪೃಷತೀ ಎಂಬ ವಿಚಿತ್ರವರ್ಣವುಳ್ಳ ಜಿಂಕೆಗಳು ಮರುದ್ದೇವತೆಗಳ ವಾಹನವೆಂದು ಪ್ರಸಿದ್ಧವಾಗಿದೆ.

**ಯೇ ಪೃಷತೀಭಿರ್ಋಷ್ಟಿಭಿಃ ಸಾಕಂ ವಾಶೀಭಿರಂಜಿಭಿಃ । ಅಜಾಯಂತ ಸ್ವಭಾನವಃ ।**

(ಋ. ಸಂ. ೧-೩೭-೨)

**ಉಪೋ ರಥೇಷು ಪೃಷತೀರಯುಗ್ಧ್ವಂ ಪ್ರಷ್ಟಿರ್ವಹತಿ ರೋಹಿತಃ ।**

(ಋ. ಸಂ. ೧-೩೯-೬)

**ಪ್ರಯದ್ರಥೇಷು ಪೃಷತೀರಯುಗ್ಧ್ವಂ ವಾಜೇ ಅದ್ರಿಂ ಮರುತೋ ರಂಹಯಂತಃ ।**

(ಋ ಸಂ. ೧-೮೫-೫)

**ಯದೇಷಾಂ ಪೃಷತೀ ರಥೇ ಪ್ರಷ್ಟಿರ್ವಹತಿ ರೋಹಿತಃ । ಯಾಂತಿ ಶುಭ್ರಾ ರಿಣನ್ನಪಃ ॥**

(ಋ. ಸಂ ೮-೭-೨೮)

ಇತ್ಯಾದಿಋಕ್ಕುಗಳಲ್ಲಿ ಮರುದ್ದೇವತೆಗಳ ರಥಕ್ಕೆ ಪೃಷತೀ ಎಂಬ ಚಿಕ್ಕೆಗಳಿರುವ ಜಿಂಕೆಗಳನ್ನು (Spotted deer) ಹೂಡುವ ವಿಷಯವು ಪ್ರಸ್ತಾಪಮಾಡಿಲ್ಪಟ್ಟಿದೆ.

**ರಿಶಾದಸಃ—ರಿಶಾಃ ಶತ್ರವಃ । ತೇಷಾಮತ್ತಾರೋ ಮರುತಃ ।**

ರಿಶಃ ಎಂದರೆ ಶತ್ರುಗಳು ಅವರನ್ನು ಭಕ್ಷಿಸುವವರು ಎಂದರೆ ಧ್ವಂಸಮಾಡಿ ನಾಶಮಾಡುವವರು, ಶತ್ರುನಾಶಕರು ಎಂದರ್ಥವು. ರಿಶಾದಸಃ ಎಂಬ ಶಬ್ದವು ಶತ್ರುನಾಶಕರು ಎಂಬರ್ಥದಲ್ಲಿ ಅನೇಕ ದೇವತೆಗಳ ಪರವಾಗಿ ಉಪಯೋಗಿಸಲ್ಪಟ್ಟಿದೆ.

### ವ್ಯಾಕರಣಪ್ರಕ್ರಿಯಾ

ವೃದ್ಧಸೇನಾಃ—ವೃದ್ಧಾ ಸೇನಾ ಯೇಷಾಂ ತೇ. ವೃದ್ಧಸೇನಾಃ **ಬಹುವ್ರೀಹೌಪ್ರಕೃತ್ಯಾ**—ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

ಸಮನಸಃ—ಸಮಾನಂ ಮನಃ ಯೇಷಾಂ ತೇ ಸಮನಸಃ **ಸಮಾನಸ್ಯಛಂದಸ್ಯಮೂರ್ಧ**—ಸೂತ್ರದಿಂದ ಸಮಾನ ಎಂಬುದಕ್ಕೆ ಸಭಾವ. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

ಸದಂತು—ಷದ್ಲೃ ವಿಶರಣಗತ್ಯವಸಾದನೇಷು. ಧಾತು. **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ತ್ವ. **ಲೋಟ್.** ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ. **ಏರುಃ** ಎಂಬುದರಿಂದ ಉತ್ವ. **ಬಹುಲಂಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಆದುದರಿಂದ ಧಾತುವಿಗೆ ಸೀದಾದೇಶ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

ಪೃಷದಶ್ವಾಸಃ—**ಆಜ್ಜಸೇರಸುಕ್** (ಪಾ. ಸೂ ೭-೧-೫೦) ಎಂಬುದರಿಂದ ಆದಕ್ಕೆ ಅಸುಕಾಗಮ.

ಅವನಯಃ—ಅವ ರಕ್ಷಣೇ. ಧಾತು. **ಅರ್ತಿಸೃಧೃಧಮ್ಯ**—(ಉ. ಸೂ. ೨-೫೪) ಎಂಬುದರಿಂದ ಅನಿ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ರಥಾಃ—ಅದು ಉಳ್ಳದ್ದು ಎಂಬ ಅರ್ಥದಲ್ಲಿ ಮತುಪ್ ಬಂದಾಗ ಛಾಂದಸವಾಗಿ ಮತುಪಿಗೆ ಲುಕ್ ಬರುತ್ತದೆ.

ರಿಶಾದಸಃ—ರಿಶಾನ್ ಅದಂತಿ ಇತಿ ರಿಶಾದಸಃ ಅದ . ಭಕ್ಷಣೇ ಧಾತು **ಸರ್ವಧಾತುಭ್ಯೋಽಸುನ್** (ಉ. ಸೂ ೪-೬೨೮) ಎಂಬುದರಿಂದ ಅಸುನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ.

ಮಿತ್ರಯುಜಃ—ಯುಜಿರ್ ಯೋಗೇ. ಧಾತು. ಕ್ವಿಪ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಬಹುವಚನಾಂತರೂಪ.

---

ಸಂಹಿತಾಪಾಠಃ

ಪ್ರ ನು ಯದೇಷಾಂ ಮಹಿನಾ ಚಿಕಿತ್ರೇ ಪ್ರ ಯುಂಜತೇ ಪ್ರಯುಜಸ್ತೇ ಸುವೃಕ್ತಿ ।
ಅಧ ಯದೇಷಾಂ ಸುದಿನೇ ನ ಶರುರ್ವಿಶ್ವಮೇರಿಣಂ ಪ್ರುಷಾಯಂತ ಸೇನಾಃ ॥ ೯ ॥

ಪದಪಾಠಃ

ಪ್ರ । ನು । ಯತ್ । ಏಷಾಂ । ಮಹಿನಾ । ಚಿಕಿತ್ರೇ । ಪ್ರ । ಯುಂಜತೇ । ಪ್ರಽಯುಜಃ । ತೇ । ಸುಽವೃಕ್ತಿ । ಅಧ । ಯತ್ । ಏಷಾಂ । ಸುಽದಿನೇ । ನ । ಶರುಃ । ವಿಶ್ವಂ । ಆ । ಇರಿಣಂ । ಪ್ರುಷಾಯಂತ । ಸೇನಾಃ ॥ ೯ ॥

ಸಾಯಣಭಾಷ್ಯಂ

ಏಷಾಂ ಮರುತಾಂ ಮಹಿನಾ ಮಹಿಮಾ ವೃಷ್ಟಿಲಕ್ಷಣೋ ಯದ್ಯಸ್ಮಾತ್ಪ್ರ ಚಿಕಿತ್ರೇ ಪ್ರಜ್ಞಾಯತೇ । ಯದ್ವಾ । ಏಷಾಂ ಮಹತ್ತ್ವೇನ ಯುಕ್ತಾ ನರಾಶ್ಚಿಕಿತ್ರೇ ಜಾನಂತ್ಯನುಷ್ಠೇಯಂ ! ನ್ವಿತಿ ಪೂರಣಃ । ತತಸ್ತೇ ಜ್ಞಾತಾರಃ ಸುವೃಕ್ತಿ ॥ ಸುಪೋ ಲುಕ್ ॥ ಸುಷ್ಟುತೀನಾಂ ಪ್ರಯುಜಃ ಪ್ರಯೋಗಾನ್ಪ್ರ ಯುಂಜತೇ । ಅಧಾಥ ಪ್ರಯೋಗಾನಂತರಂ ಯದ್ಯಸ್ಮಾದೇಷಾಂ ಸೇನಾ ವೃಷ್ಟ್ಯುತ್ಪಾದಕಾ ವಿಶ್ವಂ ಸರ್ವಂ ಭುವನಮಿರಿಣಮೂಷರಪ್ರದೇಶಂ ಯಥಾ ತಥಾ ಸರ್ವತಃ ಪ್ರುಷಾಯಂತ ಉತ್ಪಾದಯಂತಿ । ತತ್ರ ದೃಷ್ಟಾಂತಃ । ಸುದಿನೇ ಮೇಘಾವರಣಾದಿರಹಿತೇ ದಿನೇ ಶರುರಂಧಕಾರಹಿಂಸಕಃ ಪ್ರಕಾಶ ಇವ । ಸ ಯಥಾ ಸರ್ವಮಾವೃಣೋತಿ ತಥಾ ಮರುತ್ಸೇನಾ ವೃಷ್ಟ್ಯಾ ಸರ್ವಮೂಷರಂ ಕರೋತಿ ! ಯದ್ವಾ । ಮರುನ್ಮಹಿಮಾ ವೃಷ್ಟಿರ್ಭವತಿ । ತದಾ ಸಸ್ಯಾದಿಸಮೃದ್ಧ್ಯಾ ಸತ್ಕಾಂ ಪ್ರಯೋಗಂ ಕುರ್ವಂತಿ । ಯದಾ ಯಜಂತಿ ತದಾ ಮರುತ್ಸೇನಾಃ ಸರ್ವಾಂ ಮಹೀಮುಂದಂತೀತ್ಯೇವಂ ಮಹಾನುಭಾವಾ ಮರುತ ಇತಿ ತೇಷಾಂ ಸ್ತುತಿಃ ।

॥ ಪ್ರತಿಪದಾರ್ಥ ॥

ಅಧ—ಅನಂತರ । ಸುದಿನೇ—ಮೇಘಾವರಣದಿಂದ ರಹಿತವಾದ ಸುದಿನಗಳಲ್ಲಿ । ಶರುಃ ನ—ಪ್ರಕಾಶವು ಸರ್ವತ್ರ ವ್ಯಾಪಿಸುವಂತೆ । ಯತ್—ಯಾವ ಕಾರಣದಿಂದ । ಏಷಾಂ—ಈ ಮರುದ್ದೇವತೆಗಳ । ಸೇನಾಃ—

ವೃಷ್ಟ್ಯುತ್ಪಾದಕವಾದ ಬಲಗಳು । **ಇರಿಣಂ**—ಊಷರಪ್ರದೇಶವನ್ನು ಉದಕಸಿಕ್ತವಾಗಿ ಮಾಡುವಂತೆ । **ವಿಶ್ವಂ**—ಸಕಲ ಲೋಕವನ್ನೂ । ಆ **ಪ್ರುಷಾಯಂತೆ**—ಉದಕದಿಂದ ತುಂಬುತ್ತವೆಯೋ, (ಮತ್ತು) । **ಯತ್**—ಯಾವ ಕಾರಣದಿಂದ । **ಏಷಾಂ**—ಈ ಮರುದ್ದೇವತೆಗಳ । **ಮಹಿನಾ**—ವೃಷ್ಟಿರೂಪವಾದ ಮಹಿಮೆಯು । **ಪ್ರ ಚಿಕಿತ್ರೇ**—ಚೆನ್ನಾಗಿ ಜ್ಞಾತವಾಗುತ್ತದೆಯೋ । [ ಅಥವಾ **ಯತ್**—ಯಾವ ಕಾರಣದಿಂದ । **ಏಷಾಂ**—ಈ ಮರುದ್ದೇವತೆಗಳ **ಮಹಿನಾ**—ಮಾಹಾತ್ಮ್ಯದಿಂದ । **ಪ್ರ ಚಿಕಿತ್ರೇ ನು**—ಅನುಷ್ಠೇಯವಾದ ಕರ್ಮಗಳು ಚೆನ್ನಾಗಿಯೇ ಜ್ಞಾತವಾಗುತ್ತವೆಯೋ ಆದುದರಿಂದ । ] **ತೇ**—ಜ್ಞಾತೃಗಳಾದ ಯಜಮಾನರು । **ಸುವೃಕ್ತಿ**—ಶ್ರೇಷ್ಠವಾದ ಸ್ತುತಿಗಳಿಂದ ಕೂಡಿದ **ಪ್ರಯುಜಾಂ**—ಆಯಾ ಕರ್ಮಗಳನ್ನು । **ಪ್ರ ಯುಂಜತೇ**—ಪ್ರಯೋಗಿಸುತ್ತಾರೆ (ಆಚರಿಸುತ್ತಾರೆ).

**ಭಾವಾರ್ಥ**

ಮೇಘಾವರಣದಿಂದ ರಹಿತವಾದ ಸುದಿನಗಳಲ್ಲಿ ಪ್ರಕಾಶವು ಸರ್ವತ್ರ ವ್ಯಾಪಿಸುವಂತೆ ಈ ಮರುದ್ದೇವತೆಗಳ ವೃಷ್ಟ್ಯುತ್ಪಾದಕವಾದ ಬಲಗಳು ಊಷರಪ್ರದೇಶವನ್ನೂ ಉದಕಸಿಕ್ತವಾಗಿ ಮಾಡುವ ಹಾಗೆ, ಸಕಲಲೋಕವನ್ನೂ ಉದಕದಿಂದ ತುಂಬುತ್ತಾರೆ. ಮತ್ತು ಇದರಿಂದ ಇವರ ವೃಷ್ಟಿರೂಪದ ಮಹಿಮೆಯು ಚೆನ್ನಾಗಿ ಜ್ಞಾತವಾಗುತ್ತದೆ. ಈ ಕಾರಣದಿಂದ ಯಜ್ಞಕರ್ತರು ತಮ್ಮ ಕರ್ತವ್ಯಗಳನ್ನು ಚೆನ್ನಾಗಿ ಅರಿತವರಾಗಿ ಶ್ರೇಷ್ಠವಾದ ಸ್ತುತಿಗಳಿಂದ ಕೂಡಿದ ಆಯಾ ನಿರ್ದಿಷ್ಟವಾದ ಕರ್ಮಗಳನ್ನು ಆಚರಿಸುತ್ತಾರೆ.

## English Translation

For, verily, their greatness is well known, (as) they diligently discharge their functions ; by which their sport pours rain upon every arid soil, as ligeht spreads (universally) on a fine day.

**ನು**—ನು ಎಂಬ ಶಬ್ದಕ್ಕೆ ಯಾಸ್ಕರ ವಿವರಣೆಯು ಈರೀತಿ ಇದೆ—

**ನು ಇತ್ಯೇಷೋऽನೇಕಕರ್ಮಾ । ಇದಂ ನು ಕರಿಷ್ಯತೀತಿ ಹೇತ್ವಪದೇಶೇ । ಕಥಂ ನು ಕರಿಷ್ಯತೀತ್ಯನುಪೃಷ್ಟೇ । ನನ್ವೇತದಕಾರ್ಷೀದಿತಿ ಚ । ಅಥಾಪ್ಯುಪಮಾರ್ಥೇ ಭವತಿ ।**

(ನಿ ೧-೪)

**ನು** ಎಂಬ ಶಬ್ದವು ಅನೇಕಾರ್ಥಗಳಲ್ಲಿ ಪ್ರಯೋಗಿಸಲ್ಪಡುವುದು. ಮತ್ತು ಕಾರಣವನ್ನು ವಿವರಿಸಿ ಹೇಳುವಾಗಲೂ, ಉಪಮಾರ್ಥದಲ್ಲಿಯೂ ಇದರ ಪ್ರಯೋಗವಿರುವುದೆಂದು ಹೇಳಿ–

**ವೃಕ್ಷಸ್ಯ ನು ತೇ ಪುರುಹೂತ ವಯಾ ವ್ಯೂ ೩ ತಯೋ ರುರುಹುರಿಂದ್ರ ಪೂರ್ವೀಃ ।**

(ಋ ಸಂ. ೬-೨೪-೩)

ಎಂಬ ಋಕ್ಕನ್ನುದಾಹರಿಸಿ ಇದರಲ್ಲಿರುವ ವೃಕ್ಷಸ್ಯ ನು ಎಂಬ ಶಬ್ದಗಳಿಗೆ ವೃಕ್ಷಸ್ಯ ಇವ ವೃಕ್ಷದ ಹಾಗೆ ಎಂದು ಉಪಮಾರ್ಥವಿರುವುದನ್ನು ಸಮರ್ಥನೆ ಮಾಡಿದ್ದಾರೆ.

**ಸುದಿನೇ**—**ಮೇಘಾವರಣಾದಿರಹಿತೇ ದಿನೇ** । ಮೋಡಗಳಿಲ್ಲದೆ ಸ್ವಚ್ಛವಾದ ಸೂರ್ಯಪ್ರಕಾಶದಿಂದ ಕೂಡಿದ ದಿನಕ್ಕೆ ಸುದಿನವೆಂದು ಭಾಷ್ಯಕಾರರು ಹೇಳಿರುವರು. ರೂಢಿಯಲ್ಲಿಯೂ ಇದೇ ರೀತಿ ಇದೆ **ಮೇಘಾಚ್ಛ-**

**ಹ್ನೋಽಹ್ನಿ ದುರ್ದಿನಂ**—ಮೋಡ ಮುಚ್ಚಿಕೊಂಡು ಸೂರ್ಯರಶ್ಮಿಯು ಬೀಳದಿರುವ ದಿನಕ್ಕೆ ದುರ್ದಿನವೆಂದು ಕೋಶದ ವಿವರಣೆ ಇದೆ. ಆದ್ದರಿಂದ ಸುದಿನವೆಂದರೆ ಮೋಡಗಳಿಲ್ಲದೆ ಸೂರ್ಯನ ಪ್ರಕಾಶದಿಂದ ಕೂಡಿರುವ ದಿನವೆಂದರ್ಥವು.

**ಶರುಃ**-**ಶರುಮಾನ್** ಎಂದರೆ **ಹಿಂಸಾವಾನ್** ಹಿಂಸಿಸುವವನು ಎಂದು ಯಾಸ್ಕರು ಹೇಳಿರುವರು (ನಿ. ೫-೧೨) ಪ್ರಕೃತವಾದ ಋಕ್ಕಿನಲ್ಲಿ ಭಾಷ್ಯಕಾರರು **ಅಂಧಕಾರಹಿಂಸಕಃ ಪ್ರಕಾಶಕಃ** ಕತ್ತಲೆಯನ್ನು ಹಿಂಸಿಸುವ ಎಂದರೆ ನಾಶಮಾಡಿ ಪ್ರಕಾಶವನ್ನುಂಟುಮಾಡುವ ಸೂರ್ಯನೆಂದು ಅರ್ಥವಿವರಣೆ ಮಾಡಿರುವರು. ಇಲ್ಲಿ—ಮೇಘಾದಿಗಳಿಲ್ಲದ ದಿನದಲ್ಲಿ ಸೂರ್ಯನು ಕತ್ತಲೆಯನ್ನು ಹೋಗಲಾಡಿಸಿ ತನ್ನ ಬೆಳಕನ್ನು ಎಲ್ಲಾ ಕಡೆಯಲ್ಲಿಯೂ ಪ್ರಸರಿಸುವಂತೆ ಮರುದ್ದೇವತೆಗಳು ಮಳೆಯನ್ನು ಸುರಿಸಿ ಸಮಸ್ತಪ್ರದೇಶವನ್ನೂ, ಊಷರಭೂಮಿಯನ್ನೂ ಸಹ ನೀರಿನಿಂದ ನೆನೆಯಿಸಿ ಸಸ್ಯಾದಿ ಸಮೃದ್ಧಿಗೆ ಅನುಕೂಲವಾಗುವಂತೆ ಮಾಡುತ್ತಾರೆ ಎಂದು ಮರುದ್ದೇವತೆಗಳ ಮಹಿಮೆಯನ್ನು ದೃಷ್ಟಾಂತ ಮೂಲಕ ವರ್ಣಿಸಿದೆ.

**ಇರಿಣಂ—ಊಷರಪ್ರದೇಶಂ** । ಏನೂ ಬೆಳೆಯದ ಕರಲು ಭೂಮಿಯೆಂದು ಭಾಷ್ಯಕಾರರ ವಿವರಣೆಯು. ಈ ವಿಷಯದಲ್ಲಿ ಯಾಸ್ಕರು ತಮ್ಮ ನಿರುಕ್ತದಲ್ಲಿ—

**ಪ್ರಾವೇಪಾ ಮಾ ಬೃಹತೋ ಮಾದಯಂತಿ ಪ್ರವಾತೇಜಾ ಇರಿಣೇ ವರ್ವೃತಾನಾಃ ।**
**ಸೋಮಸ್ಯೇವ ಮೌಜವತಸ್ಯ ಭಕ್ಷೋ ವಿಭೀದಕೋ ಜಾಗೃವಿರ್ಮಹ್ಯಮಚ್ಛಾನ್ ॥**
(ಋ. ಸಂ. ೧೦-೩೪-೧)

ಎಂಬ ಋಕ್ಕನ್ನುದಾಹರಿಸಿ, ಇದಲ್ಲಿರುವ ಇರಿಣೇ ಎಂಬ ಶಬ್ದಕ್ಕೆ ವಿವರಣೆಯನ್ನು ಹೇಳಿದ್ದಾರೆ—

**ಇರಿಣಂ ನಿರ್ಋಣಂ ಋಣಾತೇರಪಾರ್ಣಂ ಭವತಿ । ಅಪರತಾ ಅಸ್ಮಾದೋಷಧಯ ಇತಿ ವಾ ॥**
(ನಿ. ೯-೮)

ಎಂದರೆ- ಇರಿಣ ಅಥವಾ ಅಪಾರ್ಣವೆಂದರೆ ಋಣ ಅಥವಾ ಸಾಲವಿಲ್ಲದಿರುವ ಎಂದೂ, ಅಥವಾ ಈ ಪ್ರದೇಶದಲ್ಲಿ ನೀರಿಲ್ಲದಿರುವುದರಿಂದ (ಅರ್ಣವೆಂದರೆ ಉದಕ, ಅಪಾರ್ಣವೆಂದರೆ ಉದಕವಿಲ್ಲದ ಭೂಮಿ) ಓಷಧಿ ವನಸ್ಪತಿಗಳು ಬೆಳೆಯುವುದಿಲ್ಲ. ಆದ್ದರಿಂದ ಇದಕ್ಕೆ ನೀರಿಲ್ಲದ ಪ್ರದೇಶ ಅಥವಾ ಮರುಭೂಮಿ ಎಂದು ಅರ್ಥವಿವರಣೆಮಾಡಿರುವರು.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೇನೆಂದರೆ ನೀರಿಲ್ಲದಿರುವುದರಿಂದ ಏನೂ ಬೆಳೆಯದ ಮರುಭೂಮಿಯಲ್ಲಿಯೂ ಸಹ ಬಹಳವಾಗಿ ವೃಷ್ಟಿ (ಮಳೆ) ಯನ್ನುಂಟುಮಾಡಿ ಅಲ್ಲಿ ಸಸ್ಯಾದಿಗಳು ಸಮೃದ್ಧವಾಗಿ ಬೆಳೆಯುವಂತೆ ಮಾಡುವುದು ಮರುದ್ದೇವತೆಗಳ ಮಹಿಮೆಗಳಲ್ಲಿ ಒಂದೆಂದು ವರ್ಣಿಸಲಾಗಿದೆ.

**ದಿವಾ ಚಿತ್ತಮಃ ಕೃಣ್ವಂತಿ ಪರ್ಜನ್ಯೇನೋದವಾಹೇನ । ಯತ್ಪೃಥಿವೀಂ ವ್ಯುಂದಂತಿ ॥**
(ಋ. ಸಂ. ೧-೩೮-೯)

ಎಂಬ ಋಕ್ಕಿನಲ್ಲಿ ಈ ಮರುದ್ದೇವತೆಗಳು ಹಗಲನ್ನು ಸಹ ಮೋಡಗಳಿಂದ ಮುಚ್ಚಿ ಕತ್ತಲೆಯಾಗುವಂತೆ ಮಾಡಿ ಮಳೆಯನ್ನು ಸುರಿಸಿ, ಉದಕಪ್ರವಾಹವನ್ನೂ ಹರಿಸಿ, ಭೂಮಿಯನ್ನೆಲ್ಲಾ ನೆನೆಯುವಂತೆ ಮಾಡುತ್ತಾರೆಂದು ಹೇಳಿದೆ.

**ಪಿನ್ವಂತ್ಯಪೋ ಮರುತಃ ಸುದಾನವಃ ಪಯೋ ಘೃತವದ್ವಿದಥೇಷ್ವಾಭುವಃ ।**
(ಋ ಸಂ. ೧-೬೪-೬)

**ಯೇ ದ್ರಪ್ಸಾ ಇವ ರೋದಸೀ ಧಮಂತ್ಯನು ವೃಷ್ಟಿಭಿಃ । ಉತ್ಸಂ ದುಹಂತೋ ಅಕ್ಷಿತಂ ॥**

(ಋ. ಸಂ. ೮-೭-೧೬)

ಇತ್ಯಾದಿಋಕ್ಕುಗಳಲ್ಲಿ ಮರುದ್ದೇವತೆಗಳು ಎರಡು ಲೋಕಗಳಲ್ಲಿಯೂ ಮಳೆಯನ್ನೂ ಸುರಿಸುತ್ತಾ ಬೀಸುತ್ತಾರೆಂದು ಈ ಋಕ್ಕುಗಳಲ್ಲಿಯೂ ಇನ್ನೂ ಅನೇಕ ಋಕ್ಕುಗಳಲ್ಲಿಯೂ ವರ್ಣನೆ ಇದೆ.

॥ ವ್ಯಾಕರಣಪ್ರಕ್ರಿಯಾ ॥

**ಮಹಿನಾ**—ಮಹತ್ ಶಬ್ದ. ಪೃಥ್ವಾದಿಯಲ್ಲಿ ಸೇರಿರುವುದರಿಂದ ಇಮನಿಚ್‌ಪ್ರತ್ಯಯ. **ಟೇಃ** ಎಂಬುದರಿಂದ ಟಿಗೆ (ಅತ್) ಲೋಪ. ಮಹಿಮನ್ ಶಬ್ದವಾಗುತ್ತದೆ. ಇದಕ್ಕೆ ಸು ವಿಭಕ್ತಿಪರವಾದಾಗ **ಸುಪಾಂ ಸುಲುಕ್** ಎಂಬುದರಿಂದ ಆಕಾರಾದೇಶ. ವ್ಯತ್ಯಯದಿಂದ ಭಸಂಜ್ಞಾ ಇರುವುದರಿಂದ ಅನಿನ ಅಕಾರಕ್ಕೆ ಲೋಪ. ಛಾಂದಸವಾಗಿ ಮಕಾರಕ್ಕೆ ಲೋಪ.

**ಚಿಕಿತ್ರೇ**—ಕಿತ ಜ್ಞಾನೇ ಧಾತು. ಛಾಂದಸವಾಗಿ ಕರ್ಮಣಿಯಲ್ಲಿ ಲಿಟ್. ಪ್ರಥಮಪುರುಷ ಬಹುವಚನಕ್ಕೆ **ಲಿಟಸ್ತಝಯೋ**—(ಪಾ. ಸೂ. ೩-೪-೮೧) ಎಂಬುದರಿಂದ ಇರೇಚ್ ಆದೇಶ ಬಂದಾಗ **ಇರಯೋರೇ** (ಪಾ. ಸೂ. ೬-೪-೭೬) ಎಂಬುದರಿಂದ ಅದಕ್ಕೆ ರೇ ಆದೇಶ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಯುಂಜತೇ**—ಯುಜಿರ್ ಯೋಗೇ. ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಸುವೃಕ್ತಿ**—**ಸುಪಾಂ ಸುಲುಕ್**—ಎಂಬುದರಿಂದ ಷಷ್ಠೀ ಬಹುವಚನಕ್ಕೆ ಲುಕ್.

**ಶರುಃ**—ಶ್ರೃ ಹಿಂಸಾಯಾಂ ಧಾತು, **ಶೃಸ್ವೃಸ್ನಿಹಿತ್ರಪಿ**—(ಉ. ಸೂ. ೧-೧೦) ಎಂಬುದರಿಂದ ಉನ್ ಪ್ರತ್ಯಯ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಋಕಾರಕ್ಕೆ ಗುಣ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಇರಿಣಮ್**—ಋ ಗತೌ. ಧಾತು. **ಅರ್ತೇಃಕಿದಿಚ್ಚ** (ಉ. ಸೂ. ೨-೨೦೮) ಎಂಬುದರಿಂದ ಇನನ್ ಪ್ರತ್ಯಯ. ಕಿತ್ವ ವಿಧಾನಮಾಡಿರುವುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಇತ್ವ. ರಪರವಾಗಿ ಬರುತ್ತದೆ **ಅಟ್‌ಕುಪ್ವಾಙ್**—ಸೂತ್ರದಿಂದ ಪ್ರತ್ಯಯ ನಕಾರಕ್ಕೆ ಣತ್ವ. **ಞ್ನಿತ್ಯಾದಿರ್ನಿತ್ಯಮ್** ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪ್ರುಷಾಯಂತ**—ಪ್ರುಷ ಸ್ನೇಹನಸೇಚನಪೂರಣೇಷು. ಧಾತು. ಕ್ರ್ಯಾದಿ ಛಾಂದಸವಾಗಿ ಲಙ್. ಶ್ನಾವಿಕರಣ ಬಂದಾಗ **ಛಂದಸಿಶಾಯಜಪಿ** (ಪಾ. ಸೂ. ೩-೧-೮೪) ಎಂಬುದರಿಂದ ಅದಕ್ಕೆ ಶಾಯಚಾದೇಶ. ಪ್ರತ್ಯಯಕ್ಕೆ ಙಿತ್ವಾದಿದೇಶವಿರುವುದರಿಂದ ಲಘೂಪಧ ಗುಣ ಬರುವುದಿಲ್ಲ. ಪ್ರಥಮಪುರುಷಬಹುವಚನಾಂತರೂಪ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಾಯಚ್ ಚಿತ್ತಾದುದರಿಂದ ಅದಕ್ಕೆ ಅಂತೋದಾತ್ತಸ್ವರ ಬರುತ್ತದೆ. ಛಾಂದಸವಾಗಿ ಅಡಾಗಮ ಬರುವುದಿಲ್ಲ.

———— :o: ————

ಸಂಹಿತಾಪಾಠಃ

ಪ್ರೋ ಅಶ್ವಿನಾವವಸೇ ಕೃಣುಧ್ವಂಸ ಪ್ರ ಪೂಷಣಂ ಸ್ವತವಸೋ ಹಿ ಸಂತಿ ।
ಅದ್ವೇಷೋ ವಿಷ್ಣುರ್ವಾತ ಋಭುಕ್ಷಾ ಅಚ್ಛಾ ಸುಮ್ನಾಯ ವವೃತೀಯ ದೇವಾನ್ ॥ ೧೦ ॥

ಪದಪಾಠಃ

ಪ್ರೋ ಇತಿ । ಅಶ್ವಿನಾ । ಅವಸೇ । ಕೃಣುಧ್ವಂ । ಪ್ರ । ಪೂಷಣಂ । ಸ್ವಽತವಸಃ । ಹಿ । ಸಂತಿ ।
ಅದ್ವೇಷಃ । ವಿಷ್ಣುಃ । ವಾತಃ । ಋಭುಕ್ಷಾಃ । ಅಚ್ಛ । ಸುಮ್ನಾಯ । ವವೃತೀಯ । ದೇವಾನ್ ॥ ೧೦ ॥

ಸಾಯಣಭಾಷ್ಯಂ

ಹೇ ಋತ್ವಿಜಃ ಅಶ್ವಿನಾವೇತನ್ನಾಮಕೌ ದೇವಾವುದ್ದಿಶ್ಯಾವಸೇಽಸ್ಮದ್ರಕ್ಷಣಾಯ ಪ್ರೋ ಕೃಣುಧ್ವಂ ಸ್ತುತಿಂ ಪ್ರಕರ್ಷೇಣ ಕೃಣುಧ್ವಂ । ಪೂಷಣಂ ಪೋಷಕಮೇತನ್ನಾಮಕಂ ದೇವಮುಪ್ಯವಸೇ ಪ್ರಕರ್ಷೇಣ ಸ್ತುತಿಂ ಕೃಣುಧ್ವಂ । ಕಿಂಚ ಯೇ ಸ್ವತವಸಃ ಸ್ವಾಯತ್ತಬಲಾಃ ಸಂತಿ ತಾನಪಿ ಪ್ರ ಕೃಣುಧ್ವಂ । ಕೇ ತೇ । ಅದ್ವೇಷೋ ದ್ವೇಷರಹಿತೋ ವಿಷ್ಣುರ್ವ್ಯಾಪ್ತ ಏತನ್ನಾಮಕೋ ದೇವಃ । ಪ್ರಥಮಮುನಾಹೂತೋಽಪಿ ನ ಕುಪ್ಯತೀತಿ ವಕ್ತುಮದ್ವೇಷ ಇತ್ಯುಕ್ತಂ । ತಥಾ ವಾತಃ ಸರ್ವತ್ರ ಸಂಚಾರೀ ವಾಯುಋರ್ಭುಕ್ಷಾಃ ಪತಿರಿಂದ್ರಶ್ಚ । ಏತಾನಪಿ ಪ್ರ ಕೃಣುಧ್ವಂ । ಅತೋಽಹಂ ಸ್ವಾಯತ್ತಬಲಾನ್ ಸರ್ವಾನಪಿ ದೇವಾನ್ ಸುಮ್ನಾಯ ಸುಖಾಯಾಚ್ಛಾಭಿಮುಖ್ಯೇನ ವವೃತೀಯ । ಸ್ತೋತ್ರೈರಭಿವರ್ತಯೇಯಂ ॥

ಪ್ರತಿಪದಾರ್ಥ

(ಎಲೈ ಋತ್ವಿಕ್ಕುಗಳೇ) ಅಶ್ವಿನಾ—ಅಶ್ವಿನೀದೇವತೆಗಳನ್ನೂ । ಪೂಷಣಂ—ಪೋಷಕನಾದ ಪೂಷದೇವತೆಯನ್ನೂ (ಉದ್ದೇಶಿಸಿ) । ಅವಸೇ—ನಮ್ಮ ರಕ್ಷಣಾರ್ಥವಾಗಿ । ಪ್ರೋ ಕೃಣುಧ್ವಂ—ಪೂರ್ಣವಾಗಿ ಸ್ತುತಿಮಾಡಿರಿ । ಅದ್ವೇಷಃ—ದ್ವೇಷರಹಿತನೂ । ವಿಷ್ಣುಃ—ವ್ಯಾಪಕನೂ ಆದ ವಿಷ್ಣುವೂ । ವಾತಃ—ಸರ್ವತ್ರ ಸಂಚಾರಿಯಾದ ವಾಯುದೇವನೂ । ಋಭುಕ್ಷಾಃ—ಪ್ರಭುವಾದ ಇಂದ್ರನೂ । ಸ್ವತವಸಃ—ಸ್ವಾಯತ್ತಬಲರಾದ ಇತರ ದೇವತೆಗಳೂ । ಸಂತಿ ಹಿ—ಇದ್ದಾರಷ್ಟೇ । (ತಾನಪಿ—ಅವರನ್ನೂ ಉದ್ದೇಶಿಸಿ) । ಪ್ರ (ಕೃಣುಧ್ವಂ)—ಪೂರ್ಣವಾಗಿ ಸ್ತುತಿಸಿ (ನಾನೂ ಕೂಡ) ದೇವಾನ್—ಸಕಲ ದೇವತೆಗಳನ್ನೂ । ಸುಮ್ನಾಯ—ಸುಖಕ್ಕಾಗಿ । ಅಚ್ಛ—ನನ್ನ ಅಭಿಮುಖವಾಗಿರಲು । ವವೃತೀಯ—(ಸ್ತುತಿಗಳಿಂದ) ನನ್ನ ಕಡೆಗೆ ತಿರುಗುವಂತೆ ಮಾಡುತ್ತೇನೆ.

ಭಾವಾರ್ಥ

ಎಲೈ ಋತ್ವಿಕ್ಕುಗಳೇ, ಅಶ್ವಿನೀದೇವತೆಗಳನ್ನೂ, ಪೋಷಕನಾದ ಪೂಷದೇವತೆಯನ್ನೂ ಉದ್ದೇಶಿಸಿ ನಮ್ಮ ರಕ್ಷಣಾರ್ಥವಾಗಿ ಸ್ತುತಿಸಿರಿ. ದ್ವೇಷರಹಿತನೂ, ವ್ಯಾಪಕನೂ ಆದ ವಿಷ್ಣುವನ್ನೂ ಸರ್ವತ್ರ ಸಂಚಾರಿಯಾದ ವಾಯು

ದೇವನನ್ನೂ, ಪ್ರಭುವಾದ ಇಂದ್ರನನ್ನೂ ಮತ್ತು ಸ್ವಾಯತ್ತಬಲರಾದ ಇತರ ದೇವತೆಗಳನ್ನೂ ಸಹ ಸ್ತುತಿಸಿರಿ ನಾನೂ ಸಹ ನನ್ನ ಸುಖವನ್ನು ಪಡೆಯುವುದಕ್ಕಾಗಿ ಸಕಲ ದೇವತೆಗಳೂ ನನ್ನ ಅಭಿಮುಖವಾಗಿಯೇ ಇರುವಂತೆ ಮಾಡಲು ಅವರನ್ನು ಸ್ತುತಿಸುತ್ತೇನೆ.

## English Translation

Propitiate the Ashwins and Pushan, for my protection ; (propitiate) those (deities), who are of independent powers, as Vishnu, devoid of hatred, Vayu, and Ribhukshin, and may I influence the gods to be present for my felicity.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಅಶ್ವಿನೀದೇವತೆಗಳು, ಪೂಷನ್, ವಿಷ್ಣು, ವಾತ, ಇಂದ್ರ ಮೊದಲಾದ ದೇವತೆಗಳನ್ನು ಸ್ತುತಿಸಲಾಗಿದೆ.

**ಋಭುಕ್ಷಾಃ**— ಈ ಪದಕ್ಕೆ ನಿರುಕ್ತಕಾರರೇ ಎರಡರ್ಥವನ್ನು ಹೇಳಿದ್ದಾರೆ. **ಉರು ಕ್ಷಯಣಃ ಇಂದ್ರಃ**— ವಿಸ್ತೃತವಾದ ಅಂತರಿಕ್ಷದಲ್ಲಿ ವಾಸಮಾಡುವವನು ಎಂದು ಇಂದ್ರನಿಗೆ ವಿಶೇಷಣವಾಗಿಯಾಗಲಿ, **ಋಭೂಣಾಂ ರಾಜಾ** ಋಭುಗಳಿಗೆ ಅಥವಾ ಪ್ರಕಾಶಮಾನರಾದ ದೇವತೆಗಳಿಗೆ ರಾಜನೆಂದಾಗಲಿ ಅರ್ಥವಾಗಬಹುದೆಂದು ಹೇಳಿದ್ದಾರೆ. (ನಿ. ೯-೩) ಅಥವಾ ಸಾಯಣರು ವಿವರಿಸಿರುವಂತೆ ಈ ಶಬ್ದವು ಮಹನ್ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) ಮಹಾತ್ಮನಾದ ಇಂದ್ರನೆಂದಾದರೂ ಆಗಬಹುದು.

**ವಾತಃ**— ಈ ಶಬ್ದಕ್ಕೆ ಯಾಸ್ಕರ ನಿರುಕ್ತವು **ವಾತೋ ವಾತೀತಿ ಸತಃ** ಬೀಸುವುದರಿಂದ (ಗಾಳಿಯು) ಈ ದೇವತೆಗೆ ವಾತವೆಂದು ಹೆಸರು (ನಿ. ೧೦-೩೪) ವಾಯು ಮತ್ತು ವಾತ ಎಂಬ ಎರಡು ಶಬ್ದಗಳೂ ವಾಯುದೇವತೆ ಮತ್ತು ಗಾಳಿ ಎಂಬ ಇವೆರಡನ್ನೂ ಸೂಚಿಸುವ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿವೆ. ಆದರೆ ವಾಯುವು ದೇವತೆ, ವಾತವು ಗಾಳಿ, ವಾತದೇವತಾಕವಾಗಿ ಎರಡು ಸೂಕ್ತಗಳೂ (ಋ. ಸಂ. ೧೦-೧೬೮ ಮತ್ತು ೧೦-೧೮೬) ಇತರ ಸೂಕ್ತದಲ್ಲಿ ಕೆಲವು ಭಾಗಗಳೂ ಮತ್ತು ಇಂದ್ರನ ಜತೆಯಲ್ಲಿ ಸುಮಾರು ಹನ್ನೆರಡು ಸೂಕ್ತಗಳೂ ಇವೆ. ವಾಯು ಮತ್ತು ವಾತ ಎಂಬ ಎರಡು ಶಬ್ದಗಳೂ ಒಂದೇ ಋಕ್ಕಿನಲ್ಲಿ ಬರುವುದೂ ಉಂಟು —

**ತೇ ನೋ ರುದ್ರಃ ಸರಸ್ವತೀ ಸಜೋಷಾ ಮೀಳ್ಹುಷ್ಮಂತೋ ವಿಷ್ಣುರ್ಮೃಳಂತು ವಾಯುಃ ।**
**ಋಭುಕ್ಷಾ ವಾಜೋ ದೈವ್ಯೋ ವಿಧಾತಾ ಪರ್ಜನ್ಯಾವಾತಾ ಪಿಪ್ಯತಾಮಿಷಂ ನಃ ॥**

(ಋ. ಸಂ. ೬-೫೦-೧೨)

**ಪ್ರ ನಃ ಪೂಷಾ ಚರಥಂ ವಿಶ್ವದೇವ್ಯೋಽಪಾಂ ನಪಾದವತು ವಾಯುರಿಷ್ಟಯೇ ।**
**ಆತ್ಮಾನಂ ವಸ್ಯೋ ಅಭಿ ವಾತಮರ್ಚತ ತದಶ್ವಿನಾ ಸುಹವಾ ಯಾಮನಿ ಶ್ರುತಂ ॥**

(ಋ. ಸಂ. ೧೦-೯೨-೧೩)

ಎಂಬ ಈ ಎರಡು ಋಕ್ಕುಗಳಲ್ಲಿ ವಾಯು, ವಾತ ಎಂಬೆರಡು ದೇವತೆಗಳೂ ಸ್ತುತರಾಗಿದಾರೆ. ವಾಯು, ವಾತ, ಇವೆರಡರಲ್ಲಿ ವಾಯುವೇ ಇಂದ್ರನ ಜತೆಯಲ್ಲಿ ಸ್ತುತನಾಗುವುದು.

**ಇಂದ್ರವಾಯೂ ಇಮೇ ಸುತಾ ಉಪ ಪ್ರಯೋಭಿರಾ ಗತಂ । ಇಂದವೋ ವಾಮುಶಂತಿ ಹಿ ॥**

(ಋ. ಸಂ. ೧-೨-೪)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರ ಮತ್ತು ವಾಯು ಇಬ್ಬರೂ ಒಟ್ಟಿಗೆ ಸ್ತುತರಾಗಿದಾರೆ.

ವಾತವು ಸಾಧಾರಣವಾಗಿ ಪರ್ಜನ್ಯನೊಡನೆ ಸಂಬಂಧಿಸಿರುವುದು.

**ಪರ್ಜನ್ಯವಾತಾ ವೃಷಭಾ ಪೃಥಿವ್ಯಾಃ ಪುರೀಷಾಣಿ ಜಿನ್ವತಮಪ್ಯಾನಿ ।**

(ಋ. ಸಂ. ೬-೪೯-೬)

ಇತ್ಯಾದಿ ಋಕ್ಕುಗಳಲ್ಲಿ ಪರ್ಜನ್ಯನೂ ವಾತವೂ ಒಟ್ಟಿಗೆ ಸ್ತುತಿಸಲ್ಪಟ್ಟಿದಾರೆ. ಈ ಎರಡಕ್ಕೂ ಉಪಯೋಗಿಸುವ ವಿಶೇಷಣಗಳು ಸಾಧಾರಣವಾಗಿ ಭಿನ್ನವಾದವು ; ವಾತನ ವಿಶೇಷಣಗಳು ವೇಗ ಮತ್ತು ರಭಸವನ್ನೇ ವಿಶೇಷವಾಗಿ ಸೂಚಿಸುತ್ತವೆ.

**ಪೂಷಣಂ-ಪೂಷಾ ಯದ್ರಶ್ಮಿಪೋಷಂ ಪುಷ್ಯತಿ ತತ್ಪೂಷಾ ಭವತಿ ।**

(ನಿ ೧೨-೬)

ರಶ್ಮಿಗಳಿಂದ ಪೋಷಿಸುವವನಾದ್ದರಿಂದ ಈ ದೇವತೆಗೆ ಪೂಷಾ ಎಂಬ ಹೆಸರು ಎಂದು ನಿರುಕ್ತದ ವಚನವಿದೆ. ಶತಪಥ ಬ್ರಾಹ್ಮಣದಲ್ಲಿಯೂ ಸಹ—

**ಇಯಂ ವೈ ಪೂಷಾ ಪೂಷೇಯಂ ಹೀದಂ ಸರ್ವಂ ಪುಷ್ಯತಿ ಯದಿದಂ ಕಿಂಚ ।**

(ಶ. ಬ್ರಾ. ೧೪-೪-೨-೨೫)

ಈ ದೇವತೆಯು ಎಲ್ಲವನ್ನೂ ಪೋಷಿಸುವವನಾದ್ದರಿಂದ ಪೂಷನೆಂದು ಕರೆಯಲ್ಪಡುವನು ಎಂದು ಹೇಳಿದೆ. ಈ ವಿಧವಾದ ಅರ್ಥವು ಪೂಷನು ದ್ವಾದಶಾದಿತ್ಯರಲ್ಲಿ ಒಬ್ಬನು ಎಂಬ ವಿಷಯವನ್ನು ಸಮರ್ಥಿಸುವುದು.

**ಪುಷ್ಯನ್ ಕ್ಷಿತಿಂ ಪೋಷಯತಿ ಪ್ರಣುದನ್ ರಶ್ಮಿಭಿಸ್ತಮಃ ।**
**ತೇನೈನಮಸ್ತೌತ್ಪೂಷೇತಿ ಭರದ್ವಾಜಸ್ತು ಪಂಚಭಿಃ ॥**

(ಬೃ. ದೇ. ೨-೬೩)

ಕತ್ತಲನ್ನು ನಾಶಮಾಡುತ್ತಾ ಪೃಥ್ವಿಯು ವೃದ್ಧಿಯನ್ನು ಹೊಂದುವಂತೆ ಅದನ್ನು ಪೋಷಿಸುವುದರಿಂದ ಪೂಷಾ ಎಂಬ ಹೆಸರು. ಈ ದೇವತೆಯನ್ನು ಭರದ್ವಾಜಋಷಿಯು ಆರನೆಯ ಮಂಡಲದ ೫೩, ೫೪, ೫೫, ೫೬, ೫೮ ಈ ಐದು ಸೂಕ್ತಗಳಲ್ಲಿ ಸ್ತುತಿಸಿದ್ದಾನೆ ಎಂದು ಬೃಹದ್ದೇವತಾವಾಕ್ಯವಿದೆ.

ಈ ದೇವತೆಯ ಹೆಸರು ಋಗ್ವೇದದಲ್ಲಿ ಸುಮಾರು ೧೨೦ ಸ್ಥಳಗಳಲ್ಲಿ ಇವೆ ಈ ದೇವತೆಯನ್ನು ಸ್ತುತಿಸುವ ಎಂಟು ಸೂಕ್ತಗಳಿವೆ. ಅವುಗಳಲ್ಲಿ ಮೊದಲನೆಯ ಮಂಡಲದಲ್ಲಿ ೨ ಸೂಕ್ತಗಳೂ, ಆರನೆಯ ಮಂಡಲದಲ್ಲಿ ೫ ಸೂಕ್ತಗಳೂ ಹತ್ತನೆಯಮಂಡಲದಲ್ಲಿ ೧ ಸೂಕ್ತವೂ ಪೂಷಣನನ್ನು ಪ್ರಶಂಸಿಸುತ್ತವೆ. ಋ. ಸಂ. ೬-೫೭ನೆಯ ಸೂಕ್ತದಲ್ಲಿ ಇಂದ್ರನೊಡನೆಯೂ ಋ. ಸಂ. ೨-೪೦ ರಲ್ಲಿ ಸೋಮನೊಡನೆಯೂ ಸ್ತುತನಾಗಿದ್ದಾನೆ.

ಪೂಷಣನಿಗೆ ಎಲ್ಲಾ ಮಾರ್ಗಗಳೂ ತಿಳಿದಿರುವುದರಿಂದ ಅವನನ್ನು ವೀಥಿಗಳ ರಕ್ಷಕನೆನ್ನುವರು. ದಾರಿಯಲ್ಲಿ (ಅಥವಾ ಪ್ರಯಾಣಕಾಲದಲ್ಲಿ) ಒದಗಬಹುದಾದ ತೊಂದರೆಗಳನ್ನೂ, ತೋಳಗಳನ್ನೂ, ದರೋಡೆಕೋರರನ್ನೂ

ರಸ್ತೆಗಳಿಂದ ಆಚೆಹಾಕು ಎಂದು ಅವನನ್ನು ಬೇಡಿಕೊಳ್ಳುತ್ತಾರೆ. (ಋ. ಸಂ. ೧-೪೨-೧ ರಿಂದ ೩) ಇದೇ ಸಂದರ್ಭದಲ್ಲಿಯೇ ಅವನಿಗೆ ವಿಮುಚೋನಪಾತ್-ವಿವೇಚನೆಯ ಪುತ್ರ ಎಂಬ ಹೆಸರಿದೆ. ಋ ಸಂ. ೬-೫೫-೧ ರಲ್ಲಿಯೂ ಈ ವಿಶೇಷಣವಿದೆ.

**ವಿ ಪಥೋ ವಾಜಸಾತಯೇ ಚಿನುಹಿ ವಿ ಮೃಧೋ ಜಹಿ । ಸಾಧಂತಾಮುಗ್ರ ನೋ ಧಿಯಃ ।**

(ಋ. ಸಂ. ೬-೫೩-೪)

ಎಂಬ ಋಕ್ಕಿನಲ್ಲಿಯೂ ಋ ಸಂ. ೧-೪೨-೭, ೮ ಋಕ್ಕುಗಳಲ್ಲಿಯೂ ಶತ್ರುಗಳನ್ನು ತೊಡೆದುಹಾಕು, ರಸ್ತೆಯನ್ನು ಬೆಳ್ಳಗಿರುವಂತೆ ಮಾಡು ಮತ್ತು ರಸ್ತೆಯು ಒಳ್ಳೆಯ ಮೇವಿರುವ ಸ್ಥಳವನ್ನು ಸೇರಲಿ ಎಂಬ ಪ್ರಾರ್ಥನೆ ಇದೆ. ದಾರಿಯಲ್ಲಿ ಬರಬಹುದಾದ ತೊಂದರೆಯನ್ನು ಪರಿಹರಿಸಿ ದಾರಿಯನ್ನು ಶುಭಪ್ರದವನ್ನಾಗಿ ಮಾಡಲಿ ಎಂದು ಅನೇಕ ಕಡೆಗಳಲ್ಲಿ ಪ್ರಾರ್ಥಿಸಿದೆ. ಋ. ಸಂ. ೬-೪೯-೮ ; ೬-೫೩-೧ ಎಂಬ ಋಕ್ಕುಗಳಲ್ಲಿ ಎಲ್ಲಾ ದಾರಿಗೂ ಅವನೇ ರಕ್ಷಕ, ರಸ್ತೆಯಲ್ಲಿ ಅವನು ದಾರಿತೋರಿಸುವವನು ಎಂದಿದೆ. ಆದ್ದರಿಂದಲೇ ಪ್ರಯಾಣೋನ್ಮುಖನಾದ ಪ್ರತಿಯೊಬ್ಬನೂ ರಸ್ತೆಗಳ ಶಿಲ್ಪಿಯಾದ ಪೂಷಣನಿಗೆ ಋ. ಸಂ. ೬-೫೩ನೆಯ ಸೂಕ್ತವನ್ನುಚ್ಚರಿಸುತ್ತಾ ಪೂಜೆ ಸಲ್ಲಿಸಬೇಕು. ಮತ್ತು ದಾರಿತಪ್ಪಿದವರೆಲ್ಲಾ ಪೂಷಣನನ್ನೇ ಮರೆಹೊಗಬೇಕು ಎಂದು ಆಶ್ವಲಾಯನ ಗೃಹ್ಯ ಸೂತ್ರ ೩-೬-೮ ಮತ್ತು ಸಾಂಖ್ಯಾಯನ ಶ್ರೌತಸೂತ್ರ ೩-೪-೯ ಇತ್ಯಾದಿಸ್ಥಳಗಳಲ್ಲಿ ಹೇಳಿರುವುದು.

ತಪ್ಪಿಸಿಕೊಂಡ ಪ್ರಾಣಿಯನ್ನು ಹುಡುಕುವಂತೆ, ಹುಡುಕಬೇಕೆಂದು, ಪ್ರಾರ್ಥಿತನಾದ ಪೂಷಣನು, ನಷ್ಟನೂ ನಿಗೂಢನೂ ಆಗಿದ್ದ ರಾಜನನ್ನು ಕಂಡುಹಿಡಿದನೆಂದು ಋ. ಸಂ. ೧-೨೩-೧೪. ೧೫ ಮತ್ತು ತೈ. ಸಂ. ೩-೩-೯-೧ ಇತ್ಯಾದಿಸ್ಥಳಗಳಲ್ಲಿ ಹೇಳಿದೆ. ಆದುದರಿಂದಲೇ ಏನು ಕಳೆದು ಹೋದವರೂ ಪೂಷಣನಿಗೆ ಪೂಜೆ ಸಲ್ಲಿಸಬೇಕು. (ಆ. ಗೃ. ಸು. ೩-೭-೯) ಅದೇ ರೀತಿ ದನಕರುಗಳನ್ನು ಹಿಂಬಾಲಿಸಿ ಅವುಗಳನ್ನು ರಕ್ಷಿಸುವುದೂ ಪೂಷಣನ ವಿಶೇಷ ಲಕ್ಷಣ. ಹಳ್ಳದಲ್ಲಿ ಬಿದ್ದು ಗಾಯಗೊಳ್ಳದಂತೆ ಕಾಪಾಡಿ, ಅಪಾಯವಾಗದಂತೆ ಮನೆಗೆ ಹಿಂದಕ್ಕೆ ಅಟ್ಟಿಕೊಂಡು ಬರುತ್ತಾನೆ. ತಪ್ಪಿಸಿಕೊಂಡಿರುವುವುಗಳನ್ನು ಪುನಃ ತರುತ್ತಾನೆ (ಋ. ಸಂ. ೬-೫೪-೭ ಮತ್ತು ೧೦) ಅವನ ಅಂಕುಶವು ದನಕರುಗಳನ್ನು ನೇರವಾಗಿ ಅಟ್ಟುತ್ತದೆ. ಅವನು ಅಶ್ವಗಳನ್ನು ರಕ್ಷಿಸುತ್ತಾನೆ. ಅವನು ದನಕರುಗಳನ್ನು ಸೃಜಿಸುವವನು. (ವ್ಯೆ. ಸಂ. ೪-೩-೭ ; ತೈ. ಬ್ರಾ. ೧-೭-೨-೪) ಇತ್ಯಾದಿವರ್ಣನೆಯು ಋಗ್ವೇದದಲ್ಲಿ ಬಹಳವಾಗಿದೆ. ದನಕರುಗಳು ಮೇಯುವುದಕ್ಕೆ ಹೋಗಿ ತಪ್ಪಿಸಿಕೊಂಡಾಗ ಉಪಯೋಗಿಸಬೇಕಾದ ಪೂಷಣನ ಸ್ತುತಿವಾಕ್ಯಗಳನ್ನು ಸಂಖ್ಯಾಯನ ಗೃಹ್ಯ ಸೂತ್ರದಲ್ಲಿ (ಸಾಂ. ಗೃ. ಸೂ. ೩-೯) ತಿಳಿಸಿದೆ.

ವಿಷ್ಣುಃ— ಬ್ರಾಹ್ಮಣಾದಿಗಳಲ್ಲಿಯೂ, ಪುರಾಣಾದಿಗಳಲ್ಲಿಯೂ ವಿಷ್ಣುವು ಅತಿಮುಖ್ಯ ದೇವತೆಯೆಂದು ಪರಿಗಣಿಸಲ್ಪಟ್ಟಿದ್ದರೂ ಋಗ್ವೇದದಲ್ಲಿ ವಿಷ್ಣುವಿಗೆ ಅಷ್ಟು ಪ್ರಾಮುಖ್ಯತೆ ಇಲ್ಲ. ಐದು ಸೂಕ್ತಗಳು ಮತ್ತು ಒಂದು ಸೂಕ್ತದ ಕೆಲವು ಭಾಗ ಮಾತ್ರ ವಿಷ್ಣುದೇವತಾಕವು. ಇದಲ್ಲದೆ ಅನೇಕಕಡೆ ಇತರ ದೇವತೆಗಳೊಡನೆ, ಮುಖ್ಯವಾಗಿ ಇಂದ್ರನೊಡನೆ ವಿಷ್ಣುವಿನ ಹೆಸರು ಅಲ್ಲಲ್ಲಿ ಸೂಚಿತವಾಗಿದೆ. ವಿಷ್ಣುವಿನ ಮುಖ್ಯ ಪರಾಕ್ರಮವು ಮೂರು ಪದಗಳ ವಿನ್ಯಾಸವೆಂದು ಹೇಳಿದೆ. ಈ ಮೂರು ಪದಕ್ರಮಗಳೂ ಸ್ವರ್ಗ, ಅಂತರಿಕ್ಷ, ಭೂಮಿಗಳಲ್ಲಿ ಇರುವುವು. ಇವಲ್ಲದೆ ವಿಷ್ಣುವಿನ ಪರಮಪದವೆಂಬ ಸ್ಥಾನವು ಅತಿ ಶ್ರೇಷ್ಠವಾದ ಪದವಿಯೆಂದು ಪರಿಗಣಿಸಲ್ಪಟ್ಟಿರುವುದು.

ಋಗ್ವೇದದಲ್ಲಿ ಇತರ ದೇವತೆಗಳಿಗಿಂತ ಇಂದ್ರನೊಡನೆ ವಿಷ್ಣುವಿನ ಸಂಬಂಧವು ವಿಶೇಷವಾಗಿರುವಂತೆ ಕಂಡು ಬರುವುದು. ಇಂದ್ರನು ವೃತ್ರಾಸುರನನ್ನು ಸಂಹಾರಮಾಡುವ ಕಾಲದಲ್ಲಿ ವಿಷ್ಣುವಿನ ಸಹಾಯವನ್ನು ಅಪೇಕ್ಷಿಸುತ್ತಾನೆ. ಯಜುರ್ವೇದದಲ್ಲಿ ವಿಷ್ಣುವಿನ ವಿಷಯವು ನಾನಾ ರೀತಿಯಲ್ಲಿ ವರ್ಣಿತವಾಗಿದೆ. ವಿಷ್ಣುವು ಯಜ್ಞಕ್ಕೂ, ಪರ್ವತಗಳಿಗೂ ಅಧಿಪತಿಯೆಂದೂ, ಯಜ್ಞಸ್ವರೂಪನೆಂದೂ, ದೇವತೆಗಳಿಗೆಲ್ಲಾ ಮುಂದಾಳೆಂದೂ (Leader) ವಿವರಿಸುವ ಅನೇಕ ಮಂತ್ರಗಳಿವೆ. ವಿಷ್ಣುಶಬ್ದಕ್ಕೆ ಯಾಸ್ಕರು ಈ ರೀತಿ ನಿರ್ವಚನವನ್ನು ಹೇಳಿದ್ದಾರೆ.—

**ವಿಷ್ಣುಃ—ಅಥ ಯದ್ವಿಷಿತೋ ಭವತಿ ತದ್ವಿಷ್ಣುರ್ಭವತಿ ವಿಷ್ಣುರ್ವಿಶತೇರ್ವಾ, ವ್ಯಶ್ನೋತೇರ್ವಾ ।**

(ನಿ. ೧೨-೧೮)

ಎಲ್ಲವನ್ನೂ ವ್ಯಾಪಿಸಿರುವುದರಿಂದ, ಅಥವಾ ಎಲ್ಲವನ್ನೂ ಪ್ರವೇಶಿಸಿ ವ್ಯಾಪಿಸುವುದರಿಂದ ಅಥವಾ ರಶ್ಮಿಗಳಿಂದ ಸರ್ವವನ್ನೂ ವ್ಯಾಪಿಸಿರುವವನಾದ್ದರಿಂದ ವಿಷ್ಣುವೆಂದು ಹೆಸರು. ಆದುದರಿಂದ ವಿಷ್ಣುವೆಂದರೆ ಆದಿತ್ಯನೆಂದೂ ಹೇಳಬಹುದು ಎಂದು ವಿಷ್ಣುಶಬ್ದದ ವಿವರಣೆಮಾಡಿರುವರು.

ಋಗ್ವೇದದಲ್ಲಿ ವಿಷ್ಣುವಿನ ಮಹತ್ಕಾರ್ಯವೆಂದರೆ ತ್ರಿವಿಕ್ರಮಣ ಅಥವಾ ಮೂರು ಪಾದಪ್ರಕ್ಷೇಪಣ ಎಂಬ ಕಾರ್ಯವು. ಈ ಮೂರು ವಿಧವಾದ ಪಾದಪ್ರಕ್ಷೇಪಗಳು ಯಾವುವು ? ಎಲ್ಲೆಲ್ಲಿ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಪಾಶ್ಚಾತ್ಯ ಪಂಡಿತರು ಇದಕ್ಕೆ ಸೂರ್ಯನ ಉದಯ, ಉಚ್ಚಸ್ಥನಾಗಿರುವುದು ಮತ್ತು ಅಸ್ತಮಾನ ಎಂಬ ಸೂರ್ಯನ ಮೂರು ಅವಸ್ಥೆಗಳೆಂದರ್ಥಮಾಡಿದ್ದಾರೆ.

[This stepping of Vishnu is emblamatic of the rising, the culminating and setting of the sun.]

[Max Muller. Sacred Books of the East. Vol. XXXII. p. 133]

**ಔರ್ಣವಾಭಾದಿ** ಪ್ರಾಚೀನಪಂಡಿತರೂ ಸಹ ಈ ಅರ್ಥವನ್ನು ಸಮರ್ಥಿಸಿದ್ದಾರೆಂದು ನಿರುಕ್ತವಾಕ್ಯದಿಂದ ತಿಳಿಯುತ್ತದೆ.

**ಸಮಾರೋಹಣೇ ವಿಷ್ಣುಪದೇ ಗಯಶಿರಸೀತ್ಯೌರ್ಣವಾಭಃ ।**

(ನಿ. ೧೨-೧೯)

ಎಂದು ಔರ್ಣವಾಭರ ಮತವನ್ನು ತಿಳಿಸಿದ್ದಾರೆ. ಈ ವಾಕ್ಯಕ್ಕೆ ದುರ್ಗಾಚಾರ್ಯರು **ಸಮಾರೋಹಣೇ—ಉದಯಗಿರಾವುದ್ಯನ್ ಪದಮೇಕಂ ನಿಧತ್ತೇ । ವಿಷ್ಣುಪದೇ ಮಾಧ್ಯಂದಿನೇಽಂತರಿಕ್ಷೇ । ಗಯಶಿರಸಿ—ಅಸ್ತಂಗಿರೌ ।** ಉದಯಾಚಲದಲ್ಲಿ ಸೂರ್ಯೋದಯಕಾಲದಲ್ಲಿ ಉದಯರೂಪದಲ್ಲಿದತಕ್ಕ ಒಂದು ಪಾದವೂ, ಮಧ್ಯಾಹ್ನಕಾಲದಲ್ಲಿ ಅಂತರಿಕ್ಷದಲ್ಲಿ ಉಚ್ಚಸ್ಥವಾಗಿರತಕ್ಕ ಇನ್ನೊಂದು ಪಾದವೂ, ಅಸ್ತಕಾಲದಲ್ಲಿ ಅಸ್ತಾಚಲದಲ್ಲಿದತಕ್ಕ ಮೂರನೆಯ ಪಾದವೂ ಸಹ **ತ್ರೇಧಾ ನಿದಧೇ ಪದಂ** ಎಂಬ ವಾಕ್ಯದಿಂದ ಸೂಚಿತವಾಗುತ್ತದೆಂದು ಔರ್ಣವಾಭರ ಮತವೆಂದು ನಿರುಕ್ತಕಾರರು ತಿಳಿಸಿದ್ದಾರೆ. ಅಲ್ಲದೇ,

**ವಿಷ್ಣುಸ್ತ್ರಿಧಾ ನಿಧತ್ತೇ ಪದಂ ತ್ರೇಧಾಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ ।**

(ನಿ. ೧೨-೧೯)

ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಎಂಬ ಮೂರು ಲೋಕಗಳಲ್ಲೂ ಸಂಚರಿಸುವ ಸೂರ್ಯನ ಮೂರು ಅವಸ್ಥೆಗಳನ್ನು ಈ ಮೂರು ವಿಧವಾದ ಪಾದಪ್ರಕ್ಷೇಪವು ಸೂಚಿಸುತ್ತದೆ ಎಂಬುದು ಶಾಕಪೂಣಿಯ ಮತವೆಂದೂ ತಿಳಿಸಿದೆ. ಇದಕ್ಕೆ ದುರ್ಗಾಚಾರ್ಯರು ಪ್ರಾರ್ಥಿವೋಽಗ್ನಿರ್ಭೂತ್ವಾ ಪೃಥಿವ್ಯಾಂ ಯತ್ಕಿಂಚಿದಸ್ತಿ ತದ್ವಿಕ್ರಮತೇ । ಅಂತರಿಕ್ಷೇ ವಿದ್ಯುದಾತ್ಮನಾ ದಿವಿ ಸೂರ್ಯಾತ್ಮನಾ । ಅಗ್ನಿ, ವಾಯು ಮತ್ತು ಸೂರ್ಯ ಈ ರೂಪಗಳಿಂದ ಮೂರುಲೋಕಗಳನ್ನೂ ಆಕ್ರಮಿಸುತ್ತಾನೆಂದರ್ಥಮಾಡಿದ್ದಾರೆ. ಇದೇ ಅರ್ಥವನ್ನು ಸಮರ್ಥಿಸುವ,

> ವಿಷ್ಣುಮುಖಾ ವೈ ದೇವಾಶ್ಛಂದೋಭಿರಿಮಾಂಲ್ಲೋಕಾನನಪಜಯ್ಯಮಭ್ಯಜಯನ್ ಯದ್ವಿಷ್ಣುಕ್ರಮಾನ್ಕ್ರಮತೇ ವಿಷ್ಣುರೇವ ಭೂತ್ವಾ ಯಜಮಾನಶ್ಛಂದೋಭಿರಿಮಾಂಲ್ಲೋಕಾನನಪಜಯ್ಯಮಭಿಜಯತಿ ವಿಷ್ಣೋಃ ಕ್ರಮೋಽಸ್ಯಭಿಮಾತಿಹೇತ್ಯಾಹ ಗಾಯತ್ರೀ ವೈ ಪೃಥಿವೀ ತ್ರೈಷ್ಟುಭಮಂತರಿಕ್ಷಂ ಜಾಗತೀ ದ್ಯೌರಾನುಷ್ಟುಭೀರ್ದಿಶಶ್ಛಂದೋಭಿರೇವೇಮಾಂಲ್ಲೋಕಾನ್ ಯಥಾಪೂರ್ವಮಭಿಜಯತಿ ।
>
> (ತೈ. ಸಂ. ೧-೭-೫-೪)

> ಅನ್ಯಾ ದೇವತಾಸೀತ್ಸೋಽಬ್ರವೀದ್ವಿಷ್ಣವೇ ಹೀದಮಾ ಹರಿಷ್ಯಾಮೋ ಯೇನಾಯಮಿದಮಿತಿ ಸ ವಿಷ್ಣುಸ್ತ್ರೇಧಾತ್ಮಾನಂ ವಿ ನ್ಯಧತ್ತ ಪೃಥಿವ್ಯಾಂ ತೃತೀಯಮಂತರಿಕ್ಷೇ ತೃತೀಯಂ ದಿವಿ ತೃತೀಯಮಭಿಪರ್ಯಾವರ್ತಾದ್ಧ್ಯಬಿಭೇದ್ಯತ್ಪೃಥಿವ್ಯಾಂ ತೃತೀಯಮಾಸೀತ್ತೇನೇಂದ್ರೋ ವಜ್ರಮುದಯಚ್ಛದ್ವಿಷ್ಣ್ವನುಸ್ಥಿತಸ್ಸೋಽಬ್ರವೀನ್ಮಾ ಮೇ ಪ್ರ ಹಾರಸ್ತಿ ವಾ ಇದಂ ॥
>
> (ತೈ. ಸಂ. ೨-೪-೧೨-೩)

ಇತ್ಯಾದಿ ಸಂಹಿತಾವಾಕ್ಯಗಳಲ್ಲಿಯೂ,

> ಯದ್ವೇವ ವಿಷ್ಣುಕ್ರಮಾನ್ಕ್ರಮತೇ। ಯಜ್ಞೋ ವೈ ವಿಷ್ಣುಃ ಸ ದೇವೇಭ್ಯ ಇಮಾಂ ವಿಕ್ರಾಂತಿಂ ವಿಚಕ್ರಮೇ ಯೈಷಾಮಿಯಂ ವಿಕ್ರಾಂತಿರಿದಮೇವ ಪ್ರಥಮೇನ ಪದೇನ ಪಸ್ಪಾರಾಥೇದಮಂತರಿಕ್ಷಂ ದ್ವಿತೀಯೇನ ದಿವಮುತ್ತಮೇನೈತಾಮ್ವೇವೈಷ ಏತಸ್ಮೈ ವಿಷ್ಣುರ್ಯಜ್ಞಂ ವಿಕ್ರಾಂತಿಂ ವಿಕ್ರಮತೇ ತಸ್ಮಾದ್ವಿಷ್ಣುಕ್ರಮಾನ್ಕ್ರಮತೇ ।
>
> (ಶ ಬ್ರಾ. ೧-೯-೩-೯)

> ಯದ್ವೇವ ವಿಷ್ಣುಕ್ರಮವಾತ್ಸಪ್ರೇ ಭವತಃ। ವಿಷ್ಣುಕ್ರಮೈರ್ವೈ ಪ್ರಜಾಪತಿರಿಮಂ ಲೋಕಮಸೃಜತ ವಾತ್ಸಪ್ರೇಣಾಗ್ನಿಂ ವಿಷ್ಣುಕ್ರಮೈರ್ವೈ ಪ್ರಜಾಪತಿರಂತರಿಕ್ಷಮಸೃಜತ ವಾತ್ಸಪ್ರೇಣವಾಯುಂ ವಿಷ್ಣುಕ್ರಮೈರ್ವೈ ಪ್ರಜಾಪತಿರ್ದಿವಮಸೃಜತ ವಾತ್ಸಪ್ರೇಣಾದಿತ್ಯಂ ।
>
> (ಶ. ಬ್ರಾ. ೬-೭-೪-೭)

ಇತ್ಯಾದಿ ಬ್ರಾಹ್ಮಣವಾಕ್ಯಗಳಲ್ಲೂ ಸಹ ಶಾಕಪೂಣಿಯವರ ಮತದಂತೆ ವಿಷ್ಣುವಿನ ಮೂರು ಪಾದಗಳಿಗೂ, ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕಗಳಿಗೂ, ಅಗ್ನಿ, ವಾಯು, ಮತ್ತು ಸೂರ್ಯ ಈ ದೇವತೆಗಳಿಗೂ ಸಂಬಂಧವನ್ನು ತೋರಿಸಿದೆ. ಮತ್ತು

> ಆ ಯೋ ವಿವಾಯ ಸಚಥಾಯ ದೈವ್ಯ ಇಂದ್ರಾಯ ವಿಷ್ಣುಃ ಸುಕೃತೇ ಸುಕೃತ್ತರಃ ।
> ವೇಧಾ ಅಜಿನ್ವತ್ತ್ರಿಷಧಸ್ಥ ಆರ್ಯಮೃತಸ್ಯ ಭಾಗೇ ಯಜಮಾನಮಾಭಜತ್ ॥
>
> (ಋ. ಸಂ. ೧-೧೫೬-೫)

ಎಂಬ ಋಕ್ಕಿನಲ್ಲಿ ವಿಷ್ಣುವೇ ಕ್ಷಿತ್ಯಾದಿಮೂರುಲೋಕಗಳನ್ನೂ ಆಕ್ರಮಿಸುತ್ತಾನೆಂದೂ ಹೇಳಿದೆ. ಮೇಲೆ ಉದಹರಿಸಿರುವ ಶತಪಥಬ್ರಾಹ್ಮಣದ ೬-೭-೪-೭ ನೇ ಮಂತ್ರದಲ್ಲಿ ಉಕ್ತವಾಗಿರುವಂತೆ ವಿಷ್ಣುವಿನ ಪಾದತ್ರಯವೇ ಕ್ಷಿತ್ಯಾದಿ ಲೋಕಗಳ ಸೃಷ್ಟಿಗೂ ಸ್ಥಿತಿಗೂ ಹೇತುವಾಗಿರುವುದು ಎಂಬ ಅಂಶವನ್ನು (ಋ. ಸಂ. ೧-೧೫೪-೨) ಋಕ್ಕಿನಲ್ಲಿ **ಅಧಿಕ್ಷಿಯಂತಿ ಭುವನಾನಿ ವಿಶ್ವಾ** । ಸಕಲ ಲೋಕಗಳಿಗೂ ವಿಷ್ಣುವಿನ ಮೂರುವಿಕ್ರಮಗಳ ರೂಪದಲ್ಲಿರುವ ಆಧಾರವನ್ನು ಆಶ್ರಯಿಸಿವೆ ಎಂದು ವಿಷ್ಣುವಿಕ್ರಮಗಳ ಮಹತ್ತ್ವವನ್ನು ಸ್ತುತಿಸಿದೆ.

ಪುರಾಣಾದಿಗ್ರಂಥಗಳಲ್ಲಿ ವಿಷ್ಣುವಿಗೆ ಒಂದು ಪ್ರಾಮುಖ್ಯವಾದ ಸ್ಥಾನವಿದೆ. ಸಮಸ್ತ ವಿಶ್ವವನ್ನೂ ವ್ಯಾಪಿಸಿರುವುದರಿಂದ ವಿಷ್ಣುವನ್ನು ಪರಮೇಶ್ವರನೆಂದೂ ಪರಬ್ರಹ್ಮನೆಂದೂ ಹೇಳುವರು. ಅಥವಾ ಜಗದುತ್ಪತ್ತಿಸ್ಥಿತಿಲಯಗಳನ್ನು ನಡೆಸುವ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳಲ್ಲಿ ವಿಷ್ಣುವು ಒಬ್ಬನಾಗಿ ಜಗತ್ತನ್ನು ಪಾಲಿಸುವನೆಂದು ಪ್ರಸಿದ್ಧಿಯು. ಈ ಜಗತ್ಪಾಲನಕಾರ್ಯಕ್ಕಾಗಿ ವಿಷ್ಣುವು ಅನೇಕ ಅವತಾರಗಳನ್ನು ಕೈಗೊಳ್ಳಬೇಕಾದ ಅವಶ್ಯಕತೆಯುಂಟಾದುದರಿಂದ ಆ ಅವತಾರಗಳಲ್ಲಿ ಒಂದಾದ ವಾಮನ ಅಥವಾ ತ್ರಿವಿಕ್ರಮಾವತಾರವೇ ಈ ಋಕ್ಕಿನಲ್ಲಿ ವರ್ಣಿತವಾಗಿರುವುದೆಂದು ಭಾಷ್ಯಕಾರರ ಮತ್ತು ಇತರಪಂಡಿತರ ಅಭಿಪ್ರಾಯವು ಋಗ್ವೇದದಲ್ಲಿ ವಿಷ್ಣುವಿನ ಅವತಾರಾದಿಗಳು ನಿರ್ದೇಶಿಸಲ್ಪಡದಿರುವುದರಿಂದಲೂ, ವೇದದಲ್ಲಿ ಅಲ್ಲಲ್ಲಿ ಕಂಡುಬರುವ ದೇವತಾಕಾರ್ಯಗಳೇ ಪುರಾಣಗಳಲ್ಲಿ ವಿಶೇಷರೀತಿಯಿಂದ ವರ್ಣಿತವಾಗಿರುವುದರಿಂದಲೂ, ಪುರಾಣಕಥೆಗಳಿಗೆ ಮೂಲವು ವೇದವೇ ಆಗಿರುವುದರಿಂದಲೂ ಪುರಾಣಾಂತರ್ಗತವಾದ ಅವತಾರಗಳನ್ನು ವೇದಮಂತ್ರಗಳಿಗೆ ಹೊಂದಿಸಿ ಅರ್ಥಮಾಡುವುದು ಸರಿಯುಲ್ಲವೆಂದು ಪಾಶ್ಚಾತ್ಯ ಮತ್ತು ಆಧುನಿಕ ಪಂಡಿತರು ಅಭಿಪ್ರಾಯಪಡುವರು.

ಪುರಾಣಗಳಲ್ಲಿ ಹೇಳಿರುವ ಕಥೆಯಂತೆ, ಬಲಿಚಕ್ರವರ್ತಿಯೆಂಬ ಅಸುರನು ದೇವತೆಗಳನ್ನು ಗೆದ್ದು ರಾಜ್ಯಭಾರ ಮಾಡುತ್ತಿರುವಾಗ ಸೋತುಹೋದ ದೇವತೆಗಳು ವಿಷ್ಣುವಿನಲ್ಲಿ ಮೊರೆಯಿಡಲು ವಿಷ್ಣುವು ಅವರನ್ನು ಸಂರಕ್ಷಿಸುವುದಕ್ಕಾಗಿ ವಾಮನಾವತಾರವನ್ನು ಮಾಡಿ ಬಲಿಚಕ್ರವರ್ತಿಯು ಯಾಗದೀಕ್ಷೆಯನ್ನು ಕೈಗೊಂಡಿರುವಾಗ ಅವನಲ್ಲಿಗೆ ಹೋಗಿ ತನಗೆ ಮೂರುಪಾದದಷ್ಟು ಭೂಮಿಯನ್ನು ಕೊಡಬೇಕೆಂದು ಕೇಳಲು ಅದಕ್ಕೆ ಬಲಿಯು ಸಮ್ಮತಿಸಿ ಅದರಂತೆ ಕೊಡುವೆನೆಂದು ಹೇಳಿದನು. ಬಳಿಕ ವಾಮನರೂಪದಿಂದ ವಿಷ್ಣುವು ತ್ರಿವಿಕ್ರಮಾವತಾರವನ್ನು ತಾಳಿ ಎಂದರೆ ಭೂಮ್ಯಂತರಿಕ್ಷಗಳೆಲ್ಲಾ ವ್ಯಾಪಿಸುವಂತೆ ಬೃಹದಾಕಾರವನ್ನು ತಾಳಿ ಒಂದು ಪಾದದಿಂದ ಭೂಮಿಯೆಲ್ಲವನ್ನೂ ಮತ್ತೊಂದು ಪಾದದಿಂದ ಅಂತರಿಕ್ಷವನ್ನೂ ಆಕ್ರಮಿಸಿ ಮೂರನೇ ಪಾದವನ್ನು ಎಲ್ಲಿಡಲೆಂದು ಬಲಿಯನ್ನು ಕೇಳಲು ಆ ರಾಜನು ಸತ್ಯಸಂಧನಾದುದರಿಂದ ಮೂರನೇ ಪಾದವನ್ನು ಬೇರೆ ಸ್ಥಳವಿಲ್ಲದ್ದರಿಂದ ತನ್ನ ತಲೆಯಮೇಲೆ ಇಟ್ಟು ಅನುಗ್ರಹಿಸಬೇಕೆಂದು ಪ್ರಾರ್ಥಿಸಲು ಅದರಂತೆ ತ್ರಿವಿಕ್ರಮನು ತನ್ನ ಮೂರನೆಯಪಾದವನ್ನು ಬಲಿಯ ತಲೆಯ ಮೇಲಿಟ್ಟು ಅವನನ್ನು ಪಾತಾಳಲೋಕಕ್ಕೆ ಹೋಗಿ ಅಲ್ಲಿ ರಾಜ್ಯಭಾರಮಾಡುತ್ತಾ ಸುಖದಿಂದಿರುವಂತೆ ಮಾಡಿ ಅವನಿಗೆ ಬೇಕಾದ ವರವನ್ನು ಕೊಟ್ಟನೆಂದು ವಿಸ್ತಾರವಾದ ವರ್ಣನೆ ಇದೆ.

**ಅಶ್ವಿನೌ**—ಅಶ್ವಿನೀದೇವತೆಗಳ ವಿಷಯವನ್ನು ನಾವು ಹಿಂದೆ ಅನೇಕಾವರ್ತಿ ವಿವರಿಸಿದ್ದೇವೆ. ಈಗ ಇಲ್ಲಿ ಅವರ ಸೂಕ್ಷ್ಮಪರಿಚಯವನ್ನೂ, ಅವರು ತಮ್ಮನ್ನು ಸ್ತುತಿಸಿದವರಿಗೆ ಮಾಡಿದ ಸಹಾಯದ ವಿವರವನ್ನೂ ಮಾತ್ರ ಸೂಕ್ಷ್ಮವಾಗಿ ಹೇಳುತ್ತೇವೆ.

ಅಶ್ವಿನೀದೇವತೆಗಳು ಇಬ್ಬರು. ಅವರಲ್ಲಿ ಒಬ್ಬನಿಗೆ ದಸ್ರ ಎಂತಲೂ ಇನ್ನೊಬ್ಬನಿಗೆ ನಾಸತ್ಯಾ ಎಂತಲೂ ಹೆಸರಿರುವುದಾದರೂ ಇಬ್ಬರನ್ನೂ ಅನೇಕವೇಳೆ ದಸ್ರಾ ಅಥವಾ ನಾಸತ್ಯಾ ಎಂಬ ಹೆಸರಿನಿಂದಲೇ ಕರೆಯಲಾಗಿದೆ.

ಅವರ ರಥವು ಸುವರ್ಣಮಯವಾದುದು ಮತ್ತು ಚಕ್ರ, ಅಚ್ಚು ಮೊದಲಾದ ಭಾಗಗಳೆಲ್ಲವೂ ಚಿನ್ನದಿಂದ ಮಾಡಿದುದು (ಋ ಸಂ. ೪-೪೪-೪, ೧-೧೮೦-೧, ೮-೫-೨೯, ೮-೨೨-೫ ಇತ್ಯಾದಿ) ಅದು ಒಂದು ವಿಲಕ್ಷಣವಾದ ರಥ. ಅದಕ್ಕೆ ಮೂರು ಚಕ್ರ, ಮೂರು ನೇಮಿ ಮತ್ತು ಬೇರೆ ಕೆಲವು ಭಾಗಗಳೂ ಮೂರು ಮೂರು ಇರುವುವು. ಅದು ಮನೋವೇಗವುಳ್ಳದ್ದು. ಮೂರು ಚಕ್ರದ ರಥವೆಂದರೆ ಅವರೊಬ್ಬರದೇ.

**ಯದಯಾತಂ ಶುಭಸ್ಪತೀ ವರೇಯಂ ಸೂರ್ಯಾಮುಪ ।**
**ಕ್ವೈಕಂ ಚಕ್ರಂ ವಾಮಾಸೀತ್ ಕ್ವ ದೇಷ್ಟ್ರಾಯ ತಸ್ಥತುಃ ॥**
(ಋ. ಸಂ. ೧೦-೮೫-೧೫)

ಎಂಬಲ್ಲಿ ಸೂರ್ಯಾದೇವಿಯ ವಿವಾಹಕ್ಕೆ ಹೋದಾಗ ರಥದ ಒಂದು ಚಕ್ರವು ಹಾಳಾಗಿ ಹೋಯಿತೆಂದು ಹೇಳಿದೆ. ಅಶ್ವಿನೌ ಎಂಬ ಶಬ್ದಕ್ಕೆ ಅಶ್ವ (ಕುದುರೆ) ವುಳ್ಳವರು ಎಂದರ್ಥವಾದರೂ ಅವರು ಅಶ್ವಾರೋಹಿಗಳಾದುದರಿಂದ ಆ ಹೆಸರು ಅವರಿಗೆ ಬಂದಿದೆ ಎಂದು ಎಲ್ಲಿಯೂ ಹೇಳಿಲ್ಲ. ಅವರ ರಥವನ್ನು ಎಳೆಯುವ ಅಶ್ವಗಳು (ಋ. ಸಂ. ೧-೧೧೭-೨) ಪಕ್ಷಿಗಳು (೬-೬೩-೬) ಹಂಸಗಳು (೪-೪೫-೪) ಗರುಡಪಕ್ಷಿಗಳು (೧-೧೧೮-೪) ಶ್ಯೇನರೂಪವಾದ ಅಶ್ವಗಳು (೮-೫-೭) ಎಂದು ಹೇಳಿದೆ- ಆದರೆ ಅವರ ಮುಖ್ಯವಾಹನವು ಯಾಸ್ಕರು ಹೇಳಿರುವಂತೆ ರಾಸಭಾವಶ್ವಿನೋಃ ಅಶ್ವಿನೀದೇವತೆಗಳಿಗೆ ಕತ್ತೆಗಳೇ ವಾಹನಗಳು (ನಿ. ೨-೨೮).

**ಕದಾ ಯೋಗೋ ವಾಜಿನೋ ರಾಸಭಸ್ಯ ಯೇನ ಯಜ್ಞಂ ನಾಸತ್ಯೋಪಯಾಥಃ ।**
(ಋ. ಸಂ. ೧-೩೪-೯)

**ತೇದ್ರಾಸಭೋ ನಾಸತ್ಯಾ ಸಹಸ್ರಮಾಜಾ ಯಮಸ್ಯ ಪ್ರಧನೇ ಜಿಗಾಯ ।**
(ಋ ಸಂ. ೧-೧೧೬-೨)

ಇತ್ಯಾದಿ ಋಕ್ಕುಗಳಲ್ಲಿ ರಾಸಭವೇ (ಕತ್ತೆ) ಅಶ್ವಿನೀದೇವತೆಗಳ ವಾಹನವೆಂದು ಸ್ಪಷ್ಟವಾಗಿ ಹೇಳಿದೆ-

ಅವರನ್ನು ಯಾವಾಗಲೂ ಯಜ್ಞಮಾಡುವವರು ಪ್ರಾತಃಕಾಲಗಳಲ್ಲಿಯೇ ಆಹ್ವಾನ ಮಾಡುತ್ತಾರೆ. ಸೂರ್ಯಪುತ್ರಿಯೊಡನೆ ಇವರಿಗೆ ಸಂಬಂಧವಿದೆ, ಸೂರ್ಯೆಯೇ ಅವರನ್ನು ವರಿಸಿದಳು (ಋ ಸಂ ೭-೬೯-೪) ಅವರಿಬ್ಬರೂ ಅವಳ ಪತಿಯರು (೪-೪೩-೬) ಸೂರ್ಯೆಯು ಅವರ ರಥವನ್ನು ಏರಿದಳು (೫-೭೩-೫ ; ೮-೮-೧೦) ಸೂರ್ಯನ ಪುತ್ರಿಯು ಅವರ ರಥವನ್ನು ಏರುತ್ತಾಳೆ (ಋ. ಸಂ. ೧-೩೪-೫ ; ೧-೧೧೭-೧೩ ; ೧-೧೧೮-೫ ; ೬-೬೩-೫) ಅವರು ಸೂರ್ಯೆಯನ್ನು ತಮ್ಮವಳೆಂದು ಭಾವಿಸುತ್ತಾರೆ (೭-೬೮-೩) ಮತ್ತು ಅವಳು ರಥದಲ್ಲಿ ಅವರ ಜೊತೆಯಲ್ಲಿ ಹೋಗುತ್ತಾಳೆ (೮-೨೯-೮) ಇತ್ಯಾದಿ ವರ್ಣನೆಗಳಿವೆ.

ಅವರು ಜನರಿಗೆ ಕಷ್ಟದಲ್ಲಿ ನೆರವಾಗುತ್ತಾರೆ ಎಂಬುದಕ್ಕೆ ಅನೇಕ ಆಖ್ಯಾಯಿಕೆಗಳಿವೆ. ಇವುಗಳನ್ನು ಆಯಾ ಸಂದರ್ಭಗಳಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ. ಆದರೆ ಅವುಗಳಲ್ಲಿ ಮುಖ್ಯವಾದ ಕೆಲವನ್ನು ಮಾತ್ರ ಇತಿ ವಿವರಿಸಿದ್ದೇವೆ.

**ಜುಜುರುಷೋ ನಾಸತ್ಯೋತ ವವ್ರಿಂ ಪ್ರಾಮುಂಚತಂ ದ್ರಾಪಿಮಿವ ಚ್ಯವಾನಾತ್ ।**
**ಪ್ರಾತಿರತಂ ಜಹಿತಸ್ಯಾಯುರ್ದಸ್ರಾದಿತ್ಪತಿಮಕೃಣುತಂ ಕನೀನಾಂ ॥**
(ಋ. ಸಂ. ೧-೧೧೬-೧೦)

ಚ್ಯವನನೆಂಬ ಋಷಿಯು ಬಹಳ ವೃದ್ಧನಾಗಿ ದೇಹವು ಶಿಥಿಲವಾಗಿ ಶಕ್ತಿಯಿಲ್ಲದಿರುವಾಗ ಅವನ ಜನರು ಅವನನ್ನು ತ್ಯಜಿಸಿದರು. ಈ ಋಷಿಯು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು ಅವರು ಬಂದು ಇವನ ಶಿಥಿಲವಾದ ದೇಹವನ್ನು ಕಳೆದು ಯುವಕನನ್ನಾಗಿ ಮಾಡಿ ಇವನ ಪತ್ನಿಗೆ ಪ್ರಿಯನನ್ನಾಗಿ ಮಾಡಿದರು ಮತ್ತು ಅವನ ಆಯುಸ್ಸನ್ನು ಹೆಚ್ಚಿಸಿದರು ಎಂದಿದೆ. ಇದೇ ವಿಷಯವು—

**ಯುವಂ ಚ್ಯವಾನಮಶ್ವಿನಾ ಜರಂತಂ ಪುನರ್ಯುವಾನಂ ಚಕ್ರಥುಃ ಶಚೀಭಿಃ ।**

(ಋ. ಸಂ. ೧-೧೧೭-೧೩)

**ನಿಷ್ಟೌಗ್ರ್ಯಂ ಪಾರಯಥಃ ಸಮುದ್ರಾತ್ ಪುನಶ್ಚ್ಯವಾನಂ ಚಕ್ರಥುರ್ಯುವಾನಂ ।**

ಋ ಸಂ. ೧-೧೧೮-೬)

**ಪ್ರ ಚ್ಯವಾನಾಜ್ಜುಜುರುಷೋ ವವ್ರಿಮತ್ಕಂ ನ ಮುಂಚಥಃ ।**
**ಯುವಾ ಯದೀ ಕೃಥಃ ಪುನರಾ ಕಾಮಮೃಣ್ವೇ ವಧ್ವಃ ॥**

(ಋ ಸಂ. ೫-೭೪-೫)

**ಉತ ತ್ಯದ್ವಾಂ ಜುರತೇ ಅಶ್ವಿನಾ ಭೂಚ್ಚ್ಯವಾನಾಯ ಪ್ರತೀತ್ಯಂ ಹವಿರ್ದೇ ।**

(ಋ. ಸಂ. ೭-೬೮-೬)

**ಯುವಂ ಚ್ಯವಾನಂ ಜರಸೋಽಮುಮುಕ್ತಂ ನಿ ಪೇದವ ಊಹಥುರಾಶುಮಶ್ವಂ ।**

(ಋ. ಸಂ. ೭-೭೧-೫)

**ಯುವಂ ಚ್ಯವಾನಂ ಸನಯಂ ಯಥಾ ರಥಂ ಪುನರ್ಯುವಾನಂ ಚರಥಾಯ ತಕ್ಷಥುಃ ।**

(ಋ. ಸಂ. ೧೦-೩೯-೪)

ಈ ಋಕ್ಕುಗಳಲ್ಲಿಯೂ ವೃದ್ಧನಾದ ಚ್ಯವನಋಷಿಯನ್ನು ಯುವಕನನ್ನಾಗಿ ಮಾಡಿದ ವಿಷಯದ ವರ್ಣನೆಯಿದೆ. ಶತಪಥ ಬ್ರಾಹ್ಮಣದಲ್ಲಿಯೂ ಈ ವಿಷಯಕವಾದ ವಿಸ್ತಾರವಾದ ಇತಿಹಾಸವಿದೆ. ಅದರಂತೆಯೇ—

**ಯುವಂ ವಿಪ್ರಸ್ಯ ಜರಣಾ ಮುಪೇಯುಷಃ ಪುನಃ ಕಲೇರಕೃಣುತಂ ಯುವದ್ವಯಃ ।**

(ಋ. ಸಂ. ೧೦-೩೯-೮)

ಎಂಬ ಋಕ್ಕಿನಲ್ಲಿ ಕಲಿ ಎಂಬುವನ ಮುಪ್ಪನ್ನು ಹೋಗಲಾಡಿಸಿ ಅವನನ್ನು ಯುವಕನನ್ನಾಗಿ ಮಾಡಿದ ವಿಷಯದ ಪ್ರಸ್ತಾಪವಿದೆ.

**ಯಾಭಿರ್ವಮ್ರಂ ವಿಪಿಪಾನಮುಪಸ್ತುತಂ ಕಲಿಂ ಯಾಭಿರ್ವಿತ್ತಜಾನಿಂ ದುವಸ್ಯಥಃ ।**

(ಋ. ಸಂ. ೧-೧೧೨-೧೫)

ಎಂಬ ಮೇಲೆ ಹೇಳಿದ ಕಲಿ ಎಂಬುವನು ಪತ್ನಿಯನ್ನು ಪರಿಗ್ರಹಿಸಿ ಮದುವೆಯಾದಾಗ ಅವನಿಗೆ ತಮ್ಮ ನೆರವನ್ನು ನೀಡಿ ಅನೇಕ ಸಹಾಯಗಳನ್ನು ಮಾಡಿದರೆಂದು ಹೇಳಿದೆ.

ಅವರು ವಿಮದನ ಪತ್ನಿಯರಾದ ಯುವತಿಯರಿಗೋಸ್ಕರ ಒಂದು ರಥವನ್ನೂ (೧-೧೧೨-೧೯) ಅಥವಾ ಅವನಿಗೆ ಓರ್ವ ಪತ್ನಿಯನ್ನೂ (೧-೧೧೭-೧) ಅನುಗ್ರಹಿಸಿದರು. ಅವಳು ಪುರಮಿತ್ರನ ಪತ್ನಿಯಾಗಿದ್ದಳೆಂದು ತೋರುತ್ತದೆ. (ಋ. ಸಂ. ೧-೧೧೭-೨೦ ; ೧೦-೩೯-೭) ಮತ್ತು ಅವಳ ಹೆಸರು ಕಮದ್ಯು (೧೦-೬೫-೧೨)

ಕೃಷ್ಣ ಎಂಬುವನ ಮಗನಾದ ವಿಶ್ವಕನಿಗೆ ಕಳೆದುಹೋಗಿದ್ದ ಅವನ ಮಗನನ್ನು ತಂದು ಒಪ್ಪಿಸಿದರು (ಋ ಸಂ. ೧-೧೧೬-೨೩; ೧-೧೧೭-೭ ; ೧೦-೬೫-೧೨) ಋ. ಸಂ. ೮-೭೫-೧ ರಿಂದ ೫ ನೆಯ ಋಕ್ಕುಗಳಲ್ಲಿ ವಿಶ್ವಕ ಮತ್ತು ವಿಷ್ಣಾಪುಗಳ ಹೆಸರುಗಳು ಸೂಚಿತವಾಗಿವೆ·

ಭುಜ್ಯುವಿನ ಕಥೆಯು ಪದೇ ಪದೆ ಹೇಳಲ್ಪಟ್ಟಿದೆ. ಭುಜ್ಯುವು ತುಗ್ರ ಎಂಬ ರಾಜನ ಪುತ್ರನು. ಇವನು ಸಮುದ್ರಯಾನಮಾಡುತ್ತಿರುವಾಗ ಮುಳುಗಿಹೋಗುತ್ತಿರಲು, ಅಲೆಗಳ ಮಧ್ಯದಲ್ಲಿ ಭುಜ್ಯುವು ಒಂದು ಮರದ ತುಂಡನ್ನು ಹಿಡಿದುಕೊಂಡು ತೇಲಾಡುತ್ತಿದ್ದನು. ಆಗ ಅವನು ಅಶ್ವಿನೀದೇವತೆಗಳನ್ನು ಮರೆಹೊಕ್ಕನು. ಆಳವೇ ತಿಳಿಯದ ಮಹಾಸಾಗರದಲ್ಲಿ ನೂರುಹುಟ್ಟುಗಳಿಂದ ಕೂಡಿದ ನೌಕೆಯಲ್ಲಿ ಅವನನ್ನು ಕೂಡಿಸಿಕೊಂಡು ಅಶ್ವಿನೀದೇವತೆಗಳು ಮನೆಗೆ ಕರೆದುಕೊಂಡು ಹೋದರು. ಆಕಾಶದಲ್ಲಿ ಹಾರುವಂತೆ ತೋರುತ್ತಿದ್ದ, ಒಡಕುಗಳಿಲ್ಲದ ಹಡಗಿನಲ್ಲಿ ಅಥವಾ ರೆಕ್ಕೆಗಳುಳ್ಳ ನಾಲ್ಕು ದೋಣಿಗಳಲ್ಲಿ, ಅಥವಾ ನೂರು ಪಾದಗಳು ಮತ್ತು ಆರು ಕುದುರೆಗಳುಳ್ಳ, ಹಾರುವ ಮೂರು ರಥಗಳಲ್ಲಿ ಅಥವಾ ಮನೋವೇಗವುಳ್ಳ ತಮ್ಮ ರಥದಲ್ಲಿ ವೇಗಶಾಲಿಗಳಾಗಿ ಹಾರಿಹೋಗುವ ತಮ್ಮ ಅಶ್ವಗಳ ಸಹಾಯದಿಂದ ಭುಜ್ಯುವನ್ನು ಕುಳ್ಳಿರಿಸಿಕೊಂಡು ಬಂದು ಅವನ ಮನೆಗೆ ಸೇರಿಸಿದರು. (೧-೧೧೬-೩, ೪-೫ , ೧-೧೧೭-೧೪, ೧೫ ; ೧-೧೮೨-೫, ೬, ೭ ; ೭-೬೮-೭ ; ೧-೧೧೨-೬, ೨೦ ; ೧-೧೧೮-೬ ; ೧-೧೧೯-೪ ; ೧-೧೫೮-೩ ; ೬-೬೨-೬ ; ೭-೬೯-೭ ; ೮-೫-೨೨ ; ೧೦-೩೯-೪ ; ೧೦-೪೭-೭ ; ೧೦-೬೫-೧೨ ; ೧೦-೧೪೩-೫ )

ವಿಶ್ಪಲಾ ಎಂಬ ಸ್ತ್ರೀಯು ಯುದ್ಧದಲ್ಲಿ ಕಾಲು ಕತ್ತರಿಸಿಹೋಗಲು ಅಶ್ವನೀದೇವತೆಗಳನ್ನು ಪ್ರಾರ್ಥಿಸಿದಾಗ ಅವರು ಬಂದು ಅವಳಿಗೆ ಕಬ್ಬಿಣದ ಕಾಲನ್ನು ಒದಗಿಸಿಕೊಟ್ಟು ಕಾಪಾಡಿದರೆಂದು ಋ. ಸಂ. ೧-೧೧೨-೧೦ ; ೧-೧೧೬-೧೫ ; ೧-೧೧೭-೧೧ ; ೧-೧೧೮-೮ ; ೧೦-೩೯-೮ ಎಂಬ ಋಕ್ಕುಗಳಲ್ಲಿ ಹೇಳಿದೆ.

(ಅಶ್ವಿನೀದೇವತೆಗಳ ವಾಹನವಾದ ರಾಸಭವು ತೋಳನ ರೂಪದಲ್ಲಿದ್ದಾಗ) ಋಜ್ರಾಶ್ವ ನೆಂಬುವನು ತಾನು ಕಾಯುತ್ತಿದ್ದ ಕುರಿಗಳ ಮಂದೆಯಲ್ಲಿ ಒಂದುನೂರು ಕುರಿಗಳನ್ನು ಕತ್ತರಿಸಿ ಆ ತೋಳಕ್ಕೆ ಆಹಾರವಾಗಿ ಕೊಟ್ಟನು. ಅದರಿಂದ ಅವನ ತಂದೆಗೆ ಕೋಪಬಂದು ಋಜ್ರಾಶ್ವನ ಕಣ್ಣನ್ನು ಕೀಳಿಸಿ ಕುರುಡನನ್ನಾಗಿ ಮಾಡಿದನು. ಆಗ ತೋಳವು ಅಶ್ವಿನೀದೇವತೆಗಳನ್ನು ಸ್ತುತಿಸಿತು. ಅವರು ತುಷ್ಟರಾಗಿ ಋಜ್ರಾಶ್ವನಿಗೆ ಕಣ್ಣನ್ನು ಕೊಟ್ಟರು. (ಋ. ಸಂ. ೧-೧೧೬-೧೬ ; ೧-೧೧೭-೧೭, ೧೮) ಋ. ಸಂ. ೧-೧೦೦-೧೭ ನೆಯ ಋಕ್ಕಿನಲ್ಲಿ ಋಜ್ರಾಶ್ವನೆಂಬುವನು ಇಂದ್ರನನ್ನು ಸ್ತೋತ್ರಮಾಡಿದ ವಿಷಯವಿದೆ.

ಪರಾವೃಜನೆಂಬುವನು ಕುರುಡನೂ ಕುಂಟನೂ ಆಗಿದ್ದನು. ಮತ್ತು ಅವನು ಜಾತಿಯಲ್ಲಿ ಸೇರಿಸಲ್ಪಟ್ಟಿರಲಿಲ್ಲ. ಅವನಿಗೆ ಅಶ್ವಿನೀ ದೇವತೆಗಳು ನೋಡುವ ದೃಷ್ಟಿಯನ್ನೂ, ನಡೆಯುವ ಶಕ್ತಿಯನ್ನೂ ಕೊಟ್ಟರು. ಎಂದರೆ ಕಣ್ಣುಗಳನ್ನೂ ಕಾಲುಗಳನ್ನೂ ಅನುಗ್ರಹಿಸಿದರು . (ಋ ಸಂ ೧-೧೧೨-೮) ಪರಾವೃಜನೆಂಬುವನ ಹೆಸರು ಇಂದ್ರನ ವಿಷಯದಲ್ಲಿ ಪ್ರಸ್ತಾಪ ಬಂದಾಗ ಋ. ಸಂ. ೨-೧೩-೧೨ ; ೨-೧೫-೭ ಋಕ್ಕುಗಳಲ್ಲಿ ಸೂಚಿತವಾಗಿರುವುದು

ರೇಭನೆಂಬ ಋಷಿಯನ್ನು ದುಷ್ಟರು ಕೈಕಾಲು ಕಟ್ಟಿಹಾಕಿ ಒಂದು ಭಾವಿಯಲ್ಲಿ ಹಾಕಿದ್ದರು ಒಂಭತ್ತು ಹಗಲು ಹತ್ತು ರಾತ್ರಿಗಳ ಪರ್ಯಂತರ ಅವನು ಅಲ್ಲಿಯೇ ಬಿದ್ದಿದ್ದು ಸಾಯುವ ಸ್ಥಿತಿಯಲ್ಲಿದ್ದನು ಅವನನ್ನು ಅಶ್ವಿನೀ ದೇವತೆಗಳು, ಸೋಮರಸವನ್ನು ಸೌಟನಿಂದ ಎತ್ತುವಂತೆ ಭಾವಿಯಿಂದ ಮೇಲಕ್ಕೆತ್ತಿ ಜೀವದಾನಮಾಡಿದರು. (ಋ. ಸಂ. ೧-೧೧೨-೫ ; ೧-೧೧೬-೨೪ ; ೧-೧೧೭-೪ ; ೧-೧೧೮-೬ ; ೧-೧೧೯-೬ ; ೧೦-೩೯-೯).

**ವಂದನ** ಎಂಬುವನೂ ಇದೇರೀತಿ ದುಷ್ಟರಿಂದ ಅಪಹರಿಸಲ್ಪಟ್ಟು ಕತ್ತಲೆಯ ಪ್ರದೇಶದಲ್ಲಿ (ಹಳ್ಳದಲ್ಲಿ) ಹಾಕಿದ್ದಾಗ ಅವನನ್ನು ಅಶ್ವಿನೀದೇವತೆಗಳು ಅಪಾಯದಿಂದ ಪಾರುಮಾಡಿ ಅವನನ್ನು ಬೆಳಕಿಗೆ ತಂದರು. (ಋ. ಸಂ ೧-೧೧೨-೫ ; ೧-೧೧೬-೧೧ ; ೧-೧೧೭-೫ ; ೧-೧೧೮-೬ ; ೧೦-೩೯-೮ ' ೧-೧೧೯-೬, ೭).

**ಪಜ್ರವಂಶೀಯನಾದ ಕಕ್ಷೀವತನಿಗೆ** ಯಥೇಚ್ಛವಾಗಿ ವರಗಳನ್ನು ಕೊಟ್ಟು ನೂರಾರುಜಾಡಿ ಸುರಾ (ಮದ್ಯ) ಅಥವಾ ಮಧುವನ್ನು ಜರಡಿಯಿಂದ ಸುರಿಯುವಂತೆ ಕುದುರೆಯ ಗೊರಸಿನಿಂದ ಸುರಿಸಿದರು. (ಋ. ಸಂ. ೧-೧೧೬-೭ ; ೧-೧೧೭-೬).

**ಅತ್ರಿ** ಎಂಬ ಋಷಿಯು, ದ್ವೇಷಾಸೂಯೆಯಿಂದ ಅಂಧಕಾರಾವೃತವಾದ, ಬೆಂಕಿಯಿಂದ ಉರಿಯುತ್ತಿರುವ ದೊಡ್ಡ ಕವುರಿಯಲ್ಲಿ ಹಾಕಲ್ಪಟ್ಟು ತೊಂದರೆಪಡುತ್ತಿರುವಾಗ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು ಅವರು ಬಂದು ಬೆಂಕಿಯನ್ನು ಹಿಮದಿಂದ ಶಮನಮಾಡಿ, ಆಹಾರಾದಿಗಳನ್ನು ಕೊಟ್ಟು ಸಂತೈಸಿ, ಅವನನ್ನು ಆ ಅವಸ್ಥೆಯಿಂದ ಪಾರು ಮಾಡಿದರು. (೧-೧೧೨-೭ ; ೧-೧೧೬-೮ ; ೧-೧೧೭-೩ ; ೧-೧೧೮-೭ ; ೧-೧೧೯-೬ ; ೫-೭೮-೪ ರಿಂದ ೬) ೭-೭೧-೫ ; ೮-೬೨-೩ , ೭ ರಿಂದ ೯ ; ೧೦-೩೯-೯) ಋ. ಸಂ. ೧೦-೮೦-೩ ನೆಯ ಋಕ್ಕಿನಲ್ಲಿ ಅತ್ರಿಯನ್ನು ಅಗ್ನಿಯು ರಕ್ಷಿಸಿದನೆಂದು ಸೂಚಿತವಾಗಿದೆ.

**ವಧ್ರಿಮತೀ** ಎಂಬುವಳು ತನಗೆ ಮಕ್ಕಳಿಲ್ಲದೆ ಬಂಜೆಯಾಗಿದ್ದುದರಿಂದ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು ಅವಳಿಗೆ ಹಿರಣ್ಯಹಸ್ತನೆಂಬ ಪುತ್ರನನ್ನು ಅನುಗ್ರಹಿಸಿದರು. (ಋ. ಸಂ. ೧-೧೧೬-೧೩ ; ೧-೧೧೭-೨೪ ; ೬-೬೨-೭ ; ೧೦.೩೯-೭).

**ಘೋಷಾ** ಎಂಬುವಳು ತನ್ನ ತಂದೆಯ ಮನೆಯಲ್ಲಿಯೇ ಇದ್ದು ಮದುವೆಯಾಗದೆ ಇದ್ದುದರಿಂದ ಅವಳ ಪ್ರಾರ್ಥನೆಯಂತೆ ಅಶ್ವಿನೀದೇವತೆಗಳು ಅವಳಿಗೆ ಯೋಗ್ಯನಾದ ಪತಿಯನ್ನು ಅನುಗ್ರಹಿಸಿದರು. (ಋ. ಸಂ ೧-೧೧೭-೭ ; ೧೦-೩೯-೩, ೬ ; ೧೦-೪೦-೫) ಋ. ಸಂ. ೧-೧೧೭-೭ನೇ ಋಕ್ಕಿನ ಭಾಷ್ಯದಲ್ಲಿ ಈ ಘೋಷಾ ಎಂಬ ಸ್ತ್ರೀಯು ಕುಷ್ಠರೋಗದಿಂದ ನರಳುತ್ತಿದ್ದಳೆಂದೂ, ಆ ರೋಗವನ್ನು ಅಶ್ವಿನೀ ದೇವತೆಗಳು ವಾಸಿಮಾಡಿದರೆಂದೂ ಸಾಯಣರು ಹೇಳಿದ್ದಾರೆ. ೧೦ ನೆಯ ಮಂಡಲದಲ್ಲಿ (೧೦-೩೯) ಈ ಘೋಷಾ ಎಂಬುವಳಿಂದ ದೃಷ್ಟವಾದ ಒಂದು ಸೂಕ್ತವಿದೆ.

**ಶಯು** ಎಂಬುವನ ಹಸುವು ಮುದಿಯಾಗಿ ಕರುವನ್ನು ಹಾಕದಿರುವಾಗ ಅದಕ್ಕೆ ಹಾಲುಕೊಡುವ ಶಕ್ತಿಯನ್ನುಂಟುಮಾಡಿದರು. (ಋ. ಸಂ. ೧-೧೧೬-೨೨ ; ೧-೧೧೭-೨೦ ; ೧-೧೧೮-೮ ; ೧-೧೧೯-೬ ; ೧೦-೩೯-೧೩)

**ಪೇದುವೆಂಬ** ರಾಜನಿಗೆ ಅಶ್ವಿನೀದೇವತೆಗಳು ಇಂದ್ರನಂತೆ ಅತಿ ಬಲಶಾಲಿಯಾದ ಒಂದು ಬಿಳೀ ಕುದುರೆಯನ್ನು ಕೊಟ್ಟರೆಂದೂ ಅದರಿಂದ ಅವನು ತನ್ನ ಶತ್ರುಗಳನ್ನು ಗೆದ್ದು ಬಹಳವಾದ ವಸ್ತುವಾಹನಾದಿಗಳನ್ನು ಪಡೆದನೆಂದು ಹೇಳಿದೆ. (ಋ. ಸಂ. ೧-೧೧೬-೬ ; ೧-೧೧೭-೯ ; ೧-೧೧೮-೯ ; ೧-೧೧೯-೧೦ ; ೭-೭೧-೫ ; ೧೦-೩೯-೧೦)

ಇದಲ್ಲದೆ ಒಂದನೇ ಮಂಡಲದ ೧೧೨, ೧೧೬, ೧೧೭, ೧೧೮, ೧೧೯ ನೆಯ ಸೂಕ್ತಗಳಲ್ಲಿ ಹೇಳಿರುವಂತೆ ಅನೇಕ ಮನುಷ್ಯರಿಗೆ ಸಹಾಯವನ್ನು ಮಾಡಿರುವುದಲ್ಲದೆ ಈ ಅಶ್ವಿನೀ ದೇವತೆಗಳು ಪಶುಪಕ್ಷ್ಯಾದಿಗಳಿಗೂ ಉಪಕಾರ ಮಾಡಿರುವರೆಂದು ಹೇಳಿದೆ. ಈ ಸಂದರ್ಭದಲ್ಲಿ—ಒಂದು ತೋಳವು ಒಂದು ಗುಬ್ಬಚ್ಚಿಯನ್ನು ಕಚ್ಚಿಕೊಂಡು ಹೋಗುತ್ತಿರುವಾಗ ಆ ಗುಬ್ಬಚ್ಚಿಯ ಪ್ರಾರ್ಥನೆಯಂತೆ ಅದನ್ನು ತೋಳನ ಬಾಯಿಂದ ಬಿಡಿಸಿಕಾಪಾಡಿದರೆಂದು ಋ.ಸಂ.

೧-೧೧೬-೧೪ ; ೧-೧೧೭-೧೬ ; ೧-೧೧೮-೮ ; ೧೦ ೩೯-೧೩ ಎಂಬ ಋಕ್ಕುಗಳಲ್ಲಿ ಹೇಳಿದೆ. ಈ ವಿಷಯಗಳಲ್ಲದೆ ಅಶ್ವಿನೀದೇವತೆಗಳ ಸಂಬಂಧವಾದ ಇನ್ನೂ ಅನೇಕ ವಿಷಯಗಳಿರುವುವು. ಅವುಗಳನ್ನು ಆಯಾ ಸಂದರ್ಭದಲ್ಲಿ ವಿವರಿಸಲಾಗುವುದು.

### ವ್ಯಾಕರಣಪ್ರಕ್ರಿಯಾ

**ಕೃಣುಧ್ವಮ್**—ಕೃವಿ ಹಿಂಸಾಕರಣಯೋಶ್ಚ ಧಾತು. ಲೋಟ್ ಮಧ್ಯಮಪುರುಷ ಬಹುವಚನಾಂತ ರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸ್ವತವಸಃ**—ಸ್ವಂ ಸ್ವೀಯಂ ತವಃ ಬಲಂ ಯೇಷಾಂ ತೇ ಸ್ವತವಸಃ ಬಹುವ್ರೀಹೌ ಪ್ರಕೃತ್ಯಾ—ಎಂಬುದ ರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸಂತಿ**—ಅಸ ಭುವಿ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಹಿಚ (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಪ್ರತ್ಯಯದ ಆದ್ಯುದಾತ್ತಸ್ವರ ಉಳಿಯುತ್ತದೆ

**ಅದ್ವೇಷಃ**—ನ ವಿದ್ಯತೇ ದ್ವೇಷಃ ಯಸ್ಯ. ನಞ್ಸುಭ್ಯಾಮ್ (ಪಾ. ಸೂ. ೬-೨-೧೭೨) ಎಂಬುದ ರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ.

**ವಾತಃ**—ವಾ ಗತಿಗಂಧನಯೋಃ ಧಾತು. ಹಸಿಮೃಗ್ರಿಣ್ವ—(ಉ. ಸೂ. ೩-೩೬೬) ಎಂಬುದರಿಂದ ತನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಚ್ಛ**—ನಿಪಾತಸ್ಯ ಚ (ಉ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ವವೃತೀಯ**—ವೃತು ವರ್ತನೇ ಧಾತು. ಲಿಙ್ ಉತ್ತಮಪುರುಷ ಏಕವಚನದಲ್ಲಿ ಇಟ್ ಪ್ರತ್ಯಯ- ಇಟೋತ್ (ಪಾ ಸೂ. ೩-೪-೧೦೬) ಎಂಬುದರಿಂದ ಅದಕ್ಕೆ ಅತ್ವ. ಲಿಙಃ ಸೀಯುಟ್ (ಪಾ. ಸೂ. ೩-೪-೧೦೨ ಎಂಬುದರಿಂದ ಅದಕ್ಕೆ ಸೀಯುಟಾಗಮ. ಬಹುಲಂ ಛಂದಸಿ ಸೂತ್ರದಿಂದ ಶ್ಲುವಿಕರಣ. ಶ್ಲುನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. ಲಿಙಃ ಸಲೋಪೋ—(ಪಾ. ಸೂ. ೭-೨-೭೯) ಸೂತ್ರದಿಂದ ಸಲೋಪ. ತಿಙಂತನಿಘಾತ ಸ್ವರ ಬರುತ್ತದೆ.

---

### ಸಂಹಿತಾಪಾಠಃ

ಇ॒ಯಂ ಸಾ ವೋ᳚ ಅ॒ಸ್ಮೇ ದೀಧಿ᳚ತಿರ್ಯಜತ್ರಾ ಅಪಿಪ್ರಾಣೀ᳚ ಚ॒ ಸದ॑ನೀ ಚ ಭೂಯಾಃ ।
ನಿ ಯಾ ದೇ॒ವೇಷು॒ ಯತ॑ತೇ ವಸೂ॒ಯುರ್ವಿ॒ದ್ಯಾಮೇ॒ಷಂ ವೃ॒ಜನಂ॑ ಜೀ॒ರದಾ᳚ನುಂ ॥ ೧೧ ॥

। ಪದಪಾಠಃ ।।

ಇಯಂ । ಸಾ । ವಃ । ಅಸ್ಮೇ ಇತಿ । ದೀಧಿತಿಃ । ಯಜತ್ರಾಃ । ಅಪಿsಪ್ರಾಣೀ । ಚ । ಸದನೀ । ಚ । ಭೂಯಾಃ ।

ನಿ । ಯಾ । ದೇವೇಷು । ಯತತೇ । ವಸುsಯುಃ । ವಿದ್ಯಾಮ । ಇಷಂ । ವೃಜನಂ । ಜೀರsದಾನುಂ ॥

ಸಾಯಣಭಾಷ್ಯಂ

ಹೇ ಯಜತ್ರಾ ಯಷ್ಟವ್ಯಾ ದೇವಾಃ ವೋ ಯುಷ್ಮತ್ಸಂಬಂಧಿನೀ ಸೇಯಂ ಪ್ರಸಿದ್ಧಾ ದೀಧಿತಿ-ರ್ದೀಪ್ತಿರಸ್ಮೇ ಅಸ್ಮಾಕಮಪಿಪ್ರಾಣೀ ಸರ್ವದಾ ಚೇಷ್ಟಯಿತ್ರೀ ಸದನೀ ಚ ನಿವಾಸವತೀ ಚ ಭೂಯಾಃ । ಭೂಯಾತ್ । ಭವತು । ಯಾ ದೀಧಿತಿರ್ವಸೂಯುರ್ವಸುಮತೀ ದೇವೇಷು ನಿ ಯತತೇ ನಿಯಮೇನ ಪ್ರಯತ್ನಂ ಕರೋತಿ । ತಾನಪಿ ಪ್ರಕಾಶಿತುಂ ಸೈವ ಭೂಯಾತ್ । ವಿದ್ಯಾಮೇತಿ ಗತಃ ॥

। ಪ್ರತಿಪದಾರ್ಥ ।

ಯಜತ್ರಾಃ—ಯಜ್ಞಾರ್ಹರಾದ ಎಲೈ ದೇವತೆಗಳೇ । ಯಾ—ಯಾವ ಪ್ರಭೆಯು । ವಸೂಯುಃ—ಸಂಪದ್ವಿಶಿಷ್ಟವಾಗಿ । ದೇವೇಷು—ದೇವತೆಗಳಲ್ಲಿ । ನಿ ಯುತತೇ—ನಿಯತವಾಗಿ ಹವಿರ್ಭಾವವನ್ನು ಹೊಂದುತ್ತಿದೆಯೋ । ಸಾ—ಲೋಕಪ್ರಸಿದ್ಧವಾದುದೂ । ವಃ—ನಿಮ್ಮ ಸಂಬಂಧವಾದುದೂ ಆದ । ಇಯಂ ದೀಧಿತಿಃ—ಈ ಪ್ರಭೆಯು । ಅಸ್ಮೇ—ನಮ್ಮಗಳಿಗೆ । ಅಪಿ ಪ್ರಾಣೀ ಚ—ಸರ್ವದಾ ಚೈತನ್ಯದಾಯಿಯಾದುದೂ । ಸದನೀ ಚ—ನಿವಾಸಯುಕ್ತವಾದುದೂ ಆಗಿ । ಭೂಯಾಃ—ಆಗಲಿ । ಇಷಂ—ಅನ್ನವನ್ನೂ । ವೃಜನಂ—ಬಲವನ್ನೂ । ಜೀರದಾನುಂ—ದೀರ್ಘಾಯುಸ್ಸನ್ನೂ । ವಿದ್ಯಾಮ—ನಾವು ಪಡೆಯುವರತಾಗಲಿ.

ಭಾವಾರ್ಥ

ಯಜ್ಞಾರ್ಹರಾದ ದೇವತೆಗಳೇ, ಯಾವ ನಿಮ್ಮ ಪ್ರಭೆಯು ಸಂಪದ್ವಿಶಿಷ್ಟವಾಗಿಯೂ, ಲೋಕಪ್ರಸಿದ್ಧವಾಗಿಯೂ ಆಗಿ, ನಿಮ್ಮಲ್ಲಿ ಅವಿರ್ಭಾವವನ್ನು ಹೊಂದುತ್ತದೆಯೋ ಆ ಪ್ರಭೆಯು ನಮಗೆ ಸರ್ವದಾ ಚೈತನ್ಯದಾಯಿಯಾಗಿಯೂ, ನಿವಾಸವನ್ನು ಕೊಡತಕ್ಕದ್ದಾಗಿಯೂ ಆಗಲಿ. ನಾವು ಅನ್ನವನ್ನೂ, ಬಲವನ್ನೂ, ದೀರ್ಘಾಯುಸ್ಸನ್ನೂ ನಿಮ್ಮ ಅನುಗ್ರಹದಿಂದ ಪಡೆಯುವಂತಾಗಲಿ.

## English Translation

Objects of admiration, may that wealth-abounding effulgence which manifests itself amongst the gods, give animation to our existence, and (permanence to) our dwellings; that we may (thence) obtain food, strength, and long life.

### ವಿಶೇಷವಿಷಯಗಳು

ಅಸ್ಮೇ ಈ ಶಬ್ದವು ಏಳುವಿಭಕ್ತಿಗಳ ಅರ್ಥದಲ್ಲಿಯೂ ಉಪಯೋಗಿಸಲ್ಪಡುವುದು. ಉದಾಹರಣೆಗೆ—

**(೧) ಅಸ್ಮೇ ತೇ ಬಂಧುಃ । ವಯಮಿತ್ಯರ್ಥಃ ॥**

**ಅಸ್ಮೇ ಇತ್ಯೇತೇತ್ಪದಂ ಸರ್ವವಿಭಕ್ತ್ಯಂತಂ । ತಸ್ಮಾದನೇಕಾರ್ಥಂ । ಏಕಮೇವ ಹ್ಯೇತಚ್ಛಬ್ದರೂಪಂ ಸಪ್ತಸ್ವಪಿ ವಿಭಕ್ತ್ಯರ್ಥೇಷು ವರ್ತತೇ । ಪ್ರಕರಣಾದಿವಶಾತ್ ತಸ್ಯ ನಿಯಮೋ ಭವತಿ । ತದ್ಯಥಾ—ಪ್ರಥಮಾಯಾಸ್ತಾವತ್— ಅಸ್ಮೇ ತೇ ಬಂಧುಃ । ವಯಮಿತ್ಯರ್ಥಃ ॥** ಎಂದರೆ ಅಸ್ಮೇ ಎಂಬ ಶಬ್ದವು ಏಳು ವಿಭಕ್ತಿಗಳ ಅರ್ಥದಲ್ಲಿಯೂ ಸಂದರ್ಭಾನುಸಾರವಾಗಿ ಉಪಯೋಗಿಸಲ್ಪಡುವುದು. ಎಂದರೆ ಆಯಾ ಪ್ರಕರಣಾನುಸಾರವಾಗಿ ಈ ಶಬ್ದಕ್ಕೆ ಏಳು ವಿಭಕ್ತಿಗಳಲ್ಲಿ ಯಾವ ವಿಭಕ್ತಿಯ ಅರ್ಥವನ್ನಾದರೂ ಹೇಳಬಹುದು. ಹೇಗೆಂದರೆ—**ಅಸ್ಮೇ ತೇ ಬಂಧುಃ** ಎಂಬ ವಾಕ್ಯದಲ್ಲಿ **ಅಸ್ಮೇ** ಎಂಬ ಶಬ್ದಕ್ಕೆ **ವಯಂ**—ನಾವು ಎಂದರ್ಥವಿರುವುದು. ಇದು ಪ್ರಥಮಾ ವಿಭಕ್ತಿಯ ಅರ್ಥಕ್ಕೆ ಉದಾಹರಣೆಯು

**(೨) ಅಸ್ಮೇ ಯಾತಂ ನಾಸತ್ಯಾ ಸಜೋಷಾಃ । ಅಸ್ಮಾನಿತ್ಯರ್ಥಃ ॥**

**ದ್ವಿತೀಯಾಯಾಸ್ತಾವತ್**—ಅಸ್ಮೇ ಎಂಬ ಶಬ್ದಕ್ಕೆ ದ್ವಿತೀಯಾ ವಿಭಕ್ತಿಯಾದ ಅಸ್ಮಾನ್-ನಮ್ಮನ್ನು ಎಂದು ಅರ್ಥವು ಈ ಅರ್ಥದ ಉದಾಹರಣೆಗೆ—

> **ಆ ಶ್ಯೇನಸ್ಯ ಜವಸಾ ನೂತನೇನಾಸ್ಮೇ ಯಾತಂ ನಾಸತ್ಯಾ ಸಜೋಷಾಃ ।**
> **ಹವೇ ಹಿ ವಾಮಶ್ವಿನಾ ರಾತಹವ್ಯಃ ಶಶ್ವತ್ತಮಾಯಾ ಉಷಸೋ ವ್ಯುಷ್ಟೌ ॥**
> **(ಋ. ಸಂ. ೧-೧೧೮-೧೧)**

ಎಂಬ ಋಕ್ಕನ್ನು ಕೊಟ್ಟಿರುವರು. ಈ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮಾನ್–ನಮ್ಮನ್ನು ಎಂದರ್ಥವು.

**(೩) ಅಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ । ಅಸ್ಮಾಭಿರಿತ್ಯರ್ಥಃ ॥**

**ತೃತೀಯಾಯಾಸ್ತಾವತ್**—ಇಲ್ಲಿ ಅಸ್ಮೇ ಎಂದರೆ ಅಸ್ಮಾಭಿಃ-ನಮ್ಮಿಂದ ಎಂದು ತೃತೀಯಾವಿಭಕ್ತ್ಯರ್ಥವು ಈ ವಿಷಯದಲ್ಲಿ—

> **ಭೂರಿ ಚಕರ್ಥ ಯುಜ್ಯೇಭಿರಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ ।**
> **ಭೂರೀಣಿ ಹಿ ಕೃಣವಾಮಾ ಶವಿಷ್ಠೇಂದ್ರ ಕ್ರತ್ವಾ ಮರುತೋ ಯದ್ವಶಾಮ ॥**
> **(ಋ. ಸಂ. ೧-೧೬೫-೭)**

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು. ಇಲ್ಲಿ ಅಸ್ಮೇ ಎಂದರೆ ಅಸ್ಮಾಭಿಃ–ನಮ್ಮಿಂದ ಎಂದರ್ಥವು.

**(೪) ಅಸ್ಮೇ ಪ್ರಯಂಧಿ ಮಘವನ್ನೃಜೀಷಿನ್ । ಅಸ್ಮಭ್ಯಮಿತ್ಯರ್ಥಃ ॥**

**ಚತುರ್ಥ್ಯಾಸ್ತಾವತ್**—ಇಲ್ಲಿ ಅಸ್ಮೇ ಎಂದರೆ ಅಸ್ಮಭ್ಯಂ-ನಮಗಾಗಿ ಎಂದು ಚತುರ್ಥೀವಿಭಕ್ತ್ಯರ್ಥವು ಉದಾಹರಣೆ-

> **ಅಸ್ಮೇ ಪ್ರ ಯಂಧಿ ಮಘವನ್ನೃಜೀಷಿನ್ನಿಂದ್ರ ರಾಯೋ ವಿಶ್ವವಾರಸ್ಯ ಭೂರೇಃ ।**
> **ಅಸ್ಮೇ ಶತಂ ಶರದೋ ಜೀವಸೇ ಧಾ ಅಸ್ಮೇ ವೀರಾಞ್ಛಶ್ವತ ಇಂದ್ರ ಶಿಪ್ರಿನ್ ॥**
> **(ಋ. ಸಂ. ೩-೩೬-೧೦)**

ಎಂಬ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಗಳಿಗೆ ಅಸ್ಮಭ್ಯಂ-ನನುಗಾಗಿ ಎಂದು ಚತುರ್ಥೀವಿಭಕ್ತ್ಯರ್ಥವು.

**(೫) ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು । ಅಸ್ಮದಿತ್ಯರ್ಥಃ ।**

**ಪಂಚಮ್ಯಾಸ್ತಾವತ್**-ಇಲ್ಲಿ ಅಸ್ಮೇ ಎಂದರೆ ಅಸ್ಮತ್-ನಮ್ಮ ದೆಸೆಯಿಂದ ಎಂದರ್ಥವು. ಉದಾಹರಣೆ—

**ತಸ್ಯ ವಯಂ ಸುಮತೌ ಯಜ್ಞಿಯಸ್ಯಾಪಿ ಭದ್ರೇ ಸೌಮನಸೇ ಸ್ಯಾಮ ।**

**ಸ ಸುತ್ರಾಮಾ ಸ್ವವಾ ಇಂದ್ರೋ ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು ॥**

(ಋ. ಸಂ. ೬-೪೭-೧೩)

ಎಂಬ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮತ್-ನಮ್ಮ ದೆಸೆಯಿಂದ ಎಂದು ಪಂಚಮೀವಿಭಕ್ತ್ಯರ್ಥವು.

**(೬) ಊರ್ವ ಇವ ಪಪ್ರಥೇ ಕಾಮೋ ಅಸ್ಮೇ । ಅಸ್ಮಾಕಮಿತ್ಯರ್ಥಃ ।**

**ಷಷ್ಠ್ಯಾಸ್ತಾವತ್**—ಇಲ್ಲಿ ಅಸ್ಮೇ ಎಂದರೆ ಅಸ್ಮಾಕಂ-ನಮಗೆ ಎಂದರ್ಥವು. ಈ ಅರ್ಥವಿವರಣೆಗಾಗಿ—

**ಆ ನೋ ಭರ ಭಗಮಿಂದ್ರ ದ್ಯುಮಂತಂ ನಿ ತೇ ದೇಷ್ಣಸ್ಯ ಧೀಮಹಿ ಪ್ರರೇಕೇ ।**

**ಊರ್ವ ಇವ ಪಪ್ರಥೇ ಕಾಮೋ ಅಸ್ಮೇ ತಮಾ ಪೃಣ ವಸುಪತೇ ವಸೂನಾಂ ॥**

(ಋ. ಸಂ. ೩-೩೦-೧೯)

ಎಂಬ ಋಕ್ಕನ್ನುದಹರಿಸಿರುವರು. ಈ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮಾಕಂ-ನಮ್ಮ, ನಮಗೆ ಎಂದು ಷಷ್ಠೀ ವಿಭಕ್ತ್ಯರ್ಥವು.

**(೭) ಅಸ್ಮೇ ಧತ್ತ ವಸವೋ ವಸೂನಿ । ಅಸ್ಮಾಸ್ವಿತ್ಯರ್ಥಃ ॥**

**ಸಪ್ತಮ್ಯಾಸ್ತಾವತ್**--ಇಲ್ಲಿ ಅಸ್ಮೇ ಎಂದರೆ ನಮ್ಮಲ್ಲಿ ಎಂದರ್ಥವು. ಉದಾಹರಣೆ—

**ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।**

**ಅಸ್ಮೇ ಧೇಹಿ ಜಾತವೇದೋ ಮಹಿ ಶ್ರವಃ ॥**

(ಋ. ಸಂ ೧-೭೯-೪)

ಈ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮಾಸು ನಮ್ಮಲ್ಲಿ ಎಂದು ಸಪ್ತಮೀವಿಭಕ್ತ್ಯರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಅಸ್ಮೇ—ಸುಪಾಂ ಸುಲುಕ್**—(ಪಾ. ಸೂ. ೭-೧-೩೪) ಎಂಬುದರಿಂದ ಷಷ್ಠೀಬಹುವಚನಕ್ಕೆ ಶೇಆದೇಶ.

**ಯಜತ್ರಾಃ**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. **ಅಮಿನಕ್ಷಿಯಜಿ**—(ಉ. ಸೂ. ೩-೩೮೫) ಎಂಬುದರಿಂದ ಅತ್ರನ್ ಪ್ರತ್ಯಯ. ಸಂಬೋಧನಾದಲ್ಲಿ ಆಮಂತ್ರಿತನಿಘಾತಸ್ವರ ಬರುತ್ತದೆ.

**ಸದನೀ**—ಷದ್‌ಲೃ ವಿಶರಣಗತ್ಯವಸಾದನೇಷು ಧಾತು. ಲ್ಯುಟ್ ಪ್ರತ್ಯಯ ಬಂದಾಗ ಅದಕ್ಕೆ ಅನಾದೇಶ. ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಟಿತ್ತಾದುದರಿಂದ ಙೀಪ್ ಪ್ರತ್ಯಯ ಬರುತ್ತದೆ.

**ಭೂಯಾಃ**—ಭೂ ಸತ್ತಾಯಾಂ ಧಾತು. **ವ್ಯತ್ಯಯೋ ಬಹುಲಮ್** ಎಂಬುದರಿಂದ ಲಿಙ್ ಪ್ರಥಮ ಪುರುಷಏಕವಚನಕ್ಕೆ ಮಧ್ಯಮಪುರುಷಏಕವಚನಪ್ರತ್ಯಯ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯತತೇ**—ಯತೀ ಪ್ರಯತ್ನೇ ಧಾತು ಲಟ್ ಪ್ರಥಮಪುರುಷಏಕವಚನಾಂತರೂಪ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುತ್ತದೆ. **ತಾಸ್ಯನುದಾತ್ತೇತ್**—ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವಸೂಯುಃ**—ವಸೂನಿ ಇಚ್ಛತಿ ಎಂದು ಅರ್ಥ ವಿವಕ್ಷಾಮಾಡಿದಾಗ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. **ಕ್ಯಾಚ್ಛಂದಸಿ** (ಪಾ. ಸೂ, ೩-೨-೧೭೦) ಎಂಬುದರಿಂದ ಅದರಮೇಲೆ ಉಪ್ರತ್ಯಯ. **ಅತೋ ಲೋಪಃ** ಸೂತ್ರದಿಂದ ಕ್ಯಚಿನ ಅಕಾರಕ್ಕೆ ಲೋಪ. ಛಾಂದಸವಾಗಿ ಪೂರ್ವಕ್ಕೆ ಸಂಹಿತಾದಲ್ಲಿ ದೀರ್ಘ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

---

## ನೂರ ಎಂಭತ್ತೇಳನೆಯ ಸೂಕ್ತವು.

---

### ಪೀಠಿಕೆ.

ಈ ಸೂಕ್ತಕ್ಕೆ ಅನ್ನಸ್ತುತಿಯೇ ದೇವತೆಯು. ಶೌನಕರು ತಮ್ಮ ಋಗ್ವಿಧಾನದಲ್ಲಿ ಹೇಳಿರುವಂತೆ (ಋಗ್ವಿ. ೧-೨೩) ಅನ್ನವನ್ನು ಅಥವಾ ಆಹಾರವನ್ನು ಭಕ್ತಿಯಿಂದ ಪೂಜಿಸಿ ಉಪಾಸನೆ ಮಾಡಿ ಬಳಿಕ ಅತಿಥಿ ಮೊದಲಾದವರಿಗೆ ಸ್ವಲ್ಪಭಾಗವನ್ನು ದಾನಮಾಡಿ ಅನಂತರ ತಾನು ಭುಜಿಸಬೇಕು ಎಂಬುದು ಆರ್ಯರಲ್ಲಿ ಹಿಂದಿನಿಂದಲೂ ನಡೆದು ಬಂದಿರುವ ಪದ್ಧತಿಯಾಗಿದೆ. ಅನ್ನದ ಮಹತ್ತ್ವದ ವಿಚಾರದಲ್ಲಿ ಇಲ್ಲಿ ಸ್ವಲ್ಪ ವಿಮರ್ಶೆಮಾಡುವುದು ಅವಶ್ಯಕವಾಗಿದೆ. ಅನ್ನವೆಂಬ ಶಬ್ದವು **ಅದ-ಭಕ್ಷಣೇ** (ಅದ್-ತಿನ್ನು) ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಅನ್ನದ ಉತ್ಪತ್ತಿ ವಿಷಯದಲ್ಲಿ—

> **ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾ ಓಷಧಯಃ । ಓಷಧೀಭ್ಯೋಽನ್ನಂ । ಅನ್ನಾತ್ಪುರುಷಃ ॥**
>
> (ತೈ. ಉ. ೨-೧)

ಎಂದು ಶ್ರುತಿವಾಕ್ಯವಿರುವುದು. ಪ್ರಪಂಚ ಅಥವಾ ಪಂಚಭೂತಗಳ ಸೃಷ್ಟಿಕಾಲದಲ್ಲಿ ಪರಬ್ರಹ್ಮವಸ್ತುವಿನಿಂದ (ಪರಮಾತ್ಮನಿಂದ) ಮೊದಲು ಆಕಾಶವೂ, ಆಕಾಶದಿಂದ ವಾಯುವೂ, ವಾಯುವಿನಿಂದ ಅಗ್ನಿಯೂ, ಅಗ್ನಿಯಿಂದ ಉದಕವೂ, ಉದಕದಿಂದ ಪೃಥಿವೀ (ಭೂಮಿ) ಯೂ, ಭೂಮಿಯಿಂದ ಓಷಧಿಗಳೂ (ಸಸ್ಯಾದಿಗಳೂ), ಓಷಧಿಗಳಿಂದ ಅನ್ನವೂ ಉತ್ಪನ್ನವಾಯಿತೆಂದು ಹೇಳಿದೆ- ಇಂತಹ ಅನ್ನದಿಂದ ಪುರುಷನ (ಇತರ ಪ್ರಾಣಿಗಳೂ ಸಹ) ಉತ್ಪತ್ತಿ

ಯುಂಟಾಯಿತೆಂದೂ ಹೇಳಿದೆ. ಮತ್ತು ಅನ್ನಕ್ಕೆ ಇರುವ ಪ್ರಾಶಸ್ತ್ಯವೇನು ? ಅನ್ನದಿಂದ ಆಗುವ ಉಪಯೋಗ ವೇನು ? ಅನ್ನಕ್ಕೆ ಅನ್ನವೆಂದು ಹೆಸರು ಬರಲು ಕಾರಣವೇನು ಮುಂತಾದ ಪ್ರಶ್ನೆಗಳಿಗೆ ಉತ್ತರವನ್ನೂ ಅಲ್ಲಿಯೇ ಹೇಳಿದೆ.—

> ಅನ್ನಾದ್ವೈ ಪ್ರಜಾಃ ಪ್ರಜಾಯಂತೇ । ಯಾಃ ಕಾಶ್ಚ ಪೃಥಿವೀಗ್ ಶ್ರಿತಾಃ । ಅಥೋ ಅನ್ನೇನೈವ ಜೀವಂತಿ । ಅಥೈನದಪಿಯಂತ್ಯಂತತಃ । ಅನ್ನಗ್ಂಹಿ ಭೂತಾನಾಂ ಜ್ಯೇಷ್ಠಂ । ತಸ್ಮಾತ್ಸರ್ವೌ-ಷಧಮುಚ್ಯತೇ । ಸರ್ವಂ ವೈ ತೇಽನ್ನಮಾಪ್ನುವಂತಿ । ಯೇಽನ್ನಂ ಬ್ರಹ್ಮೋಪಾಸತೇ । ಅನ್ನಗ್ಂಹಿ ಭೂತಾನಾಂ ಜ್ಯೇಷ್ಠಂ । ತಸ್ಮಾತ್ಸರ್ವೌಷಧಮುಚ್ಯತೇ । ಅನ್ನಾದ್ಭೂತಾನಿ ಜಾಯಂತೇ । ಜಾತಾನ್ಯನ್ನೇನ ವರ್ಧಂತೇ । ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತ ಇತಿ ॥
>
> (ತೈ. ಉ. ೨-೨)

ಎಂದರೆ ಪೃಥಿವಿಯನ್ನಾಶ್ರಯಿಸಿದ ಎಲ್ಲಾ ಪ್ರಜೆಗಳೂ (ಸಮಸ್ತ ಪ್ರಾಣಿಗಳೂ ಸಹ) ಅನ್ನದಿಂದಲೇ ಹುಟ್ಟುವರು, ಅನ್ನದಿಂದಲೇ ಜೀವಿಸುವರು, ಕೊನೆಗೆ ಅದರಲ್ಲಿಯೇ ಲಯಹೊಂದುವರು. ಭೂತಗಳಲ್ಲಿ (ಅಥವಾ ಪಂಚಮಹಾಭೂತ ಗಳಲ್ಲಿ ಸೃಜಿಸಲ್ಪಟ್ಟ ವಸ್ತುಗಳಲ್ಲಿ) ಅನ್ನವೇ ಎಲ್ಲಕ್ಕೂ ಹಿರಿಯದು. ಆದುದರಿಂದ ಅದಕ್ಕೆ ಸರ್ವೌಷಧವೆನ್ನುವರು. ಅನ್ನರೂಪದಿಂದಿರುವ (ಪರ) ಬ್ರಹ್ಮದ ಉಪಾಸನೆ ಮಾಡುವವರು ಎಲ್ಲ ಅನ್ನವನ್ನೂ ಸಂಪಾದಿಸುವರು ಎಂದರೆ ಅವರಿಗೆ ಅನ್ನವು ಯಥೇಷ್ಟವಾಗಿ ದೊರಕುವುದು. ಅನ್ನವೇ ಎಲ್ಲಾ ಭೂತಗಳಲ್ಲಿ ಹಿರಿಯದು.

ಭೂತಗಳೆಂದರೆ ಪೃಥಿವೀ, ಉದಕ, ತೇಜಸ್ಸು, ವಾಯು, ಆಕಾಶ ಎಂದು ಪಂಚಮಹಾಭೂತಗಳು. ಈ ಪಂಚಮಹಾಭೂತಗಳೂ ಅವುಗಳ ಮೂಲರೂಪದಲ್ಲಿಯೇ ಆಹಾರವಾಗಿ ಇರುವವು. ಹೇಗೆಂದರೆ—ಪೃಥಿವೀಯೆಂದರೆ ಗಟ್ಟಿಪದಾರ್ಥ. ನಾವು ತಿನ್ನುವ ಆಹಾರದಲ್ಲಿ ಧಾನ್ಯ ಮೊದಲಾದ ಗಟ್ಟಿಪದಾರ್ಥಗಳಿದ್ದೇ ಇರುವವು. ಇವು ಪೃಥಿವ್ಯಂಶವು. ಎರಡನೆಯದು ಉದಕವು. ಉದಕವನ್ನು ನಾವು ಪಾನಮಾಡುವೆವು. ಇದಲ್ಲದೆ ನಾವು ತಿನ್ನುವ ಅಥವಾ ಪಾನಮಾಡುವ (ಹಾಲು ಮೊದಲಾದ) ಇತರ ವಸ್ತುಗಳಲ್ಲಿಯೂ ಉದಕಾಂಶವು ಇದ್ದೇ ಇರುವುದು. ಪ್ರಾಣಿ ಗಳಿಗೆ ಪೃಥಿವ್ಯಂಶವಾದ (ಘಟ್ಟಿಯಾದ) ಆಹಾರಕ್ಕಿಂತಲೂ ಉದಕವು ಹೆಚ್ಚಾಗಿ ಬೇಕಾಗುವುದು ನಮ್ಮ ಶರೀರ ದಲ್ಲಿಯೂ ಸಹ ಉದಕಾಂಶವೇ (ರಕ್ತವೇ) ಹೆಚ್ಚಾಗಿರುವುದು. ಮೂರನೆಯದು—ತೇಜಸ್ಸು. ತೇಜಸ್ಸೆಂದರೆ ಶಾಖವು. ಪ್ರಾಣಿಗಳು ಶಾಖವಿಲ್ಲದೆ ಜೀವಿಸುವುದಕ್ಕಾಗುವುದಿಲ್ಲ ನಾವು ತೆಗೆದುಕೊಳ್ಳುವ ಆಹಾರದಿಂದಲೂ ನಮ್ಮ ಸುತ್ತಲೂ ಇರುವ ಬಿಸಿಲು ಗಾಳಿ ಮೊದಲಾದುವುಗಳಲ್ಲಿ ಇರುವ ಉಷ್ಣಾಂಶದಿಂದಲೂ ನಮಗೆ ಶಾಖವು ದೊರೆಯುವುದು. ದೇಹ ದಲ್ಲಿ ಶಾಖವು ಇಲ್ಲದೆ ನಿಂತುಹೋದಕೂಡಲೇ ಮರಣವು ಸಂಭವಿಸುವುದು. ಹುಟ್ಟಿದಲಾಗಾಯಿತು ಸಾಯುವವರಿಗೂ ದೇಹದಲ್ಲಿ ಶಾಖವಿದ್ದೇ ಇರಬೇಕು- ಆದುದರಿಂದ ಶಾಖದ ಅಥವಾ ತೇಜಸ್ಸಿನ ಅವಶ್ಯಕತೆ ಎಷ್ಟಿರುವುದೆಂಬುದನ್ನು ಹೇಳುವ ಅವಶ್ಯಕತೆ ಇಲ್ಲ. ನಮಗೆ ಉದಕಕ್ಕಿಂತ ಒಂದುಪಾಲು ತೇಜಸ್ಸು ಹೆಚ್ಚಿಗೆ ಬೇಕಾಗುವುದು. ನಾಲ್ಕನೆ ಯದು:—ವಾಯುವು. ನಾವು ಉಸಿರನ್ನು ಒಳಕ್ಕೆ ಎಳೆದುಕೊಳ್ಳುವಾಗ ಹೊರಗಿರುವ ವಾಯುವನ್ನು ಆಕರ್ಷಿಸಿ ದೇಹದ ಒಳಕ್ಕೆ ತೆಗೆದುಕೊಳ್ಳುತ್ತೇವೆ. ಉಸಿರಾಡದೆ ಒಂದು ಕ್ಷಣವೂ ಇರಲಾಗುವುದಿಲ್ಲ ಉಸಿರಾಡುವುದು ನಿಂತೊಡನೆಯೇ ಪ್ರಾಣವೂ ಹೋಗುವುದು ಎಂದರೆ ಮರಣವು ಸಂಭವಿಸುವುದು. ಹುಟ್ಟಿದಲಾಗಾಯಿತು ಮರಣ

ಪರ್ಯಂತರ ಸಮಸ್ತ ಪ್ರಾಣಿಗಳಿಗೂ ವಾಯುವು ಅತ್ಯವಶ್ಯಕವಾಗಿ ಬೇಕೇಬೇಕು ಮತ್ತು ಹಿಂದೆ ಹೇಳಿದ, ಪೃಥಿವ್ಯಂಶವಾದಘಟ್ಟಿ ಆಹಾರ, ಉದಕ, ತೇಜಸ್ಸು ಇವುಗಳಿಗಿಂತ ವಾಯುವು ಅಧಿಕ ಪ್ರಮಾಣದಲ್ಲಿ ಬೇಕಾಗುವುದು. ಐದನೆಯದು—ಆಕಾಶ (ಅವಕಾಶ) ಆಕಾಶವಿಲ್ಲದೆ ನಾವಾಗಲಿ ಇತರ ಪ್ರಾಣಿಗಳಾಗಲಿ ಇರುವುದೇ। ಅಸಾಧ್ಯವು. ನಮ್ಮ ಚಲನವಲನಗಳಿಗೂ ಶರೀರದ ಅವಶ್ಯಕತೆಗೂ ಆಕಾಶವು ಬೇಕೇ ಬೇಕು. ತೇಜಸ್ಸು, ವಾಯು, ಆಕಾಶ ಎಂಬ ಮೂರು ವಸ್ತುಗಳೂ ನಮ್ಮ ಕಣ್ಣಿಗೆ ಕಾಣಸದಿದ್ದರೂ ಅವುಗಳು ನಮ್ಮ ಶರೀರಪೋಷಣೆಗೆ ಅತ್ಯವಶ್ಯಕವು ಇದಲ್ಲದೆ ನಮಗೆ (ಪ್ರಾಣಿಗಳಿಗೂಸಹ) ಪೃಥಿವ್ಯಂಶವಾದ ಘಟ್ಟಿಯಾದ ಆಹಾರಕ್ಕಿಂತ ಉದಕವು ಒಂದುಪಾಲು ಹೆಚ್ಚಾಗಿ ಬೇಕು. ಉದಕಕ್ಕಿಂತ ತೇಜಸ್ಸು ಹೆಚ್ಚಾಗಿ ಬೇಕು. ತೇಜಸ್ಸಿಗಿಂತ ವಾಯುವು ಹೆಚ್ಚಾಗಿಬೇಕು. ವಾಯುವಿಗಿಂತ ಆಕಾಶವು ಹೆಚ್ಚಾಗಿ ಬೇಕು ಮತ್ತು ಇನ್ನೊಂದು ವಿಶೇಷವೇನೆಂದರೆ ಪೃಥಿವ್ಯಂಶಸಂಬಂಧವಾದಆಹಾರದಲ್ಲಿ ಉದಕ, ತೇಜಸ್ಸು, ವಾಯು, ಆಕಾಶ ಇವುಗಳು ಮಿಶ್ರವಾಗಿರುವುವು ; ತೇಜಸ್ಸಿನಲ್ಲಿ ವಾಯು ಆಕಾಶಗಳಿರುವವು. ವಾಯುವಿನಲ್ಲಿ ಆಕಾಶವು ಸೇರಿರುವುದು. ಈ ರೀತಿ ಪಂಚಭೂತಗಳೂ ಅವುಗಳ ಮಿಶ್ರಣವೂ (ಎಂದರೆ) ಓಷಧಿವನಸ್ಪತಿಗಳು ಪ್ರಾಣಿಗಳಿಗೆ ಆಹಾರರೂಪವಾಗಿ ಏರ್ಪಟ್ಟಿರುವವು. ಈ ವಿಧವಾದ ಆಹಾರಕ್ಕೆ ಅನ್ನವೆಂದು ಹೆಸರು. ಆದುದರಿಂದ ಅದಕ್ಕೆ (ಅನ್ನಕ್ಕೆ) ಸರ್ವೌಷಧವೆನ್ನುವರು.

ಅನ್ನದಿಂದ ಭೂತಗಳ (ಪ್ರಾಣಿಗಳ) ಉತ್ಪತ್ತಿಯಾಗುವುದು. ಹುಟ್ಟಿದ ಪ್ರಾಣಿಗಳು ಅನ್ನದಿಂದಲೇ ಬೆಳೆದು ಅಭಿವೃದ್ಧಿಯನ್ನೈದುವವು (ದೊಡ್ಡದಾಗುವುವು). ಅದು (ಅನ್ನವು) ತಿನ್ನಲ್ಪಡುತ್ತದೆ ಹಾಗೂ ಪ್ರಾಣಿಗಳನ್ನೂ ತಿನ್ನುತ್ತದೆ. ಆದುದರಿಂದ ಅದಕ್ಕೆ ಅನ್ನವೆಂದು ಹೆಸರು. ಇಲ್ಲಿ ಕೊನೆಯವಾಕ್ಯಕ್ಕೆ (ಅನ್ನವು ತಿನ್ನಲ್ಪಡುತ್ತದೆ ಮತ್ತು ಅದು ಪ್ರಾಣಿಗಳನ್ನು ತಿನ್ನುತ್ತದೆ ಎಂಬ ವಾಕ್ಯಕ್ಕೆ) ವಿವರಣೆಯು ಅವಶ್ಯಕವು. ಪ್ರಪಂಚದಲ್ಲಿ ಸಂಚರಿಸುವ ಪ್ರಾಣಿಗಳಿಗೆ ಆಹಾರವೆಂಬುದು ಮೂಲಸ್ವರೂಪದಿಂದಿರುವ ನೀರು ಮೊದಲಾದ ಪಂಚಭೂತಗಳು ಹೊರತಾಗಿ ಇತರ ಆಹಾರವೆಲ್ಲವೂ ಸಜೀವ ಪ್ರಾಣಿಗಳಿಂದಲೇ ಉತ್ಪನ್ನವಾದದ್ದು. ಪ್ರಾಣಿಸಂಬಂಧವಾದ ಆಹಾರವಲ್ಲದೆ ಬೇರೆ ಆಹಾರವೇ ಪ್ರಪಂಚದಲ್ಲಿಲ್ಲ. ಹೇಗೆಂದರೆ ಮಾಂಸಹಾರಿಗಳಾದ ಪ್ರಾಣಿಗಳು ಸಸ್ಯಾಹಾರಿಗಳಾದ ಪ್ರಾಣಿಗಳನ್ನು ತಿನ್ನುತ್ತವೆ. ಸಸ್ಯಾಹಾರಿಗಳಾದ ಪ್ರಾಣಿಗಳು ಸಸ್ಯಗಳನ್ನು ತಿನ್ನುತ್ತವೆ. ಸಸ್ಯಗಳಿಗೂ ಜೀವವಿರುವುದರಿಂದ (ಸಸ್ಯವು ಜೀವವಿಲ್ಲದ್ದಾದರೆ ಬೆಳೆಯಲು ಹೇಗೆ ಸಾಧ್ಯ ?) ಜೀವವಿರುವ ಚರಪ್ರಾಣಿಗಳು ಒಂದನ್ನೊಂದು ತಿಂದೇ ಜೀವಿಸಬೇಕಾಗಿದೆ. ಸಸ್ಯಜಾತಿಯು ಚರವರ್ಗಕ್ಕೆ ಸೇರದಿರುವ ಪ್ರಯುಕ್ತ ಅವು ತಮ್ಮ ಆಹಾರವನ್ನು ಭೂಮಿಯಿಂದ ಅಥವಾ ಪಂಚಭೂತಗಳಿಂದ ನೇರವಾಗಿ ಮಾತ್ರ ಸ್ವೀಕರಿಸಿ ವೃದ್ಧಿಯಾಗುವುವು. ಆದುದರಿಂದ ಚರಪ್ರಾಣಿಗಳಿಗೆ ಸಜೀವಪ್ರಾಣಿಗಳ ಅಥವಾ ಸಸ್ಯಸಂಬಂಧವಾದ ಆಹಾರವಿಲ್ಲದೆ ಜೀವಿಸುವುದಕ್ಕಾಗುವುದಿಲ್ಲ. ಆದ್ದರಿಂದಲೇ ಅನ್ನವನ್ನು ಪ್ರಾಣಿಗಳು ತಿನ್ನುವುವು ; ಪ್ರಾಣಿಗಳನ್ನು ಅನ್ನವು ತಿನ್ನುವುದು ಎಂದರೆ ಪ್ರಾಣಿಗಳಿಂದಲೇ ಅನ್ನವು (ಆಹಾರವು) ಉಂಟಾಗುವುದು ಎಂದು ಮೇಲೆ ಹೇಳಿದೆ. ಮುಖ್ಯವಾದ ವಿಷಯವೇನೆಂದರೆ ಲೋಕದಲ್ಲಿ ಚರಪ್ರಾಣಿಗಳೂ (ಮನುಷ್ಯರೂ ಸಹ) ಒಂದನ್ನೊಂದು ತಿಂದೇ ಜೀವಿಸಬೇಕಾಗಿದೆ. ಅವುಗಳಿಗೆ ಪ್ರಾಣಿಸಂಬಂಧವಾದ ಆಹಾರವಿಲ್ಲದೆ ಜೀವಿಸುವುದಕ್ಕೆ ಆಗುವುದೇಇಲ್ಲ ಈ ಅಭಿಪ್ರಾಯವೇ **ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತೇ** ಎಂಬ ವಾಕ್ಯಗಳಲ್ಲಿ ಹೇಳಿರುವುದು.

ಅನ್ನವನ್ನೂ (ಆಹಾರವನ್ನು) ಪೂಜಿಸಿ ಗೌರವದಿಂದ ಕಾಣಬೇಕೆಂಬ ವಿಚಾರದಲ್ಲಿಯೂ ಶ್ರುತಿವಾಕ್ಯಗಳಿವೆ-—

**ಅನ್ನಂ ನ ನಿಂದ್ಯಾತ್ । ತದ್ವ್ರತಂ । ಪ್ರಾಣೋ ವಾ ಅನ್ನಂ । ಶರೀರಮನ್ನಾದಂ । ಪ್ರಾಣೇ ಶರೀರಂ ಪ್ರತಿಷ್ಠಿತಂ । ಶರೀರೇ ಪ್ರಾಣಃ ಪ್ರತಿಷ್ಠಿತಃ । ತದೇತದನ್ನಮನ್ನೇ ಪ್ರತಿಷ್ಠಿತಂ ।**

ಸ ಯಃ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ ।
ಮಹಾನ್ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ಕೀರ್ತ್ಯಾ ॥

(ತೈ. ಉ. ೩-೭)

ಅನ್ನವನ್ನು ನಿಂದಿಸಬಾರದು. ಅದನ್ನು ಒಂದು ವ್ರತವೆಂದು ಭಾವಿಸಬೇಕು ಪ್ರಾಣವೇ ಅನ್ನವು. ಶರೀರವು ಅನ್ನವನ್ನು ಭಕ್ಷಿಸಿ ಅದರಿಂದ ಬೆಳೆಯುವುದು. ಪ್ರಾಣದಲ್ಲಿ ಶರೀರವು ಪ್ರತಿಷ್ಠಿತವಾಗಿದೆ. ಶರೀರದಲ್ಲಿ ಪ್ರಾಣವು ಪ್ರತಿಷ್ಠಿತವಾಗಿದೆ. ಆದ್ದರಿಂದ ಪ್ರಾಣ ಮತ್ತು ಶರೀರಗಳಿಗೆ ಪರಸ್ಪರ ಸಂಬಂಧವಿದೆ. ಇವೆರಡೂ ಅನ್ನದಲ್ಲಿ ಪ್ರತಿಷ್ಠಿತವಿರುವುದು ಎಂದರೆ ಅನ್ನದಿಂದಲೇ ಶರೀರ ಮತ್ತು ಪ್ರಾಣಗಳ ವೃದ್ಧಿ ಮತ್ತು ರಕ್ಷಣೆಯು ಉಂಟಾಗುವುದು. ಅನ್ನವಿಲ್ಲದೆ ಶರೀರವಾಗಲಿ, ಪ್ರಾಣವಾಗಲಿ ಇರಲು ಸಾಧ್ಯವಿಲ್ಲ ಅನ್ನದಲ್ಲಿ (ಅನ್ನರೂಪವಾದ ಪರಬ್ರಹ್ಮದಲ್ಲಿ) ಅನ್ನ ಪ್ರತಿಷ್ಠಿತವಾಗಿರುವುದೆಂಬುದನ್ನು ಬಲ್ಲವನು ಗೌರವಿಸಲ್ಪಡುತ್ತಾನೆ. ಅನ್ನದಿಂದ ಸಮೃದ್ಧನೂ, ಅನ್ನವನ್ನು ಪಭೋಗಿಸುವವನೂ ಆಗುತ್ತಾನೆ. ಅವನು ಪ್ರಜೆಗಳಿಂದಲೂ (ಸಂತಾನಾದಿಗಳಿಂದಲೂ) ಪಶುಸಂಪತ್ತಿನಿಂದಲೂ, ಬ್ರಹ್ಮವರ್ಚಸ್ಸು ಮತ್ತು ಕೀರ್ತಿಗಳಿಂದಲೂ ಯುಕ್ತನಾಗಿ ಮನುಷ್ಯರಲ್ಲಿ ಶ್ರೇಷ್ಠನೂ ಗೌರವಾನ್ವಿತನೂ ಆಗುತ್ತಾನೆ.

ಅನ್ನಂ ನ ಪರಿಚಕ್ಷೀತ । ತದ್ವ್ರತಂ । ಆಪೋ ವಾ ಅನ್ನಂ । ಜ್ಯೋತಿರನ್ನಾದಂ । ಅಪ್ಸು
ಜ್ಯೋತಿಃ ಪ್ರತಿಷ್ಠಿತಂ । ಜೋತಿಷ್ಯಾಪಃ ಪ್ರತಿಷ್ಠಿತಾಃ । ತದೇತದನ್ನಮನ್ನೇ ಪ್ರತಿಷ್ಠಿತಂ ।
ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ ।
ಮಹಾನ್ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ಕೀರ್ತ್ಯಾ ॥

(ತೈ. ಉ. ೩-೮)

ಅನ್ನವನ್ನು ಹೀಯಾಳಿಸಬೇಡಿರಿ. ಹಾಗೆ ಮಾಡುವುದೇ ಒಂದು ವ್ರತವೆಂದು ಭಾವಿಸಿ. ಉದಕವೇ ಅನ್ನವು, ಜ್ಯೋತಿಯು (ತೇಜಸ್ಸು) ಅನ್ನವನ್ನು ಭಕ್ಷಿಸುವುದು. ಉದಕದಲ್ಲಿ ಜ್ಯೋತಿಯು ಪ್ರತಿಷ್ಠಿತವಾಗಿದೆ ಜ್ಯೋತಿಯಲ್ಲಿ ಉದಕವು ಪ್ರತಿಷ್ಠಿತವು. ಇವೆರಡು ಎಂದರೆ ಜ್ಯೋತಿ ಮತ್ತೂ ಉದಕಗಳು ಅನ್ನದಲ್ಲಿ ಪ್ರತಿಷ್ಠಿತವಾಗಿರುವುವು. (ಅನ್ನದಲ್ಲಿ ಶಾಖವೂ ಉದಕಾಂಶವೂ ಇರುವುದು)ಅನ್ನವು ಅನ್ನದಲ್ಲಿ (ಅನ್ನರೂಪವಾದ ಪರಬ್ರಹ್ಮದಲ್ಲಿ) ಪ್ರತಿಷ್ಠಿತವಾಗಿರುವುದೆಂಬುದನ್ನು ಬಲ್ಲವನು ಗೌರವಿಸಲ್ಪಡುತ್ತಾನೆ. ಅನ್ನದಿಂದ ಸಮೃದ್ಧನೂ, ಅನ್ನವನ್ನುಪಭೋಗಿಸುವವನೂ ಆಗುತ್ತಾನೆ. ಅವನು ಪ್ರಜೆಗಳಿಂದಲೂ (ಸಂತಾನಾದಿಗಳಿಂದಲೂ) ಪಶುಸಂಪತ್ತಿನಿಂದಲೂ, ಬ್ರಹ್ಮವರ್ಚಸ್ಸು ಮತ್ತು ಕೀರ್ತಿಗಳಿಂದಲೂ ಯುಕ್ತನಾಗಿ ಮನುಷ್ಯರಲ್ಲಿ ಶ್ರೇಷ್ಠನೂ ಗೌರವಾನ್ವಿತನೂ ಆಗುತ್ತಾನೆ.

ಅನ್ನವನ್ನು ಅತಿಥಿ ಅಭ್ಯಾಗತರಿಗೆ ದಾನಮಾಡಿ ಅನಂತರ ತಾನು ಭುಜಿಸಬೇಕೆಂಬ ವಿಷಯದಲ್ಲಿಯೂ ಅನೇಕ ಶ್ರುತಿಪ್ರಮಾಣಗಳಿವೆ.

ಮೋಘಮನ್ನಂ ವಿಂದತೇ ಅಪ್ರಚೇತಾಃ ಸತ್ಯಂ ಬ್ರವೀಮಿ ವಧ ಇತ್ಸ ತಸ್ಯ ।
ನಾರ್ಯಮಣಂ ಪುಷ್ಯತಿ ನೋ ಸಖಾಯಂ ಕೇವಲಾಘೋ ಭವತಿ ಕೇವಲಾದೀ ॥

(ಋ. ಸಂ. ೧೦-೧೧೭-೬)

ಎಂದರೆ ಯಾರಿಗೂ ಏನನ್ನೂ ಕೊಡದ ಲೋಭಿಯು ಸಂಪಾದಿಸುವ ಅನ್ನವು (ಆಹಾರವು) ವ್ಯರ್ಥವು. ಅವನು ಸಂಪಾದಿಸುವ ಅನ್ನದಿಂದ ಅವನಿಗೆ ಯಾವ ಉಪಕಾರವೂ ಆಗುವುದಿಲ್ಲ. ಅದು ಅವನ ಮರಣಕ್ಕೇ (ಕೇಡಿಗೂ) ಕಾರಣವಾಗುವುದು. ಇದು ನಿಜವೆಂದು ನಾನು ಹೇಳುತ್ತೇನೆ. ಯಾವ ಪುರುಷನು ಅರ್ಯಮಾದಿ ದೇವತೆಗಳಿಗೆ ಹವಿರಾದಿಗಳನ್ನು ಕೊಡದೆ ಎಂದರೆ ದೇವತೆಗಳಿಗೆ ಆಹಾರವನ್ನು ಸಮರ್ಪಿಸದೆ ಸ್ನೇಹಿತನಿಗೂ ಅಥವಾ ಸ್ನೇಹಿತನಂತೆ ಮನೆಗೆ ಬರುವ ಅತಿಥಿಅಭ್ಯಾಗತರಿಗೂ ಆಹಾರದಿಂದ ತೃಪ್ತಿಪಡಿಸದೆ ತಾನೊಬ್ಬನೇ ತಿನ್ನುತ್ತಾನೆಯೋ ಅವನು ಮಹಾ ಪಾಪಿಯು ಎಂದು ಹೇಳಿರುವುದು. ಮತ್ತು,

> **ನ ಸ ಸಖಾ ಯೋ ನ ದದಾತಿ ಸಖ್ಯೇ ಸಚಾಭುವೇ ಸಚಮಾನಾಯ ಪಿತ್ವಃ ।**
> **ಅಪಾಸ್ಮಾತ್ಪ್ರೇಯಾನ್ನ ತದೋಕೋ ಅಸ್ತಿ ಪೃಣಂತಮನ್ಯಮರಣಂ ಚಿದಿಚ್ಛೇತ್ ॥**
>
> **(ಋ. ಸಂ ೧೦-೧೧೭-೪)**

ಸ್ನೇಹಿತನಿಗೂ, ತನ್ನ ಜತೆಗಾರನಿಗೂ, ತನ್ನ ಸಮೀಪದಲ್ಲಿರುವವನಿಗೂ ಅನ್ನವನ್ನು ಕೊಡದಿರುವವನು ಸ್ನೇಹಿತನೇ ಅಲ್ಲ. ಆದ್ದರಿಂದ ಅಂತಹ ಪುರುಷನ ಮನೆಯನ್ನು ಬಿಟ್ಟು ಹೋಗಬೇಕು. ಅದೊಂದೇ ಮನೆಯಲ್ಲ. ಅನ್ನವನ್ನು ಕೊಡತಕ್ಕ ಉದಾರಿಗಳ ಮನೆಯು ಇದ್ದೇ ಇರುವುದು. ಅಲ್ಲಿಗೆ ಹೋಗುವುದು ಒಳ್ಳೆಯದು. ಎಂದು ಋಷಿಯು ವರ್ಣಿಸಿರುವನು. ಆದುದರಿಂದಲೇ ಸದ್ಗೃಹಸ್ಥರಾದವರು ಅತಿಥಿಅಭ್ಯಾಗತರ ಸತ್ಕಾರಕ್ಕಾಗಿ ಮನೆಯಲ್ಲಿ ಅನ್ನವನ್ನು ತಮಗೆ ಸಾಕಾಗುವುದಕ್ಕಿಂತ ಸ್ವಲ್ಪ ಹೆಚ್ಚಿಗೆ ಮಾಡಬೇಕು. ಈ ವಿಷಯದಲ್ಲಿ

> **ಅನ್ನಂ ಬಹು ಕುರ್ವೀತ । ತದ್ವ್ರತಂ । ಪೃಥಿವೀ ವಾ ಅನ್ನಂ । ಆಕಾಶೋಽನ್ನಾದಃ । ಪೃಥಿವ್ಯಾಮಾಕಾಶಃ ಪ್ರತಿಷ್ಠಿತಃ । ಆಕಾಶೇ ಪೃಥಿವೀ ಪ್ರತಿಷ್ಠಿತಾ । ತದೇತದನ್ನಮನ್ನೇ ಪ್ರತಿಷ್ಠಿತಂ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥**
>
> **(ತೈ. ಉ. ೩-೯)**

ಅನ್ನವನ್ನು ಹೆಚ್ಚಾಗಿ ಮಾಡಬೇಕು. ಹಾಗೆ ಮಾಡುವುದನ್ನೇ ಒಂದು ವ್ರತವೆಂದು ಭಾವಿಸಬೇಕು. ಪೃಥಿವಿಯು ಅನ್ನವು. ಆಕಾಶವು ಅನ್ನವನ್ನು ಭಕ್ಷಿಸುವುದು. ಎಂದರೆ ಪೃಥಿವಿಯಲ್ಲಿ ಬೆಳೆಯುವ ಸಸ್ಯಾದಿಗಳೂ, ಧಾನ್ಯಾದಿಗಳೂ ಹವೀರೂಪದಿಂದ ಅಂತರಿಕ್ಷ (ಸ್ವರ್ಗ) ಸ್ಥರಾದ ದೇವತೆಗಳಿಂದ ಭುಜಿಸಲ್ಪಡುವುದು. ಪೃಥಿವಿಯಲ್ಲಿ ಆಕಾಶವು ಪ್ರತಿಷ್ಠಿತವು. ಆಕಾಶದಲ್ಲಿ ಪೃಥಿವಿಯು ಪ್ರತಿಷ್ಠಿತವು. ಇವೆರಡೂ (ಪೃಥಿವ್ಯಾಕಾಶಗಳೆರಡೂ) ಅನ್ನದಲ್ಲಿ ಪ್ರತಿಷ್ಠಿತವು. ಆ ಅನ್ನವು ಅನ್ನದಲ್ಲಿ (ಅನ್ನರೂಪವಾದ ಬ್ರಹ್ಮದಲ್ಲಿ) ಪ್ರತಿಷ್ಠಿತವು ಅನ್ನವು ಅನ್ನದಲ್ಲಿ ಪ್ರತಿಷ್ಠಿತವಾಗಿರುವುದನ್ನು ಬಲ್ಲವನು ಪ್ರತಿಷ್ಠೆ ಅಥವಾ ಗೌರವದಿಂದ ಬಾಳುತ್ತಾನೆ. ಅವನು ಅನ್ನದಿಂದ ಸಮೃದ್ಧನೂ, ಅನ್ನವನ್ನುಪ-ಭೋಗಿಸುವವನೂ ಆಗುತ್ತಾನೆ ಮತ್ತು ಪುತ್ರಪೌತ್ರಾದಿಸಂತತಿಯುಕ್ತನಾಗಿಯೂ, ಪಶುಗಳಿಂದ ಕೂಡಿದವನಾಗಿಯೂ, ಬ್ರಹ್ಮವರ್ಚಸ್ಸು ಕೀರ್ತಿಗಳಿಂದ ಸಹಿತನಾಗಿಯೂ ಮನುಷ್ಯರಲ್ಲಿ ಮನ್ನಣೆಯನ್ನು ಪಡೆಯುತ್ತಾನೆ. ಮತ್ತು,

> **ನ ಕಂಚನ ವಸತೌ ಪ್ರತ್ಯಾಚಕ್ಷೀತ । ತದ್ವ್ರತಂ । ತಸ್ಮಾದ್ಯಯಾ ಕಯಾ ಚ ವಿಧಯಾ ಬಹ್ವನ್ನಂ ಪ್ರಾಪ್ನುಯಾತ್ । ಅರಾಧ್ಯಸ್ಮಾ ಅನ್ನಮಿತ್ಯಾಚಕ್ಷತೇ । ಏತದ್ವೈ ಮುಖತೋಽನ್ನಗ್‌ಂ ರಾದ್ಧಂ । ಮುಖತೋಽಸ್ಮಾ ಅನ್ನಗ್‌ಂರಾಧ್ಯತೇ । ಏತದ್ವೈ ಮಧ್ಯತೋಽನ್ನಗ್‌ಂ ರಾದ್ಧಂ ।**

ಮಧ್ಯತೋಽಸ್ಮಾ ಅನ್ನಗ್ಂ ರಾಧ್ಯತೇ । ಏತದ್ವಾ ಅಂತತೋಽನ್ನಗ್ಂ ರಾದ್ಧಂ । ಅಂತತೋಽಸ್ಮಾ ಅನ್ನಗ್ಂ ರಾಧ್ಯತೇ । ಯ ಏವಂ ವೇದ । .... .... .... .... .... ತತ್ಪ್ರತಿಷ್ಠೇತ್ಯುಪಾಸೀತ । ಪ್ರತಿಷ್ಠಾವಾನ್ ಭವತಿ । ತನ್ಮಹ ಇತ್ಯುಪಾಸೀತ । ಮಹಾನ್ಭವತಿ । ತನ್ಮನ ಇತ್ಯುಪಾಸೀತ । ಮಾನವಾನ್ಭವತಿ । ತನ್ನಮ ಇತ್ಯುಪಾಸೀತ । ನಮ್ಯಂತೇಽಸ್ಮೈ ಕಾಮಾಃ । ತದ್ಬ್ರಹ್ಮೇತ್ಯುಪಾಸೀತ । ಬ್ರಹ್ಮವಾನ್ಭವತಿ । ತದ್ಬ್ರಹ್ಮಣಃ ಪರಿಮರ ಇತ್ಯುಪಾಸೀತ । ಪರ್ಯೇಣಂ ಮ್ರಿಯಂತೇ ದ್ವಿಷಂತಃ ಸಪತ್ನಾಃ । ಪರಿಯೇ ಪ್ರಿಯಾ ಭ್ರಾತೃವ್ಯಾಃ । ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ । ಸ ಯ ಏವಂ ವಿತ್ । ಅಸ್ಮಾಲ್ಲೋಕಾತ್ಪ್ರೇತ್ಯ। ಏತಮನ್ನಮಯಮಾತ್ಮಾನಮುಪಸಂಕ್ರಮ್ಯ । ಏತಂ ಪ್ರಾಣಮಯಮಾತ್ಮಾನಮುಪಸಂಕ್ರಮ್ಯ । ಏತಂ ಮನೋಮಯಮಾತ್ಮಾನಮುಪಸಂಕ್ರಮ್ಯ । ಏತಂ ವಿಜ್ಞಾನಮಯಮಾತ್ಮಾನಮುಪಸಂಕ್ರಮ್ಯ । ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ । ಇಮಾನ್‌ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್ । ಏತತ್ಸಾಮಗಾಯನ್ನಾಸ್ತೇ । ಹಾ ೩ ವು ಹಾ ೩ ವು ಹಾ ೩ ವು । ಅಹಮನ್ನಮಹಮನ್ನಮಹಮನ್ನಂ । ಅಹಮನ್ನಾದೋಽ೨ ಹಮನ್ನಾದೋಽ೨-ಹಮನ್ನಾದಃ । ಅಹಗ್ಂಶ್ಲೋಕಕೃದಹಗ್ಂ ಶ್ಲೋಕಕೃದಹಗ್ಂಶ್ಲೋಕಕೃತ್ । ಅಹಮಸ್ಮಿ ಪ್ರಥಮಜಾ ಋತಾ ೩ ಸ್ಯ । ಪೂರ್ವಂದೇವೇಭ್ಯೋ ಅಮೃತಸ್ಯನಾ ೩ ಭಾಯಿ । ಯೋ ಮಾ ದದಾತಿ ಸ ಇದೇವಮಾ ೩ ವಾಃ । ಅಹಮನ್ನ ಮನ್ನಮದಂತಮಾ ೩ ದ್ಮಿ । ಅಹಂ ವಿಶ್ವಂ ಭುವನಮಭ್ಯಭವಾಂ । ಸುವರ್ಣಜ್ಯೋತೀಃ । ಯ ಏವಂ ವೇದ । ಇತ್ಯುಪನಿಷತ್ ॥

(ತೈ. ಉ. ೩-೧೦)

ಮೇಲೆ ಹೇಳಿದ ಈ ವಾಕ್ಯಗಳನ್ನು ವೇದಪುರುಷನೇ ಹೇಳಿದ್ದಾನೆ. ಮನೆಯಲ್ಲಿ ಸ್ಥಳವಿಲ್ಲವೆಂದು ಯಾರಿಗೂ ಅಲ್ಲಗಳೆಯಬಾರದು. ಅದನ್ನೇ ವ್ರತವೆಂದು ಭಾವಿಸಬೇಕು. ಆದ್ದರಿಂದ ಯಾವಪ್ರಕಾರದಿಂದಲಾದರೂ ಬಹಳ ಅನ್ನವನ್ನು ದೊರಕಿಸಬೇಕು. ಅವನ (ಅತಿಥಿಯ) ಸಲುವಾಗಿ ಅನ್ನವನ್ನು ಸಿದ್ಧಮಾಡಿರೆಂದು ಅನ್ನುತ್ತಾರೆ. ಇದೇ ಅತ್ಯಾದರಪೂರ್ವಕ ಅನ್ನವನ್ನು ಸಿದ್ಧಮಾಡುವಿಕೆಯು. ಅನ್ನವನ್ನು ಸಿದ್ಧಮಾಡಿ ಸತ್ಪಾತ್ರನಿಗೆ ದಾನಮಾಡುವುದರಲ್ಲಿ ಸಾತ್ತ್ವಿಕ, ರಾಜಸ ತಾಮಸಗಳೆಂಬ ಮೂರು ವಿಧಗಳಿರುವುವೆಂದು ಪರಮೇಶ್ವರನೇ ಹೇಳಿದ್ದಾನೆ.

ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।
ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಂ ॥

ಯದನ್ನಂ ಸಂಪಾದಿತಮಸ್ತ್ಯೇತದೇವಾನ್ನಂ ಮುಖತೋ ರಾದ್ಧಂ ಭವತಿ । ಮುಖ್ಯೇ ದೇಶೇ ತೀರ್ಥಕ್ಷೇತ್ರವಿಶೇಷೇ ಮುಖ್ಯಕಾಲೇ ಸಂಕ್ರಾಂತ್ಯಮಾವಾಸ್ಯಾದಿರೂಪೇ ಮುಖ್ಯಾಯಾಭ್ಯಾಗತಾಯ ವೇದಶಾಸ್ತ್ರತದಧ್ಯಯನಾನುಷ್ಠಾನಪರಾಯ ಮುಖ್ಯಯಾ ವೃತ್ತ್ಯಾ ಶ್ರದ್ಧಾಪ್ರಣಿಪಾತಸತ್ಕಾರಾದಿರೂಪಯಾ ಮುಖ್ಯೇನ ದಾತ್ರಾ ಸಾತ್ತ್ವಿಕೇನ ದತ್ತಮಿತ್ಯರ್ಥಃ । ಯಃ ಪುಮಾನೇವಂ ಸಾತ್ತ್ವಿಕಂ ದಾನಪ್ರಕಾರಂ ವೇದ ವಿದಿತ್ವಾನುತಿಷ್ಠತಿ ಅಸ್ಮೈ ಜನ್ಮಾಂತರೇ ಮುಖ್ಯಕ್ರಮೇಣೈವಾನ್ನಂ ಸಂಪದ್ಯತೇ ।

ಸಾತ್ತ್ವಿಕದಾನವೆಂದರೆ ದಾನಕೊಡುವಾಗ ದಾನತೆಗೆದುಕೊಳ್ಳುವ ಪುರುಷನಿಂದ ತಮಗೆ ಉತ್ತರೋತ್ತರ ಏನಾದರೂ ಪ್ರತ್ಯುಪಕಾರವಾದೀತೆಂಬ ಆಶೆಯನ್ನು ಇಟ್ಟುಕೊಳ್ಳಕೂಡದು. ಯಾವ - ಪ್ರತ್ಯುಪಕಾರದ ಆಶೆಯೂ ಇಲ್ಲದೆ

ಪಾರಮಾರ್ಥಿಕವಾಗಿ ದೇಶಕಾಲಗಳನ್ನೂ ಪಾತ್ರಾಪಾತ್ರಗಳನ್ನೂ ವಿವೇಚಿಸಿ ಕೊಡುವ ದಾನವು ಸಾತ್ತ್ವಿಕದಾನವೆನಿಸುವುದು. ಹೇಗೆಂದರೆ—ತೀರ್ಥಕ್ಷೇತ್ರಾದಿಪುಣ್ಯಪ್ರದೇಶಗಳಲ್ಲಿ, ಸಂಕ್ರಾಂತಿ, ಅಮಾವಾಸ್ಯೆ ಮುಂತಾದ ಮುಖ್ಯ ದಿನಗಳಲ್ಲಿ, ಕರೆದು ಅಥವಾ ಕರೆಯದೆ ತಾನಾಗಿ ಬರುವ, ಅತಿಥಿ ಅಥವಾ ಅಭ್ಯಾಗತನಿಗೆ ಅನ್ನದಾನಮಾಡಬೇಕು. ಆ ಅತಿಥಿಯು ವೇದಶಾಸ್ತ್ರಾಧ್ಯಯನಸಂಪನ್ನನಾಗಿ ಅವುಗಳನ್ನು ಅನುಷ್ಠಾನಮಾಡುತ್ತಾ ಸದಾಚಾರಸಂಪನ್ನನಾಗಿದ್ದರೆ ಮತ್ತೂ ವಿಶೇಷವು. ಅಂತಹ ಪುರುಷನನ್ನು ಶ್ರದ್ಧೆಯಿಂದ ಸತ್ಕರಿಸಿ ಆದರಾದಿಗಳಿಂದ ಉಪಚರಿಸಿ ಅನ್ನದಾನಮಾಡಬೇಕು. ಕ್ಷುದ್ಬಾಧೆಯಿಂದ ಪೀಡಿತನಾದ ಯಾವಪುರುಷನಿಗಾಗಲಿ ಅನ್ನದಾನವನ್ನು ಮಾಡಿದಲ್ಲಿ ಅದರಲ್ಲಿಯೂ ಮೇಲೆ ಹೇಳಿದ ಗುಣಗಳುಳ್ಳ ಅತಿಥಿಅಭ್ಯಾಗತರಿಗೆ ಅನ್ನದಾನವನ್ನು ಮಾಡಿದಲ್ಲಿ ಅದು ಸಾತ್ತ್ವಿಕದಾನವಾಗುವುದಲ್ಲದೆ ಅದರಿಂದ ದಾನ ಮಾಡಿದವನು ಜನ್ಮಾಂತರಗಳಲ್ಲಿ ಬಹಳವಾಗಿ ಅನ್ನಸಂಪತ್ತಿನಿಂದ ಕೂಡಿ ಸುಖಿಸುತ್ತಾನೆ. ಅದನ್ನೇ ಇಲ್ಲಿ-**ಏತದ್ವೈ ಮುಖತೋಽನ್ನಗ್ಂ ರಾದ್ಧಂ । ಮುಖತೋಽಸ್ಮಾ ಅನ್ನಗ್ಂ ರಾಧ್ಯತೇ।** ಎಂಬ ವಾಕ್ಯಗಳಿಂದ ವಿವರಿಸಲಾಗಿದೆ. ಇನ್ನು ಎರಡನೆಯದಾದ ರಾಜಸ ಮತ್ತು ತಾಮಸದಾನಗಳ ಪ್ರಕಾರವು ಈರೀತಿ ಇರುವುದು—

**ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ರಾಜಸಮುದಾಹೃತಂ ॥**
**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಂ ॥**

ಯಾವ ಪುರುಷನು ಪ್ರತ್ಯುಪಕಾರನಿರೀಕ್ಷಣೆಯಿಂದ ದಾನಮಾಡುವನೋ ಅವನು ಮಾಡುವ ದಾನವು ರಾಜಸ ದಾನವೆನಿಸುವುದು. ಹೇಗೆಂದರೆ, ಈದಿನ ನಾನು ಈ ಪುರುಷನಿಗೆ ಅನ್ನದಾನಮಾಡಿದರೆ ನಾಳೆ ಅಥವಾ ಮುಂದೆ ಒಂದಾನೊಂದು ದಿನ ಅವನೂ ನನಗೆ ಆರೀತಿ ಸತ್ಕರಿಸುವನು ಎಂಬ ಭಾವನೆಯನ್ನಿಟ್ಟುಕೊಂಡು ಮಾಡುವ ದಾನಕ್ಕೂ ರಾಜಸವೆಂದು ಹೆಸರು. ಇಂತಹದಾನವನ್ನು ಇಲ್ಲಿ-**ಏತದ್ವೈ ಮಧ್ಯತೋಽನ್ನಗ್ಂ ರಾದ್ಧಂ । ಮಧ್ಯತೋಽಸ್ಮಾ ಅನ್ನಗ್ಂ ರಾಧ್ಯತೇ** ಎಂಬ ವಾಕ್ಯಗಳಿಂದ ವಿವರಿಸಲಾಗಿದೆ.

ಇದಲ್ಲದೆ ದೇಶ, ಕಾಲ, ಪಾತ್ರಾಪಾತ್ರವಿವೇಚನೆ ಇಲ್ಲದೆ, ಸರಿಯಾದ ಸತ್ಕಾರವನ್ನೂ ಮಾಡದೆ ಕೇವಲ ಆತ್ಮಪ್ರಶಂಸೆಗೋಸ್ಕರ ಮಾಡುವ ದಾನವು ತಾಮಸವೆನಿಸುವುದು. ಎಂದರೆ ಮನಸ್ಸು ಬಂದ ಎಂದರೆ ಗರ್ಹಿತಪ್ರದೇಶದಲ್ಲಿ ಕಾಲವಲ್ಲದ ಕಾಲದಲ್ಲಿ ಎಂದರೆ ಅರ್ಧರಾತ್ರಿ ಮೊದಲಾದ ಅಕಾಲದಲ್ಲಿ, ಅಪಾತ್ರನಿಗೆ ಎಂದರೆ ಕ್ಷುದ್ಬಾಧೆಯಿಲ್ಲದೆ ಆ ಕಂಠಪೂರ್ತಿಯಾಗಿ ತಿಂದು ಯಾವ ಆಹಾರದ ಅವಶ್ಯಕತೆಯೂ ಇಲ್ಲದವನಿಗೆ, ಇನ್ನೊಬ್ಬರು ತನ್ನ ಅತಿಥಿಸತ್ಕಾರವನ್ನು ನೋಡಿ ಮೆಚ್ಚಲೆಂಬ ಅಹಂಭಾವದಿಂದ ಮಾಡುವ ಸತ್ಕಾರ ಅಥವಾ ದಾನವು ಅಧರ್ಮವೆನಿಸುವುದು. ಇದನ್ನೇ ಇಲ್ಲಿ—**ಏತದ್ವಾ ಅಂತತೋಽನ್ನಗ್ಂ ರಾದ್ಧಂ । ಅಂತತೋಽಸ್ಮಾಅನ್ನಗ್ಂ ರಾಧ್ಯತೇ ।** ಎಂಬ ವಾಕ್ಯಗಳಿಂದ ವಿವರಿಸಲ್ಪಟ್ಟಿದೆ. ಆದ್ದರಿಂದ ಈ ವಿಷಯಗಳನ್ನೆಲ್ಲಾ ಚೆನ್ನಾಗಿ ತಿಳಿದುಕೊಂಡು ಯೋಗ್ಯನಾದ ಪಾತ್ರನಿಗೆ ಸಕಾಲದಲ್ಲಿ ಅನ್ನದಾನಮಾಡಬೇಕು.

ಅನ್ನವನ್ನು ಪರಬ್ರಹ್ಮಸ್ವರೂಪವೆಂದು ತಿಳಿದು ಅದನ್ನು ಪುರುಷನು ಯಾವ ಭಾವನೆಯಿಂದ ಉಪಾಸನೆ ಮಾಡುವನೋ ಅವನ ಭಾವನೆಗೆ ಅನುಸಾರವಾಗಿ ಅದಕ್ಕೆ ಫಲವನ್ನು ಪಡೆಯುವನು ಎಂದು ವಿವರಿಸಿದೆ. ಹೇಗೆಂದರೆ—

ತತ್ಪ್ರತಿಷ್ಠೇತ್ಯುಪಾಸೀತ । ಪ್ರತಿಷ್ಠಾವಾನ್ಭವತಿ। ಅದನ್ನು ಪ್ರತಿಷ್ಠೆಯೆಂದು ಭಾವಿಸಿ ಉಪಾಸನೆ ಮಾಡಿದರೆ ಅನ್ನವಸ್ತ್ರಾದಿಸುಖಸಾಧನಗಳಿಂದ ಯುಕ್ತನಾಗಿ ಪ್ರತಿಷ್ಠೆಯುಳ್ಳವನಾಗುತ್ತಾನೆ. ತೇಜಸ್ಸೆಂದು (ಮಹಃ) ಉಪಾಸನೆ ಮಾಡುವವನು ಧನಾದಿಗಳಿಂದ ಸಮೃದ್ಧನಾಗಿ ಮಹತ್ತ್ವಗುಣಗಳಿಂದ ಕೂಡಿ ಗೌರವಯೋಗ್ಯನಾಗುತ್ತಾನೆ. ಅದನ್ನು ಮನಃ ಎಂದು ಉಪಾಸನೆಮಾಡುವವನು ಮನನಶಕ್ತಿಯುಳ್ಳವನಾಗುತ್ತಾನೆ. ನಮಃ (ನಮಸ್ಕಾರಯೋಗ್ಯ) ಎಂದು ಉಪಾಸನೆ ಮಾಡುವವನು ಎಲ್ಲರಿಂದಲೂ ನಮಸ್ಕರಿಸಲ್ಪಡುವವನೂ, ಎಲ್ಲರನ್ನೂ ವಶಪಡಿಸಿಕೊಳ್ಳುವವನೂ ಆಗುತ್ತಾನೆ. ಇವನಿಗೆ ಸಮಸ್ತ ಕಾಮಗಳೂ ಎಂದರೆ ಅವನ ಅಭೀಷ್ಟಗಳೆಲ್ಲವೂ ವಶವಾಗುತ್ತವೆ, ಎಂದರೆ ಸಿದ್ಧಿಸುತ್ತವೆ. ಬ್ರಹ್ಮ ಎಂದು ಉಪಾಸನೆ ಮಾಡುವವನು ವೇದಗಳನ್ನೂ ವೇದಾರ್ಥತತ್ತ್ವರಹಸ್ಯಗಳನ್ನೂ ಬಲ್ಲವನಾಗುತ್ತಾನೆ. ತದ್ಬ್ರಹ್ಮಣಃ ಪರಿಮರ ಎಂದು ಉಪಾಸನೆಮಾಡುವವನ ಸುತ್ತಲೂ ಇರುವ ಶತ್ರುಗಳು, ಆಧಿವ್ಯಾಧಿಗಳು ಎಲ್ಲವೂ ನಾಶವಾಗುತ್ತವೆ. ಎಲ್ಲ ಶತ್ರುಗಳೂ, ದ್ವೇಷಿಗಳೂ, ಅಪ್ರಿಯವಾದವರೂ ಸಂಪೂರ್ಣ ನಷ್ಟವಾಗುತ್ತಾರೆ- ಈ ಪುರುಷನಲ್ಲಿರುವವನೂ, ಆದಿತ್ಯನಲ್ಲಿರುವವನೂ ಅವನೇ. ಈ ವಿಧವಾದ ಜ್ಞಾನವುಳ್ಳವನು ಈ ಲೋಕದಿಂದ ತೆರಳಿ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ ಆತ್ಮಾವಸ್ಥೆಗಳನ್ನು ದಾಟಿ, ವಿದ್ಯಾಧರನಾಗಿ (ಎಂದರೆ ತನಗೆ ಬೇಕಾದ ರೂಪಗಳನ್ನು ಧರಿಸುವ ಶಕ್ತಿಯುಳ್ಳ ದೇವತೆಯಾಗಿ) ಕಾಮನೆಗಳನ್ನುಪಭೋಗಿಸುತ್ತಾ ಈ (ಕೆಳಗಣ) ಸಾಮಮಂತ್ರಗಳನ್ನು ಹಾಡುತ್ತಾ ಅತ್ತಿತ್ತ ಸಂಚರಿಸುವನು. ಏನು ಚಮತ್ಕಾರವಿದು ? ನಾನು ಅನ್ನವು, ನಾನು ಅನ್ನವನ್ನುಣ್ಣುವವನು, ನಾನು ಸ್ತೋತ್ರಮಾಡುವವನು, ನಾನು ಸತ್ಯ (ಋತ) ಕ್ಕಿಂತ ಪೂರ್ವದಲ್ಲಿ ಹುಟ್ಟಿದವನು, ದೇವತೆಗಳಿಗೂ ಪೂರ್ವದಲ್ಲಿ ಅಮೃತನಾಭಿಯಲ್ಲಿ (ಮಧ್ಯದಲ್ಲಿ) ನಾನು ಹುಟ್ಟಿದವನು. ಯಾವನು ನನಗೆ (ಅನ್ನವನ್ನು) ಅರ್ಪಿಸುವನೋ ಅವನು ನನ್ನಂತೆಯೇ ಆಗುವನು. ನಾನು ಅನ್ನವು. ಅನ್ನವನ್ನು ತಿನ್ನುವವನನ್ನು ನಾನು ತಿನ್ನುವೆನು. ನಾನು ಈ ವಿಶ್ವವನ್ನೂ, ಈ ಭುವನವನ್ನೂ ಸೋಲಿಸುವೆನು. ಇದನ್ನರಿತವನು ಸುವರ್ಣಜ್ಯೋತಿಯಂತೆ ಆಗುವನು. ಇತ್ಯಾದಿಯಾಗಿ ಅನ್ನದ ಅಥವಾ ಅನ್ನಾಧಿಪತಿಯಾದ ದೇವತೆಯ (ಬ್ರಹ್ಮದ) ನಾನಾವರ್ಣನೆಗಳಿರುವುವು. ಅನ್ನಸಂಬಂಧವಾದ ವಿಷಯಗಳನ್ನೊಳಗೊಂಡ ಇನ್ನೂ ಅನೇಕ ಮಂತ್ರಗಳು ವೇದಗಳಲ್ಲಿ ಬಹಳವಾಗಿರುವುವು ಗ್ರಂಥವಿಸ್ತರದ ಭಯದಿಂದ ಅವುಗಳನ್ನೆಲ್ಲಾ ಇಲ್ಲಿ ವಿವರಿಸಲು ಸಾಧ್ಯವಿಲ್ಲ.

———— :o: ————

### ಸಾಯಣಭಾಷ್ಯಂ

ಪಿತುಂ ನ್ವಿತ್ಯೇಕಾದಶರ್ಚಮಷ್ಟಮಂ ಸೂಕ್ತಮಾಗಸ್ತ್ಯಮನ್ನದೇವತಾಕಂ ಗಾಯತ್ರಂ । ಆದ್ಯಾನುಷ್ಟುಬ್ಗರ್ಭೋಷ್ಣಿಕ್ । ಆದ್ಯಃ ಪಂಚಕಸ್ತ್ರಯೋಽಷ್ಟಕಾ ಅನುಷ್ಟುಬ್ಗರ್ಭಾ । ಅನು. ೫-೭ । ಇತ್ಯುಕ್ತತ್ವಾತ್ । ತೃತೀಯಾ ಪಂಚಮೀ ಷಷ್ಠೀ ಸಪ್ತಮ್ಯೇಕಾದಶೀ ಚೇತಿ ಪಂಚಾನುಷ್ಟುಭಃ । ತಥಾ ಚಾನುಕ್ರಮಣಿಕಾ । ಪಿತುಂ ನ್ವನ್ನಸ್ತುತಿರ್ಗಾಯತ್ರಂ ತ್ವಾದ್ಯಾನುಷ್ಟುಬ್ಗರ್ಭಾ ತೃತೀಯಾಂತ್ಯೇ ಪಂಚಮ್ಯಾದ್ಯಾಶ್ಚ ತಿಸ್ರೋಽನುಷ್ಟುಭ ಇತಿ ॥ ವಿನಿಯೋಗಂ ಶೌನಕ ಆಹ । ಪಿತುಂ ನ್ವಿತ್ಯುಪತಿಷ್ಠೇತ ನಿತ್ಯಮನ್ನಮುಪಸ್ಥಿತಂ । ಪೂಜಯೇದಶನಂ ನಿತ್ಯಂ ಭುಂಜೀತ ಹ್ಯವಿಕುತ್ಸಯನ್ ॥ ನಾಸ್ಯ ಸ್ಯಾದನ್ನಜೋ ವ್ಯಾಧಿರ್ವಿಷಮಪ್ಯಮೃತಂ ಭವೇತ್ । ವಿಷಂ ಚ ಪೀತ್ವೈತತ್ಸೂಕ್ತಂ ಜಪೇದ್ವಿಷವಿನಾಶನಂ ॥ ನಾವಾಗ್ಯತಸ್ತು ಭುಂಜೀತ ನಾಶುಚಿರ್ನ ಜುಗುಪ್ಸಿತಂ । ದದ್ಯಾಚ್ಚ ಪೂಜಯೇಚ್ಚೈವ ಜುಹುಯಾಚ್ಚ ಹವಿಸ್ತದಾ । ಕ್ಷುದ್ಭಯಂ ನಾಸ್ಯ ಕಿಂಚಿತ್ಸ್ಯಾನ್ನಾನ್ನಜಂ ವ್ಯಾಧಿಮಾಪ್ನುಯಾತ್ । ಋಗ್ವಿ. ೧-೨೭ ॥ ಇತಿ ॥

ಅನುವಾದವು—ಪಿತುಂ ನು ಎಂಬ ಈ ಸೂಕ್ತವು ಇಪ್ಪತ್ತನಾಲ್ಕನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು, ಅನ್ನಸ್ತುತಿಯೇ ದೇವತೆಯು, ಗಾಯತ್ರೀಛಂದಸ್ಸು. ಮೊದಲನೆಯ ಋಕ್ಕು ಅನುಷ್ಟುಪ್‌ಗರ್ಭೋಷ್ಣಿಕ್ ಎಂಬ ಛಂದಸ್ಕವು. ಅನುಕ್ರಮಣಿಕೆಯಲ್ಲಿ ಆದ್ಯಃ ಪಂಚಕಸ್ತ್ರಯೋಽಷ್ಟಕಾ ಅನುಷ್ಟುಪ್‌ಗರ್ಭಾ ಎಂದು ಹೇಳಿರುವುದು. (ಅನು. ೫-೭) ಈ ಸೂಕ್ತದ ಮೂರು, ಐದು, ಆರು, ಏಳು ಹನ್ನೊಂದನೆಯ ಋಕ್ಕುಗಳು ಅನುಷ್ಟುಪ್‌ಛಂದಸ್ಕವು. ಮತ್ತು ಈ ವಿಷಯದಲ್ಲಿ ಅನುಕ್ರಮಣಿಕೆಯಲ್ಲಿ—ಪಿತುಂ ನ್ವನ್ನಸ್ತುತಿರ್ಗಾಯತ್ರಂ ತ್ವಾದ್ಯಾನುಷ್ಟುಬ್ಗರ್ಭಾ ತೃತೀಯಾಂತ್ಯೇ ಪಂಚಮ್ಯಾದ್ಯಾಶ್ಚ ತಿಸ್ರೋಽನುಷ್ಟುಭ ಇತಿ ಎಂದು ಹೇಳಿರುವುದು. ಈ ಸೂಕ್ತದ ವಿನಿಯೋಗವಿಚಾರದಲ್ಲಿ ಶೌನಕರು ತಮ್ಮ ಋಗ್ವಿಧಾನವೆಂಬ ಗ್ರಂಥದಲ್ಲಿ ಈರೀತಿ ಹೇಳಿರುವರು—

ಪಿತುಂ ನ್ವಿತ್ಯುಪತಿಷ್ಠೇತ ನಿತ್ಯಮನ್ನಮುಪಸ್ಥಿತಂ ।
ಪೂಜಯೇದಶನಂ ನಿತ್ಯಂ ಭುಂಜೀತ ಹ್ಯವಿಕುತ್ಸಯನ್ ॥
ನಾಸ್ಯ ಸ್ಯಾದನ್ನಜೋ ವ್ಯಾಧಿರ್ವಿಷಮಪ್ಯಮೃತಂ ಭವೇತ್ ।
ವಿಷಂ ಚ ಪೀತ್ವೈತತ್ಸೂಕ್ತಂ ಜಪೇದ್ವಿಷವಿನಾಶನಂ ॥
ನಾವಾಗ್ಯತಸ್ತು ಭುಂಜೀತ ನಾಶುಚಿರ್ನ ಜುಗುಪ್ಸಿತಂ ।
ದದ್ಯಾಚ್ಚ ಪೂಜಯೇಚ್ಚೈವ ಜುಹುಯಾಚ್ಚ ಹವಿಸ್ತದಾ ॥
ಕ್ಷುದ್ಭಯಂ ನಾಸ್ಯ ಕಿಂಚಿತ್ಸ್ಯಾನ್ನಾನ್ನಜಂ ವ್ಯಾಧಿಮಾಪ್ನುಯಾತ್ ॥

(ಋಗ್ವಿಧಾನ. ೧-೨೭)

ಪಿತುಂ ನ ಎಂಬ ಈ ಸೂಕ್ತವನ್ನು ನಿತ್ಯವೂ ಭೋಜನಕಾಲದಲ್ಲಿ ಭಕ್ತಿಯಿಂದ ಪಠಿಸಿ, ಅನ್ನವನ್ನೂ ಅರ್ಚಿಸಿ ಅನಂತರ ಭೋಜನಮಾಡಬೇಕು. ಅನ್ನವನ್ನು ಯಾವಾಗಲೂ ನಿಂದೆಮಾಡಬಾರದು. ಹೀಗೆ ಮಾಡಿದಲ್ಲಿ ಆಹಾರದೋಷದಿಂದ ಸಂಭವಿಸಬಹುದಾದ ರೋಗಾದ್ಯುಪದ್ರವಗಳು ಉಂಟಾಗುವುದಿಲ್ಲ. ವಿಷವೂ ಕೂಡ ಅಮೃತವಾಗುವುದು. ಕಾರಣಾಂತರದಿಂದ ಎಂದರೆ ತಿಳಿಯದೆ ವಿಷವನ್ನು ಭುಂಜಿಸಿದರೂ ಈ ಸೂಕ್ತವನ್ನು ಜಪಿಸಿದಲ್ಲಿ ವಿಷಪರಿಹಾರವಾಗುವುದು. ಭೋಜನಮಾಡುವಾಗ ಮನಸ್ಸೀ ಹರಟದೆ ಸಂಯಮದಿಂದಲೂ, ಶುಚಿರ್ಭೂತನಾಗಿಯೂ ಭೋಜನ ಮಾಡಬೇಕು. ಜುಗುಪ್ಸೆಯಿಂದ ಅಥವಾ ಮನಸ್ಸಿಗೆ ಬೇಡವಾದ ಅಥವಾ ನಿಂದ್ಯವಾದ ಅನ್ನವನ್ನು ಭುಜಿಸಬಾರದು. ಭೋಜನ ಕಾಲದಲ್ಲಿ ಅನ್ನದ ಸ್ವಲ್ಪಭಾಗವನ್ನು ಇತರರಿಗೆ ಕೊಟ್ಟು, ಅನ್ನವನ್ನು ಪೂಜಿಸಿ, ಅಗ್ನಿಯಲ್ಲಿ ಹವಿಸ್ಸನ್ನು ಹೋಮಮಾಡಿ ಅನಂತರ ತಾನು ಭೋಜನಮಾಡಬೇಕು. ಈರೀತಿ ಮಾಡುವ ಪುರುಷನಿಗೆ ಹಸಿವಿನಿಂದ ಉಂಟಾದ ಬಾಧೆಯಿರುವುದಿಲ್ಲ. ಮತ್ತು ಅಯೋಗ್ಯವಾದ ಆಹಾರಭಕ್ಷಣದಿಂದ ಉಂಟಾಗುವ ಯಾವ ವ್ಯಾಧಿಯೂ ಇವನಿಗೆ ಸಂಭವಿಸುವುದಿಲ್ಲ ಎಂದು ಈ ಸೂಕ್ತದ ಮಹತ್ತ್ವವನ್ನು ವಿವರಿಸಿರುವರು.

॥ ಓಂ ॥

## ಸೂಕ್ತ—೧೮೭

॥ ಮಂಡಲ—೧ ॥ ಅನುವಾಕ—೨೪ ॥ ಸೂಕ್ತ—೧೮೭ ॥

॥ ಅಷ್ಟಕ— ೨ ॥ ಅಧ್ಯಾಯ— ೫ ॥ ವರ್ಗ-೬-೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೧೧ ॥

॥ ಋಷಿಃ—ಅಗಸ್ತ್ಯಃ ॥

॥ ದೇವತಾ—ಅನ್ನಸ್ತುತಿಃ ॥

॥ ಛಂದಃ—೧. ಅನುಷ್ಟುಬ್ಗರ್ಭೋಷ್ಣಿಕ್ । ೨, ೪, ೮–೧೦ ಗಾಯತ್ರೀ । ೩, ೫, ೬, ೭, ೧೧ ಅನುಷ್ಟುಪ್ ॥

---

ಸಂಹಿತಾಪಾಠಃ

ಪಿತುಂ ನು ಸ್ತೋಷಂ ಮಹೋ ಧರ್ಮಾಣಂ ತವಿಷೀಂ ।
ಯಸ್ಯ ತ್ರಿತೋ ವ್ಯೋಜಸಾ ವೃತ್ರಂ ವಿಪರ್ವಮರ್ದಯತ್ ॥ ೧ ॥

ಪದಪಾಠಃ

ಪಿತುಂ । ನು । ಸ್ತೋಷಂ । ಮಹಃ । ಧರ್ಮಾಣಂ । ತವಿಷೀಂ ।
ಯಸ್ಯ । ತ್ರಿತಃ । ವಿ । ಓಜಸಾ । ವೃತ್ರಂ । ವಿಽಪರ್ವಂ । ಅರ್ದಯತ್ ॥ ೧ ॥

ಸಾಯಣಭಾಷ್ಯಂ

ಅಹಮಗಸ್ತ್ಯೋ ನು ಕ್ಷಿಪ್ರಂ ಪಿತುಂ ಪಾಲಕಮನ್ನಂ ಸ್ತೋಷಂ। ಸ್ತೌಮಿ। ಮಹೋ ಮಹಾಂತಂ ಧರ್ಮಾಣಂ ಸರ್ವಸ್ಯ ಧಾರಕಂ ತವಿಷೀಂ ಬಲಾತ್ಮಕಂ । ಯದ್ವಾ। ಮಹತೋ ಲೋಕಸ್ಯ ಧಾರಕಂ। ಯಸ್ಯಾನ್ನಸ್ಯೌಜಸಾ ಬಲೇನ ಸಾಮರ್ಥ್ಯೇನ ತ್ರಿತೋ ವಿಸ್ತೀರ್ಣತಮಃ ಪ್ರಖ್ಯಾತಕೀರ್ತಿಸ್ತ್ರಿಷು ಕ್ಷಿತ್ಯಾದಿಸ್ಥಾನೇಷು ತಾಯಮಾನೋಽಪೀಂದ್ರೋ ವೃತ್ರಂ ವಿಪರ್ವಂ ವಿಚ್ಛಿನ್ನಸಂಧಿಕಂ ಯಥಾ ತಥಾರ್ದಯತ್ ಹಿಂಸಿತವಾನ್ ॥

॥ ಪ್ರತಿಪದಾರ್ಥ ॥

ಯಸ್ಯ—ಯಾವ ಅನ್ನದ । ಓಜಸಾ— ಚೈತನ್ಯದಾಯಿಯಾದ ಶಕ್ತಿಯಿಂದ । ತ್ರಿತಃ—ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾದ ಕೀರ್ತಿಯುಳ್ಳ ಇಂದ್ರನು । ವೃತ್ರಂ—ವೃತ್ರಾಸುರನನ್ನು । ವಿಪರ್ವಂ—ಕತ್ತರಿಸಲ್ಪಟ್ಟ ಸಂಧಿಸ್ಥಾನಗಳುಳ್ಳವನನ್ನಾಗಿ (ಮಾಡಿ) । ವಿ ಅರ್ದಯತ್—ಪೂರ್ಣವಾಗಿ ಹಿಂಸಿಸಿದನೋ । ತಂ—ಅಂತಹುದೂ ।

(ಮತ್ತು) । **ಮಹಃ**—ಮಹತ್ತಾದುದೂ । **ಧರ್ಮಾಣಂ**—ಸರ್ವಧಾರಕವಾದುದೂ । [ಅಥವಾ **ಮಹಃ**—ಮಹತ್ತಾದ । ಲೋಕದ । **ಧರ್ಮಾಣಂ**—ಧಾರಕವಾದುದೂ । ] **ತವಿಷೀಂ**—ಬಲಾತ್ಮಕವಾದುದೂ । **ಪಿತುಂ**—ಪಾಲಕವಾದುದೂ ಆದ ಅನ್ನವನ್ನು । **ನು**—ಕ್ಷಿಪ್ರವಾಗಿ । **ಸ್ತೋಷಂ**—ನಾನು ಸ್ತುತಿಸುತ್ತೇನೆ.

ಭಾವಾರ್ಥ

ಯಾವ ಅನ್ನದ ಚೈತನ್ಯದಾಯಿಯಾದ ಶಕ್ತಿಯಿಂದ ಮೂರು ಲೋಕಗಳಲ್ಲೂ ಪ್ರಖ್ಯಾತವಾದ ಕೀರ್ತಿಯುಳ್ಳ ಇಂದ್ರನು ವೃತ್ರಾಸುರನ ಸಂಧಿಸ್ಥಾನಗಳನ್ನು ಕತ್ತರಿಸಿ ಸಂಹರಿಸಿದನೋ ಅಂತಹುದೂ ಮತ್ತು ಮಹತ್ತಾದ ಲೋಕದ ಧಾರಕವಾದುದೂ, ಬಲಾತ್ಮಕವಾದುದೂ ಮತ್ತು ಪಾಲಕವೂ ಆದ ಅನ್ನವನ್ನು ಕ್ಷಿಪ್ರವಾಗಿ ಸ್ತುತಿಸುತ್ತೇನೆ.

English Translation

I glorify Pitu, the great, the upholder, the strong, by whose invigorating power Trita slew the mutilated Vritra.

ವಿಶೇಷವಿಷಯಗಳು

**ಪಿತುಂ—ಪಾಲಕಮನ್ನಂ** । ಕ್ಷುದ್ಬಾಧೆಯಿಂದ ನಮ್ಮನ್ನು ರಕ್ಷಿಸುವ ಅನ್ನವೆಂದರ್ಥವು. **ಪಿತುಃ** ಎಂಬ ಶಬ್ದವು ಅಂಧಃ, ವಾಜಃ ಮೊದಲಾದ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ಪಠಿತವಾಗಿದೆ (ನಿ. ೩-೯). ಇದಲ್ಲದೆ ಯಾಸ್ಕರು—

**ಪಿತುರಿತ್ಯನ್ನನಾಮ ಪಾತೇರ್ವಾ, ಪಿಬತೇರ್ವಾ, ಪ್ಯಾಯತೇರ್ವಾ ।**

(ನಿ. ೯-೨೪)

ಎಂದು ಪಿತು ಶಬ್ದದ ನಿರ್ವಚನವನ್ನು ಹೇಳಿದ್ದಾರೆ. ಎಂದರೆ—**ಪಾತೇರ್ವಾ**—ನಮ್ಮನ್ನು ಹಸಿವಿನಿಂದ ಕಾಪಾಡುತ್ತದೆಯಾದ್ದರಿಂದ ಪಿತುಃ ಎಂದರೆ ಅನ್ನವು. ಅಥವಾ ಪಾನಾರ್ಥವಾಗಿ ಇವನ್ನು ಉಪಯೋಗಿಸುವುದರಿಂದ ಇದಕ್ಕೆ ಪಿತುವೆಂದು ಹೆಸರು. ದ್ರವರೂಪವಾದ (ಹಾಲು ಮೊದಲಾದ) ಆಹಾರಕ್ಕೂ ಇದು ಅನ್ವಯಿಸುವುದು. ಆದ್ದರಿಂದ ಪಾನಾರ್ಥವಾಗಿ ಇದರ ಉಪಯೋಗವಿರುವುದೆಂದೂ, **ಪಾ (ಪಿಬ್)**—ಕುಡಿ, ಪಾನಮಾಡು ಎಂಬ ಧಾತುವಿನಿಂದ ನಿಷ್ಪನ್ನವಾಗಬಹುದೆಂದೂ, ಅಥವಾ **ಪ್ಯಾಯತೇರ್ವಾ**—ತೃಪ್ತಿಪಡಿಸು ಎಂಬರ್ಥವನ್ನು ಕೊಡುವ ಪ್ಯಾಯತಿಧಾತುವಿನಿಂದಲಾದರೂ ನಿಷ್ಪನ್ನವಾಗಬಹುದೆಂದೂ ಹೇಳಿದ್ದಾರೆ. ಈ ಶಬ್ದದ ಪ್ರಯೋಗವಿರುವ ಪ್ರಕೃತವಾದ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅದರ ನಿರ್ವಚನವನ್ನು—

**ಪಿತುಂ ನು ಸ್ತೋಷಂ ಮಹೋ ಧರ್ಮಾಣಂ ತವಿಷೀಂ ।**
**ಯಸ್ಯ ತ್ರಿತೋ ವ್ಯೋಜಸಾ ವೃತ್ರಂ ವಿಪರ್ವಮರ್ದಯತ್ ॥**

**ತಂ ಪಿತುಂ ಸ್ತೌಮಿ ಮಹತೋ ಧಾರಯಿತಾರಂ ಬಲಸ್ಯ । ತವಿಷೀತಿ ಬಲನಾಮ ತವತೇರ್ವಾ ವೃದ್ಧಿಕರ್ಮಣಃ । ಯಸ್ಯ ತ್ರಿತ ಓಜಸಾ ಬಲೇನ ತ್ರಿತಸ್ತ್ರಿಸ್ಥಾನ ಇಂದ್ರೋ ವೃತ್ರಂ ವಿಪರ್ವಾಣಂ ವ್ಯರ್ದಯತಿ ॥**

(ನಿ. ೯-೨೫)

ಎಂದು ಹೇಳಿದ್ದಾರೆ—ಎಂದರೆ ಹೆಚ್ಚಾಚ ಬಲವನ್ನು ಕೊಡುವ ಅನ್ನವನ್ನು ಸ್ತುತಿಸುತ್ತೇನೆ. ಈ ಅನ್ನದ ಪುಷ್ಟಿಯನ್ನು ಹೊಂದಿ ಇದರ ಸಹಾಯದಿಂದ ಮೂರು ಲೋಕಗಳಲ್ಲಿಯೂ ವ್ಯಾಪ್ತನಾದ ಇಂದ್ರನು ಶಕ್ತಿವಂತನಾಗಿ ವೃತ್ರಾಸುರನ ಸಂಧಿಕೀಲುಗಳನ್ನೆಲ್ಲಾ ಮರ್ದನಮಾಡಿ ಸಂಹಾರಮಾಡಿದನು ಎಂದಭಿಪ್ರಾಯವು. ಪಿತು ಶಬ್ದಪ್ರಯೋಗವು (ಅನ್ನ ವೆಂಬರ್ಥದಲ್ಲಿ) ಋ. ಸಂ. ೧-೬೧-೭, ೧-೧೩೨-೬, ೧-೧೮೭-೧, ೬-೨೦-೪, ಇತ್ಯಾದಿ ಋಕ್ಕುಗಳಲ್ಲಿಯೂ, ಅಥ. ವೇ. ೪-೬-೩ ; ತೈ. ಸಂ. ೫-೭-೨-೪, ವಾ. ಸಂ ೨-೨೦, ೧೨-೬೫, ಐ. ಬ್ರಾ. ೧-೧೩ ಮೊದಲಾದ ಸ್ಥಳಗಳಲ್ಲಿಯೂ ಇದೆ.

**ಮಹೋ ಧರ್ಮಾಣಂ—ಮಹಾಂತಂ ಧರ್ಮಾಣಂ ಸರ್ವಸ್ಯ ಧಾರಕಂ । ಮಹತೋ ಲೋಕಸ್ಯ ಧಾರಕಂ**—ಸಮಸ್ತವನ್ನೂ ಎಂದರೆ ದೊಡ್ಡ ಲೋಕವನ್ನೂ, ಲೋಕದ ಪ್ರಾಣಿಗಳನ್ನೂ ಧರಿಸುವ ಎಂದು ಸಾಯಣರ ವಿವರಣೆಯು. ಯಾಸ್ಕರು—**ಮಹತೋ ಧಾರಯಿತಾರಂ ಬಲಸ್ಯ**—ಹೆಚ್ಚಾದ ಬಲವನ್ನು ಉಂಟುಮಾಡುವ ಎಂದು ಹೇಳಿರುವರು. ಇದು ಪಿತುಂ ಎಂಬ ಶಬ್ದಕ್ಕೆ ವಿಶೇಷಣವಾಗಿರುವುದರಿಂದ ಮತ್ತು ಅನ್ನಕ್ಕೆ ಪುಷ್ಟಿಯನ್ನೂ ಬಲವನ್ನೂ ಸೇವಿಸುವವನಿಗೆ ಕೊಡುವ ಸಾಮರ್ಥ್ಯವಿರುವುದರಿಂದ ಎರಡು ವಿಧವಾದ ಅರ್ಥವೂ ಹೊಂದಿಕೊಳ್ಳುವುದು.

**ತವಿಷೀಂ—ತವಿಷೀತಿ ಬಲನಾಮ । ಓಜಃ ಪಾಜಃ** ಮೊದಲಾದ ಇಪ್ಪತ್ತೆಂಟು ಬಲನಾಮಗಳ ಮಧ್ಯದಲ್ಲಿ ತವಿಷೀ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೯). ತವಿಷೀಂ ಎಂದರೆ ಬಲವನ್ನು, ಶಕ್ತಿಯನ್ನು ಎಂದರ್ಥವು. ಮನುಷ್ಯರಾಗಲಿ, ಇತರ ಪ್ರಾಣಿಗಳಾಗಲಿ ಅನ್ನವನ್ನು (ಆಹಾರವನ್ನು) ಸೇವಿಸುವುದರಿಂದ ಬಲವನ್ನೂ ಶಕ್ತಿಸಾಮರ್ಥ್ಯಗಳನ್ನೂ ಪಡೆಯುತ್ತಾರೆಂಬುದು ಸರ್ವರಿಗೂ ತಿಳಿದ ವಿಷಯವಾಗಿಯೇ ಇದೆ. ಅಥವಾ ನಿರುಕ್ತ ಕಾರರು ತವಿಷೀ ಎಂಬ ಶಬ್ದಕ್ಕೆ **ತವತೇರ್ವಾ ವೃದ್ಧಿಕರ್ಮಣಃ** ಎಂದು ನಿರ್ವಚನವನ್ನು ಹೇಳಿ ವೃದ್ಧಿಯನ್ನುಂಟು ಮಾಡು ಎಂಬರ್ಥವುಳ್ಳ ತವತಿ ಧಾತುವಿನಿಂದ ಈ ತವಿಷೀಂ ಎಂಬ ಶಬ್ದವು ನಿಷ್ಪನ್ನವಾಗಿದೆಯೆಂದೂ, ಆಹಾರವನ್ನು (ಅನ್ನವನ್ನು) ಸೇವಿಸುವುದರಿಂದ ಶರೀರವು ಬೆಳೆದು ವೃದ್ಧಿಗೊಳ್ಳುವುದೆಂದೂ ಅರ್ಥವಿವರಣೆ ಮಾಡಿದ್ದಾರೆ.

**ತ್ರಿತಃ**—ತ್ರಿತಃ ಎಂಬ ಶಬ್ದಕ್ಕೆ ಭಾಷ್ಯಕಾರರು **ವಿಸ್ತೀರ್ಣತಮಃ** ಎಂದೂ, ನಿರುಕ್ತಕಾರರು **ತ್ರಿತಸ್ತೀರ್ಣತಮಃ** (ನಿ ೪-೬) ಎಂದೂ ಹೇಳಿದ್ದಾರೆ. ಎಂದರೆ ವಿಸ್ತಾರವಾದ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವ ಎಂದರ್ಥವು. ಇದಲ್ಲದೆ ನಿರುಕ್ತಕಾರರು ಈ ಋಕ್ಕಿನ ನಿರ್ವಚನದಲ್ಲಿ **ತ್ರಿತಸ್ತ್ರಿಸ್ಥಾನ ಇಂದ್ರಃ** ಎಂದು ವಿವರಿಸಿದ್ದಾರೆ. ತ್ರಿಸ್ಥಾನ ವೆಂದರೆ ಭೂಮಿ. ಅಂತರಿಕ್ಷ, ಸ್ವರ್ಗ ಎಂಬ ಮೂರು ಲೋಕಗಳಲ್ಲಿಯೂ ಅಪ್ರತಿಹತವಾದ ಸಾಮರ್ಥ್ಯವುಳ್ಳ ಇಂದ್ರನು ಎಂದರ್ಥವು. ತ್ರಿತಃ ಎಂದರೆ ತ್ರಿತ ಆಪ್ತ್ಯಃ ಎಂದೂ ಅರ್ಥವಾಗುವುದು. ತ್ರಿತ ಆಪ್ತ್ಯನಿಗೂ ಇಂದ್ರನಿಗೂ ಇರುವ ಸಂಬಧಂವನ್ನೂ ತ್ರಿತ ಶಬ್ದಾರ್ಥವನ್ನೂ ಇದಕ್ಕೆ ಸಂಬಂಧಪಟ್ಟ ಇತರ ವಿಷಯಗಳನ್ನೂ ನಾವು ಋ. ಸಂ. ಭಾಗ ೫, ಪುಟ 230-231 ಗಳಲ್ಲಿಯೂ ಋ. ಸಂ. ಭಾಗ ೮ ಇದರ ಪೀಠಿಕಾಪ್ರಕರಣದ iii-viii ಪುಟಗಳಲ್ಲಿಯೂ ಋ. ಸಂ. ಭಾಗ. ೮, ಪುಟ 443-447 ರಲ್ಲಿಯೂ ವಿಸ್ತಾರವಾಗಿ ವಿವರಿಸಿದ್ದೇವೆ. ಪ್ರಕೃತವಾದ ಋಕ್ಕಿನಲ್ಲಿ ತ್ರಿತಃ ಎಂದರೆ ತ್ರಿಸ್ಥಾನವಾದ ಭೂಮ್ಯಂತರಿಕ್ಷ ಸ್ವರ್ಗಗಳಲ್ಲಿ ಮಹಿಮೆಯುಳ್ಳ ಇಂದ್ರನೆಂದರ್ಥವು.

**ವೃತ್ರಂ ವಿಪರ್ವಮರ್ದಯತ್**—ಇಂದ್ರನ ಸಾಹಸಕಾರ್ಯಗಳಲ್ಲಿ ವೃತ್ರವಧೆಯೇ ಅತಿ ಮುಖ್ಯವಾದದ್ದು. ಈ ವಿಷಯವು—

**ಇಂದ್ರಸ್ಯ ನು ವೀರ್ಯಾಣಿ ಪ್ರ ವೋಚಂ ಯಾನಿ ಚಕಾರ ಪ್ರಥಮಾನಿ ವಜ್ರೀ ।**

(ಋ. ಸಂ. ೧-೩೨-೧)

ಎಂದು ಪ್ರಾರಂಭವಾಗುವ ಋ ಸಂ ೧-೩೨ ನೆಯ ಸೂಕ್ತದಲ್ಲಿಯೂ ಇನ್ನೂ ಅನೇಕ ಕಡೆಗಳಲ್ಲಿಯೂ ನಾನಾವಿಧವಾಗಿ ವರ್ಣಿತವಾಗಿದೆ. ಆದುದರಿಂದಲೇ ಇಂದ್ರನಿಗೆ ವೃತ್ರಹಾ-ವೃತ್ರನನ್ನು ಸಂಹಾರಮಾಡಿದವನು ಎಂಬ ಹೆಸರು ಪ್ರಖ್ಯಾತ ವಾಗಿದೆ ಇಂದ್ರನು ವೃತ್ರನನ್ನು ತನ್ನ ಸ್ವಂತ ಸಾಮರ್ಥ್ಯದಿಂದ ವಧಿಸಿದನೆಂದು ಋ. ಸಂ. ೧-೧೬೫-೮ ; ೭-೨೧-೬, ೧೦-೧೩೮-೬ ಇತ್ಯಾದಿ ಋಕ್ಕುಗಳಲ್ಲಿ ಹೇಳಿದೆ. ಮತ್ತು ವೃತ್ರನೊಡನೆ ಯುದ್ಧಕ್ಕಾಗಿ ದೇವತೆಗಳು ಅವನ ವೀರ್ಯ ವನ್ನು ಹೆಚ್ಚುಮಾಡಿದರು (ಋ. ಸಂ. ೧೦-೧೧೩-೮) ಅಥವಾ ಅವನಿಗೆ ಶಕ್ತಿಸಾಮರ್ಥ್ಯಗಳನ್ನು ಕೂಡಿಸಿಕೊಟ್ಟರು. (ಋ. ಸಂ. ೧೦-೮೦-೫, ೬-೨೦-೨, ೧೦-೪೮-೩, ೧೦-೧೨೦-೩) ಅಥವಾ ವಜ್ರಾಯುಧವನ್ನು ಅವನ ಕೈಯಲ್ಲಿ ಕೊಟ್ಟರು (ಋ. ಸಂ ೨-೨೦-೮) ಇತ್ಯಾದಿ ವರ್ಣನೆಗಳಿವೆ. ಬಹಳ ಹೆಚ್ಚಾಗಿ ಮರುದ್ದೇವತೆಗಳೇ ಅವನನ್ನು ಪ್ರೇರಿ ಸುವವರು ಮತ್ತು ಅವನಿಗೆ ಬೆಂಬಲವಾಗಿರುವವರು (ಋ. ಸಂ. ೩-೩೨-೪, ೧೦-೭೩-೧ ಇತ್ಯಾಡಿ) ಇತರ ದೇವತೆ ಗಳೆಲ್ಲಾ ವೃತ್ರನಿಗೆ ಹೆದರಿ ಓಡಿಹೋದಾಗಲೂ (ಋ. ಸಂ. ೮-೮೫-೭, ೪-೧೮-೧೧, ಐ. ಬ್ರಾ. ೩-೨೦) ಮರುದ್ದೇವ ತೆಗಳು ಮಾತ್ರ ಇಂದ್ರನಿಗೆ ನೆರವಾಗಿದ್ದರು. ಆದರೆ ಮರುತ್ತುಗಳೇ ಅವನನ್ನು ಒಂದುಸಲ ಪರಿತ್ಯಜಿಸಿದರೆಂದು (ಋ. ಸಂ. ೮-೭-೩೧) ಹೇಳಿದೆ ವೃತ್ರನೊಡನೆ ಕಾದಾಡುವಾಗ ಇಂದ್ರನಿಗೆ ಅಗ್ನಿ, ಸೋಮ, ವಿಷ್ಣುಗಳೂ ಸಹಾಯಕರಾಗಿದ್ದರು ಇತ್ಯಾದಿ ವರ್ಣನೆಗಳೂ ಅಲ್ಲಲ್ಲಿ ಇವೆ. ಭಾಗವತಮೊದಲಾದಪುರಾಣಗಳಲ್ಲಿ ವೃತ್ರಾಸುರನ ವಧೆಯ ವಿಷಯದಲ್ಲಿ ವಿಸ್ತಾರವಾದ ಇತಿಹಾಸವಿದೆ.

### ವ್ಯಾಕರಣಪ್ರಕ್ರಿಯಾ .

**ಪಿತುಮ್**—ಪಾ ಪಾನೇ ಧಾತು. **ಪಃ ಕಿಚ್ಚ** (ಉ. ಸೂ. ೧-೨೦) ಎಂಬುದರಿಂದ ತು ಪ್ರತ್ಯಯ. ಕಿತ್ವ ವಿಧಾನಮಾಡಿರುವುದರಿಂದ ಧಾತುವಿನ ಆಕಾರಕ್ಕೆ ಇತ್ವ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸ್ತೋಷಮ್**—ಷ್ಟುಞ್ ಸ್ತುತೌ ಧಾತು. ಛಾಂದಸವಾಗಿ ಲುಙ್. ಉತ್ತಮಪುರುಷ ಏಕವಚನಾಂತ ರೂಪ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಧರ್ಮಾಣಮ್**—ಧೃಞ್ ಧಾರಣೇ ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. ವ್ಯತ್ಯಯದಿಂದ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ವಿಪರ್ವಮ್**—ವಿಗತಃ ಪರ್ವಃ ಯಸ್ಮಾತ್ ಸಃ. ತಮ್. ಬಹುವ್ರೀಹೌ **ಪ್ರಕೃತ್ಯಾ**—ಎಂಬುದ ರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಅರ್ದಯೆತ್**—ಅರ್ದ ಹಿಂಸಾಯಾಂ ಧಾತು. ಚುರಾದಿ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್. ಇಕಾರಲೋಪ. **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. ಶಪ್ ವಿಕರಣನಿಮಿತ್ತವಾಗಿ ಣಿಚಿಗೆ ಗುಣ. ಅಯಾದೇಶ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ಯಚ್ಛಬ್ದಸಂಬಂಧ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಿಚ್ ಸ್ವರ ಉಳಿಯುತ್ತದೆ.

---

ಸಂಹಿತಾಪಾಠಃ

ಸ್ವಾದೋ ಪಿತೋ ಮಧೋ ಪಿತೋ ವಯಂ ತ್ವಾ ವವೃಮಹೇ ।
ಅಸ್ಮಾಕಮವಿತಾ ಭವ ॥ ೨ ॥

ಪದಪಾಠಃ

ಸ್ವಾದೋ ಇತಿ । ಪಿತೋ ಇತಿ । ಮಧೋ ಇತಿ । ಪಿತೋ ಇತಿ । ವಯಂ । ತ್ವಾ । ವವೃಮಹೇ ।
ಅಸ್ಮಾಕಂ । ಅವಿತಾ । ಭವ ॥ ೨ ॥

ಸಾಯಣಭಾಷ್ಯಂ

ಹೇ ಸ್ವಾದೋ ಆಸ್ವಾದನೀಯ ಪಿತೋ ಪಾಲಕ ಮಧೋ ಮಾಧುರ್ಯೋಪೇತ ಪಿತೋ ಹೇ ಪಾನಸಾಧನಾನ್ನ ವಯಂ ತ್ವಾ ತ್ವಾಂ ವವೃಮಹೇ । ಸೇವಾಮಹೇ ॥ ಅತ್ರ ಸರ್ವತ್ರಸನುದಾತ್ತಾನಾಂ ಪೂರ್ವಸ್ಯಾಸಾಮಾನ್ಯವಚನತ್ವೇನಾನಿಘಾತತ್ವಂ । ಅನುದಾತ್ತಾನಾಂ ತು ವಿಶೇಷವಚನತ್ವಾನ್ನಿಘಾತತ್ವಂ ॥ ಅಸಕೃತ್ಪಿತುಶಬ್ದಶ್ರವಣಂ ತಸ್ಯ ಪ್ರಾಶಸ್ತ್ಯಜ್ಞಾಪನಾರ್ಥಂ । ಹೇ ಪಿತೋ ಅಸ್ಮಾಕಮವಿತಾ ತರ್ಪಯಿತಾ ಭವ ॥

ಪ್ರತಿಪದಾರ್ಥ

**ಸ್ವಾದೋ**—ರುಚಿಕರವೂ । **ಪಿತೋ**—ಪಾಲಕವೂ । **ಮಧೋ**—ಮಾಧುರ್ಯೋಪೇತವೂ । **ಪಿತೋ**—ಪಾನಸಾಧನವೂ ಆದ ಎಲೈ ಅನ್ನವೇ । **ವಯಂ**—ನಾವು । **ತ್ವಾ**—ನಿನ್ನನ್ನು । **ವವೃಮಹೇ**—ಸೇವಿಸುತ್ತೇವೆ । **ಅಸ್ಮಾಕಂ**—ನಮಗೆ । **ಅವಿತಾ**—ರಕ್ಷಕನಾಗಿ (ತೃಪ್ತಿದಾಯಕನಾಗಿ) । **ಭವ**—ಆಗು ।

ಭಾವಾರ್ಥ

ಆಸ್ವಾದನಾರ್ಹವೂ, ಪಾಲಕವೂ, ಮಾಧುರ್ಯೋಪೇತವೂ, ಪಾನಸಾಧನವೂ ಆದ ಎಲೈ ಅನ್ನವೇ, ನಾವು ನಿನ್ನನ್ನು ಸೇವಿಸುತ್ತೇವೆ. ನಮಗೆ ತೃಪ್ತಿದಾಯಕನಾಗಿರು.

English Translation

Savoury Pitu ; sweet Pitu ; we worship you : become our protector.

ವಿಶೇಷವಿಷಯಗಳು

**ಸ್ವಾದೋ ಪಿತೋ ಮಧೋ ಪಿತೋ**—ಸ್ವಾದುವೆಂದರೆ ರುಚಿಕರವಾದದ್ದು ತಿನ್ನುವುದಕ್ಕೆ ಹಿತಕರವಾದದ್ದು ಎಂದರ್ಥವು. ಇಲ್ಲಿ ಪಿತೋ ಎಂದು ಎರಡಾವರ್ತಿ ಸಂಬೋಧನೆಮಾಡಿರುವುದು, ಅನ್ನದಲ್ಲಿ ಸ್ತುತಿಕರ್ತೃವಿಗೆ ಇರುವ ಆದರಾತಿಶಯವನ್ನೂ, ಪ್ರಾಶಸ್ತ್ಯವನ್ನೂ ಸೂಚಿಸುವುದಾಗಿದೆ.

**ಅವಿತಾ-ತರ್ಪಯಿತಾ** । ತೃಪ್ತಿಯನ್ನುಂಟುಮಾಡುವ ಎಂದು ಭಾಷ್ಯಕಾರರ ವಿವರಣೆಯಿದೆ. **ಅವಿತಾ** ಎಂದರೆ **ರಕ್ಷಕಃ**-ಕ್ಷುದ್ಬಾಧೆಯನ್ನು ಪರಿಹರಿಸಿ ಕಾಪಾಡುವವನು ಎಂದೂ ಅರ್ಥವಾಗಬಹುದು.

ವ್ಯಾಕರಣಪ್ರಕ್ರಿಯಾ

**ಸ್ವಾದೋ**— ಪಾದಾದಿಯಲ್ಲಿರುವುದರಿಂದ ಆಮಂತ್ರಿತನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ**— (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವವೃಮಹೇ**— ವೃಞ್ ವರಣೇ ಧಾತು. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಟಿತಆತ್ಮನೇಪದಾನಾಂ ಟೇ**—(ಪಾ. ಸೂ. ೩-೪-೭೯) ಎಂಬುದರಿಂದ ಟಿಗೆ ಏತ್ವ. **ಬಹುಲಂ ಛಂದಸಿ** ಎಂಬುದರಿಂದ ಶ್ಲುವಿಕರಣ ಬಂದಾಗ ಧಾತುವಿಗೆ ದ್ವಿತ್ವಾದಿ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅವಿತಾ**— ಅವ ರಕ್ಷಣೇ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಪಿತೋ**— ಸಂಬುಧ್ಯಂತರೂಪ. ಇಲ್ಲಿ ಪೂರ್ವದಲ್ಲಿಯೂ ಸಂಬುದ್ಧಿರೂಪವಿರುವುದರಿಂದ **ಆಮಂತ್ರಿತಂ ಪೂರ್ವಮವಿದ್ಯಮಾನವತ್** (ಪಾ. ಸೂ. ೮-೧-೭೨) ಎಂಬುದರಿಂದ ಅದಕ್ಕೆ ಅವಿದ್ಯಮಾನವದ್ಭಾವ ಪ್ರಾಪ್ತವಾದರೆ (ಪೂರ್ವದಲ್ಲಿ ಪದವಿಲ್ಲದಿರುವುದರಿಂದ ನಿಘಾತಸ್ವರ ಬರದೇ ಹೋಗುವುದು) **ನಾಮಂತ್ರಿತೇ ಸಮಾನಾಧಿಕರಣೇ ಸಾಮಾನ್ಯವಚನಮ್** (ಪಾ. ಸೂ. ೮-೧-೭೩) ಎಂಬುದರಿಂದ ಅವಿದ್ಯಮಾನವದ್ಭಾವ ಬರುವುದಿಲ್ಲ. ಇದು ವಿಶೇಷ್ಯವಾಗಿಯೂ ಸ್ವಾದೋ ಎಂಬುದು ಸಾಮಾನ್ಯವಚನವಾಗಿಯೂ (ವಿಶೇಷಣ) ಇರುವುದರಿಂದ ಇಂತಹ ಲಕ್ಷ್ಯಗಳಲ್ಲಿ ಪೂರ್ವದ ಸಾಮಾನ್ಯವಚನವು ಇಲ್ಲವೆಂತಾಗುವುದಿಲ್ಲ. ಆದುದರಿಂದ ಆಮಂತ್ರಿತನಿಘಾತಸ್ವರ ವಿಶೇಷ್ಯಕ್ಕೆ ಬರುತ್ತದೆ. ಮುಂದಿನ ವಿಶೇಷಣಗಳಲ್ಲಿಯೂ ಹೀಗೆಯೇ ತಿಳಿಯಬೇಕು.

---

ಸಂಹಿತಾಪಾಠಃ

ಉಪ ನಃ ಪಿತವಾ ಚರ ಶಿವಃ ಶಿವಾಭಿರೂತಿಭಿಃ ।

ಮಯೋಭುರದ್ವಿಷೇಣ್ಯಃ ಸಖಾ ಸುಶೇವೋ ಅದ್ವಯಾಃ ॥ ೩ ॥

॥ ಪದಪಾಠಃ ॥

ಉಪ । ನಃ । ಪಿತೋ ಇತಿ । ಆ । ಚರ । ಶಿವಃ । ಶಿವಾಭಿಃ । ಊತಿಽಭಿಃ ।

ಮಯಃಽಭುಃ । ಅದ್ವಿಷೇಣ್ಯಃ । ಸಖಾ । ಸುಽಶೇವಃ । ಅದ್ವಯಾಃ ॥ ೩ ॥

ವ್ಯಾಕರಣಪ್ರಕ್ರಿಯಾ

ಹೇ ಪಿತೋ ಯತಸ್ತ್ವಂ ಶಿವೋ ಮಂಗಲಃ ಅತಃ ಶಿವಾಭಿರ್ಮಂಗಲಯುಕ್ತಾಭಿರೂತಿಭೀ ರಕ್ಷಣೈರ್ನೋಽಸ್ಮಾನಾ ಚರ । ಆಗಚ್ಛ । ಆಗತ್ಯ ಚ ಮಯೋಭುಃ ಸುಖಸ್ಯ ಭಾವಯಿತಾದ್ವಿಷೇಣ್ಯೋಽದ್ವೇಷ್ಯ-

ರಸಃ । ಪ್ರಿಯರಸ ಇತ್ಯರ್ಥಃ । ಸಖಾ ಸಖಿವತ್ಪ್ರಿಯಕಾರೀ ಸುಶೇವೋಽತ ಏವ ಸುಷ್ಠು ಸುಖಕರೋಽ-ದ್ವಯಾ ದ್ವಯರಹಿತ ಉಕ್ತಗುಣ ಏವ ನ ತು ತದ್ವಿಪರೀತೋ ಭವೇತ್ಯರ್ಥಃ । ಅಥವಾ ದೃಷ್ಟಾಂತ-ವಾದೋಽಯಂ । ಸುಶೇವೋಽದ್ವಯಾ ಮನಃಕರ್ಮವಿಸಂವಾದರಹಿತಃ ಸಖಾ ಯಥಾ ಮಯೋಭುರ-ದ್ವೇಷ್ಯಶ್ಚ ಭವತಿ ತದ್ವತ್ತ್ವಮಪಿ ಭವೇತ್ಯರ್ಥಃ ॥

ಪ್ರತಿಪದಾರ್ಥ

**ಪಿತೋ**—ಪಾಲಕವಾದ ಎಲೈ ಅನ್ನವೇ । **ಶಿವಃ**—ಮಂಗಳಾತ್ಮಕನಾದ ನೀನು । **ಶಿವಾಭಿಃ**—ಮಂಗಳ ಕರಗಳಾದ । **ಊತಿಭಿಃ**—ರಕ್ಷಣೆಗಳೊಂದಿಗೆ । **ನಃ ಉಪ**—ನಮ್ಮ ಸಮೀಪಕ್ಕೆ । **ಆ ಚ**—ಆಗಮಿಸು । **ಸುಶೇವಃ**—ಶ್ರೇಷ್ಠವಾಗಿ ಗೌರವಿಸಲ್ಪಡುವವನೂ । **ಅದ್ವಯಾಃ**—ಮನಸ್ಸು ಮತ್ತು ಕರ್ಮ ಇವುಗಳಿಗೆ ಐಕ್ಯತೆಯನ್ನು ಸಂಪಾದಿಸಿರುವವನೂ । **ಸಖಾ**—ಸ್ನೇಹಿತನೂ । **ಮಯೋಭುಃ**—ಸುಖವನ್ನುಂಟುಮಾಡುವವನೂ । **ಅದ್ವಿಷೇಣ್ಯಃ**—ದ್ವೇಷರಹಿತನೂ ಆಗು । [ ಅಥವಾ **ಮಯೋಭುಃ**—ಸಂತೋಷಕಾರಕನೂ । **ಅದ್ವಿಷೇಣ್ಯಃ**-ಅನಿಷ್ಟವಾದ ರಸರಹಿತನಾಗಿ (ಪ್ರಿಯವಾದ ರಸವುಳ್ಳವನೂ) । **ಸಖಾ**—ಸುಹೃತ್ತಿನಂತೆ ಪ್ರಿಯವನ್ನುಂಟುಮಾಡುವವನೂ । **ಸುಶೇವಃ**—(ಆದುದರಿಂದಲೇ) ಸೇವಿಸಲು ಅರ್ಹನೂ । **ಅದ್ವಯಾಃ**—ಪೂಜ್ಯನೂ, ಗ್ರಾಹ್ಯನೂ ಆದ ಗುಣವಿಲ್ಲದೇ ಬೇರೆ ವಿಧವಾದ ಗುಣವಿಲ್ಲದವನೂ (ಆಗು). ]

ಭಾವಾರ್ಥ

ಮಂಗಳಾತ್ಮಕವಾದ ಎಲೈ ಅನ್ನವೇ, ಮಂಗಳಕರಗಳಾದ ನಿನ್ನ ರಕ್ಷಣೆಗಳೊಂದಿಗೆ ನಮ್ಮ ಸಮೀಪಕ್ಕೆ ಆಗಮಿಸು- ಯಜಮಾನರಿಗೆ ಸಂತೋಷಕಾರಕನೂ, ಅನಿಷ್ಟವಾದ ರಸರಹಿತನಾಗಿ ಪ್ರಿಯವಾದ ರಸವುಳ್ಳವನೂ ಸುಹೃತ್ತಿನಂತೆ ಪ್ರಿಯವನ್ನುಂಟುಮಾಡುವವನೂ ಮತ್ತು ಆದುದರಿಂದಲೇ ಪೂಜ್ಯನೂ, ಸೇವಿಸಲು ಅರ್ಹನೂ ಆಗಿರು.

English Translation

Come to us, Pitu, auspicious with auspicious aids ; a source of delight not unpalatable, a friend well respected, and having none (but agreeable properties).

ವಿಶೇಷವಿಷಯಗಳು

**ಶಿವಃ, ಶಿವಾಭಿಃ, ಸುಶೇವಃ**—**ಶಿವಃ** ಎಂಬ ಶಬ್ದವು ಇಪ್ಪತ್ತು ಸುಖನಾಮಗಳಲ್ಲಿ ಉಕ್ತವಾಗಿರುವುದರಿಂದ (ನಿ. ೩-೧೩) ಶಿವಃ ಎಂದರೆ ಸುಖವು ಎಂದರ್ಥವು. ಭಾಷ್ಯಕಾರರು ಮಂಗಳವೆಂದು ಅರ್ಥವಿವರಣೆಮಾಡಿರುವರು. ಯಾಸ್ಕರು—

**ಅಮೀವಹಾ ವಾಸ್ತೋಷ್ಪತೇ ವಿಶ್ವಾ ರೂಪಾಣ್ಯಾವಿಶನ್ । ಸಖಾ ಸುಶೇವ ಏಧಿ ನಃ ।**

(ಋ. ಸಂ. ೭-೫೫-೧)

ಎಂಬ ಋಕ್ಕಿನ ನಿರ್ವಚನದಲ್ಲಿ ಶೇವ ಎಂಬ ಶಬ್ದದ ಅರ್ಥವನ್ನು ವಿವರಿಸುತ್ತಾ—**ಶೇವ ಇತಿ ಸುಖನಾಮ । ಶಿಷ್ಯತೇರ್ವಕಾರೋ ನಾಮಕರಣೋಽನ್ತಸ್ಥಾಂತರೋಪಲಿಂಗೀ । ವಿಭಾಷಿತಗುಣ ಶಿವಮಿತ್ಯಸ್ಯ ಭವತಿ ।**

(ನಿ. ೧೦-೧೬) ಶೇವಶಬ್ದಕ್ಕೆ ಸುಖವೆಂಬ ಅರ್ಥವನ್ನು ಹೇಳಿ ಶಿವಶಬ್ದಕ್ಕೂ ಅದೇ ಅರ್ಥವಿರುವುದೆಂದು ತೋರಿಸಿ-ದ್ದಾರೆ. ಶಿವಶಬ್ದಕ್ಕೆ ಕೋಶಾದಿಗಳಲ್ಲಿ ಮಂಗಳವೆಂದೇ ಅರ್ಥವಿದೆ. ಸುಖವನ್ನುಂಟುಮಾಡುವುದೆಲ್ಲಾ ಮಂಗಳಕರವೆಂದು ಹೇಳುವುದರಲ್ಲಿ ಬಾಧಕವೇನೂ ಇಲ್ಲ. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ ಸುಖನ್ನುಂಟುಮಾಡುವ ಅಥವಾ ಮಂಗಳಕರವಾದ ಎಂಬೆರಡು ಅರ್ಥಗಳೂ ಸಮಂಜಸವಾಗಿವೆ.

**ಮಯೋಭುಃ**—**ಮಯಃ** ಎಂಬ ಶಬ್ದವೂ ಸಹ **ಶಿಂಬಾತಾ**, ಶತರಾ ಮೊದಲಾದ ಇಪ್ಪತ್ತು ಸುಖನಾಮಗಳಲ್ಲಿ ಉಕ್ತವಾಗಿರುವುದರಿಂದ **ಮಯಃ** ಎಂದರೆ ಸುಖವು. ಸುಖವನ್ನುಂಟುಮಾಡುವುದಕ್ಕೆ ಮಯೋಭುಃ ಎಂದು ಹೆಸರು. **ಮಯೋಭುಃ** ಎಂಬ ಶಬ್ದದ ಪ್ರಯೋಗವು ಸುಖವನ್ನುಂಟುಮಾಡುವ ಎಂಬರ್ಥದಲ್ಲಿ ಋಗ್ವೇದದಲ್ಲಿಯೂ ಇತರ ವೇದಗಳಲ್ಲಿಯೂ ಬಹಳವಾಗಿರುವುದು.

**ಅದ್ವಿಷೇಣ್ಯಃ**—**ಅದ್ವೇಷ್ಯರಸಃ** । ದ್ವೇಷವನ್ನುಂಟುಮಾಡದಿರುವ ಅಥವಾ ಹಿತಕರವಾದ ರಸ (ರುಚಿ) ಯುಳ್ಳ ಎಂದರ್ಥವು. ಪ್ರಿಯವಾಗಿಯೂ ರುಚಿಕರವಾದದ್ದೂ ಎಂದಭಿಪ್ರಾಯವು.

**ಸಖಾ**—**ಸಖಿವತ್ಪ್ರಿಯಕಾರೀ** । ಸ್ನೇಹಿತನಂತೆ ಪ್ರಿಯವನ್ನುಂಟುಮಾಡುವುದು ಸ್ನೇಹಿತನು ಯಾವಾಗಲೂ ಹಿತವನ್ನೇ ಕೋರಿ ಪ್ರಿಯವನ್ನುಂಟುಮಾಡುವುದರಿಂದ ಅನ್ನವೂ ಸಹ ಎಲ್ಲರಿಂದಲೂ ಅಪೇಕ್ಷಣೀಯವಾಗಿ ಹಿತವನ್ನುಂಟುಮಾಡುವುದೆಂದಭಿಪ್ರಾಯವು. ಇಲ್ಲಿ ಋಷಿಯು ಅನ್ನವನ್ನು ಪ್ರೀತ್ಯತಿಶಯದಿಂದ ಸಖಾ-ಸ್ನೇಹಿತನೆಂಬ ಆದರವಾದ ಶಬ್ದದಿಂದ ಸಂಬೋಧನೆಮಾಡಿದ್ದಾನೆ.

**ಅದ್ವಯಾಃ**—**ದ್ವಯರಹಿತಃ ಉಕ್ತಗುಣ ಏವ ನ ತು ತದ್ವಿಪರೀತೋ ಭವೇತ್ಯರ್ಥಃ** । ಪೂಜ್ಯವೂ ಗ್ರಾಹ್ಯವೂ ಆದ ಗುಣವಿಲ್ಲದೆ ಬೇರೆವಿಧವಾದ ಗುಣವಿಲ್ಲದ ಎಂದು ಭಾಷ್ಯಕಾರರು ಒಂದು ವಿಧವಾಗಿಯೂ, **ಅದ್ವಯಾಃ ಮನಃಕರ್ಮವಿಸಂವಾದರಹಿತಃ** । ಮನಸ್ಸಿನಲ್ಲಿ ಒಂದುವಿಧ, ಕಾರ್ಯದಲ್ಲಿ ಒಂದುವಿಧ ಇತ್ಯಾದಿಗಳಿಲ್ಲದೆ ಮನಃಪೂರ್ವಕವಾಗಿ ಹಿತವನ್ನುಂಟುಮಾಡುವ ಎಂದು ಇನ್ನೊಂದುವಿಧವಾಗಿರುವ ಅರ್ಥವನ್ನೂ ವಿವರಿಸಿರುವರು. ಲೋಕವ್ಯವಹಾರದಲ್ಲಿ ಸ್ನೇಹಿತರೆಂದು ನಟಿಸುವವರು ಬಾಯಲ್ಲಿ ಮಾತ್ರ ಹಿತವಚನಗಳನ್ನು ಆಡುತ್ತಾ ಕಾರ್ಯಾಚರಣೆಯಲ್ಲಿ ಅದಕ್ಕೆ ವಿರುದ್ಧವಾಗಿ ಕೆಡಕನ್ನೇ ಉಂಟುಮಾಡುತ್ತಾ ಇರುವುದು ಕಂಡುಬರುವುದೇನೋ ಅಸಂಭವವಲ್ಲ. ಆದುದರಿಂದ ಆರೀತಿ ಮಾಡದೆ ಮನಃಕರ್ಮಗಳೆರಡರಲ್ಲಿಯೂ ಒಂದೇ ವಿಧವಾಗಿ ಇದ್ದು ಹಿತವನ್ನುಂಟುಮಾಡುವ ಸ್ವಭಾವವುಳ್ಳವನೆಂದು ಅನ್ನವನ್ನು ಸ್ತುತಿಸಲಾಗಿದೆ.

### ವ್ಯಾಕರಣಪ್ರಕ್ರಿಯಾ

**ಚರ** ಚರ ಗತಿಭಕ್ಷಣಯೋಃ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಶಿವಃ**—ಶೇತೇ ಅಸ್ಮಿನ್ ಸರ್ವಮಿತಿ ಶಿವಃ ಶೀಙ್ ಸ್ವಪ್ನೇ. ಧಾತು- **ಸರ್ವ ನಿಘೃಷ್ವರಿಷ್ವಲಷ್ವಶಿವ**— (ಉ. ಸೂ. ೧-೧೫೧) ಎಂಬುದರಿಂದ ವ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ.

**ಅದ್ವಿಷೇಣ್ಯಃ**—ದ್ವಿಷ ಅಪ್ರೀತೌ. ಧಾತು. ಔಣಾದಿಕ ಏಣ್ಯ ಪ್ರತ್ಯಯ. ನಞ್‌ಪೂರ್ವಪದ. ಬಹುವ್ರೀಹಿಯಲ್ಲಿ **ನಞ್‌ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಸುಶೇವಃ**—ಶೀಙ್ ಸ್ವಪ್ನೇ ಧಾತು. ಇಣ್ ಶೀಙ್‌ಭ್ಯಾಂ ವನ್ (ಉ. ಸೂ. ೧-೧೫೦) ಎಂಬುದರಿಂದ ವನ್ ಪ್ರತ್ಯಯ ಸಾರ್ವಧಾತುಕಾರ್ಧ—ಎಂಬುದರಿಂದ ಗುಣ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಬಹುಸಮಾಸದಲ್ಲಿ ಸುಸ್ವರಕ್ಕೆ ಬಾಧಕವಾಗಿ ಆದ್ಯುದಾತ್ತಂ ದ್ವ್ಯಚ್ ಛಂದಸಿ (ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಅದ್ವಯಾಃ**—ತತ್ಪುರುಷೇ ತುಲ್ಯಾ—(ಪಾ. ಸೂ. ೬-೨-೨) ಎಂಬುದರಿಂದ ನಞ್‌ಪೂರ್ವಪದ ಪ್ರಕೃತಿ ಸ್ವರ ಬರುತ್ತದೆ.

---

ಸಂಹಿತಾಪಾಠಃ

**ತವ ತ್ಯೇ ಪಿತೋ ರಸಾ ರಜಾಂಸ್ಯನು ವಿಷ್ಠಿತಾಃ ।**

**ದಿವಿ ವಾತಾ ಇವ ಶ್ರಿತಾಃ ॥ ೪ ॥**

ಪದಪಾಠಃ

**ತವ । ತ್ಯೇ । ಪಿತೋ ಇತಿ । ರಸಾಃ । ರಜಾಂಸಿ । ಅನು । ವಿಽಸ್ಥಿತಾಃ ।**

**ದಿವಿ । ವಾತಾಃಽಇವ । ಶ್ರಿತಾಃ ॥ ೪ ॥**

ಸಾಯಣಭಾಷ್ಯಂ

**ಹೇ ಪಿತೋ ತವ ತ್ವತ್ಸಂಬಂಧಿನಸ್ತ್ಯೇ ತೇ ಸ್ವಾದ್ವಮ್ಲಾದಿಷಡ್ರಸಾ ರಜಾಂಸಿ ಲೋಕಾಂಲ್ಲೋಕೆ-ಸ್ಥಾನಾರ್ಥಾನನ್ವಾನುಕೂಲ್ಯೇನ ವಿಷ್ಠಿತಾಃ । ವಿವಿಧಂ ಸ್ಥಿತಾಃ । ವಿವಿಧಸ್ಥಿತೌ ದೃಷ್ಟಾಂತಃ । ದಿವಿ ದ್ಯುಲೋಕೇಽಂತರಿಕ್ಷೇ ಶ್ರಿತಾ ವಾತಾ ವಾಯವಃ ತೇ ಯಥಾ ವ್ಯಾಪ್ತಾಸ್ತದ್ವತ್ ॥**

। ಪ್ರತಿಪದಾರ್ಥ ।

**ಪಿತೋ**—ಎಲೈ ಅನ್ನವೇ । **ದಿವಿ**—ಅಂತರಿಕ್ಷದಲ್ಲಿ । **ಶ್ರಿತಾಃ**—ಆಶ್ರಯಿಸಿ ಪ್ರಸರಿಸಿರುವ । **ವಾತಾಃ ಇವ**—ವಾಯುಗಳು ಸರ್ವತ್ರ ವ್ಯಾಪ್ತವಾಗಿರುವಂತೆ । **ತೇ**—ನಿನ್ನ । **ತ್ಯೇ ರಸಾಃ**—ಪ್ರಸಿದ್ಧವಾದ ಆಮ್ಲಾದಿ ಷಡ್ರಸಗಳೂ ಸಹ । **ರಜಾಂಸಿ**—ಲೋಕಗಳನ್ನೆಲ್ಲಾ । **ಅನುವಿಷ್ಠಿತಾಃ**—ಲೋಕಕ್ಕೆ ಅನುಕೂಲಕರವಾಗಿರುವಂತೆ ವಿಧ ವಿಧವಾಗಿ ಪ್ರಸರಿಸಿ ವ್ಯಾಪಿಸಿವೆ.

ಭಾವಾರ್ಥ

ಎಲೈ ಅನ್ನವೇ, ಅಂತರಿಕ್ಷದಲ್ಲಿ ಪ್ರಸರಿಸಿರುವ ವಾಯುಗಳು ಸರ್ವತ್ರ ವ್ಯಾಪಿಸಿರುವಂತೆ ನಿನ್ನ ಆಮ್ಲಾದಿ ಷಡ್ರಸಗಳೂ ಸಹ ಲೋಕಗಳನ್ನೆಲ್ಲಾ ವಿಧವಿಧವಾಗಿ ವ್ಯಾಪಿಸಿ ಲೋಕಕ್ಕೆ ಅನುಕೂಲಕಾರಕಗಳಾಗಿವೆ.

## English Translation

Your flavours, Pitu; are diffused through the regions, as the winds are spread through the sky.

### ವಿಶೇಷವಿಷಯಗಳು

ತ್ಯೇ—ತೇ । ಋಗ್ವೇದದಲ್ಲಿ ತ್ಯ ಎಂಬ ಶಬ್ದವೆಲ್ಲಿ ಬಂದರೂ ಅದಕ್ಕೆ ತಚ್ಛಬ್ದಾರ್ಥವೇ ಇರುವುದು. ನಿರುಕ್ತಕಾರರು—

**ತ್ಯಮೂ ಷು ವಾಜಿನಂ ದೇವಜೂತಂ ಸಹಾವಾನಂ ತರುತಾರಂ ರಥಾನಾಂ ।**

(ಋ. ಸಂ. ೧೦-೧೭೮-೧)

**ಪ್ರತಿ ತ್ಯಂ ಚಾರುಮಧ್ವರಂ ಗೋಪೀಥಾಯ ಪ್ರ ಹೂಯಸೇ । ಮರುದ್ಭಿರಗ್ನ ಆ ಗಹಿ ॥**

(ಋ. ಸಂ ೧-೧೯-೧)

ಇತ್ಯಾದಿ ಋಕ್ಕುಗಳಲ್ಲಿರುವ ತ್ಯಂ ಎಂಬ ಶಬ್ದಕ್ಕೆ ತಂ ಎಂದು ಅರ್ಥವಿವರಣೆ ಮಾಡಿರುವರು. (ನಿ. ೧೦-೨೯, ೩೭)

ರಜಾಂಸಿ—ರಜಃ ಶಬ್ದವು ಶ್ಯಾವೀ, ಕ್ಷಪಾ ಮೊದಲಾದ ಮೂವತ್ತುರಾತ್ರಿನಾಮಗಳಲ್ಲಿ ಪಠಿತವಾಗಿದೆ. (ನಿ. ೨-೧೮) ಮತ್ತು ಯಾಸ್ಕರು ರಜಃ ಶಬ್ದಾರ್ಥವನ್ನು ವಿವರಿಸುತ್ತಾ—

**ರಜಃ । ರಜೋ ರಜತೇರ್ಜ್ಯೋತೀ ರಜ ಉಚ್ಯತೇ । ಉದಕಂ ರಜ ಉಚ್ಯತೇ । ಲೋಕಾ ರಜಾಂಸ್ಯುಚ್ಯಂತೇ ॥**

(ನಿ. ೪-೧೯)

ಪ್ರಕಾಶವೆಂಬರ್ಥವನ್ನು ಕೊಡುವ ರಜತಿ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ರಜಃ ಎಂದರೆ ಜ್ಯೋತಿಃ ಬೆಳಕು ಎಂದು ಅರ್ಥವು, ರಜಃ ಎಂದರೆ ಉದಕವೆಂದೂ ಅರ್ಥವಾಗುವುದು, ರಜಾಂಸಿ ಎಂಬ ಶಬ್ದಕ್ಕೆ (ರಜಃ ಶಬ್ದದ ಬಹುವಚನ) ಲೋಕಗಳೆಂದೂ ಅರ್ಥವು ಎಂದು ಯಾಸ್ಕರು ನಿರ್ವಚನವನ್ನು ಹೇಳಿ, ಉದಾಹರಣೆಗಾಗಿ—

**ಭುವೋ ಯಜ್ಞಸ್ಯ ರಜಸಶ್ಚ ನೇತಾ ಯತ್ರಾ ನಿಯುದ್ಭಿಃ ಸಚಸೇ ಶಿವಾಭಿಃ ।**
**ದಿವಿ ಮೂರ್ಧಾನಂ ದಧಿಷೇ ಸ್ವರ್ಷಾಂ ಜಿಹ್ವಾಮಗ್ನೇ ಚಕೃಷೇ ಹವ್ಯವಾಹಂ ॥**

(ಋ. ಸಂ. ೧೦-೮-೬)

ಎಂಬ ಋಕ್ಕಿನಲ್ಲಿರುವ ರಜಸಃ ಎಂಬ ಶಬ್ದಕ್ಕೆ ಉದಕಕ್ಕೆ ಎಂಬರ್ಥವಿರುವುದನ್ನೂ,

**ರಜಾಂಸಿ ಚಿತ್ರಾ ವಿಚರಂತಿ ತಾನ್ಯವಃ ।**
**ಅದ್ಯಾ ಚಿನ್ನೂ ಚಿತ್ತ್ರದಪೋ ನದೀನಾಂ ಯದಾಭ್ಯೋ ಅರದೋ ಗಾತುಮಿಂದ್ರ ।**
**ನಿ ಪರ್ವತಾ ಅದ್ಮಸದೋ ನ ಸೇದುಸ್ತ್ವಯಾ ದೃಳ್ಹಾನಿ ಸುಕ್ರತೋ ರಜಾಂಸಿ ॥**

ಋ. ಸಂ. (೬-೩೦-೩)

ಇತ್ಯಾದಿ ಋಕ್ಕುಗಳಲ್ಲಿ ರಜಾಂಸಿ ಎಂಬ ಶಬ್ದಕ್ಕೆ ಲೋಕಗಳೆಂಬ ಅರ್ಥವಿರುವುದನ್ನೂ ತೋರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಲೋಕಗಳೆಂದು ಅರ್ಥವು.

ರಸಾಃ ದಿವಿ ವಾತಾ ಇವ ಶ್ರಿತಾಃ—ವಾಯುವು ಅಂತರಿಕ್ಷದಲ್ಲಿ ಹೇಗೆ ಸರ್ವತ್ರ ಒಂದೇ ಸಮನಾಗಿ ವ್ಯಾಪಿಸಿರುವುದೋ ಅದರಂತೆ, ಮಧುರಾದಿ ಷಡ್ರಸಗಳೂ ಅನ್ನದಲ್ಲಿ ವ್ಯಾಪ್ತವಾಗಿ ವಿಧವಿಧವಾದ ರುಚಿಯನ್ನುಂಟುಮಾಡುವುವು ಎಂದು ದೃಷ್ಟಾಂತವನ್ನು ಋಷಿಯು ಇಲ್ಲಿ ವಿವರಿಸಿರುವನು.

॥ ವ್ಯಾಕರಣಪ್ರಕ್ರಿಯಾ ॥

ರಜಾಂಸಿ—ರಂಜ ರಾಗೇ. ಧಾತು. ಭೂರಂಜಿಭ್ಯಾಂ ಕಿತ್ (ಉ. ಸೂ. ೬-೫೭) ಎಂಬುದರಿಂದ ಅಸುನ್ ಪ್ರತ್ಯಯ. ಕಿತ್ವವಿಧಾನಮಾಡಿರುವುದರಿಂದ ಅನಿದಿತಾಂ ಹಲ ಉಪಧಾ - ಸೂತ್ರದಿಂದ ನಲೋಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ವಿಷ್ಠಿತಾಃ—ಷ್ಠಾ ಗತಿನಿವೃತ್ತೌ. ಧಾತು. ನಿಷ್ಠಾ ಎಂಬುದರಿಂದ ಕ್ತ ಪ್ರತ್ಯಯ. ದ್ಯತಿಸ್ಯತಿ ಮಾಸ್ಥಾ— (ಪಾ. ಸೂ ೭-೪.೪೦) ಎಂಬುದರಿಂದ ಧಾತುವಿನ ಆಕಾರಕ್ಕೆ ಇತ್ವ. ಗತಿರನಂತರಃ (ಪಾ. ಸೂ. ೬-೧-೪೯) ಎಂಬುದರಿಂದ ಗತಿಗೆ (ವಿ) ನಿಘಾತಸ್ವರ ಬರುತ್ತದೆ. 4

———— :O: ————

ಸಂಹಿತಾಪಾಠಃ

ತವ ತ್ಯೇ ಪಿತೋ ದದತಸ್ತವ ಸ್ವಾದಿಷ್ಠ ತೇ ಪಿತೋ ।
ಪ್ರ ಸ್ವಾದ್ಮಾನೋ ರಸಾನಾಂ ತುವಿಗ್ರೀವಾ ಇವೇರತೇ ॥ ೫ ॥

॥ ಪದಪಾಠಃ ॥

ತವ । ತ್ಯೇ । ಪಿತೋ ಇತಿ । ದದತಃ । ತವ । ಸ್ವಾದಿಷ್ಠ । ತೇ । ಪಿತೋ ಇತಿ ।
ಪ್ರ । ಸ್ವಾದ್ಮಾನಃ । ರಸಾನಾಂ । ತುವಿಗ್ರೀವಾಃऽಇವ । ಈರತೇ ॥ ೫ ॥

ಸಾಯಣಭಾಷ್ಯಂ

ಹೇ ಪಿತೋ ಪಾಲಕಾನ್ನ ತ್ಯೇ ತೇ ತ್ವದರ್ಥಿನೋ ನರಾಸ್ತವ ಭೋಕ್ತಾರೋ ಭವಂತೀತಿ ಶೇಷಃ । ಕೇ ತೇ ನರಾಃ । ಹೇ ಸ್ವಾದಿಷ್ಠ ಸ್ವಾದುತಮ ಪಿತೋ ಪಾಲಕ ತವ ತ್ವದನುಗ್ರಹಾತ್ತೇ ತ್ವಾಂ ದದತಃ ಪ್ರಯಚ್ಛಂತೋ ಭವಂತಿ । ಯದ್ವಾ । ತೇ ಪಿತೋ ಇತ್ಯಾದರಾರ್ಥಂ । ಅಭ್ಯಾಸೇ ಹಿ ಭೂಯಾಂಸಮರ್ಥಂ ಮನ್ಯಂತೇ । ಕಿಂಚ ತವ ರಸಾನಾಂ ಸ್ವಾದ್ವಮ್ಲಾದೀನಾಂ ಷಣ್ಣಾಂ ಸ್ವಾದ್ಮಾನಃ ಸ್ವಾದಯಿತಾರೋ ಭಕ್ಷ-ಯಿತಾರ ಏವ ತುವಿಗ್ರೀವಾ ಇವ । ತುವೀತಿ ಬಹುನಾಮ । ಪ್ರವೃದ್ಧಗ್ರೀವಾ ಏವ ಪ್ರೇರತೇ । ಪ್ರಕರ್ಷೇಣ ಗಚ್ಛಂತಿ । ಸಂಚರಂತಿ । ಇವಶಬ್ದ ಏವಕಾರಾರ್ಥಃ ಪೂರಣೋ ವಾ । ಭೂಲೋಕೇಽತ್ತಾರ ಏವ ದೃಢಾಂಗಾ ಭವಂತೀತಿ ಪ್ರಸಿದ್ಧಂ । ಅನಶನೇ ಹಿ ಗ್ರೀವಾ ಅಧೋ ಲಂಬಂತೇ । ಯದ್ವಾ । ತವ ರಸಾನಾ-ಮತ್ತಾರೋಽಸಂಖ್ಯಾತಗ್ರೀವಾ ಇವ ಭವಂತಿ ರಸಾನಾಂ ಬಾಹುಲ್ಯಾದಿತಿ ಭಾವಃ । ಏವಂ ಬಹುರಸೋ-ಪೇತಮನ್ನಮಿತಿ ತಸ್ಯ ಸ್ತುತಿಃ ॥

### ಪ್ರತಿಪದಾರ್ಥ

**ಸ್ವಾದಿಷ್ಠ**—ಅತ್ಯಂತ ಸ್ವಾದುಕರನಾದ | **ಪಿತೋ**—ಪಾಲಕನಾದ ಅನ್ನವೇ, | **ತ್ಯೇ**—ನಿನ್ನನ್ನು ಅನ್ವೇಷಣ ಮಾಡತಕ್ಕ ನರರು | **ತವ**—ನಿನ್ನನ್ನು ಸೇವಿಸಿ ಸುಖಪಡುತ್ತಾರೆ. | **ಪಿತೋ**—ರಕ್ಷಕನಾದ ಅನ್ನವೇ | **ತವ**—ನಿನ್ನ ಅನುಗ್ರಹದಿಂದ | **ತೇ**—ಅವರು (ಯಜ್ಞಕರ್ತರು) | **ದದತಃ**—ನಿನ್ನನ್ನು (ಇತರರಿಗೂ) ಹಂಚುತ್ತಾರೆ | **ರಸಾನಾಂ**—ನಿನ್ನ ಷಡ್ರಸಗಳ | **ಸ್ವಾದ್ಮಾನಃ**—ಭೋಕ್ತೃಗಳು (ನಿನ್ನ ರಸಾಸ್ವಾದನೆಯನ್ನು ಮಾಡಿ ಸುಖಪಡತಕ್ಕವರು) | **ತುವಿಗ್ರೀವಾ ಇವ**—ವೃದ್ಧಿಯನ್ನು ಹೊಂದಿ ಪುಷ್ಟವಾದ ಕತ್ತುಳ್ಳವರಂತೆ | **ಪ್ರ ಈರತೇ**—ಆನಂದವನ್ನು ವ್ಯಕ್ತಪಡಿಸುತ್ತಾ ಸಂಚರಿಸುತ್ತಾರೆ.

### ಭಾವಾರ್ಥ

ಅತ್ಯಂತ ಸ್ವಾದುಕರನೂ, ಪಾಲಕನೂ ಆದ ಎಲೈ ಅನ್ನವೇ, ನಿನ್ನನ್ನು ಭುಜಿಸತಕ್ಕ ಯಜಮಾನರು ನಿನ್ನನ್ನು ಸೇವಿಸಿ ಸುಖಪಡುತ್ತಾರೆ. ಅಷ್ಟೇ ಅಲ್ಲದೇ ಆ ಸುಖವನ್ನು ಇತರರಿಗೂ ಹಂಚುತ್ತಾರೆ. ನಿನ್ನ ಷಡ್ರಸಗಳ ಆಸ್ವಾದನೆಯನ್ನು ಮಾಡಿ ಸುಖವನ್ನನುಭವಿಸತಕ್ಕವರೆಲ್ಲರೂ ವೃದ್ಧಿಯನ್ನು ಹೊಂದಿ ಪುಷ್ಟವಾದ ಕತ್ತುಳ್ಳವರಂತೆ ಆನಂದವನ್ನು ವ್ಯಕ್ತಪಡಿಸುತ್ತಾ ಸಂಚರಿಸುತ್ತಾರೆ.

## English Translation

Those (men), Pitu, (are the enjoyers of your bounty), who are your distributors, most sweet Pitu, (to others): they who are relishers, of your flavours, are as if they had stiff necks.

### ವಿಶೇಷವಿಷಯಗಳು

**ತ್ಯೇ**—**ತೇ** | ಈ ಶಬ್ದದ ಅರ್ಥವನ್ನು ನಾವು ಹಿಂದಿನ ಋಕ್ಕಿನಲ್ಲಿ ವಿವರಿಸಿದ್ದೇವೆ. ಇಲ್ಲಿ ತೇ ಎಂದರೆ ಅನ್ನವನ್ನು ಅಪೇಕ್ಷಿಸುವ ಮನುಷ್ಯರು (ಅಥವಾ ಪ್ರಾಣಿಗಳು ?) ಅನ್ನವನ್ನು ಭುಜಿಸುತ್ತಾರೆ. ಎಂದು ಅಭಿಪ್ರಾಯವು

**ತವ**—ಈ ಋಕ್ಕಿನಲ್ಲಿ **ತವ** ಎಂಬ ಶಬ್ದವು ಎರಡಾವರ್ತಿ ಪಠಿತವಾಗಿರುವುದರಿಂದ **ಅಭ್ಯಾಸೇ ಹಿ ಭೂಯಾಂಸಮರ್ಥಂ ಮನ್ಯಂತೇ** ಎಂಬ ನಿರುಕ್ತಕಾರರ ವಾಕ್ಯಾನುಸಾರವಾಗಿ ದ್ವಿರುಕ್ತಿಯು ಅನ್ನದಲ್ಲಿರುವ ಗೌರವವನ್ನೂ ಪ್ರೀತ್ಯಾದರಗಳನ್ನೂ ಸೂಚಿಸುವುದಾಗಿದೆ.

**ದದತಃ ತವ**—(ನಿನ್ನನ್ನು) ಅನ್ನವನ್ನು (ನಿನ್ನ ಅನುಗ್ರಹದಿಂದ) ಇತರರಿಗೆ ಕೊಡುವವರು, ದಾನಮಾಡುವವರು ಎಂದೂ

**ಸ್ವಾದ್ಮಾನಃ ರಸಾನಾಂ**—ಅನ್ನದಲ್ಲಿರುವ ವಿಧವಿಧವಾದ ರಸಗಳನ್ನು ಆಸ್ವಾದನೆ ಮಾಡುವವರು ಅಥವಾ ಈ ವಿಧವಾದ ಅನ್ನವನ್ನು ಭಕ್ಷಿಸತಕ್ಕವರು ಎಂದೂ ತ್ಯೇ (ನರಾಃ) ಮನುಷ್ಯರು ಎಂಬ ಶಬ್ದಕ್ಕೆ ವಿಶೇಷಣಗಳು. ಎಂದರೆ ಷಡ್ರಸೋಪೇತವಾದ ಅನ್ನವನ್ನು ತಾವೂ ತಿಂದು ಇತರರಿಗೂ ಕೊಡತಕ್ಕ ಮನುಷ್ಯರು (ಪುಷ್ಟರಾಗುತ್ತಾರೆ) ಎಂದು ಮುಖ್ಯಾಭಿಪ್ರಾಯವು.

**ತುವಿಗ್ರೀವಾ ಇವ**—ತುವಿ ಎಂದರೆ ಬಹು (ನಿ ೩-೧೩) ಗ್ರೀವ ಎಂದರೆ ಕತ್ತು, ಕಂಠ, ಎಂದರ್ಥವು. ಈ **ತುವಿಗ್ರೀವಾ** ಎಂಬ ಶಬ್ದಕ್ಕೆ ಸಾಯಣರು ಎರಡು ವಿಧವಾದ ಅರ್ಥವನ್ನು ಹೇಳಿರುವರು. **ಪ್ರವೃದ್ಧಗ್ರೀವಾಃ**—ಚೆನ್ನಾಗಿ ಧಷ್ಟಪುಷ್ಟವಾಗಿಯೂ ದೃಢವಾಗಿಯೂ ಇರುವ ಕತ್ತುಳ್ಳವರಾಗಿ ಎಂದು ಒಂದು ವಿಧವಾದ ಅರ್ಥವು. ಪುಷ್ಟವಾದ ಕತ್ತುಳ್ಳವರೆಂದರೆ ದೃಢಾಂಗರೆಂದೇ ಅರ್ಥ. ಉತ್ತಮವಾದ ಆಹಾರವನ್ನು ಸೇವಿಸುವುದರಿಂದ ಕತ್ತು (ಕಂಠ) ಮಾತ್ರ ಪುಷ್ಟವಾಗುವುದಿಲ್ಲ, ಇಡೀ ಶರೀರವೇ ಪುಷ್ಟವಾಗುವುದು ಎಂಸು ಲೋಕದಲ್ಲಿ ಪ್ರಸಿದ್ಧವಾಗಿಯೇ ಇದೆ. ಇಲ್ಲಿ ಗ್ರೀವ-ಕತ್ತು ಎಂಬ ಶಬ್ದವನ್ನು ಮಾತ್ರ ಉಪಯೋಗಿಸಿದ್ದರೂ ಇದು ಶರೀರದ ಇತರ ಅಂಗಗಳನ್ನೂ ಅಥವಾ ಇಡೀ ಶರೀರವನ್ನೂ ಸೂಚಿಸುವುದು. ಆದ್ದರಿಂದಲೇ **ತುವಿಗ್ರೀವಾ ಇವ** ಎಂದರೆ ದೃಢಾಂಗರಾಗಿಯೇ ಸಂಚರಿಸುವರು ಎಂದು ಅರ್ಥವಿವರಣೆಮಾಡಿರುವರು. ಇಲ್ಲಿ ಇವ ಶಬ್ದಕ್ಕೆ **ಏವ** ಎಂಬ ಶಬ್ದದ ಅರ್ಥವಿರುವುದೆಂದೂ ಅಥವಾ ಇವಶಬ್ದಕ್ಕೆ ಯಾವ ನಿರ್ದಿಷ್ಟಾರ್ಥವೂ ಇಲ್ಲದೆ ಕೇವಲ ಪಾದಪೂರಣಕ್ಕಾಗಿ ಇಲ್ಲಿ ಉಪಯೋಗಿಸಲ್ಪಟ್ಟಿರುವುದೆಂದೂ ಭಾಷ್ಯಕಾರರು ವಿವರಿಸಿರುವರು. ಮತ್ತು **ತುವಿಗ್ರೀವಾಇವ** ಎಂಬ ಶಬ್ದಕ್ಕೆ ಎರಡನೆಯ ಅರ್ಥವನ್ನು ವಿವರಿಸುತ್ತಾ—**ತವ ರಸಾನಾಮುತ್ತಾರೋಽಸಂಖ್ಯಾತಗ್ರೀವಾ ಇವ ಭವಂತಿ ರಸಾನಾಂ ಬಾಹುಲ್ಯಾದಿತಿ ಭಾವಃ ।** ಅನ್ನದ ನಾನಾವಿಧ ರಸಗಳನ್ನು ಎಂದರೆ ನಾನಾವಿಧರಸೋಪೇತವಾದ ಅನ್ನವನ್ನು ತಿನ್ನುವವರು ಅನೇಕವಾದ ಕಂಠಗಳಿಂದ (ಬಾಯಿಗಳಿಂದ) ತಿನ್ನುವವರಂತೆ ಇರುವರು ಎಂದರೆ ಬಹಳವಾಗಿ ಭಕ್ಷಿಸುವರಾಗುವರು ಎಂದು ಇನ್ನೊಂದು ವಿಧವಾದ ಅರ್ಥವನ್ನು ಹೇಳಿರುವರು. ಈ ವಿಷಯದಲ್ಲಿ Wilson ಎಂಬ ಆಂಗ್ಲಪಂಡಿತನು ಸಾಯಣರ ಅಭಿಪ್ರಾಯವನ್ನು ಈ ರೀತಿ ವಿವರಿಸಿರುವನು—

ತುವಿಗ್ರೀವಾ ಇವೇರತೇ—ತುವಿ is ordinarily, a synonyme of ಬಹು much, many; Sayana explains it by ಪ್ರವೃದ್ಧ, enlarged; because, he says, when people eat, they are ದೃಢಾಂಗ, firm; and when they are without food, the neck is bent, bends down; or it may mean that they are great eaters, as if they had many throats.

॥ ವ್ಯಾಕರಣಪ್ರಕ್ರಿಯಾ ॥

**ದದತಃ**—ಡುದಾಞ್ ದಾನೇ. ಧಾತು ಲಟಿಗೆ ಶತ್ರಾದೇಶ ಶ್ಲುವಿಕರಣ. ಧಾತುವಿಗೆ ದ್ವಿತ್ವಾದಿ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಪ್ರಥಮಾ ಬಹುವಚನದಲ್ಲಿ **ನಾಭ್ಯಸ್ತಾಚ್ಛತುಃ** ಎಂಬುದರಿಂದ ನುಮಾಗಮ ಬರುವುದಿಲ್ಲ, **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸ್ವಾದಿಷ್ಠ**—**ಅತಿಶಾಯನೇ ತಮಬಿಷ್ಠನೌ** ಎಂಬುದರಿಂದ ಅತಿಶಯಾರ್ಥದಲ್ಲಿ ಸ್ವಾದು ಶಬ್ದದಮೇಲೆ **ಟೇಃ** ಸೂತ್ರದಿಂದ ಸ್ವಾದು ಎಂಬಲ್ಲಿರುವ ಟಿಗೆ (ಉ) ಲೋಪ. ಸಂಬುದ್ಧಿಯಲ್ಲಿ ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಸ್ವಾದ್ಮಾನಃ**—ಸ್ವಾದ ಆಸ್ವಾದನೇ. ಧಾತು. **ಅನ್ಯೇಭ್ಯೋಽಪಿದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತ ರೂಪ.

**ಈರತೇ**—ಈರ ಗತೌ ಪ್ರೇರಣೇ ಚ ಧಾತು. ಅದಾದಿ. ಲಟ್ ಪ್ರಥಮ ಪುರುಷ ಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸಂಹಿತಾಪಾಠಃ**

ತ್ವೇ ಪಿತೋ ಮಹಾನಾಂ ದೇವಾನಾಂ ಮನೋ ಹಿತಂ ।

ಅಕಾರಿ ಚಾರು ಕೇತುನಾ ತವಾಹಿಮವಸಾವಧೀತ್ ॥ ೬ ॥

**ಪದಪಾಠಃ**

ತ್ವೇ ಇತಿ । ಪಿತೋ ಇತಿ । ಮಹಾನಾಂ । ದೇವಾನಾಂ । ಮನಃ । ಹಿತಂ ।

ಅಕಾರಿ । ಚಾರು । ಕೇತುನಾ । ತವ । ಅಹಿಂ । ಅವಸಾ । ಅವಧೀತ್ ॥ ೬ ॥

**ಸಾಯಣಭಾಷ್ಯಂ**

ಹೇ ಪಿತೋ ಮಹಾನಾಂ ಪೂಜ್ಯಾನಾಂ ಮಹತಾಂ ವಾ ದೇವಾನಾಮಿಂದ್ರಾದೀನಾಂ ಮನಸ್ತ್ವೇ ತ್ವಯಿ ಹಿತಂ ನಿಹಿತಮಕಾರಿ । ಕೃತಂ । ಅಮೃತಮಪಿ ವಿಹಾಯ ತ್ವಯ್ಯೇವ ವರ್ತತೇ । ಹೇ ಪಿತೋ ತವ ಚಾರು ಸಮೀಚೀನೇನ ಕೇತುನಾ ತ್ವತ್ಕೃತೇನ ಪ್ರಜ್ಞಾನಲಕ್ಷಣೇನಾವಸಾ ರಕ್ಷಣೇನಾಹಿಂ ಮೇಘಂ ವೃತ್ರಂ ವಾವಧೀತ್ । ಹತವಾನಿಂದ್ರಃ । ಅನ್ನಮಯಂ ಹಿ ಸೋಮ್ಯ ಮನಃ । ಛಾಂ. ೬ ೫-೪ । ಇತಿ ಶ್ರುತೇಃ । ಅಥವಾ ತ್ವತ್ಕೇತುನಾ ಜಗದ್ರಕ್ಷಣೇನ ನಿಮಿತ್ತೇನೇತಿ ಯೋಜ್ಯಂ । ಜಗದ್ರಕ್ಷಣಾರ್ಥಂ ಹೀಂದ್ರೇಣಾಹಿರ್ಭಿದ್ಯತೇ ॥

**ಪ್ರತಿಪದಾರ್ಥ**

ಪಿತೋ—ಎಲೈ ಅನ್ನವೇ । ಮಹಾನಾಂ—ಪೂಜ್ಯರಾದ । ದೇವಾನಾಂ—ಇಂದ್ರಾದಿ ದೇವತೆಗಳ । ಮನಃ—ಮನಸ್ಸು । ತ್ವೇ—ನಿನ್ನಲ್ಲೇ । ಹಿತಂ ಅಕಾರಿ—ಇಡಲ್ಪಟ್ಟಿದೆ । ತವ—ನಿನ್ನ । ಚಾರು—ರಮ್ಯವಾದುದೂ ಕೇತುನಾ—ಪ್ರಜ್ಞಾನರೂಪವಾದುದೂ ಆದ । ಅವಸಾ—ರಕ್ಷಣದಿಂದ । ಅಹಿಂ—ಮೇಘವನ್ನು (ಅಥವಾ ವೃತ್ರನನ್ನು) । ಅವಧೀತ್—ಇಂದ್ರನು ಕೊಂದನು.

**ಭಾವಾರ್ಥ**

ಎಲೈ ಅನ್ನವೇ, ಪೂಜ್ಯರಾದ ಇಂದ್ರಾದಿ ದೇವತೆಗಳೂ ಸಹ ನಿನ್ನಲ್ಲೇ ನೆಟ್ಟಮನಸ್ಸುಳ್ಳವರಾಗಿದ್ದಾರೆ. ನಿನ್ನ ರಮ್ಯವಾದುದೂ, ಪ್ರಜ್ಞಾನರೂಪವಾದುದೂ ಆದ ರಕ್ಷಣದಿಂದ ಇಂದ್ರನು ವೃತ್ರನನ್ನು ಕೊಂದನು.

## English Translation

The thoughts of the mighty gods are fixed. Pitu, upon you, by your kind and intelligent assistance, (Indra) slew Ahi.

### ವಿಶೇಷವಿಷಯಗಳು

**ಮಹಾನಾಂ**—ಮಹಾನುಭಾವರಾದ ಅಥವಾ ಪೂಜ್ಯರಾದ. ಮಹತ್ ಮತ್ತು ಮಹಃ ಎಂಬ ಶಬ್ದಗಳು ಉದಕನಾಮಗಳಲ್ಲಿಯೂ ಪಠಿತವಾಗಿವೆ. (ನಿ. ೨-೨೪) ಮತ್ತು ಯಾಸ್ಕರು ಈ ಸೂಕ್ತದ ಪಿತುಂ **ನು ಸ್ತೋಷಂ** ಎಂಬ ಮೊದಲನೆಯ ಋಕ್ಕಿನ ನಿರ್ವಚನವನ್ನು ಹೇಳುತ್ತಾ ಅದರಲ್ಲಿರುವ ಮಹಃ ಎಂಬ ಶಬ್ದಕ್ಕೆ ಮಹತಃ ಎಂದು ಅರ್ಥವನ್ನು ವಿವರಿಸಿರುವರು. ಆದ್ದರಿಂದ ಪ್ರಕೃತವಾದ ಋಕ್ಕಿನಲ್ಲಿ **ಮಹಾನಾಂ** ಎಂಬ ಶಬ್ದಕ್ಕೆ ಮಹತ್ತ್ವವುಳ್ಳ, ಮಹಾಮಹಿಮೆಯುಳ್ಳ, ದೊಡ್ಡವರಾದ ಎಂದರೆ ಪೂಜ್ಯರಾದ ಎಂದರ್ಥವು ಸಮಂಜಸವಾಗಿರುವುದು. ಇಲ್ಲಿ ಮಹಾನಾಂ ಎಂಬ ಶಬ್ದದ ಪ್ರಯೋಗವು ಅನ್ನದ ಪ್ರಾಶಸ್ತ್ಯವನ್ನು ಹೆಚ್ಚಿಸುವುದಾಗಿರುವುದು. ಹೇಗೆಂದರೆ **ಮಹಾನಾಂ ದೇವಾನಾಂ ಮನಃ ತ್ವೇ ಹಿತಂ**—ಮಹಾಮಹಿಮೆಯುಳ್ಳ ದೇವತೆಗಳ ಮನಸ್ಸೇ ತಮ್ಮ ಸ್ವಾಭಾವಿಕ ಆಹಾರವಾದ ಅಮೃತವನ್ನು ಅಷ್ಟಾಗಿ ಪರಿಗಣಿಸದೆ ನಿನ್ನಲ್ಲಿ (ಅನ್ನದಲ್ಲಿ) ನೆಲಸಿರುವುದೆಂದು ಹೇಳಿರುವುದು. ಎಂದರೆ ಮಹಾಮಹಿಮರಾದ ದೇವತೆಗಳೇ ಅನ್ನವನ್ನು ಅಪೇಕ್ಷಿಸುವರು. ಇನ್ನು ಮನುಷ್ಯರ ಮತ್ತು ಇತರ ಪ್ರಾಣಿಗಳ ವಿಷಯದಲ್ಲಿ ಅನ್ನದ ಆವಶ್ಯಕತೆಯು ಎಷ್ಟಿರುವುದೆಂಬುದನ್ನು ಹೇಳಬೇಕಾಗಿಯೇ ಇಲ್ಲ ಎಂದು ಅನ್ನದ ಮಹತ್ತ್ವವನ್ನು ಮಹಾನಾಂ ಎಂಬ ಶಬ್ದದ ಪ್ರಯೋಗವು ಒತ್ತಿ ಹೇಳುವುದಾಗಿದೆ

**ಕೇತುನಾ**—**ಕೇತು** ಶಬ್ದಕ್ಕೆ ಪ್ರಜ್ಞಾನವೆಂದು (ನಿ. ೩-೧೩) ಅರ್ಥವಿದೆ. ಪ್ರಜ್ಞಾನಲಕ್ಷಣೋಪೇತವಾದ (ರಕ್ಷಣೆ) ಯೆಂದು ಭಾಷ್ಯಕಾರರ ವಿವರಣೆಯು. ಎಂದರೆ ಅನ್ನವನ್ನು ಸೇವಿಸುವುದರಿಂದ ಉಂಟಾಗುವ ಪ್ರಕೃಷ್ಟವಾದ ಜ್ಞಾನ ಅಥವಾ ಬುದ್ಧಿಯೆಂದಭಿಪ್ರಾಯವು.

**ಅಹಿಂ ಅವಧೀತ್**—ಅಹಿ ಶಬ್ದಕ್ಕೆ ನಾನಾರ್ಥಗಳಿದ್ದರೂ ಇಲ್ಲಿ ವೃತ್ರನೆಂದೇ ಅರ್ಥವು. ಈ ವಾಕ್ಯದಲ್ಲಿ ಕರ್ತೃವನ್ನು ಸೂಚಿಸುವ ನಾಮಪದವಿಲ್ಲದಿದ್ದರೂ ಅದನ್ನು ಅಧ್ಯಾಹಾರಮಾಡಿಕೊಳ್ಳಬೇಕು. ವೃತ್ರನನ್ನು ಸಂಹಾರ ಮಾಡಿದವನು ಇಂದ್ರನಾದ್ದರಿಂದ ಇಲ್ಲಿ ಇಂದ್ರಃ ಎಂಬ ಶಬ್ದವನ್ನು ಕರ್ತೃವನ್ನಾಗಿ ಅಧ್ಯಾಹಾರಮಾಡಿಕೊಳ್ಳಬೇಕೆಂದಭಿಪ್ರಾಯವು. ಈ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಹೇಳಿದ ಅರ್ಥವನ್ನೇ—ಎಂದರೆ ಅನ್ನದ ಪ್ರಶಸ್ಯವಾದ (ಬಹಳವಾದ) ಬಲದಿಂದ ಇಂದ್ರನು ವೃತ್ರಾಸುರನನ್ನು ಸಂಹಾರಮಾಡಿದನು—ಎಂಬ ವಿಷಯವನ್ನೇ ಈ ಋಕ್ಕಿನ ಉತ್ತರಾರ್ಧದಲ್ಲಿ ಹೇಳಿದೆ.

### ವ್ಯಾಕರಣಪ್ರಕ್ರಿಯಾ

**ಮಹಾನಾಮ್**—ಮಹ ಪೂಜಾಯಾಂ ಧಾತು. **ನಂದಿಗ್ರಹಿಪಚಾದಿಭ್ಯ**—(ಪಾ ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ಚಿತ್ತ್ವಾದುದರಿಂದ ಅಂತೋದಾತ್ತಸ್ವರ ಬರುತ್ತದೆ ಷಷ್ಠೀ ಬಹುವಚನಾಂತರೂಪ.

**ಹಿತಮ್**—ಡುಧಾಞ್ ಧಾರಣಪೋಷಣಯೋಃ ಧಾತು. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. **ದಧಾತೇರ್ಹಿಃ** (ಪಾ. ಸೂ. ೭-೪-೪೨) ಎಂಬುದರಿಂದ ಪ್ರತ್ಯಯಪರವಾದಾಗ ಅದಕ್ಕೆ ಹಿ ಆದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಕಾರಿ**—ಡುಕೃಞ್ ಕರಣೇ. ಧಾತು. ಕರ್ಮಣಿಯಲ್ಲಿ ಲುಙ್. **ಚಿಣ್ ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣಾದೇಶ. **ಅಚೋಞ್ಣಿತಿ** ಸೂತ್ರದಿಂದ ಧಾತುಋಕಾರಕ್ಕೆ ವೃದ್ಧಿ.

ಚಿಣೋಲುಕ್ (ಪಾ. ಸೂ. ೬-೪-೧೦೪) ಎಂಬದರಿಂದ ತಪ್ರತ್ಯಯಕ್ಕೆ ಲೋಪ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಅವಧೀತ್**—ಹನ ಹಿಂಸಾಗತ್ಯೋಃ ಧಾತು. ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ

---

**ಸಂಹಿತಾಪಾಠಃ**

ಯದದೋ ಪಿತೋ ಅಜಗನ್ವಿವಸ್ವ ಪರ್ವತಾನಾಮ್ ।

ಅತ್ರಾ ಚಿನ್ನೋ ಮಧೋ ಪಿತೋಽರಂ ಭಕ್ಷಾಯ ಗಮ್ಯಾಃ ॥ ೭ ॥

**ಪದಪಾಠ**

ಯತ್ । ಅದಃ । ಪಿತೋ ಇತಿ । ಅಜಗನ್ । ವಿವಸ್ವ । ಪರ್ವತಾನಾಂ ।

ಅತ್ರ । ಚಿತ್ । ನಃ । ಮಧೋ ಇತಿ । ಪಿತೋ ಇತಿ । ಅರಂ । ಭಕ್ಷಾಯ । ಗಮ್ಯಾಃ ॥ ೭ ॥

**ಸಾಯಣಭಾಷ್ಯಂ**

ಹೇ ಪಿತೋ ಅನ್ನ ತ್ವಾಂ ಯದ್ಯದಾ ವಿವಸ್ವ ॥ ಸುಪೋ ಲುಕ್ । ಅಂತ್ಯಲೋಪಶ್ಛಾಂದಸಃ ॥ ವಿವಾಸನವತಾಂ ವಿದ್ಯುದ್ರೂಪಪ್ರಕಾಶನವತಾಂ । ವಿವೋ ಧನಮುದಕಲಕ್ಷಣಂ । ಧನವತಾಂ ವಾ ಪರ್ವತಾನಾಂ ಮೇಘಾನಾಂ ಸಂಬಂಧ್ಯದಃ ಪ್ರಸಿದ್ಧಂ ತದುದಕಮಜಗನ್ ಅಗಮತ್ ಗಚ್ಛೇತ್. ಅತ್ರ ಚಿದಸ್ಮಿನ್ಕಾಲೇ ನೋಽಸ್ಮಾನ್ ಹೇ ಮಧೋ ಹೇ ಪಿತೋ ಮಾಧುರ್ಯೋಪೇತಾನ್ನ ತ್ವಂ ನೋಽಸ್ಮಾನರಮಲಂ ಸಂಪೂರ್ಣಂ ಭಕ್ಷಾಯ ಭಕ್ಷಣಾಯ ಗಮ್ಯಾಃ । ಗಚ್ಛ । ಸಂನಿಹಿತೋ ಭವ ॥

**ಪ್ರತಿಪದಾರ್ಥ**

**ಪಿತೋ**—ಎಲೈ ಅನ್ನವೇ । **ಯತ್**—ಯಾವಾಗ । **ವಿವಸ್ವ**—(ಉದಕರೂಪವಾದ) ಧನದಿಂದ ಯುಕ್ತವಾದ ಅಥವಾ ವಿದ್ಯುದ್ರೂಪವಾದ ಪ್ರಕಾಶದಿಂದ ಕೂಡಿದ । **ಪರ್ವತಾನಾಂ**—ಮೇಘಗಳ । **ಅದಃ**—ಪ್ರಸಿದ್ಧವಾದ ಉದಕವು । **ಅಜಗನ್**—(ನಿನ್ನನ್ನು) ಸೇರಿಕೊಳ್ಳುತ್ತದೆಯೋ । **ಅತ್ರ ಚಿತ್**—ಆ ಕಾಲದಲ್ಲಿ । **ಮಧೋ**—ಮಾಧುರ್ಯೋಪೇತನಾದ । **ಪಿತೋ**—ಎಲೈಅನ್ನವೇ । **ನಃ**—ನಮಗೆ । **ಅರಂ**—ಪೂರ್ಣವಾದ । **ಭಕ್ಷಾಯ**—ಭಕ್ಷಣಕ್ಕೆಅರ್ಹವಾಗಿ । **ಗಮ್ಯಾಃ**—ಸನ್ನಿಹಿತನಾಗು.

**ಭಾವಾರ್ಥ**

ಎಲೈ ಅನ್ನವೇ, ವಿದ್ಯುದ್ರೂಪದ ಪ್ರಕಾಶದಿಂದ ಕೂಡಿದ ಮೇಘಗಳ ಧನವಾದ ಉದಕವು ಯಾವಾಗ ನಿನ್ನನ್ನು ಸೇರಿಕೊಳ್ಳುತ್ತದೆಯೋ ಆ ಕಾಲದಲ್ಲಿ ಮಾಧುರ್ಯೋಪೇತನಾದ ಎಲೈ ಅನ್ನವೇ, ನಮಗೆ ಪುಷ್ಕಲವಾದ ಭಕ್ಷಣಕ್ಕೆ ಯೋಗ್ಯವಾಗಿರುವಂತೆ ನಮ್ಮಲ್ಲಿ ಸನ್ನಿಹಿತನಾಗು.

## English Translation

When, Pitu, this (product) of the water-wealthy clouds, (the rain), arrives ; then do you, sweet Pitu, be at hand with sufficiency for our eating.

॥ ವಿಶೇಷವಿಷಯಗಳು ॥

**ವಿವಸ್ವ**—ಇಲ್ಲಿ ವಿವಸ್ವತ್ ಶಬ್ದದ ಷಷ್ಠೀ ಬಹುವಚನವಾದ **ವಿವಸ್ವತಾಂ** ಎಂಬ ಶಬ್ದವಿರಬೇಕು. ತಾಂ ಎಂಬ ಅಂತ್ಯಾಕ್ಷರವು ಛಾಂದಸವಾಗಿ ಲೋಪವಾಗಿರುವುದರಿಂದ **ವಿವಸ್ವ** ಎಂದು ಮಾತ್ರ ಉಳಿದಿರುವುದು. ವಿವಸ್ವತ್ ಶಬ್ದಕ್ಕೆ ಯಾಸ್ಕರು **ವಿವಸ್ವಾನ್ ವಿವಾಸನವಾನ್** (ನಿ. ೭-೨೬) **ವಿವಾಸನಕ್ರಿಯಯಾ ತಮಸಾಂ**—ಕತ್ತಲೆಯನ್ನು ಹೋಗಲಾಡಿಸುವ ಎಂದರ್ಥವನ್ನು ಹೇಳಿರುವುದನ್ನೇ ಭಾಷ್ಯಕಾರರು ಇಲ್ಲಿ ವಿವರಿಸಿರುವರು. ಕತ್ತಲೆಯನ್ನು ಹೋಗ ಲಾಡಿಸುವ ವಿದ್ಯುತ್ (ಮಿಂಚು) ಪ್ರಕಾಶವುಳ್ಳ ಎಂದರ್ಥವು. ಈ ಶಬ್ದವು ಪರ್ವತಾನಾಂ (ಮೇಘಾನಾಂ) ಎಂಬ ಶಬ್ದಕ್ಕೆ ವಿಶೇಷಣವಾಗಿರುವುದು.

**ಪರ್ವತಾನಾಂ**—ಪರ್ವತಶಬ್ದವು ಅದ್ರಿಃ ಗ್ರಾವ ಮೊದಲಾದ ಮೂವತ್ತುಮೇಘನಾಮಗಳಲ್ಲಿ ಪಠಿತ ವಾಗಿದೆ (ನಿ ೨-೨೧). ಪರ್ವತ ಶಬ್ದಕ್ಕೆ ಯಾಸ್ಕರು—**ಪರ್ವವಾನ್ ಪರ್ವತಃ। ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ** (ನಿ ೧-೨೦) ಎಂದು ನಿರ್ವಚನವನ್ನು ಹೇಳಿದ್ದಾರೆ. ಎಂದರೆ ತುಂಬು ಎಂಬರ್ಥವನ್ನು ಕೊಡುವ ಪೃಧಾತುವಿನಿಂದಾಗಲಿ, ತೃಪ್ತಿಪಡಿಸು ಎಂಬರ್ಥವನ್ನು ಕೊಡುವ ಪ್ರೀಙ್ ಧಾತುವಿನಿಂದಾಗಲಿ ಪರ್ವಶಬ್ದವು ನಿಷ್ಪನ್ನವಾಗಿದೆ. ಅಂತಹ ಪರ್ವಗಳುಳ್ಳದ್ದಕ್ಕೆ ಪರ್ವತವೆಂದು ಹೆಸರು. ಪೃಧಾತುವಿನಿಂದ ಪರ್ವತಶಬ್ದವು ನಿಷ್ಪನ್ನ ವಾದರೆ ಆಗ ಶೂನ್ಯಪ್ರದೇಶಗಳನ್ನು ತುಂಬುವುದೆಂದಾಗುತ್ತದೆ. ಭೂಮಿಯ ಶೂನ್ಯಪ್ರದೇಶಗಳನ್ನು ತುಂಬುವುದು ಬೆಟ್ಟವು (ಪರ್ವತವು) ; ಆಕಾಶದ ಶೂನ್ಯಪ್ರದೇಶಗಳನ್ನು ತುಂಬುವುದು ಮೇಘಗಳು.(ಪರ್ವತಗಳು) ಮತ್ತು ಪ್ರೀಙ್ ಧಾತುವಿನಿಂದ ನಿಷ್ಪನ್ನವಾದರೆ ಆಗ ವೃಷ್ಟ್ಯುತ್ಸರ್ಗದಿಂದ ಲೋಕಕ್ಕೆಲ್ಲಾ ತೃಪ್ತಿಯನ್ನುಂಟುಮಾಡತಕ್ಕದ್ದೆಂದು ಅರ್ಥವಾಗುತ್ತದೆ. ಈ ಅರ್ಥದಲ್ಲಿಯೂ ಪರ್ವತಶಬ್ದಕ್ಕೆ ಮೇಘವೆಂದೇ ಅರ್ಥವು.

ವ್ಯಾಕರಣ ಪ್ರಕ್ರಿಯಾ

**ಅಜಗನ್**--ಗಮ್ಲೃ ಗತೌ. ಧಾತು. ಛಾಂದಸವಾಗಿ ಲಿಙರ್ಥದಲ್ಲಿ ಲಙ್. ಪ್ರಥಮಪುರುಷ ಏಕವಚನ ದಲ್ಲಿ ತಿಪ್. ಇತಶ್ಚ ಎಂಬುದರಿಂದ ಅಂತ್ಯ ಇಕಾರಕ್ಕೆ ಲೋಪ **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವಾದಿ ಜಗಮ್-ತ್ ಎಂದಿರುವಾಗ **ಹಲ್‌ಙ್ಯಾಭ್ಯೋ**—ಸೂತ್ರ ದಿಂದ ಪ್ರತ್ಯಯಕ್ಕೆ ಲೋಪ. **ಮೋನೋಧಾತೋಃ** (ಪಾ. ಸೂ. ೮-೨ ೬೪) ಎಂಬುದರಿಂದ ಧಾತುವಿನ ಅಂತ್ಯ ಮಕಾರಕ್ಕೆ ನಕಾರಾದೇಶ. ಅಂಗಕ್ಕೆ ಅಡಾಗಮ. ಯದ್ವೃತ್ತಯೋಗವಿರುವುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ

**ವಿವಸ್ವ**—ವಿವಃ ಧನಂ. ಅಸ್ಯ ಅಸ್ತಿ ಇತಿ ವಿವಸ್ವಾನ್. ತದಸ್ಯಾಸ್ತಿ—ಸೂತ್ರದಿಂದ ಮತುಪ್ ಪ್ರತ್ಯಯ. **ತಸೌ ಮತ್ವರ್ಥೇ** (ಪಾ. ಸೂ. ೧-೧-೧೯) ಎಂಬುದರಿಂದ ಭಸಂಜ್ಞಾ ಇರುವುದರಿಂದ ಸಕಾರಕ್ಕೆ ರುತ್ವವಿಸರ್ಗ

ಬರುವುದಿಲ್ಲ. ಷಷ್ಠೀಬಹುವಚನ ಪರವಾದಾಗ **ಸುಪಾಂ ಸುಲುಕ್** - (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್. ಛಾಂದಸವಾಗಿ ಅಂತ್ಯನಕಾರಕ್ಕೆ ಲೋಪ ಬರುತ್ತದೆ ಪ್ರತ್ಯಯಪಿತ್ತ್ವದುದರಿಂದ ಅನುದಾತ್ತ ವಾಗುತ್ತದೆ.

**ಅತ್ರ—ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಅರಮ್—ವಾಲಮೂಲಲಘ್ವ** ಎಂಬ ವಚನದಿಂದ ವಿಕಲ್ಪವಾಗಿ ಲತ್ವ ವಿಧಾನಮಾಡಿರುವುದರಿಂದ ಇಲ್ಲಿ ಬರುವುದಿಲ್ಲ.

**ಗಮ್ಯಾಃ**—ಗಮ್ಲೃ ಗತೌ ಧಾತು ಲಿಙ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

———:o:———

ಸಂಹಿತಾಪಾಠ

**ಯದ॒ಪಾಮೋಷ॑ಧೀನಾಂ ಪ॒ರಿಂ॒ಶಮಾ॒ರಿ॒ಶಾಮ॑ಹೇ ।**

**ವಾತಾ॑ಪೇ॒ ಪೀವ॒ ಇದ್ಭ॑ವ ॥ ೮ ॥**

॥ ಪದಪಾಠಃ ॥

ಯತ್ । ಅ॒ಪಾಂ । ಓಷ॑ಧೀನಾಂ । ಪ॒ರಿ॒ಂಶಂ । ಆ॒ಽರಿ॒ಶಾಮ॑ಹೇ ।

ವಾತಾ॑ಪೇ । ಪೀವಃ॑ । ಇತ್ । ಭ॒ವ॒ ॥ ೮ ॥

ಸಾಯಣಭಾಷ್ಯಂ

ಯದ್ಯೇನಾಪಾಮೋಷಧೀನಾಂ ಸಂಬಂಧಿ ಪರಿಂಶಂ ಪರಿಲೇಶಂ ಪರಿತಃ ಸುಖಕರಮನ್ನಮಾರಿ-ಶಾಮಹೇ ಆಸ್ವಾದಯಾಮಃ ಭಕ್ಷಯಾಮಃ ತೇನಾನ್ನೋದಕಸಾರೇಣ ಹೇ ವಾತಾಪೇ । ವಾತೇನ ಪ್ರಾಣೇ-ನಾಪ್ನೋತಿ ಸ್ವನಿರ್ವಾಹಮಿತಿ ವಾತೇನಾಪ್ಯಾಯತ ಇತಿ ವಾ ವಾತಾಪಿ ಶರೀರಂ । ಹೇ ಶರೀರ ತ್ವಂ ಪೀವ ಇದಾಪ್ಯಾಯಿತ ಏವ ಭವ । ಅನ್ನೋದಕಾಭ್ಯಾಂ ಶರೀರವೃದ್ಧಿಃ ಪ್ರಸಿದ್ಧಾ । ಯದ್ವಾ । ಯದ್ಯಪ್ಯಪಾ-ಮೋಷಧೀನಾಂ ಪರಿಂಶಂ ಲೇಶಮಾಸ್ವಾದಯಾಮಃ ತಥಾಪಿ ಹೇ ವಾತಾಪೇ ವಾತವತ್ಸರ್ವವ್ಯಾಪಕ ಪಿತೋ ತ್ವಮಲ್ಪಮಪಿ ಪೀವಃ ಪೀವಾನೇವ ಭವ ॥

ಪ್ರತಿಪದದರ್ಥ

**ಯತ್**—ಯಾವ ಕಾರಣದಿಂದ । **ಅಪಾಂ**—ಅಪ್ಪುಗಳಿಗೂ (ಉದಕಗಳಿಗೂ) । **ಓಷಧೀನಾಂ**—ಓಷಧಿ ಗಳಿಗೂ ಸಂಬಂಧಿಸಿದುದೂ । **ಪರಿಂಶಂ**—ಪೂರ್ಣವಾಗಿ ಸುಖವನ್ನುಂಟುಮಾಡತಕ್ಕದ್ದೂ ಆದ ಅನ್ನವನ್ನು । **ಆರಿಶಾಮಹೇ**—ನಾವು ಭಕ್ಷಿಸುತ್ತೇವೆಯೋ (ಆದುದರಿಂದ)। **ವಾತಾಪೇ**—ಎಲೈ ಶರೀರವೇ। **ಪೀವ ಇತ್ ಭವ**—

ಅತ್ಯಂತ ಪುಷ್ಟವಾಗಿ ಬೆಳೆ । [ಅಥವಾ **ಯೆತ್**—ಒಂದುವೇಳೆ । **ಅಪಾಂ**—ಅಪ್ಪುಗಳಿಗೂ । **ಓಷಧೀನಾಂ**—ಓಷಧಿಗಳಿಗೂ ಸಂಬಂಧಿಸಿದ ಅನ್ನದಲ್ಲಿ । **ಪರಿಂಶಂ**—ಅಲ್ಪಭಾಗವನ್ನು ಮಾತ್ರ । **ಆರಿಶಾಮಹೇ**—ತಿಂದರೂ ಕೂಡ । **ವಾತಾಪೇ**—ವಾಯುವಿನಂತೆ ಸರ್ವವ್ಯಾಪಕನಾದ ಎಲೈ ಅನ್ನವೇ । **ಪೀವ ಇತ್ ಭವ**— (ಅಲ್ಪವಾಗಿದ್ದರೂ ಸಹ) ಪುಷ್ಟಿಕಾರಕನಾಗಿಯೇ ಆಗು.

ಭಾವಾರ್ಥ

ಎಲೈ ಶರೀರವೇ, ಅಪ್ಪುಗಳಿಗೂ ಓಷಧಿಗಳಿಗೂ ಸಂಬಂಧಿಸಿದುದೂ ಮತ್ತು ಪೂರ್ಣವಾಗಿ ಸುಖವನ್ನುಂಟು ಮಾಡತಕ್ಕದ್ದೂ ಆದ ಅನ್ನವನ್ನು ಭಕ್ಷಿಸುವುದರಿಂದ ಅತ್ಯಂತ ಪುಷ್ಟವಾಗಿ ಬೆಳೆ

English Translation

And since we enjoy, the abundance of the waters and the plants; therefore, Body, do you grow fat.

ವಿಶೇಷವಿಷಯಗಳು

**ಯೆತ್ ಅಪಾಂ ಓಷಧೀನಾಂ** ಓಷಧಿಗಳೆಂದರೆ ಸಸ್ಯಾದಿಗಳು ಅಥವಾ ಸಸ್ಯಾದಿಗಳಿಂದ ದೊರೆಯುವ ಧಾನ್ಯಾದಿಗಳು. ಇಲ್ಲಿ ಉದಕ ಮತ್ತು ಓಷಧಿ ಸಂಬಂಧವಾದ ಎಂದು ಅನ್ನಕ್ಕೆ ವಿಶೇಷಣಪದಗಳಿರುವವು. ಉದಕದಿಂದ ಓಷಧಿಗಳೂ, ಓಷಧಿಗಳಿಂದ ಧಾನ್ಯಾದಿಗಳೂ, ಧಾನ್ಯಾದಿಗಳಿಂದ ಅನ್ನವೂ ದೊರೆಯುವುದರಿಂದ ಅನ್ನವು ಓಷಧ್ಯುದಕಗಳ ಸಂಬಂಧವೆಂದು ಹೇಳಿದೆ.

**ವಾತಾಪೇ**—ವಾತೇನ ಪ್ರಾಣೇನಾಪ್ನೋತಿ ಸ್ವನಿರ್ವಾಹಮಿತಿ ವಾತೇನಾಪ್ಯಾಯತೆ ಇತಿ ವಾ **ವಾತಾಪಿ ಶರೀರಂ**—ಎಂದರೆ ಪ್ರಾಣವಾಯುವಿನಿಂದ ಇದರ (ಶರೀರದ) ವ್ಯಾಪಾರಗಳೆಲ್ಲವೂ ನಿರ್ವಹಿಸಲ್ಪಡುವುದರಿಂದ ವಾತಾಪಿ ಎಂದರೆ ಶರೀರವು, ಅಥವಾ ವಾಯುವಿನಿಂದ ತೃಪ್ತಿಪಡಿಸಲ್ಪಡುವುದರಿಂದ ವಾತಾಪಿ ಎಂದರೆ ಶರೀರವೆಂದು ವಾತಾಪಿ ಶಬ್ದಕ್ಕೆ ಎರಡು ವಿಧವಾದ ಅರ್ಥಗಳನ್ನು ಭಾಷ್ಯಕಾರರು ಹೇಳಿರುವರು.

**ಪೀವಃ ಆಪ್ಯಾಯಿತಃ**—ತೃಪ್ತಿಯನ್ನುಂಟುಮಾಡವ ಎಂದು ಸಾಯಣರ ವಿವರಣೆಯು. ಋ. ಸಂ. ೭-೯೧-೩ ನೆಯ ಋಕ್ಕಿನಲ್ಲಿ—

**ಪೀವೋಅನ್ನಾಂ ರಯಿವೃಧಃ ಸುಮೇಧಾಃ ಶ್ವೇತಃ ಸಿಷಕ್ತಿ ನಿಯುತಾಮಭಿಶ್ರೀಃ ।**

(ಋ. ಸಂ. ೭-೯೧-೩)

ಎಂಬ ಋಕ್ಕಿನಲ್ಲಿರುವ ಪೀವೋ ಅನ್ನಾನ್ ಎಂಬ ಶಬ್ದದ ಅರ್ಥವನ್ನು ವಿವರಿಸುವಾಗ ಭಾಷ್ಯಕಾರರು—ಪೀವೋ ಅನ್ನಾನ್ ಪೀವಾಂಸಿ ಸ್ಥೂಲಾನಿ ಪ್ರಭೂತಾನ್ಯನ್ನಾನಿ ಯೇಷಾಂ ತಾನ್ । ಪೀವ ಶಬ್ದಕ್ಕೆ ಸ್ಥೂಲವಾದ ಎಂದರೆ ಬಹಳ ಹೆಚ್ಚಾದ ಎಂದರ್ಥವಿವರಣೆಮಾಡಿರುವರು.

**ಉತಾಹಮದ್ಮಿ ಪೀವ ಇದುಭಾ ಕುಕ್ಷೀ ಪೃಣಂತಿ ಮೇ ವಿಶ್ವಸ್ಮಾದಿಂದ್ರ ಉತ್ತರಃ ।**

(ಋ. ಸಂ. ೧೦-೮೬-೧೪)

ಎಂಬ ಋಕ್ಕಿನಲ್ಲಿ ಪೀವ ಇತ್ ಸ್ಥೂಲ ಏವ—ಎಂದರೆ ಸ್ಥೂಲವೆಂದೂ

**ಊರ್ಜಂ ಗಾವೋ ಯವಸೇ ಪೀವೋ ಅತ್ತನ ಋತಸ್ಯ ಯಾಃ ಸದನೇ ಕೋಶೇ ಅಂಗ್ಧ್ವೇ ।**

(ಋ ಸಂ. ೧೦-೧೦೦-೧೦)

ಎಂಬ ಋಕ್ಕಿನಲ್ಲಿ ಪೀವಃ ಪ್ರವೃದ್ಧಂ-ವೃದ್ಧಿಯನ್ನುಂಟುಮಾಡುವ ಎಂದೂ ಭಾಷ್ಯಕಾರರು ವಿವರಿಸಿದ್ದಾರೆ. ಆದ್ದರಿಂದ ಪೀವ ಶಬ್ದಕ್ಕೆ ಸ್ಥೂಲವಾದ ಅಥವಾ ಪುಷ್ಟಿಯನ್ನುಂಟುಮಾಡುವ ಎಂಬರ್ಥವನ್ನು ಹೇಳಬಹುದು. ಇಂತಹ ಅನ್ನ ದಿಂದ ತೃಪ್ತಿಯನ್ನು ಹೊಂದು ಅಥವಾ ಪ್ರವೃದ್ಧನಾಗು (ಬೆಳೆ) ಎಂದು ಶರೀರವನ್ನು ಸಂಬೋಧಿಸಿದೆ. ಉತ್ತಮವಾದ ಅನ್ನವನ್ನು ತಿನ್ನುವುದರಿಂದ ಶರೀರಕ್ಕೆ ತೃಪ್ತಿಯಾಗಿ ಅದು ಬೆಳೆದು ವೃದ್ಧಿಯಾಗುವುದೆಂಬುದು ಲೋಕಪ್ರಸಿದ್ಧಿ ವಿಷಯ ವಾದ್ದರಿಂದ ಆ ವಿಷಯವಾಗಿ ಹೆಚ್ಚಾಗಿ ಏನನ್ನೂ ವಿವರಿಸುವ ಅವಶ್ಯಕತೆಯಿಲ್ಲ.

### ವ್ಯಾಕರಣಪ್ರಕ್ರಿಯಾ

**ಅಪಾಮ್—ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ಷಷ್ಠೀ ಬಹುವಚನಕ್ಕೆ ಉದಾತ್ತಸ್ವರ ಬರುತ್ತದೆ.

**ಆರಿಶಾಮಹೇ**—ಆಙ್ ಉಪಸರ್ಗ. ರಿಶ ಹಿಂಸಾಯಾಮ್. ಧಾತು. ಲಟ್ ಉತ್ತಮಪುರುಷ ಬಹುವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ. **ತಿಙ್ಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಆಙ್) ನಿಘಾತಸ್ವರ ಬರುತ್ತದೆ.

**ವಾತಾಪೇ**—ವಾತೇನ ಆಪ್ನೋತಿ ಇತಿ ವಾತಾಪಿಃ ಆಪ್ಲೃ ವ್ಯಾಪ್ತೌ ಧಾತು ಔಣಾದಿಕ ಇ ಪ್ರತ್ಯಯ. ಸಂಬುದ್ಧ್ಯಂತರೂಪ ಪಾದಾದಿಯಲ್ಲಿರುವುದರಿಂದ ಆಮಂತ್ರಿತನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿದ ಆದ್ಯುದಾತ್ತಸ್ವರ ಬರುತ್ತದೆ

**ಪೀವಃ**—ಪ್ಯೈಙ್ ವೃದ್ಧೌ ಧಾತು ಔಣಾದಿಕ ವನ್ ಪ್ರತ್ಯಯ ಧಾತುವಿಗೆ ಸಂಪ್ರಸಾರಣ. ಪರಪೂರ್ವ ರೂಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

---

### ಸಂಹಿತಾಪಾಠಃ

**ಯತ್ತೇ ಸೋಮ ಗವಾಶಿರೋ ಯವಾಶಿರೋ ಭಜಾಮಹೇ ।**

**ವಾತಾಪೇ ಪೀವ ಇದ್ಭವ ॥ ೯ ॥**

### ಪದಪಾಠ

**ಯತ್ । ತೇ । ಸೋಮ । ಗೋऽಆಶಿರಃ । ಯವऽಆಶಿರಃ । ಭಜಾಮಹೇ ।**

**ವಾತಾಪೇ । ಪೀವಃ । ಇತ್ ಭವ ॥ ೯ ॥**

### ಸಾಯಣಭಾಷ್ಯಂ

**ಪೂರ್ವಮನ್ನಸಾಮಾನ್ಯೇನ ಸ್ತುತ್ವೇದಾನೀಂ ಸೋಮಲಕ್ಷಣಮನ್ನಂ ಸ್ತೌತಿ । ಹೇ ಸೋಮ ತೇ ತವ ಯದ್ಯಮಂಶಂ ಗವಾಶಿರೋ ಗೋವಿಕಾರಕ್ಷೀರಾದ್ಯಾಶ್ರಯಣದ್ರವ್ಯಂ ಯವಾಶಿರೋ ಯವವಿಕಾರಾ-ಶ್ರಯಣದ್ರವ್ಯಂ ಭಜಾಮಹೇ ಸೇವಾಮಹೇ ತೇನ ಹೇ ವಾತಾಪೇ ಶರೀರ ಪೀವೋ ಭವ ॥**

### ಪ್ರತಿಪದಾರ್ಥ

**ಸೋಮ**—ಎಲೈ ಸೋಮರಸವೇ । **ತೇ**—ನಿನ್ನ । **ಗವಾಶಿರಃ**—ಕ್ಷೀರಾದಿಗಳಿಂದ ಕೂಡಿದ । **ಯವಾಶಿರಃ**—ಯವಾದಿ ಧಾನ್ಯಗಳಿಂದ ಮಿಶ್ರವಾದುದೂ । **ಯತ್**—ಯಾವ ನಿನ್ನ ಅಂಶವನ್ನು । **ಭಜಾಮಹೇ**—ಸೇವಿಸುತ್ತೇವೆಯೋ (ಆದ್ದರಿಂದ) । **ವಾತಾಪೇ**—ಎಲೈ ಶರೀರವೇ । **ಪೀವಃ ಇತ್ ಭವ**—ಪುಷ್ಟವಾಗಿಯೇ ಬೆಳೆ.

### ಭಾವಾರ್ಥ

ಎಲೈ ಶರೀರವೇ, ಗವಾಶಿರವಾದುದೂ, ಯವಾಶಿರವಾದುದೂ ಆದ ಯಾವ ಸೋಮರಸದ ಅಂಶವನ್ನು ಪಾನಮಾಡುತ್ತೀಯೋ, ಆದುದರಿಂದ ನೀನು ಪುಷ್ಟವಾಗಿ ಬೆಳೆ.

### English Translation

And since we enjoy Soma, your mixture with boiled milk or boiled barley ; therefore body do you grow fat.

### ವಿಶೇಷವಿಷಯಗಳು

ಇದುವರೆಗೂ ಸಾಮಾನ್ಯವಾದ ಆಹಾರವನ್ನು ಸ್ತುತಿಸಲಾಗಿದೆ. ಈಗ ಈ ಋಕ್ಕಿನಲ್ಲಿಯೂ ಇದರ ಮುಂದಿನ ಋಕ್ಕುಗಳಲ್ಲಿಯೂ ಸಾಧಾರಣವಾಗಿ ಬಳಕೆಯಲ್ಲಿರುವ ಆಹಾರವನ್ನು ಸ್ತುತಿಸಿಲ್ಲ. ಆದರೆ ಸೋಮರೂಪವಾದ ಆಹಾರವನ್ನೂ ಸೋಮಮಿಶ್ರಿತವಾದ ಗವಾಶಿರ ಮತ್ತು ಯವಾಶಿರಗಳೆಂಬ ಆಹಾರಗಳನ್ನು ಸ್ತುತಿಸಲಾಗಿದೆ.

ಸೋಮದ ವಿಷಯವಾಗಿ ನಾವು ಹಿಂದೆ ಅನೇಕಾವರ್ತಿ ವಿಸ್ತಾರವಾದ ವಿವರಣೆಯನ್ನು ಕೊಟ್ಟಿದ್ದೇವೆ. ಆದರೂ ಈಗ ಅದರ ವಿಷಯವಾಗಿ ಸೂಕ್ಷ್ಮವಾದ ವಿವರಣೆಯನ್ನು ಕೊಡುವುದು ಆವಶ್ಯಕವಾಗಿರುವುದು.

ವೇದದಲ್ಲಿ ಸೋಮವಿಚಾರವಾದ ಅನೇಕ ಮಂತ್ರಗಳಿವೆ. ಒಂಬತ್ತನೆಯ ಮಂಡಲವೆಲ್ಲವೂ ಸೋಮದ ಸ್ತುತಿಯೇ ಆಗಿದೆ ಅನೇಕ ದೇವತೆಗಳನ್ನು ಆಹ್ವಾನಮಾಡುವ ಕಾಲದಲ್ಲಿ ಸೋಮಪಾನಕ್ಕಾಗಿ ಈ ಯಜ್ಞಕ್ಕೆ ಬರಬೇಕೆಂದು ಕರೆಯಲಾಗಿದೆ. ಸೋಮಸಂಬಂಧವಾದ ಅನೇಕ ಯಾಗಗಳಿವೆ. ಅವುಗಳಲ್ಲಿ ಅಗ್ನಿಷ್ಟೋಮಯಾಗವೇ ಮುಖ್ಯವಾದುದು ಈ ಯಾಗದಲ್ಲಿ ಸ್ತೋತ್ರಶಸ್ತ್ರಾದಿ ಮಂತ್ರಪಠನದಿಂದ ವಿಧ್ಯುಕ್ತವಾಗಿ ಸೋಮವನ್ನು ಮೂರು ಸವನಗಳಲ್ಲಿಯೂ (ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ) ತೆಗೆದು ಸಂಸ್ಕಾರಮಾಡಿ, ಯಜಮಾನನೂ ಋತ್ವಿಜರೂ ಪಾನಮಾಡುವರು. ಇತರ ಸೋಮಯಾಗಗಳಲ್ಲಿಯೂ ಕೆಲವು ವ್ಯತ್ಯಾಸಗಳೊಡನೆ ಇದೇ ಕ್ರಮವು ಅನುಸರಿಸಲ್ಪಡುವುದು.

ಈಗ ಸೋಮವೆಂದರೇನು ಎಂಬುದನ್ನು ವಿಮರ್ಶೆಮಾಡಬೇಕಾಗಿದೆ ಸೋಮವು ಒಂದುವಿಧವಾದ ಲತಾವಿಶೇಷವು ಈ ಸೋಮಲತೆಯು ಈಗ ಇಂಡಿಯಾದೇಶದಲ್ಲೆಲ್ಲಿಯೂ ದೊರಕುವುದಿಲ್ಲ. ಇದು ವಿಶೇಷವಾಗಿ ಬಯಲುಗಳಲ್ಲಿಯೂ, ನದೀತೀರಗಳಲ್ಲಿಯೂ, ಬೆಟ್ಟಗಳಲ್ಲಿಯೂ ಬೆಳೆಯುವುದು ಎಷ್ಟೆಷ್ಟು ಎತ್ತರದಲ್ಲಿ ಬೆಳೆದಿದ್ದರೆ ಅಷ್ಟಷ್ಟು ಹೆಚ್ಚು ರಸವನ್ನು ಕೊಡುವುದು ಸುಮಾರು ೭೦೦೦ ಅಡಿಯ ಎತ್ತರದಲ್ಲಿಯೂ ಇದು ಬೆಳೆಯುವುದು. ಆದುದರಿಂದ ಈ ಸೋಮವನ್ನು ಬೆಟ್ಟಗಳಿಂದ ತಂದ ವರ್ಣನೆಗಳು ಋಗ್ವೇದದಲ್ಲಿ (ಋ ಸಂ ೧-೯೩-೬ ; ೩-೪೮-೨ ; ೫-೪೩-೪ ಇತ್ಯಾದಿ) ಅನೇಕ ಕಡೆ ಇವೆ. ಮೌಜವತವೆಂಬ ಪರ್ವತವು ಸೋಮಲತೆಗೆ ಪ್ರಸಿದ್ಧಿಯಾಗಿದೆ.

(ಋ. ಸಂ. ೧೦-೩೪-೧ ; ವಾ. ಸಂ. ೩-೬೧ ; ನಿ. ೯-೮ ಇತ್ಯಾದಿ) **ಶರ್ಯಣಾವತ್** ಎಂಬ ಸರೋವರದ ದಡಗಳಲ್ಲಿ ಸೋಮಲತೆಯು ದೊರೆಯುವುದೆಂದು ಋಗ್ವೇದದಲ್ಲಿ (ಋ. ಸಂ. ೮-೭-೨೯, ೮-೬೪-೧೧, ೯-೬೫-೨೨ ಇತ್ಯಾದಿ) ಅಲ್ಲಲ್ಲಿ ಹೇಳಿದೆ. ಮತ್ತು **ಆರ್ಜೀಕ** ಎಂಬ ಸ್ಥಳದಲ್ಲಿಯೂ (ಋ. ಸಂ ೮-೭-೨೯, ೮-೬೪-೧೧ ಇತ್ಯಾದಿ) **ಪಸ್ತ್ಯಾ** ಎಂಬ ದೇಶದಲ್ಲಿಯೂ (ಋ. ಸಂ. ೯-೬೫-೩) ಪಂಚಜನರೆಂಬ ಐದು ಪಂಗಡದವರು ವಾಸಿಸುವ ಸ್ಥಳದಲ್ಲಿಯೂ (ಋ. ಸಂ. ೯-೬೫-೨೩, ೯-೯೨-೩ ಇತ್ಯಾದಿ) **ಸುಷೋಮ** ಎಂಬ ನದಿಯ ಸುತ್ತಮುತ್ತ ಪ್ರದೇಶಗಳಲ್ಲಿಯೂ (ಋ. ಸಂ. ೮-೭-೨೯, ೮-೬೪-೧೧ ಇತ್ಯಾದಿ) ಸೋಮವು ದೊರೆಯುವುದೆಂದು ಹೇಳಿದೆ. ಕಡೆಯದಾದ **ಸುಷೋಮ** ಎಂದರೆ ಸು+ಸೋಮ= ಒಳ್ಳೆಯ ಸೋಮವು ಸಿಕ್ಕುವ ಸ್ಥಳವಾದ್ದರಿಂದ ಈ ಪ್ರದೇಶಕ್ಕೆ ಸುಷೋಮವೆಂದು ಹೆಸರು ಬಂದಿರಬಹುದು. ಆದುದರಿಂದ ಋಗ್ವೇದಕಾಲದಲ್ಲಿ ಈಗಿನ ಪಂಜಾಬು ದೇಶದ ಬಯಲುಗಳಲ್ಲಿಯೂ ನದೀತೀರಗಳಲ್ಲಿಯೂ ಸೋಮಲತೆಯು ಯಥೇಷ್ಟವಾಗಿ ಬೆಳೆಯುತ್ತಿತ್ತೆಂದು ತಿಳಿದುಬರುವುದು. ಬಯಲಿನಲ್ಲಿ ಬೆಳೆಯುವ ಲತೆಯಿಂದ ಬೆಟ್ಟದಲ್ಲಿ ಬೆಳೆಯುವ ಲತೆಯಷ್ಟು ರಸವು ದೊರೆಯುತ್ತಿರಲಿಲ್ಲವಾಗಿ ಬಯಲಿನ ಲತೆಯನ್ನು ನೀರಿನಲ್ಲಿ ಚೆನ್ನಾಗಿ ನೆನೆಯಿಸಿ ಉಪಯೋಗಿಸುತ್ತಿದ್ದರು. (ಋ. ಸಂ. ೯-೬೩-೪, ೯-೭೪-೯, ೯-೭೯-೪ ಇತ್ಯಾದಿ)

ಈ ಲತೆಯ ಕಾಂಡವು ಸುಮಾರು ೪ ಅಡಿಯ ಎತ್ತರಕ್ಕೆ ಬೆಳೆಯುವುದು. ಇದರ ಕಾಂಡವು ದುಂಡಾಗಿಯೂ, ಮೃದುವಾಗಿಯೂ, ಬಿಳುಪು ಮಿಶ್ರವಾದ ಕೆಂಪುಬಣ್ಣವುಳ್ಳದ್ದಾಗಿಯೂ ಇರುವುದು. ಮತ್ತು ಒಂದು ಬೆಟ್ಟುಗಾತ್ರ ದಪ್ಪನಾಗಿರುವುದು. ಎಲೆಗಳು ಬಹಳ ಸ್ವಲ್ಪ ಮತ್ತು ಬಿಳುಪಾಗಿಯೂ ಸಣ್ಣನಾಗಿಯೂ ಇರುವುವು. ಸಾಧಾರಣವಾಗಿ ಎಲೆಗಳು ಉದುರಿಹೋಗುವುವು. ಗಿಡದ ತುದಿಯಲ್ಲಿ ಕೆಲವು ಬೀಜಗಳಿಂದ ಕೂಡಿದ (ಜೋಳದಂತಿರುವ) ಗೊಂಚಲು ಇರುವುದು. ಇದರ ರಸವು ಹಸರುಮಿಶ್ರವಾದ ಬಿಳುಪಾಗಿರುವುದು. ರುಚಿಯಲ್ಲಿ ಸ್ವಲ್ಪ ಸಿಹಿಯಾಗಿರುವುದಾದರೂ ಕೆಲವು ದಿನಗಳವರೆಗೆ ಇಟ್ಟಿದ್ದರೆ ಹುಳಿಯಾಗುವುದು. ದೊಡ್ಡ ಮರದ ಸಮೀಪದಲ್ಲಿ ಬೆಳೆಯುವ ಸಂದರ್ಭದಲ್ಲಿ ಇದು ಲತೆಯಂತೆ ಮರದ ಸುತ್ತಲೂ ಹಬ್ಬಿ ಬೆಳೆಯುವುದು. ಅಲ್ಲಲ್ಲಿ ಗಿಣ್ಣುಗಳಿರುವುವು. ಇದನ್ನು ಸುಲಭವಾಗಿ ಮುರಿಯಬಹುದು.

ಸೋಮರಸವನ್ನು ಸಿದ್ಧಪಡಿಸುವಾಗ ಆಚರಿಸಬೇಕಾದ ಕ್ರಮವನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುವೆವು— ನದೀತೀರಗಳಲ್ಲಿಯೂ, ಪರ್ವತದ ಮೇಲೆಯೂ ಬೆಳೆಯುತ್ತಿದ್ದ ಸೋಮಲತೆಯನ್ನು ಬಹು ಪ್ರಯಾಸದಿಂದ ತಂದು ಅಥವಾ ತಂದವರಿಂದ ಕ್ರಯಕ್ಕೆ ತೆಗೆದುಕೊಂಡು ಯಜ್ಞಗಳಲ್ಲಿ ಉಪಯೋಗಿಸುತ್ತಿದ್ದರು ಈಗಲೂ ಯಜ್ಞಗಳಲ್ಲಿ ಸೋಮವಿಕ್ರಯಣವೆಂಬ ಕರ್ಮವು ನಡೆಯುತ್ತಿರುವುದು. ಸೋಮಲತೆಯನ್ನು ತಂದ ಮೇಲೆ ಅದನ್ನು ಕಲ್ಲುಗಳಿಂದ (ಗ್ರಾವ, ಅದ್ರಿ) ಜಜ್ಜಿ, ಹಿಂಡಿ, ಬಟ್ಟೆಯಿಂದ ಸೋಸಿ ಸಂದರ್ಭಾನುಸಾರ ಅದಕ್ಕೆ ಮೊಸರು, ಹಾಲು, ಹಿಟ್ಟುಗಳನ್ನು ಬೆರಸಿ ದೇವತೆಗಳಿಗೆ ಅರ್ಪಿಸಿ ಬಳಿಕ ಯಜಮಾನಋತ್ವಿಜರು ಪಾನಮಾಡುವುದು ರೂಢಿಯಾಗಿದೆ. ಈ ರೀತಿ ಸೋಮರಸವನ್ನು ಸಿದ್ಧಪಡಿಸುವುದು ಯಜ್ಞದಲ್ಲಿ ಮುಖ್ಯವಾದ ದಿವಸದಲ್ಲಿ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ನಡೆಯುವುದು. ಇದಕ್ಕೆ ಅಭಿಷವಣ ಅಥವಾ ಸವನ (ರಸವನ್ನು ಹಿಂಡಿ ತೆಗೆಯುವುದು) ಎಂದು ಹೆಸರು. ಪ್ರಾತಃಕಾಲದ ಕರ್ಮಕ್ಕೆ **ಪ್ರಾತಃಸವನ**ವೆಂದೂ, ಮಧ್ಯಾಹ್ನದಲ್ಲಿ ಮಾಡುವ ಸವನಕ್ಕೆ **ಮಾಧ್ಯಂದಿನಸವನ**ವೆಂದೂ, ಸಾಯಂಕಾಲದಲ್ಲಿ ಮಾಡುವ ಸವನಕ್ಕೆ **ತೃತೀಯಸವನ**ವೆಂದೂ ಹೆಸರು.

ಸೋಮಲತೆಯು (ಬಳ್ಳಿಗಳ) **ಬಭ್ರು, ಅರುಣ** (ನಾಸಲು ಕೆಂಪು) ಅಥವಾ ಹಳದಿಮಿಶ್ರವಾದ ಕೆಂಪು ಬಣ್ಣವುಳ್ಳದ್ದಾಗಿರುವುದು. ಪರ್ವತಗಳಲ್ಲಿ ಬಹಳ ಎತ್ತರದಲ್ಲಿ ಬೆಳೆದಿರುವ ಲತೆಯು ಶ್ರೇಷ್ಠವೆಂದೂ ಅದರಿಂದ ಹೆಚ್ಚು

ರಸವನ್ನು ತೆಗೆಯಬಹುದೆಂದೂ ಹೇಳಿರುವುದರಿಂದ ಸಾಧ್ಯವಾದ ಸಂದರ್ಭಗಳಲ್ಲಿ ಸೋಮಲತೆಯನ್ನು ಪರ್ವತಗಳಿಂದಲೇ ತರುತ್ತಿದ್ದರು. ಇಂತಹ ಪರ್ವತಗಳಲ್ಲಿ **ಮೂಜವತ**ವೆಂಬ ಪರ್ವತವು ಪ್ರಸಿದ್ಧವಾಗಿದ್ದಿತು ಈ ಸೋಮಲತೆಯ ಕುಡಿಯು **ಅಂಸ**ವೆಂಬ ಹೆಸರಿನಿಂದಲೂ (ಋ. ಸಂ ೧-೧೬೮-೩ ; ೩-೪೮-೨ ಇತ್ಯಾದಿ) ಚಿಗರುಗಳಿಂದ ಕೂಡಿದ ಕುಡಿಗೆ **ವಕ್ಷಣಾ** ಎಂದೂ (ಋ. ಸಂ. ೮-೧-೧೭) **ವಾಣ** ಎಂದೂ ( ಋ. ಸಂ. ೪-೨೮-೯ ; ೯-೫೦-೧) ಸೋಮರಸಕ್ಕೆ **ಅಂಧಃ** (ಋ. ಸಂ. ೧-೨೮-೭ ; ೩-೪೮-೧ ; ೪-೧೬-೧) ಸೋಮಲತೆಯ ದಂಡಕ್ಕೆ (ಬಳ್ಳಿಗೆ) **ಪರ್ವನ್** (ಋ ಸಂ ೧-೯-೧) ಎಂದು ಹೇಳುವ ರೂಢಿಯಿರುವುದು

ಸೋಮರಸವನ್ನು ಸಿದ್ಧಪಡಿಸುವ ಕ್ರಮವು—ಸೋಮಲತೆಯಲ್ಲಿರುವ ಅಥವಾ ಬಳ್ಳಿಯಲ್ಲಿರುವ ಎಲೆಗಳನ್ನು ತೆಗೆದುಹಾಕಿ ಅದನ್ನು ಒರಳಿನಲ್ಲಿ ಹಾಕಿ ಕಲ್ಲಿನಿಂದ ಜಜ್ಜುವರು. ಲತೆಯು ಹೊಸದಲ್ಲದಿದ್ದರೆ ಒಂದೆರಡು ದಿನ ನೀರಿನಲ್ಲಿ ನೆನೆಹಾಕಿ ಮೆತ್ತಗಾದ ಮೇಲೆ ರಸವನ್ನು ತೆಗೆಯುವರು. ಸೋಮಲತೆಯನ್ನು ಜಜ್ಜುವ ಒರಳಿಗೆ **ಉಲೂಖಲ**ವೆಂದು ಹೆಸರು. ಇದು ಸಾಧಾರಣವಾಗಿ ಕಲ್ಲಿನಿಂದಲೇ ನಿರ್ಮಿತವಾಗಿರುವುದು, ಮರದಿಂದ ಮಾಡುವುದೂ ಉಂಟು. ಒರಳಿನಲ್ಲಿ ಹಾಕಿ ಮೇಲಿನಿಂದ ಕುಟ್ಟುವ ಕಲ್ಲಿಗೆ **ಗ್ರಾವಾ**, ( ಋ. ಸಂ. ೧-೮೩-೬ ; ೧-೧೩೫-೭ ) **ಅದ್ರಿ**, (ಋ. ಸಂ. ೧-೧೩೦-೨ ; ೧-೧೩೫-೫ ; ೧-೧೩೭-೧) ಎಂಬ ಹೆಸರುಗಳಿರುವವು. **ಉಲೂಖಲ**ವೆಂದರೆ ಈಗ ನಾವು ಉಪಯೋಗಿಸುತ್ತಿರುವ ಒರಳಿನಂತಿರದೆ ಒಂದು ಕಲ್ಲಿನ ಮಧ್ಯಭಾಗದಲ್ಲಿ ಸ್ವಲ್ಪ ಹಳ್ಳ ಮಾತ್ರವಾಗಿತ್ತೆಂದು ಊಹಿಸಬಹುದು ಈ ಉಲೂಖಲವೆಂಬ ಒರಳು **ಮುಸಲ** (ಒನಕೆ) ದಿಂದ ಧಾನ್ಯವನ್ನು ಕುಟ್ಟುವುದಕ್ಕಾಗಿ ಉಪಯೋಗಿಸಲ್ಪಡುತ್ತಿತ್ತು.

ದೇವತೆಗಳಿಗೆ ಸೋಮವನ್ನು ಅರ್ಪಿಸಲು ಇಡುವ ಪಾತ್ರೆಗೆ **ಚಮೂ** ಎಂದು ಹೆಸರು. ಋತ್ವಿಗ್ಜನರು ಸೋಮಪಾನಮಾಡುವುದಕ್ಕೆ ಉಪಯೋಗಿಸುವ ಪಾತ್ರೆಗಳಿಗೆ **ಕಲಶ, ಚಮಸ** ಎಂದು ಹೆಸರು. ಕೆಲವು ಸಂದರ್ಭಗಳಲ್ಲಿ **ಚಮೂ** ಎಂಬ ಶಬ್ದವು **ಉಲೂಖಲ ಗ್ರಾವಾ** (ಒರಳು ಮತ್ತು ಜಜ್ಜುವಕಲ್ಲು, mortar and pestle) ಇವುಗಳನ್ನು ಸೂಚಿಸುವುದಕ್ಕಾಗಿಯೂ ಉಪಯೋಗಿಸಲ್ಪಟ್ಟಿರುವುದು. (ಋ ಸಂ. ೧.೨೮-೯ ; ೪-೧೮-೩ ; ೬-೫ ೨).

ಸೋಮಲತೆಗಳನ್ನು ಜಜ್ಜುವಾಗ ಸಾಧಾರಣವಾಗಿ ಅವುಗಳನ್ನು ಚರ್ಮಗಳ ಮೇಲೆ ಇರುವುದು ರೂಢಿಯು ಈ ಚರ್ಮಕ್ಕೆ **ತ್ವಕ್** ಎಂದು ಹೆಸರು. ಇದಕ್ಕಾಗಿ ಗೋಚರ್ಮವನ್ನು ಉಪಯೋಗಿಸುತ್ತಿದ್ದರು. ಋ. ಸಂ. ೧೦-೯೪-೯ ; ೧೦-೧೧೬-೪) ಸೋಮವನ್ನು ಶೇಖರಿಸಿ ಇಡುವ ಪಾತ್ರೆಗಳಿಗೆ **ಕೋಶ** (ಋ ಸಂ. ೭-೧೦೧-೪ ; ೮-೨೦-೮) **ಸಧಸ್ಥ** (ಋ. ಸಂ. ೩-೬೨-೧೫ ; ೯-೧-೨ ; ೯-೧೭-೮) **ದ್ರು** (ಋ ಸಂ. ೯-೧-೨ ; ೯-೬೫-೬ ; ೯-೯೮-೨) **ವನ** (ಋ. ಸಂ. ೨-೧೪-೯ ; ೯-೬೬-೯) **ದ್ರೋಣ** (ಋ. ಸಂ. ೯-೧೫-೭ ; ೯-೩೩-೨) ಇತ್ಯಾದಿ ಹೆಸರುಗಳಿವೆ. **ಸ್ರುವ** ಎಂದರೆ ಸೌಟು (ladle. ಋ .ಸಂ. ೧-೧೧೬-೨೪) ಸೋಮರಸವನ್ನು ಸೋಸುವ ಬಟ್ಟೆ ಅಥವಾ ಜಾಲರಿಗೆ **ಪವಿತ್ರವೆಂದು** ಹೆಸರು. ಕೆಲವು ಸಂದರ್ಭಗಳಲ್ಲಿ ಬೆರಳಿನ ಸಂದಿಗಳಿಂದಲೂ ಸೋಮವನ್ನು ಸೋಸುತ್ತಿದ್ದರು.

ಸೋಮರಸವನ್ನು ಬೇರೆ ಪದಾರ್ಥಗಳ ಮಿಶ್ರಣವಿಲ್ಲದೆ ಉಪಯೋಗಿಸುವುದಕ್ಕೆ **ಶುಕ್ರ** (ಋ ಸಂ. ೧-೧೩೭-೧ : ೩-೩೨-೨ ; ೮-೨-೧೦) **ಶುಚಿ** (ಋ. ಸಂ. ೧-೫-೫ ; ೧-೩೦-೨ ; ೮-೨-೯) ಎಂದು ಹೇಳುವರು.

ಈ ರಸದ ವರ್ಣವು **ಬಭ್ರು**, (ಋ. ಸಂ. ೯-೩೩-೨ ; ೯-೬೩-೪ & ೬) **ಹರಿತ** (ಋ. ಸಂ. ೯-೩-೯ : ೯-೭-೬ ; ೯-೬೫-೮) **ಅರುಣ** (ಋ. ಸಂ ೯-೪೦-೨ ; ೯-೪೫-೩) **ಅರುಷ** (ಋ. ಸಂ. ೯-೬೧-೨೧) **ಶೋಣ** (ಋ. ಸಂ. ೯-೯೭-೧೩) ಎಂಬ ನಾನಾವಿಧ ವರ್ಣವುಳ್ಳದ್ದಾಗಿರುವುದೆಂದೂ ಸುವಾಸನೆಯಿಂದ ಕೂಡಿರುವುದಾಗಿಯೂ (ಋ. ಸಂ. ೯-೯೭-೯, ೯-೧೦೭-೨) ವಿಧವಿಧವಾದ ವರ್ಣನೆಗಳಿರುವುವು.

ಸೋಮರಸಕ್ಕೆ ರುಚಿಯನ್ನುಂಟುಮಾಡುವುದಕ್ಕಾಗಿ ಕೆಲವು ದ್ರವ್ಯಗಳನ್ನು ಮಿಶ್ರಮಾಡುವರು. ಈ ಮಿಶ್ರಣಕ್ಕೆ ಆಶಿರದ್ರವ್ಯಗಳೆಂದು ಹೆಸರು. ಹಾಲನ್ನು ಮಿಶ್ರಮಾಡಿದ ಸೋಮರಸಕ್ಕೆ **ಗವಾಶಿರವೆಂದೂ**, ಮೊಸರನ್ನು ಮಿಶ್ರಮಾಡಿದ ಸೋಮರಸಕ್ಕೆ **ದಧ್ಯಾಶಿರವೆಂದೂ**, ಹಿಟ್ಟನ್ನು ಮಿಶ್ರಮಾಡಿದ ಸೋಮರಸಕ್ಕೆ **ಯವಾಶಿರವೆಂದೂ** ಹೇಳುವರು. ಸೋಮರಸವು ತೀವ್ರವೆಂದು ಕೆಲವು ವೇಳೆ ಹೇಳಲ್ಪಡುವುದು. ಆಗ ಅದು ತೀಕ್ಷ್ಣವಾದ ವಾಸನೆಯಿಂದ ಅಥವಾ ರುಚಿಯಿಂದ (pungent flavour) ಕೂಡಿರುವುದೆಂದು ತಿಳಿಯಬೇಕು. ಸೋಮರಸವನ್ನು ತೆಗೆದ ಮೇಲೆ ಉಳಿಯುವ ಸಿಪ್ಪೆಯಂತಿರುವ ಭಾಗಕ್ಕೆ **ಋಜೀಷವೆಂದು** ಹೆಸರು.

**ಗ್ರಾವಾ**—ಸೋಮರಸವನ್ನು ಜಜ್ಜುವ ಕಲ್ಲು. ಈ ಕಲ್ಲು **ಪೃಥುಬುಧ್ನಃ** ಎಂಬ ಶಬ್ದವು ವಿವರಿಸುವಂತೆ ಕೆಳಭಾಗದಲ್ಲಿ ಅಗಲವಾಗಿಯೂ, ಮೇಲೆ ಹಿಡಿಯಂತಿರುವುದಾಗಿಯೂ ಇರುವ ಗುಂಡುಕಲ್ಲು ; ಕಲ್ವತ್ತಿನಲ್ಲಿರುವ ಅರೆಯುವ ಕಲ್ಲಿನಂತೆ ಆಕಾರವುಳ್ಳ ಕಲ್ಲು ಸಾಧಾರಣವಾಗಿ ಋಗ್ವೇದದಲ್ಲಿ ಸೋಮಲತೆಯನ್ನು ಜಜ್ಜುವುದಕ್ಕಾಗಿ ಉಪಯೋಗಿಸುವ ಕಲ್ಲುಗಳನ್ನು **ಗ್ರಾವಾ ಅದ್ರಿ** ಎಂಬ ಶಬ್ದಗಳಿಂದ ಕರೆಯುವರು.

**ದಧ್ಯಾಶಿರಃ**—ಈ ಶಬ್ದಕ್ಕೆ ಭಾಷ್ಯಕಾರರು **ಅವನೀಯಮಾನಂ ದಧ್ಯಾಶೀರ್ದೋಷಘಾತಕಂ ಯೇಷಾಂ ಸೋಮಾನಾಂ ತೇ ದಧ್ಯಾಶಿರಃ** ಎಂದರೆ ಸೋಮರಸದಲ್ಲಿರುವ ದೋಷಪರಿಹಾರಾರ್ಥವಾಗಿ ಮೊಸರನ್ನು ಇದಕ್ಕೆ ಮಿಶ್ರಮಾಡುವುದರಿಂದ ಇದಕ್ಕೆ ದಧ್ಯಾಶಿರಃ ಎಂದು ಹೆಸರು ಎಂದರ್ಥಮಾಡಿರುವರು. ಸೋಮರಸಕ್ಕೆ ದಧಿಯನ್ನು ಮಾತ್ರವಲ್ಲದೆ ಹಾಲು, ಹಿಟ್ಟು ಮೊದಲಾದ ಇತರ ದ್ರವ್ಯಗಳನ್ನು (ರುಚಿಗಾಗಿ) ಮಿಶ್ರಮಾಡಿ ಉಪಯೋಗಿಸುವುದು ರೂಢಿಯಲ್ಲಿತ್ತು. ಈ ವಿಚಾರವಾಗಿ ನಾವು ಈ ಋಗ್ವೇದಸಂಹಿತೆಯ ಭಾಗ ೧ ಪೇಜು 676 ರಲ್ಲಿ ವಿಸ್ತಾರವಾಗಿ ಬರೆದಿದೇವೆ. **ದಧ್ಯಾಶಿರಃ** ಎಂಬ ಶಬ್ದವು ಈ ಋಕ್ಕಿನಲ್ಲಲ್ಲದೆ ಮುಂದೆ ಕೊಟ್ಟಿರುವ ಇತರ ಋಕ್ಕುಗಳಲ್ಲಿಯೂ ಇರುವುದು—

(೧) **ಇಮ ಆಯಾತಮಿಂದವಃ ಸೋಮಾಸೋ ದಧ್ಯಾಶಿರಃ ಸುತಾಸೋ ದಧ್ಯಾಶಿರಃ ।**
(ಋ. ಸಂ. ೧-೧೩೭-೨)

(೨) **ಸುತಾ ಇಂದ್ರಾಯ ವಾಯವೇ ಸೋಮಾಸೋ ದಧ್ಯಾಶಿರಃ ।**
(ಋ. ಸಂ. ೫-೫೧-೭)

(೩) **ಇಮ ಇಂದ್ರಾಯ ಸುನ್ವಿರೇ ಸೋಮಾಸೋ ದಧ್ಯಾಶಿರಃ ॥**
(ಋ. ಸಂ. ೭-೩೨-೪)

(೪) **ಏತೇ ಪೂತಾ ವಿಪಶ್ಚಿತಃ ಸೋಮಾಸೋ ದಧ್ಯಾಶಿರಃ ॥**
(ಋ. ಸಂ. ೯-೨೨-೩)

(೫) **ಸುತಾ ಇಂದ್ರಾಯ ವಜ್ರಿಣೇ ಸೋಮಾಸೋ ದಧ್ಯಾಶಿರಃ ।**
(ಋ. ಸಂ. ೯-೬೩-೧೫)

**(೬) ಏತೇ ಪೂತಾ ವಿಪಶ್ಚಿತಃ ಸೋಮಾಸೋ ದಧ್ಯಾಶಿರಃ ॥**

(ಋ. ಸಂ. ೯-೧೦೧-೧೨)

ಈ ದಧ್ಯಾಶಿರಶಬ್ದವಲ್ಲದೆ **ಗವಾಶಿರ, ಯವಾಶಿರ** ಮೊದಲಾದ ಇತರ ದ್ರವ್ಯಮಿಶ್ರಿತವಾದ ಸೋಮರಸಗಳು ಈ ಋಕ್ಕುಗಳಲ್ಲಿ ಪಠಿತವಾಗಿವೆ—

**(೧) ತೀವ್ರಾಃ ಸೋಮಾಸ ಆ ಗಹ್ಯಾಶೀರ್ವಂತಃ ಸುತಾ ಇಮೇ ॥**

(ಋ. ಸಂ. ೧-೨೩-೧)

ಈ ಋಕ್ಕಿನಲ್ಲಿ **ಆಶೀರ್ವಂತಃ ಸೋಮಾಸಃ** ಎಂದು ಇರುವುದರಿಂದ ಸೋಮರಸಕ್ಕೆ ಹಾಲು ಮೊಸರು ಮೊದಲಾದ ಯಾವ ವಿಧವಾದ ಆಶಿರ ದ್ರವ್ಯಗಳನ್ನಾದರೂ ಬೆರಸಿರುವುದೆಂದು ಸಾಮಾನ್ಯವಾಗಿ ಹೇಳಿದೆ

**(೨) ಶತಂ ವಾ ಯಃ ಶುಚೀನಾಂ ಸಹಸ್ರಂ ವಾ ಸಮಾಶಿರಾಂ ॥**

(ಋ ಸಂ. ೧-೩೦-೨)

ಇಲ್ಲಿ ಸಮಾಶಿರಾಂ ಎಂದರೆ ಸೋಮರಸಕ್ಕೆ ಆಶಿರದ್ರವ್ಯಗಳನ್ನು ಚೆನ್ನಾಗಿ ಮಿಶ್ರಮಾಡಿರುವುದೆಂದು ಸಾಮಾನ್ಯವಾಗಿ ಹೇಳಿದೆ. ನಿರ್ದಿಷ್ಟವಾಗಿ ಯಾವ ದ್ರವ್ಯವನ್ನೂ ಹೇಳಿಲ್ಲ

**(೩) ಸುಷುಮಾ ಯಾತಮದ್ರಿಭಿರ್ಗೋಶ್ರೀತಾ ಮತ್ಸರಾ ಇಮೇ ಸೋಮಾಸೋ ಮತ್ಸರಾ ಇಮೇ ।**

**ಆ ರಾಜಾನಾ ದಿವಿಸ್ಪೃಶಾಸ್ಮತ್ರಾ ಗಂತಮುಪ ನಃ ॥**
**ಇಮೇ ವಾಂ ಮಿತ್ರಾವರುಣಾ ಗವಾಶಿರಃ ಸೋಮಾಃ ಶುಕ್ರಾ ಗವಾಶಿರಃ ॥**

(ಋ. ಸಂ. ೧-೧೩೭-೧)

ಇಲ್ಲಿ **ಗೋಶ್ರೀತಾಃ** ಎಂದರೆ ಗವಾಂ ಪಯೋಭಿರ್ಮಿಶ್ರಿತಾಃ ಹಸುವಿನ ಹಾಲಿನಿಂದ ಮಿಶ್ರಿತವಾದದ್ದು ಎಂದರ್ಥವು. ಇದೇ ಋಕ್ಕಿನ ಕೊನೆಯ ಪಾದದಲ್ಲಿರುವ **ಗವಾಶಿರಃ** ಎಂಬ ಶಬ್ದಕ್ಕೂ ಹಸುವಿನ ಹಾಲಿನಿಂದ ಮಿಶ್ರಿತವಾದ ಸೋಮವೆಂದೇ ಅರ್ಥವು.

**(೪) ಶುಚಿರಸಿ ಪುರುನಿಃಷ್ಠಾಃ ಕ್ಷೀರೈರ್ಮಧ್ಯತಃ ಆಶೀರ್ತಃ । ದಧ್ನಾ ಮಂದಿಷ್ಠಃ ಶೂರಸ್ಯ ॥**

(ಋ ಸಂ ೮-೨-೯)

ಇಲ್ಲಿ ಹಾಲು ಮತ್ತು ಮೊಸರು ಎರಡನ್ನೂ ಮಿಶ್ರಮಾಡಿದ ಬೇರೆ ಬೇರೆ ಎರಡು ರಸಗಳಿವೆಯೆಂದು ಹೇಳಿದೆ ಎಂದರೆ ಹಾಲನ್ನು ಮಿಶ್ರಮಾಡಿದ ಸೋಮರಸವೂ, ಮೊಸರನ್ನು ಮಿಶ್ರಮಾಡಿದ ಸೋಮರಸವೂ ಎರಡು ವಿಧವೂ ಇರುವುದೆಂದು ತಿಳಿಯಬೇಕು.

**(೫) ಸಂ ಶುಕ್ರಾಸಃ ಶುಚಯಃ ಸಂ ಗವಾಶಿರಃ ಸೋಮಾ ಇಂದ್ರಮಮಂದಿಷುಃ ॥**

(ಋ ಸಂ. ೮-೫೨-೧೦)

ಇಲ್ಲಿ ಗವಾಶಿರ ಎಂದರೆ ಹಾಲು ಮಿಶ್ರಿತವಾದ ಸೋಮವೆಂದು ಸ್ಪಷ್ಟವಾಗಿ ಹೇಳಿದೆ.

(೬) ಅಧಾ ನಿಯುತ್ವ ಉಭಯಸ್ಯ ನಃ ಪಿಬ ಶುಚಿಂ ಸೋಮಂ ಗವಾಶಿರಂ ॥

(ಋ. ಸಂ. ೮-೧೦೧-೧೦)

ಇಲ್ಲಿಯೂ ಗವಾಶಿರವೆಂಬ ಹಾಲು ಮಿಶ್ರಿತವಾದ ಸೋಮವನ್ನೇ ಹೇಳಿದೆ.

(೭) ಯತ್ರೇ ಸೋಮ ಗವಾಶಿರೋ ಯವಾಶಿರೋ ಭಜಾಮಹೇ ॥

(ಋ. ಸಂ. ೧-೧೮೭-೯)

(೮) ಇಮಮಿಂದ್ರ ಗವಾಶಿರಂ ಯವಾಶಿರಂ ಚ ನಃ ಪಿಬ ।

(ಋ. ಸಂ. ೩-೪೨-೭)

ಇಲ್ಲಿ ಗವಾಶಿರ ಮತ್ತು ಯವಾಶಿರ ಎಂಬ ಎರಡು ವಿಧವಾದ ಸೋಮರಸಗಳನ್ನೂ ಹೇಳಿದೆ.

(೯) ಇಂದೋರಿಂದ್ರೋ ಯವಾಶಿರಃ ।

(ಋ. ಸಂ. ೮-೯೨-೪)

(೧೦) ತ್ರಿಕದ್ರುಕೇಷು ಮಹಿಷೋ ಯವಾಶಿರಂ ತುವಿಶುಷ್ಮಸ್ತೃಪತ್ಸೋಮಮಪಿಬದ್ವಿಷ್ಣುನಾ ಸುತಂ ಯಥಾವಶತ್ ॥ (ಋ. ಸಂ. ೨-೨೨-೧)

ಇಲ್ಲಿ ಯವಾಶಿರ ಎಂದರೆ ಹಿಟ್ಟುಮಿಶ್ರವಾದ ಸೋಮರಸವೆಂದು ಹೇಳಿದೆ.

(೧೧) ಅಶ್ವನೋಧಸ್ಯ ದಾನಾಃ ಸೋಮಾ ಇವ ತ್ರ್ಯಾಶಿರಃ ॥

(ಋ. ಸಂ. ೫-೨೭-೫)

ಇಲ್ಲಿ ಸೋಮರಸಕ್ಕೆ ಹಾಲು, ಮೊಸರು, ಯವ ಎಂಬ ಮೂರುವಿಧದ್ರವ್ಯಗಳನ್ನೂ ಮಿಶ್ರಮಾಡಿರುವುದೆಂದು ಹೇಳಿದೆ.

(೧೨) ಸಾಧೋಃ ಪಿಬ ಪ್ರತಿಕಾಮಂ ಯಥಾ ತೇ ರಸಾಶಿರಃ ಪ್ರಥಮಂ ಸೋಮಸ್ಯ ।

(ಋ. ಸಂ. ३-೪೮-೧)

ಇಲ್ಲಿ ರಸಾಶಿರ ಎಂದು ಹೇಳಿರುವುದರಿಂದ ಹಾಲು ಅಥವಾ ಮೊಸರು ಇವುಗಳಲ್ಲಿ ಯಾವುದನ್ನಾದರೂ ಮಿಶ್ರ ಮಾಡಿದ ಸೋಮವೆಂದರ್ಥವು.

ವ್ಯಾಕರಣಪ್ರಕ್ರಿಯಾ

**ಗವಾಶಿರಃ**—ಗೋಭಿಃ ಆಶಿರಃ ಗವಾಶಿರಃ ಇಲ್ಲಿ ಗೋಶಬ್ದವು ಗೋವಿಕಾರಕ್ಷೀರಾದಿಯನ್ನು ತಿಳಿಸುತ್ತದೆ. ಅಶಭೋಜನೇ. ಧಾತು. **ಅಶೇರ್ಣಿತ್** (ಉ. ಸೂ. ೧-೫೨) ಎಂಬುದರಿಂದ ಕಿರಚ್ ಪ್ರತ್ಯಯ. ಣಿತ್ವವಿಧಾನ ಮಾಡಿರುವುದರಿಂದ **ಅತಉಪಧಾಯಾಃ** (ಪಾ ಸೂ. ೭-೨-೧೧೬) ಎಂಬುದರಿಂದ ಆದಿವೃದ್ಧಿ. ಸಮಾಸದಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಭಜಾಮಹೇ**—ಭಜ ಸೇವಾಯಂ ಧಾತು ಭ್ವಾದಿ ಲಟ್ ಉತ್ತಮಪುರುಷ ಬಹುವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

ಸಂಹಿತಾಪಾಠಃ

ಕರಂಭ ಓಷಧೇ ಭವ ಪೀವೋ ವೃಕ್ಕ ಉದಾರಥಿಃ ।

ವಾತಾಪೇ ಪೀವ ಇದ್ಭವ ॥ ೧೦ ॥

ಪದಪಾಠಃ

ಕರಂಭಃ । ಓಷಧೇ । ಭವ । ಪೀವಃ । ವೃಕ್ಕಃ । ಉದಾರಥಿಃ ।

ವಾತಾಪೇ । ಪೀವಃ । ಇತ್ । ಭವ ॥ ೧೦ ॥

ಸಾಯಣಭಾಷ್ಯಂ

ಕರಂಭೋ ಯಃ ಕರಂಭಾದಿರೂಪಃ ಸಕ್ತುಪಿಂಡೋಽಸ್ತಿ ತದಾತ್ಮಕ ಹೇ ಓಷಧೇ ತ್ವಂ ಪೀವಃ ಸ್ಥೌಲ್ಯವಾನ್ ವೃಕ್ಕೋ ವ್ಯಾಧೇರ್ವರ್ಜಯಿತಾ ಭವ । ಉದಾರಥಿರೂರ್ಧ್ವಗಮ ಇಂದ್ರಿಯಾಣಾಮುದ್ದೀಪಯಿತಾ ಭವ । ಶಿಷ್ಟೋ ಗತಃ ॥

॥ ಪ್ರತಿಪದಾರ್ಥ ॥

ಕರಂಭ—ಕರಂಭ ರೂಪವನ್ನು ಹೊಂದಿರುವ । ಓಷಧೇ—ಎಲೈ ಓಷಧಿಯೇ (ನೀನು) । ಪೀವಃ—ಪುಷ್ಟಿದಾಯಕನಾಗಿಯೂ । ವೃಕ್ಕಃ—ವ್ಯಾಧಿವರ್ಜಿತವಾದ ಆರೋಗ್ಯವರ್ಧಕನಾಗಿಯೂ । ಉದಾರಥಿಃ—(ಇಂದ್ರಿಯಗಳಿಗೆ) ಚೈತನ್ಯದಾಯಕನಾಗಿಯೂ ಆಗಿರು । ವಾತಾಪೇ—ಎಲೈ ಶರೀರವೇ । ಪೀವ ಇತ್ ಭವ—ಪುಷ್ಟವಾಗಿಯೇ ಬೆಳೆ.

ಭಾವಾರ್ಥ

ಕರಂಭರೂಪವನ್ನು ಹೊಂದಿರುವ ಎಲೈ ಓಷಧಿಯೇ, ನೀನು ಪುಷ್ಟಿದಾತನಾಗಿಯೂ, ವ್ಯಾಧಿವರ್ಜಿತವಾದ ಆರೋಗ್ಯವರ್ಧಕನಾಗಿಯೂ ಮತ್ತು ಇಂದ್ರಿಯಗಳಿಗೆ ಚೈತನ್ಯದಾತನಾಗಿಯೂ ಆಗಿರು. ಎಲೈ ಶರೀರವೇ, ನೀನು ಪುಷ್ಟವಾಗಿಯೇ ಬೆಳೆ.

## English Translation

Vegetable cake of fried meal, be substantial, wholesome, and invigorating ; and, Body, do you grow fat.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಅನ್ನಕ್ಕೆ ಕಾರಣಭೂತವಾದ ಓಷಧಿಯನ್ನು (ಸಸ್ಯವನ್ನು) ಸ್ತುತಿಸಲಾಗಿದೆ.

ಕರಂಭ—ಈ ಶಬ್ದಕ್ಕೆ ಭಾಷ್ಯಕಾರರು—ಕರಂಭೋ ಯಃ ಕರಂಭಾದಿರೂಪಃ ಸಕ್ತುಪಿಂಡೋಽಸ್ತಿ ತದಾತ್ಮಕ । ಎಂದರೆ (ಧಾನ್ಯದ) ಹಿಟ್ಟನ್ನು ಕಲಸಿ ಉಂಡೆಯಾಗಿ ಮಾಡಿರುವುದಕ್ಕೆ ಕರಂಭವೆಂದೂ ಆ ಕರಂಭರೂಪ

ದಲ್ಲಿರುವ ಓಷಧಿಯೆಂದೂ ಓಷಧಿಯನ್ನು ಸಂಬೋಧಿಸಲಾಗಿದೆ. ಕರಂಭ ಶಬ್ದದ ವಿಷಯದಲ್ಲಿ ಯಾಸ್ಕರು ಏನನ್ನೂ ಹೇಳಿರುವುದಿಲ್ಲ. ಭಾಷ್ಯಕಾರರು—

ಪೂಷಣ್ವತೇ ತೇ ಚಕೃಮಾ ಕರಂಭಂ ಹರಿವತೇ ಹರ್ಯಶ್ವಾಯ ಧಾನಾಃ ।

(ಋ. ಸಂ. ೩-೫೨-೭)

ಎಂಬ ಋಕ್ಕಿನಲ್ಲಿರುವ ಕರಂಭ ಎಂಬ ಶಬ್ದಕ್ಕೆ ಕರಂಭಂ ದಧಿಮಿಶ್ರಂ ಸಕ್ತುಂ ಮೊಸರಿನಿಂದ ಕಲಿಸಿದ ಹಿಟ್ಟಿನ ಉಂಡೆ ಎಂದೂ,

ಯ ಏನಮಾದಿದೇಶತಿ ಕರಂಭಾದಿತಿ ಪೂಷಣಂ । ನ ತೇನ ದೇವ ಆದಿಶೇ ॥

(ಋ. ಸಂ. ೬-೫೬-೧)

ಎಂಬ ಋಕ್ಕಿನ ಭಾಷ್ಯದಲ್ಲಿ—ಕರಂಭಾತ್ ಕರಂಭಾಣಾಂ ಘೃತಮಿಶ್ರಾಣಾಂ ಯವಸಕ್ತೂನಾಂ—ಗೋಧಿಯ ಹಿಟ್ಟು ಮತ್ತು ತುಪ್ಪ ಇವುಗಳನ್ನು ಮಿಶ್ರಮಾಡಿ ಉಂಡೆಯಾಗಿ ಕಟ್ಟಿರತಕ್ಕ ಎಂದೂ,

ಸೋಮಮನ್ಯ ಉಪಾಸದತ್ಪಾತವೇ ಚಮ್ವೋಃ ಸುತಂ । ಕರಂಭಮನ್ಯ ಇಚ್ಛತಿ ॥

(ಋ. ಸಂ. ೬-೫೭-೨)

ಎಂಬ ಋಕ್ಕಿನಲ್ಲಿರುವ ಕರಂಭಂ ಎಂಬ ಶಬ್ದಕ್ಕೆ ಕರಂಭಂ ಘೃತಸಿಕ್ತಂ ಸಕ್ತ್ವಾತ್ಮಕಂ ಹವಿಃ-ತುಪ್ಪದಿಂದ ಮಿಶ್ರಿತವಾದ ಹಿಟ್ಟಿನರೂಪದಿಂದಿರುವ ಹವಿಸ್ಸು ಎಂದೂ ಅರ್ಥ ವಿವರಣೆಮಾಡಿದ್ದಾರೆ. ಆದುದರಿಂದ ಕರಂಭವೆಂದರೆ ಹಿಟ್ಟಿನ ಜತೆಗೆ ಘೃತ ದಧಿ ಮೊದಲಾದ ವಸ್ತುಗಳನ್ನು ಸೇರಿಸಿ ಪಿಂಡರೂಪವಾಗಿ ದೇವತೆಗಳಿಗೋಸ್ಕರ ಅರ್ಪಿಸಲು ಸಿದ್ಧಮಾಡಿರುವ ಹವಿಸ್ಸೆಂದು ಅರ್ಥಮಾಡಬಹುದು. Wilson ಎಂಬ ಆಂಗ್ಲಪಂಡಿತನು ಈ ಶಬ್ದಕ್ಕೆ—ಕರಂಭ ಓಷಧೇ—The first is explained, a lump or cake of parched meal, ಸಕ್ತುಪಿಂಡ idendified with an herb or vegetable ತದಾತ್ಮಕ ಓಷಧಿಃ ಎಂದು ಹೇಳಿದ್ದಾನೆ. ಮತ್ತು Griffith ಎಂಬ ಪಂಡಿತನು— ಕರಂಭ is some soft food, a sort of gruel, offered especially to ಪೂಷನ್.

ಓಷಧೇ—ಓಷಧಿ ಶಬ್ದಕ್ಕೆ ವನಸ್ಪತಿ ಅಥವಾ ಸಸ್ಯವೆಂದರ್ಥವು. ಯಾಸ್ಕರು ಓಷಧಿಶಬ್ದದ ನಿರ್ವಚನ ವನ್ನು ಹೇಳುತ್ತಾ—

ಯಾ ಓಷಧೀಃ ಪೂರ್ವಾ ಜಾತಾ ದೇವೇಭ್ಯಸ್ತ್ರಿಯುಗಂ ಪುರಾ ।
ಮನ್ಯೈ ನು ಬಭ್ರೂಣಾಮಹಂ ಶತಂ ಧಾಮಾನಿ ಸಪ್ತ ಚ ॥

(ಋ. ಸಂ. ೧೦-೯೭-೧)

ಎಂಬ ಋಕ್ಕನ್ನುದಾಹರಿಸಿ—

ಓಷಧಯಃ । ಓಷಧಯ ಓಷದ್ಧಯಂತೀತಿ ವಾ ।
ಓಷತ್ಯೇನಾ ಧಯಂತೀತಿ ವಾ ॥
ದೋಷಂ ಧಯಂತೀತಿ ವಾ ॥

(ನಿ. ೯-೨೭)

ಎಂದು ಹೇಳಿದ್ದಾರೆ. ಎಂದರೆ, ಶರೀರದಲ್ಲಿ ಕ್ಷಯಾದಿ ರೋಗಗಳನ್ನು (ಓಷತ್) ನಾಶಮಾಡುವುದರಿಂದ (ಧಯಂತಿ) ಇದಕ್ಕೆ ಓಷಧಿಯೆಂದು ಹೆಸರು. ಅಥವಾ ಉದರಾದಿ ಶರೀರದ ಅಂಗದಲ್ಲಿ ಉಂಟಾಗುವ ದಾಹೋಪಶಮನಾರ್ಥವಾಗಿ

ಇದನ್ನು ಪಾನಮಾಡುವುದರಿಂದ (**ಓಷತಿ ಏನಾ ಧಯಂತಿ ಇತಿ**) ಇದಕ್ಕೆ ಓಷಧಿಯೆಂದು ಹೆಸರು. ಅಥವಾ ಶರೀರದಲ್ಲಿರುವ ವಾತಾದಿದೋಷಗಳನ್ನು ನಾಶಮಾಡುವುದರಿಂದ (**ದೋಷಂ ಧಯಂತೀತಿ ವಾ**) ಇದಕ್ಕೆ ಓಷಧಿಯೆಂದು ಮೂರು ವಿಧವಾದ ನಿರ್ವಚನವನ್ನು ಹೇಳಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಸಸ್ಯಜಾತಿಗೆ ಸೇರಿದ ಧಾನ್ಯ ಅಥವಾ ಧಾನ್ಯದಿಂದ ಸಿದ್ಧವಾದ ಹಿಟ್ಟು ಎಂದಭಿಪ್ರಾಯವು.

**ವೃಕ್ಕಃ—ವ್ಯಾಧೇರ್ವರ್ಜಯಿತಾ** । ವ್ಯಾಧಿಯನ್ನು ನಾಶಮಾಡುವ ಶಕ್ತಿಯುಳ್ಳ (ಆಹಾರವು) ಎಂದಭಿಪ್ರಾಯವು.

### ವ್ಯಾಕರಣಪ್ರಕ್ರಿಯಾ

**ಕರಂಭಃ**—ಡುಕೃಞ್ ಕರಣೇ. ಧಾತು. ಔಣಾದಿಕ ಅಂಭಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

---

### ಸಂಹಿತಾಪಾಠಃ

ತಂ ತ್ವಾ ವಯಂ ಪಿತೋ ವಚೋಭಿರ್ಗಾವೋ ನ ಹವ್ಯಾ ಸುಷೂದಿಮ ।
ದೇವೇಭ್ಯಸ್ತ್ವಾ ಸಧಮಾದಮಸ್ಮಭ್ಯಂ ತ್ವಾ ಸಧಮಾದಂ ॥ ೧೧ ॥

### ಪದಪಾಠಃ

ತಂ । ತ್ವಾ । ವಯಂ । ಪಿತೋ ಇತಿ । ವಚಃಽಭಿಃ । ಗಾವಃ । ನ । ಹವ್ಯಾ । ಸುಸೂದಿಮ ।
ದೇವೇಭ್ಯಃ । ತ್ವಾ । ಸಧಽಮಾದಂ । ಅಸ್ಮಭ್ಯಂ । ತ್ವಾ । ಸಧಽಮಾದಂ ॥ ೧೧ ॥

### ಸಾಯಣಭಾಷ್ಯಂ

ಹೇ ಪಿತೋ ಅನ್ನ ಸೋಮರೂಪ ತಂ ತಾದೃಶಂ ಸ್ತುತಂ ತ್ವಾ ತ್ವಾಂ ಮಹಾನುಭಾವಂ ವಚೋಭಿಃ ಸ್ತುತಿವಾಗ್ಭಿರ್ವಯಂ ಸುಷೂದಿಮ । ಕ್ಷಾರಯಾಮೋ ರಸಾನ್ । ತತ್ರ ದೃಷ್ಟಾಂತಃ । ಗಾವೋ ನ ಹವ್ಯಾ, ಗಾವ ಇವ ಹವೀಂಷ್ಯುತ್ಪಾದಯಂತಿ ತಥಾ ತ್ವತ್ಸಕಾಶಾತ್ಸೋಮಂ ಸುಷೂದಿಮ । ಕಿಮರ್ಥಂ ಕೀದೃಶಂ ಚೇತಿ ಚೇತ್ ಉಚ್ಯತೇ । ದೇವೇಭ್ಯ ಇಂದ್ರಾದಿಭ್ಯಸ್ತದರ್ಥಂ ಸಧಮಾದಂ ತೇಷಾಂ ಸಹ ಮಾದಯಿತಾರಂ। ನ ಕೇವಲಂ ದೇವೇಭ್ಯ ಏವ ಕಿಂತು ಸಧಮಾದಮಸ್ಮಾಭಿಃ ಸಹ ಮಾದಯಿತಾರಂ ಹುತಶೇಷರೂಪಂ ತ್ವಾ ತ್ವಾಮಸ್ಮಭ್ಯಮಸ್ಮ ದರ್ಥಮಪಿ ॥

### ಪ್ರತಿಪದಾರ್ಥ

**ಪಿತೋ**—ಸೋಮರೂಪವಾದ ಅನ್ನವೇ । **ತಂ ತ್ವಾ**—ಹಿಂದೆ ವರ್ಣಿತವಾದ ಗುಣಗಳುಳ್ಳ ನಿನ್ನನ್ನೂ । **ದೇವೇಭ್ಯಃ**—ದೇವತೆಗಳಿಗೆ । **ಸಧಮಾದಂ**—ತೃಪ್ತಿದಾಯಕನಾದ । **ತ್ವಾ**-ನಿನ್ನನ್ನೂ । **ಅಸ್ಮಭ್ಯಂ**—ನಮ

ಗಾಗಿಯೂ | **ಸಧಮಾದಂ**— ತೃಪ್ತಿಯನ್ನುಂಟುಮಾಡತಕ್ಕ | **ತ್ವಾ**—ನಿನ್ನನ್ನೂ | **ವಯಂ**—ನಾವು | **ವಚೋಭಿಃ**—ಸ್ತುತಿರೂಪವಾದ ವಾಕ್ಯಗಳಿಂದ | **ಗಾವೋ ನ ಹವ್ಯಾ**—ಧೇನುಗಳು ಹವಿಸ್ಸಿಗಾಗಿ ಬೇಕಾದ ಕ್ಷೀರಾದಿಗಳನು ಕರೆಯುವಂತೆ | **ಸುಷೂದಿಮ**—ನಿನ್ನ ರಸವನ್ನು ಕರೆಯುತ್ತೇವೆ.

### ಭಾವಾರ್ಥ

ಎಲೈ ಸೋಮರೂಪವಾದ ಅನ್ನವೇ, ಹಿಂದೆ ವರ್ಣಿತವಾದ ಗುಣಗಳುಳ್ಳವನೂ, ದೇವತೆಗಳಿಗೂ ನಮಗೂ ತೃಪ್ತಿದಾಯಕನಾದವನೂ, ಆದ ನಿನ್ನನ್ನು ನಮಗೆ ತೃಪ್ತಿಯನ್ನುಂಟುಮಾಡುವುದಕ್ಕಾಗಿಯೂ ಸಹ ಧೇನುಗಳು ಹವಿಸ್ಸಿಗಾಗಿ ಬೇಕಾದ ಕ್ಷೀರಾದಿಗಳನ್ನು ಕರೆಯುವಂತೆ ನಮ್ಮ ಸ್ತುತಿರೂಪವಾದ ವಾಕ್ಯಗಳಿಂದ ನಿನ್ನ ರಸವನ್ನು ಕರೆಯುತ್ತೇವೆ.

### English Translation

We extract from you, Pitu, by our praises, (the sacrificial food), as cows yield butter for oblation; from you, who are exhilarating to the gods; exhilarating also to us.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಸೋಮರೂಪವಾದ ಅನ್ನವನ್ನು ಸ್ತುತಿಸಲಾಗಿದೆ. ಇಲ್ಲಿ **ಗಾವೋ ನ ಹವ್ಯಾ** ಎಂಬ ಒಂದು ದೃಷ್ಟಾಂತವನ್ನು ಹೇಳಿದೆ. ಹಸುಗಳು ಹವಿಸ್ಸಿಗೆ ಬೇಕಾಗುವ ಕ್ಷೀರವನ್ನು ಕರೆಯುವಂತೆ ನಾವು ಸ್ತುತಿರೂಪವಾದ್ದ ವಾಕ್ಯಗಳಿಂದ ನಿನ್ನಲ್ಲಿರತಕ್ಕ (ಅನ್ನದಲ್ಲಿರತಕ್ಕ) ಮಧುರಾದಿಷಡ್ರಸಗಳನ್ನು ಪಡೆಯುತ್ತೇವೆ ಮತ್ತು ಈ ವಿಧವಾದ ಎಂದರೆ ಸೋಮರೂಪವಾದ ಅನ್ನದಿಂದ ದೇವತೆಗಳಿಗೂ ನಮಗೂ ಸಹ ತೃಪ್ತಿ (ಹರ್ಷ) ಉಂಟಾಗುತ್ತದೆ ಎಂದು ಮುಖ್ಯಾಭಿಪ್ರಾಯವು.

### ವ್ಯಾಕರ ಪ್ರಕ್ರಿಯಾ

**ವಚೋಭಿಃ**—ವಚ ಪರಿಭಾಷಣೇ. ಧಾತು. ಸರ್ವಧಾತು ನಿಬಂಧನವಾದ ಅಸುನ್ ಪ್ರತ್ಯಯ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಹವ್ಯಾ**—**ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭) ಎಂಬುದರಿಂದ ನಪುಂಸಕ ಬಹುವಚನದಲ್ಲಿ ಶಿಗೆ ಲೋಪ.

**ಸುಷೂದಿಮ**—ಷೂದ ಕ್ಷರಣೇ ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಉತ್ತಮಪುರುಷ ಬಹುವಚನಕ್ಕೆ ಮಾದೇಶ. **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩-೫) ಎಂಬುದರಿಂದ ಅದಕ್ಕೆ ಇಡಾಗಮ ಧಾತುವಿಗೆ ದ್ವಿತ್ವಾದಿ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಧಮಾದಮ್**—ಸಹ ಮಾದಯತಿ ಇತಿ ಸಧಮಾದಃ ಮದ ತೃಪ್ತಿಯೋಗೇ. ಧಾತು ಚುರಾದಿ. ನಂದಿಗ್ರಹಪಚಾದಿಭ್ಯಃ—(ಪಾ. ಸೂ. ೩-೧೩೪) ಎಂಬುದರಿಂದ ಅಚ್ ಪ್ರತ್ಯಯ. **ಸಧಮಾದಸ್ಥಯೋಶ್ಛಂದಸಿ**

(ಪಾ. ಸೂ. ೬-೩-೬೭) ಎಂಬುದರಿಂದ ಮಾದ ಎಂಬುದು ಪರದಲ್ಲಿರುವಾಗ ಸಹ ಎಂಬುದಕ್ಕೆ ಸಧಾದೇಶ. ಥಾಥಾದಿ ಸ್ವರದಿಂದ ಉತ್ತರಪದಾಂತೋದಾತ್ತವು ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಪರಾದಿಶ್ಛಂದಸಿ ಬಹುಲಮ್ (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

## ನೂರ ಎಂಭತ್ತೆಂಟನೆಯ ಸೂಕ್ತವು.

### ಪೀಠಿಕೆ.

ಆಪ್ರೀಸೂಕ್ತಗಳ ವಿವರಣೆಯನ್ನು ನಾವು ಋಗ್ವೇದಸಂಹಿತಾ ಭಾಗ ೨ ಪೇಜುಗಳು 73–74 ಮತ್ತು 528ರಲ್ಲಿ ಕೊಟ್ಟಿದೇವೆ. ಋಗ್ವೇದದಲ್ಲಿ ಒಟ್ಟು ೧೦ ಆಪ್ರೀಸೂಕ್ತಗಳಿವೆ. ಇವುಗಳಲ್ಲಿ-ಇಧ್ಮಃ (ಸಮಿದ್ಧೋಗ್ನಿರ್ವಾ) ನರಾಶಂಸಃ, ತನೂನಪಾತ್, ಇಳಃ, ಬರ್ಹಿಃ, ದೇವೀರ್ದ್ವಾರಃ, ಉಷಾಸಾನಕ್ತಾ, ದೈವ್ಯಾ ಹೋತಾರಾ ಪ್ರಚೇತಸಾ, ತಿಸ್ರೋ ದೇವ್ಯಃ ಸರಸ್ವತೀಳಾಭಾರತ್ಯಃ, ತ್ವಷ್ಟಾ, ವನಸ್ಪತಿಃ, ಸ್ವಾಹಾಕೃತಯಃ ಎಂಬ ದೇವತಾಕವಾದ ಮಂತ್ರಗಳಿವೆ. ಆದರೆ ನರಾಶಂಸಃ ಮತ್ತು ತನೂನಪಾತ್ ಎಂಬ ದೇವತೆಗಳ ವಿಷಯವಾಗಿ ಕೆಲವು ಸೂಕ್ತಗಳಲ್ಲಿ ನರಾಶಂಸಃ ಎಂಬ ಒಂದೇ ದೇವತೆಯನ್ನೂ ಮತ್ತೆ ಕೆಲವು ಸೂಕ್ತಗಳಲ್ಲಿ ತನೂನಪಾತ್ ಎಂಬ ಒಂದೇ ದೇವತೆಯನ್ನೂ ಮತ್ತೆ ಕೆಲವು ಸೂಕ್ತಗಳಲ್ಲಿ ನರಾಶಂಸಃ ಮತ್ತು ತನೂನಪಾತ್ ಎಂಬ ಉಭಯದೇವತೆಗಳನ್ನೂ ಸ್ತುತಿಸಲಾಗಿದೆ. ಈ ಅರ್ಥಕ್ಕನು ಸಾರವಾಗಿ ಈ ಆಪ್ರೀಸೂಕ್ತಗಳನ್ನು ಮೂರುವಿಧವಾಗಿ ವಿಂಗಡಿಸಿದ್ದಾರೆ. ಹೇಗೆಂದರೆ—ವಸಿಷ್ಠ, ಅತ್ರಿ, ವಾಧ್ರ್ಯಶ್ವ ಗೃತ್ಸಮದ ಎಂಬ ಋಷಿಪ್ರಣೀತಗಳಾದ ಆಪ್ರೀಸೂಕ್ತಗಳು ಎಂದರೆ—

೧) **ಜುಷಸ್ವ ನಃ ಸಮಿಧಮಗ್ನೇ**—ಋ. ಸಂ. ೭-೨ (ಮೈತ್ರಾವರುಣಿರ್ವಸಿಷ್ಠಃ)

೨) **ಸುಸಮಿದ್ಧಾಯ ಶೋಚಿಷೇ**—ಋ. ಸಂ. ೫-೫ (ವಸುಶ್ರುತ ಆತ್ರೇಯಃ)

೩) **ಇಮಾಂ ಮೇ ಅಗ್ನೇ ಸಮಿಧಂ**—ಋ. ಸಂ. ೧೦-೭೦ (ಸುಮಿತ್ರೋ ವಾಧ್ರ್ಯಶ್ವಃ)

೪) **ಸಮಿದ್ಧೋ ಅಗ್ನಿರ್ನಿಹಿತಃ** - ಋ. ಸಂ. ೨-೩ (ಗೃತ್ಸಮದಃ)

ಎಂಬ ಈ ನಾಲ್ಕು ಸೂಕ್ತಗಳೂ ಒಂದು ಗುಂಪಿಗೆ ಸೇರಿದವು. ಇವುಗಳಲ್ಲಿ ನರಾಶಂಸಃ ಎಂಬ ದೇವತಾಕವಾದ ಒಂದೊಂದು ಋಕ್ಕುಗಳಿವೆ. ಆದುದರಿಂದ ಈ ನಾಲ್ಕುಸೂಕ್ತಗಳಿಗೆ **ನರಾಶಂಸವಂತಿ ಸೂಕ್ತಾನಿ**—ನರಾಶಂಸ ದೇವತೆಯನ್ನು ಮಾತ್ರ ಸ್ತುತಿಸುವ ಆಪ್ರೀ ಸೂಕ್ತಗಳೆಂದು ಹೆಸರು.

೧) **ಸುಸಮಿದ್ಧೋನ ಆ ವಹ**—ಋ. ಸಂ ೧-೧೩ (ಮೇಧಾತಿಥಿಃ ಕಾಣ್ವಃ)

೨) **ಸಮಿದ್ಧೋ ಅಗ್ನ ಆ ವಹ**—ಋ ಸಂ. ೧-೧೪೨ (ದೀರ್ಘತಮಾ ಔಚಥ್ಯಃ) ಎಂಬ ಈ ಎರಡು ಆಪ್ರೀಸೂಕ್ತಗಳು ಎರಡನೆಯಗುಂಪಿಗೆ ಸೇರಿದವು ಇವುಗಳಲ್ಲಿ ನರಾಶಂಸ ಮತ್ತು ತನೂನಪಾತ್ ಎಂಬ ಉಭಯ ದೇವತೆಗಳ ಪರವಾಗಿ ಒಂದೊಂದು ಋಕ್ಕುಗಳಿವೆ. ಆದುದರಿಂದ ಈ ಆಪ್ರೀಸೂಕ್ತಗಗಳು ನರಾಶಂಸ ಮತ್ತು ತನೂನಪಾತ್ ಎಂಬ ಉಭಯವಿಧದೇವತಾಕವಾದ ಸೂಕ್ತಗಳೆಂದು ಪ್ರಸಿದ್ಧವಾಗಿವೆ. ಈ ಸೂಕ್ತಗಳಲ್ಲಿ ಉಭಯ ದೇವತೆಗಳೂ

ಇರುವುದರಿಂದ (೧–೧೪೨ನೆಯ ಸೂಕ್ತದಲ್ಲಿ ಇಂದ್ರನನ್ನು ಬಿಟ್ಟು) ಹನ್ನೊಂದು ಪ್ರಯಾಜ ಹೋಮಗಳಿಗೆ ಬದಲಾಗಿ ಹನ್ನೆರಡು ಹೋಮಗಳಿದ್ದಂತಾಯಿತು.

೧) **ಸಮಿದ್ಧೋ ಅದ್ಯ ರಾಜಸಿ**—ಋ. ಸಂ. ೧–೧೮೮ (ಅಗಸ್ತ್ಯೋ ಮೈತ್ರಾವರುಣಿಃ)
೨) **ಸಮಿತ್ಸಮಿತ್ಸುಮನಾ**—ಋ. ಸಂ. ೩–೪ (ಗಾಧಿನೋ ವಿಶ್ವಾಮಿತ್ರಃ)
೩) **ಸಮಿದ್ಧೋ ವಿಶ್ವತಸ್ಪತಿಃ**—ಋ. ಸಂ. ೯-೫ (ಕಾಶ್ಯಪೋಽಸಿತೋ ದೇವಲೋ ವಾ)
೪) **ಸಮಿದ್ಧೋ ಅದ್ಯ ಮನುಷೋ**—ಋ. ಸಂ. ೧೦–೧೧೦ (ಜಮದಗ್ನಿರ್ಭಾರ್ಗವಃ)

ಎಂಬ ಸೂಕ್ತಗಳು ಮೂರನೆಯ ಗುಂಪಿಗೆ ಸೇರಿದವು. ಇವುಗಳಲ್ಲಿ ತನೂನಪಾತ್ ಎಂಬ ದೇವತಾಕವಾದ ಋಕ್ಕು ಗಳು ಮಾತ್ರವಿರುವುವು. (ನರಾಶಂಸದೇವತಾಕವಾದ ಋಕ್ಕುಗಳಿರುವುದಿಲ್ಲ.) ಆದುದರಿಂದ ಇವುಗಳಿಗೆ **ತನೂನ ಪಾತ್ವಂತಿ ಸೂಕ್ತಾನಿ** ಎಂದರೆ ತನೂನಪಾತ್ ಎಂಬ ದೇವತಾಕವಾದ ಮಂತ್ರವನ್ನೊಳಗೊಂಡ ಆಪ್ರೀಸೂಕ್ತಗಳೆಂದು ಹೆಸರು

ಈ ಆಪ್ರೀಸೂಕ್ತಗಳನ್ನು ಪಶುಹೋಮಮಾಡುವಾಗ ಏಕಾದಶ (ಹನ್ನೊಂದು) ಪ್ರಯಾಜಹೋಮಗಳನ್ನು ಮಾಡುವುದಕ್ಕಾಗಿ ಪಠಿಸುವರು. **ಏಕಾದಶಾವದಾನಾನ್ಯವದ್ಯತಿ ದಶ ವೈ ಪಶೋಃ ಪ್ರಾಣಾ ಆತ್ಮೈಕಾದಶಃ** (ತೈ. ಸಂ. ೬-೩-೧೦-೩) ಎಂದು ತೈತ್ತಿರೀಯಸಂಹಿತಾವಾಕ್ಯವಿರುವುದು. ಈ ಆಪ್ರೀಸೂಕ್ತಗಳನ್ನು ಪಠಿಸಿ ಪಶು ಹೋಮಮಾಡುವಾಗ ಒಂದು ವಿಶೇಷನಿಯಮವಿರುವುದು. ಆಯಾ ಗೋತ್ರೋತ್ಪನ್ನರಾದ ಯಜ್ಞಕರ್ತರು ಯಜ್ಞ ಮಾಡುವಾಗ ಆಯಾ ಋಷಿಪ್ರಣೀತವಾದ ಆಪ್ರೀಸೂಕ್ತಗಳನ್ನೇ ಪಠಿಸಬೇಕೆಂದು ನಿಯಮವಿರುವುದು (ಆ. ೩-೨) ಪ್ರಕೃತವಾದ ಆಪ್ರೀಸೂಕ್ತವು ಅಗಸ್ತ್ಯಋಷಿಗೋತ್ರೋತ್ಪನ್ನರಾದವರು ಪಠಿಸಬೇಕಾಗಿರುವುದು.

ಆಪ್ರೀಸೂಕ್ತಗಳ ಸ್ವರೂಪ ಮತ್ತು ಕರ್ಮಾಚರಣೆಯಲ್ಲಿ ಅವುಗಳು ಹೊಂದಿರುವ ಸ್ಥಾನಗಳನ್ನು ತಿಳಿಯಬೇಕಾದರೆ ನಮಗಿರುವ ಆಧಾರಗಳು ಎರಡು ಬಗೆಯಾಗಿವೆ. ಒಂದನೆಯದು, ಬ್ರಾಹ್ಮಣಾದಿ ಶ್ರುತಿವಾಕ್ಯಗಳು ; ಎರಡನೆಯದಾಗಿ ನಿರುಕ್ತಾದಿನಿರ್ವಚನವಾಕ್ಯಗಳು. ಈ ಎರಡು ಬಗೆಯ ಆಧಾರಗಳಲ್ಲಿ ನಿರುಕ್ತಾದಿನಿರ್ವಚನವಾಕ್ಯ ಗಳು ಹೆಚ್ಚು ಯುಕ್ತಿಯುಕ್ತವಾಗಿಯೂ ಶಾಸ್ತ್ರೀಯವಾದ ವಿವರಣೆಗಳಿಂದಲೂ ಕೂಡಿವೆ

ಐತರೇಯಾದಿಬ್ರಾಹ್ಮಣಗಳಲ್ಲಿ ಉಕ್ತವಾಗಿರುವ ಆಪ್ರೀಪದದ ನಿಷ್ಪತ್ತಿಯನ್ನು ಗಮನಿಸಿದರೆ ಅವೆಲ್ಲವೂ ಯಜ್ಞಯಾಗಾದಿ ಕರ್ಮಾಚರಣೆಯ ದೃಷ್ಟಿಯಿಂದಲೇ ಈ ಪದವನ್ನು ಅರ್ಥಮಾಡಿಕೊಂಡು ವಿವರಿಸಿವೆಯೆಂದು ಹೇಳಬಹುದು ಉದಾಹರಣೆಗೆ—

**ತದ್ಯದಾ ಪ್ರೀಣಾತಿ ತಸ್ಮಾದಾಪ್ರಿಯೋ ನಾಮ ।**
(ಕೌ. ಬ್ರಾ. ೧೦-೩)

ತೃಪ್ತಿಪಡಿಸುವ ಸಾಧನವಾದ್ದರಿಂದ ಈ ಹೆಸರೆಂದು ಕೌಷೀತಕಿಬ್ರಾಹ್ಮಣದಲ್ಲೂ,

**ಆಪ್ರೀಭಿರಾಪ್ನುವನ್ । ತದಾಪ್ರೀಣಾಮಾಪ್ರಿತ್ವಂ ।**
(ತೈ. ಬ್ರಾ. ೨-೨-೮-೬)

ಎಂದು ಮೇಲಿನ ಅಭಿಪ್ರಾಯವನ್ನೇ ಹೇಳಿ ತೈತ್ತಿರೀಯಬ್ರಾಹ್ಮಣದಲ್ಲೂ,

**ಯದೇತಾನ್ಯಾಪ್ರಿಯ ಅಜ್ಯಾನಿ ಭವಂತಿ । ಆತ್ಮಾನಮೇವೇತ್ಯೆರಾಪ್ರೀಣಾತಿ ।**

(ತಾ ಬ್ರಾ. ೧೫-೮-೨)

ಎಂದು ತಾಂಡ್ಯಬ್ರಾಹ್ಮಣದಲ್ಲೂ ಆಪ್ರೀ ಎಂಬ ಪದದ ಸ್ವರೂಪವನ್ನು ತಿಳಿಸಿದೆ.

ಐತರೇಯಬ್ರಾಹ್ಮಣದಲ್ಲಿ ಅಗ್ನಿಷ್ಟೋಮಯಾಗಕಾಲದಲ್ಲಿ ಹೋತೃವು ಆಚರಿಸಬೇಕಾದ ಕರ್ತವ್ಯಗಳನ್ನು ನಿರ್ದೇಶಿಸುವಾಗ ಆಪ್ರಿಗಳ ವಿವರಣೆಯನ್ನು ಹೇಳಿದೆ. ಅಗ್ನಿಯನ್ನೂ ಸೋಮವನ್ನೂ ಉದ್ದೇಶಿಸಿ ಯಾಗಮಾಡಬೇಕಾದ ಪಶುವಿನ ವರ್ಣನೆಯಾದಮೇಲೆ (೨-೩) ಹನ್ನೊಂದು ಪ್ರಯಾಜಮಂತ್ರಗಳು ಉಕ್ತವಾಗಿವೆ. (೨-೪) ಆ ಸಂದರ್ಭದಲ್ಲಿ,

**ಆಪ್ರೀಭಿರಾಪ್ರೀಣಾತಿ । ತೇಜೋ ವೈ ಬ್ರಹ್ಮವರ್ಚಸಮಾಪ್ರಿಯಸ್ತೇಜಸೈವೇನಂ ತದ್ಬ್ರಹ್ಮವರ್ಚಸೇನ ಸಮರ್ಧಯತಿ ।**

(ಐ. ಬ್ರಾ. ೨-೪)

ಆಪ್ರೀಋಕ್ಕುಗಳು ತೇಜೋಮಯವಾದವೂ ಬ್ರಹ್ಮವರ್ಚಸ್ಸಿನಿಂದ ಕೂಡಿದವೂ ಆಗಿವೆ. ಅಂತಹ ಋಕ್ಕುಗಳಿಂದ (ಹೋತೃವು) ತೃಪ್ತಿಕಾರಣನಾಗುತ್ತಾನೆ ಎಂದು ಅಲ್ಲಿಯೂ ಆತ್ಮತೃಪ್ತಿಗೆ ಸಾಧನವಾಗಿರುವುದನ್ನು ತಿಳಿಸಿದೆ. ಅನಂತರ **ಸಮಿಧ್, ತನೂನಪಾತ್** ಇತ್ಯಾದಿ ದೇವತೆಗಳನ್ನು ಪ್ರಾಣಾದಿತತ್ತ್ವಗಳೊಡನೆ ತಾದಾತ್ಮ್ಯವನ್ನು ಹೊಂದಿರುವುದಾಗಿ ತಿಳಿಸಿದೆ.

ಋಕ್ಸಂಹಿತೆಯ ಬೇರೆಬೇರೆ ಮಂಡಲಗಳಲ್ಲಿ ಉಕ್ತವಾಗಿರುವ ಈ ಸೂಕ್ತಗಳನ್ನೂ ಇವುಗಳ ಫಲವನ್ನೂ ಹೇಳುತ್ತಾ ಇವುಗಳನ್ನು ಪಠಿಸಿರುವ ಋಷಿಗಳ ವಿಷಯವನ್ನೂ ಐತರೇಯಬ್ರಾಹ್ಮಣದಲ್ಲೇ ಎಲ್ಲಕ್ಕಿಂತ ಮೊದಲು ಹೇಳಿದೆ

**ತಾಭಿರ್ಯಥಋಷ್ಯಾಪ್ರೀಣೀಯಾದ್ಯದ್ಯಥಋಷ್ಯಾ ಪ್ರೀಣಾತಿ ಯಜಮಾನಮೇವ ತದ್ಬಂಧುತಾಯಾ ನೋತ್ಸೃಜತಿ ।**

(ಐ. ಬ್ರಾ. ೨-೪)

ಋಷಿಪ್ರಣೀತವಾದ ಈ ಋಕ್ಕುಗಳ ಪಠನದಿಂದ ಯಜಮಾನನನ್ನು ಯಜ್ಞಸಂಬಂಧದಿಂದ ಬಿಡಿಸದೆ ಕಾಪಾಡುತ್ತಾನೆಂದು ಈ ಋಕ್ಕುಗಳನ್ನು ಪಠಿಸುವುದರ ಫಲವನ್ನು ತಿಳಿಸಿದೆ. ಈ ಸೂಕ್ತಗಳು ಒಂದೇ ಋಷಿಯಿಂದ ದೃಷ್ಟವಾದವಲ್ಲ. ಬೇರೆ ಬೇರೆ ಋಷಿಗಳು ಈ ಸೂಕ್ತಗಳನ್ನು ತಮ್ಮ ತಮ್ಮ ವೈಯಕ್ತಿಕವಾದ ಸನ್ನಿವೇಶಗಳಲ್ಲಿ ದರ್ಶನಮಾಡಿದರು. ಆದರೂ ಸಹ ಈ ಸೂಕ್ತಗಳ ಸ್ವರೂಪವೂ, ಇವುಗಳ ಪಠನದ ಫಲವೂ ಎಲ್ಲದರಲ್ಲಿಯೂ ಒಂದೇ ವಿಧವಾಗಿ ಕಾಣುತ್ತದೆ.

ಈ ಆಪ್ರೀಸೂಕ್ತಗಳ ವಿಷಯದಲ್ಲೂ ಈ ಸೂಕ್ತಗಳ ದೇವತೆಗಳ ವಿಷಯದಲ್ಲೂ ಬ್ರಾಹ್ಮಣಾದಿ ಪ್ರಾಚೀನ ಕಾಲದಿಂದಲೇ ಅಭಿಪ್ರಾಯ ಭೇದವಿದೆಯೆಂದು ನಿರುಕ್ತಕಾರರ ವಿವರಣೆಯಿಂದ ತಿಳಿಯುತ್ತದೆ.

**ಅಥಾತ ಆಪ್ರಿಯಃ । ಆಪ್ರಿಯಃ ಕಸ್ಮಾದಾಪ್ನೋತೇಃ ಪ್ರೀಣಾತೇರ್ವಾ । ಆಪ್ರೀಭಿರಾಪ್ರೀಣಾತೀತಿ ಚ ಬ್ರಾಹ್ಮಣಂ ।**

(ನಿ. ೮–೪)

ಎಂದು ನಿರುಕ್ತಕಾರರು ಆಪ್ರೀಸೂಕ್ತಗಳ ವಿಷಯದಲ್ಲಿ ತಮ್ಮ ಅಭಿಪ್ರಾಯಕ್ಕಿಂತ ಬ್ರಾಹ್ಮಣಾದಿಗಳ ಅಭಿಪ್ರಾಯವು ಬೇರೆಯೆಂದು ತೋರಿಸಿದ್ದಾರೆ. ಅಲ್ಲದೇ, **ಕಾತ್ಥಕ್ಯ, ಶಾಕಪೂಣಿ, ಮಾಧ್ಯಮಿಕ** ಇತ್ಯಾದಿ ಋಷಿಗಳ ಅಭಿಪ್ರಾಯ

ಗಳನ್ನು ಆಗಾಗ್ಗೆ ಉದಹರಿಸಿದ್ದಾರೆ. ಕಾತ್ಥಕ್ಯಾದಿಗಳು ಯಾಜ್ಞಿಕರೇ ಆದರೂ ಸಹ ಅವರು ಬ್ರಾಹ್ಮಣಾದಿಗಳಲ್ಲಿ ಹೇಳಿರತಕ್ಕ ನಿರ್ವಚನಗಳನ್ನು ಅನೇಕ ಸಂದರ್ಭಗಳಲ್ಲಿ ಒಪ್ಪುವುದಿಲ್ಲವೆಂಬುದನ್ನು ಆಯಾ ಋಕ್ಕಿನ ವಿಶೇಷವಿಷಯ ಗಳಲ್ಲಿ ತಿಳಿಸಿದೆ. ಈ ಎಲ್ಲಾ ಅಭಿಪ್ರಾಯಗಳನ್ನೂ ತಿಳಿಸಿ ಯಾಸ್ಕರು ಕೊನೆಗೆ ತಮ್ಮ ಖಚಿತವಾದ ಅಭಿಪ್ರಾಯ ವನ್ನು ತಿಳಿಸಿದ್ದಾರೆ. ಉದಾಹರಣೆಗೆ, ಆಪ್ರೀ ದೇವತೆಗಳ ವಿಚಾರವಾಗಿ ಬ್ರಾಹ್ಮಣಾದಿಗಳಲ್ಲಿ ಹೇಳಿರುವ ಅಭಿಪ್ರಾಯ ಗಳು ಹೇಗಿವೆಯೆಂದು ಮೊದಲು ಅವನ್ನೆಲ್ಲಾ ಸಂಗ್ರಹಿಸಿದ್ದಾರೆ

**ಇತೀಮಾ ಆಪ್ರೀದೇವತಾ ಅನುಕ್ರಾಂತಾಃ । ಅಥ ಕಿಂ ದೇವತಾಃ ಪ್ರಯಾಜಾನುಯಾಜಾಃ ಆಗ್ನೇಯಾ ಇತ್ಯೇಕೇ । ಆಗ್ನೇಯಾ ವೈ ಪ್ರಯಾಜಾ ಆಗ್ನೇಯಾ ಅನುಯಾಜಾ ಇತಿ ಚ ಬ್ರಾಹ್ಮ-ಣಂ । ಛಂದೋದೇವತಾ ಇತ್ಯಪರಂ । ಛಂದಾಂಸಿ ವೈ ಪ್ರಯಾಜಾಶ್ಛಂದಾಂಸ್ಯನುಯಾಜಾ ಇತಿ ಚ ಬ್ರಾಹ್ಮಣಂ । ಋತುದೇವತಾ ಇತ್ಯಪರಂ । ಋತವೋ ವೈ ಪ್ರಯಾಜಾ ಋತವೋಽನುಯಾಜಾ ಇತಿ ಚ ಬ್ರಾಹ್ಮಣಂ । ಪಶುದೇವತಾ ಇತ್ಯಪರಂ । ಪಶವೋ ವೈ ಪ್ರಯಾಜಾಃ ಪಶವೋಽನು-ಯಾಜಾ ಇತಿ ಚ ಬ್ರಾಹ್ಮಣಂ । ಪ್ರಾಣದೇವತಾ ಇತ್ಯಪರಂ । ಪ್ರಾಣಾವೈ ಪ್ರಯಾಜಾ ಪ್ರಾಣಾ ವಾ ಅನುಯಾಜಾಃ ಇತಿ ಚ ಬ್ರಾಹ್ಮಣಂ । ಆತ್ಮದೇವತಾ ಇತ್ಯಪರಂ । ಆತ್ಮಾ ವೈ ಪ್ರಯಾಜಾಃ ಆತ್ಮಾ ವಾ ಅನುಯಾಜಾ ಇತಿ ಚ ಬ್ರಾಹ್ಮಣಂ । ಆಗ್ನೇಯಾ ಇತಿ ತು ಸ್ಥಿತಿಃ । ಭಕ್ತಿಮಾತ್ರಮಿತರಂ ।**

(ನಿ ೮-೨೨).

ಎಂದು ಆಯಾಮತವನ್ನು ಹೇಳುತ್ತಾ ಮೊದಲು,

**ತವ ಪ್ರಯಾಜಾ ಅನುಯಾಜಾಶ್ಚ ಕೇವಲ ಊರ್ಜಸ್ವಂತೋ ಹವಿಷಃ ಸಂತು ಭಾಗಾಃ ।**
**ತವಾಗ್ನೇ ಯಜ್ಞೋಽಯಮಸ್ತು ಸರ್ವಸ್ತುಭ್ಯಂ ನಮಂತಾಂ ಪ್ರದಿಶಶ್ಚತಸ್ರಃ ।**

(ಋ. ಸಂ. ೧೦-೫೧-೯)

ಎಂಬ ಋಕ್ಕನ್ನುದಹರಿಸಿ ಇದರಲ್ಲಿ ಹೇಳಿರುವಂತೆ ಪ್ರಯಾಜ ಮತ್ತು ಅನುಯಾಜ ಮಂತ್ರಗಳು ಅಗ್ನಿಯನ್ನೇ ಉದ್ದೇಶಿಸಿವೆ ಎಂದು ತಾವು ತಮ್ಮ ವಿವರಣೆಯನ್ನು ಕೊಟ್ಟು, ಅನಂತರ ಇತರ ಅಭಿಪ್ರಾಯಗಳನ್ನೂ ಹೇಳಿದ್ದಾರೆ. ಅವರಲ್ಲಿ ಬ್ರಾಹ್ಮಣ ವಾಕ್ಯದಿಂದ ಇದೇ ಅಭಿಪ್ರಾಯವು ಸಮರ್ಥಿತವಾಗುತ್ತದೆ. ಆದರೆ ಕೆಲವರು ಛಂದೋದೇವತೆ ಯನ್ನುದ್ದೇಶಿಸಿದೆಯೆಂದೂ (ಶ. ಬ್ರಾ. ೧-೩-೨-೯), ಇನ್ನು ಕೆಲವರು ಋತ್ವಾತ್ಮಕವಾದ ದೇವತೆಗಳನ್ನುದ್ದೇ ಶಿಸಿದೆಯೆಂದೂ (ಶ. ಬ್ರಾ. ೧-೩-೨-೮), ಇತರರು ಯಾಗಪಶುವನ್ನುದ್ದೇಶಿಸಿದೆಯೆಂದೂ (ಕೌ. ಬ್ರಾ. ೩-೪) ಕೆಲವರು ಪ್ರಾಣಾತ್ಮಕವಾದ ದೇವತೆಯನ್ನುದ್ದೇಶಿಸಿದೆಯೆಂದೂ (ಐ. ಬ್ರಾ. ೧-೧೧, ಶ. ಬ್ರಾ. ೧೧-೨-೭-೨೭,) ಮತ್ತು ಇನ್ನೂ ಕೆಲವರು ಆತ್ಮನನ್ನೇ ಉದ್ದೇಶಿಸಿದೆಯೆಂದೂ (ತೈ. ಸಂ. ೬-೧-೫-೪) ಹೇಳಿರುವುದನ್ನೆಲ್ಲಾ ಸಂಗ್ರಹಿಸಿ ಹೇಳಿ ಅನಂತರ ಅಗ್ನಿಯನ್ನುದ್ದೇಶಿಸಿದೆಯೆಂದು ಹೇಳುವುದೇ ಸಾಧುವಾದ ಮತವೆಂದು ತಮ್ಮ ಖಚಿತವಾದ ಅಭಿಪ್ರಾಯ ವನ್ನು ಹೇಳಿದ್ದಾರೆ.

ಕಾತ್ಯಾಯನರ ಸರ್ವಾನುಕ್ರಮಣಿಯಲ್ಲಿ ಆಪ್ರ ಮತ್ತು ಆಪ್ರೀ ಎಂಬ ವ್ಯತ್ಯಾಸವನ್ನು ತಿಳಿಸಿ (ಈ ವ್ಯತ್ಯಾಸವನ್ನು ಆಪ್ರೀಸೂಕ್ತದ ಎಂದರೆ ೧-೧೪೨ನೇ ಸೂಕ್ತದ ಕೊನೆಯಲ್ಲಿ ತಿಳಿಸಿರುತ್ತದೆ). ನರಾಶಂಸ ದೇವತೆಯನ್ನು ಉದ್ದೇಶಿಸಿರುವ ಋಕ್ಕುಗಳಿಗೆ ಆಪ್ರೀ ಮಂತ್ರಗಳೆಂದೂ, ಮತ್ತು ತನೂನಪಾತ್ ಎಂಬ ದೇವತೆಯನ್ನು

ಉದ್ದೇಶಿಸಿರುವ ಋಕ್ಕುಗಳಿಗೆ ಆಪ್ರೀ ಮಂತ್ರಗಳೆಂದೂ ಪ್ರಸಿದ್ಧಿಯಿದೆಯೆಂದು ತೋರಿಸಿದ್ದಾರೆ. ಬೃಹದ್ದೇವತೆಯಲ್ಲಿ,

ದ್ವಿತೀಯೇ ದ್ವಾದಶರ್ಚೇ ತು ಪ್ರತ್ಯೃಚಂ ಯಾಸ್ತು ದೇವತಾಃ ।
ಸ್ತೂಯಂತೇ ಹ್ಯಗ್ನಿನಾ ಸಾರ್ಧಂ ತಾಸಾಂ ನಾಮಾನಿ ಮೇ ಶೃಣು ॥
ಪ್ರಥಮಾಯಾಂ ಸ್ತುತಶ್ಚೇಧ್ಮೋ ದ್ವಿತೀಯಾಯಾಂ ತನೂನಪಾತ್ ।
ನರಾಶಂಸಸ್ತ್ರಿತೀಯಾಯಾಂ ಚತುರ್ಥ್ಯಾಂ ಸ್ತೂಯತೇ ತ್ವಿಳಃ ॥
ಬರ್ಹಿರೇವ ತು ಪಂಚಮ್ಯಾಂ ದ್ವಾರೋ ದೇವ್ಯಸ್ತತೋಽನ್ಯಯಾ ॥
ನಕ್ತೋಷಾಸಾ ತು ಸಪ್ತಮ್ಯಾಮಷ್ಟಮ್ಯಾಂ ಸಂಸ್ತುತೌ ಸಹ ।
ದೇವ್ಯಾವಿತಿ ತು ಹೋತಾರೌ ನವಮ್ಯಾವೃಚಿ ಸಂಸ್ತುತಾಃ ॥
ತಿಸ್ರೋ ದೇವ್ಯೋ ದಶಮ್ಯಾಂ ತು ಜ್ಞೇಯಸ್ತ್ವಷ್ಟೈವ ತು ಸ್ತುತಃ ।
ಏಕಾದಶ್ಯಾಂ ತು ಸೂಕ್ತಸ್ಯ ಸ್ತುತಂ ವಿದ್ಯಾದ್ವನಸ್ಪತಿಂ ॥
ದ್ವಾದಶ್ಯಾಂ ತು ಸ್ತುತಾ ದೇವೀರ್ವಿದ್ಯಾತ್ಸ್ವಾಹಾಕೃತೀರಿತಿ ।
ಸೂಕ್ತೇಽಸ್ಮಿನ್ಪ್ರತ್ಯೃಚಂ ಯಾಸ್ತು ದೇವತಾಃ ಪರಿಕೀರ್ತಿತಾಃ ॥
ತಾ ಏವ ಸರ್ವಾಸ್ವಾಪ್ರೀಷು ದ್ವಿತೀಯಾ ತು ವಿಕಲ್ಪ್ಯತೇ ।

(ಬೃ ದೇ. ೨-೧೪೬ ರಿಂದ ೧೫೧)

ಎಂದು ಇಧ್ಮಾದಿ ಎಲ್ಲಾ ದೇವತೆಗಳ ಹೆಸರನ್ನೂ ನಿರ್ದೇಶಿಸಿ ಸೂಕ್ತದ ಕ್ರಮವನ್ನೂ ಅಲ್ಲಿ ಒಂದೊಂದು ಋಕ್ಕುಗಳಲ್ಲೂ ಪ್ರತ್ಯೇಕವಾದ ದೇವತೆಯನ್ನುದ್ದೇಶಿಸಿರುವುದನ್ನೂ ತಿಳಿಸಿದ್ದಾರೆ.

ಆಪ್ರೀಸೂಕ್ತಗಳೆಷ್ಟು ಎಂಬ ವಿಷಯದಲ್ಲಿ ಹೇಳುತ್ತಾ ನಿರುಕ್ತಕಾರರು,

ಇತೀಮಾನ್ಯೇಕಾದಶಾಪ್ರೀಸೂಕ್ತಾನಿ । ತೇಷಾಂ ವಾಸಿಷ್ಠಮಾತ್ರೇಯಂ ವಾಧ್ರ್ಯಶ್ವಂ ಗಾರ್ತ್ಸ-ಮದಮಿತಿ ನಾರಾಶಂಸವಂತಿ ; ಮೈಧಾತಿಥಂ ದೈರ್ಘತಮಸಂ ಪ್ರೈಷಿಕಮಿತ್ಯುಭಯವಂತ್ಯ-ತೋಽನ್ಯಾನಿ ತನೂನಪಾತ್ವಂತಿ ತನೂನಪಾತ್ವಂತಿ ।

(ನಿ. ೮-೨೨)

ಈ ಸೂಕ್ತಗಳಲ್ಲಿ ವಸಿಷ್ಠ, ಅತ್ರಿ, ವಧ್ರ್ಯಶ್ವ ಮತ್ತು ಗೃತ್ಸಮದ ಇವರಿಂದ ದೃಷ್ಟವಾದ ಸ್ತುತಿಗಳು ನರಾಶಂಸಪರವಾದವು ; ಮೇಧಾತಿಥಿ ಮತ್ತು ದೀರ್ಘತಮಸ್ ಈ ಋಷಿಗಳಿಂದ ದೃಷ್ಟವಾದವೂ ಮತ್ತು ಪ್ರೈಷಸೂಕ್ತವೂ ಸಹ ತನೂಪಾತ್ ಮತ್ತು ನರಾಶಂಸ ಎಂಬ ಎರಡು ದೇವತೆಗಳನ್ನೂ ಉದ್ದೇಶಿಸಿದವು ; ಉಳಿದ ನಾಲ್ಕು ಸೂಕ್ತಗಳೂ ಕೇವಲ ತನೂನಪಾತ್ ಎಂಬ ದೇವತಾಪರವಾದವು. ಒಟ್ಟಿನಲ್ಲಿ (ಪ್ರೈಷಸೂಕ್ತವನ್ನೂ ಸೇರಿಸಿದರೆ) ಹನ್ನೊಂದು ಆಪ್ರೀಸೂಕ್ತಗಳು. ಇದೇ ಅಭಿಪ್ರಾಯವನ್ನು ಬೃಹದ್ದೇವತೆಯಲ್ಲಿಯೂ,

ಪ್ರೇಷ್ಯೈಃ ಸಹಾಪ್ರೀಸೂಕ್ತಾನಿ ತಾನ್ಯೇಕಾದಶ ಸಂತಿ ಚ ।
ಯಜೂಂಷಿ ಪ್ರೈಷಸೂಕ್ತಂ ವಾ ದಶೈತಾನೀತರಾಣಿ ತು ॥
ಸೌತ್ರಾಮಣ್ಯಾನಿ ತು ತ್ರೀಣಿ ಪ್ರಾಜಾಪತ್ಯಾಶ್ಚ ಮೇಧಿಕೇ ।

ಪುರುಷಸ್ಯ ತು ಯನ್ಮೇಧೇ ಯಜುಷ್ಷ್ವೇವ ತು ತಾನಿ ಷಟ್ ॥
ಅತ್ರೈವ ಪ್ರೈಷಸೂಕ್ತಂ ಸ್ಯಾನ್ನಯಜುಷ್ವಾದ್ರಿಯೇತ ತತ್ ।
ತೇಷಾಂ ಪ್ರೈಷಗತಂ ಸೂಕ್ತಂ ಯಚ್ಚ ದೀರ್ಘತಮಾ ಜಗೌ ।
ಮೇಧಾತಿಥೌ ಯದುಕ್ತಂ ಚ ತ್ರೀಣ್ಯೇವೋಭಯವಂತಿ ತು ।
ಋಷೌ ಗೃತ್ಸಮದೇ ಯಚ್ಚ ವಾಧ್ರ್ಯಶ್ವೇ ಚ ಯದುಚ್ಯತೇ ॥
ನರಾಶಂಸವದತ್ರೇಶ್ಚ ದದರ್ಶ ಚ ಯದೌರ್ವಶಃ ।
ತನೂನಪಾದಗಸ್ತ್ಯಶ್ಚ ಜಮದಗ್ನಿಶ್ಚ ಯಜ್ಜಗೌ ॥
ವಿಶ್ವಾಮಿತ್ರ ಋಷಿರ್ಯಚ್ಚ ಜಗೌ ವೈ ಕಾಶ್ಯಪೋಽಸಿತಃ ।
ಮೇಧಾತಿಥೇರ್ಋಚಾಂ ಯೋಸ್ತು ಪ್ರೋಕ್ತಾ ದ್ವಾದಶ ದೇವತಾಃ ॥
ಸಂಪದ್ಯಂತೇ ಯಥಾಗ್ನಿಂ ತಾಃ ಸಂಪದಂ ತಾಂ ನಿಬೋಧತ ।

(ಬೃ. ದೇ. ೨–೧೫೨ ರಿಂದ ೧೫೭)

ಎಂಬ ವಾಕ್ಯಗಳಲ್ಲಿ ಪ್ರೈಷಸೂಕ್ತವನ್ನು ಸೇರಿಸಿದರೆ ಒಟ್ಟು ಹನ್ನೊಂದು ಆಪ್ರೀಸೂಕ್ತಗಳೆಂದೂ ಇಲ್ಲದಿದ್ದರೆ ಹತ್ತು ಸೂಕ್ತಗಳೆಂದೂ ಹೇಳಿದೆ. ಮತ್ತು ನಿರುಕ್ತವಾಕ್ಯವನ್ನೇ ಅನುಸರಿಸಿ ನರಾಶಂಸ, ತನೂನಪಾತ್ ಇತ್ಯಾದಿದೇವತೆಗಳನ್ನುದ್ದೇಶಿಸಿದವೂ ಮತ್ತು ಮೇಧಾತಿಥ್ಯಾದಿ ಋಷಿಗಳಿಂದ ಪ್ರಣೀತವಾದವೂ ಆದ ಸೂಕ್ತಗಳ ಕ್ರಮವನ್ನು ಕೊಟ್ಟಿದೆ.

ಪ್ರೈಷಸೂಕ್ತವು ಕ್ರಮಬದ್ಧವಾಗಿಯೂ, ಎಲ್ಲಾ ಆಪ್ರೀಸೂಕ್ತಗಳ ಸಾರಾಂಶವನ್ನೂ ಒಟ್ಟಿಗೆ ಶೇಖರಿಸಿ ಒಂದು ನಿರ್ದಿಷ್ಟವಾದ ಚಿತ್ರವನ್ನು ಕೊಡತಕ್ಕದಾಗಿಯೂ ಇದೆ. ಆಪ್ರೀ ಸೂಕ್ತಗಳಲ್ಲಿ ಉದ್ದೇಶಿಸಿರುವ ದೇವತೆಗಳ ವೈಯಕ್ತಿಕವಾದ ವಿಶೇಷಣಗಳನ್ನೆಲ್ಲಾ ಒಟ್ಟಿಗೆ ಸೇರಿಸಿ ಆಯಾ ದೇವತೆಗಳ ಸ್ವರೂಪವನ್ನೂ ಕರ್ತವ್ಯವನ್ನೂ ವಿಭಾಗಿಸಿ ತಿಳಿಸುತ್ತದೆ. ಪ್ರತಿಯೊಂದು ದೇವತೆಯನ್ನು ಉದ್ದೇಶಿಸುವಾಗಲೂ ಸಹ ಮೊದಲು **ಹೋತಾ ಯಕ್ಷತ್ ।** ಎಂಬ ಒಂದು ನಿಯತವಾದ ಮಂತ್ರಭಾಗವನ್ನುಚ್ಚರಿಸಿ ಅನಂತರ ಆಯಾ ದೇವತೆಗಳನ್ನು ನಿರ್ದೇಶಿಸಿದೆ. ಮೊದಲು ಪ್ರೈಷ ಸೂಕ್ತದಲ್ಲಿ ವಿವರಿಸಿರುವ ದೇವತಾ, ದೇವತೆಯ ವಿಶೇಷಣ, ಮತ್ತು ಕರ್ತವ್ಯ ಇವುಗಳನ್ನು ಪರಿಶೀಲಿಸಿ ಅನಂತರ ಇಂತಹ ದೇವತಾತ್ಮಕವಾದ ಆಪ್ರೀಸೂಕ್ತಗಳ ಉದ್ದಿಶ್ಯವೇನು, ಅವುಗಳ ಲಕ್ಷಣಗಳೇನು, ಅವುಗಳ ಪಠನೆಗಳಿಂದ ಆಗತಕ್ಕ ಲಾಭವೇನು ಎಂಬ ವಿಷಯದಲ್ಲಿರುವ ಅಭಿಪ್ರಾಯಗಳ ಸಾಮರಸ್ಯವನ್ನೂ ಅಥವಾ ಭಿನ್ನಾಭಿಪ್ರಾಯಗಳನ್ನೂ ತಿಳಿಯಬಹುದು.

| ಸಂಖ್ಯೆ | ದೇವತಾ | ವಿಶೇಷಣಗಳು |
|---|---|---|
| ೧. | ಅಗ್ನಿಃ (ಸಮಿತ್) | ಸಮಿಧಾ, ಸುಸಮಿಧಾ, ಸಮಿದ್ಧಃ |
| ೨. | ಅಗ್ನಿಃ (ತನೂನಪಾತ್) | ಅದಿತೇಃ ಗರ್ಭಂ ಭುವನಸ್ಯ ಗೋಪಾಂ |
| ೩. | ಅಗ್ನಿಃ (ನರಾಶಂಸಃ) | ನೃಶಸ್ತ್ರಂ ನೃಃ ಪ್ರಣೇತ್ರಂ |
| ೪. | ಅಗ್ನಿಃ (ಇಳಃ) | ಈಳಿತೋ ದೇವಃ, ಹವ್ಯವಾಟ್, ಅಮೂರಃ |
| ೫. | ಬರ್ಹಿಃ | ಸುಷ್ಟರೀಮ, ಊರ್ಣಮ್ರದ, ದೇವೇಭ್ಯಃ ಸ್ವಾಸಸ್ಥಂ |
| ೬. | ದೇವೀರ್ದ್ವಾರಃ | ಋಷ್ವಾಃ, ಕವಷ್ಯಃ, ಕೋಷಧಾವನೀಃ |

| | | |
|---|---|---|
| ೭. | ಉಷಾಸಾನಕ್ತಾ | ಬೃಹತೀ, ಸುಪೇಶಸಾ ಪತಿಭ್ಯಃ ಯೋನಿಂ ಕೃಣವಾನ್ತೇ ಸಂಸ್ಮಯಮಾನೇ |
| ೮. | ದೈವ್ಯಾ ಹೋತಾರಾ | ಮಂದ್ರಾ, ಪೋತಾರಾ, ಕವೀ, ಪ್ರಚೇತಸಾ |
| ೯. | ತಿಸ್ರೋ ದೇವೀಃ | ಅಪಸಾಂ ಅಪಸ್ತಮಾಃ ದೇವೀಃ |
| ೧೦. | ತ್ವಷ್ಟಾ | ಅಚಿಷ್ಟಃ, ಅಪಾಕಃ, ರೇತೋಧಾಃ, ವಿಶ್ರವಸ್, ಯಶೋಧಾಃ, ಪುರುರೂಪಃ, ಅಕಾಮಕರ್ಶನ |
| ೧೧. | ವನಸ್ಪತಿಃ | ಧಿಯೋ ಜೈಷ್ಠಾ, ಸ್ವದಾನ್ ಸ್ವಧಿತಿಃ, ದೇವೇಭ್ಯಃ ಋತುಥಾ ಹವ್ಯವಾಟ್, ಯಜ್ಞಸ್ಯ, ಆಯುಃ ಕಲ್ಪಮಾನಃ |
| ೧೨. | ಅಗ್ನಿಃ (ಸ್ವಾಹಾ) | ಆಜ್ಯಸ್ಯ ಮೇದಸಃ ಸ್ವಾಹಾ |

ಈ ರೀತಿಯಲ್ಲಿ **ಪ್ರೈಷ** ಸೂಕ್ತವು ಸಕಲವಾದ ಆಪ್ರೀಸೂಕ್ತಗಳ ಮುಖ್ಯಾಂಶಗಳನ್ನು ಸಂಗ್ರಹಿಸಿ ಒಂದು ಕ್ರಮಬದ್ಧವಾದ ಚಿತ್ರವನ್ನು ಕೊಟ್ಟಿದೆ. ಈ ಆಪ್ರೀಸೂಕ್ತಗಳ ರಚನಾಕ್ರಮಗಳನ್ನೂ ಅವುಗಳ ಶೈಲಿಗಳನ್ನೂ ಮತ್ತು ಯಜ್ಞಕಾರ್ಯದಲ್ಲಿ ಅವುಗಳ ಪ್ರಯೋಜನಗಳೆ ಅಲ್ಲದೇ ಅವುಗಳ ಕಾವ್ಯಾತ್ಮಕವಾದ ಸ್ವರೂಪವನ್ನೂ ಅವುಗಳ ವಿಷಯದಲ್ಲಿ ಆಧುನಿಕ ಪಂಡಿತರು ಹೇಳಿರುವ ಅಭಿಪ್ರಾಯಗಳನ್ನೂ ಸಹ ಕೊನೆಯಲ್ಲಿ ಹೇಳಲಾಗಿದೆ.

ಆಪ್ರೀಸೂಕ್ತಗಳ ಅವಶ್ಯಕತೆ ಮತ್ತು ಉದ್ದಿಶ್ಯಗಳನ್ನು ಕುರಿತು Max Muller ಎಂಬ ಪಂಡಿತನು ಮೊದಲು ಅವು ದೇವತೆಗಳನ್ನಾಗಲಿ ಅಥವಾ ಬಂಧುಗಳನ್ನಾಗಲಿ ಸಮಾಧಾನಗೊಳಿಸುವ ಸಾಧನವೆಂದು ಹೇಳಿ ಅನಂತರ ಅವುಗಳ ರಹಸ್ಯಾರ್ಥಗಳನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳುವುದೇ ಶ್ರಮವೆಂದು ಹೀಗೆ ಹೇಳಿದ್ದಾನೆ.

" It is possible that Apri hymns may have been the songs of reconciliation and that they were called Apri, i.e., appeasing hymns, not because of their appeasing the anger of Gods but the enmities of the members of the same or different families. However it may be, they indeed prove an active intercourse between the ancient families of India long before the final collection of the ten books..............................The original purpose of the Apri hymns and the motive for allowing the priests to choose, are difficult to discover ".

(Ancient Sanskrit Literature p. 246-7)

ಯಾಗಾದಿಕರ್ಮಗಳಲ್ಲಿ ಆಪ್ರೀಸೂಕ್ತಗಳಿಗಿರುವ ಸ್ಥಾನಮಾನಗಳ ವಿಷಯದಲ್ಲಿಯೂ, ದೇವತೆಗಳ ವಿಷಯದಲ್ಲಿಯೂ ಪ್ರಾಚೀನವೈದಿಕಪಂಡಿತರಲ್ಲಿಯೇ ಅಭಿಪ್ರಾಯಭೇದವಿದ್ದರೂ ಸಹ ಆಪ್ರೀಸೂಕ್ತಗಳೆಲ್ಲದರಲ್ಲೂ ಅನೇಕ ಸಮಾನಧರ್ಮಗಳಿರುವುವು ಅವುಗಳ ರಚನೆಯಲ್ಲಿಯೂ ವಿಷಯಗಳಲ್ಲಿಯೂ ಒಂದು ನಿರ್ದಿಷ್ಟವಾದ ಮಾದರಿಯೂ ಸಂಸ್ಕಾರವೂ ಇರುವುದರಿಂದ ಎಲ್ಲವೂ ಒಟ್ಟಿಗೆ ರಚಿಸಲ್ಪಟ್ಟವೆಂದಾಗಲಿ ಅಥವಾ ಒಂದಕ್ಕೊಂದಕ್ಕೆ ಸಂಬಂಧವಿಲ್ಲವೆಂದಾಗಲಿ ಹೇಳುವುದಕ್ಕಾಗುವುದಿಲ್ಲ. ನಾಲ್ಕನೆಯ ಮತ್ತು ಆರನೆಯ ಮಂಡಲಗಳ ಋಷಿಗಳನ್ನು ಬಿಟ್ಟು ಉಳಿದ ಮಂಡಲಗಳ ಋಷಿಗಳೆಲ್ಲರೂ ತಮ್ಮ ತಮ್ಮ ಮನೆತನದ ಸಾಂಪ್ರದಾಯಿಕವಾದ ಆಪ್ರೀ ಸೂಕ್ತಗಳನ್ನು ಹೊಂದಿದ್ದಾರೆ. ಎಂಟನೇ ಮಂಡಲದ **ಕಾಣ್ವ** ಸಂತತಿಯವರಿಗೆ ಪ್ರತ್ಯೇಕವಾದ ಆಪ್ರಿಸೂಕ್ತವಿಲ್ಲದಿದ್ದರೂ ಸಹ ಅವರು ೧-೧೩ ನೇ

ಸೂಕ್ತವನ್ನೇ ಉಪಯೋಗಿಸಿಕೊಳ್ಳುವುದು ಪ್ರಸಿದ್ಧವಾಗಿದೆ. ಆದರೆ ನಾಲ್ಕು ಮತ್ತು ಆರನೇ ಮಂಡಲದ ದ್ರಷ್ಟೃಗಳಾದ ಋಷಿಗಳಿಗೆ ಇದರ ಆವಶ್ಯಕತೆಯು ಇಲ್ಲದಿರುವುದಕ್ಕೆ ಕಾರಣವನ್ನು ಹೇಳುವುದಕ್ಕಾಗುವುದಿಲ್ಲ. ಅಥವಾ ವಾಮದೇವ ಮತ್ತು ಭಾರದ್ವಾಜಸಂತತಿಯವರು ಈ ಸ್ಥಾನದಲ್ಲಿ ಬೇರೆ ಇನ್ನಾವ ಮಂತ್ರಗಳನ್ನಾಗಲಿ (ಭಾರದ್ವಾಜರು ಆಂಗಿರಸಗೋತ್ರೋತ್ಪನ್ನರಾದುದರಿಂದ ಪ್ರಸಕ್ತವಾದ ಸೂಕ್ತವನ್ನೇ) ಪಠಿಸುತ್ತಿದ್ದಿರಬಹುದು.

ಆಪ್ರೀ ಮತ್ತು ಆಪ್ರ ಎಂಬ ಸಂಜ್ಞೆಯಿಂದ ಸೂಚಿತವಾಗುವ ಮಂತ್ರಗಳು—

ಕಾತ್ಯಾಯನರು ಸರ್ವಾನುಕ್ರಮಣಿಕೆಯಲ್ಲಿ **ಏತದಾಪ್ರೀಸೂಕ್ತಂ ಏತೇನಾನ್ಯಾನ್ಯುಕ್ತದೈವತಾನಿ ಏಕಾದಶಕಾನಿ ತು ನಾರಾಶಂಸಾನಿ ಆಪ್ರಶಬ್ದೋಕ್ತಾನಿ ಆತನೂನಸಾತ್ವಂತಿ** । ನರಾಶಂಸ ದೇವತೆಯನ್ನುದ್ದೇಶಿಸಿ ಪಠಿಸುವಮಂತ್ರಗಳು ಆಪ್ರವೆಂಬ ಹೆಸರಿನಿಂದಲೂ, ತನೂನಪಾತ್ ದೇವತೆಯನ್ನುದ್ದೇಶಿಸಿ ಪಠಿಸುವ ಮಂತ್ರಗಳು ಆಪ್ರೀ ಎಂಬ ಹೆಸರಿನಿಂದಲೂ ಪ್ರಸಿದ್ಧವಾಗಿವೆಯೆಂದು ಹೇಳಿದ್ದಾರೆ. ಆದರೆ ನಿರುಕ್ತಾದಿಗಳಲ್ಲಿ ಈ ವ್ಯತ್ಯಾಸವನ್ನು ತೋರಿಸುವ ವಾಕ್ಯಗಳೇ ಇಲ್ಲ.

ಆಪ್ರೀ ಎಂಬ ಹೆಸರು ದೇವತಾಪರವಾದುದೇ ಅಥವಾ ಸೂಕ್ತ ಪರವಾದುದೇ ಎಂಬ ಪ್ರಶ್ನೆಯೂ ಸಹಜವಾದುದಾಗಿದೆ. ಸೂಕ್ಷ್ಮವಾಗಿ ನೋಡಿದರೆ ಮೊದಲು ಸೂಕ್ತಪರವಾಗಿದ್ದು ಅನಂತರ ದೇವತಾನಿರ್ದೇಶಕವಾದ ಮಂತ್ರಗಳಾಗಿದ್ದಿರಬಹುದೆಂದು ಹೇಳಬಹುದು

**ಕರ್ಮದ ಸ್ವರೂಪ**— ಆಪ್ರೀ ಸೂಕ್ತದಿಂದ ನಿರ್ದಿಷ್ಟವಾದ ಯಜ್ಞಕರ್ಮವು ಬ್ರಾಹ್ಮಣಾದಿಗಳಿಂದ ಸೂಚಿತವಾಗುವಂತೆ ಗೌಣವಾದ ಸ್ಥಾನವನ್ನು ಹೊಂದಿರಲಿಲ್ಲವೆಂದೂ, ಮುಖ್ಯವಾಗದ ಸ್ಥಾನವನ್ನೇ ಹೊಂದಿದ್ದಿತೆಂದೂ ಹೇಳಬಹುದು. ಪ್ರಯಾಜಾಹುತಿಗಳಿಗೂ ಈ ಕರ್ಮದಲ್ಲಿ ನಿರ್ದಿಷ್ಟವಾದ ಆಹುತಿಗಳಿಗೂ ಇರುವ ವ್ಯತ್ಯಾಸವು ಅನೇಕ ಕಡೆಗಳಲ್ಲಿ ತಿಳಿಯುತ್ತದೆ. ೧-೧೩-೮, ೧-೧೮೮-೭, ೧-೧೪೨-೮, ೩-೪-೮, ೫-೫-೭, ೯-೫-೮ ಈ ಋಕ್ಕುಗಳಲ್ಲಿ **ಇಮಂ ಯಜ್ಞಂ** ಎಂಬ ಮಂತ್ರವೂ, ೫-೫-೨, ೩-೪-೫ ನೇ ಋಕ್ಕುಗಳಲ್ಲಿ **ನಃ ಯಜ್ಞಂ** ಎಂಬುದೂ ೧-೧೩-೨, ೭-೨-೭, ೧೦-೧೧೦-೮ ನೇ ಋಕ್ಕುಗಳಲ್ಲಿ **ಅಸ್ಮಿನ್ ಯಜ್ಞೇ** ಎಂಬುದೂ ಸಹ ಯಜ್ಞಕರ್ಮದಲ್ಲಿಯಾಗಲಿ ಅಥವಾ ಆಹುತ್ಯರ್ಪಣದಲ್ಲಾಗಲಿ ಪ್ರಧಾನವಾದ ಸ್ಥಾನವನ್ನು ತೋರಿಸುವುವೇ ಹೊರತು ಪ್ರಯೋಜಾಹುತಿಗಳಂತೆ ಗೌಣವಾದ ಸ್ಥಾನವನ್ನು ತೋರಿಸುವುದಿಲ್ಲ

**ತ್ರಿರ್ದಿವಾ ಅಮಿಮಿಕ್ಷತಿ** (೧-೧೪೨-೩); **ತ್ರಿರಹನ್ನಾಯಜಂತೇ** (೩-೪-೨) ಎಂಬ ಮಂತ್ರಗಳಿಂದ ಈ ಕರ್ಮವು ದಿನದಲ್ಲಿ ಮೂರು ಕಾಲಗಳಲ್ಲಿ ನೆರವೇರಿಸಲ್ಪಡತಕ್ಕದ್ದೆಂದೂ; **ಸಮಿದ್ಧೋ ಅದ್ಯ ಮನುಷೋ ದುರೋಣೇ** (೧೦-೧೧೦-೧) ಎಂಬುದರಿಂದ ಇದಕ್ಕಾಗಿ ಪ್ರತ್ಯೇಕವಾದ ಯಜ್ಞಗೃಹವಿಲ್ಲವೆಂದೂ, ಸಾಧಾರಣವಾದ ಮನೆಯಲ್ಲಿಯೇ ಅಗ್ನಿಯನ್ನು ಸ್ಥಾಪಿಸಬಹುದೆಂದೂ, ತಿಳಿಯುತ್ತದೆ.

**ಸಮಿತ್ಸಮಿತ್ಸುಮನಾ ಬೋಧ್ಯಸ್ಮೇ ಶುಚಾಶುಚಾ ಸುಮತಿಂ ರಾಸಿ ವಸ್ವಃ ।**
**ಆ ದೇವ ದೇವಾನ್ಯಜಥಾಯ ವಕ್ಷಿ ಸಖಾ ಸಖೀನ್ತ್ಸುಮನಾ ಯಕ್ಷ್ಯಗ್ನೇ ॥**

(ಋ. ಸಂ. ೩-೪-೧)

ಎಂಬ ಋಕ್ಕಿನಲ್ಲಿ ವಿಶ್ವಾಮಿತ್ರ ಋಷಿಯು ಕಾವ್ಯರೂಪದಲ್ಲಿ ವರ್ಣಿಸುವ ಅಗ್ನಿಯ ಪ್ರಜ್ವಲನವೂ ಮತ್ತು

**ಜುಷಸ್ವ ನಃ ಸಮಿಧಮಗ್ನೇ ಅದ್ಯ ಶೋಚಾ ಬೃಹದ್ಯಜತಂ ಧೂಮಮೃಣ್ವನ್ ।**
**ಉಪ ಸ್ಪೃಶ ದಿವ್ಯಂ ಸಾನು ಸ್ತೂಪೈಃ ಸಂ ರಶ್ಮಿಭಿಸ್ತತನಃ ಸೂರ್ಯಸ್ಯ ॥**

(ಋ. ಸಂ. ೭-೨-೧)

ಎಂಬ ಋಕ್ಕಿನಲ್ಲಿ ಅಗ್ನಿಕಿರಣವೂ ಸೂರ್ಯಕಿರಣವೂ ಒಟ್ಟಿಗೆ ಸೇರಿಕೊಂಡು ಪ್ರಸರಿಸುವ ವರ್ಣನವೂ ಸಹ ಮಂತ್ರಗಳ ಕಾವ್ಯಾತ್ಮಕಸ್ವರೂಪವನ್ನು ತಿಳಿಸುತ್ತವೆ. ಇದೇ ವರ್ಣನೆಗಳು ಈ ಯಾಗವು ಪ್ರಾತಃಕಾಲದಲ್ಲಿ ಪ್ರಾರಂಭಿಸಲ್ಪಡ ತಕ್ಕದ್ದು ಎಂಬುದನ್ನು ತಿಳಿಸುತ್ತವೆ.

**ಪೂರ್ವ್ಯಂ ತಂತುಂ ತನುಷ್ವ** (೧-೧೪೨-೧) ಎಂಬ ಮಂತ್ರವು ಈ ಯಾಗವು ಪ್ರಾಚೀನವಾದುದೆಂದು ತಿಳಿಸುತ್ತದೆ. ಈ ಯಜ್ಞವು ನಿರ್ವಿಘ್ನವಾಗಿ ನೆರವೇರಲು **ದೇವಹೋತೃವಾದ ಅಗ್ನಿಯ** ಸಹಾಯದ ಅವಶ್ಯಕತೆ ಯಿರುವುದರಿಂದ ಅಗ್ನಿಗೆ ಆಜ್ಯಾಹುತಿಯನ್ನು ಮೊದಲು ಅರ್ಪಿಸಬೇಕು. ಇದರಿಂದ ಅಗ್ನಿತೃಪ್ತಿಯಾದ ನಂತರ ಅಗ್ನಿಯು ಅಂತರಿಕ್ಷದ ಕಡೆಗೆ ಪ್ರಸರಿಸುತ್ತಾನೆ. (೭-೨-೧) ಅನಂತರ ದೇವತೆಗಳನ್ನು ಕರೆತರುತ್ತಾನೆ. ಅಗ್ನಿಯು ಮಾನವರ ಸಖನಾಪುದರಿಂದ (೩-೪-೧) ಈ ಉಪಕಾರವನ್ನು ಮಾಡುತ್ತಾನೆ.

**ಕೃತಿಕೌಶಲ್ಯ**—ಆಪ್ರೀಸೂಕ್ತಗಳು ಒಂದಕ್ಕಿಂತ ಒಂದು ಬೇರೆಯಾಗಿ, ಬೇರೆ ಬೇರೆ ಕಾಲಗಳಲ್ಲಿ ನಿರ್ಮಿತ ವಾಗಿದ್ದರೂ ಮತ್ತು ಬೇರೆ ಬೇರೆ ಋಷಿಸಂತತಿಗಳಿಗೆ ಸಂಬಂಧಿಸಿದ್ದಿರೂ ಸಹ ಈ ಎಲ್ಲಾ ಸೂಕ್ತಗಳಲ್ಲಿಯೂ ಒಂದೇ ವಿಧವಾದ ವಾಕ್ಸರಣಿಯೂ ಧ್ಯೇಯವೂ ಇರುವುದರಿಂದ ಉಳಿದ ಎಲ್ಲಾ ವಿಧವಾದ ಸೂಕ್ತಗಳಿಗಿಂತಲೂ ಒಂದು ವಿಧ ವಾಗಿ ಅಧಿಕವಾದ ಸಾಮರಸ್ಯವೂ ಸ್ವಾರಸ್ಯವೂ ಇವುಗಳ ವೈಶಿಷ್ಟ್ಯವನ್ನು ತೋರಿಸುತ್ತದೆ.

(ಎರಡು ಸೂಕ್ತಗಳನ್ನುಳಿದು ಉಳಿದ) ಎಲ್ಲಾ ಸೂಕ್ತಗಳಲ್ಲೂ ಸಹ ಋಕ್ಕುಗಳ ಸಂಖ್ಯೆಯು ಹನ್ನೊಂದಿರು ವುದೂ ಮತ್ತು **ಸಮಿದ್** ಎಂಬ ಪದದಿಂದ ಸೂಕ್ತವು ಪ್ರಾರಂಭವಾಗಿ **ಸ್ವಾಹಾ** ಎಂಬುದರೊಂದಿಗೆ ಮುಕ್ತಾಯ ವಾಗುವುದೂ ಕಾವ್ಯದೃಷ್ಟಿಯಿಂದಲೂ ಕಲಾದೃಷ್ಟಿಯಿಂದಲೂ ಒಂದು ನಿಯತವಾದ ನಿಯಮವನ್ನು ತೋರಿಸುತ್ತದೆ.

ಛಂದಸ್ಸಿನ ವಿಷಯದಲ್ಲಿ ಅಂತಹ ನಿರ್ಬಂಧವಿಲ್ಲ. ೧-೧೩, ೧-೧೮೮, ೫-೫, ೯-೫ ಈ ಸೂಕ್ತಗಳು **ಗಾಯತ್ರೀಛಂದಸ್ಸಿನಲ್ಲೂ**, ೧-೧೪೨ ನೇ ಸೂಕ್ತವು **ಅನುಷ್ಟುಪ್**ಛಂದಸ್ಸಿನಲ್ಲೂ, ೨-೩, ೩-೪, ೭-೨, ೧೦-೭೦ ಈ ಸೂಕ್ತಗಳು **ತ್ರಿಷ್ಟುಪ್**ಛಂದಸ್ಸಿನಲ್ಲೂ ರಚಿತವಾಗಿವೆ.

**ದೇವಾನ್ ಆವಹ, ದೇವಾನ್ ವಕ್ಷಿ, ವಿಪ್ರಾ ಯಜ್ಞೇಷು ಮಾನಸೇಷು ಕಾರುಃ**, ಇತ್ಯಾದ್ಯನೇಕ ಮಂತ್ರಭಾಗಗಳು ಪುನರಾವರ್ತಿತವಾಗಿವೆ.

———— :o: ————

### ಸಾಯಣಭಾಷ್ಯಂ

**ಸಮಿದ್ಧೋ ಅದ್ಯೇತ್ಯೇಕಾದಶರ್ಚಂ ನವಮಂ ಸೂಕ್ತಮಾಗಸ್ತ್ಯಂ ಸರ್ವಂ ಗಾಯತ್ರಂ । ಸಮಿ- ದ್ಧಾಗ್ನಿತನೂನಪಾದಾದಯ ಏಕಾದಶ ಪ್ರತ್ಯೃಚಂ ದೇವತಾ ಯಾಸ್ಕೇನ ಕಿಂದೇವತಾಃ ಪ್ರಯೋಜಾ ಇತ್ಯು- ಪಕ್ರಮ್ಯಾಗ್ನೇಯಾಃ ಪ್ರಯಾಜಾ ಋತುದೇವತಾಶ್ಛಂದೋದೇವತಾಃ ಪಶುದೇವತಾಃ ಪ್ರಾಣದೇವತಾ ಆತ್ಮ-**

ದೇವತಾ ಇತ್ಯಾದಿನಾ ಬಹೂನ್ಪಕ್ಷಾನುಪನ್ಯಸ್ಯ ಬ್ರಾಹ್ಮಣಾನಿ ಚ ಪ್ರದರ್ಶ್ಯಾಗ್ನೇಯಾ ಏವೇತಿ ಸಿದ್ಧಾಂತಿತಂ। ನಿ. ೮-೨೨ । ಸಮಿದ್ಧೋ ಆಪ್ರಿಯ ಇತ್ಯನುಕ್ರಾಂತಂ ॥ .ಪಶಾವಗಸ್ತ್ಯಾನಾಮೇಕಾದಶಪ್ರಯಾಜರೂಪಮಿದ-ಮಾಪ್ರೀಸೂಕ್ತಂ ॥

ಅನುವಾದವು—ಸಮಿದ್ಧೋ ಅದ್ಯ ಎಂಬ ಈ ಸೂಕ್ತವು ಇಪ್ಪತ್ತನಾಲ್ಕನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು. ಗಾಯತ್ರೀ ಛಂದಸ್ಸು, ಸಮಿದ್ಧಾಗ್ನಿ, ತನೂನಪಾತ್ ಮೊದಲಾದ ಆಪ್ರೀ ಸೂಕ್ತದ ಹನ್ನೊಂದು ದೇವತೆಗಳು, ಈ ಸೂಕ್ತದ ಹನ್ನೊಂದು ಋಕ್ಕುಗಳಿಗೂ ಇರುವರು. ಆಪ್ರೀ ಸೂಕ್ತಕ್ಕೆ ದೇವತೆಗಳಾರು ಎಂದು ಯಾಸ್ಕರು ಪ್ರಶ್ನಿಸಿ ಅದಕ್ಕೆ ಉತ್ತರವಾಗಿ—ಪ್ರಯಾಜಾಃ ಎಂದು ಪ್ರಾರಂಭಿಸಿ, ಪ್ರಯಾಜಮಂತ್ರಗಳು ಅಗ್ನಿಸಂಬಂಧವಾದವು, ಇದರ ಮಂತ್ರಗಳಿಗೆ ಋತುದೇವತೆಗಳು, ಛಂದೋದೇವತೆಗಳು, ಪಶುದೇವತೆಗಳು, ಪ್ರಾಣದೇವತೆಗಳು, ಆತ್ಮದೇವತೆಗಳು ಎಂದು ಮೊದಲಾಗಿ ಅನೇಕವಾದ ಪಕ್ಷಾಂತರವಾದವಿವಾದಗಳನ್ನು ವಿಮರ್ಶಿಸಿ ಅದಕ್ಕೆ ಸಮಾಧಾನವಾಗಿ ಬ್ರಾಹ್ಮಣ ವಾಕ್ಯಗಳನ್ನು ಉದಾಹರಣೆಗಾಗಿ ಕೊಟ್ಟು ಕೊನೆಗೆ ಈ ಮಂತ್ರಗಳೆಲ್ಲವೂ ಅಗ್ನಿಸಂಬಂಧವಾದವುಗಳೇ ಸರಿ ಎಂದು ಸಿದ್ಧಾಂತ ಮಾಡಿರುತ್ತಾರೆ. (ನಿ. ೮-೨೨) ಅನುಕ್ರಮಣಿಕೆಯಲ್ಲಿಯೂ ಸಮಿದ್ಧ ಆಪ್ರಿಯಃ ಎಂದು ಹೇಳಿರುವುದು. ಅಗಸ್ತ್ಯ ಋಷಿಯ ವಂಶಸ್ಥರು ಪಶುಹೋಮದಲ್ಲಿ ಉಪಯೋಗಿಸಬೇಕಾದ ಹನ್ನೊಂದು ಪ್ರಯಾಜಹೋಮಗಳಿಗಾಗಿ ಈ ಆಪ್ರೀ ಸೂಕ್ತದ ವಿನಿಯೋಗವಿರುವುದು.

---

॥ ಓಂ ॥

## ಸೂಕ್ತ—೧೮೮

॥ ಮಂಡಲ—೧ ॥ ಅನುವಾಕ—೨೪ ॥ ಸೂಕ್ತ—೧೮೮ ॥
॥ ಅಷ್ಟಕ— ೨ ॥ ಅಧ್ಯಾಯ— ೫ ॥ ವರ್ಗ-೮-೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೧೧ ॥

॥ ಋಷಿಃ—ಅಗಸ್ತ್ಯಃ ॥

॥ ದೇವತಾ—(ಆಪ್ರಿಯಃ) ಆಪ್ರೀಸೂಕ್ತಂ—೧. ಇಧ್ಮಃ ಸಮಿದ್ಧೋಽಗ್ನಿರ್ವಾ । ೨. ತನೂನಪಾತ್ । ೩. ಇಳಃ । ೪. ಬರ್ಹಿಃ । ೫. ದೇವೀರ್ದ್ವಾರಃ । ೬. ಉಷಾಸಾನಕ್ತಾ । ೭. ದೈವ್ಯಾಹೋತಾರಾ ಪ್ರಾಚೇತಸಾ । ೮. ತಿಸ್ರೋ ದೇವ್ಯಃ ಸರಸ್ವತೀಳಾಭಾರತ್ಯಃ । ೯. ತ್ವಷ್ಟಾ । ೧೦. ವನಸ್ಪತಿಃ । ೧೧. ಸ್ವಾಹಾಕೃತಯಃ ॥

॥ ಛಂದಃ—ಗಾಯತ್ರೀ ॥

---

ಸಂಹಿತಾಪಾಠಃ

ಸಮಿದ್ಧೋ ಅದ್ಯ ರಾಜಸಿ ದೇವೋ ದೇವೈಃ ಸಹಸ್ರಜಿತ್ ।

ದೂತೋ ಹವ್ಯಾ ಕವಿರ್ವಹ ॥ ೧ ॥

ಪದಪಾಠಃ

ಸಂऽಇದ್ಧಃ । ಅದ್ಯ । ರಾಜಸಿ । ದೇವಃ । ದೇವೈಃ । ಸಹಸ್ರऽಜಿತ್ ।
ದೂತಃ । ಹವ್ಯಾ । ಕವಿಃ । ವಹ ॥ ೧ ॥

ಸಾಯಣಭಾಷ್ಯಂ

ಹೇ ಅಗ್ನೇ ದೇವೈರ್ಹವ್ಯವಹರ್ತೃಭಿರ್ಋತ್ವಿಗ್ಭಿಃ ಸಮಿದ್ಧಃ ಸಮ್ಯಗ್ದೀಪಿತೋ ದೇವೋऽತ ದೀಪ್ಯ-ಮಾನಃ ಸಮಿದ್ಧೈರ್ವಾ ದೇವೈಃ ಸಹಿತಃ ಸಮಿದ್ಧಃ ಸನ್ನದ್ಯಾಸ್ಮಿನ್ಯಾಗದಿನೇ ರಾಜಸಿ । ಈಶಿಷೇ । ಹೇ ಸಹಸ್ರಜಿತ್ ಸಹಸ್ರಸ್ಯ ಧನಸ್ಯೈತತ್ಸಂಖ್ಯಾಕಾನಾಂ ಶತ್ರೂಣಾಂ ವಾ ಜೇತಃ ತತೋ ದೂತೋ ದೇವಾನಾಂ ದೂತಸ್ತದ್ಯಜ್ಞಾದಿವಾರ್ತಾಹರ ಆಹ್ವಾತಾ ವಾ । ಅಗ್ನಿರ್ದೇವಾನಾಂ ದೂತ ಆಸೀದಿತಿ ಶ್ರುತೇಃ । ಕವಿಃ ಕ್ರಾಂತದರ್ಶೀ ಈದೃಶಸ್ತ್ವಂ ಹವ್ಯಾಸ್ಮದೀಯಾನಿ ಹವೀಂಷಿ ವಹ । ದೇವೇಭ್ಯಃ ಪ್ರಾಪಯ ॥

॥ ಪ್ರತಿಪದಾರ್ಥ ।

(ಎಲೈ ಅಗ್ನಿಯೇ) ದೇವೈಃ—ಯಜ್ಞನಿರತರಾದ ಋತ್ವಿಕ್ಕುಗಳಿಂದ । ಸಮಿದ್ಧಃ—ಪ್ರಜ್ವಲಿತನಾಗಿ । ದೇವಃ—ಪ್ರಕಾಶಮಾನನಾದ ನೀನು । ಅದ್ಯ—ಈ ಯಾಗದಿನದಲ್ಲಿ । ರಾಜಸಿ—ಪ್ರಭುವಾಗಿದ್ದೀಯೆ । ಸಹಸ್ರ-ಜಿತ್—ಸಹಸ್ರಸಂಖ್ಯಾಕವಾದ ಧನವನ್ನು ಹೊಂದಿರುವವನೂ ಅಥವಾ ಸಹಸ್ರ ಸಂಖ್ಯಾಕರಾದ ಶತ್ರುಗಳನ್ನು ಜಯಿಸಿರುವವನೂ । ದೂತಃ—ದೇವದೂತನಾಗಿರುವವನೂ । ಕವಿಃ—ಕ್ರಾಂತದರ್ಶಿಯಾದವನೂ ಆದ ನೀನು । ಹವ್ಯಾ—ನಮ್ಮಿಂದ ದತ್ತವಾದ ಹವಿಸ್ಸುಗಳನ್ನು । ವಹ—ದೇವತೆಗಳಿಗೆ ವಹಿಸು.

ಭಾವಾರ್ಥ

ಎಲೈ ಅಗ್ನಿಯೇ, ಯಜ್ಞನಿರತರಾದ ಋತ್ವಿಕ್ಕುಗಳಿಂದ ಪ್ರಜ್ವಲಿತನಾಗಿ ಪ್ರಕಾಶಮಾನನಾದ ನೀನು ಈ ಯಾಗದಿನದಲ್ಲಿ ಪ್ರಭುವಾಗಿದ್ದೀಯೆ. ಸಹಸ್ರಸಂಖ್ಯಾಕವಾದ ಧನವನ್ನು ಹೊಂದಿರುವವನೂ ಶತ್ರುಗಳನ್ನು ಜಯಿಸಿರುವವನೂ, ದೇವದೂತನಾಗಿರುವವನೂ, ಕ್ರಾಂತದರ್ಶಿಯಾದವನೂ ಆದ ನೀನು ನಮ್ಮಿಂದ ದತ್ತವಾದ ಹವಿಸ್ಸುಗಳನ್ನು ದೇವತೆಗಳಿಗೆ ವಹಿಸು.

## English Translation

You shine to-day, divine conqueror of thousands, kindled by the priests: do you, who are the sapient messenger (of the gods), convey (to them) our oblation.

। ವಿಶೇಷವಿಷಯಗಳು ।

**ದೈವ್ಯೈಃ—ವ್ಯವಹರ್ತೃಭಿರ್ಋತ್ವಿಗ್ಭಿಃ** । ಯಜ್ಞಕರ್ಮದಲ್ಲಿ ಭಾಗವಹಿಸುತ್ತಿರುವ ಋತ್ವಿಗ್ಜನರಿಂದ ಎಂದು ಭಾಷ್ಯಕಾರರು ಈ ಶಬ್ದಕ್ಕೆ ಅರ್ಥವನ್ನು ವಿವರಿಸಿದ್ದಾರೆ.

**ಸಹಸ್ರಜಿತ್—ಸಹಸ್ರಸ್ಯ ಧನಸ್ಯ, ಏತಾವತ್ಸಂಖ್ಯಾಕಾನಾಂ ಶತ್ರೂಣಾಂ ವಾ ಜೇತಾ** । ಸಾವಿರಾರು ಧನಗಳಿಗೆ ಒಡೆಯನು, ಪ್ರಭುವು ಅಥವಾ ಸಾವಿರಾರು ಶತ್ರುಜನರನ್ನು ಗೆಲ್ಲುವವನು. ಇಲ್ಲಿ ಸಹಸ್ರಶಬ್ದಕ್ಕೆ ಸಾವಿರ ಎಂದು ಒಂದು ನಿರ್ದಿಷ್ಟಸಂಖ್ಯೆಯ ಪ್ರಮಾಣವೆಂದರ್ಥವಲ್ಲ; ಅನೇಕ, ಬಹಳ ಎಂಬರ್ಥದಲ್ಲಿ ಸಹಸ್ರಶಬ್ದದ ಪ್ರಯೋಗ ವಿರುವುದು.

**ದೂತಃ**—ಮನುಷ್ಯರು ಅಗ್ನಿಯಲ್ಲಿ ಹೋಮಮಾಡಿದುದನ್ನು ಅಗ್ನಿಯು ದೇವತೆಗಳಿಗೆ ಸಲ್ಲಿಸುತ್ತಾನೆ ಮತ್ತು ದೇವತೆಗಳನ್ನು ಯಜ್ಞಭೂಮಿಗೆ ಕರೆತರುತ್ತಾನೆ. ಆದುದರಿಂದ ಅಗ್ನಿಗೆ **ಹವ್ಯವಾಟ್** ಮತ್ತು **ದೂತ** ಎಂಬ ವಿಶೇಷಣಗಳಿವೆ.

**ಅಗ್ನಿಂ ದೂತಂ ವೃಣೀಮಹೇ ಹೋತಾರಂ ವಿಶ್ವವೇದಸಂ** ।
(ಋ. ಸಂ. ೧-೧೨-೧)

ಎಂಬ ಋಕ್ಕಿನಲ್ಲಿ ದೇವತೆಗಳನ್ನು ಯಜ್ಞಭೂಮಿಗೆ ಕರೆತರುವ ಮತ್ತು ಅವರನ್ನು ಆಹ್ವಾನಮಾಡುವ ದೂತನೆಂದು ಪ್ರಾರ್ಥಿಸಲಾಗಿದೆ.

**ಅಗ್ನಿಮಗ್ನಿಂ ಹವೀಮಭಿಃ ಸದಾ ಹವಂತ ವಿಶ್ಪತಿಂ । ಹವ್ಯವಾಹಂ ಪುರುಪ್ರಿಯಂ** ॥
(ಋ. ಸಂ. ೧-೧೨-೨)

**ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ । ಹವ್ಯವಾಟ್ ಜುಹ್ವಾಸ್ಯಃ** ॥
(ಋ. ಸಂ. ೧-೧೨-೬)

ಇತ್ಯಾದಿಋಕ್ಕುಗಳಲ್ಲಿ ಅಗ್ನಿಯು ದೇವತೆಗಳಿಗೆ ಹವ್ಯವನ್ನು ವಹಿಸುವ ದೂತನೆಂದು ಹೇಳಿದೆ. ಆದುದರಿಂದ ಪ್ರಕೃತಋಕ್ಕಿನಲ್ಲಿಯೂ **ದೂತೋ ಹವ್ಯಾ ಕವಿರ್ವಹ** । ಎಂದು ಅಗ್ನಿಯನ್ನು ಸಂಬೋಧಿಸಲಾಗಿದೆ.

**ಕವಿಃ**—ಯಾಸ್ಕರು **ಮೇಧಾವೀ ಕವಿಃ ಕ್ರಾಂತದರ್ಶನೋ ಭವತಿ, ಕವತೇರ್ವಾ** (ನಿ. ೧೨-೧೩) ಎಂದು ಕವಿಶಬ್ದಕ್ಕೆ ನಿರ್ವಚನವನ್ನು ಹೇಳಿದ್ದಾರೆ. ಕವಿಶಬ್ದಕ್ಕೆ ಭಾಷ್ಯಕಾರರು ಅನೇಕ ಸಂದರ್ಭಗಳಲ್ಲಿ ಕವಿಃ—ಅತೀಂದ್ರಿಯಜ್ಞಃ ಎಂದರೆ ಸಾಧಾರಣ ಮನುಷ್ಯರಿಗೆ ಗೋಚರವಾಗದ ಎಂದರೆ ತಿಳಿಯದ ವಿಷಯವನ್ನು ತನ್ನ ಶಕ್ತಿ ಸಾಮರ್ಥ್ಯದಿಂದ ತಿಳಿದುಕೊಳ್ಳುವ ಪುರುಷನು ಎಂದು ಹೇಳಿದ್ದಾರೆ. ಕವಿಯ ಸ್ವರೂಪವೇನು ಮತ್ತು ಅವನ ಶಕ್ತಿಯೇನು ? ಯಾವ ಸ್ವರೂಪ ಮತ್ತು ಶಕ್ತಿಗಳನ್ನು ತಿಳಿಸಲು ಋಕ್ಸಂಹಿತೆಯಲ್ಲಿಕವಿಶಬ್ದದ ಪ್ರಯೋಗವಿದೆ ಎಂಬುದನ್ನು ಸಹ ಹಿಂದೆ ಸೂಕ್ಷ್ಮವಾಗಿ ತಿಳಿಸಿದೆ. ಗೂಢವಾಗಿ ಅಡಗಿ ಲೋಕದ ದೃಷ್ಟಿಗೆ ಗೋಚರವಾಗದಿರುವ ಅಂಶಗಳನ್ನೂ ತನ್ನ ಂತರ್ದೃಷ್ಟಿಯಿಂದ ಅರಿತು ಲೋಕದ ದೃಷ್ಟಿಗೂ ತಿಳಿಯುವಂತೆ ಮಾಡಬಲ್ಲ ಸಾಮರ್ಥ್ಯವುಳ್ಳ ಪುರುಷನು ಎಂಬರ್ಥದಲ್ಲಿ ಈ ಕವಿಶಬ್ದದ ಪ್ರಯೋಗವಿದೆ.

**ಸಮಿದ್ಧಃ—ಸಮ್ಯಗ್ದೀಪಿತಃ ಏತನ್ನಾಮಕಃ ತ್ವಂ । ಸಮಿದ್ಧಃ** ಎಂಬ ಹೆಸರಿನಿಂದ ಪ್ರಖ್ಯಾತನಾದ ಎಂದು ಸಾಯಣರು ವಿವರಿಸಿದ್ದಾರೆ. ಆಪ್ರೀಸೂಕ್ತದಲ್ಲಿ ಪ್ರಥಮಸ್ಥಾನವನ್ನು ಹೊಂದಿರುವ ಸಮಿದ್ಧಾಗ್ನಿಯನ್ನು ಉದ್ದೇಶಿಸಿದೆ.

**ಇಧ್ಮೋ ಯಃ ಸರ್ವಮೇವಾಗ್ನಿರಯಂ ಹೀಧ್ಮಃ ಸಮಿಧ್ಯತೇ ।**
**ಧ್ಮಾತೇರ್ವೈತತ್ಕೃತಂ ರೂಪಂ ಧ್ಮಾತೋ ಹೀಧ್ಮಃ ಸಮಿಧ್ಯತೇ ॥**
(ಬೃ. ದೇ. ೨-೧೮೮)

ಕಾಷ್ಠರೂಪವಾದ ಇಧ್ಮಕ್ಕೂ ಸರ್ವವ್ಯಾಪಿಯಾದ ಅಗ್ನಿಗೂ ಇಲ್ಲಿ ತಾದಾತ್ಮ್ಯವನ್ನು ಹೇಳಿದೆ ಧ್ಮಾ ಎಂಬ ಧಾತುವಿನಿಂದ ಇಧ್ಮಶಬ್ದವು ನಿಷ್ಪನ್ನವಾಗಿದೆ. ಊದಿದನಂತರ ಪ್ರಜ್ವಲಿತವಾಗುವುದರಿಂದ ಈ ಹೆಸರು ಎಂದು ಬೃಹದ್ದೇವತಾಕಾರರು ಇಧ್ಮ ಸಮಿದ್ಧ ಎಂಬ ಪದಗಳ ನಿರ್ವಚನವನ್ನು ಹೇಳಿದ್ದಾರೆ. ಈ ನಿರ್ವಚನವು ನಿರುಕ್ತಕಾರರ ವಿವರಣೆಯನ್ನನುಸರಿಸಿದೆ. ನಿರುಕ್ತದಲ್ಲೂ,

**ತಾಸಾಮಿಧ್ಮಃ ಪ್ರಥಮಮಾಗಾಮೀ ಭವತಿ । ಇಧ್ಮಃ ಸಮಿಂಧನಾತ್ ।**
(ನಿ. ೮-೫)

ಎಂದು ಆಪ್ರೀಸೂಕ್ತದ ಪ್ರಥಮದೇವತೆಯ ವಿಷಯವಾಗಿ ಹೇಳಿದ್ದಾರೆ. ತೈತ್ತಿರೀಯ ಬ್ರಾಹ್ಮಣದಲ್ಲೂ ಪ್ರೈಷ-ಸೂಕ್ತದ ಆರಂಭದಲ್ಲಿ

**ಹೋತಾ ಯಕ್ಷದಗ್ನಿಗ್‌ಂ ಸಮಿಧಾ ಸಮಿದ್ಧಂ ಸುಷಮಿಧಾ ನಾಭಾ ಪೃಥಿವ್ಯಾಃ ಸಂಗಥೇ ವಾಮಸ್ಯ ।**
(ತೈ ಬ್ರಾ. ೩-೬-೨-೧)

ಎಂದು ಸಮಿಧಾಖ್ಯವಾದ ಮತ್ತು ಪ್ರಥಮಪ್ರಯಾಜದೇವತೆಯಿಂದೊಡಗೂಡಿದ ಅಗ್ನಿಯನ್ನುದ್ದೇಶಿಸಿ ಯಾಗಮಾಡಿರೆಂದು ಸಂಬೋಧಿಸಿದೆ.

ಇಲ್ಲಿ ಇನ್ನೊಂದು ವಿಷಯವನ್ನು ಗಮನಿಸಬೇಕಾಗಿದೆ. ಇಧ್ಮವೆಂಬ ಅಂಕಿತನಾಮವು ಆಪ್ರೀಸೂಕ್ತಗಳಲ್ಲಿ ಬರುವುದಿಲ್ಲ. **ಪ್ರೈಷ** ಸೂಕ್ತದಲ್ಲೂ ಸಹ ಈ ನಾಮವಿಲ್ಲ. ಸರ್ವಾನುಕ್ರಮಣಿಯಲ್ಲಿ ಮಾತ್ರ—

**ಸುಸಮಿದ್ಧ ಇತೀಧ್ಮ ಸಮಿದ್ಧೋ ವಾ ಅಗ್ನಿ............ಇತಿ ಪ್ರತ್ಯೃಚಂ ದೇವತಾಃ ।**

ಎಂದು ನಿರ್ದೇಶಿಸಿದೆ. ಐತರೇಯಬ್ರಾಹ್ಮಣದಲ್ಲೂ ಈ ಪದದ ಪ್ರಯೋಗವು ಈ ಸನ್ನಿವೇಶದಲ್ಲಿಲ್ಲದಿರುವಾಗ **ಶೌನಕರೂ, ಕಾತ್ಯಾಯನರೂ** ಇದನ್ನು ಪಯೋಗಿಸಿರುವುದರಲ್ಲಿ ನಿರುಕ್ತಕಾರರನ್ನು ಅನುಸರಿಸಿರುವುದು ಗೊತ್ತಾಗುತ್ತದೆ. ಅಲ್ಲದೆ **ಸಮಿದ್ಧ** ಅಥವಾ **ಸುಸಮಿದ್ಧ**ವೆಂಬ ವಿಶೇಷಣವು ಏಳು ಸೂಕ್ತಗಳಲ್ಲೂ **ಸಮಿಧ್** ಎಂಬ ವಿಶೇಷಣವು ಋ. ಸಂ ೩-೪-೧ ; ೭-೨-೧ ; ೧೦-೭೦-೧ ಎಂಬ ಉಳಿದ ಮೂರು ಸೂಕ್ತಗಳಲ್ಲೂ ಉಪಯೋಗಿಸಲ್ಪಟ್ಟಿದೆ.

ಸಮಿದ್ಧಾಖ್ಯವಾದ ಈ ಅಗ್ನಿಯು ದೇವತೆಗಳನ್ನು ಆಹ್ವಾನಿಸಬೇಕಾದುದು ಮೊದಲನೆಯ ಕರ್ತವ್ಯ. ೧-೧೩-೧, ೧-೧೪೨-೧, ೩-೪-೧, ೧೦-೧೧೦-೧ ಎಂಬ ಸೂಕ್ತಗಳ ಪ್ರಾರಂಭದ ಋಕ್ಕುಗಳಲ್ಲಿ **ಸುಸಮಿದ್ಧೋ ನ ಆ ವಹ ದೇವಾ ಅಗ್ನೇ ಹವಿಷ್ಮತೇ** (ಋ. ಸಂ. ೧-೧೩-೧) ಎಂಬ ಪ್ರಾರ್ಥನೆಯಿಂದ ಅಗ್ನಿಯ ಕರ್ತವ್ಯವನ್ನು ಸೂಚಿಸಿದೆ. ಇಷ್ಟೇ ಅಲ್ಲದೇ ಹವಿರಾದಿಗಳನ್ನು ವಹಿಸಬೇಕೆಂದೂ ಪ್ರಾರ್ಥಿಸಿದೆ.

ಈ ದೇವತೆಯು ಅಗ್ನಿಯೇ ಅಲ್ಲವೇ ಎಂಬ ವಿಷಯದಲ್ಲಿ ಮೊದಲಿನಿಂದಲೂ ಅಭಿಪ್ರಾಯಭೇದವಿದ್ದೇ ಇದೆ. ಈ ಅಭಿಪ್ರಾಯಭೇದವನ್ನು ನಿರುಕ್ತಕಾರರೂ ಉದಹರಿಸಿ ಅನಂತರ ತಮ್ಮ ಅಭಿಪ್ರಾಯವನ್ನು ಹೇಳುತ್ತಾರೆ.

**ಯಜ್ಞೇಧ್ಮ ಇತಿ ಕಾತ್ಥಕ್ಯಃ** (ನಿ. ೮-೫), **ಅಗ್ನಿರಿತಿ ಶಾಕಪೂಣಿಃ** (೮-೫) ಎಂದು ಆಯಾ ಋಷಿಗಳ ಮತವನ್ನು ತಿಳಿಸಿ ಅನಂತರ **ಆಗ್ನೇಯ ಇತಿ ತು ಸ್ಥಿತಿಃ** (ನಿ. ೮-೨೨) ಎಂದು ತಮ್ಮ ಅಭಿಪ್ರಾಯವನ್ನೂ ಹೇಳಿದ್ದಾರೆ. ಐತರೇಯ ಬ್ರಾಹ್ಮಣದಲ್ಲಿ—

**ಸಮಿಧೋ ಯಜತಿ । ಪ್ರಾಣಾ ವೈ ಸಮಿಧಃ । ಪ್ರಾಣಾ ಹೀದಂ ಸರ್ವಂ ಸಮಿಂಧತೇ ಯದಿದಂ ಕಿಂಚ ಪ್ರಾಣಾನೇವ ತತ್ಪ್ರೀಣಾತಿ ಪ್ರಾಣಾನ್ಯಜಮಾನೇ ದಧಾತಿ ।**

(ಐ ಬ್ರಾ. ೨-೪)

ಎಂಬ ವಾಕ್ಯಗಳಿಂದ **ಸಮಿಧ್** ಮತ್ತು **ಪ್ರಾಣ** ಇವೆರಡಕ್ಕೂ ತಾದಾತ್ಮ್ಯವನ್ನು ಹೇಳಿದೆಯಾದರೂ ಕೂಡ ಉಳಿದ ಅನೇಕ ಆಧಾರಗಳಿಂದ ಈ ದೇವತೆಯು **ಅಗ್ನಿಯೇ** ಆಗಿರಬೇಕೆಂದು ಹೇಳಬಹುದು

ವ್ಯಾಕರಣಪ್ರಕ್ರಿಯಾ

**ರಾಜಸಿ**—ರಾಜೃ ದೀಪ್ತೌ ಧಾತು. ಲಟ್ ಮಧ್ಯಮಪುರುಷ ಏಕವಚನಾಂತರೂಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಹಸ್ರಜಿತ್**—ಸಹಸ್ರಂ ಜಯತೀತಿ ಸಹಸ್ರಜಿತ್. ಜಿ ಜಯೇ ಧಾತು. **ಕ್ವಿಪ್ ಚ** (ಪಾ ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯಪಿತಿಕೃತಿತುಕ್** (ಪಾ. ಸೂ. ೬-೧-೭೧) ಸೂತ್ರದಿಂದ ಧಾತುವಿಗೆ ತುಕಾಗಮ. **ಗತಿಕಾರಕೋಪಪದಾತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಇಲ್ಲಿ ಸಂಬುಧ್ಯಂತರೂಪ. **ಆಮಂತ್ರಿತಸ್ಯಚ** ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ದೂತಃ**—ದು ಗತೌ. ಧಾತು. **ದುತನಿಭ್ಯಾಂದೀರ್ಘಶ್ಚ** (ಉ. ಸೂ. ೩-೩೭೦) ಎಂಬುದರಿಂದ ಕ್ತ ಪ್ರತ್ಯಯ. ಧಾತುವಿಗೆ ದೀರ್ಘ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವಹ**—ವಹ ಪ್ರಾಪಣೇ ಧಾತು. **ಲೋಟ್** ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

———:o:———

ಸಂಹಿತಾಪಾಠಃ

ತನೂನಪಾದೃತಂ ಯತೇ ಮಧ್ವಾ ಯಜ್ಞಃ ಸಮಜ್ಯತೇ ।
ದಧತ್ಸಹಸ್ರಿಣೀರಿಷಃ ॥ ೨ ॥

॥ ಪದಪಾಠಃ ॥

ತನೂಽನಪಾತ್ । ಋತಂ । ಯತೇ । ಮಧ್ವಾ । ಯಜ್ಞಃ । ಸಂ । ಅಜ್ಯತೇ ।
ದಧತ್ । ಸಹಸ್ರಿಣೀಃ । ಇಷಃ ॥ ೨ ॥

ಸಾಯಣಭಾಷ್ಯಂ

**ತನೂನಪಾದ್ಯಜ್ಞಶರೀರಸ್ಯ ನಪಾತಯಿತಾ । ಯದ್ವಾ । ಆಪೋಽತ್ರ ತನ್ವ ಉಚ್ಯಂತ ಇತ್ಯುಕ್ತತ್ವಾದಪಾಂ ನಪಾತಯಿತಾ ತಾಸಾಂ ನಪ್ತಾ ವಾ । ಅದ್ಭ್ಯ ಓಷಧಯಃ ಓಷಧೀಭ್ಯೋಽಗ್ನಿರಿತಿ ನಪ್ತೃತ್ವಂ ।**

**ಯಜ್ಞಃ ಪೂಜ್ಯಃ । ಯಜ್ಞನಿರ್ವಾಹಕತ್ವಾದ್ವಾ ಯಜ್ಞಃ । ಈದೃಶೋಽಗ್ನಿರ್ಋತಂ ಯಜ್ಞಂ ಯತೇ । ಗಚ್ಛತೇ । ಅನುತಿಷ್ಠತೇ । ಯಜಮಾನಾಯ ತದಭಿಮತಾರ್ಥಂ । ಮಧ್ವಾ ಮಧುರೇಣಾಜ್ಯಸೋಮಾದಿ-ದ್ರವ್ಯೇಣ ಸಮಜ್ಯತೇ । ಕಿಂ ಕುರ್ವನ್ನಯಂ । ಸಹಸ್ರಿಣೀರೇತತ್ಸಂಖ್ಯಾಕಾನೀಷೋಽನ್ನಾನಿ ದಧದ್ಯಜ-ಮಾನೇಭ್ಯೋ ಧಾರಯನ್ ॥**

### ಪ್ರತಿಪದಾರ್ಥ

**ತನೂನಪಾತ್**—ತನೂನಪಾತ್ ಎಂಬ ಹೆಸರಿನಿಂದ ಪ್ರಸಿದ್ಧನಾದವನೂ । **ಯಜ್ಞಃ**—ಪೂಜ್ಯನಾದವನೂ ಆದ ಅಗ್ನಿಯು । **ಸಹಸ್ರಿಣೀಃ**—ಸಹಸ್ರಸಂಖ್ಯಾಕವಾದ । **ಇಷಃ**—ಅನ್ನವನ್ನು । **ದಧತ್**—ಧರಿಸಿಕೊಂಡು । **ಋತಂ**—ಯಜ್ಞವನ್ನು । **ಯತೇ**—ಆಚರಿಸುವ ಯಜಮಾನನಿಗಾಗಿ । **ಮಧ್ವಾ**—ಮಧುರವಾದ ಆಜ್ಯಾದಿ ದ್ರವ್ಯಗಳಿಂದ । **ಸಮಜ್ಯತೇ**—(ಹವಿಸ್ಸನ್ನು) ಸೇರಿಸುತ್ತಾನೆ.

### ಭಾವಾರ್ಥ

ತನೂನಪಾತ್ ಎಂಬ ಹೆಸರಿನಿಂದ ಪ್ರಸಿದ್ಧನಾದವನೂ, ಪೂಜ್ಯನೂ ಆದ ಅಗ್ನಿಯು ಸಹಸ್ರಸಂಖ್ಯಾಕವಾದ ಅನ್ನವನ್ನು ಧರಿಸಿಕೊಂಡು ಯಜ್ಞವನ್ನು ಆಚರಿಸುವ ಯಜಮಾನನಿಗಾಗಿ ಮಧುರವಾದ ಆಜ್ಯಾದಿ ದ್ರವ್ಯಗಳಿಂದ ಹವಿಸ್ಸನ್ನು ಸೇರಿಸುತ್ತಾನೆ.

## English Translation

The adorable Tanunapat proceeds to the rite, and combines with the oblation, bearing (for the sacrificer) infinite (abundance of) food.

### ವಿಶೇಷವಿಷಯಗಳು

**ಋತಂ**—ಇಲ್ಲಿ ಭಾಷ್ಯಕಾರರು ಋತ ಶಬ್ದಕ್ಕೆ ಯಜ್ಞವೆಂಬ ಅರ್ಥವನ್ನು ಸ್ವೀಕರಿಸಿದ್ದಾರೆ. ಯಾಸ್ಕರು ತಮ್ಮ ನಿರುಕ್ತದಲ್ಲಿ—

**ನ ಯಾತವ ಇಂದ್ರ ಜೂಜುವುರ್ನೋ ನ ವಂದನಾ ಶವಿಷ್ಠ ವೇದ್ಯಾಭಿಃ ।**
**ಸ ಶರ್ಧದರ್ಯೋ ವಿಷುಣಸ್ಯ ಜಂತೋರ್ಮಾ ಶಿಶ್ನದೇವಾ ಅಪಿ ಗುರ್ಋತಂ ನಃ ॥**

(ಋ ಸಂ. ೭-೨೧-೫)

ಎಂಬ ಋಕ್ಕನ್ನುದಾಹರಿಸಿ ಋತ ಶಬ್ದಕ್ಕೆ **ಸತ್ಯಂ ವಾ ಯಜ್ಞಂ ವಾ** (ನಿ. ೪-೧೯) ಎಂದು ಅರ್ಥವನ್ನು ವಿವರಿಸಿದ್ದಾರೆ. ಋತ ಶಬ್ದಕ್ಕೆ ಅನೇಕಾರ್ಥಗಳಿರುವುವು. ಪ್ರಕೃತ ಋಕ್ಕಿನಲ್ಲಿ ಯಜ್ಞವೆಂಬ ಅರ್ಥವು ಸಮಂಜಸವಾಗಿರುವುದು.

**ತನೂನಪಾತ್**—ಯಜ್ಞಶರೀರಸ್ಯ ನಪಾತಯಿತಾ ಎಂದರೆ (ತನು) ಯಜ್ಞ ಶರೀರವನ್ನು ನಾಶಮಾಡದಿರುವವನು ಎಂದರೆ ಯಜ್ಞಸಂರಕ್ಷಕನು ಎಂದು ಒಂದು ವಿಧವಾದ ಅರ್ಥವನ್ನೂ, ಯದ್ವಾ । ಆಪೋಽತ್ರ ತನ್ವ ಉಚ್ಯಂತ ಇತ್ಯುಕ್ತತ್ವಾದಪಾಂ ನಪಾತಯಿತಾ ತಾಸಾಂ ನಪ್ತಾ ವಾ । ಅದ್ಭ್ಯಃ ಓಷಧಯಃ ಓಷಧೀಭ್ಯೋಽಗ್ನಿರಿತಿ ನಪ್ತೃತ್ವಂ । ಅಥವಾ ಆಪಃ ಎಂದರೆ ಇಲ್ಲಿ ಶರೀರವೆಂದು ಅರ್ಥವನ್ನಿಟ್ಟುಕೊಳ್ಳಬೇಕು. ಎಂದರೆ ಆಪಃ ಉದಕಗಳ ನಪ್ತೃ

(ಮೊಮ್ಮಗ) ಎಂದರ್ಥವು. ಅದು ಹೇಗೆಂದರೆ, ಉದಕಗಳಿಂದ (ವೃಷ್ಟ್ಯಾದಿ ಉದಕಗಳಿಂದ) ಓಷಧಿ ವನಸ್ಪತಿಗಳು ಉತ್ಪನ್ನವಾಗುವುವು. ಆ ಓಷಧಿ ವನಸ್ಪತಿಗಳಿಂದ (ಅರಣಿ ಎಂಬ ಮರದ ತುಂಡುಗಳಿಂದ) ಅಗ್ನಿಯು ಉತ್ಪನ್ನನಾಗುವನು. ಆದುದರಿಂದ ಅಗ್ನಿಯು ಅಪಾಂ-ಉದಕಗಳಿಗೆ ನಪ್ತೃವು ಎಂದಭಿಪ್ರಾಯವು. ತನೂನಪಾತ್ ಮತ್ತು ಅಪಾಂ ನಪಾತ್ ಎಂಬ ಎರಡು ಶಬ್ದಗಳಿಗೂ ಒಂದೇ ಅರ್ಥವಿರುವುದೆಂದು ನಾವು 144-146 ನೇ ಪೇಜುಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ

**ತನೂನಪಾತ್**—ಈ ಪದಕ್ಕೆ ಸಾಯಣರು ನಿರುಕ್ತದ ಆಧಾರದಮೇಲೆ ಎರಡುವಿಧವಾದ ಅರ್ಥಗಳನ್ನು ಹೇಳಿದ್ದಾರೆ. ಮೊದಲನೆಯನಾಗಿ **ತನೂನಪಾತ್ ಆಜ್ಯಂ ಇತಿ ಕಾತ್ಥಕ್ಯಪಕ್ಷೇ ತನ್ವೋ ಗಾವೋ ಭೋಗಾನಾಂ ತಾಸು ಜಾಯಮಾನತ್ವಾತ್ । ತಾಭ್ಯಃ ಉತ್ಪನ್ನಂ ಕ್ಷೀರಂ ಕ್ಷೀರಾತ್ಸರ್ಪಿಃ ಇತಿ ಆಜ್ಯಸ್ಯ ನಪ್ತೃತ್ವಂ । ತದ್ವಾನ್ ಯಜ್ಞಃ ।** ತನೂನಪಾತ್ ಎಂದರೆ ಆಜ್ಯವೆಂಬ ಕಾತ್ಥಕ್ಯರ ಅರ್ಥವನ್ನು ಪರಿಗ್ರಹಿಸಿದರೆ, ಆಗ ತನು ಶಬ್ದಕ್ಕೆ ಗೋವೆಂದೂ, ಅದರಿಂದ ಉತ್ಪನ್ನವಾದ ಕ್ಷೀರದಿಂದ ಆಜ್ಯೋತ್ಪತ್ತಿಯಾಗುವುದರಿಂದ ತನೂನಪಾತ್ ಎಂದರೆ ಆಜ್ಯ. ಅಥವಾ ಆಜ್ಯಯುತವಾದ ಯಜ್ಞವೆಂದೂ ಅರ್ಥಮಾಡಿದ್ದಾರೆ ಈ ಸಂದರ್ಭದಲ್ಲಿ **ನಪಾದಿತ್ಯನಂತರಾಯಾಃ ಪ್ರಜಾಯಾ ನಾಮಧೇಯಂ ನಿರ್ಣತತಮಾ ಭವತಿ** (ನಿ. ೮-೫) ಎಂಬ ನಿರುಕ್ತಕಾರರ ವಾಕ್ಯದಿಂದ ನಪಾತ್ ಎಂಬ ಶಬ್ದಕ್ಕೆ ಪೌತ್ರನೆಂಬರ್ಥವಾಗುವುದರಿಂದ ಇಲ್ಲಿಯೂ ಗೋಜನ್ಯವಾವ ಕ್ಷೀರದಿಂದ ಉತ್ಪನ್ನವಾದ ಆಜ್ಯವೆಂದರ್ಥ. ಎರಡನೆಯದಾಗಿ, **ಅಗ್ನಿಪಕ್ಷೇ ಆಪಸ್ತನ್ವ ಉಚ್ಯಂತೇ । ತಾಭ್ಯಃ ಓಷಧಿವನಸ್ಪತಯಃ, ತೇಭ್ಯೋಽಗ್ನಿರಿತಿ ನಪ್ತೃತ್ವಂ । ಆರಣೀಭ್ಯಾಂ ಇತಿ ಭಾವಃ ।** ತನು ಶಬ್ದಕ್ಕೆ ನೀರು ಎಂದು ಅರ್ಥ ಅದರಿಂದ ಓಷಧಿ ವನಸ್ಪತಿಗಳು (ಅರಣಿಗಳು) ಉತ್ಪನ್ನವಾಗಿ ಅವುಗಳಿಂದ ಅಗ್ನಿಜನನವಾಗುವುದರಿಂದ ತನೂನಪಾತ್ ಎಂದು ಹೆಸರು ಎಂಬುದಾಗಿ ಎರಡು ವಿಧವಾದ ಅರ್ಥಗಳನ್ನು ಹೇಳಿದ್ದಾರೆ. ಬೃಹದ್ದೇವತೆಯಲ್ಲಿ,

**ಅಯಂ ತನೂನಪಾದಗ್ನಿರಸೌ ಹಿ ತನನಾತ್ತನುಃ ।**
**ತತಸ್ತು ಮಧ್ಯಮೋ ಜಜ್ಞೇ ಸ್ಥಾನೇಽಯಂ ಮಧ್ಯಮಾತ್ತತಃ ॥**
**ಅನಂತರಾಂ ಪ್ರಜಾಮಾಹುರ್ನಪಾದಿತಿ ಕೃಪಣ್ಯವಃ ।**
**ನಪಾದಮುಷ್ಯ ಚೈವಾಯಂ ಆಗ್ನಿಸ್ತೇನ ತನೂನಪಾತ್ ।**

(ಬೃ ದೇ. ೨-೭೭ ರಿಂದ ೨೮)

**ತನೂನಪಾದಯಂ ತ್ವೇವ ನಾಮ್ನಾ ಯಚ್ಛತ್ವಸೌ ತನುಂ ।**
**ನಪಾದಿತಿ ಪ್ರಜಾ ಮಾಹುರಮುತೋಽಸ್ಯ ಚ ಸಂಭವಂ ।**

(ಬೃ. ದೇ. ೩-೧)

ಈ ಪಾರ್ಥಿವಾಗ್ನಿಯು ದಿವ್ಯಲೋಕದ ಅಗ್ನಿಗೆ ನಪಾತ್ ಪೌತ್ರನು ; ಹೇಗೆಂದರೆ, ದಿವ್ಯಾಗ್ನಿಯು ಪ್ರಸರಣಶಕ್ತಿಯುತ (ತನನಾತ್) ನಾದುದರಿಂದ ತನುವೆಂಬ ಪರ್ಯಾಯನಾಮದಿಂದ ಕರೆಯಲ್ಪಡುತ್ತಾನೆ. ಆತನಿಂದ ಅಂತರಿಕ್ಷಸ್ಥವಾದ ವಿದ್ಯುದ್ರೂಪವಾದ ಅಗ್ನಿಯೂ, ಅವನಿಂದ ಈ ಪಾರ್ಥಿವಾಗ್ನಿಯೂ ಉತ್ಪನ್ನವಾಗುವುದರಿಂದ ಪಾರ್ಥಿವಾಗ್ನಿಗೆ

**ತನೂನಪಾತ್** ಎಂದು ಹೆಸರು. ತನ್ನ ದೇಹದಿಂದ ತಾನೇ ಪ್ರಸರಿಸಿ ಈ ರೂಪದಲ್ಲಿ ಉತ್ಪನ್ನನಾದುದರಿಂದಲೂ ಸಹ **ತನೂನಪಾತ್** ಎಂಬ ಹೆಸರೆಂದು ವಿವರಿಸಿದೆ.

**ಸಹಸ್ರಿಣೀಃ ಇಷಃ**—ಅನೇಕವಿಧವಾದ ಅನ್ನಗಳನ್ನು ಅಥವಾ ಆಹಾರಗಳನ್ನು ಎಂದಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ತನೂನಪಾತ್**—ತನುಂ ನಪಾತಯತಿ ಇತಿ ತನೂನಪಾತ್. ಪೃಷಾದಿ ಪಾಠದಿಂದ ಆದ್ಯುದಾತ್ತಸ್ವರವನ್ನು ಹೊಂದುತ್ತದೆ.

**ಯತೇ**—ಇಣ್ ಗತೌ. ಧಾತು. ಲಟಿಗೆ ಶತ್ರಾದೇಶ. **ಇಣೋಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿಗೆ ಯಣಾದೇಶ. **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಚತುರ್ಥೀ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಮಧ್ವಾ**—**ಜಸಾದಿಷು ಛಂದಸಿ ವಾ ವಚನಮ್** ಎಂಬವಚನದಿಂದ ನಾಭಾವಾದಿಗಳು ಬರುವುದಿಲ್ಲ. ಯಣಾದೇಶ.

**ಅಜ್ಯತೇ** ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು. ಧಾತು. ಕರ್ಮಣಿಯಲ್ಲಿ ಲಟ್ **ಸಾರ್ವಧಾತುಕೇಯಕ್** (ಪಾ. ಸೂ. ೩-೧-೬೭) ಎಂಬುದರಿಂದ ಯಕ್ ಬಂದಾಗ ಕಿತ್ತಾದುದರಿಂದ **ಅನಿದಿತಾಂಹಲಉಪಧಾ**—ಸೂತ್ರದಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಧತ್**—ಡುಧಾಞ್ ಧಾರಣಪೋಷಣಯೋಃ ಧಾತು ಲಟಿಗೆ ಶತ್ರಾದೇಶ **ಅಭ್ಯಸ್ತಾನಾಮಾದಿಃ**—(ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸಹಸ್ರಿಣೀಃ**—ಸಹಸ್ರಂ ಆಸಾಂ ಅಸ್ತಿ ಇತಿ ಸಹಸ್ರಿಣ್ಯಃ. **ಅತಇನಿಠನೌ** ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ಸ್ತ್ರೀತ್ವದಲ್ಲಿ ನಾಂತವಾದುದರಿಂದ **ಋನ್ನೇಭ್ಯೋಙೀಪ್** ಎಂಬುದರಿಂದ ಙೀಪ್. ದ್ವಿತೀಯಾ ಬಹುವಚನಾಂತರೂಪ.

---

ಸಂಹಿತಾಪಾಠಃ

ಆಜುಹ್ವಾನೋ ನ ಈಡ್ಯೋ ದೇವಾँ ಆ ವಕ್ಷಿ ಯಜ್ಞಿಯಾನ್ ।
ಅಗ್ನೇ ಸಹಸ್ರಸಾ ಅಸಿ ॥ ೩ ॥

। ಪದಪಾಠಃ ।

ಆऽಜುಹ್ವಾನಃ । ನಃ । ಈಡ್ಯಃ । ದೇವಾನ್ । ಆ । ವಕ್ಷಿ । ಯಜ್ಞಿಯಾನ್ ।
ಅಗ್ನೇ । ಸಹಸ್ರऽಸಾಃ । ಅಸಿ ॥ ೩ ॥

ಸಾಯಣಭಾಷ್ಯಂ

ಹೇ ಅಗ್ನೆ ಆಜುಹ್ವಾನೋಽಸ್ಮಾಭಿರಾಹೂಯಮಾನಃ ಸನ್ನೀಡ್ಯೋಽಸ್ಮಾಭಿಃ ಸ್ತುತ್ಯ ಇಷ್ಕಾಮು-ಕಸ್ತ್ವಂ ನೋಽಸ್ಮದರ್ಥಂ ಯಜ್ಞಿಯಾನ್ ಯಜ್ಞಭಾಜೋ ದೇವಾನಾ ವಕ್ಷಿ । ಆವಹ । ಹೇ ಅಗ್ನೇ ತ್ವಂ ಸಹಸ್ರಸಾ ಅಸಿ । ಅಪರಿಮಿತಧನಸ್ಯ ದಾತಾಸಿ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಆಜುಹ್ವಾನಃ—ನಮ್ಮಿಂದ ಆಹೂತನಾಗಿಯೂ । ಈಡ್ಯಃ—ಸ್ತುತ್ಯನಾಗಿಯೂ ಇರುವ ನೀನು । ನಃ—ನಮಗಾಗಿ । ಯಜ್ಞಿಯಾನ್—ಯಜ್ಞಾರ್ಹರಾದ । ದೇವಾನ್—ದೇವತೆಗಳನ್ನು । ಆ ವಕ್ಷಿ—ಕರೆದುಕೊಂಡು ಬಾ । ತ್ವಂ—ನೀನು । ಸಹಸ್ರಸಾ ಅಸಿ—ಅಪರಿಮಿತವಾದ ಧನಕ್ಕೆ ದಾತೃವಾಗಿದ್ದೀಯೆ.

ಭಾವಾರ್ಥ

ಎಲೈ ಅಗ್ನಿಯೇ, ನಮ್ಮಿಂದ ಆಹೂತನಾಗಿಯೂ ಸ್ತುತ್ಯನಾಗಿಯೂ ಇರುವ ನೀನು ನಮಗಾಗಿ ಯಜ್ಞಾರ್ಹರಾದ ದೇವತೆಗಳನ್ನು ಕರೆದುಕೊಂಡು ಬಾ. ನೀನು ಅಪರಿಮಿತವಾದ ಧನಕ್ಕೆ ದಾತೃವಾಗಿದ್ದೀಯೆ.

English Translation

Agni, who are to be glorified, bring hither, being invoked by us, the adorable gods, for you are for the donor of thousands.

ವಿಶೇಷವಿಷಯಗಳು

ದೇವಾನ್ ಆ ವಕ್ಷಿ ಯಜ್ಞಿಯಾನ್—ಯಜ್ಞಾರ್ಹರಾದ ಎಂದರೆ ಯಜ್ಞಕ್ಕಾಗಿ ಬರಬೇಕೆಂದು ನಾವು ಅಪೇಕ್ಷಿಸುವ ದೇವತೆಗಳನ್ನು (ನಮ್ಮ ಯಜ್ಞಭೂಮಿಗೆ) ಕರೆದುಕೊಂಡು ಬಾ ಎಂದರ್ಥವು. ಅಗ್ನಿಯು ದೇವತೆಗಳನ್ನು ಕರೆದುಕೊಂಡುಬರಬೇಕೆಂಬ ಪ್ರಾರ್ಥನೆಯು—

ಅಗ್ನಿಃ ಪೂರ್ವೇಭಿರ್ಋಷಿಭಿರೀಡ್ಯೋ ನೂತನೈರುತ । ಸ ದೇವಾँ ಏಹ ವಕ್ಷತಿ ॥

(ಋ. ಸಂ. ೧-೧-೨)

ಅಗ್ನೇ ದೇವಾँ ಇಹಾ ವಹ ಜಜ್ಞಾನೋ ವೃಕ್ತಬರ್ಹಿಷೇ । ಅಸಿ ಹೋತಾ ನ ಈಡ್ಯಃ ।

(ಋ. ಸಂ. ೧-೧೨-೩)

ಇತ್ಯಾದಿ ಋಕ್ಕುಗಳಲ್ಲಿ ವಿವೃತವಾಗಿರುವುದು.

ಈಡ್ಯಃ—ಸರ್ವೈಃ ಸ್ತುತ್ಯಃ ಇಳ್ ನಾಮಕಃ ತ್ವಂ । ಸಕಲರಿಂದಲೂ ಸ್ತುತ್ಯನಾದವನೂ, ಇಡಃ ಎಂಬ ಹೆಸರಿನಿಂದ ಪ್ರಸಿದ್ಧನಾದವನೂ ಆದ ಅಗ್ನಿಯೆಂದು ಅರ್ಥಮಾಡಿದೆ. ಈಳ ಈಟ್ಟೇಃ ಸ್ತುತಿಕರ್ಮಣಃ ; ಇಂಧತೇರ್ವಾ । ಸ್ತುತ್ಯರ್ಥಕವಾದ ಈಡ್ ಧಾತುವಿನಿಂದಾಗಲಿ, ಜ್ವಲನಾರ್ಥಕವಾದ ಇಂಧ್ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು (ನಿ ೮-೮) ಎಂದು ಈ ಪದದ ನಿರ್ವಚನವನ್ನು ತೋರಿಸಿ ನಿರುಕ್ತಕಾರರು ಋ. ಸಂ. ೧೦-೧೧೦-೩ನೇ ಋಕ್ಕನ್ನು ಉದಹರಿಸಿ ಈ ಪದದ ಸರಿಯಾದ ಅರ್ಥವನ್ನು ವಿವರಿಸಿದ್ದಾರೆ.

ಪ್ರಥಮತಃ, **ಸಮಿಥ್** ಎಂಬ ಪದದಂತೆ ಈ ಪದಕ್ಕೂ ಕೂಡ ಪ್ರತ್ಯೇಕವಾದ ದೇವತಾರೂಪವಾದ ನಿರ್ದೇಶ ವಿಲ್ಲದೆ **ಅಗ್ನಿಗೆ** ವಿಶೇಷಣವಾಗಿ ಮಾತ್ರ ಉಪಯೋಗವಿದ್ದಿರುವಂತೆ ತೋರುತ್ತದೆ. ಯಾಗನಿರ್ವಹಣಕಾಲದಲ್ಲಿ **ಅಗ್ನಿಯ** ಸಹಾಯವೂ ನೆರವೂ ಸಂಪೂರ್ಣವಾಗಿ ಆಗಬೇಕಾಗಿದ್ದುದರಿಂದ ಅವನು ಸ್ವಭಾವವಾಗಿಯೇ ಸ್ತುತ್ಯನಾದನು. ಪ್ರಾರಂಭದಲ್ಲಿ ಅಗ್ನಿಯು (೧) **ಸಮಿದ್ಧನಾಗಬೇಕು.** ಅನಂತರ (೨) **ತನೂನಪಾತ್** ಅಥವಾ **ನರಾಶಂಸ** ಎಂಬ ನಾಮಧೇಯದಿಂದ ಯಾಗದ ಹವಿಸ್ಸುಗಳನ್ನು ಮಧುಪೂರಿತಗಳಾಗುವಂತೆ ಮಾಡಬೇಕು. ಅನಂತರ ದೇವತೆಗಳನ್ನು ಅವನು ಯಾಗಕ್ಕೆ ಕರೆತರಬೇಕು. ಈ ಕಾರ್ಯಕ್ಕೆ ಅವನು ಈಡ್ಯ(ಸ್ತುತ್ಯ)ನಾಗಲೇ ಬೇಕು. ಆದುದರಿಂದ ಈ ಸನ್ನಿವೇಶದಲ್ಲಿಅವನು ಯಜಮಾನರಿಂದ (೩) **ಈಡ್ಯನಾಗಿದ್ದಾನೆ.** (ಪ್ರಾರ್ಥಿಸಲ್ಪಡುತ್ತಾನೆ).

ಆಪ್ರೀಸೂಕ್ತಗಳಲ್ಲಿ **ಈಡ್** ಧಾತುನಿಷ್ಪನ್ನವಾದ ಈ ಪದವು ಎಂಟುಕಡೆಗಳಲ್ಲಿ **ಸ್ತುತನಾದವನು** ಅಥವಾ **ಸ್ತುತ್ಯನಾದವನು** ಎಂದು ವಿಶೇಷಣವಾಗಿಯೂ, ಮತ್ತು ಒಂದುಕಡೆ ಅಗ್ನಿಯ ದೌತ್ಯವನ್ನು ತೋರಿಸತಕ್ಕ ವಿಶೇಷಣ ವಾಗಿಯೂ ಒಟ್ಟು ಒಂಭತ್ತು ಕಡೆಗಳಲ್ಲಿ ಅಗ್ನಿಪರವಾಗಿ ಉಪಯೋಗಿಸಲ್ಪಟ್ಟಿದೆ. ಮತ್ತು ವಿಶ್ವಾಮಿತ್ರಕೃತವಾದ,

**ಪ್ರ ದೀಧಿತಿರ್ವಿಶ್ವವಾರಾ ಜಿಗಾತಿ ಹೋತಾರಮಿಳಃ ಪ್ರಥಮಂ ಯಜಧ್ಯೈ ।**
**ಅಚ್ಛಾ ನಮೋಭಿರ್ವೃಷಭಂ ವಂದಧ್ಯೈ ಸ ದೇವಾನ್ಯಕ್ಷದಿಷಿತೋ ಯಜೀಯಾನ್ ।**

(ಋ ಸಂ. ೩-೪-೩)

ಎಂಬ ಆಪ್ರೀಸೂಕ್ತದ ಋಕ್ಕಿನಲ್ಲಿ ಮಾತ್ರ ಹವಿಸ್ಸಿನ ರೂಪದ ಅನ್ನವೆಂದರ್ಥವಾಗುತ್ತದೆ. ಆದರೂ ಸಹ ಆ ಋಕ್ಕಿನ ಮುಖ್ಯದೇವತೆಯಾದ ಅಗ್ನಿಯೊಂದಿಗೆ ಸಂಬಂಧವನ್ನು ಹೊಂದಿದೆ. ಈ ಅರ್ಥವು ಆಪ್ರೀಸೂಕ್ತದ ಸಂಪ್ರದಾಯ ದಿಂದ ಭಿನ್ನವಾಗಿದೆ ಆದರೆ ಪ್ರೈಷಸೂಕ್ತದಲ್ಲಿ ಮಾತ್ರ ಅಗ್ನಿಪರ್ಯಾಯವಾಗಿಯೇ ಇದೆ.

**ಹೋತಾಯಕ್ಷದಗ್ನಿಮಿಡ ಈಡಿತೋ ದೇವೋ ದೇವಾಗ್ಂ ಆವಕ್ಷದ್ದೂತೋ ಹವ್ಯವಾಡಮೂರಃ ।**
**ಉಪೇಮಂ ಯಜ್ಞಮುಪೇಮಾಂ ದೇವೋ ದೇವಹೂತಿಮವತು ವೇತ್ವಾಜ್ಯಸ್ಯ ಹೋತರ್ಯಜ ।**

(ತೈ. ಬ್ರಾ. ೩-೬-೨-೧)

ಎಂಬ ವಾಕ್ಯಕ್ಕೆ ಭಾಷ್ಯಕಾರರು—ಇಡೇತ್ಯೇತನ್ನಾಮಕಮಗ್ನಿಂ ತೃತೀಯಪ್ರಯಾಜದೇವಂ ಎಂದು ಅಗ್ನಿ ಪರ್ಯಾಯನಾಮವೆಂದೂ ಹೇಳಿದ್ದಾರೆ. ಐತರೇಯ ಬ್ರಾಹ್ಮಣದಲ್ಲಿ—

**ಇಳೋ ಯಜತ್ಯನ್ನಂ ವಾ ಇಳೋಽನ್ನಮೇವ ತತ್ಪ್ರೀಣಾತ್ಯನ್ನಂ ಯಜಮಾನೇ ದಧಾತಿ ।**

(ಐ ಬ್ರಾ. ೨-೪)

ಇಳಃ ಎಂದರೆ ಯಾಗದಲ್ಲಿ ಅರ್ಪಿಸತಕ್ಕ ಹವೀರೂಪದ ಅನ್ನವೆಂದೂ ಈ ಅನ್ನದ ಅರ್ಪಣೆಯ ಫಲವಾಗಿ ಯಜಮಾನನಿಗೂ ಅನ್ನಲಾಭವಾಗುವುದೆಂದೂ ಹೇಳಿದೆ.

ಮೇಲೆ ವಿವರಿಸಿರುವಂತೆ, ಯಾಸ್ಕರು ಈ ಪದಕ್ಕೂ **ಇಂಧ್** ಧಾತುವಿಗೂ ಸಂಬಂಧವನ್ನು ತೋರಿಸಿರುವುದು ಸರಿಯಾಗಿ ಅರ್ಥವಾಗುವುದಿಲ್ಲ. ಇಲ್ಲಿ ಕಾತ್ಥಕ್ಯರ ಅಭಿಪ್ರಾಯವನ್ನು ಯಾಸ್ಕರು ಹೇಳಿಲ್ಲ ಬೃಹದ್ದೇವತೆಯಲ್ಲಿ

**ಇಳಸ್ತ್ವೃಷಿಕೃತಂ ರೂಪಂ ಈಡೇಶ್ಚ ಸ್ತುತಿಕರ್ಮಣಃ ।**
**ಇಳಾವಾಂಸ್ತೇನ ವೋಕ್ತೋಽಗ್ನಿರಿಡಿನಾ ವೃದ್ಧಿಕರ್ಮಣಾ ॥**

(ಬೃ ದೇ. ೩-೪)

ಎಂಬ ವಾಕ್ಯಗಳಿಂದ ಈ ಶಬ್ದವು ಆರ್ಷೇಯವೆಂದೂ, ಅಗ್ನಿಪರ್ಯಾಯನಾಮವೆಂದೂ ತೋರಿಸಿದೆ, ಮತ್ತು **ಇಳಾವಾನ್** ಎಂಬ ಪದವು ಅಗ್ನಿಗೆ ವಿಶೇಷಣವಾಗಿದೆ.

**ಗೋಮಾ ಅಗ್ನೇಽವಿಮಾ ಅಶ್ವೀ ಯಜ್ಞೋ ನೃವತ್ಸಖಾ ಸದಮಿದಪ್ರಮೃಷ್ಯಃ ।**

**ಇಳಾವಾ ಏಷೋ ಅಸುರ ಪ್ರಜಾವಾನ್ದೀರ್ಘೋ ರಯಿಃ ಪೃಥುಬುಧ್ನಃ ಸಭಾವಾನ್ ।**

(ಋ. ಸಂ. ೪-೨-೫)

ಎಂಬ ಋಕ್ಕಿನಲ್ಲಿ ಇಳಾವಾನ್ ಎಂಬ ಪದವು ಅಗ್ನಿಗೆ ವಿಶೇಷಣವಾಗಿರುವುದರಿಂದ ಬೃಹದ್ದೇವತೆಯಲ್ಲಿ ಆ ಅಂಶವನ್ನು ಸೂಚಿಸಿದೆ.

ವಿವರಣೆಗಳಲ್ಲಿ ಈ ರೀತಿ ಸಂಪ್ರದಾಯಭೇದಗಳು ಕಂಡರೂ ಸಹ ಸೂಕ್ತದಲ್ಲಿ ನಾಲ್ಕನೇ ಸ್ಥಾನವನ್ನು ಹೊಂದಿರುವ ಅಗ್ನಿದೇವತಾಪರ್ಯಾಯನಾಮವೆಂದು ಒಟ್ಟಿನಲ್ಲಿ ಹೇಳಬಹುದು.—

॥ ವ್ಯಾಕರಣಪ್ರಕ್ರಿಯಾ ॥

**ಆಜುಹ್ವಾನಃ**—ಹು ದಾನಾಽದನಯೋಃ ಧಾತು. ಲಟಿಗೆ ಶಾನಚಾದೇಶ. ಶ್ಲು ವಿಕರಣ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವಾದಿ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ಪ್ರಾದಿ ಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಈಡ್ಯಃ**—ಈಡ ಸ್ತುತೌ. ಧಾತು ಯತ್ ಪ್ರತ್ಯಯ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ವಕ್ಷಿ**—ವಹ ಪ್ರಾಪಣೇ. ಧಾತು ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಬಹುಲಂಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಹೋಢಃ** ಎಂಬುದರಿಂದ ಧಾತುಹಕಾರಕ್ಕೆ ಢಕಾರಾದೇಶ. **ಷಢೋಃ ಕಃ ಸಿ** ಸೂತ್ರದಿಂದ ಆ ಢಕಾರಕ್ಕೆ ಸಕಾರ ಪರವಾದುದರಿಂದ ಕಕಾರಾದೇಶ. ಅದನ್ನು ನಿಮಿತ್ತೀಕರಿಸಿ ಪ್ರತ್ಯಯಸಕಾರಕ್ಕೆ ಷತ್ವ. ತಿಙಂತನಿಘಾತಸ್ವರ ಬರುತ್ತದೆ.

**ಯಜ್ಞಿಯಾನ್**—ಯಜ್ಞಮರ್ಹಂತಿ ಇತಿ ಯಜ್ಞಿಯಾಃ **ಯಜ್ಞರ್ತ್ವಿಗ್ಭ್ಯಾಂ ಘ ಖ ಞೌ** (ಪಾ. ಸೂ. ೫-೧-೭೧) ಎಂಬುದರಿಂದ ಘ ಪ್ರತ್ಯಯ. **ಆಯನೇಯೀನೀ**—(ಪಾ. ಸೂ ೭-೧-೨) ಎಂಬುದರಿಂದ ಅದಕ್ಕೆ ಇಯಾದೇಶ. **ಯಸ್ಯೇತಿಚ** ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಸಹಸ್ರಸಾಃ**—ಸಹಸ್ರಂ ಸನೋತಿ ಇತಿ ಸಹಸ್ರಸಾಃ ಷಣು ದಾನೇ ಧಾತು. ಕ್ವಿಪ್ ಪ್ರತ್ಯಯ. **ಜನಸನಖನಾಂ**—(ಪಾ. ಸೂ. ೬-೪-೪೨) ಎಂಬುದರಿಂದ ಧಾತುವಿಗೆ ಆತ್ವ. **ಗತಿಕಾರಕೋಪಪದಾತ್**—ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

———

ಸಂಹಿತಾಪಾಠ

ಪ್ರಾಚೀನಂ ಬರ್ಹಿರೋಜಸಾ ಸಹಸ್ರವೀರಮಸ್ತೃಣನ್ ।

ಯತ್ರಾದಿತ್ಯಾ ವಿರಾಜಥ ॥ ೪ ॥

ಪದಪಾಠ

ಪ್ರಾಚೀನಂ । ಬರ್ಹಿಃ । ಓಜಸಾ । ಸಹಸ್ರಽವೀರಂ । ಅಸ್ತೃಣನ್ ।

ಯತ್ರ । ಆದಿತ್ಯಾಃ । ವಿಽರಾಜಥ ॥ ೪ ॥

ಸಾಯಣಭಾಷ್ಯಂ

ಪ್ರಾಚೀನಂ ಪ್ರಾಗಗ್ರಂ ಸಹಸ್ರವೀರಂ ಸಹಸ್ರಸಂಖ್ಯಾಕಾ ವೀರಾಃ ಶತ್ರೂಣಾಂ ವಿಶೇಷೇಣೇರಯಿತಾರೋ ದೇವಾ ಯಸ್ಯ ತತ್ತಾದೃಕ್ । ಯದ್ವಾ । ಅಪರಿಮಿತವೀರಾಃ ಪುತ್ರಾದಯೋ ಯೇನ ತಾದೃಕ್ । ಬರ್ಹಿರೋಜಸಾ ಮಂತ್ರಲಕ್ಷಣಬಲೇನೋಪೇತಾ ಋತ್ವಿಜೋಽಸ್ತೃಣನ್ । ಆಚ್ಛಾದಯನ್ । ಯತ್ರ ಯಸ್ಮಿನ್ಬರ್ಹಿಷ್ಯಾದಿತ್ಯಾ ಅದಿತೇಃ ಪುತ್ರಾಃ ಯೂಯಂ ವಿರಾಜಥ ವಿವಿಧಂ ರಾಜಥ್ವೇ ತದ್ಬರ್ಹಿರಸ್ತೃಣನ್॥

॥ ಪ್ರತಿಪದಾರ್ಥ ॥

ಪ್ರಾಚೀನಂ—ಪೂರ್ವದಿಕ್ಕಿಗೆ ತಿರುಗಿಸಿರುವ ಅಗ್ರಭಾಗವುಳ್ಳದ್ದೂ । ಸಹಸ್ರವೀರಂ—ಸಹಸ್ರಸಂಖ್ಯಾಕವಾದ ವೀರರನ್ನು ಹೊಂದಿರತಕ್ಕದ್ದೂ (ಮತ್ತು) । ಯತ್ರ—ಯಾವುದರ ಮೇಲೆ । ಆದಿತ್ಯಾಃ—ಅದಿತಿಪುತ್ರರಾದ (ದೇವತೆಗಳಾದ) ನೀವು । ವಿರಾಜಥ—ಪ್ರಕಾಶಿಸುತ್ತೀರೋ ಅಂತಹುದೂ ಆದ । ಬರ್ಹಿಃ—ದರ್ಭಾಸನವನ್ನು (ಋತ್ವಿಕ್ಕುಳು) । ಓಜಸಾ—ಮಂತ್ರರೂಪವಾದ ಬಲದಿಂದ । ಅಸ್ತೃಣನ್—ಹರಡಿ ಸಿದ್ಧಪಡಿಸಿದ್ದಾರೆ.

ಭಾವಾರ್ಥ

ಎಲೈ ಆದಿತ್ಯರೇ, ಯಾವ ಆಸನದ ಮೇಲೆ ನೀವು ಕುಳಿತುಕೊಂಡು ಪ್ರಕಾಶಿಸುತ್ತೀರೋ ಅಂತಹುದೂ, ಪೂರ್ವದಿಕ್ಕಿಗೆ ತಿರುಗಿಸಿರುವ ಅಗ್ರಭಾಗವುಳ್ಳದ್ದೂ, ಸಹಸ್ರಸಂಖ್ಯಾಕರಾದ ವೀರರನ್ನು ಹೊಂದಿರತಕ್ಕದ್ದೂ ಆದ ದರ್ಭಾಸನವನ್ನು ಮಂತ್ರರೂಪವಾದ ಬಲದಿಂದ ಕೂಡಿದ ಋತ್ವಿಕ್ಕುಗಳು ಹರಡಿ ಸಿದ್ಧಪಡಿಸಿದ್ದಾರೆ.

English Translation

By the power (of their prayers) they have strewn the sacred grass, the seat of numerous heroes, pointing to the east, on which Adityas, you are manifest.

ವಿಶೇಷವಿಷಯಗಳು

ಸಹಸ್ರವೀರಂ—ಈ ಶಬ್ದಕ್ಕೆ ಭಾಷ್ಯಕಾರರು ಮೂರು ವಿಧವಾದ ಅರ್ಥವನ್ನು ಹೇಳಿರುವರು. ಸಹಸ್ರವೀರಂ ಸಹಸ್ರಸಂಖ್ಯಾಕಾ ವೀರಾಃ ಶತ್ರೂಣಾಂ ವಿಶೇಷೇಣೇರಯಿತಾರೋ ದೇವಾ ಯಸ್ಯ ತಾದೃಕ್ ।

ಯದ್ವಾ । ಅಪರಿಮಿತವೀರಾಃ ಪುತ್ರಾದಯೋ ಯೇನ ತಾದೃಕ್ । ಎಂದರೆ, ಸಹಸ್ರ (ಅನೇಕ) ವೀರರುಳ್ಳ' ಅಥವಾ ಸಹಸ್ರ ಶತ್ರುವೀರರನ್ನು ಧ್ವಂಸಮಾಡುವ ದೇವತೆಗಳುಳ್ಳ, ಅಥವಾ ಬಹು ಸಂಖ್ಯಾಕರಾದ ಪುತ್ರಪೌತ್ರಾದಿ ವೀರರುಳ್ಳ ಎಂದು ಹೇಳಿರುವರು.

ಬರ್ಹಿಃ—ಇಧ್ಮ, ಈಳಃ ಎಂಬ ಭಾವನೆಗಿಂತ ಈ ಸಾಧನವು ಹೆಚ್ಚು ಮೂರ್ತರೂಪವುಳ್ಳದ್ದಾಗಿದೆ. ಬರ್ಹಿ ಯೆಂದರೆ ದರ್ಭಾಸನವೆಂದೇ ಅರ್ಥ. ದೇವೀಃ ದ್ವಾರಃ ಎಂದು ದ್ವಾರಗಳಿಗೆ ಒಂದು ದೈವಿಕವಾದ ಅಂಶವನ್ನು ಆರೋಪಮಾಡುವಂತೆ ಬರ್ಹಿಗೆ ಮಾಡಿಲ್ಲ. ಕೇವಲ ದೇವತೆಗಳ ಆಸನವೆಂಬ ಅರ್ಥವು ಮಾತ್ರ ಸೂಚಿತವಾಗುತ್ತದೆ. ಅದೂ ಅಲ್ಲದೇ, ದೇವತೆಗಳ ಆಗಮನಕ್ಕಾಗಿ ದ್ವಾರಗಳು ಇತರ ಸಹಾಯವಿಲ್ಲದೇ ತಾವೇ ತೆರೆಸುಕೊಂಡು ದಾರಿಯನ್ನು ಮಾಡಿಕೊಡಬೇಕೆಂದು ಪ್ರಾರ್ಥಿಸಿದೆ. ಅಚೇತನವಾದ ದ್ವಾರಗಳಿಗೆ ದೈವಿಕವಾದ ಶಕ್ತಿಯಿದ್ದ ಹೊರತು ತಮ್ಮಷ್ಟಕೆ ತಾವೇ ತೆಗೆದುಕೊಂಡು ವಿಶಾಲವಾದ ಮಾರ್ಗವನ್ನು ಮಾಡುವುದಕ್ಕಾಗುವುದಿಲ್ಲ. ಆದರೆ, ಬರ್ಹಿಯ ವಿಷಯದಲ್ಲಿ ಮಾತ್ರ ಈ ಶಕ್ತಿಯ ಆರೋಪವಿಲ್ಲ. ಋತ್ವಿಕ್ಕುಗಳು ಇದನ್ನು ಹರಡಬೇಕು. ಕೇವಲ ಈ ಋಕ್ಕಿನಲ್ಲೇ ಅಲ್ಲದೇ, ಆಪ್ರೀ ಸೂಕ್ತಗಳ ಇತರ ಋಕ್ಕುಗಳಲ್ಲೂ ಸಹ ಋತ್ವಿಗಾದಿಗಳ ಸಹಾಯದಿಂದಲೇ ಬರ್ಹಿಯ ಆಸ್ತರಣವಾಗಬೇಕೆಂದು ವಿಶದವಾಗಿ ಹೇಳಿದೆ. ಉದಾಹರಣೆಗೆ—

ಪ್ರಾಚೀನಂ ಬರ್ಹಿರೋಜಸಾ ಸಹಸ್ರವೀರಮಸ್ತೃಣನ್ । ಯತ್ರಾದಿತ್ಯಾ ವಿರಾಜಥ ।

(ಋ. ಸಂ. ೧-೧೮೮-೪)

ಎಂಬ ಈ ಋಕ್ಕಿನಲ್ಲಿಯೂ ಹೀಗೆಯೇ ಋ. ಸಂ. ೯-೫-೪ ರಲ್ಲಿ ಬರ್ಹಿಃ ಪ್ರಾಚೀನಮೋಜಸಾ ಪವಮಾನಃ ಸ್ತೃಣನ್ ಹರಿಃ । ಎಂದೂ, ಋತ್ವಿಕ್ಕುಗಳು ಬರ್ಹಿಯನ್ನು ಹರಡುತ್ತಾರೆ ಎಂಬ ವರ್ಣನೆಯಿದೆ. ಹೀಗೆಯೇ ಇತರ ಆಪ್ರೀ ಸೂಕ್ತಗಳ ಋಕ್ಕುಗಳಲ್ಲಿಯೂ ಸಹ ಬರ್ಹಿಯು ಪಾರ್ಥಿವವಾದುದೂ, ಅಚೇತನವಾದುದೂ ಆದರೂ ದೇವತೆಗಳಿಗೆ ಪವಿತ್ರವಾದ ಸ್ಥಾನರೂಪವಾದುದೂ ಆದ ಸ್ಥಾನವೆಂದು ಹೇಳಿದೆ. ಪ್ರೈಷ ಸೂಕ್ತದಲ್ಲಿ ಮಾತ್ರ,

ಹೋತಾ ಯಕ್ಷದ್ಬರ್ಹಿಃ ಸುಷ್ಟರೀಮೋರ್ಣಮ್ರದಾ ಅಸ್ಮಿನ್ಯಜ್ಞೇ ವಿಚಪ್ರಚ ಪ್ರಥತಾಗ್ಂ ಸ್ವಾಸಸ್ಥಂ ದೇವೇಭ್ಯಃ । ಏಮೇನದದ್ಯ ವಸವೋ ರುದ್ರಾ ಆದಿತ್ಯಾಃ ಸದಂತು ಪ್ರಿಯಮಿಂದ್ರ-ಸ್ಯಾಸ್ತು ವೇತ್ವಾಜ್ಯಸ್ಯ ಹೋತರ್ಯಜ ॥

(ತೈ. ಬ್ರಾ. ೩-೬-೨-೧)

ಬರ್ಹಿರ್ನಾಮಕಂ ಚತುರ್ಥಪ್ರಯೋಜದೇವಮಗ್ನಿಂ ಎಂದು ಅಗ್ನಿ ಪರ್ಯಾಯವಾದುದೂ ದೇವತಾತ್ಮಕವಾದುದೂ ಆದ ಆಸನವೆಂದು ಹೇಳಿದೆ. ಐತರೇಯಬ್ರಾಹ್ಮಣದಲ್ಲಿ,

ಬರ್ಹಿರ್ಯಜತಿ, ಪಶವೋ ವೈ ಬರ್ಹಿಃ ಪಶೂನೇವ ತತ್ಪ್ರೀಣಾತಿ ಪಶೂನ್ಯಜಮಾನೇ ದಧಾತಿ ।

(ಐ. ಬ್ರಾ. ೨-೪)

ಎಂದು ಹುಲ್ಲುಮೇಯತಕ್ಕದ್ದೂ, ಹುಲ್ಲಿನಿಂದ ಕೂಡಿದುದೂ ಆದ ಪಶುವೆಂದು ಅರ್ಥಮಾಡಿದೆ. ಆದರೆ ಈ ಅರ್ಥಕ್ಕೆ ಕೊಂಚವೂ ಅವಕಾಶವಿಲ್ಲವೆಂದು ತಿಳಿಯುತ್ತದೆ.

ನಿರುಕ್ತಕಾರರು ಬರ್ಹಿಃ ಪರಿಬರ್ಹಣಾತ್ । ವೇಗವಾಗಿ ಬೆಳೆಯುವುದರಿಂದ ದರ್ಭೆಗೆ ಬರ್ಹಿಯೆಂದು ಹೆಸರೆಂದು ಹೇಳಿದ್ದಾರೆ. (ನಿ ೮-೮) ಬೃಹದ್ದೇವತೆಯಲ್ಲಿ,

ಬರ್ಹಿರೇವಾಯಮಗ್ನಿಸ್ತು ಸರ್ವಂ ಹಿ ಪರಿಬೃಂಹಿತಂ ।
ಅನ್ನೇನ ಯದ್ಧುತೋ-ವಾ ಸನ್ನಿಧ್ಮೇನ ಪರಿಬೃಂಹಿತಃ ॥
(ಬೃ. ದೇ. ೩-೫)

ಸಮುಸ್ತವಾದ ಅನ್ನವೂ ತದ್ವ್ಯಾಪ್ಯವಾದುದರಿಂದಲೂ, ಆಹುತ್ಯನಂತರ ಇಧ್ಮದಿಂದ ಪೂರಿತವಾಗುವುದರಿಂದಲೂ ಅಗ್ನಿಯೇ ಬರ್ಹಿರೂಪದಲ್ಲಿದ್ದಾನೆ ಎಂದು ತಾದಾತ್ಮ್ಯವನ್ನು ಹೇಳಿದೆ.

ಅನೇಕ ವಿಷಯಗಳಲ್ಲಿ ಬೃಹದ್ದೇವತಾಕಾರರು ನಿರುಕ್ತವಾಕ್ಯಗಳನ್ನನುಸರಿಸಿದ್ದರೂ ಸಹ ಈ ಸಂದರ್ಭದಲ್ಲಿ ಕೊಂಚ ವ್ಯತ್ಯಾಸವನ್ನು ತೋರಿಸಿ, ನಿರುಕ್ತಕಾರರು ಕೇವಲ ದೇವತೆಗಳ ಆಸನವಾದ ಬರ್ಹಿಯೆಂದು ಹೇಳಿರುವುದನ್ನು ಇವರು ದೇವತಾತ್ಮಕವಾದುದೂ ಅಗ್ನಿಪರ್ಯಾಯವಾದದೂ ಆದ ಆಸನವೆಂದು ಅರ್ಥಮಾಡಿದ್ದಾರೆ.

ಆದಿತ್ಯಾಃ—ಇದೇ ಭಾಗದ 120 ನೇ ಪುಟದಲ್ಲಿ ಆದಿತ್ಯರು ಯಾರು ಎಂಬ ವಿಷಯವನ್ನು ವಿಮರ್ಶೆ ಮಾಡಲಾಗಿದೆ.

ವ್ಯಾಕರಣಪ್ರಕ್ರಿಯಾ

ಸಹಸ್ರವೀರಮ್—ಸಹಸ್ರಸಂಖ್ಯಾಕಾಃ ವೀರಾಃ ಯಸ್ಯ ತತ್ ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

ಅಸ್ತೃಣನ್—ಸ್ತೃಞ್ ಆಚ್ಛಾದನೇ ಧಾತು. ಕ್ರ್ಯಾದಿ. ಲಙ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ ಇಕಾರಲೋಪ, ಶ್ನಾವಿಕರಣ. ಶ್ನಾಭ್ಯಸ್ತಯೋರಾತಃ (ಪಾ ಸೂ ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. ಋಕಾರದ ಪರದಲ್ಲಿ ಬಂದುದರಿಂದ ಣತ್ವ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಆದಿತ್ಯಾಃ—ಅದಿತೇಃ ಅಪತ್ಯಾನಿ ಪುಮಾಂಸಃ ಆದಿತ್ಯಾಃ ದಿತ್ಯದಿತ್ಯಾದಿ—(ಪಾ. ಸೂ. ೪-೧-೮೫) ಎಂಬುದರಿಂದ ಣ್ಯ ಪ್ರತ್ಯಯ. ತದ್ಧಿತೇಷ್ವಚಾಮಾದೇಃ (ಪಾ. ಸೂ. ೭-೨-೧೧೭) ಸೂತ್ರದಿಂದ ಆದಿವೃದ್ಧಿ ಯಸ್ಯೇತಿಚ (ಪಾ. ಸೂ ೬-೪-೧೪೮) ಸೂತ್ರದಿಂದ ಇಕಾರಕ್ಕೆ ಲೋಪ. ಛಾಂದಸವಾಗಿ ಸರ್ವಾನುದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

ವಿರಾಟ್ ಸಮ್ರಾಡ್ವಿಭ್ವೀಃ ಪ್ರಭ್ವೀರ್ಬಹ್ವೀಶ್ಚ ಭೂಯಸೀಶ್ಚ ಯಾಃ ।
ದುರೋ ಘೃತಾನ್ಯಕ್ಷರನ್ ॥ ೫ ॥

ಪದಪಾಠ

ವಿऽರಾಟ್ । ಸಮ್ऽರಾಟ್ । ವಿऽಭ್ವೀಃ । ಪ್ರऽಭ್ವೀಃ । ಬಹ್ವೀಃ । ಚ । ಭೂಯಸೀಃ । ಚ । ಯಾಃ ।
ದುರಃ । ಘೃತಾನಿ । ಅಕ್ಷರನ್ ॥ ೫ ॥

ಸಾಯಣಭಾಷ್ಯಂ

ವಿರಾಟ್ ॥ ವಿಶೇಷೇಣ ರಾಜಂತೆ ಇತಿ ವ್ಯತ್ಯಯೇನೈಕವಚನಂ ॥ ಸಮ್ರಾಟ್ ಸಮ್ಯಗಿತಿ ಪೂಜ್ಯತರಂ ರಾಜಮಾನಾಃ ॥ ಅತ್ರಾಪಿ ವ್ಯತ್ಯಯೇನೈಕವಚನಂ ॥ ವಿಭ್ವೀರ್ವಿಭ್ವ್ಯೋ ವಿವಿಧಂ ಭವಿತ್ರ್ಯಃ ಪ್ರಭ್ವೀಃ ಪ್ರಭ್ವ್ಯಃ ಪ್ರಕರ್ಷೇಣ ಭವಿತ್ರ್ಯೋ ಬಹ್ವೀರ್ಬಹ್ವ್ಯೋ ಭೂಯಸೀರ್ಲೋಕಪ್ರಸಿದ್ಧಸಂಖ್ಯಾಭಿಶ್ಚ ಭೂಯಸ್ಯಶ್ಚ ಯಾ ದುರೋ ಯಜ್ಞಗೃಹದ್ವಾರಃ ಸಂತಿ ತಾ ಘೃತಾನ್ಯುದಕಾನಿ ಪ್ರಾಣ್ಯುಪಕಾರಾರ್ಥಮಕ್ಷರನ್ । ಕ್ಷರಂತಿ । ಯದ್ವಾ । ಬಹ್ವೀರ್ಭೂಯಸೀರಿತ್ಯೇತೇ ಸಂಖ್ಯಾವಚನೇ । ಶಿಷ್ಟಾನಿ ತಾಸಾಂ ನಾಮಧೇಯಾನಿ ॥

ಪ್ರತಿಪದಾರ್ಥ

ವಿರಾಟ್—ವಿಶೇಷರೀತಿಯಿಂದ ಪ್ರಕಾಶಿಸುವುದೂ । ಸಮ್ರಾಟ್—ಪೂಜ್ಯತರವಾಗಿ ಪ್ರಕಾಶಿಸುವುದೂ । ವಿಭ್ವೀಃ—ಬಹು ವಿಧವಾಗಿ ಶೋಭಿಸುವುದೂ । ಪ್ರಭ್ವೀಃ—ಮಹತ್ತ್ವದಿಂದ ಕೂಡಿರುವುದೂ । ಬಹ್ವೀಃ—ಬಹು ಸಂಖ್ಯಾತವಾಗಿರುವುದೂ । ಭೂಯಸೀಶ್ಚ—ಬಾಹುಳ್ಯವನ್ನು ಹೊಂದಿರುವುವೂ ಆದ । ಯಾಃ ದುರಃ—ಯಜ್ಞಗೃಹದ ಯಾವ ದ್ವಾರಗಳಿರುವುವೋ ಅವುಗಳಲ್ಲಿ । ಘೃತಾನಿ–ಉದಕಗಳು । ಅಕ್ಷರನ್–ಪ್ರೋಕ್ಷಿಸಲ್ಪಡುತ್ತವೆ.

ಭಾವಾರ್ಥ

ವಿಶೇಷರೀತಿಯಿಂದ ಪ್ರಕಾಶಿಸುವುವೂ, ಪೂಜ್ಯತರವಾಗಿ ಪ್ರಕಾಶಿಸುವುವೂ, ಬಹು ವಿಧವಾಗಿ ಶೋಭಿಸುವುವೂ, ಮಹತ್ತ್ವದಿಂದ ಕೂಡಿರುವುವೂ, ಬಹು ಸಂಖ್ಯಾತವಾಗಿರುವುವೂ, ಬಾಹುಳ್ಯವನ್ನು ಹೊಂದಿರುವುವೂ ಆದ ಯಜ್ಞಗೃಹದ ಯಾವ ದ್ವಾರಗಳಿವೆಯೋ ಅವುಗಳಲ್ಲಿ ಉದಕಗಳು ಪ್ರೋಕ್ಷಿಸಲ್ಪಡುತ್ತವೆ.

English Translation

They have sprinkled water on the doors (of the hall of sacrifice), which are variously and perfectly radiant, manifold, excellent, many, and numerous-

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ದೇವೀರ್ದ್ವಾರಃ ಎಂಬ ಯಜ್ಞಗೃಹದ ದ್ವಾರದೇವತೆಗಳನ್ನು (ದುರಃ) ಪ್ರಾರ್ಥಿಸಲಾಗಿದೆ. ಈ ಋಕ್ಕಿನಲ್ಲಿ ಮತ್ತೊಂದು ವಿಶೇಷವೇನೆಂದರೆ ಯಜ್ಞಗೃಹದ ನಾಲ್ಕುದಿಕ್ಕುಗಳಲ್ಲಿಯೂ ಇರುವ ನಾಲ್ಕು ದ್ವಾರಗಳ ಹೆಸರುಗಳನ್ನು ಇಲ್ಲಿ ಸೂಚಿಸಿದೆ. ಇತರ ಆಪ್ರೀ ಸೂಕ್ತಗಳಲ್ಲಿ ಈ ರೀತಿ ಹೆಸರುಗಳಿರುವುದಿಲ್ಲ. ಆದರೂ ವಿರಾಟ್ ಮೊದಲಾದ ಶಬ್ದಗಳಿಗೆ ಅವಯವಾರ್ಥವನ್ನು ಕಲ್ಪಿಸಿ ದುರಃ ಎಂಬ ಶಬ್ದಕ್ಕೆ ವಿಶೇಷಣಪದಗಳನ್ನಾಗಿ ಹೇಳುವುದೂ ಸಮಂಜಸವಾಗಿದೆ. ಭಾಷ್ಯಕಾರರು ಈ ಎರಡು ವಿಧವಾದ ಪ್ರಯತ್ನಗಳನ್ನು ಮಾಡಿದಾರೆ

ದುರಃ—ದ್ವಾರಃ ಯಜ್ಞಗೃಹದ ದ್ವಾರದೇವತೆಗಳು. ಇವರು ಯಾರು ಎಂಬ ವಿಷಯದಲ್ಲಿ ಯಾಸ್ಕರು—ದ್ವಾರಃ । ದ್ವಾರೋ ಜವತೇರ್ವಾ ದ್ರವತೇರ್ವಾ ವಾರಯತೇರ್ವಾ । ಗೃಹದ್ವಾರ ಇತಿಕಾತ್ಥಕ್ಯಃ । ಅಗ್ನಿರಿತಿ ಶಾಕಪೂಣಿಃ ॥

(ನಿ. ೮–೧೦)

ಎಂದು ನಿರ್ವಚನವನ್ನು ಹೇಳಿದಾರೆ. ದ್ವಾರವೆಂದರೆ ಪ್ರವೇಶಿಸುವುದಕ್ಕೆ, ಒಳಗೆ ಹೋಗುವುದಕ್ಕೆ ಅಥವಾ ಒಳಗೆ ಹೋಗುವುದನ್ನು ತಡೆಯುವುದಕ್ಕೆ ಇರುವುದರಿಂದ ಇದಕ್ಕೆ ದ್ವಾರವೆಂದು ಹೆಸರು. ದ್ವಾರವೆಂದರೆ ಗೃಹದ್ವಾರ ( ಬಾಗಿಲು) ಎಂದು ಕಾತ್ಥಕ್ಯರ ಮತವು ; ಅಗ್ನಿಯೆಂದು ಶಾಕಪೂಣಿಯ ಮತವು ಎಂದೂ ಹೇಳಿರುವರು. ಹೋಮವನ್ನು ಮಾಡುವ ಹೋಮಗೃಹವು ಅಗ್ನಿಯ ಸ್ವರೂಪವೆಂದೂ ಆದುದರಿಂದ ಅದರ ದ್ವಾರಗಳೂ ಅಗ್ನಿಯ ವಿಶೇಷರೂಪಗಳೆಂದೂ (ಅಗ್ನಿ ವಿಶೇಷ ಮೂರ್ತಯಃ) ಹೇಳುವರು. The doors of the chamber in which the oblation is offered said to be personification of Agni.

ಯಜ್ಞಗೃಹದ ದ್ವಾರಾಭಿಮಾನಿದೇವತೆಗಳೆಂದು ಸಾಯಣರು ವಿವರಿಸಿದ್ದಾರೆ. ಈ ದ್ವಾರಗಳು ಯಜ್ಞಗೃಹದ ದ್ವಾರಗಳೇ ಅಥವಾ ಇದು ಕೇವಲ ಆಲಂಕಾರಿಕವಾದ ಪ್ರಯೋಗವೇ ಎಂಬ ವಿಷಯದಲ್ಲಿ ಅಭಿಪ್ರಾಯಭೇದವಿದೆ. ಒಂದು ವೇಳೆ ಇಲ್ಲಿ ಈ ಶಬ್ದಕ್ಕೆ ಗೃಹದ್ವಾರಗಳೆಂದರ್ಥವಲ್ಲದಿದ್ದರೆ ಆಗ ಆಪ್ರೀ ಸೂಕ್ತಗಳ ದೇವತೆಗಳ ವಿಷಯದಲ್ಲೂ ಸಹ ಈಗ ಹೇಳಿರುವ ಅಂಶಗಳಿಗೆ ವ್ಯತ್ಯಾಸವಾದ ಅಂಶಗಳನ್ನು ಭಾವಿಸಬೇಕಾಗುತ್ತದೆ.

ಕಾರ್ಮಿಕವಾದ ಪ್ರಕ್ರಿಯಾದೃಷ್ಟಿಯಿಂದ ನೋಡಿದರೆ, ಬರ್ಹಿ ಮತ್ತು ಸ್ವಾಹಾಕೃತಿ ಈ ಎರಡು ವಸ್ತುಗಳಿಗೆ ಮಾತ್ರ ದೇವತ್ವಾರೋಪಣೆಯಿಲ್ಲದೆ ಕೇವಲ ಪಾರ್ಥಿವವಾದುದೂ ಆದರೂ ಯಾಗಸಂಬಂಧವಿರುವುದರಿಂದ ಅಲೌಕಿಕವಾದ ಶುದ್ಧಿಯುಳ್ಳದ್ದೂ ಆದ ಗುಣಗಳನ್ನು ಹೇಳಿದೆ. ತಿಸ್ರೋ ದೇವೀಃ ಎಂಬಲ್ಲಿ ಸರಸ್ವತಿಯು ಶುದ್ಧ ವಾದ ದೈವಿಕಾಂಶವನ್ನು ಹೊಂದಿರುವುದರಿಂದಲೂ, ಆ ನದಿಯ ಜತೆಯಲ್ಲಿ ಉಳಿದೆರಡು ನದಿಗಳನ್ನೂ ಸೇರಿಸಿ ಹೇಳಿರು ವುದರಿಂದಲೂ ಒಟ್ಟಿಗೆ ಎಲ್ಲರನ್ನೂ ದೇವತೆಗಳೆಂದು ಕರೆದಿದೆ. ಇದರಂತೆಯೇ ದೈವ್ಯಾ ಹೋತಾರಾ ಎಂಬಲ್ಲಿಯೂ ಸಹ ದೇವಾತ್ಮನಾದ ಅಗ್ನಿಯೊಡನಿರುವುದರಿಂದ ಪ್ರಾರ್ಥಿವವಾದ ಹೋತೃವನ್ನೂ ದೇವತೆಯೆಂದೇ ಉದ್ದೇಶಿಸಿದೆ. ಆದರೆ ದೇವೀಃ ದ್ವಾರಃ ಎಂಬಲ್ಲಿ ಮಾತ್ರ ಇದಕ್ಕೆ ಅವಕಾಶವಿಲ್ಲವಾಗಿವೆ. ಈ ದ್ವಾರಗಳು ಯಜ್ಞಗೃಹದ ಬಾಗಿಲುಗಳೇ ಆಗಿದ್ದರೆ, ಬರ್ಹಿ, ಸ್ವಾಹಾಕೃತಿ ಇವುಗಳಿಲ್ಲದ ವಿಶೇಷವಾದ ಸ್ಥಾನವು ಇವಕ್ಕೇತಕ್ಕೆ ಎಂಬ ಒಂದು ಪ್ರಶ್ನೆಯು ಏಳುತ್ತದೆ. ಯಜ್ಞಾಂಗಗಳಾವ ಕೆಲವು ಉಪಕರಣಸಾಮಗ್ರಿಗಳನ್ನು ಮಾತ್ರ ದೇವದೃಷ್ಟಿಯಿಂದ ನೋಡಬೇಕಾ ಗುತ್ತದೆ ಎಂದರೆ, ಎಲ್ಲಕ್ಕೂ ಮುಖ್ಯವಾದ ವೇದಿಯ ಹೆಸರೇ ಇಲ್ಲವಾಗಿದೆ.

ಇಷ್ಟೇ ಅಲ್ಲದೇ ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೇನೆಂದರೆ, ದ್ವಾರಗಳು ಎಂದು ಬಹು ವಚನದಲ್ಲಿವೆ.

**ಸಪ್ತ ಹೋತ್ರಾಣಿ ಮನಸಾ ವೃಣಾನಾ ಇನ್ವಂತೋ ವಿಶ್ವಂ ಪ್ರತಿ ಯನ್ನೃತೇನ ।**
**ನೃಪೇಶಸೋ ವಿದಥೇಷು ಪ್ರ ಜಾತಾ ಅಭೀಇಮಂ ಯಜ್ಞಂ ವಿ ಚರಂತ ಪೂರ್ವೀಃ ॥**

(ಋ. ಸಂ ೩-೪-೫)

ಎಂಬ ಆಪ್ರೀಸೂಕ್ತದ ಋಕ್ಕಿನಲ್ಲಿ ಪೂರ್ವೀಃ ಎಂಬ ವಿಶೇಷಣವೂ ಸಹ ಬಹುವಚನದಲ್ಲಿಯೇ ಇದೆ. ಮತ್ತು ಈ ದ್ವಾರದೇವತೆಗಳ ಕರ್ತವ್ಯವನ್ನು ಪರಿಶೀಲಿಸಿದರೆ,

೧) **ವಿ ಶ್ರಯಂತಾಮೃತಾವೃಧೋ ದ್ವಾರೋ ದೇವೀರಸಶ್ಚತಃ** ಯಜ್ಞಕಾರ್ಯದ ಅನುಕೂಲಕ್ಕಾಗಿ ಪ್ರತ್ಯೇಕವಾಗಿ ತೆಗೆದುಕೊಳ್ಳಿರಿ ಎಂದು ೧-೧೩-೬ ಎಂಬ ಋಕ್ಕಿನಲ್ಲಿಯೂ

೨) **ದುರೋ ಘೃತಾನ್ಯಕ್ಷರನ್** । ಉದಕಗಳನ್ನು ಸುರಿಸಿದರು ಎಂದು ಪ್ರಕೃತವಾದಋಕ್ಕಿನಲ್ಲಿಯೂ

೩) ಪ್ರ ಪ್ರ ಯಜ್ಞಂ ಪ್ರಣೀತ ನ । ಯಜ್ಞವನ್ನು ಫಲದಿಂದ ತುಂಬಿಸುತ್ತಾರೆ ಎಂದು ೫-೫-೫ ರಲ್ಲೂ

೪) ಇನ್ವಂತೋ ವಿಶ್ವಂ ಪ್ರತಿ ಯನ್ನೃತೇನ । ಸಕಲವಿಶ್ವವನ್ನೂ ಉದಕದಿಂದ ಚೈತನ್ಯಯುಕ್ತವನ್ನಾಗಿ ಮಾಡುತ್ತಾರೆಂದು ೩-೪-೫ ರಲ್ಲೂ ಹೀಗೆ ಇನ್ನೂ ಅನೇಕವಿಧವಾಗಿ ಅವರ ಕರ್ತವ್ಯವನ್ನು ನಿರ್ದೇಶಿಸಿದೆ. ಈ ಕರ್ತವ್ಯಗಳಲ್ಲಿ ಅನೇಕ ಕ್ರಿಯೆಗಳು ಕೇವಲ ಆಲಂಕಾರಿಕವಾಗಿಯೂ ಔಪಚಾರಿಕವಾಗಿಯೂ ಅವುಗಳಿಗೆ ಆರೋಪಿತವಾದವೆಂದೂ ಅದರಲ್ಲಿ ಸತ್ಯಾಂಶವಿಲ್ಲವೆಂದೂ ಕೆಲವರ ಮತವಾಗಿದೆ.

ಸಮಿದ್ಧೋ ಅಸ್ಯ ಮನುಷೋ ದುರೋಣೇ ದೇವೋ ದೇವಾನ್ ಯಜಸಿ ಜಾತವೇದಃ ।
ಆ ಚ ವಹ ಮಿತ್ರಮಹಶ್ಚಿಕಿತ್ವಾನ್ತ್ವಂ ದೂತಃ ಕವಿರಸಿ ಪ್ರಚೇತಾಃ ॥

(ಋಂ- ಸಂ. ೧೦–೧೧೦–೧)

ಎಂಬ ಋಕ್ಕಿನಲ್ಲಿ ಮನುಷೋ ದುರೋಣೇ । ಮಾನವನ ಯಜ್ಞಗೃಹದಲ್ಲಿ ಎಂದಿರುವುದರಿಂದ ಕೇವಲ ಲೌಕಿಕವಾದ ಈ ಗೃಹದ್ವಾರಗಳಿಗೆ ಈ ಔಪಚಾರಿಕವಾದ ಭಾಷೆಯು ಅತ್ಯುತ್ಪ್ರೇಕ್ಷೆಯಾಗಿಯೂ ಕಾಣಬಹುದು. ನೃಪೇಶಸಃ ಋತಾವೃಧಃ, ಪಾವಕಾ ಇತ್ಯಾದಿ ವಿಶೇಷಣಗಳೂ ಸಹ ಉಚಿತವಾಗಿರುವುದಿಲ್ಲವೆಂದು ಕೆಲವು ವಿಮರ್ಶಕರ ಮತವಾಗಿದೆ. ಪ್ರಕೃತದಲ್ಲಿ ಈ ಅಭಿಪ್ರಾಯಗಳ ಸಮರ್ಥನೆಗಾಗಲಿ ಅಥವಾ ಖಂಡಿಸುವುದಕ್ಕಾಗಲಿ ವೈದಿಕಸಂಪ್ರದಾಯ ಪಾಲನೆಗೆ ಮೂಲರಾದ ವೈದಿಕಪಂಡಿತರ ಅಭಿಪ್ರಾಯಗಳನ್ನು ತಿಳಿಯುವುದು ಒಳ್ಳೆಯದು.

ಸ್ವಾಧ್ಯೋಽವಿ ದುರೋ ದೇವಯಂತೋಽಶಿಶ್ರಯೂ ರಥಯುರ್ದೇವತಾತಾ ।
ಪೂರ್ವೀ ಶಿಶುಂ ನ ಮಾತರಾ ರಿಹಾಣೇ ಸಮಗ್ರುವೋ ನ ಸಮನೇಷ್ವಂಜನ್ ।

(ಋ. ಸಂ. ೭-೨-೫)

ಎಂಬ ಆಪ್ರೀಸೂಕ್ತದ ಋಕ್ಕಿನಲ್ಲಿ ಯಜ್ಞಗೃಹದ್ವಾರಾಣಿ ಇತ್ಯರ್ಥಃ । ಯಜ್ಞಗೃಹದ್ವಾರಗಳೆಂದರ್ಥವೆಂದು ವಿಶದವಾಗಿ ತಿಳಿಸುತ್ತಾರೆ. ಅದರಂತೆಯೇ ಇನ್ನೂ ಕೆಲವು ಪಂಡಿತರು ವ್ಯಶಿಶ್ರಯುಃ ಎಂಬ ಕ್ರಿಯಾಪದಕ್ಕೆ ಯಜಮಾನಾಃ ಎಂಬುದು ಕರ್ತೃವೆಂದೂ ಅವರು ಯಜ್ಞಗೃಹದ್ವಾರವನ್ನು ಆಶ್ರಯಿಸಿ ನಿಂತರೆಂದು ಅನ್ವಯವೆಂದೂ ವಿವರಿಸಿದ್ದಾರೆ. ಆಂಗ್ಲಪಂಡಿತರಾದ Oldenberg, Grassman ಮತ್ತು Ludwig ಎಂಬುವರೂ ಸಹ ಇದೇ ವಿವರಣೆಯನ್ನನುಮೋದಿಸುತ್ತಾ,

ವಿರಾಟ್ಸಂಮ್ರಾಡ್ವಿಭ್ವೀಃ ಪ್ರಭ್ವೀರ್ಬಹ್ವೀಶ್ಚ ಭೂಯಸೀಶ್ಚ ಯಾಃ । ದುರೋ ಘೃತಾನ್ಯಕ್ಷರನ್ ।

(ಋ. ಸಂ. ೧–೧೮೮–೫)

ಎಂಬ ಈ ಋಕ್ಕಿನಲ್ಲಿ ವಿರಾಟ್ ಸಮ್ರಾಟ್ ಎಂಬ ಪದಗಳು ಎರಡು ಕದಗಳ ಹೆಸರೆಂದೂ ಹೇಳಿದ್ದಾರೆ. Max Muller ಎಂಬ ಪಂಡಿತನು ಇವು ದೇವತೆಗಳು ಸ್ವರ್ಗದಿಂದ ಇಳಿದುಬರುವ ಸ್ವರ್ಗದ್ವಾರಗಳೆಂದಿದ್ದಾನೆ. (History of Ancient Sanskrit Literature. p. 245). ಪ್ರೈಷಸೂಕ್ತದಲ್ಲಿ,

ಹೋತಾಯಕ್ಷದ್ದುರ ಋಷ್ವಾಃ ಕವಷ್ಯೋಽಕೋಷಧಾವನೀರುದಾತಾಭಿರ್ಜಿಹತಾಂ ವಿ ಪಕ್ಷೋಭಿಃ ಶ್ರಯಂತಾಂ । ಸುಪ್ರಾಯಣಾ ಅಸ್ಮಿನ್ಯಜ್ಞೇ ವಿಶ್ರಯಂತಾಮೃತಾವೃಧೋ ವಿಯಂತ್ವಾಜ್ಯಸ್ಯ ಹೋತರ್ಯಜ ।

(ತೈ. ಬ್ರಾ. ೩-೬-೨-೨)

ಎಂಬ ವಾಕ್ಯಗಳಿಂದ ಹೇಳಿರುವುದನ್ನು ಭಾಷ್ಯಕಾರರು **ದುರೋ ದ್ವಾರಸಂಜ್ಞಕಾಃ ಪಂಚಮಪ್ರಯೋಜದೇವತಾಸ್ತದ್ರೂಪಮಗ್ನಿಂ ದೈವ್ಯೋ ಹೋತಾ ಯಜತು** ಎಂದು ವಿವರಿಸಿರುವರು. ಈ ವಾಕ್ಯಗಳಲ್ಲಿ **ಆಶಾಭಿಃ ಉಜ್ಜಿಹತಾಂ** ಎಂಬ ಪದಗಳು ಮುಖ್ಯವಾದುವು. ಇದು ಮೇಲಿನ ಅಭಿಪ್ರಾಯವನ್ನು ಕೊಂಚಮಟ್ಟಿಗೆ ವಿರೋಧಿಸುತ್ತದೆ. ಇದರಿಂದ ದ್ವಾರವೆಂದರೆ ಯಜ್ಞಗೃಹದ ಬಾಗಿಲುಗಳೆಂಬುದು ಅಲಂಕಾರಿಕವಾದುದು ಎಂದೆನ್ನಬಹುದೆಂದು ಒಂದು ಮತವಾಗಿದೆ. ಐತರೇಯ ಬ್ರಾಹ್ಮಣದಲ್ಲಿ,

**ದುರೋ ಯಜತಿ ವೃಷ್ಟಿರ್ವೈ ದುರೋ ವೃಷ್ಟಿಮೇವ ತತ್ಪ್ರೀಣಾತಿ ವೃಷ್ಟಿಮನ್ನಾದ್ಯಂ ಯಜಮಾನೇ ದಧಾತಿ ।**

(ಐ. ಬ್ರಾ. ೨-೪)

ಎಂದು ದ್ವಾರವೆಂಬ ಅರ್ಥಕ್ಕೆ ಬದಲಾಗಿ ವೃಷ್ಟಿಯೆಂದರ್ಥಮಾಡಿದೆ. ಈ ಅರ್ಥವು ಹೇಗಾಗುವುದೆಂದು ವಿಶದಪಡಿಸಿಲ್ಲ. ನಿರುಕ್ತಕಾರರು,

**ದ್ವಾರೋ ಜವತೇರ್ವಾ ದ್ರವತೇರ್ವಾ ವಾರಯತೇರ್ವಾ** । ಮುಂದಕ್ಕೆ ಒತ್ತು ಎಂದರ್ಥವನ್ನು ಕೊಡುವ **ಜು** ಧಾತುವಿನಿಂದಾಗಲಿ, ಮುಂದುವರಿ ಎಂದರ್ಥವನ್ನು ಕೊಡುವ **ದ್ರು** ಧಾತುವಿನಿಂದಾಗಲಿ ಅಥವಾ ಪ್ರತ್ಯೇಕಿಸು ಎಂದರ್ಥವನ್ನು ಕೊಡುವ **ವೃ** ಧಾತುವಿನಿಂದಾಗಲಿ ನಿಷ್ಪನ್ನವಾಗಿದೆಯೆಂದು,

**ವ್ಯಚಸ್ವತೀರುರ್ವಿಯಾ ವಿ ಶ್ರಯಂತಾಂ ಪತಿಭ್ಯೋ ನ ಜನಯಃ ಶುಂಭಮಾನಾಃ ।**
**ದೇವೀರ್ದ್ವಾರೋ ಬೃಹತೀರ್ವಿಶ್ವಮಿನ್ವಾ ದೇವೇಭ್ಯೋ ಭವತ ಸುಪ್ರಾಯಣಾಃ ।**

(ಋ. ಸಂ. ೧೦-೧೧೦-೫)

ಎಂಬ ಋಕ್ಕನ್ನು ಉದಹರಿಸಿ ದ್ವಾರಶಬ್ದಕ್ಕೆ ಅರ್ಥವನ್ನು ವಿವರಿಸುತ್ತಾ, **ಗೃಹದ್ವಾರ ಇತಿ ಕಾತ್ಥಕ್ಯಃ** । ಕಾತ್ಥ್ಯಕರ ಮತದಂತೆ ಗೃಹದ್ವಾರವೆಂದೂ, **ಅಗ್ನಿರಿತಿ ಶಾಕಪೂಣಿಃ** । ಶಾಕಪೂಣಿಯ ಮತದಂತೆ ಅಗ್ನಿಯೆಂದೂ ಸಹ ಮತಭೇದವನ್ನು ತಿಳಿಸಿದ್ದಾರೆ. (ನಿ. ೮-೧೦) ಬೃಹದ್ದೇವತೆಯಲ್ಲಿ,

**ದ್ವಾರಸ್ತು ದೇವ್ಯೋ ಯಾಃ ಪ್ರೋಕ್ತಾ ವಿಶ್ವೇಷಾಂ ತಾಸ್ತು ಪತ್ನಯಃ ।**
**ಅಗ್ನಾಯೀಮನುವರ್ತಂತೇ ತಥಾಗ್ನಾಯ್ಯಗ್ನಿಮೇವ ಚ ॥**
**ಅಗ್ನೌ ಧ್ರುವಂ ಸ್ಥಿತಾಸ್ತಾಸ್ತು ಸಂಸ್ತೂಯಂತೇಽಗ್ನಿನಾ ಸಹ ।**
**ಪ್ರಾಧಾನ್ಯಂ ತಾಸು ಚೈವಾಗ್ನೇ ಸ್ತುತಿಷ್ವೇವ ಹವಿಷ್ಷು ಚ ॥**

(ಬೃ. ದೇ. ೩-೬ರಿಂದ ೭)

ಈ ದ್ವಾರಗಳು ದೇವಪತ್ನಿಯರೆಂದೂ, ಅಗ್ನಿಯನ್ನು ಅನುಸರಿಸುವ ಅಗ್ನಾಯಿಯನ್ನು ಇವರು ಅನುಸರಿಸುವರೆಂದೂ, ಅಗ್ನಿಯಲ್ಲೇ ಸ್ಥಿರರಾಗಿ ನೆಲೆಸಿರುವುದರಿಂದ ಅಗ್ನಿಯೊಡನೆ ಸ್ತುತಿಸಲ್ಪಡುವರೆಂದೂ ಹೇಳಿದೆ. ಈ ವಿವರಣೆಯು ಸಯುಕ್ತಿಕವಾಗಿದೆ.

ಯಜ್ಞಗೃಹದ ನಾಲ್ಕು ದ್ವಾರಗಳನ್ನು ಸಂಸ್ಕಾರಮಾಡುವ ವಿಷಯದಲ್ಲಿ ತೈತ್ತಿರೀಯ ಸಂಹಿತೆಯಲ್ಲಿ ಈರೀತಿ ವರ್ಣಿಸಿದೆ—

**ಪ್ರಾಚೀನವಗ್ಂಶಂ ಕರೋತಿ ದೇವಮನುಷ್ಯಾ ದಿಶೋ ವ್ಯಭಜಂತ ಪ್ರಾಚೀಂ ದೇವಾ ದಕ್ಷಿಣಾ ಪಿತರಃ ಪ್ರತೀಚೀಂ ಮನುಷ್ಯಾ ಉದೀಚೀಗ್ಂ ರುದ್ರಾಃ ॥**

(ತೈ. ಸಂ, ೬-೧-೧-೧)

ಎಂದರೆ ಯಜ್ಞಗೃಹದ ಪೂರ್ವದ್ವಾರವನ್ನು ದೇವತೆಗಳೂ, ದಕ್ಷಿಣದ್ವಾರವನ್ನು ಪಿತೃದೇವತೆಗಳೂ, ಪಶ್ಚಿಮದ್ವಾರವನ್ನು ಮನುಷ್ಯರೂ, ಉತ್ತರದ್ವಾರವನ್ನು (ಏಕಾದಶ) ರುದ್ರರೂ ಹಂಚಿಕೊಂಡರೆಂದಿದೆ.

ಈ ಯಜ್ಞಗೃಹದ ದ್ವಾರಗಳ ಹೆಸರುಗಳು ಈ ಋಕ್ಕಿನಲ್ಲಿ ಹೇಳಿರುವಂತೆ ಈ ರೀತಿ ಇದೆ. **ವಿರಾಟ್** ಎಂಬುವುದು ಪೂರ್ವದ್ವಾರವೆಂದೂ **ಸಮ್ರಾಟ್** ಎಂಬುದು ದಕ್ಷಿಣದ್ವಾರವೆಂದೂ ವಿಭ್ವೀಃ ಎಂಬುದು ಪಶ್ಚಿಮದ್ವಾರವೆಂದೂ ಪ್ರಭ್ವೀಃ ಎಂಬುದು ಉತ್ತರದ್ವಾರವೆಂದೂ ಹೇಳಬಹುದು. ಈ ಶಬ್ದಗಳ ಅವಯವಾರ್ಥಗಳನ್ನು ಸಾಯಣರು ವಿವರಿಸಿರುವರು.

**ವಿರಾಟ್—ವಿಶೇಷೇಣ ರಾಜಂತ ಇತಿ । ವ್ಯತ್ಯಯೇನೈಕವಚನಂ ।** ವಿಶೇಷವಾಗಿ ಪ್ರಕಾಶಿಸುವುದರಿಂದ ಈ ದ್ವಾರಕ್ಕೆ (ಪೂರ್ವದ್ವಾರಕ್ಕೆ) ವಿರಾಟ್ ಎಂದು ಹೆಸರು. ಛಾಂದಸವಾಗಿ ಏಕವಚನ ಪ್ರಯೋಗವಿದೆ.

**ಸಮ್ರಾಟ್—ಸಮ್ಯಗಿತಿ ಪೂಜ್ಯತರಂ ರಾಜಮಾನಾಃ । ಅತ್ರಾಪಿ ವ್ಯತ್ಯಯೇನೈಕ ವಚನಂ ।** ಚೆನ್ನಾಗಿರುವುದರಿಂದ ಈ ದ್ವಾರವು ಪೂಜ್ಯಾರ್ಹವೂ, ಪ್ರಕಾಶಮಾನವೂ ಆಗಿರುವುದು. ಇಲ್ಲಿಯೂ ಮೇಲೆ ಹೇಳಿದ ಕಾರಣಕ್ಕಾಗಿ ಏಕವಚನ ಪ್ರಯೋಗವಿರುವುದು.

**ವಿಭ್ವೀಃ—ವಿಭ್ವ್ಯೋ ವಿವಿಧಂ ಭವಿತ್ರ್ಯಃ ।** ವಿಧವಿಧವಾಗಿ ಇರುವುದು ಎಂದರೆ ಅಲಂಕೃತವಾಗಿರುವ ದ್ವಾರಗಳೆಂದರ್ಥವು.

**ಪ್ರಭ್ವೀಃ—ಪ್ರಕರ್ಷೇಣ ಭವಿತ್ರ್ಯಃ ।** ಬಹಳ ಚೆನ್ನಾಗಿ ಅಲಂಕೃತವಾಗಿರುವ ದ್ವಾರಗಳೆಂದರ್ಥವು.

**ಬಹ್ವೀಶ್ಚ ಭೂಯಸೀಶ್ಚ—ಲೋಕಪ್ರಸಿದ್ಧಸಂಖ್ಯಾಭಿಶ್ಚ ಭೂಯಸ್ಯಶ್ಚ ।** ಎಂದರೆ ಲೋಕದಲ್ಲಿ ಪ್ರಸಿದ್ಧವಾಗಿರುವಂತೆ ನಾಲ್ಕು ದಿಕ್ಕುಗಳಲ್ಲಿಯೂ ಇರುವ ನಾಲ್ಕುದ್ವಾರಗಳು. **ಭೂಯಸೀಶ್ಚ** ಎಂಬ ಶಬ್ದದಿಂದ ಈ ದ್ವಾರಗಳು ದೊಡ್ಡದಾಗಿರುವುದರಿಂದ ಮಹಾದ್ವಾರಗಳೆಂದು ಪ್ರಸಿದ್ಧವೆಂಬ ವಿಷಯವು ವ್ಯಕ್ತವಾಗುತ್ತದೆ.

**ಘೃತಾನಿ—**ಘೃತಶಬ್ದವು, ಅಣಃ ಕ್ಷೋದಃ ಮೊದಲಾದ ನೂರೊಂದು ಉದಕನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೨೮-) ಇಲ್ಲಿ ಘೃತಾನಿ ಎಂದರೆ ಉದಕಗಳೆಂದರ್ಥವು.

ವ್ಯಾಕರಣಪ್ರಕ್ರಿಯಾ

**ವಿರಾಟ್—**ವಿಶೇಷೇಣ ರಾಜಂತೇ ಇತಿ ವಿರಾಜಃ ರಾಜೃ ದೀಪ್ತೌ. ಧಾತು. **ಕ್ವಿಪ್**ಪ್ರತ್ಯಯ. **ವ್ಯತ್ಯಯೋಬಹುಲಮ್** ಎಂಬುದರಿಂದ ಬಹುವಚನಕ್ಕೆ ಏಕವಚನ ಪ್ರತ್ಯಯಬರುತ್ತದೆ. ಪದಾಂತದಲ್ಲಿ **ವ್ರಶ್ಚಭ್ರಸ್ಜ—**ಎಂಬುದರಿಂದ ಧಾತು ಜಕಾರಕ್ಕೆ ಷತ್ವ. **ಗತಿಕಾರಕೋಪಪದಾತ್‌ಕೃತ್** ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಹೀಗೆಯೇ **ಸಮ್ರಾಟ್** ಎಂಬಲ್ಲಿಯೂ ವ್ಯತ್ಯಯದಿಂದ ಏಕವಚನ ಬಂದಿದೆ.

ಸ್ವಾಹಾಕೃತಿಯಿಂದ ಆಹುತಿಯು ಸಮಾಪ್ತವಾಗಿರುವುದರಿಂದ ಯಾಗಕ್ಕೆಲ್ಲಾ ಅದೇ ಉಪಷ್ಟಂಭಕವಾಗಿರುವುದು ಮತ್ತು ಯಜ್ಞವನ್ನು ಸರಿಯಾದ ಆಧಾರದಮೇಲೆ ನಿಲ್ಲಿಸುವುದು ಎಂದು ವಿವರಿಸಿದೆ. ಬೃಹದ್ದೇವತೆಯಲ್ಲಿ,

ಸ್ವಾಹಾಕೃತಯೋಽನೇಕಾಶ್ಚ ವಿದುಷಾಂ ಮತಯೋಽಭವನ್ ।
ತತ್ಸರ್ವಂ ತ್ವಯಮೇವಾಗ್ನಿರ್ಭವತೀತಿ ವಿನಿಶ್ಚಯಃ ॥
ಅಯಂ ಹಿ ಕರ್ತಾ ಸ್ವಾಹಾನಾಂ ಕೃತಿಸ್ತಾಸಾಮಿಹೈಕಜಾ ।
ಅಯಂ ಪ್ರಸೂತಿರ್ಭೂತಾನಾಂ ಸರ್ವೇಷಾಮಯಮವ್ಯಯಃ ॥

(ಬೃ. ದೇ. ೩-೯ರಿಂದ ೩೦)

ಸ್ವಾಹಾಕೃತಿಯ ವಿಷಯದಲ್ಲಿ ಪ್ರಾಜ್ಞರ ಅಭಿಪ್ರಾಯಗಳು ಒಂದೇ ವಿಧವಾಗಿಲ್ಲ. ಆದರೂ ಸಹ ಈ ಪದದಿಂದ ನಿರ್ದೇಶಿಸಲ್ಪಟ್ಟ ಸಕಲವಾದ ಭಾವವೂ ಸಹ ಈ ಪಾರ್ಥಿವಾಗ್ನಿಯನ್ನೇ ಉದ್ದೇಶಿಸಿದೆ. ಈ ಅಗ್ನಿಯೇ ಸ್ವಾಹಾಕರ್ತನಾದುದರಿಂದಲೂ, ಇವನೇ ಇದರ ಕೃತಿಯೂ ಆದುದರಿಂದಲೂ ಪಾರ್ಥಿವಾಗ್ನಿಯು ಈ ರೀತಿ ಕರೆಯಲ್ಪಟ್ಟಿದ್ದಾನೆ, ಎಂದು ಆಗ್ನೇಯೀ ಇತಿ ತು ಸ್ಥಿತಿಃ (ನಿ. ೮-೨೨) ಎಂಬ ನಿರುಕ್ತಕಾರರ ಮತವನ್ನನುಸರಿಸಿ ಬೃಹದ್ದೇವತಾಕಾರರು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ.

ಸ್ವಾಹಾಕಾರಾತ್ಮಕವಾದ ಆಪ್ರೀಸೂಕ್ತಗಳ ಕೊನೆಯ ಋಕ್ಕುಗಳಲ್ಲಿ ಪೂಷ, ಮರುತ್ತುಗಳು, ವಾಯು ಸೂರ್ಯ, ಇಂದ್ರ, ವರುಣ ಇತ್ಯಾದಿ ದೇವತೆಗಳೆಲ್ಲಾ ಉದ್ದೇಶಿಸಲ್ಪಟ್ಟಿದ್ದಾರೆ, ಎಲ್ಲರಿಗಿಂತಲೂ ಅಧಿಕವಾಗಿ,

ಪುರೋಗಾ ಅಗ್ನಿರ್ದೇವಾನಾಂ ಗಾಯತ್ರೇಣ ಸಮುಜ್ಯತೇ । ಸಾಹಾಕೃತೀಷು ರೋಚತೇ ।

(ಋ. ಸಂ. ೧-೧೮೮-೧೧)

ಸದ್ಯೋ ಜಾತೋ ವ್ಯಮಿಮೀತ ಯಜ್ಞಮಗ್ನಿರ್ದೇವಾನಾಮಭವತ್ಪುರೋಗಾಃ ।
ಅಸ್ಯ ಹೋತುಃ ಪ್ರದಿಶ್ಯೃತಸ್ಯ ವಾಚಿ ಸ್ವಾಹಾಕೃತಂ ಹವಿರದಂತು ದೇವಾಃ ॥

(ಋ ಸಂ. ೧೦-೧೧೦-೧೧)

ಎಂಬ ಋಕ್ಕುಗಳಲ್ಲಿ ಉತ್ಪನ್ನನಾದ ಕಾಲದಿಂದಲೂ ಅಗ್ನಿಯು ದೇವತೆಗಳ ಪುರೋಗನೆಂದು ಸ್ತುತಿಸಿದೆ. ಮತ್ತು ಸ್ವಾಹಾಕೃತಿಯ ಪ್ರಭಾವವನ್ನು ವಿವರಿಸುತ್ತಾ,

ಆ ಯಾಹ್ಯಗ್ನೇ ಸಮಿಧಾನೋ ಅರ್ವಾಙಿಂದ್ರೇಣ ದೇವೈಃ ಸರಥಂ ತುರೇಭಿಃ ।
ಬರ್ಹಿರ್ನ ಆಸ್ತಾಮದಿತಿಃ ಸುಪುತ್ರಾ ಸ್ವಾಹಾ ದೇವಾ ಅಮೃತಾ ಮಾದಯಂತಾಂ ॥

(ಋ. ಸಂ ೩-೪-೧೧)

ಅಗ್ನೇ ವಹ ವರುಣಮಿಷ್ಟಯೇ ನ ಇಂದ್ರಂ ದಿವೋ ಮರುತೋ ಅಂತರಿಕ್ಷಾತ್ ।
ಸೀದಂತು ಬರ್ಹಿರ್ವಿಶ್ವ ಆ ಯಜತ್ರಾಃ ಸ್ವಾಹಾ ದೇವಾ ಅಮೃತಾ ಮಾದಯಂತಾಂ ॥

(ಋ. ಸಂ. ೧೦-೭೦-೧೧)

ಎಂಬ ಋಕ್ಕುಗಳಲ್ಲಿ ಸ್ವಾಹಾ ಎಂಬ ಮಂತ್ರದಿಂದ ದೇವತೆಗಳು ಹರ್ಷಗೊಳ್ಳುವುದರಿಂದ ಯಜ್ಞದಲ್ಲಿ ಸ್ವಾಹಾ ಶಬ್ದಕ್ಕೆ ಇಷ್ಟು ದಿವ್ಯವಾದ ಸ್ಥಾನವಿದೆಯೆಂದು ಸೂಚಿಸಿದೆ.

ವ್ಯಾಕರಣಪ್ರಕ್ರಿಯಾ

**ಪುರೋಗಾಃ**—ಗಮ್ಲೃ ಗತೌ. ಧಾತು. ಜನಸನಖನ ಕ್ರಮಗಮೋವಿಟ್ (ಪಾ. ಸೂ. ೩-೨-೬೭) ಎಂಬುದರಿಂದ ವಿಟ್ ಪ್ರತ್ಯಯ. ಇದು ಪರವಾದಾಗ ವಿಡ್ವನೋರನುನಾಸಿಕಸ್ಯಾತ್ (ಪಾ. ಸೂ. ೬-೪-೪೧) ಎಂಬುದರಿಂದ ಧಾತುವಿನ ಅನುನಾಸಿಕವಾದ ಮಕಾರಕ್ಕೆ ಆತ್ವ. ಪ್ರತ್ಯಯದಲ್ಲಿ ಸರ್ವವೂ ಲೋಪವಾಗುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಗಾಯತ್ರೇಣ**—ಗಾಯತ್ರ್ಯಾಃ ಸಂಬಂಧಿ ಗಾಯತ್ರಮ್. ತಸ್ಯೇದಮ್ (ಪಾ. ಸೂ. ೪-೩-೧೨೦) ಎಂಬುದರಿಂದ ಅಣ್ ಪ್ರತ್ಯಯ. ಯಸ್ಯೇತಿಚ ಎಂಬುದರಿಂದ ಪೂರ್ವದ ಈಕಾರಕ್ಕೆ ಲೋಪ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾ ಏಕವಚನಾಂತರೂಪ,

**ಅಜ್ಯತೇ**—ಅಂಜೂವ್ಯಕ್ತಿಮ್ರಕ್ಷಣಕಾಂತಿಗತಿಷು. ಧಾತು. ಕರ್ಮಣಿಯಲ್ಲಿ ಲಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ರೋಚತೇ**—ರುಚ ದೀಪ್ತೌ. ಧಾತು. ಭ್ವಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙ್ಙತಿಙಃ (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ.

---

## ನೂರ ಎಂಭತ್ತೊಂಭತ್ತನೆಯ ಸೂಕ್ತವು.

---

ಸಾಯಣಭಾಷ್ಯಂ

ಅಗ್ನೇ ನಯೇತಿ ದಶಮಂ ಸೂಕ್ತಮಷ್ಟರ್ಚಮಾಗಸ್ತ್ಯಂ ತ್ರೈಷ್ಟುಭಮಾಗ್ನೇಯಂ । ಅಗ್ನೇ ನಯಾಷ್ಟಾವಾಗ್ನೇಯಮಿತ್ಯನುಕ್ರಮಣಿಕಾ ॥ ಪ್ರಾತರನುವಾಕಾಶ್ವಿನಶಸ್ತ್ರಯೋಸ್ತ್ರೈಷ್ಟುಭಛಂದಸಿ ವಿನಿಯೋಗಃ । ಅಥೈತಸ್ಯಾ ಇತ್ಯತ್ರಾಗ್ನೇ ನಯಾಗ್ನೇ ಬೃಹನ್ನಿತ್ಯಷ್ಟಾನಾಮುತ್ತಮಾಮುತ್ತಮಾಮುದ್ಧರೇತ್। ಆ, ೪-೧೩ । ಇತಿ ಸೂತ್ರಿತತ್ವಾತ್ ॥ ಅತ್ರ ಶೌನಕಃ । ಉತ್ಪಥಪ್ರತಿಪನ್ನೋ ಯೋ ಭ್ರಷ್ಟೋ ವಾಪಿ ಪಥಃ ಕ್ವಚಿತ್ । ಪಂಥಾನಂ ಪ್ರತಿಪದ್ಯೇತ ಕೃತ್ವಾ ವಾ ಕರ್ಮ ಗರ್ಹಿತಂ ॥ ಅಗ್ನೇ ನಯೇತಿ ಸೂಕ್ತೇನ ಪ್ರತ್ಯೃಚಂ ಜುಹುಯಾದ್ಘೃತಂ। ಜಪೇಚ್ಚ ಪ್ರಯತೋ ನಿತ್ಯಮುಪತಿಷ್ಠೇತ ವ್ಯಾನಲಂ । ಋಗ್ವಿ ೧-೨೭ । ಇತಿ ॥ ಆದ್ಯಾಶ್ಚತಸ್ರಃ ಶ್ರವಣಾಕರ್ಮಣಿ ವಿನಿಯುಕ್ತಾಃ । ಶ್ರಾವಣ್ಯಾಂ ಪೌರ್ಣಮಾಸ್ಯಾಮಿತ್ಯತ್ರ ಸೂತ್ರಿತಂ । ಅಗ್ನೇ ನಯ ಸುಪಥಾ ರಾಯೇ ಅಸ್ಮಾನಿತಿ ಚತಸೃಭಿಃ ಪ್ರತ್ಯೃಚಂ ಹುತ್ವಾ । ಆ. ಗೃ ೨-೧-೪। ಇತಿ ॥ ಆಗ್ನೇಯೇ ಪಶೌ ವಪಾಪುರೋಡಾಶಯೋರಾದ್ಯೇ ದ್ವೇ ಅನುವಾಕ್ಯೇ । ತಥಾ ಚ ಸೂತ್ರಿತಂ । ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ ಪಾಹಿ ನೋ ಅಗ್ನೇ ಪಾಯುಭಿರಜಸ್ರೈಃ । ಆ ೩-೭ । ಇತಿ ॥ ಆದ್ಯಾ ಪ್ರಾಯಣೀಯೇಷ್ಟಾವಾಗ್ನೇಯಸ್ಯಾನುವಾಕ್ಯಾ । ಸೈವೋದಯನೀಯೇ ಯಾಜ್ಯಾ । ತದಹಃ ಪ್ರಾಯಣೀಯೇಷ್ಟಿರಿತ್ಯತ್ರ ಸೂತ್ರಿತಂ । ಅಗ್ನೇ ನಯ ಸುಪಥಾ ರಾಯೇ ಅಸ್ಮಾನಾ ದೇವಾನಾಮಪಿ ಪಂಥಾಮಗನ್ಮ । ಆ. ೪-೩ । ಇತಿ ॥ ವಿಪರೀತಾಶ್ಚ ಯಾಜ್ಯಾನುವಾಕ್ಯಾ ಇತಿ ಚ ॥

ಅನುವಾದವು—**ಅಗ್ನೇ ನಯ** ಎಂಬ ಈ ಸೂಕ್ತವು ಇಪ್ಪತ್ತನಾಲ್ಕನೆಯ ಅನುವಾಕದಲ್ಲಿ ಹತ್ತನೆಯ ಅನುವಾಕವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು ; ಅಗ್ನಿಯು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಅಗ್ನೇ ನಯಾಷ್ಟಾವಾಗ್ನೇಯಂ** ಎಂದು ಮೊದಲಾಗಿ ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ತ್ರಿಷ್ಟುಪ್ ಛಂದಸ್ಸಿನ ಆಶ್ವಿನಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತ ಸೂತ್ರದ—**ಅಥೈತಸ್ಯಾ ಇತ್ಯೈತ್ರಾಗ್ನೇ ನಯಾಗ್ರೇ ಬೃಹನ್ನಿತ್ಯೆಷ್ಟಾನಾಮುತ್ತಮಾದುತ್ತಮಾಸ್ತಿಸ್ರ ಉದ್ಧರೇತ್** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ ೪-೧೩) ಮತ್ತು ಈ ಸೂಕ್ತದ ವಿನಿಯೋಗವಿಷಯದಲ್ಲಿ ಶೌನಕಮಹರ್ಷಿಯು ಋಗ್ವಿಧಾನವೆಂಬ ಗ್ರಂಥದಲ್ಲಿ ಈರೀತಿ ಹೇಳಿರುವರು—

**ಉತ್ಪಥಪ್ರತಿಪನ್ನೋ ಯೋ ಭ್ರಷ್ಟೋ ವಾಪಿ ಪಥಃ ಕ್ವಚಿತ್ ।**<br>
**ಪಂಥಾನಂ ಪ್ರತಿಪದ್ಯೇತ ಕೃತ್ವಾ ವಾ ಕರ್ಮ ಗರ್ಹಿತಂ ॥**<br>
**ಅಗ್ನೇ ನಯೇತಿ ಸೂಕ್ತೇನ ಪ್ರತ್ಯೃಚಂ ಜುಹುಯಾದ್ಘೃತಂ ।**<br>
**ಜಪೇಚ್ಚ ಪ್ರಯತೋ ನಿತ್ಯಮುಪತಿಷ್ಠೇತ ವ್ಯಾನಲಂ ॥**

(ಋಗ್ವಿಧಾನ. ೧-೨೭)

ಎಂದರೆ ಯಾವ ಪುರುಷನು ಬೆಟ್ಟವನ್ನು ಹತ್ತುವಾಗ ಅಥವಾ ದೂರದೇಶ ಪ್ರಯಾಣಮಾಡುವಾಗ ಮಧ್ಯದಲ್ಲಿ ಎಲ್ಲಾದರೂ ದಾರಿತಪ್ಪಿದರೆ, ಅಥವಾ ನಿಂದ್ಯವಾದ ಕಾರ್ಯವನ್ನು ಕಾಣದೆ ಮಾಡಿದರೆ ಅಂತಹ ಪುರುಷನು ಅಗ್ನೇ ನಯ ಎಂಬ ಈ ಸೂಕ್ತದ ಪ್ರತಿಋಕ್ಕಿನಿಂದಲೂ ತುಪ್ಪದಿಂದ ಅಗ್ನಿಯಲ್ಲಿ ಹೋಮಮಾಡಬೇಕು ಮತ್ತು ಈ ಸೂಕ್ತವನ್ನು ಶುಚಿರ್ಭೂತನಾಗಿ ನಿತ್ಯವೂ ಜಪಮಾಡಿ ಅಗ್ನ್ಯುಪಸ್ಥಾನಮಾಡಬೇಕು. ಆರೀತಿ ಮಾಡಿದಲ್ಲಿ ಅವನಿಗೆ ಸರಿಯಾದ ಮಾರ್ಗವು ಸಿಕ್ಕುವುದು ಎಂದು ಹೇಳಿರುವರು. ಇದಲ್ಲದೆ ಈ ಸೂಕ್ತದ ಮೊದಲಿನ ನಾಲ್ಕು ಋಕ್ಕುಗಳನ್ನು-ಪ್ರತಿಋಕ್ಕಿನಿಂದಲೂ ಶ್ರವಣನಕ್ಷತ್ರ ಯುಕ್ತವಾದ ಪೌರ್ಣಮಿಯಲ್ಲಿ ಉಪಾಕರ್ಮವೆಂಬ ಕರ್ಮದಲ್ಲಿ ಹೋಮಮಾಡಬೇಕೆಂದು ಆಶ್ವಲಾಯನ ಗೃಹ್ಯಸೂತ್ರದ—**ಶ್ರಾವಣ್ಯಾಂ ಪೌರ್ಣಮಾಸ್ಯಾಂ** ಎಂಬ ಖಂಡದ **ಅಗ್ನೇ ನಯ ಸುಪಥಾ ರಾಯೇ ಅಸ್ಮಾನಿತಿಚತಸೃಭಿಃ ಪ್ರತ್ಯೃಚಂ ಹುತ್ವಾ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ ಗೃ. ಸೂ. ೨-೧-೪) ಮತ್ತು ಅಗ್ನಿ ಸಂಬಂಧವಾದ ಪಶುಯಾಗದಲ್ಲಿ ವಪಾಪುರೋಡಾಶ ಹೋಮಮಾಡುವಾಗ ಈ ಸೂಕ್ತದ ಮೊದಲಿನ ಎರಡು ಋಕ್ಕುಗಳನ್ನು ಪುರೋನುವಾಕ್ಯಾಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ—**ಅಗ್ನೇನಯ ಸುಪಥಾ ರಾಯೇ ಅಸ್ಮಾನ್ ಪಾಹಿ ನೋ ಅಗ್ನೇ ಪಾಯುಭಿರಜಸ್ರೈಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೩-೭) ಮತ್ತು ಪ್ರಾಯಣೀಯೇಷ್ಟಿಯಲ್ಲಿ (ಯಜ್ಞದ ಮೊದಲದಿನ) ಈ ಸೂಕ್ತದ ಮೊದಲನೆಯ ಋಕ್ಕನ್ನು ಅಗ್ನಿಸಂಬಂಧವಾದ ಪುರೋನುವಾಕ್ಯಾ ಮಂತ್ರವನ್ನಾಗಿಯೂ, ಉದಯನೀಯೇಷ್ಟಿಯಲ್ಲಿ (ಯಜ್ಞದ ಕೊನೆಯದಿನ) ಅದೇ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿಯೂ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ತದಹಃ ಪ್ರಾಯಣೀಯೇಷ್ಟಿ** ಎಂಬ ಖಂಡದ **ಅಗ್ನೇ ನಯ ಸುಪಥಾ ರಾಯೇ ಅಸ್ಮಾನಾ ದೇವಾನಾಮಪಿ ಪಂಥಾಮಗನ್ಮ** ಎಂಬ ಸೂತ್ರದಿಂದಲೂ, **ವಿಪರೀತಾಶ್ಚ ಯಾಜ್ಯಾನುವಾಕ್ಯಾ** ಎಂಬ ಸೂತ್ರದಿಂದಲೂ ಸಹ ವಿವೃತವಾಗಿರುವುದು- (ಆ. ೪-೩).

॥ ಓಂ ॥

## ಸೂಕ್ತ—೧೮೯

॥ ಮಂಡಲ—೧ ॥ ಅನುವಾಕ—೨೪ ॥ ಸೂಕ್ತ—೧೮೯ ॥

॥ ಅಷ್ಟಕ— ೨ ॥ ಅಧ್ಯಾಯ— ೫ ॥ ವರ್ಗ- ೧೦-೧೧ ॥

॥ ಸೂಕ್ತದಲ್ಲಿ ರುವಋಕ್ಸಂಖ್ಯೆ-೮ ॥

ಋಷಿಃ—ಅಗಸ್ತ್ಯಃ ।

ದೇವತಾ—ಅಗ್ನಿಃ ॥

ಛಂದಃ—ತ್ರಿಷ್ಟುಪ್ ।

—:o:—

ಸಂಹಿತಾಪಾಠಃ

ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ವಿಶ್ವಾನಿ ದೇವ ವಯುನಾನಿ ವಿದ್ವಾನ್ ।

ಯುಯೋಧ್ಯ ೧ ಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ ॥ ೧ ॥

॥ ಪದಪಾಠಃ ॥

ಅಗ್ನೇ । ನಯ । ಸುಽಪಥಾ । ರಾಯೇ । ಅಸ್ಮಾನ್ । ವಿಶ್ವಾನಿ । ದೇವ । ವಯುನಾನಿ । ವಿದ್ವಾನ್ ।

ಯುಯೋಧಿ । ಅಸ್ಮತ್ । ಜುಹುರಾಣಂ । ಏನಃ । ಭೂಯಿಷ್ಠಾಂ । ತೇ । ನಮಃಽಉಕ್ತಿಂ । ವಿಧೇಮ ॥

ಸಾಯಣಭಾಷ್ಯಂ

ಹೇ ಅಗ್ನೇಽಂಗನಾದಿಗುಣವಿಶಿಷ್ಟ ದೇವ ದ್ಯೋತಮಾನ ವಿಶ್ವಾನಿ ವಯುನಾನಿ ಸರ್ವಾಣಿ ಪ್ರಜ್ಞಾನಾನಿ । ಅನೇನೈತದನುಷ್ಠಿತಮಿದಂ ಪ್ರಾಯಣೀಯಮಿತಿ ಯದೇತಜ್ಜ್ಞಾನಮಸ್ತಿ ತದ್ವಿದ್ವಾನಿತ್ಯರ್ಥಃ । ಯತೋ ವಿದ್ವಾನ್ ಅತಸ್ತ್ವಮಸ್ಮಾನ್ ಸುಪಥಾ ಶೋಭನೇನ ಮಾರ್ಗೇಣ ರಾಯೇ ಗಂತವ್ಯಾಯ ಸ್ವರ್ಗಾದಿಧನಾಯ । ದ್ವಿತೀಯಾರ್ಥೇ ವಾ ಚತುರ್ಥೀ । ಪ್ರಾಪಣೀಯಂ ರಯಿಂ ಪ್ರತಿ ನಯ । ತದರ್ಥಂ ಜುಹುರಾಣಂ ಕುಟಿಲಕಾರ್ಯೇನಃ ಪಾಪಂ ಫಲಪ್ರತಿಬಂಧರೂಪಮಸ್ಮದಸ್ಮತ್ತೋ ಯುಯೋಧಿ । ಪೃಥಕ್ಕುರು । ತೇ ತವ ವಯಂ ಭೂಯಿಷ್ಠಾಮತಿಪ್ರವೃದ್ಧಾಂ ನಮಉಕ್ತಿಂ ನಮಸ್ಕಾರೋಕ್ತಿಂ ಸ್ತುತಿಂ ವಿಧೇಮ । ಪರಿಚರೇಮ । ಕುರ್ಮಃ ॥

ಪ್ರತಿಪದಾರ್ಥ

**ದೇವ**—ದೇವತಾತ್ಮನಾದ । **ಅಗ್ನೇ**—ಎಲೈ ಅಗ್ನಿಯೇ, । **ವಿಶ್ವಾನಿ ವಯುನಾನಿ**—ಸಕಲ ಜ್ಞಾನಗಳನ್ನೂ । **ವಿದ್ವಾನ್**—ತಿಳಿದಿರುವ ನೀನು । **ಅಸ್ಮಾನ್**—ನಮ್ಮನ್ನು । **ಸುಪಥಾ**—ಶ್ರೇಷ್ಠವಾದ ಮಾರ್ಗದಿಂದ । **ರಾಯೇ**—ಸ್ವರ್ಗಾದಿರೂಪವಾದ ಸಂಪತ್ತನ್ನು ಪಡೆಯಲು । **ನಯ**—ಕರೆದುಕೊಂಡು ಹೋಗು । **ಜುಹುರಾಣಂ**—ಕುಟಿಲವಾದ ಮಾರ್ಗದಲ್ಲಿ ಎಳೆಯತಕ್ಕ । **ಏನಃ**—ಪಾಪವನ್ನು । **ಅಸ್ಮತ್**—ನಮ್ಮಿಂದ । **ಯುಯೋಧಿ**—ಬೇರೆ ಮಾಡು । **ತೇ**—ನಿನಗೆ । **ಭೂಯಿಷ್ಠಾಂ**—ಅತ್ಯಧಿಕವಾಗಿ । **ನಮಉಕ್ತಿಂ**—ನಮಸ್ಕಾರೋಕ್ತಿಯನ್ನು । **ವಿಧೇಮ**—ಸಲಿಸುವೆವು ।

ಭಾವಾರ್ಥ

ದೇವಾತ್ಮನಾದ ಎಲೈ ಅಗ್ನಿಯೇ, ಸಕಲಜ್ಞಾನಗಳನ್ನೂ ತಿಳಿದಿರುವ ನೀನು ನಮ್ಮನ್ನು ಶ್ರೇಷ್ಠವಾದ ಮಾರ್ಗದಿಂದ ಸ್ವರ್ಗಾದಿರೂಪವಾದ ಸಂಪತ್ತನ್ನು ಪಡೆಯಲು. ಕರೆದುಕೊಂಡು ಹೋಗು. ಕುಟಿಲವಾದ ಮಾರ್ಗದಲ್ಲಿ ನಮ್ಮನ್ನು ಸೆಳೆಯತಕ್ಕ ಪಾಪದಿಂದ ನಮ್ಮನ್ನು ದೂರಮಾಡು. ನಾವು ನಿನಗೆ ಅತ್ಯಧಿಕವಾದ ನಮಸ್ಕಾರೋಕ್ತಿಯನ್ನು ಸಲಿಸುವೆವು.

## English Translation

Agni, knowing all kinds of knowledge, lead us by good ways to wealth, remove far from us the sin that would force us astry, that we may offer to you most ample adoration.

ವಿಶೇಷವಿಷಯಗಳು

**ರಾಯೇ**—ರಯಿಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪) ಧನನಾಮಗಳಲ್ಲಿಯೂ (೩-೯) ಪಠಿತವಾಗಿರುವುದು. ಇದಲ್ಲದೆ—ಯಾಸ್ಕರು,

**ರಯಿರಿತಿ ಧನನಾಮ ರಾತೇರ್ದಾನಕರ್ಮಣಃ** (ನಿ. ೪-೧೭) ಎಂದು ರಯಿಶಬ್ದಕ್ಕೆ ಧನವೆಂದು ಅರ್ಥವನ್ನು ಹೇಳಿರುವರು. ಈ ಶಬ್ದವು ರಾ-ಕೊಡು ದಾನಮಾಡು ಎಂಬರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾಗಿ ಧನವೆಂಬರ್ಥವುಳ್ಳದ್ದೆಂದು ವಿವರಿಸಿರುವರು. ಪ್ರಕೃತ ಋಕ್ಕಿನಲ್ಲಿಯೂ ಅದೇ ಅರ್ಥವು.

**ದೇವ**—ದೇವಶಬ್ದಕ್ಕೆ ಯಾಸ್ಕರ ನಿರುಕ್ತವು ಈ ರೀತಿ ಇರುವುದು—

**ದೇವೋ ದಾನಾದ್ವಾ, ದೀಪನಾದ್ವಾ, ದ್ಯೋತನಾದ್ವಾ, ದ್ಯುಸ್ಥಾನೋ ಭವತೀತಿ ವಾ, ಯೋ ದೇವಃ ಸಾ ದೇವತಾ ।**

(ನಿ. ೭-೧೫)

ಎಂದರೆ ಈ ದೇವತೆಯು ಐಶ್ವರ್ಯಾದಿಗಳನ್ನು ಕೊಡುವವಾದ್ದರಿಂದ (ದಾನಾದ್ವಾ) ಇವನಿಗೆ ದೇವನೆಂದು ಹೆಸರು ; ಇವನು ಸಕಲವನ್ನೂ ತನ್ನ ತೇಜಸ್ಸಿನಿಂದ (ಪ್ರಕಾಶದಿಂದ) ಬೆಳಗಿಸುವವನಾದ್ದರಿಂದ (ದೀಪನಾತ್, ದ್ಯೋತನಾದ್ವಾ–ಎರಡು ಶಬ್ದಗಳಿಗೂ ಒಂದೇ ಅರ್ಥ) ಇವನಿಗೆ ದೇವನೆಂದು ಹೆಸರು. ಅಥವಾ ದ್ಯುಸ್ಥಾನದಲ್ಲಿ (ಸ್ವರ್ಗದಲ್ಲಿ) ಇರುವವ

ನಾದ್ದರಿಂದ ಇವನಿಗೆ ದೇವನೆಂದು ಹೆಸರು ಎಂದು ದೇವಶಬ್ದಕ್ಕೆ ನಾನಾರ್ಥಗಳನ್ನು ಹೇಳಿರುವರು. ಇಲ್ಲಿ ದೇವಶಬ್ದವು ಅಗ್ನೇ ಎಂಬ ಶಬ್ದಕ್ಕೆ ವಿಶೇಷಣವಾಗಿರುವುದರಿಂದ ಮೇಲೆ ಹೇಳಿದ ಎಲ್ಲಾ ವಿವರಣೆಗಳೂ ಹೊಂದಿಕೊಳ್ಳುವವು.

**ವಯುನಾನಿ**—**ವಯುನಂ** ಎಂಬ ಶಬ್ದವು **ಅಸ್ರೇಮಾಃ ಅನೇಮಾಃ** ಮೊದಲಾದ ಹತ್ತು ಪ್ರಶಸ್ಯನಾಮಗಳಲ್ಲಿಯೂ, **ಕೇತಃ ಕೇತುಃ** ಮೊದಲಾದ ಹನ್ನೊಂದು ಪ್ರಜ್ಞಾನಾಮಗಳಲ್ಲಿಯೂ (ನಿ. ೩-೧೩) ಪಠಿತವಾಗಿದೆ. ಇವಲ್ಲದೆ ಈ ಶಬ್ದಕ್ಕೆ ಯಾಸ್ಕರು—

**ವಯುನಂ ವೇತೇಃ ಕಾಂತಿರ್ವಾ ಪ್ರಜ್ಞಾ ವಾ**—(ನಿ. ೫-೧೫) ವಯುನಂ ಎಂಬ ಶಬ್ದವು ವೇತಿಧಾತುವಿನಿಂದ ನಿಷ್ಪನ್ನವಾಗಿ ಕಾಂತಿ ಅಥವಾ ಪ್ರಜ್ಞೆಯೆಂಬ ಅರ್ಥವುಳ್ಳದ್ದಾಗಿರುವುದು ಎಂದು ಹೇಳಿ ಇದರ ಸಮರ್ಥನೆಗಾಗಿ—

**ಅಹಿರಿವ ಭೋಗೈಃ ಪರ್ಯೇತಿ ಬಾಹುಂ ಜ್ಯಾಯಾ ಹೇತಿಂ ಪರಿಬಾಧಮಾನಃ ।**
**ಹಸ್ತಘ್ನೋ ವಿಶ್ವಾ ವಯುನಾನಿ ವಿದ್ವಾನ್ ಪುಮಾನ್ಪುಮಾಂಸಂ ಪರಿ ಪಾತು ವಿಶ್ವತಃ ॥**

(ಋ. ಸಂ. ೬-೭೫-೧೪)

ಎಂಬ ಋಕ್ಕನ್ನು ಉದಾಹರಣೆಗಾಗಿ ಕೊಟ್ಟಿರುವರು ಇಲ್ಲಿಯೂ **ವಯುನಾನಿ ಪ್ರಜ್ಞಾನಾನಿ** ಎಂದು ವಯುನ ಶಬ್ದಕ್ಕೆ ಪ್ರಜ್ಞಾನವೆಂಬ ಅರ್ಥವನ್ನೇ ಹೇಳಿರುವರು—

**ನಮಉಕ್ತಿಂ**—**ನಮಸ್ಕಾರೋಕ್ತಿಂ । ಸ್ತುತಿಂ ।** ನಮಸ್ಕಾರಪೂರ್ವಕವಾದ ಸ್ತೋತ್ರವನ್ನು ಪಠಿಸುವೆವು ಎಂದು ಅಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ನಯ**—ಣೀಞ್ ಪ್ರಾಪಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. **ಆಮಂತ್ರಿತಂ ಪೂರ್ವಮವಿದ್ಯಮನವತ್** ಎಂಬುದರಿಂದ ಪೂರ್ವದಲ್ಲಿ ಅಗ್ನೇ ಎಂಬ ಆಮಂತ್ರಿತವು ಇದ್ದರೂ ಇಲ್ಲದಂತಾಗುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ವಿಕರಣ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ರಾಯೇ**—ದ್ವಿತೀಯಾರ್ಥದಲ್ಲಿ **ಸುಪಾಂಸುಪೋ ಭವಂತಿ** ಎಂಬ ವಚನದಿಂದ ಚತುರ್ಥೀ ಬಂದಿದೆ. **ಊಡಿದಂ ಪದಾದಿ**—(ಪಾ. ಸೂ. ೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಯುನಾನಿ**—ಅಜ ಗತಿಕ್ಷೇಪಣಯೋಃ ಧಾತು. **ಅಜಿಯಮಿಶೀಙ್‌ಭ್ಯಶ್ಚ** (ಉ. ಸೂ. ೩-೬೧) ಎಂಬುದರಿಂದ ಉನನ್ ಪ್ರತ್ಯಯ. **ಅಜೇರ್ವ್ಯಘಞಪೋಃ** (ಪಾ. ಸೂ ೨-೪-೫೬) ಎಂಬುದರಿಂದ ಧಾತುವಿಗೆ ವೀಭಾವ. ಪ್ರತ್ಯಯ ನಿಮಿತ್ತವಾಗಿ ಅದರ ಈಕಾರಕ್ಕೆ ಗುಣ. ಅಯಾದೇಶ. ವ್ಯತ್ಯಯದಿಂದ ಪ್ರತ್ಯಯಕ್ಕೆ ಆದ್ಯುದಾತ್ತಸ್ವರ ಬರುತ್ತದೆ.

**ಯುಯೋಧಿ**—ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಹಿಗೆ ಅಪಿತ್ವವಿಧಾನಮಾಡಿರುವುದರಿಂದ ಉದಾತ್ತಸ್ವರ ಬರುವುದರಿಂದ ಅಂತೋದಾತ್ತವಾಗುತ್ತದೆ.

**ಜುಹುರಾಣಮ್**—ಹುರ್ಛಾ ಕೌಟಿಲ್ಯೇ. ಧಾತು. **ಹುರ್ಛೇಃಸನೋ ಲುಕ್ ಛಲೋಪಶ್ಚ** (ಉ. ಸೂ. ೨-೨೮೪) ಎಂಬುದರಿಂದ ಸನ್ನಂತದ ಮೇಲೆ ಆನಚ್ ಪ್ರತ್ಯಯ. ಸನಿಗೆ ಲುಕ್. ಧಾತುವಿನ ಛಕಾರಕ್ಕೆ

ಲೋಪ. ಅಟ್ ಕುಪ್ವಾಙ್—ಎಂಬುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. ಪ್ರತ್ಯಯ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

ನಮಉಕ್ತಿಮ್—ತಾದೌಚನಿತಿ—(ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

ವಿಧೇಮ—ವಿಧ ವಿಧಾನೇ. ಧಾತು. ತುದಾದಿ. ಲಿಙ್ ಉತ್ತಮಪುರುಷ ಬಹುವಚನಾಂತರೂಪ. ತಿಙ್ಙತಿಙಃ (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ.

---

ಸಂಹಿತಾಪಾಠಃ

ಅಗ್ನೇ ತ್ವಂ ಪಾರಯಾ ನವ್ಯೋ ಅಸ್ಮಾನ್ತ್ಸ್ವಸ್ತಿಭಿರತಿ ದುರ್ಗಾಣಿ ವಿಶ್ವಾ ।
ಪೂಶ್ಚ ಪೃಥ್ವೀ ಬಹುಲಾ ನ ಉರ್ವೀ ಭವಾ ತೋಕಾಯ ತನಯಾಯ ಶಂ ಯೋಃ ॥೨ ॥

ಪದಪಾಠ

ಅಗ್ನೇ । ತ್ವಂ । ಪಾರಯ । ನವ್ಯಃ । ಅಸ್ಮಾನ್ । ಸ್ವಸ್ತಿಽಭಿಃ । ಅತಿ । ದುಃಽಗಾನಿ । ವಿಶ್ವಾ ।
ಪೂಃ । ಚ । ಪೃಥ್ವೀ । ಬಹುಲಾ । ನಃ । ಉರ್ವೀ । ಭವ । ತೋಕಾಯ । ತನಯಾಯ । ಶಂ । ಯೋಃ ॥ ೨ ॥

ಸಾಯಣಭಾಷ್ಯಂ

ಆಯುಷ್ಕಾಮೇಷ್ಟ್ಯಾಮಗ್ನೇ ತ್ವಂ ಪಾರಯೇತಿ ದ್ವೇ ಸ್ವಿಷ್ಟಕೃತೋ ಯಾಜ್ಯೇ ಪಾಹಿ ನ ಇತಿ ಚತುರ್ಥ್ಯನುವಾಕ್ಯಾ । ಪಾಹಿ ನೋ ಅಗ್ನೇ ಪಾಯುಭಿರಜಸ್ರೈರಗ್ನೇ ತ್ವಂ ಪಾರಯಾ ನವ್ಯೋ ಅಸ್ಮಾನಿತಿ ಸಂಯಾಜ್ಯೇ । ಆ. ೨-೧೦ । ಇತಿ ಸೂತ್ರಿತಂ ॥ ಏತೇ ಏವ ಸ್ವಸ್ತ್ಯಯನ್ಯಾಮಪಿ ಸಂಯಾಜ್ಯೇ ಇತಿ ಸೂತ್ರಿತತ್ವಾತ್ ॥

ಹೇ ಅಗ್ನೇ ತ್ವಂ ನವ್ಯೋ ನವತರಃ ಸ್ತುತ್ಯೋ ವಾ ತ್ವಮಸ್ಮಾನ್ಯಾಗಾನುಷ್ಠಾತೄನತಿ ಪಾರಯ । ಕರ್ಮ ಸಮಾಪಯ್ಯಾತಿಪಾರಯ । ಅತಿಕ್ರಾಮಯ । ಕೇನ ಸಾಧನೇನ । ಸ್ವಸ್ತಿಭಿಃ । ಅಸ್ತಿರಭಿಪೂಜಿತಃ । ಸುಶಬ್ದಃ ಶೋಭನವಚನಃ । ಅತ್ಯಂತಂ ಪೂಜಿತೈರ್ಯಜ್ಞಾದಿಸಾಧನೈಃ । ಕಾನಿ । ದುರ್ಗಾಣಿ ದುರ್ಗಮನಾನಿ ಪಾಪಾನಿ । ಅನತಿಕ್ರಮಣೀಯಾನಿ ದುರಿತಾಖ್ಯಾನ್ಯತಿಪಾರ್ಯ । ಕಿಂಚ ನೋಽಸ್ಮಾಕಂ ಪೃಥ್ವೀ ಪೃಥುತರಾ ಪೂಶ್ಚ ಪುರ್ಯಪಿ ಭವತ್ವಿತಿ ಶೇಷಃ । ಚಶಬ್ದೋ ವಕ್ಷ್ಯಮಾಣೇನ ಸಹ ಸಮುಚ್ಚಯಾರ್ಥಃ । ಪೂರಿತಿ ಜಾತ್ಯೇಕವಚನಂ । ಪುರಾಣ್ಯಪಿ ಭವಂತ್ವಿತ್ಯರ್ಥಃ । ತಥಾ ನೋಽಸ್ಮಾಕಮುರ್ವೀ ಪೃಥ್ವ್ಯಪಿ ಬಹುತರಾ ಭವತು । ತ್ವಂ ತು ತೋಕಾಯಾಪತ್ಯಾಯ ತನಯಾಯ ಪುತ್ರಾಯ । ತೋಕಶಬ್ದೋಽಪತ್ಯಸಾಮಾನ್ಯ-ವಚನಃ । ತನಯಶಬ್ದಃ ಪುತ್ರವಚನಃ । ಶಂ ಸುಖಂ ಯೋರ್ನಿಶ್ರಯಿತಾ ಭವ । ಯದ್ವಾ । ರೋಗಾಣಾಂ ಶಮನಂ ಭಯಾನಾಂ ಯಾವನಂ ಚ ಭವ । ಕುರ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ನವ್ಯಃ**—ಸ್ತುತ್ಯನಾಗಿದ್ದು । **ಅಸ್ಮಾನ್**—ನಮ್ಮನ್ನು । **ಸ್ವಸ್ತಿಭಿಃ**—ಅತ್ಯಂತ ಮಂಗಳಾತ್ಮಕವಾದ ಯಜ್ಞಾದಿಸಾಧನಗಳಿಂದ । **ದುರ್ಗಾಣಿ** — (ಸಾಧಾರಣವಾದ ಸಾಧನಗಳಿಂದ) ದಾಟಲು ಸಾಧ್ಯವಿಲ್ಲದಿರುವ ಪಾಪಗಳಿಂದ । **ಅತಿ ಪಾರಯ**—ದಾಟಿಸು । **ನಃ**—ನಮ್ಮ । **ಪೂಃ**—ಪಟ್ಟಣವು । **ಪೃಥ್ವೀ**—ಅತ್ಯಂತ ವಿಸ್ತೃತವಾದದ್ದಾಗಿಯೂ, **ಉರ್ವೀ ಚ**—ವಿಸ್ತೃತವಾದ ಭೂಮಿಯೂ ಕೂಡ । **ಬಹುಲಾ**—ಅಧಿಕಸಂಖ್ಯಾತವಾಗಿಯೂ ಆಗಲಿ । **ತೋಕಾಯ**—ನಮ್ಮ ಪೌತ್ರಾದಿಗಳಿಗೂ । **ತನಯಾಯ**—ಪುತ್ರರಿಗೂ । **ಶಂಯೋಃ**—ಸುಖವನ್ನುಂಟುಮಾಡುವವನಾಗಿ । ಅಥವಾ **ಶಂಯೋಃ**—ರೋಗಶಮನವನ್ನೂ ಭಯ ರಾಹಿತ್ಯವನ್ನೂ ಉಂಟುಮಾಡುವವನಾಗಿ । **ಭವ**—ಆಗು ।

ಭಾವಾರ್ಥ

ಎಲೈ ಅಗ್ನಿಯೇ, ನೀನು ಸ್ತುತ್ಯನಾಗಿದ್ದು ನಮ್ಮನ್ನು ಅತ್ಯಂತ ಮಂಗಳಾತ್ಮಕವಾದ ಯಜ್ಞಾದಿ ಸಾಧನಗಳಿಂದ ಕಠಿಣವಾದ ಪಾಪಗಳಿಂದ ದೂರಮಾಡು. ನಮ್ಮ ಪಟ್ಟಣವು ಅತ್ಯಂತ ವಿಸ್ತೃತವಾದದ್ದಾಗಿಯೂ ಮತ್ತು ವಿಸ್ತೃತ ವಾದ ಭೂಮಿಯು ಅಧಿಕಸಂಖ್ಯಾಕವಾಗಿಯೂ ಆಗಲಿ. ನಮ್ಮ ಪುತ್ರಪೌತ್ರಾದಿಗಳಿಗೆಲ್ಲಾ ರೋಗಶಮನವನ್ನೂ ಭಯ ರಾಹಿತ್ಯವನ್ನೂ ಉಂಟುಮಾಡುವವನಾಗಿ ಆಗು.

English Translation

Adorable Agni, convey us by the sacred acts (of worship), beyond all evil ways : may our city be spacious ; our land be extensive ; be the bestower of happiness upon our offspring, upon our sons

ವಿಶೇಷವಿಷಯಗಳು

**ಅಗ್ನೇ ತ್ವಂ ಪಾರಯ** ಎಂಬ ಈ ಋಕ್ಕನ್ನೂ ಮುಂದಿನ ಋಕ್ಕನ್ನೂ ಆಯುಷ್ಕಾಮೇಷ್ಟಿಯಲ್ಲಿ ಸ್ವಿಷ್ಟ ಕೃದ್ಧೋಮಮಾಡುವಾಗ ಯಾಜ್ಯಾಮಂತ್ರವನ್ನಾಗಿಯೂ ಮತ್ತು ಈ ಸೂಕ್ತದ ನಾಲ್ಕನೆಯ ಋಕ್ಕಾದ ಪಾಹಿನೋ ಅಗ್ನೇ ಎಂಬ ಋಕ್ಕನ್ನು ಪುರೋನುವಾಕ್ಯಾ ಮಂತ್ರವನ್ನಾಗಿಯೂ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ-**ಪಾಹಿನೋ ಅಗ್ನೇ ಪಾಯುಭಿರಜಸ್ರೈರಗ್ನೇ ತ್ವಂ ಪಾರಯಾ ನವ್ಯೋ ಅಸ್ಮಾನಿತಿ ಸಂಯಾಜ್ಯೇ** ಎಂಬ ಸೂತ್ರದಿಂದಲೂ ಸ್ವಸ್ತ್ಯಯನದಲ್ಲಿಯೂ ಸಹ ಈ ಋಕ್ಕುಗಳನ್ನು ಯಜ್ಯಾಮಂತ್ರವನ್ನಾಗಿ ಪಠಿಸಬೇಕೆಂದೂ ಅಲ್ಲಿಯೇ ಹೇಳಿರುವುದು. (ಆ. ೨-೧೦)

**ನವ್ಯಃ—ನವತರಃ ಸ್ತುತ್ಯೋ ವಾ** । ನವ್ಯಶಬ್ದಕ್ಕೆ ನವತರವೆಂದು ಯಾಸ್ಕರ ನಿರ್ವಚನವಿದೆ, (ನಿ. ೬-೯) ಅಗ್ನಿಗೆ ಸಮಿದಾದಿಗಳನ್ನು ಹಾಕುವುದರಿಂದ ಅದು ವೃದ್ಧಿಯಾಗಿ ಹೊಸಹೊಸದಾಗಿರುವುದೆಂದು ಅನೇಕ ಕಡೆ ವರ್ಣನೆ ಗಳಿವೆ. ಸಾಯಣರು ಸ್ತುತ್ಯಃ—ಸ್ತುತಿಸಲ್ಪಟ್ಟ ಎಂಬ ಅರ್ಥವನ್ನು ಇದರ ಜತೆಗೆ ಹೇಳಿರುವರು. ನವ್ಯಶಬ್ದವು ಅಗ್ನಿಪರವಾಗಿ ಅನೇಕ ಋಕ್ಕುಗಳಲ್ಲಿ ಉಪಯೋಗಿಸಲ್ಪಟ್ಟಿರುವುದು.

**ಸ್ವಸ್ತಿಭಿಃ—ಅಸ್ತಿರಭಿಪೂಜಿತಃ । ಸುಶಬ್ದಃ ಶೋಭನವಚನಃ । ಅತ್ಯಂತಂ ಪೂಜಿತೈರ್ಯಜ್ಞಾದಿ ಸಾಧನೈಃ** । ಪೂಜಾರ್ಹವಾದ ಯಜ್ಞಾದಿಸಾಧನಗಳಿಂದ ಎಂದರ್ಥವು. **ಸ್ವಸ್ತೀತ್ಯವಿನಾಶಿನಾಮ । ಅಸ್ತಿರಭಿ ಪೂಜಿತಃ ಸು ಅಸ್ತೀತಿ** । (ನಿ. ೩–೨೧)ಎಂದು ಯಾಸ್ಕರ ನಿರ್ವಚನವಿರುವುದು. ನಾಶವಿಲ್ಲದಿರುವುದು ಆದುದರಿಂದಲೇ ಪೂಜಾರ್ಹವಾದುದು ಎಂದು ಅಭಿಪ್ರಾಯವು. ಸು ಎಂಬ ಉಪಸರ್ಗವು ಅತ್ಯಂತವಾಗಿ, ಒಳ್ಳೆಯದಾದ, ಶೋಭನರೂಪ ವಾದ ಎಂಬ ಅರ್ಥವನ್ನೂ ಸೂಚಿಸುವುದು.

**ಪೂಃ**—ನಗರವು, ನಾವು ವಾಸಿಸುತ್ತಿರುವ ಪಟ್ಟಣವು. ಈ ಶಬ್ದವು ಜಾತ್ಯೇಕವಚನವೆಂದು ಭಾಷ್ಯಕಾರರು ಹೇಳಿರುವರು. ಎಂದರೆ ಏಕವಚನಪ್ರಯೋಗವಿದ್ದರೂ ಇದಕ್ಕೆ ಬಹುವಚನಾರ್ಥವನ್ನು ಹೇಳಬಹುದೆಂದರ್ಥವು.

**ಬಹುಲಾ—ಬಹುತರಾ**—ಅನೇಕ ವಿಧವಾದ ಸುಖಸಂಪತ್ತುಗಳನ್ನೂ, ಪುತ್ರಪೌತ್ರಾದಿಗಳನ್ನೂ ಒದಗಿಸಿ ಕೊಡುವಂತಾಗಲಿ ಎಂದಭಿಪ್ರಾಯವು.

### ವ್ಯಾಕರಣಪ್ರಕ್ರಿಯಾ

**ಪಾರಯ**—ಪಾರ ತೀರಸಮಾಪ್ತೌ. ಧಾತು. ಣಿಜಂತದ ಮೇಲೆ ಲೋಟ್. ಮಧ್ಯಮಪುರುಷ ಏಕ ವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದುರ್ಗಾಣಿ**—ಗಮ್ಲೃ ಗತೌ. ಧಾತು. **ಸುದುರೋರಧಿಕರಣೇ** ಎಂಬುದರಿಂದ ಇದಕ್ಕೆ ಡಪ್ರತ್ಯಯ. ಡಿತ್ವಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವಿಶ್ವಾ—ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಪೃಥ್ವೀ**—ಗೌರಾದಿಗಣಪಠಿತವಾದುದರಿಂದ ಙೀಷ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗು ತ್ತದೆ.

**ಭವಾ**—ಭೂ ಸತ್ತಾಯಾಂ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರು ವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ. **ದ್ವ್ಯಚೋಽತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ತನಯಾಯ**—ತನು ವಿಸ್ತಾರೇ. ಧಾತು **ವಲಿಮಲಿತನಿಭ್ಯಃಕಯನ್** (ಉ. ಸೂ ೪-೫೪೮) ಎಂಬುದ ರಿಂದ ಕಯನ್ ಪ್ರತ್ಯಯ. ತನಯ ಎಂದು ರೂಪವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

---

### ಸಂಹಿತಾಪಾಠಃ

**ಅಗ್ನೇ ತ್ವಮಸ್ಮದ್ಯುಯೋಧ್ಯಮೀವಾ ಅನಗ್ನಿತ್ರಾ ಅಭ್ಯಮಂತ ಕೃಷ್ಟೀಃ ।**

**ಪುನರಸ್ಮಭ್ಯಂ ಸುವಿತಾಯ ದೇವ ಕ್ಷಾಂ ವಿಶ್ವೇಭಿರಮೃತೇಭಿರ್ಯಜತ್ರ ॥ ೩ ॥**

ಪದಪಾಠಃ

ಅಗ್ನೇ । ತ್ವಂ । ಅಸ್ಮತ್ । ಯುಯೋಧಿ । ಅಮೀವಾಃ । ಅನಗ್ನಿಽತ್ರಾಃ । ಅಭಿ । ಅಮಂತ । ಕೃಷ್ಟೀಃ । ಪುನಃ । ಅಸ್ಮಭ್ಯಂ । ಸುವಿತಾಯ । ದೇವ । ಕ್ಷಾಂ । ವಿಶ್ವೇಭಿಃ । ಅಮೃತೇಭಿಃ । ಯಜತ್ರ ॥ ೩ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಮಮೀವಾ ರೋಗಾನಸ್ಮದಸ್ಮತ್ತೋ ಯುಯೋಧಿ । ವ್ಯಾವರ್ತಯ । ಯಾ ಅನಗ್ನಿತ್ರಾ ಅಗ್ನಿನಾಪಾಲಿತಾಃ ಕೃಷ್ಟೀಃ ಪ್ರಜಾ ಅಭ್ಯಮಂತ ಆಭಿಮಿಮತೇಽಸ್ಮಾನ್ ॥ ಯುಚ್ಛಬ್ದಾಧ್ಯಾಹಾರಾದನಿಘಾತಃ ॥ ತಾ ಯುಯೋಧಿ । ಯದ್ವಾ । ತಾ ಅನಗ್ನಿತ್ರಾಃ ಪಾಪಿನ್ಯಃ ಕೃಷ್ಟಯಃ ಪ್ರಜಾ ಅಭ್ಯಮಂತ । ತ್ವಯಾಭ್ಯಮಿತುಮಭಿತೋ ರೋಗೈಃ ಪ್ರಾಪಯಿತುಮರ್ಹಂತಿ । ವಯಂ ತು ನ ತಾದೃಶಾಃ । ಅತೋಽಸ್ಮತ್ತೋ ವಿಯೋಜಯೇತ್ಯರ್ಥಃ । ನ ಕೇವಲಂ ವಿಯೋಗಮಾತ್ರಂ ಅಪಿ ತು ಪುನಃಪುನರಿದಂ ಕರ್ತವ್ಯಂ । ಅಸ್ಮಭ್ಯಮಸ್ಮದರ್ಥಂ ಸುವಿತಾಯ ಶೋಭನಫಲಾಯ ಹೇ ಯಜತ್ರ ಯಷ್ಟವ್ಯ ದೇವ ದ್ಯೋತಮಾನಾಗ್ನೇ ವಿಶ್ವೇಭಿರಮೃತೇಭಿಃ ಸರ್ವೈರಮರಣಧರ್ಮಭಿರನ್ಯೈರ್ಯಷ್ಟವ್ಯೈರ್ದೇವೈಃ ಸಹ ಕ್ಷಾಂ ಪೃಥಿವೀಂ ದೇವಯಜನಲಕ್ಷಣಾಮಾಗಚ್ಛೇತಿ ಶೇಷಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ಅಮೀವಾಃ—ರೋಗಗಳನ್ನೂ(ಮತ್ತು) । ಅನಗ್ನಿತ್ರಾಃ—ಅಗ್ನಿಯಿಂದ ಅರಕ್ಷಿತರಾದವರೂ। ಯಾಃ ಕೃಷ್ಟೀಃ—ನಮ್ಮ ಶತ್ರುರೂಪರೂ ಆದ ಯಾವ ಪ್ರಜೆಗಳು । ಅಭ್ಯಮಂತ—ನಮ್ಮನ್ನು ಪ್ರತಿಭಟಿಸಿ ದ್ವೇಷಿಸುತ್ತಾರೆಯೋ, ಅವರನ್ನೂ । ಪುನಃ—ಪದೇ ಪದೇ । ಅಸ್ಮತ್—ನಮ್ಮಿಂದ । ಯುಯೋಧಿ—ದೂರಮಾಡಿ ನಾಶಪಡಿಸು । ಅಸ್ಮಭ್ಯಂ—ನಮಗೆ । ಸುವಿತಾಯ—ಶ್ರೇಷ್ಠವಾದ ಫಲವನ್ನು ಒದಗಿಸುವುದಕ್ಕಾಗಿ । ಯಜತ್ರ—ಯಜ್ಞಾರ್ಹನೂ । ದೇವ—ಪ್ರಕಾಶಮಾನನೂ ಆದ ಅಗ್ನಿಯೇ । ವಿಶ್ವೇಭಿರಮೃತೇಭಿಃ—ಮರಣಧರ್ಮರಹಿತರಾದ ಸಕಲ ದೇವತೆಗಳೊಡನೆಯೂ । ಕ್ಷಾಂ—ಯಜ್ಞಭೂಮಿಗೆ ದಯಮಾಡು.

ಭಾವಾರ್ಥ

ಎಲೈ ಅಗ್ನಿಯೇ, ನೀನು ನಮ್ಮ ರೋಗಗಳನ್ನೂ ಮತ್ತು ನಿನ್ನ ರಕ್ಷಣೆಗೆ ಒಳಪಡದೆ ನಮ್ಮನ್ನು ಹಿಂಸಿಸುವ ಶತ್ರುಗಳನ್ನೂ ನಮ್ಮಿಂದ ಪದೇಪದೇ ದೂರಮಾಡಿ ನಾಶಪಡಿಸು- ನಮಗೆ ಶ್ರೇಷ್ಠವಾದ ಫಲವನ್ನು ಒದಗಿಸುವುದಕ್ಕಾಗಿ ಯಜ್ಞಾರ್ಹನೂ, ಪ್ರಕಾಶಮಾನನೂ ಆದ ಎಲೈಅಗ್ನಿಯೇ, ಮರಣಧರ್ಮರಹಿತರಾದ ಸಕಲ ದೇವತೆಗಳೊಡನೆಯೂ ಯಜ್ಞಭೂಮಿಗೆ ದಯಮಾಡು.

English Translatin

Agni, remove from us disease, and those men who, unprotected by Agni, are adverse to us ; and, adorable divinity, (visit) the earth, with the all immortals, rfo our welfare.

**ಅಮೀವಾಃ**—ರೋಗಗಳು. ಅಮ ರೋಗೇ (ಚುರಾದಿ ಪರಸ್ಮೈಪದಿ) ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು, ರೋಗ ಅಥವಾ ಹಿಂಸೆಯೆಂಬ ಅರ್ಥವನ್ನು ಸೂಚಿಸುವುದು. ಯಾಸ್ಕರು—

**ಯಸ್ತೇ ಗರ್ಭಮಮೀವಾ ದುರ್ಣಾಮಾ ಯೋನಿಮಾಶಯೇ ।**

**ಅಗ್ನಿಷ್ಟಂ ಬ್ರಹ್ಮಣಾ ಸಹ ನಿಷ್ಕ್ರವ್ಯಾದಮನೀನಶತ್ ॥**

(ಋ. ಸಂ. ೧೦-೧೬೨-೨)

ಎಂಬ ಋಕ್ಕನ್ನುದಾಹರಿಸಿ ಅದರಲ್ಲಿರುವ **ಅಮೀವಾ** ಎಂಬ ಶಬ್ದಕ್ಕೆ **ರೋಗಭೂತಃ** ಎಂದರ್ಥವನ್ನು ಹೇಳಿದಾರೆ. (ನಿ. ೬-೧೨)

**ಅನಗ್ನಿತ್ರಾಃ**—ಅಗ್ನಿಯಿಂದ ರಕ್ಷಿಸಲ್ಪಡದಿರುವವರು ಎಂದರೆ ಪಾಪಕರ್ಮಗಳನ್ನು ಮಾಡುವವರು, ರಾಕ್ಷಸರು.

**ಅಮೃತೇಭಿಃ—ಅಮರಣಧರ್ಮಭಿರನ್ಯೈರ್ಯಷ್ಟವ್ಯೈರ್ದೇವೈಃ ।** ಮರಣರಹಿತರಾದ ಪೂಜಾರ್ಹರಾದ ಇತರ ದೇವತೆಗಳಿಂದ.

ವ್ಯಾಕರಣಪ್ರಕ್ರಿಯಾ

**ಅನಗ್ನಿತ್ರಾ**—ಅಗ್ನಿನಾ ತ್ರಾತಾಃ ಅಗ್ನಿತ್ರಾಃ ನ ಅಗ್ನಿತ್ರಾಃ ಅನಗ್ನಿತ್ರಾಃ **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ನಞ್‌ಪೂರ್ವಪದ ಪ್ರಕೃತಿಸ್ವರ ಬರುತ್ತದೆ

**ಅಮಂತ**—ಮಾಙ್ ಮಾನೇ ಶಬ್ದೇ ಚ. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ವ್ಯತ್ಯಯದಿಂದ ವಿಕರಣಕ್ಕೆ ಲುಕ್. ಪ್ರಥಮಪುರುಷ ಬಹುವಚನಾಂತರೂಪ. ಯಚ್ಛಬ್ದ ಅಧ್ಯಾಹೃತವಾಗುವುದರಿಂದ **ಯದ್ವೃತ್ತಾನ್ನಿತ್ಯಮ್** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾಗುವುದರಿಂದ ಆದ್ಯುದಾತ್ತವಾಗುತ್ತದೆ.

**ಕೃಷ್ಟೀಃ**—ಕೃಷ ವಿಲೇಖನೇ. ಧಾತು. **ಕ್ತಿಚ್‌ಕ್ತೌಚ ಸಂಜ್ಞಾಯಾಮ್** (ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್ ಪ್ರತ್ಯಯ. ಷಕಾರ ಸಂಬಂಧದಿಂದ ಅದಕ್ಕೆ ಷ್ಟುತ್ವ ಚಿತ್ತ್ವಾದುದರಿಂದ ಅಂತೋದಾತ್ತವಾಗುತ್ತದೆ.

**ಸುವಿತಾಯ**—ಸುಷ್ಠು ಇತಃ ಸುವಿತಃ ತಸ್ಮೈ. ಇಣ್ ಗತೌ ಧಾತು. ಕ್ತಪ್ರತ್ಯಯ. **ತನ್ವಾದೀನಾಂ ಛಂದಸಿ ಬಹುಲಮುಪಸಂಖ್ಯಾನಮ್** (ಪಾ. ಸೂ. ೬-೪-೭೭-೧) ಎಂಬುದರಿಂದ ಉಕಾರಕ್ಕೆ **ಉವಙಾದೇಶ.** ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಮೃತೇಭಿಃ—ನಞೋ ಜರಮರ—**(ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ. ಛಂದಸ್ಸಿನಲ್ಲಿ ಭಿಸಿಗೆ ಐಸ್‌ಭಾವ ವಿಕಲ್ಪವಾದುದರಿಂದ **ಬಹುವಚನೇಝಲ್ಯೇತ್** ಎಂಬುದರಿಂದ ಏತ್ವ.

**ಯಜತ್ರ**—ಯಜ ದೇವಪೂಜಾದಿಷು. ಧಾತು. **ಅಮಿನಕ್ಷಿಯಜಿ**—(ಉ ಸೂ. ೩-೩೮೪) ಎಂಬುದರಿಂದ ಅತ್ರನ್ ಪ್ರತ್ಯಯ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಪಾಹಿ ನೋ ಅಗ್ನೇ ಪಾಯುಭಿರಜಸ್ರೈರುತ ಪ್ರಿಯೇ ಸದನ ಆ ಶುಶು
ಕ್ವಾನ್ ।
ಮಾ ತೇ ಭಯಂ ಜರಿತಾರಂ ಯವಿಷ್ಠ ನೂನಂ ವಿದನ್ಮಾಪರಂ ಸಹಸ್ವಃ
॥ ೪ ॥

ಪದಪಾಠ

ಪಾಹಿ । ನಃ । ಅಗ್ನೇ । ಪಾಯುಽಭಿಃ । ಅಜಸ್ರೈಃ । ಉತ । ಪ್ರಿಯೇ । ಸದನೇ । ಆ । ಶುಶುಕ್ವಾನ್ ।
ಮಾ । ತೇ । ಭಯಂ । ಜರಿತಾರಂ । ಯವಿಷ್ಠ । ನೂನಂ । ವಿದತ್ । ಮಾ । ಅಪರಂ । ಸಹಸ್ವಃ ॥ ೪ ॥

ಸಾಯಣಭಾಷ್ಯಂ

ಪಾಹಿ ನ ಇತ್ಯಸ್ಯಾ ವಿನಿಯೋಗದ್ವಯಮುಗ್ನೇ ತ್ವಂ ಪಾರಯೇತ್ಯತ್ರೋಕ್ತಂ ॥ ತಥಾಗ್ನೇಯೆ-ಪಶಾವೇಷೈವ ಹವಿಷೋಽನುವಾಕ್ಯಾ । ತಥಾ ಚ ಸೂತ್ರಿತಂ । ಪಾಹಿ ನೋ ಅಗ್ನೇ ಪಾಯುಭಿರಜಸ್ರೈಃ ಪ್ರ ವಃ ಶುಕ್ರಾಯ ಭಾನವೇ ಭರಧ್ವಂ । ಆ ೩-೭ । ಇತಿ ॥

ಹೇ ಅಗ್ನೇ ನೋಽಸ್ಮಾನಜಸ್ರೈರನವರತೈರವಿಚ್ಛಿನ್ನೈಃ ಪಾಯುಭಿಃ ಪಾಲನಪ್ರಕಾರೈಃ ಪಾಹಿ । ಪಾಲಯ । ಉತಾಪಿ ಚ ಪ್ರಿಯೇ ಸದನೇ ತವ ಪ್ರಿಯಭೂತೇ ಯಾಗಗೃಹ ಆ ಸರ್ವತಃ ಶುಶುಕ್ವಾನ್ ದೀಪ್ಯಮಾನೋ ಭವೇತಿ ಶೇಷಃ । ಕಿಂಚ ಹೇ ಯವಿಷ್ಠ ಯುವತಮ ತೇ ತವ ಜರಿತಾರಂ ಗರಿತಾರಂ ಸ್ತೋತಾರಂ ಮಾಂ ನೂನಮದ್ಯ ಭಯಂ ಮಾ ವಿದತ್ । ಮಾ ಲಭತಾಂ । ಮಾಪ್ನೋತು । ಹೇ ಸಹಸ್ವೋ ಬಲವನ್ನಗ್ನೇ ಅಪರಮಪರಸ್ಮಿನ್ಕಾಲೇ ಭಯಂ ಮಾ ವಿದತ್ । ಅಪರಂ ಮದನ್ಯಂ ವಾ ಮಾ ವಿದತ್ ॥

ಪ್ರತಿಪದಾರ್ಥ

ಅಗ್ನೇ—ಅಗ್ನಿಯೇ । ನಃ—ನಮ್ಮನ್ನು । ಅಜಸ್ರೈಃ—ಅನವರತವಾದುದೂ ಅವಿಚ್ಛಿನ್ನವಾದುದೂ ಆದ । ಪಾಯುಭಿಃ—ರಕ್ಷಣಾಕ್ರಮಗಳಿಂದ । ಪಾಹಿ—ರಕ್ಷಿಸು । ಉತ—ಮತ್ತು । ಪ್ರಿಯೇ ಸದನೇ—ನಿನಗೆ ಪ್ರೀತಿ ಪಾತ್ರವಾದ ಯಜ್ಞಗೃಹದಲ್ಲಿ । ಆ—ಸುತ್ತಲೂ । ಶುಶುಕ್ವಾನ್—ಪ್ರಕಾಶಿಸು । ಯವಿಷ್ಠ—ಅತ್ಯಂತ ಯುವಕನಾದ ಎಲೈ ಅಗ್ನಿಯೇ । ತೇ—ನಿನ್ನ । ಜರಿತಾರಂ—ಸ್ತೋತೃವಾದ ನನ್ನನ್ನು । ನೂನಂ—ಈಗ । ಭಯಂ—ಭಯವು । ಮಾ ವಿದತ್—ಸಮೀಪಿಸದಂತಾಗಲಿ । ಸಹಸ್ವಃ—ಬಲಶಾಲಿಯಾದ ಎಲೈ ಅಗ್ನಿಯೇ । ಅಪರಂ—ಬೇರೆಕಾಲದಲ್ಲಿಯೂ ಸಹ । ಮಾ—ನನ್ನನ್ನು ಭಯವು ಸಮೀಪಿಸದಿರಲಿ. ।

ಭಾವಾರ್ಥ

ಅತ್ಯಂತ ಯುವಕನಾದ ಎಲೈ ಅಗ್ನಿಯೇ, ಅನವರತವಾದುದೂ, ಅವಿಚ್ಛಿನ್ನವಾದುದೂ ಆದ ರಕ್ಷಣಾಕ್ರಮಗಳಿಂದ ನಮ್ಮನ್ನು ರಕ್ಷಿಸು. ಮತ್ತು ನಿನಗೆ ಪ್ರೀತಿಪಾತ್ರವಾದ ಯಜ್ಞಗೃಹದಲ್ಲಿ ಸುತ್ತಲೂ ಪ್ರಕಾಶಿಸು. ಬಲಶಾಲಿ

ಯಾದ ಎಲ್ಲೈ ಅಗ್ನಿಯೇ ನಿನ್ನ ಸ್ತೋತೃವಾದ ನನಗೆ ಈ ಯಜ್ಞಕಾಲದಲ್ಲಾಗಲಿ ಇತರ ಯಾವಕಾಲದಲ್ಲಾಗಲಿ ಭಯವೆಂಬುದೇ ಇಲ್ಲದಿರಲಿ.

## English Translation

Cherish us, Agni, with incessant bounties; shine always in your favourite abode: let no danger, youngest (of the gods), assail your worshipper to-day; nor, mighty one, let it assail him at any other season.

### ವಿಶೇಷವಿಷಯಗಳು

**ಪಾಯುಭಿಃ—ಪಾಲನಪ್ರಕಾರೈಃ** | ರಕ್ಷಣಾವಿಧಾನಗಳಿಂದ. ಈ ಋಕ್ಕಿನಲ್ಲಿ ಪಾಹಿ ಎಂಬ ಶಬ್ದಪ್ರಯೋಗವು ರಕ್ಷಣಾಕಾರ್ಯವನ್ನು ಸೂಚಿಸುವುದು. ಆದ್ದರಿಂದ ಅದೇ ಅರ್ಥವಿರುವ **ಪಾಯುಭಿಃ** ಎಂಬ ಶಬ್ದಪ್ರಯೋಗವು ವ್ಯರ್ಥವಲ್ಲವೇ ? ಎಂದರೆ ರಕ್ಷಣೆಯಲ್ಲಿಯೂ ಅನೇಕ ವಿಧವಿರುವುವು. **ಅಜಸ್ರೈಃ** ಎಂಬ ಶಬ್ದವು ರಕ್ಷಣೆಯು ಕೆಲವು ಸಂದರ್ಭಗಳಲ್ಲಿ ಯಾತ್ರವಿರದೆ ಸದಾಕಾಲದಲ್ಲಿಯೂ ಇರಬೇಕೆಂದು ಸೂಚಿಸುವುದು. ಮತ್ತು ಆ ರಕ್ಷಣೆಯು ಅನೇಕ ವಿಧವಾಗಿರಬಹುದು. ಶತ್ರುಗಳಿಂದಲೂ, ದೃಷ್ಟವ್ಯಗಳಿಂದಲೂ ನಮಗೆ ಅಪಾಯವಾಗದಂತೆ ರಕ್ಷಿಸುವುದು ; ಅಗ್ನಿ ಭಯ, ಜಲಭಯ ಇತ್ಯಾದಿ ಭಯಗಳಿಂದ ರಕ್ಷಿಸುವುದು ; ರೋಗಾದ್ಯುಪದ್ರವಗಳಿಂದ ರಕ್ಷಿಸುವುದು ; ಹಸಿವಿನಿಂದ (ಕ್ಷುದ್ಬಾಧೆಯಿಂದ) ಪೀಡಿತರಾಗಿ ಮೃತ್ಯುವಿಗೀಡಾಗದಂತೆ ಅನ್ನಾದ್ಯಾಹಾರಾದಿಗಳನ್ನು ಕೊಟ್ಟು ರಕ್ಷಿಸುವುದು, ಎಂದು ಅನೇಕವಿಧವಾದ ರಕ್ಷಣೋಪಾಯಗಳನ್ನು ಸೂಚಿಸುವುದಕ್ಕಾಗಿ **ಪಾಯುಭಿಃ** ಎಂಬ ಶಬ್ದದ ಪ್ರಯೋಗವಿರುವುದೆಂದು ತಿಳಿಯಬೇಕು.

**ಮಾ**—ಇಲ್ಲಿ **ಮಾ** ಎಂಬ ಶಬ್ದವು ನಿಷೇಧಾರ್ಥವನ್ನು ಸೂಚಿಸುವುದಾಗಿರುವುದು. ಉಂಟಾಗದಿರಲಿ ಎಂದು ಅಭಿಪ್ರಾಯವು.

**ಜರಿತಾರಂ—ಸ್ತೋತಾರಂ ಮಾಂ** | ಸ್ತೋತ್ರಮಾಡುತ್ತಿರುವ ನನ್ನನ್ನು. **ಜರತೇಃ ಸ್ತುತಿಕರ್ಮಣಃ** (ನಿ. ೧೦-೮) ಎಂದು ನಿರುಕ್ತವಚನವಿದೆ.

**ನೂನಂ**—ಈ ಶಬ್ದಕ್ಕೆ ಯಾಸ್ಕರು—

**ನೂನಮಿತಿ ವಿಚಿಕಿತ್ಸಾರ್ಥೀಯೋ ಭಾಷಾಯಾಮುಭಯಮನ್ವಧ್ಯಾಯಂ ವಿಚಿಕಿತ್ಸಾರ್ಥೀಯಶ್ಚ ಪದಪೂರಣಶ್ಚ |**

(ನಿ. ೧-೫)

ನೂನಂ ಎಂಬ ಶಬ್ದವು ಛಂದಸ್ಸುಗಳಲ್ಲಲ್ಲದೆ ಬೇರೆ ಕಡೆಗಳಲ್ಲೂ ವಿಚಿಕಿತ್ಸಾರ್ಥದಲ್ಲಿ ಪ್ರಯುಕ್ತವಾಗಿರುವುದು ಛಂದಸ್ಸಿನಲ್ಲಿ ವಿಚಿಕಿತ್ಸಾರ್ಥದಲ್ಲಿಯೂ ಪದಪೂರಣಾರ್ಥದಲ್ಲಿಯೂ ಪ್ರಯುಕ್ತವಾಗಿರುತ್ತದೆ ಎಂದು ವರ್ಣಿಸಿದ್ದಾರೆ. ದುರ್ಗಾಚಾರ್ಯರು-**ವಿಚಿಕಿತ್ಸಾನಾಮ ವಿವೇಕಪೂರ್ವಕೋ ಅವಧಾರಣಾಭಿಪ್ರಾಯಃ**—ಸಂಶಯವು ಉಂಟಾಗಿರುವ ಸನ್ನಿವೇಶಗಳಲ್ಲಿ ವಿಮರ್ಶೆಯಿಂದ ನಿಶ್ಚಯಮಾಡುವುದಕ್ಕೆ ವಿಚಿಕಿತ್ಸಾ ಎಂದು ಅರ್ಥವನ್ನು ವಿವರಿಸಿದ್ದಾರೆ. ಈ ಋಕ್ಕಿನಲ್ಲಿ ನೂನಂ ಎಂಬ ಶಬ್ದಕ್ಕೆ ಈಗ ಎಂದು ಭಾಷ್ಯಕಾರರು ಅರ್ಥವಿವರಣೆ ಮಾಡಿರುವರು.

**ಯವಿಷ್ಠ—ಯುವತಮ** ಯುವಕರಲ್ಲಿ ಶ್ರೇಷ್ಠನಾದವನು. ಅಗ್ನಿಯು ಯಾವಾಗಲೂ ಸಮಿದಾಜ್ಯಾದಿಗಳಿಂದ ಪ್ರಜ್ವಲಿತನಾಗಿ ಪ್ರಕಾಶಿಸುತ್ತಿರುವುದರಿಂದ ಯುವಕನೆಂದೇ ಸಂಬೋಧಿಸುವುದು ರೂಢಿಯು

ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ | ಹವ್ಯವಾಡ್ಜುಹ್ವಾಸ್ಯಃ ||

(ಋ. ಸಂ. ೧-೧೨-೬)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯನ್ನು ಯುವಾ ಎಂಬ ಶಬ್ದದಿಂದ ವರ್ಣಿಸಿದೆ. ಇತರ ದೇವತೆಗಳ ವಿಷಯದಲ್ಲೂ ಈ ಶಬ್ದದ ಪ್ರಯೋಗವಿರುವುದು.

· ವ್ಯಾಕರಣಪ್ರಕ್ರಿಯಾ

**ಪಾಹಿ**—ಪಾ ರಕ್ಷಣೇ. ಧಾತು- ಲೋಟ್ ಮಧ್ಯಮಪುರುಷ ಏಕವಚನಾಂತ ರೂಪ. ಪಾದಾದಿ ಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಹಿಗೆ ಅಪಿತ್ವವಿಧಾನಮಾಡಿರುವುದರಿಂದ ಅದು ಉದಾತ್ತವಾಗುತ್ತದೆ.

**ಪಾಯುಭಿಃ**—ಪೂರ್ವೋಕ್ತವಾದ ಧಾತುವಿಗೆ **ಕೃವಾಪಾ**—(ಉ. ಸೂ. ೧-೧) ಎಂಬುದರಿಂದ ಉಣ್ ಪ್ರತ್ಯಯ. **ಆತೋಯುಕ್ ಚಿಣ್‌ಕೃತೋಃ** ಎಂಬುದರಿಂದ ಯುಕಾಗಮ. ಪ್ರತ್ಯಯಸ್ವರದಿಂದ ಅಂತೋದಾತ್ತ ವಾಗುತ್ತದೆ.

**ಶುಶುಕ್ವಾನ್**—ಶುಚ ದೀಪ್ತೌ. ಧಾತು. ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** ಎಂಬುದರಿಂದ ಅದಕ್ಕೆ ಕ್ವಸುರಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. ವ್ಯತ್ಯಯದಿಂದ ಧಾತುವಿನ ಚಕಾರಕ್ಕೆ ಕುತ್ವ. ಪ್ರತ್ಯಯಸ್ವರದಿಂದ ವಕಾರೋತ್ತರಾಕಾರ ಉದಾತ್ತವಾಗುತ್ತದೆ.

**ಜರಿತಾರಮ್**--ಧಾತುಗಳಿಗೆ ಅನೇಕಾರ್ಥವಿರುವುದರಿಂದ ಜ್ೃಷ್‌ಧಾತುವು ಇಲ್ಲಿ ಸ್ತೋತ್ರಾರ್ಥದಲ್ಲಿ ಪ್ರಯುಕ್ತವಾಗಿದೆ. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಅದಕ್ಕೆ ಇಡಾಗಮ. ಪ್ರತ್ಯಯನಿಮಿತ್ತವಾಗಿ **ಸಾರ್ವಧಾತು-ಕಾರ್ಧ**—ಎಂಬುದರಿಂದ ಧಾತುವಿನ ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. ಪ್ರತ್ಯಯ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಯವಿಷ್ಠ**—ಅಶತಿಯೇನ ಯುವಾ. **ಅತಿಶಾಯನೇತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದ ರಿಂದ ಇಷ್ಠನ್ ಪ್ರತ್ಯಯ. **ಸ್ಥೂಲದೂರ**—(ಪಾ. ಸೂ. ೬-೪-೧೫೬) ಎಂಬುದರಿಂದ ವನ್ ಎಂಬುದಕ್ಕೆ ಲೋಪ. ಉಕಾರಕ್ಕೆ ಗುಣ. ಅವಾದೇಶ. ಸಂಬುದ್ಧಿಯಲ್ಲಿ ಆಮಂತ್ರಿತ ನಿಘಾತಸ್ವರ ಬರುತ್ತದೆ.

**ವಿದತ್**—ವಿದ್‌ಲೃ ಲಾಭೇ. ಧಾತು. **ಮಾಙಿಲುಙ್** (ಪಾ. ಸೂ. ೩-೩-೧೭೫) ಎಂಬುದರಿಂದ ಮಾಙ್ ಉಪಪದವಾಗಿರುವಾಗ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಅದರ ಅಂತ್ಯ ಇಕಾರಕ್ಕೆ ಲೋಪ. ಲೃದಿತ್ತಾದುದರಿಂದ **ಪುಷಾದಿದ್ಯುತಾದಿ**—(ಪಾ. ಸೂ ೩-೧-೫೫) ಎಂಬುದ ರಿಂದ ಚ್ಲಿಗೆ ಅಙಾದೇಶ. ಇದು ಙಿತ್ತಾದುದರಿಂದ ಲಘೂಪಧ ಗುಣ ಬರುವುದಿಲ್ಲ **ನಮಾಙ್‌ಯೋಗೇ** (ಪಾ. ಸೂ. ೬-೪-೭೪) ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಹಸ್ವ**—**ಮತುವಸೋರುಃ ಸಂಬುದ್ಧೌ** (ಪಾ. ಸೂ. ೮-೩-೧) ಎಂಬುದರಿಂದ ಸಂಬುದ್ಧಿಯಲ್ಲಿ ರುತ್ವ ಬರುತ್ತದೆ. **ಆಮಂತಿತ್ರಸ್ಯಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

———— :o: ————

ಸಂಹಿತಾಪಾಠಃ

ಮಾ ನೋ ಅಗ್ನೇವ ಸೃಜೋ ಅಘಾಯಾವಿಷ್ಯವೇ ರಿಪವೇ ದುಚ್ಛುನಾಯೈ ।

ಮಾ ದತ್ವತೇ ದಶತೇ ಮಾದತೇ ನೋ ಮಾ ರೀಷತೇ ಸಹಸಾವನ್ಪರಾ ದಾಃ

॥ ೫ ॥

॥ ಪದಪಾಠಃ ॥

ಮಾ । ನಃ । ಅಗ್ನೇ । ಅವ । ಸೃಜಃ । ಅಘಾಯ । ಅವಿಷ್ಯವೇ । ರಿಪವೇ । ದುಚ್ಛುನಾಯೈ ।

ಮಾ । ದತ್ವತೇ । ದಶತೇ । ಮಾ । ಅದತೇ । ನಃ । ಮಾ । ರಿಷತೇ । ಸಹಸಾವನ್ । ಪರಾ । ದಾಃ ॥ ೫ ॥

ಸಾಯಣಭಾಷ್ಯಂ

ಅಚ್ಯುತಾಯ ಭೌಮಾಯೈಕಕಪಾಲಪುರೋಡಾಶಹೋಮೇ ಮಾ ನೋ ಅಗ್ನ ಇತ್ಯನಯಾಽಶಯಮಭಿಜುಹೋತಿ । ತಥಾ ಚ ಸೂತ್ರಿತಂ । ಮಾ ನೋ ಅಗ್ನೇಽವ ಸೃಜೋ ಅಘಾಯೇತ್ಯೇನಮಾಶಯೇನಾಭಿಜುಹೋತಿ । ಆ. ಗೃ. ೨-೧-೬ । ಇತಿ ॥

ಹೇ ಅಗ್ನೇ ನೋಽಸ್ಮಾನಘಾಯ ಹಿಂಸಕಾಯಾಽವಿಷ್ಯವೇ । ಅವಿಷ್ಯತಿರತ್ತಿಕರ್ಮಾ । ಅನ್ನೇಚ್ಛವೇ ದುಚ್ಛುನಾಯೈ । ಶುನಂ ಸುಖಂ । ದುಷ್ಟಸುಖಕಾರಿಣೇ । ದುಃಖಕಾರಿಣ ಇತ್ಯರ್ಥಃ । ತಸ್ಮೈ ರಿಪವೇ ಮಾವ ಸೃಜಃ । ಮಾ ತ್ಯಾಕ್ಷೀಃ । ತದಧೀನಂ ಮಾ ಕುರ್ವಿತ್ಯರ್ಥಃ । ತಥಾ ನೋಽಸ್ಮಾನ್ದತ್ವತೇ ದಂತವತೇ ದಶತೇ ಖಾದತೇ ಸರ್ಪಾದಯೇ ಮಾವ ಸೃಜಃ । ತಥಾ ನೋಽಸ್ಮಾನದತೇಽದಂತಕಾಯ ಶೃಂಗಾದಿಭಿರ್ಘಾತಿನೇ ಮಾವ ಸೃಜಃ । ತಥಾ ರಿಷತೇ ಹಿಂಸಕಾಯ ತಸ್ಕರರಾಕ್ಷಸಾದಯೇ ಹೇ ಸಹಸಾವನ್ ಸಹಸ್ವಿನ್ ಮಾ ಪರಾ ದಾಃ । ಪರಾಭೂತಂ ಮಾ ದೇಹಿ । ಸರ್ವಥಾ ನ ದೇಹೀತ್ಯರ್ಥಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ನಃ—ನಮ್ಮನ್ನು । ಅಘಾಯ—ಹಿಂಸಕನೂ (ಪಾಪಿಷ್ಠನೂ)। ಅವಿಷ್ಯವೇ—ಹೊಟ್ಟೆಬಾಕನೂ । ದುಚ್ಛುನಾಯೈ—ದುಃಖಕಾರಿಯೂ ಆದ । ರಿಪವೇ—ಶತ್ರುವಿಗೆ । ಮಾ ಅವ ಸೃಜಃ—ಬಿಟ್ಟುಕೊಟ್ಟು (ನಮ್ಮನ್ನು ಅವನ) ಅಧೀನರನ್ನಾಗಿ ಮಾಡಬೇಡ । ದತ್ವತೇ—ದಂತಾದಿಗಳಿರುವುವೂ । ದಶತೇ—ಕಚ್ಚತಕ್ಕವೂ ಆದ ಸರ್ಪಾದಿಗಳಿಗೂ । ಮಾ—ಸಿಕ್ಕಿ ನರಳುವಂತೆ ಮಾಡಬೇಡ । ನಃ—ನಮ್ಮನ್ನು । ಅದತೇ—ದಂತವಿಲ್ಲದೇ (ಕೊಂಬು ಮುಂತಾದ ಸಾಧನಗಳಿಂದ) ಹಿಂಸಿಸುವ ಪ್ರಾಣಿಗಳಿಗೂ । ಮಾ—ಸಿಕ್ಕಿಸ ಬೇಡ (ಹಾಗೆಯೇ) ರಿಷತೇ—ಹಿಂಸೆಮಾಡತಕ್ಕ ಇತರ ಪ್ರಾಣಿಗೂ ಬಿಟ್ಟುಕೊಡಬೇಡ । ಸಹಸಾವನ್—ಬಲಶಾಲಿಯಾದ ಎಲೈ ಅಗ್ನಿಯೇ । ಮಾ ಪರಾ ದಾಃ—ನನ್ನನ್ನು ಅಪಜಯಕ್ಕೂ ಅವಮಾನಕ್ಕೂ ಈಡುಮಾಡಬೇಡ.

### ಭಾವಾರ್ಥ

ಬಲಶಾಲಿಯಾದ ಎಲೈ ಅಗ್ನಿಯೇ, ಹಿಂಸಕನೂ, ಹೊಟ್ಟೆಬಾಕನೂ, ದುಃಖಕಾರಿಯೂ ಆದ ಶತ್ರುವಿಗೆ ನಮ್ಮನ್ನು ಬಿಟ್ಟುಕೊಟ್ಟು ಅವನ ಅಧೀನರಾಗುವಂತೆ ಮಾಡಬೇಡ. ಹಾಗೆಯೇ ದಂತಾದಿಗಳಿದ್ದು ಕಚ್ಚತಕ್ಕವೂ, ದಂತವಿಲ್ಲದೇ ಶೃಂಗಾದಿಗಳಿಂದ ಹಿಂಸಿಸತಕ್ಕವೂ ಆದ ಪ್ರಾಣಿಗಳಿಗೂ ಸಿಕ್ಕಿಸಬೇಡ. ನಮ್ಮನ್ನು ಅಪಜಯಕ್ಕೂ ಅವಮಾನಕ್ಕೂ ಪಾತ್ರರಾಗುವಂತೆ ಮಾಡಬೇಡ.

### English Translation

Abandon us not, Agni, to a wicked, voracious, malevolent foe; (abandon us) not to one who has fangs, and who bites; nor to one without teeth; nor to the malignant; nor give us up, powerful Agni, to disgrace.

### ವಿಶೇಷವಿಷಯಗಳು

**ಅಘಾಯ—ಹಿಂಸಕಾಯ । ಹನ ಹಿಂಸಾಗತ್ಯೋಃ** ಎಂಬ ಧಾತುವಿಗೆ **ಆಙ್** ಎಂಬ ಉಪಸರ್ಗ ಸೇರಿ ಆಗಿರುವ ಅಘಶಬ್ದಕ್ಕೆ ಹಿಂಸೆಮಾಡುವವನು ದುಷ್ಟನು ಎಂದರ್ಥ. **ರಿಷತೇ** ಎಂಬ ಶಬ್ದಕ್ಕೂ ಇದೇ ಅರ್ಥವು. ಇಲ್ಲಿ **ಅಘಾಯ, ಅವಿಷ್ಯವೇ ರಿಷವೇ** ಇತ್ಯಾದಿಶಬ್ದಗಳು ಚತುರ್ಥ್ಯೈಕವಚನದಲ್ಲಿದ್ದು ಹಿಂಸಕನಿಗೆ ನಮ್ಮನ್ನು ವಶಮಾಡಬೇಡ ಎಂದರೆ ಹಿಂಸಕನ ಕೈಗೆ ನಾವು ಸಿಕ್ಕದಂತೆ ಕಾಪಾಡಬೇಕೆಂದು ಪ್ರಾರ್ಥಿಸಿದೆ.

**ಅವಿಷ್ಯವೇ—ಅವಿಷ್ಯತಿರತ್ತಿಕರ್ಮಾ । ಅನ್ನೇಚ್ಛವೇ ।** ಅತಿಯಾಗಿ ತಿನ್ನುವವನಿಗೆ ಎಂದರೆ ರಾಕ್ಷಸಾದಿಗಳಿಗೆ.

**ದುಚ್ಛುನಾಯೈ**—ಶುನಶಬ್ದವು ಇಪ್ಪತ್ತು ಸುಖನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) ಶುನವೆಂದರೆ ಸುಖವು. **ದುಷ್ಟಸುಖಕಾರಿಣೇ ದುಃಖಕಾರಿಣ ಇತ್ಯರ್ಥಃ** । ಅಂತಹ ಸುಖವನ್ನು ಹೋಗಲಾಡಿಸಿ ದುಃಖವನ್ನುಂಟುಮಾಡುವವನು ಎಂದಭಿಪ್ರಾಯವು.

**ದತ್ವತೇ—ದಂತವತೇ**—ಹುಲ್ಲುಗಳುಳ್ಳ ದುಷ್ಟಪ್ರಾಣಿಗಳು. ಇವುಗಳು ಮನುಷ್ಯರನ್ನು ತಮ್ಮ ಹರಿತವಾದ ಹಲ್ಲುಗಳಿಂದ ಕಚ್ಚುವುವು.

**ದಶತೇ**—ವಿಷದಂತಗಳಿಂದ ಕಚ್ಚುವ ಸರ್ಪಾದಿಗಳು. ವಿಷಜಂತುಗಳ ಹಲ್ಲುಗಳು ಭಯಂಕರವಾಗಿಲ್ಲದಿದ್ದರೂ ಕಚ್ಚುವಾಗ ವಿಷವು ಶರೀರಕ್ಕೆ ಸೇರಿ ಮರಣವನ್ನುಂಟುಮಾಡುವುದರಿಂದ ಸರ್ಪಾದಿಗಳು ಅಪಾಯಕಾರಿಗಳು.

**ಅದತೇ**—ದಂತರಹಿತವಾದ ದುಷ್ಟಪ್ರಾಣಿಗಳು ಎಂದರೆ ಕೆಲವು ಪ್ರಾಣಿಗಳಿಗೆ ಹಲ್ಲುಗಳು ಭಯಂಕರವಾಗಿಲ್ಲದಿದ್ದರೂ ಅವುಗಳು ತಮ್ಮ ಕೊಂಬು, ಗೊರಸು, ಮೊದಲಾದವುಗಳಿಂದ ಮನುಷ್ಯರಿಗೆ ಅಪಾಯವನ್ನು ಮಾಡುವುವು. ಕಾಡುಕೋಣ, ಗೂಳಿ, ಮೊದಲಾದುವು ಕೊಂಬುಗಳಿಂದಲೂ, ಕತ್ತೆ, ಕುದುರೆ ಮೊದಲಾದ ಪ್ರಾಣಿಗಳು ಕಾಲುಗೊರಸಿನಿಂದಲೂ ಜನರಿಗೆ ಅಪಾಯವನ್ನುಂಟುಮಾಡುವುವು. ಇಂತಹ ನಾನಾವಿಧ ದುಷ್ಟಪ್ರಾಣಿಗಳಿಂದ ನಮ್ಮನ್ನು ರಕ್ಷಿಸಬೇಕೆಂದು ಪ್ರಾರ್ಥಿಸಲಾಗಿದೆ

ವ್ಯಾಕರಣಪ್ರಕ್ರಿಯಾ

**ಸೃಜಃ**—ಸೃಜ ವಿಸರ್ಗೇ ಧಾತು. ತುದಾದಿ. ಮಾಙ್ ಉಪಪದವಾಗಿರುವಾಗ **ಲಙ್** ಮಧ್ಯಮಪುರುಷ ಏಕವಚನಾಂತರೂಪ ಮಾಙ್‌ಸಂಬಂಧವಿರುವುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಆವಿಷ್ಯವೇ**—**ಸನಾಶಂಸಭಿಕ್ಷಉಃ**—ಎಂಬುದರಿಂದ ಆವಿಷ್ಯ ಎಂಬ ಸನ್ನಂತದ ಮೇಲೆ ಉಪ್ರತ್ಯಯ. **ಅತೋಲೋಪಃ** (ಪಾ. ಸೂ ೬-೪-೪೮) ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. **ಚತುರ್ಥೀ** ಏಕವಚನಾಂತರೂಪ

**ದುಚ್ಛುನಾಯೈ**—ದುಷ್ಟಂ ಶುನಂ ಯಸ್ಯ ಸಃ ವ್ಯತ್ಯಯದಿಂದ ಲಿಂಗವ್ಯತ್ಯಾಸ ಬಂದಿದೆ. **ಪರಾದಿಶ್ಛಂದಸಿ ಬಹುಲಮ್** (ಪಾ. ಸೂ. ೬-೧-೧೯೯) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ದತ್ವತೇ**—ದಂತಾಃ ಅಸ್ಯ ಸಂತಿ ಇತಿ ತದ್ವಾನ್. ದಂತ ಪದಕ್ಕೆ ದತಾದೇಶ. **ಸ್ವರ ವಿಧೌವ್ಯಂಜನ-ಮವಿದ್ಯಮಾನವತ್** ಎಂಬ ವಚನದಿಂದ ಮಧ್ಯೆ ತಕಾರವಿದ್ದರೂ ಇಲ್ಲದಂತಾಗುವುದರಿಂದ **ಹ್ರಸ್ವನುಡ್ಭ್ಯಾಂ-ಮತುಪ್** (ಪಾ. ಸೂ. ೬-೧-೧೭೬) ಎಂಬುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

**ದಶತೇ**—ದಂಶ ದಶನೇ ಧಾತು. ಲಟಿಗೆ ಶತ್ರಾದೇಶ. ಶಪ್ ವಿಕರಣ. **ದಂಶಸಂಜ ಸ್ವಂಜಾಂ ಶಪಿ** (ಪಾ. ಸೂ. ೬-೪-೨೫) ಎಂಬುದರಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ರಿಷತೇ**—ರಿಷ ಹಿಂಸಾಯಾಂ ಧಾತು. ಲಟಿಗೆ ಶತ್ರಾದೇಶ. **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂಬ ವಚನದಿಂದ ಲಘೂಪಧಗುಣ ಬರುವುದಿಲ್ಲ. ಹಿಂದಿನಂತೆ ಧಾತುಸ್ವರ ಉಳಿಯುತ್ತದೆ.

**ದಾಃ**—ಡುದಾಞ್ ದಾನೇ. ಧಾತು ಮಾಙ್‌ಯೋಗವಿರುವುದರಿಂದ ಲುಙ; ಮಧ್ಯಮಪುರುಷ ಏಕವಚನಾಂತರೂಪ. ಮಾಙ್‌ಯೋಗದಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

---

ಸಂಹಿತಾಪಾಠ

**ವಿ ಷು ತ್ವಾವಾ ಋತಜಾತ ಯಂಸದ್ಗೃಣಾನೋ ಅಗ್ನೇ ತನ್ವೇ೩ವರೂಥಂ ।**

**ವಿಶ್ವಾದ್ರಿರಿಕ್ಷೋರುತ ವಾ ನಿನಿತ್ಸೋರಭಿಹ್ರುತಾಮಸಿ ಹಿ ದೇವ ವಿಷ್ಪಟ್**

**॥ ೬ ॥**

ಪದಪಾಠ

ವಿ । ಘ । ತ್ವಾಽವಾನ್ । ಋತಽಜಾತ । ಯಂಸತ್ । ಗೃಣಾನಃ । ಅಗ್ನೇ । ತನ್ವೇ । ವರೂಥಂ ।

ವಿಶ್ವಾತ್ । ರಿರಿಕ್ಷೋಃ । ಉತ । ವಾ । ನಿನಿತ್ಸೋಃ । ಅಭಿಽಹ್ರುತಾಂ । ಅಸಿ । ಹಿ । ದೇವ । ವಿಷ್ಪಟ್ ॥ ೬ ॥

ಸಾಯಣಭಾಷ್ಯಂ

ಹೇ ಋತಜಾತ ಯಜ್ಞಾರ್ಥಮುತ್ಪನ್ನಾಗ್ನೇ ವರೂಥಂ ವರಣೀಯಂ ತ್ವಾಂ ತನ್ವೇ ಶರೀರ-ಪೋಷಾಯ ಗೃಣಾನಃ ಸ್ತುವಂಸ್ತ್ವಾವಾಂಸ್ತ್ವಯಾ ದೇವತಯಾ ತದ್ವಾಞ್ಜನೋ ವಿ ಘ ಯಂಸತ್ । ವಿಮುಂಚತಿ ಖಲ್ವಾತ್ಮಾನಂ । ಕಸ್ಮಾತ್ಸಕಾಶಾತ್ । ರಿರಿಕ್ಷೋರ್ಹಿಂಸಿತುಮಿಚ್ಛೋಃ ಚೋರಾದೇಃ ಸಕಾಶಾತ್ । ಉತ ವಾಥವಾ ನಿನಿತ್ಸೋರ್ನಿಂದಿತುಮಿಚ್ಛತಃ । ಹೇ ದೇವ ಅಭಿಹ್ರುತಾಮಾಭಿಮುಖ್ಯೇನ ಕುಟಿಲಂ ಕುರ್ವತಾಂ ದ್ವಿಷಾಂ ವಿಷ್ಪಡ್ವಿಶೇಷೇಣ ಬಾಧಕೋಽಸಿ ಹಿ । ಅತಸ್ತ್ವದನುಗ್ರಹಾದಯಂ ಜನೋ ವಿ ಯಂಸತ್ ॥

॥ ಪ್ರತಿಪದಾರ್ಥ ॥

ಋತಜಾತ—ಯಜ್ಞಾರ್ಥವಾಗಿ ಉತ್ಪನ್ನನಾದ । ಅಗ್ನೇ—ಎಲೈ ಅಗ್ನಿಯೇ । ವರೂಥಂ—ಅತ್ಯಂತವಾಗಿ ಅಪೇಕ್ಷಿತವಾದ ನಿನ್ನನ್ನು । ತನ್ವೇ—ತನ್ನ ಶರೀರಪೋಷಣೆಗಾಗಿ । ಗೃಣಾನಃ—ದೇವತಾತ್ಮನಾದ ನಿನ್ನಂತೆಯೇ ಪ್ರವೃದ್ಧವಾದ ಶರೀರವುಳ್ಳವನೂ ಆದ ಯಜಮಾನನು । ರಿರಿಕ್ಷೋಃ—ಹಿಂಸಿಸತಕ್ಕ ಚೋರಾದಿಗಳಿಂದಾಗಲಿ, । ಉತ ವಾ—ಅಥವಾ (ಅಲ್ಲದೇ) । ನಿನಿತ್ಸೋಃ—ನಿಂದೆಮಾಡತಕ್ಕ ಶತ್ರುವಿನಿಂದಾಗಲಿ । ವಿ ಘ ಯಂಸತ್—ತನ್ನನ್ನು ಬಿಡಿಸಿಕೊಳ್ಳುತ್ತಾನೆ (ಅವರ ಹಿಂಸೆಗೆ ಸಿಕ್ಕಿಕೊಳ್ಳುವುದಿಲ್ಲ) । ದೇವ—ಪ್ರಕಾಶಮಾನನಾದ ಎಲೈ ಅಗ್ನಿಯೇ (ನೀನು)। ಅಭಿಹ್ರುತಾಂ—ವಂಚಕರಾದ ಶತ್ರುಗಳಿಗೆ । ವಿಷ್ಪಟ್—ಹಿಂಸೆಯನ್ನುಂಟುಮಾಡುವವನಾಗಿ । ಅಸಿ ಹಿ—ಇದ್ದೀಯಲ್ಲವೇ ?

ಭಾವಾರ್ಥ

ಯಜ್ಞಾರ್ಥವಾಗಿ ಉತ್ಪನ್ನನಾದ ಎಲೈ ಅಗ್ನಿಯೇ, ಅತ್ಯಂತವಾಗಿ ಅಪೇಕ್ಷಿತವಾದ ತನ್ನ ಶರೀರ ಪೋಷಣೆಗಾಗಿ ನಿನ್ನನ್ನು ಸ್ತುತಿಸುವವನೂ, ದೇವಾತ್ಮನಾದ ನಿನ್ನಂತೆಯೇ ಪ್ರವೃದ್ಧವಾದ ಶರೀರವುಳ್ಳವನೂ ಆದ ಯಜಮಾನನು, ಹಿಂಸಿಸತಕ್ಕ ಚೋರಾದಿಗಳಿಂದಲೂ ಮತ್ತು ನಿಂದೆಮಾಡತಕ್ಕ ಶತ್ರುವಿನಿಂದಲೂ ತನ್ನನ್ನು ಬಿಡಿಸಿಕೊಳ್ಳುತ್ತಾನೆ. ಮತ್ತು ಅವನ ಹಿಂಸೆಗೆ ಸಿಕ್ಕಿಕೊಳ್ಳುವುದಿಲ್ಲ. ಪ್ರಕಾಶಮಾನನಾದ ಎಲೈ ಅಗ್ನಿಯೇ, ವಂಚಕರಾದ ಶತ್ರುಗಳಿಗೆ ನೀನು ಹಿಂಸಾಕಾರಕನಾಗಿದ್ದೀಯೆ.

## English Translation

Agni, born for sacrifice, (a man) praising you, who are excellent, for (the sake of cherishing) his body, becomes such as you are exempts himself from all who are inclined to harm or revile him ; for you, Agni, are the especial adversary of those who do wrong.

ವಿಶೇಷವಿಷಯಗಳು

**ಋತಜಾತ**—ಋತಶಬ್ದಕ್ಕೆ ನಾನಾರ್ಥಗಳಿರುವುವು. ಇಲ್ಲಿ ಭಾಷ್ಯಕಾರರು ಯಜ್ಞವೆಂದು ಅರ್ಥಮಾಡಿ ಆ ಯಜ್ಞಾರ್ಥವಾಗಿ ಉತ್ಪನ್ನನಾದವನೆಂದು ಅಗ್ನಿಯನ್ನು ಸಂಬೋಧಿಸಿದೆ ಎಂದು ವಿವರಿಸಿದ್ದಾರೆ

**ವರೂಥಂ**—ವರೂಥಶಬ್ದವು ಗೃಹನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) ಈ ಶಬ್ದಕ್ಕೆ ಮನೆಯೆಂದು ಅರ್ಥವು. ಆದರೆ ಈ ಶಬ್ದವು ವೃಞ್-ವರಣೇ (ಸ್ವಾದಿ-ಉಭಯಪದಿ) ಎಂಬ ಧಾತುವಿನಿಂದ ನಿಷ್ಪನ್ನ ವಾಗಿವರಣೀಯಂ-ಎಲ್ಲರಿಂದಲೂ ಅಪೇಕ್ಷಿಸಲ್ಪಡುವ ಎಂಬರ್ಥವನ್ನು ಕೊಡುವುದು. ಈ ಅರ್ಥದಲ್ಲಿ ಇಲ್ಲಿ ಅಗ್ನಿಗೆ (ತ್ವಾಂ) ವಿಶೇಷಣವಾಗಿ ಪ್ರಯುಕ್ತವಾಗಿದೆ.

**ರಿರಿಕ್ಷೋಃ**—ಹಿಂಸಿತುಮಿಚ್ಛೋಃಶ್ಛೋರಾದೇಃ ಸಕಾಶಾತ್ । ಹಿಂಸೆಯನ್ನುಂಟುಮಾಡಬೇಕೆಂದು ಅಪೇಕ್ಷಿಸುವ ಕಳ್ಳರೇ ಮುಂತಾದ ದುಷ್ಟಜನರಿಂದ ಎಂದಭಿಪ್ರಾಯ.

**ನಿನಿತ್ಸೋಃ**—ನಿಂದಿಸಬೇಕೆಂದು ಇಚ್ಛೆಯುಳ್ಳ ವಿರೋಧಿಜನಗಳಿಂದ.

**ಅಭಿಹ್ರುತಾಂ** -- ಮುಖ್ಯವಾಗಿ ಉಪಾಯಾಂತರಗಳಿಂದ ಮೋಸಮಾಡಬೇಕೆಂದು ಪ್ರಯತ್ನಿಸುವ ಕೆಟ್ಟಜನರೆಂದಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ತ್ವಾವಾನ್**—ಯುಷ್ಮದ್ ಶಬ್ದ. ಮತುಪ್ ಪ್ರತ್ಯಯ ಬಂದಾಗ ಆ **ಸರ್ವನಾಮ್ನಃ** (ಪಾ. ಸೂ. ೬-೩-೯೧) ಎಂಬುದರಿಂದ ದಕಾರಕ್ಕೆ ಆತ್ವ. **ಪ್ರತ್ಯಯೋತ್ತರಪದಯೋಶ್ಚ** (ಪಾ. ಸೂ. ೮-೩-೩) ಎಂಬುದ ರಿಂದ ಮಪರ್ಯಂತಕ್ಕೆ ತ್ವಾದೇಶ. ದೀರ್ಘ. ಮತುಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ **ಪ್ರಾತಿಪದಿಕ** ಸ್ವರ ಉಳಿಯುತ್ತದೆ. **ದೀರ್ಘಾದಟಿ ಸಮಾನಪಾದೇ** ಎಂಬುದರಿಂದ ನಕಾರಕ್ಕೆ ರುತ್ವ. **ಆತೋಟಿನಿತ್ಯಮ್** ಎಂಬುದರಿಂದ ಪೂರ್ವದ ಆಕಾರಕ್ಕೆ ಅನುನಾಸಿಕತ್ವ.

**ಯಂಸತ್**—ಯಮ ಉಪರಮೇ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಇತಶ್ಚ ಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಅಂತ್ಯ ಇಕಾರಕ್ಕೆ ಲೋಪ. **ಲೇಟೋಡಾಟೌ** (ಪಾ. ಸೂ. ೩-೪-೯೪) ಸೂತ್ರದಿಂದ ಅವಕ್ಕೆ ಅಡಾಗಮ. **ಸಿಬ್ಬಹುಲಂಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. ಧಾತುಮಕಾರಕ್ಕೆ ಸಕಾರನಿಮಿತ್ತವಾಗಿ ಅನುಸ್ವಾರ. ತಿಙಂತ ನಿಘಾತಸ್ವರ ಬರುತ್ತದೆ.

**ವರೂಥಮ್**—ವೃಞ್ ವರಣೇ. ಧಾತು. **ಜೃ ವೃಞ್ಭ್ಯಾಮೂಥನ್** (ಉ. ಸೂ. ೨-೧೬೩) ಎಂಬು ದರಿಂದ ಊಥನ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತು ಋಕಾರಕ್ಕೆ ಗುಣ ರಪರವಾಗಿ ಬರುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರಿರಿಕ್ಷೋಃ**—ರಿರಿಕ್ಷತೀತಿ ರಿರಿಕ್ಷುಃ ರಿಷ ಹಿಂಸಾಯಾಂ ಧಾತು. **ಧಾತೋಃಕರ್ಮಣಃ ಸಮಾ**—(ಪಾ. ಸೂ ೩-೧-೭) ಎಂಬುದರಿಂದ ಇಚ್ಛಾರ್ಥದಲ್ಲಿ ಸನ್. ಸನ್ ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. **ಸನಾಶಂಸಭಿಕ್ಷಉಃ**

(ಪಾ. ಸೂ. ೩-೨-೧೬೮) ಎಂಬುದರಿಂದ ಸನ್ನಂತದ ಮೇಲೆ ಕರ್ತರಿಯಲ್ಲಿ ಉ ಪ್ರತ್ಯಯ. ಅತೋಲೋಪಃ (ಪಾ. ಸೂ. ೬-೪-೪೮) ಎಂಬುದರಿಂದ ಸನಿನ ಅಕಾರಕ್ಕೆ ಲೋಪ. ಪ್ರತ್ಯಯ ಸ್ವರದಿಂದ ಅಂತೋದಾತ್ತಸ್ವರ ಬರುತ್ತದೆ. ಪಂಚಮೀ ಏಕವಚನಾಂತರೂಪ.

ನಿನಿತ್ಸೋಃ—ಣಿದಿ ಕುತ್ಸಾಯಾಂ ಧಾತು. ಣೋನಃ (ಪಾ. ಸೂ. ೬-೧-೬೫) ಎಂಬುದರಿಂದ ಆದಿಗೆ ನತ್ವ. ಹಿಂದಿನಂತೆ ಸನ್. ಸನ್ನಂತ ಮೇಲೆ ಉಪ್ರತ್ಯಯ.

ಅಭಿಹ್ರುತಾಮ್—ಹ್ರು ಕೌಟಲ್ಯೇ. ಧಾತು. ಕ್ವಿಪ್. ಪ್ರತ್ಯಯ. ಹ್ರಸ್ವಸ್ಯ ಪಿತಿಕೃತಿತುಕ್ (ಪಾ. ಸೂ. ೬-೧-೭೧) ಎಂಬುದರಿಂದ ತುಕಾಗಮ. ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ. ಷಷ್ಠೀ ಬಹುವಚ ನಾಂತರೂಪ.

---

ಸಂಹಿತಾಪಾಠಃ

ತ್ವಂ ತಾ ಅಗ್ನ ಉಭಯಾನ್ವಿ ವಿದ್ವಾನ್ವೇಷಿ ಪ್ರಪಿತ್ವೇ ಮನುಷೋ ಯಜತ್ರ ।
ಅಭಿಪಿತ್ವೇ ಮನವೇ ಶಾಸ್ಯೋ ಭೂರ್ಮರ್ಮೃಜೇನ್ಯ ಉಶಿಗ್ಭಿರ್ನಾಕ್ರಃ ॥ ೭ ॥

ಪದಪಾಠ

ತ್ವಂ । ತಾನ್ । ಅಗ್ನೇ । ಉಭಯಾನ್ । ವಿ । ವಿದ್ವಾನ್ । ವೇಷಿ । ಪ್ರಽಪಿತ್ವೇ । ಮನುಷಃ । ಯಜತ್ರ ।
ಅಭಿಽಪಿತ್ವೇ । ಮನವೇ। ಶಾಸ್ಯಃ । ಭೂಃ । ಮರ್ಮೃಜೇನ್ಯಃ । ಉಶಿಕ್ಽಭಿಃ । ನ । ಅಕ್ರಃ ॥ ೭ ॥

ಸಾಯಣಭಾಷ್ಯಂ

ಹೇ ಯಜತ್ರ ಯಷ್ಟವ್ಯಾಗ್ನೇ ತ್ವಂ ತಾನ್ಯಷ್ಟ್ರ್ಯಾನಯಷ್ಟ್ರ್ಯಾಂಶ್ಚೋಭಯಾನ್ಮನುಷೋ ಮನುಷ್ಯಾನ್ವಿವಿಚ್ಯ ವಿದ್ವಾಞ್ಜಾನನ್ ಪ್ರಪಿತ್ವೇ ಸನ್ನಿಹಿತೇ ಏವ ಕಾಲೇ ವೇಷಿ । ಕಾಮಯಸೇ ಯಷ್ಟ್ರ್ಯಾನ್ । ತಥಾ ಕುರ್ವನ್ನಕ್ರ ಆಕ್ರಮಿತಾ ತ್ವಂ ಮನವೇ । ಷಷ್ಠ್ಯರ್ಥೇ ಚತುರ್ಥೀ । ಮನುಷ್ಯಸ್ಯ ಯಜಮಾನಸ್ಯಾಭಿಪಿತ್ವೇಽಭಿಪ್ರಾಪ್ತೇ ಕಾಲೇಽಭಿಗಮನವತಿ ಯಜ್ಞೇ ವಾ ಶಾಸ್ಯೋ ಭೂಃ । ಶಿಕ್ಷಣೀಯೋ ಭವ । ಇದಂ ಕುರ್ವಿದಂ ಕುರ್ವಿತಿ ವಿಧೇಯೋ ಭವ। ಮರ್ಮೃಜೇನ್ಯಃ ಶೋಧಯಿತಾ ಯಜಮಾನ ಉಶಿಗ್ಭಿಃ ಕಾಮಯಮಾನೈರ್ಋತ್ವಿಗ್ಭಿರಿವ ॥

ಪ್ರತಿಪದಾರ್ಥ

ಯಜತ್ರ—ಯಜ್ಞಾರ್ಹನಾದ । ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ತಾನ್ ಉಭಯಾನ್—ಯಜ್ಞಕರ್ತರೂ ಮತ್ತು ಯಜ್ಞಕರ್ತರಲ್ಲದವರೂ ಆದ ಎರಡು ಬಗೆಯ । ಮನುಷಃ-ಮಾನವರನ್ನೂ । ವಿದ್ವಾನ್-ತಿಳಿದುಕೊಂಡು । ಪ್ರಪಿತ್ವೇ—ಸನ್ನಿಹಿತವಾದ ಯಜ್ಞಕಾಲದಲ್ಲಿ । ವೇಷಿ—ಯಜ್ಞಕರ್ತರನ್ನು ಮಾತ್ರ ಇಚ್ಛಿಸು

ತ್ತೀಯೆ (ಅನಂತರ) । **ಅಕ್ರಃ**—ವ್ಯಾಪಕನಾದ ನೀನು । **ಮನವೇ**—ಯಜ್ಞಕರ್ತನಾದ ಯಜಮಾನನಿಗೆ । **ಅಭಿಪಿತ್ವೇ**—ಸದ್ಯಃ ನೆರವೇರಿಸಲ್ಪಡುವ ಯಾಗದಲ್ಲಿ । **ಮರ್ತ್ಯಜೇನ್ಯಃ**—ಶೋಧಕನಾದ ಯಜಮಾನನು । **ಉಶಿಗ್ಭಿಃ ನ**—ಋತ್ವಿಕ್ಕುಗಳ ಅಪೇಕ್ಷೆಯಂತೆ ವಿಧಿಕಾರ್ಯಗಳನ್ನು ತಿಳಿಯುವಂತೆ । **ಶಾಸ್ಯಃ ಭೂಃ**—ಇದನ್ನು ಮಾಡು, ಇದನ್ನು ಬಿಡು ಎಂದು ತಿಳಿಸುವವನಾಗಿ ಆಗು.

### ಭಾವಾರ್ಥ

ಯಜ್ಞಾರ್ಹನಾದ ಎಲೈ ಅಗ್ನಿಯೇ, ನೀನು ಯಜ್ಞಕರ್ತರೂ, ಯಜ್ಞಕರ್ತರಲ್ಲದವರೂ ಆದ ಎರಡು ಬಗೆಯ ಮಾನವರನ್ನೂ ವಿಭಾಗಮಾಡಿ ತಿಳಿದುಕೊಂಡು ಸನ್ನಿಹಿತವಾದ ಯಜ್ಞಕಾಲದಲ್ಲಿ ಯಜ್ಞಕರ್ತರನ್ನು ಮಾತ್ರ ಇಚ್ಛಿಸುತ್ತೀಯೆ. ಅನಂತರ, ಯಜ್ಞಭೂಮಿಯಲ್ಲೆಲ್ಲಾ ವ್ಯಾಪಕನಾದ ನೀನು ಯಜ್ಞಕರ್ತನಾದ ಯಜಮಾನನು ಋತ್ವಿಕ್ಕುಗಳಿಂದ ಶಿಕ್ಷಿತನಾಗುವಂತೆ ನೀನೂ ಸಹ ಇದನ್ನು ಮಾಡು, ಇದನ್ನು ಬಿಡು ಎಂಬ ವಿಧಿವಾಕ್ಯಗಳನ್ನು ತಿಳಿಸುವ ಶಿಕ್ಷಕನಾಗಿರು.

### English Translation

Adorable Agni, you are sagacious, and in a short time discriminate between both those men (who do and do not worship you); approach the worshipper at the proper time, and be compliant (with his wishes), like an institutor of the rite, (who is directed) by the desires (of the priests).

### ವಿಶೇಷವಿಷಯಗಳು

**ಉಭಯಾನ್ ಮನುಷಃ**—ಎರಡು ವಿಧವಾದ ಜನರು ಎಂದರೆ ಅಗ್ನಿಯನ್ನು ಪೂಜಿಸಿ ಯಜ್ಞಯಾಗಾದಿಗಳಿಂದ ತೃಪ್ತಿಪಡಿಸುವವರು, ಮತ್ತು ಆರೀತಿ ಮಾಡದ ಇತರರು ಎಂದು ಸಾಯಣರು ಅರ್ಥವಿವರಣೆ ಮಾಡಿದ್ದಾರೆ.

**ಪ್ರಪಿತ್ವೇ, ಅಭಿಪಿತ್ವೇ—ಸನ್ನಿಹಿತೇ** । ಈಗ ಪ್ರಾಪ್ತವಾಗಿರುವ, ನಡೆಯುತ್ತಿರುವ ಯಜ್ಞದಲ್ಲಿ ಎಂದರ್ಥ. ಯಾಸ್ಕರು ಈ ಶಬ್ದವನ್ನು ಇಪ್ಪತ್ತು ದ್ವಿಶನಾಮಗಳಲ್ಲಿ ಪಠಿಸಿದ್ದಾರೆ. ಮತ್ತು,

**ಪ್ರಪಿತ್ವೇಽಭೀಕೇ ಇತ್ಯಾಸನ್ನಸ್ಯ । ಪ್ರಪಿತ್ವೇ ಪ್ರಾಪ್ತೇ । ಅಭೀಕೇಽಭ್ಯಕ್ತೇ ।**
(ನಿ. ೩-೨೦)

ಎಂದು ನಿರ್ವಚನವನ್ನು ಹೇಳಿದ್ದಾರೆ. ಆದ್ದರಿಂದ ಪ್ರಪಿತ್ವೇ ಎಂದರೆ ಈಗ ನೆರವೇರಿಸಲ್ಪಡುತ್ತಿರುವ (ಯಜ್ಞ) ವೆಂದಭಿಪ್ರಾಯವು. ಅಭಿಪಿತ್ವೇ—ಎಂಬ ಶಬ್ದಕ್ಕೂ ಇದೇ ಅರ್ಥವು. **ಅಭಿಪಿತ್ವೇ—ಅಭಿಗಮನವತಿ ಯಜ್ಞೇ** । ನಮ್ಮ ಎದುರಿಗೆ ನಡೆಯುತ್ತಿರುವ ಈ ಯಜ್ಞದಲ್ಲಿ ಎಂದರ್ಥವು

**ಉಶಿಗ್ಭಿಃ**—ಉಶಿಕ್ ಶಬ್ದವು ಕಾಂತಿಕರ್ಮವನ್ನು ಸೂಚಿಸುವ ಶಬ್ದಗಳಲ್ಲಿಯೂ (ನಿ. ೩-೯) ಮೇಧಾವಿನಾಮಗಳಲ್ಲಿಯೂ (ನಿ. ೩-೧೯) ಪಠಿತವಾಗಿದೆ. ಇಲ್ಲಿ ಮೇಧಾವಿಗಳಾದ (ಬುದ್ಧಿವಂತರಾದ) ಋತ್ವಿಕ್‌ಗಳೆಂದು ಅಭಿಪ್ರಾಯವು.

**ಅಕ್ರಃ—ಆಕ್ರಮಿತಾ ತ್ವಂ** । ಎಲ್ಲವನ್ನೂ ಆಕ್ರಮಿಸಿ ದಹಿಸುವವನು ಎಂದು ಅಗ್ನಿಗೆ ವಿಶೇಷಣವಾಗಿದೆ. ಯಾಸ್ಕರು—**ಅಕ್ರ ಆಕ್ರಮಣಾತ್** ಎಂದು ನಿರ್ವಚನವನ್ನು ಹೇಳಿ (ನಿ ೬-೧೭).

**ಅಕ್ರೋ ನ ಬಭ್ರಿಃ ಸಮಿಥೇ ಮಹೀನಾಂ ದಿದೃಕ್ಷೇಯಃ ಸೂನವೇ ಭಾಋಜೀಕಃ ।**
**ಉದುಸ್ರಿಯಾ ಜನಿತಾ ಯೋ ಜಜಾನಾಪಾಂ ಗರ್ಭೋ ನೃತಮೋ ಯಹ್ವೋ ಅಗ್ನಿಃ ॥**
(ಋ. ಸಂ. ३-೧-೧೨)

ಎಂಬ ಋಕ್ಕನ್ನು ಉದಾಹರಣೆಗಾಗಿ ಕೊಟ್ಟಿರುವರು.

ವ್ಯಾಕರಣ ಪ್ರಕ್ರಿಯಾ

**ತಾನ್ + ಅಗ್ನೇ—ದೀರ್ಘಾದಟಿಸಮಾನಪಾದೇ** (ಪಾ ಸೂ. ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. **ಆತೋಟಿನಿತ್ಯಮ್** (ಪಾ. ಸೂ. ೮-೩-೩) ಎಂಬುದರಿಂದ ಪೂರ್ವದ ಆಕಾರಕ್ಕೆ ಅನುನಾಸಿಕಭಾವ.

**ವೇಷಿ**—ವೀ ಕಾಂತ್ಯಾದಿಷು. ಧಾತು ಕಾಂತಿ ಎಂದರೆ ಇಲ್ಲಿ ಇಚ್ಛಾ ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಅದಿಪ್ರಭೃತಿಭ್ಯಃ** ಎಂಬುದರಿಂದ ಶಪಿಗೆ ಲುಕ್. ಸಿಪ್ ನಿಮಿತ್ತವಾಗಿ ಈಕಾರಕ್ಕೆ ಗುಣ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಸಿಪ್ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ

**ಶಾಸ್ಯಃ**—ಶಾಸು ಅನುಶಿಷ್ಟೌ ಧಾತು. **ಏತಿಸ್ತುಶಾಸ್**—(ಪಾ. ಸೂ. ३-೧-೧೦೯) ಎಂಬುದರಿಂದ ಕ್ಯಪ್ ಪ್ರತ್ಯಯ. ಯಕಾರ ಉಳಿಯುತ್ತದೆ ಇದು ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಭೂಃ**—ಭೂ ಸತ್ತಾಯಾಂ ಧಾತು. **ಛಂದಸಿಲುಙ್‌ಲಙ್‌ಲಿಟಃ** ಎಂಬುದರಿಂದ ಲೋಡರ್ಥದಲ್ಲಿ ಲುಙ್. ಮಧ್ಯಮಪುರುಷ ಏಕವಚನಾಂತರೂಪ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ.

**ಮರ್ಮೃಜೇನ್ಯಃ**—ಮೃಜೂ ಶುದ್ಧೌ. ಧಾತು. ಇದಕ್ಕೆ ಯಙಂತದ ಮೇಲೆ ಷೇಣ್ಯಙ್ ಪ್ರತ್ಯಯ. ಯಙ್ ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಉಶಿಗ್ಭಿಃ**—ವಶ ಕಾಂತೌ. ಧಾತು. **ವಶಃಕಿತ್** (ಉ. ಸಂ. ೨-೨೪) ಎಂಬುದರಿಂದ ಇಜಿ ಪ್ರತ್ಯಯ. ಅದಕ್ಕೆ ಕಿತ್ತ್ವ ವಿಧಾನಮಾಡಿರುವುದರಿಂದ **ಗ್ರಹಿಜ್ಯಾವಯಿ**-(ಪಾ. ಸೂ. ೬-೧-೧೬) ಎಂಬುದರಿಂದ ಧಾತು ವಕಾರಕ್ಕೆ ಉಕಾರರೂಪ, ಸಂಪ್ರಸಾರಣ. ಪರದ ಅಕಾರಕ್ಕೆ ಪೂರ್ವರೂಪ. ಉಶಿಜ್ ಶಬ್ದವಾಗುತ್ತದೆ. ತೃತೀಯಾ ಬಹುವಚನಾಂತರೂಪ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ಅಕ್ರಃ**—ಕ್ರಮು ಪಾದವಿಕ್ಷೇಪೇ. ಧಾತು. ಇದಕ್ಕೆ ಛಾಂದಸವಾಗಿ ಡ ಪ್ರತ್ಯಯ. ಡಿತ್ವಸಾಮರ್ಥ್ಯದಿಂದ ಟಿಗೆ (ಅಮ್) ಲೋಪ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

---

ಸಂಹಿತಾಪಾಠಃ

**ಅಪೋಚಾಮ ನಿವಚನಾನ್ಯಸ್ಮಿನ್ಮಾನಸ್ಯ ಸೂನುಃ ಸಹಸಾನೇ ಅಗ್ನೌ ।**

**ವಯಂ ಸಹಸ್ರಮೃಷಿಭಿಃ ಸನೇಮ ವಿದ್ಯಾಮೇಷಂ ವೃಜನಂ ಜೀರದಾನುಂ**

**॥ ೮ ॥**

॥ ಪದಪಾಠಃ ॥

ಅವೋ॑ಚಾಮ । ನಿऽವಚ॑ನಾನಿ । ಅ॒ಸ್ಮಿ॒ನ್ । ಮಾನ॑ಸ್ಯ । ಸೂ॒ನುಃ । ಸ॒ಹ॒ಸಾ॒ನೇ । ಅ॒ಗ್ನೌ ।

ವ॒ಯಂ । ಸ॒ಹಸ್ರಂ॑ । ಋಷಿ॑ऽಭಿಃ । ಸ॒ನೇ॒ಮ॒ । ವಿ॒ದ್ಯಾಮ॑ । ಇ॒ಷಂ । ವೃ॒ಜನಂ॑ । ಜೀ॒ರऽದಾ॑ನುಂ ॥ ೮ ॥

ಸಾಯಣಭಾಷ್ಯಂ

ವಯಮಸ್ಮಿನ್ನಗ್ನೌ ನಿವಚನಾನಿ ನಿಯಮಪೂರ್ವಕಾಣಿ ವಚಾಂಸಿ ಸ್ತೋತ್ರರೂಪಾಣ್ಯವೋಚಾಮ । ಬ್ರೂಮಃ । ಅಗ್ನಿರ್ವಿಶೇಷ್ಯತೇ । ಮಾನಸ್ಯ ಸೂನುಃ । ಮೀಯತ ಇತಿ ಮಾನೋ ಮಂತ್ರಃ । ತಸ್ಯ ಸೂನುರಗ್ನಿಃ ಮಂತ್ರೇಣೋತ್ಪದ್ಯಮಾನತ್ವಾತ್ । ಸಪ್ತಮ್ಯರ್ಥೇ ಪ್ರಥಮಾ । ಮಾನಸ್ಯ ಸೂನೌ ಸಹಸಾನೇ ಶತ್ರೂಣಾಮಭಿಭವಿತರ್ಯಗ್ನಾವವೋಚಾಮ । ವಯಮೇಭಿರ್ಋಷಿಭಿರತೀಂದ್ರಿಯಾರ್ಥಪ್ರಕಾಶಕೈರ್ಮಂತ್ರೈಃ ಸಾಧನೈಃ ಸಹಸ್ರಮಪರಿಮಿತಂ ಧನಂ ಸನೇಮ । ಸಂಭಜೇಮಹಿ । ವಿದ್ಯಾಮೇತಿ ಗತಂ ॥

ಪ್ರತಿಪದಾರ್ಥ

ಮಾನಸ್ಯ ಸೂನುಃ—ಮಂತ್ರದಿಂದ ಉತ್ಪನ್ನನಾದ ಪುತ್ರನೂ । ಸಹಸಾನೇ—ಶತ್ರುಗಳನ್ನು ಸೋಲಿಸುವ ಶಕ್ತಿಯುಳ್ಳವನೂ ಆದ । ಅಸ್ಮಿನ್ ಅಗ್ನೌ—ಈ ಅಗ್ನಿಯಲ್ಲಿ (ಅಗ್ನಿಯನ್ನು ಉದ್ದೇಶಿಸಿ) । ನಿವಚನಾನಿ—ಸ್ತೋತ್ರ ರೂಪವಾದ ವಾಕ್ಕುಗಳನ್ನು । ಅವೋಚಾಮ—ಪಠಿಸುತ್ತೇವೆ । ವಯಂ—ನಾವು । ಋಷಿಭಿಃ—ಅತೀಂದ್ರಿಯಾರ್ಥವನ್ನು ಪ್ರಕಾಶಪಡಿಸತಕ್ಕ ಮಂತ್ರಗಳಿಂದ । ಸಹಸ್ರಂ - ಅಪರಿಮಿತವಾದ ಧನವನ್ನು । ಸನೇಮ—ಹೊಂದುವಂತಾಗಲಿ (ಮತ್ತು) । ಇಷಂ—ಅನ್ನವನ್ನೂ । ವೃಜನಂ—ಬಲವನ್ನೂ । ಜೀರದಾನುಂ—ದೀರ್ಘಾಯುಷ್ಯವನ್ನೂ । ವಿದ್ಯಾಮ—ಹೊಂದುವಂತಾಗಲಿ.

ಭಾವಾರ್ಥ

ಮಂತ್ರದಿಂದ ಉತ್ಪನ್ನನಾದ ಪುತ್ರನೂ, ಶತ್ರುಗಳನ್ನು ಸೋಲಿಸುವ ಶಕ್ತಿಯುಳ್ಳವನೂ ಆದ ಈ ಅಗ್ನಿಯನ್ನುದ್ದೇಶಿಸಿ ನಾವು ಸ್ತೋತ್ರಗಳನ್ನು ಪಠಿಸುತ್ತೇವೆ. ಅತೀಂದ್ರಿಯಾರ್ಥವನ್ನು ಪ್ರಕಾಶಪಡಿಸತಕ್ಕ ಮಂತ್ರಗಳಿಂದ ನಾವು ಅಪರಿಮಿತವಾದ ಧನವನ್ನೂ, ಅನ್ನವನ್ನೂ, ಬಲವನ್ನೂ ಮತ್ತು ದೀರ್ಘಾಯುಷ್ಯವನ್ನೂ ಹೊಂದುವಂತಾಗಲಿ.

## English Translation

We address our pious prayers to you, Agni, the son of prayer, the subduer of foes; may we procure, by these sacred supplications, infinite wealth that we may thence obtain food, strength, and long life.

ವಿಶೇಷವಿಷಯಗಳು

ಮಾನಸ್ಯ ಸೂನುಃ—ಮೀಯತ ಇತಿ ಮಾನೋ ಮಂತ್ರಃ । ತಸ್ಯ ಸೂನುರಗ್ನಿಃ । ಮಂತ್ರೇಣೋತ್ಪದ್ಯಮಾನತ್ವಾತ್ । ಸಪ್ತಮ್ಯರ್ಥೇ ಪ್ರಥಮಾ । ಇಲ್ಲಿ ಮಾನನೆಂದರೆ ಮಂತ್ರವೆಂದು ಅರ್ಥಮಾಡಿರುವರು.

**ಮಾಙ್ ಮಾನೇ**—ಅಳತೆಮಾಡು ಎಂಬ ಧಾತುವಿನಿಂದ ನಿಷ್ಪನ್ನವಾದ ಮಾನ ಶಬ್ದಕ್ಕೆ ಕ್ಲುಪ್ತವಾದ ಅಕ್ಷರಸಂಖ್ಯೆಯುಳ್ಳ (ಋಕ್ಕು ಅಥವಾ ಛಂದಸ್ಸು) ಮಂತ್ರವೆಂದರ್ಥವು. ಅಗ್ನಿಯನ್ನು ಅರಣಿಯಲ್ಲಿ ಮಂತ್ರಪೂರ್ವಕವಾಗಿ ಉತ್ಪತ್ತಿಮಾಡುವುದರಿಂದ ಅಗ್ನಿಯನ್ನು ಮಾನಸ್ಯ ಸೂನುಃ ಮಂತ್ರದಿಂದ ಉತ್ಪನ್ನನಾದವನು (ಮಂತ್ರದ ಪುತ್ರನು) ಎಂಬ ವಿಶೇಷಣದಿಂದ ವರ್ಣಿಸಿದೆ. ಇಲ್ಲಿ ಸಪ್ತಮೀವಿಭಕ್ತ್ಯರ್ಥದಲ್ಲಿ ಪ್ರಥಮಾವಿಭಕ್ತಿಯ ಪ್ರಯೋಗವಿರುವುದು. **ಮಾನಸ್ಯ ಸೂನುಃ** ಎಂದರೆ ಅಗ್ನಿಯಲ್ಲಿ ಎಂದರ್ಥವನ್ನು ಹೇಳಬೇಕೆಂದು ಭಾಷ್ಯಕಾರರು ವಿವರಿಸಿರುವರು.

**ಸಹಸ್ರಂ**—ಅಪರಿಮಿತವಾದ, ಅಧಿಕಸಂಖ್ಯೆಯುಳ್ಳ.

**ಋಷಿಭಿಃ—ಋಷೀ ಗತೌ** । ಗತ್ಯರ್ಥಕ ಧಾತುಗಳಿಗೆ ಜ್ಞಾನಾರ್ಥಕದಲ್ಲಿಯೂ ಪ್ರಯೋಗವಿರುವುದರಿಂದ ಋಷಿ ಶಬ್ದಕ್ಕೆ ಜ್ಞಾನ, ತಿಳುವಳಿಕೆ ಇತ್ಯಾದಿ ಅರ್ಥಗಳೂ ಇರುವುವು. ಮಂತ್ರವು ಜ್ಞಾನವನ್ನುಂಟುಮಾಡುವುದರಿಂದ ಇಲ್ಲಿ **ಋಷಿಭಿಃ** ಎಂದರೆ, ಜ್ಞಾನಾತ್ಮಕವಾದ ಮಂತ್ರಗಳಿಂದ ಎಂದು ಅಭಿಪ್ರಾಯವು.

**ಜೀರದಾನುಂ**—೧-೧೬೫-೧೫ ರಲ್ಲು ಸಾಯಣರು ಈ ಪದಕ್ಕೆ **ಜಯಶೀಲದಾನಂ** ಎಂದು ಅರ್ಥಮಾಡಿದ್ದಾರೆ. ಇದಕ್ಕೆ **ಜಯಶೀಲಂ ದಾನಂ ಜೀವನಂ ವಾ** ಎಂಬುದೂ ಪಾಠಾಂತರವುಂಟು. ಇಲ್ಲಿ ಜೀರ ಶಬ್ದಕ್ಕೆ **ಜಯ** ಅಥವಾ **ಜಯಕಾರಕ** ಎಂಬ ಅರ್ಥವು ಹೇಗಾಗುವುದೆಂಬುದು ವಿಚಾರಾರ್ಹವಾದ ವಿಷಯ. **ಜೀರ** ಮತ್ತು **ದಾನು** ಈ ಎರಡು ಪದಗಳೂ ಸೇರಿ **ಜೀರದಾನು**ವಾಗಿದೆ. ಈ ಎರಡು ಪದಗಳು ಪ್ರತ್ಯೇಕವಾಗಿಯೇ ಅನೇಕ ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟು ಬೇರೆ ಬೇರೆ ಅರ್ಥಗಳನ್ನು ಕೊಡುತ್ತವೆ. ಅಲ್ಲದೇ, ಜೀರ ಶಬ್ದದೊಡನೆ ಅಶ್ವ ಅಧ್ವರ ಇತ್ಯಾದಿ ಪದಗಳೂ ಸೇರಿ **ಜೀರಾಶ್ವ, ಜೀರಾಧ್ವರ** ಮುಂತಾದ ಪ್ರಯೋಗಗಳೂ ಇವೆ.

**ಮನುಷ್ವದ್ದೇವ ಧೀಮಹಿ ಪ್ರಚೇತಸಂ ಜೀರಂ ದೂತಮಮರ್ತ್ಯಂ ।**

(ಋ. ಸಂ. ೧-೪೪-೧೧)

ಎಂಬ ಋಕ್ಕಿನಲ್ಲಿರುವ **ಜೀರ** ಶಬ್ದದ ನಿಷ್ಪತ್ತಿಯನ್ನು ತಿಳಿಸುತ್ತಾ ಸಾಯಣರು **ಜು** ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆಯೆಂದು ತಿಳಿಸಿದ್ದಾರೆ. ( **ಜೋರೀ** ಚ. ಉ. ಸೂ. ೨-೧೪೧ ) ಮತ್ತು (ಶತ್ರೂಣಾಂ) **ವಯೋಹಾನಿಕರಂ** ಎಂಬರ್ಥವನ್ನು ಹೇಳಿದ್ದಾರೆ. ಇಲ್ಲಿ **ಜೀರಂ** ಎಂಬುದು ಅಗ್ನಿಗೆ ವಿಶೇಷಣವಾಗಿದೆ. **ಜ್ಯಾ ವಯೋಹಾನೌ** ಎಂಬ ಧಾತುವಿನಿಂದಲೂ ಈ ನಿಷ್ಪತ್ತಿಯು ಸಾಧ್ಯವಾಗಬಹುದೆಂದು ಈ ಅರ್ಥದಿಂದ ತಿಳಿಯುತ್ತದೆ. ನಿರುಕ್ತಕಾರರು ಜೀರ ಶಬ್ದವನ್ನು ಕ್ಷಿಪ್ರ ನಾಮಗಳಲ್ಲಿ ಸೇರಿಸಿ ಪಠಿಸಿದ್ದಾರೆ. (ನಿ. ೩-೯).

**ದಿವಿಸ್ಪೃಶಂ ಯಜ್ಞಮಸ್ಮಾಕಮಶ್ವಿನಾ ಜೀರಾಧ್ವರಂ ಕೃಣುತಂ ಸುಮ್ನಮಿಷ್ಟಯೇ ।**
**ಪ್ರಾಚೀನರಶ್ಮಿಮಾಹುತಂ ಘೃತೇನ ತದ್ದೇವಾನಾಮವೋ ಅದ್ಯಾ ವೃಣೀಮಹೇ ॥**

(ಋ ಸಂ. ೧೦-೩೬-೬).

ಎಂಬ ಋಕ್ಕಿನಲ್ಲಿ ನಮ್ಮ ಕರ್ಮವನ್ನು **ಜೀರಾಧ್ವರ**ವನ್ನಾಗಿ ಮಾಡಿ ಎಂದು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದೆ. ಇಲ್ಲಿ ಜೀರಾಧ್ವರವೆಂದರೆ ವಿಘ್ನಗಳಿಂದ ತಡೆಯಿಲ್ಲದೆಯೂ, ಹಿಂಸಾರಹಿತವಾಗಿ, ಶೀಘ್ರವಾಗಿ ನೆರವೇರುವುದೂ ಆದ ಯಜ್ಞವೆಂದರ್ಥವಾಗುತ್ತದೆ.

ಪೃಷ್ಣೇ ತಾ ವಿಶ್ವಾ ಭುವನಾ ವವಕ್ಷಿರೇ ಮಿತ್ರಾಯ ವಾ ಸದಮಾ ಜೀರದಾನವಃ ।
ಪೃಷದಶ್ವಾಸೋ ಅನವಭ್ರರಾಧಸ ಋಜಿಪ್ಯಾಸೋ ನ ವಯುನೇಷು ಧೂರ್ಷದಃ ॥

(ಋ. ಸಂ. ೨-೩೪-೪)

ಇತ್ಯಾದಿ ಸ್ಥಳಗಳಲ್ಲಿ ಜೀರದಾನವಃ ಎಂಬುದು ಮರುತ್ತುಗಳಿಗೆ ವಿಶೇಷಣವಾಗಿದೆ. ಅತಿಶೀಘ್ರವಾಗಿ ಯಜಮಾನನ ಇಷ್ಟಾರ್ಥಗಳನ್ನು ನೆರವೇರಿಸುವವರೆಂದರ್ಥ. ಇದರಂತೆಯೇ ಜೀರಾಶ್ವಃ, ಜೀರಾಶ್ವಂ, ಎಂಬ ಸಮಸ್ತಪದಗಳೂ ಸಹ ಅಗ್ನ್ಯಾದಿದೇವತೆಗಳಿಗೆ ವಿಶೇಷಣವಾಗಿದೆ. ಅಥವಾ ಅವರ ರಥಕ್ಕೆ ವಿಶೇಷಣವಾಗಿರುವುದೂ ಉಂಟು.

ಆ ವಾಂ ರಥಂ ಪುರುಮಾಯಂ ಮನೋಜುವಂ ಜೀರಾಶ್ವಂ ಯಜ್ಞಿಯಂ ಜೀವಸೇ ಹುವೇ ।
ಸಹಸ್ರಕೇತುಂ ವನಿನಂ ಶತದ್ವಸುಂ ಶ್ರುಷ್ಟೀವಾನಂ ವರಿವೋಧಾಮಭಿ ಪ್ರಯಃ ॥

(ಋ. ಸಂ. ೧-೧೧೯-೧)

ಇತ್ಯಾದಿ ಋಕ್ಕುಗಳಲ್ಲಿ ಶೀಘ್ರವಾಗಿ ಓಡತಕ್ಕ ಕುದುರೆಗಳುಳ್ಳವರೆಂದು ಅಶ್ವಿನಿದೇವತೆಗಳ ರಥವನ್ನು ವರ್ಣಿಸುತ್ತದೆ. ಇದರಂತೆಯೇ ದಾನು ಶಬ್ದವೂ ಸಹ ಪ್ರತ್ಯೇಕವಾಗಿಯೂ ಮತ್ತು ಸುದಾನವಃ ಜೀರದಾನವಃ ಎಂದು ಸಮಸ್ತಪದ ವಾಗಿಯೂ ಪ್ರಯೋಗಿಸಲ್ಪಟ್ಟು ಸನ್ನಿವೇಶಕ್ಕೆ ತಕ್ಕಂತೆ ಅರ್ಥವನ್ನು ಕೊಡುತ್ತದೆ. ದಾನು ಶಬ್ದವು ದಾತೃವೆಂದಾಗಲೀ ಅಥವಾ ಅಸುರನೆಂದಾಗಲಿ ಅರ್ಥವನ್ನು ಕೊಡುತ್ತದೆಂದು ನಿರುಕ್ತಕಾರರು ಉದಾಹರಿಸಿರುವ ಸನ್ನಿವೇಶದಿಂದ ತಿಳಿಯುತ್ತದೆ.

ಸ್ತುಷೇಯ್ಯಂ ಪುರುವರ್ಪಸಮೃಭ್ವಮಿನತಮಮಾಪ್ತ್ಯಮಾಪ್ತ್ಯಾನಾಂ ।
ಆ ದರ್ಷತೇ ಶವಸಾ ಸಪ್ತ ದಾನೂನ್ ಪ್ರ ಸಾಕ್ಷತೇ ಪ್ರತಿಮಾನಾನಿ ಭೂರಿ ॥

(ಋ. ಸಂ. ೧೦-೧೨೦-೬)

ಎಂಬ ಋಕ್ಕಿಗೆ ಅರ್ಥವನ್ನು ಹೇಳುವಾಗ ನಿರುಕ್ತಕಾರರು ಸಪ್ತ ದಾನೂನ್ ಎಂಬ ಪದಕ್ಕೆ ಸಪ್ತ ದಾತ್ರೂನ್ ಇತಿ ವಾ ಸಪ್ತ ದಾನವಾನ್ ಇತಿ ವಾ ಸಪ್ತದಾತೃಗಳೆಂದಾಗಲಿ ಅಥವಾ ಸಪ್ತದಾನವರೆಂದಾಗಲಿ ಅರ್ಥವಾಗುತ್ತದೆಂದು ತಿಳಿಸಿದ್ದಾರೆ. ಆದರೆ ಇಂತಹ ಸಂದರ್ಭಗಳಲ್ಲಿ ದಾನು ಶಬ್ದಕ್ಕೆ ಅಸುರನೆಂದರ್ಥವು ಹೇಗೆ ಸಾಧ್ಯವಾಗುತ್ತದೆ ಎಂದು ತನ್ನ ಕ್ಲೇಶವನ್ನು ಸೂಚಿಸುತ್ತಾ Max Muller ಪಂಡಿತನು ಈ ರೀತಿ ಹೇಳಿದ್ದಾನೆ-

It must be confessed that even the meaning of Danu is by no means quite clear. It is clear enough where it means Demon, II. 11, 18 : II. 12. 11 ; IV. 30.7 : X. 120.6; The seven Demons, in I. 32.9; III. 30.8 ; Danu, Demon is applied to the mother of Vritra' the dark cloud; From this Danu we have the derivative Danava, meaning again Demon, why the demons conquered by Indra, were called Danu is not clear, unless they were conceived originally as dark clouds, like Danu, the mother of Indra. Danu might mean wise or even powerful, for this meaning also is ascribed to Danu by the author of Unadi Sutras.

[ S. B. E. XXXII. P. 114-115 ]

**ದಾನು** ಎಂಬುದು ಅಸುರಸ್ತ್ರೀಯ ಎಂದರೆ ವೃತ್ರನ ತಾಯಿಯ ಹೆಸರು. ಅವಳ ಪುತ್ರರು **ದಾನವ** ಎಂದಾಗಬೇಕೇ ಹೊರತು **ದಾನು** ಎಂದು ಹೇಗಾಯಿತು ಎಂದು ಈ ಪಂಡಿತನು ಪ್ರಶ್ನಿಸಿದ್ದಾನೆ. ಮತ್ತು ಈ ಪದಕ್ಕೆ ಶಕ್ತಿ, ಪ್ರಾಜ್ಞ ಎಂಬರ್ಥಗಳೂ ಸಾಧ್ಯವೆಂದು ಉಣಾದಿಸೂತ್ರದಿಂದ ತಿಳಿಯುತ್ತದೆ. ಆದರೆ **ದಾತೃ**ವೆಂಬರ್ಥವೇ ಹೆಚ್ಚು ಪ್ರಸಿದ್ಧವಾದುದು.

ಹೀಗೆ **ಜೀರ** ಶಬ್ದಕ್ಕೆ **ಕ್ಷಿಪ್ರ** ವೆಂದೂ, **ದಾನು** ಶಬ್ದಕ್ಕೆ **ದಾನ** ವೆಂದೂ ಅರ್ಥವಾದರೆ ಪ್ರಕೃತವಾದ ಋಕ್ಕಿನಲ್ಲಿ ಕ್ಷಿಪ್ರವಾದ ದಾನವೆಂದರ್ಥವಾಗಬೇಕಾಗುತ್ತದೆ. ಆದರೆ ಸಾಯಣರು ಜಯಶೀಲವಾದ ದಾನವೆಂದರ್ಥ ಮಾಡಿದ್ದಾರೆ. ಜೀರಶಬ್ದವು ಪ್ರೇರಕಾರ್ಥದಲ್ಲಿ ಅನೇಕ ಕಡೆಗಳಲ್ಲಿ ಉಪಯೋಗಿಸಲ್ಪಟ್ಟಿರುವುದರಿಂದ ಇಲ್ಲಿ ಜಯ ಪ್ರೇರಕವಾದ ದಾನವೆಂದರ್ಥಮಾಡಬಹುದು. ಸಾಧಾರಣವಾಗಿ **ಜೀರದಾನವಃ** ಎಂಬ ಪದವು ಮರುತ್ತುಗಳಿಗೆ ವಿಶೇಷಣವಾಗಿ ಬರುವುದೇ ಅಧಿಕವಾಗಿದೆ.

**ಪೃಕ್ಷೇ ತಾ ವಿಶ್ವಾ ಭುವನಾ ವವಕ್ಷಿರೇ ಮಿತ್ರಾಯ ವಾ ಸದಮಾ ಜೀರದಾನವಃ ॥**

(ಋ. ಸಂ. ೨-೩೪-೪

ಇತ್ಯಾದಿ ಋಕ್ಕುಗಳಲ್ಲಿ **ಜೀರದಾನವಃ ಮರುತಃ** ಎಂಬುದು ಪ್ರಸಿದ್ಧವಾಗಿದೆ. ಮತ್ತು,

**ವೃಷಾ ನ ಕ್ರುದ್ಧಃ ಪತಯದ್ರಜಃಸ್ವಾ ಯೋ ಅರ್ಯಪತ್ನೀರಕೃಣೋದಿಮಾ ಅಪಃ ।**
**ಸ ಸುನ್ವತೇ ಮಘವಾ ಜೀರದಾನವೇಽವಿಂದಜ್ಜ್ಯೋತಿರ್ಮನವೇ ಹವಿಷ್ಮತೇ ॥**

(ಋ. ಸಂ. ೧೦-೪೩-೮)

ಇತ್ಯಾದಿ ಋಕ್ಕುಗಳಲ್ಲಿ ಹವಿರಾದಿಗಳನ್ನರ್ಪಿಸುವ ಯಜ್ಞಕರ್ತನಿಗೂ ಈ ಪದವು ವಿಶೇಷಣವಾಗಿದೆ.

ವ್ಯಾಕರಣಪ್ರಕ್ರಿಯಾ

**ಅವೋಚಾಮ**—ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್. **ಬ್ರುವೋವಚಿಃ** (ಪಾ. ಸೂ. ೨-೪-೫೩) ಎಂಬುದರಿಂದ ಧಾತುವಿಗೆ ವಚಾದೇಶ. **ಅಸ್ಯತಿವಕ್ತಿಖ್ಯಾ—** (ಪಾ. ಸೂ. ೩-೧-೫೨) ಎಂಬುದರಿಂದ ಚ್ಲಿಗೆ ಅಙಾದೇಶ. ಇದು ಪರವಾದಾಗ **ವಚಉಮ್** ಎಂಬುದರಿಂದ ಉಮಾಗಮ ಗುಣ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಮಾನಸ್ಯ—**ಮಾಙ್ ಮಾನೇ ಧಾತು. ಘಞ್ ಪ್ರತ್ಯಯ ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಮಾನಸ್ಯ ಸೂನುಃ ಎಂಬಲ್ಲಿ **ಸುಪಾಂ ಸುಪೋ ಭವಂತಿ** ಎಂಬ ವಚನದಿಂದ ಸಪ್ತಮ್ಯರ್ಥದಲ್ಲಿ ಪ್ರಥಮಾ ಬಂದಿರುತ್ತದೆ.

**ಸಹಸಾನೇ—**ಷಹ ಮರ್ಷಣೇ. ಧಾತು **ಧಾತ್ವಾದೇಃ ಷಃ ಸಃ,** (ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ವ. **ಋಞ್ಜಿವೃಧಿಮಂದಿಸಹಿಭ್ಯಃಕಿತ್** ಉ. ಸೂ. ೨-೨೪೪) ಎಂಬುದರಿಂದ ಅಸಾನಚ್ ಪ್ರತ್ಯಯ. ಇದು ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ

**ಸನೇಮ—**ಷಣ ಸಂಭಕ್ತೌ- ಧಾತು. ಹಿಂದಿನಂತೆ ಆದಿಗೆ ಸತ್ವ. ಲಿಙ್ ಉತ್ತಮಪುರುಷ ಬಹುವಚನಾಂತರೂಪ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

## ಟೀಕೆ.

ಈ ಸೂಕ್ತಕ್ಕೆ ಬೃಹಸ್ಪತಿಯು ದೇವತೆಯು. ಯಾಸ್ಕರು ತಮ್ಮ ನಿರುಕ್ತದಲ್ಲಿ ಬೃಹಸ್ಪತಿಶಬ್ದದ ನಿರ್ವಚನ ವನ್ನು ವಿವರಿಸುತ್ತಾ—

**ಬೃಹಸ್ಪತಿಃ ಬೃಹತಃ ಪಾತಾ ವಾ ಪಾಲಯಿತಾ ವಾ ।**

(ನಿ. ೧೦-೧೧)

ಎಂದು ಹೇಳಿದ್ದಾರೆ. ಇದಕ್ಕೆ ವ್ಯಾಖ್ಯಾನಕಾರರಾದ ದುರ್ಗಾಚಾರ್ಯರು—ಬೃಹಸ್ಪತಿಃ ಕಸ್ಮಾತ್? **"ಬೃಹತಃ ಪಾತಾ ವಾ ಪಾಲಯಿತಾ ವಾ" ಬೃಹತಃ ಮಹತೋಽಸ್ಯ ಜಗತಃ ಉದಕಸ್ಯ ವಾ ಪಾತಾ ರಕ್ಷಿತಾ, ಪಾಲಯಿತಾ ಅಪಿ ರಕ್ಷಿತೈವ ಧಾತ್ವನ್ಯತ್ವಮರ್ಥೈಕತ್ವಂ ॥** ಎಂದರೆ ದೊಡ್ಡದಾದ ಜಗತ್ತಿನ ಅಥವಾ ಉದಕದ ಸಂರಕ್ಷಕನು, ಕಾಪಾಡುವವನು. ಪತಿಶಬ್ದದ ಅರ್ಥವನ್ನು ಸೂಚಿಸುವುದಕ್ಕೆ ಪಾತಾ, ಪಾಲಯಿತಾ ಎಂಬ ಬೇರೆ ಬೇರೆ ಧಾತುಗಳಿಂದ ನಿಷ್ಪನ್ನವಾದ ಶಬ್ದಗಳಿದ್ದರೂ ಅರ್ಥವು ಮಾತ್ರ ಒಂದೇ ಆಗಿರುವುದೆಂದು ಹೇಳಿರುವರು. ಸಾಯಣರು ಅನೇಕ ಸಂದರ್ಭಗಳಲ್ಲಿ ಬೃಹತಃ ಪಾತಾ ಎಂಬುದನ್ನು ವಿವರಿಸುವಾಗ ಬೃಹತಃ ಎಂಬ ಶಬ್ದಕ್ಕೆ ಬೃಹತಃ ಯಜ್ಞಾಖ್ಯಕರ್ಮಣಃ ಅಥವಾ ವೃಷ್ಟ್ಯಾಖ್ಯಕರ್ಮಣಃ ಎಂದರೆ ಯಜ್ಞರೂಪವಾದ ಕರ್ಮದ ಅಥವಾ ವೃಷ್ಟಿಪ್ರದಾನ ರೂಪವಾದ ಕರ್ಮದ ಎಂದು ಅರ್ಥವನ್ನು ಹೇಳಿರುವರು. ಬೃಹಸ್ಪತಿಯು ದೇವತೆಗಳಿಗೆ ಪುರೋಹಿತನಾಗಿ ಯಜ್ಞಕರ್ಮ ವನ್ನು ನೆರವೇರಿಸುವುದರಿಂದಲೂ, ಮನುಷ್ಯರಿಗೆ ಅವಶ್ಯಕವಾದ ವೃಷ್ಟಿಯನ್ನುಂಟುಮಾಡುವುದರಿಂದಲೂ ಈ ಎರಡು ವಿಧವಾದ ವಿಶೇಷಣಗಳೂ ಸಹಜವಾಗಿರುವುವು. ಬೃಹಸ್ಪತಿಯ ಪುರೋಹಿತತ್ವವನ್ನೂ ವೃಷ್ಟಿಪ್ರದಾನವನ್ನೂ ವರ್ಣಿಸುವ,

**ಯದ್ದೇವಾಪಿಃ ಶಂತನವೇ ಪುರೋಹಿತೋ ಹೋತ್ರಾಯ ವೃತಃ ಕೃಪಯನ್ನದೀಧೇತ್ ।**
**ದೇವಶ್ರುತಂ ವೃಷ್ಟಿವನಿಂ ರರಾಣೋ ಬೃಹಸ್ಪತಿರ್ವಾಚಮಸ್ಮಾ ಅಯಚ್ಛತ್ ॥**

(ಋ ಸಂ. ೧೦-೯೮-೭)

ಎಂಬ ಋಕ್ಕನ್ನು ಯಾಸ್ಕರು ಉದಾಹರಣೆಗಾಗಿ ಕೊಟ್ಟಿರುವರು. ಈ ಋಕ್ಕಿನ ನಿರ್ವಚನದಲ್ಲಿ **ಬೃಹಸ್ಪತಿರ್ಬ್ರಹ್ಮಾಸೀತ್ ಸೋಽಸ್ಮೈ ವಾಚಮಯಚ್ಛತ್**—ಎಂದರೆ ಬೃಹಸ್ಪತಿಯು ಶಂತನುವೆಂಬ ರಾಜನು ಮಾಡಿದ ಯಜ್ಞದಲ್ಲಿ ಬ್ರಹ್ಮನೆಂಬ ಪುರೋಹಿತನಾಗಿ ವಾಕ್ಯರೂಪವಾದ ಮಂತ್ರವನ್ನು ಉಪದೇಶಿಸಿದನೆಂದೂ ಆ ಮಂತ್ರದಿಂದ ಯಜಮಾನನು ಸ್ತುತಿಸಲಾಗಿ ವೃಷ್ಟಿ ಉಂಟಾಯಿತೆಂದೂ ವರ್ಣಿತವಾಗಿದೆ. ಇದಲ್ಲದೆ ಯಜುರ್ವೇದಾದಿಗಳಲ್ಲಿ—

**ಬೃಹಸ್ಪತಿರ್ದೇವಾನಾಂ ಪುರೋಹಿತ ಆಸೀಚ್ಛಂಡಾಮರ್ಕಾವಸುರಾಣಾಂ ।**

(ತೈ. ಸಂ. ೬-೪-೧೦-೧)

ಬೃಹಸ್ಪತಿಯು ದೇವತೆಗಳಿಗೆ ಪುರೋಹಿತನಾಗಿದ್ದನು. ಶಂಡಾಮರ್ಕರೆಂಬುವರು ಅಸುರರಿಗೆ ಪುರೋಹಿತರಾಗಿದ್ದರು ಎಂದು ಹೇಳಿದೆ.

**ಬ್ರಹ್ಮ ವೈ ದೇವಾನಾಂ ಬೃಹಸ್ಪತಿರ್ಬ್ರಹ್ಮಣೈವೈನಮಭಿಚರತಿ ।**

(ತೈ. ಸಂ. ೨-೨-೯-೧)

ಬೃಹಸ್ಪತಿಯು ದೇವತೆಗಳು ಮಾಡಿದ ಯಜ್ಞದಲ್ಲಿ ಬ್ರಹ್ಮನೆಂಬ ಋತ್ವಿಜನಾಗಿ ಯಜ್ಞವನ್ನು ನೆರವೇರಿಸಿದನು ಎಂದೂ ಹೇಳಿದೆ.

ತಸ್ಮೈ ವಿಶಃ ಸ್ವಯಮೇವಾ ನಮಂತೇ ಯಸ್ಮಿನ್ ಬ್ರಹ್ಮಾ ರಾಜನಿ ಪೂರ್ವ ಏತಿ ।

(ಋ. ಸಂ. ೪-೫೦-೮)

ಅವಸ್ಯವೇ ಯೋ ವರಿವಃ ಕೃಣೋತಿ ಬ್ರಹ್ಮಣೇ ರಾಜಾ ತಮವಂತಿ ದೇವಾಃ ॥

(ಋ. ಸಂ. ೪-೫೦-೯)

ಸೋಮಂ ರಾಜಾನಮವಸೇಽಗ್ನಿಂ ಗೀರ್ಭಿರ್ಹವಾಮಹೇ ।

ಆದಿತ್ಯಾನ್ವಿಷ್ಣುಂ ಸೂರ್ಯಂ ಬ್ರಹ್ಮಾಣಂ ಚ ಬೃಹಸ್ಪತಿಂ ॥

(ಋ. ಸಂ. ೧೦-೧೪೧-೩)

ಇತ್ಯಾದಿ ಋಕ್ಕುಗಳಲ್ಲಿ ಬೃಹಸ್ಪತಿಯು ಬ್ರಹ್ಮನೆಂಬ ಋತ್ವಿಜನು ಎಂದು ವರ್ಣನೆ ಇದೆ.

ಋಗ್ವೇದದಲ್ಲಿ ಬೃಹಸ್ಪತಿಗೆ ಪ್ರಾಮುಖ್ಯವಾದ ಸ್ಥಾನವೇ ಇದೆ. ಹನ್ನೊಂದು ಸೂಕ್ತಗಳಲ್ಲಿ ಸ್ತುತನಾಗಿರುವುದಲ್ಲದೆ ಎರಡು ಸೂಕ್ತಗಳಲ್ಲಿ ( ಋ. ಸಂ. ೪-೪೯ ; ೭-೯೭ ) ಇಂದ್ರನ ಜತೆಯಲ್ಲಿ ದ್ವಂದ್ವದೇವತೆಯಾಗಿಯೂ ಸ್ತುತನಾಗಿನಾನೆ. ಬೃಹಸ್ಪತಿಶಬ್ದವು ಋಗ್ವೇದದಲ್ಲಿ ಸುಮಾರು ೧೨೦ ಸಲ ಪಠಿತವಾಗಿದೆ. ಅನೇಕ ಸಂದರ್ಭಗಳಲ್ಲಿ ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿದೇವತೆಗಳು ಒಂದೇ ಮಂತ್ರದಲ್ಲಿ ಪರಸ್ಪರ ವಿನಿಮಯವಾಗಿ ಸ್ತುತರಾಗಿದಾರೆ. ಆದರೂ ಬೃಹಸ್ಪತಿಯೇ ಬೇರೆ ಬ್ರಹ್ಮಣಸ್ಪತಿಯೇ ಬೇರೆ ದೇವತೆಗಳು.

ಕೆಲವು ಪಾಶ್ಚಾತ್ಯಪಂಡಿತರೂ, ಆಧುನಿಕವಿದ್ವಾಂಸರಲ್ಲಿ ಕೆಲವರೂ ಸಹ ಋ. ಸಂ. ೨-೨೩ ನೆಯ ಸೂಕ್ತದಲ್ಲಿ ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿಗಳು ಪರಸ್ಪರ ವಿನಿಮಯವಾಗಿ ಸ್ತುತಿಸಲ್ಪಟ್ಟಿರುವುದರಿಂದ ಇಬ್ಬರೂ ಒಂದೇ ದೇವತೆಯೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು. ಆದರೆ, ಯಾಸ್ಕರು, ಶೌನಕರು ಸಾಯಣರು ಮೊದಲಾದ ಪುರಾತನ ವೇದಭಾಷ್ಯಕಾರರು ಬೃಹಸ್ಪತಿಯೇ ಬೇರೆ ಬ್ರಹ್ಮಣಸ್ಪತಿಯೇ ಬೇರೆ ಎಂದು ಸ್ಪಷ್ಟವಾಗಿ ಹೇಳಿರುವರು. ಮೇಲೆ ಹೇಳಿದ ಋ. ಸಂ. ೨-೨೩ ನೆಯ ಸೂಕ್ತದಲ್ಲಿರುವ ೧೯, ಋಕ್ಕುಗಳಲ್ಲಿ ೧, ೫, ೯, ೧೧, ೧೭, ೧೯. ಎಂಬ ೬ ಋಕ್ಕುಗಳು ಮಾತ್ರ ಬೃಹಸ್ಪತಿಯನ್ನು ಸ್ತುತಿಸುತ್ತವೆ. ಉಳಿದ ೧೩ ಋಕ್ಕುಗಳು ಬ್ರಹ್ಮಣಸ್ಪತಿಯ ಪರವಾಗಿವೆ. ಯಾಸ್ಕರೂ ಸಹ ಬೃಹಸ್ಪತಿಶಬ್ದಕ್ಕೂ ಬ್ರಹ್ಮಣಸ್ಪತಿಶಬ್ದಕ್ಕೂ ಬೇರೆ ಬೇರೆ ನಿರ್ವಚನವನ್ನು ಹೇಳಿದಾರೆ. ಆದುದರಿಂದ ಬೃಹಸ್ಪತಿಯೇ ಬೇರೆ ಬ್ರಹ್ಮಣಸ್ಪತಿಯೇ ಬೇರೆ.

ಇತರ ದೇವತೆಗಳಿಗಿಂತ ತೀರಾ ಭಿನ್ನವಾದ ವೈಶಿಷ್ಟ್ಯವು ಬೃಹಸ್ಪತಿಗೆ ಇದೆ. ಇತರ ದೇವತೆಗಳೆಲ್ಲಾ ಪ್ರಕೃತಿ ಅಥವಾ ಪ್ರಕೃತಿಶಕ್ತಿಯ ರೂಪವಿಶೇಷಗಳಾದರೆ ಬೃಹಸ್ಪತಿಯು ಮಾನವನ ನೈತಿಕ ಮತ್ತು ಧಾರ್ಮಿಕ ಜೀವನಕ್ಷೇತ್ರಕ್ಕೆ ಸಂಬಂಧಿಸಿದಂತಿದೆ. ಸ್ತುತಿ ಸ್ತೋತ್ರ ಅಥವಾ ಪ್ರಾರ್ಥನೆಗೆ ರಕ್ಷಕನಾದ ಈ ದೇವತೆಯು ದೇವತೆಗಳ ಮನಸ್ಸಿನ ನಿರ್ಧಾರ, ಸಂಕಲ್ಪ ಅಥವಾ ಶಕ್ತಿಯ ಮೇಲೆ ತನ್ನ ಪ್ರಧಾನವನ್ನು ಬೀರುವನೆಂಬುದಕ್ಕೆ ಋಗ್ವೇದದಲ್ಲಿ ಅನೇಕ ಉದಾಹರಣೆಗಳಿವೆ. ಋಗ್ವೇದ ೧೦ ನೇ ಮಂಡಲದ ೯೮ ನೆಯ ಸೂಕ್ತದಲ್ಲಿ ದೇವಾಪಿ ಮತ್ತು ಶಂತನು ಎಂಬ ಕುರುವಂಶದ ರಾಜಪುತ್ರರ ವಿಷಯಕವಾದ ಒಂದು ಇತಿಹಾಸವರ್ಣನೆ ಇದೆ. ಅದರಲ್ಲಿ ಬೃಹಸ್ಪತಿಯ ಪಾತ್ರವು ಬಹುಮುಖ್ಯವಾದುದುದೆಂಬುದನ್ನು ನಿರುಕ್ತಕಾರರು ಈ ರೀತಿ ವರ್ಣಿಸಿದ್ದಾರೆ —

ಅತ್ರೇತಿಹಾಸಮಾಚಕ್ಷತೇ । ದೇವಾಪಿಶ್ಚಾರ್ಷ್ಟಿಷೇಣಃ ಶಂತನುಶ್ಚ ಕೌರವೌ ಭ್ರಾತರೌ ಬಭೂವತುಃ । ಸ ಶಂತನುಃ ಕನೀಯಾನಭಿಷೇಚಯಾಂಚಕ್ರೇ । ದೇವಾಪಿಸ್ತಪಃ ಪ್ರತಿಪೇದೇ । ತತಃ ಶಂತನೋ ರಾಜ್ಯೇ ದ್ವಾದಶ ವರ್ಷಾಣಿ ದೇವೋ ನ ವವರ್ಷ । ತಮೂಚುರ್ಬ್ರಾಹ್ಮಣಾ ಅಧರ್ಮ ಸ್ತ್ವಯಾ ಚರಿತೋ ಜ್ಯೇಷ್ಠಂ ಭ್ರಾತರಮಂತರಿತ್ಯಾಭಿಷೇಚಿತಂ ತಸ್ಮಾತ್ತೇ ದೇವೋ ನ ವರ್ಷತೀತಿ । ಸ ಶಂತನುರ್ದೇವಾಪಿಂ ಶಿಶಿಕ್ಷ ರಾಜ್ಯೇನ । ತಮುವಾಚ ದೇವಾಪಿಃ ಪುರೋಹಿತಸ್ತೇಽಸಾನಿ ಯಾಜಯಾನಿ ಚ ತ್ವೇತಿ ॥

(ನಿ. ೨-೧೧)

ಪೂರ್ವಕಾಲದಲ್ಲಿ ಕುರುವಂಶದಲ್ಲಿ ಋಷ್ಟಿಷೇಣನೆಂಬ ರಾಜಗೆ ದೇವಾಪಿ, ಶಂತನು ಎಂಬ ಈರ್ವರು ಪುತ್ರರಿದ್ದರು. ಅವರಲ್ಲಿ ದೇವಾಪಿಯೆಂಬುವನು ಹಿರಿಯನು ; ಶಂತನು ಕಿರಿಯನು. ಇವರ ತಂದೆಯಾದ ಋಷ್ಟಿಷೇಣನು ಮೃತನಾದ ಬಳಿಕ ಅವನ ಹಿರಿಯಮಗನಾದ ದೇವಾಪಿ ಎಂಬುವನು ರಾಜನಾಗಬೇಕೆಂದು ಇಚ್ಛಿಸಿದನು. ಆದರೆ ಇವನ ತಮ್ಮನಾದ ಶಂತನುವು ಅದಕ್ಕೆ ಅವಕಾಶಕೊಡದೆ ತಾನೇ ರಾಜ್ಯಕ್ಕೆ ದೊರೆಯಾಗಬೇಕೆಂದು ಬಯಸಿ ಅಣ್ಣನಾದ ದೇವಾಪಿಯನ್ನು ಓಡಿಸಿ ತಾನೇರಾಜ್ಯವಾಳಲು ಮೊದಲು ಮಾಡಿದನು. ಅಣ್ಣನಾದ ದೇವಾಪಿಯು ವ್ಯಾಕುಲವುಳ್ಳವನಾಗಿ ಕಾಡಿಗೆ ಹೋಗಿ ತಪ್ಪಸ್ಸನ್ನು ಮಾಡುತ್ತಾ ಕಾಲಕಳೆಯುತ್ತಿದ್ದನು. ಹೀಗಿರಲು ಇವನ ದೇಶದಲ್ಲಿ ೧೨ ವರ್ಷಗಳವರೆಗೆ ಮಳೆಯೇ ಬರದೆ ಮಹಾಕ್ಷಾಮವು ಪ್ರಾಪ್ತಯಿತು. ಆಗ ರಾಜನಾದ ಶಂತನುವು ಇದಕ್ಕೆ ಏನು ಮಾಡಬೇಕೆಂದು ಆಲೋಚಿಸಿ ಬ್ರಾಹ್ಮಣರ ಸಲಹೆಯನ್ನು ಕೇಳಿದನು. ಅದಕ್ಕೆ ಬ್ರಾಹ್ಮಣರು ರಾಜನನ್ನು ಕುರಿತು-ಧರ್ಮಶಾಸ್ತ್ರಪ್ರಕಾರ ರಾಜನ ಹಿರಿಯ ಮಗನೇ ರಾಜ್ಯಕ್ಕೆ ಅಧಿಕಾರಿಯು. ಆದುದರಿಂದ ರಾಜ್ಯಭಾರವನ್ನು ನಿನ್ನ ಅಣ್ಣನಾದ ದೇವಾಪಿಯೇ ಮಾಡಬೇಕಾಗಿದ್ದಿತು. ಆದರೆ ನೀನು ಅದಕ್ಕವಕಾಶಕೊಡದೆ ಅವನನ್ನು ಓಡಿಸಿ ರಾಜ್ಯನನ್ನು ಆಕ್ರಮಿಸಿರುವೆ. ಹೀಗೆ ನೀನು ಅಧರ್ಮವನ್ನು ಆಚರಿಸುತ್ತಿರುವುದರಿಂದ ವೃಷ್ಟಿದೇವನು ನಿನ್ನ ರಾಜ್ಯದಲ್ಲಿ ಮಳೆಗರೆಯುವುದಿಲ್ಲ ಎಂದು ಹೇಳಿದರು. ಶಂತನುರಾಜನು ತಾನು ಮಾಡಿದ ಅನ್ಯಾಯಕ್ಕೆ ಪಶ್ಚಾತ್ತಾಪಪಟ್ಟು ವನದಲ್ಲಿ ತಪಸ್ಸುಮಾಡುತ್ತಿದ್ದ ತನ್ನ ಅಣ್ಣನಾದ ದೇವಾಪಿಯನ್ನು ಕರೆಸಿ ಅವನಿಗೆ ರಾಜ್ಯವನ್ನು ಒಪ್ಪಿಸಿದನು. ಆದರೆ ದೇವಾಪಿಯು ರಾಜ್ಯವು ತನಗೆ ಬೇಡವೆಂದೂ ತಾನು ವನದಲ್ಲಿ ತಪಸ್ಸನ್ನು ಮಾಡುತ್ತಾ ನಿವೃತ್ತಿಮಾರ್ಗವನ್ನು ಆಶ್ರಯಿಸುವೆನೆಂದೂ ಹೇಳಿ, ರಾಜ್ಯದಲ್ಲಿ ಉಂಟಾಗಿರುವ ಅನಾವೃಷ್ಟಿಪರಿಹಾರಾರ್ಥವಾಗಿ ಶಂತನುವು ಯಜ್ಞಮಾಡಬೇಕೆಂದೂ ಅದರಲ್ಲಿ ತಾನು ಪೌರೋಹಿತ್ಯವನ್ನು ವಹಿಸಿ ವೃಷ್ಟಿಯಾಗಲು ಸಹಾಯಮಾಡುವೆನೆಂದೂ ಹೇಳಿದನು ಅದಕ್ಕೆ ರಾಜನು ಒಪ್ಪಲು ದೇವಾಪಿಯು ಅವನ ಯಜ್ಞದಲ್ಲಿ ಹೋತೃವೆಂಬ ಋತ್ವಿಜನ ಪಾತ್ರವನ್ನು ವಹಿಸಿದನು. ಬೃಹಸ್ಪತಿಯು ಬ್ರಹ್ಮನೆಂಬ ಋತ್ವಿಜನಾದನು ವೃಷ್ಟಿವರ್ಷಕ್ಕಾಗಿ ಮಾಡುತ್ತಿರುವ ಆ ಯಜ್ಞದಲ್ಲಿ ಹೋತೃವಾದ ದೇವಾಪಿಯು ಬ್ರಹ್ಮನಾದ ಬೃಹಸ್ಪತಿಯನ್ನು ಕುರಿತು ಎಲೈ ಬೃಹಸ್ಪತಿಯೇ, ನಿನಗೆ ದೇವತೆಗಳ ಮನಸ್ಸಿನ ಮೇಲೆ ಬಹಳವಾದ ಪ್ರಭಾವವಿರುವುದು. ಆದುದರಿಂದ ಅವರನ್ನು ಒಲಿಸಿಕೊಳ್ಳುವ ಮಂತ್ರಗಳನ್ನು ನನಗೆ ತಿಳಿಸಬೇಕು ಎಂದು ಪ್ರಾರ್ಥಿಸಲಾಗಿ ಬೃಹಸ್ಪತಿಯು ಹಾಗೇ ಆಗಲೆಂದು ವೃಷ್ಟಿವರ್ಷಣಕ್ಕೆ ಬೇಕಾದ ದೇವತೆಗಳ ಪ್ರಾರ್ಥನೆಗಳನ್ನೊಳಗೊಂಡ ಮಂತ್ರಗಳನ್ನು ಹೋತೃವಾದ ದೇವಾಪಿಗೆ ಹೇಳಿಕೊಟ್ಟನು. ಆ ಮಂತ್ರಗಳಿಂದ ದೇವತೆಗಳನ್ನುದ್ದೇಶಿಸಿ ಹೋಮಮಾಡಲು ಯಥೇಚ್ಛವಾಗಿ ವೃಷ್ಟಿಯಾಯಿತು ಎಂದು ಹೇಳಿದೆ. ಆದುದರಿಂದ ಈ ಸೂಕ್ತಕ್ಕೆ ವೃಷ್ಟಿಕಾಮಸೂಕ್ತವೆಂದೂ ಹೆಸರು. ಈ ವಿಷಯವು ಕೆಲವುವ್ಯತ್ಯಾಸಗಳೊಡನೆ ವಿಷ್ಣುಪುರಾಣ ೪-೨೦-೭ ; ಮಹಾಭಾರತ ಆದಿಪರ್ವ ; ಭಾಗವತಪುರಾಣ ೯-೨೨-೧೪ ರಿಂದ ೧೭ ; ಇತ್ಯಾದಿ ಪುರಾಣಗ್ರಂಥಗಳಲ್ಲಿಯೂ ಉಕ್ತವಾಗಿದೆ.

ಋ. ಸಂ ೧೦ನೆಯ ಮಂಡಲದಲ್ಲಿ ೧೦೮ ನೆಯ ಸೂಕ್ತದಲ್ಲಿ ಮತ್ತೊಂದು ಉಪಾಖ್ಯಾನವಿರುವುದು ಪಣಿಗಳೆಂಬ ಅಸುರರು ದೇವತೆಗಳ ಗೋವುಗಳನ್ನು (ಉದಕವಿಶಿಷ್ಟಗಳಾದ ಮೇಘಗಳನ್ನು) ಅಪಹರಿಸಿ ಅಭೇದ್ಯವಾದ ಒಂದು ದುರ್ಗದಲ್ಲಿ ಬಚ್ಚಿಟ್ಟಿದ್ದರು. ಅದನ್ನು ಹುಡುಕುವಂತೆ ಇಂದ್ರನು ದೇವಶುನಿಯಾದ ಸರಮೆಯನ್ನು ಕಳುಹಿಸಿದನು. ಆ ಸರಮೆಯು ಪಣಿಗಳಲ್ಲಿಗೆ ಬಂದು ಅವರೊಡನೆ ವಾಗ್ವಾದವನ್ನು ಬೆಳೆಸಿ ಅಪಹರಿಸಿದ್ದ ಗೋವುಗಳನ್ನು ಹಿಂದಕ್ಕೆ ಕೊಡುವಂತೆ ಕೇಳಲು ಆ ಪಣಿಗಳು–ಇಂದ್ರನ ಶಕ್ತಿಯೆಷ್ಟರದು ? ತಾವು ಮಹಾವೀರರು ಮತ್ತು ತಮ್ಮ ಆಯುಧಗಳು ತುಂಬಾ ಹರಿತವಾದವು ಆದ್ದರಿಂದ ತಮ್ಮನ್ನು ಗೆಲ್ಲಲು ದೇವತೆಗಳಿಂದ ಸಾಧ್ಯವಿಲ್ಲವೆಂದೂ, ಗೋವುಗಳನ್ನು ಇಟ್ಟಿರುವ ಸ್ಥಳವನ್ನುತಿಳಿಯಲು ದೇವತೆಗಳಿಗೂ ಸಾಧ್ಯವಿಲ್ಲವೆಂದೂ, ಆದುದರಿಂದ ಸರಮೆಯು ದೇವತೆಗಳ ಪಕ್ಷವನ್ನು ಬಿಟ್ಟುತಮ್ಮಗುಂಪಿಗೇ ಸೇರಿದಲ್ಲಿ ಬೇಕಾದ ಐಶ್ವರ್ಯಾದಿಗಳನ್ನು ಕೊಡುವುವೆಂದೂ, ನಾನಾವಿಧವಾಗಿ ಪ್ರೇರಿಸಿದರೂ ಸರಮೆಯು ಅದಕ್ಕೊಪ್ಪದೆ ಅಲ್ಲಿಂದ ಹಿಂತಿರುಗಿ ಆ ವಿಷಯವನ್ನೆಲ್ಲಾ ದೇವತೆಗಳಿಗೆ ತಿಳಿಸಿದಳು. ಆಗ ಬೃಹಸ್ಪತಿಯು ತನ್ನ ಸಾಮರ್ಥ್ಯದಿಂದ ಆ ಗೋವುಗಳನ್ನು ಬಚ್ಚಿಟ್ಟಿದ್ದ ಸ್ಥಳವನ್ನು ಪತ್ತೆಮಾಡಿದನು. ಬಳಿಕ ದೇವತೆಗಳು ಅವರನ್ನು ನಿಗ್ರಹಿಸಿ ಗೋವುಗಳನ್ನು ಹಿಂದಕ್ಕೆ ತಂದರು ಎಂಬ ಉಪಾಖ್ಯಾನವಿದೆ.

ಇಂತಹ ಅನೇಕಸಾಹಸಕಾರ್ಯಗಳಲ್ಲಿ ಬೃಹಸ್ಪತಿಯ ಪಾತ್ರವು ಬಹಳ ಮುಖ್ಯವಾಗಿದೆ. ಅದರಲ್ಲಿಯೂ ಮಾನವರಿಗೆ ವೃಷ್ಟಿಬೇಕಾದಾಗ ಸಹಾಯಮಾಡಲು ಬೃಹಸ್ಪತಿಯ ಸಹಾಯವು ಅತ್ಯವಶಕವಾಗಿದೆ- ಈ ವಿಧವಾದ ಪ್ರಾರ್ಥನೆಯೇ ಬೃಹಸ್ಪತಿದೇವತಾಕವಾದ ಸೂಕ್ತಗಳಲ್ಲಿ ವಿಶೇಷವಾಗಿ ಕಂಡುಬರುವುದು.

ಋಗ್ವೇದದಲ್ಲಿ ವರ್ಣಿಸಿರುವಂತೆ ಬೃಹಸ್ಪತಿಯ ಗುಣಗಳು, ಕಾರ್ಯಸಾಧನೆಗಳು ಯಾವರೀತಿ ಇವೆಯೆಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸೋಣ. ಬೃಹಸ್ಪತಿಯು ದ್ಯಾವಾಪೃಥಿವಿಗಳಿಂದ ಜನಿಸಿದವನು ಮತ್ತು ಅವರ ಮಹತ್ತ್ವದಿಂದಲೇ ಅವನ ಪೋಷಣೆಯಾಗಿದೆ. (ಋ ಸಂ ೭-೯೭-೮) ಆದರೆ ಅವನನ್ನು ತ್ವಷ್ಟೃವು ಉತ್ಪತ್ತಿಮಾಡಿದನೆಂದು ಒಂದು ಕಡೆ (೨-೨೩-೧೭) ಹೇಳಿದೆ. ಅವನಿಗೆ ದೇವತೆಗಳ ಜನಕನೆಂದು ಹೆಸರಿದೆ. (೨-೨೬-೩) ; ಕಮ್ಮಾರನ ಸುತ್ತಿಗೆಯ ಏಟಿನಿಂದ ಅಗ್ನಿಕಣಗಳು ಹಾರುವಂತೆ ದೇವತೆಗಳು ಇವನಿಂದ ಉತ್ಪನ್ನರಾದರು (೧೦-೭೨-೮) ಎಂದೂ ಹೇಳಿದೆ.

ಅವನಿಗೆ ಬ್ರಹ್ಮ(ಬ್ರಹ್ಮ ಎಂಬ ಋತ್ವಿಜ) ನೆಂದು ಹೆಸರಿದೆ. (೧೦-೧೪೧-೩) ಋತ್ವಿಜರೊಡನೆ ಇವನಿಗೆ ಸಂಬಂಧವಿದೆ (೭-೧೦-೪ ; ೧೦-೧೪-೩). ಅಂಗಿರಸನೆಂತಲೂ ಹೆಸರಿದೆ. (೪-೪೦-೧ ; ೪-೭೩-೧ ; ೧೦-೪೭-೬) ಸ್ತುತಿವಾಕ್ಯಗಳನ್ನು ರಚಿಸುವವನು, ಉಚ್ಚರಿಸುವವನು ; ಅವುಗಳಿಗೆ ಅಧಿಪತಿ, ಪ್ರೇರಕ (೨-೨೩-೧, ೨ ; ೧-೪೦-೫ ೧೦-೯೮-೭) ; ಮಂತ್ರದಿಂದಲೇ ತನ್ನ ಉದ್ದೇಶಗಳನ್ನೆಲ್ಲಾ ಸಾಧಿಸುತ್ತಾನೆ (೨-೨೪-೩) ; ಯಜ್ಞವೆಂಬ ದೇದೀಪ್ಯಮಾನವಾದ ರಥವನ್ನೇರಿಕೊಂಡು ದೇವತೆಗಳ ಮತ್ತು ಸ್ತೋತೃಗಳ ಶತ್ರುಗಳನ್ನು ಜಯಿಸಲು ಹೊರಡುತ್ತಾನೆ. (೨-೨೩ ೩) ; ಇವನು ಶ್ರದ್ಧಾಳುಗಳ ಪೋಷಕ ಮತ್ತು ರಕ್ಷಕನು. ಅವರಿಗೆ ಮಾರ್ಗದರ್ಶಕನಾಗಿದಾನೆ ; ಅವರನ್ನು ವಿಪತ್ತುಗಳಿಂದ ಪಾರುಮಾಡುತ್ತಾನೆ. (೨-೨೩-೪) ಅವರಿಗೆ ಸಂಪದಾದಿಗಳನ್ನು ಅನುಗ್ರಹಿಸುತ್ತಾನೆ (೨-೨೩-೯) ದೇವತೆಗಳಿಗೆಲ್ಲಾ ಪಿತೃವೆನಿಸಿಕೊಂಡಿದಾನೆ ; ದಿವ್ಯವಾದ ಸಮಸ್ತ ಗುಣಗಳಿಂದ ಕೂಡಿದಾನೆ (೩-೬೨-೪ ; ೪-೫೦-೬); ವಿಶ್ವರೂಪನು ; ಎಲ್ಲರೂ ಅಪೇಕ್ಷಿಸುವ ವಸ್ತುಗಳೆಲ್ಲವೂ ಇವನಲ್ಲಿವೆ (೭-೧೦-೪, ೭-೯೭-೪), ಸುವರ್ಣಮಯವಾದ ಈಟಿಯನ್ನು ಧರಿಸಿದಾನೆ (೭-೯೭-೭) ಇಂದ್ರನೊಡನೆ ಸೇರಿ ಇವನೂ ಸೈನ್ಯಗಳಿಗೆ ನಾಯಕನಾಗಿದಾನೆ. (೧೦-೧೦೩-೮)

ಆಯುಸ್ಸನ್ನು ವೃದ್ಧಿಮಾಡುವವನು (೧೦-೧೦೦-೫), ಸಸ್ಯಗಳು ಇವನಿಂದ ಉದ್ಭೂತವಾದವು, (೧೦-೯೭-೧೫ ಮತ್ತು ೧೯} ; ಕಪಿಲವರ್ಣದ ಅಶ್ವಗಳೇ ಅವನ ವಾಹನವೆಂದು ಹೇಳಿದೆ. (ನಿ. ೨-೨೮).

ರಾಕ್ಷಸರಿಂದ ಭಾವಿಯಲ್ಲಿ ಎಸೆಯಲ್ಪಟ್ಟು, ಸಹಾಯಕ್ಕಾಗಿ ದೇವತೆಗಳನ್ನು ಕರೆಯುತ್ತಿದ್ದ ತ್ರಿತನ ಆರ್ತ ನಾದವನ್ನು ಕೇಳಿ, ಆ ಅಪಾಯಕರವಾದ ಅವಸ್ಥೆಯಿಂದ ಬೃಹಸ್ಪತಿಯು ಅವನನ್ನು ಬಿಡುಗಡೆಮಾಡಿದನೆಂದೂ (೧-೧೦೫-೧೭), ಇಂದ್ರನೊಡನೆ ಸೇರಿ ಬೃಹಸ್ಪತಿಯು ಅಂಧಕಾರಾವೃತವಾಗಿದ್ದ ಉದಕವನ್ನು ಪುನಃ ಪ್ರವಹಿಸುವಂತೆ ಮಾಡಿದನೆಂದೂ (೨-೨೩-೧೮ ; ೧-೫೭-೫ ;)ಹೇಳಿದೆ.

ಮಧುಭರಿತವಾದ ಕೂಪದ ಶಿಲಾದ್ವಾರವನ್ನು ಬೃಹಸ್ಪತಿಯು ತನ್ನ ಸಾಮರ್ಥ್ಯದಿಂದ ಒಡೆದನು. ದೇವತೆ ಗಳು ಆ ಮಧುವನ್ನು ಪಾನಮಾಡಿ ಯಥೇಚ್ಛವಾಗಿ ಮಳೆಗರೆದರು ( ೨-೨೪-೩, ೪ ) ; ಬೃಹಸ್ಪತಿಯು ಬೆಂಕಿಕಾರು ತ್ತಿರುವ ಕಿರಣಗಳಿಂದ ವಲನ ದುರ್ಗಗಳನ್ನು ಭೇದಿಸಿದಾಗ ಗೋಸಮೂಹಗಳು ಗೋಚರವಾದವು ; ಮೊಟ್ಟೆಯನ್ನು ಒಡೆಯುವಂತೆ ಗೋವುಗಳನ್ನು ಹೊರಕ್ಕೆ ಅಟ್ಟಿದನು ; ಶಿಲೆಯಿಂದ ಆವೃತವಾದ (ನೀರು) ಮಧುವನ್ನು ಕಂಡು, ತನ್ನ ಸಿಂಹನಾದದಿಂದಲೇ ಸೀಳಿ ಅದನ್ನು ಹೊರಕ್ಕೆ ಬರಮಾಡಿದನು (೧೦-೬೮-೪ ರಿಂದ ೯) ಬೃಹಸ್ಪತಿಯು ಹಸುಗಳನ್ನು ಬಂಡೆಗಳಿಂದ ಹೊರಕ್ಕೆ ತಂದನು ; ವಲನ ಗೋವುಗಳನ್ನು ಹಿಡಿದು ತನ್ನ ವಶಪಡಿಸಿಕೊಂಡನು (೧೦-೬೮-೫)

ಬೃಹಸ್ಪತಿಯು ದೇವತ್ವವಿಶಿಷ್ಟನು (೨-೨೩-೨) ; ಎಲ್ಲಾ ದೇವತೆಗಳಿಗೂ ಸ್ವಕೀಯನು (೩-೬೨-೪ ; ೪-೫೦-೬) : ಮತ್ತು ದೇವತೆಗಳಲ್ಲೆಲ್ಲಾ ಹೆಚ್ಚು ದೇವತ್ವವುಳ್ಳವನು : ದೇವತೆಯ ರೂಪದಿಂದ ಎಲ್ಲಾ ದೇವತೆಗಳನ್ನೂ ಎಲ್ಲಾ ಪದಾರ್ಥಗಳನ್ನೂ ತನ್ನಲ್ಲಿ ಸೇರಿಸಿಕೊಳ್ಳುತ್ತಾನೆ. (೨-೨೪-೧೧ ; ೮-೬೧-೧೮): ಭೂಮಿಯ ಎರಡು ಕೊನೆ ಗಳನ್ನು ಸಮರ್ಥನಾದ ಇವನು ದೂರವಾಗಿ ಇಟ್ಟಿರುತ್ತಾನೆ. (೪-೫೦-೧) ; ಸೂರ್ಯಚಂದ್ರರು ಒಬ್ಬರಾದ ಮೇಲೊ ಬ್ಬರೂ ಉದಯಿಸುವುದು ಅವನ ಅನುಕರಣೀಯವಾದ ಕೃತ್ಯವೇ ಆಗಿದೆ. (೧೦-೬೮-೧೦) ತೈತ್ತಿರೀಯ ಸಂಹಿತೆಯಲ್ಲಿ (ಯಜುರ್ವೇದದಲ್ಲಿ) ಬೃಹಸ್ಪತಿಗೂ ಕೆಲವು ನಕ್ಷತ್ರಗಳಿಗೂ ಸಂಬಂಧವು ಉಕ್ತವಾಗಿದೆ ಬೃಹಸ್ಪತಿಯು ಪುಷ್ಯನಕ್ಷ ತ್ರದ ದೇವತೆ (ತೈ. ಸಂ. ೪-೪ ೧೦-೧) ; ಪುರಾಣಾದಿಗಳಲ್ಲಿ ಬೃಹಸ್ಪತಿಯನ್ನು ವಾಚಸ್ಪತಿಯೆಂದೂ, ಬೃಹಸ್ಪತಿ ಗ್ರಹಾಭಿಮಾನಿದೇವತೆಯೆಂದೂ ವರ್ಣಿಸಿದೆ.

ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿ ಎಂಬ ದೇವತೆಗಳು ಅಗ್ನಿಯ ರೂಪಾಂತರಗಳೆಂದು ಕೆಲವು ಪಂಡಿತರು ಅಭಿಪ್ರಾಯಪಟ್ಟಿದ್ದಾರೆ. M. Langlois ಎಂಬ ಪಂಡಿತನು ತನ್ನ ಋಗ್ವೇದ ಭಾಷಾಂತರವೆಂಬ ಗ್ರಂಥದ ಭಾಗ I p. 249, 254, 578, ಗಳಲ್ಲಿ ಈ ಎರಡು ದೇವತೆಗಳೂ ಅಗ್ನಿಯ ರೂಪಾಂತರಗಳೆಂದು ಅನೇಕ ಉದಾಹರಣೆ ಗಳಿಂದ ಸಮರ್ಥಿಸಿದ್ದಾನೆ. Wilson ಎಂಬ ಪಂಡಿತನೂ ತನ್ನ ಋಗ್ವೇದ ಭಾಷಾಂತರದ ಮೊದಲನೆಯ ಭಾಗದ ಪೀಠಿಕೆಯಲ್ಲಿ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ ; Max Muller ಎಂಬ ಪಂಡಿತನು ಸಹ— Brihaspati and Brahmanaspati are both varieties of Agni, the priest and the purohit of the Gods and men and as such he is invoked together with the Maruts &c. ಎಂದರೆ ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿ ಎಂಬೆರಡೂ ಅಗ್ನಿಯ ರೂಪಾಂತರಗಳು, ದೇವತೆಗಳಿಗೂ ಮನುಷ್ಯರಿಗೂ ಋತ್ವಿಜ ಮತ್ತು ಪುರೋಹಿತ ಸ್ಥಾನದಲ್ಲಿರುವವರು ; ಈ ದೃಷ್ಟಿಯಿಂದಲೇ ಮರುದ್ದೇವತೆಗಳೊಡನೆ

ಅವರಿಗೆ ಆಹ್ವಾನವಿತ್ತಿರುವುದು ಅನೇಕಕಡೆ ಇದೆ ಎಂದು ಹೇಳಿದ್ದಾನೆ. ಈ ರೀತಿ ಅಗ್ನಿಗೂ ಬೃಹಸ್ಪತಿ ಬ್ರಹ್ಮಣಸ್ಪತಿಗಳಿಗೂ ಇರುವ ತಾದಾತ್ಮ್ಯವನ್ನು ಹೇಳುವ ಒಂದೆರಡು ಉದಾಹರಣೆಗಳನ್ನು ಕೊಡುತ್ತೇವೆ.

**ತ್ವಮಗ್ನ ಇಂದ್ರೋ ವೃಷಭಃ ಸತಾಮಸಿ ತ್ವಂ ವಿಷ್ಣುರುರುಗಾಯೋ ನಮಸ್ಯಃ ।**
**ತ್ವಂ ಬ್ರಹ್ಮಾ ರಯಿವಿದ್ಬ್ರಹ್ಮಣಸ್ಪತೇ ತ್ವಂ ವಿಧರ್ತಃ ಸಚಸೇ ಪುರಂಧ್ಯಾ ॥**

(ಋ ಸಂ. ೨-೧-೩)

ಎಲೈ ಅಗ್ನಿಯೇ, ಸಜ್ಜನರಲ್ಲಿ ಅತಿಶ್ರೇಷ್ಠನಾದ ಇಂದ್ರನೇ ನೀನು ; ಪೂಜ್ಯನೂ ಅತಿದೊಡ್ಡದೇಹವುಳ್ಳವನೂ ಆದ ವಿಷ್ಣುವು ನೀನೇ ; ಎಲೈ ಬ್ರಹ್ಮಣಸ್ಪತಿಯೇ, ಧನಾಢ್ಯನಾದ ಬ್ರಹ್ಮನಾಮಕ ಋತ್ವಿಜನೂ ನೀನೇ ಎಂದು ಅಗ್ನಿಯನ್ನು ನಾನಾ ದೇವತೆಗಳ ಸ್ವರೂಪವೆಂದು ವರ್ಣಿಸಿದೆ.

**ತಂ ಶುಭ್ರಮಗ್ನಿಮವಸೇ ಹವಾಮಹೇ ವೈಶ್ವಾನರಂ ಮಾತರಿಶ್ವಾನಮುಕ್ಥ್ಯಂ ।**
**ಬೃಹಸ್ಪತಿಂ ಮನುಷೋ ದೇವತಾತಯೇ ವಿಪ್ರಂ ಶ್ರೋತಾರಮತಿಥಿಂ ರಘುಷ್ಯದಂ ॥**

(ಋ ಸಂ. ೩-೨೬-೨)

ಶುಭ್ರನೂ, ಮಾನವವರ್ಗಕ್ಕೇ ಮಿತ್ರಭೂತನೂ ಆದ ಅಗ್ನಿಯನ್ನು ನಮ್ಮ ರಕ್ಷಣೆಗೋಸ್ಕರ ಆಹ್ವಾನಿಸುತ್ತೇವೆ ; ಮಂತ್ರವಾಚ್ಯನಾಗಲು ಯೋಗ್ಯನಾದ ಮಾತರಿಶ್ವನನ್ನೂ, ಜ್ಞಾನಿಯೂ ದೇವತೆಗಳನ್ನುದ್ದೇಶಿಸಿ ಸ್ತುತಿಸುವವನೂ, ಅತಿಥಿಸ್ಥಾನೀಯನೂ, ಶೀಘ್ರಗಾಮಿಯೂ ಆದ ಬೃಹಸ್ಪತಿಯನ್ನೂ ಮಾನುಷಸಂಬಂಧವಾದ ಯಜ್ಞಾದಿಕರ್ಮಗಳಿಗೆ ಬರುವಂತೆ ಆಹ್ವಾನಿಸುತ್ತೇವೆ.

ಸಾಯಣಾಚಾರ್ಯರು ೫-೪೩-೧೨ನೆಯ ಋಕ್ಕಿಗೆ ವ್ಯಾಖ್ಯಾನ ಬರೆಯುವಾಗ ಬೃಹಸ್ಪತಿಶಬ್ದಕ್ಕೆ—

**ಅಥವಾ ಇಯಮಾಗ್ನೇಯೀ। ಬೃಹತಃ ಪರಿವೃಢಸ್ಯ ಕರ್ಮಣಃ ಸ್ವಾಮೀತಿ ಬೃಹಸ್ಪತಿರಗ್ನಿರುಚ್ಯತೇ। ತಥಾ ನೀಲವರ್ಣಧೂಮಪೃಷ್ಠತ್ವಸದನಸಾದನಹಿರಣ್ಯವರ್ಣತ್ವಾದಿಲಿಂಗೈರಪ್ಯಗ್ನಿರೇವ ಬೃಹಸ್ಪತಿಃ ॥**

ಎಂದರೆ—ಅಥವಾ ಈ ಮಂತ್ರವು ಅಗ್ನಿದೇವತಾಪ್ರತಿಪಾದಕವಾದುದು ಎನ್ನಬಹುದು. ಪ್ರಸ್ತುತವಾದ ಯಜ್ಞರೂಪ ಮಹಾಕಾರ್ಯಕ್ಕೆ ಸ್ವಾಮಿಯಾದುದರಿಂದ ಅಗ್ನಿಗೆ ಬೃಹಸ್ಪತಿಯೆಂದು ಹೆಸರು. ಅದರಂತೆ ಕಪ್ಪಾದ ಧೂಮವೇ ಪೃಷ್ಠಭಾಗ. ಯಜ್ಞವೇದಿಯೇ ಸ್ಥಾನ, ಹಿರಣ್ಯವರ್ಣ ಮೊದಲಾದ ಲಕ್ಷಣಗಳಿಂದಲೂ ಬೃಹಸ್ಪತಿಯನ್ನು ಅಗ್ನಿಯೆಂದೇ ಹೇಳಬೇಕು ಎಂದು ಹೇಳಿದಾರೆ

ಇನ್ನು ಅಗ್ನಿಗೂ ಬೃಹಸ್ಪತಿಬ್ರಹ್ಮಣಸ್ಪತಿಗಳಿಗೂ ಭೇದವನ್ನು ಹೇಳಿರುವ ಉದಾಹರಣೆಗಳನ್ನು ವಿಮರ್ಶೆ ಮಾಡೋಣ.

**ಸೋಷಾಮವಿಂದತ್ಸ ಸ್ವಃ ಸೋ ಅಗ್ನಿಂ ಸೋ ಅರ್ಕೇಣ ವಿ ಬಬಾಧೇ ತಮಾಂಸಿ ।**
**ಬೃಹಸ್ಪತಿರ್ಗೋವಪುಷೋ ವಲಸ್ಯ ನಿರ್ಮಜ್ಜಾನಂ ನ ಪರ್ವಣೋ ಜಭಾರ ॥**

(ಋ. ಸಂ. ೧೦-೬೮-೯)

ಎಂಬ ಋಕ್ಕಿನಲ್ಲಿ ಬೃಹಸ್ಪತಿಯು ಉಷಸ್ಸು, ಸ್ವರ್ಗ ಮತ್ತು ಅಗ್ನಿಗಳನ್ನು ಸಂಪಾದಿಸಿದನು ಮತ್ತು ಒಂದು ಮಂತ್ರದಿಂದ ಅಂಧಕಾರವನ್ನು ಪರಿಹರಿಸಿದನು ಎಂದು ಬೃಹಸ್ಪತಿ ಮತ್ತು ಅಗ್ನಿಯು ಬೇರೆ ಬೇರೆ ಎಂದು ಹೇಳಿದೆ.

ಇಂದ್ರಂ ನೋ ಅಗ್ನೇ ವಸುಭಿಃ ಸಜೋಷಾ ರುದ್ರಂ ರುದ್ರೇಭಿರಾ ವಹಾ ಬೃಹಂತಂ ।
ಆದಿತ್ಯೇಭಿರದಿತಿಂ ವಿಶ್ವಜನ್ಯಾಂ ಬೃಹಸ್ಪತಿಮೃಕ್ವಭಿರ್ವಿಶ್ವವಾರಂ ॥

(ಋ. ಸಂ. ೭-೧೦-೪)

ಎಂಬ ಋಕ್ಕಿನಲ್ಲಿ ವಸುಗಳಿಂದ ಸಹಿತನಾದ ಇಂದ್ರನನ್ನೂ, ಮರುದ್ದೇವತೆಗಳಿಂದ ಸಹಿತನಾದ ರುದ್ರನನ್ನೂ ಆದಿತ್ಯರು (ದೇವತೆ) ಗಳಿಂದ ಸಹಿತಳಾದ ವಿಶ್ವಜನನಿಯಾದ ಅದಿತಿಯನ್ನು ಸ್ತೋತ್ರಮಾಡುತ್ತಿರುವ ಅಂಗಿರಾ ಋಷಿಗಳಿಂದ ಸಹಿತನಾದ ಬೃಹಸ್ಪತಿಯನ್ನೂ ಕರೆತರಬೇಕೆಂದು ಅಗ್ನಿಯನ್ನು ಪ್ರಾರ್ಥಿಸಿದೆ. ಇದಲ್ಲದೆ ಬೃಹಸ್ಪತಿ ಅಥವಾ ಬ್ರಹ್ಮಣ-ಸ್ಪತಿಯೇ ಬೇರೆ ಅಗ್ನಿಯೇ ಬೇರೆ ಎಂದು ಅರ್ಥವನ್ನು ಸೂಚಿಸುವ ಋಕ್ಕುಗಳು—೩-೨೦-೫, ೪-೪೦-೧. ೫-೫೧-೧೨ ೭-೪೧-೧, ೭-೪೪-೧, ೯-೫-೧೧, ೧೦-೩೫-೧೧, ೧೦-೭೫-೧, ೧೦-೧೩೦-೪, ೧೦-೧೪೧-೩, ಮೊದಲಾದ ಮಂತ್ರಗಳು ಋಗ್ವೇದದಲ್ಲಿ ಬಹಳವಾಗಿವೆ- ಆದುದರಿಂದ ಅಗ್ನಿಯೇ ಬೇರೆ, ಬೃಹಸ್ಪತಿಬ್ರಹ್ಮಣಸ್ಪತಿಗಳೇ ಬೇರೆ ಎಂಬ ಸಿದ್ಧಾಂತವೇ ಋಗ್ವೇದದಲ್ಲಿ ಸಮರ್ಥಿತವಾಗಿದೆ.

---

## ನೂರ ತೊಂಭತ್ತನೆಯ ಸೂಕ್ತವು.

---

ಅನರ್ವಾಣಮಿತ್ಯಷ್ಟರ್ಚಮೇಕಾದಶಂ ಸೂಕ್ತಮಾಗಸ್ತ್ಯಂ ಬಾರ್ಹಸ್ಪತ್ಯಂ ತ್ರೈಷ್ಟುಭಂ । ಅನರ್ವಾಣಂ ಬಾರ್ಹಸ್ಪತ್ಯಮಿತ್ಯನುಕ್ರಾಂತಂ ॥ ಶ್ರೌತವಿನಿಯೋಗೋ ಲೈಂಗಿಕಃ ॥ ಅತ್ರ ಶೌನಕಃ । ಸ್ನಾತ್ವಾ ಜಪೇದನರ್ವಾಣಂ ನಮಸ್ಕೃತ್ಯ ಬೃಹಸ್ಪತಿಂ । ವೀರಾನ್ಧನಂ ಚ ಪ್ರಾಪ್ನೋತಿ ಸೋಽಶ್ಲೋಕ್ಯಂ ಚ ನಿಯಚ್ಛತಿ । ಋಗ್ವಿ. ೧-೨೭ । ಇತಿ ॥

ಅನುವಾದವು—ಅನರ್ವಾಣಂ ಎಂಬ ಈ ಸೂಕ್ತವು ಇಪ್ಪತ್ತನಾಲ್ಕನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು. ಬೃಹಸ್ಪತಿಯು ದೇವತೆಯು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಅನರ್ವಾಣಂ ಬಾರ್ಹಸ್ಪತ್ಯಂ ಎಂದು ಮೊದಲಾಗಿ ಹೇಳಿರುವುದು. ಈ ಸೂಕ್ತದ ಶ್ರೌತವಿನಿಯೋಗವು ಲೈಂಗಿಕವು ಎಂದರೆ ಮಂತ್ರದ ಅರ್ಥಾನುಸಾರವಾಗಿರುವುದು. ಈ ಸೂಕ್ತದ ವಿನಿಯೋಗ ವಿಷಯದಲ್ಲಿ ಶೌನಕಮಹರ್ಷಿಯು ತಮ್ಮ ಋಗ್ವಿಧಾನವೆಂಬ ಗ್ರಂಥದಲ್ಲಿ—

ಸ್ನಾತ್ವಾ ಜಪೇದನರ್ವಾಣಂ ನಮಸ್ಕೃತ್ಯ ಬೃಹಸ್ಪತಿಂ ।
ವೀರಾನ್ ಧನಂ ಚ ಪ್ರಾಪ್ನೋತಿ ಸುಶ್ಲೋಕ್ಯಂ ಚ ನಿಯಚ್ಛತಿ ॥

(ಋಗ್ವಿಧಾನ. ೧-೨೭)

ಯಾವ ಪುರುಷನು ಸ್ನಾನಮಾಡಿ ಶುಚಿರ್ಭೂತನಾಗಿ ಬೃಹಸ್ಪತಿ ಎಂಬ ದೇವತೆಯನ್ನು ನಮಸ್ಕಾರಮಾಡಿ ಅನರ್ವಾಣಂ ಎಂದು ಪ್ರಾರಂಭವಾಗುವ ಎಂಟು ಋಕ್ಕುಗಳುಳ್ಳ ಈ ಸೂಕ್ತವನ್ನು ಜಪಮಾಡುವನೋ ಅವನಿಗೆ ಬೃಹಸ್ಪತಿಯು ವೀರರಾದ ಪುತ್ರರನ್ನೂ ಐಶ್ವರ್ಯವನ್ನೂ ಕೀರ್ತಿಯನ್ನೂ ಕೊಡುವನು ಎಂದು ಹೇಳಿದ್ದಾರೆ.

॥ ಓಂ ॥

## ಸೂಕ್ತ—೧೯೦

॥ ಮಂಡಲ—೧ ॥ ಅನುವಾಕ—೨೪ ॥ ಸೂಕ್ತ—೧೯೦ ॥

॥ ಅಷ್ಟಕ— ೨ ॥ ಅಧ್ಯಾಯ— ೫ ॥ ವರ್ಗ- ೧೨, ೧೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೮ ॥

ಋಷಿಃ—ಅಗಸ್ತ್ಯಃ ।
ದೇವತಾ—ಬೃಹಸ್ಪತಿಃ ॥
ಛಂದಃ—ತ್ರಿಷ್ಟುಪ್ ।

———:೦:———

ಸಂಹಿತಾಪಾಠಃ

ಅನರ್ವಾಣಂ ವೃಷಭಂ ಮಂದ್ರಜಿಹ್ವಂ ಬೃಹಸ್ಪತಿಂ ವರ್ಧಯಾ ನವ್ಯಮರ್ಕೈಃ ।

ಗಾಥಾನ್ಯಃ ಸುರುಚೋ ಯಸ್ಯ ದೇವಾ ಆಶೃಣ್ವಂತಿ ನವಮಾನಸ್ಯ ಮರ್ತಾಃ ॥ ೧ ॥

॥ ಪದಪಾಠಃ ॥

ಅನರ್ವಾಣಂ । ವೃಷಭಂ । ಮಂದ್ರಽಜಿಹ್ವಂ । ಬೃಹಸ್ಪತಿಂ । ವರ್ಧಯ । ನವ್ಯಂ । ಅರ್ಕೈಃ ।

ಗಾಥಾನ್ಯಃ । ಸುಽರುಚಃ । ಯಸ್ಯ । ದೇವಾಃ । ಆಽಶೃಣ್ವಂತಿ । ನವಮಾನಸ್ಯ । ಮರ್ತಾಃ ॥ ೧ ॥

ಸಾಯಣಭಾಷ್ಯಂ

ಹೇ ಹೋತಃ ನವ್ಯಂ ನವತರಂ ಸ್ತುತ್ಯಂ ವಾ ತಮನರ್ವಾಣಮಗಂತಾರಂ । ಸ್ತೋತುರಧೀನಮಿತ್ಯರ್ಥಃ । ವೃಷಭಮಪಾಂ ಫಲಾನಾಂ ವರ್ಷಿತಾರಂ ಮಂದ್ರಜಿಹ್ವಂ ಮಾದಕವಾಚಕಂ ಬೃಹಸ್ಪತಿಂ ಮಂತ್ರಸ್ಯ ಪಾಲಯಿತಾರಮೇತನ್ನಾಮಕಂ ದೇವಮರ್ಕೈರರ್ಚನಸಾಧನೈರ್ಮಂತ್ರೈರ್ವರ್ಧಯ । ಪ್ರವೃದ್ಧಂ ಕುರು । ಸುರುಚಃ ಶೋಭನದೀಪ್ತೇರ್ನವಮಾನಸ್ಯ ಸ್ತೂಯಮಾನಸ್ಯ । ಕರ್ಮಣಿ ಕರ್ತೃಪ್ರತ್ಯಯಃ ॥ ಯಸ್ಯ ಬೃಹಸ್ಪತೇಃ ॥ ಕರ್ಮಣಿ ಷಷ್ಠ್ಯಃ ॥ ರೋಚಮಾನಂ ಸ್ತೂಯಮಾನಂ ಗಾಥಾನ್ಯಃ । ಗಾಥೇತಿ ವಾಙ್ನಾಮ । ಸ್ತುತಿವಚಸೋ ನೇತಾರೋ ದೇವಾ ವ್ಯವಹರ್ತಾರೋ ಮರ್ತಾ ಮನುಷ್ಯಾ ಹೋತ್ರಾದಯಃ । ಯದ್ವಾ । ನವಮಾನಸ್ಯ ಸ್ತುವಾನಸ್ಯ ಯಜಮಾನಸ್ಯ ಸಂಬಂಧಿನಸ್ತೇ । ಆಶೃಣ್ವಂತಿ ಆಶ್ರಾವಯಂತಿ ಪುರಾ ತಂ ಬೃಹಸ್ಪತಿಂ ವರ್ಧಯ । ಅತ್ರಾನರ್ವಾಣಮಪ್ರತ್ಯೃತಮನ್ಯಸ್ಮಿನ್ನಿತ್ಯಾದಿ ನಿರುಕ್ತಂ ದ್ರಷ್ಟವ್ಯಂ । ನಿ. ೬-೨೩ ॥

ಪ್ರತಿಪದಾರ್ಥ

(ಎಲೈ ಹೋತೃವೇ) **ಸುರುಚಃ**—ಶೋಭನಾತ್ಮಕವಾದ ಕಾಂತಿಯುಳ್ಳವನೂ । **ನವಮಾನಸ್ಯ**—ಸ್ತುತಿ ಸಲ್ಪಡುವವನೂ ಆದ । **ಯಸ್ಯ**—ಯಾವ ಬೃಹಸ್ಪತಿಯ (ಪ್ರಶಂಸೆಯನ್ನು) । **ಗಾಥಾನ್ಯಃ**—ಸ್ತುತಿವಾಕ್ಕುಗಳಿಗೆ ಕರ್ತೃಗಳೂ ನೇತೃಗಳೂ ಆದ । **ದೇವಾಃ**—ದೇವತೆಗಳೂ । **ಮರ್ತಾಃ**—ಮಾನವರೂ । **ಆಶೃಣ್ವಂತಿ**—ಘೋಷಿಸಿ ಪಠಿಸುತ್ತಾರೆಯೋ ಅಂತಹ । **ನವ್ಯಂ**—ಸ್ತುತ್ಯನೂ । **ಅನರ್ವಾಣಂ**—(ಸ್ತೋತೃವನ್ನು ಬಿಟ್ಟು) ಬೇರೆ ಪ್ರದೇಶಕ್ಕೆ ಹೋಗದಿರುವವನೂ । **ವೃಷಭಂ**—ಇಷ್ಟಾರ್ಥಗಳನ್ನು ಸುರಿಸುವವನೂ । **ಮಂದ್ರಜಿಹ್ವಂ**—ಹರ್ಷದಾಯಕವಾದ ವಾಕ್ಯವುಳ್ಳವುನೂ ಆದ । **ಬೃಹಸ್ಪತಿಂ**—ಮಂತ್ರಕ್ಕೆ ಪಾಲಕನೂ ಆದ ಬೃಹಸ್ಪತಿಯನ್ನು । **ಅರ್ಕೈಃ**—ಪೂಜಾಸಾಧನ ಗಳಾದ ಮಂತ್ರಗಳಿಂದ । **ವರ್ಧಯ**—ಪ್ರವೃದ್ಧನಾಗುವಂತೆ ಮಾಡು (ಸ್ತೋತ್ರಮಾಡು) ।

ಭಾವಾರ್ಥ

ಶೋಭನಾತ್ಮಕವಾದ ಕಾಂತಿಯುಳ್ಳವನೂ, ಸ್ತುತ್ಯನೂ ಆದ ಯಾವ ಬೃಹಸ್ಪತಿಯ ಪ್ರಶಂಸೆಯನ್ನು ಸ್ತುತಿ ವಾಕ್ಕುಗಳಿಗೆ ನೇತೃಗಳಾದ ದೇವತೆಗಳೂ ಮಾನವರೂ ಘೋಷಿಸಿ ಪಠಿಸುತ್ತಾರೆಯೋ ಅಂತಹ ಸ್ತುತ್ಯನೂ, ಸ್ತೋತೃ ವಿನಲ್ಲಿಯೇ ನಿಯತವಾಗಿರುವವನೂ, ಇಷ್ಟಾರ್ಥಗಳನ್ನು ಸುರಿಸುವವನೂ, ಹರ್ಷದಾಯಕವಾದ ವಾಕ್ಯವುಳ್ಳವನೂ ಮಂತ್ರಪಾಲಕನೂ ಆದ ಬೃಹಸ್ಪತಿಯನ್ನು ಪೂಜಾಸಾಧನಗಳಾದ ಮಂತ್ರಗಳಿಂದ ಪ್ರವೃದ್ಧನಾಗುವಂತೆ ಮಾಡು.

English Translation

Priests, augment by your hymns Brihaspati, who deserts not (his worshipper); the showerer (of benefits), the pleasant-tongued, the adorable; of whom resplendent, gods and men, (the ministers) of the institutor of the sacrifice, emulous in sacred songs, proclaim (the praise)

ವಿಶೇಷವಿಷಯಗಳು

**ಅನರ್ವಾಣಂ—ಅಗಂತಾರಂ ಸ್ತೋತುರಧೀನಮಿತ್ಯರ್ಥಃ** । ಸ್ತೋತ್ರಮಾಡುವ ಯಜಮಾನನ ಸಮೀಪವನ್ನು ಬಿಟ್ಟು ಹೊರಟುಹೋಗದಿರುವ ಎಂದರೆ ಸ್ತೋತ್ರಮಾಡುವ ಯಜಮಾನನ ಅಧೀನನಾಗಿರುವ ಎಂದು ಸಾಯಣರು ಅರ್ಥಮಾಡಿದಾರೆ. ಈ ಶಬ್ದಕ್ಕೆ ನಿರುಕ್ತಕಾರರ ಮತದಂತೆ—ಅಪ್ರತ್ಯೃತಃ ಅಪ್ರತಿಗತೋಽನ್ಯಸ್ಮಿನ್ ಅನ್ಯಮನಾಶ್ರಿತಃ ಸ್ವತಂತ್ರ ಇತ್ಯರ್ಥಃ (ನಿ-೪-೨೭) ಎಂದರೆ ಇನ್ನೊಬ್ಬರ ಸಹಾಯವನ್ನು ಅಪೇಕ್ಷಿಸದಿರುವವನು, ಸ್ವತಂತ್ರನು ಎಂದರ್ಥವು. ಎರಡು ವಿಧವಾದ ಅರ್ಥಗಳಿಗೂ ಇಲ್ಲಿ ಅವಕಾಶವಿದೆ.

**ವೃಷಭಂ—ಅಪಾಂ ಫಲಾನಾಂ ವರ್ಷಿತಾರಂ** । ವೃಷಭಶಬ್ದನಿಷ್ಪತ್ತಿಯನ್ನು ನಾವು ಋ. ಸಂ. ಭಾಗ ೫ ಪೇಜು 682, ಭಾಗ ೮, ಪೇಜು 168 ಇತ್ಯಾದಿ ಕಡೆಗಳಲ್ಲಿ ವಿಸ್ತಾರವಾಗಿ ವಿವರಿಸಿದೇವೆ. ಪ್ರಕೃತವಾದ ಋಕ್ಕಿನಲ್ಲಿ ಉದಕರೂಪವಾದ ಫಲಗಳನ್ನು ಸುರಿಸುವವನು ಎಂದರ್ಥವು. ಬೃಹಸ್ಪತಿಯು ವೃಷ್ಟಿಪ್ರದಾನಕ್ಕೆ ಸಹಾಯ ಕನು ಎಂಬ ವಿಷಯದಲ್ಲಿ ಈ ಸೂಕ್ತದ ಪೀಠಿಕೆಯಲ್ಲಿ ಹೇಳಿರುವ ವಿಷಯವನ್ನು ನೋಡಿ. (ಪೇಜು 301)

**ಮಂದ್ರಜಿಹ್ವಂ—ಮಾದಕವಾಚಂ** । ಮನಸ್ಸಿಗೆ ಹರ್ಷವನ್ನುಂಟುಮಾಡುವ ಮಾತುಗಳನ್ನಾಡುವ ಜಿಹ್ವೆ (ನಾಲಗೆ) ಯುಳ್ಳವನು ಎಂದರೆ ಸ್ತೋತ್ರಮಾಡುವವರಿಗೆ ಸಂತೋಷವಾಗುವಂತೆ ಆಹ್ಲಾದಕರವಾದ ಮಾತುಗಳನ್ನಾಡುವವನು ಎಂದರ್ಥವು.

**ಅರ್ಕೈಃ— ಅರ್ಚನಸಾಧನೈರ್ಮಂತ್ರೈಃ** । ಸ್ತೋತ್ರಮಾಡುವುದಕ್ಕೆ ಸಾಧನವಾದ ಮಂತ್ರಗಳಿಂದ ಎಂದರ್ಥವು. ಸ್ತೋತ್ರಮಾಡಲು ಉಪಯೋಗಿಸುವುದರಿಂದ ಮಂತ್ರಗಳಿಗೆ ಅರ್ಕಗಳೆಂದು ಹೆಸರು. ಅರ್ಕಶಬ್ದಕ್ಕೆ ಯಾಸ್ಕರು—

**ಅರ್ಕೋ ದೇವೋ ಭವತಿ ಯದೇನಮರ್ಚಂತಿ । ಅರ್ಕೋ ಮಂತ್ರೋ ಭವತಿ ಯದನೇನಾರ್ಚಂತಿ**
**ಅರ್ಕಮನ್ನಂ ಭವತ್ಯರ್ಚತಿ ಭೂತಾನಿ । ಅರ್ಕೋ ವೃಕ್ಷೋ ಭವತಿ ಸಂವೃತ್ತಃ ಕಟುಕಿಮ್ನಾ ॥**

(ನಿ. ೫–೪)

ಎಂದು ನಾಲ್ಕುವಿಧವಾದ ಅರ್ಥವನ್ನು ಹೇಳಿರುವರು—

(1) **ಅರ್ಕೋ ದೇವೋ ಭವತಿ ಯದೇನಮರ್ಚಂತಿ । ತಾವತ್ಸರ್ವ ಏವಾರ್ಕ ಇತ್ಯುಚ್ಯತೇ ಯದ್ಯಸ್ಮಾದೇನಂ ದೇವಂ ಅರ್ಚಂತಿ ಸ್ತೋತಾರಃ ॥** ಅರ್ಕ ಎಂದರೆ ದೇವತೆಯು, ಏಕೆಂದರೆ ಇದರಿಂದ ಭಕ್ತರು ಯಾರನ್ನು ಪೂಜಿಸುವುದಕ್ಕೆ ಉಪಯೋಗಿಸುವರೋ ಅಂತಹ ವ್ಯಕ್ತಿ ಅಥವಾ ದೇವನು ಎಂದರೆ, ಭಕ್ತರು ಪೂಜಿಸುವ ವಸ್ತುವಿಗೆ (ದೇವತೆಗೆ) ಅರ್ಕವೆಂದು ಹೆಸರು.

(2) **ಅರ್ಕೋ ಮಂತ್ರೋ ಭವತಿ । ಯದ್ಯಸ್ಮಾತ್ ಅನೇನ ಮಂತ್ರೇಣ ಅರ್ಚಂತಿ ಸ್ತೋತಾರಃ ತಸ್ಮಾದರ್ಕಃ ॥** ಅರ್ಕವೆಂದರೆ ಮಂತ್ರವೆಂದೂ ಅರ್ಥವಾಗುವುದು ಏಕೆಂದರೆ, ಸ್ತೋತ್ರಮಾಡುವವರು ಇದರಿಂದ (ಅರ್ಕದಿಂದ ಅಥವಾ ಮಂತ್ರದಿಂದ) ದೇವತೆಯನ್ನು ಅರ್ಚಿಸುವರು. ಆದುದರಿಂದ ಅರ್ಕಶಬ್ದಕ್ಕೆ ಮಂತ್ರವೆಂದೂ ಹೆಸರು.

(3) **ಅರ್ಕಮನ್ನಂ ಭವತಿ । ತದ್ಧಿ ಅರ್ಚತಿ ಭೂತಾನಿ ಯೋ ಹಿ ಪೂಜ್ಯಃ ತಸ್ಯಾನ್ನಮಪಿ ಸಂಸ್ಕಾರವಿಶೇಷೇಣ ಸಂಸ್ಕೃತಂ ಪೂಜಾಯಾಂ ಕ್ರಿಯತೇ ಪೂಜ್ಯಂ ಚ ಸರ್ವಸ್ಯೈವಾನ್ನಂ ।** ಅರ್ಕವೆಂದರೆ ಅನ್ನವೆಂದೂ ಅರ್ಥವಾಗುವುದು. ಅನ್ನವು (ಆಹಾರವು) ಸಮಸ್ತಪ್ರಾಣಿಗಳಿಗೂ ಅವಶ್ಯಕವಾಗಿರುವುದರಿಂದ ಅನ್ನವನ್ನು ಎಲ್ಲರೂ ಆದರದಿಂದ ಗೌರವಿಸಿ ಅಪೇಕ್ಷಿಸುವರು ಎಂದರೆ, ಎಲ್ಲರೂ ಪ್ರೀತ್ಯಾದರಗಳಿಂದ ಗೌರವಿಸಿ ಬಯಸುವುದರಿಂದ ಅರ್ಕಶಬ್ದಕ್ಕೆ ಅನ್ನವೆಂದೂ ಅರ್ಥವಾಗುವುದು.

(4) **ಅರ್ಕೋ ವೃಕ್ಷೋ ಭವತಿ ಯ ಏಷ ಪ್ರಸಿದ್ಧಃ । ಸಂವೃತ್ತಃ ಹಿ ಸಂಗತಃ ಸಂವ್ಯಾಪ್ತಃ ಕಟುಕಿಮ್ನಾ ಕಟುಕಭಾವೇನ ಭವತಿ ॥** ಇನ್ನು ಅರ್ಕಶಬ್ದಕ್ಕೆ ವೃಕ್ಷವೆಂಬ ಹೆಸರು ಪ್ರಸಿದ್ಧವಾಗಿಯೇ ಇದೆ. ಅರ್ಕವೃಕ್ಷವೆಂದರೆ ಎಕ್ಕದ ಗಿಡವೆಂದು ಕರ್ಣಾಟಕ ಭಾಷೆಯಲ್ಲಿ ಹೇಳುವರು. ಇದರ ಸಮಿತ್ತುಗಳನ್ನು ಹೋಮಗಳಲ್ಲಿ ಉಪಯೋಗಿಸುವುದರಿಂದಲೂ, ಇದನ್ನು ಔಷಧಾದಿಗಳಲ್ಲಿ ಬಳಸುವ ರೂಢಿಯಿರುವುದರಿಂದಲೂ ಅರ್ಕವೃಕ್ಷವು ಎಲ್ಲರಿಗೂ ತಿಳಿದ ವಸ್ತುವಾಗಿದೆ. ಇದು ಕಹಿಯಾಗಿರುವುದರಿಂದ ಕಟುಕಿಮ್ನಾ ಎಂದು ಹೇಳುವರು. ಅರ್ಕಶಬ್ದದ ವಿವರಣೆಯ ಉದಾಹರಣೆಗಾಗಿ ಯಾಸ್ಕರು **ಗಾಯಂತಿತ್ವಾ** (ಋ ಸಂ ೧–೧೦–೧)

ಎಂಬ ಋಕ್ಕನ್ನು ತೆಗೆದುಕೊಂಡು ಇದರ ನಿರ್ವಚನವನ್ನು ಹೇಳಿರುವರು. ಆ ವಿವರಣೆಯು ಇಲ್ಲಿ ಅಪ್ರಕೃತವು. ಪ್ರಕೃತ ಋಕ್ಕಿನಲ್ಲಿ ಅರ್ಕಶಬ್ದಕ್ಕೆ ಮಂತ್ರವೆಂಬ ಅರ್ಥವನ್ನು ಭಾಷ್ಯಕಾರರು ಸ್ವೀಕರಿಸಿರುವರು.

**ಗಾಥಾನ್ಯಃ**—ಗಾಥಾ ಎಂಬ ಶಬ್ದವು ಶ್ಲೋಕಃ, ಧಾರಾ ಮೊದಲಾದ ಐವತ್ತೇಳು ವಾಙ್ನಾಮಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ (ನಿ. ೨-೨೩) ಗಾಥಾ ಎಂದರೆ ಸ್ತುತಿರೂಪವಾದ ವಾಕ್ಯೆಂದರ್ಥವು. **ಗಾಥಾ ನಯಂತೀತಿ ಗಾಥಾನ್ಯಃ ।** ಇಂತಹ ಸ್ತುತಿರೂಪವಾದ ಮಂತ್ರಗಳಿಗೆ ನಾಯಕರಾದ ದೇವತೆಗಳು ಮತ್ತು ಮಂತ್ರಗಳನ್ನು ಪಠಿಸುವ ಹೋತ್ರಾದಿ ಋತ್ವಿಜರು ಎಂದಭಿಪ್ರಾಯವು.

**ಅಥವಾ ನವಮಾನಸ್ಯ (ಸಂಬಂಧಿನಸ್ತೇ) ಗಾಥಾನ್ಯಃ ಅಶೃಣ್ವಂತಿ ಆಶ್ರಾವಯಂತಿ ।** ಎಂಬ ವಾಕ್ಯಕೆ ಭಾಷ್ಯಕಾರರು—ಸ್ತೋತ್ರಮಾಡುತ್ತಿರುವ ಯಜಮಾನನ ಸಂಬಂಧಿಗಳಾದ ಹೋತ್ರಾದಿಗಳು ಬೃಹಸ್ಪತಿಯನ್ನು ಮಂತ್ರಗಳನ್ನು ಪಠಿಸಿ ತೃಪ್ತಿಪಡಿಸುತ್ತಾರೆ ಎಂಬ ಇನ್ನೊಂದು ವಿಧವಾದ ಅರ್ಥವನ್ನೂ ಹೇಳಿರುವರು.

ವ್ಯಾಕರಣಪ್ರಕ್ರಿಯಾ

**ಅನರ್ವಾಣಮ್**—**ನಞ್ಸುಭ್ಯಾಮ್** (ಪಾ ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ **ಅರ್ವಣಸ್ತ್ರ್ಯಸಾವನಞಃ** (ಪಾ. ಸೂ. ೬-೪-೧೨೭), ಎಂಬಲ್ಲಿ ಅನಞಃ ಎಂದು ನಿಷೇಧ ಮಾಡಿರುವುದರಿಂದ ತೃ ಎಂಬುದು ಅಂತಾದೇಶವಾಗಿ ಬರುವುದಿಲ್ಲ.

**ಮಂದ್ರಜಿಹ್ವಮ್**—ಮಂದ್ರಾ ಜಿಹ್ವಾ ಯಸ್ಯ ಸಃ. ತಮ್. **ಬಹುವ್ರೀಹೌಪ್ರಕೃತ್ಯಾ**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ವರ್ಧಯ**—ವೃಧು ವರ್ಧನೇ ಧಾತು ಪ್ರಯೋಜಕ ವ್ಯಾಪಾರ ತೋರುವುದರಿಂದ **ಹೇತುಮತಿಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಣಿಜಂತದ ಮೇಲೆ ಲೋಟ್. ಮಧ್ಯಮಪುರುಷ ಏಕವಚನಾಂತ ರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಗಾಥಾನ್ಯಾ**—ಣೀಞ್ ಪ್ರಾಪಣೇ ಧಾತು. **ಣೋನಃ** ಎಂಬುದರಿಂದ ಆದಿಗೆ ನತ್ವ. ಗಾಥಾಃ ನಯಂತಿ ಇತಿ ಗಾಥಾನ್ಯಃ. ಕ್ವಿಪ್ ಪ್ರತ್ಯಯ ಕೃದುತ್ತರಪದಸ್ವರದಿಂದ ಈಕಾರ ಉದಾತ್ತವಾಗುತ್ತದೆ. ಜಸ್ ಪರವಾದಾಗ ಅದಕ್ಕೆ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣ್ ಬಂದು ಅದರ ಪರದಲ್ಲಿ ಅನುದಾತ್ತವಿಭಕ್ತಿ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ**—(ಪಾ. ಸೂ. ೮-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ಅಶೃಣ್ವಂತಿ**—ಶ್ರು ಶ್ರವಣೇ. ಧಾತು. ಲಟ್. ಪ್ರಥಮಪುರುಷಬಹುವಚನದಲ್ಲಿ ಝಿ ಪ್ರತ್ಯಯ. **ಝೋಂತಃ** ಎಂಬುದರಿಂದ ಅದಕ್ಕೆ ಅಂತಾದೇಶ **ಶ್ರುವಃ ಶೃಚ** (ಪಾ. ಸೂ. ೩-೧-೭೪) ಎಂಬುದರಿಂದ ಧಾತುವಿಗೆ ಶೃ ಆದೇಶ. ಶ್ನುವಿಕರಣ. ಯಣಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ **ತಿಙಿಚೋದಾತ್ತವತಿ** (ಪಾ ಸೂ. ೮-೧-೭೧) ಎಂಬುದರಿಂದ ಗತಿಗೆ (ಆಙ್) ಅನುದಾತ್ತಸ್ವರ ಬರುತ್ತದೆ.

**ನವಮಾನಸ್ಯ**—ಣು ಸ್ತುತೌ. ಧಾತು. **ಣೋನಃ** ಎಂಬುದರಿಂದ ಆದಿಗೆ ನತ್ವ ಲಟಗೆ ಶಾನಚಾದೇಶ. ವ್ಯತ್ಯಯದಿಂದ ಕರ್ಮಣಿಯಲ್ಲಿ ಕರ್ತೃಪ್ರತ್ಯಯ ಬಂದಿದೆ ಶಪ್ ವಿಕರಣ. **ಸಾರ್ವಧಾತುಕಾರ್ಧ**—

ಎಂಬುದರಿಂದ ಧಾತುವಿನ ಉಕಾರಕ್ಕೆ ಗುಣ. ಅವಾದೇಶ. ಆನೇಮುಕ್ (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. ತಾಸ್ಯನುದಾತ್ತೇತ್—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಕರ್ಮಾರ್ಥದಲ್ಲಿ ಅಥವಾ ಸಂಬಂಧಾರ್ಥದಲ್ಲಿ ಷಷ್ಠೀ ವಿಭಕ್ತಿ ಬಂದಿದೆ.

———— :0: ————

ಸಂಹಿತಾಪಾಠಃ

ತಮೃತ್ವಿಯಾ ಉಪ ವಾಚಃ ಸಚಂತೇ ಸರ್ಗೋ ನ ಯೋ ದೇವಯತಾಮಸರ್ಜಿ ।
ಬೃಹಸ್ಪತಿಃ ಸ ಹ್ಯಂಜೋ ವರಾಂಸಿ ವಿಭ್ವಾಭವತ್ಸಮೃತೇ ಮಾತರಿಶ್ವಾ ॥ ೨ ॥

ಪದಪಾಠಃ

ತಂ । ಋತ್ವಿಯಾಃ । ಉಪ । ವಾಚಃ । ಸಚಂತೇ । ಸರ್ಗಃ । ನ । ಯಃ । ದೇವ್ಽಯತಾಂ । ಅಸರ್ಜಿ ।
ಬೃಹಸ್ಪತಿಃ । ಸಃ । ಹಿ । ಅಂಜಃ । ವರಾಂಸಿ । ವಿಽಭ್ವಾ । ಅಭವತ್ । ಸಂ । ಋತೇ । ಮಾತರಿಶ್ವಾ ॥ ೨ ॥

ಸಾಯಣಭಾಷ್ಯಂ

ಬಾರ್ಹಸ್ಪತ್ಯೇ ಪಶೌ ತಮೃತ್ವಿಯೇತ್ಯೇಷಾ ವಪಾಯಾಜ್ಯಾ । ಸೂತ್ರಿತಂ ಚ । ಬೃಹಸ್ಪತೇ ಅತಿ ಯದರ್ಯೋ ಅರ್ಹಾತ್ತಮೃತ್ವಿಯಾ ಉಪ ವಾಚಃ ಸಚಂತೇ । ಆ. ೩-೭ । ಇತಿ ॥

ತಂ ಬೃಹಸ್ಪತಿಮೃತ್ವಿಯಾ ವರ್ಷರ್ತುಸಂಬಂಧಿನ್ಯೋ ವಾಚೋ ಮಾಧ್ಯಮಿಕಾ ಉಪ ಸಂಚತೇ । ಸಮೀಪೇ ಸೇವಂತೇ । ಯಃ ಸರ್ಗೋ ನೋದಕಸ್ಯ ಸ್ರಷ್ಟಾಪಿ । ನಶಬ್ದೋಽಪ್ಯರ್ಥೇ । ದೇವಯತಾಂ ದೇವಾನಿಚ್ಛತಾಂ ಯಜಮಾನಾನಾಮಸರ್ಜಿ ಫಲಂ । ಯದ್ವಾ । ದೇವಂ ತಮಿಚ್ಛತಾಂ ಮನುಷ್ಯಾಣಾಮಸರ್ಜಿ ಸೃಷ್ಟವಾನ್ಸ್ರಷ್ಟ್ರ್ಯುದಕಂ । ಯದ್ವಾ । ಋತ್ವಿಯಾಃ ಪ್ರಾಪ್ತಕಾಲೀನಾ ವಾಚೋ ಹೋತ್ರಾದಿಪ್ರೇರಿತಾ ವಾಚ ಉಪ ಸಚಂತೇ ತಂ ಯಃ ಸರ್ಗೋ ನೋದಕಸೃಷ್ಟಿರಿವ ಸಃ ಸ ಏವ ಬೃಹಸ್ಪತಿರಂಜೋ ಹಿ ವ್ಯಂಜಕಃ ಖಲು । ತಸ್ಮಿನ್ವರ್ಷತಿ ಸರ್ವೇ ಭವಂತಿ। ಅತ ಏವ ವಿಭ್ವಾ ವಿಭುರ್ವ್ಯಾಪ್ತೋ ಮಾತರಿಶ್ವಾ ವೃಷ್ಟಿನಿರ್ಮಾತರ್ಯಂತರಿಕ್ಷೇ ಚೇಷ್ಟಮಾನೋ ವಾಯುಸದೃಶೋ ವಾ ವರಾಂಸಿ ವರಣೀಯಾನಿ ವೃಷ್ಟ್ಯಾದಿಫಲಾನಿ ಸಂಪಾದಯನ್ನೃತ ಉದಕೇ ನಿಮಿತ್ತಭೂತೇ ಸತಿ ಸಮಭವತ್ । ಸಂಭೂತಃ। ಅಥವಾ । ಅಂಜೋ ಯಜ್ಞಿಯಾನಾಂ ವ್ಯಂಜಕೋ ಮಾತರಿಶ್ವಾ ಫಲಸ್ಯ ನಿರ್ಮಾತರಿ ಯಜ್ಞೇ ಶ್ವಸಿತಾ ವರ್ತಮಾನಃ ಸ ಬೃಹಸ್ಪತಿರ್ಋತೇ ಯಜ್ಞೇ ನಿಮಿತ್ತಭೂತೇ ಸತಿ ವರಾಂಸಿ ವರಣೀಯಾನಿ ಹವೀಂಷೀಚ್ಛನ್ ವಿಭ್ವಾ ವಿಭುಃ ಸಮಭವತ್ ॥

**ಪ್ರತಿಪದಾರ್ಥ**

**ಯಃ**—ಯಾವ ಬೃಹಸ್ಪತಿಯು । **ಸರ್ಗೋ ನ**—(ಉದಕವನ್ನು) ಸೃಷ್ಟಿಸುವವನೇ ಆಗಿದ್ದಾನೆಯೋ (ಮತ್ತು) । **ದೇವಯತಾಂ**—ದೇವತೆಗಳನ್ನು ಸಹಾಯಾರ್ಥವಾಗಿ ಅಪೇಕ್ಷಿಸುವ ಯಜಮಾನರಿಗೆ । **ಅಸರ್ಜಿ**—ಫಲವನ್ನು ಸೃಷ್ಟಿಸಿ ಒದಗಿಸುತ್ತಾನೆಯೋ । **ತಂ**—ಅಂತಹ ಬೃಹಸ್ಪತಿಯನ್ನು । **ಋತ್ವಿಯಾಃ**—ವರ್ಷರ್ತುವಿಗೆ ಸಂಬಂಧಿಸಿದ । **ವಾಚಃ**—ಮಾಧ್ಯಮಿಕಾ ವಾಕ್ಕುಗಳು । **ಉಪ ಸಚಂತೇ**—ಸಮೀಪಿಸಿ ಸೇವಿಸುತ್ತವೆ । **ಸಃ ಬೃಹಸ್ಪತಿಃ**—ಅದೇ ಬೃಹಸ್ಪತಿಯು । **ಅಂಜಃ ಹಿ**—ಸಕಲವನ್ನೂ ಆವಿರ್ಭವಿಸುವಂತೆ ಮಾಡುವವನಲ್ಲವೇ ? । **ವಿಭ್ವಾ**—ವ್ಯಾಪಿಸಿರುವವನೂ । **ಮಾತರಿಶ್ವಾ**—ಅಂತರಿಕ್ಷದಲ್ಲಿ ಸಂಚರಿಸುವವನೂ ಅಥವಾ ವಾಯುಸದೃಶನೂ ಆದ ಅವನು । **ವರಾಂಸಿ**—ಅಪೇಕ್ಷಿತಗಳಾದ ವೃಷ್ಟ್ಯಾದಿ ಫಲಗಳನ್ನು ಸಂಪಾದಿಸಿಕೊಡುತ್ತಾ । **ಋತೇ**—ಉದಕದ ನಿಮಿತ್ತವಾಗಿ ॥ **ಸಮಭವತ್**—ಉತ್ಪನ್ನನಾದನು.

**ಭಾವಾರ್ಥ**

ಉದಕವನ್ನು ಸೃಷ್ಟಿಸುವವನೂ, ದೇವತೆಗಳನ್ನು ಸಹಾಯಾರ್ಥವಾಗಿ ಅಪೇಕ್ಷಿಸುವ ಯಜಮಾನನಿಗೆ ವೃಷ್ಟಿರೂಪವಾದ ಫಲವನ್ನು ಸೃಷ್ಟಿಸಿ ಒದಗಿಸುವವನೂ, ಆದ ಬೃಹಸ್ಪತಿಯನ್ನು ವರ್ಷರ್ತುವಿಗೆ ಸಂಬಂಧಿಸಿದ. ಮಾಧ್ಯಮಿಕವಾಕ್ಕುಗಳು ಸಮೀಪಿಸಿ ಸೇವಿಸುತ್ತವೆ. ಅದೇ ಬೃಹಸ್ಪತಿಯು ಸಕಲವನ್ನೂ ಆವಿರ್ಭವಿಸುವಂತೆ ಮಾಡುತ್ತಾನೆ. ಮತ್ತು ಇವನ ಪ್ರೇರಣೆಯಿಂದಲೇ ಸರ್ವತ್ರ ವ್ಯಾಪಿಸಿರುವವನೂ, ಅಂತರಿಕ್ಷದಲ್ಲಿ ಸಂಚರಿಸುವವನೂ ಆದ ವಾಯುವು ಅಪೇಕ್ಷಿತಗಳಾದ ವೃಷ್ಟ್ಯಾದಿಗಳನ್ನು ಸಂಪಾದಿಸಿಕೊಡುತ್ತಾ ಉದಕದ ನಿಮಿತ್ತವಾಗಿ ಉತ್ಪನ್ನನಾದನು.

## English Translatin

The hymns of the (rainy) season are addressed to him, who is verily the creator (of the rain), and has granted it (to the prayers) of the devout ; for that Brihaspati is the manifester (of all), the expansive wind that (dispensing) blessing has been produced for (the diffusion of water).

**। ವಿಶೇಷವಿಷಯಗಳು ।**

ಪಶುಯಾಗದಲ್ಲಿ ಬೃಹಸ್ಪತಿಯನ್ನುದ್ದೇಶಿಸಿ ವಪಾಹೋಮಮಾಡುವಾಗ ತೆಮೃತ್ವಿಯಾ ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಬೃಹಸ್ಪತೇ ಅತಿ ಯದರ್ಯೋ ಅರ್ಹಾತ್ತಮೃತ್ವಿಯಾ ಉಪ ವಾಚಃ ಸಚಂತೇ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೩-೭)

**ಋತ್ವಿಯಾ—ವರ್ಷರ್ತುಸಂಬಂಧಿನ್ಯೋ ವಾಚಃ** । ಬೃಹಸ್ಪತಿಗೂ ವೃಷ್ಟಿಗೂ ಸಂಬಂಧವಿರುವುದರಿಂದ ಇಲ್ಲಿ ವರ್ಷರ್ತುಸಂಬಂಧವಾದ ವಾಕ್ಯಗಳೆಂದು ಹೇಳಿದೆ.

**ನ**—ನ ಎಂಬ ಶಬ್ದವು ಇಲ್ಲಿ ಸಮುಚ್ಚಯಾರ್ಥದಲ್ಲಿ (ಅಪಿ ಎಂಬರ್ಥದಲ್ಲಿ) ಪ್ರಯುಕ್ತವಾಗಿದೆ. ಇದಲ್ಲದೆ— **ನೇತಿ ಪ್ರತಿಷೇಧಾರ್ಥೀಯೋ ಭಾಷಾಯಾಂ । ಉಭಯಮನ್ವಧ್ಯಾಯಂ** । ಎಂದರೆ ಬಳಕೆಯಲ್ಲಿರುವ ಸಾಧಾರಣ

ಛಾಷೆಯಲ್ಲಿ ನ ಎಂಬ ಶಬ್ದವು ಪ್ರತಿಷೇದಾರ್ಥಕವು. (ಇಲ್ಲವೆಂಬರ್ಥವನ್ನು ಸೂಚಿಸುವುದು) ಛಂದಸ್ಸಿನಲ್ಲಿ ಎರಡು ವಿಧ ಎಂದರೆ ನಿಷೇಧಾರ್ಥವನ್ನೂ ಉಪಮಾರ್ಥವನ್ನೂ ಸೂಚಿಸುವುದು ಎಂದು ಯಾಸ್ಕರ ನಿರ್ವಚನವಿದೆ. (ನಿ. ೧-೪)

**ಮಾತರಿಶ್ವಾ—ಸರ್ವಸ್ಯ ಜಗತಃ ನಿರ್ಮಾತರಿ ಅಂತರಿಕ್ಷೇ ಶ್ವಸನ್ ವರ್ತಮಾನಃ** | ಸಮಸ್ತ ಜಗತ್ತಿಗೂ ನಿರ್ಮಾತೃವಾದ ಅಂತರಿಕ್ಷದಲ್ಲಿ ಇರುವ ಎಂದು ಮಾತರಿಶ್ವಾ ಎಂಬ ಶಬ್ದದ ನಿರ್ವಚನಾರ್ಥವು. ಈ ಶಬ್ದಕ್ಕೆ ಅಗ್ನಿ ವಾಯು ಇತ್ಯಾದಿ ದೇವತೆಗಳೆಂದು ಅರ್ಥವಾಗಬಹುದು. ಇಲ್ಲಿ ಸಾಯಣರು ವಾಯುಸದೃಶನಾದ ಎಂದರೆ ಅಂತರಿಕ್ಷದಲ್ಲಿ ವ್ಯಾಪಿಸಿರುವ ಎಂದು ಅರ್ಥವಿವರಣೆಮಾಡಿರುವರು.

ವ್ಯಾಕರಣಪ್ರಕ್ರಿಯಾ

**ಋತ್ವಿಯಾಃ—ಛಂದಸಿ ಘಸ್** (ಪಾ. ಸೂ. ೫-೧-೧೦೬) ಎಂಬುದರಿಂದ ಋತು ಶಬ್ದಕ್ಕೆ ಘಸ್ ಪ್ರತ್ಯಯ. **ಆಯನೇಯೀನೀ** — (ಪಾ. ಸೂ. ೭-೧-೨) ಎಂಬುದರಿಂದ ಅದಕ್ಕೆ ಇಯಾದೇಶ. **ಸಿತಿಚ** (ಪಾ. ಸೂ. ೧-೪-೧೬) ಎಂಬುದರಿಂದ ಪ್ರತ್ಯಯ ನಿತ್ತಾದುದರಿಂದ ಭಸಂಜ್ಞೆಗೆ ಅಪವಾದವಾಗಿ ಪದ ಸಂಜ್ಞಾ ಬರುವುದರಿಂದ **ಓರ್ಗುಣಃ** (ಪಾ. ಸೂ. ೬-೪-೧೪೬) ಎಂಬುದರಿಂದ ಉಕಾರಕ್ಕೆ ಗುಣ ಬರುವುದಿಲ್ಲ. **ಯಣಾದೇಶ.** ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಸಚಂತೇ**—ಷಚ ಸಮವಾಯೇ ಧಾತು. ಆದಿಗೆ ಸತ್ವ. ಲಟ್ ಪ್ರಥಮಪುರುಷ ಬಹುವಚನಾಂತರೂಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದೇವಯತಾಮ್**—ದೇವಾನ್ ಆತ್ಮನಃ ಇಚ್ಛಂತಃ ದೇವಯಂತಃ ತೇಷಾಮ್. **ಸುಪ ಆತ್ಮನಃ ಕ್ಯಚ್** ಎಂಬುದರಿಂದ ಕ್ಯಚ್ ಬಂದಾಗ ಅದರ ಮೇಲೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಷಷ್ಠೀ ಬಹುವಚನಾಂತರೂಪ ನುಮ್ ರಹಿತವಾದ ಶತೃವಿನ ಪರದಲ್ಲಿ ಅಜಾದಿ ವಿಭಕ್ತಿ ಬಂದುದರಿಂದ **ಶತುರನುನೋ ನದ್ಯಜಾದೀ** (ಪಾ. ಸೂ ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಅಸರ್ಜಿ**—ಸೃಜ ವಿಸರ್ಗೇ. ಧಾತು. ಕರ್ಮಣಿಯಲ್ಲಿ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಚಿಣ್ ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. **ಚಿಣೋಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಚಿಣಿನಪ-ರದಲ್ಲಿ ಪ್ರತ್ಯಯಕ್ಕೆ ಲುಕ್. ಅಂಗಕ್ಕೆ ಅಡಾಗಮ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ ಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಅಞ್ಜಃ**—ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು. ಧಾತು. ಸರ್ವಧಾತು ನಿಬಂಧನವಾದ ಅಚ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವರಾಂಸಿ**—ವೃಞ್ ವರಣೇ ಧಾತು ಹಿಂದಿನಂತೆ ಅಸುನ್ ಪ್ರತ್ಯಯ ಬಂದಾಗ ಅದನ್ನು ನಿಮಿತ್ತೀಕರಿಸಿ **ಸಾರ್ವಧಾತುಕಾ**—ಎಂಬುದರಿಂದ ಧಾತುವಿನ ಋಕಾರಕ್ಕೆ ಗುಣ. ದ್ವಿತೀಯಾ ಬಹುವಚನಾಂತರೂಪ.

ವಿಭ್ವಾ—ಭೂ ಸತ್ತಾಯಾಂ ಧಾತು. **ವಿಪ್ರಸಂಭ್ಯೋ ಡ್ವಸಂಜ್ಞಾಯಾಮ್** (ಪಾ. ಸೂ. ೩-೨-೧೮೦) ಎಂಬುದರಿಂದ ವಿ ಉಪಪದವಾಗಿರುವಾಗ ಡು ಪ್ರತ್ಯಯ. ಡಿತ್ತಾದುದರಿಂದ ಟಿಗೆ ಲೋಪ. ವಿಭು ಎಂದು ರೂಪ ವಾಗುತ್ತದೆ. ಸು ಪರವಾದಾಗ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಆದಕ್ಕೆ ಆಕಾರಾದೇಶ. ಆಗ **ಓಃ ಸುಪಿ** (ಪಾ ಸೂ ೬-೪-೮೩) ಎಂಬುದರಿಂದ ಯಣಾದೇಶ ಪ್ರಾಪ್ತವಾದರೆ ಅದಕ್ಕೆ **ನಭೂ ಸುಧಿಯೋಃ** (ಪಾ. ಸೂ. ೬-೪-೮೫) ಎಂಬುದರಿಂದ ನಿಷೇಧ. ಬರುತ್ತದೆ. **ಛಂದಸ್ಯುಭಯಥಾ** (ಪಾ. ಸೂ. ೬-೪-೮೬) ಎಂಬುದರಿಂದ ಪುನಃ ಯಣಾದೇಶ. ವ್ಯತ್ಯಯದಿಂದ ಆದ್ಯುದಾತ್ತಸ್ವರ. ಅಥವಾ ವಿ ಪೂರ್ವಕವಾದ ಭೂ ಧಾತುವಿಗೆ ಔಣಾದಿಕ ಡುನ್ ಪ್ರತ್ಯಯ. ಇದು ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದ ರಿಂದ ಆದ್ಯುದಾತ್ತಸ್ವರ ಬರುತ್ತದೆ.

---

ಸಂಹಿತಾಪಾಠಃ

ಉಪಸ್ತುತಿಂ ನಮಸ ಉದ್ಯತಿಂ ಚ ಶ್ಲೋಕಂ ಯಂಸತ್ಸವಿತೇವ ಪ್ರ ಬಾಹೂ ।
ಅಸ್ಯ ಕ್ರತ್ವಾಹನ್ಯೋ೩ಯೋ ಅಸ್ತಿ ಮೃಗೋ ನ ಭೀಮೋ ಅರಕ್ಷಸಸ್ತು-ವಿಷ್ಮಾನ್ ॥ ೩ ॥

ಪದಪಾಠ

ಉಪಽಸ್ತುತಿಂ । ನಮಸಃ । ಉತ್ಽಯತಿಂ । ಚ । ಶ್ಲೋಕಂ । ಯಂಸತ್ । ಸವಿತಾಽಇವ । ಪ್ರ । ಬಾಹೂ ಇತಿ ।

ಅಸ್ಯ । ಕ್ರತ್ವಾ । ಅಹನ್ಯಃ । ಯಃ । ಅಸ್ತಿ । ಮೃಗಃ । ನ । ಭೀಮಃ । ಅರಕ್ಷಸಃ । ತುವಿಷ್ಮಾನ್ ॥ ೩ ॥

ಸಾಯಣಭಾಷ್ಯಂ

ಅಯಂ ಬೃಹಸ್ಪತಿರುಪಸ್ತುತಿಂ ಯಜಮಾನೇನೋಪೇತ್ಯ ಕ್ರಿಯಮಾಣಾಂ ಸ್ತುತಿಂ ನಮಸೋ ಹವಿರ್ಲಕ್ಷಣಸ್ಯಾನ್ನಸ್ಯೋದ್ಯತಿಮುದ್ಧಾರಂ ಚ ಶ್ಲೋಕಮನ್ಯೋ ಯೋ ಮಂತ್ರವಿಶೇಷೋಽಸ್ತಿ ತಂ ಚ ಪ್ರ ಯಂಸತ್ । ಪ್ರಕರ್ಷೇಣ ಯತತೇ ಸ್ವೀಕರ್ತುಂ । ಯಜಮಾನೋ ವಾ ತತ್ಸರ್ವಂ ಪ್ರಯಚ್ಛತ್ಯಸ್ಮೈ । ತತ್ರ ದೃಷ್ಟಾಂತಃ । ಸವಿತೇವ ಸೂರ್ಯ ಇವ ಸ ಯಥಾ ಸ್ತೋತ್ರಾದಿಕಂ ಸ್ವೀಕರೋತಿ ತದ್ವತ್ । ಯಜ-ಮಾನಪ್ರದಾನಪಕ್ಷೇ ಸವಿತಾ ಸರ್ವಸ್ಯ ಪ್ರಸವಿತಾ ಸೂರ್ಯ ಇವ । ಸ ಯಥಾ ಬಾಹುಭ್ಯಃ ಪ್ರಕಾಶಾದಿ ಪ್ರಯಚ್ಛತಿ ತದ್ವದ್ಬಾಹೂ ಬಾಹುಭ್ಯಾಂ ಯಜಮಾನೋಽಪೀತ್ಯರ್ಥಃ । ತಸ್ಯ ಮಹತ್ತ್ವಮಾಹ । ಅರಕ್ಷಸಃ

ಸ್ವವಿರೋಧಿರಕ್ಷೋರಹಿತಸ್ಯಾಸ್ಯ ಬೃಹಸ್ಪತೇಃ ಕ್ರತ್ವಾ ಕರ್ಮಣಾ ಸಾಮರ್ಥ್ಯೇನಾಹನ್ಯೋಽಹ್ನಿ ಸಾಧುರ್ಯಃ ಸೂರ್ಯೋಽಸ್ತಿಸ ಭೀಮೋ ನ ಮೃಗ ಇವ ಭಯಜನಕಃ ಸಿಂಹಾದಿರಿವ ಭೀಮೋ ಭಯಹೇತುಸ್ತುವಿಷ್ಮಾನ್ ಬಲವಾನ್ ಪರಿಭ್ರಮತೀತಿ ಶೇಷಃ । ಯಸ್ಯ ಮಾಹಾತ್ಮ್ಯೇನ ಮಂತ್ರಾಭಿಮಾನಿನೋ ಬೃಹಸ್ಪತೇಃ ಸಾಮರ್ಥ್ಯಾನ್ಮಂದೇಹಾದ್ಯಸುರಾಣ್ಹಾತ್ವಾತಿತೇಜಸ್ವೀ ಭವತಿ ತಾದೃಶೋ ಮಹಾನುಭಾವೋ ಯಜಮಾನದತ್ತಂ ಹವಿರಾದಿಕಂ ಸ್ವೀಕರೋತೀತ್ಯರ್ಥಃ ॥

ಪ್ರತಿಪದಾರ್ಥ

ಸವಿತಾ—ಸೂರ್ಯನು । ಪ್ರ ಬಾಹೂ ಇವ—ತನ್ನ ಹಸ್ತ (ಕಿರಣ)ಗಳನ್ನು ಪ್ರಸರಿಸುವಂತೆ । ಅಯಂ—ಈ ಬೃಹಸ್ಪತಿಯು । ಉಪಸ್ತುತಿಂ—(ಯಜಮಾನನಿಂದ) ಪಠಿತವಾದ ಸ್ತುತಿಯನ್ನೂ । ನಮಸಃ—ಹವೀರೂಪದ ಅನ್ನದ । ಉದ್ಯಂತಿ—ಅರ್ಪಣೆಯನ್ನೂ । ಶ್ಲೋಕಂ—ಇತರ ವಿಧವಾದ ಮಂತ್ರವಿಶೇಷಗಳನ್ನೂ । ಪ್ರಯಂಸತ್—ಆತ್ಮೇಚ್ಛೆಯಿಂದ ಸ್ವೀಕರಿಸಲು ಪ್ರಯತ್ನಿಸುತ್ತಾನೆ. ಅಥವಾ ಸೂರ್ಯನು ಕಿರಣಗಳನ್ನು ಪ್ರಸರಿಸಿ ಪ್ರಕಾಶವನ್ನು ಕೊಡುವಂತೆ ಯಜಮಾನನೂ ಸಹ ತನ್ನ ಬಾಹುಗಳನ್ನು ಪ್ರಸರಿಸಿ ಸ್ತುತ್ಯಾದಿಗಳನ್ನು ಅರ್ಪಿಸುತ್ತಾನೆ । ಅರಕ್ಷಸಃ—ತನಗೆ ವಿರೋಧಿಗಳಾದ ರಾಕ್ಷಸರೇ ಇಲ್ಲದಂತೆ ಮಾಡಿರುವ । ಅಸ್ಯ—ಈ ಬೃಹಸ್ಪತಿಯು । ಕ್ರತ್ವಾ—ಸಾಮರ್ಥ್ಯದಿಂದ ಅಹನ್ಯಃ—ಅಹಸ್ಸನ್ನುಂಟುಮಾಡಿ ಪ್ರಕಾಶಿಸತಕ್ಕ । ಯಃ ಅಸ್ತಿ—ಯಾವ ಸೂರ್ಯನಿದ್ದಾನೆಯೋ । (ಸಃ—ಅವನು) । ಮೃಗೋ ನ—ಕ್ರೂರಮೃಗದಂತೆ । ಭೀಮಃ—ಭಯಂಕರನಾಗಿಯೂ । ತುವಿಷ್ಮಾನ್—ಬಲಶಾಲಿಯಾಗಿಯೂ ಆಗಿದ್ದಾನೆ ।

ಭಾವಾರ್ಥ

ಸೂರ್ಯನು ತನ್ನ ಕಿರಣಗಳನ್ನು ಪ್ರಸರಿಸುವಂತೆ ಈ ಬೃಹಸ್ಪತಿಯು ಯಜಮಾನನಿಂದ ಪಠಿತವಾದ ಸ್ತುತಿಯನ್ನೂ ಅವನಿಂದ ಅರ್ಪಿತವಾದ ಅನ್ನವನ್ನೂ, ಇತರ ಮಂತ್ರವಿಶೇಷಗಳನ್ನೂ ಆತ್ಮೇಚ್ಛೆಯಿಂದ ಸ್ವೀಕರಿಸಲು ಪ್ರಯತ್ನಿಸುತ್ತಾನೆ. ತನಗೆ ವಿರೋಧಿಗಳಾದ ರಾಕ್ಷಸರೇ ಇಲ್ಲದಂತೆ ಮಾಡಿರುವ ಈ ಬೃಹಸ್ಪತಿಯ ಸಾಮರ್ಥ್ಯದಿಂದ ಅಹಸ್ಸನ್ನುಂಟುಮಾಡಿ ಪ್ರಕಾಶಿಸತಕ್ಕ ಸೂರ್ಯನು ಕ್ರೂರಮೃಗದಂತೆ ಭಯಂಕರನಾಗಿಯೂ ಬಲಶಾಲಿಯಾಗಿಯೂ ಆಗಿದ್ದಾನೆ.

English Tranlation

He is ready (to accept) the offered praise, the presentation of the homage· the hymn, as the sun (is ready to put forth) his rays ; by the acts of him whom the Rakshasas (oppose not), the daily (revolving sun) exists, and he is strong as a fearful beast of prey.

ವಿಶೇಷವಿಷಯಗಳು

ಈ ಋಕ್ಕಿನ ಪೂರ್ವಾರ್ಧಕ್ಕೆ ಸಾಯಣರು ಎರಡು ವಿಧವಾದ ಅರ್ಥವನ್ನು ಹೇಳಿರುವರು—ಈ ಬೃಹಸ್ಪತಿಯು, ಯಜಮಾನನು ಸಮೀಪದಲ್ಲಿ ಕುಳಿತುಮಾಡುವ ಸ್ತೋತ್ರವನ್ನು ಕೇಳಿ, ಅವನು ತನ್ನ ಕೈಗಳನ್ನು ನೀಡಿ ಅರ್ಪಿಸುವ ಹವಿರ್ಲಕ್ಷಣ ರೂಪವಾದ ಅನ್ನವನ್ನೂ, ಸ್ತುತಿರೂಪವಾದ ಮಂತ್ರವನ್ನೂ, ಸೂರ್ಯನು ಸ್ತೋತ್ರಾದಿಗಳನ್ನು

ಸ್ವೀಕರಿಸುವಂತೆ ಸ್ವೀಕರಿಸುವವನು ಎಂದು ಒಂದು ವಿಧವಾದ ಅರ್ಥವು. ಅಥವಾ ಈ ಯಜಮಾನನು ಬೃಹಸ್ಪತಿಯನ್ನು ಸ್ತೋತ್ರಮಾಡುತ್ತಾ ಸರ್ವಜಗತ್ತಿಗೂ ಕಾರಣನಾದ ಸೂರ್ಯನು ಬಾಹುರೂಪವಾದ ತನ್ನ ಕಿರಣಗಳಿಂದ ಪ್ರಕಾಶಾದಿ ಗಳನ್ನು (ಬೆಳಕು, ಉಷ್ಣತ್ವ) ಲೋಕದ ಜನರಿಗೆ ಕೊಡುವಂತೆ ಈ ಯಜಮಾನನೂ ಹವಿರಾದಿಅನ್ನವನ್ನೂ ಇತ ರಸ್ತುತಿರೂಪವಾದ ಮಂತ್ರಗಳನ್ನು ಬೃಹಸ್ಪತಿಗೆ ಕೈ ನೀಡಿ ಅರ್ಪಿಸುತ್ತಾನೆ ಎಂದು ಇನ್ನೊಂದು ವಿಧವಾದ ಅರ್ಥವು. ಈ ಎರಡು ವಿಧವಾದ ಅರ್ಥಗಳಿಗೂ ಇಲ್ಲಿ ಅವಕಾಶವಿರುವುದು.

ಉತ್ತರಾರ್ಧದಲ್ಲಿ ಬೃಹಸ್ಪತಿಯ ಸಾಮರ್ಥ್ಯವನ್ನೂ, ಪರಾಕ್ರಮವನ್ನೂ ವರ್ಣಿಸಿದೆ. **ಅರಕ್ಷಸಃ**–ತನಗೆ ವಿರೋಧಿಯಾದ ರಾಕ್ಷಸರಿಲ್ಲದವನು ಎಂದರೆ ರಾಕ್ಷಸರಲ್ಲಿ ಯಾರೂ ಈ ಬೃಹಸ್ಪತಿಯನ್ನು ಎದುರಿಸಲು ಶಕ್ತಿಸಾಮರ್ಥ್ಯ ಗಳನ್ನು ಪಡೆದಿರುವುದಿಲ್ಲ ; **ತುವಿಷ್ಮಾನ್**—ಅತ್ಯಂತ ಬಲಶಾಲಿಯು ; **ಮೃಗೋ ನ ಭೀಮಃ**--ಸಿಂಹಾದಿಮೃಗದಂತೆ ಭಯಂಕರ ಪ್ರತಾಪವುಳ್ಳವನು ಎಂದರ್ಥವು. ಅತ್ಯಂತ ಪ್ರರಾಕ್ರಮವುಳ್ಳವನಿಗೆ **ಮೃಗೋ ನ ಭೀಮಃ** ದೃಷ್ಟಾಂತ ವನ್ನು ಹೇಳುವುದು ಋಗ್ವೇದದಲ್ಲಿ ಅನೇಕಕಡೆ ಇದೆ—

**ಪ್ರ ತದ್ವಿಷ್ಣುಸ್ತವತೇ ವೀರ್ಯೇಣ ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ ।**

(ಋ. ಸಂ. ೧–೧೫೪–೨)

**ಮೃಗೋ ನ ಹಸ್ತೀ ತವಿಷೀಮುಷಾಣಃ ಸಿಂಹೋ ನ ಭೀಮಃ ಆಯುಧಾನಿ ಬಿಭ್ರತ್ ॥**

(ಋ. ಸಂ. ೪–೧೬-೧೪)

**ಅಶ್ವೋ ನ ಕ್ರದೋ ವೃಷಭಿರ್ಯುಜಾನಃ ಸಿಂಹೋ ನ ಭೀಮೋ ಮನಸೋ ಜವೀಯಾನ್ ।**

(ಋ. ಸಂ. ೯-೯೭–೨೮)

**ಆಶುಃ ಶಿಶಾನೋ ವೃಷಭೋ ನ ಭೀಮೋ ಘನಾಘನಃ ಕ್ಷೋಭಣಶ್ಚರ್ಷಣೀನಾಂ ॥**

(ಋ ಸಂ. ೧೦-೧೦೩–೧)

ಇತ್ಯಾದಿ ಋಕ್ಕುಗಳಲ್ಲಿ ಭೀಮಶಬ್ದವು ಭಯಂಕರಪರಾಕ್ರಮವೆಂಬರ್ಥದಲ್ಲಿ ಸಿಂಹ ವೃಷಭ ಮೊದಲಾದ ಬಲವುಳ್ಳ ಮೃಗಗಳ ಉಪಮಾನವನ್ನು ಕೊಟ್ಟು ಪ್ರಯೋಗಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ನಮಸಃ**—ಣಮು ಪ್ರಹ್ವತ್ವೇ ಶಬ್ದೇ ಚ. ಧಾತು. **ಣೋನಃ** ಎಂಬುದರಿಂದ ಆದಿಗೆ ನತ್ವ. ಔಣಾದಿಕ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಯಂಸತ್**—ಯಮ ಉಪರಮೇ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ **ಸಿಬ್ಬಹುಲಂ ಲೇಟಿ** (ವಾ. ಸೂ. ೩-೧–೩೪) ಎಂಬುದರಿಂದ ಸಿಪ್. ತಿಙ್ಙತಿಙಃ ಎಂಬುದರಿಂದ ನಿಘಾತಸ್ವರ.

**ಬಾಹೂ**—ವ್ಯತ್ಯಯದಿಂದ ತೃತೀಯಾ ದ್ವಿವಚನಕ್ಕೆ ಪ್ರಥಮಾದ್ವಿವಚನ ಆದೇಶ ಬಂದಿರುತ್ತದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತ.

**ಅಹನ್ಯಃ**—ಅಹ್ನಿ ಭವಃ (ಹಗಲಿನಲ್ಲಿರುವವನು) ಅಹನ್ಯ. ಭಾವಾರ್ಥದಲ್ಲಿ ಯತ್ ಪ್ರತ್ಯಯ. ತಿತ್ತಾ ದುದರಿಂದ ತಿತ್ಸ್ವರಿತಮ್ (ಪಾ ಸೂ ೬–೧–೧೮೫) ಎಂಬುದರಿಂದ ಇದಕ್ಕೆ ಸ್ವರಿತಸ್ವರ ಬರುತ್ತದೆ.

**ಅಸ್ತಿ**—ಯಃ ಎಂಬುದು ಹಿಂದೆ ಇರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಭೀಮಃ**—ಞಿಭೀ ಭಯೇ ಧಾತು. **ಭಿಯಃ ಷುಗ್ವಾ** (ಉ ಸೂ ೧-೧೪೫) ಎಂಬುದರಿಂದ ಮಕ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತ. ಭೀಮಃ ಬಿಭ್ಯತ್ಯಸ್ಮಾತ್ (ನಿರು. ೧-೨೦) ಎಂದು ಯಾಸ್ಕರು ವಿವರಿಸಿರುತ್ತಾರೆ.

---

ಸಂಹಿತಾಪಾಠಃ

ಅಸ್ಯ ಶ್ಲೋಕೋ ದಿವೀಯತೇ ಪೃಥಿವ್ಯಾಮತ್ಯೋ ನ ಯಂಸದ್ಯಕ್ಷಭೃದ್ವಿಚೇತಾಃ ।
ಮೃಗಾಣಾಂ ನ ಹೇತಯೋ ಯಂತಿ ಚೇಮಾ ಬೃಹಸ್ಪತೇರಹಿಮಾಯಾँ ಅಭಿ ದ್ಯೂನ್ ॥ ೪ ॥

ಪದಪಾಠ

ಅಸ್ಯ । ಶ್ಲೋಕಃ । ದಿವಿ । ಈಯತೇ । ಪೃಥಿವ್ಯಾಂ । ಅತ್ಯಃ । ನ । ಯಂಸತ್ । ಯಕ್ಷಽಭೃತ್ । ವಿಽಚೇತಾಃ ।
ಮೃಗಾಣಾಂ । ನ । ಹೇತಯಃ । ಯಂತಿ । ಚ । ಇಮಾಃ । ಬೃಹಸ್ಪತೇಃ । ಅಹಿಽಮಾಯಾನ್ । ಅಭಿ । ದ್ಯೂನ್ ॥ ೪ ॥

ಸಾಯಣಭಾಷ್ಯಂ

ಅಸ್ಯ ಬೃಹಸ್ಪತೇಃ ಶ್ಲೋಕಃ ಸ್ತುತ್ಯಾತ್ಮಿಕಾ ಕೀರ್ತಿರ್ಗರ್ಜಿತವಾಗ್ವಾ ದಿವಿ ದ್ಯೋತಮಾನೇ ದ್ಯುಲೋಕೇ ಪೃಥಿವ್ಯಾಂ ಚೇಯತೇ । ಗಚ್ಛತಿ । ವ್ಯಾಪ್ನೋತಿ । ಯೋ ಬೃಹಸ್ಪತಿರತ್ಯೋ ನಾತನಶೀಲ ಆದಿತ್ಯ ಇವ ಯಕ್ಷಭೃತ್ ಪೂಜಿತಂ ಹವಿರಾದಿಕಂ ದಧಾನೋ ವಿಚೇತಾ ವಿವಿಧಂ ಚೇತಯಿತಾ ಪ್ರಾಣಿನಾಂ ವಿಶಿಷ್ಟಪ್ರಜ್ಞಾಯುಕ್ತೋ ವಾ ಯಂಸತ್ ನಿಯಚ್ಛತಿ ಫಲಂ । ಕಿಂಚ ಮೃಗಾಣಾಂ ಹಂತುಮನ್ವಿಷ್ಯತಾಂ ಹೇತಯೋ ನಾಯುಧಾನೀವಾಸ್ಯ ಬೃಹಸ್ಪತೇರಿಮಾ ಹೇತಯೋ ಹಿಂಸ್ರಾಣ್ಯಾಯುಧಾನಿ ಯಂತಿ । ಗಚ್ಛಂತಿ ಚ ॥ ಚವಾಯೋಗೇ ಪ್ರಥಮೇತಿ ನ ನಿಘಾತಃ ॥ ಅಹಿಮಾಯಾನಾಗತ್ಯ ಹಂತ್ರ್ಯೋಽಂತರಿಕ್ಷ-ಚಾರಿಣ್ಯೋ ವಾ ಮಾಯಾ ಯೇಷಾಂ ವೃತ್ರಾದೀನಾಂ ತಾನಸುರಾನ್ ದ್ಯೂನ್ ದಿವಸಾನ್ ॥ ಕಾಲಾ-ಧ್ವನೋಃ । ಪಾ. ೨-೩-೫ । ಇತಿ ದ್ವಿತೀಯಾ ॥ ತಾನ್ಯಾಯುಧಾನ್ಯಭಿ ಲಕ್ಷಯಂತಿ ಚ । ಉಪಸರ್ಗಶ್ರುತೇ-ರ್ಯೋಗ್ಯಕ್ರಿಯಾಧ್ಯಾಹಾರಃ ॥

### ಪ್ರತಿಪದಾರ್ಥ

**ಅಸ್ಯ**—ಈ ಬೃಹಸ್ಪತಿಯ | **ಶ್ಲೋಕಃ**—ಸ್ತುತ್ಯಾತ್ಮಕವಾದ ಕೀರ್ತಿಯು | **ದಿವಿ**—ಪ್ರಕಾಶಮಾನವಾದ ದ್ಯುಲೋಕದಲ್ಲಿಯೂ | **ಪೃಥಿವ್ಯಾಂ**—ಪೃಥಿವಿಯಲ್ಲಿಯೂ | **ಈಯತೇ**—ವ್ಯಾಪಿಸುತ್ತದೆ (ಇವನು) | **ಅತ್ಯೋ ನ**—(ಶಾಶ್ವತವಾಗಿ) ಸಂಚರಿಸತಕ್ಕ ಆದಿತ್ಯನಂತೆ | **ಯಕ್ಷಭೃತ್**—ಪೂಜ್ಯವಾದ ಹವಿಸ್ಸುಗಳನ್ನು ವಹಿಸಿಯೂ | **ವಿಚೇತಾಃ**—ಪ್ರಜ್ಞಾಯುಕ್ತನಾಗಿಯೂ ಅಥವಾ ಪ್ರಾಣಿಗಳನ್ನು ಚೈತನ್ಯಯುಕ್ತವಾಗಿ ಮಾಡುತ್ತಲೂ | **ಯಂಸತ್**-ಫಲವನ್ನು ಕೊಡುತ್ತಾನೆ | **ಮೃಗಾಣಾಂ**—ಮೃಗಗಳನ್ನು ಬೇಟೆಯಾಡುವ ವ್ಯಾಧರ | **ಹೇತಯಃ ನ**—(ಹರಿತವಾದ) ಆಯುಧಗಳಂತೆ | ಬೃಹಸ್ಪತೇಃ—ಬೃಹಸ್ಪತಿಯ | **ಇಮಾಃ**—ಕ್ರೂರವಾದ ಆಯುಧಗಳು | **ದ್ಯೂನ್**—ಪ್ರತಿ ದಿನವೂ | **ಅಹಿಮಾಯಾನ್ ಅಭಿ**—ವಂಚಕರಾದ ಅಸುರರನ್ನು ಲಕ್ಷಿಸಿ | **ಯಂತಿ ಚ**—ಅಟ್ಟಿಸಿಕೊಂಡೂ ಹೋಗುತ್ತವೆ.

### ಭಾವಾರ್ಥ

ಬೃಹಸ್ಪತಿಯ ಸ್ತುತ್ಯಾತ್ಮಕವಾದ ಕೀರ್ತಿಯು ಪ್ರಕಾಶಮಾನವಾದ ದ್ಯುಲೋಕದಲ್ಲಿಯೂ, ಪೃಥಿವಿಯಲ್ಲಿಯೂ ವ್ಯಾಪಿಸುತ್ತದೆ. ಶಾಶ್ವತವಾಗಿ ಸಂಚರಿಸತಕ್ಕ ಆದಿತ್ಯನಂತೆ ಇವನು ಪೂಜ್ಯವಾದ ಹವಿಸ್ಸುಗಳನ್ನು ವಹಿಸಿಯೂ, ಪ್ರಜ್ಞಾಯುಕ್ತನಾಗಿಯೂ ಫಲಗಳನ್ನು ಕೊಡುತ್ತಾನೆ. ಮೃಗಗಳನ್ನು ಬೇಟೆಯಾಡುವ ವ್ಯಾಧರ ಹರಿತವಾದ ಆಯುಧಗಳಂತೆ ಬೃಹಸ್ಪತಿಯ ಕ್ರೂರವಾದ ಆಯುಧಗಳು ಪ್ರತಿದಿನವೂ ವಂಚಕರಾದ ಅಸುರರನ್ನು ಲಕ್ಷಿಸಿ ಅಟ್ಟಿಸಿ ಕೊಂಡು ಹೋಗಿ ಹಿಂಸಿಸುತ್ತವೆ.

### English Translation

The glory of this Brihaspati spreads through heaven and earth like the sun : receiving worship, and giving intelligence, he bestows (the rewards of sacrifice) ; like the weapons of the hunters, so these (weapons) of Brihaspati fall daily upon the workers of guile.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಬೃಹಸ್ಪತಿಯ ಕೀರ್ತಿಯು ಭೂಮಿಯಲ್ಲಿಯೂ ಸ್ವರ್ಗಲೋಕದಲ್ಲಿಯೂ ವ್ಯಾಪಿಸಿರುವುದನ್ನೂ ಹವಿಸ್ಸನ್ನು ವಹಿಸುವುದನ್ನೂ, ಶತ್ರುಗಳು, ಅಸುರರು ಮೊದಲಾದ ದುಷ್ಟರನ್ನು ತನ್ನ ಆಯುಧಗಳಿಂದ ನಾಶಮಾಡುವುದನ್ನೂ ವರ್ಣಿಸಿದೆ. ಈ ವಿಷಯದಲ್ಲಿ ೬ನೆಯ ಮಂಡಲದ ೭೩ನೆಯ ಸೂಕ್ತವು ಬೃಹಸ್ಪತಿಯ ಮೇಲೆಹೇಳಿದ ಗುಣಗಳನ್ನು ಬಹು ಚೆನ್ನಾಗಿ ವರ್ಣಿಸಿರುವುದನ್ನು ಉದಾಹರಣೆಗಾಗಿ ಇಲ್ಲಿ ಕೊಟ್ಟಿರುತ್ತೇನೆ.—

**ಯೋ ಅದ್ರಿಭಿತ್ ಪ್ರಥಮಜಾ ಋತಾವಾ ಬೃಹಸ್ಪತಿರಾಂಗಿರಸೋ ಹವಿಷ್ಮಾನ್ |**
**ದ್ವಿಬರ್ಹಜ್ಮಾ ಪ್ರಾಘರ್ಮಸತ್ ಪಿತಾ ನ ಆ ರೋದಸೀ ವೃಷಭೋ ರೋರವೀತಿ ||**

(ಋ. ಸಂ. ೬-೭೩-೧)

ಈ ಬೃಹಸ್ಪತಿಯು ಪರ್ವತಗಳನ್ನು ಒಡೆದು ಪುಡಿಪುಡಿ ಮಾಡುತ್ತಾನೆ; ಪ್ರಜಾಪತಿಗೆ (ಬ್ರಹ್ಮನಿಗೆ) ಮೊದಲು ಹುಟ್ಟಿದವನು; ಸತ್ಯವ್ರತನು; ಅಂಗಿರಾಋಷಿಯ ವಂಶಸ್ಥನು; ಹವಿಸ್ಸನ್ನು ಸ್ವೀಕರಿಸುವವನು ಅಥವಾ ದೇವತೆಗಳಿಗೆ ಒಯ್ಯುವವನು; ಎರಡು (ಭೂಮಿ, ಸ್ವರ್ಗಗಳೆಂಬ) ಲೋಕಗಳನ್ನು ದಾಟಬಲ್ಲವನು; ಪ್ರಕಾಶಮಾನವಾದ ಜ್ಯೋತಿಃಸ್ಥಾನದಲ್ಲಿರುವವನು; ನಮಗೆ ತಂದೆಯಂತಿರುವವನು; ಮಳೆಯನ್ನು ಸುರಿಸುವವನು; ದ್ಯಾವಾಪೃಥಿವಿಗಳಲ್ಲಿ (ಗೂಳಿಯಂತೆ) ಗರ್ಜನೆ ಮಾಡುವವನು.

> ಜನಾಯ ಚಿದ್ಯ ಈವತ ಉ ಲೋಕಂ ಬೃಹಸ್ಪತಿರ್ದೇವಹೂತೌ ಚಕಾರ ।
>
> ಘ್ನನ್ ವೃತ್ರಾಣಿ ವಿ ಪುರೋ ದರ್ದರೀತಿ ಜಯಞ್ಛತ್ರೂಁರಮಿತ್ರಾನ್ ಪೃತ್ಸು ಸಾಹನ್ ॥
>
> (ಋ. ಸಂ. ೬-೭೩-೨)

ಈ ಬೃಹಸ್ಪತಿಯು ತನ್ನನ್ನು ದೇವತೆಯಂತೆ ಆಹ್ವಾನಮಾಡಿ ಸ್ತೋತ್ರಮಾಡುವ ಯಜಮಾನನಿಗೆ (ಪುರುಷನಿಗೆ) ಉತ್ತಮ ಲೋಕವನ್ನು ಸಿದ್ಧಪಡಿಸುವನು; ವಿಘ್ನಗಳನ್ನೂ, ಶತ್ರುಗಳನ್ನೂ ನಾಶಮಾಡುವವನು. ಮಿತ್ರರಲ್ಲದ ಅಸುರಾದಿಗಳನ್ನು ಯುದ್ಧದಲ್ಲಿ ಗೆದ್ದು ಅವರ ಪಟ್ಟಣಗಳನ್ನು ಧ್ವಂಸಮಾಡುವವನು.

> ಬೃಹಸ್ಪತಿಃ ಸಮಜಯದ್ವಸೂನಿ ಮಹೋ ವ್ರಜಾನ್ ಗೋಮತೋ ದೇವ ಏಷಃ ।
>
> ಅಪಃ ಸಿಷಾಸನ್ತ್ಸ್ವ೧ ರಪ್ರತೀತೋ ಬೃಹಸ್ಪತಿರ್ಹಂತ್ಯಮಿತ್ರಮರ್ಕೈಃ ॥
>
> (ಋ. ಸಂ. ೬-೭೩-೩)

ಈ ಬೃಹಸ್ಪತಿಯು ಶತ್ರುಗಳ ಧನಗಳನ್ನು ಗೆದ್ದನು; ಮತ್ತು ವಿಸ್ತಾರವಾದ ಹುಲ್ಲುಗಾವಲುಗಳನ್ನೂ ದನಕರುಗಳನ್ನೂ ವಶಪಡಿಸಿಕೊಂಡನು; ಅಂತರಿಕ್ಷಸ್ಥವಾದ ಮೇಘಮಂಡಲದ ಉದಕವನ್ನು ಪಡೆಯುವುದಕ್ಕಾಗಿ ಉತ್ತಮವಾದ ಸ್ತೋತ್ರಗಳಿಂದ ಸ್ವರ್ಗದಲ್ಲಿರುವ (ಅಂತರಿಕ್ಷಸ್ಥರಾದ) ವೃತ್ರಾದಿ ಶತ್ರುಗಳನ್ನು ನಾಶಮಾಡುತ್ತಾನೆ ಮೇಲೆಹೇಳಿದ ಸೂಕ್ತದಲ್ಲಿ ಬೃಹಸ್ಪತಿಯ ಮುಖ್ಯವಾದ ಗುಣಗಳೆಲ್ಲಾ ಸೂಕ್ಷ್ಮವಾಗಿ ಪ್ರಶಂಸಿತವಾಗಿವೆ.

**ಅಹಿಮಾಯಾನ್—ಅಗತ್ಯ ಹಂತ್ರ್ಯಃ ಅಂತರಿಕ್ಷಚಾರಿಣ್ಯೋ ವಾ ಮಾಯಾ ಯೇಷಾಂ ವೃತ್ರಾದೀನಾಂ ತಾನಸುರಾನ್ ।** ಓಡಿಬಂದು ಅಥವಾ ಅಟ್ಟಿಸಿಕೊಂಡು ಬಂದು ಮಾಯದಿಂದ ಎಂದರೆ ಕುಟಿಲೋಪಾಯಗಳಿಂದ ಕೊಲ್ಲುವ ಶತ್ರುಗಳು ಅಥವಾ ಅಂತರಿಕ್ಷದಲ್ಲಿ ಸಂಚರಿಸುತ್ತಾ ಮಾಯಾದಿಗಳಿಂದ ತೊಂದರೆಯನ್ನುಂಟುಮಾಡುವ ವೃತ್ರಾದಿ ಅಸುರರು ಎಂದು ಭಾಷ್ಯಕಾರರು ಅಹಿಮಾಯಾನ್ ಎಂಬ ಶಬ್ದದ ಅರ್ಥವಿವರಣೆ ಮಾಡಿರುವರು. ಅಹಿಮಾಯಶಬ್ದವು ಋ. ಸಂ. ೬-೨೦-೭, ೬-೫೨-೧೫, ೧೦-೬೩-೪ ಎಂಬ ಋಕ್ಕುಗಳಲ್ಲಿ ಪಠಿತವಾಗಿದ್ದರೂ ಅಲ್ಲಿ ದೇವತೆಗಳ ಪರವಾಗಿ ಪ್ರಯುಕ್ತವಾಗಿರುವುದರಿಂದ ಅದಕ್ಕೆ ಬೇರೆ ವಿಧವಾಗಿ ಅರ್ಥವಿವರಣೆಮಾಡಿರುವರು.

ಈ ಋಕ್ಕಿನಲ್ಲಿ ಬೃಹಸ್ಪತಿಯ ಆಯುಧಗಳನ್ನು ಪ್ರಸ್ತಾಪಮಾಡಿರುವುದರಿಂದ ಆ ವಿಷಯವಾಗಿ ಸ್ವಲ್ಪ ವಿಮರ್ಶೆಮಾಡುವುದು ಅವಶ್ಯಕವು ಮೇಲಿನ ಉದಾಹರಣೆಗಾಗಿ ಕೊಟ್ಟಿರುವ ಋಕ್ಕಿನಲ್ಲಿ ಹೇಳಿರುವಂತೆ— **ಬೃಹಸ್ಪತಿರ್ಹಂತ್ಯಮಿತ್ರಮರ್ಕೈಃ**—ಬೃಹಸ್ಪತಿಯು ಶತ್ರುವಾದವರನ್ನು ಮಂತ್ರಗಳಿಂದಲೇ ನಾಶಮಾಡುವವನು ಎಂದು ಹೇಳಿರುವುದಕ್ಕೆ ಋಗ್ವೇದಾದಿಗಳಲ್ಲಿ ಬೇರೆ ಕಡೆಗಳಲ್ಲಿಯೂ ಸಮರ್ಥನೆಯಿರುವುದು.

**ಋತಜ್ಯೇನ ಕ್ಷಿಪ್ರೇಣ ಬ್ರಹ್ಮಣಸ್ಪತಿರ್ಯತ್ರ ವಷ್ಟಿ ಪ್ರ ತದಶ್ನೋತಿ ಧನ್ವನಾ ।**
**ತಸ್ಯ ಸಾಧ್ವೀರಿಷವೋ ಯಾಭಿರಸ್ಯತಿ ನೃಚಕ್ಷಸೋ ದೃಶಯೇ ಕರ್ಣಯೋನಯಃ ॥**

(ಋ. ಸಂ. ೨-೨೪-೮)

ಎಂಬ ಋಕ್ಕಿನಲ್ಲಿ ಅವನಲ್ಲಿ ಒಂದು ಧನುಸ್ಸು ಇದೆ ಅದಕ್ಕೆ ಋತವೇ (ಯಜ್ಞ ಅಥವಾ ಸತ್ಯ) ಹೆದೆಯು (ಜ್ಯಾ) ಮತ್ತು ಸಾಧುತ್ವವೇ ಬಾಣವು ಎಂದಿದೆ.

**ಸ ಹಿ ಶುಚಿಃ ಶತಪತ್ರಃ ಸ ಶುಂಧ್ಯುರ್ಹಿರಣ್ಯವಾಶೀರಿಷಿರಃ ಸ್ವರ್ಷಾಃ ।**

(ಋ. ಸಂ. ೭-೯೭-೭)

ಎಂಬಲ್ಲಿ ಬೃಹಸ್ಪತಿಯು ಚಿನ್ನದ ಆಯುಧಗಳನ್ನು ಧರಿಸಿರುವನೆಂದು ಹೇಳಿದೆ.

**ತ್ವಷ್ಟಾ ಮಾಯಾ ವೇದಪಸಾಮಪಸ್ತಮೋ ಬಿಭ್ರತ್ಪಾತ್ರಾ ದೇವಪಾನಾನಿ ಶಂತಮಾ ।**
**ಶಿಶೀತೇ ನೂನಂ ಪರಶುಂ ಸ್ವಾಯಸಂ ಯೇನ ವೃಶ್ಚಾದೇತಶೋ ಬ್ರಹ್ಮಣಸ್ಪತಿಃ ॥**

(ಋ. ಸಂ. ೧೦-೫೩-೯)

ಎಂಬ ಋಕ್ಕಿನಲ್ಲಿ ತ್ವಷ್ಟೃವು ಹರಿತಮಾಡಿಕೊಟ್ಟ ಕಬ್ಬಿಣದ ಕೊಡಲಿಯನ್ನು ಶತ್ರುವಧಕ್ಕಾಗಿ ಬೃಹಸ್ಪತಿಯು ಉಪಯೋಗಿಸುವನೆಂದು ಹೇಳಿದೆ.

ವ್ಯಾಕರಣಪ್ರಕ್ರಿಯಾ

**ಈಯತೇ**—ಈಙ್ ಗತೌ ಧಾತು. ಙಕಾರ ಇತ್ತಾದುದರಿಂದ ಆತ್ಮನೇ ಪದ. ಲಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅತ್ಯಃ**—ಅತ ಸಾತತ್ಯಗಮನೇ ಧಾತು. ಕ್ಯಪ್ ಪ್ರತ್ಯಯ. ಇದು ಪಿತ್ತಾದುದರಿಂದ ಆದ್ಯುದಾತ್ತ ವಾಗುತ್ತದೆ.

**ಯಕ್ಷಭೃತ್**—ಯಕ್ಷಂ ಬಿಭರ್ತಿ ಇತಿ ಯಕ್ಷಭೃತ್. ಭೃಞ್ ಭರಣೇ ಧಾತು. ಕ್ವಿಪ್ ಪ್ರತ್ಯಯ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ವಿಚೇತಾಃ**—ವಿವಿಧಂ ಚೇತಃ ಯಸ್ಯ ಸಃ ವಿಚೇತಾಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ ಪ್ರಥಮಾ ಏಕವಚನಾಂತರೂಪ.

**ಯಂತಿ**—ಇಣ್ ಗತೌ ಧಾತು. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಝೋಂತಃ** ಎಂಬುದರಿಂದ ಅದಕ್ಕೆ ಅಂತಾದೇಶ. ಧಾತುವಿನ ಇಕಾರಕ್ಕೆ ಯಣಾದೇಶ ಮುಂದೆ ಚ ಎಂಬುದರ ಯೋಗವಿರು ವುದರಿಂದ **ಚ ವಾ ಯೋಗೇ ಪ್ರಥಮಾ** ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುತ್ತದೆ. ಪ್ರತ್ಯಯಸ್ವರದಿಂದ (ಅಂತಿ) ಆದ್ಯುದಾತ್ತವಾಗುತ್ತದೆ.

**ದ್ಯೂನ್**—ಇಲ್ಲಿ ಪ್ರತಿನಿತ್ಯವೂ ತಪ್ಪದೆ ದಿವಸಗಳ ಸಂಬಂಧ ಕ್ರಿಯಾಕ್ಕೆ ಇರುವುದರಿಂದ **ಕಾಲಾಧ್ವನೋ ರತ್ಯಂತ ಸಂಯೋಗೇ**—(ಪಾ. ಸೂ. ೨-೩-೫) ಕಾಲ ಮತ್ತು ದಾರಿ ಇವುಗಳಿಗೆ ನಿತ್ಯಸಂಬಂಧತೋರುವಾಗ ಷಷ್ಠ್ಯಾದಿಗಳಿಗೆ ಬದಲಾಗಿ ದ್ವಿತೀಯಾ ಬರುತ್ತದೆ, ಎಂಬುದರಿಂದ ದ್ವಿತೀಯಾವಿಭಕ್ತಿ ಬಂದಿರುತ್ತದೆ.

**ಅಭಿ**—ಇದು ಉಪಸರ್ಗ. **ಉಪಸರ್ಗಾಃಕ್ರಿಯಾಯೋಗೇ** ಎಂಬ ಸೂತ್ರದಲ್ಲಿ ಕ್ರಿಯಾಪದದ ಸಂಬಂಧ ವಿರುವಾಗ ಮಾತ್ರ ಉಪಸರ್ಗ ಎಂಬ ಸಂಜ್ಞೆ ಬರುವುದರಿಂದ ಇಲ್ಲಿ ಕ್ರಿಯಾವನ್ನು ಹೇಳುವ ಪದವಿಲ್ಲದಿದ್ದರೂ ಉಪ

ಸರ್ಗವಿರುವುದರಿಂದ ಯೋಗ್ಯವಾದ ಕ್ರಿಯಾಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಆದುದರಿಂದ ಲಕ್ಷಯಂತಿ ಎಂದು ಕ್ರಿಯಾಪದವು ಅಧ್ಯಾಹೃತವಾಗಿದೆ.

---

ಸಂಹಿತಾಪಾಠಃ

ಯೇ ತ್ವಾ ದೇವೋಸ್ರಿಕಂ ಮನ್ಯಮಾನಾಃ ಪಾಪಾ ಭದ್ರಮುಪಜೀವಂತಿ ಪಜ್ರಾಃ ।
ನ ದೂಢ್ಯೇಽಅನು ದದಾಸಿ ವಾಮಂ ಬೃಹಸ್ಪತೇ ಚಯಸ ಇತ್ಪಿಯಾರುಂ॥

ಪದಪಾಠಃ

ಯೇ । ತ್ವಾ । ದೇವ । ಉಸ್ರಿಕಂ । ಮನ್ಯಮಾನಾಃ । ಪಾಪಾಃ । ಭದ್ರಂ । ಉಪಽಜೀವಂತಿ । ಪಜ್ರಾಃ ।
ನ । ದುಃಽಧ್ಯೇ । ಅನು । ದದಾಸಿ । ವಾಮಂ । ಬೃಹಸ್ಪತೇ । ಚಯಸೇ । ಇತ್ । ಪಿಯಾರುಂ ॥ ೫ ॥

ಸಾಯಣಭಾಷ್ಯಂ

ಹೇ ದೇವ ಬೃಹಸ್ಪತೇ ಯೇ ಪಾಪಾಃ ಪಾಪಬುದ್ಧಯೋಽಲ್ಪಾಃ ಪಜ್ರಾ ಹವಿರ್ಲಕ್ಷಣಾನ್ನವಂತಃ ಪಾಪೇನ ಜೀರ್ಣಾ ವಾ ನರಾ ಭದ್ರಂ ಕಲ್ಯಾಣಂ ತ್ವಾ ತ್ವಾಮುಸ್ರಿಕಂ । ಉಸ್ರಿಯೇತಿ ಗೋನಾಮ । ಕುತ್ಸಿತಾಮಲ್ಪಕ್ಷೀರೋತ್ಪಾದಿನೀಂ ಗಾಂ ಜೀರ್ಣಮನಡ್ವಾಹಂ ವಾ ಮನ್ಯಮಾನಾ ಉಪಜೀವಂತಿ ಉಪೇತ್ಯ ಪ್ರಾಣಂತಿ । ಅಲ್ಪಂ ಯಾಚಂತ ಇತ್ಯರ್ಥಃ । ದೂಢ್ಯೇ ದುರ್ಧಿಯೇ ॥ ವಚನವ್ಯತ್ಯಯಃ ॥ ದುರ್ಬುದ್ಧಿಭ್ಯಸ್ತೇಭ್ಯೋ ವಾಮಂ ವನನೀಯಂ ಧನಂ ನಾನು ದದಾಸಿ । ಅನುಕೂಲಂ ನ ವಿತರಸಿ । ಹೇ ಬೃಹಸ್ಪತೇ ದೇವ ಪಿಯಾರುಂ ಸೋಮಪಾನಶೀಲಂ ಸೋಮೇನ ಯಷ್ಟಾರಂ ಮಹಾಫಲರಿಪ್ಸುಂ ತು ಚಯಸ ಇತ್ । ಗಚ್ಛಸ್ಯೇವಾನುಗ್ರಹೀತುಂ ॥ ಚಯ ಗತಾವಿತ್ಯಸ್ಯೇದಂ ರೂಪಂ ॥ ಯದ್ವಾ । ಹೇ ಬೃಹಸ್ಪತೇ ಪಿಯಾರುಂ ಹಿಂಸಕಂ ॥ ಪೀಯತೇರ್ಹಿಂಸಾಕರ್ಮಣ ಇದಂ ರೂಪಂ ॥ ತಂ ಪ್ರಾಣಿಹಿಂಸಕಂ ಚಯಸ ಇತ್ । ಹಂಸ್ಯೇವ । ಬೃಹಸ್ಪತೇ ಯಚ್ಛಾತಯಸಿ ದೇವಪೀಯುಮಿತಿ ನಿರುಕ್ತಂ । ೪-೨೫ ॥

। ಪ್ರತಿಪದಾರ್ಥ ।

ದೇವ—ಪೂಜ್ಯನಾದ ಎಲೈ ಬೃಹಸ್ಪತಿಯೇ । ಯೇ ಪಾಪಾಃ—ಯಾವ ಪಾಪಿಗಳು । ಪಜ್ರಾಃ—ಹವಿರ್ಲಕ್ಷಣಾನ್ನಯುಕ್ತರಾಗಿ । ಭದ್ರಂ—ಕಲ್ಯಾಣಾತ್ಮಕನಾದ । ತ್ವಾ—ನಿನ್ನನ್ನು । (ಹೆಚ್ಚು ಪ್ರಯೋಜನಕಾರಿಯಾಗದೆ ಇರುವ) ಉಸ್ರಿಕಂ—ಜೀರ್ಣವಾದ ಗೋವೆಂದು । ಮನ್ಯಮಾನಾಃ—ತಿಳಿದವರಾಗಿ । ಉಪಜೀವಂತಿ—ಜೀವಿಸುತ್ತಾರೆಯೋ । ದೂಢ್ಯೇ—ದುಷ್ಟಬುದ್ಧಿಯುಳ್ಳ ಆ ಪಾಪಿಷ್ಠರಿಗೆ । ವಾಮಂ—ಕಾಂಕ್ಷಿತವಾದ ಧನವನ್ನು । ನ ಅನು ದದಾಸಿ—ಅವರವರ ಅನುಕೂಲಕ್ಕೆ ಬೇಕಾಗುವಂತೆ ಕೊಡುವುದೇ ಇಲ್ಲ । ಬೃಹಸ್ಪತೇ—ಎಲೈ

ಬೃಹಸ್ಪತಿಯೇ । **ಪಿಯಾರುಂ**—ಸೋಮುವನ್ನರ್ಪಿಸಿ ಯಜ್ಞಮಾಡತಕ್ಕವನನ್ನು । **ಚೆಯಸೇ ಇತ್**—ಖಂಡಿತ ವಾಗಿಯೂ ಅನುಗ್ರಹಿಸುತ್ತೀಯೆ.

ಭಾವಾರ್ಥ

ಪೂಜ್ಯನಾದ ಎಲೈ ಬೃಹಸ್ಪತಿಯೇ, ಯಾವ ಪಾಪಿಗಳು ಪಾಪದಿಂದ ಜೀರ್ಣರಾಗಿಯೂ, ಕಲ್ಯಾಣಾತ್ಮಕ ನಾದ ನಿನ್ನನ್ನು ವೃದ್ಧವಾದ ಗೋವೆಂದೂ, ಪ್ರಯೋಜನಕ್ಕೆ ಬಾರದವನೆಂದೂ ತಿಳಿದವರಾಗಿಯೂ ಜೀವಿಸುತ್ತಾ ರೆಯೋ, ದುಷ್ಟಬುದ್ಧಿಯುಳ್ಳ ಅಂತಹ ಪಾಪಿಷ್ಠರಿಗೆ ನೀನು ಕಾಂಕ್ಷಿತಗಳಾದ ಧನಗಳನ್ನು ಕೊಡುವುದೇ ಇಲ್ಲ. ಆದರೆ ಸೋಮುವನ್ನರ್ಪಿಸಿ ಯಜ್ಞಮಾಡತಕ್ಕವನನ್ನು ಖಂಡಿತವಾಗಿಯೂ ಅನುಗ್ರಹಿಸುತ್ತೀಯೆ.

English Translation

Divine Brihaspati, you do not bestow desired (wealth) upon those stupid (men), who, sinful and mean, subsist, considering you, who are auspicious, as an old ox, but you favour him who offers (you) libations.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಬೃಹಸ್ಪತಿಯು ತನ್ನನ್ನು ಅಪೇಕ್ಷಿಸಿ ಸ್ತೋತ್ರಮಾಡದವರಿಗೆ ಏನನ್ನೂ ಕೊಡದೆ ಹಿಂಸಕರಾದ ಅವರನ್ನು ನಾಶಮಾಡುವನು ಎಂಬ ವಿಷಯವು ವರ್ಣಿತವಾಗಿದೆ.

**ಸುನೀತಿಭಿರ್ನಯಸಿ ತ್ರಾಯಸೇ ಜನಂ ಯಸ್ತುಭ್ಯಂ ದಾಶಾನ್ನ ತಮುಂಹೋ ಅಶ್ನವತ್ ।**
**ಬ್ರಹ್ಮದ್ವಿಷಸ್ತಪನೋ ಮನ್ಯುಮೀರಸಿ ಬೃಹಸ್ಪತೇ ಮಹಿತತ್ತೇ ಮಹಿತ್ವನಂ ॥**
(ಋ. ಸಂ. ೨-೨೩-೪)

ಎಂಬ ಋಕ್ಕಿನಲ್ಲಿ—ನಿನ್ನನ್ನೂ (ಬೃಹಸ್ಪತಿಯನ್ನು) ಹವಿರಾದಿಗಳಿಂದ ತೃಪ್ತಿಪಡಿಸುವನಿಗೆ ಒಳ್ಳೆಯ ಮಾರ್ಗದರ್ಶಕ ನಾಗಿ ಅವನನ್ನು ಕಾಪಾಡುತ್ತೀಯೆ. ಪಾಪಗಳು ಅವನನ್ನು ಮುಟ್ಟಲಾರವು. ಆದರೆ ನಿನ್ನನ್ನು ದ್ವೇಷಿಸುವವರು ನಿನ್ನ ಕೋಪಕ್ಕೆ ಈಡಾಗುತ್ತಾರೆ. ಎಲೈ ಬೃಹಸ್ಪತಿಯೇ ಇದಲ್ಲವೇ ನಿನ್ನ ಮಹಿಮೆಯು ಎಂದು ಹೇಳಿದೆ.

**ಉಸ್ರಿಕಂ—ಉಸ್ರಿಯೇತಿ ಗೋನಾಮ । ಕುತ್ಸಿತಾಲ್ಪಕ್ಷೀರೋ ಸ್ರಾವಿಣೀಂ ಗಾಂ ಜೀರ್ಣಮನಡ್ವಾ-ಹಂ ವಾ ।** ಉಸ್ರಿಯಾ ಎಂಬ ಶಬ್ದವು ಗೋನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) **ಉಸ್ರಿಯೇತಿ ಗೋ ನಾಮ ಉಸ್ರಾವಿಣೋಽಸ್ಯಾಂ ಭೋಗಾಃ ಉಸ್ರೇತಿ ಚ** (ನಿ. ೪-೧೯) ಎಂದು ಯಾಸ್ಕರು ಹೇಳಿದ್ದಾರೆ. ಹಾಲು ಕರೆ ಯುವ ಹಸುವಿಗೆ ಉಸ್ರಿಯಾ ಎಂದು ಹೆಸರು. ಏಕೆಂದರೆ ಅಂತಹ ಹಾಲಿನಿಂದ ಭೋಗಾದಿಗಳಿಗೆ ಅವಕಾಶವಾಗು ವುದರಿಂದ ಈ ಹೆಸರು ಬಂದಿದೆ. ಉಸ್ರಾ ಎಂತಲೂ ಹೆಸರು ಎಂದು ಹೇಳಿದ್ದಾರೆ. ಇಲ್ಲಿ ಉಸ್ರಿಕಂ ಎಂಬ ಶಬ್ದಪ್ರ ಯೋಗವಿರುವುದರಿಂದ ಈ ಶಬ್ದಕ್ಕೆ ಬಹಳ ಅಲ್ಪವಾಗಿ ಹಾಲುಕೊಡುವ ಅಥವಾ ಹಾಲನ್ನೇ ಕೊಡದಿರುವ ಬಂಜೆಯಾದ ಹಸುವೆಂತಲೂ ಅಥವಾ ಮುದಿಯಾಗಿ ಯಾವ ಕಷ್ಟಕೆಲಸವನ್ನೂ ಮಾಡಲಾರದ ಎತ್ತೆಂದಾಗಲಿ ಅರ್ಥವೆಂದು ಭಾಷ್ಯ ಕಾರರು ವಿವರಿಸಿರುವರು. ಇಂತಹ ಹಾಲುಕೊಡದ ಹಸುವಿನಿಂದಲೂ ಅಥವಾ ಕೆಲಸಮಾಡಲಾರದ ಎತ್ತಿನಿಂದಲೂ ಯಾರೂ ಯಾವ ಪ್ರತಿಫಲವನ್ನೂ ನಿರೀಕ್ಷಿಸುವುದಿಲ್ಲ. ಅದರಂತೆ ಪಾಪಿಷ್ಠರು ಬಂಜೆಯಾದ ಹಸುವಿನಂತೆ ಅಥವಾ

ಮುದಿಯಾದ ಎತ್ತಿನಂತೆ ನಿನ್ನಿಂದ (ಬೃಹಸ್ಪತಿಯಿಂದ) ಏನೂ ಪ್ರಯೋಜನವಾಗುವುದಿಲ್ಲವೆಂದು ತಿಳಿದು ನಿನ್ನನ್ನು ಆರಾಧಿಸುವುದಿಲ್ಲ. ಅಂತಹ ದುಷ್ಟರಿಗೆ ನೀನು ಏನನ್ನೂ ಎಂದರೆ ಬೇಕಾದ ಧನಾದಿಗಳನ್ನು ಕೊಡುವುದಿಲ್ಲ. ಮತ್ತು ಅವರನ್ನು ಹಿಂಸೆಮಾಡುತ್ತೀಯೆ ಎಂದು ಋಕ್ಕಿನ ಮುಖ್ಯಾಭಿಪ್ರಾಯವು.

**ಉಪಜೀವಂತಿ—ಉಪೇತ್ಯ ಪ್ರಾಣಂತಿ । ಅಲ್ಪಂ ಯಾಚಂತ** ಇತ್ಯರ್ಥಃ । ನಿನ್ನನ್ನು ಸಮೀಪಿಸಿ ಹೆಚ್ಚಾಗಿ ಏನನ್ನೂ ಕೇಳುವುದಿಲ್ಲ, ನಿನ್ನನ್ನು ಲಕ್ಷ್ಯಮಾಡುವುದಿಲ್ಲ ಎಂದಭಿಪ್ರಾಯವು.

**ಪಜ್ರಾಃ**—ಈ ಶಬ್ದಕ್ಕೆ ಸಾಯಣರು ಎರಡುವಿಧವಾದ ಅರ್ಥವನ್ನು ಹೇಳಿದ್ದಾರೆ. ಹವಿರ್ಲಕ್ಷಣಾನ್ನವಂತಃ-ಹವಿರ್ಲಕ್ಷಣರೂಪವಾದ ಅನ್ನವುಳ್ಳವರು ಎಂದೂ ಅಥವಾ **ಪಾಪೇನ ಜೀರ್ಣಾ ವಾ ನರಾಃ**-ಪಾಪಿಷ್ಠರಾದ ಮನುಷ್ಯರು ಎಂದೂ ಅರ್ಥವಿವರಣೆ ಮಾಡಿರುವರು.

**ಬೃಹಸ್ಪತೇ—ಚಯಸ ಇತ್ಪಿಯಾರುಂ**— ಈ ಶಬ್ದಗಳಿಗೆ ಯಾಸ್ಕರು—**ಬೃಹಸ್ಪತೇ ಯಚ್ಚಾತಯಸಿ ದೇವಪೀಯುಂ ಪೀಯತಿರ್ಹಿಂಸಾಕರ್ಮಾ** (ನಿ. ೪-೨೫) ಎಂದರೆ ಹಿಂಸಾಕರ್ಮವೆಂದು ಅರ್ಥಕೊಡುವ ಪೀಯತಿಧಾತುವಿನಿಂದ **ಪಿಯಾರು** ಎಂಬ ಶಬ್ದವು ನಿಷ್ಪನ್ನವಾಗಿದೆ. ಆದ್ದರಿಂದ ಈ ಶಬ್ದಕ್ಕೆ ಹಿಂಸೆಮಾಡುವವನು ಎಂದರೆ ದೇವಹಿಂಸಕನು, ದೇವತೆಗಳನ್ನು ಪೂಜಿಸದೆ ತನ್ನ ಸ್ವಂತ ಭೋಗದಲ್ಲಿಯೇ ಇಚ್ಛೆಯುಳ್ಳವನು. ಇಂತಹ ದೇವಹಿಂಸಕನನ್ನು ಬೃಹಸ್ಪತಿಯಾದ ನೀನು ನಾಶಮಾಡುತ್ತೀಯೆ ಎಂದು ಅರ್ಥವಿವರಣೆಮಾಡಿರುವರು.

### ವ್ಯಾಕರಣಪ್ರಕ್ರಿಯಾ

**ಉಸ್ರಿಕಮ್**—ಉಸ್ರಿಯಾ ಶಬ್ದ. ಇದಕ್ಕೆ ಕುತ್ಸಿತಾರ್ಥದಲ್ಲಿ ಕ ಪ್ರತ್ಯಯ ಬಂದಾಗ ದ್ವಿತೀಯಾಜಾದಿಗೆ (ಯಾ) ಲೋಪ. ವ್ಯತ್ಯಯದಿಂದ ಅಂತೋದಾತ್ತವಾಗುತ್ತದೆ.

**ಮನ್ಯಮಾನಾಃ**—ಮನ ಜ್ಞಾನೇ ಧಾತು. ಲಟಿಗೆ ಶಾನಚಾದೇಶ. ಶ್ಯನ್ ವಿಕರಣ. ಇದು ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುವರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪಾಪಾಃ**—ಪಾಪಂ ಯೇಷಾಮಸ್ತಿ ಇತಿ ಪಾಪಾಃ. **ಅರ್ಶಆದಿಭ್ಯೋಽಚ್** ಎಂಬುದರಿಂದ ಮತ್ವರ್ಥದಲ್ಲಿ ಅಚ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಉಪಜೀವಂತಿ**—ಜೀವ ಪ್ರಾಣಧಾರಣೇ. ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಯದ್ವೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ. **ತಿಙಿ ಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಉಪ) ಅನುದಾತ್ತಸ್ವರ ಬರುತ್ತದೆ.

**ದೂಢ್ಯೇ**—ದುಷ್ಟಂ ಧ್ಯಾಯಂತಿ ಇತಿ ದುರ್ಧಿಯಃ । ಧ್ಯೈ ಚಿಂತಾಯಾಂ ಧಾತು. ಕ್ವಿಪ್ ಚ ಎಂಬುದರಿಂದ ಕ್ವಿಪ್ ಪ್ರತ್ಯಯ- ಚಕಾರಗ್ರಹಣಸಾಮರ್ಥ್ಯದಿಂದ ಸಂಪ್ರಸಾರಣ. ಪೃಷೋದರಾದಿಗಣದಲ್ಲಿ ಧ್ಯೈ ಚ ಎಂದು ಪಠಿತವಾದುದರಿಂದ ಇಷ್ಟರೂಪ ಸಿದ್ಧಿಯಾಗುತ್ತದೆ. ವ್ಯತ್ಯಯದಿಂದ ಚತುರ್ಥಿಗೆ ಸಪ್ತಮೀ ವಿಭಕ್ತಿ ಬಂದಿರುತ್ತದೆ.

ಚಯಸೇ—ಚಯ ಗತೌ ಧಾತು. ಲಟ್ ಮಧ್ಯಮಪುರುಷ ಏಕವಚನಾಂತರೂಪ. ಇತ್. ಎಂಬುದರ ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ.

ಪಿಯಾರುಂ—ಪೀಙ್ ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಹಿಂಸಾರ್ಥದಲ್ಲಿ ಪ್ರಯುಕ್ತವಾಗಿದೆ. ನಿತ್ವಾದ ಉಣಾದಿ ಪ್ರತ್ಯಯದಿಂದ ಅಭಿಮತರೂಪ ಸಿದ್ಧಿಯಾಗುತ್ತದೆ.

---

ಸಂಹಿತಾಪಾಠ

ಸುಪ್ರೈತುಃ ಸೂಯವಸೋ ನ ಪಂಥಾ ದುರ್ನಿಯಂತುಃ ಪರಿಪ್ರೀತೋ ನ ಮಿತ್ರಃ ।

ಅನರ್ವಾಣೋ ಅಭಿ ಯೇ ಚಕ್ಷತೇ ನೋಽಪೀವೃತಾ ಅಪೋರ್ಣುವಂತೋ ಅಸ್ಥುಃ ॥ ೬ ॥

ಪದಪಾಠ

ಸುಽಪ್ರೈತುಃ । ಸುಽಯವಸಃ । ನ । ಪಂಥಾಃ । ದುಃಽನಿಯಂತುಃ । ಪರಿಽಪ್ರೀತಃ । ನ । ಮಿತ್ರಃ ।

ಅನರ್ವಾಣಃ । ಅಭಿ । ಯೇ । ಚಕ್ಷತೇ । ನಃ । ಅಪಿಽವೃತಾಃ । ಅಪ್ಽಊರ್ಣುವಂತಃ । ಅಸ್ಥುಃ ॥ ೬ ॥

ಸಾಯಣಭಾಷ್ಯಂ

ಹೇ ಬೃಹಸ್ಪತೇ ತ್ವಂ ಸುಪ್ರೈತುಃ ಸುಷ್ಠು ಗಂತುರ್ಮನುಷ್ಯಸ್ಯ ಸುಯವಸಃ ಶೋಭನಾನ್ನಸ್ಯ ಪಂಥಾ ನ ಮಾರ್ಗ ಇವ ಸುಷ್ಠು ಯಜ್ಞಮಾರ್ಗಗಾಮಿನೋ ಸುಯವಸಃ ಪಂಥಾ ಇವ । ಸುಖಕಾರೀ ಭವೇತ್ಯರ್ಥಃ । ಕಿಂಚ ದುರ್ನಿಯಂತುರ್ದುಃಖೇನ ನಿಯಮಿತೂ ರಾಜ್ಞಃ ಪರಿಪ್ರೀತಃ ಸರ್ವಪ್ರಕಾರೇಣ ಸಂತುಷ್ಟೋ ದ್ವೇಷಾದಿರಹಿತೋ ಮಿತ್ರೋ ನ ಸುಹೃನ್ಮಂತ್ರೀವ । ಸ ಯಥಾ ದುರ್ನಯಾನ್ನಿವರ್ತಯತಿ ತದ್ವತ್ ತ್ವಮಪಿ ತಥಾಸ್ಮಭ್ಯಂ ಕುರ್ವಿತ್ಯರ್ಥಃ । ಸಖಿವದಮಾರ್ಗಾನ್ನಿವರ್ತ್ಯ ಮಾರ್ಗೇ ಯಜ್ಞಾದಿರೂಪೇ ಯೋಜಯಿತ್ವಾ ತತ್ರಾಪಿ ಫಲಪ್ರದೋ ಭವೇತ್ಯರ್ಥಃ । ಕಿಂಚಾನರ್ವಾಣೋಽಪಾಪಾ ಯೇ ನರಾ ನೋಽಸ್ಮಾನಭ್ಯಾಭಿಮುಖ್ಯೇನ ಚಕ್ಷತೇ ಬೋಧಯಂತಿ ತೇಽಪೀವೃತಾ ಅಜ್ಞಾನೇನಾವೃತಾ ಅಪ್ಯ-ಪೋರ್ಣುವಂತೋಽಪಗತಾವರಣವಂತೋ ಜ್ಞಾನವಂತೋಽಸ್ಥುಃ । ತಿಷ್ಠಂತು । ಯದ್ವಾ । ಅನರ್ವಾಣ-ಸ್ತ್ವಾಮಪ್ರಾಪ್ನುವಂತೋ ಯೇಽಸ್ಮದ್ವಿರೋಧಿನೋ ನೋಽಸ್ಮಾನಭಿ ಚಕ್ಷತೇ ಅಭಿವದಂತಿ ನಿಂದಂತಿ ತೇಽಪೀವೃತಾ ಆಚ್ಛಾದಿತಾ ರಕ್ಷಿತಾ ಅಪ್ಯಪೋರ್ಣುವಂತೋಽಪಗತರಕ್ಷಣಾ ಭವಂತಿ ॥

### ಪ್ರತಿಪದಾರ್ಥ

(ಎಲೈ ಬೃಹಸ್ಪತಿಯೇ) **ಸುಯೆವಸಃ**—ಶ್ರೇಷ್ಠವಾದ ಅನ್ನವನ್ನು ಕೊಡತಕ್ಕ ಯಜ್ಞಾದಿ ಕರ್ಮಗಳ । **ಪಂಥಾಃ ನ**—ಮಾರ್ಗವು ಸುಖಕರವಾಗಿರುವಂತೆಯೂ । (ಮತ್ತು) **ದುರ್ನಿಯಂತುಃ**—ದುಷ್ಟರನ್ನು ನಿಗ್ರಹ ಮಾಡತಕ್ಕ ರಾಜನಿಗೆ । **ಪರಿಪ್ರೀತಃ**—ಪರಿಪೂರ್ಣವಾದ ಪ್ರೇಮವುಳ್ಳವನೂ । **ಮಿತ್ರಃ ನ**—ಸುಹೃತ್ತೂ ಆಗಿರುವ ಮಂತ್ರಿಯು ಸುಖಕರನಾಗಿರುವಂತೆಯೂ । **ಸುಪ್ರೈತುಃ**—ಸನ್ಮಾರ್ಗದಲ್ಲಿ ವ್ಯವಹರಿಸಿ ಕರ್ಮಾಚರಣೆಯನ್ನು ಮಾಡತಕ್ಕ ಯಜಮಾನನಿಗೆ ಸುಖಕಾರಿಯಾಗಿರು । **ಯೇ**—ಯಾರು । **ಅನರ್ವಾಣಃ**—ಪಾಪರಹಿತರಾಗಿ । **ನಃ**—ನಮ್ಮನ್ನು (ನಮಗೆ) । **ಅಭಿಚಕ್ಷತೇ**—ಉಪದೇಶವನ್ನು ಕೊಟ್ಟು ಸನ್ಮಾರ್ಗಗಾಮಿಗಳಾಗುವಂತೆ ಮಾಡು ತ್ತಾರೆಯೋ (ಅವರು) । **ಅಪೀವೃತಾಃ**—ಅಜ್ಞಾನದಿಂದ ಆವೃತರಾಗಿದ್ದರೂ ಸಹ । **ಅಪೋರ್ಣುವಂತಃ**—ಅಜ್ಞಾನರೂಪವಾದ ಆವರಣದಿಂದ ಮುಕ್ತರಾಗಿ । **ಅಸ್ಥುಃ**—ಆಗಲಿ ।

### ಭಾವಾರ್ಥ

ಎಲೈ ಬೃಹಸ್ಪತಿಯೇ, ಶ್ರೇಷ್ಠವಾದ ಅನ್ನವನ್ನು ಕೊಡತಕ್ಕ ಯಜ್ಞಾದಿಕರ್ಮಗಳ ಮಾರ್ಗವು ಸುಖಕರವಾಗಿರುವಂತೆಯೂ ಮತ್ತು ದುಷ್ಟರನ್ನು ನಿಗ್ರಹಿಸತಕ್ಕ ರಾಜನಿಗೆ ಪರಿಪೂರ್ಣವಾದ ಪ್ರೇಮವುಳ್ಳವನೂ, ಸುಹೃತ್ತೂ ಆಗಿರುವ ಮಂತ್ರಿಯು ಸುಖಕರನಾಗಿರುವಂತೆಯೂ, ಸನ್ಮಾರ್ಗದಲ್ಲಿ ವ್ಯವಹರಿಸಿ ಕರ್ಮಾಚರಣೆಯನ್ನು ಮಾಡತಕ್ಕ ಯಜಮಾನನಿಗೆ ಸುಖಕಾರಿಯಾಗಿರು. ಮತ್ತು ನಮಗೆ ಸನ್ಮಾರ್ಗವನ್ನು ತಿಳಿಸತಕ್ಕ ಬೋಧಕರು ಪಾಪರಹಿತರಾಗಿರುವುದರಿಂದ ಅವರು ಅಜ್ಞಾನದಿಂದ ಆವೃತರಾಗಿದ್ದರೆ, ಅವರ ಆವರಣವನ್ನೂ ತೆಗೆದು ಅವರನ್ನೂ ಜ್ಞಾನಿಗಳಾಗುವಂತೆ ಮಾಡು.

## English Translation

Be a (pleasant) way to him who goes well and makes good offerings, like the affectionate friend of (a ruler who) restrains the bad, and may those sinless men who instruct us, although yet enveloped (by ignorance), stand extricated from their covering.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಹೇಳಿರುವ ವಿಷಯವು ಸ್ಪಷ್ಟವಾಗಿಲ್ಲ ಅಥವಾ ತೊಡಕಾಗಿರುವುದು. ಆದರೂ ಭಾಷ್ಯಕಾರರು ಒಂದುವಿಧವಾಗಿ ಅರ್ಥವು ಹೊಂದುವಂತೆ ವಿವರಿಸಿರುವರು-ಉತ್ತರಾರ್ಧಕ್ಕೆ ಹೇಳಿರುವ ಅರ್ಥವು ಸರಿಯಾಗಿ ಹೊಂದುವುದಿಲ್ಲ.

**ಸುಪ್ರೈತುಃ—ಸುಷ್ಠು ಗಂತುರ್ಮನುಷ್ಯಸ್ಯ** । ಸನ್ಮಾರ್ಗಪ್ರವರ್ತಕನಾದ ಮನುಷ್ಯನ ಎಂದರೆ ಇಲ್ಲಿ ಬೃಹಸ್ಪತಿಯನ್ನು ಸ್ತೋತ್ರಾದಿಗಳಿಂದ ಭಜಿಸುವ ಮನುಷ್ಯನ ಎಂದಭಿಪ್ರಾಯವು.

**ಸುಯವಸಃ**—ಯವಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. ಆದ್ದರಿಂದ ಉತ್ತಮವಾದ ಅನ್ನವನ್ನು ಕೊಡತಕ್ಕ ಎಂದರ್ಥವು. ಯಜ್ಞಯಾಗಾದಿಗಳಿಂದ ಅನ್ನವು ದೊರೆಯುವುದರಿಂದ **ಯಜ್ಞಮಾರ್ಗಗಾಮಿನೋ**

**ಪಂಥಾ ಇವ**-ಯಜ್ಞಯಾಗಾದಿಗಳನ್ನು ಮಾಡಬೇಕೆಂದು ಇಚ್ಛಿಸುವ ಸನ್ಮಾರ್ಗದಂತೆ ಎಂದರೆ ಸುಖಕರವಾದ ಮಾರ್ಗದಂತೆ ಎಂದಭಿಪ್ರಾಯವು,

**ದುರ್ನಿಯಂತುಃ—ದುಃಖೇನ ನಿಯಮಿತುಃ। ಅಥವಾ ದುರ್ನಯಾನ್ನಿವರ್ತಯತಿ ಇತಿ ದುರ್ನಿಯಂತಾ ತಸ್ಯ।** ಬಹಳ ಕಷ್ಟದಿಂದ ಪಾಲನೆಮಾಡುವ ಅಥವಾ ದುರ್ಮಾರ್ಗಗಾಮಿಗಳನ್ನು ಶಿಕ್ಷಿಸಿ ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುವ ರಾಜನೆಂದು ಭಾಷ್ಯಕಾರು ವಿವರಿಸಿರುವರು

**ಪರಿಪ್ರೀತಃ ಮಿತ್ರಃ ನ**—ಸರ್ವಪ್ರಕಾರದಿಂದಲೂ ಸಂತುಷ್ಟನಾದ ಎಂದರೆ ನಿಜವಾದ ಪ್ರೀತಿವಿಶ್ವಾಸ ಗಳುಳ್ಳ ಸ್ನೇಹಿತನಂತೆ ಎಂದರ್ಥವು. ಈ ಋಕ್ಕಿನಲ್ಲಿ ರಾಜನನ್ನು ಅಥವಾ ಮಂತ್ರಿಯನ್ನು ಸೂಚಿಸುವ ಶಬ್ದಗಳು ಇಲ್ಲದಿದ್ದರೂ ಭಾಷ್ಯಕಾರರು **ದುರ್ನಿಯಂತುಃ ಮಿತ್ರಃ** ಎಂಬ ಶಬ್ದಗಳಿಗೆ ರಾಜ, ಮಂತ್ರಿ ಎಂದು ಅರ್ಥಹೊಂದು ವಂತೆ ವಿವರಿಸಿರುವರು. ಅಥವಾ ರಾಜ, ಮಂತ್ರಿ ಮೊದಲಾದ ಅರ್ಥಗಳನ್ನು ಹೇಳದೆ **ದುರ್ನಿಯಂತುಃ ಮಿತ್ರೋ ನ** ಎಂಬ ಪದಗಳಿಗೆ ಕೆಟ್ಟಮಾರ್ಗದಲ್ಲಿ ತಪ್ಪಿ ನಡೆಯುವವನನ್ನು ಅವನ ಹಿತೈಷಿಯಾದ ಸ್ನೇಹಿತನು ದಾರಿಗೆ ತರುವಂತೆ ಎಂಬ ಅರ್ಥವನ್ನು ಹೇಳಬಹುದು.

**ಅನರ್ವಾಣಃ**—ಈ ಶಬ್ದಕ್ಕೆ ಭಾಷ್ಯಕಾರರು **ಅಪಾಪಾಃ** ಪಾಪರಹಿತರಾದವರು ಎಂದರ್ಥಮಾಡಿರುವರು. ಈ ಶಬ್ದಕ್ಕೆ ಈ ಅರ್ಥವು ಹೇಗೆ ಹೊಂದುವುದೆಂಬುದನ್ನು ವಿವರಿಸಿಲ್ಲ. ಯಾಸ್ಕರು ನಿರುಕ್ತದಲ್ಲಿ—

**ಅನರ್ವಾ ಪ್ರತ್ಯೃತೋಽನ್ಯಸ್ಮಿನ್** (ನಿ ೬-೨೩) ಎಂದು ಹೇಳಿರುವರು. **ಯಃ ಅನ್ಯಸ್ಮಿನ್ ನ ಆಶ್ರಿತೋ ಭವತಿ ಸ್ವಪ್ರಧಾನ ಏವ ಸಃ ಅನರ್ವಾ ಇತ್ಯುಚ್ಯತೇ।** ಯಾವ ಮನುಷ್ಯನು ಇತರರಲ್ಲಿ ಆಶ್ರಯವನ್ನು ಪಡೆಯದೆ ತಾನೇ ಮುಖ್ಯವಾಗಿ ಎಂದರೆ ಸ್ವತಂತ್ರನಾಗಿ ಇರುವನೋ ಅವನಿಗೆ ಅನರ್ವಾ ಎಂದು ಹೆಸರು ಎಂದು ಹೇಳಿರುವರು. ಆದ್ದರಿಂದ **ಅನರ್ವಾಣಃ** (ಪ್ರ. ಬಹುವಚನಾಂತ) ಎಂಬ ಶಬ್ದಕ್ಕೆ ಸ್ವತಂತ್ರರಾದ ಮನುಷ್ಯರು, ಇನ್ನೊಬ್ಬರ ಅಧೀನದಲ್ಲಿಲ್ಲದವರು ಎಂದೇ ನಿರುಕ್ತಕಾರರ ಮತದಂತೆ ಅರ್ಥವು.

**ಅಪೀವೃತಾಃ, ಅಪೋರ್ಣುವಂತಃ**-ಈ ಶಬ್ದಗಳಿಗೆ ಸಾಯಣರು **ಅಜ್ಞಾನೇನಾವೃತಾಃ ಅಪಗತಾವರಣವಂತಃ** ಎಂದು ಕ್ರಮವಾಗಿ ಅರ್ಥವಿವರಣೆಮಾಡಿರುವರು. ಎಂದರೆ ಅಜ್ಞಾನದಿಂದ ಆವೃತರಾದವರು (ಕವಿಯಲ್ಪಟ್ಟವರು) ಅಜ್ಞಾನಾಂಧರು, ತಿಳುವಳಿಕೆ ಇಲ್ಲದವರು ಎಂದು **ಅಪೀವೃತಾಃ** ಎಂಬ ಶಬ್ದಕ್ಕೆ ಅರ್ಥವು; **ಅಪೋರ್ಣುವಂತಃ** ಎಂಬ ಶಬ್ದಕ್ಕೆ ಅಜ್ಞಾನಾವರಣದಿಂದ ನಿವೃತ್ತರಾದವರು, ಅಜ್ಞಾನವಿಲ್ಲದವರು, ಜ್ಞಾನಿಗಳು ಎಂದಭಿಪ್ರಾಯವು. ಈ ಎರಡು ವಿಧ ಅಭಿಪ್ರಾಯಗಳೂ ಈ ಶಬ್ದಗಳಿಗೆ ಸರಿಯಾದ ಅರ್ಥವೇ ಎಂಬ ವಿಷಯದಲ್ಲಿ ಸಂಶಯವಿದ್ದೇ ಇದೆ. ಭಾಷ್ಯಕಾರರೂ ಕೂಡ ಈ ಶಬ್ದಗಳ ಅರ್ಥವನ್ನು ಸರಿಯಾಗಿ ವಿವರಿಸುವುದಕ್ಕಾಗದೆ ಪ್ರಕಾರಾಂತರವಾಗಿ ಇನ್ನೊಂದು ವಿಧವಾದ ಅರ್ಥವನ್ನೂ ಹೇಳಿರುವರು. **ಯದ್ವಾ । ಅನರ್ವಾಣಸ್ತ್ವಾಮಪ್ರಾಪ್ನುವಂತೋ ಯೇಽಸ್ಮದ್ವಿರೋಧಿನೋ ನೋಽಸ್ಮಾನಭಿ ಚಕ್ಷತೇ ಅಭಿವದಂತಿ ನಿಂದಂತಿ ತೇಽಪೀವೃತಾ ಆಚ್ಛಾದಿತಾ ರಕ್ಷಿತಾ ಅಪ್ಯಪೋರ್ಣುವಂತೋಽಪಗತರಕ್ಷಣಾ ಭವಂತಿ।** ಎಂದರೆ, ನಮ್ಮ ವಿರೋಧಿಗಳಾದ ಯಾವ ಮನುಷ್ಯರು ನಿನ್ನನ್ನು ಆಶ್ರಯಿಸದೆ ನಮ್ಮನ್ನು ನಿಂದಿಸುತ್ತಾರೆಯೋ ಅಂತವರಿಗೆ ಸ್ವರಕ್ಷಣೆಯಿದ್ದರೂ ಆ ರಕ್ಷಣೆಯು ಅವರಿಗೆ ದೊರಕದಂತೆ ಆಗಲಿ ಎಂದು ಹೇಳಿರುವರು. ಈ ಅರ್ಥವೂ ಸಹ ಅಷ್ಟು ಸಮಂಜಸವಾಗಿಲ್ಲ. ಈ ಎರಡು ವಿಧವಾದ ಅರ್ಥಗಳಲ್ಲಿಯೂ ಸಂಶಯಕ್ಕ

ವಕಾಶವಿದ್ದೇ ಇದೆ. ಹೇಗೆಂದರೆ-ಅಜ್ಞಾನದಿಂದ ಆವೃತರಾದವರು ಇನ್ನೊಬ್ಬರಿಗೆ ಬುದ್ಧಿಹೇಳುವುದು ಸರಿಯೆನಿಸುವುದಿಲ್ಲ. ಹಾಗೆಯೇ ಎರಡನೆಯ ಅರ್ಥದಲ್ಲಿ ನಿನ್ನನ್ನು ಆಶ್ರಯಿಸದವರಿಗೆ ರಕ್ಷಣೆ ಇದ್ದರೂ ಎಂದು ಹೇಳಿರುವುದೂ ಸರಿಯಾಗಿಲ್ಲ ಏಕೆಂದರೆ ನಿನ್ನನ್ನು ಆಶ್ರಯಿಸದೆ ಇರುವವರಿಗೆ ರಕ್ಷಣೆಯೇ ಇರುವುದಿಲ್ಲ. ಹೀಗಿರುವಾಗ ಅವರಿಗಿರುವ ರಕ್ಷಣೆಯನ್ನು ನಾಶಪಡಿಸು ಎಂದು ಹೇಳುವುದೂ ಸಹ ಯುಕ್ತಿರಹಿತವಾಗಿಯೇ ಇದೆ. ಅಂತೂ ಈ ಋಕ್ಕಿನ ಸರಿಯಾದ ಅರ್ಥವು, ಅದರಲ್ಲಿಯೂ ಉತ್ತರಾರ್ಧದ ಅರ್ಥವು ಸಂಶಯವಿಶಿಷ್ಟವಾಗಿಯೇ ಉಳಿದಿದೆ.

### ವ್ಯಾಕರಣಪ್ರಕ್ರಿಯಾ

**ಸುಪ್ರೈತುಃ**—ಇಣ್ ಗತೌ ಧಾತು. ಕರ್ತ್ರರ್ಥದಲ್ಲಿ ತೃನ್ ಪ್ರತ್ಯಯ. ಪ್ರಎಂಬ ಉಪಸರ್ಗದ ಪರದಲ್ಲಿರುವಾಗ **ಏತ್ಯೇಧತ್ಯೂಠ್ಸು** ಎಂಬುದರಿಂದ ವೃದ್ಧಿ. ಷಷ್ಠೀ ಏಕವಚನಾಂತರೂಪ.

**ಸುಯವಸಃ**—ಕ್ರತ್ವಾದಿಯಲ್ಲಿ ಪಠಿತವಾಗಿರುವುದರಿಂದ ಬಹುವ್ರೀಹಿಯಲ್ಲಿ **ಕ್ರತ್ವಾದಯಶ್ಚ** (ಪಾ. ಸೂ. ೬-೨-೧೧೮) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಅನರ್ವಾಣಃ**—ನಞ್‌ಪೂರ್ವಪದವುಳ್ಳ ಬಹುವ್ರೀಹಿಸಮಾಸ. **ಅರ್ವಣಸ್ತ್ರಸಾವನಞಃ** ಎಂಬಲ್ಲಿ ನ ಞ್‌ನ ಪರದಲ್ಲಿರುವಾಗ ನಿಷೇಧಮಾಡಿರುವುದರಿಂದ ತೃ ಎಂಬುದು ಅಂತಾದೇಶವಾಗಿ ಬರುವುದಿಲ್ಲ. **ನಞ್‌ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಚಕ್ಷತೇ**—ಚಕ್ಷಿಙ್ ವ್ಯಕ್ತಾಯಾಂ ವಾಚಿ. ಧಾತು. ಅದಾದಿ. ಆತ್ಮನೇಪದದಲ್ಲಿ ಶಪಿಗೆ ಲುಕ್ ಬರುವುದರಿಂದ ಝ ಪ್ರತ್ಯಯಕ್ಕೆ **ಆತ್ಮನೇಪದೇಷ್ವನತಃ** ಎಂಬುದರಿಂದ ಅತಾದೇಶ ಬರುತ್ತದೆ. ಯಚ್ಛಬ್ದಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಅಪೀವೃತಾಃ**—ಅಪಿ ಎಂಬುದು ಉಪಸರ್ಗ. ವೃಞ್ ವರಣೇ ಧಾತು. ಕರ್ಮಣಿಯಲ್ಲಿ **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. ಇದು ಕಿತ್ತಾದುದರಿಂದ ಗುಣ ಬರುವುದಿಲ್ಲ. **ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಪೂರ್ವಪದಕ್ಕೆ ದೀರ್ಘ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಸಂಜ್ಞೆ ಇರುವುದರಿಂದ ಅಪಿಗೆ ಪ್ರಕೃತಿಸ್ವರ ಬರುತ್ತದೆ.

**ಅಸ್ಥುಃ**—ಷ್ಠಾ ಗತಿನಿವೃತ್ತೌ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್. ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಗಾತಿಸ್ಥಾಘುಪಾ**—(ಪಾ. ಸೂ. ೨-೪-೭೭) ಎಂಬುದರಿಂದ ಸಿಚಿಗೆ ಲುಕ್. **ಆತಃ** (ಪಾ ಸೂ. ೩-೪-೧೧೦) ಎಂಬುದರಿಂದ ಪ್ರತ್ಯಯಕ್ಕೆ ಉಸಾದೇಶ. ಪೂರ್ವರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

---

### ಸಂಹಿತಾಪಾಠಃ

ಸಂ ಯಂ ಸ್ತುಭೋಽವನಯೋ ನ ಯಂತಿ ಸಮುದ್ರಂ ನ ಸ್ರವತೋ

ರೋಧಚಕ್ರಾಃ ।

ಸ ವಿದ್ವಾँ ಉಭಯಂ ಚಷ್ಟೇ ಅಂತರ್ಬೃಹಸ್ಪತಿಸ್ತರ ಆಪಶ್ಚ ಗೃಧ್ರಃ ॥ ೭ ॥

। ಪದಪಾಠಃ ।

ಸಂ । ಯಂ । ಸ್ತುಭಃ । ಅವನಯಃ । ನ । ಯಂತಿ । ಸಮುದ್ರಂ । ನ । ಸ್ರವತಃ । ರೋಧಽಚಕ್ರಾಃ ।

ಸಃ । ವಿದ್ವಾನ್ । ಉಭಯಂ । ಚಷ್ಟೇ । ಅಂತಃ । ಬೃಹಸ್ಪತಿಃ । ತರಃ । ಆಪಃ । ಚ । ಗೃಧ್ರಃ ॥ ೭ ॥

ಸಾಯಣಭಾಷ್ಯಂ

ಸಂ ಯಂ ಸ್ತುಭ ಇತ್ಯೇಷಾ ಬಾರ್ಹಸ್ಪತ್ಯೇ ಪಶೌ ಪುರೋಡಾಶಸ್ಯ ಯಾಜ್ಯಾ । ಸೂತ್ರಿತಂ ಚ । ಸಂ ಯಂ ಸ್ತುಭೋಽವನಯೋ ನ ಯಂತ್ಯೇವಾ ಪಿತ್ರೇ । ಆ. ೩-೭ । ಇತಿ ॥

ಯಂ ಬೃಹಸ್ಪತಿಂ ಸ್ತುಭಃ ಸ್ತೋತ್ರಾಣ್ಯವನಯೋ ನ ಸರ್ವಾ ಅವನಯೋ ಭೂಮಯೋ ಮನುಷ್ಯಾ ಯಥಾ ಸ್ವಾಮಿನಂ ಕರ್ಮ ಪ್ರತಿ ವಾ ಸಂ ಯಂತಿ ಸಂಗಚ್ಛಂತಿ ತದ್ವತ್ ತಥಾ ಸಮುದ್ರಂ ರೋಧಚಕ್ರಾಃ । ನದೀನಾಮ್ಯೈತತ್ । ರೋಧನಶೀಲಾನಿ ಚಕ್ರಾಣಿ ಯಾಸು ತಾಸ್ತಾದೃಶ್ಯಃ ಕೂಲಂ ಕ್ರಮಮಾಣಾ ವಾ ಸ್ರವತಃ ಸ್ರವಂತ್ಯೋ ನದ್ಯೋ ಯಥಾ ಯಂತಿ ತದ್ವತ್ ಸರ್ವಾ ಅಪಿ ಸ್ತುತಯೋ ಯಮೇವ ಪ್ರಾಪ್ನುವಂತಿ ಗೃಧ್ರೋ ಗರ್ಧನಶೀಲೋ ವೃಷ್ಟಿಮಾಕಾಂಕ್ಷಮಾಣಃ ಸ ಬೃಹಸ್ಪತಿರ್ವಿದ್ವಾನ್ ವಕ್ಷ್ಯಮಾಣಾಭಿಜ್ಞಸ್ತರಸ್ತರಣಂ ಜಲಾಭಿವೃದ್ಧಿಮಾಪ ಉದಕಾನಿ ಚೋಭಯಮಂತರ್ಮಧ್ಯೇ ಸ್ಥಿತ್ವಾ ಚಷ್ಟೇ ಪಶ್ಯತಿ । ಕರೋತೀತ್ಯರ್ಥಃ ॥

ಪ್ರತಿಪದಾರ್ಥ

ಅವನಯೋ ನ—ಮಾನವರು ತಮ್ಮ ಯಜಮಾನರನ್ನು ಸುತ್ತುವರಿಯುವಂತೆಯೂ (ಮತ್ತು) । ರೋಧಚಕ್ರಾಃ—ಎರಡು ದಡಗಳ ನಡುವೆ ಹರಿಯುವ ನದಿಗಳು । ಸಮುದ್ರಂ—ಸಮುದ್ರಾಭಿಮುಖವಾಗಿ । ಸ್ರವತಃ—(ಒಂದೇ ಮಾರ್ಗವನ್ನನುಸರಿಸಿ) ಹರಿಯುವಂತೆಯೂ । ಸ್ತುಭಃ—ಸಕಲಸ್ತುತಿಗಳೂ ಸಹ । ಯಂ—ಯಾವ ಬೃಹಸ್ಪತಿಯನ್ನು । ಸಂ ಯಂತಿ—ಹೋಗಿ ಸುತ್ತುವರಿದು ಸೇರುತ್ತವೆಯೋ । ಸಃ ಬೃಹಸ್ಪತಿಃ—ಆ ಬೃಹಸ್ಪತಿಯು । ವಿದ್ವಾನ್—ಪ್ರಾಜ್ಞನಾದವನಾಗಿಯೂ । ಗೃಧ್ರಃ—ಜಲಾಕಾಂಕ್ಷಿಯಾಗಿಯೂ । ಅಂತಃ—ಮಧ್ಯಭಾಗದಲ್ಲಿ ನಿಂತು । ತರಃ—ಜಲಾಭಿವೃದ್ಧಿಯನ್ನು ಅಥವಾ ದಾಟುವ ಕ್ರಮವನ್ನೂ । ಆಪಃ—ಉದಕವನ್ನೂ । ಉಭಯಂ ಚ-ಈ ಎರಡು ವಿಷಯುಗಳನ್ನೂ । ಚಷ್ಟೇ—ಧ್ಯಾನಿಸಿ (ಜಲಾಭಿವೃದ್ಧಿಯನ್ನು) ಉಂಟುಮಾಡುತ್ತಾನೆ.

ಭಾವಾರ್ಥ

ಮಾನವರು ತಮ್ಮ ಯಜಮಾನರನ್ನು ಸುತ್ತುವರಿಯುವಂತೆಯೂ, ಎರಡು ದಡಗಳ ನಡುವೆ ಹರಿಯುವ ನದಿಗಳು ಸಮುದ್ರಾಭಿಮುಖವಾಗಿ ಏಕಮಾರ್ಗಾನುಸರಣದಿಂದ ಹರಿಯುವಂತೆಯೂ, ಸಕಲ ಸ್ತುತಿಗಳೂ ಯಾವ ಬೃಹಸ್ಪತಿಯನ್ನು ಸೇರಿ ಸುತ್ತುವರಿಯುತ್ತವೆಯೋ ಆ ಬೃಹಸ್ಪತಿಯು ಪ್ರಾಜ್ಞನಾದವನಾಗಿಯೂ, ಜಲಾಕಾಂಕ್ಷಿ

ಯಾಗಿಯೂ ಮಧ್ಯಭಾಗದಲ್ಲಿ ನಿಂತು ಜಲಾಭಾವವನ್ನು ದಾಟುವ ಕ್ರಮವನ್ನೂ ಉದಕವನ್ನೂ ಧ್ಯಾನಿಸಿ ಜಲಾಭಿವೃದ್ಧಿಯನ್ನುಂಟುಮಾಡುತ್ತಾನೆ.

## English Translation

To whom praises (necessarily) proceed, as men (assemble round a master); as rivers, rolling between their banks, flow to the ocean: that wise Brihaspati, greedy (after rain), and stationary in the midst, contemplates both (the ferry and the water),

### ವಿಶೇಷವಿಷಯಗಳು

**ಸಂ ಯಂ ಸ್ತುಭಃ** ಎಂಬ ಈ ಋಕ್ಕು ಬೃಹಸ್ಪತಿಯನ್ನುದ್ದೇಶಿಸಿ ಪಶುಯಾಗವನ್ನು ಮಾಡುವ ಪುರೋಡಾಶಹೋಮದಲ್ಲಿ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಸಂ ಯಂ ಸ್ತುಭೋಽವನಯೋ ನ ಯಂತ್ಯೇವಾ ಪಿತ್ರೇ** ಎಂಬ ಸೂತ್ರದಿಂದ ವಿವೃತವಾಗಿರುವುದು.

ಈ ಋಕ್ಕಿನ ಅರ್ಥವೂ ಸಹ ಸ್ಪಷ್ಟವಾಗಿಲ್ಲ. ಏಕೆಂದರೆ ಪೂರ್ವಾರ್ಧದಲ್ಲಿ ಅವನಯೋ ನ ಎಂಬ ಶಬ್ದಗಳಿಗೂ ಉತ್ತರಾರ್ಧದಲ್ಲಿ ಉಭಯಂ, ಅಂತಃ, ನುತ್ತು ತರಃ ಆಪಃ ಎಂಬ ಶಬ್ದಗಳಿಗೂ ಅರ್ಥವು ಸರಿಯಾಗಿ ಹೊಂದುವುದಿಲ್ಲ.

**ಸ್ತುಭಃ—ಸ್ತೋಭತೀತಿ ಸ್ತುತಿಃ । ಸ್ತೋಭತಿಶಬ್ದವು** ಅರ್ಚತಿನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೪) ಆದ್ದರಿಂದ ಸ್ತುಭಃ ಎಂದರೆ ಸ್ತೋತ್ರಗಳು.

**ಅವನಯಃ—ಭೂಮಯೋ ಮನುಷ್ಯಾಃ । ಅವನಯಃ ।** ಎಂಬ ಶಬ್ದವು ಪೃಥಿವೀನಾಮಗಳಲ್ಲಿಯೂ (ನಿ ೨-೫) ನದೀನಾಮಗಳಲ್ಲಿಯೂ (ನಿ ೨-೨೪) ಅಂಗುಲಿನಾಮಗಳಲ್ಲಿಯೂ (ನಿ ೩-೯) ಪಠಿತವಾಗಿದೆ. ಇಲ್ಲಿ ಅವನಿಶಬ್ದವು ಭೂಮಿಯೆಂಬರ್ಥದಲ್ಲಿ-ಭೂಮಿಯಲ್ಲಿ ವಾಸಮಾಡುವ ಮನುಷ್ಯರು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಈ ಋಕ್ಕಿನಲ್ಲಿರುವ **ಅವನಯೋ ನ ಯಂತಿ** ಎಂಬ ಶಬ್ದಗಳಿಗೆ ಮನುಷ್ಯರು ತಮ್ಮ ಯಜಮಾನನ್ನು ಸಮೀಪಿಸುವಂತೆ ಎಂದು ಸಾಯಣರ ವಿವರಣೆ ಇದೆ. ಈ ಶಬ್ದಗಳಿಗೆ ಈ ಅರ್ಥವು ಹೇಗೆ ಸಾಧ್ಯವೆಂಬುದನ್ನು ಊಹಿಸಿ ಹೊಂದಿಸಬೇಕಾಗಿರುವುದು. ಋಷಿಯ ಆಶಯವೇನೆಂಬುದನ್ನು ಖಚಿತವಾಗಿ ತಿಳಿಯಲು ಸಾಧ್ಯವಿಲ್ಲ.

**ರೋಧಚಕ್ರಾಃ**—ಈ ಶಬ್ದವು ನದೀನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೪) ಈ ಶಬ್ದಕ್ಕೆ ಅವಯವಾರ್ಥವು ಮೂರುವಿಧವಾಗಿರುವುದು-ರುಧಿರ್ ಆವರಣೇ ಮತ್ತೂ ಡುಕೃಞ್ ಕರಣೇ ಎಂಬ ಎರಡು ಧಾತುಗಳಿಂದ ಕ್ರಮವಾಗಿ ನಿಷ್ಪನ್ನವಾದ ರೋಧ ಮತ್ತು ಚಕ್ರ ಎಂಬ ಪದಗಳು ಸೇರಿ ರೋಧಚಕ್ರವೆಂಬ ಶಬ್ದವಾಗಿದೆ.

**(೧) ರೋಧಸ್ಯ ನಿರೋಧಸ್ಯ ಚಕ್ರಂ ಕರಣಂ ಕೃತಿರಾಸಾಂ ವಿದ್ಯತೆ ಇತಿ ರೋಧಚಕ್ರಾಃ । ನದ್ಯೋ ವೃಷ್ಟ್ಯಾ ಪ್ರಾಣಿನಾಂ ಸ್ವೈರಸಂಚರಣನಿರೋಧಕಾರಿಣ್ಯಃ ।** ನದಿಗಳು ತಮ್ಮಲ್ಲಿರುವ ನೀರಿನಿಂದ ಪ್ರಾಣಿಗಳ ಸಂಚಾರಕ್ಕೆ ಅಡ್ಡಿಯನ್ನುಂಟುಮಾಡುವುವು. ಎಂದರೆ ಪ್ರವಹಿಸುತ್ತಿರುವ ನೀರಿನಿಂದ ಕೂಡಿದ ನದಿಯನ್ನು ಪ್ರಾಣಿಗಳು ದಾಟಲಸಮರ್ಥವಾಗಿರುವುವು ಆದುದರಿಂದ ನದಿಗಳಿಗೆ ರೋಧಚಕ್ರಾಃ ಎಂದು ಹೆಸರು.

**(೨) ಯದ್ವಾ । ರೋಧಃ ತೀರಂ ತಸ್ಯ ಕರಣಂ ನಿರ್ಮಾಣಮಾಸಾಂ ವಿದ್ಯತೇ ತೀರವತ್ಯೋ ಹಿ ನದ್ಯಃ । ಸಕಾರಲೋಪಶ್ಛಾಂದಸಃ ।** ಅಥವಾ-ರೋಧವೆಂದರೆ ದಡವು, ತೀರವು ; ನದಿಗಳು ಹರಿಯುವಾಗ ತಮ್ಮ ಎರಡು ಪಕ್ಕಗಳಲ್ಲಿಯೂ ದಡವನ್ನು ನಿರ್ಮಿಸಿಕೊಳ್ಳುವುವು. ಆದುದರಿಂದ ಎರಡು ದಡಗಳ ಮಧ್ಯೆ ಪ್ರವಹಿಸುವುದರಿಂದ ನದಿಗಳಿಗೆ ರೋಧಚಕ್ರಾಃ ಎಂದು ಹೆಸರು.

(೩) **ಯದ್ವಾ । ರುಧ್ಯತೇऽನೇನ ಜಲಪ್ರವಾಹ ಇತಿ ರೋಧಃ ಶಬ್ದಃ ಕರಣಂ ನಿರ್ಮಾಣಮಾಸಾಂ ವಿದ್ಯತೇ ।** ಅಥವಾ ನದಿಯಲ್ಲಿ ಹರಿಯುತ್ತಿರುವ ಜಲಪ್ರವಾಹವು ಅತಿಕ್ರಮಿಸಿ ಹರಿಯದಂತೆ ಇದರ ಪಕ್ಕಗಳಲ್ಲಿರುವ ದಡಗಳಿಂದ ತಡೆಯಲ್ಪಡುವುದು ಇಂತಹ ದಡವನ್ನು ನದಿಗಳು ನಿರ್ಮಿಸಿಕೊಳ್ಳುವುದರಿಂದ ನದಿಗಳಿಗೆ ರೋಧ ಚಕ್ರಾಃ ಎಂದು ಹೆಸರು

ಪ್ರಕೃತವಾದ ಋಕ್ಕಿನಲ್ಲಿ ಹೇಳಿರುವ **ಸಮುದ್ರಂ ನ ಸ್ರವತಃ ರೋಧಚಕ್ರಾಃ**—ಹರಿಯುತ್ತಿರುವ ನದಿಗಳು ಸಮುದ್ರವನ್ನು ಸೇರುವಂತೆ ನಾವು ಮಾಡುವ ಸ್ತೋತ್ರಗಳು ಬೃಹಸ್ಪತಿಯನ್ನು ಸೇರುವುವು ಎಂಬ ಉಪಮಾನವು ಸಮಂಜಸವಾಗಿರುವುದು.

**ಗೃಧ್ರುಃ—ಗರ್ಧನಶೀಲೋ ವೃಷ್ಟಿಮಾಕಾಂಕ್ಷಮಾಣಃ ಸಃ ಬೃಹಸ್ಪತಿಃ ।** ವೃಷ್ಟಿಯನ್ನಪೇಕ್ಷಿಸುವ ಬೃಹಸ್ಪತಿಯೆಂದು ಅರ್ಥವು. ಋ. ಸಂ. ೧೦-೧೨೪-೮ ರಲ್ಲಿ ಇರುವ **ಗೃಧ್ರಸ್ಯ** ಎಂಬ ಶಬ್ದಕ್ಕೆ ಸಾಯಣರು—**ರಸಾನಭಿಕಾಂಕ್ಷತಃ ।** ಉದಕವನ್ನಪೇಕ್ಷಿಸುವ ಎಂದೂ ಮತ್ತು ಋ. ಸಂ. ೧-೮೮-೪ ರಲ್ಲಿರುವ **ಗೃಧ್ರಾಃ** ಎಂಬ ಶಬ್ದಕ್ಕೆ **ಜಲಾಭಿಕಾಂಕ್ಷಾಯುಕ್ತಾನ್** ಎಂದೂ ಅರ್ಥವಿವರಣೆ ಮಾಡಿರುವರು

**ತರಃ—ತರಣಂ ಜಲಾಭಿವೃದ್ಧಿಂ ।** ಜಲಾಭಿವೃದ್ಧಿಯನ್ನು. ಎಂದು ಭಾಷ್ಯಕಾರರ ವಿವರಣೆಯು. **ತರಣಂ** ಎಂದರೆ ದಾಟುವುದು, Ferry ಎಂದು ಪಾಶ್ಚಾತ್ಯಪಂಡಿತರ ವಿವರಣೆಯು.

**ಉಭಯಂ ಚಕ್ಷೇ ಅಂತಃ**—(ಎರಡನ್ನೂ ಎಂದರೆ ಉದಕ ಮತ್ತು ಅದನ್ನು ದಾಟುವ ಕ್ರಮವನ್ನು) ಎರಡರ ಮಧ್ಯದಲ್ಲಿ ನಿಂತು ಬೃಹಸ್ಪತಿಯು ನೋಡುತ್ತಾನೆ ಅಥವಾ ಮಾಡುತ್ತಾನೆ. ಇಲ್ಲಿ **ಉಭಯಮಂತರ್ಮಧ್ಯೇ** ನೀರು ಮತ್ತು ತರಣ ಇವುಗಳ ಮಧ್ಯೆ ಎಂದು ಅರ್ಥಮಾಡುವುದು ಅಷ್ಟು ಸಮರ್ಪಕವಾಗಿಲ್ಲ **ಉಭಯಂ ಅಂತಃ** ಎಂದರೆ ಭೂಮಿ ಮತ್ತು ಸ್ವರ್ಗಲೋಕಗಳ ನಡುವೆ ಅಂತರಿಕ್ಷದಲ್ಲಿ ಎಂಬರ್ಥವು ಸರಿಯಾಗಿ ಹೊಂದುವುದು. ಏಕೆಂದರೆ ಜಲಾವೃತವಾದ ಮೇಘಪಂಕ್ತಿಗಳು ಅಂತರಿಕ್ಷಸ್ಥವಾಗಿರುವುರಿಂದ ಬೃಹಸ್ಪತಿಯು ಆರೀತಿ ಇರುವ ಜಲಾರಾಶಿಯನ್ನೂ ಅದರ ತರಣಕ್ರಮವನ್ನೂ (ಎಂದರೆ ವೃಷ್ಟಿಕ್ರಮ) ಉಂಟುಮಾಡಿದನು ಎಂಬ ಅರ್ಥವೇ ಇಲ್ಲಿ ಸರಿಯಾಗಿ ಹೊಂದಿಕೊಳ್ಳುವುದು.

### ವ್ಯಾಕರಣಪ್ರಕ್ರಿಯಾ

**ಅವನಯಃ**—ಅವ ರಕ್ಷಣಾದಿಷು. ಧಾತು. **ಅರ್ತಿಸೃಧೃಧ—(ಉ. ಸೂ. ೨-೨೫೫)** ಎಂಬುದರಿಂದ ಅನಿ ಪ್ರತ್ಯಯ. ಪ್ರಥಮಾ ಬಹುವಚನಾಂತರೂಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಯಂತಿ**—ಇಣ್ ಗತೌ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. **ಯದ್ವೃತ್ತಾನ್ನಿತ್ಯಮ್** ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುತ್ತದೆ. ಪ್ರತ್ಯಯಾದ್ಯುದಾತ್ತಸ್ವರ ಬರುತ್ತದೆ.

**ಸ್ರವತಃ**—ಸ್ರು ಗತೌ ಧಾತು. ಸ್ರವಣಂ ಸ್ರವಃ ತತ್ಕುರ್ವಂತಿ. ಹರಿಯುವವುಗಳು ಎಂದರ್ಥ. **ಸರ್ವಪ್ರಾತಿಪದಿಕೇಭ್ಯಃ ಕ್ವಿಬ್ವಾ ವಕ್ತವ್ಯಃ** ಎಂಬ ವಾರ್ತಿಕದಿಂದ ಕ್ರಿಯಾ ವಿವಕ್ಷಾಮಾಡಿದಾಗ ಕ್ವಿಪ್ ಪ್ರತ್ಯಯ ಕ್ವಿಬಂತಕ್ಕೆ ಧಾತುಸಂಜ್ಞಾ ಇರುವಾಗ **ಕ್ವಿಪ್ ಚ** ಎಂಬುದರಿಂದ ಇದಕ್ಕೆ ಪುನಃ ಕ್ವಿಪ್ ಪ್ರತ್ಯಯ. (**ಕೃತ್**) ಇದು ಪಿತ್ತಾದುದರಿಂದ ಪೂರ್ವಕ್ಕೆ ತುಕಾಗಮ. ಸ್ರವತ್ ಶಬ್ದವಾಗುತ್ತದೆ. ಧಾತುಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

**ರೋಧಚಕ್ರಾಃ**—ಬಹುವ್ರೀಹಿಯಲ್ಲಿ **ಬಹುವ್ರೀಹೌ ಪ್ರಕೃತ್ಯಾ**—ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಚಷ್ಟೇ**—ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಚಕ್ಷಿಙ್ ಧಾತುವು ದರ್ಶನಾರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಗೃಧ್ರಃ**—ಗೃಧು ಅಭಿಕಾಂಕ್ಷಾಯಾಂ. ಧಾತು. **ಸುಸೂಧಾಗೃಧಿಭ್ಯಃಕ್ರನ್** ( ಉ. ಸೂ. ೪-೬೦೦ ) ಎಂಬುದರಿಂದ ಕ್ರನ್ ಪ್ರತ್ಯಯ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

---

ಸಂಹಿತಾಪಾಠಃ

ಏವಾ ಮಹಸ್ತುವಿಜಾತಸ್ತುವಿಷ್ಮಾನ್ಬೃಹಸ್ಪತಿರ್ವೃಷಭೋ ಧಾಯಿ ದೇವಃ ।
ಸ ನಃ ಸ್ತುತೋ ವೀರವದ್ಧಾತು ಗೋಮದ್ವಿದ್ಯಾಮೇಷಂ ವೃಜನಂ ಜೀರ-
ದಾನುಂ ॥ ೮ ॥

ಪದಪಾಠಃ

ಏವ । ಮಹಃ । ತುವಿऽಜಾತಃ । ತುವಿಷ್ಮಾನ್ । ಬೃಹಸ್ಪತಿಃ । ವೃಷಭಃ । ಧಾಯಿ । ದೇವಃ ।
ಸಃ । ನಃ । ಸ್ತುತಃ । ವೀರऽವತ್ । ಧಾತು । ಗೋऽಮತ್ । ವಿದ್ಯಾಮ । ಇಷಂ । ವೃಜನಂ ಜೀರऽ-
ದಾನುಂ ॥ ೮ ॥

ಸಾಯಣಭಾಷ್ಯಂ

**ಮಹೋ ಮಹಾಂಸ್ತುವಿಜಾತೋ ಬಹ್ವರ್ಥಮುತ್ಪನ್ನಸ್ತುವಿಷ್ಮಾನ್ ಬಲವಾನ್ ವೃಷಭೋऽಪಾಂ ವರ್ಷಿತಾ ದೇವೋ ಬೃಹಸ್ಪತಿರೇವೈವಂ ಸ್ತುತಿಪ್ರಕಾರೇಣ ಧಾಯಿ । ಧೀಯತೇ । ಸ್ತೂಯತ ಇತ್ಯರ್ಥಃ । ಸ ಸ್ತುತೋ ದೇವೋ ನೋऽಸ್ಮಾಕಂ ವೀರವತ್ಪುತ್ರಾದ್ಯುಪೇತಂ ಗೋಮದ್ಗೋಭಿರ್ಯುಕ್ತಂ ಫಲಂ ಧಾತು । ಕರೋತ್ವಿತ್ಯರ್ಥಃ । ವಿದ್ಯಾಮೇತಿ ಗತಂ ॥**

ಪ್ರತಿಪದಾರ್ಥ

**ಮಹಃ**—ಮಹಾತ್ಮನೂ । **ತುವಿಜಾತಃ**—ಬಹುವಾದ ಪ್ರಯೋಜನಗಳಿಗಾಗಿ ಉತ್ಪನ್ನನಾದವನೂ । **ತುವಿಷ್ಮಾನ್**—ಬಲಶಾಲಿಯೂ । **ವೃಷಭಃ**—ಉದಕವನ್ನು ಸುರಿಸತಕ್ಕವನೂ । **ದೇವಃ**—ದೇವತಾತ್ಮಕನೂ ಆದ । **ಬೃಹಸ್ಪತಿಃ**—ಬೃಹಸ್ಪತಿಯು । **ಏವ**—ಈ ಪ್ರಕಾರವಾಗಿ । **ಧಾಯಿ**—ಸ್ತುತಿಸಲ್ಪಡುತ್ತಾನೆ । **ಸ್ತುತಃ ಸಃ**—ಈ ವಿಧವಾಗಿ ಸ್ತುತನಾದ ದೇವನು । **ನಃ**—ನಮಗೆ । **ವೀರವತ್**—ವೀರರಾದ ಪುತ್ರಾದಿಗಳಿಂದ ಕೂಡಿದುದೂ ।

**ಗೋಮತ್**—ಗೋವುಗಳಿಂದ ಕೂಡಿದುದೂ ಆದ ಫಲವನ್ನು । **ಧಾತು**—ಉಂಟುಮಾಡಲಿ । **ವಯಂ**—ನಾವು । **ಇಷಂ**—ಅನ್ನವನ್ನೂ । **ವೃಜನಂ**—ಬಲವನ್ನೂ । **ಜೀರದಾನುಂ**—ದೀರ್ಘಾಯುಷ್ಯವನ್ನೂ । **ವಿದ್ಯಾಮ**—ಪಡೆಯೋಣ.

**ಭಾವಾರ್ಥ**

ಮಹಾತ್ಮನೂ ಬಹುವಾದ ಪ್ರಯೋಜನಗಳಿಗಾಗಿ ಉತ್ಪನ್ನನಾದವನೂ, ಬಲಶಾಲಿಯೂ, ಉದಕವನ್ನು ಸುರಿಸತಕ್ಕವನೂ, ದೇವತಾತ್ಮನೂ ಆದ ಬೃಹಸ್ಪತಿಯು ಈ ಪ್ರಕಾರವಾಗಿ ಸ್ತುತಿಸಲ್ಪಡುತ್ತಾನೆ. ಈ ವಿಧವಾಗಿ ಸ್ತುತನಾದ ದೇವನು ನಮಗೆ ವೀರರಾದ ಪುತ್ರಾದಿಗಳನ್ನೂ, ಗೋವುಗಳನ್ನೂ ಕೊಡಲಿ. ನಾವು ಅನ್ನವನ್ನೂ, ಬಲವನ್ನೂ, ದೀರ್ಘಾಯುಷ್ಯವನ್ನೂ ಪಡೆಯುವಂತಾಗಲಿ.

## English Translation

So, Brihaspati, the mighty, the beneficent, the powerful, the showerer (of benefits), the divine, has been glorified : praised by us, may he make us possessed of progeny and cattle, that thence we may obtain food, strength and long life.

**ವಿಶೇಷವಿಷಯಗಳು**

ಈ ಋಕ್ಕಿನಲ್ಲಿ, ಋಷಿಯು ಸೂಕ್ತದ ಉಪಸಂಹಾರವನ್ನು ಮಾಡುತ್ತಾ ಬೃಹಸ್ಪತಿಯನ್ನು ಪುತ್ರಪೌತ್ರಾಭಿವೃದ್ಧಿಗಾಗಿಯೂ, ಗೋವುಗಳೇ ಮೊದಲಾದ ಪಶುಸಂಪತ್ಪ್ರಾಪ್ತಿಗಾಗಿಯೂ ಪ್ರಾರ್ಥಿಸುತ್ತಾನೆ.

**ತುವಿಜಾತಃ**—ತುವಿ ಎಂಬ ಶಬ್ದವು ಬಹುನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩) **ತುವಿಜಾತ** ಶಬ್ದಕ್ಕೆ ಯಾಸ್ಕರು **ಬಹುಜಾತಃ**—ಬಹಳವಾದ ಪ್ರಯೋಜನಗಳನ್ನು ಮನುಷ್ಯರಿಗೆ ಉಂಟುಮಾಡುವುದಕ್ಕಾಗಿ ಉತ್ಪನ್ನನಾದವನೆಂದು ಹೇಳಿದಾರೆ.

**ವೀರವತ್, ಗೋಮತ್**—ಈ ಶಬ್ದಗಳು ವಿಶೇಷಣಗಳಾಗಿ ಉಪಯೋಗಿಸಲ್ಪಟ್ಟಿವೆ. ವಿಶೇಷ್ಯಪದವನ್ನು ಆಧ್ಯಾಹಾರಮಾಡಿಕೊಳ್ಳಬೇಕು. ಅಥವಾ **ಇಷಂ** ಎಂಬ ಶಬ್ದಕ್ಕೆ ವಿಶೇಷಣಪದಗಳನ್ನಾಗಿ ಬೇಕಾದರೂ ಉಪಯೋಗಿಸಬಹುದು. ಪರಾಕ್ರಮಶಾಲಿಗಳಾದ ಪುತ್ರಪೌತ್ರಾದಿಗಳನ್ನೂ, ಭೃತ್ಯರನ್ನೂ, ಗೋವುಗಳನ್ನೂ ಬೃಹಸ್ಪತಿಯು ಅನುಗ್ರಹಿಸಲಿ ಎಂದು ಮುಖ್ಯಾಭಿಪ್ರಾಯವು.

**ವ್ಯಾಕರಣಪ್ರಕ್ರಿಯಾ**

**ಏವಾ**—ನಿಪಾತಸ್ಯ ಚ (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ತುವಿಜಾತಃ**—ಬೂಹನಾಮುಪಕಾರಕತಯಾ ತತ್ಸಂಬಂಧಿತ್ವೇನ ಜಾತಃ ತುವಿಜಾತಃ ಷಷ್ಠೀತತ್ಪುರುಷ ಸಮಾಸಃ **ಸಮಾಸಸ್ಯ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಧಾಯಿ**—ಡುಧಾಞ್ ಧಾರಣಪೋಷಣಯೋಃ ಧಾತು ಕರ್ಮಣಿಯಲ್ಲಿ ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್. ಪ್ರಥಮಪುರುಷಏಕವಚನಾಂತರೂಪ. **ಬಹುಲಂ ಛಂದಸಿ**—( ಪಾ. ಸೂ. ೬-೪-೭೫ ) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಧಾತು**—ಡುಧಾಞ್ ಧಾರಣಪೋಷಣಯೋಃ ಧಾತು. ಲೋಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಏರುಃ ಎಂಬುದರಿಂದ ಇಕಾರಕ್ಕೆ ಉಕಾರಾದೇಶ. ಛಾಂದಸವಾಗಿ ಶ್ಲುವಿಕರಣ ಬರುವುದಿಲ್ಲ. ಆದುದರಿಂದ ಧಾತುವಿಗೆ ದ್ವಿತ್ವಾದಿಗಳು ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರಬರುತ್ತದೆ.

---

## ನೂರ ತೊಂಭತ್ತೊಂದನೆಯ ಸೂಕ್ತವು.

---

**ಕಂಕತ ಇತಿ ಷೋಡಶರ್ಚಂ ದ್ವಾದಶಂ ಸೂಕ್ತಂ ಋಷಿರಗಸ್ತ್ಯಃ ಅಪ್ತೃಣಸೂರ್ಯಾಸ್ತ್ರಯೋ ದೇವತಾಃ ತ್ರಿಷ್ಟುಪ್ ಛಂದಃ । ಸೂರ್ಯೇ ವಿಷಮಿತ್ಯಾದ್ಯಾಸ್ತಿಸ್ರೋ ಮಹಾಪಂಕ್ತಯಃ । ಅಷ್ಟಕೌ ಸಪ್ತಕಃ ಷಟ್ಕೋ ದಶಕೋ ನವಕಶ್ಚ । ಅನು. ೧೦-೩ । ಇತ್ಯುಕ್ತಲಕ್ಷಣೋಪೇತತ್ವಾತ್ । ನವಾನಾಮಿತ್ಯೇಷಾ ತ್ರಯೋದಶೀ ಮಹಾಬೃಹತೀ । ಚತ್ವಾರೋಽಷ್ಟಕಾ ಜಾಗತಶ್ಚ ಮಹಾಬೃಹತೀ । ಅನು ೯-೯ । ಇತಿ ಹ್ಯುಕ್ತಂ । ಅತ್ರ ಯದ್ಯಪ್ಯಕ್ಷರಾಣಿ ನ್ಯೂನಾನಿ ತಥಾಪಿ ವ್ಯೂಹೇನ ಪೂರಣೀಯಾನಿ । ಅತ್ರಾನುಕ್ರಮಣಿಕಾ । ಕಂಕತಃ ಷೋಳಶೋಪನಿಷದಾನುಷ್ಟುಭಮಪ್ತೃಣಸೌರ್ಯಂ ವಿಷಶಂಕಾವಾನಗಸ್ತ್ಯಃ ಪ್ರಾಬ್ರವೀದ್ಧಶಮ್ಯಾದ್ಯಾಶ್ಚ ತಿಸ್ರೋ ಮಹಾಪಂಕ್ತಯೋ ಮಹಾಬೃಹತೀ ಚೇತಿ । ಉಪನಿಷದಿತಿ ರಹಸ್ಯಮಿತ್ಯರ್ಥಃ । ವಿಷಶಂಕಾಯುಕ್ತೋಽಗಸ್ತ್ಯಸ್ತತ್ಪರಿಹಾರಾಯೇದಮುಕ್ತವಾನ್ ॥ ಶ್ರೌತಸ್ಯ ವಿಶೇಷವಿನಿಯೋಗೋ ಲೈಂಗಿಕಃ ॥ ಅತ್ರ ಶೌನಕಃ । ಕಂಕತೋ ನೇತಿ ಸೂಕ್ತಂ ತು ವಿಷಾರ್ತಃ ಪ್ರಯತೋ ಜಪೇತ್ । ವಿಷಂ ನ ಕ್ರಮತೇ ಚಾಸ್ಯ ಸರ್ಪಾದ್ವೃಶ್ಚಿವಿಷಾದಪಿ ॥ ಯತ್ಕೀಟಲೂತಾಸು ವಿಷಂ ದಂಷ್ಟ್ರೀವೃಶ್ಚಿಕತಶ್ಚ ಯತ್ । ಮೂಲಂ ಚ ಕೃತ್ರಿಮಂ ಚೈವ ಜಪನ್ಸರ್ವಮಪೋಹತಿ । ಋಗ್ವಿ. ೧-೨೮ । ಇತಿ ॥**

ಅನುವಾದವು—ಕಂಕತೋ ನ ಎಂಬ ಈ ಸೂಕ್ತವು ಇಪ್ಪತ್ತನಾಲ್ಕನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಹದಿನಾರು ಋಕ್ಕುಗಳಿರುವುವು ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು. ಅಪ್ತೃಣಸೂರ್ಯರು (ಉದಕ, ತೃಣ, ಸೂರ್ಯ) ದೇವತೆಗಳು, ತ್ರಿಷ್ಟುಪ್ ಛಂದಸ್ಸು **ಸೂರ್ಯೇ ವಿಷಂ** ಎಂದು ಮೊದಲಾಗುವ ಮೂರು ಋಕ್ಕುಗಳು (೧೦, ೧೧, ೧೨ ನೇ ಋಕ್ಕುಗಳು) ಮಹಾಬೃಹತೀ ಛಂದಸ್ಕವು. ಅನುಕ್ರಮಣಿಕೆಯಲ್ಲಿ ಈ ಛಂದಸ್ಸಿನ ಋಕ್ಕಿನಲ್ಲಿ ಮೊದಲ ಎರಡು ಪಾದಗಳಿಗೆ ಎಂಟೆಂಟು ಅಕ್ಷರಗಳೂ, ಮೂರನೆಯ ಪಾದಕ್ಕೆ ಏಳು ಅಕ್ಷರಗಳೂ, ನಾಲ್ಕನೆಯ ಪಾದಕ್ಕೆ ಆರು ಅಕ್ಷರಗಳೂ, ಐದನೆಯ ಪಾದಕ್ಕೆ ಹತ್ತು ಅಕ್ಷರಗಳೂ, ಆರನೆಯ ಪಾದಕ್ಕೆ ಒಂಭತ್ತುಅಕ್ಷರಗಳೂ ಇರುವುವೆಂದು ಹೇಳಿದೆ. (ಅನು. ೧೦-೩) **ನವಾನಾಂ** ಎಂಬ ಹದಿಮೂರನೆಯ ಋಕ್ಕು ಮಹಾಬೃಹತೀ ಛಂದಸ್ಕವು ಈ ಛಂದಸ್ಸಿನ ಋಕ್ಕಿನಲ್ಲಿ ಎಂಟೆಂಟು ಅಕ್ಷರಗಳ ನಾಲ್ಕು ಪಾದಗಳೂ, ಹನ್ನೆರಡು ಅಕ್ಷರದ ಒಂದು ಪಾದವಿರುವ

ವೆಂದು ಅನುಕ್ರಮಣಿಕೆಯಲ್ಲಿ ಹೇಳಿದೆ. (ಅನು. ೯-೯). ಸಾಧಾರಣವಾಗಿ ಛಂದಸ್ಸುಗಳಲ್ಲಿ ಕೆಲವು ಅಕ್ಷರಗಳು ಕಮ್ಮಿ ಯಾಗಿದ್ದರೂ ಪದವಿಭಾಗ, ಸಂಧಿಯೇ ಮೊದಲಾದ ಕ್ರಮಗಳಿಂದ ಅಕ್ಷರಗಳು ಕಮ್ಮಿಯಾಗಿ ಕಂಡು ಬಂದರೂ ಒಟ್ಟಿನಲ್ಲಿ ಅಕ್ಷರಗಳು ಕ್ಲ್ಪಪ್ತಸಂಖ್ಯೆಯುಳ್ಳದ್ದಾಗಿರುವುವೆಂದೇ ಊಹಿಸಿಕೊಳ್ಳಬೇಕು. ಅನುಕ್ರಮಣಿಕೆಯಲ್ಲಿ— **ಕಂಕತಃ ಷೋಳಶೋಪನಿಷದಾನುಷ್ಟುಭಮುಪ್ತೃಣಸೌರ್ಯಂ ವಿಷಶಂಕಾವಾನಗಸ್ತ್ಯಃ ಪ್ರಾಬ್ರವೀದ್ದ್ವಶಮ್ಯಾದ್ಯಾಶ್ಚ ತಿಸ್ರೋ ಮಹಾಪಂಕ್ತಯೋ ಮಹಾಬೃಹತೀ ಚೇತಿ** । ಎಂದು ಹೇಳಿರುವುದು. ಇಲ್ಲಿ ಉಪನಿಷತ್ ಎಂದರೆ ರಹಸ್ಯವೆಂದರ್ಥವು. ತನಗೆ ಸರ್ಪದಶನದಿಂದ ವಿಷಸ್ಪರ್ಶವಾಗಿರಬಹುದೆಂಬ ಸಂಶಯದಿಂದ ಆ ವಿಷಪರಿಹಾರ ಕ್ಕಾಗಿ ಅಗಸ್ತ್ಯ ಋಷಿಯು ಈ ಸೂಕ್ತವನ್ನು ಪಠಿಸಿದನೆಂದು ಹೇಳಲಾಗಿದೆ. ಶ್ರೌತಪ್ರಯೋಗವಿಷಯದಲ್ಲಿ ಈ ಸೂಕ್ತದ ವಿನಿಯೋಗವು ಲೈಂಗಿಕವು. ಶೌನಕಮಹರ್ಷಿಯು ತಮ್ಮ ಋಗ್ವಿಧಾನವೆಂಬ ಗ್ರಂಥದಲ್ಲಿ ಈ ಸೂಕ್ತದ ವಿನಿಯೋಗವಿಚಾರವಾಗಿ ಈರೀತಿ ಹೇಳಿರುವರು—

**ಕಂಕತೋ ನೇತಿ ಸೂಕ್ತಂ ತು ವಿಷಾರ್ತಃ ಪ್ರಯತೋ ಜಪೇತ್ ।**
**ವಿಷಂ ನ ಕ್ರಮತೇ ಚಾಸ್ಯ ಸರ್ಪಾದ್ದೃಷ್ಟಿವಿಷಾದಪಿ ।**
**ಯತ್ಕೀಟಲೂತಾಸು ವಿಷಂ ದಂಷ್ಟ್ರಿವೃಶ್ಚಿಕಜಂ ಚ ಯತ್ ॥**
**ಮೂಲಂ ಚ ಕೃತ್ರಿಮಂ ಚೈವ ಜಪನ್ ಸರ್ವಂ ವ್ಯಪೋಹತಿ ।**
**ಧರ್ಮಂ ಬುದ್ಧಿಂ ಧನಂ ಪುತ್ರಾನ್ ಸೌಭಾಗ್ಯಂ ಬ್ರಹ್ಮವರ್ಚಸಂ ।**
**ಆರೋಗ್ಯಂ ಪುಷ್ಟಿಮಾಯುಷ್ಯಂ ಪಶೂನ್ ವಿದ್ಯಾಂ ಮಹದ್ಯಶಃ ।**

(ಋಗ್ವಿಧಾನ. ೧-೨೮)

ವಿಷಬಾಧೆಯಿಂದ ನರಳುತ್ತಿರುವ ಪುರುಷನು (ಹಾವು ಕಚ್ಚಿದ್ದರಿಂದ ವಿಷವೇರಿ ಪರಿತಪಿಸುತ್ತಿರುವಪುರುಷನು) ಕಂಕತೋ ನ ಎಂಬ ಈ ಸೂಕ್ತವನ್ನು ಶ್ರದ್ಧಾಭಕ್ತಿಯಿಂದ ಜಪಿಸಬೇಕು. ಹಾಗೆ ಮಾಡಿದಲ್ಲಿ ಹಾವು ಕಚ್ಚಿದ್ದರಿಂದ ಶರೀರನಲ್ಲಿ ವ್ಯಾಪಿಸಿರುವ ವಿಷವಾಗಲಿ, ದೃಷ್ಟಿದೋಷದಿಂದ ಉಂಟಾದ ವಿಷವಾಗಲಿ ಶರೀರದಲ್ಲಿ ಮುಂದಕ್ಕೆ ವ್ಯಾಪಿಸು ವುದಿಲ್ಲ. ಇದಲ್ಲದೆ ಸರೀಸೃಪ, ಚೇಳು ಮೊದಲಾದ ವಿಷಜಂತುಗಳಿಂದ ಉಂಟಾಗುವ ವಿಷವು ಸಹ ಪರಿಹಾರವಾಗು ವುದು. ಆ ವಿಷವು ವಿಷಜಂತುವಿನಿಂದ ಕಚ್ಚಲ್ಪಟ್ಟು ಶರೀರದಲ್ಲಿ ವ್ಯಾಪಿಸಿರಲಿ ಅಥವಾ ವಿಷಮಿಶ್ರಿತವಾದ ಆಹಾರಾದಿ ಗಳು ಶರೀರಕ್ಕೆ ಸೇರಿರಲಿ ಇವೆಲ್ಲವೂ ಈ ಸೂಕ್ತಜಪದಿಂದ ಪರಿಹಾರವಾಗುವುವು. ಇದಲ್ಲದೆ ಈ ಸೂಕ್ತಜಪದಿಂದ ಧರ್ಮಕಾರ್ಯವೂ, ಒಳ್ಳೆಯ ಬುದ್ಧಿಯೂ, ಧನ, ಪುತ್ರಾದಿಗಳು, ಸೌಭಾಗ್ಯ, ಬ್ರಹ್ಮವರ್ಚಸ್ಸು, ಆರೋಗ್ಯ, ಪುಷ್ಟಿ ಆಯುಷ್ಯಾಭಿವೃದ್ಧಿ, ಪಶುಸಂಪತ್ತು, ವಿದ್ಯ, ಕೀರ್ತಿ ಮೊದಲಾದ ಫಲಗಳೆಲ್ಲವೂ ಲಭಿಸುವುವು.

॥ ಓಂ ॥

## ಸೂಕ್ತ—೧೯೧

॥ ಮಂಡಲ—೧ ॥ ಅನುವಾಕ—೨೪ ॥ ಸೂಕ್ತ—೧೯೧ ॥
॥ ಅಷ್ಟಕ—೨ ॥ ಅಧ್ಯಾಯ—೫ ॥ ವರ್ಗ—೧೪, ೧೫, ೧೬ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೬ ॥

ಋಷಿಃ—ಅಗಸ್ತ್ಯಃ ॥
ದೇವತಾ—ಅಪ್ತೃಣಸೂರ್ಯಾಃ ॥
ಛಂದಃ—೧-೯, ೧೪-೧೬ ಅನುಷ್ಟುಪ್ । ೧೦-೧೨. ಮಹಾಪಂಕ್ತಿಃ ।
೧೩. ಮಹಾಬೃಹತೀ ॥

ಸಂಹಿತಾಪಾಠಃ

ಕಂಕತೋ ನ ಕಂಕತೋಽಥೋ ಸತೀನಕಂಕತಃ ।
ದ್ವಾವಿತಿ ಪ್ಲುಷೀ ಇತಿ ನ್ಯ೧ದೃಷ್ಟಾ ಅಲಿಪ್ಸತ ॥ ೧ ॥

ಪದಪಾಠಃ

ಕಂಕತಃ । ನ । ಕಂಕತಃ । ಅಥೋ ಇತಿ । ಸತೀನಽಕಂಕತಃ ।
ದ್ವೌ । ಇತಿ । ಪ್ಲುಷೀ ಇತಿ । ಇತಿ । ನಿ । ಅದೃಷ್ಟಾಃ । ಅಲಿಪ್ಸತ ॥ ೧ ॥

ಸಾಯಣಭಾಷ್ಯಂ

ಕಂಕತೋಽಲ್ಪವಿಷಃ ಕಶ್ಚಿತ್ ನ ಕಂಕತಸ್ತದ್ವಿಪರೀತೋಽನಲ್ಪವಿಷೋ ಮಹೋರಗಾದಿಃ । ತಕಕತೇರ್ಗತ್ಯರ್ಥಸ್ಯ ವರ್ಣವ್ಯತ್ಯಯೇನ ಕಂಕತ ಇತಿ ಸರನ್ ಭವತಿ ॥ ಅಥೋ ಅಪಿ ಚ ಸತೀನಕಂಕತಃ। ಸತೀನಮಿತ್ಯುದಕನಾಮ । ಸತೀನಂ ಗಹನಮಿತಿ ತನ್ನಾಮಸು ಪಾಠಾತ್ । ಉದಕಚಾರ್ಯಲ್ಪವಿಷವಾನ್ ಕಶ್ಚಿದ್ದುಂಡುಭಾದಿಃ । ಏವಂ ದ್ವಾವಿತಿ । ಅಲ್ಪವಿಷಮಹಾವಿಷಭೇದೇನ ಜಲಸ್ಥಲಭೇದೇನ ವಾ ದ್ವಿಪ್ರಕಾರಾವಿತಿ । ಪ್ಲುಷೀ ಇತಿ ಪ್ಲೋಷಣಾವಿತಿ । ಪ್ರಕಾರದ್ವೈವಿಧ್ಯದಾಹಕತ್ವಯೋಃ ಪ್ರತಿಪಾದನಾಯೇತಿಕಾರದ್ವಯಂ । ತಥಾದೃಷ್ಟಾ ಅದೃಶ್ಯಮಾನರೂಪಾ ಏತತ್ಸಂಜ್ಞಕಾಶ್ಚ ಕೇಚಿದ್ವಿಷಧರಾ ಏವಮುಕ್ತಪ್ರಕಾರಾ ಯೇ ಸಂತಿ ತೇ ನೂನಂ ಮಾಂ ನ್ಯಲಿಪ್ಸತ ವಿಶೇಷೇಣ ಲಿಂಪಂತಿ । ಸರ್ವಾಣ್ಯಂಗಾನಿ ವಿಷಮಾವೃಣೋತಿ। ಕೇನೈವಂ ಕೃತಮಿತಿ ಜ್ಞಾಯತ ಇತಿ ಭಾವಃ ॥

ಪ್ರತಿಪದಾರ್ಥ

ಕಂಕತಃ—ಅಲ್ಪವಾದ ವಿಷವುಳ್ಳ ಸರ್ಪಾದಿಗಳೂ । ನ ಕಂಕತಃ—ಅತ್ಯಧಿಕವಾದ ವಿಷವುಳ್ಳ ಮಹೋರಗಾದಿಗಳೂ । ಅಥೋ—ಅದರಂತೆಯೇ । ಸತೀನ ಕಂಕತಃ—ವಿಷಪೂರಿತವಾದ ನೀರುಹಾವುಗಳೂ । ದ್ವಾವಿತಿ—ಭೂಮಿಯಮೇಲೆ ಸಂಚರಿಸತಕ್ಕವೂ ಮತ್ತು ಜಲಚರಗಳೂ ಅಥವಾ ಅಲ್ಪವಿಷವುಳ್ಳವೂ ಮತ್ತು ಮಹಾವಿಷವುಳ್ಳವೂ ಆದ ಎರಡು ಬಗೆಯಲ್ಲಿ । ಪ್ಲುಷೀ ಇತಿ—ಹಿಂಸಾಕಾರಕವೂ, ನಾಶಕಾರಕಗಳೂ ಆಗಿರುವುವೂ । ಅದೃಷ್ಟಾಃ—ಕಣ್ಣಿಗೆ ಗೋಚರವಾಗದ ಇತರ ವಿಷಜಂತುಗಳೂ ಸಹ । ನಿ ಅಲಿಪ್ಸತ—ನನ್ನನ್ನು ವಿಷದಿಂದ ಪೂರಿತನನ್ನಾಗಿ ಮಾಡುತ್ತವೆ

ಭಾವಾರ್ಥ

ಅಲ್ಪವಿಷವುಳ್ಳ ಸರ್ಪಾದಿಗಳೂ, ಅತ್ಯಧಿಕವಾದ ವಿಷವುಳ್ಳ ಮಹೋರಗಾದಿಗಳೂ, ಅದರಂತೆಯೇ ವಿಷಪೂರಿತ ಜಲಚರಗಳೂ, ಈ ರೀತಿ ಎರಡು ಜಾತಿಯ ವಿಷಜಂತುಗಳೂ ಸಹ ನನಗೆ ಗೋಚರವಾಗದ ರೀತಿಯಲ್ಲಿ ನನ್ನನ್ನು ವಿಷಪೂರಿತನನ್ನಾಗಿ ಮಾಡುತ್ತವೆ.

## English Translatin

Some creature of little venom ; some creature of great venom ; or some venomous aquatic reptile ; creatures of two kinds, both destructive (of life), or (poisonous) unseen creatures, have anointed me with their poison.

**। ವಿಶೇಷವಿಷಯಗಳು ।**

ಪ್ರಥಮ ಮಂಡಲದಲ್ಲಿ ಇದು ಕೊನೆಯ ಸೂಕ್ತವು. ಈ ಸೂಕ್ತದಲ್ಲಿ ಅಗಸ್ತ್ಯಋಷಿಯು ತನ್ನನ್ನು ಹಾವು ಕಚ್ಚಿರುವುದೆಂದು ಸಂಶಯಪಟ್ಟು ಆ ವಿಷಯವನ್ನು ವಿಸ್ತಾರವಾಗಿ ಪ್ರಸ್ತಾಪಮಾಡಿರುವನು. ಈ ವಿಷಯದಲ್ಲಿ ಈ ಸೂಕ್ತವನ್ನು ಬಿಟ್ಟರೆ ಋಗ್ವೇದದಲ್ಲಿ ಇಂತಹ ಬೇರೆ ಸೂಕ್ತವಿಲ್ಲ. ಈ ಸೂಕ್ತ ಜಪದಿಂದ ಹಾವೇ ಮೊದಲಾದ ವಿಷ ಜಂತುಗಳ ಸಂಬಂಧವಾದ ವಿಷವು ಪರಿಹಾರವಾಗುವುದೆಂದು ಶೌನಕರು ತಮ್ಮ ಋಗ್ವಿಧಾನವೆಂಬ ಗ್ರಂಥದಲ್ಲಿ ಹೇಳಿರುವುದನ್ನು ಈ ಸೂಕ್ತದ ಪೀಠಿಕೆಯಲ್ಲಿಯೇ ತಿಳಿಸಲಾಗಿದೆ.

ಈ ಋಕ್ಕಿನಲ್ಲಿ ಎರಡುವಿಧವಾದ ಹಾವುಗಳ ವಿಷಯವು ಸೂಚಿತವಾಗಿದೆ. ಅಲ್ಪವಿಷವುಳ್ಳ ಮತ್ತು ಮಹಾ ವಿಷವುಳ್ಳ ಹಾವುಗಳೆಂದು ಎರಡುವಿಧ ; ಅಥವಾ ಭೂಮಿಯ ಮೇಲೆ ಸಂಚರಿಸುವ ಹಾವುಗಳು ಮತ್ತು ನೀರಿನಲ್ಲಿ ವಾಸ ಮಾಡುವ ನೀರುಹಾವುಗಳು ಎಂದೂ ಎರಡುವಿಧ, ಎಂದು ಋಷಿಯು ವರ್ಣಿಸಿರುವನು.

**ಕಂಕತಃ—ಅಲ್ಪವಿಷಃ । ತಕತೇರ್ಗತ್ಯರ್ಥಸ್ಯ ವರ್ಣವ್ಯತ್ಯಯೇನ ಕಂಕತ ಇತಿ ಸರನ್ ಭವತಿ ।** ಗತ್ಯರ್ಥವನ್ನು ಸೂಚಿಸುವ ತಕತಿಧಾತುವಿನಿಂದ ವರ್ಣ (ಅಕ್ಷರ) ವ್ಯತ್ಯಯದಿಂದ ಕಂಕತಃ ಎಂಬ ಶಬ್ದವು ನಿಷ್ಪನ್ನವಾಗಿದೆಯೆಂದೂ ಈ ಶಬ್ದವು ಸರನ್ ಎಂಬ ಅರ್ಥವನ್ನು ಕೊಡುವುದರಿಂದ ನೆಲದಮೇಲೆ ಹರಿದಾಡುವ ಜಂತುವೆಂದೂ, ಆದ್ದರಿಂದ ಇದಕ್ಕೆ ಹಾವೆಂಬ ಅರ್ಥವನ್ನು ಹೇಳಬಹುದೆಂದೂ ಭಾಷ್ಯಕಾರರ ವಿವರಣೆಯಿದೆ. ಹಾವುಗಳಿಗೆ ಇರುವ ವಿಷಶಕ್ತಿಯಲ್ಲಿ ನಾನಾ ಭೇದಗಳಿರುವುದು ಪ್ರಸಿದ್ಧವಾಗಿದೆ. ಕೆಲವು ಹಾವು ಕಚ್ಚಿದರೆ ಹೆಚ್ಚು ಬಾಧೆಯಾಗುವುದಿಲ್ಲ ; ಕೆಲವು ಕಚ್ಚಿದರೆ ವಿಷವು ವ್ಯಾಪಿಸಿ ಕೆಲವು ಕಾಲಾನಂತರ ಬಾಧೆಯನ್ನೂ ಅನಂತರ ಮರಣವನ್ನೂ ಉಂಟುಮಾಡಬಹುದು ಇನ್ನೂ ಕೆಲವು ಜಾತಿಯ ಹಾವುಗಳು ಎಂದರೆ ನಾಗರಹಾವುಗಳು ಹೆಚ್ಚಾದ ವಿಷವುಳ್ಳದ್ದಾದ್ದರಿಂದ ಅವು ಕಚ್ಚಿದರೆ ಮರಣವು ಖಂಡಿತವಾಗಿಯೂ ಸಂಭವಿಸುವುದು. ಈ ನಾಗರಹಾವುಗಳಲ್ಲಿಯೂ ಅನೇಕ ಭೇದಪ್ರಭೇದಗಳಿರುವುವು. ಇವುಗಳಲ್ಲಿ ಕೆಲವು ಕಚ್ಚಿದರೆ ಕೆಲವು ಕ್ಷಣಗಳಲ್ಲಿಯೇ (ತಕ್ಷಣವೇ) ಮರಣವು ಸಂಭವಿಸುವುದು. ಇಂತಹ ಹಾವುಗಳು ಅನೇಕ ವಿಧವಾಗಿ ನಾನಾ ದೇಶಗಳಲ್ಲಿ ಹರಡಿರುವುವು. ಕೆಲವು ಜಾತಿಯ ಹಾವುಗಳು ನೋಡುವುದಕ್ಕೆ ಬಹಳ ದೊಡ್ಡದಾಗಿಯೂ, ಭಯಂಕರವಾಗಿಯೂ ಇದ್ದರೂ ಅವುಗಳಲ್ಲಿ ವಿಷವಿರುವುದಿಲ್ಲ. ಅವು ಪ್ರಾಣಿಗಳನ್ನು ಕಚ್ಚುವುದಕ್ಕೆ ಬದಲಾಗಿ ಅವುಗಳನ್ನು ಆಹಾರಾರ್ಥವಾಗಿ ನುಂಗುತ್ತವೆ. ಕೆಲವು ಜಾತಿಯ ಹಾವುಗಳು ಸ್ಪರ್ಶಮಾಡಿದರೆ ಸಾಕು, ಪ್ರಾಣಿಗಳ ಶರೀರವು ಕೊಳೆಯುವುದಕ್ಕೆ ಪ್ರಾರಂಭಿಸಿ ಅನಂತರ ಮರಣವು ಸಂಭವಿಸುವುದು. ಇನ್ನೂ ಕೆಲವು ಜಾತಿಯ ಹಾವುಗಳು ಪ್ರಾಣಿಗಳನ್ನು ಕಂಡೊಡನೆಯೇ ಅವುಗಳ ಕಣ್ಣಿಗೆ ನೇರವಾಗಿ ಒಂದು ವಿಧವಾದ ವಿಷ ಮಿಶ್ರಿತ ರಸವನ್ನು ಎರಚುವುವು. ಆದರಿಂದ ಪ್ರಾಣಿಗಳು ಕಣ್ಣುಗಳನ್ನು ಕಳೆದುಕೊಂಡು ಕುರುಡಾಗುವ ಸಂಭವವುಂಟು ಈ ರೀತಿ ಹಾವುಗಳಲ್ಲಿಯೂ ಅವುಗಳ ವಿಷದಲ್ಲಿಯೂ ನಾನಾಭೇದಗಳಿರುವುದರಿಂದ ಇಲ್ಲಿ ಅಗಸ್ತ್ಯಋಷಿಯು ಅಲ್ಪವಿಷವುಳ್ಳ, ಮಹಾವಿಷವುಳ್ಳ, ನೀರಿನಲ್ಲಿ ವಾಸಿಸುವ ಹಾವುಗಳೆಂದು ಅವುಗಳ ಸ್ವರೂಪವನ್ನೂ ವರ್ಣಿಸಿರುವನು.

**ನ ಕಂಕತಃ—ತದ್ವಿಪರೀತೋಽನಲ್ಪವಿಷಃ ಮಹೋರಗಾದಿಃ ।** ಅಲ್ಪವಿಷವಲ್ಲದ ಎಂದರೆ ಮಹಾವಿಷ ಯುಕ್ತವಾದ ನಾಗರಹಾವೇ ಮೊದಲಾದ ಕ್ರೂರಸರ್ಪಗಳು ಎಂದಭಿಪ್ರಾಯವು.

**ಸತೀನಕಂಕತಃ—**ಸತೀನಂ ಎಂಬ ಶಬ್ದವು ನೂರೊಂದು ಉದಕನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ ೨-೨೪) ಸತೀನಕಂಕತಃ ಎಂಬ ಶಬ್ದಕ್ಕೆ ನೀರುಹಾವು, ನೀರಿನಲ್ಲಿ ವಾಸಿಸುವ ಹಾವು ಎಂದರ್ಥವು.

**ದ್ವಾವಿತಿ ಪ್ಲುಷೀ—**ಹಿಂದೆ ಹೇಳಿದ ಎರಡು ವಿಧವಾದ ಹಾವುಗಳೂ ಕೆಡಕನ್ನುಂಟುಮಾಡುವುವು, ಅಪಾಯಕಾರಿಗಳು.

**ಅದೃಷ್ಟಾಃ—ಅದೃಶ್ಯಮಾನರೂಪಾ ಏತೆದ್ವ್ಯಂಜಕಾಶ್ಚ ।** ಕಣ್ಣಿಗೆ ಕಾಣಿಸದಿರುವ ಎಂದರೆ ಅತಿ ಸಣ್ಣದಾದ ಅಥವಾ ತೃಣಾದಿಗಳಲ್ಲಿಯೂ, ಪೊದೆಗಳಲ್ಲಿಯೂ ಅಡಗಿಕೊಂಡಿದ್ದು ಕಣ್ಣಿಗೆ ಕಾಣಿಸದಂತೆ ಇರುವ ಈ ಹಾವುಗಳು ಎಂದಭಿಪ್ರಾಯವು. ಸಾಧಾರಣವಾಗಿ ಹಾವುಗಳು ಹುಲ್ಲಿನಲ್ಲಿಯೂ, ಪೊದೆಗಳಲ್ಲಿಯೂ, ಬಿಲಗಳಲ್ಲಿಯೂ ಇರುವುದರಿಂದ ಜನರಿಗೆ ಇದು ತಕ್ಷಣ ಗೋಚರವಾಗುವುದಿಲ್ಲ. ಜನರಿಗೆ ಆ ರೀತಿ ಅರಿವಿಲ್ಲದಿರುವಾಗ ಅವರನ್ನು ಮೋಸಗೊಳಿಸಿ ಕಚ್ಚುವುವು ಎಂದಭಿಪ್ರಾಯವು.

**ಅಲಿಪ್ಸತ—ವಿಶೇಷಣ ಲಿಂಪಂತಿ । ಸರ್ವಾಣ್ಯಂಗಾನಿ ವಿಷವಾವ್ಯಣೋತಿ ।** ಸಮಸ್ತ ಅಂಗಗಳಿಗೂ ವ್ಯಾಪಿಸುವಂತೆ ವಿಷವನ್ನು ಸವರುವುವು ಎಂದರೆ ಕಚ್ಚುವುವು ಅಥವಾ ಕಚ್ಚಿ ವಿಷವನ್ನು ಅಂಗಗಳಲ್ಲಿ ವ್ಯಾಪಿಸುವಂತೆ ಮಾಡುವುವು ಎಂದಭಿಪ್ರಾಯವು.

### ವ್ಯಾಕರಣಪ್ರಕ್ರಿಯಾ

**ಕಂಕತಃ—**ತಕ ಗತೌ ಧಾತು. ವರ್ಣವ್ಯತ್ಯಾಸದಿಂದ ಅಭಿಮತರೂಪ ಸಿದ್ಧಿಯಾಗುತ್ತದೆ. ವ್ಯತ್ಯಯ ದಿಂದಲೇ ಆದ್ಯುದಾತ್ತಸ್ವರ ಬರುತ್ತದೆ.

**ಸತೀನಕಂಕತಃ—ತತ್ಪುರುಷೇ—**( ಪಾ. ಸೂ. ೬-೨-೨ ) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಸತೀನ ಶಬ್ದವು ಪ್ರಾತಿಪದಿಕಸ್ವರದಿಂದ ಅಂತೋದಾತ್ತವಾಗುತ್ತದೆ.

**ಅದೃಷ್ಟಾಃ—ನ ದೃಷ್ಟಾಃ ಪರಾದಿಶ್ಛಂದಸಿ ಬಹುಲಮ್** ( ಪಾ. ಸೂ. ೬ ೨-೧೯೯ ) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಅಲಿಪ್ಸತ—**ಲಿಪ ಉಪದೇಹೇ. ಧಾತು. ತುದಾದಿ. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್. ಪ್ರಥಮಪುರುಷ ಬಹುವಚನಕ್ಕೆ ಅತಾದೇಶ. ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠ

ಅದೃಷ್ಟಾನ್ಹಂತ್ಯಾಯತ್ಯಥೋ ಹಂತಿ ಪರಾಯತೀ।

ಅಥೋ ಅವಘ್ನತೀ ಹಂತ್ಯಥೋ ಪಿನಷ್ಟಿ ಪಿಂಷತೀ ॥ ೨ ॥

ಪದಪಾಠ

ಅದೃಷ್ಟಾನ್ । ಹಂತಿ । ಆऽಯತೀ । ಅಥೋ ಇತಿ । ಹಂತಿ । ಪರಾऽಯತೀ ।

ಅಥೋ ಇತಿ । ಅವऽಘ್ನತೀ ।ಹಂತಿ । ಅಥೋ ಇತಿ । ಪಿನಷ್ಟಿ । ಪಿಂಷತೀ ॥ ೨ ॥

ಸಾಯಣಭಾಷ್ಯಂ

ಅನೇನ ವಿಷಘ್ನ್ಯೋಷಧಿಃ ಸ್ತೂಯತೇ । ಆಯತೀ ವಿಷದಷ್ಟಸ್ಯ ಸಕಾಶಮಾಗಚ್ಛಂತೀ ವಿಷ-ನಿರ್ಹರಣಸಾಧನೌಷಧಿರದೃಷ್ಟಾನದೃಶ್ಯಮಾನಾನ್ವಿಷಧರಾನ್ಹಂತಿ । ಹಿನಸ್ತಿ । ಅಥೋ ಅಪಿ ಚ ಪರಾಯತೀ ಪರಾಗಚ್ಛಂತೀ ಸಮ್ಮಾರ್ಜನಸಮಯೇऽವಾರ್ಕ್ಪ್ರವೃತ್ತಾ ಹಂತಿ । ನಾಶಯತಿ ಜಲಚರವಿಷಧರಾನ್ । ಅಥೋ ಅಪಿ ಚಾವಘ್ನತೀ ॥ ಕರ್ಮಣಿ ಕರ್ತೃ ಪ್ರತ್ಯಯಃ ॥ ಅವಹನ್ಯಮಾನೌಷಧಿಃ ಸ್ವಗಂಧೇನ ಹಂತಿ ಬಹುವಿಷಾನ್ । ಯದ್ವಾ । ಕಾಚಿದೋಷಧಿರ್ದಂಶಕಾನ್ಮಾರಯತ್ಯೇವ । ಅಥೋ ಅಪಿ ಚ ಪಿಂಷತೀ ಪೇಷಣಕರ್ತ್ರೀ ದೃಷತ್ಪಿಷ್ಯಮಾಣಾ ವೌಷಧಿಃ ಪಿನಷ್ಟಿ । ಚೂರ್ಣೀಕರೋತ್ಯಲ್ಪವಿಷಾನ್ । ಅಥವಾ ಸರ್ವೇಷು ವಾಕ್ಯೇಷ್ವವಿಶೇಷೇಣ ಸರ್ವವಿಷಕಾರಿಣಾಂ ನಾಶ ಉಕ್ತಃ ॥

ಪ್ರತಿಪದಾರ್ಥ

ಆಯತೀ—(ಓಷಧಿಯು) ವಿಷದಷ್ಟನಾದವನ ಹತ್ತಿರಕ್ಕೆ ಬರುವಾಗಲೇ । ಅದೃಷ್ಟಾನ್—ಕಣ್ಣಿಗೆ ಗೋಚರವಾಗದ ವಿಷಪ್ರಾಣಿಗಳನ್ನು । ಹಂತಿ—ಕೊಲ್ಲುತ್ತದೆ । ಅಥೋ—ಅನಂತರ । ಪರಾಯತೀ—(ತೊಳೆಯುವ ಕಾಲದಲ್ಲಿ ದೇಹದಿಂದ) ಹೊರಕ್ಕೆ ಹೋಗತಕ್ಕ ಕಾಲದಲ್ಲಿ । ಹಂತಿ—ಅವುಗಳನ್ನು ನಾಶಮಾಡುತ್ತದೆ । ಅಥೋ—ಅದೂ ಅಲ್ಲದೆ । ಅವಘ್ನತೀ—ತನ್ನ (ಗಂಧದಿಂದಲೇ) ನಾಶಕಾರಿಯಾದ ಓಷಧಿಯು । ಹಂತಿ—ವಿಷಧರಗಳನ್ನು ನಾಶಮಾಡುತ್ತದೆ । ಅಥೋ—ಅದರ ಜೊತೆಯಲ್ಲಿ । ಪಿಂಷತೀ—ಚೂರ್ಣರೂಪವಾದ ಓಷಧಿಯು । ಪಿನಷ್ಟಿ—ವಿಷಕ್ರಿಮಿಗಳನ್ನು ಚೂರ್ಣಮಾಡುತ್ತದೆ. (ನಾಶಪಡಿಸುತ್ತದೆ)

ಭಾವಾರ್ಥ

ಓಷಧಿಯು ವಿಷದಷ್ಟನಾದವನ ಹತ್ತಿರಕ್ಕೆ ಬರುವಾಗಲೇ ಕೆಲವು ವಿಷಧರಗಳನ್ನು ನಾಶಪಡಿಸುತ್ತದೆ. ಇದರಂತೆಯೇ ದೇಹದಿಂದ ತೊಳೆಯುವ ಕಾಲದಲ್ಲಿ ಹೊರಕ್ಕೆ ಹೋಗುವ ಕಾಲದಲ್ಲೂ ಸಹ ಕೆಲವು ವಿಷಕ್ರಿಮಿಗಳನ್ನು ನಾಶಪಡಿಸುತ್ತದೆ. ತನ್ನ ಗಂಧದಿಂದಲೇ ನಾಶಪಡಿಸುವ ಓಷಧಿಗಳೂ ಇವೆ. ಚೂರ್ಣರೂಪವಾದ ಓಷಧಿಯು ಕ್ರಿಮಿಗಳನ್ನು ಚೂರ್ಣರೂಪವಾಗಿ ಮಾಡಿ ನಾಶಪಡಿಸುತ್ತದೆ.

## English Translation

(The antidote), coming (to the bitten person), destroys the unseen (venomous creatures); departing, (it destroys them); deprived (of substance), it destroys them (by its odour); being ground, it pulverises them.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ವಿಷವನ್ನು ನಾಶಮಾಡಬಲ್ಲ ಅಥವಾ ಪರಿಹಾರಮಾಡುವ ಓಷಧಿಗಳ ಸ್ವರೂಪವನ್ನು ವಿವರಿಸಲಾಗಿದೆ.

**ಅದೃಷ್ಟಾನ್ ಹಂತಿ ಆಯತೀ**—ವಿಷಹರವಾದ ಓಷಧವು ಬರುವಾಗಲೇ ಕಣ್ಣಿಗೆ ಕಾಣಿಸದಂತೆ ಅಡಗಿ ಕೊಂಡಿರುವ ವಿಷಪ್ರಾಣಿಗಳನ್ನು ಕೊಲ್ಲುತ್ತದೆ. ಎಂದರೆ ಓಷಧಿಯ ಸಾಮರ್ಥ್ಯದಿಂದ ವಿಷಜಂತುಗಳು ತಕ್ಷಣ ನಾಶ ವಾಗುತ್ತವೆ

**ಅಥೋ ಹಂತಿ ಪರಾಯತೀ—ಪರಾಗಚ್ಛಂತೀ ಸಮ್ಮಾರ್ಜನಸಮಯೇಽರ್ವಾಕ್ಪ್ರವೃತ್ತಾ ಹಂತಿ** ಹಾವು ಕಡಿದಿದ್ದ ಗಾಯವನ್ನು ತೊಳೆಯುವ ಕಾಲದಲ್ಲಿ ದೇಹದಿಂದ ಹೊರಗೆ ಹೋಗುವ ವಿಷವನ್ನು ನಾಶಮಾಡುತ್ತದೆ. ಎಂದು ಈ ವಾಕ್ಯಕ್ಕೆ ಅರ್ಥವನ್ನು ಹೇಳಿದ್ದಾರೆ. ಇದು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. **ಪರಾಯಿತೀ** ಎಂಬ ಶಬ್ದಕ್ಕೆ ಹಿಂದಕ್ಕೆ ಹೋಗುವುದು ಎಂದರ್ಥವು. ಆದ್ದರಿಂದ ವಿಷಪ್ರಾಣಿಗಳು ಮನುಷ್ಯರನ್ನು ಕಚ್ಚಿ ತಮ್ಮನ್ನು ಎಲ್ಲಿ ಕೊಲ್ಲುವರೋ ಎಂಬ ಭಯದಿಂದ ತಪ್ಪಿಸಿಕೊಂಡು ಹಿಂದಕ್ಕೆ ಕಾಣದಂತೆ ಓಡಿಹೋಗುತ್ತಿರುವ ಸರ್ಪಾದಿಗಳನ್ನು ಓಷಧಿಯು ನಾಶಮಾಡುತ್ತದೆ ಎಂದು ಹೇಳುವ ಅರ್ಥವು ಇಲ್ಲಿ ಸರಿಹೋಗುತ್ತದೆ.

**ಅಥೋ ಅವಘ್ನತೀ ಹಂತಿ**—ಓಷಧಿಯು ತನ್ನ ತೀಕ್ಷ್ಣವಾದ ಗಂಧದಿಂದ (ವಾಸನೆಯಿಂದಲೇ) ಹಾವು ಗಳನ್ನು ಕೊಲ್ಲುತ್ತದೆ. ಹಾವುಗಳು ಕೆಲವು ಮೂಲಿಕೆಗಳ (ನಾಗದಾಳೀಸಪ್ಪು ಇತ್ಯಾದಿ) ವಾಸನೆಯನ್ನು ಸಹಿಸುವು ದಿಲ್ಲ. ಆದ್ದರಿಂದ ಅಂತಹ ಓಷಧಿಗಳಿರುವ ಸ್ಥಳವನ್ನು ಬಿಟ್ಟು ಹೊರಟುಹೋಗುವುವು. **ಅವಘ್ನತೀ** ಎಂಬ ಶಬ್ದವು **ಘ್ರಾ** (ಜಿಘ್ರ) ವಾಸನೆ ನೋಡು ಎಂಬರ್ಥವುಳ್ಳ ಧಾತುವಿನಿಂದ ಅವ ಎಂಬ ಉಪಸರ್ಗಪೂರ್ವಕವಾಗಿ ನಿಷ್ಪನ್ನ ವಾದದ್ದೆಂದು ಭಾವಿಸಿದರೆ ಮೇಲೆ ಹೇಳಿದ ಅರ್ಥವು ಹೊಂದುವುದು. ಅಥವಾ **ಹನ ಹಿಂಸಾಗತ್ಯೋಃ**—ಕೊಲ್ಲು ಎಂಬ ಧಾತುವಿನಿಂದ ನಿಷ್ಪನ್ನವಾದದ್ದೆಂದು ಭಾವಿಸಿದಲ್ಲಿ ಅವಘ್ನತೀ ಎಂಬ ಶಬ್ದಕ್ಕೆ (ಮನುಷ್ಯರನ್ನು) ಕಚ್ಚಿ ಕೊಲ್ಲುವ ವಿಷಜಂತುಗಳು ಎಂದು ಅರ್ಥವಾಗಬಹುದು. ಅಂತಹ ವಿಷಜಂತುಗಳನ್ನು ಓಷಧಿಯು ಕೊಲ್ಲುತ್ತದೆ (ನಾಶಪಡಿಸು ತ್ತದೆ) ಎಂದು ಇನ್ನೊಂದು ವಿಧವಾಗಿಯೂ ಅರ್ಥವನ್ನು ಹೇಳಬಹುದು.

**ಅಥೋ ಪಿನಷ್ಟಿ ಪಿಂಷತೀ**—ಔಷಧಿಗಳಿಗಾಗಿ ಉಪಯೋಗಿಸುವ ಕೆಲವು ಮೂಲಿಕೆಗಳನ್ನು ಚೂರ್ಣಮಾಡಿ (ಪುಡಿಮಾಡಿ) ಉಪಯೋಗಿಸುವುದುಂಟು. ಅಂತಹ ಚೂರ್ಣವು ವಿಷಜಂತುಗಳನ್ನು ಮರ್ದನಮಾಡಿ (ಅರೆದು) ಕೊಲ್ಲುವುದು ಎಂದರೆ ನಾಶಮಾಡುವುದು ಎಂದಭಿಪ್ರಾಯವು.

ಈ ಋಕ್ಕಿನ ನಾಲ್ಕು ಪಾದಗಳಲ್ಲಿ ಹೇಳಿರುವ ಅಭಿಪ್ರಾಯವೆಲ್ಲವೂ ಸ್ವಲ್ಪ ಹೆಚ್ಚುಕಡಿಮೆ ಒಂದೇವಿಧವಾಗಿರು ವುದು. ಈ ವಾಕ್ಯಗಳಿಗೆ—ಔಷಧಿಗಳು ಗಾಯದಲ್ಲಿ ವ್ಯಾಪಿಸಿರುವ ವಿಷಗಳನ್ನು ನಾಶಪಡಿಸುವುವು ಎಂದು ಹೇಳ

ಬಹುದು ಅಥವಾ ವಿಷಪೂರಿತ ಸರ್ಪಾದಿಗಳನ್ನು ನಾಶಪಡಿಸುವುವು ಎಂದಾದರೂ ಹೇಳಬಹುದು ಎಂದು ಭಾಷ್ಯಕಾರರು ವಿವರಿಸಿರುವರು.

ವ್ಯಾಕರಣಪ್ರಕ್ರಿಯಾ

ಹಂತಿ—ಹನ ಹಿಂಸಾಗತ್ಯೋಃ ಧಾತು. ಅದಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಆಯತೀ—ಇಣ್ ಗತೌ ಧಾತು. ಶತೃಪ್ರತ್ಯಯ. ಸ್ತ್ರೀತ್ವವಿವಕ್ಷಾ ಮಾಡಿದಾಗ ಙೀಪ್. ಶತುರ ನುಮೋನದ್ಯಜಾದೀ (ಪಾ. ಸೂ. ೬-೧-೧೭೩) ಎಂಬುದರಿಂದ ಅಂತೋದಾತ್ತವಾಗುತ್ತದೆ. ಪರಾಯತೀ. ಅವಘ್ನತೀ ಎಂಬಲ್ಲಿಯೂ ಹೀಗೆಯೇ ಅಂತೋದಾತ್ತಸ್ವರ ಬರುತ್ತದೆ.

ಅವಘ್ನತೀ—ಹನ ಹಿಂಸಾಗತ್ಯೋಃ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ವ್ಯತ್ಯಯದಿಂದ ಇಲ್ಲಿ ಕರ್ಮಣಿಯಲ್ಲಿ ಕರ್ತೃಪ್ರತ್ಯಯ ಬಂದಿದೆ. ಕುಟ್ಟಲ್ಪಡತಕ್ಕ ಎಂಬ ಅರ್ಥದಲ್ಲಿ ಅವಹನ್ಯಮಾನಾ ಎಂದು ರೂಪವಾಗ ಬೇಕಾಗುತ್ತದೆ. ಆದುದರಿಂದ ಶತೃಪ್ರತ್ಯಯವೇ ಕರ್ಮವನ್ನು ಹೇಳುತ್ತದೆ.

ಪಿನಷ್ಟಿ—ಪಿಷಲೃ ಸಂಚೂರ್ಣನೇ. ಧಾತು. ರುಧಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಶ್ನಮ್ ವಿಕರಣ ಮಿತ್ತ್ವಾದುದರಿಂದ ಅಂತ್ಯವಾದ ಅಚಿನ ಪರಕ್ಕೆ ಬರುತ್ತದೆ. ಷ್ಟುತ್ವದಿಂದ ಪ್ರತ್ಯಯಕ್ಕೆ ಟಕಾರಾದೇಶ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

---

ಸಂಹಿತಾಪಾಠಃ

ಶರಾಸಃ ಕುಶರಾಸೋ ದರ್ಭಾಸಃ ಸೈರ್ಯಾ ಉತ ।

ಮೌಂಜಾ ಅದೃಷ್ಟಾ ವೈರಿಣಾಃ ಸರ್ವೇ ಸಾಕಂ ನ್ಯಲಿಪ್ಸತ ॥ ೩ ॥

ಪದಪಾಠಃ

ಶರಾಸಃ । ಕುಶರಾಸಃ । ದರ್ಭಾಸಃ । ಸೈರ್ಯಾಃ । ಉತ ।

ಮೌಂಜಾಃ । ಅದೃಷ್ಟಾಃ । ವೈರಿಣಾಃ । ಸರ್ವೇ । ಸಾಕಂ । ನಿ । ಅಲಿಪ್ಸತ ॥ ೩ ॥

ಸಾಯಣಭಾಷ್ಯಂ

ಅನ್ಯಾಂಶ್ಚ ವಿಷಹೇತೂನಾಹ । ಶರಾಸಃ ಶರಾ ವೇಣುದಂಡಸದೃಶಾ ಅಂತಶ್ಛಿದ್ರಾಸ್ತೃಣವಿಶೇಷಾಃ । ಕುಶರಾಸಃ ಕುತ್ಸಿತಶರಾ ಅಂತಶ್ಛಿದ್ರಾಃ ಶರಸದೃಶಾಸ್ತೃಣವಿಶೇಷಾಃ । ದರ್ಭಾಸೋ ದರ್ಭಾಃ ಕುಶಾಃ । ಸೈರ್ಯಾಸ್ತಟಾಕಾದಿಪ್ರಾಂತೋದ್ಭವಾಸ್ತೃಣವಿಶೇಷಾ ಅಶ್ವವಾಲಾ ಇತಿ ಪ್ರಸಿದ್ಧಾಃ । ಮೌಂಜಾ ಮುಂಜಾಃ

ಪ್ರಸಿದ್ಧಾಃ । ವೈರಿಣಾ ವೀರಣಪ್ರಕಾರಾಃ । ಏತೇಷು ವರ್ತಮಾನಾ ಅದೃಷ್ಟಾ ಉಕ್ತರೂಪಾಃ ಸರ್ವೇ ವಿಷಧರಾಃ ಸಾಕಂ ಮಿಲಿತ್ವಾ ನ್ಯಲಿಪ್ಸತ । ನಿಲಂಪಂತಿ ಸ್ಮ ॥

ಪ್ರತಿಪದಾರ್ಥ

**ಶರಾಸಃ**—ಶರಾ ಎಂಬ ತೃಣದಲ್ಲಡಗಿರುವುವೂ । **ಕುಶರಾಸಃ**—ಕುಶವೆಂಬ ತೃಣವನ್ನಾಶ್ರಯಿಸಿರುವುವೂ **ದರ್ಭಾಸಃ**—ದರ್ಭೆಗಗಳಲ್ಲಿರುವುವೂ । **ಸೈರ್ಯಾಃ**—ಸೈರ್ಯ ಎಂಬ ಜೊಂಡಿನಲ್ಲಿರುವುವೂ । **ಮೌಂಜಾಃ**—ಮುಂಜದ ಪೊದೆಯಲ್ಲಡಗಿರುವುವೂ । **ವೈರಿಣಃ**—ವೀರಣದಲ್ಲಿರುವುವೂ ಆಗಿ । **ಅದೃಷ್ಟಾಃ**—ಕಣ್ಣಿಗೆ ಗೋಚರವಾಗದಿರುವ । **ಸರ್ವೇ**—ಸಮಸ್ತವಾದ ವಿಷಧರಗಳೂ ಸಹ । **ಸಾಕಂ**—ಜೊತೆಯಲ್ಲಿ ಸೇರಿಕೊಂಡು । **ನ್ಯಲಿಪ್ಸತ**—ನನ್ನನ್ನು ವಿಷ ಪೂರಿತನನ್ನಾಗಿ ಮಾಡುತ್ತವೆ.

ಭಾವಾರ್ಥ

ಶರಾ, ಕುಶ, ಸೈರ್ಯ, ಮುಂಜ, ವೀರಣ ಇತ್ಯಾದಿ ತೃಣಗಳಲ್ಲಡಗಿರುವುವೂ, ಕಣ್ಣಿಗೆ ಗೋಚರವಾಗದಿರುವುವೂ ಆದ ಸಕಲ ವಿಷಧರಗಳೆಲ್ಲವೂ ಸಹ ನಮ್ಮನ್ನು ಕಚ್ಚಿ ನಮ್ಮ ದೇಹವೆಲ್ಲವೂ ವಿಷದಿಂದ ವ್ಯಾಪ್ತವಾಗುವಂತೆ ಮಾಡುತ್ತವೆ.

English Tranlation

(Blades of) shara grass, (of) kushara, (of) darbha, (of) sourya, (of) munja, (of) virana, all (the haunt) of unseen (venomous creatures), have together anointed me (with their venom).

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಹಾವುಗಳು ಕಣ್ಣಿಗೆ ಕಾಣಿಸದಂತೆ ಅಡಗಿಕೊಂಡಿರುವ ನಾನಾವಿಧ ಹುಲ್ಲು, ದರ್ಭೆ ಇತ್ಯಾದಿ ಗಳನ್ನು ಹೇಳಲಾಗಿದೆ.

**ಶರಾಸಃ—ವೇಣುದಂಡಸದೃಶಾ ಅಂತಶ್ಛಿದ್ರಾಸ್ತೃಣವಿಶೇಷಾಃ** ಬಿದುರಿನಂತೆ ಎತ್ತರವಾಗಿಯೂ ನೇರವಾಗಿಯೂ, ಮಧ್ಯದಲ್ಲಿ ಕತ್ತರಿಸಿದಂತೆಯೂ ಇರುವ ಒಂದು ವಿಧವಾದ ಹುಲ್ಲು ಅಥವಾ ದರ್ಭೆಯು (Saccharum Sara) ಈ ವಿಧವಾದ ದರ್ಭೆಯು ಒತ್ತೊತ್ತಾಗಿಯೂ ನೀರಿನ ವಸತಿ ಇರುವ ಪ್ರದೇಶಗಳಲ್ಲಿಯೂ ಬೆಳೆಯುವುದು. ಇವು ಎತ್ತರದಲ್ಲಿ ಸುಮಾರು ಸೊಂಟದಷ್ಟು ಇರುವುದರಿಂದ ಇವುಗಳ ಬುಡದಲ್ಲಿ ಏನಿರುವುದೆಂದು ತಿಳಿಯಲು ಸಾಧ್ಯವಿಲ್ಲ. ಕಣ್ಣಿಗೆ ಕಾಣಿಸದ ಇಂತಹ ಪ್ರದೇಶದಲ್ಲಿ ಹಾವುಗಳು ಅಡಗಿಕೊಂಡಿರುವವು ಎಂದರ್ಥವು.

**ಕುಶರಾಸಃ—ಕುತ್ಸಿತಶರಾ ಅಂತಶ್ಛಿದ್ರಾಃ ಶರಸದೃಶಾಸ್ತೃಣವಿಶೇಷಾಃ** । ಕುಶರ ಎಂಬ ದರ್ಭೆಯೂ ಸಹ ಮೇಲೆ ಹೇಳಿದ ಶರವೆಂಬ ದರ್ಭೆಯ ಹಾಗೆಯೇ ಇರುವುದು ಎಂದರೆ ಅದೇ ಜಾತಿಗೆ ಸೇರಿರುವುದು ಆದರೆ ಹೆಚ್ಚು ಎತ್ತರವಾಗಿ ಬೆಳೆಯುವುದಿಲ್ಲ

**ದರ್ಭಾಸಃ**—ಯಜ್ಞಗಳಲ್ಲಿಯೂ ಗೃಹ್ಯ ಕರ್ಮಗಳಲ್ಲಿಯೂ ಬಳಸುವ ದರ್ಭೆಯೆಂಬ ಹುಲ್ಲು. ಇದು ಹೆಂಚೀ ಕಡ್ಡಿಯಂತೆ ಅಷ್ಟೇ ಗಾತ್ರವಾಗಿ ಬೆಳೆಯುವುದು. (Poa cynosuroides).

**ಸೈರ್ಯಾಃ—ಸೈರ್ಯಾಸ್ತಟಾಕಾದಿಪ್ರಾಂತೋದ್ಭವಾಸ್ತೃಣವಿಶೇಷಾ ಅಶ್ವವಾಲಾ ಇತಿ ಪ್ರಸಿದ್ಧಾಃ ।** ಸೈರ್ಯ ಎಂದರೆ ಕೆರೆಗಳ ಅಥವಾ ತಟಾಕ ನದಿ ಇವುಗಳ ಸಮೀಪದಲ್ಲಿ ಎಂದರೆ ನಿಂತನೀರಿರುವ ಪ್ರದೇಶದಲ್ಲಿ ಬೆಳೆಯುವ ಜೊಂಡು ಹುಲ್ಲು. ಇದಕ್ಕೆ ಕುದುರೆಯ ಬಾಲ ಎಂದು ಹೇಳುವ ರೂಢಿ ಇದೆ. ಆನೆಗಳು ಇದನ್ನು ಆಹಾರವಾಗಿ ಉಪಯೋಗಿಸುವುವು. (Saccharum spontaneum)

**ಮೌಂಜಾಃ—ಮೌಂಜಾಃ ಮುಂಜಾಃ ಪ್ರಸಿದ್ಧಾಃ ।** ಮುಂಜಾ ಎಂಬ ಉದ್ದವಾಗಿ ಕಡ್ಡಿಯಂತೆ ಬೆಳೆಯುವ ಹುಲ್ಲು. ಇದನ್ನು ಚಾಪೆ ಹೆಣೆಯುವುದಕ್ಕಾಗಿ ಉಪಯೋಗಿಸುವರು. (Saccharum munja)

**ವೈರಿಣಾಃ—ವೀರಣಪ್ರಕಾರಾಃ ।** ವೀರಣವೆಂಬ ಒಂದು ಬಗೆಯ ಹುಲ್ಲು ಹೇಗಿರುವುದೆಂದು ಗೊತ್ತಾಗುವುದಿಲ್ಲ. (Andropogon muricatum)

ಈ ವಿಧವಾದ ಹುಲ್ಲುಗಳಲ್ಲದೆ ಇನ್ನೂ ಅನೇಕ ವಿಧವಾದ ಹುಲ್ಲುಗಳೂ ಇರುವುವು. ಇಲ್ಲಿ ಕೆಲವನ್ನು ಮಾತ್ರ ಹೇಳಿದೆ. ಇವುಗಳಲ್ಲಿ ಹಾವುಗಳು ಜನರಕಣ್ಣಿಗೆ ಕಾಣದಂತೆ ಅಡಗಿದ್ದು ಹತ್ತಿರ ಬರುವವರನ್ನು ಕಚ್ಚುವುವು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಶರಾಸಃ** -- ಪ್ರಥಮಾ ಬಹುವಚನದಲ್ಲಿ ಜಸ್. **ಆಜ್ಜಸೇರಸುಕ್** ಎಂಬುದರಿಂದ ಅದಕ್ಕೆ ಅಸುಕಾಗಮ. ಏಕಾದೇಶಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ಕುಶರಾಸಃ**—ಕುತ್ಸಿತಾಃ ಶರಾಃ ಕುಶರಾಸಃ. ಹಿಂದಿನಂತೇ ಜಸ್ಸಿಗೆ ಅಸುಕಾಗಮ. **ತತ್ಪುರುಷೇ-ತುಲ್ಯಾರ್ಥ**—(ಪಾ. ಸೂ ೬-೨-೨) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಅಲ್ಲಿ **ಅವ್ಯಯೇನಞ್-ಕು ನಿಪಾತಾನಾಮ್** ಎಂದು ಪಠಿತವಾಗಿದೆ.

**ನ್ಯಲಿಪ್ಸತ**—ನಿ ಉಪಸರ್ಗ. ಲಿಪ ಉಪದೇಹೇ ಧಾತು ಲುಙ್ ಪ್ರಥಮಪುರುಷ ಬಹುವಚನಕ್ಕೆ ಅತಾದೇಶ. ಚ್ಲಿಗೆ ಸಿಚಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

—————:o:—————

ಸಂಹಿತಾಪಾಠಃ

ನಿ ಗಾವೋ ಗೋಷ್ಠೇ ಅಸದನ್ನಿ ಮೃಗಾಸೋ ಅವಿಕ್ಷತ ।

ನಿ ಕೇತವೋ ಜನಾನಾಂ ನ್ಯ೧ದೃಷ್ಟಾ ಅಲಿಪ್ಸತ ॥ ೪ ॥

ಪದಪಾಠ

ನಿ । ಗಾವಃ । ಗೋಽಸ್ಥೇ । ಅಸದನ್ । ನಿ । ಮೃಗಾಸಃ । ಅವಿಕ್ಷತ ।

ನಿ । ಕೇತವಃ । ಜನಾನಾಂ । ನಿ । ಅದೃಷ್ಟಾಃ । ಅಲಿಪ್ಸತ ॥ ೪ ॥

ಸಾಯಣಭಾಷ್ಯಂ

ಗಾವೋ ಗೋಷ್ಠೇ ನ್ಯಸದನ್ । ನಿಷೀದಂತಿ । ಮೃಗಾಸೋ ಮೃಗಾ ನ್ಯವಿಕ್ಷತ । ನಿವಿಷ್ಟಾಃ । ಸ್ವಸ್ವಸ್ಥಾನ ಉಪರತಾಃ । ಜನಾನಾಂ ಪ್ರಾಣಿನಾಂ ಕೇತವಃ ಪ್ರಜ್ಞಾನಾನಿ ನಿ ॥ ಉಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ । ನೀಚಾನ್ಯಭವನ್ । ಏತೇಽಸ್ಮಿನ್ಸಮಯೇಽದೃಷ್ಟಾ ಅದೃಶ್ಯಮಾನರೂಪಾಃ ಸಂತೋ ನ್ಯಲಿಪ್ಸತ । ನಿಲಿಂಪಂತಿ ವಿಶೇಷೇಣ ॥

॥ ಪ್ರತಿಪದಾರ್ಥ ॥

ಗಾವಃ—ಗೋವುಗಳು । ಗೋಷ್ಠೇ—ಕೊಟ್ಟಿಗೆಯಲ್ಲಿ । ನ್ಯಸದನ್—ಕಟ್ಟಲ್ಪಟ್ಟು ವಿಶ್ರಾಂತಿಯನ್ನು ತೆಗೆದುಕೊಳ್ಳುತ್ತಿದ್ದವು । ಮೃಗಾಸಃ—ಮೃಗಗಳು । ನ್ಯವಿಕ್ಷತ—ತಮ್ಮ ತಮ್ಮ ಸ್ವಸ್ಥಾನಗಳಲ್ಲಿ ವಿಶ್ರಾಂತಿಯನ್ನು ತೆಗೆದುಕೊಳ್ಳುತ್ತಿದ್ದವು । ಜನಾನಾಂ—ಪ್ರಾಣಿಗಳ । ಕೇತವಃ—ಪ್ರಜ್ಞಾನಗಳು । ನಿ—ಪ್ರಶಾಂತವಾಗಿದ್ದವು (ಇಂತಹ ಕಾಲದಲ್ಲಿ) । ಅದೃಷ್ಟಾಃ—ಕಣ್ಣಿಗೆ ಕಾಣದಿರುವ ವಿಷಧರಗಳು । ನ್ಯಲಿಪ್ಸತ—ನನ್ನನ್ನು ಕಚ್ಚಿ ವಿಷವನ್ನು ನನ್ನ ದೇಹದಲ್ಲಿ ವ್ಯಾಪ್ತವಾಗುವಂತೆ ಮಾಡಿದವು.

ಭಾವಾರ್ಥ

ಕಣ್ಣಿಗೆ ಕಾಣದಿರುವ ವಿಷಧರಗಳು ನನ್ನನ್ನು ಕಚ್ಚಿ ನನ್ನ ದೇಹವು ವಿಷದಿಂದ ವ್ಯಾಪ್ತವಾಗುವಂತೆ ಮಾಡುವಾಗ ಗೋವುಗಳು ಕೊಟ್ಟಿಗೆಯಲ್ಲಿ ಕಟ್ಟಲ್ಪಟ್ಟಿದ್ದವು. ಮೃಗಗಳು ಸ್ವಸ್ಥಾನದಲ್ಲಿ ಮಲಗಿದ್ದವು. ಪ್ರಾಣಿಗಳ ಚೇತನಗಳು ಪ್ರಶಾಂತವಾಗಿದ್ದವು.

## English Translation

The cows had lain down in their stalls ; the wild beasts had retreated (to their lairs) ; the senses of men were at rest ; when the unseen (venomous creatures) anointed me (with their venom).

ಸಂಹಿತಾಪಾಠ।

ಈ ಋಕ್ಕಿನಲ್ಲಿ ಹಾವುಗಳು ಸಾಧಾರಣವಾಗಿ ರಾತ್ರಿಕಾಲಗಳಲ್ಲಿಯೇ ಸಂಚರಿಸುವವು ಎಂಬುವನ್ನು ವಿವರಿಸಿದೆ. ಹೇಗೆಂದರೆ, ದನಕರುಗಳು (ರಾತ್ರಿಕಾಲದಲ್ಲಿ) ಅವುಗಳ ಕೊಟ್ಟಿಗೆಯಲ್ಲಿ ಮಲಗಿರುವುವು. ಎಂದರೆ ಚಲನವಲನಗಳಿಲ್ಲದೆ ವಿಶ್ರಾಂತಿಯನ್ನು ಪಡೆಯುತ್ತಾ ಮೆಲಕು ಹಾಕುತ್ತಿರುವವು. ಕಾಡುಮೃಗಗಳೂ ಸಹ ತಮ್ಮ ಸ್ವಸ್ಥಾನವಾದ ಗುಹೆಗಳಲ್ಲಿ ಪ್ರವೇಶಿಸಿ ನಿದ್ರಿಸುವುವು. ಜನರೂ ಸಹ ತಮ್ಮ ತಮ್ಮ ನಿತ್ಯವ್ಯವಹಾರಗಳನ್ನು ಮುಗಿಸಿ ಯಾವ ಕೆಲಸವನ್ನೂ ಮಾಡದೆ ರಾತ್ರಿಕಾಲದಲ್ಲಿ ವಿಶ್ರಾಂತಿಗಾಗಿ ನಿದ್ರಿಸುತ್ತಿರುವರು. ಇಂತಹ ಸಮಯದಲ್ಲಿ ಹಾವುಗಳು ಕಾಣದಂತೆ ಬಂದು ಜನರನ್ನು ಕಚ್ಚುತ್ತವೆ ಎಂದಭಿಪ್ರಾಯವು.

ಇಲ್ಲಿ ಕಾಡುಮೃಗಗಳು ರಾತ್ರಿಕಾಲದಲ್ಲಿ ತಮ್ಮ ಗುಹೆಗಳಲ್ಲಿರುವುವು ಎಂದು ಹೇಳುವುದು ಸರಿಯಾಗಿಲ್ಲ. ಏಕೆಂದರೆ ಅವುಗಳು ಹಗಲೆಲ್ಲಾ ತಮ್ಮ ಗುಹೆಯಲ್ಲಿ ಮಲಗಿ ನಿದ್ರಿಸುವುವು. ರಾತ್ರಿಕಾಲದಲ್ಲಿ ಆಹಾರಕ್ಕಾಗಿ ಸಂಚರಿ

ಸುವುವು. ಆದರೆ ಈ ಋಕ್ಕಿನಲ್ಲಿ ಮೃಗಾಸಃ ಎಂದು ಮಾತ್ರ ಹೇಳಿರುವುದರಿಂದ ಕಾಡುಮೃಗಗಳೆಂದೇ ಅರ್ಥಮಾಡ ಬೇಕಾಗಿಲ್ಲ ಕುದುರೆ ಮೊದಲಾದ ಸಾಧುಪ್ರಾಣಿಗಳಾದರೂ (Domestic Animals) ಆಗಬಹುದು. ಅಥವಾ ರಾತ್ರಿಕಾಲದಲ್ಲಿ ಎಂಬರ್ಥವನ್ನು ಕೊಡುವ ಶಬ್ದವೂ ಈ ಋಕ್ಕಿನಲ್ಲಿಲ್ಲ ಆದರೆ ಜನರು ಕೆಲಸಮಾಡದೆ ಪ್ರಜ್ಞಾಹೀನ ರಾಗಿರುವ (ನಿದ್ರಿಸುತ್ತಿರುವ) ಕಾಲವೆಂದು ಸೂಚಿಸಿರುವುದರಿಂದ ರಾತ್ರಿಕಾಲವೆಂದು ಭಾಸವಾಗುವುದು. ಮುಖ್ಯವಾಗಿ ರಾತ್ರಿಯಾಗಲಿ ಹಗಲಾಗಲಿ, ಜನರು ಮತ್ತು ಪ್ರಾಣಿಗಳು ಅವರವರ ಕೆಲಸವನ್ನು ಮುಗಿಸಿ ವಿಶ್ರಾಂತಿ ಹೊಂದುತ್ತಿರು ವಾಗ ಈ ದುಷ್ಟಹಾವುಗಳು ಕಾಣದಹಾಗೆ ಬಂದು ಅವರನ್ನು ಕಚ್ಚುವುವು ಎಂದು ಮುಖ್ಯಾಭಿಪ್ರಾಯವು.

ಈ ಋಕ್ಕಿನ ಮೊದಲನೆಯ ವಾಕ್ಯದಲ್ಲಿ ನಿ ಅಸದನ್ ಎಂಬ ಕ್ರಿಯಾಪದವು ಇರುವುದು. ಉಳಿದ ವಾಕ್ಯ ಗಳಲ್ಲಿ ಕ್ರಿಯಾಪದವಿಲ್ಲದಿದ್ದರೂ ನಿ ಎಂಬ ಉಪಸರ್ಗ ಪ್ರಯೋಗವಿರುವುದರಿಂದ ಆಯಾ ವಾಕ್ಯಕ್ಕೆ ಕ್ರಿಯಾಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಈರೀತಿ ಇರುವ ಋಕ್ಕುಗಳು ಋಗ್ವೇದದಲ್ಲಿ ಬೇಕಾದಷ್ಟಿವೆ. ವಾಕ್ಯಗಳಲ್ಲಿ ಅರ್ಥದ ವಿವರಣೆಯನ್ನು ಒತ್ತಿಹೇಳುವುದಕ್ಕಾಗಿ (Emphasis) ಈರೀತಿ ಉಪಸರ್ಗವನ್ನು ಪ್ರಯೋಗಿಸುವುದುಂಟು—

**ಮಾ ನೋ ಮಹಾಂತಮುತ ಮಾ ನೋ ಅರ್ಭಕಂ ಮಾ ನ ಉಕ್ಷಂತಮುತ ಮಾ ನ ಉಕ್ಷಿತಂ ।**
**ಮಾ ನೋ ವಧೀಃ ಪಿತರಂ ಮೋತ ಮಾತರಂ ಮಾ ನಃ ಪ್ರಿಯಾಸ್ತನ್ವೋ ರುದ್ರ ರೀರಿಷಃ ॥**

(ಋ. ಸಂ. ೧-೧೧೪-೭)

ಎಂಬ ಋಕ್ಕಿನಲ್ಲಿ ವಧೀಃ, ರೀರಿಷಃ ಎಂಬ ಕ್ರಿಯಾಪದಗಳು ಒಂದಾವರ್ತಿ ಮಾತ್ರ ಪಠಿತವಾಗಿದ್ದರೂ ಪ್ರತಿಯೊಂದು ವಾಕ್ಯದಲ್ಲಿಯೂ ಮಾ ಎಂಬ ನಿಷೇಧಾರ್ಥಕಶಬ್ದವು ಪ್ರಯೋಗಿಸಲ್ಪಟ್ಟಿದೆ. ಅಂತಹ ಪ್ರಯೋಗಗಳು ಕವಿಯ ರಚನಾ ಕೌಶಲ್ಯಕ್ಕೆ ಕಳೆಯನ್ನೂ ಗಾಂಭೀರ್ಯವನ್ನೂ ಪ್ರಾಸವನ್ನೂ ಕೊಡುವುವಾಗಿವೆ.

### ವ್ಯಾಕರಣಪ್ರಕ್ರಿಯಾ

**ಗೋಷ್ಠೇ**—ಷ್ಠಾ ಗತಿನಿವೃತ್ತೌ. ಧಾತು. **ಸುಪಿ ಸ್ಥಃ** (ಪಾ. ಸೂ. ೩-೨-೪) ಎಂಬುದರಿಂದ ಗೋ ಶಬ್ದ ಉಪಪದವಾಗಿರುವಾಗ ಕ ಪ್ರತ್ಯಯ. **ಅಂಬಾಂಬಗೋಭೂಮಿ**—(ಪಾ. ಸೂ. ೮-೩-೨) ಎಂಬುದರಿಂದ ಧಾತು ಸಕಾರಕ್ಕೆ ಷತ್ವ. **ಆತೋಲೋಪ ಇಟಿ ಚ** ಎಂಬುದರಿಂದ ಆಕಾರಕ್ಕೆ ಲೋಪ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ಅಸದನ್**—ಷದಲೃ ವಿಶರಣಗತ್ಯವಸಾದನೇಷು. ಧಾತು ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್ **ಪುಷಾದಿದ್ಯುತಾ**—ಎಂಬುದರಿಂದ ಚ್ಲಿಗೆ ಅಙಾದೇಶ. ಬಹುವಚನ ಝಿ ಪ್ರತ್ಯಯಕ್ಕೆ ಅಂತಾದೇಶ. ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಅವಿಕ್ಷತ**—ವಿಶ ಪ್ರವೇಶನೇ ಧಾತು. ಲುಙ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

**ನಿ**—ಕ್ರಿಯಾಪದದ ಸಂಬಂಧವಿರುವಾಗ ಉಪಸರ್ಗಸಂಜ್ಞೆ ವಿಹಿತವಾಗಿರುವುದರಿಂದ ಇಲ್ಲಿ ಕೇವಲ ನಿ ಎಂಬುದು ಶ್ರುತವಾಗಿರುವುದರಿಂದ ಯೋಗ್ಯ ಕ್ರಿಯಾಪದವು ಅಧ್ಯಾಹೃತವಾಗಿರುತ್ತದೆ.

———

ಸಂಹಿತಾಪಾಠ

ಏತ ಉ ತ್ಯೇ ಪ್ರತ್ಯದೃಶ್ರನ್ಪ್ರ ದೋಷಂ ತಸ್ಕರಾ ಇವ ।

ಅದೃಷ್ಟಾ ವಿಶ್ವದೃಷ್ಟಾಃ ಪ್ರತಿಬುದ್ಧಾ ಅಭೂತನ ॥ ೫ ॥

॥ ಪದಪಾಠಃ ॥

ಏತೇ । ಊಂ ಇತಿ । ತ್ಯೇ । ಪ್ರತಿ । ಅದೃಶ್ರನ್ । ಪ್ರಽದೋಷಂ । ತಸ್ಕರಾಃಽಇವ ।

ಅದೃಷ್ಟಾಃ । ವಿಶ್ವಽದೃಷ್ಟಾಃ । ಪ್ರತಿಽಬುದ್ಧಾಃ । ಅಭೂತನ ॥ ೫ ॥

ಸಾಯಣಭಾಷ್ಯ೧

ತ್ಯೇ ತ ಏತೇ ಸರ್ಪಾಃ ಪ್ರತ್ಯದೃಶ್ರನ್ । ಪ್ರತಿದೃಶ್ಯಂತೇ ರಾತ್ರೌ ಶ್ವಾಸಾದಿಲಿಂಗೇನ । ಯದ್ವಾ । ತೇ ರಾತ್ರೌ ಹಂತಾರೋ ದಿವ್ಯೈತೇ ಪ್ರತಿದೃಶ್ಯಂತೇ । ತತ್ರ ದೃಷ್ಟಾಂತಃ । ಪ್ರದೋಷಂ । ರಾತ್ರಿರ್ದೋಷಾ । ರಾತ್ರಿಂ ಪ್ರತಿ ತಮಸಾಭಿಭೂತಾಸು ರಾತ್ರಿಷು ತಸ್ಕರಾ ಇವ ಹಿಂಸಕಾಶ್ಚೌರಾ ದೃಶ್ಯಂತೇ ಯಥಾ ತದ್ವತ್ । ಕೀದೃಶಾಸ್ತೇ । ಅದೃಷ್ಟಾ ಅಪರಿದೃಶ್ಯಮಾನಾ ವಿಶ್ವದೃಷ್ಟಾ ವಿಶ್ವಂ ದೃಷ್ಟಂ ಯೈಸ್ತೇ ತಾದೃಶಾಃ ಪ್ರತಿ-ದೃಶ್ಯಂತೇ । ಅತೋ ಹೇ ನರಾಃ ಪ್ರತಿಬುದ್ಧಾ ಅಭೂತನ । ಭವತ ॥

ಪ್ರತಿಪದಾರ್ಥ

ತ್ಯೇ ತೇ—ಮೇಲೆ ವರ್ಣಿತವಾದ ಈ ವಿಷಧರಗಳು । ಪ್ರದೋಷಂ—ಮಬ್ಬಿನಿಂದ ಕೂಡಿದ ಪ್ರದೋಷ ಕಾಲದಲ್ಲಿ । ತಸ್ಕರಾ ಇವ—ಚೋರರು ಕಾಣಿಸಿಕೊಳ್ಳುವಂತೆ । ಪ್ರತ್ಯದೃಶ್ಯನ್—(ರಾತ್ರಿಕಾಲದಲ್ಲಿ ಅವುಗಳ ನಿಶ್ವಾಸಾದಿಗಳಿಂದ) ತಿಳಿಯಲ್ಪಡುತ್ತವೆ ಅಥವಾ ರಾತ್ರಿಯ ಹೊತ್ತು ಕಾಣದಿದ್ದರೂ ಹಗಲುಹೊತ್ತು ಕಾಣಲ್ಪಡುತ್ತವೆ । ಅದೃಷ್ಟಾಃ- ಅವುಗಳು ಇತರರಿಂದ ನೋಡಲ್ಪಡದಿದ್ದರೂ । ವಿಶ್ವದೃಷ್ಟಾಃ—ಉಳಿದ ಸಮಸ್ತವನ್ನೂ ಸಹ ಅವು ನೋಡುತ್ತವೆ, (ಆದುದರಿಂದ ಎಲೈ ಜನರೇ) । ಪ್ರತಿಬುದ್ಧಾ ಅಭೂತನ—ಬಹಳು ಎಚ್ಚರದಿಂದಿರಿ. ।

ಭಾವಾರ್ಥ

ಮೇಲೆ ವರ್ಣಿತವಾದ ವಿಷಧರಗಳು ಮಬ್ಬಿನಿಂದ ಕೂಡಿದ ಪ್ರದೋಷಕಾಲದಲ್ಲಿ ಚೋರರು ಕಾಣಿಸಿಕೊಳ್ಳುವಂತೆ ರಾತ್ರಿಯ ಕಾಲದಲ್ಲಿ ಅವುಗಳ ನಿಃಶ್ವಾಸಾದಿಗಳಿಂದ ತಿಳಿಯಲ್ಪಡುತ್ತವೆ. ಇತರರು ಅವುಗಳನ್ನು ನೋಡಲು ಸಾಧ್ಯವಲ್ಲದಿದ್ದರೂ ಉಳಿದ ಸಮಸ್ತವನ್ನೂ ಸಹ ಅವು ನೋಡಬಲ್ಲವು. ಆದುದರಿಂದ ಎಲೈ ಜನರೇ. ಎಲ್ಲರೂ ಎಚ್ಚರದಿಂದಿರಿ.

English Translation

Or they may be discovered (in the dark), as thieves in the (dusk of) evening; for although they be unseen, yet all are seen by them; therefore, men, be vigilant.

ವಿಶೇಷವಿಷಯಗಳು

**ತ್ಯೇ—ತೇ** । ಋಗ್ವೇದದಲ್ಲಿ ಅನೇಕ ಕಡೆ ತಚ್ಛಶಬ್ದಕ್ಕೆ ಬದಲಾಗಿ ತ್ಯದ್ ಶಬ್ದವನ್ನು ಉಪಯೋಗಿಸುವುದು ರೂಢಿಯಾಗಿದೆ.

**ಏತಾ ಉ ತ್ಯಾ ಉಷಸಃ ಕೇತುಮಕ್ರತ ಪೂರ್ವೇ ಅರ್ಧೇ ರಜಸೋ ಭಾನುಮಂಜತೇ ।**
(ಋ. ಸಂ. ೧-೯೨-೧)

ಇತ್ಯಾದಿ ಋಕ್ಕುಗಳಲ್ಲಿ ತ್ಯಾಃ ಎಂದರೆ ತಾಃ ಎಂದರ್ಥವು.

**ಪ್ರತ್ಯದೃಶ್ರನ್ ಪ್ರದೋಷಂ**—ರಾತ್ರಿಯಲ್ಲಿ ಕಾಣಲ್ಪಡುತ್ತವೆ ಎಂದರೆ ಕತ್ತಲೆಯಿಂದ ಕೂಡಿರುವ ರಾತ್ರಿ ಕಾಲದಲ್ಲಿ ಸಾಧಾರಣವಾಗಿ ಹಾವುಗಳು ಅವುಗಳ ನಿಶ್ಶ್ವಾಸಶಬ್ದಗಳಿಂದ ತಿಳಿಯಲ್ಪಡುತ್ತವೆ ಎಂದಭಿಪ್ರಾಯವು.

**ತಸ್ಕರಾ ಇವ**—ಕತ್ತಲೆಯಲ್ಲಿ ಸಂಚಾರಮಾಡುವ ವಿಷಯದಲ್ಲಿ ಕಳ್ಳರ ದೃಷ್ಟಾಂತವನ್ನು ಹೇಳಲಾಗಿದೆ. ಕಳ್ಳರು ಸಾಧಾರಣವಾಗಿ ಜನರೆಲ್ಲರೂ ನಿದ್ರಿಸುತ್ತಿರುವ ಸಮಯದಲ್ಲಿ ಯಾರೂ ಕಾಣದಿರಲೆಂದು ರಾತ್ರಿಯಲ್ಲಿ ಕತ್ತಲೆಯು ಕವಿದಿರುವಾಗ ಕಳ್ಳತನವನ್ನು ಮಾಡುವುದು ಲೋಕಪ್ರಸಿದ್ಧವಾಗಿದೆ. ಅದರಂತೆಯೇ ಈ ದುಷ್ಟವಾದ ಹಾವುಗಳು ಕತ್ತಲೆಯಿಂದ ಕೂಡಿದ ರಾತ್ರಿಕಾಲದಲ್ಲಿ ಸಂಚರಿಸುತ್ತಾ ಜನರಿಗೆ ಅಪಾಯವನ್ನುಂಟುಮಾಡುವುವು.

**ಅದೃಷ್ಟಾಃ ವಿಶ್ವದೃಷ್ಟಾಃ**—ಕತ್ತಲೆಯಲ್ಲಿ ಸಂಚರಿಸುವ ಅಥವಾ ಹರಿದಾಡುವ ಹಾವುಗಳನ್ನು ಜನರು ನೋಡಲು ಸಾಧ್ಯವಿಲ್ಲ. ಆದ್ದರಿಂದ ಅವುಗಳು ಕಣ್ಣಿಗೆ ಕಾಣಿಸದಂತೆ ಇರುವುವು. ಆದರೂ ಅವುಗಳು ಮಾತ್ರ ಎಲ್ಲರನ್ನು ನೋಡಬಲ್ಲವು. ಈ ಸಾಮರ್ಥ್ಯವಿರುವುದರಿಂದಲೇ ಅವುಗಳಿಂದ ಜನರಿಗೆ ಹೆಚ್ಚು ಅಪಾಯವು ಉಂಟಾಗುವ ಸಂಭವವುಂಟು. ಆದ್ದರಿಂದ ಋಷಿಯು—

**ಪ್ರತಿಬುದ್ಧಾ ಅಭೂತನ**—ಎಲೈ ಜನರೇ, ನೀವು ಈ ಹಾವುಗಳ ವಿಷಯದಲ್ಲಿ ಬಹಳ ಎಚ್ಚರಿಕೆಯಿಂದ ಇರಬೇಕೆಂದು ಜನರಿಗೆ ತಿಳಿಸುತ್ತಾನೆ.

ವ್ಯಾಕರಣಪ್ರಕ್ರಿಯಾ

**ತ್ಯೇ**—ತ್ಯದ್ ಶಬ್ದ. ಪ್ರಥಮಾ ಬಹುವಚನದಲ್ಲಿ ಜಸಿಗೆ ಶಿ ಆದೇಶ. **ತ್ಯದಾದೀನಾಮಃ** ಎಂಬುದರಿಂದ ಅತ್ವ ಪರರೂಪ. ಗುಣ

**ಅದೃಶ್ರನ್**—ದೃಶಿರ್ ಪ್ರೇಕ್ಷಣೇ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್. **ಇರಿತೋವಾ** (ಪಾ. ಸೂ. ೩-೧-೫೭) ಎಂಬುದರಿಂದ ಚ್ಲಿಗೆ ಅಙಾದೇಶ. **ಬಹುಲಂಛಂದಸಿ** (ಪಾ. ಸೂ. ೭-೧-೮) ಎಂಬುದರಿಂದ ಝಿಗೆ ರುಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ತಸ್ಕರಾಃ**—**ತದ್ಬೃಹತೋಃ ಕರಪತ್ಯೋಃ**—( ವಾ ೩೭೧೩ ) ಎಂಬುದರಿಂದ ತಚ್ಛಬ್ದಕ್ಕೆ ಪತಿ ಶಬ್ದ ಪರವಾದಾಗ ಚೋರ ಎಂಬ ಅರ್ಥತೋರುವಾಗ ಮಧ್ಯೆ ಸುಡಾಗಮ ತದಿನ ದಕಾರಕ್ಕೆ ಲೋಪ.

**ವಿಶ್ವದೃಷ್ಟಾಃ**—ವಿಶ್ವಂ ದೃಷ್ಟಂ ಯೈಸ್ತೇ ವಿಶ್ವದೃಷ್ಟಾಃ ಸಂಜ್ಞಾ ತೋರುವುದರಿಂದ **ಬಹುವ್ರೀಹೌ ವಿಶ್ವಂ** ಎಂಬುದರಿಂದ ವಿಶ್ವ ಶಬ್ದಕ್ಕೆ ಅಂತೋದಾತ್ತಸ್ವರ ಬರುವುದಿಲ್ಲ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಭೂತನ**—ಭೂ ಸತ್ತಾಯಾಂ ಧಾತು. ವಿಧ್ಯರ್ಥದಲ್ಲಿ ಛಾಂದಸವಾಗಿ ಲುಙ್. ಮಧ್ಯಮಪುರುಷ ಬಹುವಚನದಲ್ಲಿ ಥಸ್ ಪ್ರತ್ಯಯ. **ತಸ್ಥಸ್ ಥಮಿಪಾಂ ತಾಂತಂತಾಮಃ** ಎಂಬ ಸೂತ್ರದಿಂದ ಅದಕ್ಕೆ ತ ಆದೇಶ. **ತಪ್ತನಪ್ತನಥನಾಶ್ಚ** (ಪಾ. ಸೂ. ೭-೧-೪೫) ಎಂಬುದರಿಂದ ಪುನಃ ಅದಕ್ಕೆ ತನಾದೇಶ. **ಭೂಸುವೋಸ್ತಿಙಿ** ಎಂಬುದರಿಂದ ಗುಣನಿಷೇಧ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ

---

ಸಂಹಿತಾಪಾಠಃ

## ದ್ಯೌರ್ವಃ ಪಿತಾ ಪೃಥಿವೀ ಮಾತಾ ಸೋಮೋ ಭ್ರಾತಾದಿತಿಃ ಸ್ವಸಾ ।
## ಅದೃಷ್ಟಾ ವಿಶ್ವದೃಷ್ಟಾಸ್ತಿಷ್ಠತೇಳಯತಾ ಸು ಕಂ ॥ ೬ ॥

ಪದಪಾಠ

ದ್ಯೌಃ । ವಃ । ಪಿತಾ । ಪೃಥಿವೀ । ಮಾತಾ । ಸೋಮಃ । ಭ್ರಾತಾ । ಅದಿತಿಃ । ಸ್ವಸಾ ।

ಅದೃಷ್ಟಾಃ । ವಿಶ್ವಽದೃಷ್ಟಾಃ । ತಿಷ್ಠತ । ಇಳಯತ । ಸು । ಕಂ ॥ ೬ ॥

ಸಾಯಣಭಾಷ್ಯಂ

ಅತಃ ಪರಂ ವಿಷವಿಚಿಕಿತ್ಸಾ । ತತ್ರ ತಾವತ್ ಹೇ ಸರ್ಪಾಃ ವೋ ಯುಷ್ಮಾಕಂ ದ್ಯೌಃ ಪಿತಾ । ಪೃಥಿವೀ ಮಾತಾ । ಸೋಮೋ ಭ್ರಾತಾ । ಅದಿತಿರ್ದೇವಮಾತಾ ಸ್ವಸಾ । ಏವಂಮಹಾನುಭಾವಾ ಮಹೋ-ರಗಾಃ ಅದೃಷ್ಟಾ ಅನ್ಯೈರದೃಶ್ಯಮಾನರೂಪಾಃ ಸ್ವಯಂ ತು ವಿಶ್ವದೃಷ್ಟಾಃ ಸರ್ವಸ್ಯ ದ್ರಷ್ಟಾರೋ ಯೂಯಂ ತಿಷ್ಠತ ಸ್ವಸ್ವಸ್ಥಾನೇ । ಮಾಂ ಪ್ರತಿ ಮಾ ಗಚ್ಛತ । ಸು ಸುತರಾಂ ಕಂ ಸುಖಂ ಯಥಾ ತಥೇ-ಳಯತ । ಈರಯತ । ಗಚ್ಛತ । ಸೋಮಶಬ್ದೇನ ಸೋಮಾಧಾರೋ ದ್ಯುಲೋಕ ಉಚ್ಯತೇ । ಪೃಥಿವ್ಯಂ-ತರಿಕ್ಷದ್ಯುಸ್ಥಾನಸ್ಥಾಃ ಸರ್ಪಾಃ ಸ್ವಸ್ವಸ್ಥಾನಂ ಪ್ರಾಪ್ನುತಾಸ್ಮದ್ಬಾಧಂ ಮಾ ಕುರತೇತ್ಯರ್ಥಃ ॥

ಪ್ರತಿಪದಾರ್ಥ

(ಎಲೈ ಸರ್ಪಗಳೇ) ವಃ—ನಿಮಗೆ । ದ್ಯೌಃ—ದ್ಯುಲೋಕವು । ಪಿತಾ—ತಂದೆಯು । **ಪೃಥಿವೀ**—ಪೃಥಿವಿಯು । **ಮಾತಾ**—ತಾಯಿಯು । **ಸೋಮಃ**—ಸೋಮಾಧಾರವಾದ ಅಂತರಿಕ್ಷವು । ಭ್ರಾತಾ—ಒಡಹುಟ್ಟಿದವನು । ಅದಿತಿಃ—ದೇವಮಾತೆಯಾದ ಅದಿತಿಯು । **ಸ್ವಸಾ**—ಸಹೋದರಿಯು । ಅದೃಷ್ಟಾಃ—ಇತರರಿಂದ ನೀವು ನೋಡಲ್ಪಡದಿದ್ದರೂ । ವಿಶ್ವದೃಷ್ಟಾಃ—ನೀವು ಸಕಲವನ್ನೂ ನೋಡಬಲ್ಲಿರಿ । ತಿಷ್ಠತ—ನಿಮ್ಮ ನಿಮ್ಮ ಪ್ರದೇಶದಲ್ಲೇ ಸುರಕ್ಷಿತವಾಗಿರಿ । **ಸು**—ಅತಿಶಯವಾಗಿ । **ಕಂ**—ಸುಖವನ್ನು ಹೊಂದುವಂತೆ । **ಇಲಯತ**—ವರ್ತಿಸಿರಿ ।

ಭಾವಾರ್ಥ

ಎಲೈ ಸರ್ಪಗಳೇ, ನಿಮಗೆ ದ್ಯುಲೋಕವೇ ತಂದೆಯು ಪೃಥಿವಿಯೇ ತಾಯಿಯು. ಸೋಮವೇ (ಸೋಮಾಧಾರವಾದ ಅಂತರಿಕ್ಷವೇ) ಭ್ರಾತೃವು ದೇವಮಾತೆಯಾದ ಅದಿತಿಯೇ ಸಹೋದರಿಯು ನಿಮ್ಮನ್ನು ಇತರರು

ನೋಡಲು ಸಾಧ್ಯವಿಲ್ಲದಿದ್ದರೂ ಸಹ ನೀವು ಇತರ ಸಮಸ್ತವನ್ನೂ ನೋಡಬಲ್ಲಿರಿ. ನೀವು ನಮ್ಮಲ್ಲಿ ಬಂದು ನಮಗೆ ತೊಂದರೆಯನ್ನು ಕೊಡದೇ ನಿಮ್ಮ ನಿಮ್ಮ ಸ್ವಸ್ಥಾನಗಳಲ್ಲಿದ್ದು ಸುಖವನ್ನನುಭವಿಸಿರಿ.

## English Translation

Heaven, (serpents), is your father, Earth your mother, Soma your brother, Aditi your sister, unseen, all seeing, abide (in your own holes), enjoy (your own) good pleasure.

### ವಿಶೇಷವಿಷಯಗಳು

ಇದುವರಿಗೂ ಸರ್ಪಾದಿಗಳು ಜನರಿಗೆ ಉಂಟುಮಾಡುವ ಕೆಡಕನ್ನು ಕುರಿತು ಅಗಸ್ತ್ಯಋಷಿಯು ನಿಂದೆಮಾಡಿ ಇವುಗಳ ವಿಷಯವಲ್ಲಿ ಜನರು ಬಹು ಎಚ್ಚರಿಕೆಯಿಂದ ಇರಬೇಕೆಂದು ಹೇಳಿ, ಈಗ ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಅವು ಯಾರಿಗೂ ತೊಂದರೆ ಕೊಡದಂತೆ ತಮ್ಮಷ್ಟಕ್ಕೆ ತಾವು ಸುಖವಾಗಿರಬೇಕೆಂಬ ಇಚ್ಛೆಯನ್ನು ಸೂಚಿಸಿ ಪ್ರಾರ್ಥಿಸುತ್ತಾನೆ.

**ಸೋಮಃ**—ಇಲ್ಲಿ ಸೋಮಶಬ್ದಕ್ಕೆ ಸೋಮವು ಇರುವ ಸ್ವರ್ಗಲೋಕವೆಂಬ ಭಾಷ್ಯಕಾರರ ಅಭಿಪ್ರಾಯವು. ಎಂದರೆ ಪೃಥಿವ್ಯಂತರಿಕ್ಷಸ್ವರ್ಗಗಳಲ್ಲಿರುವ ನಾನಾವಿಧಸರ್ಪಗಳೆಂದಭಿಪ್ರಾಯವು. ಈ ವಿಷಯವನ್ನು ತೈತ್ತಿರೀಯ ಸಂಹಿತೆಯಲ್ಲಿರುವ—

**ನಮೋ ಅಸ್ತು ಸರ್ಪೇಭ್ಯೋ ಯೇ ಕೇ ಚ ಪೃಥಿವೀಮನು ।**
**ಯೇ ಅಂತರಿಕ್ಷೇ ಯೇ ದಿವಿ ತೇಭ್ಯಃ ಸರ್ಪೇಭ್ಯೋ ನಮಃ ॥**

(ತೈ. ಸಂ. ೪-೨-೮-೩)

ಎಂಬ ಮಂತ್ರದಲ್ಲಿ ಸ್ಪಷ್ಟವಾಗಿ ಹೇಳಿರುವುದು. ಪೃಥಿವ್ಯಂತರಿಕ್ಷಸ್ವರ್ಗಗಳೆಂಬ ಮುಖ್ಯವಾದ ಮೂರು ಸ್ಥಾನಗಳಲ್ಲಲ್ಲದೆ ಇತರ ಕಡೆಗಳಲ್ಲಿಯೂ ಇರುವ ಸರ್ಪಗಳ ವಿಷಯವು ಸಹ ಅಲ್ಲಿಯೇ ಹೇಳಿದೆ—

**ಯೇಽದೋ ರೋಚನೇ ದಿವೋ ಯೇ ವಾ ಸೂರ್ಯಸ್ಯ ರಶ್ಮಿಷು ।**
**ಯೇಷಾಮಪ್ಸು ಸದಃ ಕೃತಂ ತೇಭ್ಯಃ ಸರ್ಪೇಭ್ಯೋ ನಮಃ ॥**
**ಯಾ ಇಷವೋ ಯಾತುಧಾನಾನಾಂ ಯೇ ವಾ ವನಸ್ಪತೀ ಗ್ಂ ರನು ।**
**ಯೇ ವಾವಟೇಷು ಶೇರತೇ ತೇಭ್ಯಃ ಸರ್ಪೇಭ್ಯೋ ನಮಃ ॥**

(ತೈ. ಸಂ. ೪-೨-೮-೩)

ಎಂಬ ಮಂತ್ರಗಳಲ್ಲಿ ಪ್ರಕಾಶಮಾನವಾದ ಸ್ವರ್ಗದಲ್ಲಿರುವ ಸರ್ಪಗಳು, ಸೂರ್ಯನ ರಶ್ಮಿಗಳಲ್ಲಿ ( ಬಿಸಲಿನಲ್ಲಿ ) ಇರಲು ಬಯಸುವ ಸರ್ಪಗಳು, ನೀರಿನಲ್ಲಿರುವ ಸರ್ಪಗಳು (Annaconda) ರಾಕ್ಷಸರ ಬಾಣಗಳಂತೆ ಉಪಯೋಗಿಸಲ್ಪಡುವ ಸರ್ಪಗಳು, ವೃಕ್ಷಗಳ ಮೇಲೆ ವಾಸಿಸುವ ಸರ್ಪಗಳು ( ಹಸರು ಹಾವು ) ಪಾಳುಭಾವಿಗಳಲ್ಲಿ ವಾಸಿಸುವ ಸರ್ಪಗಳು ಎಂದು ಅನೇಕಜಾತಿಯ ಹಾವುಗಳ ಹೆಸರನ್ನು ಹೇಳಿದೆ.

### ವ್ಯಾಕರಣಪ್ರಕ್ರಿಯಾ

ತಿಷ್ಠತ—ಷ್ಠಾ ಗತಿನಿವೃತ್ತೌ.-ಧಾತು. ಲೋಟ್ ಮಧ್ಯಮಪುರುಷ ಬಹುವಚನಕ್ಕೆ ತಾದೇಶ. ಪಾಘ್ರಾಧ್ಮಾ-ಎಂಬುದರಿಂದ ಧಾತುವಿಗೆ ತಿಷ್ಠ ಆದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ.

ಇಳಯತ—ಇಲ ಪ್ರೇರಣೇ ಧಾತು. ಚುರಾದಿ. ಸತ್ಯಾಪಪಾಶ—ಎಂಬುದರಿಂದ ಣಿಚ್, ಛಾಂದಸ ವಾಗಿ ಲಘೂಪಧಗುಣ ಬರುವುದಿಲ್ಲ. ಲೋಟ್ ಮಧ್ಯಮಪುರುಷಬಹುವಚನಾಂತರೂಪ. ಅನ್ಯೇಷಾಮಪಿ-ದೃಶ್ಯತೇ ( ಪಾ. ಸೂ ೬-೩-೧೩೭ ) ಎಂಬುದರಿಂದ ಸಂಹಿತಾದಲ್ಲಿ ದೀರ್ಘ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಿಚ್ ಸ್ವರದಿಂದ ಲಕಾರೋತ್ತರ ಅಕಾರ ಉದಾತ್ತವಾಗುತ್ತದೆ.

---

### ಸಂಹಿತಾಪಾಠ

ಯೇ ಅಂಸ್ಯಾ ಯೇ ಅಂಗ್ಯಾಃ ಸೂಚೀಕಾ ಯೇ ಪ್ರ ಕಂಕತಾಃ ।
ಅದೃಷ್ಟಾಃ ಕಿಂ ಚನೇಹ ವಃ ಸರ್ವೇ ಸಾಕಂ ನಿ ಜಸ್ಯತ ॥ ೭ ॥

### ಪದಪಾಠ

ಯೇ । ಅಂಸ್ಯಾಃ । ಯೇ । ಅಂಗ್ಯಾಃ । ಸೂಚೀಕಾಃ । ಯೇ । ಪ್ರಽಕಂಕತಾಃ ।
ಅದೃಷ್ಟಾಃ । ಕಿಂ । ಚನ । ಇಹ । ವಃ । ಸರ್ವೇ । ಸಾಕಂ । ನಿ । ಜಸ್ಯತ ॥ ೭ ॥

### ಸಾಯಣಭಾಷ್ಯಂ

ಯೇಽಂಸ್ಯಾ ಅಂಸಾರ್ಹಾ ಅಂಸಗಾ ಅಂಸೇ ಭವಾ ಅಂಸಾಭ್ಯಾಂ ಖಾದಂತೋ ವಾ । ತಥಾ ಯೇಽಂಗ್ಯಾ ಅಂಗಗಾ ಅಂಗೇನ ಶರೀರೇಣ ಹಂತಾರೋ ವಾ ಲೂತಿಕಾದಯಃ । ಸೂಚೀಕಾಃ ಸೂಚೀ-ಸದೃಶಪುಚ್ಛರೋಮಾಣೋ ವೃಶ್ಚಿಕಾದ್ಯಾಃ । ಯೇ ಚ ಪ್ರಕಂಕತಾಃ ಪ್ರಕೃಷ್ಟವಿಷಾಃ ಪ್ರಕೃಷ್ಟಗಾಮಿನೋ ವಾ ಮಹೋರಗಾ ಅದೃಷ್ಟಾ ಅದೃಶ್ಯಮಾನಾಃ ಕಿಂ ಚನ ಯತ್ಕಿಂಚಿತ್ಸರ್ಪಜಾತಮಸ್ತಿ । ಇಹಾಸ್ಮಿನ್ ಸಮೀಪೇ ವೋ ಯುಷ್ಮಾಕಂ ಕಿಮಸ್ತಿ । ಅತೋ ಯೂಯಂ ಸರ್ವೇ ಸಾಕಂ ಸಹ ನಿತರಾಂ ಜಸ್ಯತ । ಮುಂಚತಾಸ್ಮಾನ್ ॥ ಜಸು ಮೋಕ್ಷಣೇ ದೈವಾದಿಕಃ ॥

### ಪ್ರತಿಪದಾರ್ಥ

ಯೇ—ಯಾವ ವಿಷಧರಗಳು । ಅಂಸ್ಯಾಃ—ಭುಜದಿಂದ ಸರಿಯುವುವೋ । ಯೇ—ಯಾವುವು । ಅಂಗ್ಯಾಃ—(ಪೂರ್ಣವಾದ) ಶರೀರದಿಂದ ಸರಿಯುವುವೋ । ಸೂಚೀಕಾಃ—ಸೂಜಿಯಂತೆ ಪುಚ್ಛವೂ ರೋಮವೂ ಉಳ್ಳ ವೃಶ್ಚಿಕಾದಿಗಳೂ । ಯೇ—ಯಾವುವು ।·ಪ್ರಕಂಕತಾಃ—ಉಲ್ಬಣವಾದ ವಿಷವುಳ್ಳವೋ । ಅದೃಷ್ಟಾಃ—

ಗೋಚರವಾಗದ । ಕಿಂಚನ—ಸೂಕ್ಷ್ಮವಾದ ವಿಷಜಂತುಗಳೂ ಆದ ಎಲೈ ಸರ್ಪಾದಿಗಳೇ । ಇಹ—ಇಲ್ಲಿ । ವಃ—ನಿಮ್ಮ ಗುಂಪಿಗೆ ಸೇರಿದ ಯಾವ ಕ್ರೂರಜಂತುಗಳಿವೆಯೋ । ಸರ್ವೇ ಸಾಕಂ—ಅವೆಲ್ಲವೂ ಜೊತೆಯಲ್ಲಿ ಸೇರಿಕೊಂಡು । ಜಸ್ಯತ—ನಮ್ಮನ್ನು ಬಿಟ್ಟು ಹೋಗಿರಿ.

ಭಾವಾರ್ಥ

ಭುಜದಿಂದ ಸರಿಯತಕ್ಕವೂ, ಶರೀರದಿಂದ ಸರಿಯತಕ್ಕವೂ ಆದ ವಿಷಧರಗಳೂ, ಸೂಜಿಯಂತೆ ಪುಚ್ಛವೂ ರೋಮವೂ ಉಳ್ಳ ವೃಶ್ಚಿಕಾದಿಗಳೂ, ಉಲ್ಬಣವಾದ ವಿಷವಿದ್ದು ಕಣ್ಣಿಗೆ ಗೋಚರವಾಗದ ಇತರ ಸೂಕ್ಷ್ಮವಾದ ವಿಷ ಜಂತುಗಳೂ ಅನೇಕವಾಗಿವೆ. ಅವುಗಳೆಲ್ಲಿ ನಮ್ಮ ಸಮೀಪಕ್ಕೆ ಬಂದು ನಮಗೆ ಹಿಂಸಾಕಾರಕವಾಗಿರತಕ್ಕವೆಲ್ಲವೂ ನಮ್ಮನ್ನು ಬಿಟ್ಟು ದೂರ ಹೋಗಲಿ.

English Translation

Those (who move with their) shoulders, those (who move with their) bodies, those who sting with sharp fangs, those who are virulently venomous; what do you here, you unseen, depart together far from us.

ವಿಶೇಷವಿಷಯಗಳು

ಅಂಸ್ಯಾಃ—ಅಂಸಾರ್ಹಾ, ಅಂಸಗಾ, ಅಂಸೇ ಭವಾ, ಅಂಸಾಭ್ಯಾಂ ಖಾದಂತೋ ವಾ । ಎಂದರೆ ಭುಜಪ್ರಧಾನವಾಗಿ ಉಳ್ಳ ಸರ್ಪಗಳು, ಭುಜಗಳಿಂದಲೇ ಮುಖ್ಯವಾಗಿ ಚಲನವಲನಾದಿಗಳನ್ನು ಮಾಡುವ ಹಾವುಗಳು, ಆದ್ದರಿಂದಲೇ ಸರ್ಪಗಳಿಗೆ ಭುಜಂಗ, ಭುಜಗ ಎಂಬ ಹೆಸರಿದೆ, ಭುಜದಿಂದ ಹುಟ್ಟುವವು, ಭುಜದಿಂದ ಕಚ್ಚುವವು ಎಂದು ನಾಲ್ಕುವಿಧ ಹಾವುಗಳ ಸ್ವರೂಪವನ್ನು ವಿವರಿಸಿದ್ದಾರೆ; ಇಲ್ಲಿ ಭುಜದಿಂದ ಕಚ್ಚುವವು ಎಂದರೆ ಸ್ಪರ್ಶ ಮಾತ್ರದಿಂದಲೇ ವಿಷವು ವ್ಯಾಪಿಸುವುದು. ಅಂತಹ ಜಾತಿಯ ಹಾವುಗಳು ಎಂದು ತಿಳಿಯಬೇಕು. ಹಾವುಗಳು ಭುಜಗಳಿಂದ ಸಂಚರಿಸುವುದು ಉತ್ಪ್ರೇಕ್ಷೆಯು. ಹಾವುಗಳಿಗೆ ಕಾಲುಗಳಿಲ್ಲದಿರುವುದು ಎಲ್ಲರಿಗೂ ತಿಳಿದ ವಿಷಯ. ಆದರೂ ಅವುಗಳ ಬೆನ್ನೆಲುಬಿನ ರಚನೆಯು ಚಲಿಸುವುದಕ್ಕೆ ಅನುಕೂಲವಾಗಿ ರಚಿಸಲ್ಪಟ್ಟಿರುವುದರಿಂದ ಅವುಗಳು ಬಹುವೇಗವಾಗಿ ಚಲಿಸಬಲ್ಲವು. ಆದ್ದರಿಂದ ಹಾವುಗಳು ಭುಜದಿಂದ ಸಂಚರಿಸುವವು ಎಂದು ಹೇಳುವುದು ರೂಢಿಯಾಗಿದೆ.

ಅಂಗ್ಯಾಃ—ಅಂಗಗಾಃ ಅಂಗೇನ ಶರೀರೇಣ ಹಂತಾರೋ ವಾ । ಅಂಗದಿಂದ ಚಲಿಸುವ ಅಥವಾ ಅಂಗದಿಂದ ಕೊಲ್ಲುವ ಎಂದು ಎರಡು ವಿಧವಾದ ಅರ್ಥವನ್ನು ಹೇಳಿರುವರು. ಅಂಗದಿಂದ ಚಲಿಸುವುದು ಎಂದರೆ ಹಿಂದೆ ಹೇಳಿದಂತೆ ವಕ್ರತೆಯಿಂದ ಸಂಚರಿಸುವುದು, ಅಂಗದಿಂದ ಕೊಲ್ಲುವುದು ಎಂದರೆ ಕೊಳಕುಮಂಡಲದ ಜಾತಿಗೆ ಸೇರಿದ ಹಾವುಗಳಂತೆ ಅವುಗಳು ಸ್ಪರ್ಶಮಾತ್ರದಿಂದ ವಿಷವನ್ನು ವ್ಯಾಪಿಸುವಂತೆಮಾಡಿ ಕೊಲ್ಲುವುವು. ಇಂತಹ ಜಾತಿಯ ಹಾವುಗಳು ಎಂದಭಿಪ್ರಾಯವು.

ಸೂಚಿಕಾಃ—ಸೂಚೀಸದೃಶಪುಚ್ಛರೋಮಾಣೋ ವೃಶ್ಚಿಕಾದ್ಯಾಃ । ಸೂಜಿಯ ಮೊನೆಯಂತೆ ಚೂಪಾದ ಕೊಂಡಿಗಳು ಬಾಲದಲ್ಲಿರುವ ಚೇಳು ಮೊದಲಾದ ವಿಷಜಂತುಗಳು ಎಂದರ್ಥವು.

**ಪ್ರಕಂಕತಾಃ**—ಪ್ರಕೃಷ್ಟವಿಷಾಃ ಪ್ರಕೃಷ್ಟಗಾಮಿನೋ ವಾ । ಬಹು ತೀಕ್ಷ್ಣವಿಷವುಳ್ಳ ಹಾವುಗಳು ಅಥವಾ ಬಹುವೇಗವಾಗಿ ಚಲಿಸುವ ಹಾವುಗಳು.

ಇಂತಹ ಮಹಾಮಹಾವಿಷಸರ್ಪಗಳೂ, ಇತರ ವಿಷಜಂತುಗಳೂ ಯಾರಿಗೂ ಕಾಣಿಸದಂತೆ ಹುಲ್ಲಿನಲ್ಲಿಯೂ ಪೊದೆಗಳಲ್ಲಿಯೂ ಅಡಗಿರುವುವು. ಇವುಗಳನ್ನು ಸಂಬೋಧಿಸಿ ಋಷಿಯು, ಎಲೈ ವಿವಿಧಜಾತಿಯ ಸರ್ಪಗಳೇ, ನೀವು ಇಲ್ಲಿದ್ದು ಮಾಡುವುದೇನು ? ನಿಮಗೇನು ಕೆಲಸ ? ನೀವೆಲ್ಲರೂ ಕೂಡಿ ನಮ್ಮ ಸಮೀಪವನ್ನು ಬಿಟ್ಟು ಹೊರಡಿ ಎಂದು ಪ್ರಾರ್ಥಿಸಿರುವನು.

### ವ್ಯಾಕರಣಪ್ರಕ್ರಿಯಾ

**ಅಂಸ್ಯಾಃ**—ಅಂಸೇ ಭವಾಃ **ಭವೇಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ಯಸ್ಯೇತಿಚ** ಸೂತ್ರದಿಂದ ಪೂರ್ವದ ಅಕಾರಕ್ಕೆ ಲೋಪ. **ಯತೋಽನಾವಃ** (ಪಾ. ಸೂ ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಹೀಗೆಯೇ ಅಂಗ್ಯಾಃ ಎಂಬಲ್ಲಿಯೂ ಪ್ರತ್ಯಯ ಸ್ವರಗಳು ಬರುತ್ತವೆ.

**ಜಸ್ಯತ**—ಜಸು ಮೋಕ್ಷಣೇ. ಧಾತು. ದಿವಾದಿ. ಲೋಟ್ ಮಧ್ಯಮಪುರುಷ ಬಹುವಚನಕ್ಕೆ ತಾದೇಶ. **ದಿವಾದಿಭ್ಯಃ ಶ್ಯನ್** ಎಂಬುದರಿಂದ ಶ್ಯನ್ ವಿಕರಣ. ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ.

———— :o: ————

### ಸಂಹಿತಾಪಾಠಃ

ಉತ್ಪುರಸ್ತಾತ್ಸೂರ್ಯ ಏತಿ ವಿಶ್ವದೃಷ್ಟೋ ಅದೃಷ್ಟಹಾ ।
ಅದೃಷ್ಟಾನ್ತ್ಸರ್ವಾಂ ಜಂಭಯನ್ತ್ಸರ್ವಾಶ್ಚ ಯಾತುಧಾನ್ಯಃ ॥ ೮ ॥

### ಪದಪಾಠಃ

ಉತ್ । ಪುರಸ್ತಾತ್ । ಸೂರ್ಯಃ । ಏತಿ । ವಿಶ್ವಽದೃಷ್ಟಃ । ಅದೃಷ್ಟಽಹಾ ।
ಅದೃಷ್ಟಾನ್ । ಸರ್ವಾನ್ । ಜಂಭಯನ್ । ಸರ್ವಾಃ । ಚ । ಯಾತುಽಧಾನ್ಯಃ ॥ ೮ ॥

### ಸಾಯಣಭಾಷ್ಯಂ

ಅಸೌ ಸೂರ್ಯಃ ಪುರಸ್ತಾತ್ಪೂರ್ವಸ್ಯಾಂ ದಿಶ್ಯುದೇತಿ । ಕೀದೃಶಃ ಸಃ । ವಿಶ್ವದೃಷ್ಟಃ । ವಿಶ್ವೈರ್ದ್ರಷ್ಟವ್ಯೋ ಯಸ್ಯ ಸ ತಾದೃಶಃ । ಅದೃಷ್ಟಹಾ । ಅದೃಷ್ಟಾ ವಿಷವಿಶೇಷಾ ವಿಷಧರವಿಶೇಷಾ ವಾ । ತೇಷಾಂ ಹಂತಾ । ಯದ್ವಾ । ಅದೃಷ್ಟಮದರ್ಶನಮಜ್ಞಾನಮಂಧಕಾರಃ । ತಸ್ಯ ಹಂತಾ । ಸೂರ್ಯೇ ಉದಿತೇ ಸತಿ ಸರ್ವೇ ವಿಷಧರಾ ವಿಷಾಣಿ ವಾ ಪಲಾಯಂತೇ । ಕಿಂ ಕುರ್ವನ್ನುದೇತೀತಿ ಚೇತ್ ಉಚ್ಯತೇ । ಸರ್ವಾನ- ದೃಷ್ಟಾನದ್ರಷ್ಟವ್ಯಾನ್ವಿಷರಾಕ್ಷಸಾದೀಞ್ಜಂಭಯನ್ ಹಿಂಸಯನ್ । ತಥಾ ಸರ್ವಾ ಯಾತುಧಾನ್ಯಃ ।

ಯಾತವೋ ಯಾತನಾಸ್ತೀವ್ರವೇದನಾಃ । ತಾಸಾಂ ಧಾತ್ರೀರುತ್ಪಾದಯಿತ್ರೀರ್ಮಹೋರಗೀರಾಕ್ಷಸೀರ್ವಾ ಜಂಭಯನ್ ಪುರಸ್ತಾದುದೇತಿ । ಅತೋಽಸ್ಮತ್ತೋ ನಿ ಜಸ್ಯತೇತಿ ಸಂಬಂಧಃ ॥

ಪ್ರತಿಪದಾರ್ಥ

**ವಿಶ್ವದೃಷ್ಟಃ**—ಸಕಲ ಲೋಕವನ್ನೂ ನೋಡತಕ್ಕವನೂ । **ಅದೃಷ್ಟಹಾ**—ಕಣ್ಣಿಗೆ ಕಾಣದಿರುವ ವಿಷಧರಾದಿಗಳನ್ನು ನಾಶಮಾಡುವವನೂ ಅಥವಾ ಅಂಧಕಾರವನ್ನು ನಾಶಮಾಡುವವನೂ ಆದ । **ಸೂರ್ಯಃ**—ಸೂರ್ಯನು । **ಸರ್ವಾನ್ ಅದೃಷ್ಟಾನ್**—ಕಣ್ಣಿಗೆ ಕಾಣದ ಸಕಲವಾದ ವಿಷಜಂತುಗಳನ್ನೂ । ಮತ್ತು **ಸರ್ವಾಶ್ಚ ಯಾತುಧಾನ್ಯಃ**—ಅವುಗಳ ಉತ್ಪತ್ತಿಗೆ ಕಾರಣವಾದ ಸಕಲವಾದ ಸ್ತ್ರೀಜಂತುಗಳನ್ನೂ (ಅಥವಾ ಅಸುರಸ್ತ್ರೀಯರನ್ನೂ) । **ಜಂಭಯನ್**—ಹಿಂಸಿಸಿ ನಾಶಪಡಿಸುತ್ತಾ । **ಪುರಸ್ತಾತ್**—ಪೂರ್ವದಿಕ್ಕಿನಲ್ಲಿ । **ಉದೇತಿ**—ಉದಯಿಸುತ್ತಾನೆ.

ಭಾವಾರ್ಥ

ಸಕಲ ಲೋಕವನ್ನೂ ನೋಡತಕ್ಕವನೂ, ಕಣ್ಣಿಗೆ ಕಾಣದಿರುವ ವಿಷಧರಾದಿಗಳನ್ನು ನಾಶಮಾಡುವವನೂ ಆದ ಸೂರ್ಯನು ಕಣ್ಣಿಗೆ ಕಾಣದ ಸಕಲವಾದ ವಿಷಜಂತುಗಳನ್ನೂ ಮತ್ತು ಅವುಗಳ ಉತ್ಪತ್ತಿಗೆ ಕಾರಣವಾದ ಸಕಲ ಸ್ತ್ರೀಜಂತುಗಳನ್ನೂ ಹಿಂಸಿಸಿ ನಾಶಪಡಿಸುತ್ತಾ ಪೂರ್ವದಿಕ್ಕಿನಲ್ಲಿ ಉದಯಿಸುತ್ತಾನೆ.

English Translation

The all-seeing sun rises in the east, the destroyer of the unseen, driving away all the unseen (venomous creatures), and all evil spirits.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಋಷಿಯು—ರಾತ್ರಿಯ ಕೊನೆಯಲ್ಲಿ ಕತ್ತಲೆಯು ಪರಿಹಾರವಾಗಿ ಸೂರ್ಯನು ಉದಯಿಸುವುದನ್ನೂ ಅದರಿಂದ ವಿಷಪ್ರಾಣಿಗಳಿಂದುಂಟಾಗಬಹುದಾದ ಭಯನಿವಾರಣೆಯಾಗುವುದನ್ನೂ ತಿಳಿಸಿ, ತನ್ನ ಸಂತೋಷವನ್ನು ವ್ಯಕ್ತಪಡಿಸಿದ್ದಾನೆ.

**ವಿಶ್ವದೃಷ್ಟಃ**—ಎಲ್ಲರಿಂದಲೂ ನೋಡಲ್ಪಡುವ ಸೂರ್ಯನು. ಸೂರ್ಯನು ಉದಯಿಸಿದಾಗ ಅವನನ್ನು ಎಲ್ಲರೂ ನೋಡುವರು. ಸೂರ್ಯನು ಎಲ್ಲರಿಗೂ ಬೇಕಾದವನು; ಎಲ್ಲರಿಗೂ ಸಂತೋಷವನ್ನುಂಟುಮಾಡುವವನು. ರಾತ್ರಿ ಕಾಲದಲ್ಲಿ ದುಷ್ಟಮೃಗಗಳ ಮತ್ತು ವಿಷಪ್ರಾಣಿಗಳ ಬಾಧೆಯು ವಿಶೇಷವಾಗಿರುವುದರಿಂದ ಅಂತಹ ರಾತ್ರಿಯು ಕಳೆದು ಬೆಳಗಾಗಿ ಸೂರ್ಯನು ಉದಯಿಸುವುದನ್ನು ಸಕಲಪ್ರಾಣಿಗಳೂ, ಜನರೂ ಬಹು ಸಂತೋಷದಿಂದ ಸ್ವಾಗತಿಸುವರು. ಆದ್ದರಿಂದ **ವಿಶ್ವದೃಷ್ಟಃ** ಎಂಬ ಶಬ್ದಕ್ಕೆ ಸಕಲರೂ ಆನಂದದಿಂದ ನೋಡುವ ಸೂರ್ಯನು ಎಂದಭಿಪ್ರಾಯವು.

**ಅದೃಷ್ಟಹಾ**—ಅದೃಷ್ಟಾ ವಿಷವಿಶೇಷಾ ವಿಷಧರವಿಶೇಷಾ ವಾ । ತೇಷಾಂ ಹಂತಾ । ಯದ್ವಾ । ಅದೃಷ್ಟಮದರ್ಶನಮಜ್ಞಾನಮಂಧಕಾರಃ । ತಸ್ಯ ಹಂತಾ । ಸೂರ್ಯೇ ಉದಿತೇ ಸತಿ ಸರ್ವೇ ವಿಷಧರಾ ವಿಷಾಣಿ ವಾ ಪಲಾಯಂತೇ । ಇಲ್ಲಿ ಅದೃಷ್ಟವೆಂದರೆ ಕಾಣಿಸದಿರುವ ವಿಷ ಅಥವಾ ಕಾಣಿಸದಂತೆ ಅಡಗಿಕೊಂಡಿರುವ ವಿಷವುಳ್ಳ ಸರ್ಪಗಳು ಎಂದರ್ಥವು. ಇವುಗಳನ್ನು ಕೊಲ್ಲುವವನಾದ್ದರಿಂದ ಸೂರ್ಯನನ್ನು ಅದೃಷ್ಟಹಾ ಎಂಬ ವಿಶೇಷಣದಿಂದ ಸ್ತುತಿಸಿದೆ. ಅಥವಾ ಅದೃಷ್ಟವೆಂದರೆ—ಕಾಣಿಸದಿರುವುದು, ಅಜ್ಞಾನ, ಕತ್ತಲೆ ಮುಂತಾದವು.

ಇವುಗಳನ್ನು ನಾಶಮಾಡುವುದರಿಂದ ಸೂರ್ಯನಿಗೆ ಅದೃಷ್ಟಹಾ ಎಂದೂ ಹೆಸರು. ಏಕೆಂದರೆ ಸೂರ್ಯನು ಉದಯಿಸಿದ ಕೂಡಲೆ ವಿಷವುಳ್ಳ ಸರ್ಪಾದಿಗಳೂ ಓಡಿಹೋಗುತ್ತವೆ. ಅವುಗಳಿಗೆ ಸೂರ್ಯನ ಬೆಳಕಿರುವ ಹಗಲಿನಲ್ಲಿ ವಿಶೇಷ ಸಂಚಾರವಿಲ್ಲ. ಇದಲ್ಲದೆ ಸೂರ್ಯರಶ್ಮಿಗಳಿಗೆ (ಬಿಸಲಿಗೆ) ವಿಷವನ್ನು ಪರಿಹಾರಮಾಡುವ ಶಕ್ತಿಯೂ ಇದೆ ಎಂದು ಆಧುನಿಕ ವಿಜ್ಞಾನಿಗಳು ಒಪ್ಪುವರು ಆದುದರಿಂದಲೇ,

**ಅದೃಷ್ಟಾನ್ ಸರ್ವಾನ್ ಜಂಭಯನ್**— ಕಾಣಿಸದಂತೆ ಅಡಗಿಕೊಂಡಿರುವ ಸಮಸ್ತ ದುಷ್ಟಪ್ರಾಣಿಗಳನ್ನೂ ತನ್ನ ಪ್ರಕಾಶದಿಂದ ಹಿಂಸಿಸುತ್ತಾ (ಓಡಿಸುತ್ತಾ) ಸೂರ್ಯನು ಉದಯಿಸುವನು ಎಂದು ವರ್ಣಿಸಿದೆ.

**ಯಾತುಧಾನ್ಯಃ**— **ಯಾತವೋ ಯಾತನಾಸ್ತೀವ್ರವೇದನಾಃ ತಾಸಾಂ ಧಾತ್ರೀರುತ್ಪಾದಯಿತ್ರೀರ್ವಾ-ಹೋರಗೀ ರಾಕ್ಷಸೀರ್ವಾ |** ಯಾತುವೆಂದರೆ ಬಹುತೀವ್ರವಾದ ವೇದನೆ, ನೋವು. ಅಂಥಹ ವೇದನೆಯನ್ನುಂಟು ಮಾಡುವ ಮಹಾವಿಷಪೂರಿತವಾದ ಸರ್ಪ ಅಥವಾ ರಾಕ್ಷಸಿಯರು ಎಂದು ಸಾಯಣರ ವಿವರಣೆಯು.

ಯಾತುಧಾನರೆಂಬುವರು ರಾಕ್ಷಸವರ್ಗದಲ್ಲಿ ಒಂದು ಪ್ರತ್ಯೇಕವಾದ ಜಾತಿಯು. ಇವರು ಜನರಿಗೆ ನಾನಾ ವಿಧ ಹಿಂಸೆಯನ್ನು ಕೊಡುತ್ತಿರುವುದರಿಂದ ಇವರ ಬಾಧೆಯನ್ನು ತಪ್ಪಿಸಬೇಕೆಂದು ಅಗ್ನಿಯನ್ನು (ರಕ್ಷೋಹಾಗ್ನಿ ಅಥವಾ ಅಗ್ನಿ) ಪ್ರಾರ್ಥಿಸುವ ಮಂತ್ರಗಳು ಋಗ್ವೇದದಲ್ಲಿ ಅನೇಕ ಇವೆ. ೧೦ನೆಯ ಮಂಡಲದ ೮೭ನೆಯ ಸೂಕ್ತ ದಲ್ಲಿಯೂ ೧೧೮ನೆಯ ಸೂಕ್ತದಲ್ಲಿಯೂ ಇವರ ಬಾಧೆಯಿಂದ ರಕ್ಷಿಸಬೇಕೆಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ.

ಈ ಯಾತುಧಾನರು ಮನುಷ್ಯರ ಮತ್ತು ಅಶ್ವಗಳ ಮಾಂಸವನ್ನು ತಿನ್ನುತ್ತಾರೆ. ಮತ್ತು ಗೋಕ್ಷೀರವನ್ನು ಪಾನಮಾಡುತ್ತಾರೆ. (ಋ. ಸಂ. ೧೦-೮೭-೧೬, ೧೭). ತಮ್ಮ ರಕ್ತ ಮತ್ತು ಮಾಂಸದ ಆಶೆಯನ್ನು ತೀರಿಸಿ ಕೊಳ್ಳಲು ಈ ರಾಕ್ಷಸರು ಮನುಷ್ಯರನ್ನು ಆಕ್ರಮಿಸುತ್ತಾರೆ. ಈ ಆಕ್ರಮಣವು ಸಾಧಾರಣವಾಗಿ ಅವರನ್ನು ಪ್ರವೇಶ ಮಾಡುವ ಮೂಲಕವೇ. ಯಜ್ಞಕರ್ತರನ್ನು ಪ್ರವೇಶಿಸದಂತೆ ತಡೆಗಟ್ಟಬೇಕೆಂದು ಅಗ್ನಿಗೆ ಪ್ರಾರ್ಥನೆಮಾಡಲಾಗಿದೆ. (೮-೪೮-೨೦) ಈ ಭೂತಪ್ರೇತಗಳು ಸಾಧಾರಣವಾಗಿ ನಾವು ತಿನ್ನುವಾಗ ಅಥವಾ ಕುಡಿಯುವಾಗ ನಮ್ಮ ಬಾಯಿ ಮೂಲಕವೇ ಪ್ರವೇಶಿಸುತ್ತವೆ (ಅ. ವೇ. ೫-೨೯-೬ ರಿಂದ ೮). ಇತರ ದ್ವಾರಗಳಿಂದಲೂ ಪ್ರವೇಶಿಸುವುದುಂಟು (ಅ. ವೆ. ೮-೬-೩). ಒಳಗೆ ಪ್ರವೇಶಮಾಡುವುದೇ ತಡ, ಮನುಷ್ಯನ ಮಾಂಸವನ್ನು ಕಿತ್ತು ತಿಂದು, ರೋಗವನ್ನುಂಟು ಮಾಡುತ್ತಾರೆ (ಅ. ವೆ. ೫-೨೯-೫, ೧೦), ಹುಚ್ಚುತನವನ್ನುಂಟುಮಾಡುತ್ತಾರೆ ಮತ್ತು ವಾಕ್ಪಟುತ್ವವನ್ನು ನಾಶ ಗೊಳಿಸುತ್ತಾರೆ. (ಅ. ವೇ. ೬-೧೧೧-೩, ಹಿ. ಗೃ. ಸೂ ೧-೧೫-೫). ಮನುಷ್ಯರ ವಾಸಗೃಹಗಳನ್ನು ಆಕ್ರಮಿ ಸುತ್ತಾರೆ. (ಕೌ. ಸೂ. ೧೩೫-೯) ಅವರ ಸಂಚಾರಕಾಲವು ರಾತ್ರಿ ಅಥವಾ ಸಾಯಂಕಾಲ. (ಋ. ಸಂ ೭-೧೦೪-೮). ಪೂರ್ವದಿಕ್ಕಿನಲ್ಲಿ ಅವರ ಆಟವೇನೂ ನಡೆಯುವುದಿಲ್ಲ. ಅಲ್ಲಿ ಉದಯಿಸುವ ಸೂರ್ಯನು ಅವರನ್ನು ಓಡಿಸಿಬಿಡುತ್ತಾನೆ. (ತೈ ಸಂ. ೨-೬-೬-೩) ಇತ್ಯಾದ್ಯನೇಕ ವರ್ಣನೆಗಳು ಯಾತುಧಾನರ ವಿಷಯವಾಗಿ ಋಗ್ವೇದದಲ್ಲಿಯೂ ಇತರ ವೇದಗಳಲ್ಲಿಯೂ ಅಲ್ಲಲ್ಲಿವೆ.

ವ್ಯಾಕರಣಪ್ರಕ್ರಿಯಾ

**ಪುರಸ್ತಾತ್**— ಪೂರ್ವಶಬ್ದ. **ದಿಕ್‌ಶಬ್ದೇಭ್ಯಃ**—(ಪಾ. ಸೂ. ೫-೩-೨೭) ಬಹುವಚನಾಂತರೂಪ. ತಿಜಂತನಿಘಾತಸ್ವರ ಬರುತ್ತದೆ

**ಅದೃಷ್ಟಹಾ** ಹನ ಹಿಂಸಾಗತ್ಯೋಃ ಧಾತು **ಬಹುಲಂ ಛಂದಸಿ** (ಪಾ ಸೂ. ೩-೨-೮೮) ಎಂಬು ದರಿಂದ ಅದೃಷ್ಟಎಂಬುದು ಉಪಪದವಾಗಿರುವಾಗ ಕ್ವಿಪ್ ಪ್ರತ್ಯಯ ಇದರಲ್ಲಿ ಸರ್ವವೂ ಲೋಪಹೊಂದುತ್ತದೆ

ಅದೃಷ್ಟನ್ ಎಂದು ರೂಪವಾಗುತ್ತದೆ. ಪ್ರಥಮಾ ಸು ಪರವಾದಾಗ ಉಪಧಾದೀರ್ಘ ನಲೋಪ. **ಗತಿಕಾರಕೋಪ-ಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ಜಂಭಯನ್—ಜಭಿ ನಾಶನೇ. ಧಾತು. ಚುರಾದಿ. **ಸತ್ಯಾಪ**—ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. ಣಿಜಂತದಮೇಲೆ ಲಟ್. ಇದಿತ್ತ್ವಾದುದರಿಂದ ನುಮಾಗಮ. ಲಟಿಗೆ ಶತ್ರಾದೇಶ. ಶಪ್ ಪಿತ್ತ್ವಾದುದರಿಂದಲೂ ಅದರ ಪರದಲ್ಲಿರುವ ಸಾರ್ವಧಾತುಕವು **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತವಾಗುವುದರಿಂದಲೂ ಣಿಚ್‌ಸ್ವರದಿಂದ ಅದರ ಆದೇಶವಾದ ಭಕಾರೋತ್ತರ ಅಕಾರವು ಉದಾತ್ತವಾಗುತ್ತದೆ.

**ಯಾತುಧಾನ್ಯಃ**—ಯಾತುಧಾನಿಶಬ್ದ. ಜಸ್ ಪರವಾದಾಗ ಛಾಂದಸವಾಗಿ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ**—(ಪಾ. ಸೂ. ೮-೨-೪) ಎಂಬುದರಿಂದ ಯಣಿನ ಪರಕ್ಕೆ ಸ್ವರಿತಸ್ವರ ಬರುತ್ತದೆ.

---

ಸಂಹಿತಾಪಾಠಃ

**ಉದಪಪ್ತದಸೌ ಸೂರ್ಯಃ ಪುರು ವಿಶ್ವಾನಿ ಜೂರ್ವನ್ ।**

**ಆದಿತ್ಯಃ ಪರ್ವತೇಭ್ಯೋ ವಿಶ್ವದೃಷ್ಟೋ ಅದೃಷ್ಟಹಾ ॥ ೯ ॥**

। ಪದಪಾಠಃ ।

ಉತ್ । ಅಪಪ್ತತ್ । ಅಸೌ । ಸೂರ್ಯಃ । ಪುರು । ವಿಶ್ವಾನಿ । ಜೂರ್ವನ್ ।

ಆದಿತ್ಯಃ । ಪರ್ವತೇಭ್ಯಃ । ವಿಶ್ವऽದೃಷ್ಟಃ । ಅದೃಷ್ಟऽಹಾ ॥ ೯ ॥

ಸಾಯಣಭಾಷ್ಯಂ

ಅಸೌ ಪುರಸ್ತಾದ್ದೃಶ್ಯಮಾನಃ ಸೂರ್ಯಃ ಸರ್ವಸ್ಯ ಪ್ರೇರಕ ಆದಿತ್ಯ ಉದಪಪ್ತತ್ । ಊರ್ಧ್ವಂ ಗಚ್ಛತಿ ॥ ಪತತೇರ್ಲುಙಿ ಪುಮಾಗಮೇ ರೂಪಂ ॥ ಕಿಂ ಕುರ್ವನ್ । ವಿಶ್ವಾನಿ ಬಹೂನಿ ವಿಷಾಣಿ ಪುರು ಪ್ರಭೂತಂ ಜೂರ್ವನ್ ಹಿಂಸನ್ । ಕೀದೃಶೋಽಸೌ । ಪರ್ವತೇಭ್ಯಃ ಪರ್ವವದ್ಭ್ಯಃ ಪ್ರಾಣಿಭ್ಯಸ್ತೇಷಾ-ಮುಪಕಾರಾಯಾದಿತ್ಯೋ ವಿಷೋದಕಾದೀನಾಮುದನಶೀಲಃ ವಿಶ್ವದೃಷ್ಟೋ ವಿಶ್ವಂ ದೃಷ್ಟಂ ಯೇನ ತಾದೃಶಃ ಅದೃಷ್ಟಹಾದೃಷ್ಟಾನಾಂ ವಿಷವಿಶೇಷಾಣಾಂ ಹಂತಾ । ಏವಂಮಹಾನುಭಾವಃ ಸೂರ್ಯಃ ಊರ್ಧ್ವಮಾರೋಹತಿ । ಅತೋ ವಿಷಶಂಕಾ ನ ಕಾರ್ಯಾ ॥

ಪ್ರತಿಪದಾರ್ಥ

ಪರ್ವತೇಭ್ಯಃ—ಪ್ರಾಣಿಗಳ ಉಪಕಾರಕ್ಕಾಗಿ । ಆದಿತ್ಯಃ—ವಿಷೋದಕಾದಿಗಳನ್ನು ಹೀರುವ ಆದಿತ್ಯರೂಪನೂ । ವಿಶ್ವದೃಷ್ಟಃ—ಸಕಲವನ್ನೂ ನೋಡತಕ್ಕವನೂ । ಅದೃಷ್ಟಹಾ—ಸೂಕ್ಷ್ಮವಾದ ವಿಷಚರಗಳನ್ನು

ನಾಶಮಾಡುವವನೂ ಆದ ! **ಅಸೌ ಸೂರ್ಯಃ**—ಈ ಸೂರ್ಯನು । **ವಿಶ್ವಾನಿ**—ಸಮಸ್ತವಾದ ವಿಷಗಳನ್ನೂ । **ಪುರು**—ಪೂರ್ಣವಾಗಿ । **ಜೂರ್ವನ್**—ನಾಶಮಾಡುತ್ತಾ । **ಉದಪಪ್ತತ್**—ಉದಯಿಸಿ ಮೇಲಕ್ಕೆ ಬರುತ್ತಾನೆ.

ಭಾವಾರ್ಥ

ಪ್ರಾಣಿಗಳ ಉಪಕಾರಕ್ಕಾಗಿ ವಿಷೋದಕಾದಿಗಳನ್ನು ಹೀರುವ ಆದಿತ್ಯರೂಪನೂ, ಸಕಲವನ್ನೂ ನೋಡತಕ್ಕವನೂ, ಸೂಕ್ಷ್ಮವಾದ ವಿಷಚರಗಳನ್ನು ನಾಶಮಾಡುವವನೂ ಆದ ಈ ಸೂರ್ಯನು ಸಮಸ್ತವಾದ ವಿಷಗಳನ್ನೂ ಪೂರ್ಣವಾಗಿ ನಾಶಮಾಡುತ್ತಾ ಉದಯಿಸಿ ಮೇಲಕ್ಕೆ ಬರುತ್ತಾನೆ

## English Translation

The Sun has risen on high, destroying all the many (poisons) ; Aditya, the all-seeing, the destroyer of the unseen, (rises) for (the good of) living benigs.

ವಿಶೇಷವಿಷಯಗಳು

ಹಿಂದಿನ ಋಕ್ಕಿನಲ್ಲಿ ಸೂರ್ಯೋದಯದ ವಿಷಯವನ್ನೂ ಅದರಿಂದ ದುಷ್ಟ ಪ್ರಾಣಿಗಳ ಪಲಾಯನವನ್ನೂ ಪ್ರಸ್ತಾಪಿಸಿ ಈ ಋಕ್ಕಿನಲ್ಲಿ ಸೂರ್ಯನು ಕ್ರಮೇಣ ಮೇಲಕ್ಕೇರುವುದನ್ನೂ ಅದರಿಂದುಂಟಾಗುವ ರಶ್ಮಿಗಳ ತೀಕ್ಷ್ಣತೆಯಿಂದ ವಿಷಾದಿಗಳು ನಾಶವಾಗುವ ವಿಷಯವನ್ನೂ ವಿವರಿಸಲಾಗಿದೆ.

**ಸೂರ್ಯಃ—ಸರ್ವಸ್ಯ ಪ್ರೇರಕ ಆದಿತ್ಯಃ** । ಸರ್ವ ಜಗತ್ತನ್ನೂ ಎಂದರೆ ಜಗತ್ತಿನಲ್ಲಿರುವ ಸರ್ವ ಪ್ರಾಣಿಗಳನ್ನೂ ಪ್ರೇರಿಸುವ ಸೂರ್ಯನು. ಸೂರ್ಯನಿಂದ ರಶ್ಮಿಗಳ ಮೂಲಕ ಹೊರಡುವ ಔಷ್ಣ್ಯವನ್ನು ನಾವು ಪಡೆಯದಿದ್ದರೆ ಜೀವಿಸಲಾಗುವುದಿಲ್ಲ. **ಸೂರ್ಯ ಆತ್ಮಾ ಜಗತಃ** ಎಂದು ಋ. ಸಂ. ೧-೧೧೫-೧ ರಲ್ಲಿ ಹೇಳಿರುವಂತೆ ಸೂರ್ಯನೇ ಸಕಲ ಜಗತ್ತಿಗೂ ಆತ್ಮಸ್ವರೂಪನು. ಸೂರ್ಯನ ತೇಜಸ್ಸಿಲ್ಲದಿದ್ದರೆ ಭೂಮಿಯಮೇಲಿರುವ ಒಂದು ಹುಲ್ಲುಕಡ್ಡಿಯೂ ಚಲಿಸಲಾರದು. ಸಮಸ್ತ ಪ್ರಾಣಿವರ್ಗಕ್ಕೂ, ಮನುಷ್ಯರಿಗೂ ಸೂರ್ಯನ ತೇಜಸ್ಸು (ಶಾಖವು) ಅವಶ್ಯಕವಾಗಿ ಬೇಕೇ ಬೇಕು. ಶಾಖವು (ಅಗ್ನಿಯು) ಪಂಚಭೂತಗಳಲ್ಲಿ ಒಂದಾಗಿರುವುದರಿಂದ ಗಾಳಿ, ನೀರು, ಆಹಾರ ಇವು ಅವಶ್ಯಕವಾಗಿರುವಂತೆ ಸೂರ್ಯನ ತೇಜಸ್ಸೂ ಅವಶ್ಯಕವಾಗಿರುವುದು. ಅಗ್ನ್ಯಾದಿಗಳಿಂದ ಉಂಟಾಗುವ ತೇಜಸ್ಸಿಗೂ, ಸೂರ್ಯನ ತೇಜಸ್ಸಿಗೂ ವ್ಯತ್ಯಾಸವಿದೆ. ಸೂರ್ಯನ ತೇಜಸ್ಸಿಗೆ ವಿಷವನ್ನು ಪರಿಹಾರ ಮಾಡುವ ಮತ್ತು ಆರೋಗ್ಯವನ್ನುಂಟುಮಾಡುವ ಶಕ್ತಿಯಿದೆ. ಆದುದರಿಂದಲೇ ಮಧ್ಯಾಹ್ನದ ಸೂರ್ಯನ ತೀಕ್ಷ್ಣವಾದ ಕಿರಣಗಳು ವಿಷವನ್ನು ನಾಶಮಾಡುವುವೆಂದು ಇಲ್ಲಿ ಪುರು **ವಿಶ್ವಾನಿ ವಿಷಾಣಿ ಜೂರ್ವನ್-ಹಿಂಸನ್** ಎಂಬ ವಾಕ್ಯದಿಂದ ಹೇಳಿದೆ. ಹಿಂದೆ ಪ್ರಸ್ಕಣ್ವಋಷಿಯು—

**ಹೃದ್ರೋಗಂ ಮಮ ಸೂರ್ಯ ಹರಿಮಾಣಂ ಚ ನಾಶಯ** ।

(ಋ. ಸಂ. ೧-೫೦-೧೧)

ಎಲೈ ಸೂರ್ಯನೇ, ನನ್ನ ಹೃದಯದಲ್ಲಿ ವ್ಯಾಪಿಸಿರುವ ರೋಗವನ್ನೂ, ನನ್ನ ಚರ್ಮದ ಮೇಲೆ ಹರಡಿರುವ ಕುಷ್ಠರೋಗದಿಂದ ಉಂಟಾಗಿರುವ ಹಳದಿಯ ಬಣ್ಣವನ್ನೂ (ತೊನ್ನು. Leprosy) ನಾಶಮಾಡು ಎಂದು ಪ್ರಾರ್ಥಿಸಿರುವುದು ಸೂರ್ಯನ ರೋಗಪರಿಹಾರಶಕ್ತಿಗೆ ನಿದರ್ಶನವಾಗಿರುವುದು.

**ಪರ್ವತೇಭ್ಯಃ—ಪರ್ವವದ್ಭ್ಯಃ ಪ್ರಾಣಿಭ್ಯಸ್ತೇಷಾಮುಪಕಾರಾಯಾದಿತ್ಯೋ ವಿಷೋದಕಾದೀನಾಮುದನಶೀಲಃ ಉದಪಪ್ತತ್ ।** ಗಿಣ್ಣುಗಳಂತೆ ಇರುವ ಶರೀರವುಳ್ಳ ಪ್ರಾಣಿಗಳೆಂದು ಪರ್ವತಶಬ್ದಕ್ಕೆ ಸಾಯಣರು ಅರ್ಥಮಾಡಿರುವರು ಎಂದರೆ ಪಾದ, ಮೊಣಕಾಲು, ತೊಡೆ, ಉದರ, ಕಂಠ, ಶಿರಸ್ಸು ಎಂಬ ಶರೀರದ ಬೇರೆಬೇರೆ ಭಾಗಗಳು ಸೇರಿ ಒಂದು ದೊಡ್ಡದಾದ ಪದಾರ್ಥದಂತಿರುವುದು ಪರ್ವತದಲ್ಲಿಯೂ (ಬೆಟ್ಟದಲ್ಲಿ) ಅನೇಕ ಬಂಡೆಗಳು ಒಂದರಮೇಲೊಂದು ಇದ್ದು ಅವೆಲ್ಲಕ್ಕೂ ಒಟ್ಟು ಪರ್ವತವೆಂಬ ಹೆಸರಿರುವುದು. ಆ ದೃಷ್ಟಾಂತವನ್ನು ಇಲ್ಲಿ ಪ್ರಾಣಿಗಳ ಶರೀರಕ್ಕೆ ಹೋಲಿಸಿದೆ. ಮತ್ತು ಇಂತಹ ಪ್ರಾಣಿಗಳಿಗೆ ಉಪಕಾರವಮಾಡುವುದಕ್ಕಾಗಿ ಎಂಬ ಶಬ್ದಗಳನ್ನು ವಾಕ್ಯಾರ್ಥಪೂರ್ಣಮಾಡುವುದಕ್ಕಾಗಿ ಅಧ್ಯಾಹಾರಮಾಡಿರುವರು.

**ವಿಶ್ವದೃಷ್ಟೋ ಅದೃಷ್ಟಹಾ**—ಈ ಶಬ್ದಗಳ ವಿವರಣೆಯನ್ನೂ ಅರ್ಥವನ್ನೂ ಹಿಂದಿನ ಋಕ್ಕಿನಲ್ಲಿಯೇ ವಿವರಿಸಲಾಗಿದೆ.

**ವ್ಯಾಕರಣಪ್ರಕ್ರಿಯಾ**

**ಅಪಪ್ತತ್**—ಪತ್ಲೃ ಗತೌ. ಧಾತು. ಭ್ವಾದಿ. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇತಶ್ಚ ಎಂಬುದರಿಂದ ಇಕಾರಕ್ಕೆ ಲೋಪ. ಧಾತುವು ಲೃದಿತ್ತಾದುದರಿಂದ **ಪುಷಾದಿದ್ಯುತಾದಿ**—ಎಂಬುದರಿಂದ ಚ್ಲಿಗೆ ಅಙಾದೇಶ. **ಪತಃಪುಮ್** (ಪಾ ಸೂ ೭-೪-೧೯) ಎಂಬುದರಿಂದ ಧಾತುವಿಗೆ ಪುಮಾಗಮ. ಮಿತ್ತಾದುದರಿಂದ ಅಂತ್ಯಾಚಿನಪರವಾಗಿ ಬರುತ್ತದೆ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಜೂರ್ವನ್**—ಜುರ್ವೀ ಹಿಂಸಾಯಾಂ ಧಾತು. ಲಟಿಗೆ ಶತ್ರಾದೇಶ. **ಉಪಧಾಯಾಂ ಚ** ಎಂಬುದರಿಂದ ಉಕಾರಕ್ಕೆ ದೀರ್ಘ, ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಥಮಾ ಏಕವಚನಾಂತರೂಪ.

---

**ಸಂಹಿತಾಪಾಠ**

ಸೂರ್ಯೇ ವಿಷಮಾ ಸಜಾಮಿ ದೃತಿಂ ಸುರಾವತೋ ಗೃಹೇ ।

ಸೋ ಚಿನ್ನು ನ ಮರಾತಿ ನೋ ವಯಂ ಮರಾಮಾರೇ ಅಸ್ಯ ಯೋಜನಂ

ಹರಿಷ್ಠಾ ಮಧು ತ್ವಾ ಮಧುಲಾ ಚಕಾರ ॥ ೧೦ ॥

**ಪದಪಾಠ**

ಸೂರ್ಯೇ । ವಿಷಂ । ಆ । ಸಜಾಮಿ । ದೃತಿಂ । ಸುರಾವತಃ । ಗೃಹೇ ।

ಸಃ । ಚಿತ್ । ನು । ನ । ಮರಾತಿ । ನೋ ಇತಿ । ವಯಂ । ಮರಾಮ । ಆರೇ । ಅಸ್ಯ । ಯೋಜನಂ ।

ಹರಿಽಸ್ಥಾಃ । ಮಧು । ತ್ವಾ । ಮಧುಲಾ । ಚಕಾರ ॥ ೧೦ ॥

### ಸಾಯಣಭಾಷ್ಯಂ

ಆದಿತ್ಯಮಂಡಲೇ ಚತುರ್ಥೇನಾಂಗುಲಿನಾ ವಿಷಮಾದಾಯ ಮಧುಕೃತ್ಯೇ ಯೋಜಯಿತ್ವಾ ನಿರ್ವಿಷೋ ಭವೇದಿತಿ ಯದೇತದ್ವಿಷವಿದ್ಯಾಯಾಮುಕ್ತಂ ತದಿದಮತ್ರೋಚ್ಯತೇ । ಅಹಂ ವಿಷಾವೃತೋಽಗಸ್ತ್ಯಃ ಸೂರ್ಯೇ ಸರ್ವಸ್ಯ ಪ್ರೇರಯಿತರಿ ಮಧುವಿದ್ಯಾರೂಪೇ ಸೂರ್ಯಮಂಡಲೇ ವಿಷಮಾವೃತ್ಯ ವರ್ತಮಾನಂ ಸೂರ್ಯೆ ಆ ಸಜಾಮಿ । ಆಸಕ್ತಂ ಕರೋಮಿ । ತತ್ರ ದೃಷ್ಟಾಂತಃ । ಸುರಾವತೋ ಗೃಹೇ ಸುರಾನಿರ್ಮಾತೃಸದನೇ ದೃತಿಮಿವ ಚರ್ಮಮಯಂ ಸುರಾಪಾತ್ರಮಿವ । ಯಥಾ ತತ್ಕರ್ತುರ್ನ ದೋಷಾಯ ಭವತಿ ತದ್ವದ್ವಿಷಮಾದಿತ್ಯಸ್ಯ ನ ಬಾಧಕಮಿತ್ಯರ್ಥಃ । ಸೋ ಚಿತ್ ಸ । ಚಿತ್ ಪೂಜಾಯಾಂ । ಉಃ ಪ್ರಸಿದ್ಧೌ । ಪೂಜ್ಯಃ ಸ ಸೂರ್ಯಃ ಖಲು ನ ಮರಾತಿ । ನ ಮ್ರಿಯತೇ । ನೋ ವಯಂ ಮರಾಮ । ತದನುಗ್ರಹಾತ್ತತ್ರೈವ ವಿಷಸ್ಯ ಯೋಜಿತತ್ವಾದ್ವಯಮಪಿ ನ ಮ್ರಿಯಾಮಹೈ । ಉಭಯೋರಮರಣೇ ಕಾರಣಮಾಹ । ಹರಿಷ್ಠಾಃ । ಹರಯೋಽಶ್ವಾಃ । ತೇಷು ಸ್ಥಿತ ಆದಿತ್ಯ ಆರೇ ದೂರೇಽಸ್ಯ ವಿಷಸ್ಯ ಯೋಜನಂ ಪ್ರಾಪಣಂ ಚಕಾರ । ತದೇವೋಚ್ಯತೇ । ಹೇ ವಿಷ ತ್ವಾ ತ್ವಾಂ ಮಧ್ವಮೃತಂ ಚಕಾರ । ವಿಷಸ್ಯ ವಿಷಭಾವಂ ದೂರೇಽಪನೋದ್ಯಾಮೃತೀಚಕಾರೇತಿ । ಏಷೈವ ಮಧುಲಾ ಮಧುದಾತ್ರೀ ನಿರ್ವಿಷೀಕರ್ತ್ರೀ ಮಧುವಿದ್ಯಾ । ಯದೇತದಾದಿತ್ಯಸ್ಯ ವಿಷಯೋಜನಂ ತೇನ ಚಾಮೃತೀಕರಣಂ ಯದಸ್ತಿ ಏಷಾ ಮಧುವಿದ್ಯಾ ॥

### ಪ್ರತಿಪದಾರ್ಥ

**ಸುರಾವತಃ**—ಸುರೆಯನ್ನು ( ಮದ್ಯವನ್ನು ) ತಯಾರಿಸತಕ್ಕವನ ಮನೆಯಲ್ಲಿ । **ದೃತಿಂ ಇವ**—ಸುರೆಯನ್ನು ತುಂಬುವ ಚೀಲವನ್ನು ಇಡುವಂತೆ । **ವಿಷಂ**—ನಮ್ಮ ಸುತ್ತಲೂ ವ್ಯಾಪಿಸಿರುವ ವಿಷವನ್ನು । **ಸೂರ್ಯೇ**—ಸೂರ್ಯ ಮಂಡಲದಲ್ಲಿ (ಬಿಸಲಿನಲ್ಲಿ) । **ಆ ಸಜಾಮಿ**—ಸಂಯೋಜಿಸುತ್ತೇನೆ, (ಇಡುತ್ತೇನೆ) । **ಸೋ ಚಿತ್**—ಪೂಜ್ಯನಾದ ಆ ಸೂರ್ಯನಾದರೋ । **ನು**—ಖಂಡಿತವಾಗಿಯೂ । **ನ ಮರಾತಿ**—ಮರಣವನ್ನು ಹೊಂದುವುದಿಲ್ಲ । **ನೋ ವಯಂ ಮರಾಮ**—ಅವನ ಅನುಗ್ರಹದಿಂದ ನಾವೂ ಮರಣವನ್ನು ಹೊಂದುವುದಿಲ್ಲ । **ಆರೇ**—ದೂರದಲ್ಲಿದ್ದರೂ ಸಹ । **ಹರಿಷ್ಠಾಃ**—ಅಶ್ವಗಳ ಮೇಲೆ ಆರೂಢನಾಗಿರುವ ಸೂರ್ಯನು । **ಅಸ್ಯ**—ಈ ವಿಷದ । **ಯೋಜನಂ**—ಸಂಪರ್ಕವನ್ನು ಹೊಂದಿದನು (ಈ ವಿಷದ ಶಕ್ತಿಯು ನನಗೆ ಪ್ರಸರಿಸದಂತೆ ಮಾಡಿದನು) (ಎಲೈ ವಿಷವೇ) । **ಮಧುಲಾ**—ಮಧುವಿದ್ಯೆಯು । **ತ್ವಾ**—ನಿನ್ನನ್ನು । **ಮಧು ಚಕಾರ**—ಅಮೃತವನ್ನಾಗಿ ಪರಿವರ್ತಿಸಿದೆ ।

### ಭಾವಾರ್ಥ

ಸುರೆಯನ್ನು ತಯಾರಿಸುವವನ ಮನೆಯಲ್ಲಿ ಸುರೆಯನ್ನು ತುಂಬುವ ಚೀಲವನ್ನು ಇಡುವಂತೆ ನಮ್ಮ ಸುತ್ತಲೂ ವ್ಯಾಪಿಸಿರುವ ವಿಷವನ್ನು ಸೂರ್ಯನ ಮಂಡಲದಲ್ಲಿ ಸಂಯೋಜಿಸುತ್ತೇನೆ. ಪೂಜ್ಯನಾದ ಆ ಸೂರ್ಯನಾದರೋ ಖಂಡಿತವಾಗಿಯೂ ಮರಣವನ್ನು ಹೊಂದುವುದಿಲ್ಲ. ಅವನ ಅನುಗ್ರಹದಿಂದ ನಮಗೂ ಮರಣವಿಲ್ಲ. ದೂರದೇಶದಲ್ಲಿದ್ದರೂ ಸಹ ಅಶ್ವಾರೂಢನಾದ ಸೂರ್ಯನು ಈ ವಿಷದ ಸಂಪರ್ಕವನ್ನು ಹೊಂದಿ ಅದರ ಶಕ್ತಿಯು ನಮ್ಮಲ್ಲಿಗೆ ಪ್ರಸರಿಸದಂತೆ ಮಾಡಿದನು. ಎಲೈ ವಿಷವೇ, ಮಧುವಿದ್ಯೆಯು ನಿನ್ನನ್ನು ಅಮೃತವನ್ನಾಗಿ ಪರಿವರ್ತಿಸಿದೆ.

## English Translatin

I deposit the poison in the solar orb, like a leather bottle in the house of a vender of spirits : verily, that adorable (Sun) never dies, nor, (through his favour), shall we die (of the venom) ; for, through afar off, yet drawn by his coursers, he will overtake (the poison) ; the science of antidotes converted you, (Poison), to ambrosia.

। ವಿಶೇಷವಿಷಯಗಳು ।

ಹಿಂದಿನ ಋಕ್ಕುಗಳಲ್ಲಿ ಸೂರ್ಯೋದಯವನ್ನೂ, ಸೂರ್ಯಾರೋಹಣವನ್ನೂ ಹೇಳಿ ಈ ಋಕ್ಕಿನಲ್ಲಿ ಸೂರ್ಯನು ವಿಷವನ್ನು ಪರಿಹಾರ ಮಾಡುವ ಕ್ರಮವನ್ನು ವಿವರಿಸಲಾಗಿದೆ.

ವಿಷಪರಿಹಾರಕ್ರಮವು ವಿಷವಿದ್ಯ ಅಥವಾ ಮಧುವಿದ್ಯದಲ್ಲಿ ಹೇಳಿರುವುದನ್ನು ಭಾಷ್ಯಕಾರರು—**ಆದಿತ್ಯ-ಮಂಡಲೇ ಚತುರ್ಥೇನಾಂಗುಲಿನಾ ವಿಷಮಾದಾಯ ಮಧುಕೃತ್ಯ ಯೋಜಯಿತ್ವಾ ನಿರ್ವಿಷೋ ಭವೇದಿತಿ ಯದೇತದ್ವಿಷವಿದ್ಯಾಯಾಮುಕ್ತಂ ತದಿದಮತ್ರೋಚ್ಯತೇ ।** ಎಂದರೆ, ಬಲಗೈಯ ನಾಲ್ಕನೇ ಬೆರಳಿನಿಂದ ಎಂದರೆ ಅನಾಮಿಕಾ ಎಂಬ ಬೆರಳಿನಿಂದ ಗಾಯದಲ್ಲಿರುವ ವಿಷವನ್ನು ತೆಗೆದು ಸೂರ್ಯಮಂಡಲದಲ್ಲಿ (ಸೂರ್ಯನ ಮಂಡಲವನ್ನು ಹೋಲುವಂತೆ ಬರೆದಿರುವ ಚಿತ್ರದಲ್ಲಿ, ಬಿಸಲಿನಲ್ಲಿ) ಸೇರಿಸಿಟ್ಟು ಮಧುವಿದ್ಯೆಯಿಂದಕ್ಷಿಪ್ರಯೋಗಾದಿಗಳನ್ನು ಆಚರಿಸಿದಲ್ಲಿ ವಿಷವು ಪರಿಹಾರವಾಗುವುದು ಎಂದು ವಿಷವಿದ್ಯ ಎಂಬ ಗ್ರಂಥದಲ್ಲಿ ಹೇಳಿರುವುದನ್ನು ಇಲ್ಲಿ ಹೇಳಲಾಗಿದೆ ಎಂದು ಭಾಷ್ಯಕಾರರು ಈ ಋಕ್ಕಿನ ಮುಖ್ಯ ವಿಷಯವನ್ನು ವಿವರಿಸಿರುವರು.

**ಸೂರ್ಯೇ ವಿಷಂ ಆ ಸಜಾಮಿ—ವಿಷಾವೃತೋಽಗಸ್ತ್ಯೋಽಹಂ ಸೂರ್ಯೇ ಸರ್ವಸ್ಯ ಪ್ರೇರಯಿತರಿ ಮಧುವಿದ್ಯಾರೂಪೇ ಸೂರ್ಯಮಂಡಲೇ ವಿಷಮಾವೃತ್ಯ ವರ್ತಮಾನಂ ಸೂರ್ಯ ಆ ಸಜಾಮಿ ।** ವಿಷದಿಂದ ವ್ಯಾಪ್ತವಾದ ಶರೀರವುಳ್ಳ ಅಗಸ್ತ್ಯನಾಮಕನಾದ ನಾನು ಸರ್ವಜಗತ್ತನ್ನೂ ಪ್ರೇರಿಸುವ ಮಧುವಿದ್ಯಾ ಸ್ವರೂಪವಾದ ಸೂರ್ಯಮಂಡಲದಲ್ಲಿ (ನನ್ನ ಶರೀರಗತವಾದ) ವಿಷವೆಲ್ಲವನ್ನೂ ಸಂಗ್ರಹಿಸಿ ಇಡುತ್ತೇನೆ ಎಂದು ಅಗಸ್ತ್ಯಋಷಿಯು ಹೇಳಿರುವನು. ಇಲ್ಲಿ ಸೂರ್ಯಮಂಡಲವೆಂದರೆ ವಿಷಪರಿಹಾರಕ್ಕಾಗಿ ಆಚರಿಸುವ ಪ್ರಯೋಗಾದಿಗಳಲ್ಲಿ ಬಿಸಲಿನಲ್ಲಿ ಸೂರ್ಯ ಮಂಡಲದಂತೆ ಇರುವ (ಅಥವಾ ಮಂತ್ರತಂತ್ರಶಾಸ್ತ್ರದ ಪ್ರಕಾರ ಬೀಜಾಕ್ಷರಗಳಿಂದ ರಚಿತವಾದ ಸೂರ್ಯಮಂಡಲ ಚಿತ್ರವು) ಎಂದಿರಬಹುದು. ಮುಖ್ಯವಾಗಿ ಸೂರ್ಯರಶ್ಮಿಯುಕ್ತವಾದ ಸ್ಥಳದಲ್ಲಿ ಅಥವಾ ಬಿಸಲಿನಲ್ಲಿ ಎಂದು ಹೇಳಬಹುದು.

**ದೃತಿಂ ಸುರಾವತೋ ಗೃಹೇ**—ವಿಷವನ್ನು ಸಂಗ್ರಹಿಸಿ ಬಿಸಲಿನಲ್ಲಿಡುವ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಋಷಿಯು ಹೇಳಿರುವನು—

**ಸುರಾವತೋ ಗೃಹೇ ಸುರಾನಿರ್ಮಾತೃಸದನೇ ದೃತಿಮಿವ ಚರ್ಮಮಯಂ ಸುರಾಪಾತ್ರಮಿವ । ಯಥಾ ತತ್ಕರ್ತುರ್ನ ದೋಷಾಯ ಭವತಿ ತದ್ವದ್ವಿಷಮಾದಿತ್ಯಸ್ಯ ನ ಬಾಧಕಮಿತ್ಯರ್ಥಃ ।** ಮದ್ಯವನ್ನು ನಿರ್ಮಿಸುವ (ಮಾಡುವ) ಪುರುಷನು ತನ್ನ ಮನೆಯಲ್ಲಿ ಮದ್ಯವನ್ನು ಚರ್ಮದ ಚೀಲದಲ್ಲಿ ಶೇಖರಿಸಿ ಇಡುವಂತೆ ನಾನೂ ಸಹ

ವಿಷವನ್ನೆಲ್ಲಾ ತೆಗದು ಬಿಸಲಿನಲ್ಲಿ ಒಂದು ಕಡೆ ಇಡುತ್ತೇನೆ ಎಂದು ಋಷಿಯು ಉಪಮಾನವನ್ನು ಹೇಳಿರುವನು. ಮತ್ತು ಆ ರೀತಿ ಮದ್ಯವನ್ನು ಸಂಗ್ರಹಮಾಡಿ (ಕುಡಿಯದೆ) ಒಂದು ಕಡೆ ಇಡುವುದರಿಂದ ಆ ಮದ್ಯನಿರ್ಮಾತೃವಿಗೆ ಯಾವ ಪ್ರಕಾರವಾದ ಬಾಧೆಯೂ ಹೇಗೆ ಉಂಟಾಗುವುದಿಲ್ಲವೋ ಹಾಗೆ ಬಿಸಲಿನಲ್ಲಿ ಇಡುವ ವಿಷಸಂಗ್ರಹದಿಂದ ಸೂರ್ಯನಿಗೆ ಯಾವ ಬಾಧೆಯೂ ಉಂಟಾಗುವುದಿಲ್ಲ ಎಂದು ವರ್ಣಿಸಿದೆ.

**ಚಿತ್—ಚಿದಿತಿ ಪೂಜಾಯಾಂ । ಅತ್ಯಂತಮವಿನಶ್ವರಾ ।** ಯಾಸ್ಕರು ಚಿತ್ ಎಂಬ ನಿಪಾತವು **ಚಿದಿ-ತ್ಯೇಷೋಽನೇಕಕರ್ಮಾ**-ಅನೇಕವಿಧವಾದ ಅರ್ಥಗಳಲ್ಲಿ ಪ್ರಯುಕ್ತವಾಗಿರುವುದು ಎಂದು ಹೇಳಿ, **ಆಚಾರ್ಯಶ್ಚಿದಿದಂ ಬ್ರೂಯಾದಿತಿ ಪೂಜಾಯಾಂ । ದಧಿಚಿದಿತ್ಯುಪಮಾರ್ಥೇ! ಕುಲ್ಮಾಷಾಂಶ್ಚಿದ್ಾಹರೇತ್ಯವಕುತ್ಸಿತೇ । ಆಚಾರ್ಯಶ್ಚಿತ್** ಎಂಬ ವಾಕ್ಯದಲ್ಲಿ **ಚಿತ್** ಎಂಬ ನಿಪಾತವು ಪೂಜಾರ್ಥದಲ್ಲಿ ಪ್ರಯುಕ್ತವಾಗಿದೆ ; **ದಧಿಚಿತ್** ಎಂಬ ವಾಕ್ಯದಲ್ಲಿ ಉಪಮಾರ್ಥದಲ್ಲಿಯೂ, **ಕುಲ್ಮಾಷಾಂಶ್ಚಿತ್** ಎಂಬಲ್ಲಿ ನಿಂದಾರ್ಥಕವಾಗಿಯೂ ಪ್ರಯುಕ್ತವಾಗಿದೆ ಎಂದು ಉದಾಹರಣೆಗಳನ್ನು ಹೇಳಿ ಅರ್ಥವನ್ನು ವಿವರಿಸಿದ್ದಾರೆ. ಇಲ್ಲಿ ಸಾಯಣರು ಪೂಜಾರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಅರ್ಥವನ್ನು ವರ್ಣಿಸಿದ್ದಾರೆ.

**ಸೋ ಚಿನ್ನು ನ ಮರಾತಿ ನೋ ವಯಂ**—ಈ ವಾಕ್ಯಕ್ಕೆ ಸಾಯಣರು—**ಪೂಜ್ಯಃ ಸಃ ಸೂರ್ಯಃ ಖಲು ನ ಮರಾತಿ । ನ ಮ್ರಿಯತೇ । ನೋ ವಯಂ ಮರಾಮ । ತದನುಗ್ರಹಾತ್ತ್ರೈವ ವಿಷಸ್ಯ ಯೋಜಿತತ್ವಾದ್ವಯಮಪಿ ನ ಮ್ರಿಯಾಮಹೈ ।** ಸೂರ್ಯನ ಬಿಸಿಲಿನಲ್ಲಿ ವಿಷವನ್ನು ಇಡುವುದರಿಂದ ಸೂರ್ಯನಿಗೆ ಬಾಧಕವೇನೂ ಇಲ್ಲ. ಆದರಿಂದ ಸೂರ್ಯನು ಸಾಯುವುದಿಲ್ಲ ; ನಾವೂ ಸಾಯುವುದಿಲ್ಲ. ಮುಖ್ಯಾಭಿಪ್ರಾಯವೇನೆಂದರೆ-ಸೂರ್ಯನಿಗೆ ವಿಷಹರಣ ಸಾಮರ್ಥ್ಯವಿರುವುದರಿಂದ ನಾವು ಬಿಸಿಲಿನಲ್ಲಿಡುವ ವಿಷದಿಂದ ಸೂರ್ಯನಿಗೆ ಯಾವ ಕೆಡಕೂ ಆಗುವುದಿಲ್ಲ. ಆ ಸೂರ್ಯನ ಅನುಗ್ರಹದಿಂದ ನಮ್ಮ ವಿಷವು ಪರಿಹಾರವಾಗಿ ನಮಗೂ ಕೆಡಕುಂಟಾಗುವುದಿಲ್ಲ ಎಂದರೆ ನಾವೂ ಸಾಯುವುದಿಲ್ಲ. ಇದಕ್ಕೆ ಕಾರಣವೇನೆಂಬುದನ್ನು ಮುಂದಿನ ವಾಕ್ಯದಲ್ಲಿ ತಿಳಿಸುವರು.

**ಅಸ್ಯ ಯೋಜನಂ ಹರಿಷ್ಠಾ ಚಕಾರ**—ಸೂರ್ಯನು ಬಹುದೂರದಲ್ಲಿದ್ದರೂ ಅವನ ಕಿರಣಗಳ ಸಹಾಯದಿಂದ ವಿಷವನ್ನು ಹೀರಿ ಅದನ್ನು ನಿರ್ವೀರ್ಯವನ್ನಾಗಿ ಮಾಡುವನು. ಮತ್ತು ವಿಷವು ಹೋಗಿ ಅಮೃತವಾಗುವುದು ಅದನ್ನು ಇಲ್ಲಿ ವಿಷವನ್ನೇ ಸಂಬೋಧಿಸಿ ಋಷಿಯು ಹೇಳಿರುವನು.

**ಮಧು ತ್ವಾ ಮಧುಲಾ ಚಕಾರ—ವಿಷಸ್ಯ ವಿಷಭಾವಂ ದೂರೇಽಪನೋದ್ಯಾಮೃತೀಚಕಾರೇತಿ । ವಿಷೈವ ಮಧುನಾ ಮಧುದಾತ್ರೀ ನಿರ್ವಿಷೀಕರ್ತ್ರೀ ಮಧುವಿದ್ಯಾ । ಯದೇತದಾದಿತ್ಯಸ್ಯ ವಿಷಯೋಜನಂ ತೇನ ಚಾಮೃತೀಕರಣಂ ಯದಸ್ತಿ ಏಷಾ ಮಧುವಿದ್ಯಾ ।** ಸೂರ್ಯಮಂಡಲದಲ್ಲಿ ವಿಷವನ್ನು ಇಡುವುದು. ಆ ವಿಷವನ್ನು ಸೂರ್ಯನು ಅಮೃತವನ್ನಾಗಿ ಮಾಡುವುದೂ ಮಧುವಿದ್ಯೆಯೆಂದು ಹೇಳಲ್ಪಡುವುದು ಆದ್ದರಿಂದ ಋಷಿಯು ವಿಷವನ್ನು ಸಂಬೋಧಿಸಿ—ಎಲೈ ವಿಷವೇ, ಸೂರ್ಯನು ನಿನ್ನ ವಿಷವನ್ನು ( ಕೊಲ್ಲುವ ಸಾಮರ್ಥ್ಯವನ್ನು ) ನಿರ್ವೀರ್ಯವನ್ನಾಗಿ ಮಾಡುವುದಲ್ಲದೆ ಮಧುವಿದ್ಯೆಯಿಂದ ವಿಷವನ್ನೂ ಅಮೃತವನ್ನಾಗಿ ಪರಿವರ್ತಿಸುವನು ಎಂದು ಹೇಳಿರುವನು. ಈ ವಿಷಯದಲ್ಲಿ Wilson ಎಂಬ ಪಂಡಿತನು—

The notion that pervades this stanza and forms the burden of the three following, is derived, according to Sayana, from the Visha-Vidya, the science of poisonns or of antidotes,

whence it is also termed Madhu-vidya, science of ambrosia; one formula of which, as cited by him is—"having taken the poison in the solar arb with the fourth finger; having made it ambrosia and caused them to blend together, may it become poisonless" By the Surya Mandala or orb of the Sun is probably to be understood a mystical diagram or figure wholely or partly typical of the solar orb; the Sun being considered as especially instrumental in counteracting the operation of poison; the science of antidotes is also named in the text Madhula, as synonymous with Madhuvidya. It was originally taught by Indra to Dadyanch who communicated it to the aswins, and thereby lost his head.

ಎಂದು ಹೇಳಿರುವನು. ವಿಷವನ್ನು ನಾಶಮಾಡಿ ಅದನ್ನು ಅಮೃತವನ್ನಾಗಿ ಪರಿವರ್ತಿಸುವ ವಿದ್ಯಕ್ಕೆ ಮಧುವಿದ್ಯವೆಂದು ಹೆಸರು. ಈ ಋಕ್ಕಿನಲ್ಲಿ ಆ ಮಧುವಿದ್ಯವೆಂಬ ಶಬ್ದವು ಮಧುಲಾ ಎಂಬ ಶಬ್ದದಿಂದ ಬೋಧಿತವಾಗಿದೆ. ಈ ಮಧುವಿದ್ಯವನ್ನು ಪೂರ್ವದಲ್ಲಿ ಇಂದ್ರನು ದಧೀಚಿಗೆ ಉಪದೇಶಮಾಡಿದನೆಂದೂ ಮತ್ತು ಅದನ್ನು ಯಾರಿಗೂ ಹೇಳಕೂಡದೆಂದು ಕಟ್ಟುಮಾಡಿ, ಒಂದು ವೇಳೆ ಅದಕ್ಕೆ ವಿರುದ್ಧವಾಗಿ ಯಾರಿಗಾದರೂ ಹೇಳಿಕೊಟ್ಟರೆ ಹೇಳಿಕೊಟ್ಟವನ ಶಿರಸ್ಸು ಕತ್ತರಿಸಿಹೋಗುವುದೆಂದು ಹೇಳಿದ್ದನು. ಆದರೂ ಅಶ್ವಿನೀದೇವತೆಗಳ ಪ್ರಾರ್ಥನೆಯ ಮೇರಿಗೆ ಆ ಮಧುವಿದ್ಯವನ್ನು ದಧೀಚಿ ಋಷಿಯು ಅವರಿಗೆ ಉಪದೇಶಮಾಡಿದನೆಂದೂ ಆದರಿಂದ ಅವನ ತಲೆಯು ಕತ್ತರಿಸಿ ಹೋಗಲು ಆ ತಲೆಗೆ ಬದಲಾಗಿ ಅಶ್ವಿನೀದೇವತೆಗಳು ಕುದುರೆಯ ಶಿರಸ್ಸನ್ನು ಸೇರಿಸಿ ಅವನನ್ನು ಬದುಕಿಸಿದರೆಂದೂ ಉಪಾಖ್ಯಾನದ ವಿವರಗಳನ್ನು ನಾವು ಋ. ಸಂ. ಭಾಗ ೫ ಪೇಜು 615 ; ಭಾಗ 6 ಪೇಜು 615 ; ಭಾಗ ೯ ಪೇಜು 245 ಮತ್ತು 401 ಇತ್ಯಾದಿ ಸ್ಥಳಗಳಲ್ಲಿ ವಿಸ್ತಾರವಾಗಿ ವಿವರಿಸಿದೇವೆ.

ವ್ಯಾಕರಣಪ್ರಕ್ರಿಯಾ

**ಸಜಾಮಿ**—ಷಞ್ಜ ಸಂಗೇ. ಧಾತು. ಛಂದಸ್ಸಿನಲ್ಲಿ ವಿಕರಣವ್ಯತ್ಯಾಸ ಬರುವುದರಿಂದ ಲಟಿನಲ್ಲಿ ಶಪಿಗೆ ಶ ವಿಕರಣ ಬರುತ್ತದೆ. ಇದಕ್ಕೆ ಙಿದ್ವದ್ಭಾವವಿರುವುದರಿಂದ ಉಪಧಾನಕಾರಕ್ಕೆ ಲೋಪ **ಅತೋದೀರ್ಘೋಯಞಿ** ಎಂಬುದರಿಂದ ಅಂಗಕ್ಕೆ ದೀರ್ಘ. ತಿಙಂತನಿಘಾತಸ್ವರ ಬರುತ್ತದೆ.

**ದೃತಿಮ್**—ದೄ ವಿದಾರಣೇ ಧಾತು. **ದೃಣಾತೇರ್ಹ್ರಸ್ವಶ್ಚ** ( ಉ. ಸೂ. ೬೨೩ ) ಎಂಬುದರಿಂದ ತಿ ಪ್ರತ್ಯಯ. ಧಾತುವಿಗೆ ಹ್ರಸ್ವ. **ಪದಿಪ್ರಥಿಭ್ಯಾಂ ನಿತ್** ಎಂಬುದರಿಂದ ನಿತ್ವವು ಇರುವುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮರಾತಿ**—ಮೃಙ್ ಪ್ರಾಣತ್ಯಾಗೇ. ಧಾತು. ವ್ಯತ್ಯಯದಿಂದ ಪರಸ್ಮೈಪದ ಪ್ರತ್ಯಯವೂ ಬರುತ್ತದೆ. **ಲೇಟೋಽಡಾಟೌ** ಎಂಬುದರಿಂದ ಲೇಟಿನ ತಿಪಿಗೆ ಅಡಾಗಮ. ಧಾತುವಿನ ಋಕಾರಕ್ಕೆ ಗುಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮರಾಮ**—ಪೂರ್ವೋಕ್ತವಾದ ಧಾತುವಿನ ಲೇಟ್ ಉತ್ತಮಪುರುಷ ಬಹುವಚನಾಂತರೂಪ. ಹಿಂದಿನಂತೆಯೇ ಸ್ವರಕಾರ್ಯಗಳು ಬರುತ್ತವೆ.

**ಹರಿಷ್ಠಾಃ**—ಹರಿಷು ತಿಷ್ಠತೀತಿ ಹರಿಷ್ಠಾಃ ಷ್ಠಾ ಗತಿನಿವೃತ್ತೌ ಧಾತು. **ಸುಪಿಸ್ಥಃ** ( ಪಾ ಸೂ. ೩-೨-೪) ಎಂಬುದರಿಂದ ಕ ಪ್ರತ್ಯಯ. **ಆತೋಲೋಪ ಇಟಿಚ** ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ.

ವ್ಯತ್ಯಯದಿಂದ ಬಹುವಚನಪ್ರತ್ಯಯ ಬಂದಿದೆ. ಗತಿಕಾರಕೋಪ—ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ಮಧುಲಾ—ಲಾ ಆದಾನೇ. ಧಾತು. ಸುಪಿಸ್ಥಃ ಎಂಬಲ್ಲಿ ಸುಪಿ ಎಂದು ಯೋಗವಿಭಾಗಮಾಡಿಕೊಂಡುದರಿಂದ ಸುಬಂತ ಉಪಪದವಾಗಿರುವಾಗ ಆದಂತ ಇತರ ಧಾತುಗಳಿಗೂ ಕಪ್ರತ್ಯಯ ಬರುತ್ತದೆ ಎಂಬುದರಿಂದ ಇಲ್ಲಿಯೂ ಕ ಪ್ರತ್ಯಯ. ಹಿಂದಿನಂತೆಯೇ ಉತ್ತರಪದ ಪ್ರಕೃತಿಸ್ವರ ಬರುತ್ತದೆ.

ಸಂಹಿತಾಪಾಠ

ಇಯತ್ತಿಕಾ ಶಕುಂತಿಕಾ ಸಕಾ ಜಘಾಸ ತೇ ವಿಷಂ ।

ಸೋ ಚಿನ್ನು ನ ಮರಾತಿ ನೋ ವಯಂ ಮರಾಮಾರೇ ಅಸ್ಯ ಯೋಜನಂ

ಹರಿಷ್ಠಾ ಮಧು ತ್ವಾ ಮಧುಲಾ ಚಕಾರ ॥ ೧೧ ॥

ಪದಪಾಠಃ

ಇಯತ್ತಿಕಾ । ಶಕುಂತಿಕಾ । ಸಕಾ । ಜಘಾಸ । ತೇ । ವಿಷಂ ।

ಸೋ ಇತಿ । ಚಿತ್ । ನು । ನ । ಮರಾತಿ । ನೋ ಇತಿ । ವಯಂ । ಮರಾಮ । ಆರೇ । ಅಸ್ಯ ।

ಯೋಜನಂ । ಹರಿಽಸ್ಥಾಃ । ಮಧು । ತ್ವಾ । ಮಧುಲಾ । ಚಕಾರ ॥ ೧೧ ॥

ಸಾಯಣಭಾಷ್ಯಂ

ಇಯತ್ತಿಕಾ । ಇಯತ್ತಾಂ ಕುರ್ವಾಣೇಯತ್ತಾವತೀ ವಾ । ಬಾಲೇತ್ಯರ್ಥಃ । ಶಕುಂತಿಕಾ । ಶಕುಂತೇಃ ಶಕುನಿಃ । ತಸ್ಯ ಸ್ತ್ರೀ । ತಾಂ ಕಪಿಂಜಲೀಮಾಹುಃ । ಸಕಾ ಸಾ ತೇ ತವ ವಿಷಂ ಜಘಾಸ । ಭಕ್ಷಿತವತೀ । ಸಾ ವಿಷಹರ್ತ್ರೀತಿ ಪ್ರಸಿದ್ಧಾ । ಸೋ ಚಿತ್ ॥ ಸಾ ಉ ಇತಿ ನಿಪಾತಸಮುದಾಯ ಏಕಂ ಪದಂ ॥ ಸಾಪಿ ಶಕುಂತಿಕಾ ನ ಮ್ರಿಯತೇ ನಿತ್ಯಪ್ರತಿಪಕ್ಷತ್ವಾದ್ವಿಷಸ್ಯ । ಶಿಷ್ಟಂ ವ್ಯಾಖ್ಯಾತಚರಂ । ಅನೇನ ವಿದ್ಯಾಯಾಂ ಯದ್ದೇಹಾವೃತಂ ವಿಷಂ ತಸ್ಯ ಶಕುನೇಭ್ಯ ಆದಿತ್ಯಾಯ ಚ ಪ್ರದಾನಮಸ್ತೀತ್ಯುಕ್ತಂ ಭವತಿ॥

ಪ್ರತಿಪದ ಅರ್ಥ

ಇಯತ್ತಿಕಾ—ಈ ಸಣ್ಣರೂಪದ । ಸಕಾ ಶಕುಂತಿಕಾ—ಅದೇ ಪಕ್ಷಿಯು । ತೇ—ನಿನ್ನ । ವಿಷಂ—ವಿಷವನ್ನು । ಜಘಾಸ—ಭಕ್ಷಿಸಿದೆ (ಆದರೂ ಸಹ) । ಸೋ ಚಿತ್—ಶಕ್ತಿಯುತವಾದ ಅದು । ನು—ಖಂಡಿತವಾಗಿಯೂ । ನ ಮರಾತಿ—ಮರಣವನ್ನು ಹೊಂದುವುದಿಲ್ಲ । ನೋ ವಯಂ ಮರಾಮ—ನಾವೂ ಸಹ ಮೃತ

ರಾಗುವುದಿಲ್ಲ | **ಆರೇ**—ದೂರದಲ್ಲಿದ್ದರೂ ಸಹ | **ಹರಿಷ್ಠಾಃ**—ಅಶ್ವಾರೂಢನಾದ ಸೂರ್ಯನು | **ಅಸ್ಯ**—ಈ ವಿಷದ | **ಯೋಜನಂ**—ಸಂಪರ್ಕವನ್ನು ಹೊಂದುತ್ತಾನೆ | (ಈ ವಿಷದ ಶಕ್ತಿಯು ನಮಗೆ ಪ್ರಸರಿಸದಂತೆ ಮಾಡುತ್ತಾನೆ) (ಎಲೈ ವಿಷವೇ) **ಮಧುಲಾ**—ಮಧುವಿದ್ಯೆಯು | **ತ್ವಾ**—ನಿನ್ನನ್ನು | **ಮಧು ಚಕಾರ**—ಅಮೃತವನ್ನಾಗಿ ಪರಿವರ್ತಿಸಿದೆ.

**ಭಾವಾರ್ಥ**

ಅಲ್ಪರೂಪವುಳ್ಳ ಈ ಪಕ್ಷಿಯು ನಿನ್ನ ವಿಷವನ್ನು ಭಕ್ಷಿಸಿದೆ. ಆದರೂ ಸಹ ಅದು ಶಕ್ತಿಯುತವಾದುದರಿಂದ ಮೃತವಾಗುವುದಿಲ್ಲ. ದೂರದಲ್ಲಿದ್ದರೂ ಸಹ ಅಶ್ವಾರೂಢನಾದ ಸೂರ್ಯನು ಈ ವಿಷದ ಸಂಪರ್ಕವನ್ನು ಹೊಂದಿ ವಿಷದ ಶಕ್ತಿಯು ನಮಗೆ ಪ್ರಸರಿಸದಂತೆ ಮಾಡುತ್ತಾನೆ. ಎಲೈ ವಿಷವೇ, ಮಧುವಿದ್ಯೆಯು ನಿನ್ನನ್ನು ಅಮೃತವನ್ನಾಗಿ ಪರಿವರ್ತಿಸಿದೆ.

## English Translation

That little insignificant bird has swallowed your venom ; she does not die, nor shall we die; for, although afar off, yet drawn by his coursers, (the Sun) will overtake (the poison) ; the science of antidotes has converted you (Poison), to ambrosia.

**ವಿಶೇಷವಿಷಯಗಳು**

ಹಿಂದಿನ ಋಕ್ಕಿನಲ್ಲಿ ಸೂರ್ಯಮಂಡಲದಲ್ಲಿರುವುದರಿಂದ ಸೂರ್ಯನು ವಿಷವನ್ನು ಪರಿಹಾರ ಮಾಡುವನೆಂಬ ವಿಷಯವನ್ನು ಹೇಳಿ ಈಗ ಕಪಿಂಜಲವೆಂಬ ಪಕ್ಷಿಯು ವಿಷವನ್ನು ಭಕ್ಷಿಸಿ ಪರಿಹಾರಮಾಡುವುದೆಂದು ವರ್ಣಿಸಲಾಗಿದೆ.

**ಇಯತ್ತಿಕಾ ಶಕುಂತಿಕಾ | ಇಯತ್ತಾಂ ಕುರ್ವಾಣೇಯತ್ತಾವತೀ ವಾ | ಬಾಲೇತ್ಯರ್ಥಃ |** ಒಬ್ಬರು ಮಾಡುವುದನ್ನು ನೋಡಿ ಅದನ್ನು ಅನುಕರಣೆ ಮಾಡುವುದು ಬಾಲಕರ ಸ್ವಭಾವವಷ್ಟೆ. ಆದ್ದರಿಂದ ಇಯತ್ತಿಕಾ ಎಂದರೆ (ಅನುಕರಣೆ ಮಾಡುವ ಸ್ವಭಾವವುಳ್ಳ) ಬಾಲಿಕಾ ಎಂದರ್ಥವು. **ಶಕುಂತಃ** ಎಂದರೆ ಶಕುನ ಪಕ್ಷಿಯು ಅಥವಾ ಕಪಿಂಜಲವೆಂದೂ ಇದಕ್ಕೆ ಹೆಸರು. (Francoline partridge) **ಶಕುಂತಿಕಾ** ಎಂದರೆ ಹೆಣ್ಣು ಪಕ್ಷಿಯು. ಆದ್ದರಿಂದ **ಇಯತ್ತಿಕಾ-ಶಕುಂತಿಕಾ** ಎಂದರೆ ಚಿಕ್ಕದಾದ ಶಕುನ ಅಥವಾ ಕಪಿಂಜಲ ಪಕ್ಷಿಯ ಹೆಣ್ಣುಮರಿ ಎಂದರ್ಥವು. ಶಕುಂತಪಕ್ಷಿಯ ಹೆಸರು ಋ. ಸಂ. ೨-೪೨-೩, ೨-೪೩-೧ ರಲ್ಲಿ ಉಕ್ತವಾಗಿರುವುದು.

**ಸಕಾ ಜಘಾಸ ತೇ ವಿಷಂ**—**ಸಕಾ** ಎಂದರೆ ಸಾ ಎಂದೇ ಅರ್ಥವು. ಹಿಂದೆ ವಿವರಿಸಿದ ಹೆಣ್ಣು ಕಪಿಂಜಲಪಕ್ಷಿಯ ಮರಿಯು ನಿನ್ನ (ವಿಷದ) ವಿಷವನ್ನು ಭಕ್ಷಿಸಿತು (ತಿಂದಿತು) ಅಷ್ಟು ಸಣ್ಣ ಹಕ್ಕಿಯು ವಿಷವನ್ನು ಲಕ್ಷ್ಯಮಾಡದೆ ಅದನ್ನು ತಿನ್ನುವುದು. ಅದು ಅದಕ್ಕೆ ಸ್ವಾಭಾವಿಕವಾದ ಆಹಾರವಾಗಿರುವುದರಿಂದ ಅದು ಸಾಯುವುದಿಲ್ಲ. ನಾವೂ ಸಾಯುವುದಿಲ್ಲ. ಇತ್ಯಾದಿ ವಿವರಗಳೆಲ್ಲಾ ಹಿಂದಿನಂತೇ ಇವೆ.

**ಸೋ ಚಿನ್ನು**—ಇಲ್ಲಿ ಭಾಷ್ಯಕಾರರು ಹಿಂದಿನ ಋಕ್ಕಿನಲ್ಲಿ ಮಾಡಿರುವಂತೆ **ಸಃ ಚಿತ್ ನು** ಎಂದು ಪದಚ್ಛೇದ ಮಾಡಿರುವುದಿಲ್ಲ. ಅದಕ್ಕೆ ಬದಲಾಗಿ **ಸಾ+ಉ=ಸೋ** ಎಂದು ಪದಚ್ಛೇದವಿರುವುದು. ಉ ಎಂಬ ನಿಪಾತವು ಪದ ಪೂರಣಾರ್ಥವಾಗಿ ಉಪಯೋಗಿಸಲ್ಪಟ್ಟಿರುವುದರಿಂದ ಸಾ ಎಂದು ಪದವಿಭಾಗ ಮಾಡಿದರೆ ಶಕುಂತಿಕಾ ಶಬ್ದಕ್ಕೆ ವಿಶೇಷಣಪದವಾಗಿ ಅರ್ಥವು ಹೊಂದುವುದೆಂದೂ ವಿವರಿಸಿರುವರು.

ವ್ಯಾಕರಣಪ್ರಕ್ರಿಯಾ

**ಸಕಾ**—ತದ್ ಶಬ್ದ. **ಅವ್ಯಯಸರ್ವನಾಮ್ನಾಮಕಚ್‌ಪ್ರಾಕ್‌ಟೇಃ** ( ಪಾ. ಸೂ. ೫-೩-೭೧ ) ಎಂಬುದರಿಂದ ಮಧ್ಯಕ್ಕೆ ಅಕಚ್ ಬರುತ್ತದೆ. **ತದೋಃಸಾವ**—ಎಂಬುದರಿಂದ ಆದಿಯ ತಕಾರಕ್ಕೆ ಸಕಾರಾದೇಶ. ಅಕಚ್ ಚಿತ್ತಾದುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಅದಂತವಾದುದರಿಂದ (ತ್ಯದಾದ್ಯ ತ್ವದಿಂದ) ಸ್ತ್ರೀತ್ವದಲ್ಲಿ ಟಾಪ್. ಏಕಾದೇಶಸ್ವರದಿಂದ ಅದೂ ಉದಾತ್ತವಾಗುತ್ತದೆ.

**ಜಘಾಸ**—ಅದ ಭಕ್ಷಣೇ. ಧಾತು. ಲಿಟ್ ವಿವಕ್ಷಾಮಾಡಿದಾಗ **ಲಿಟ್ಯನ್ಯತರಸ್ಯಾಮ್** ( ಪಾ. ಸೂ. ೨-೪-೪೦) ಎಂಬುದರಿಂದ ಧಾತುವಿಗೆ ಘಸ್‌ಲೃ ಆದೇಶ. ದ್ವಿತ್ವಾದಿ. **ಅತಉಪಧಾಯಾಃ** ಎಂಬುದರಿಂದ ಉಪಧಾ ದೀರ್ಘ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸೋ ಇತಿ**—ಇಲ್ಲಿ ಸಾ ಉ ಎಂದು ಎರಡು ಪದಗಳಿವೆ. **ನಿಪಾತಾಃ**—ಎಂಬಲ್ಲಿ ಇವು ಪಠಿತವಾಗಿರುವುದ ರಿಂದ ಇವೆರಡೂ ನಿಪಾತಸಂಜ್ಞೆಯನ್ನು ಹೊಂದಿ ಏಕಪದವಾಗಿರುತ್ತವೆ.

---

ಸಂಹಿತಾಪಾಠ :

ತ್ರಿಃ ಸಪ್ತ ವಿಷ್ಪುಲಿಂಗಕಾ ವಿಷಸ್ಯ ಪುಷ್ಪಮಕ್ಷನ್ ।
ತಾಶ್ಚಿನ್ನು ನ ಮರಂತಿ ನೋ ವಯಂ ಮರಾಮಾರೇ ಅಸ್ಯ ಯೋಜನಂ
ಹರಿಷ್ಠಾ ಮಧು ತ್ವಾ ಮಧುಲಾ ಚಕಾರ ॥ ೧೨ ॥

ಪದಪಾಠಃ

ತ್ರಿಃ । ಸಪ್ತ । ವಿಷ್ಪುಲಿಂಗಕಾಃ । ವಿಷಸ್ಯ । ಪುಷ್ಯಂ । ಅಕ್ಷನ್ ।
ತಾಃ । ಚಿತ್ । ನು । ನ । ಮರಂತಿ । ನೋ ಇತಿ । ವಯಂ । ಮರಾಮ । ಆರೇ । ಅಸ್ಯ । ಯೋಜನಂ ।
ಹರಿಽಸ್ಥಾಃ । ಮಧು । ತ್ವಾ । ಮಧುಲಾ । ಚಕಾರ ॥ ೧೨ ॥

## ಸಾಯಣಭಾಷ್ಯಂ

**ತ್ರಿಃ ಸಪ್ತ ತ್ರಿಗುಣಿತಾಃ ಸಪ್ತಸಂಖ್ಯಾಕಾ ವಿಷ್ಪುಲಿಂಗಕಾ ವಿವಿಧಾಃ ವಿಷ್ಪುಲಿಂಗಕಾಃ । ಸಪ್ತಸು ಜಹ್ವಾಸು ಲೋಹಿತಶುಕ್ಲಕೃಷ್ಣಭೇದೇನೈಕವಿಂಶತಿರ್ಯಾಸಾಂ ತಾಃ । ಯದ್ವಾ । ತ್ರಿಃ ಸಪ್ತೈಕವಿಂಶತಿ-ಭೇದಾ ವಿಷ್ಪುಲಿಂಗಕಾಃ ಸೂಕ್ಷ್ಮಚಟಕಿಕಾ ವಿಷಪ್ರತಿಪಕ್ಷಭೂತಾಃ । ವಿಷಸ್ಯಾಸ್ಮದಾವರಕಸ್ಯ ಪುಷ್ಯಂ ಪೋಷಮುಕ್ಷನ್ । ಅದಂತು ನಾಶಯಂತು । ತಾಶ್ಚ ನ ಮರಂತಿ ನ ವಯಮಪಿ । ಶಿಷ್ಟಮವಶಿಷ್ಟಂ ॥**

## ಪ್ರತಿಪದಾರ್ಥ

**ತ್ರಿಃ ಸಪ್ತ**—ತ್ರಿಗುಣಿತವಾದ ಸಪ್ತಸಂಖ್ಯಾಕವುಳ್ಳ (೨೧) ಎಂದರೆ ಇಪ್ಪತ್ತೊಂದು । **ವಿಷ್ಪುಲಿಂಗಕಾಃ**—ವಿಧವಿಧವಾದ ಅಗ್ನಿಕೆಂಡಗಳು । **ವಿಷಸ್ಯ**—ನಮ್ಮನ್ನು ಆವರಿಸಿರುವ ವಿಷದ । **ಪುಷ್ಯಂ**—ಪ್ರಬಲವಾದ ಶಕ್ತಿಯನ್ನು । **ಅಕ್ಷನ್**—ನುಂಗಿಬಿಡಲಿ (ನಾಶಮಾಡಲಿ) । **ತಾಶ್ಚಿನ್ನು**—ಅವುಗಳಾದರೋ । **ನ ಮರಾತಿ**—ಖಂಡಿತವಾಗಿಯೂ ಮರಣವನ್ನು ಹೊಂದುವುದಿಲ್ಲ । **ನೋ ವಯಂ ಮರಾಮ**—ನಾವೂ ಮೃತಿಯನ್ನು ಹೊಂದುವುದಿಲ್ಲ । **ಆರೇ**—ದೂರದಲ್ಲಿದ್ದರೂ ಸಹ । **ಹರಿಷ್ಠಾಃ**—ಅಶ್ವಾರೂಢನಾಗಿರುವ ಸೂರ್ಯನು । **ಅಸ್ಯ**—ಈ ವಿಷದ । **ಯೋಜನಂ**—ಸಂಪರ್ಕವನ್ನು ಹೊಂದಿದನು (ಈ ವಿಷದ ಶಕ್ತಿಯು ನಮಗೆ ಪ್ರಸರಿಸದಂತೆ ಮಾಡಿದನು) । **ಮಧುಲಾ**—ಮಧುವಿದ್ಯೆಯು । **ತ್ವಾ**—ನಿನ್ನನ್ನು । **ಮಧು ಚಕಾರ**—ಅಮೃತವನ್ನಾಗಿ ಪರಿವರ್ತಿಸಿದೆ.

## ಭಾವಾರ್ಥ

ಏಕವಿಂಶತಿಸಂಖ್ಯಾಕವುಳ್ಳವೂ, ವಿಧವಿಧವಾದವೂ ಆದ ಅಗ್ನಿಕೆಂಡಗಳು ನಮ್ಮನ್ನು ಆವರಿಸಿರುವ ವಿಷದ ಪ್ರಬಲವಾದ ಶಕ್ತಿಯನ್ನು ನುಂಗಿ ನಾಶಮಾಡಲಿ. ಅವುಗಳಿಗೆ ಮರಣವೇ ಇಲ್ಲ. ಅವುಗಳ ಪ್ರಭಾವದಿಂದ ನಾವೂ ಮೃತಿಯನ್ನು ಹೊಂದುವುದಿಲ್ಲ. ದೂರದಲ್ಲಿದ್ದರೂ ಸಹ ಅಶ್ವಾರೂಢನಾದ ಸೂರ್ಯನು ಈ ವಿಷದ ಸಂಪರ್ಕವನ್ನು ಹೊಂದಿ ಅದರ ಶಕ್ತಿಯು ನಮಗೆ ಪ್ರಸರಿಸದಂತೆ ಮಾಡಿದನು. ಎಲೈ ವಿಷವೇ, ಮಧುವಿದ್ಯೆಯು ನಿನ್ನನ್ನು ಅಮೃತವನ್ನಾಗಿ ಪರಿವರ್ತಿಸಿದೆ.

## English Translation

May the thrice-seven sparks (of Agni) consume the influence of the venom; they verily do not perish; nor shall we die; for although afar off, the Sun, drawn by his coursers, will overtake the poison; the science of antidotes has converted you, (Poison), to ambrosia.

## ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಅಗ್ನಿಯ ಇಪ್ಪತ್ತೊಂದುವಿಧ ಕಣಗಳು ಅಥವಾ ಪಕ್ಷಿಗಳು ನಮ್ಮ ವಿಷವನ್ನು ಪರಿಹರಿಸಲಿ ಎಂದು ಪ್ರಾರ್ಥಿಸಿದೆ

**ತ್ರಿಃ ಸಪ್ತ—ತ್ರಿಗುಣಿತಾಃ ಸಪ್ತಸಂಖ್ಯಾಕಾ ।** ಮೂರು ಸಲ ಏಳು ಅಥವಾ ಇಪ್ಪತ್ತೊಂದು ಎಂದರ್ಥವು.

ವಿಷ್ಪುಲಿಂಗಕಾಃ—ವಿವಿಧಾಃ ವಿಷ್ಪುಲಿಂಗಕಾಃ । ಸಪ್ತಸು ಜಿಹ್ವಾಸು ಲೋಹಿತಶುಕ್ಲಕೃಷ್ಣಭೇದೇ-ನೈಕವಿಂಶತಿರ್ಯಾಸಾಂ ತಾಃ । ಯದ್ವಾ । ತ್ರಿಃಸಪ್ತೈಕವಿಂಶತಿಭೇದಾ ವಿಷ್ಪುಲಿಂಗಕಾ ಸೂಕ್ಷ್ಮಚಟಕಿಕಾ ವಿಷಪ್ರತಿಪಕ್ಷಭೂತಾಃ । ಅಗ್ನಿಯ ಕಣಗಳು ಇಪ್ಪತ್ತೊಂದು ವಿಧವೆಂದು ಹೇಳಿದೆ. ಅಗ್ನಿಗೆ ಸಪ್ತಜಿಹ್ವೆ—ಏಳು ಜ್ವಾಲೆಗಳಿರು (Flames) ವ ವಿಷಯವು ಪ್ರಸಿದ್ಧವು. ಪ್ರತಿಯೊಂದು ಜ್ವಾಲೆಯಲ್ಲಿಯೂ ಕೆಂಪು, ಬಿಳುಪು, ಕಪ್ಪು ಎಂಬ ಭೇದಗಳಿಂದ ಕೂಡಿರುವ ಕಣಗಳು ಇಪ್ಪತ್ತೊಂದು ಇರುವುವು. ಅಥವಾ ವಿಷ್ಪುಲಿಂಗವೆಂದರೆ ಗುಬ್ಬಚ್ಚಿ ಅಥವಾ ಗರುಡಪಕ್ಷಿಯೆಂಬ ಸಣ್ಣ ಪಕ್ಷಿಗಳು. ಇವುಗಳಲ್ಲಿ ಇಪ್ಪತ್ತೊಂದು ಭೇದ ಅಥವಾ ಜಾತಿಗಳಿರುವುವು. ಇವು ವಿಷವನ್ನು ಲಕ್ಷ್ಯಮಾಡದೆ ತಿನ್ನುವ ಸ್ವಭಾವವುಳ್ಳವು. ಇತರ ವಿಷಯಗಳು ಹಿಂದಿನ ಋಕ್ಕಿನಂತೆಯೇ.

ವ್ಯಾಕರಣಪ್ರಕ್ರಿಯಾ

ಪುಷ್ಯಮ್—ಪುಷ ಪುಷ್ಟೌ. ಧಾತು. ಛಾಂದಸ ಶ ಪ್ರತ್ಯಯ. ಶಿತ್ತಾದುದರಿಂದ ಇದು ಪರವಾದಾಗ ಶ್ಯನ್ ವಿಕರಣ. ಇದು ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಅಕ್ಷನ್—ಅದ ಭಕ್ಷಣೇ ಧಾತು. ಛಾಂದಸವಾಗಿ ಲೋಡರ್ಥದಲ್ಲಿ ಲುಙ್. ಲುಙ್‌ಸನೋರ್ಘಸ್‌ಲೃ ( ಪಾ. ಸೂ. ೨-೪-೩೭ ) ಎಂಬುದರಿಂದ ಧಾತುವಿಗೆ ಘಸ್‌ಲೃ ಆದೇಶ. ಮಂತ್ರೇಘಸ—ಎಂಬುದರಿಂದ ಚ್ಲಿಗೆ ಲುಕ್. ಗಹಮನ—ಎಂಬುದರಿಂದ ಉಪಧಾಲೋಪ. ಚರ್ತ್ವ. ಷತ್ವ. ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

---

ಸಂಹಿತಾಪಾಠ

ನವಾನಾಂ ನವತೀನಾಂ ವಿಷಸ್ಯ ರೋಪುಷೀಣಾಂ ।
ಸರ್ವಾಸಾಮಗ್ರಭಂ ನಾಮಾರೇ ಅಸ್ಯ ಯೋಜನಂ ಹರಿಷ್ಠಾ ಮಧು ತ್ವಾ
ಮಧುಲಾ ಚಕಾರ ॥ ೧೩ ॥

॥ ಪದಪಾಠಃ ॥

ನವಾನಾಂ । ನವತೀನಾಂ । ವಿಷಸ್ಯ । ರೋಪುಷೀಣಾಂ ।
ಸರ್ವಾಸಾಂ । ಅಗ್ರಭಂ । ನಾಮ । ಆರೇ । ಅಸ್ಯ । ಯೋಜನಂ । ಹರಿಸ್ಥಾಃ । ಮಧು । ತ್ವಾ । ಮಧುಲಾ । ಚಕಾರ ॥ ೧೩ ॥

ಸಾಯಣಭಾಷ್ಯಂ

ನವಾನಾಂ ನವತೀನಾಂ ನವಾಧಿಕಾನಾಂ ನವತಿಸಂಖ್ಯಾಕಾನಾಂ ನದೀನಾಂ। ಪುನಃ ಕೀದೃಶೀನಾಂ । ವಿಷಸ್ಯಾಸ್ಮದ್ವ್ಯಾಪಕಸ್ಯ ಸರ್ವಸ್ಯ ವಿಷಸ್ಯ ರೋಪುಷೀಣಾಂ ಲೋಪಯಿತ್ರೀಣಾಂ ಭೇತ್ರೀಣಾಂ । ಸರ್ವಾ-

ಸಾಮುಕ್ತಾನಾಂ ಗಂಗಾದಿನದೀನಾಂ ನಾಮಾಗ್ರಭಂ । ಗೃಹ್ಣಾಮಿ । ಸಂಕೀರ್ತಯಾಮಿ ॥ ಗೃಹೇಶ್ಛಾಂದಸೇ ಲುಙಿ ಛಾಂದಸಶ್ಲೋಲ್ಲುರ್ಕ್ । ಹೃಗ್ರಹೋರ್ಭಃ ॥ ಅಸ್ಯ ಯೋಜನಮಿತ್ಯಾದಿ ಗತಂ ॥

### ಪ್ರತಿಪದಾರ್ಥ

ನವಾನಾಂ ನವತೀನಾಂ—ತೊಂಭತ್ತೊಂಭತ್ತು ಸಂಖ್ಯೆಯುಳ್ಳವೂ । ವಿಷಸ್ಯ—ವಿಷದ । ರೋಪುಷೀಣಾಂ—ನಾಶಕಗಳೂ ಆದ । ಸರ್ವಾಸಾಂ—ಗಂಗಾದಿಸಕಲನದಿಗಳ । ನಾಮ—ಪವಿತ್ರವಾದ ನಾಮವನ್ನು । ಅಗ್ರಭಂ—ಸ್ತುತಿಸುತ್ತೇನೆ । ಆರೇ—ದೂರದಲ್ಲಿದ್ದರೂ ಸಹ । ಹರಿಷ್ಠಾಃ—ಅಶ್ವಾರೂಢನಾದ ಸೂರ್ಯನು । ಅಸ್ಯ—ಈ ವಿಷದ । ಯೋಜನಂ—ಸಂಪರ್ಕವನ್ನು ಹೊಂದಿದನು ( ಎಲೈ ವಿಷವೇ ) । ಮಧುಲಾ—ಮಧುವಿದ್ಯೆಯು । ತ್ವಾ—ನಿನ್ನನ್ನು । ಮಧು ಚಕಾರ—ಅಮೃತವನ್ನಾಗಿ ಪರಿವರ್ತಿಸಿದೆ ।

### ಭಾವಾರ್ಥ

' ತೊಂಭತ್ತೊಂಭತ್ತು ಸಂಖ್ಯೆಯುಳ್ಳವೂ, ವಿಷಧ .ನಾಶಕಗಳೂ ಆದ ಗಂಗಾದಿಸಕಲನದಿಗಳ ಪವಿತ್ರವಾದ ನಾಮವನ್ನು ಸ್ತುತಿಸುತ್ತೇನೆ. ದೂರದಲ್ಲಿದ್ದರೂ ಸಹ ಅಶ್ವಾರೂಢನಾದ ಸೂರ್ಯನು ಈ ವಿಷದ ಸಂಪರ್ಕವನ್ನು ಹೊಂದಿದನು. ಎಲೈ ವಿಷವೇ, ಮಧುವಿದ್ಯೆಯು ನಿನ್ನನ್ನು ಅಮೃತವನ್ನಾಗಿ ಪರಿವರ್ತಿಸಿದೆ.

### English Translation

I recite the names of ninety and nine (rivers), the destroyers of poison; although afar off, (the Sun), drawn by his coursers· will overtake the poison : the science of antidote has converted you, (Poison), to ambrosia.

### ವಿಶೇಷವಿಷಯಗಳು

ಇದುವರೆಗೂ ವಿಷನಿರ್ಹರಣೋಪಾಯಗಳನ್ನು ಹೇಳಿ ಈಗ ವಿಷದೋಷಪರಿಹಾರಕ್ಕಾಗಿ ಗಂಗಾದಿಪುಣ್ಯನದೀ ಮೊದಲಾದುವುಗಳ ಸ್ಮರಣೆಯನ್ನು ಮಾಡುವೆನೆಂದು ಋಷಿಯು ವರ್ಣಿಸಿರುವನು.

ನವಾನಾಂ ನವತೀನಾಂ—ಇಲ್ಲಿ ನವಾನಾಂ ನವತೀನಾಂ ಎಂದರೆ ನವಾಧಿಕಾನಾಂ ನವತಿಸಂಖ್ಯಾಕಾನಾಂ ನದೀನಾಂ । ಎಂದರೆ ತೊಂಭತ್ತೊಂಭತ್ತು ನದಿಗಳೆಂದು ಹೇಳಿರುವರು. ಅನೇಕವಾದ ಅಥವಾ ಬಹಳವಾದ ಎಂಬರ್ಥವನ್ನು ಹೇಳುವಾಗ ನವನವತಿ, ಶತ, ಸಹಸ್ರ ಎಂಬ ಶಬ್ದಗಳ ಪ್ರಯೋಗವು ಋಗ್ವೇದದಲ್ಲಿ ಅನೇಕಕಡೆ ಇದೆ. ಇಂತಹ ಕಡೆಗಳಲ್ಲಿ ಸಂಖ್ಯೆಯನ್ನು ಅಷ್ಟಾಗಿ ಗಮನಿಸಬೇಕಾಗಿಲ್ಲ. ಗಂಗಾದಿ ಅನೇಕ (ಬಹು ಸಂಖ್ಯಾಕವಾದ) ಪುಣ್ಯನದಿಗಳನ್ನು ಸ್ಮರಣೆ ಮಾಡುವೆನೆಂದು ಋಷಿಯು ಹೇಳಿರುವನು.

### ವ್ಯಾಕರಣಪ್ರಕ್ರಿಯಾ

ನವಾನಾಮ್—ಷಟ್‌ತ್ರಿಚತುರ್ಭ್ಯೋಹಲಾದಿಃ (ಪಾ. ಸೂ. ೬-೧-೧೭೯) ಎಂಬುದರಿಂದ ನಾಂತವಾದ ಈ ಶಬ್ದಕ್ಕೆ ಷಟ್ ಸಂಜ್ಞಾ ಇರುವುದರಿಂದ ಪರದ ನಾಮ್ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ನವತೀನಾಮ್—ಪಂಕ್ತಿ ವಿಶಂತಿ—(ಪಾ. ಸೂ. ೫-೧-೬೦) ಎಂಬುದರಿಂದ ನವನ್ ಶಬ್ದದ ಮೇಲೆ ತಿ ಪ್ರತ್ಯಯ. ನಲೋಪವು ನಿಪಾತಿತವಾಗಿದೆ. ಹಿಂದಿನಂತೆಯೇ ಷಷ್ಠೀಬಹುವಚನದಲ್ಲಿ ನಾಮಿಗೆ ಉದಾತ್ತಸ್ವರ ಬರುತ್ತದೆ.

ಅಗ್ರಭಮ್—ಗ್ರಹ ಉಪಾದಾನೇ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್. ಉತ್ತಮ ಪುರುಷ ಏಕವಚನದಲ್ಲಿ ಮಿಪಿಗೆ ಅಮಾದೇಶ. ಛಾಂದಸವಾಗಿ ಚ್ಲಿಗೆ ಲುಕ್. ಹೃಗ್ರಹೋರ್ಭಶ್ಛಂದಸಿ ಎಂಬುದ ರಿಂದ ಧಾತುವಿನ ಹಕಾರಕ್ಕೆ ಭಕಾರಾದೇಶ. ಅಂಗಕ್ಕೆ ಅಡಾಗಮ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

---

ಸಂಹಿತಾಪಾಠ

ತ್ರಿಃ ಸ॒ಪ್ತ ಮ॑ಯೂ॒ರ್ಯಃ॑ ಸ॒ಪ್ತ ಸ್ವಸಾ॑ರೋ ಅ॒ಗ್ರುವಃ॑ ।

ತಾಸ್ತೇ॑ ವಿ॒ಷಂ ವಿ ಜ॑ಭ್ರಿರ ಉ॒ದ॒ಕಂ ಕು॒ಂಭಿನೀ॑ರಿವ ॥ ೧೪ ॥

ಪದಪಾಠ

ತ್ರಿಃ । ಸ॒ಪ್ತ । ಮ॒ಯೂ॒ರ್ಯಃ॑ । ಸ॒ಪ್ತ । ಸ್ವಸಾ॑ರಃ । ಅ॒ಗ್ರುವಃ॑ ।

ತಾಃ । ತೇ॒ । ವಿ॒ಷಂ । ವಿ । ಜ॒ಭ್ರಿ॒ರೇ॒ । ಉ॒ದ॒ಕಂ । ಕು॒ಂಭಿನೀಃ॑ऽಇವ ॥ ೧೪ ॥

ಸಾಯಣಭಾಷ್ಯಂ

ತ್ರಿಃ ಸಪ್ತೈಕವಿಂಶತಿಸಂಖ್ಯಾಕಾ ಮಯೂರ್ಯೋ ಮಯೂರಸ್ತ್ರಿಯಃ । ತಾ ವಿಷಕಾರಿಸರ್ಪ-ದ್ವೇಷಿಣ್ಯ ಇತಿ ಪ್ರಸಿದ್ಧಾ ನಾಗದ್ವೇಷಿಗರುಡಪಕ್ಷಾದುತ್ಪನ್ನತ್ವಾತ್ । ತಥಾ ಸಪ್ತೈತತ್ಸಂಖ್ಯಾಕಾಃ ಸರ್ಪಣ-ಸ್ವಭಾವಾಃ ಸ್ವಸಾರಃ ಸ್ವಯಮೇವ ಸರಣಾ ಅಗ್ರುವಃ । ನದೀನಾಮೈತತ್ । ಸುರಗಂಗಾದ್ಯಾಃ ಪ್ರಸಿದ್ಧಾಃ ಸಪ್ತ ನದ್ಯಃ ಸಂತಿ । ತಾಸ್ತೇ ಹೇ ದೇಹ ತವ ವಿಷಂ ವಿ ಜಭ್ರಿರೇ । ವಿಶೇಷೇಣ ಹರಂತು । ತತ್ರದೃಷ್ಟಾಂತಃ। ಉದಕಂ ಕುಂಭಿನೀಃ ಕುಂಭಿನ್ಯಃ ಕುಂಭವತ್ಯಃ ಕುಂಭೇನ ಜಲಹಾರಿಣ್ಯ ಇವ । ತಾ ಯಥಾ ತದ್ಧರಂತಿ ತದ್ವನ್ನದ್ಯೋ ಮಯೂರ್ಯಶ್ಚಾತಿಪ್ರಭೂತಂ ಹರಂತು ॥

। ಪ್ರತಿಪದಾರ್ಥ ।

(ದೇಹ—ಎಲೈ ದೇಹವೇ) ತ್ರಿಃ ಸಪ್ತ—ಏಕವಿಂಶತಿಸಂಖ್ಯಾಕವಾದ । ಮಯೂರ್ಯಃ—ಹೆಣ್ಣು ನವಿಲ ಗಳೂ । ಸಪ್ತ—ಸಪ್ತಸಂಖ್ಯಾಕವಾದವೂ । ಸ್ವಸಾರಃ—ಪ್ರವಹಿಸುವುವೂ ಆದ । ತಾಃ ಅಗ್ರುವಃ—ಗಂಗಾದಿ ನದಿಗಳೂ ಸಹ । ಕುಂಭಿನೀಃ—ಕುಂಭಗಳಿಂದ ಉದಕವನ್ನು ಹೊರತಕ್ಕ ಸ್ತ್ರೀಯರು । ಉದಕಂ ಇವ—ನೀರನ್ನು ತುಂಬಿಕೊಂಡು ಹೋಗುವಂತೆ । ತೇ—ನಿನ್ನ । ವಿಷಂ—ವಿಷವನ್ನು । ವಿ ಜಭ್ರಿರೇ—ಪೂರ್ಣವಾಗಿ ಅಪಹರಿಸಲಿ (ನಾಶಪಡಿಸಲಿ).

ಭಾವಾರ್ಥ

ಎಲೈ ದೇಹವೇ, ಏಕವಿಂಶತಿಸಂಖ್ಯಾಕವಾದ ಹೆಣ್ಣುನವಿಲುಗಳೂ, ಸಪ್ತಸಂಖ್ಯಾಕವಾದವೂ, ಪ್ರವಹಿಸುವುವೂ ಆದ ಗಂಗಾದಿನದಿಗಳೂ ಸಹ, ಕುಂಭಗಳಿಂದ ನೀರನ್ನು ಹೊರುವ ಸ್ತ್ರೀಯರು ನೀರನ್ನು ತುಂಬಿಕೊಂಡು ಹೋಗುವಂತೆ ನಿನ್ನ ವಿಷವನ್ನು ಪೂರ್ಣವಾಗಿ ಅಪಹರಿಸಲಿ.

## English Translation

May the thrice-seven peahens, the seven-sister rivers, carry off, (O Body), your poison as maidens, with pitchers, carry away water.

ವಿಶೇಷವಿಷಯಗಳು

**ತ್ರಿಃ ಸಪ್ತ ಮಯೂರ್ಯಃ**—ಮಯೂರವೆಂದರೆ ನವಿಲು. ಮಯೂರಿ ಎಂದರೆ ಹೆಣ್ಣುನವಿಲು ಇಪ್ಪತ್ತೊಂದು ವಿಧವಾದ ( ಇಪ್ಪತ್ತೊಂದು ಜಾತಿಪ್ರಭೇದಗಳಿಂದ ಕೂಡಿದ) ಹೆಣ್ಣುನವಿಲುಗಳು ; ಈ ನವಿಲುಗಳು ಹಾವನ್ನು ದ್ವೇಷಿಸುವ ಗರುಡಪಕ್ಷಿಗಳಿಂದ ಉತ್ಪನ್ನವಾದುವೆಂದು ಹೇಳುವರು. ಆದ್ದರಿಂದ ಈ ನವಿಲುಗಳು ಹಾವುಗಳನ್ನು ನಿರ್ಭಯವಾಗಿ ಕೊಂದು ತಿನ್ನುವುದು ಲೋಕಪ್ರಸಿದ್ಧವಾಗಿದೆ.

**ಸಪ್ತ ಸ್ವಸಾರೋ ಅಗ್ರುವಃ**—**ಸ್ವಸಾರಃ** ಎಂದರೆ ಹರಿಯುವ ಸ್ವಭಾವವುಳ್ಳ, ಪ್ರವಹಿಸುವ ಎಂದರ್ಥವು. **ಅಗ್ರುವಃ** ಎಂಬ ಶಬ್ದವು ಅಂಗುಲಿ (ಬೆರಳು) ನಾಮಗಳಲ್ಲಿಯೂ (ನಿ. ೩-೯) ನದೀನಾಮಗಳಲ್ಲಿಯೂ ಪಠಿತವಾಗಿದೆ. (ನಿ. ೨-೨೪) ಇಲ್ಲಿ ನದಿಗಳೆಂದರ್ಥವು ಹರಿಯುತ್ತಿರುವ ನದಿಗಳಿಗೆ ವಿಷಾಪಹರಣಶಕ್ತಿಯಿರುವುದೆಂದು ಹೇಳುವರು. ಆದ್ದರಿಂದ ಇಲ್ಲಿ ಭಾಷ್ಯಕಾರರು ಗಂಗಾದಿಸಪ್ತನದಿಗಳೆಂದೂ ಹೇಳಿರುವರು. ಅಥವಾ ಗಂಗಾ ಮತ್ತು ಅದರ ಉಪನದಿಗಳಾದರೂ ಆಗಬಹುದು. ಅನೇಕ ಪುಣ್ಯನದಿಗಳಿದ್ದರೂ ಇಲ್ಲಿ ಸಪ್ತ ಎಂಬ ಪದದ ಪ್ರಯೋಗವಿರುವುದರಿಂದ ಏಳು ಮುಖ್ಯನದಿಗಳೆಂದು ಋಷಿಯ ಆಶ್ರಯವಿರುವುದು.

**ತೇ ವಿಷಂ**—ನಿನ್ನ ಎಂಬ ಈ ಶಬ್ದವು ದೇಹವನ್ನು ಕುರಿತು ಸಂಬೋಧಿಸಿದೆ ಎಂದು ಭಾಷ್ಯಕಾರರ ವಿವರಣೆಯು. ನಿನ್ನ (ಶರೀರದ) ವಿಷವನ್ನು ಹೆಣ್ಣುನವಿಲುಗಳೂ, ಹರಿಯುವ ಸಪ್ತ ನದಿಗಳೂ ಪರಿಹರಿಸಲಿ ಎಂದು ಪ್ರಾರ್ಥಿಸಿದೆ.

**ಉದಕಂ ಕುಂಭಿನೀರಿವ**—**ಕುಂಭಿನೀಃ ಕುಂಭಿನ್ಯಃ ಕುಂಭವತ್ಯಃ ಕುಂಭೇನ ಜಲಹಾರಿಣ್ಯ ಇವ । ತಾ ಯಥಾ ತತ್ಪರಂತಿ ತೆದ್ವನ್ನದ್ಯೋ ಮಯೂರ್ಯಶ್ಚಾ ತಿಪ್ರಭೂತಂ ಹರಂತು ।** ಕುಂಭಿನೀ ಎಂದರೆ ನೀರನ್ನು ತರುವುದಕ್ಕಾಗಿ ಕುಂಭವನ್ನು (ಗಡಿಗೆ ಅಥವಾ ಬಿಂದಿಗೆ) ಯನ್ನು ಧರಿಸಿರುವ ಸ್ತ್ರೀಯರೆಂದರ್ಥವು. ಇಂತಹ ಸ್ತ್ರೀಯರು ನದ್ಯಾದಿ ಜಲಾಶಯದಿಂದ ಕುಂಭದಲ್ಲಿ ನೀರನ್ನು ತೆಗೆದುಕೊಂಡು ಹೋಗುವಂತೆ, ನದಿಗಳು ದೇಹದಲ್ಲಿ ವ್ಯಾಪಿಸಿರುವ ವಿಷವನ್ನು ಕೊಚ್ಚಿಕೊಂಡು ಹೋಗಲಿ ಎಂದು ದೃಷ್ಟಾಂತವನ್ನು ಹೇಳಿರುವುದು.

ವ್ಯಾಕರಣಪ್ರಕ್ರಿಯಾ

**ಮಯೂರ್ಯಃ**—ಮಯಾರಶಬ್ದ. ಸ್ತ್ರೀತ್ವದಲ್ಲಿ ಜಾತಿವಾಚಕವಾಹುದರಿಂದ ಜೀಷ್. ಜಸಿನಲ್ಲಿ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದುದರಿಂದ ಪರಕ್ಕೆ ಸ್ವರಿತಸ್ವರ ಬರುತ್ತದೆ.

**ಜಭ್ರಿರೇ**—ಹೃಞ್ ಹರಣೇ. ಛಾಂದಸವಾಗಿ ಲೋಡರ್ಥದಲ್ಲಿ ಲಿಟ್. ಪ್ರಥಮಪುರುಷ ಬಹುವಚನಕ್ಕೆ ಇರೇಚ್ ಆದೇಶ ಇದಕ್ಕೆ ಕಿತ್ತ್ವಾತಿದೇಶವಿರುವುದರಿಂದ ಗುಣ ಬರುವುದಿಲ್ಲ. ಯಣಾದೇಶ. ಅತಿಙಂತದ ಪರದಲ್ಲಿ ರುವುದರಿಂದ ನಿಘಾತಸ್ವರ ಬರುತ್ತದೆ.

**ಕುಂಭಿನೀಃ**—ಕುಂಭಃ ಆಸಾಮಸ್ತಿ ಇತಿ ಕುಂಭಿನೀಃ ಮತ್ವರ್ಥದಲ್ಲಿ ಇನಿಪ್ರತ್ಯಯು. ಸ್ತ್ರೀತ್ವದಲ್ಲಿ ನಾಂತ ವಾದುದರಿಂದ ಙೀಪ್. ಇನಿ ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತ ಪದವಾಗುತ್ತದೆ ಛಾಂದಸವಾಗಿ ಜಸ್ ಪರವಾದಾಗ ಪೂರ್ವಸವರ್ಣದೀರ್ಘ.

———:o:———

ಸಂಹಿತಪಾಠಃ

ಇಯತ್ತಕಃ ಕುಷುಂಭಕಸ್ತಕಂ ಭಿನದ್ಮ್ಯಶ್ಮನಾ ।
ತತೋ ವಿಷಂ ಪ್ರ ವಾವೃತೇ ಪರಾಚೀರನು ಸಂವತಃ ॥ ೧೫ ॥

ಪದಪಠಃ

ಇಯತ್ತಕಃ । ಕುಷುಂಭಕಃ । ತಕಂ । ಭಿನದ್ಮಿ । ಅಶ್ಮನಾ ।
ತತಃ । ವಿಷಂ । ಪ್ರ । ವವೃತೇ । ಪರಾಚೀಃ । ಅನು । ಸಂ್ವತಃ ॥ ೧೫ ॥

ಸಾಯಣಭಾಷ್ಯಂ

ಇಯತ್ತಕಃ ಕುತ್ಸಿತೇಯತ್ತಃ । ಅಲ್ಪಪ್ರಮಾಣ ಇತ್ಯರ್ಥಃ । ಕುಷುಂಭಕಃ ಕುಂ ಪೃಥ್ವೀಂ ಸುಂಭತಿ ವಿಲಿಖತೀತಿ ಸರ್ಪಾಣಾಂ ಕುತ್ಸಿತಂ ಸುಂಭಯಿತಾ ನಿಗ್ರಹೀತಾ ಕುಷುಂಭಕೋ ನಕುಲಃ । ಸ ತೇ ವಿಷಂ ಹರತ್ವಿತಿ ಶೇಷಃ । ಯದಿ ನ ತಥಾ ಸ ಕರೋತಿ ತಕಂ ಕುತ್ಸಿತಂ ತಂ ನಕುಲಮಶ್ಮನಾ ಭಿನದ್ಮಿ । ವಿದಾರಯಾಮಿ । ವಿಷನಿರ್ಹರಣಪ್ರಯೋಗೇ ಯಾವದ್ವಿಷಾಪಗಮಂ ತಂ ಪಾಷಾಣಾನುಘಾತ-ಮನುತಿಷ್ಠಂತಿ ತದ್ವಿದಃ । ತದಿದಮತ್ರೋಕ್ತಂ । ತತ ಏವಂ ಪ್ರಯೋಗೇ ಸತಿ ವಿಷಂ ಪ್ರ ವಾವೃತೇ । ವಿಷಾವೃತಾದ್ದೇಹಾದ್ವಿಷಂ ಪ್ರವರ್ತತೇ । ನಿರ್ಗಚ್ಛತು । ಕಾಃ ಪ್ರತಿ । ಉಚ್ಯತೇ । ಪರಾಚೀಃ ಪರಾಗಂಚ-ನವತೀರತಿದೂರಗಾಃ ಸಂವತಃ ಸಂವಿಭಾಗವತೋ ದಿಶೋಽನು ಲಕ್ಷೀಕೃತ್ಯ । ದಿಗಂತಂ ಪ್ರತಿ ಗಚ್ಛತು ನ ಮಾಂ ಪ್ರತಿ ಗಚ್ಛತ್ವಿತ್ಯರ್ಥಃ ॥

ಪ್ರತಿಪದಾರ್ಥ

ಇಯತ್ತಕಃ—ಅಲ್ಪಪ್ರಮಾಣವುಳ್ಳ । ಕುಷಂಭಕಃ—ಮುಂಗಸಿಯು (ಈ ನನ್ನ ಸರ್ಪದಷ್ಟವಾದ ವಿಷ ವನ್ನ ಪಹರಿಸಲಿ ಇಲ್ಲದಿದ್ದರೆ) । ತಕಂ—ಕುತ್ಸಿತವಾದ ಆ ಮುಂಗುಸಿಯನ್ನು । ಅಶ್ಮನಾ—ಕಲ್ಲಿನಿಂದ । ಭಿನದ್ಮಿ—

ಜಜ್ಜಿಹಾಕುತ್ತೇನೆ । **ತತಃ**—ಅನಂತರ । **ವಿಷಂ**—ವಿಷವು । **ಪ್ರ ವಾವೃತೇ**—ಹೊರಕ್ಕೆಬರಲಿ । **ಪರಾಚೀಃ**—ಅತ್ಯಂತ ದೂರಸ್ಥವಾದ । **ಸಂವತಃ**—ದಿಕ್ಕುಗಳನ್ನು । **ಅನು**—ಲಕ್ಷಿಸಿ ಹೊರಟುಹೋಗಲಿ ।

### ಭಾವಾರ್ಥ

ಅಲ್ಪಪ್ರಮಾಣವುಳ್ಳ ಮುಂಗಸಿಯು ನನ್ನ ಸರ್ಪದಷ್ಟವಾದ ವಿಷವನ್ನಪಹರಿಸಲಿ. ಇಲ್ಲದಿದ್ದರೆ ಅದನ್ನು ಕಲ್ಲಿನಿಂದ ಜಜ್ಜಿಹಾಕುತ್ತೇನೆ. ಅನಂತರ ವಿಷವು ಹೊರಕ್ಕೆ ಬಂದು ಅತ್ಯಂತ ದೂರಪ್ರದೇಶಕ್ಕೆ ಹೊರಟುಹೋಗಲಿ.

### English Translation

May the insignificant mungoose (carry off) your venom, (Poison), if not, I will crush the vile (creature) with a stone; so may the poison depart (from my body), and go to distant regions.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಮುಂಗಸಿಯು ವಿಷವನ್ನು ನಾಶಮಾಡಲಿ ಎಂದು ಋಷಿಯು ಆಶಿಸಿರುವನು.

**ಇಯತ್ತಕಃ--ಕುತ್ಸಿತೇಯತ್ತಃ ಅಲ್ಪಪ್ರಮಾಣ ಇತ್ಯರ್ಥಃ** । ಬಹಳ ಚಿಕ್ಕದಾದ ಶರೀರಾಕೃತಿಯುಳ್ಳ, ಅಲ್ಪ ಅಥವಾ ಸಣ್ಣದಾದ ಎಂದರ್ಥವು.

**ಕುಷುಂಭಕಃ--ಕುಂ ಪೃಥಿವೀಂ ಸುಂಭತಿ ವಿಲಿಖತೀತಿ ಸರ್ಪಾಣಾಂ ಕುತ್ಸಿತಂ ಸುಂಭಯಿತಾ ನಿಗ್ರಹೀತಾ ಕುಷುಂಭಕೋ ನಕುಲಃ** । ಕು ಎಂದರೆ ಭೂಮಿ (ನೆಲ) ಆ ನೆಲದಲ್ಲಿ ಹರಿಯುವಾಗ ವಕ್ರವಾಗಿ ಗೆರೆಯನ್ನು ಎಳೆದಂತೆ ಸರ್ಪಗಳ ಸಂಚಾರದ ಗುರುತು ಇರುವುದರಿಂದ ಕುತ್ಸಿತಂ ಎಂದರೆ ಸರ್ಪಗಳು. ಅಂತಹ ಸರ್ಪಗಳನ್ನು ಕೆಣಕಿ ಜಗಳವಾಡಿ ಕೊಲ್ಲುವುದರಿಂದ ಕುಷುಂಕಭವೆಂದರೆ ನಕುಲ ಅಥವಾ ಮುಂಗಸಿಯೆಂದು ಹೆಸರು. ( the neul or or viverra Mungoose) ಈ ಮುಂಗಸಿಗಳು ತಮ್ಮ ಸ್ವಭಾವ ಶತ್ರುಗಳಾದ ಸರ್ಪಗಳನ್ನು ಕೊಲ್ಲುವುದು ಲೋಕಪ್ರಸಿದ್ಧಿಯಾಗಿದೆ. ಇಂತಹ ಮುಂಗಸಿಯು ಶರೀರದ ವಿಷವನ್ನು ಪರಿಹರಿಸಲಿ ಎಂದು ಪ್ರಾರ್ಥಿಸಿದೆ. ಇಲ್ಲಿ ಹರತು ಎಂಬ ಕ್ರಿಯಾಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು.

**ತಕಂ ಭಿನದ್ಮಿ ಅಶ್ಮನಾ**—**ತಕಂ** ಎಂದರೆ **ತಂ**—ಆ ಸಣ್ಣ ಅಥವಾ ನೀಚಪ್ರಾಣಿಯನ್ನು ಎಂದರ್ಥವು. ಒಂದು ವೇಳೆ ಮುಂಗಸಿಯು ವಿಷಶಮನ ಮಾಡದಿದ್ದರೆ ಆ ನೀಚ ಪ್ರಾಣಿಯನ್ನುಒಂದು ಕಲ್ಲಿನಿಂದ ಜಜ್ಜಿಕೊಲ್ಲುವೆನು, ಎಂದು ಹೇಳಿದೆ. ವಿಷನಿರ್ಹರಣ ಪ್ರಯೋಗಾದಿಗಳಲ್ಲಿ ವಿಷವು ಪೂರ್ತಿಯಾಗಿ ಹೋಗಿ ವಾಸಿಯಾಗುವವರಿಗೂ ಕಲ್ಲನ್ನು ಒಂದರಿಂದೊಂದನ್ನು ಕುಟ್ಟುವಂತೆ ಇಲ್ಲಿಯೂ ಮಾಡಲಾಗಿದೆಯೆಂದು ಸಾಯಣರ ವಿವರಣೆಯು.

**ತತೋ ವಿಷಂ ಪ್ರ ವಾವೃತೇ ಪರಾಚೀರನು ಸಂವೃತಾಃ**—ಉತ್ತರಾರ್ಧದಲ್ಲಿರುವ ಈ ವಾಕ್ಯದಿಂದ ವಿಷವು ಶರೀರವನ್ನು ಬಿಟ್ಟು ತಿರುಗಿ ನನ್ನ ಸಮೀಪಕ್ಕೆ ಬಾರದಂತೆ ನಾನಾದಿಕ್ಕುಗಳಿಗೆ ಬಹು ದೂರವಾಗಿ ಹೊರಟು ಹೋಗಲಿ, ಎಂದು ಆಶಿಸಿದೆ.

ವ್ಯಾಕರಣಪ್ರಕ್ರಿಯಾ

**ಭಿನದ್ಮಿ**—ಭಿದಿರ್ ವಿದಾರಣೇ. ಧಾತು. ರುಧಾದಿ. ಲಟ್ ಉತ್ತಮಪುರುಷ ಏಕವಚನದಲ್ಲಿ ಮಿಪ್. ಶ್ನಮ್ ವಿಕರಣ. ಮಿತ್ತಾದುದರಿಂದ ಧಾತುವಿನ ನಕಾರೋತ್ತರವಾಗಿ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವವೃತೇ**—ವೃತು ವರ್ತನೇ. ಧಾತು. **ಛಂದಸಿ ಲುಙ್**—ಎಂಬುದರಿಂದ ಲೋಡರ್ಥದಲ್ಲಿ ಲಿಟ್. ಪ್ರಥಮ ಪುರುಷಏಕವಚನಾಂತರೂಪ. ತುದಾದಿಯಲ್ಲಿ ಸೇರಿರುವುದರಿಂದ **ತುಜಾದೀನಾಂ ದೀರ್ಘೋಽಭ್ಯಾಸಸ್ಯ** (ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ಸಂಹಿತಾದಲ್ಲಿ ದೀರ್ಘ ಬರುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

---

ಸಂಹಿತಾಪಾಠಃ

**ಕುಷುಂಭಕಸ್ತದಬ್ರವೀದ್ಗಿರೇಃ ಪ್ರವರ್ತಮಾನಕಃ ।**
**ವೃಶ್ಚಿಕಸ್ಯಾರಸಂ ವಿಷಮರಸಂ ವೃಶ್ಚಿಕ ತೇ ವಿಷಂ ॥ ೧೬ ॥**

ಪದಪಾಠ

**ಕುಷುಂಭಕಃ । ತತ್ । ಅಬ್ರವೀತ್ । ಗಿರೇಃ । ಪ್ರಽವರ್ತಮಾನಕಃ ।**
**ವೃಶ್ಚಿಕಸ್ಯ । ಅರಸಂ । ವಿಷಂ । ಅರಸಂ । ವೃಶ್ಚಿಕ । ತೇ । ವಿಷಂ ॥ ೧೬ ॥**

ಸಾಯಣಭಾಷ್ಯಂ

ಅಧ್ಯಾಯೋಪಾಕರಣೋತ್ಸರ್ಗಯೋಃ ಕುಷುಂಭಕಸ್ತದಿತ್ಯೇಂತ್ಯಾ ವಿನಿಯುಕ್ತಾ । ದಧಿಸಕ್ತೂ-ಞ್ಜುಹೋತೀತ್ಯುಪಕ್ರಮ್ಯ ಕುಷುಂಭಕಸ್ತದಬ್ರವೀತ್ । ಆ. ಗೃ. ೩-೫-೫ । ಇತಿ ಸೂತ್ರಿತತ್ವಾತ್ ॥

ಏವಂ ಮಹಾನುಭಾವೇನಾಗಸ್ತ್ಯಮಹರ್ಷಿಣೋಚ್ಯಮಾನೇ ಸತಿ ಗಿರೇಃ ಸಕಾಶಾತ್ಪ್ರವರ್ತ-ಮಾನಕಃ ಪ್ರವರ್ತಮಾನೋಽತಿಶೀಘ್ರಮಭಿಗಚ್ಛನ್ ಕುಷುಂಭಕೋ ನಕುಲಸ್ತದಬ್ರವೀತ್ । ತದ್ವಾಕ್ಯ-ಮಾಚಖ್ಯೌ । ಕಿಂ ತದಿತಿ ಉಚ್ಯತೇ । ವೃಶ್ಚಿಕಸ್ಯೈತದ್ವಿಷಮರಸಮಸಾರಂ । ಬಾಧಕಂ ನ ಭವತೀತ್ಯರ್ಥಃ । ತಥಾ ಲೋಕೇಽಪಿ ಸರ್ಪದಷ್ಟಮಪಿ ಕ್ರಿಮ್ಯಾದಿದಂಶನಮೇವ ಅತೋ ನ ಬಾಧ ಇತಿ ಹಿ ವದಂತಿ । ಏವಮಭಿವಚನೇನ ಸೋಽಪಿ ನಿರ್ವಿಷೋಽಭವತ್ । ಅಥ ತಂ ವೃಶ್ಚಿಕಂ ಪ್ರತಿ ನಕುಲ ಆಹ । ಹೇ ವೃಶ್ಚಿಕ ತೇ ವಿಷಮರಸಂ । ಅತಸ್ತ್ವಮೃಷಿಂ ಕಿಂ ಕರಿಷ್ಯತಿ । ತಸ್ಮಾತ್ಪರಿಹರೇತಿ । ಯದೈವಮವಾದೀತ್ ತದಾ-ಪ್ರಭೃತಿ ವೃಶ್ಚಿಕವಿಷಮಸಾರಮಭವತ್ । ಏಷಾ ವಿಷನಿರ್ಹರಣ್ಯುಪನಿಷತ್ ॥

**ಪ್ರತಿಪದಾರ್ಥ**

**ಗಿರೇಃ**—(ಈ ರೀತಿಯಲ್ಲಿ ಅಗಸ್ತ್ಯಋಷಿಯು ಪ್ರಾರ್ಥಿಸಿದನಂತರ) ಗಿರಿಯಿಂದ । **ಪ್ರವರ್ತಮಾನಕಃ**—ಶೀಘ್ರವಾಗಿ ಋಷಿಯನ್ನು ಸಮೀಪಿಸಿ । **ಕುಷುಂಭಕಃ**—ಮುಂಗಸಿಯು । **ತದಬ್ರವೀತ್**—ಈ ರೀತಿಯಲ್ಲಿ ಹೇಳಿತು । **ವೃಶ್ಚಿಕಸ್ಯ**—ವಿಷಧರವಾದ ವೃಶ್ಚಿಕದ । **ವಿಷಂ**—ವಿಷವು । **ಅರಸಂ**—ಶಕ್ತಿರಹಿತವಾದುದು. (ಆದುದರಿಂದ ಹಿಂಸಾತ್ಮಕವಲ್ಲದ್ದು) । **ವೃಶ್ಚಿಕ**—ಎಲೈ ವೃಶ್ಚಿಕವೇ । **ತೇ ವಿಷಂ**—ನಿನ್ನ ವಿಷವು । **ಅರಸಂ**—ಶಕ್ತಿರಹಿತವಾದುದು.

**ಭಾವಾರ್ಥ**

ಅಗಸ್ತ್ಯಋಷಿಯಿಂದ ಈರೀತಿ ಪಠಿತವಾದ ನಂತರ ಗಿರಿಯಿಂದ ಹೊರಕ್ಕೆ ಅವಸರವಾಗಿ ಬಂದ ಮುಂಗಸಿಯು ಋಷಿಯನ್ನು ಸಮೀಪಿಸಿ "ವಿಷಧರವಾದ ವೃಶ್ಚಿಕದ ವಿಷವು ಶಕ್ತಿರಹಿತವಾದುದು. ಎಲೈ ವೃಶ್ಚಿಕವೇ, ನಿನ್ನ ವಿಷಕ್ಕೆ ಶಕ್ತಿಯಿಲ್ಲ. ಅದು ಯಾರಿಗೂ ಕೆಡಕನ್ನುಂಟುಮಾಡಲು ಸಾಧ್ಯವಿಲ್ಲ" ಎಂದು ಹೇಳಿತು.

## Englih Tranlation

Hastening forth at the command (of Agastya), thus spoke the mungoose.—The venom of the scorpion is innocuous, scorpion, your venom is innocuous.

**ವಿಶೇಷವಿಷಯಗಳು**

**ಕುಷುಂಭಕಸ್ತತ್**—ಎಂಬ ಈ (ಸೂಕ್ತದ ಅಥವಾ ಮಂಡಲದ) ಕೊನೆಯ ಋಕ್ಕು, ಅಧ್ಯಾಯೋಪಾಕರ್ಮ ಅಥವಾ ಉತ್ಸರ್ಜನವೆಂಬ ಕರ್ಮದಲ್ಲಿ ದಧಿಸಕ್ತು ಹೋಮದಲ್ಲಿ ಉಪಯೋಗಿಸಲ್ಪಡುವುದೆಂದು ಆಶ್ವಲಾಯನ ಗೃಹ್ಯಸೂತ್ರದ—**ದಧಿಸಕ್ತೂಞ್ಜುಹೋತೀತ್ಯುಪಕ್ರಮ್ಯ ಕುಷುಂಭಕಸ್ತದಬ್ರವೀತ್** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ಗೃ. ಸೂ. ೩–೫–೫)

ಮೇಲೆ ಹೇಳಿದ ಅಧ್ಯಾಯೋಪಾಕರ್ಮ ಮತ್ತು ಉತ್ಸರ್ಜನಪ್ರಯೋಗಗಳಲ್ಲಿ ದಧಿಸಕ್ತುಹೋಮಮಾಡುವಾಗ ಋಕ್ಸ್ವಾಧ್ಯಾಯಿಗಳು ಋಗ್ವೇದದ ಪ್ರತಿಮಂಡಲದ ಮೊದಲನೆಯ ಋಕ್ಕಾದ **ಅಗ್ನಿಮೀಳೇ ಪುರೋಹಿತಂ** (ಋ. ಸಂ. ೧–೧–೧) ಎಂಬ ಋಕ್ಕನ್ನೂ ಮಂಡಲದ ಕೊನೆಯ ಋಕ್ಕಾದ **ಕುಷುಂಭಕಸ್ತದಬ್ರವೀತ್** (ಋ. ಸಂ. ೧-೧೯೧-೧೬) ಎಂಬ ಋಕ್ಕನ್ನೂ ಪಠಿಸಿ ಹೋಮಮಾಡುವರು ಅನಂತರ ಅದರಂತೆ ಎರಡನೆಯ ಮಂಡಲದ ಮೊದಲನೆಯ ಋಕ್ಕಾದ **ತ್ವಮಗ್ನೇ ದ್ಯುಭಿಸ್ತ್ವಮಾಶುಶುಕ್ಷಣಿಃ** (ಋ. ಸಂ. ೨-೧-೧) ಎಂಬ ಋಕ್ಕನ್ನೂ ಅದೇ ಮಂಡಲದ ಕೊನೆಯ ಋಕ್ಕಾದ **ಅವದಂಸ್ತ್ವಂ ಶಕುನೇ ಭದ್ರಮಾ ವದ** (ಋ ಸಂ. ೨–೪೩-೩) ಎಂಬ ಕೊನೆಯ ಋಕ್ಕನ್ನೂ ಪಠಿಸಿ ಹೋಮಮಾಡುವರು. ಹೀಗೆಯೇ ಮುಂದಿನ ಮಂಡಲಗಳ ಎಂದರೆ ಹತ್ತನೆಯ ಮಂಡಲದವರಿಗೆ ಪ್ರತಿಮಂಡಲದ ಆದ್ಯಂತ ಋಕ್ಕುಗಳನ್ನು ಎಂದರೆ ಒಟ್ಟಾಗುವ ಇಪ್ಪತ್ತು ಋಕ್ಕುಗಳನ್ನು ಪಠಿಸಿ ಹೋಮಮಾಡುವರು.

**ಗಿರೇಃ ಪ್ರವರ್ತಮಾನಕಃ**—ಬೆಟ್ಟದ ತಪ್ಪಲಲ್ಲಿರುವ ಬಿಲಾದಿಗಳಿಂದ ತಕ್ಷಣ ಹೊರಟು ಬಂದು ಎಂದರ್ಥವು ಹಿಂದಿನ ಋಕ್ಕಿನಲ್ಲಿ ಅಗಸ್ತ್ಯಋಷಿಯು ಮುಂಗಸಿಯನ್ನು ಸಂಬೋಧಿಸಿ—ದೇಹದಲ್ಲಿರುವ ವಿಷವನ್ನು ನಾಶಮಾಡು. ಇಲ್ಲದಿದ್ದರೆ ಕಲ್ಲಿನಿಂದ ನಿನ್ನನ್ನು ಜಜ್ಜಿ ಕೊಲ್ಲುವೆನು ಎಂದು ಹೇಳಿದ ತಕ್ಷಣ ಮುಂಗಸಿಯು

ಭಯಪಟ್ಟು ತನ್ನ ನಿನಾಸಸ್ಥಾನವಾದ ಪರ್ವತದ ಬಿಲಪ್ರದೇಶದಿಂದ ತಕ್ಷಣ ಹೊರಗೆ ಬಂದು ಅಗಸ್ತ್ಯಋಷಿಯನು ಸಮಾಧಾನಮಾಡುವ ಸಲುವಾಗಿ ಈರೀತಿ (ಎಂದರೆ ಮುಂದಿನ ವಾಕ್ಯವನ್ನು) ಹೇಳಿತು ಎಂದಭಿಪ್ರಾಯವು.

ಈ ಸೂಕ್ತದ ವಿಷಯದಲ್ಲಿ Wilson ಎಂಬ ಪಂಡಿತನು ಈರೀತಿ ಬರೆಯುತ್ತಾನೆ.

M. Langlois has preferred a totally different interpretation of this sukta, understanding it to allude to the state of the sky before the commencement of a sacrifice ; he, therefore, interprets ವಿಷ by darkness. Which is dispersed by the morning light, or by the rays of the sun ; On what authority this view of the intention of the hymn is founded has not been stated ; nothing of the kind is intimated by Sayana whose interpretation is confirmed by the legendary application of the hymn as related by ಶೌನಕ by the corresponding text of the ಅಥರ್ವಣ ; there are no douht, many expressions of doubtful import, and some which are used in other places, as in the ಯಜುರ್ವೇದ, in a different acceptation ; but the interpretation given by Sayana appears to be most consistent with the general purport of the text.

**ವೃಶ್ಚಿಕಸ್ಯಾರಸಂ ವಿಷಮರಸಂ ವೃಶ್ಚಿಕ ತೇ ವಿಷಂ**— ಈ ವಾಕ್ಯವು ಮುಂಗಸಿಯು ವಿಷಪರಿಹಾರಾರ್ಥವಾಗಿ ಹೇಳಿದ್ದಾಗಿರುವುದು. ಲೋಕದಲ್ಲಿ ಜನರಿಗೆ ಚೇಳು ಮೊದಲಾದ ವಿಷಜಂತುಗಳು ಅಥವಾ ವಿಷವುಳ್ಳ ಸರ್ಪಗಳೇ ಆಗಲಿ ಕಚ್ಚಿದಾಗ ಅವರು ಸತ್ತುಹೋಗುವೆವು ಎಂದು ಭಯವಿಹ್ವಲರಾಗಿರುವರು. ವಿಷಕ್ಕಿಂತಲೂ ಆ ಭಯವೇ ಹೆಚ್ಚು ಪರಿಣಾಮಕಾರಿಯಾಗಿ ಮರಣಕ್ಕೆ ಕಾರಣವಾಗುವುದು. ಆದುದರಿಂದ ವಿವೇಕಿಗಳಾದವರು ಹಾವು ಕಚ್ಚಲ್ಪಟ್ಟ ಜನರನ್ನು ಕುರಿತು—ಭಯಪಡಬೇಡ, ಅದು ವಿಷದ ಹಾವಲ್ಲ, ಆದರಿಂದ ಏನೂ ಬಾಧಕವಿಲ್ಲ, ಈಗಲೇ ಗುಣವಾಗುವುದು ಎಂದು ( ವಿಷದ ಹಾವು ಕಚ್ಚಿದ್ದರೂ ) ಸುಳ್ಳನ್ನು ಹೇಳಿ ಭಯನಿವಾರಣೆಮಾಡುವುದು ರೂಢಿಯಾಗಿದೆ. ಭಯ ನಿವಾರಣೆಯಾದರೆ ವಿಷವು ದೇಹಕ್ಕೆ ವ್ಯಾಪಿಸುವ ಭೀತಿಯು ಅಷ್ಟಾಗಿರುವುದಿಲ್ಲ. ಬದುಕಿಕೊಳ್ಳುವ ಸಂಭವವುಂಟು. ಈ ನೀತಿಯನ್ನನುಸರಿಸಿಯೇ ಮುಂಗಸಿಯು ಪರ್ವತದ ಬಿಲದಿಂದ ತಕ್ಷಣ ಹೊರಗೆ ಬಂದು ವಿಷಶಂಕೆಯಿಂದ ಪರಿತಪಿಸುತ್ತಿದ್ದ ಅಗಸ್ತ್ಯಋಷಿಯನ್ನು ಕುರಿತು—ಎಲೈ ವೃಶ್ಚಿಕವೇ, ನಿನ್ನ ವಿಷವು ತೀಕ್ಷ್ಣವಾದುದಲ್ಲ. ಶಕ್ತಿರಹಿತವಾದುದು ಎಂದು ಹೇಳಿತು. ಈ ವಾಕ್ಯದಲ್ಲಿ ವೃಶ್ಚಿಕಸ್ಯ ಅರಸಂ ವಿಷಂ ಎಂದು ದ್ವಿರುಕ್ತಿಯಿರುವುದು ವಾಕ್ಯದ ಅರ್ಥವನ್ನು ಒತ್ತಿ ಹೇಳುವುದಕ್ಕಾಗಿ ಎಂದು ತಿಳಿಯಬೇಕು ಮುಂಗಸಿಯು ವೃಶ್ಚಿಕವನ್ನು ಸಂಬೋಧಿಸಿ ಹೇಳಲು ಕಾರಣವೇನೆಂದರೆ-ಎಲೈ ಅಗಸ್ತ್ಯಋಷಿಯೇ, ನಿನಗೆ ಹಾವುಕಚ್ಚಿಲ್ಲ, ಅಲ್ಪ ವಿಷವುಳ್ಳ ಚೇಳು ಕಚ್ಚಿರಬಹುದು. ಚೇಳಿನ ಕಡಿತದಿಂದ ಏನೂ ತೊಂದರೆಯಾಗುವುದಿಲ್ಲ. ಅದಕ್ಕೇತಕ್ಕೆ ವ್ಯಥೆಪಡುವೆ ? ಎಂದು ಸಮಾಧಾನ ಮಾಡುವ ದೃಷ್ಟಿಯಿಂದ ವೃಶ್ಚಿಕದ ವಿಷವು ಶಕ್ತಿರಹಿತವಾದುದು, ಹಾವಿನ ವಿಷದಂತೆ ತೀಕ್ಷ್ಣವಾದುದಲ್ಲ. ಇದಕ್ಕಾಗಿ ಭಯಪಡಬೇಕಾಗಿಲ್ಲ ಎಂದು ಲೋಕನೀತಿಯನ್ನನುಸರಿಸಿ ಹೇಳಿರುವುದೆಂದು ಮುಖ್ಯಾಭಿಪ್ರಾಯವು.

## ವ್ಯಾಕರಣಪ್ರಕ್ರಿಯಾ

**ಅಬ್ರವೀತ್**—ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಲುಙ್ ಉತ್ತಮಪುರುಷ ಏಕವಚನದಲ್ಲಿ ತಿಪ್. ಇತಶ್ಚ ಎಂಬುದರಿಂದ ಇಕಾರಲೋಪ. **ಬ್ರುವಈಟ್** (ಪಾ. ಸೂ. ೭-೩-೯೩) ಎಂಬುದರಿಂದ ಅದಕ್ಕೆ ಈಡಾಗಮ ಧಾತುವಿನ ಉಕಾರಕ್ಕೆ ಗುಣ ಅವಾದೇಶ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

ಪ್ರವರ್ತಮಾನಕಃ—ಪ್ರವರ್ತಮಾನ ಏವ ಪ್ರವರ್ತಕಃ ಸ್ವಾರ್ಥದಲ್ಲಿ ಕ ಪ್ರತ್ಯಯ. ಅಥವಾ ಅಲ್ಪ ಎಂಬರ್ಥತೋರುವಾಗ ಕ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋ ಓ ವ್ರಶ್ಚೂ ಛೇದನೇ. ಧಾತು ಉದಾತ್ತವಾಗುತ್ತದೆ.

ವೃಶ್ಚಿಕಸ್ಯ—ವೃಶ್ಚಿಕೃಷೋಃ ಕಿಕಿನ್ (ಉ. ಸೂ. ೧-೧೬೮) ಎಂಬುದರಿಂದ ಕಿಕನ್ ಪ್ರತ್ಯಯ. ಇದು ನಿತ್ತಾದುದರಿಂದ ಞ್ನಿತ್ಯಾ—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

---

## ಪ್ರಥಮಮಂಡಲಸ್ಯಾಂತೇ ಪಠಿತವ್ಯಾನಿ ಖಿಲಸೂಕ್ತಾನಿ (ಪರಿಶಿಷ್ಟಾನಿ)

ಮಾ ಬಿಭೇರ್ನ ಮರಿಷ್ಯಸಿ ಪರಿ ತ್ವಾ ಪಾಮಿ ಸರ್ವತಃ ।
ಘನೇನ ಹನ್ಮಿ ವೃಶ್ಚಿಕಮಹಿಂ ದಂಡೇನಾಗತಂ ॥ ೧ ॥
ಆದಿತ್ಯರಥವೇಗೇನ ವಿಷ್ಣುಬಾಹುಬಲೇನ ಚ ।
ಗರುಡಪಕ್ಷನಿಪಾತೇನ ಭೂಮಿಂ ಗಚ್ಛ ಮಹಾಯಶಾಃ ॥ ೨ ॥
ಗರುಡಸ್ಯ ಪಾತಮಾತ್ರೇಣ ತ್ರಯೋ ಲೋಕಾಃ ಪ್ರಕಂಪಿತಾಃ ।
ಪ್ರಕಂಪಿತಾ ಮಹೀ ಸರ್ವಾ ಸಶೈಲವನಕಾನನಾ ॥ ೩ ॥
ಗಗನಂ ನಷ್ಟಚಂದ್ರಾರ್ಕಂ ಜ್ಯೋತಿಷಂ ನ ಪ್ರಕಾಶತೇ ।
ದೇವತಾ ಭಯಭೀತಾಶ್ಚ ಮಾರುತೋ ನ ಪ್ಲವಾಯತಿ ॥
ಮಾರುತೋ ನ ಪ್ಲವಾಯತ್ಯೋಂ ನಮಃ ॥ ೪ ॥
ಭೋ ಸರ್ಪ ಭದ್ರ ಭದ್ರಂ ತೇ ದೂರಂ ಗಚ್ಛ ಮಹಾವಿಷ ।
ಜನ್ಮೇಜಯಸ್ಯ ಯಜ್ಞಾಂತೇ ಆಸ್ತೀಕವಚನಂ ಸ್ಮರ ॥ ೫ ॥
ಆಸ್ತೀಕವಚನಂ ಶ್ರುತ್ವಾ ಯಃ ಸರ್ಪೋ ನ ನಿವರ್ತತೇ ।
ಶತಧಾ ಭಿದ್ಯತೇ ಮೂರ್ಧ್ನಿ ಶಿಂಶವೃಕ್ಷಫಲಂ ಯಥಾ ॥ ೬ ॥
ನರ್ಮದಾಯೈ ನಮಃ ಪ್ರಾತರ್ನರ್ಮದಾಯೈ ನಮೋ ನಿಶಿ ।
ನಮೋಽಸ್ತು ನರ್ಮದೇ ತುಭ್ಯಂ ತ್ರಾಹಿ ಮಾಂ ವಿಷಸರ್ಪತಃ ॥ ೭ ॥
ಯೋ ಜರತ್ಕಾರುಣಾ ಜಾತೋ ಜರತ್ಕಾರ್ವಾಂ ಮಹಾಯಶಾಃ ।
ತಸ್ಯ ಸ್ಮರಾಮಿ ಭದ್ರಂ ತೇ ದೂರಂ ಗಚ್ಛ ಮಹಾವಿಷ ॥ ೮ ॥
ಅಸಿತಿಂ ಚಾರ್ಥಸಿದ್ಧಿಂ ಚ ಸುನೀತಿಂ ಚಾಪಿ ಯಃ ಸ್ಮರೇತ್ ।
ದಿವಾ ವಾ ಯದಿ ವಾ ರಾತ್ರೌ ನಾಸ್ತಿ ಸರ್ಪಭಯಂ ಭವೇತ್ ॥ ೯ ॥
ಅಗಸ್ತಿರ್ಮಾಧವಶ್ಚೈವ ಮುಚುಕುಂದೋ ಮಹಾಮುನಿಃ ।
ಕಪಿಲೋ ಮುನಿರಾಸ್ತೀಕಃ ಪಂಚೈತೇ ಸುಖಶಾಯಿನಃ ॥ ೧೦ ॥

ಪರಿಶಿಷ್ಟಮಂತ್ರದ ಮುಖ್ಯಾಭಿಪ್ರಾಯವು—ವೇದಪುರುಷನು ಈ ಸೂಕ್ತಜಪಮಾಡುವ ಪುರುಷನನ್ನು ಕುರಿತು ಈರೀತಿ ಹೇಳಿರುವನು—ಹಾವುಕಚ್ಚಿ ವಿಷವೇರುತ್ತಿರುವುದೆಂದು ಹೆದರಬೇಡ, ನೀನು ಸಾಯುವುದಿಲ್ಲ, ನಾನೇ ನಿನ್ನನ್ನು ಸರ್ವಸ್ಥಳಗಳಲ್ಲಿಯೂ ಕಾಪಾಡುವೆನು. ಚೇಳನ್ನಾಗಲಿ, ಹಾವನ್ನಾಗಲಿ ಬಲವಾದ ಕೋಲಿನಿಂದ ಹೊಡೆದು

ಕೊಲ್ಲುವೆನು, ಎಲೈ ಸರ್ಪವೇ, ಓಡಿಹೋಗಿ ಭೂಮಿಯಲ್ಲಿರುವ ಬಿಲದಲ್ಲಿ ಸೇರಿಕೋ. ಇಲ್ಲದಿದ್ದರೆ ಸೂರ್ಯನ ರಥದಂತೆ ವೇಗವಾಗಿಯೂ, ವಿಷ್ಣುವಿನ ಬಾಹುಗಳಂತೆ ಬಲಶಾಲಿಯಾಗಿಯೂ, ಗರುಡಪಕ್ಷಿಯಂತೆ ಮೇಲೆಬೀಳುವುದೂ ಆದ ನನ್ನ ದಂಡದಿಂದ ನಿನ್ನನ್ನು ಪ್ರಹರಿಸುವೆನು. ಗರುಡನು ಬಂದ ಮಾತ್ರಕ್ಕೆ ಮೂರು ಲೋಕಗಳೂ ನಡಗುವುವು. ಪರ್ವತವನಾದಿಗಳಿಂದ ಕೂಡಿದ ಭೂಮಿಯೆಲ್ಲವೂ ಭಯದಿಂದ ಕಂಪಿಸುವುದು. ಗರುಡನು ಬರುವ ರಭಸಕ್ಕೆ ಸೂರ್ಯ ಚಂದ್ರರು ಪ್ರಕಾಶಹೀನರಾಗುವರು. ನಕ್ಷತ್ರಗಳೂ ಬೆಳಗುವುದಿಲ್ಲ. ದೇವತೆಗಳು ಭಯದಿಂದ ತಲ್ಲಣಿಸುವರು. ಗಾಳಿಯು ಬೀಸುವುದಿಲ್ಲ. ಆದುದರಿಂದ ಎಲೈ ಮಹಾವಿಷಪೂರಿತವಾದ ಸರ್ಪವೇ, ದೂರವಾಗಿ ಹೊರಟುಹೋಗು. ನಿನಗೆ ಒಳ್ಳೆಯದಾಗಲಿ. ಈ ವಿಷಯದಲ್ಲಿ ಜನಮೇಜಯರಾಜನ ಯಜ್ಞಪರಿಸಮಾಪ್ತಿಯ ಕಾಲದಲ್ಲಿ ಆಸ್ತೀಕಮುನಿಯ ವಚನವನ್ನು ಜ್ಞಾಪಿಸಿಕೋ. ಆಸ್ತೀಕಮುನಿಯು ಎಚ್ಚರಿಕೆಗಾಗಿ ಹೇಳಿರುವ ವಾಕ್ಯವನ್ನು ಗಮನಿಸದೆ ಯಾವ ಸರ್ಪವು ಹೊರಟುಹೋಗುವುದಿಲ್ಲವೋ ಅದರ ತಲೆಯು ಶಿಂಶವೃಕ್ಷಫಲದಂತೆ ನೂರು ಹೋಳುಗಳಾಗಿ ಶೀಳಿಹೋಗುವುದು. ಎಲೈ ನರ್ಮದಾ ನದಿಯೇ, ನಿನಗೆ ಪ್ರಾತಃಕಾಲದಲ್ಲಿಯೂ ರಾತ್ರಿಕಾಲದಲ್ಲಿಯೂ ನಮಸ್ಕಾರವು. ನನ್ನನ್ನು ವಿಷಸರ್ಪದಿಂದ ರಕ್ಷಿಸಿ ಕಾಪಾಡು. ಜರತ್ಕಾರು ಎಂಬ ಕನ್ಯೆಯಲ್ಲಿ ಹುಟ್ಟಿದ ಮಹಾಮಹಿಮನಾದ ಜರತ್ಕಾರುವೆಂಬ ಮುನಿಯನ್ನು ಸ್ಮರಣಮಾಡುತ್ತೇನೆ. ಆ ಮಹಾಮುನಿಯ ಹೆಸರನ್ನು ಸ್ಮರಣಮಾಡುವವರಿಗೆ ವಿಷಸರ್ಪದ ಭಯವಿರುವುದಿಲ್ಲ. ಆದ್ದರಿಂದ ಎಲೈ ವಿಷಪೂರಿತ ಸರ್ಪವೇ, ದೂರ ಹೊರಟುಹೋಗು. ನಿನಗೆ ಮಂಗಳವಾಗಲಿ. ಅಸಿತಿ, ಅರ್ಥಸಿದ್ಧಿ, ಸುನೀತಿ ಎಂಬುವರನ್ನು ಸ್ಮರಿಸುವ ಪುರುಷನಿಗೆ ರಾತ್ರಿಯಲ್ಲಾಗಲಿ, ಹಗಲಿನಲ್ಲಾಗಲಿ ಸರ್ಪಭಯವಿರುವುದಿಲ್ಲ. ಮತ್ತು ಅಗಸ್ತಿ, ಮಾಧವ, ಮುಚುಕುಂದ, ಕಪಿಲ, ಆಸ್ತಿಕ ಎಂಬ ಐವರು ಮಹಾಮುನಿಗಳನ್ನೂ ಸ್ಮರಿಸುವ ಪುರುಷನು ಸರ್ಪಭಯರಹಿತನಾಗಿ ರಾತ್ರೆಯಲ್ಲಿ ಸುಖವಾಗಿ ನಿದ್ರಿಸುವನು.

## ॥ ಇತಿ ಪ್ರಥಮಂ ಮಂಡಲಂ ಸಮಾಪ್ತಂ ॥

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ಓಂ ತತ್ಸತ್ ॥

|| ಶ್ರೀಃ ||

|| ಶ್ರೀ ಗಣೇಶಾಯ ನಮಃ ||

# ಅಥ ದ್ವಿತೀಯಂ ಮಂಡಲಂ

## ಪೀಠಿಕೆ.

ಋಗ್ವೇದಸಂಹಿತೆಯಲ್ಲಿ ಹತ್ತು ವಿಭಾಗಗಳಿವೆ. ಈ ವಿಭಾಗಗಳಿಗೆ ಮಂಡಲಗಳೆಂದು ಹೆಸರು. ಮುಖ್ಯವಾಗಿ ಒಬ್ಬೊಬ್ಬ ಋಷಿ ಮತ್ತು ಅವನ ವಂಶದವರು (ಅಥವಾ ಗುಂಪಿನವರು) ರಚಿಸಿದ ಅಥವಾ ದ್ರಷ್ಟೃಗಳಾದ ಮಂತ್ರಗಳ ಸಮೂಹವೆಲ್ಲವನ್ನೂ ಒಟ್ಟುಗೂಡಿಸಿ ಒಂದೊಂದು ಮಂಡಲವೆಂದು ನಿಷ್ಕರ್ಷಿಸಲ್ಪಟ್ಟಿರುವುದು. ಆದರೆ ೧, ೯, ೧೦ ನೆಯ ಮಂಡಲಗಳಲ್ಲಿ ಬೇರೆಬೇರೆ ಗುಂಪಿನ ಅನೇಕ ಋಷಿಗಳಿರುವರು. ೯ನೇ ಮಂಡಲದಲ್ಲಿ ಬೇರೆಬೇರೆ ಋಷಿಗಳಿದ್ದರೂ ಮಂತ್ರಗಳಿಗೆಲ್ಲಾ ಪವಮಾನಸೋಮವೆಂಬ ಒಂದೇ ದೇವತೆಯ ಹೆಸರಿರುವುದು. ಎಂದರೆ ಇತರ ಮಂಡಲಗಳಲ್ಲಿದ್ದಂತೆ ಋಷಿಗಳಿಗನುಸಾರವಾಗಿ ಮಂತ್ರಗಳನ್ನು ಒಟ್ಟುಗೂಡಿಸದೆ ಎಲ್ಲಾ ಋಷಿಗಳಿಂದಲೂ ದೃಷ್ಟವಾದ ಸೋಮದೇವತಾತ್ಮಕ ವಾದ ಮಂತ್ರಗಳನ್ನೆಲ್ಲಾ ಒಟ್ಟುಗೂಡಿಸಿ ಒಂದು ಮಂಡಲವನ್ನಾಗಿ ಮಾಡಿರುವರು. ಆದುದರಿಂದ ಆ ಮಂಡಲ ದಲ್ಲಿರುವ ಮಂತ್ರಗಳಿಗೆಲ್ಲಾ ಪವಮಾನಃ ಸೋಮಃ ಎಂಬ ಒಂದೇ ದೇವತೆಯು ; ಋಷಿಗಳು ಮಾತ್ರ ಬೇರೆಬೇರೆ

ಮೊದಲನೆಯ ಮಂಡಲದಲ್ಲಿ ನೂರು ಅಥವಾ ಸ್ವಲ್ಪ ಹೆಚ್ಚುಕಡಿಮೆ ನೂರು ಋಕ್ಕುಗಳಿಗೆ ದ್ರಷ್ಟೃಗಳಾದ ಋಷಿಗಳ ಮಂತ್ರವನ್ನೆಲ್ಲಾ ಒಟ್ಟುಗೂಡಿಸಿರುವುದು. ಪ್ರತಿಯೊಬ್ಬ ಋಷಿಯ ಹೆಸರಿನಲ್ಲಿಯೂ ಸುಮಾರು ೧೦೦ ಋಕ್ಕುಗಳಿರುವುವು. ಆದುದರಿಂದ ಈ ಮಂಡಲದ ಋಷಿಗಳಿಗೆ ಶತರ್ಚಿನರು (ನೂರು ಋಕ್ಕುಗಳನ್ನು ರಚಿಸಿದವರು) ಎಂದು ಹೆಸರು. ಈ ಮಂಡಲಕ್ಕೆ ಶತರ್ಚಿನಮಂಡಲವೆಂದು ಹೆಸರು

ಇದೇ ಕ್ರಮವನ್ನನುಸರಿಸಿ 2, 3, 4, 5, 6, 7, 8ನೆಯ ಮಂಡಲಗಳಿಗೆ ಕ್ರಮವಾಗಿ ಗೃತ್ಸಮದ, ವಿಶ್ವಾಮಿತ್ರ, ವಾಮದೇವ, ಅತ್ರಿ, ಭರದ್ವಾಜ, ವಸಿಷ್ಠ ಮತ್ತು ಕಣ್ವ ಋಷಿಗಳು ದ್ರಷ್ಟೃಗಳೆಂದು ಹೇಳಲ್ಪಟ್ಟಿರುವುದು. ಹತ್ತನೆಯ ಮಂಡಲದಲ್ಲಿ ಯಾವರೀತಿಯಿಂದಲೂ ವಿಂಗಡಿಸುವುದಕ್ಕೆ ಸಾಧ್ಯವಾಗದ ಅನೇಕ ದೊಡ್ಡದೊಡ್ಡ ಸೂಕ್ತ ಗಳೂ, ಅತಿಸಣ್ಣ ಸೂಕ್ತಗಳೂ ಸೇರಿರುವುವು ಇವುಗಳನ್ನೆಲ್ಲಾ ಈ ಮಂಡಲಗಲ್ಲಿ ಒಟ್ಟುಗೂಡಿಸಿ ಈ ಮಂಡಲವನ್ನು ಕ್ಷುದ್ರಸೂಕ್ತ ಮತ್ತು ಮಹಾಸೂಕ್ತಗಳ ಮಂಡಲವೆಂದು ಕರೆದಿದಾರೆ. ಪ್ರಥಮಮಂಡಲದಲ್ಲಿರುವಂತೆ ಈ ಹತ್ತನೆಯ ಮಂಡಲದಲ್ಲಿಯೂ ಒಟ್ಟು ೧೯೧ ಸೂಕ್ತಗಳಿವೆ. ಪ್ರಕೃತವಾದ ದ್ವಿತೀಯಮಂಡಲಕ್ಕೆ ಗೃತ್ಸಮದನೆಂಬ ಋಷಿಯು ದ್ರಷ್ಟೃವಾಗಿರುವುದರಿಂದ ಈ ಮಂಡಲಕ್ಕೆ ಗಾರ್ತ್ಸಮದ ಮಂಡಲವೆಂದು ಹೇಳುವ ರೂಢಿ ಇರುವುದು. ಪ್ರತಿ ಮಂಡಲ ದಲ್ಲಿಯೂ ಋಷಿ ಅಥವಾ ವಿಷಯವಿಭಾಗಕ್ಕನುಸಾರವಾಗಿ ಅನೇಕ ಅನುವಾಕಗಳೆಂಬ ಹಲವು ಸೂಕ್ತಗಳನ್ನೊಳಗೊಂಡ ವಿಭಾಗಗಳಿರುವುವು. ಪ್ರಥಮ ಮಂಡಲದಲ್ಲಿ ಇಂತಹ ೨೪ ಅನುವಾಕಗಳೂ ಒಟ್ಟು ೧೯೧ ಸೂಕ್ತಗಳೂ ಇರುವುವು. ಈ ದ್ವಿತೀಯ ಮಂಡಲದಲ್ಲಿ ೪ ಅನುವಾಕಗಳೂ ಒಟ್ಟು ೪೩ ಸೂಕ್ತಗಳೂ ಇರುವುವು ಈ ಮಂಡಲವು ಎಲ್ಲಾ ಮಂಡಲಗಳಿಗಿಂತಲೂ ಪ್ರಮಾಣದಲ್ಲಿ ಚಿಕ್ಕದು.

ಈ ಮಂಡಲಕ್ಕೆ ದ್ರಷ್ಟೃವಾದ ಗೃತ್ಸಮದಋಷಿಯ ವಿಷಯವನ್ನು ಸೂಕ್ಷ್ಮವಾಗಿ ಪರಿಶೀಲಿಸೋಣ. ಯಾಸ್ಕಮಹರ್ಷಿಯು ತಮ್ಮ ನಿರುಕ್ತದಲ್ಲಿ ಗೃತ್ಸಮದವೆಂಬ ಶಬ್ದಕ್ಕೆ ನಿರ್ವಚನವನ್ನು ಹೇಳುತ್ತಾ—

**ಗೃತ್ಸಮದೋ ಗೃತ್ಸಮದನಃ । ಗೃತ್ಸ ಇತಿ ಮೇಧಾವಿನಾಮ । ಗೃಣಾತೇಃ ಸ್ತುತಿಕರ್ಮಣಃ ।**
**(ನಿ. ೯-೫)**

ಎಂದರೆ—ಗೃತ್ಸಮದವೆಂದರೆ ಗೃತ್ಸಮದನವು ; ಸ್ತುತಿಕರ್ಮವೆಂಬ ಅರ್ಥವನ್ನು ಕೊಡುವ **ಗೃಣಾತಿ** ಧಾತುವಿನಿಂದ **ಗೃತ್ಸ** ಎಂಬ ಶಬ್ದದ ನಿಷ್ಪತ್ತಿಯಾಗಿದೆ. ಗೃತ್ಸಶಬ್ದಕ್ಕೆ ಮೇಧಾವಿ (ಬುದ್ಧಿವಂತನು) ಎಂದು ಹೆಸರು ಎಂದು ಹೇಳಿದಾರೆ. ಮದನಶಬ್ದಕ್ಕೆ ಹರ್ಷಾಳು ಅಥವಾ ಹರ್ಷವುಳ್ಳವನು ಎಂದರ್ಥವು. **ಗೃತ್ಸಶ್ಚಾಸೌ ಮದನಶ್ಚ ಗೃತ್ಸಮದನಃ** ಎಂದು ವಿಗ್ರಹವು. ಆದ್ದರಿಂದ ಗೃತ್ಸಮದಶಬ್ದಕ್ಕೆ ಬುದ್ಧಿವಂತನೂ ಹರ್ಷದಿಂದಿರುವವನೂ (ಹಸನ್ಮುಖಿ) ಆದ ಪುರುಷನೆಂದರ್ಥವು.

ಈ ಗೃತ್ಸಮದಋಷಿಯು ಮೊದಲು ಆಂಗಿರಾಋಷಿಗೋತ್ರೋದ್ಭವನಾದ ಶುನಹೋತ್ರನೆಂಬ ಋಷಿಯ ಪುತ್ರನಾಗಿದ್ದನು ಒಂದಾನೊಂದು ಕಾಲದಲ್ಲಿ ಇವನು ಯಜ್ಞಮಾಡುತ್ತಿರುವಾಗ ಅಸುರರು ಬಂದು ಇವನನ್ನು ಎತ್ತಿಕೊಂಡು ಹೋದರು. ಗೃತ್ಸಮದನ ಪ್ರಾರ್ಥನೆಯ ಮೇಲೆ ಇಂದ್ರನು ಇವನನ್ನು ಬಿಡಿಸಿ ತಂದನು. ಇಂದ್ರನ ಅಪ್ಪಣೆಯಿಂದಲೇ ಇವನಿಗೆ ಗೃತ್ಸಮದನೆಂಬ ಹೆಸರು ರೂಢವಾಯಿತು. ಮತ್ತು ಭೃಗುಕುಲದ ಶುನಕ ಅಥವಾ ಶೌನಕನ ಪುತ್ರನೆಂದು ಇವನ ಹೆಸರು ಪ್ರಸಿದ್ಧವಾಯಿತು. ಮತ್ತು ಶೌನಕಋಷಿಯ ಶಿಷ್ಯನಾದ ಕಾತ್ಯಾಯನ ಮಹರ್ಷಿಯಿಂದ ರಚಿತವಾದ ಋಷ್ಯನುಕ್ರಮಣಿಕೆ ಎಂಬ ಗ್ರಂಥದಲ್ಲಿಯೂ ನಾನಾ ಸೂಕ್ತಗಳ ಋಷಿಗಳ ಹೆಸರನ್ನು ಹೇಳುವಾಗ—

**ತ್ವಮಗ್ನ ಇತಿ ಗೃತ್ಸಮದಃ ಶೌನಕೋ ಭೃಗುತಾಂ ಗತಃ ।**
**ಶೌನಹೋತ್ರಃ ಪ್ರಕೃತ್ಯಾ ತು ಯ ಆಂಗಿರಸ ಉಚ್ಯತ ಇತಿ ॥**

ಎಂದು ಹೇಳಿರುವರು. ಎಂದರೆ, ತ್ವಮಗ್ನೇ ದ್ಯುಭಿಃ ಎಂಬ ಸೂಕ್ತದ ಋಷಿಯಾದ ಗೃತ್ಸಮದನೆಂಬುವನು ಆಂಗಿರಸರ ವಂಶಸ್ಥನಾದ ಶುನಹೋತ್ರನ ಪುತ್ರನಾಗಿ ಜನಿಸಿದರೂ ಬಳಿಕ (ಕಾರಣಾಂತರದಿಂದ) ಭೃಗುಋಷಿಕುಲೋತ್ಪನ್ನನಾದ ಶುನಕನ ಪುತ್ರನೆಂದು ಪ್ರಸಿದ್ಧಿಯಾಗಿರುವನು.

ಮಹಾಭಾರತದಲ್ಲಿ ಈ ಋಷಿಯ ವಿಚಾರದಲ್ಲಿ ಬೇರೆ ವಿಧವಾದ ಇತಿಹಾಸವಿದೆ. ಮಹಾಭಾರತದ ಅನುಶಾಸನ ಪರ್ವದಲ್ಲಿರುವ ಇತಿಹಾಸದಂತೆ ಹೈಹಯದೇಶದ ರಾಜನಾದ ವೀತಿಹವ್ಯನೆಂಬುವನಿಗೆ ಒಬ್ಬ ಪುತ್ರನಿದ್ದನು. ಈ ರಾಜನ ಶತ್ರುವಾದ ಪ್ರತರ್ದನ ಎಂಬ ಕಾಶೀದೇಶ ಶತ್ರುರಾಜನ ಬಾಧೆಯಿಂದ ಈ ವೀತಿಹವ್ಯನು ರಾಜ್ಯವನ್ನು ತ್ಯಜಿಸಿ ದೇಶಭ್ರಷ್ಟನಾಗಿ ಅಲೆಯುತ್ತಾ ಭೃಗುಋಷಿಯ ಆಶ್ರಮದಲ್ಲಿ ಆಶ್ರಯವನ್ನು ಪಡೆದಿದ್ದನು. ಅದರಿಂದ ಕೋಪಗೊಂಡ ಕಾಶಿಯ ಪ್ರತರ್ದನರಾಜನು ಭೃಗುಋಷಿಯ ಆಶ್ರಮದಲ್ಲಿ ಇರುವ ಕ್ಷತ್ರಿಯರನ್ನು ತನ್ನ ವಶಪಡಿಸಬೇಕೆಂದು ಬಲಾತ್ಕಾರಮಾಡಲು ಆಗ ಭೃಗುಋಷಿಯು ಶರಣಾಗತನಾದ ರಾಜನನ್ನು ಬಿಟ್ಟುಕೊಡಲಿಷ್ಟಪಡದೆ ತನ್ನ ಆಶ್ರಮದಲ್ಲಿ ಕ್ಷತ್ರಿಯರು ಯಾರೂ ಇಲ್ಲವೆಂದು ಹೇಳಿದನು. ಹೀಗೆ ಹೇಳಿದ್ದರಿಂದ ಭೃಗುಋಷಿಯ ಮಾತು ಅಸತ್ಯವಾಗದಿರಲು ವೀತಿಹವ್ಯನು ಬ್ರಾಹ್ಮಣನಾದನು. ಅವನ ಮಗನಾದ ಗೃತ್ಸಮದನೇ ಪ್ರಸಿದ್ಧನಾದ ಋಷಿಯಾಗಿ ಋಗ್ವೇದದ ಎರಡನೆಯ ಮಂಡಲಕ್ಕೆ ದ್ರಷ್ಟೃವಾಗಿರುವನು.

ಮಹಾಭಾರತದಲ್ಲಿ ಮತ್ತೊಂದುಕಡೆ—ದೇವಾಸುರರ ಯುದ್ಧವಾದಾಗ ದೇವತೆಗಳಿಗೆ ಅಪಜಯವಾಗಲು ಇಂದ್ರನು ಒಂದು ಗೂಢವಾದ ಪ್ರದೇಶದಲ್ಲಿ ಕಣ್ಮರೆಯಾಗಿದ್ದನು- ಇವನನ್ನು ಕೊಲ್ಲಬೇಕೆಂದು ಅಸುರರು ಹೊಂಚು ಹಾಕುತ್ತಿದ್ದಾಗ ಗೃತ್ಸಮದನು ಇಂದ್ರನಂತೆ ವೇಷಧರಿಸಿ ಅಸುರರನ್ನು ವಂಚಿಸಿ ಆ ಮೂಲಕ ಇಂದ್ರನನ್ನು ತಪ್ಪಿಸಿಕೊಂಡು ಹೋಗಲು ಸಹಾಯಮಾಡಿದನು ಎಂದು ಹೇಳಿದೆ. ಇದಲ್ಲದೆ ನೈಮಿಶಾರಣ್ಯವೆಂಬ ಕ್ಷೇತ್ರದಲ್ಲಿ ಋಷಿಗಳು ಹನ್ನೆರಡುವರ್ಷಕಾಲ ಸತ್ರಯಾಗವನ್ನು ಮಾಡುತ್ತಾ ಲೋಮಹರ್ಷಣನೆಂಬ ಸೂತಪೌರಾಣಿಕನಿಂದ ಪುರಾಣಶ್ರವಣಸತ್ಕಥಾಶ್ರವಣಾದಿ ಕಾಲಕ್ಷೇಪಮಾಡುತ್ತಿದ್ದಾಗ ಆ ಋಷಿಗಳ ಗುಂಪಿನಲ್ಲಿ ಗೃತ್ಸಮದನ ಹೆಸರೂ ಉಕ್ತವಾಗಿದೆ. ಆದರೆ ಈ ಮಂಡಲದ್ರಷ್ಟೃವಾದ ಗೃತ್ಸಮದನೇ ಇವನೇ, ಅಥವಾ ಗೃತ್ಸಮದ ಎಂಬ ಹೆಸರಿನ ಬೇರೆ ಋಷಿಯೇ ಎಂಬುದು ಸ್ಪಷ್ಟವಾಗಿಲ್ಲ. ಮತ್ತು ಅಥರ್ವವೇದದ ಶಾಖೆಗಳಲ್ಲಿ ಗೃತ್ಸಮದನೂ ಒಬ್ಬ ಶಾಖಾಕಾರನೆಂದೂ ತಿಳಿಯಬರುವುದು. ಭಾಷ್ಯಕಾರರಾದ ಸಾಯಣರು ಅಲ್ಲಲ್ಲಿ ಈ ವಿಷಯವನ್ನು ಸೂಚಿಸಿರುವರು.

ಗೃತ್ಸಮದಋಷಿದೃಷ್ಟವಾದ ಈ ಮಂಡಲದ ಪ್ರಥಮ ಸೂಕ್ತದಲ್ಲಿ ೧೬ ಋಕ್ಕುಗಳಿರುವುವು. ಇಷ್ಟಾರ್ಥಗಳಿಗಾಗಿ ಪ್ರಾರ್ಥಿಸಿ ಹೇಳಿರುವ ಉಪಸಂಹಾರರೂಪವಾದ ಕೊನೆಯಋಕ್ಕು ಒಂದನ್ನು ಬಿಟ್ಟು ಉಳಿದ ೧೫ ಋಕ್ಕುಗಳೂ ತ್ವಂ ತ್ವಾಂ ಮೊದಲಾದ ಯುಷ್ಮಚ್ಛಬ್ದವಾಚಕವಾದ| ಪದಗಳಿಂದಲೇ ಪ್ರಾರಂಭವಾಗಿವೆ. ಅಷ್ಟೇ‍ಅಲ್ಲದೆ ಅನೇಕ ಋಕ್ಕುಗಳಲ್ಲಿ ಪ್ರತಿಪಾದವೂ ಯುಷ್ಮಚ್ಛಬ್ದದಿಂದಲೇ ಪ್ರಾರಂಭವಾಗಿದೆ. ಈ ವಿಧವಾದ ಪ್ರಾಸದಿಂದ ಕೂಡಿದ ಸೂಕ್ತಗಳು ಋಗ್ವೇದದಲ್ಲಿ ಅನೇಕವಾಗಿವೆ. ಪ್ರಥಮ ಮಂಡಲದ ೩೧ ನೆಯ ಸೂಕ್ತದಲ್ಲಿಯೂ ಪ್ರಕೃತವಾದ ಸೂಕ್ತದಂತೆ ಅನೇಕ ಋಕ್ಕುಗಳು ತ್ವಂ ಎಂಬ ಶಬ್ದದಿಂದಲೇ ಪ್ರಾರಂಭವಾಗುವುವು. ಕೆಲವು ಸೂಕ್ತಗಳಲ್ಲಿ ಋಕ್ಕುಗಳೆಲ್ಲಾ ಏತಚ್ಛದಿಂದ ಪ್ರಾರಂಭವಾಗುವುವು. ಒಂಭತ್ತನೇ ಮಂಡಲದ ೩, ೧೫, ೨೨, ೨೭, ೨೮, ೩೮, ಇತ್ಯಾದಿ ಸೂಕ್ತಗಳಲ್ಲಿ ಪ್ರತಿ ಋಕ್ಕೂ ಏತಚ್ಛಬ್ದದಿಂದ ಪ್ರಾರಂಭವಾಗುವವು. ಕೆಲವು ಸೂಕ್ತಗಳಲ್ಲಿ ಎಂದರೆ ಒಂಭತ್ತನೇ ಮಂಡಲದ ೩೭ ನೇ ಸೂಕ್ತದಲ್ಲಿ ಪ್ರತಿ ಋಕ್ಕು ತಚ್ಛಶಬ್ದದಿಂದ ಅದರಲ್ಲಿಯೂ **ಸಃ** ಎಂಬ ಪದದಿಂದಲೇ ಪ್ರಾರಂಭವಾಗುವುವು. ಇದೇ ಮಂಡಲದಲ್ಲಿ ಗೃತ್ಸಮದ ಋಷಿದೃಷ್ಟವಾದ ೧೪ ನೆಯ ಸೂಕ್ತದಲ್ಲಿ (ಕೊನೆಯ ಋಕ್ಕನ್ನು ಬಿಟ್ಟು) ಪ್ರತಿಋಕ್ಕೂ **ಅಧ್ವರ್ಯವಃ** ಎಂಬ ಶಬ್ದದಿಂದಲೇ ಪ್ರಾರಂಭವಾಗಿರುವುವು. ಮತ್ತು ಇದೇ ಮಂಡಲದ ೨೫ ನೆಯ ಸೂಕ್ತದಲ್ಲಿ ಪ್ರತಿಋಕ್ಕಿನ ಕೊನೆಯ ಪಾದವೂ **ಯಂಯಂ ಯುಜಂ ಕೃಣುತೇ ಬ್ರಹ್ಮಣಸ್ಪತಿಃ** ಎಂದು ಪಲ್ಲವಿಯಂತೆ ಮುಗಿದಿರುವುದು. ಈ ರೀತಿ ನಾನಾ ವಿಧವಾದ ಪ್ರಾಸಬದ್ಧವಾದ ಮಂತ್ರಗಳೂ ಸೂಕ್ತಗಳೂ ಗಾನಮಾಡುವ ಉದ್ದೇಶದಿಂದ ರಚಿಸಲ್ಪಟ್ಟಿರುವುದಲ್ಲದೆ ಋಷಿಗಳ ರಚನಾಕೌಶಲ್ಯವನ್ನೂ ವಾಕ್ಪ್ರೌಢಿಮೆಯನ್ನೂ ವ್ಯಕ್ತಪಡಿಸುವುವು ಪ್ರಕೃತಮಂಡಲದಲ್ಲಿ ಗೃತ್ಸಮದ ಋಷಿಯು ಸಹ ನಾನಾವಿಧ ಪ್ರಾಸಗಳಿಂದ ಕೂಡಿದ ಮತ್ತು ಅರ್ಥಗರ್ಭಿತವಾದ ಋಕ್ಕುಗಳಿಂದಲೂ ಸೂಕ್ತಗಳಿಂದಲೂ ನಾನಾದೇವತೆಗಳನ್ನು ಸ್ತುತಿಸಿರುವನು. ಇಂತಹ ಮಂತ್ರಗಳೆಲ್ಲವೂ ಬಹಳ ಪ್ರೌಢವಾದ ಕವಿತ್ವವರ್ಗಕ್ಕೆ ಸೇರಿದವೆಂಬುದನ್ನುಹೇಳುವ ಅವಶ್ಯಕತೆ ಇಲ್ಲ.

———:o:———

# ಎರಡನೆಯ ಮಂಡಲದಲ್ಲಿ ಮೊದಲನೆಯ ಸೂಕ್ತವು

:o:

ಸಾಯಣಭಾಷ್ಯಂ

ಶತರ್ಚಿನಾಂ ಪ್ರಥಮಂ ಮಂಡಲಂ ವ್ಯಾಖ್ಯಾತಂ । ಅಥ ಗಾರ್ತ್ಸಮದಂ ದ್ವಿತೀಯಂ ಮಂಡಲಂ ವ್ಯಾಖ್ಯಾಯತೇ । ತ್ವಮಗ್ನೇ ದ್ಯುಭಿರಿತ್ಯಾದಿಕಂ ದ್ವಿತೀಯಂ ಮಂಡಲಂ । ಚತ್ವಾರೋಽನುವಾಕಾಃ। ತೇಷು ಪ್ರಥಮೋಽನುವಾಕ ಏಕಾದಶ ಸೂಕ್ತಾನಿ । ತತ್ರ ತ್ವಮಗ್ನೇ ದ್ಯುಭಿರಿತಿ ಷೋಡಶರ್ಚಂ ಪ್ರಥಮಂ ಸೂಕ್ತಂ । ಮಂಡಲದ್ರಷ್ಟಾ ಗೃತ್ಸಮದ ಋಷಿಃ । ಸ ಚ ಪೂರ್ವಮಾಂಗಿರಸಕುಲೇ ಶುನಹೋತ್ರಸ್ಯ ಪುತ್ರಃ ಸನ್ ಯಜ್ಞಕಾಲೇಽಸುರೈರ್ಗೃಹೀತ ಇಂದ್ರೇಣ ಮೋಚಿತಃ । ಪಶ್ಚಾತ್ತದ್ವಚನೇನೈವ ಭೃಗುಕುಲೇ ಶುನಕ-ಪುತ್ರೋ ಗೃತ್ಸಮದನಾಮಾಭೂತ್ । ತಥಾ ಚಾನುಕ್ರಮಣಿಕಾ । ಯ ಆಂಗಿರಸಃ ಶೌನಹೋತ್ರೋ ಭೂತ್ವಾ ಭಾರ್ಗವಃ ಶೌನಕೋಽಭವತ್ಸ ಗೃತ್ಸಮದೋ ದ್ವಿತೀಯಂ ಮಂಡಲಮಪಶ್ಯದಿತಿ । ತಥಾ ತಸ್ಯೈವ ಶೌನಕಸ್ಯ ವಚನಮಪ್ಯನುಕ್ರಮಣೇ । ತ್ವಮಗ್ನ ಇತಿ ಗೃತ್ಸಮದಃ ಶೌನಕೋ ಭೃಗುತಾಂ ಗತಃ । ಶೌನ-ಹೋತ್ರಃ ಪ್ರಕೃತ್ಯಾ ತು ಯ ಆಂಗಿರಸ ಉಚ್ಯತ ಇತಿ । ತಸ್ಮಾನ್ಮಂಡಲದ್ರಷ್ಟಾ ಶೌನಕೋ ಗೃತ್ಸಮದ ಋಷಿಃ । ಜಗತೀ ಛಂದಃ । ಮಂಡಲಾದಿಪರಿಭಾಷಯಾಗ್ನೇಯಂ । ಅತ್ರಾನುಕ್ರಮಣಿಕಾ । ತ್ವಮಗ್ನೇ ಜಾಗತಂ ತ್ವಿತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ಜಾಗತೇ ಛಂದಸೀದಮಾದಿಸೂಕ್ತದ್ವಯಸ್ಯ ವಿನಿ-ಯೋಗಃ । ತ್ವಮಗ್ನೇ ದ್ಯುಭಿರಿತಿ ಸೂಕ್ತೇ । ಆ. ४-೧೩ । ಇತಿ ಸೂತ್ರಿತತ್ವಾತ್ ॥ ಉಪಾಕರಣೋತ್ಸರ್ಜ-ನಯೋರಪ್ಯಾದ್ಯಾ ವಿನಿಯುಕ್ತಾ ॥

ಅನುವಾದವು—ಶತರ್ಚಿನರೆಂಬ ಋಷಿಗಳಿಂದ ದೃಷ್ಟವಾದ ಪ್ರಥಮಮಂಡಲವನ್ನು ವಿವರಿಸಿದ್ದಾಯಿತು ಈಗ ಗೃತ್ಸಮದಋಷಿದೃಷ್ಟವಾದ ಎರಡನೆಯ ಮಂಡಲವನ್ನು ವಿವರಿಸಲಾಗುತ್ತದೆ. ತ್ವಮಗ್ನೇದ್ಯುಭಿಃ ಎಂಬ ಸೂಕ್ತ ದಿಂದ ಎರಡನೆಯ ಮಂಡಲವು ಆರಂಭವಾಗುವುದು. ಈ ಮಂಡಲದಲ್ಲಿ ನಾಲ್ಕು ಅನುವಾಕಗಳಿರುವುವು. ಅವುಗಳ ಪೈಕಿ ಮೊದಲನೆಯ ಅನುವಾಕದಲ್ಲಿ ಹನ್ನೊಂದು ಸೂಕ್ತಗಳಿರುವುವು ; ಆ ಸೂಕ್ತಗಳಲ್ಲಿ ತ್ವಮಗ್ನೇ ದ್ಯುಭಿಃ ಎಂಬುದು ಮೊದಲನೆಯ ಸೂಕ್ತವು. ಇದರಲ್ಲಿ ಹದಿನಾರು ಋಕ್ಕುಗಳಿರುವುವು. ಮಂಡಲದ್ರಷ್ಟೃವಾದ ಗೃತ್ಸಮದನೇ ಈ ಸೂಕ್ತಕ್ಕೆ ಋಷಿಯು ; ಈ ಗೃತ್ಸಮದ ಋಷಿಯು ಮೊದಲು ಅಂಗೀರಸ ಕುಲದಲ್ಲಿ ಶುನಹೋತ್ರನೆಂಬುವನಿಗೆ ಪುತ್ರ ನಾಗಿ ಒಂದಾನೊಂದುಕಾಲದಲ್ಲಿ ಯಜ್ಞಮಾಡುತ್ತಿರುವಾಗ ಅಸುರರಿಂದ ಅಪಹರಿಸಲ್ಪಟ್ಟು ಬಳಿಕ ಇಂದ್ರನಿಂದ ಬಿಡಿಸಲ್ಪಟ್ಟನು. ಅನಂತರ ಆ ಇಂದ್ರನ ಮಾತಿನಂತೆ ಭೃಗುಕುಲದಲ್ಲಿ ಶುನಕನೆಂಬ ಋಷಿಯ ಪುತ್ರನೂ ಗೃತ್ಸಮದ ನೆಂಬ ಹೆಸರಿನಿಂದ ಪ್ರಸಿದ್ಧನೂ ಆದನು. ಅನುಕ್ರಮಣಿಕೆಯಲ್ಲಿ—ಯ ಆಂಗಿರಸಃ ಶೌನಹೋತ್ರೋ ಭೂತ್ವಾ ಭಾರ್ಗವಃ ಶೌನಕೋಽಭವತ್ಸ ಗೃತ್ಸಮದೋ ದ್ವಿತೀಯಂ ಮಂಡಲಮಪಶ್ಯದಿತಿ । ಎಂದರೆ, ಅಂಗಿರಸಗೋ ತ್ರದ ಶುನಹೋತ್ರನ ಮಗನು ಭೃಗುಲೋತ್ಪನ್ನನಾದ ಶುನಕನೆಂಬ ಋಷಿಗೆ ಗೃತ್ಸಮದನೆಂಬ ಹೆಸರಿನ ಪುತ್ರ ನಾದನು. ಈ ಗೃತ್ಸಮದನು ಋಗ್ವೇದದ ಎರಡನೆಯ ಮಂಡಲದ ದ್ರಷ್ಟೃವಾಗಿರುವನು ಎಂದು ಹೇಳಿದೆ. ಮತ್ತು ಅನುಕ್ರಮಣಿಕೆಯಲ್ಲಿಯೂ ಸಹ ಅದರ ಕರ್ತೃವಾದ ಶೌನಕರ ವಚನವು ಹೀಗೆ ಇರುವುದು—

ತ್ವಮಗ್ನ ಇತಿ ಗೃತ್ಸಮದಃ ಶೌನಕೋ ಭೃಗುತಾಂ ಗತಃ ।
ಶೌನಹೋತ್ರಃ ಪ್ರಕೃತ್ಯಾ ತು ಯ ಆಂಗೀರಸ ಉಚ್ಯತ ಇತಿ ॥

ಮೊದಲು ಆಂಗಿರಸಗೋತ್ರದ ಶುನಹೋತ್ರನೆಂಬುವನಿಗೆ ಪುತ್ರನಾಗಿದ್ದು ಅನಂತರ ಭೃಗುಕುಲದ ಶುನಕನಿಗೆ ಪುತ್ರನಾದ ಗೃತ್ಸಮದನೆಂಬ ಋಷಿಯು ತ್ವಮಗ್ನೇ ಎಂದು ಪ್ರಾರಂಭವಾಗುವ ಈ ಎರಡನೆಯ ಮಂಡಲಕ್ಕೆ ದ್ರಷ್ಟೃವಾಗಿರುವನು. ಆದ್ದರಿಂದ ಶುನಕಪುತ್ರನಾದ ಗೃತ್ಸಮದನೆಂಬ ಋಷಿಯೇ ಈ ಮಂಡಲದ್ರಷ್ಟೃವಾಗಿರುವನು. ತ್ವಮಗ್ನೇ ಎಂಬ ಸೂಕ್ತಕ್ಕೆ ಅಗ್ನಿಯೇ ದೇವತೆಯು ; ಜಗತೀಛಂದಸ್ಸು. ಅನುಕ್ರಮಣಿಕೆಯಲ್ಲಿ **ತ್ವಮಗ್ನೇ ಜಾಗತಂ ತು** ಎಂದು ಹೇಳಿರುವುದು ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕಾಲದಲ್ಲಿ ಜಗತೀಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ಮತ್ತು ಮುಂದಿನ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ-**ತ್ವಮಗ್ನೇ ದ್ಯುಭಿರಿತಿ ಸೂಕ್ತೇ** ಎಂಬ ಸೂತ್ರದಿಂದ ವಿವೃತವಾಗಿರುವುದು. ( ಆ. ೪-೧೩ ) ಮತ್ತು ಅಧ್ಯಾಯೋಪಾಕರಣ ಉತ್ಸರ್ಜನಕರ್ಮಗಳಲ್ಲಿಯೂ ಈ ಸೂಕ್ತದ ಮೊದಲನೆಯ ಋಕ್ಕಿನ ವಿನಿಯೋಗವಿರುವುದೆಂದು ಹಿಂದಿನ **ಸೂಕ್ತದ** ಅನುವಾದದಲ್ಲಿಯೇ ತಿಳಿಸಿದೆ.

---

## ॥ ಓಂ ॥

## ಸೂಕ್ತ—೧

॥ ಮಂಡಲ—೨ ॥ ಅನುವಾಕ—೧ ॥ ಸೂಕ್ತ—೧ ॥

॥ ಅಷ್ಟಕ—೨ ॥ ಅಧ್ಯಾಯ—೫ ॥ ವರ್ಗ—೧೭, ೧೮, ೧೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೧೬ ॥

ಋಷಿಃ—ಗೃತ್ಸಮದ ಆಂಗಿರಸಃ ಶೌನಹೋತ್ರಃ ಪಶ್ಚಾದ್ಭಾರ್ಗವಃ ಶೌನಕಃ ॥

ದೇವತಾ—ಅಗ್ನಿಃ ॥

ಛಂದಃ—ಜಗತೀ ॥

---

ಸಂಹಿತಾಪಾಠ

ತ್ವಮ॑ಗ್ನೇ ದ್ಯುಭಿಸ್ತ್ವಮಾ॑ಶುಶು॒ಕ್ಷಣಿ॒ಸ್ತ್ವಮ॒ದ್ಭ್ಯಸ್ತ್ವಮಶ್ಮ॑ನ॒ಸ್ಪರಿ॑ ।
ತ್ವಂ ವನೇ॑ಭ್ಯ॒ಸ್ತ್ವಮೋಷ॑ಧೀಭ್ಯ॒ಸ್ತ್ವಂ ನೃ॒ಣಾಂ ನೃ॑ಪತೇ ಜಾಯಸೇ॒ ಶುಚಿಃ॑ ॥ ೧ ॥

ಪದಪಾಠ

ತ್ವಂ । ಅ॒ಗ್ನೇ॒ । ದ್ಯುಽಭಿಃ । ತ್ವಂ । ಆ॒ಽಶು॒ಶು॒ಕ್ಷಣಿಃ॑ । ತ್ವಂ । ಅ॒ತ್ಽಭ್ಯಃ । ತ್ವಂ । ಅಶ್ಮ॑ನಃ । ಪರಿ॑ ।
ತ್ವಂ । ವನೇ॑ಭ್ಯಃ । ತ್ವಂ । ಓಷ॑ಧೀಭ್ಯಃ । ತ್ವಂ । ನೃ॒ಣಾಂ । ನೃ॒ಽಪ॒ತೇ॒ । ಜಾ॒ಯ॒ಸೇ॒ । ಶುಚಿಃ॑ ॥ ೧ ॥

ಸಾಯಣಭಾಷ್ಯಂ

ಹೇ ಅಗ್ನೇ ಅಗ್ರಣೀತ್ವಾದಿಗುಣವಿಶಿಷ್ಟ ಹೇ ನೃಣಾಂ ನೃಪತೇ । ನೃಣಾಂ ಮನುಷ್ಯಾಣಾಂ ಮಧ್ಯೇ ಯೇ ನರಾ ಯಷ್ಟಾರಃ ಸಂತಿ ತೇಷಾಂ ವಿಶೇಷೇಣ ಪಾಲಯಿತಃ । ಯದ್ವೋಭಾಭ್ಯಾಂ ಪದಾಭ್ಯಾಂ ಬಹುತ್ವಂ ನಿತ್ಯಸ್ವಾಮಿತ್ವಂ ಚ ಪ್ರತಿಪಾದ್ಯತೇ । ಸರ್ವೇಷಾಮಪಿ ನರಾಣಾಂ ನಿತ್ಯಪಾಲಕೇತ್ಯರ್ಥಃ ॥ ನೃಣಾಮಿತ್ಯಸ್ಯ ನಿಘಾತಾಭಾವಶ್ಛಾಂದಸಃ ॥ ತಾದೃಶ ಹೇ ದೇವ ತ್ವಂ ದ್ಯುಭಿರ್ಯಾಗದಿವಸೈರ್ನಿಮಿತ್ತ-ಭೂತೈರ್ಜಾಯಸೇ । ಯಾಗಾರ್ಥಂ ಮಥನೇನೋತ್ಪದ್ಯಸ ಇತ್ಯರ್ಥಃ । ಯದ್ವಾ ತಾದೃಶೈರ್ದಿವಸೈಃ ಸಹಿತೋ ಜಾಯಸೇ । ತತ್ತದ್ಯಾಗದಿವಸೇಷು ಪ್ರಸಿದ್ಧೋ ಭವಸೀತ್ಯರ್ಥಃ । ತಥಾ ತ್ವಮಾಶುಶುಕ್ಷಣಿರ್ಜಾ-ಯಸೇ । ಆ ಸರ್ವತೋ ದೀಪ್ಯಮಾನೋ ಭವಸಿ ॥ ಆಙ್ಯುಪಪದೇ ಶುಚ ದೀಪ್ತಾವಿತ್ಯೇತಸ್ಯ ಸನಂತಸ್ಯ ಛಾಂದಸಮಿದಂ ರೂಪಂ । ಯದ್ವಾ ಆಶು ಶೀಘ್ರಂ ಶುಚ್ ದೀಪ್ತಃ ಸನ್ ಯತಃ ಸ ಸೇವ್ಯತೆ ಇತಿ । ಆಶ್ಯ ಶುಚಂ ಶೋಕಂ ಸನೋತಿ ದದಾತಿ ಶತ್ರುಭ್ಯೋ ದಾಹಾದಿನೇತ್ಯಾಶುಶುಕ್ಷಣಿಃ ॥ ತಾದೃಶೋ ಭವಸಿ । ಏವಂ ಸರ್ವತ್ರ ಪ್ರತಿವಿಶೇಷಣಂ ಜಾಯಸ ಇತಿ ಯೋಜ್ಯಂ । ಹೇ ಅಗ್ನೇ ತ್ವಮದ್ಭ್ಯೋ ವೃಷ್ಟ್ಯುದ-ಕೇಭ್ಯೋ ಜಾಯಸೇ ವೈದ್ಯುತರೂಪೇಣ ವಾಡವರೂಪೇಣ ವಾ ಸಮುದ್ರೋದಕೇಭ್ಯಃ । ಅಶ್ಮನೋ ಮೇಘಾತ್ಪಾಷಾಣಾದ್ವಾ ಪರಿ ಜಾಯಸೇ । ಯೋ ಅಶ್ಮನೋರಂತರಗ್ನಿಂ ಜಜಾನ । ೨-೧೨-೩ । ಇತಿ ಹಿ ಮಂತ್ರಾಂತರಂ । ತ್ವಂ ವನೇಭ್ಯೋ ವೃಕ್ಷಾದಿಸಮೂಹೇಭ್ಯೋ ದಾವರೂಪೇಣ । ತ್ವಮೋಷಧೀಭ್ಯೋ ವೈಶ್ವಾನರರೂಪೇಣ । ಏವಂ ಮಹಾನುಭಾವಸ್ತ್ವಂ ಮಥನೇನೋತ್ಪನ್ನಃ ಸನ್ ಸರ್ವಾತ್ಮಕೋ ಭವಸೀ-ತ್ಯರ್ಥಃ । ಶುಚಿರೇವ ಜಾಯಸೇ । ಯದ್ವಾ ಶುಚಿರಾದಿತ್ಯರೂಪೋ ಜಾಯಸ ಇತ್ಯರ್ಥಃ । ಅತ್ರ ತ್ವಮಗ್ನೇ ದ್ಯುಭಿರಹೋಭಿರಿತ್ಯಾದಿ ನಿರುಕ್ತಮನುಸಂಧೇಯಂ । ನಿ. ೬-೧ ॥

ಪ್ರತಿಪದಾರ್ಥ

ನೃಣಾಂ ನೃಪತೇ—ಮಾನವರಿಗೆ ಪ್ರಭುವೂ ಪಾಲಕನೂ ಆದ । ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ದ್ಯುಭಿಃ—ಯಾಗದಿನಗಳಲ್ಲಿ ಯಾಗದ ನಿಮಿತ್ತವಾಗಿ । ಜಾಯಸೇ—ಉತ್ಪನ್ನನಾಗುತ್ತೀಯೆ । ತ್ವಂ—ನೀನು । ಆಶುಶುಕ್ಷಣಿಃ—ಸರ್ವತ್ರ ದೀಪ್ಯಮಾನನಾಗಿಯೂ ಶತ್ರುಗಳನ್ನು ದಹಿಸುವವನಾಗಿಯೂ ಇದ್ದೀಯೆ । ತ್ವಂ—ನೀನು । ಅದ್ಭ್ಯಃ—ಉದಕಗಳಿಂದಲೂ । ಅಶ್ಮನಃ ಪರಿ—ಪಾಷಾಣಗಳಿಂದಲೂ ಉತ್ಪನ್ನನಾಗುತ್ತೀಯೆ । ತ್ವಂ—ನೀನು । ವನೇಭ್ಯಃ—ವೃಕ್ಷಾದಿಗಳಿಂದ ದಾವಾನಲರೂಪನಾಗಿಯೂ । ತ್ವಂ—ನೀನು । ಓಷಧೀಭ್ಯಃ—ಓಷಧಿಗಳಿಂದ ವೈಶ್ವಾನರರೂಪದಲ್ಲಿಯೂ ಉತ್ಪನ್ನನಾಗುತ್ತೀಯೆ । ತ್ವಂ—ನೀನು । ಶುಚಿಃ—ಪವಿತ್ರಾತ್ಮನೂ ಪ್ರಕಾಶಮಾನನೂ ಆದಆದಿತ್ಯರೂಪನೂ ಆಗಿದ್ದೀಯೆ ।

ಭಾವಾರ್ಥ

ಮಾನವರಿಗೆ ಪ್ರಭುವೂ ಪಾಲಕನೂ ಆದ ಎಲೈ ಅಗ್ನಿಯೇ, ನೀನು ಯಾಗದಿನಗಳಲ್ಲಿ ಯಾಗದ ನಿಮಿತ್ತ ವಾಗಿ ಉತ್ಪನ್ನನಾಗುತ್ತೀಯೆ. ನೀನು ಸರ್ವತ್ರ ದೀಪ್ಯಮಾನನಾಗಿಯೂ ಶತ್ರುಗಳನ್ನು ದಹಿಸುವವನಾಗಿಯೂ ಇದ್ದೀಯೆ. ನೀನು ಉದಕಗಳಿಂದಲೂ ಪಾಷಾಣಗಳಿಂದಲೂ ಉತ್ಪನ್ನನಾಗುತ್ತೀಯೆ. ನೀನು ವೃಕ್ಷಾದಿಗಳಿಂದ ದಾವಾನಲರೂಪನಾಗಿಯೂ, ಓಷಧಿಗಳಿಂದ ವೈಶ್ವಾನರ ರೂಪವಾಗಿಯೂ ಉತ್ಪನ್ನನಾಗುತ್ತೀಯೆ. ನೀನು ಪವಿತ್ರಾತ್ಮನೂ ಪ್ರಕಾಶಮಾನನೂ ಆದ ಆದಿತ್ಯರೂಪನೂ ಆಗಿದ್ದೀಯೆ.

## English Translation

Sovereign of men, Agni, you are born for the days (of sacrifice), pure and all-irradiating, from the waters, from the stones, from trees, and from plants.

### ವಿಶೇಷವಿಷಯಗಳು

ಗೃತ್ಸಮದ ಋಷಿದೃಷ್ಟವಾದ ಈ ಮೊದಲನೆಯ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಅಗ್ನಿಯ ವಿಧವಿಧ ವಾದ ಉತ್ಪತ್ತಿಕ್ರಮವನ್ನು ವಿವರಿಸಲಾಗಿದೆ. ಆ ಉತ್ಪತ್ತಿ ಕ್ರಮಗಳನ್ನು ಸೂಕ್ಷ್ಮರೀತಿಯಲ್ಲಿ ವಿವರಿಸುತ್ತೇವೆ.

**ತ್ವಂ ಅಗ್ನೇ ನೃಣಾಂ ನೃಪತೇ**—ಋಷಿಯು ಈ ಶಬ್ದಗಳಿಂದ ಅಗ್ನಿಯನ್ನು ಸಂಬೋಧನೆಮಾಡಿರುವನು. ಅಗ್ನಿಶಬ್ದದ ನಿರ್ವಚನವನ್ನೂ ನಾನಾರ್ಥಗಳನ್ನೂ ನಾವು ಋ. ಸಂ. ಭಾಗ ೧ ಪೇಜು 612-614 ರಲ್ಲಿ ವಿಸ್ತಾರವಾಗಿ ವಿವರಿಸಿರುವೆವು. ಪ್ರಕೃತವಾದ ಋಕ್ಕಿನಲ್ಲಿ ಭಾಷ್ಯಕಾರರು **ಅಗ್ರಣೀತ್ವಾದಿಗುಣವಿಶಿಷ್ಟ** ಎಂದು ಹೇಳಿರುವುದನ್ನು ಮಾತ್ರ ವಿವರಿಸುವೆವು. ಯಾಸ್ಕರು ತಮ್ಮ ನಿರುಕ್ತದಲ್ಲಿ—

**ಅಗ್ನಿಃ ಕಸ್ಮಾದಗ್ರಣೀರ್ಭವತ್ಯಗ್ರಂ ಯಜ್ಞೇಷು ಪ್ರಣೀಯತೇಽಙ್ಗಂ ನಯತಿ।**

(ನಿ. ೭-೧೪-)

ಎಂದು ಹೇಳಿದ್ದಾರೆ. ಯಜ್ಞಾದಿಗಳಲ್ಲಿ ಅಗ್ನಿಗೆ ಪ್ರಥಮಸ್ಥಾನವು, ಎಂದರೆ ಅಗ್ರಶಬ್ದವು ಪ್ರಧಾನವಾಚಿಯಾಗಿರುವುದ ರಿಂದ ಅಗ್ನಿಗೇ ದೇವತೆಗಳಲ್ಲಿ ಪ್ರಧಾನಸ್ಥಾನವು ಸಲ್ಲುವುದು. ಯಜ್ಞಗಳಲ್ಲಿ ಅಗ್ನಿಯನ್ನು ಅರಣಿಗಳಲ್ಲಿ ಉತ್ಪತ್ತಿ ಮಾಡಿದ ಕೂಡಲೇ ಆಹವನೀಯವೆಂಬ ಅಗ್ನಿಕುಂಡದಲ್ಲಿಡುವರು. ಅಲ್ಲಿಂದ ಗಾರ್ಹಪತ್ಯವೆಂಬ ಅಗ್ನಿಕುಂಡದ ಬಳಿಗೆ ಒಯ್ಯು ವರು. ಆದುದರಿಂದ ಅಗ್ನಿಗೆ ಅಗ್ರಣೀಃ ಎಂದು ಹೆಸರು. ಅಥವಾ ಅಗ್ರಣೀಃಎಂದರೆ ದೇವಸೇನೆಯನ್ನು ಸ್ವತಃ (ತಾನೇ) ನಡೆಸುವವನು ಅಥವಾ ದೇವಸೇನೆಗೆ ಮುಂದಾಳಾಗಿರುವವನು(ನಾಯಕ or Leader) ಎಂದಾಗುವುದು. ಅಗ್ನಿಶಬ್ದಕ್ಕೆ ಈ ಹೆಸರು ಬರಲು ಇದು ಒಂದನೆಯ ಕಾರಣವು. ಇದಲ್ಲದೆ ಬ್ರಾಹ್ಮಣಾಂತರದಲ್ಲಿ—**ಅಗ್ನಿರ್ದೇವಾನಾಂ ಸೇನಾನೀಃ** ಎಂದಿದೆ. ಇದನ್ನನುಸರಿಸಿ ಋಕ್ಶಾಖಾಧ್ಯಾಯಿಗಳು ತಮ್ಮ ಮಂತ್ರ ಬ್ರಾಹ್ಮಣದಲ್ಲಿ—**ಅಗ್ನಿರ್ಮುಖಂ ಪ್ರಥಮೋ ದೇವತಾನಾಂ** (ಐ.ಬ್ರಾ. ೧-೪) ಎಂದು ಪಠಿಸುವರು. ಐತರೇಯ ಬ್ರಾಹ್ಮಣದ ಮತ್ತೊಂದು ಭಾಗದಲ್ಲಿ **ಅಗ್ನಿರ್ವೈದೇವಾನಾಮವಮಃ** (ಐ. ಬ್ರಾ. ೧-೧-೧) ಎಂದಿರುವುದು. ತೈತ್ತಿರೀಯ ಬ್ರಾಹ್ಮಣದಲ್ಲಿಯೂ ಕೂಡ **ಅಗ್ನಿರಗ್ರೇ ಪ್ರಥಮೋ ದೇವತಾನಾಂ** (ತೈ. ಬ್ರಾ. ೨-೪-೩-೩) ಎಂದೂ **ಅಗ್ನಿರವಮೋ ದೇವತಾನಾಂ** ಎಂದೂ ಇರುವುದು. ಈ ಉದಾಹರಣೆಗಳಿಂದ ಅಗ್ನಿಯು ದೇವತೆಗಳಲ್ಲಿ ಮೊದಲನೆಯವನು, ಅಗ್ರಸ್ಥಾನದಲ್ಲಿರುವವನು, ಮುಂದಾಳು, ನಾಯಕನು, ಎಂದಾಗುವುದು. ಶುಕ್ಲಯಜುರ್ವೇದದಲ್ಲಿ (ವಾ. ಸಂ ) **ಸ ವಾ ಏಷೋಽಗ್ರೇ ದೇವತಾನಾಮಜಾಯತ ತಸ್ಮಾದಗ್ನಿರ್ನಾಮೇತಿ**—ಎಂದರೆ ಈ ಅಗ್ನಿಯು ದೇವತೆಗಳಲ್ಲೆಲ್ಲಾ ಮೊದಲು ಹುಟ್ಟಿದನು ಆದುದರಿಂದ ಇವನಿಗೆ ಅಗ್ನಿಯೆಂದು ಹೆಸರು ಎಂದಿರುವುದು.

**ನೃಣಾಂ ನೃಪತೇ—ಮನುಷ್ಯಾಣಾಂ ಮಧ್ಯೇ ಯೇ ನರಾಃ ಯಷ್ಟಾರಃ ಸಂತಿ ತೇಷಾಂ ವಿಶೇಷೇಣ ಪಾಲಯಿತಃ। ಯದ್ವೋಭಾಭ್ಯಾಂ ಪದಾಭ್ಯಾಂ ಬಹುತ್ವಂ ನಿತ್ಯಸ್ವಾಮಿತ್ವಂ ಚ ಪ್ರತಿಪಾದ್ಯತೇ। ಸರ್ವೇಷಾ ಮಪಿ ನರಾಣಾಂ ನಿತ್ಯಪಾಲಕೇತ್ಯರ್ಥಃ॥** ಮನುಷ್ಯರಲ್ಲಿ ಯಾರು ಯಜ್ಞಮಾಡುತ್ತಾರೋ ಅಂತಹ ಯಜಮಾನ

ರನ್ನು ರಕ್ಷಿಸುವ ಎಲೈ ಅಗ್ನಿಯೇ ಎಂದರ್ಥವು; ಅಥವಾ ನೃಣಾಂ ನೃಪತೇ ಎಂಬ ಎರಡು ಶಬ್ದಗಳೂ ಅನೇಕ ಜನರಿಗೆ ಸ್ವಾಮಿತ್ವವನ್ನು ಸೂಚಿಸುವುದರಿಂದ ಸಮಸ್ತಜನರಿಗೂ ಸರ್ವಕಾಲದಲ್ಲಿಯೂ ಈ ಅಗ್ನಿಯು ಸಂರಕ್ಷಕನು ಎಂದು ಮುಖ್ಯಾಭಿಪ್ರಾಯವು.

**ತ್ವಮಗ್ನೇ ದ್ಯುಭಿಃ—ಯಾಗದಿವಸೈರ್ನಿಮಿತ್ತಭೂತೈರ್ಜಾಯಸೇ । ಯಾಗಾರ್ಥಂ ಮಥನೇನೋತ್ಪದ್ಯಸ ಇತ್ಯರ್ಥಃ । ಯದ್ವಾ ತಾದೃಶೈರ್ದಿವಸೈಃ ಸಹಿತೋ ಜಾಯಸೇ । ತತ್ತದ್ಯಾಗದಿವಸೇಷು ಪ್ರಸಿದ್ಧೋ ಭವಸೀತ್ಯರ್ಥಃ ।** ಎಲೈ ಅಗ್ನಿಯೇ, ನೀನು ಯಾಗದಿವಸಗಳಲ್ಲಿ ಉತ್ಪನ್ನನಾಗುತ್ತೀಯೆ ; ಎಂದರೆ ಯಜ್ಞಾರ್ಥವಾಗಿ (ಅಗ್ನಿಯಿಂದಲೇ ಯಜ್ಞ) ಅಗ್ನಿಯನ್ನು ಅರಣಿಗಳಲ್ಲಿ ಮಥನಮಾಡುವುದರಿಂದ ಉತ್ಪನ್ನನಾಗುತ್ತೀಯೆ ; ಅಥವಾ ಆಯಾ ಯಾಗದಿವಸಗಳಲ್ಲಿ ಎಂದರೆ ಯಜಮಾನರು ಮಾಡುವ ಯಜ್ಞದಿವಸಗಳಲ್ಲಿ ಆ ದಿವಸಗಳಿಂದ ಸಹಿತನಾಗಿಯೇ ಎಂದರೆ ಪ್ರಸಿದ್ಧನಾಗಿಯೇ ಉತ್ಪನ್ನನಾಗುವೆ ಎಂದೂ ಅರ್ಥವು.

**ತ್ವಮಾಶುಶುಕ್ಷಣಿಃ**—ಭಾಷ್ಯಕಾರರು ಈ ಶಬ್ದಾರ್ಥವನ್ನು ವಿವರಿಸುತ್ತಾ-**ತ್ವಮಾಶುಶುಕ್ಷಣಿರ್ಜಾಯಸೇ। ಆ ಸರ್ವತೋ ದೀಪ್ಯಮಾನೋ ಭವಸಿ। ಆಙ್ಪುಪಪದೇ ಶುಚ ದೀಪ್ತಾವಿತ್ಯೇತಸ್ಯ ಛಾಂದಸಮಿದಂ ರೂಪಂ। ಯದ್ವಾ। ಆಶು ಶೀಘ್ರಂ ಶುಚ್ ದೀಪ್ತಿಃ ಸನ್ ಯತಃ ಸ ಸೇವ್ಯತ ಇತಿ। ಆಶು ಶುಚಂ ಶೋಕಂ ಸನೋತಿ ದದಾತಿ ಶತ್ರುಭ್ಯೋ ದಾಹಾದಿನೇತ್ಯಾಶುಶುಕ್ಷಣಿಃ । ತಾದೃಶೋ ಭವತಿ ॥** ಎಂದರೆ ಎಲೈ ಅಗ್ನಿಯೇ ನೀನು ಸುತ್ತಲೂ ಪ್ರಕಾಶಿಸುತ್ತಾ ಬೆಳಗುತ್ತೀಯೆ. ಪ್ರಕಾಶಿಸು ಎಂಬರ್ಥವನ್ನು ಕೊಡುವ ಶುಚ್ ಧಾತುವಿನಿಂದ ಆ ಎಂಬ ಉಪಸರ್ಗವು ಸೇರಿ ಆಶುಶುಕ್ಷಣಿಃ ಎಂಬ ರೂಪವಾಗಿದೆ. ಅಥವಾ ಆಶು-ಜಾಗ್ರತೆಯಾಗಿ ಶುಚ್-ಪ್ರಕಾಶಮಾನನಾಗಿ ಕ್ಷಣಿಃ-ಸೇವಿಸಲ್ಪಡುವುದರಿಂದಲೂ ಅಥವಾ ನಿನ್ನ ದಹನಸಾಮರ್ಥ್ಯದಿಂದ ಆಶು-ಜಾಗ್ರತೆಯಾಗಿ ಶುಚಂ-ಶೋಕವನ್ನು ಸನೋತಿ-ಶತ್ರುಗಳಿಗೆ ಉಂಟುಮಾಡುವುದರಿಂದಲೂ ಅಗ್ನಿಗೆ ಆಶುಶುಕ್ಷಣಿಃ ಎಂದು ಹೆಸರು ಎಂದು ಈ ಶಬ್ದದ ಅರ್ಥ ವಿವರಣೆ ಮಾಡಿದ್ದಾರೆ. ಯಾಸ್ಕರು ತಮ್ಮ ನಿರುಕ್ತದಲ್ಲಿ ಈ ಶಬ್ದಾರ್ಥವನ್ನು ವಿವರಿಸುವುದಕ್ಕಾಗಿ ಪ್ರಕೃತವಾದ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಇದರ ನಿರ್ವಚನವನ್ನು ಹೇಳಿದ್ದಾರೆ—

> **ತ್ವಮಗ್ನೇ ದ್ಯುಭಿರಹೋಭಿಸ್ತ್ವಮಾಶುಶುಕ್ಷಣಿಃ । ಆಶು ಇತಿ ಚ ಶು ಇತಿ ಚ ಕ್ಷಿಪ್ರನಾಮನೀ ಭವತಃ। ಕ್ಷಣಿರುತ್ತರಃ ಕ್ಷಣೋತೇಃ ಆಶು ಶುಚಾ ಕ್ಷಣೋತೀತಿ ವಾ ಸನೋತೀತಿ ವಾ ॥ ಶುಕ್ ಶೋಚತೇಃ । ಪಂಚಮ್ಯರ್ಥೇ ವಾ ಪ್ರಥಮಾ। ತಥಾ ಹಿ ವಾಕ್ಸಂಯೋಗ ಆ ಇತ್ಯಾಕಾರ ಉಪಸರ್ಗಃ ಪುರಸ್ತಾಚ್ಚಿಕೀರ್ಷಿತಜ ಉತ್ತರ ಆಶು ಶೋಚಯಿಷುರಿತಿ । ಶುಚಿಃ ಶೋಚತೇರ್ಜ್ವಲತಿಕರ್ಮಣಃ । ಅಯಮಪೀತರಃ ಶುಚಿರೇತಸ್ಮಾದೇವ । ನಿಷ್ಷಿಕ್ತಮಸ್ಮಾತ್ ಪಾಪಕಮಿತಿ ನೈರುಕ್ತಾಃ ॥**
>
> (ನಿ. ೬-೧)

ಎಂದರೆ-ಆಶು ಮತ್ತು ಶು ಎಂಬ ಪದಗಳು ಕ್ಷಿಪ್ರ (ಬೇಗನೆ ಎಂದರ್ಥವುಳ್ಳ) ನಾಮಗಳು. ಕ್ಷಣಿಃ ಎಂಬ ಶಬ್ದವು ಹಿಂಸಾರ್ಥವನ್ನು ಸೂಚಿಸುವ ಕ್ಷಣೋತಿಧಾತುವಿನಿಂದ ನಿಷ್ಪನ್ನವಾಗಿದೆ; ಅಥವಾ ಹೊಂದು ಎಂಬರ್ಥವುಳ್ಳ ಸನೋತಿಧಾತುವಿನಿಂದಲಾದರೂ ನಿಷ್ಪನ್ನವಾಗಬಹುದು. ಮಧ್ಯದಲ್ಲಿರುವ ಶು ಎಂಬ ಅಕ್ಷರವು ಪ್ರಕಾಶಿಸು ಎಂದರ್ಥವನ್ನು ಕೊಡುವ ಶುಚಿಶಬ್ದದ ಪರ್ಯಾಯಪದವು. ಆದುದರಿಂದ, ಆಶುಶುಕ್ಷಣಿಃ ಎಂದರೆ ಅಗ್ನಿಯು ತನ್ನ ಕಾಂತಿಯಿಂದ ಜಾಗ್ರತೆ

ಯಾಗಿ (ಶತ್ರುಗಳನ್ನು) ಹಿಂಸಿಸುವನು (ದಹಿಸುವವನು) ಅಥವಾ ಯಜಮಾನನಿಗೆ ಬೇಕಾದ ವಸ್ತುವನ್ನು ಬೇಗನೆ ಒದಗಿಸಿಕೊಡುವವನು ಎಂದರ್ಥವು.

ಅಥವಾ ಶುಕ್ ಎಂಬ ಪದವು ಪ್ರಕಾಶಿಸು ಎಂಬರ್ಥವನ್ನು ಕೊಡುವ ಶುಚ್ ಧಾತುವಿನಿಂದ ನಿಷ್ಪನ್ನವಾಗಿದೆ. ಇಲ್ಲಿ ಪಂಚಮೀ ವಿಭಕ್ತ್ಯರ್ಥದಲ್ಲಿ ಪ್ರಥಮಾವಿಭಕ್ತಿಯ ಪ್ರಯೋಗವಿದೆ. ಆ ಎಂಬುದು ಉಪಸರ್ಗವು. ಆದ್ದರಿಂದ ಆ+ಶುಶುಕ್ವಣಿಃ ಎಂಬಲ್ಲಿ ಶುಶುಕ್ವಣಿಶಬ್ದವು ಚಿಕೀರ್ಷಿತಾರ್ಥವನ್ನು ಸೂಚಿಸುವುದೆಂದು ಭಾವಿಸಿದರೆ ಆಶುಶುಕ್ವಣಿಃ ಎಂಬ ಪದಕ್ಕೆ ಸುತ್ತಲೂ ಪ್ರಕಾಶಿಸಲು ಇಚ್ಛೆಯುಳ್ಳವನು (ಅಗ್ನಿಯು) ಎಂದರ್ಥವಾಗುವುದು.

ಅಥವಾ ಶುಚಿಃ ಎಂಬ ಶಬ್ದವು ಪ್ರಕಾಶಿಸು ಎಂಬರ್ಥವುಳ್ಳ ಶೋಚತಿಧಾತುವಿನಿಂದ ನಿಷ್ಪನ್ನವಾಗಬಹುದು. ಈ ಸಂದರ್ಭದಲ್ಲಿ ಮೇಲೆ ಹೇಳಿದ ಅರ್ಥಗಳಿಗೆ ಅವಕಾಶವಿರುವುದು. ಇದಲ್ಲದೆ ಶುಚಿಃ ಎಂಬ ಶಬ್ದಕ್ಕೆ ಇನ್ನೊಂದರ್ಥವೂ ಇರುವುದು ಶುಚಿಃ ಎಂದರೆ ಪವಿತ್ರವಾದದ್ದು, ಶುದ್ಧವಾದದ್ದು ಪಾಪರಹಿತವಾದದ್ದು ಎಂದು ಇನ್ನೊಂದು ಅರ್ಥವು. ಈ ಪಕ್ಷದಲ್ಲಿ ಅ+ಅಶುಶುಕ್ವಣಿಃ==ಆಶುಶುಕ್ವಣಿಃ ಎಂದರೆ ಪಾಪರಹಿತನಾದವನು (ಅಗ್ನಿಯು) ಎಂದರ್ಥವು. (ಅ denotes negetive. As there are two ಅ s, two negetives make an offirmative ; Sinless) ನೈರುಕ್ತಕಾರರು ಈ ವಿಧವಾದ ಅರ್ಥವನ್ನು ಅನುಮೋದಿಸುವರು.

**ದ್ಯುಭಿಃ ಅಹೋಭಿಃ**—ಪೌರ್ಣಮಾಸ್ಯಾ, ಅಮಾವಾಸ್ಯಾ, ಮೊದಲಾದ ಯಜ್ಞಾರ್ಹವಾದ ದಿವಸಗಳಲ್ಲಿ ಅಗ್ನಿಯನ್ನು ಯಜ್ಞಾರ್ಥವಾಗಿ ಮಥಿಸಿ ಉತ್ಪಾದನೆ ಮಾಡುವುದರಿಂದ ಅಂತಹ ದಿವಸಗಳಲ್ಲಿ ಉತ್ಪನ್ನನಾಗುತ್ತೀಯೆ ಎಂದು ಅಗ್ನಿಯನ್ನು ಸಂಬೋಧಿಸಿ ಹೇಳಿದೆ.

**ತ್ವಮದ್ಭ್ಯಃ**—**ತ್ವಮದ್ಭ್ಯೋ ವೃಷ್ಟ್ಯುದಕೇಭ್ಯೋ ಜಾಯಸೇ ವೈದ್ಯುತರೂಪೇಣ ವಾಡವ-ರೂಪೇಣ ವಾ ಸಮುದ್ರೋದಕೇಭ್ಯಃ** । ನೀರಿನಿಂದ ಉತ್ಪನ್ನನಾಗುತ್ತೀಯೆ ಎಂದರೆ ಮಳೆಯು ಹುಯ್ಯುತ್ತಿರುವಾಗ ಮೋಡಗಳಲ್ಲಿ ಉತ್ಪನ್ನನಾಗುವ ಮಿಂಚಿನ ರೂಪದಲ್ಲಾಗಲಿ, ಅಥವಾ ಸಮುದ್ರದ ನೀರಿನಲ್ಲಿ ಕಾಣಿಸುವ ಬಾಡಬಾನಲ ರೂಪದಲ್ಲಾಗಲಿ ನೀನು ಉತ್ಪನ್ನನಾಗುತ್ತೀಯೆ ಎಂದು ಸ್ತುತಿಸಿದೆ.

**ತ್ವಮಶ್ಮನಸ್ಪರಿ**—**ಅಶ್ಮನೋ ಮೇಘಾತ್ಪಾಷಾಣಾದ್ವಾ**। ಅಶ್ಮಾ ಎಂಬ ಶಬ್ದವು ಮೂವತ್ತು ಮೇಘನಾಮಗಳಲ್ಲಿ (ನಿ. ೨-೨೧) ಪಠಿತವಾಗಿರುವುದರಿಂದ ಮೇಘಗಳಲ್ಲಿ ವಿದ್ಯುದ್ರೂಪದಿಂದ ಉತ್ಪನ್ನನಾಗುವೆ. ಅಥವಾ ಅಶ್ಮನ್ ಶಬ್ದಕ್ಕೆ ಪಾಷಾಣ, ಕಲ್ಲು ಎಂಬ ಅರ್ಥವೂ ಇರುವುದರಿಂದ ಎರಡು ಕಲ್ಲುಗಳ ಘರ್ಷಣೆಯಿಂದ ಉತ್ಪನ್ನನಾಗುವೆ ಎಂದೂ ಹೇಳಬಹುದು. (ಪೂರ್ವದಲ್ಲಿ ದೀಪದಕಡ್ಡಿಗಳು ರೂಢಿಯಲ್ಲಿಲ್ಲದಿದ್ದಾಗ ಚಕಮುಕಿಕಲ್ಲುಗಳಿಂದಲೇ ಬೆಂಕಿಯನ್ನು ಮಾಡುತ್ತಿದ್ದರು) ಮೇಘಗಳಿಂದ ವಿದ್ಯುದ್ರೂಪದಲ್ಲಿ ಅಗ್ನಿಯು ಉತ್ಪನ್ನನಾಗುವನೆಂಬ ವಿಷಯದಲ್ಲಿ ಭಾಷ್ಯಕಾರರು—

**ಯೋ ಹತ್ವಾಹಿಮರಿಣಾತ್ಸಪ್ತ ಸಿಂಧೂನ್ಯೋ ಗಾ ಉದಾಜದಪಧಾ ವಲಸ್ಯ ।**
**ಯೋ ಅಶ್ಮನೋರಂತರಗ್ನಿಂ ಜಜಾನ ಸಂವೃಕ್ಸಮತ್ಸು ಸ ಜನಾಸ ಇಂದ್ರಃ ॥**

(ಋ. ಸಂ. ೨-೧೨-೩)

ಎಂಬ ಋಕ್ಕನ್ನು ಉದಾಹರಣೆಗಾಗಿ ಕೊಟ್ಟಿರುವರು. ಈ ಋಕ್ಕಿನ ಅರ್ಥವನ್ನು ವಿವರಿಸುವಾಗ ಸಾಯಣರು—**ಯಶ್ಚಾಶ್ಮನೋಃ ಅಶ್ನುತೇ ವ್ಯಾಪ್ನೋತ್ಯಂತರಿಕ್ಷಮಿತಿ ಅಶ್ಮಾ ಮೇಘಃ । ಅತ್ಯಂತಮೃದುರೂಪಯೋರ್ಮೇ**

ಘಯೋರಂತರ್ಮಧ್ಯೇ ವೈದ್ಯುತಮಗ್ನಿಂ ಜಜಾನ ಉತ್ಪಾದಯಾಮಾಸ । ಎಂದರೆ ಅಶ್ಮಾ ಎಂಬ ಶಬ್ದವು ವ್ಯಾಪಿಸು ಎಂಬರ್ಥವನ್ನು ಕೊಡುವ ಅಶ್ ಧಾತುವಿನಿಂದ ನಿಷ್ಪನ್ನವಾಗಿದೆ. ಎಂದರೆ ಅಂತರಿಕ್ಷವನ್ನು ವ್ಯಾಪಿಸಿರುವುದರಿಂದ ಮೇಘಕ್ಕೆ ಅಶ್ಮಾ ಎಂದು ಹೆಸರು. ಅಂತಹ ಮೃದುವಾಗಿರುವ ಮೇಘಗಳ ಮಧ್ಯದಲ್ಲಿ ವೈದ್ಯುತಾಗ್ನಿಯನ್ನು ಇಂದ್ರನು ಉತ್ಪತ್ತಿಮಾಡಿದನೆಂದು ಅರ್ಥವಿವರಣೆಮಾಡಿರುವರು.

ತ್ವಂ ವನೇಭ್ಯಃ—ವೃಕ್ಷಾದಿಸಮೂಹೇಭ್ಯೋ ದಾವರೂಪೇಣ । ಕಾಡುಗಳಲ್ಲಿ ದಾವಾಗ್ನಿರೂಪದಿಂದ (ಕಾಡುಕಿಚ್ಚು) ಉತ್ಪನ್ನನಾಗುವೆ. ಕಾಡಿನಲ್ಲಿ ಬಿದಿರುಗಳು ಒಂದಕ್ಕೊಂದು ಘರ್ಷಣೆಯಾಗಿ ಆದರಿಂದ ಬೆಂಕಿಯು ಹುಟ್ಟಿ ಕಾಡನ್ನೆಲ್ಲಾ ದಹಿಸುವುದು ಪ್ರಸಿದ್ಧವಾಗಿದೆ.

ತ್ವಮೋಷಧೀಭ್ಯಃ—ವೈಶ್ವಾನರರೂಪೇಣ । ಮಥನೇನೋತ್ಪನ್ನಃಸನ್ ಸರ್ವಾತ್ಮಕೋ ಭವಸೀ-ತ್ಯರ್ಥಃ । ಅಗ್ನಿಯು ಸಮಸ್ತ ಪ್ರಾಣಿಗಳಲ್ಲಿಯೂ (ಜಾಠರಾಗ್ನಿರೂಪದಿಂದ) ಮತ್ತು ಓಷಧಿವನಸ್ಪತಿಗಳಲ್ಲಿಯೂ ವೈಶ್ವಾನರಾಗ್ನಿರೂಪದಿಂದ ಇರುವನು ಯಜ್ಞದಲ್ಲಿ ಅಗ್ನಿಯನ್ನು ಉತ್ಪತ್ತಿಮಾಡುವಾಗ ಅಶ್ವತ್ಥವೃಕ್ಷದ ಅಥವಾ ಶಮೀವೃಕ್ಷದ ಎರಡು ಮರದ ತುಂಡುಗಳನ್ನು ಒಂದರಮೇಲೊಂದನ್ನಿಟ್ಟು ಬಲವಾಗಿ ಕಡೆಯುವರು. ಆದರಿಂದ ಅಗ್ನಿಯು ಉತ್ಪನ್ನನಾಗುವನು. ಈ ವಿಷಯದಲ್ಲಿ—

> ಶಮೀಗರ್ಭಾದಗ್ನಿಂ ಮಂಥತಿ । ಏಷಾ ವಾ ಅಗ್ನೇರ್ಯಜ್ಞಿಯಾ ತನೂಃ । ತಾಮೇವಾಸ್ಮೈ ಜನಯತಿ ॥
>
> (ತೈ. ಬ್ರಾ. ೧-೧-೯-೧)

ಎಂದು ತೈತ್ತಿರೀಯಬ್ರಾಹ್ಮಣವಾಕ್ಯವಿರುವುದು. ಯಜ್ಞಾದಿಗಳಲ್ಲಿ ಅಗ್ನಿಯನ್ನು ಮಂತ್ರಪೂರ್ವಕವಾಗಿಯೂ, ಸಂಸ್ಕಾರಸಹಿತವಾಗಿಯೂ ಮಥಿಸಿ ಉತ್ಪನ್ನಮಾಡುವ ವಿಧಾನವನ್ನು ಐತರೇಯಬ್ರಾಹ್ಮಣದಲ್ಲಿ (ಐ. ಬ್ರಾ. ೩-೫) ಈರೀತಿ ಹೇಳಿರುವುದು:- ಈ ಋಕ್ಕಿನಲ್ಲಿ ಅಗ್ನಿಮಥನವಿಚಾರವು ಉಕ್ತವಾಗಿರುವುದರಿಂದ ಆ ಕ್ರಮವನ್ನು ಇಲ್ಲಿ ವಿವರಿಸುವುದು ಯುಕ್ತವಾಗಿದೆ. ಯಜ್ಞದಲ್ಲಿ ಸೋಮವಿಕ್ರಯಣವೆಂಬ (ಸೋಮಲತೆಯನ್ನು ಪರ್ವತವನಾದಿಗಳಿಂದ ತಂದವರಿಂದ ಕ್ರಯಕ್ಕೆ ಪಡೆಯುವುದು) ಕರ್ಮವು ಸಮಾಪ್ತಿಯಾದಮೇಲೆ ಅಗ್ನಿಮಥನಕಾರ್ಯವು ಪ್ರಾರಂಭವಾಗುವುದು. ಆಗ ಅಧ್ವರ್ಯುವೆಂಬ ಋತ್ವಿಜನು ಹೋತೃವೆಂಬ ಋತ್ವಿಜನನ್ನುದ್ದೇಶಿಸಿ ಈರೀತಿ ಹೇಳುವನು—

> ಅಗ್ನಯೇ ಮಥ್ಯಮಾನಾಯಾನುಬ್ರೂಹೀತ್ಯಾಹಾಧ್ವರ್ಯುರಭಿ ತ್ವಾ ದೇವ ಸವಿತರಿತಿ ಸಾವಿತ್ರೀ-ಮನ್ವಾಹ ತದಾಹುರ್ಯದಗ್ನಯೇ ಮಥ್ಯಮಾನಾಯಾನುವಾಚಾಹಾಥ ಕಸ್ಮಾತ್ಸಾವಿತ್ರೀ-ಮನ್ವಾಹೇತಿ । ಸವಿತಾ ವೈ ಪ್ರಸವಾನಾಮೀಶೇ ಸವಿತೃಪ್ರಸೂತ ಏವೈನಂ ತನ್ಮಂಥತಿ ತಸ್ಮಾತ್ಸಾವಿತ್ರೀ ಮನ್ವಾಹ ।

ಅಧ್ವರ್ಯುವು ಹೋತೃವನ್ನುದ್ದೇಶಿಸಿ-ಅಗ್ನಯೇ ಮಥ್ಯಮಾನಾಯನುಬ್ರೂ ಹಿ ಎಂಬ ಪ್ರೈಷಮಂತ್ರವನ್ನು ಹೇಳುವನು (ಪ್ರೈಷಮಂತ್ರವೆಂದರೆ ಯಜ್ಞದಲ್ಲಿ ನಾನಾ ಕರ್ಮಗಳನ್ನು ಮಾಡುವಾಗ ಅಧ್ವರ್ಯು ಮೊದಲಾದವರು ಸಂಬಂಧಪಟ್ಟ ಜನರನ್ನುದ್ದೇಶಿಸಿ ಇಂತಿಂತಹ ಕರ್ಮವನ್ನು (ಅಥವಾ ಹೋಮವನ್ನು) ಮಾಡು ಎಂದು ಆಜ್ಞಾರೂಪವಾಗಿ ವಿಧಿಸುವ ಮಂತ್ರಪಠನವು, ಅದನ್ನು ಕೇಳಿ ಹೋತೃವು—

ಅಭಿ ತ್ವಾ ದೇವ ಸವಿತರೀಶಾನಂ ವಾರ್ಯಾಣಾಂ । ಸದಾವನ್ ಭಾಗಮೀಮಹೇ ॥

(ಋ. ಸಂ. ೧-೨೪-೩)

ಎಂಬ ಸವಿತೃದೇವತಾಕವಾದ ಮಂತ್ರವನ್ನು (ಸಾವಿತ್ರೀ ಋಕ್ಕನ್ನು) ಪಠಿಸುವನು. ಇಲ್ಲಿ ಒಂದು ಸಂಶಯವು ತಲೆ ದೋರುವುದು. ಅಗ್ನಿಮಂಥನಕ್ಕಾಗಿ ಅವಶ್ಯಕವಾದ ಮಂತ್ರವನ್ನು ಹೇಳಬೇಕೆಂದು ಅಧ್ವರ್ಯುವು ಹೋತೃವಿಗೆ ನಿರ್ದೇಶ ಮಾಡಿದ್ದರೂ, ಹಾಗೆ ಮಾಡದೆ ಹೋತೃವು ಸವಿತೃದೇವತಾಪರವಾದ ಋಕ್ಕನ್ನು ಪಠಿಸಲು ಕಾರಣವೇನು ? ಇದು ತಪ್ಪಲ್ಲವೇ ಎಂದರೆ, ಹಾಗಲ್ಲ. ಸವಿತಾ ವೈ ಪ್ರಸವಾನಾಮೀಶೇ-ಎಂಬ ವಾಕ್ಯದಂತೆ ಯಜ್ಞಾದಿಸಮಸ್ತ ಕರ್ಮಗಳಲ್ಲಿಯೂ ಯಾವುದನ್ನು ಉತ್ಪತ್ತಿಮಾಡಬೇಕಾದರೂ ಆ ಉತ್ಪತ್ತಿಗೆಲ್ಲಾ ಸವಿತೃವು ಸ್ವಾಮಿ (ಅಧಿಪತಿ) ಯಾಗಿರುವುದರಿಂದ ಇಲ್ಲಿ ಅಗ್ನಿಮಥನವೆಂಬ ಅಗ್ನ್ಯುತ್ಪತ್ತಿಕಾರ್ಯಾರಂಭಕ್ಕಾಗಿ ಸವಿತೃದೇವತೆಯ ಅನುಜ್ಞೆಯನ್ನು ಕೇಳುವುದು ಸಹಜವಾಗಿದೆ. ಅದಕ್ಕಾಗಿಯೇ ಹೋತೃವು ಮೊದಲು ಸವಿತೃದೇವತಾಪರವಾದ ಋಕ್ಕನ್ನು ಪಠಿಸಿರುವನು.

> ಮಹೀ ದ್ಯೌಃ ಪೃಥಿವೀ ಚ ನ ಇತಿ ದ್ಯಾವಾಪೃಥಿವೀಯಾಮನ್ವಾಹ । ತದಾಹುರ್ಯದಗ್ನಯೇ ಮಥ್ಯಮಾನಾಯಾನುವಾಚಾಹಾಥ ಕಸ್ಮಾದ್ದ್ಯಾವಾಪೃಥಿವೀಯಾಮನ್ವಾಹೇತಿ ದ್ಯಾವಾ-ಪೃಥಿವೀಭ್ಯಾಂ ವಾ ಏತಂ ಜಾತಂ ದೇವಾಃ ಪರ್ಯಗೃಹ್ಣಂಸ್ತಾಭ್ಯಾಮೇವಾದ್ಯಾಪಿ ಪರಿಗೃಹೀತ-ಸ್ತಸ್ಮಾದ್ದ್ಯಾವಾಪೃಥಿವೀಯಾಮನ್ವಾಹ ॥

ಅನಂತರ ಹೋತೃವು ಮುಂದುವರಿದು—

ಮಹೀ ದ್ಯೌಃ ಪೃಥಿವೀ ಚ ನ ಇಮಂ ಯಜ್ಞಂ ಮಿಮಿಕ್ಷತಾಂ ।
ಪಿಪೃತಾಂ ನೋ ಭರೀಮಭಿಃ ॥

(ಋ. ಸಂ. ೧-೨೨-೧೩)

ಎಂಬ ದ್ಯಾವಾಪೃಥಿವೀದೇವತಾಕವಾದ ಋಕ್ಕನ್ನು ಪಠಿಸುವನು. ಇದಕ್ಕೆ ಕೆಲವರ ಆಕ್ಷೇಪಣೆಯು-ಅಗ್ನಿಮಥನ ಕಾರ್ಯಕ್ಕಾಗಿ ಅಗ್ನಿಪರವಾದ ಋಕ್ಕನ್ನು ಹೇಳೆಂದರೆ ಈ ಹೋತೃವು ದ್ಯಾವಾಪೃಥಿವೀಪರವಾದ ಋಕ್ಕನ್ನು ಪಠಿಸುವುದೇತಕ್ಕೆ ? ಎಂದರೆ ಹಿಂದೆ ದೇವತೆಗಳು ಅಗ್ನಿಯು ಉತ್ಪನ್ನವಾದಾಗ ಅವನನ್ನು ದ್ಯಾವಾಪೃಥಿವಿಗಳ (ಭೂಮಿ ಸ್ವರ್ಗಗಳ) ಮಧ್ಯದಲ್ಲಿ ಪರಿಗ್ರಹಿಸಿರುವರು (ಹಿಡಿದರು) ಆದ್ದರಿಂದ ಈಗಲೂ ಹಾಗೆಯೇ ಮಾಡಬೇಕು. ಪಾವಕನಾಮಕನಾದ ಅಗ್ನಿಯು ಭೂಮಿಯಿಂದಲೂ ಸೂರ್ಯರೂಪನಾದ ಅಗ್ನಿಯು ಸ್ವರ್ಗದಿಂದಲೂ ಪರಿಗ್ರಹಿಸಲ್ಪಟ್ಟಿರುವುದರಿಂದ ಅಗ್ನಿಪರಿಗ್ರಹಕ್ಕಾಗಿ ದ್ಯಾವಾಪೃಥಿವೀದೇವತಾಕವಾದ ಋಕ್ಕನ್ನು ಪಠಿಸಬೇಕಾದುದು ನ್ಯಾಯವಾಗಿದೆ.

> ತ್ವಾಮಗ್ನೇ ಪುಷ್ಕರಾದಧೀತಿ ತೃಚಮಾಗ್ನೇಯಂ ಗಾಯತ್ರಮನ್ವಾಹಾಗ್ನೌ ಮಥ್ಯಮಾನೇ ಸ್ವಯೈ-ವೈನಂ ತದ್ದೇವತಯಾ ಸ್ವೇನ ಛಂದಸಾ ಸಮರ್ಧಯತಿ । ಅಥರ್ವಾ ನಿರಮಂಥತೇತಿ ರೂಪ-ಸಮೃದ್ಧಮೇತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣ-ಮೃಗಭಿವದತಿ. ॥

ಬಳಿಕ ಹೋತೃವು ಅಗ್ನಿಮಥನಕ್ಕಾಗಿ ಅಗ್ನಿದೇವತಾಕವಾದ—

ತ್ವಾಮಗ್ನೇ ಪುಷ್ಕರಾದಧ್ಯಥರ್ವಾ ನಿರಮಂಥತ । ಮೂರ್ಧ್ನೋ ವಿಶ್ವಸ್ಯ ವಾಘತಃ ।
ತಮು ತ್ವಾ ದಧ್ಯಙ್‌ಋಷಿಃ ಪುತ್ರಃ ಈಧೇ ಅಥರ್ವಣಃ । ವೃತ್ರಹಣಂ ಪುರಂದರಂ ॥
ತ ಮು ತ್ವಾ ಪಾಥ್ಯೋ ವೃಷಾ ಸಮೀಧೇ ದಸ್ಯುಹಂತಮಂ । ಧನಂಜಯಂ ರಣೇರಣೇ
(ಋ. ಸಂ. ೬-೧೬-೧೩, ೧೪, ೧೫)

ಎಂಬ ಮೂರು ಋಕ್ಕುಗಳನ್ನು ಪಠಿಸುವನು. ಈ ಮೂರು ಋಕ್ಕುಗಳು ಅಗ್ನಿದೇವತೆಯನ್ನೇ ಸ್ತುತಿಸತಕ್ಕವು. ಮತ್ತು ಅಗ್ನಿಗೆ ಪ್ರಿಯವಾದ ಗಾಯತ್ರೀಛಂದಸ್ಸಿನ ಋಕ್ಕುಗಳೇ ಆಗಿರುವುವು. ಏಕೆಂದರೆ, ಅಗ್ನಿಯೂ, ಗಾಯತ್ರಿಛಂದಸ್ಸೂ ಎರಡೂ ಪ್ರಜಾಪತಿಯಿಂದಲೇ ಉತ್ಪನ್ನವಾಗಿರುವುದರಿಂದಲೇ ಗಾಯತ್ರೀ ಛಂದಸ್ಸು ಸ್ವಕೀಯಛಂದಸ್ಸೆಂದು ಹೇಳಲ್ಪಡುವುದು. ಈಗ ಮೊದಲನೆಯ ಋಕ್ಕಿನ ಎರಡನೆಯಪಾದದಲ್ಲಿ ಉಕ್ತವಾಗಿರುವ ಅಥರ್ವಾ ನಿರಮಂಥತ—ಅಥರ್ವಾ ಎಂಬ ಋಷಿಯು ಅಗ್ನಿಯನ್ನು ಮಥನಮಾಡಿ ಉತ್ಪತ್ತಿಮಾಡಿದನು ಎಂದು ಹೇಳಿದೆಯಷ್ಟೆ. ಈ ಅಥರ್ವಾ ಎಂಬ ಋಷಿಯು ಎಲ್ಲರಿಗಿಂತ ಮೊದಲು ಅಗ್ನಿಯನ್ನು ಅರಣಿಗಳಲ್ಲಿ ಮಥಿಸಿ ಉತ್ಪತ್ತಿಮಾಡಿದನು. ಆದ್ದರಿಂದ ಅಥರ್ವಣ ಋಷಿಗೆ ಪುತ್ರನಾಗಿ ಜನಿಸಿದ ಅಗ್ನಿಯು ಯಜ್ಞದಲ್ಲಿ ಸಮೃದ್ಧವಾಗಿ ಬೆಳದು ವೃದ್ಧಿಯನ್ನು ಹೊಂದುವನು ಎಂಬ ಪ್ರಾರ್ಥನೆ ಇದೆ. ಈ ಕಾರಣಕ್ಕಾಗಿ ಅಗ್ನಿಯು ಅರಣಿಗಳಿಂದ ರೂಪಗೊಂಡು ಉತ್ಪನ್ನನಾಗಿ ( ಎಂದರೆ ಸಂಪೂರ್ಣ ಅಗ್ನಿರೂಪದಿಂದ) ಯಜ್ಞಕರ್ಮದಲ್ಲಿ ಅಭಿವೃದ್ಧಿಗೊಂಡು (ದೊಡ್ಡದಾಗಿ ಪ್ರಜ್ವಲಿಸುತ್ತಾ) ಪ್ರಕಾಶಿಸಲಿ ಎಂಬ ಅರ್ಥವನ್ನು ಕೊಡುವ ಈ ಋಕ್ಕುಗಳನ್ನು ಪಠಿಸಿರುವುದು ಸಹಜವಾಗಿದೆ.

ಸ ಯದಿ ನ ಜಾಯೇತ ಯದಿ ಚಿರಂ ಜಾಯೇತ ರಾಕ್ಷೋಘ್ನ್ಯೋ ಗಾಯತ್ರ್ಯೋಽನೂಚ್ಯಾಃ
ಅಗ್ನೇ ಹಂಸಿನ್ಯತ್ರಿಣಮಿತ್ಯೇತಾಃ ರಕ್ಷಸಾಮುಪಹತ್ಯೈ ರಕ್ಷಾಂಸಿ ವಾ ಏನಂ ತರ್ಹ್ಯಾಲಭಂತೇ
ಯರ್ಹಿ ನ ಜಾಯತೇ ಯರ್ಹಿ ಚಿರಂ ಜಾಯತೇ ॥

ಹಿಂದೆ ಹೇಳಿದ ಐದು ಋಕ್ಕುಗಳನ್ನು ಪಠಿಸುತ್ತಾ ಅರಣಿಗಳಲ್ಲಿ ಅಗ್ನಿಮಂಥನವನ್ನು ಮಾಡಬೇಕು ಹೀಗೆ ಮಾಡಿದರೂ ಅಗ್ನಿಯು ಉತ್ಪತ್ತಿಯಾಗದೆ ಇದ್ದರೆ ಅಥವಾ ಬಹಳ ಕಾಲದವರೆಗೂ, ಹೊಗೆ ಮುಂತಾದ್ದು ಬರುತ್ತಾ ನಿಧಾನವಾಗಿ ಉತ್ಪತ್ತಿಯಾದರೆ ಆಗ ಗಾಯತ್ರೀಛಂದಸ್ಸಿನ ರಾಕ್ಷೋಘ್ನವೆಂಬ ಈ ಕೆಳಗಿನ ಸೂಕ್ತವನ್ನು ಪಠಿಸಬೇಕು.—

ಅಗ್ನೇ ಹಂಸಿ ನ್ಯ೧ ತ್ರಿಣಂ ದೀದ್ಯನ್ಮರ್ತ್ಯೇಷ್ವಾ । ಸ್ವೇ ಕ್ಷಯೇ ಶುಚಿವ್ರತ ॥
ಉತ್ತಿಷ್ಠಸಿ ಸ್ವಾಹುತೋ ಘೃತಾನಿ ಪ್ರತಿಮೋದಸೇ । ಯತ್ತ್ವಾ ಸ್ರುಚಃ ಸಮಸ್ಥಿರನ್ ॥
ಸ ಆಹುತೋ ವಿ ರೋಚತೇಽಗ್ನಿರೀಳೇನ್ಯೋ ಗಿರಾ । ಸ್ರುಚಾ ಪ್ರತೀಕಮಜ್ಯತೇ ॥
ಘೃತೇನಾಗ್ನಿಃ ಸಮಜ್ಯತೇ ಮಧುಪ್ರತೀಕ ಆಹುತಃ । ರೋಚಮಾನೋ ವಿಭಾವಸುಃ ।
ಜರಮಾಣಃ ಸಮಿಧ್ಯಸೇ ದೇವೇಭ್ಯೋ ಹವ್ಯವಾಹನ । ತಂ ತ್ವಾ ಹವಂತ ಮರ್ತ್ಯಾಃ ॥
ತಂ ಮರ್ತಾ ಅಮರ್ತ್ಯಂ ಘೃತೇನಾಗ್ನಿಂ ಸಪರ್ಯತ । ಅದಾಭ್ಯಂ ಗೃಹಪತಿಂ ॥
ಅದಾಭ್ಯೇನ ಶೋಚಿಷಾಗ್ನೇ ರಕ್ಷಸ್ತ್ವಂ ದಹ । ಗೋಪಾ ಋತಸ್ಯ ದೀದಿಹಿ ॥
ಸ ತ್ವಮಗ್ನೇ ಪ್ರತೀಕೇನ ಪ್ರತ್ಯೋಷ ಯಾತುಧಾನ್ಯಃ । ಉರುಕ್ಷಯೇಷು ದೀದ್ಯತ್ ॥
ತಂ ತ್ವಾ ಗೀರ್ಭಿರುರುಕ್ಷಯಾ ಹವ್ಯವಾಹಂ ಸಮೀಧಿರೇ । ಯಜಿಷ್ಠಂ ಮಾನುಷೇ ಜನೇ ॥
(ಋ. ಸಂ. ೧೦-೧೧೮-೧ ರಿಂದ ೯)

ಈ ಸೂಕ್ತದಲ್ಲಿ ಒಂಭತ್ತು ಋಕ್ಕುಗಳಿರುವುವು. ಇವುಗಳು ರಾಕ್ಷಸರನ್ನು ಓಡಿಸಿ ಅವರನ್ನು ಕೊಲ್ಲುವುವು. ಆದ್ದರಿಂದ ಈ ಋಕ್ಕುಗಳನ್ನು ಪಠಿಸುವುದರಿಂದ ರಾಕ್ಷಸರು ನಾಶವಾಗುವರು ಅಗ್ನಿಯನ್ನು ಮಥನಮಾಡುವ ಕಾಲದಲ್ಲಿ ಅಗ್ನಿಯು ಉತ್ಪನ್ನನಾಗದಿರುವುದೂ ಅಥವಾ ವಿಳಂಬವಾಗಿ ಉತ್ಪನ್ನವಾಗುವುದೂ ಸಹ ಏತಕ್ಕೆಂದರೆ, ಈ ರಾಕ್ಷಸರು ಅಗ್ನಿಯನ್ನು ಪ್ರತಿಬಂಧಿಸಿ ಅವನನ್ನು ಬಿಡದೆ ತಮ್ಮ ಅಧೀನದಲ್ಲಿಟ್ಟುಕೊಂಡಿರುವರು. ಆದುದರಿಂದ ಅಗ್ನಿಯನ್ನು ಬಿಡುಗಡೆಮಾಡುವುದಕ್ಕಾಗಿ ರಾಕ್ಷಸರ ಹನನವು ಅವಶ್ಯಕವು. ಅದಕ್ಕಾಗಿ ಈ ಒಂಭತ್ತು ಋಕ್ಕುಗಳ ರಕ್ಷೋಹನನಸೂಕ್ತವನ್ನು ಪಠಿಸಬೇಕೆಂದು ಹೇಳಿರುವುದು.

ಸ ಯದ್ಯೇಕಸ್ಯಾಮೇವಾನೂಕ್ತಾಯಾಂ ಜಾಯೇತ ಯದಿ ದ್ವಯೋರಥೋತ ಬ್ರುವಂತು ಜಂತವ ಇತಿ ಜಾತಾಯ ಜಾತವತೀಮಭಿರೂಪಾಮನುಬ್ರೂಯಾತ್ ||

ರಕ್ಷೋಘ್ನಸೂಕ್ತವನ್ನು ಪಠಿಸುತ್ತಿರುವಾಗ ಮಧ್ಯದಲ್ಲಿ ಒಂದು ಋಕ್ಕನ್ನು ಪಠಿಸಿದ ಮೇಲೆ ಅಗ್ನಿಯು ಉತ್ಪನ್ನವಾದರೆ ಅಥವಾ ಎರಡು, ಮೂರು ಇತ್ಯಾದಿ ಋಕ್ಕುಗಳ ಪಠನಾನಂತರ ಉತ್ಪನ್ನವಾದರೆ ಆ ಕ್ಷಣವೇ,

ಉತ ಬ್ರುವಂತು ಜಂತವ ಉದಗ್ನಿರ್ವೃತ್ರಹಾಜನಿ | ಧನಂಜಯೋ ರಣೇರಣೇ ||

(ಋ. ಸಂ. ೧-೭೪-೩)

ಎಂಬ ಋಕ್ಕನ್ನು ಕೂಡಲೇ ಪಠಿಸಬೇಕು ಏಕೆಂದರೆ, ಈ ಋಕ್ಕಿನಲ್ಲಿ ಪ್ರತಿಪಾದಿತವಾಗಿರುವ ವಿಷಯವು ಅಗ್ನಿಯ ಉತ್ಪತ್ತಿಗೆ ಅನುಕೂಲವಾಗಿರುವುದು. ಈ ಅನುಕೂಲವಾಗಿರುವುದೆಂಬ ವಿಷಯವನ್ನು ಹೇಳುವುದಕ್ಕಾಗಿಯೇ ಜಾತವತೀಂ ಎಂಬ ಶಬ್ದಪ್ರಯೋಗವಿರುವುದು. ಅನಂತರ ಉದಗ್ನಿರ್ವೃತ್ರಹಾಜನಿ ಎಂಬ ಎರಡನೆಯ ಪಾದದಲ್ಲಿ ಅಜನಿ ಉತ್ಪನ್ನನಾದನು ಎಂಬ ಜನ್ಮಸೂಚಕವಾದ ಪದವು ಪಠಿತವಾಗಿದೆ. ಆದುದರಿಂದ ಅಗ್ನಿಯು ಉತ್ಪತ್ತಿಯಾದ ಕೂಡಲೇ ಅನುರೂಪವಾದ ಈ ಋಕ್ಕನ್ನು ಆ ಕೂಡಲೇ ಪಠಿಸಬೇಕೆಂದು ಹೇಳಿರುವುದು.

ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ಆ ಯಂ ಹಸ್ತೇನ ಖಾದಿನಮಿತಿ ಹಸ್ತಾಭ್ಯಾಂ ಹ್ಯೇನಂ ಮಂಥಂತಿ ಶಿಶುಂ ಜಾತಮಿತಿ ಶಿಶುರಿವ ವಾ ಏಷ ಪ್ರಥಮಜಾತೋ ಯದಗ್ನಿಃ ನ ಬಿಭ್ರತಿ ವಿಶಾಮಗ್ನಿಂ ಸ್ವಧ್ವರಮಿತಿ ಯದ್ವೈ ದೇವಾನಾಂ ನೇತಿ ತದೇಷಾಮೋಂ ಇತಿ ಪ್ರ ದೇವಂ ದೇವ-ವೀತಯೇ ಭರತಾ ವಸುವಿತ್ತಮಮಿತಿ ಪ್ರಹ್ರಿಯಮಾಣಾಯಾಭಿರೂಪಾ ಯದ್ಯಜ್ಞೇಽಭಿರೂಪ-ತತ್ಸಮೃದ್ಧಂ ಆ ಸ್ವೇ ಯೋನೌ ನಿಷೀದತ್ವಿತಿ ಏಷ ಹ ವಾ ಅಸ್ಯ ಸ್ವೋ ಯೋನಿರ್ಯ-ದಗ್ನಿರಗ್ನೇಃ ||

ಇದುವರೆಗೆ ಅಗ್ನಿಮಥನಕ್ಕಾಗಿ ಪ್ರಯೋಗಿಸಲ್ಪಡುವ ಆರು ಋಕ್ಕುಗಳನ್ನು (ಅಭಿತ್ವಾ, ಮಹೀದ್ಯೌಃ, ತ್ವಾಮಗ್ನೇ ತಮುತ್ವಾ, ಉತ ಬ್ರುವಂತು ಎಂಬ ಆರು ಋಕ್ಕುಗಳನ್ನು) ಹೇಳಿ ಈಗ—

ಆ ಯಂ ಹಸ್ತೇ ನ ಖಾದಿನಂ ಶಿಶುಂ ಜಾತಂ ನ ಬಿಭ್ರತಿ | ವಿಶಾಮಗ್ನಿಂ ಸ್ವಧ್ವರಂ ||

(ಋ. ಸಂ. ೬-೧೬-೪೦)

ಎಂಬ ಏಳನೆಯ ಋಕ್ಕನ್ನು ಹೋತೃವು ಪಠಿಸುವನು. ಈ ಋಕ್ಕಿನ ಅರ್ಥವು ಈರೀತಿ ಇರುವುದು. ಹೊಸದಾಗಿ

ಹುಟ್ಟಿದ ಮಗುವನ್ನು ಕೈಗಳಿಂದ ಎತ್ತಿಕೊಳ್ಳುವಂತೆ ಅರಣಿಯಲ್ಲಿ ಉತ್ಪನ್ನನಾದ ಅಗ್ನಿಯನ್ನು ಋತ್ವಿಕ್ಕುಗಳು ಕೈಗಳಿಂದ ಎತ್ತಿಕೊಳ್ಳುವರು. ಈ ಶಿಶುರೂಪದ ಅಗ್ನಿಯು ಪ್ರಜೆಗಳು ಮಾಡುವ ಯಜ್ಞದಲ್ಲಿ ಮುಖ್ಯಪಾತ್ರವಹಿಸು ವವನಾಗಿಯೂ, ಹವಿರಾದಿಗಳನ್ನು ಭಕ್ಷಿಸುವವನಾಗಿಯೂ ಇರುವನು, ಎಂದು ಇದರ ಮುಖ್ಯಾಭಿಪ್ರಾಯವು. ಮೊದಲನೆಯ ಪಾದದಲ್ಲಿ ಹಸ್ತಶಬ್ದ ಪ್ರಯೋಗವು— ಈ ಅಗ್ನಿಯನ್ನು ಋತ್ವಿಕ್ಕುಗಳು ತಮ್ಮ ಹಸ್ತಗಳಿಂದ ಮಥಿಸುವರು. ಆದ್ದರಿಂದ ಕೈಗಳಲ್ಲಿ ಎತ್ತಿಕೊಳ್ಳುವರು ಎಂದು ಹೇಳಿದೆ. ಎರಡನೆಯ ಪಾದದಲ್ಲಿ ಆಗತಾನೇ ಉತ್ಪನ್ನನಾದ ಅಗ್ನಿಗೆ, ಹುಟ್ಟಿದ ಮಗುವಿನ ದೃಷ್ಟಾಂತವನ್ನು ಹೇಳಿದೆ. ಇಲ್ಲಿ ಉಪಯೋಗಿಸುವ ನ ಎಂಬ ಪದವು ಓಂ ಎಂಬ ಅಂಗೀಕಾ ರಾರ್ಥವನ್ನು ಸೂಚಿಸುವುದು. ಲೋಕಭಾಷೆಯಲ್ಲಿ ನ ಎಂಬ ಶಬ್ದವು ನಿಷೇಧಾರ್ಥವನ್ನು ಮಾತ್ರ ಸೂಚಿಸುವುದು. ಆದರೆ ವೇದಗಳಲ್ಲಿ ಈ ಶಬ್ದವು ನಿಷೇಧಾರ್ಥವನ್ನೂ, ಉಪಮಾರ್ಥವನ್ನೂ, ಅಂಗೀಕಾರಾರ್ಥವನ್ನೂ ಸೂಚಿಸುವುದು ಇಲ್ಲಿ ಅಂಗೀಕಾರಾರ್ಥವೆಂದೇ ಅಭಿಪ್ರಾಯವು. ಮತ್ತು ದೇವಾನಾಂ ಎಂಬ ಪದಕ್ಕೆ ದೇವತೆಗಳನ್ನು ಪ್ರತಿಪಾದಿಸುವ ಮಂತ್ರಗಳಿಂದಾಗಲಿ ಅಥವಾ ವರ್ಣವ್ಯತ್ಯಯದಿಂದ ವೇದಾನಾಂ—ವೇದಗಳ ಸಂಬಂಧವಾದ ಎಂದಾಗಲಿ ಅರ್ಥವಾಗ ಬಹುದು. ಇನ್ನು ಅಗ್ನಿಮಥನದ ಎಂಟನೆಯ ಋಕ್ಕನ್ನು, ಎಂದರೆ—

**ಪ್ರ ದೇವಂ ದೇವವೀತಯೇ ಭರತಾ ವಸುವಿತ್ತಮಂ । ಆ ಸ್ವೇ ಯೋನೌ ನಿ ಷೀದತು ॥**

(ಋ. ಸಂ. ೬-೧೬-೪೧)

ಎಂಬ ಋಕ್ಕನ್ನು ಹೋತೃವು ಪಠಿಸುವನು. ಎಲೈ ಋತ್ವಿಜರೇ, ಈಗ ಉತ್ಪನ್ನನಾದ ಅಗ್ನಿಯನ್ನು ಅವನ ಸ್ವಸ್ಥಾನವಾದ ಆಹವನೀಯಕುಂಡದಲ್ಲಿ ಇಡಿರಿ. ಅಗ್ನಿಯ ಸ್ವಸ್ಥಾನವಾದ ಅಲ್ಲಿ ಅವನು ಕೂತುಕೊಳ್ಳಲಿ ಎಂಬರ್ಥವಿರುವ ಈ ಋಕ್ಕು ಅಗ್ನಿಯನ್ನು ಆಹವನೀಯಕುಂಡದಲ್ಲಿ ಇಡುವ ಕರ್ಮಕ್ಕೆ ಸಮುಯೋಚಿತವಾಗಿರುವುದು. ಇಲ್ಲಿ ಪ್ರತಿಕರ್ಮದಲ್ಲಿಯೂ ಪಠಿಸುವ ಪ್ರೈಷಮಂತ್ರಕ್ಕೆ ಅನುಸಾರವಾಗಿ ಹೋತೃವು ಆಯಾ ಕರ್ಮಕ್ಕೆ ಸಮುಯೋಚಿತವಾದುದೂ ಸರಿಯಾದ ಅರ್ಥ ವುಳ್ಳದ್ದೂ ಆದ ಮಂತ್ರವನ್ನು ಪಠಿಸುವನು. ಹೇಗೆಂದರೆ-ಅಗ್ನಿಯು ಉತ್ಪನ್ನನಾದಕೂಡಲೇ ಅಧ್ವರ್ಯುವು ಹೋತೃ ವನ್ನು ಕುರಿತು— **ಜಾತಾಯಾನುಬ್ರೂ ಹಿ** ಎಂದು ಪ್ರೈಷಮಂತ್ರವನ್ನು ಹೇಳುವನು. ಅದಕ್ಕೆ ಪ್ರತ್ಯುತ್ತರವಾಗಿ ಹೋತೃವು ಸಮುಯೋಚಿತವಾದ **ಉತ ಬ್ರುವಂತು ಜಂತವಃ** ಎಂಬ ಋಕ್ಕನ್ನು ಪಠಿಸುವನು. ಹಾಗೆಯೇ ಉತ್ಪನ್ನ ನಾದ ಅಗ್ನಿಯನ್ನು ಆಹವನೀಯವೆಂಬ ಕುಂಡದಲ್ಲಿ ಇಡುವಾಗ ಅಧ್ವರ್ಯುವು—**ಪ್ರಹ್ರಿಯಮಾಣಾಯಾನುಬ್ರೂಹಿ** ಎಂದು ಪ್ರೈಷಮಂತ್ರವನ್ನು ಹೇಳಿದಕೂಡಲೇ ಹೋತೃವು ಆ ಸಂದರ್ಭಕ್ಕೆ ಸರಿಯಾದ **ಪ್ರ ದೇವಂ ದೇವವೀತಯೇ** ಎಂಬ ಋಕ್ಕನ್ನು ಪಠಿಸುವನು. ಇದರಂತೆ ಪ್ರತಿ ಕರ್ಮದಲ್ಲಿಯೂ ನಡೆಯುವುದೆಂದು ತಿಳಿಯಬೇಕು. ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ ಈ ವಿಷಯವಾಗಿ—

**ಅಗ್ನಯೇ ಮಥ್ಯಮಾನಾಯಾನುಬ್ರೂಹೀತ್ಯಾಹ ಸಾವಿತ್ರೀಮೃಚಮನ್ವಾಹ ಸವಿತೃಪ್ರಸೂತ ಏವೈನಂ ಮಂಥತಿ ಜಾತಾಯಾನುಬ್ರೂಹಿ ಪ್ರಹ್ರಿಯಮಾಣಾಯಾನುಬ್ರೂಹೀತ್ಯಾಹ ಕಾಂಡೇಕಾಂಡ ಏವೈನಂ ಕ್ರಿಯಾಮಣೇ ಸಮರ್ಧಯತಿ ಗಾಯತ್ರೀಃ ಸರ್ವಾ ಅನ್ವಾಹ ॥**

(ತೈ. ಸಂ. ೬-೩-೫-೨, ೩)

ಇತ್ಯಾದಿ. ಈ ವಿಷಯವನ್ನೇ ಇಲ್ಲಿ **ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ** ಎಂಬ ವಾಕ್ಯದಿಂದ ವಿವರಿಸಿರುವುದು. ಎಂದರೆ ಆಯಾ ಕರ್ಮಗಳಲ್ಲಿ ಆಯಾ ಕರ್ಮಕ್ಕೆ ತಕ್ಕಂತೆ ಅನುರೂಪವಾದ ಮಂತ್ರಗಳನ್ನು ಹೇಳಿ ಯಜ್ಞವನ್ನು ನೆರವೇರಿಸಬೇಕೆಂದು ಮುಖ್ಯಾಭಿಪ್ರಾಯವು. ಕೊನೆಯಲ್ಲಿ **ಆ ಸ್ವೇ ಯೋನೌ ನಿಷೀದತು** ಎಂದು ಹೇಳಿದ ಕೂಡಲೇ

ಅಗ್ನಿಯನ್ನು ಆಹವನೀಯಕುಂಡದಲ್ಲಿ ಸ್ಥಾಪಿಸುವರು. ಏಕೆಂದರೆ ಆಹವನೀಯಸ್ಥಾನವೇ ಮಥಿತನಾದ (ಆಗತಾನೇ ಉತ್ಪನ್ನನಾದ) ಅಗ್ನಿಯ ಸ್ಥಾನವೆಂದು ಹೇಳಲ್ಪಡುವುದು.

> ಆಜಾತಂ ಜಾತವೇದಸೀತಿ ಜಾತ ಇತರೋ ಜಾತವೇದಾ ಇತರಃ ಪ್ರಿಯಂ ಶಿಶೀತಾತಿಥಿಮಿತ್ಯೇಷ ಹ ವಾ ಅಸ್ಯ ಪ್ರಿಯೋಽತಿಥಿರ್ಯದಗ್ನಿರಗ್ನೇಃ ಸ್ಯೋನ ಆ ಗೃಹಪತಿಮಿತಿ ಶಾಂತ್ಯಾಮೇವೈನಂ ತದ್ದಧಾತಿ । ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ । ಹವ್ಯವಾಡ್ಜುಹ್ವಾಸ್ಯ ಇತ್ಯಭಿ-ರೂಪಾ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ । ತ್ವಂ ಹ್ಯಗ್ನೇ ಅಗ್ನಿನಾ ವಿಪ್ರೋ ವಿಪ್ರೇಣ ಸನ್ತ್ಸತೇತಿ ವಿಪ್ರ ಇತರೋ ವಿಪ್ರ ಇತರಃ ಸನ್ನಿತರಃ ಸನ್ನಿತರಃ ಸಖಾ ಸಖ್ಯಾ ಸಮಿಧ್ಯಸ ಇತ್ಯೇಷ ಹ ವಾ ಅಸ್ಯ ಸ್ವಃ ಸಖಾ ಯದಗ್ನಿರಗ್ನೇಃ ॥

ಈಗ ಹೋತೃವು ಒಂಭತ್ತನೇ ಋಕ್ಕಾದ—

> ಆ ಜಾತಂ ಜಾತವೇದಸಿ ಪ್ರಿಯಂ ಶಿಶೀತಾತಿಥಿಂ । ಸ್ಯೋನ ಆ ಗೃಹಪತಿಂ ॥
>
> (ಋ. ಸಂ. ೬-೧೬-೪೨)

ಎಂಬ ಮಂತ್ರವನ್ನು ಪಠಿಸುವನು. ಈ ಋಕ್ಕಿನ ಮುಖ್ಯಾಭಿಪ್ರಾಯವೇನೆಂದರೆ—ಈ ಋಕ್ಕಿನಲ್ಲಿ ಎರಡು ವಿಧವಾದ ಅಗ್ನಿಗಳನ್ನು ನಿರ್ದೇಶಿಸಿದೆ. ಜಾತಂ—ಎಂದರೆ ಆಗತಾನೆ ಮಥನಮಾಡಿ ಉತ್ಪತ್ತಿಮಾಡಿರುವ ಅಗ್ನಿಯು ಮೊದಲನೆಯದು, ಆಗತಾನೇ ಉತ್ಪನ್ನವಾದುದರಿಂದ ಇದನ್ನು ಜಾತಂ ಎಂಬ ಪದದಿಂದ ನಿರ್ದೇಶಿಸಿರುವುದು.. ಆಹವನೀಯಾಗ್ನಿಕುಂಡದಲ್ಲಿ ಮೊದಲೇ ಸ್ಥಾಪಿತವಾಗಿರುವುದು ಎರಡನೆಯದು. ಇದಕ್ಕೆ ಜಾತವೇದಸಂ ಎಂದು ಹೇಳುವರು. ಮಥನದಿಂದ ಉತ್ಪನ್ನವಾದ ಅಗ್ನಿಯ ಸ್ವರೂಪವನ್ನು ತಿಳಿದಿರುವವನಾದ್ದರಿಂದ ಆಹವನೀಯಾಗ್ನಿಗೆ ಜಾತವೇದಸಂ ಎಂದು ಅರ್ಥವಿವರಣೆಮಾಡಿದೆ. ಇಲ್ಲಿ ಆಹವನೀಯಾಗ್ನಿಸ್ಥಾನದಲ್ಲಿ ಮೊದಲೇ ಸ್ಥಾಪಿತವಾಗಿದ್ದ ಜಾತವೇದಸವೆಂಬ ಅಗ್ನಿಗೆ ಹೊಸದಾಗಿ ಮಥಿತವಾದ ಅಗ್ನಿಯು ಪ್ರೀತಿಪಾತ್ರನಾದ ಅತಿಥಿಯಂತಿರುವುದು. ಆದುದರಿಂದ ಪ್ರಿಯನೂ, ಅತಿಥಿಸ್ವರೂಪನೂ ಆದ ಈ ಮಥಿತಾಗ್ನಿಯನ್ನು ಸುಖನಿವಾಸಸಿದ್ಧಿಗಾಗಿ ಆಹವನೀಯಾಗ್ನಿಕುಂಡದಲ್ಲಿ ಸ್ಥಾಪಿಸಲಾಗುವುದ ಎಂದು ಮುಖ್ಯಾಭಿಪ್ರಾಯವು. ಅನಂತರ ಹೋತೃವು—

> ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ । ಹವ್ಯವಾಡ್ಜುಹ್ವಾಸ್ಯಃ ॥
>
> (ಋ. ಸಂ. ೧-೧೨-೬)

ಎಂಬ ಹತ್ತನೆಯ ಋಕ್ಕನ್ನು ಪಠಿಸುವನು. ಇದರ ಅರ್ಥವು—ಮೊದಲೇ ಆಹವನೀಯ ಕುಂಡದಲ್ಲಿ ಸ್ಥಾಪಿಸಿದ್ದ ಅಗ್ನಿಯ ಜೊತೆಗೆ ಹೊಸದಾಗಿ ಮತಿಥವಾದ ಅಗ್ನಿಯು ಸೇರಿ ಚೆನ್ನಾಗಿ ಪ್ರಕಾಶಮಾನವಾಗಿ ಬೆಳಗುವುದು ಈ ಮಥಿತಾಗ್ನಿಯು ಸರ್ವವನ್ನು ತಿಳಿಯುವ ಕ್ರಾಂತದರ್ಶಿಯು, ಗೃಹದ ಅಥವಾ ಯಜಮಾನನ ಪಾಲಕನು, ನಿತ್ಯತರುಣನು, ದೇವತೆಗಳಿಗೆ ಹವ್ಯಾದಿಗಳನ್ನು ವಹಿಸುವವನು, ಜುಹೂ ಎಂಬ ಹೋಮಸಾಧನವಾದ ಸೌಟನ್ನು ಮುಖದಲ್ಲಿ ( ಬಾಯಲ್ಲಿ ) ಇಟ್ಟುಕೊಂಡಿರುವವನು. (ಎಂದರೆ ಜುಹೂ ಎಂಬ ಸೌಟಿನಿಂದ ಆಜ್ಯಾದಿಗಳನ್ನು ಅಗ್ನಿಯ ಜ್ವಾಲೆಯಲ್ಲಿ ಹೋಮಮಾಡುವುದರಿಂದ ಜುಹ್ವಾಸ್ಯಃ ಎಂದು ಅಗ್ನಿಯನ್ನು ಕರೆಯಲಾಗಿದೆ.) ಈ ರೀತಿ ಕಾಲಕ್ಕೆ ಅನುರೂಪವಾದ ಮಂತ್ರವನ್ನು ಇಲ್ಲಿ ಪಠಿಸಲಾಗಿದೆ. ಇದಾದ ಬಳಿಕ ಹೋತೃವು—

ತ್ವಂ ಹ್ಯಗ್ನೇ ಅಗ್ನಿನಾ ವಿಪ್ರೋ ವಿಪ್ರೇಣ ಸನ್ತ್ಸತಾ । ಸಖಾ ಸಖ್ಯಾ ಸಮಿಧ್ಯಸೇ ॥
(ಋ. ಸಂ. ೮-೪೩-೧೪)

ಎಂಬ ಋಕ್ಕನ್ನು ಪಠಿಸುವನು. ಎಲೈ ನೂತನಾಗ್ನಿಯೇ, ಮೇಧಾವಿಯಾದ ನೀನು ಮೇಧಾವಿಯಾದ ಆಹವನೀಯಾಗ್ನಿನೊಡನೆ ಸೇರಿ, ಸ್ನೇಹಿತನು ಸ್ನೇಹಿತನೊಡನೆ ಸೇರಿ ಸುಖಿಸುವಂತೆ ಸುಖವಾಗಿರು ಎಂದಭಿಪ್ರಾಯವು.

ತಂ ಮರ್ಜಯಂತ ಸುಕ್ರತುಂ ಪುರೋಯಾವಾನಮಾಜಿಷು । ಸ್ವೇಷು ಕ್ಷಯೇಷು ವಾಜಿನಮಿತಿ ಏಷ ಹ ವಾ ಅಸ್ಯ ಸ್ವಃ ಕ್ಷಯೋ ಯದಗ್ನಿರಗ್ನೇಃ । ಯಜ್ಞೇನ ಯಜ್ಞಮಯಜಂತ ದೇವಾ ಇತ್ಯುತ್ತಮಯಾ ಪರಿದಧಾತಿ । ಯಜ್ಞೇನ ವೈ ತದ್ದೇವಾ ಯಜ್ಞಮಯಜಂತ ಯದಗ್ನಿನಾಗ್ನಿ-ಮಯಜಂತ ತೇ ಸ್ವರ್ಗಂ ಲೋಕಮಾಯನ್ ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾ ಇತಿ ಛಂದಾಸಿ ವೈ ಸಾಧ್ಯಾ ದೇವಾಸ್ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಮಾಯನ್ ॥

ಅನಂತರ ಹೋತೃವು—**ತಂ ಮರ್ಜಯಂತ ಸುಕ್ರತುಂ** (ಋ. ಸಂ. ೮-೮೫-೮) ಎಂಬ ಋಕ್ಕನ್ನು ಪಠಿಸುವನು. ಹೀಗೆ ಹೇಳಿ ಅಗ್ನಿಯ ಸ್ವಕೀಯನಿವಾಸಸ್ಥಾನವಾದ ಆಹವನೀಯಾಗ್ನಿಯಲ್ಲಿ ಸ್ಥಾಪಿಸಿ ಅನಂತರ ಅಗ್ನಿಮಥನದಲ್ಲಿ ಕೊನೆಯ ಋಕ್ಕಾದ ಎಂದರೆ ೧೩ ನೆಯ ಋಕ್ಕಾದ **ಯಜ್ಞೇನ ಯಜ್ಞಮಯಜಂತ ದೇವಾಃ** (ಋ. ಸಂ. ೧೦-೯೦-೧೬) ಎಂಬ ಋಕ್ಕನ್ನು ಹೋತೃವು ಪಠಿಸಿ ಅಗ್ನಿಮಥನಕಾರ್ಯವನ್ನು ಮುಗಿಸುವನು. ಇಲ್ಲಿ ಮಥಿತಾಗ್ನಿಯನ್ನು (ಪ್ರಹ್ರಿಯಮಾಣಾಗ್ನಿಯನ್ನು) ಆಹವನೀಯಾಗ್ನಿಯೊಡನೆ ಸೇರಿಸಿ ಸ್ಥಾಪಿಸುವುದೇ **ಅಗ್ನಿನಾಗ್ನಿಮಯಜಂತ** ಎಂದು ಹೇಳಲ್ಪಡುವುದು. ಅಥವಾ ಈ ಕರ್ಮವನ್ನೇ **ಯಜ್ಞೇನ ಯಜ್ಞಮಯಜಂತ ದೇವಾಃ** ಎಂಬ ಕೊನೆಯ ಋಕ್ಕಿನಲ್ಲಿ ಹೇಳಿರುವುದು. ಇಲ್ಲಿ ಸಾಧ್ಯಾಃ ಎಂಬ ಶಬ್ದಕ್ಕೆ ಗಾಯತ್ರ್ಯಾದಿ ಛಂದಸ್ಸುಗಳಿಗೆ ಅಭಿಮಾನಿ ದೇವತೆಗಳು ಎಂದರ್ಥವು. ಈ ದೇವತೆಗಳು ಪೂರ್ವದಲ್ಲಿ ಮಥಿತಾಗ್ನಿಯಿಂದ ಆಹವನೀಯಾಗ್ನಿಯನ್ನು ಪೂಜಿಸಿದರು. ಆದರಿಂದ ಅವರು ಸ್ವರ್ಗಲೋಕವನ್ನು ಪಡೆದರು.

ಆದಿತ್ಯಾಶ್ಚೈವೇಹಾಸನ್ನಂಗಿರಸಶ್ಚ ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾ-ಯನ್ ಸೈಷಾ ಸ್ವರ್ಗ್ಯಾಹುತಿರ್ಯದಗ್ನ್ಯಾಹುತಿರ್ಯದಿ ಹ ವಾ ಅಪ್ಯಬ್ರಾಹ್ಮಣೋಕ್ತೋ ಯದಿ ದುರುಕ್ತೋಕ್ತೋ ಯಜತೇಽಥ ಹೈಷಾಹುತಿರ್ಗಚ್ಛತ್ಯೇವ ದೇವಾನ್ನ ಪಾಪ್ಮನಾ ಸಂಸೃಜ್ಯತೇ ಗಚ್ಛತ್ಯಸ್ಯಾಹುತಿರ್ದೇವಾನ್ನಾಸ್ಯಾಹುತಿಃ ಪಾಪ್ಮನಾ ಸಂಸೃಜ್ಯತೇ ಯ ಏವಂ ವೇದ ॥

ಇದರಂತೆಯೇ ಆದಿತ್ಯರೂ, ಅಂಗಿರಸರೂ ಹಿಂದೆ ಹೇಳಿದಂತೆ ಯಜ್ಞವನ್ನು ಮಾಡಿ ಸ್ವರ್ಗಲೋಕಕ್ಕೆ ಹೋದರು ಈ ಅಗ್ನ್ಯಾಹುತಿಯು ಸ್ವರ್ಗಲೋಕಕ್ಕೆ ನೇರವಾದ ಮಾರ್ಗವು. ಇಂತಹ ಯಜ್ಞಕರ್ಮದಲ್ಲಿ ಪ್ರವರ್ತಿಸುತ್ತಿರುವಾಗ ಮುಖ್ಯಪುರೋಹಿತನು ಶಾಸ್ತ್ರೋಕ್ತವಾದ ಬ್ರಾಹ್ಮಣನಲ್ಲದಿದ್ದರೂ, ಅಥವಾ ಕೆಟ್ಟಮನುಷ್ಯನಾದರೂ ಯಜ್ಞದಲ್ಲಿ ನೆರವೇರಿಸಲ್ಪಡುವ ಅಗ್ನ್ಯಾಹುತಿಯು ಮಾತ್ರ ಯಜಮಾನನನ್ನು ಸ್ವರ್ಗಕ್ಕೆ ಸೇರಿಸುವುದು. ಪುರೋಹಿತನ ದೋಷಾದಿಗಳು ಯಜ್ಞಮಾಡುವ ಯಜಮಾನನಿಗೆ ಸಂಬಂಧಪಡುವುದಿಲ್ಲ. ಎಂದರೆ ಅದರಿಂದ ಯಜಮಾನನಿಗೆ ಕೆಡಕಾಗುವುದಿಲ್ಲ ಮೇಲೆ ವಿವರಿಸಿರುವ ಈ ಅಗ್ನ್ಯಾಹುತಿಯ ಕ್ರಮವನ್ನು ಯಾವನು ತಿಳಿದಿರುವನೋ ಅವನು. ಸ್ವರ್ಗದಲ್ಲಿ ದೇವತೆಗಳನ್ನು ಸೇರುವನು. ಅವನಿಗೆ ಯಾವ ವಿಧವಾದ ಪಾಪದ ಸಂಪರ್ಕವೂ ಇರುವುದಿಲ್ಲ.

ಇಲ್ಲಿ ಶಾಸ್ತ್ರೋಕ್ತವಾದ ಬ್ರಾಹ್ಮಣನಲ್ಲದಿದ್ದರೂ ಎಂದು ಮೇಲಿನ ವಾಕ್ಯದಲ್ಲಿ ಹೇಳಿರುವುದಷ್ಟೆ. ಅದಕ್ಕೆ ವಿವರಣೆಯು ಅವಶ್ಯಕವು—ಜನ್ಮಮಾತ್ರದಿಂದ ಬ್ರಾಹ್ಮಣನಾಗಿ ಯಾಜನಾಧಿಕಾರವನ್ನು (ಯಜ್ಞಮಾಡಿಸುವ ಅಧಿಕಾರವನ್ನು) ಪಡೆದಿದ್ದರೂ ಕೆಲವು ಬ್ರಾಹ್ಮಣರು ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ದೋಷಭಾಗಿಗಳಾಗುವರು ಈ ಅಬ್ರಾಹ್ಮಣರಲ್ಲಿ ಆರು ವಿಧವೆಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವುದು. ಹೇಗೆಂದರೆ—

ಅಬ್ರಾಹ್ಮಣಾಸ್ತು ಷಟ್ ಪ್ರೋಕ್ತಾ ಇತಿ ಶಾತಾತಪೋಽಬ್ರವೀತ್ ।
ಆದ್ಯಸ್ತು ರಾಜಭೃತ್ಯಃ ಸ್ಯಾದ್ದ್ವಿತೀಯಃ ಕ್ರಯವಿಕ್ರಯೀ ।
ತೃತೀಯೋ ಬಹುಯಾಜ್ಯಾಖ್ಯಶ್ಚತುರ್ಥೋಽಶ್ರೌತಯಾಜಕಃ ।
ಪಂಚಮೋ ಗ್ರಾಮಯಾಜೀ ಚ ಷಷ್ಠೋ ಬ್ರಹ್ಮಬಂಧುಃ ಸ್ಮೃತಃ ॥

ಅಬ್ರಾಹ್ಮಣರೆಂದರೆ ಯಾರು ಎಂಬ ವಿಷಯದಲ್ಲಿ ಶಾತಾತಪರೆಂಬುವರು ಈ ರೀತಿ ಹೇಳಿರುವರು. (೧) **ರಾಜಭೃತ್ಯರು** ಎಂದರೆ ಜೀವನೋಪಾಯಕ್ಕಾಗಿ ರಾಜನನ್ನೇ ಆಶ್ರಯಿಸಿ ಅವನ ಸೇವೆಮಾಡುವವರು (೨) ಕ್ರಯವಿಕ್ರಯಾದಿಗಳಿಂದ ಜೀವಿಸುವವರು. ಅಂಗಡಿ ಮುಂತಾದ್ದನ್ನು ಇಟ್ಟು ಪದಾರ್ಥಗಳನ್ನು ಮಾರಿ ಜೀವಿಸುವವರು. (೩) ಜೀವನೋಪಾಯಕ್ಕೆ ಸಾಕಾದಷ್ಟು ವರಮಾನವಿದ್ದರೂ ಅಧಿಕಧನ ಸಂಪಾದನೆ ಮಾಡಬೇಕೆಂಬ ದುರಾಶೆಯಿಂದ ಯಾರಿಗೆಂದರವರಿಗೆ ಯಜ್ಞ (ಅಥವಾ ಪೌರೋಹಿತ್ಯ) ಮಾಡಿಸುವುದನ್ನೇ ತಮ್ಮವೃತ್ತಿಮಾಡಿಕೊಂಡಿರುವವರಿಗೆ ಬಹುಯಾಜಿಗಳೆಂದು ಹೆಸರು. (೪) **ಅಶ್ರೌತಯಾಜಕರು,** ಎಂದರೆ ಶ್ರೌತಕಾರ್ಯಗಳನ್ನು ಎಂದರೆ ಯಜ್ಞಾದಿಗಳನ್ನು ಮಾಡಲು ವೇದಾಧ್ಯಯನ ಸಂಪನ್ನರಾಗಿದ್ದರೂ ಆ ರೀತಿ ಶ್ರೌತಕರ್ಮಗಳಲ್ಲಿ ಪ್ರವರ್ತಿಸದೆ ಇತರರಿಗೂ ಮಾಡಿಸದೆ ಶ್ರೇಷ್ಠವಲ್ಲದ ಸ್ಮಾರ್ತಕರ್ಮಗಳಲ್ಲಿಯೇ ಪ್ರವರ್ತಿಸುವವರಿಗೆ ಅಶ್ರೌತಯಾಜಕರೆಂದು ಹೆಸರು. (೫) **ಗ್ರಾಮಯಾಜಕರು** ಎಂದರೆ, ಗ್ರಾಮಗಳಲ್ಲಾಗಲಿ, ನಗರಗಳಲ್ಲಾಗಲಿ, ಯೋಗ್ಯರಾಗಲಿ, ಅ ಯೋ ಗ್ಯ ರಾ ಗ ಲಿ ಯಾರಿಗೆ ಬೇಕಾದರೂ ದ್ರವ್ಯಾಶೆಗಾಗಿ ಯಜ್ಞಮಾಡಿಸತಕ್ಕವರಿಗೆ ಗ್ರಾಮನಗರಯಾಜಕರೆಂದು ಹೆಸರು. (೬) **ಬ್ರಹ್ಮಬಂಧು** ಎಂದರೆ ಸೂರ್ಯೋದಯಾಸ್ತಮಯಗಳಲ್ಲಿ ಕಾಲಕ್ಕೆ ಸರಿಯಾಗಿ ಸಂಧ್ಯಾದಿಕರ್ಮಗಳನ್ನು ಆಚರಿಸದೆ ಇರತಕ್ಕವರಿಗೆ ಬ್ರಹ್ಮಬಂಧುಗಳೆಂದು ಹೆಸರು ಈ ಆರು ವಿಧವಾದ ಪುರೋಹಿತರು ಮಾಡಿಸುವ ಕರ್ಮಕ್ಕೆ ಅಬ್ರಾಹ್ಮಣೋಕ್ತ ಅಥವಾ ದುರುಕ್ತೋಕ್ತ ಎಂದು ಮೇಲೆ ಹೇಳಿರುವುದು.

ತಾ ಏತಾಸ್ತ್ರಯೋದಶಾನ್ವಾಹ ರೂಪಸಮೃದ್ಧಾ ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣಮೃಗಭಿವದತಿ । ತಾಸಾಂ ತ್ರಿಃಪ್ರಥಮಾಮನ್ವಾಹ ತ್ರಿರುತ್ತಮಾಂ ತಾಃ ಸಪ್ತದಶ ಸಂಪದ್ಯಂತೇ ಸಪ್ತದಶೋ ವೈ ಪ್ರಜಾಪತಿರ್ದ್ವಾದಶ ಮಾಸಾಃ ಪಂಚರ್ತವಸ್ತಾವಾನ್ಸಂವತ್ಸರಃ ಸಂವತ್ಸರಃ ಪ್ರಜಾಪತಿಃ ಪ್ರಜಾಪತ್ಯಾಯತನಾಭಿರೇವಾಭೀರಾಧ್ನೋತಿ ಯ ಏವಂ ವೇದ ತ್ರಿಃ ಪ್ರಥಮಾಂ ತ್ರಿರುತ್ತಮಾಮನ್ವಾಹ ಯಜ್ಞಸ್ಯೈವ ತದ್ಬರ್ಸೌ ನಹ್ಯತಿ ಸ್ಥೇಮ್ನೇ ಬಲಾಯಾವಿಸ್ರಂಸಾಯ ॥

(ಐ ಬ್ರಾ. ೩-೫)

ಈ ರೀತಿ ಅಗ್ನಿಮಥನಕಾರ್ಯದಲ್ಲಿ ಉಪಯೋಗಿಸುವ ಋಕ್ಕುಗಳು ಒಟ್ಟು ಹದಿಮೂರು. ರಕ್ಷೋಘ್ನದೇವತಾಕವಾದ ೯ ಋಕ್ಕುಗಳು ಇದರಲ್ಲಿ ಸೇರುವುದಿಲ್ಲ. ಈ ಹದಿಮೂರು ಋಕ್ಕುಗಳನ್ನು ಆಯಾ ಕಾಲಗಳಲ್ಲಿ ಪಠಿಸುವುದರಿಂದ

ಅಗ್ನಿಮಥನ, ಅಗ್ನ್ಯುತ್ಪತ್ತಿ, ಅಗ್ನಿಯನ್ನು ತೆಗೆದುಕೊಂಡುಹೋಗಿ ಆಹವನೀಯದಲ್ಲಿ ಸ್ಥಾಪಿಸುವುದು, ಅಲ್ಲಿ ಆಹವನೀಯಾಗ್ನಿಯೊಡನೆ ಸೇರಿಸುವುದು ಎಂಬ ಈ ಕರ್ಮಗಳೆಲ್ಲಾ ಸಮಯೋಚಿತವಾದ ಋಕ್ಕುಗಳ ಪಠನದಿಂದ ಸಾಂಗವಾಗಿ ನೆರವೇರುವುವಕ್ಕೆ ರೂಪಸಮೃದ್ಧಿಯೆಂದು ಹೆಸರು. ಈ ಹದಿಮೂರು ಋಕ್ಕುಗಳಲ್ಲಿ ಮೊದಲನೆಯ ಋಕ್ಕನ್ನು (ಅಭಿ ತ್ವಾ ದೇವ ಸವಿತಃ ಎಂಬ ಋಕ್ಕನ್ನೂ) ಕೊನೆಯ ಋಕ್ಕನ್ನೂ (ಯಜ್ಞೇನ ಯಜ್ಞಮಯಜಂತ ದೇವಾಃ ಎಂಬ ಋಕ್ಕನ್ನೂ) ಹೋತೃವು ಮೂರಾವೃತ್ತಿ ಪಠಿಸಬೇಕು. ಆದ್ದರಿಂದ ಒಟ್ಟು ಈ ಅಗ್ನಿಮಥನಕಾರ್ಯದಲ್ಲಿ ಹದಿನೇಳು ಋಕ್ಕನ್ನು ಪಠಿಸಿದಂತಾಯಿತು. ಪ್ರಜಾಪತಿಯು ಸಪ್ತದಶಸಂಖ್ಯಾ (ಹದಿನೇಳು) ಸ್ವರೂಪನು. ಏಕೆಂದರೆ ಹನ್ನೆರಡು ತಿಂಗಳು, ಐದು ಋಕ್ಕುಗಳೂ ಸೇರಿ ಒಂದು ಸಂವತ್ಸರವಾಗುವುದು. ಆ ಸಂವತ್ಸರವೇ ಪ್ರಜಾಪತಿಯು ಆದುದರಿಂದ ಪ್ರಜಾಪತಿಯಲ್ಲಿ ನಿಹಿತವಾದ ಈ ಋಕ್ಕುಗಳ ಅರ್ಥವನ್ನು ತಿಳಿದವನು ಅಭಿವೃದ್ಧಿಯನ್ನು ಹೊಂದುತ್ತಾನೆ. ಮೊದಲನೆಯ ಮತ್ತು ಕೊನೆಯ ಋಕ್ಕುಗಳನ್ನು ಮೂರುಮೂರಾವರ್ತಿ ಪಠಿಸುವುದರಿಂದ ಯಜ್ಞದ ಕಟ್ಟುಗಳು (ಗಂಟುಗಳು) ದೃಢವಾಗಿಯೂ, ಬಿಗುವಾಗಿಯೂ ಆಗಿ ಜಾರಿಹೋಗದಂತೆ ಸ್ಥಿರವಾಗಿ ನಿಲ್ಲಲು ಅವಕಾಶವಾಗುವುದು ಎಂದು ಅಗ್ನಿಮಥನಕಾರ್ಯದ ಐತರೇಯಬ್ರಾಹ್ಮಣದಲ್ಲಿ (ಐ. ಬ್ರಾ. ೩-೫) ನಿರೂಪಿಸಲ್ಪಟ್ಟಿರುವುದು.

**ಅಗ್ನಿನಿರ್ಮಂಥನವಿಧಿಯು ಸಮಾಪ್ತವು.**

---

ಸಂಹಿತಾಪಾಠ

ತವಾಗ್ನೇ ಹೋತ್ರಂ ತವ ಪೋತ್ರಮೃತ್ವಿಯಂ ತವ ನೇಷ್ಟ್ರಂ ತ್ವಮಗ್ನಿದೃತಾಯತಃ ।
ತವ ಪ್ರಶಾಸ್ತ್ರಂ ತ್ವಮಧ್ವರೀಯಸಿ ಬ್ರಹ್ಮಾ ಚಾಸಿ ಗೃಹಪತಿಶ್ಚ ನೋ ದಮೇ ॥ ೨ ॥

॥ ಪದಪಾಠಃ ॥

ತವ । ಅಗ್ನೇ । ಹೋತ್ರಂ । ತವ । ಪೋತ್ರಂ । ಋತ್ವಿಯಂ । ತವ । ನೇಷ್ಟ್ರಂ । ತ್ವಂ । ಅಗ್ನಿತ್ । ಋತ್ಯಯತಃ ।
ತವ । ಪ್ರಶಾಸ್ತ್ರಂ । ತ್ವಂ । ಅಧ್ವರಿಯಸಿ । ಬ್ರಹ್ಮಾ । ಚ । ಅಸಿ । ಗೃಹಪತಿಃ । ಚ । ನಃ । ದಮೇ ॥ ೨ ॥

ಸಾಯಣಭಾಷ್ಯಂ

ಹೇ ಅಗ್ನೇ ಹೋತ್ರಂ ಹೋತುಃ ಕರ್ಮ ಶಸ್ತ್ರಯಾಜ್ಯಾದಿಲಕ್ಷಣಂ ಯದಸ್ತಿ ತದಪಿ ತವೈವ । ತ್ವದೀಯಮಿತ್ಯರ್ಥಃ । ತಥಾ ಪೋತ್ರಂ ಪೋತುಃ ಕರ್ಮ ಯದಸ್ತಿ ತದಪಿ ತವೈವ । ತಥಾ ಋತ್ವಿಯಂ

ಪ್ತಾಪ್ತೃಕಾಲವಾರ್ತ್ವಿಜ್ಯಂ ತವೈವ । ನೇಷ್ಟ್ರಂ ನೇಷ್ಟುಃ ಕರ್ಮ ಪ್ರಸ್ಥಿತಯಾಜ್ಯಾದಿರೂಪಂ ತವ । ಹೇ ಅಗ್ನೇ ತ್ವಮಗ್ನಿತ್ ಅಗ್ನೀಧ್ರಶ್ಚ ತ್ವಮೇವಾಸಿ । ತಥಾ ಋತಾಯತೋ ಯಜ್ಞಮಿಚ್ಛತಸ್ತವೈವ ಪ್ರಶಾಸ್ತ್ರಂ ಯತ್ಪ್ರಶಾಸ್ತುರ್ಮೈತ್ರಾವರುಣಸ್ಯ ಕರ್ಮ ತತ್ । ಹೇ ಅಗ್ನೇ ತ್ವಮಧ್ವರೀಯಸಿ । ಅಧ್ವರಂ ಯಜ್ಞಂ ಕಾಮಯಸೇ । ಅಧ್ವರ್ಯುರ್ಭವಸೀತ್ಯರ್ಥಃ । ತಥಾಧ್ವರ್ಯುಶಬ್ದವ್ಯುತ್ಪತ್ತೇಃ । ಅಧ್ವರ್ಯುರಧ್ವರಯುರಧ್ವರಂ ಕಾಮಯತ ಇತಿ ವೇತಿ ಹಿ ನಿರುಕ್ತಂ । ೧-೮ । ತಥಾ ಬ್ರಹ್ಮಾ ಬ್ರಹ್ಮಣಾಚ್ಛಂಸ್ಯಪ್ಯಸಿ । ತಥಾ ನೋ ದಮೇಽಸ್ಮದ್ಯಜ್ಞಗೃಹೇ ಗೃಹಪತಿಶ್ಚಾಸೀತಿ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಹೋತ್ರಂ—ಶಸ್ತ್ರಯಾಜ್ಯಾದಿಗಳನ್ನು ಪಠಿಸುವ ಹೋತೃವಿನ ಕರ್ಮವು । ತವ—ನಿನಗೆ ಸಂಬಂಧಿಸಿದುದು । ಪೋತ್ರಂ—ಪೋತೃವಿನ ಕರ್ಮವೂ । ತವ—ನಿನ್ನದೇ ಎಂದರೆ ನಿನಗೋಸ್ಕರವೇ (ಆಗಿದೆ) । ಋತ್ವಿಯಂ—ಋತ್ವಿಕ್ಕುಗಳ ಕರ್ಮವೂ । ನೇಷ್ಟ್ರಂ—ನೇಷ್ಟೃವಿನ ಕರ್ಮವೂ । ತವ—ನಿನ್ನದೇ ಆಗಿದೆ । ತ್ವಂ—ನೀನು । ಋತಾಯತಃ—ಯಜ್ಞವನ್ನು ಇಚ್ಛಿಸತಕ್ಕ ಯಜಮಾನನಿಗೆ । ಅಗ್ನಿತ್—ಅಗ್ನೀಧ್ರನಾಗಿದ್ದೀಯೆ । ಪ್ರಶಾಸ್ತ್ರಂ—ಪ್ರಶಾಸ್ತೃವಿನ ಕರ್ಮವೂ । ತವ—ನಿನ್ನದೇ । ತ್ವಂ—ನೀನು । ಅಧ್ವರೀಯಸಿ—ಅಧ್ವರ್ಯುವಾಗಿದ್ದೀಯೆ ಎಂದರೆ ಅಧ್ವರ್ಯುವು ಮಾಡುವ ಕೆಲಸವನ್ನುಮಾಡುತ್ತೀಯೆ । ಬ್ರಹ್ಮಾ ಚ ಅಸಿ—ಬ್ರಹ್ಮನೂ ಆಗಿದ್ದೀಯೆ । ನಃ—ನಮ್ಮ । ದಮೇ—ಯಜ್ಞಗೃಹದಲ್ಲಿ । ಗೃಹಪತಿಶ್ಚ—ಗೃಹಪತಿಯೂ (ಅಥವಾ ಯಜ್ಞಮಾಡುವ ಯಜಮಾನನೂ) ಆಗಿದ್ದೀಯೆ.

ಭಾವಾರ್ಥ

ಎಲೈ ಅಗ್ನಿಯೇ, ಹೋತೃವಿಗೆ ಸೇರಿದ ಕರ್ಮವೂ, ಪೋತೃ ಮತ್ತು ನೇಷ್ಟೃಗಳಿಗೆ ಸೇರಿದ ಕರ್ಮವೂ ನಿನ್ನದೇ ಆಗಿದೆ. ಯಜ್ಞವನ್ನು ಇಚ್ಛಿಸತಕ್ಕ ಯಜಮಾನನಿಗೆ ನೀನು ಅಗ್ನೀಧ್ರನಾಗಿದ್ದೀಯೆ. ಪ್ರಶಾಸ್ತೃವಿನ ಕರ್ಮವೂ ನಿನ್ನದೇ. ನೀನು ಅಧ್ವರ್ಯುವೂ, ಬ್ರಹ್ಮನೂ ಆಗಿದ್ದೀಯೆ, ನಮ್ಮ ಯಜ್ಞಗೃಹದಲ್ಲಿ ಗೃಹಪತಿಯೂ ಆಗಿದ್ದೀಯೆ.

English Translation

Yours, Agni, is the office of the Hotri, of the Potri, of the Ritwij ; of the Neshtri, you are the Agnidhra of the devout, yours is the function of the Prashastri, you are the Adhwaryu and the Brahman, and the householder in our dwelling.

ವಿಶೇಷವಿಷಯಗಳು

ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕುಗಳಲ್ಲಿಯೂ ಅಗ್ನಿಯನ್ನು ನಾನಾದೇವತೆಗಳ ಮತ್ತು ಋತ್ವಿಕ್ಕುಗಳ ಸ್ವರೂಪವೆಂದೂ ನಾನಾವಿಧವಾಗಿ ವರ್ಣಿಸಲಾಗಿದೆ. ಶ್ರೇಷ್ಠರಾದವರ ಗುಣಪ್ರಶಂಸನೆಮಾಡುವಾಗ ಇಂದ್ರ, ಚಂದ್ರ, ದೇವೇಂದ್ರರೆಂದು ಹೊಗಳುವುದು ವಾಡಿಕೆಯಷ್ಟೆ. ಆದರಂತೆ ಇಲ್ಲಿಯೂ ಗೃತ್ಸಮದಋಷಿಯು ಅಗ್ನಿಯನ್ನು ವಿವಿಧ ದೇವತೆಗಳಿಗೆ ಹೋಲಿಸಿ ಗುಣಗಾನಮಾಡಿರುವನು. ಈ ವಿಧವಾದ ವರ್ಣನೆಯು—

**ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।**
**ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥**

(ಭ. ಗೀ. ೧೦=೨೨)

ಮೊದಲಾದ ಭಗವದ್ಗೀತಾವಾಕ್ಯಗಳಲ್ಲಿಯೂ ಇತರ ಅನೇಕ ಆಧುನಿಕ ಗ್ರಂಥಗಳಲ್ಲಿಯೂ ಕಂಡುಬರುವುದು. ಪ್ರಕೃತವಾದ ಈ ಋಕ್ಕಿನಲ್ಲಿ ಯಜ್ಞದಲ್ಲಿ ಮುಖ್ಯಪಾತ್ರಗಳನ್ನು ವಹಿಸುವ ಹೋತೃ, ಪೋತೃ, ಋತ್ವಿಕ್ಕುಗಳು, ನೇಷ್ಟೃ, ಅಧ್ವರ್ಯು, ಬ್ರಹ್ಮ, ಗೃಹಪತಿ ಮುಂತಾದವರ ಕರ್ಮ ಅಥವಾ ಸ್ವರೂಪವೇ ನೀನೆಂದು ಅಗ್ನಿಯನ್ನು ಸ್ತುತಿಸಲಾಗಿದೆ.

ಯಜ್ಞದಲ್ಲಿ ಭಾಗವಹಿಸುವ ಋತ್ವಿಕ್ಕುಗಳಲ್ಲಿ ಹೋತೃ, ಅಧ್ವರ್ಯು, ಉದ್ಗಾತೃ, ಬ್ರಹ್ಮ ಎಂಬುವರು ಮುಖ್ಯರಾದವರು. ಇವರಿಗೆ ಸಹಾಯಕರಾಗಿ ಇನ್ನೂ ಹನ್ನೆರಡು ಮಂದಿ ಋತ್ವಿಕ್ಕುಗಳಿರುವರು. ಇವರೆಲ್ಲರೂ ಒಟ್ಟು ಹದಿನಾರು ಮಂದಿ. ಹೇಗೆಂದರೆ—

(1) ಹೋತೃವರ್ಗದ ಋತ್ವಿಕ್ಕುಗಳು—ಹೋತೃ, ಮೈತ್ರಾವರುಣ, ಅಚ್ಛಾವಾಕ, ಮತ್ತು ಗ್ರಾವಸ್ತುತ್ ಈ ನಾಲ್ಕು ಮಂದಿಯೂ ಹೋತೃವರ್ಗದ ಋತ್ವಿಜರು.
(2) ಅಧ್ವರ್ಯುವರ್ಗದವರು—ಅಧ್ವರ್ಯು, ಪ್ರತಿಪ್ರಸ್ಥಾತೃ, ನೇಷ್ಟೃ ಮತ್ತು ಉನ್ನೇತೃ.
(3) ಉದ್ಗಾತೃವರ್ಗದವರು—ಉದ್ಗಾತೃ, ಪ್ರಸ್ತೋತೃ, ಪ್ರತಿಹರ್ತೃ, ಮತ್ತು ಸುಬ್ರಹ್ಮಣ್ಯ.
(4) ಬ್ರಹ್ಮವರ್ಗದವರು—ಬ್ರಹ್ಮ, ಬ್ರಾಹ್ಮಣಾಚ್ಛಂಸಿ, ಅಗ್ನೀಧ್ರ, ಪೋತೃ.

ಈ ಋಕ್ಕುಗಳಲ್ಲಿ ಹೋತೃವರ್ಗದವರ ಮುಖ್ಯ ಕರ್ತವ್ಯವೇನೆಂದರೆ—ಯಜ್ಞದಲ್ಲಿ ಅಧ್ವರ್ಯುವು ಪ್ರೈಷಮಂತ್ರವನ್ನು ಹೇಳಿ ಇಂತಹ ಮಂತ್ರವನ್ನು ಹೇಳಬೇಕೆಂದು ಉಚ್ಚರಿಸಿದಕೂಡಲೇ ಹೋತೃವು ಪ್ರಾತರನುವಾಕಮಂತ್ರಗಳು, ಶಸ್ತ್ರಮಂತ್ರಗಳು, ಯಾಜ್ಯಾಪುರೋನುವಾಕ್ಯಾಮಂತ್ರಗಳು, ಅಗ್ನಿಮಥನಾದಿಗಳಲ್ಲಿ ಹೇಳಬೇಕಾದ ಮಂತ್ರಗಳು ಇತ್ಯಾದಿ ಋಗ್ವೇದದಲ್ಲಿರುವ ಮಂತ್ರಗಳನ್ನು ಆಯಾ ಸಂದರ್ಭಕ್ಕನುಸಾರವಾಗಿ ಪಠಿಸಿ ಯಜ್ಞಕರ್ಮಗಳಿಗೆ ನೆರವಾಗುವುದು. ಇವರಿಗೆ ಋಗ್ವೇದ ಮಂತ್ರಗಳೇ ಮುಖ್ಯವು

ಯಜ್ಞದಲ್ಲಿ ಅಧ್ವರ್ಯು ಮತ್ತು ಇವನ ಸಹಾಯಕವರ್ಗದವರ ಪಾತ್ರವೇ ಬಹು ಹೆಚ್ಚಾಗಿರುವುದು. ಎಲ್ಲಾ ಕೆಲಸಗಳಿಗೂ ಅಧ್ವರ್ಯುವೇ ಮುಂದಾಳಾಗಿ ಇತರ ಋತ್ವಿಕ್ಕುಗಳಿಗೆ ಇಂತಿಂತಹ ಕೆಲಸವನ್ನು ಮಾಡಬೇಕೆಂದು ಆಯಾಕಾಲಗಳಲ್ಲಿ ಪ್ರೈಷಮಂತ್ರಗಳ ಮೂಲಕ ನಿರ್ದೇಶಿಸುವನು. ಆದ್ದರಿಂದ—**ಅಧ್ವರ್ಯುರ್ವಾ ಋತ್ವಿಜಾಂ ಪ್ರಥಮೋ ಯುಜ್ಯತೇ**—ಋತ್ವಿಕ್ಕುಗಳಲ್ಲೆಲ್ಲಾ ಅಧ್ವರ್ಯುವೇ ಮುಖ್ಯನಾದವನು ಎಂದು ಹೇಳಿದೆ. ಇವನ ಕೆಲಸ ಕಾರ್ಯಗಳೆಲ್ಲಾ ಯಜುರ್ವೇದವನ್ನೇ ಅವಲಂಬಿಸಿರುವುದು.

ಉದ್ಗಾತೃವರ್ಗದವರು, ದೇವತೆಗಳನ್ನು ಆಹ್ವಾನಮಾಡುವ ಕಾಲದಲ್ಲಿಯೂ, ಸೋಮಪತನ ಕಾಲದಲ್ಲಿಯೂ ಸಮಯೋಚಿತವಾದ ಸಾಮಗಾನಮಾಡುವರು. ಸಾಮವೇದ ಮಂತ್ರಗಳೇ ಇವರಿಗೆ ಮುಖ್ಯವಾದವು **ಅಯಜ್ಞೋ ವಾ ಏಷ ಯೋಽಸಾಮಾ**—ಎಂದರೆ ಸಾಮಗಾನವಿಲ್ಲದ ಯಜ್ಞವು ಯಜ್ಞವೇ ಅಲ್ಲ ಎಂದು ಹೇಳಿರುವುದರಿಂದ ಇವರ ಪಾತ್ರವೂ ಬಹು ಮುಖ್ಯವಾಗಿರುವುದು.

ಬ್ರಹ್ಮ ಮತ್ತು ಅವನ ಸಹಾಯಕವರ್ಗದವರು ಯಜ್ಞಾದಿಗಳಲ್ಲಿ ನಡೆಯುವ ಕೆಲಸಕಾರ್ಯಗಳು ಸಾಂಗವಾಗಿಯೂ, ಶಾಸ್ತ್ರೋಕ್ತವಾಗಿಯೂ ನೆರವೇರುತ್ತಿರುವುದೇ ಇಲ್ಲವೇ ಎಂಬುದನ್ನೂ ಮಧ್ಯದಲ್ಲಿ ಲೋಪದೋಷಗಳೇನಾದರೂ ಸಂಭವಿಸಿದಲ್ಲಿ ಅದಕ್ಕೆ ಸರಿಯಾದ ಪ್ರಾಯಶ್ಚಿತ್ತಾದಿಗಳನ್ನು ಮಾಡಿ ಯಜ್ಞವು ಸುವ್ಯವಸ್ಥೆಯಿಂದ ಪರಿಸಮಾಪ್ತಿಯಾಗುವಂತೆ ನೋಡಿಕೊಳ್ಳುವರು- ಇದೇ ಇವರ ಕರ್ತವ್ಯವು. ಇವರಿಗೆ ನಾಲ್ಕುವೇದಗಳ ಪರಿಜ್ಞಾನವೂ ಇರಬೇಕು.

ಮೇಲೆ ಹೇಳಿದ ವಿಷಯಗಳೆಲ್ಲವೂ ಆಯಾ ವರ್ಗದ ಋತ್ವಿಜರ ಸಾಮಾನ್ಯಕರ್ತವ್ಯಗಳು. ಇವಲ್ಲದೆ ಪ್ರತಿಯೊಬ್ಬ ಋತ್ವಿಜನಿಗೂ ಪ್ರತ್ಯೇಕವಾದ ಮತ್ತು ನಿರ್ದಿಷ್ಟವಾದ ವಿಶೇಷ ಕರ್ತವ್ಯವೂ ಇರುವುದು. ಅವುಗಳನ್ನೆಲ್ಲಾ ಇಲ್ಲಿ ತಿಳಿಸುವುದರಿಂದ ಗ್ರಂಥವು ವಿಸ್ತಾರವಾಗುವುದೆಂಬ ಶಂಕೆಯಿಂದಲೂ ಆದರ ಆವಶ್ಯಕತೆ ಅಷ್ಟಾಗಿ ಇಲ್ಲದಿರುವುದರಿಂದಲೂ ಆ ವಿಷಯವನ್ನು ಇಲ್ಲಿ ತಿಳಿಸಿಲ್ಲ. ಈ ಋಕ್ಕಿನಲ್ಲಿ ಸೂಚಿತವಾದ ಋತ್ವಿಕ್ಕುಗಳ ಕೆಲಸಗಳ ಸೂಕ್ಷ್ಮ ವಿವರವನ್ನು ಮಾತ್ರ ಇಲ್ಲಿ ಹೇಳುವೆವು.

**ಹೋತೃವು** ಯಜ್ಞದಲ್ಲಿ ಆಯಾಕಾಲಕ್ಕೆ ತಕ್ಕಂತೆ ಮಂತ್ರಗಳನ್ನು ಪಠಿಸುತ್ತಾ ದೇವತೆಗಳನ್ನು ಆಹ್ವಾನ ಮಾಡುವನು. **ಪೋತೃವು** ಬ್ರಹ್ಮವರ್ಗಕ್ಕೆ ಸೇರಿದವನು. ಇವನು ಯಜ್ಞದಲ್ಲಿ ಸಂಭವಿಸಬಹುದಾದ ಲೋಪದೋಷಗಳನು ಸರಿಪಡಿಸಿ ಶುದ್ಧಿಮಾಡುವನು ; **ನೇಷ್ಟ್ರವು** ಯಜಮಾನಪತ್ನಿಯನ್ನೂ ಕರತರುವುದು ಮೊದಲಾದ ಕಾರ್ಯವನ್ನು ಮಾಡುವನು. ಇವನು ಅಧ್ವರ್ಯುವರ್ಗಕ್ಕೆ ಸೇರಿದವನು ; **ಅಗ್ನೀತ್** (ಅಗ್ನೀಧ್ರ)ನು ಅಗ್ನಿಯನ್ನು ಪ್ರಜ್ವಲಗೊಳಿಸಿ ಅದನ್ನು ನೋಡಿಕೊಳ್ಳುವನು. ಇವನು ಬ್ರಹ್ಮವರ್ಗಕ್ಕೆ ಸೇರಿದವನು ; **ಪ್ರಸ್ಥಾತೃ** (**ಮೈತ್ರಾವರುಣ**) ಹೋತೃವಿನ ಸಹಾಯಕನಾಗಿ ಇತರ ಋತ್ವಿಕ್ಕುಗಳಿಗೆ ನಿರ್ದೇಶಕನಾಗಿರುವನು. (ಮೈತ್ರಾವರುಣೋ ಹಿ ಪುರಸ್ತಾದೃತ್ವಿಗ್ಭ್ಯೋ ವಾಚಂ ವಿಭಜತಿ ಎಂದ ತೈತ್ತಿರೀಯಸಂಹಿತಾವಾಕ್ಯವಿರುವುದು). **ಅಧ್ವರ್ಯುವು** ಯಜ್ಞದ ಸಮಸ್ತ ಕಾರ್ಯಕಲಾಪಗಳಲ್ಲಿಯೂ ಮುಂದಾಳಾಗಿ ಪ್ರವರ್ತಿಸುವನು. ಯಾವ ಕೆಲಸ ನಡೆಯಬೇಕಾದರೂ ಇವನ ಅಥವಾ ಇವನ ಆಜ್ಞೆಯ ಮೂಲಕವೇ ; **ಬ್ರಹ್ಮನು** ಯಜ್ಞವು ಸರಿಯಾಗಿ ನಡೆಯುತ್ತಿರುವುದೇ ಎಲ್ಲಿಯಾದರೂ ಮಂತ್ರತಂತ್ರ ಲೋಪವಾಗುತ್ತದೆಯೇ ಎಂಬುದನ್ನು ನೋಡಿಕೊಳ್ಳುವನು ; **ಗೃಹಪತಿಯೆಂದರೆ** ಇಲ್ಲಿ ಯಜ್ಞಗೃಹಕ್ಕೆ ಪತಿಯಾದ ಅಗ್ನಿಯಾಗಬಹುದು ಅಥವಾ ಯಜ್ಞವನ್ನು ಮಾಡುತ್ತಿರುವ ಯಜಮಾನನಾದರೂ ಆಗಬಹುದು. ಇವರುಗಳೆಲ್ಲರೂ ಅಗ್ನಿಯ ಸ್ವರೂಪವೇ ಎಂದರೆ ಅಗ್ನಿಯು ಮಹಾಮಹಿಮೆಯುಳ್ಳವನು ಎಂದು ಋಷಿಯು ವರ್ಣಿಸಿರುವನು.

---

ಸಂಹಿತಾಪಾಠ

ತ್ವಮ॑ಗ್ನ ಇಂದ್ರೋ॑ ವೃಷ॒ಭಃ ಸ॒ತಾಮ॑ಸಿ॒ ತ್ವಂ ವಿಷ್ಣು॑ರುರುಗಾ॒ಯೋ ನ॑ಮ॒ಸ್ಯಃ॑ ।

ತ್ವಂ ಬ್ರ॒ಹ್ಮಾ ರ॑ಯಿ॒ವಿದ್ಬ್ರ॑ಹ್ಮಣಸ್ಪತೇ॒ ತ್ವಂ ವಿ॑ಧರ್ತಃ ಸಚಸೇ॒ ಪುರಂ॑ಧ್ಯಾ ॥

### ಪದಪಾಠ

ತ್ವಂ । ಅಗ್ನೇ । ಇಂದ್ರಃ । ವೃಷಭಃ । ಸತಾಂ । ಅಸಿ । ತ್ವಂ । ವಿಷ್ಣುಃ । ಉರುऽಗಾಯಃ । ನಮಸ್ಯಃ ।

ತ್ವಂ । ಬ್ರಹ್ಮಾ । ರಯಿऽವಿತ್ । ಬ್ರಹ್ಮಣಃ । ಪತೇ । ತ್ವಂ । ವಿಧರ್ತರಿತಿ ವಿऽಧರ್ತಃ । ಸಚಸೇ । ಪುರಂऽಧ್ಯಾ ॥ ೩ ॥

### ಸಾಯಣಭಾಷ್ಯಂ

ಹೇ ಅಗ್ನೇ ತ್ವಂ ಯತಃ ಸತಾಂ ವೃಷಭೋ ವರ್ಷಿತಾಸಿ ಅತ ಇಂದ್ರೋऽಸಿ । ಯದ್ವಾ ಸತಾಂ ಸಾಧೂನಾಮಿಂದ್ರೋऽಸಿ । ಕಾಮಾನಾಂ ವರ್ಷಿತಾಸಿ । ತ್ವಂ ವಿಷ್ಣುರಸಿ । ಯತ ಉರುಗಾಯೋ ಬಹುಭಿರ್ಗೀಯಮಾನೋ ನಮಸ್ಯೋ ನಮಸ್ಕಾರ್ಯಶ್ಚ ಭವಸಿ । ಹೇ ಬ್ರಹ್ಮಣಸ್ಪತೇ ಪರಿವೃಢಸ್ಯ ಕರ್ಮಣೋ ಮಂತ್ರಸ್ಯ ವಾ ಪಾಲಯಿತಸ್ತ್ವಂ ಯತೋ ರಯಿವಿತ್ ಗವಾದಿಧನಸ್ಯ ವೇತ್ತಾ ಅತೋ ಬ್ರಹ್ಮಾಸಿ । ಹೇ ವಿಧರ್ತರ್ವಿವಿಧಕಾರಕ ವೈಶ್ವಾನರರೂಪಾಗ್ನೇ ಪುರಂಧ್ಯಾ ಬಹುಪ್ರಕಾರಯಾ ಬುದ್ಧ್ಯಾ ಸಚಸೇ । ಸಹ ವರ್ತಸೇ । ಸರ್ವದಾ ಬುದ್ಧ್ಯಾ ಸ್ತೂಯಸ ಇತ್ಯರ್ಥಃ ॥

### ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ಸತಾಂ—ಸತ್ಪುರುಷರಿಗೆ । ವೃಷಭಃ—ಇಷ್ಟಾರ್ಥಗಳನ್ನು ಸುರಿಸತಕ್ಕ । ಇಂದ್ರಃ—ಇಂದ್ರನಾಗಿ । ಅಸಿ—ಇದ್ದೀಯೆ । ತ್ವಂ—ನೀನು । ಉರುಗಾಯಃ—ಅನೇಕರಿಂದ ಸ್ತುತಿಸಲ್ಪಡುವವನೂ । ನಮಸ್ಯಃ—ನಮಸ್ಕಾರಾರ್ಹನೂ ಆದ । ವಿಷ್ಣುಃ—ವಿಷ್ಣುವಾಗಿದ್ದೀಯೆ । ಬ್ರಹಣಸ್ಪತೇ—ಕರ್ಮಪಾಲಕನಾದ ಅಗ್ನಿಯೇ । ತ್ವಂ—ನೀನು । ರಯಿವಿತ್—ಧನವಂತನಾದ । ಬ್ರಹ್ಮಾ—ಬ್ರಹ್ಮನಾಗಿದ್ದೀಯೆ । ವಿಧರ್ತಃ—ಅನೇಕ ಕಾರ್ಯಗಳಿಗೆ ಕರ್ತನಾದ ವೈಶ್ವಾನರಾಗ್ನಿಯೇ । ಪುರಂಧ್ಯಾ—ಅನೇಕ ವಿಧವಾದ ಜ್ಞಾನದಿಂದ । ಸಚಸೇ—ಯುಕ್ತನಾಗಿದ್ದೀಯೆ (ಅಥವಾ ಅನೇಕ ವಿಧವಾದ ಪ್ರಜ್ಞೆಯಿಂದ ಸ್ತುತನಾಗಿದ್ದೀಯೆ).

### ಭಾವಾರ್ಥ

ಎಲೈ ಅಗ್ನಿಯೇ, ಸತ್ಪುರುಷರಿಗೆ ಇಷ್ಟಾರ್ಥಗಳನ್ನು ಸುರಿಸತಕ್ಕ ಇಂದ್ರನೂ, ಅನೇಕರಿಂದ ಸ್ತುತಿಸಲ್ಪಡುವವನೂ, ನಮಸ್ಕಾರಾರ್ಹನೂ ಆದ ವಿಷ್ಣುವೂ, ಧನವಂತನಾದ ಬ್ರಹ್ಮನೂ ನೀನೇ ಆಗಿದ್ದೀಯೆ. ನೀನು ಸಕಲ ವಿಧವಾದ ಜ್ಞಾನದಿಂದಲೂ ಯುಕ್ತನಾಗಿದ್ದೀಯೆ

### English Translation

**You, Agni,** are Indra, the showerer (of bounties) on the good ; you are the adorable Vishnu, the hymned of many ; you, Brahmasanapati, are Brahma, the possessor of riches ; you, the author of various (conditions), are associated with wisdom.

### ವಿಶೇಷವಿಷಯಗಳು

ವೃಷಭಃ—ಕಾಮಾನಾಂ ವರ್ಷಿತಾ । ಇಷ್ಟಾರ್ಥಗಳನ್ನು ಸುರಿಸುವವನು. ಇಷ್ಟಾರ್ಥಗಳನ್ನು ಕೊಡುವವನು.

ಇಂದ್ರೋ ವೃಷಭಃ ಸತಾಂ ಅಸಿ—ಸಜ್ಜನರಿಗೆ ಇಂದ್ರನಂತೆ ಇಷ್ಟಾರ್ಥಗಳನ್ನು ಕೊಡುವವನಾಗಿರುವೆ. ಅಥವಾ ಇಂದ್ರೋ ಸತಾಂ ಅಸಿ—ಎಂದರೆ ಸಜ್ಜನರಲ್ಲೆಲ್ಲಾ ಶ್ರೇಷ್ಠನೆನಿಸಿರುವೆ ಎಂದಭಿಪ್ರಾಯವು.

ವಿಷ್ಣುರುರುಗಾಯಃ—ಬಹುಭಿರ್ಗೀಯಮಾನೋ ವಿಷ್ಣುರಸಿ । ವಿಷ್ಣುವಿನಂತೆ ಅನೇಕರಿಂದ ನಿನ್ನ ಗುಣಗಳ ವಿಷಯವಾಗಿ ಗಾನಮಾಡಲ್ಪಡುವೆ.

ಬ್ರಹ್ಮಣಸ್ಪತೇ—ಯಜ್ಞಕರ್ಮಣಃ ಪಾಲಯಿತಾ । ಯಜ್ಞಕರ್ಮಗಳ ಪಾಲಕನು. ಅಥವಾ ಬ್ರಹ್ಮಣಸ್ಪತಿಯಂತೆ ಸ್ತೋತ್ರಗಳಿಗೆ ಒಡೆಯನು.

ಪುರಂಧ್ಯಾ—ಪುರಂಧಿರ್ಬಹುಧೀ ಎಂದು ಯಾಸ್ಕರ ನಿರ್ವಚನವಿರುವುದು. (ನಿ. ೬-೧೩) ಬಹುಪ್ರಕಾರಾಯೊ ಬುದ್ಧ್ಯಾ ಸಚಸೇ ಬಹಳವಾದ ಅಥವಾ ಬಹುವಿಧವಾದ ಬುದ್ಧಿಯಿಂದ ಇರುವವನು. ಅಥವಾ ಜನರು ತಮ್ಮ ಬಹುಪ್ರಕಾರವಾದ ಬುದ್ಧಿಯಿಂದ ನಿನ್ನನ್ನು ಸ್ತುತಿಸುವರು ಎಂದೂ ಅರ್ಥವು.

———:o:———

### ಸಂಹಿತಾಪಾಠಃ

ತ್ವಮ॑ಗ್ನೇ॒ ರಾಜಾ॒ ವರು॑ಣೋ ಧೃ॒ತವ್ರ॑ತ॒ಸ್ತ್ವಂ ಮಿ॒ತ್ರೋ ಭ॑ವಸಿ ದ॒ಸ್ಮ
ಈಡ್ಯಃ॑ ।
ತ್ವಮ॑ರ್ಯ॒ಮಾ ಸತ್ಪ॑ತಿ॒ರ್ಯಸ್ಯ॑ ಸಂ॒ಭುಜಂ॒ ತ್ವಮಂಶೋ॑ ವಿ॒ದಥೇ॑ ದೇವ
ಭಾ॒ಜಯುಃ॑ ॥ ೪ ॥

### ಪದಪಾಠಃ

ತ್ವಂ । ಅ॒ಗ್ನೇ॒ । ರಾಜಾ॑ । ವರು॑ಣಃ । ಧೃ॒ತಽವ್ರ॑ತಃ । ತ್ವಂ । ಮಿ॒ತ್ರಃ । ಭ॒ವ॒ಸಿ॒ । ದ॒ಸ್ಮಃ॒ । ಈಡ್ಯಃ॑ ।

ತ್ವಂ । ಅ॒ರ್ಯ॒ಮಾ । ಸತ್ಽಪ॑ತಿಃ । ಯಸ್ಯ॑ । ಸಂ॒ಽಭುಜಂ॑ । ತ್ವಂ । ಅಂಶಃ॑ । ವಿ॒ದಥೇ॑ । ದೇ॒ವ॒ । ಭಾ॒ಜ॒ಯುಃ ॥ ೪ ॥

### ಸಾಯಣಭಾಷ್ಯಂ

ಹೇ ಅಗ್ನೇ ತ್ವಂ ಯತೋ ಧೃತವ್ರತೋ ಧಾರಿತಕರ್ಮಾಸಿ ಅತೋ ವರುಣೋ ರಾಜಾಸಿ । ಯತೋ ದಸ್ಮಃ ಶತ್ರೂಣಾಮುಪಕ್ಷಪಯಿತಾ ಈಡ್ಯಃ ಸ್ತುತ್ಯಶ್ಚ ಅತೋ ಮಿತ್ರ ಏತನ್ನಾಮಕೋ

**ದೇವೋಽಸಿ । ಯತಃ ಸತ್ಪತಿಃ ಸತಾಮಭಿಮತಪ್ರದಾನೇನ ಪಾಲಯಿತಾ ಅತೋಽರ್ಯಮಾ ಭವಸಿ । ದಾತೃತ್ವಂ ಚಾರ್ಯಮ್ಣೋ ಲಿಂಗಂ । ಅರ್ಯಮೇತಿ ತಮಾಹುರ್ಯೋ ದದಾತೀತಿ । ಯಸ್ಯಾರ್ಯಮ್ಣೋ ದಾನಂ ಸಂಭುಜಂ ಸಂತತಭುಜಂ ವ್ಯಾಪಕಂ ಭವತಿ । ಯದ್ವಾ ಯಸ್ಯ ಧನಂ ಸಂಭುಜಂ ಸಮ್ಯಕ್ ಭೋಗಾಯ ಸಾಧು ಗ್ರಹೀತೄಣಾಂ । ತಥಾ ತ್ವಮಂಶಃ ಸೂರ್ಯಮೂರ್ತ್ಯಂತರಭೂತ ಏತನ್ನಾಮಕೋ ದೇವೋಽಸಿ । ತಾದೃಶ ಹೇ ದೇವ ವಿದಥೇಽಸ್ಮದೀಯೇ ಯಜ್ಞೇ ಭಾಜಯುಃ ಫಲಾನಾಂ ಭಾಜಯಿತಾ ಪ್ರಾಪಯಿತಾಸಿ ॥**

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಧೃತವ್ರತಃ**—ಸತ್ಯಾದಿ ವ್ರತಗಳಿಗೆ ನಿಯಾಮಕನೂ । **ರಾಜಾ**—ಪ್ರಭುವಾದವನೂ ಆದ । **ವರುಣಃ**—ವರುಣನಾಗಿದ್ದೀಯೆ । **ತ್ವಂ**—ನೀನು । **ದಸ್ಮಃ**—ಶತ್ರುನಾಶಕನೂ । **ಈಡ್ಯಃ**—ಸ್ತುತ್ಯನೂ ಆದ । **ಮಿತ್ರಃ**—ಮಿತ್ರನಾಗಿದ್ದೀಯೆ । **ತ್ವಂ**—ನೀನು । **ಯಸ್ಯ**—ಯಾವ ಅರ್ಯಮನ ದಾನವು । **ಸಂಭುಜಂ**—ಸರ್ವತ್ರ ಭೋಗ್ಯವಾಗಿದೆಯೋ ಅಂತಹ । **ಸತ್ಪತಿಃ**—ಸಜ್ಜನರ ಪಾಲಕನಾದ । **ಅರ್ಯಮಾ**—ಅರ್ಯಮನಾಗಿ । **ಭವಸಿ**—ಆಗಿದ್ದೀಯೆ । **ತ್ವಂ**—ನೀನು । **ಅಂಶಃ**—ಅಂಶದೇವನೂ ಆಗಿದ್ದೀಯೆ। **ದೇವಃ**—ದೇವತಾತ್ಮನಾದ ಎಲೈ ಅಗ್ನಿಯೇ । **ವಿದಥೇ**—ನಮ್ಮ ಯಜ್ಞದಲ್ಲಿ । **ಭಾಜಯುಃ**—ಸತ್ಫಲಗಳನ್ನು ಹಂಚುವವನಾಗು.

ಭಾವಾರ್ಥ

ಎಲೈ ಅಗ್ನಿಯೇ, ನೀನು ಧೃತವ್ರತನೂ, ಪ್ರಭುವೂ ಆದ ವರುಣನೂ, ಶತ್ರುನಾಶಕನೂ ಸ್ತುತ್ಯನೂ ಆದ ಮಿತ್ರನೂ ಆಗಿದ್ದೀಯೆ. ಸರ್ವರಿಂದಲೂ ಭೋಗಿಸಲ್ಪಡುವ ದಾನಕ್ಕೆ ಕಾರಣನೂ ಸತ್ಪಾಲಕನೂ ಆದ ಅರ್ಯಮನೂ ಅಂಶನೂ ಆಗಿದ್ದೀಯೆ. ದೇವತಾತ್ಮನಾದ ಎಲೈ ಅಗ್ನಿಯೇ, ನಮ್ಮ ಯಜ್ಞದಲ್ಲಿ ಸತ್ಫಲಗಳನ್ನು ಹಂಚುವವನಾಗು

## English Translation

You, Agni, are the royal Varuna, observant of holy vows: you are the adorable Mitra, the destroyer (of foes) : you are Aryaman, the protector of the virtuous, whose (liberality) is enjoyed by all : you are a portion (of the sun) : be the distributor (of good things), divine (Agni), at our sacrifice.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಅಗ್ನಿಯನ್ನು ಮಿತ್ರ, ವರುಣ, ಅರ್ಯಮಾ, ಅಂಶ ಎಂಬ ದೇವತೆಗಳ ಸ್ವರೂಪವೆಂದು ವರ್ಣಿಸಿದೆ. ಈ ಮಿತ್ರಾದಿ ದೇವತೆಗಳು ಆದಿತ್ಯರೆಂದು,

**ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಃ ಸನಾದ್ರಾಜಭ್ಯೋ ಜುಹ್ವಾ ಜುಹೋಮಿ ।**
**ಶೃಣೋತು ಮಿತ್ರೋ ಅರ್ಯಮಾ ಭಗೋ ನಸ್ತುವಿಜಾತೋ ವರುಣೋ ದಕ್ಷೋ ಅಂಶಃ ॥**

(ಋ. ಸಂ. ೨-೨೭-೧)

ಎಂಬ ಋಕ್ಕಿನಲ್ಲಿಯೂ ಮತ್ತು ಈ ಸೂಕ್ತದ ಮುಂದಿನ ಋಕ್ಕುಗಳಲ್ಲಿಯೂ ಸ್ತುತರಾಗಿದಾರೆ. ಮಿತ್ರ, ವರುಣ, ಅರ್ಯಮಾ ಎಂಬ ಈ ಮೂವರು ದೇವತೆಗಳೂ ಒಂದು ಗುಂಪಾಗಿ ಅನೇಕ ಕಡೆ ಸ್ತುತಿಸಲ್ಪಟ್ಟಿರುವರು. ಇವರ ವಿಷಯವಾಗಿ ನಾವು ಇದೇ ಭಾಗದ 119–129ನೇ ಪೇಜುಗಳಲ್ಲಿ ವಿಸ್ತಾರವಾಗಿ ಬರೆದಿರುವುದನ್ನು ನೋಡಿ.

ವಿದಥೇ—ಅಸ್ಮದೀಯೇ ಯಜ್ಞೇ—ನಾವು ಮಾಡುತ್ತಿರುವ ಈ ಯಜ್ಞದಲ್ಲಿ ; ವಿದಥಶಬ್ದದ ವಿಸ್ತಾರವಾದ ವಿವರಣೆಗಳನ್ನು ಋ. ಸಂ. ಭಾಗ ೧೫ ಪೇಜು 9-13 ರಲ್ಲಿ ಬರೆದಿರುವುದನ್ನು ನೋಡಿ.

ಭಾಜಯುಃ—ಫಲಾನಾಂ ಭಾಜಯಿತಾ ಪ್ರಾಪಯಿತಾಸಿ । ಯಜ್ಞದಲ್ಲಿ ನಮಗೆ ಇಷ್ಟಾರ್ಥರೂಪವಾದ ಫಲಗಳನ್ನು ಒದಗಿಸಿಕೊಡುವವನಾಗಿದ್ದೀಯೆ.

---

ಸಂಹಿತಾಪಾಠಃ

ತ್ವಮ॑ಗ್ನೇ ತ್ವ॒ಷ್ಟಾ ವಿ॑ಧ॒ತೇ ಸು॒ವೀರ್ಯಂ॒ ತವ॒ ಗ್ನಾವೋ॑ ಮಿತ್ರಮಹಃ ಸ॒ಜಾತ್ಯಂ᳚ ।
ತ್ವಮಾ॑ಶು॒ಹೇಮಾ॑ ರರಿಷೇ॒ ಸ್ವಶ್ವ್ಯಂ॒ ತ್ವಂ ನ॒ರಾಂ ಶರ್ಧೋ॑ ಅಸಿ ಪುರೂ॒ವಸುಃ॑ ॥ ೫ ॥

ಪದಪಾಠಃ

ತ್ವಂ । ಅ॒ಗ್ನೇ॒ । ತ್ವಷ್ಟಾ॑ । ವಿ॒ಧ॒ತೇ । ಸು॒ಽವೀರ್ಯ॑ಂ । ತವ॑ । ಗ್ನಾವಃ॑ । ಮಿ॒ತ್ರ॒ಽಮ॒ಹಃ॒ । ಸ॒ಽಜಾತ್ಯ॑ಂ ।
ತ್ವಂ । ಆ॒ಶು॒ಽಹೇಮಾ॑ । ರ॒ರಿ॒ಷೇ॒ । ಸು॒ಽಅಶ್ವ್ಯ॑ಂ । ತ್ವಂ । ನ॒ರಾಂ । ಶರ್ಧಃ॑ । ಅ॒ಸಿ॒ । ಪು॒ರು॒ಽವಸುಃ॑ ॥ ೫ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಷ್ಟಾ ಫಲಸ್ಯ ಸಾಧು ಸಂಪಾದಯಿತಾ ತ್ವಂ ವಿಧತೇ ಪರಿಚರತೇ ಜನಾಯ ಸುವೀರ್ಯಂ ಶೋಭನವೀರ್ಯಂ । ವೀರ್ಯಂ ಧನರ । ತದ್ಧೇತುರ್ಭವಸಿ । ಗ್ನಾವೋ ಯೋಃ ಸ್ತುತಿವಾಚಃ ಸಂತಿ ತಾಸ್ತವ ಸ್ವಭೂತಾಃ । ಹೇ ಮಿತ್ರಮಹಃ ಹಿತಕಾರಿತೇಜಃ ಸಜಾತ್ಯಮಸ್ಮಾಕಂ ಬಾಂಧವಂ ಭಜಸ ಇತ್ಯರ್ಥಃ । ಹೇ ಅಗ್ನೇ ಆಶುಹೇಮಾ ಆಶು ಪ್ರೇರಯಿತಾ ತ್ವಂ ಸ್ವಶ್ವ್ಯಂ ಶೋಭನಾಶ್ವಸಮೂಹೋಪೇತಂ ಫಲಂ ರರಿಷೇ । ದದಾಸಿ । ಹೇ ಅಗ್ನೇ ಪುರೂವಸುಃ ಪ್ರಭೂತಧನಸ್ತ್ವಂ ನರಾಂ ನರಾಣಾಂ ಶರ್ಧೋ ಬಲಸ್ಥಾನೀಯೋಽಸಿ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತ್ವಷ್ಟಾ—ಫಲವನ್ನು ಸಂಪಾದಿಸಿಕೊಡತಕ್ಕ । ತ್ವಂ—ನೀನು । ವಿಧತೇ—(ನಿನ್ನನ್ನು) ಸೇವಿಸತಕ್ಕ ಜನರಿಗೆ । ಸುವೀರ್ಯಂ —ಶ್ರೇಷ್ಠವಾದ ವೀರ್ಯದಿಂದ ಕೂಡಿದ ಧನವನ್ನು (ಕೊಡುತ್ತೀಯೆ) ।

**ಗ್ನಾವಃ**—ಸ್ತುತಿರೂಪವಾದ ವಾಕ್ಯಗಳೆಲ್ಲವೂ । **ತವ**—ನಿನ್ನವೇ ಆಗಿವೆ। **ಮಿತ್ರಮಹಃ**—ಜಗತ್ತಿಗೆ ಹಿತವನ್ನುಂಟು ಮಾಡುವ ತೇಜಸ್ಸುಳ್ಳ ಅಗ್ನಿಯೇ । **ಸಜಾತ್ಯಂ**—ನಮ್ಮೊಡನೆ ಬಂಧುತ್ವವನ್ನು ಪಾಲಿಸು । **ಆಶುಹೇಮಾ**—(ಕರ್ತವ್ಯ ಗಳಲ್ಲಿ) ಶೀಘ್ರವಾಗಿ ಪ್ರೇರಿಸತಕ್ಕ ನೀನು । **ಸ್ವಶ್ವ್ಯಂ**—ಶ್ರೇಷ್ಠವಾದ ಅಶ್ವದಿಂದ ಕೂಡಿರುವ ಫಲವನ್ನು । **ರರಿಷೇ**—ಕೊಡುತ್ತೀಯೆ । **ಪುರೂವಸುಃ**—ಪ್ರಭೂತವಾದ ಧನವುಳ್ಳ । **ತ್ವಂ**—ನೀನು । **ನರಾಂ**--ನರರ । **ಶರ್ಧಃ**—ಶಕ್ತಿ ರೂಪವಾಗಿ । **ಅಸಿ**—ಇದ್ದೀಯೆ ।

**ಭಾವಾರ್ಥ**

ಎಲೈ ಅಗ್ನಿಯೇ, ತ್ವಷ್ಟೃರೂಪನಾದ ನೀನು ನಿನ್ನನ್ನು ಸೇವಿಸತಕ್ಕ ಜನರಿಗೆ ಶ್ರೇಷ್ಠವಾದ ವೀರ್ಯದಿಂದ ಕೂಡಿದ ಧನವನ್ನು ಕೊಡುತ್ತೀಯೆ. ಸ್ತುತಿರೂಪವಾದ ವಾಕ್ಯಗಳೆಲ್ಲವೂ ನಿನ್ನವೇ ಆಗಿವೆ. ಜಗತ್ತಿಗೆ ಹಿತವನ್ನುಂಟು ಮಾಡುವ ತೇಜಸ್ಸುಳ್ಳ ಅಗ್ನಿಯೇ, ನಮ್ಮೊಡನೆ ಬಂಧುತ್ವವನ್ನು ಪಾಲಿಸು. ನಮ್ಮನ್ನು ಕರ್ತವ್ಯಗಳಲ್ಲಿ ಶೀಘ್ರವಾಗಿ ಪ್ರೇರಿಸತಕ್ಕ ನೀನು ಶ್ರೇಷ್ಠವಾದ ಅಶ್ವದಿಂದ ಕೂಡಿದ ಫಲವನ್ನು ಕೊಡುತ್ತೀಯೆ. ಪ್ರಭೂತವಾದ ಧನವುಳ್ಳ ನೀನು ನರರ ಶಕ್ತಿರೂಪನಾಗಿದ್ದೀಯೆ.

**English Translatin**

You, Agni, are Twashtri, (the giver) of great wealth to (your) worshipper : these praises are yours : do you, of benevolent power, (admit) our affinity : you, who are prompt to encourge (us), give us good (store of) horses : you, who abound with opulence, are the strength of men.

**ವಿಶೇಷವಿಷಯಗಳು**

**ತ್ವಷ್ಟಾ—ಫಲಸ್ಯ ಸಾಧು ಸಂಪದಯಿತಾ ।** ಈ ಶಬ್ದಕ್ಕೆ ಭಾಷ್ಯಕಾರರು ಯಜ್ಞಾದಿಕರ್ಮಗಳ ಫಲವನ್ನು ಯಜಮಾನರಿಗೆ ಚೆನ್ನಾಗಿ ಒದಗಿಸಿಕೊಡುವವನು ಎಂದರ್ಥಮಾಡಿದಾರೆ. ಅಥವಾ ತ್ವಷ್ಟಾ ಎಂಬ ಶಬ್ದಕ್ಕೆ ತ್ವಷ್ಟೃನಾಮಕನಾದ ದೇವಶಿಲ್ಪಿಯೆಂದಾದರೂ ಹೇಳಬಹುದು. ದೇವಶಿಲ್ಪಿಯಾದ ತ್ವಷ್ಟೃವು ದೇವತೆಗಳಿಗೆ ಯಾವ ರೀತಿ ಅವರಿಗೆ ಬೇಕಾದ ಸಲಕರಣೆಗಳನ್ನು ನಿರ್ಮಿಸಿಕೊಡುವನೋ ಅದರಂತೆ ನೀನು (ಅಗ್ನಿಯು) ಸಹಾ ದೇವತೆಗಳಿಗೂ, ಮನುಷ್ಯರಿಗೂ ಸಕಲವಿಧವಾದ ಧನಾದಿಸಂಪತ್ತನ್ನು ಕೊಡುವವನೆಂದಭಿಪ್ರಾಯವು.

**ಗ್ನಾವಃ—ಗ್ನಾವೋ ಯಾಃ ಸ್ತುತಿವಾಚಃ ಸಂತಿ ತಾಸ್ತವ ಸ್ವಭೂತಾಃ ।** ಗ್ನಾಃ ಎಂಬ ಶಬ್ದವು ವಾಙ್ನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೩) ಸ್ತುತಿವಾಕ್ಯಗಳೆಲ್ಲವೂ ನಿನ್ನ ಪರವಾಗಿಯೇ ಇರುವುದರಿಂದ ಸ್ತುತಿವಾಕ್ಯಸ್ವರೂಪವೇ ನೀನು ಎಂದಭಿಪ್ರಾಯವು.

———:o:———

**ಸಂಹಿತಾಪಾಠಃ**

ತ್ವಮ॑ಗ್ನೇ ರು॒ದ್ರೋ ಅಸು॑ರೋ ಮ॒ಹೋ ದಿ॒ವಸ್ತ್ವಂ ಶರ್ಧೋ॒ ಮಾರು॑ತಂ

ಪೃ॒ಕ್ಷ ಈ॑ಶಿಷೇ ।

ತ್ವಂ ವಾತೈರರುಣೈರ್ಯಾಸಿ ಶಂಗಯಸ್ತ್ವಂ ಪೂಷಾ ವಿಧತಃ ಪಾಸಿ ನು

ತ್ಮನಾ ॥ ೬ ॥

ಪದಪಾಠ

ತ್ವಂ । ಅಗ್ನೇ । ರುದ್ರಃ । ಅಸುರಃ । ಮಹಃ । ದಿವಃ । ತ್ವಂ । ಶರ್ಧಃ । ಮಾರುತಂ । ಪೃಕ್ಷಃ । ಈಶಿಷೇ ।

ತ್ವಂ । ವಾತೈಃ । ಅರುಣೈಃ । ಯಾಸಿ । ಶಂऽಗಯಃ । ತ್ವಂ । ಪೂಷಾ । ವಿಧತಃ । ಪಾಸಿ । ನು । ತ್ಮನಾ ॥ ೬ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಂ ಮಹೋ ದಿವೋ ಮಹತೋ ದ್ಯುಲೋಕಾತ್ । ಉಪಲಕ್ಷಣಮೇತತ್ । ಲೋಕತ್ರಯಾತ್ । ಅಸುರಃ ಶತ್ರೂಣಾಂ ನಿರಸಿತಾ ರುದ್ರೋऽಸಿ । ರುದ್ದುಃಖಂ ದುಃಖಹೇತುರ್ವಾ ಪಾಪಾದಿಃ । ತಸ್ಯ ದ್ರಾವಯಿತಾ ಏತನ್ನಾಮಕೋ ದೇವೋऽಸಿ । ರುದ್ರೋ ವಾ ಏಷ ಯದಗ್ನಿಃ । ತೈ. ೫-೪-೩ । ಇತ್ಯಾದಿಷ್ವಗ್ನೇ ರುದ್ರಶಬ್ದೇನ ವ್ಯವಹಾರಾತ್ । ಯದ್ವಾ ತ್ವಂ ರುದ್ರಃ । ರೌತಿ ಮಾಮನಿಷ್ಟ್ವಾ ನರಾ ದುಃಖೇ ಪತಿಷ್ಯಂತೀತಿ ರುದ್ರಃ । ತಾದೃಶೋऽಸಿ । ರುದ್ರೋ ರೌತೀತಿ ಸತ ಇತಿ ಹಿ ನಿರುಕ್ತಂ । ತಥಾ ಮಹೋ ಮಹತೋ ದ್ಯುಲೋಕಸ್ಯ ಸಂಬಂಧ್ಯಸುರೋऽಸಿ । ಅಸುರ್ಬಲಂ । ತಸ್ಯ ದಾತಾದಿತ್ಯರೂಪಶ್ಚ ತ್ವಮಸಿ । ಅಗ್ನೇರ್ದ್ಯುಲೋಕಸಂಬಂಧ್ಯಸುರತ್ವಮುತ ವಾ ದಿವೋ ಅಸುರಾಯ ಮನ್ಮ । ೫-೪೧-೩ । ಇತ್ಯಾದಿಷು । ತಥಾ ತ್ವಂ ಮಾರುತಂ ಶರ್ಧೋ ಮರುತ್ಸಮೂಹರೂಪಂ ಬಲಮಸಿ । ವಾಯುರೂಪಶ್ಚ ತ್ವಮಸೀತ್ಯರ್ಥಃ । ಏವಮುಗ್ನ್ಯಾದಿತ್ಯವಾಯುರೂಪಸ್ತ್ವಂ । ಪೃಕ್ಷೋऽನ್ನಸ್ಯ ಹವಿರ್ಲಕ್ಷಣಸ್ಯ ತ್ವಮೀಶಿಷೇ । ಈಶ್ವರೋ ಭವಸಿ । ಯಸ್ಮಾದೇವಂ ತಸ್ಮಾತ್ತ್ವಂ ವಾತೈರ್ವಾಯುಸದೃಶೈರರುಣೈರರುಣವರ್ಣೈರಶ್ವೈಃ ಶಂಗಯಃ ಸುಖಸ್ಯ ಗೃಹರೂಪ ಆವಾಸಭೂತಃ ಸನ್ ಯಾಸಿ । ಪ್ರಾಪ್ನೋಷಿ ಯಾಗಗೃಹಂ । ಯದ್ವಾ ಅರುಣೈರ್ಗಮನಶೀಲೈರ್ವಾತೈರ್ವಾಯುಭಿರುತ್ಪನ್ನಃ ಸನ್ ಯಾಸಿ ವನೇ । ತಥಾ ತ್ವಂ ಪೂಷಾ ಸರ್ವಸ್ಯ ಪೋಷಕಃ ಸನ್ ನು ಕ್ಷಿಪ್ರಂ ತ್ಮನಾ ಆತ್ಮನಾನುಗ್ರಹರೂಪಯಾ ಸ್ವಬುದ್ಧ್ಯೈವ ವಿಧತಃ ಪರಿಚರತೋ ಯಜಮಾನಾನ್ ಪಾಸಿ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ಮಹಃ—ಮಹತ್ತಾದ । ದಿವಃ—ದ್ಯುಲೋಕದಿಂದ (ಲೋಕತ್ರಯದಿಂದ) ಅಸುರಃ—ಶತ್ರುಗಳನ್ನು ಓಡಿಸತಕ್ಕ । ರುದ್ರಃ—ರುದ್ರನಾಗಿದ್ದೀಯೆ । [ಅಥವಾ ರುದ್ರಃ ತ್ವಂ—ರುದ್ರರೂಪನಾದ ನೀನು । ಮಹಃ—ಮಹತ್ತಾದ । ದಿವಃ - ದ್ಯುಲೋಕಕ್ಕೆ । ಅಸುರಃ—ಶಕ್ತಿದಾಯಕನಾದ ಆದಿತ್ಯನಾಗಿದ್ದೀಯೆ] । ತ್ವಂ—ನೀನು । ಮಾರುತಂ ಶರ್ಧಃ—ಮರುತ್ತುಗಳ ಸಂಘಾತರೂಪವಾದ ಶಕ್ತಿಯಾಗಿದ್ದೀಯೆ । ಪೃಕ್ಷಃ—ಹವಿಸ್ಸಿನ ರೂಪದ ಅನ್ನಕ್ಕೆ । ಈಶಿಷೇ—ಪ್ರಭುವಾಗಿದ್ದೀಯೆ । ತ್ವಂ—ನೀನು । ಅರುಣೈಃ—ಗಮನಶೀಲವಾದ । ವಾತೈಃ—ವಾಯುಗಳಿಂದ (ಪ್ರಚೋದಿತನಾಗಿಯೂ) ಅಥವಾ ವಾಯುರೂಪವಾದ ಅಶ್ವಗಳೊಡ



(440

ನೆಯೂ । **ಶಂಗಯಃ**—ಸುಖಕ್ಕೆ ಆವಾಸಭೂತನಾಗಿಯೂ । **ಯಾಸಿ**—ಯಜ್ಞಗೃಹಕ್ಕೆ ಬರುತ್ತೀಯೆ । **ತ್ವಂ**—ನೀನು । **ಪೂಷಾ**—ಸಕಲಕ್ಕೂ ಪೋಷಕನಾಗಿದ್ದು । **ನು**—ಜಾಗ್ರತೆಯಾಗಿ । **ತ್ಮನಾ**—ನಿನ್ನ ಆತ್ಮೇಚ್ಛೆಯಿಂದ । **ವಿಧತಃ**—ನಿನ್ನನ್ನು ಪರಚರಿಸುವ ಯಜಮಾನರನ್ನು । **ಪಾಸಿ**—ಕಾಪಾಡುತ್ತೀಯೆ ।

**ಭಾವಾರ್ಥ**

ಎಲೈ ಅಗ್ನಿಯೇ, ರುದ್ರರೂಪನಾದ ನೀನು ಮಹತ್ತಾದ ದ್ಯುಲೋಕಕ್ಕೆ ಆದಿತ್ಯನಾಗಿ ಇದ್ದೀಯೆ. ಮರುತ್ತುಗಳ ಸಂಘಾತರೂಪವಾದ ಶಕ್ತಿಯೇ ನೀನಾಗಿದ್ದೀಯೆ. ಹವಿಸ್ಸಿನ ರೂಪದ ಅನ್ನಕ್ಕೆಲ್ಲಾ ನೀನೇ ಪ್ರಭುವು. ವಾಯುವಿನಿಂದ ಪ್ರಚೋದಿತನಾಗಿಯೂ, ಸುಖಕ್ಕೆ ಆವಾಸಭೂತನಾಗಿಯೂ, ನೀನು ಯಜ್ಞಗೃಹಕ್ಕೆ ಬರುತ್ತೀಯೆ. ನೀನು ಸಕಲಕ್ಕೂ ಪೋಷಕನಾಗಿದ್ದು ನಿನ್ನನ್ನುಪಚರಿಸುವ ಯಜಮಾನನನ್ನು ಮನಃಪೂರ್ವಕವಾಗಿ ಕಾಪಾಡುತ್ತೀಯೆ.

## English Translation

You, Agni, are Rudra, the expeller (of foes) from the expanse of heaven; you are the strength of the Maruts, you are supreme over (sacrificial) food, you, who are pleasantly domiciled (in the hall of sacrifice), go with ruddy horses, (fleet as) the wind; as Pushan, you cherish, of your own will, those, who offer worship.

**। ವಿಶೇಷವಿಷಯಗಳು ।**

**ರುದ್ರಃ**—**ರುದ್ದುಃಖಂ ದುಃಖಹೇತುರ್ವಾ ಪಾಪಾದಿಃ । ತಸ್ಯ ದ್ರಾವಯಿತಾ** । ರುತ್ ಎಂದರೆ ದುಃಖವು. ದುಃಖಕ್ಕೆ ಹೇತುವಾದುದು (ಕಾರಣವಾದುದು) ಪಾಪವು. ಆ ಪಾಪವನ್ನು ಓಡಿಸುವವನಾದ್ದರಿಂದ ಈ ದೇವನಿಗೆ ರುದ್ರನೆಂದು ಹೆಸರು. ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ—**ರುದ್ರೋ ವಾ ಏಷ ಯದಗ್ನಿಃ** (ತೈ. ಸಂ. ೫-೪-೩) ಎಂದು ಹೇಳಿರುವುದರಿಂದ ಈ ಅಗ್ನಿಯೇ ರುದ್ರಸ್ವರೂಪನಾಗಿರುವನು ಎಂದಭಿಪ್ರಾಯವು. ಅಥವಾ **ರೌತಿ ಮಾಮನಿಷ್ಟ್ವಾ ನರಾ ದುಃಖೇ ಪತಿಷ್ಯಂತೀತಿ ರುದ್ರಃ** । ಅಗ್ನಿಯಾದ ನನ್ನನ್ನು ಯಜ್ಞಾದಿಗಳಿಂದ ಆರಾಧಿಸದೆ ಮನುಷ್ಯರು ದುಃಖಭಾಜನರಾಗುವುದರಿಂದ ಅಂತಹ ಅಗ್ನಿಗೆ ರುದ್ರನೆಂದು ಹೆಸರು. ನಿರುಕ್ತದಲ್ಲಿಯೂ ಸಹ—

> **ರುದ್ರೋ ರೌತೀತಿ ಸತಃ । ರೋರೂಯಮಾಣೋ ದ್ರವತೀತಿ ವಾ ರೋದಯತೇರ್ವಾ । ಯದರುದತ್ತದ್ರುದ್ರಸ್ಯ ರುದ್ರತ್ವಂ ಇತಿ ಕಾಠಕಂ । ಯದರೋದೀತ್ತದ್ರುದ್ರಸ್ಯ ರುದ್ರತ್ವಂ ಇತಿ ಹಾರಿದ್ರವಿಕಂ ॥**
>
> (ನಿ. ೧೦-೭)

ಎಂದು ಯಾಸ್ಕರು ನಿರ್ವಚನವನ್ನು ಹೇಳಿರುವರು. ಇದನ್ನನುಸರಿಸಿ ರುದ್ರಶಬ್ದಕ್ಕೆ ಸಾಯಣರು ಆರು ವಿಧವಾಗಿ ಅರ್ಥವನ್ನು ವಿವರಿಸಿರುವರು. ರುದ್ರ ಶಬ್ದವು ರುದ್ ಧಾತುವಿನಿಂದ ಣಿಜಂತದಲ್ಲಿ ನಿಷ್ಪನ್ನವಾಗಿರುವುದು. ಯಾಸ್ಕರು ಮೇಲೆ ಹೇಳಿದಂತೆ—**ರುದ್ರೋ ರೌತೀತಿ ಸತಃ ರೋರೂಯಮಾಣೋ ದ್ರವತೀತಿ ವಾ ರೋದಯತೇರ್ವಾ** ।

ರುದ್ರನೆಂದರೆ ರೌತಿ-ಸ್ತನಯಿತ್ನುಃಶಬ್ದಂ ಕರೋತೀತಿ ರುದ್ರಃ। ಮೇಘದ ಗುಡುಗಿನ ಹಾಗೆ ಧ್ವನಿಮಾಡುವವ ನಾದ್ದರಿಂದ ರುದ್ರನೆಂಬ ಹೆಸರು ಅಥವಾ ರೋರೂಯಮಾಣೋ ದ್ರವತಿ ಶಬ್ದವನ್ನು ಮಾಡುತ್ತಾ ಮೇಘದ ಮಧ್ಯದಲ್ಲಿ ಓಡಾಡುವವನು ಅಥವಾ ರೋದಯತೇರ್ವಾ ಶತ್ರುಗಳು ಅಳುವಹಾಗೆ ಕಾರ್ಯಗಳನ್ನುಮಾಡಿ ಅವರನ್ನು ಅಳಿಸುವವನು ಎಂದು ಅರ್ಥವನ್ನು ವಿವರಿಸಿರುವರು. ಮತ್ತು ಯದರುದತ್ ತದ್ರುದ್ರಸ್ಯ ರುದ್ರತ್ವಂ ಇವನು ತನ್ನ ತಂದೆ ಯಾದ ಪ್ರಜಾಪತಿಗೆ ಬಾಣಗಳಿಂದ ಪೆಟ್ಟುಬಿದ್ದಾಗ ಅವನನ್ನು ನೋಡಿ ವ್ಯಸನಪಟ್ಟು ಅತ್ತನು ಎಂದು ಕಾಠಕ ಸಂಹಿತೆಯಲ್ಲಿರುವ ಪ್ರಸಿದ್ಧವಾದ ಇತಿಹಾಸವನ್ನನುಸರಿಸಿಯೂ, ಅಥವಾ ಮೈತ್ರಾಯಣೀಯಶಾಖಾಭೇದಗತವಾದ ಯದರೋದೀತ್ ತದ್ರುದ್ರಸ್ಯ ರುದ್ರತ್ವಂ ಎಂಬ ಅಭಿಪ್ರಾಯವನ್ನನುಸರಿಸಿ, ರೋದನಮಾಡಿದಕಾರಣ ಈ ದೇವ ನಿಗೆ ರುದ್ರನೆಂದು ಹೆಸರು ಎಂದು (ನಿ. ೧೦-೭) ರುದ್ರಶಬ್ದಾರ್ಥನಿರ್ವಚನಮಾಡಿರುವರು. ಸಾಯಣರು ರುದ್ರಶಬ್ದಕ್ಕೆ ಅರ್ಥವನ್ನು ಹೇಳುವಾಗ ಸ್ವಲ್ಪ ವ್ಯತ್ಯಸ್ತವಾಗಿ ಹೇಳಿರುವರು. ಪ್ರಳಯಕಾಲದಲ್ಲಿ ಎಲ್ಲರೂ ಅಳುವಂತೆ ಮಾಡುವುದ ರಿಂದಲೂ ಅಥವಾ ಸಂಸಾರವೆಂಬ ದುಃಖವನ್ನು ನಾಶಮಾಡುವುದರಿಂದಲೂ, ಅಥವಾ ಶಬ್ದರೂಪವಾದ ಉಪನಿಷತ್ತು ಗಳಿಂದ ಪ್ರತಿಪಾದ್ಯನಾಗಿರುವುದರಿಂದಲೂ, ಅಥವಾ ಆತ್ಮವಿದ್ಯೆಯನ್ನು ಆತ್ಮವಿದ್ಯೋಪಾಸಕರಿಗೆ ಉಪದೇಶಮಾಡು ವುದರಿಂದಲೂ, ಅಥವಾ ಪ್ರಕಾಶವನ್ನು ಆವರಿಸುವ ಕಗ್ಗತ್ತಲೆಯಂತೆ ಜ್ಞಾನವನ್ನು ಆವರಿಸುವ ಅಜ್ಞಾನವನ್ನು ನಾಶ ಮಾಡುವುದರಿಂದಲೂ, ಈ ದೇವನಿಗೆ ರುದ್ರನೆಂಬ ಹೆಸರು ಸಲ್ಲುವುದು ಎಂದು ರುತ್ ಶಬ್ದದ ಅರ್ಥಭೇದಗಳನ್ನನುಸರಿಸಿ ರುದ್ರಶಬ್ದದ ಅರ್ಥವನ್ನು ವಿವರಿಸಿರುವರು. ಈ ರುದ್ರಶಬ್ದನಿರ್ವಚನವನ್ನೂ ನಾನಾವಿಧ ಅರ್ಥಗಳನ್ನೂ ಆಯಾ ಸಂದರ್ಭಕ್ಕೆ ಅನುಗುಣವಾಗಿ ಋ. ಸಂ. ಭಾಗ 5 ಪೇಜು 589, ಭಾಗ 6 ಪೇಜು 350, ಭಾಗ 9 ಪೇಜು 101, ಭಾಗ 10 ಪೇಜು 379; ಭಾಗ 13 ಪೇಜು 541 ಈ ಸ್ಥಳಗಳಲ್ಲಿ ವಿವರಿಸಿರುವೆವು.

ಅಸುರಃ—ಶತ್ರೂಣಾಂ ನಿರಸಿತಾ। ಶತ್ರುಗಳನ್ನು ತಿರಸ್ಕರಿಸುವವನು ಎಂದು ಅಗ್ನಿಗಾಗಲಿ, ರುದ್ರಶಬ್ದ ಕ್ಕಾಗಲಿ ಇದು ವಿಶೇಷಣರೂಪವಾಗಿದೆ. ಅಥವಾ ಅಸುರ್ಬಲಂ ತಸ್ಯ ದಾತಾದಿತ್ಯರೂಪಸ್ತ್ವಮಸಿ ಅಥವಾ ಅಸು ವೆಂದರೆ ಬಲವು. ಆ ಬಲವನ್ನು ಕೊಡುವ ಆದಿತ್ಯರೂಪನೇ ನೀನು ಎಂದು ಅಗ್ನಿಯನ್ನು ಸ್ತುತಿಸಿದೆ. ಅಗ್ನಿಗೆ ದ್ಯುಲೋಕ ಸಂಬಂಧವಾದ ಅಸುರತ್ವವನ್ನು—

ಉತ ವಾ ದಿವೋ ಅಸುರಾಯ ಮನ್ಮ ಪ್ರಾನ್ಧಾಂಸೀವ ಯಜ್ಯವೇ ಭರಧ್ವಂ।

(ಋ. ಸಂ. ೫-೪೧-೩)

ಎಂಬ ಋಕ್ಕಿನಲ್ಲಿ ಹೇಳಿರುವುದು. ಅಸುರ ಶಬ್ದವು ಪುರಾಣಾದಿಗಳಲ್ಲಿ ರಾಕ್ಷಸ ಶಬ್ದದ ಪರ್ಯಾಯವಾಗಿದೆ. ಆದರೆ ಋಕ್ಸಂಹಿತೆಯಲ್ಲಿ ಈ ಶಬ್ದದ ಪ್ರಯೋಗವು ನಾನಾರ್ಥಗಳಲ್ಲಿದೆ. ಅಸುವೆಂದರೆ ಪ್ರಾಣ, ಪ್ರಜ್ಞಾ, ಎಸೆಯುವುದು ಇತ್ಯಾದ್ಯನೇಕಾರ್ಥಗಳಾಗುತ್ತವೆ. ಆದುದರಿಂದ ಅಸುರಶಬ್ದವೂ ಈ ಅರ್ಥಗಳಿಗನುಸಾರವಾಗಿ ಉಪಯೋಗಿಸ ಲ್ಪಟ್ಟಿದೆ. ಇವನ್ನು ಸಂದರ್ಭಾನುಸಾರವಾಗಿ ಅನ್ವಯಮಾಡಿಕೊಳ್ಳಬೇಕು.

ಬೃಹಚ್ಛ್ರವಾ ಅಸುರೋ ಬರ್ಹಣಾ ಕೃತಃ ಪುರೋ ಹರಿಭ್ಯಾಂ ವೃಷಭೋ ರಥೋ ಹಿ ಷಃ।

(ಋ. ಸಂ. ೧-೫೪-೩)

ಎಂಬ ಋಕ್ಕಿನಲ್ಲಿ ಅಸುರಶಬ್ದವು ಇಂದ್ರನಿಗೆ ವಿಶೇಷಣವಾಗಿದೆ. ಇಲ್ಲಿಯೂ ಸಹ ಈ ಋಕ್ಕಿನಲ್ಲಿ ಹೇಳಿರುವಂತೆಯೇ ಅಸುರಃ—ಶತ್ರೂಣಾಂ ನಿರಸಿತಾ ಎಂದು ಒಂದು ವಿಧವಾದ ಅರ್ಥವನ್ನೂ, ಯದ್ವಾ ಅಸುಃ ಪ್ರಾಣೋ ಬಲಂ

**ವಾ ತದ್ವಾನ್ । ರೋ ಮರ್ತ್ಯೈರ್ಥೀಯಃ । ಅಥವಾ ಅಸವಃ ಪ್ರಾಣಾಃ ತೇನ ಚ ಅಪೋ ಲಕ್ಷ್ಯಂತೇ । ತಾನ್ ದಾತಿ ದದಾತೀತಿ ಅಸುರಃ** । ಅಥವಾ ಅಸುಶಬ್ದಕ್ಕೆ ಪ್ರಾಣ, ಬಲ ಎಂಬರ್ಥಗಳಿರುವುದರಿಂದ ಪ್ರಾಣವುಳ್ಳವನು, ಬಲವುಳ್ಳವನು ಎಂದಾಗಬಹುದು. ಅಥವಾ ಅಸವಃ ಎಂದರೆ ಉದಕಗಳು, ಅವುಗಳನ್ನು ಕೊಡತಕ್ಕ (ವೃಷ್ಟಿಪ್ರದನಾದ) ಇಂದ್ರನೆಂದಾಗಬಹುದು. ಇಂದ್ರನಿಗೆ ಈ ವಿಧವಾದ ನಾನಾಶಕ್ತಿಗಳಿರುವುದರಿಂದ ಈ ಎಲ್ಲಾ ಅರ್ಥಗಳಲ್ಲಿಯೂ ಈ ಶಬ್ದವು ಇಂದ್ರನಿಗೆ ವಿಶೇಷಣವಾಗಬಹುದು. ಇದರಂತೆಯೇ,

**ಕ್ಷಯನ್ನಸ್ಮಭ್ಯಮಸುರ ಪ್ರಚೇತಾ ರಾಜನ್ನೇನಾಂಸಿ ಶಿಶ್ರಥಃ ಕೃತಾನಿ ।**

(ಋ. ಸಂ. ೧–೨೪–೧೪)

ಎಂಬ ಋಕ್ಕಿನಲ್ಲಿ **ಅನಿಷ್ಟಕ್ಷೇಪಣಶೀಲಃ**—ಅನಿಷ್ಟವನ್ನು ನಾಶಮಾಡುವವನಾದುದರಿಂದ ವರುಣನಿಗೆ ಅಸುರನೆಂಬ ವಿಶೇಷಣಪ್ರಯೋಗವಿದೆ. ಇದೇ ಅರ್ಥದಲ್ಲಿಯೇ—

**ತ್ವಮಗ್ನೇ ರುದ್ರೋ ಅಸುರೋ ಮಹೋ ದಿವಸ್ತ್ವಂ ಶರ್ಧೋ ಮಾರುತಂ ಪೃಕ್ಷ ಈಶಿಷೇ ।**

(ಋ. ಸಂ. ೨–೧–೬)

ಎಂಬ ಪ್ರಕೃತವಾದ ಋಕ್ಕಿನಲ್ಲಿ ಅಸುರಶಬ್ದವು ಶತ್ರುಗಳನ್ನು ನಿರಸನಮಾಡುವವನು ಎಂಬರ್ಥದಲ್ಲಿ ಅಗ್ನಿ ಅಥವಾ ರುದ್ರನಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ.

**ವಿ ಸುಪರ್ಣೋ ಅಂತರಿಕ್ಷಾಣ್ಯಖ್ಯದ್ಗಭೀರವೇಪಾ ಅಸುರಃ ಸುನೀಥಃ ।**

(ಋ. ಸಂ. ೧–೩೫–೭)

ಎಂಬ ಋಕ್ಕಿನಲ್ಲಿ **ಅಸುರಃ** ಎಂದರೆ **ಅಸುಂ ಪ್ರಾಣಂ ರಾತಿ ದದಾತೀತ್ಯಸುರಃ ಆದಿತ್ಯಃ** । ಎಂದರೆ ಪ್ರಾಣದಾತನಾದ (ಚೈತನ್ಯದಾತನಾದ) ಸೂರ್ಯನೆಂದರ್ಥವು.

**ಪೃಷದ್ಯೋನಿಃ ಪಂಚಹೋತಾ ಶೃಣೋತ್ವತೂರ್ತಪಂಥಾ ಅಸುರೋ ಮಯೋಭುಃ ।**

(ಋ. ಸಂ. ೫–೪೨–೧)

ಎಂಬ ಋಕ್ಕಿನಲ್ಲಿ ಹಿಂದೆ ವಿವರಿಸಿದಂತೆ ಪ್ರಾಣದಾತನಾದ ವಾಯುವೆಂದರ್ಥವು.

**ಅಸ್ಮೇ ವೀರೋ ಮರುತಃ ಶುಷ್ಮ್ಯಸ್ತು ಜನಾನಾಂ ಯೋ ಅಸುರೋ ವಿಧರ್ತಾ ॥**

(ಋ. ಸಂ. ೭-೫೬-೨೪)

ಎಂಬ ಋಕ್ಕಿನಲ್ಲಿ ಅಸುರಶಬ್ದಕ್ಕೆ ಪ್ರಜ್ಞಾವಾನ್ ಎಂಬರ್ಥವಿದೆ.

**ಶತಂ ಕಕ್ಷೀವಾँ ಅಸುರಸ್ಯ ಗೋನಾಂ ದಿವಿ ಶ್ರವೋऽಜರಮಾ ತತಾನ ।**

(ಋ. ಸಂ ೧-೧೨೬-೨)

ಇಲ್ಲಿ ಅಸುರಸ್ಯ ಗೋನಾಂ ಎಂದರೆ ಗೋವುಗಳನ್ನು ಕೊಡತಕ್ಕ ದಾನಶೀಲನೆಂದು ಅರ್ಥವಿವರಣೆ ಇದೆ.

**ತ್ರಿರುತ್ತಮಾ ದೂಣಶಾ ರೋಚನಾನಿ ತ್ರಯೋ ರಾಜಂತ್ಯಸುರಸ್ಯ ವೀರಾಃ ।**

(ಋ ಸಂ. ೩–೫೬-೮)

ಎಂಬಲ್ಲಿ **ಅಸ್ಯತಿ ಕ್ಷಿಪತಿ ಸರ್ವಮಿತ್ಯಸುರಃ ಕಾಲಾತ್ಮಾ ಸಂವತ್ಸರಃ** ಎಂದು ಕಾಲಪರ್ಯಾಯವಾಗಿ ಉಪಯೋಗಿಸಲ್ಪಟ್ಟಿದೆ.

**ಯಥಾ ರುದ್ರಸ್ಯ ಸೂನವೋ ದಿವೋ ವಶಂತ್ಯಸುರಸ್ಯ ವೇಧಸಃ |**

(ಋ. ಸಂ. ೮-೨೦-೧೭)

ಎಂಬ ಋಕ್ಕಿನಲ್ಲಿ ಅಸುರಸ್ಯ ಎಂಬ ಶಬ್ದವು ಮೇಘವೆಂಬರ್ಥದಲ್ಲಿ ಉಪಯೋಗಿಸಿದೆ.

**ಅನಾಯುಧಾಸೋ ಅಸುರಾ ಅದೇವಾಶ್ಚಕ್ರೇಣ ತಾँ ಅಪ ವಪ ಋಜೀಷಿನ್ |**

(ಋ. ಸಂ. ೮-೯೬-೯)

ಇತ್ಯಾದಿಋಕ್ಕುಗಳಲ್ಲಿ ಅಸುರರೆಂದರೆ ರಾಕ್ಷಸರ ಗುಂಪಿಗೆ ಸೇರಿದ ದೈತ್ಯರೆಂದು ಅರ್ಥವು. ಪ್ರಕೃತವಾದ ಋಕ್ಕಿನಲ್ಲಿ ಶತ್ರುಗಳಾದ ಅಂತಹ ರಾಕ್ಷಸರನ್ನು ನಿರಸನಮಾಡತಕ್ಕ ಅಗ್ನಿ ಅಥವಾ ರುದ್ರನೆಂದರ್ಥವು. ಪುರಾಣಾದಿಗಳಲ್ಲಿಯೂ ಮತ್ತು ಆಧುನಿಕ ಸಂಸ್ಕೃತದಲ್ಲಿಯೂ **ಸುರ** ಎಂದರೆ ದೇವತೆ, **ಅಸುರ** ಎಂದರೆ ದೇವತೆಯಲ್ಲದ ರಾಕ್ಷಸ ಎಂಬರ್ಥವು ರೂಢಿಯಲ್ಲಿದೆ. ಆದರೆ ಅಸುರಶಬ್ದವು **ಸುರ** ಶಬ್ದದ ನಿಷೇಧಾರ್ಥಕವಾಗಿ ನಿಷ್ಪನ್ನವಾಗಿಲ್ಲ. **ಅಸುರ** ಎಂಬ ಶಬ್ದವೇ ವೇದಗಳಲ್ಲಿ (ಅದರಲ್ಲಿಯೂ ಋಗ್ವೇದದಲ್ಲಿ) ರೂಢಿಯಲ್ಲಿದ್ದು ಅನಂತರ ಅಕಾರಲೋಪವಾಗಿ ವ್ಯತಿರಿಕ್ತಾರ್ಥ ಸೂಚಕವಾದ **ಸುರ** ಎಂಬ ಶಬ್ದವು ರೂಢಿಯಲ್ಲಿ ಬಂದಿದೆ. ಇದೇ ರೀತಿಯಾಗಿ **ಅದಿತಿ** ಶಬ್ದವು ರೂಢಿಯಲ್ಲಿದ್ದು ಅನಂತರ ಅಕಾರಲೋಪವಾಗಿ **ದಿತಿ** ಶಬ್ದವು ರೂಢಿಗೆ ಬಂದಿದೆ. **ಅದಿತಿ** ಯೆಂದರೆ ದೇವಮಾತಾ, ದೇವತೆಗಳ ತಾಯಿ. ದಿತಿ ಯೆಂದರೆ ಅದಕ್ಕೆ ವ್ಯತಿರಿಕ್ತವಾಗಿ ರಾಕ್ಷಸರ ಮಾತೆಯು ಎಂಬರ್ಥವು ಈಚಿಗೆ ರೂಢಿಗೆ ಬಂದಿರುವುದು.

**ಮಾರುತಂ ಶರ್ಧಃ—ಮರುತ್ಸಮೂಹರೂಪಂ ಬಲಮಸಿ | ವಾಯುರೂಪಶ್ಚ ತ್ವಮಸೀತ್ಯರ್ಥಃ |** ವಾಯುರೂಪನಾಗಿದ್ದೀಯೆ. ಅಥವಾ ೪೯ ಮಂದಿ ಮರುದ್ದೇವತೆಗಳ ಒಟ್ಟು ಸಂಘಶಕ್ತಿರೂಪನಾಗಿದ್ದೀಯೆ ಎಂದಭಿಪ್ರಾಯವು. ಮರುದ್ದೇವತೆಗಳ ಸಂಘಶಕ್ತಿಯು ಅದ್ಭುತವಾದದ್ದು. ಈ ಶಕ್ತಿಯನ್ನು ವರ್ಣಿಸುವಾಗ **ಮಾರುತಂ ಶರ್ಧಃ** ಎಂಬ ಶಬ್ದಗಳಿಂದ ವಿವರಿಸುವುದು ರೂಢಿಯಾಗಿದೆ.

**ಇಂದ್ರಂ ಮಿತ್ರಂ ವರುಣಮಗ್ನಿಮೂತಯೇ ಮಾರುತಂ ಶರ್ಧೋ ಅದಿತಿಂ ಹವಾಮಹೇ |**

(ಋ. ಸಂ. ೧-೧೦೬-೧)

ಇತ್ಯಾದಿ ಋಕ್ಕುಗಳಲ್ಲಿ ಮರುದ್ದೇವತೆಗಳನ್ನು ಅಥವಾ ಮರುದ್ದೇವತೆಗಳ ಸಂಘಶಕ್ತಿಯನ್ನು ಹೇಳುವಾಗ **ಮಾರುತಂ ಶರ್ಧಃ** ಎಂಬ ಶಬ್ದಗಳ ಪ್ರಯೋಗವಿರುವುದು.

**ಪೃಕ್ಷ ಈಶಿಷೇ—ಅನ್ನಸ್ಯ ಹವಿರ್ಲಕ್ಷಣಸ್ಯ ತ್ವಂ ಈಶ್ವರೋ ಭವಸಿ |**

ಪೃಕ್ಷಃ ಎಂಬ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. (ನಿ. ೨-೯) ಹವೀರೂಪವಾದ ಅಥವಾ ಆಹಾರರೂಪವಾದ ಅನ್ನಕ್ಕೆ ಅಗ್ನಿಯೇ ಪ್ರಭುವೆಂದು ವರ್ಣಿಸಿದೆ.

**ತ್ವಂ ವಾತೈರರುಣೈರ್ಯಾಸಿ ಶಂಗಯಃ—ತ್ವಂ ವಾತೈರ್ವಾಯುಸದೃಶೈರರುಣೈರರುಣವರ್ಣೈ- ರಶ್ವೈಃ ಶಂಗಯಃ ಸುಖಸ್ಯ ಗೃಹರೂಪ ಆವಾಸಭೂತಃ ಸನ್ ಯಾಸಿ ಪ್ರಾಪ್ನೋಷಿ ಯಾಗಗೃಹಂ |** ಎಲೈ ಅಗ್ನಿಯೇ, ನೀನು ವಾಯುಸದೃಶವಾದ ಎಂದರೆ ವಾಯುವಿನಂತೆ ವೇಗವುಳ್ಳ ಮಾಸಲು ಕೆಂಪುಬಣ್ಣದ ಕುದುರೆ ಗಳಿಂದ ಯುಕ್ತನಾಗಿ (ಎಂದರೆ ಅಶ್ವಯುಕ್ತವಾದ ರಥದಲ್ಲಿ ಕುಳಿತು) ಸುಖನಿವಾಸವುಳ್ಳವನಾಗಿ ನಮ್ಮ ಯಜ್ಞಗೃಹಕ್ಕೆ

ಬರುವವನಾಗು ಎಂದರ್ಥವು. ಯದ್ವಾ ಅರುಣ್ಯೈರ್ಗಮನಶೀಲೈರ್ವಾಯುಭಿರುತ್ಪನ್ನಃ ಸನ್ ಯಾಸಿ ವನೇ । ಅಥವಾ ಯಾವಾಗಲೂ ಚಲಿಸುವ ಅಥವಾ ಬೀಸುತ್ತಿರುವ ಗಾಳಿಯಿಂದ ಕಾಡಿನಲ್ಲಿ ಉತ್ಪನ್ನನಾಗಿ ಪ್ರವೃದ್ಧಮಾನ ನಾಗುವೆ ಎಂದಾದರೂ ಅರ್ಥವಾಗಬಹುದು

**ಪೂಷಾ—ಸರ್ವಸ್ಯ ಪೋಷಕಃ** । ಸರ್ವರನ್ನೂ ಪೋಷಿಸತಕ್ಕ ಅಗ್ನಿಯು ಅಥವಾ ಪೂಷಾ ಎಂಬ ಪ್ರಸಿದ್ಧವಾದ ದೇವತೆಯು. ಇಂತಹ ದೇವತಾಸ್ವರೂಪನಾಗಿರುವೆ.

**ನು—ಕ್ಷಿಪ್ರಂ** । ಬೇಗನೆ. ಯಾಸ್ಕರು ಈ ಶಬ್ದಕ್ಕೆ **ನು ಇತ್ಯೇಷೋಽನೇಕಕರ್ಮಾ** ನು ಎಂಬ ಶಬ್ದಕ್ಕೆ ಅನೇಕ ವಿಧವಾದ ಅರ್ಥಗಳಿರುವುವೆಂದು ಹೇಳಿದ್ದಾರೆ. (ನಿ. ೧-೪) ಕಾರಣವನ್ನು ತಿಳಿಸುವಾಗಲೂ, ಉಪಮಾದ್ಯರ್ಥ ಗಳಲ್ಲಿಯೂ ಈ ಶಬ್ದಪ್ರಯೋಗವಿದೆ. ಇಲ್ಲಿ ಕ್ಷಿಪ್ರಂ—ಬೇಗನೆ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ.

**ತ್ಮನಾ ವಿಧತಃ ಪಾಸಿ—ಆತ್ಮನಾ, ಅನುಗ್ರಹರೂಪಯಾ ಸ್ವಬುದ್ಧ್ಯೈವ ವಿಧತಃ ಪರಿಚರತೋ ಯಜಮಾನಾನ್ ಪಾಸಿ**—ಆತ್ಮನಾ ಎಂಬ ಶಬ್ದದ ಆಕಾರವು ಛಂದಸ್ಸಿನ ಅನುಕೂಲಕ್ಕಾಗಿ ಲೋಪವಾಗಿ ತ್ಮನಾ ಎಂದಿರುವುದು. ಸಾಧಾರಣವಾಗಿ ಋಗ್ವೇದದಲ್ಲಿ ಆತ್ಮನಾ ಎಂಬ ಶಬ್ದದ ಪ್ರಯೋಗವಿರಬೇಕಾದ ಕಡೆಗಳಲ್ಲೆಲ್ಲಾ ತ್ಮನಾ ಎಂಬ ಶಬ್ದದ ಪ್ರಯೋಗವೇ ಇರುವುದು. ಅನುಗ್ರಹರೂಪವಾದ ನಿನ್ನ ಸ್ವಬುದ್ಧಿಯಿಂದ ನಿನ್ನನ್ನು ಉಪಚರಿ ಸುತ್ತಿರುವ ಯಜ್ಞಮಾಡುವ ಯಜಮಾನರನ್ನು ರಕ್ಷಿಸು ಎಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ.

---

ಸಂಹಿತಾಪಾಠ

## ತ್ವಮಗ್ನೇ ದ್ರವಿಣೋದಾ ಅರಂಕೃತೇ ತ್ವಂ ದೇವಃ ಸವಿತಾ ರತ್ನಧಾ ಅಸಿ । ತ್ವಂ ಭಗೋ ನೃಪತೇ ವಸ್ವ ಈಶಿಷೇ ತ್ವಂ ಪಾಯುರ್ದಮೇ ಯಸ್ತೇಽ-ವಿಧತ್ ॥ ೭ ॥

ಪದಪಾಠ

ತ್ವಂ । ಅಗ್ನೇ । ದ್ರವಿಣಃಽದಾಃ । ಅರಂಽಕೃತೇ । ತ್ವಂ । ದೇವಃ । ಸವಿತಾ । ರತ್ನಽಧಾಃ । ಅಸಿ । ತ್ವಂ । ಭಗಃ । ನೃಽಪತೇ । ವಸ್ವಃ । ಈಶಿಷೇ । ತ್ವಂ । ಪಾಯುಃ । ದಮೇ । ಯಃ । ತೇ । ಅವಿಧತ್ ॥ ೭ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಮರಂಕೃತೇ ತ್ವಾಮಲಂಕುರ್ವತೇ ಯಜಮಾನಾಯ ದ್ರವಿಣೋದಾಃ । ಹಿರಣ್ಯಸ್ಯ ದಾತಾಽಸಿ । ದೇವೋ ದ್ಯೋತಮಾನಃ ಸವಿತಾ ಸರ್ವಸ್ಯ ಸತ್ಕರ್ಮಸು ಪ್ರೇರಕಸ್ತ್ವಂ ರತ್ನಧಾ ರಮಣೀ-

ಯಾನಾಂ ಧನಾನಾಂ ಮಣಿಮುಕ್ತಾದೀನಾಂ ಧಾರಯಿತಾಸಿ । ತಥಾ ಹೇ ನೃಪತೇ ನೃಣಾಂ ಪಾಲಕಾಗ್ನೇ ತ್ವಂ ಭಗೋ ಭಜನೀಯಃ ಸನ್ ವಸ್ವೋ ವಸುನೋ ಧನಸ್ಯೇಶಿಷೇ । ಸಮರ್ಥೋ ಭವಸಿ ದಾತುಂ । ಯೋ ಯಜಮಾನೋ ದಮೇ ಯಜ್ಞಗೃಹೇ ತೇ ತ್ವಾಮವಿಧತ್ ಪರಿಚರತಿ ತಸ್ಯ ಪಾಯುಃ ಪಾಲಕಸ್ತ್ವಮಸಿ ॥

### ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ಅರಂಕೃತೇ—ನಿನ್ನನ್ನು ಅಲಂಕರಿಸುವ ಯಜಮಾನನಿಗೆ ದ್ರವಿಣೋದಾಃ—ಸುವರ್ಣಾದಿಗಳನ್ನು ಕೊಡುವವನಾಗಿದ್ದೀಯೆ । ರತ್ನಧಾಃ ತ್ವಂ—ರಮಣೀಯವಾದ ಮಣಿ ಮುಕ್ತಾದಿಗಳನ್ನು ಧರಿಸಿರುವ ನೀನು । ದೇವಃ ಸವಿತಾ—ಸಕಲ ಕರ್ಮಗಳಿಗೂ ಪ್ರೇರಕನಾದವನೂ, ದೇವತಾತ್ಮನೂ ಆದ ಸವಿತೃವಾಗಿ । ಅಸಿ—ಆಗಿದ್ದೀಯೆ । ನೃಪತೇ—ನರರಿಗೆಲ್ಲಾ ಪಾಲಕನಾದ ಎಲೈ ಅಗ್ನಿಯೇ । ತ್ವಂ—ನೀನು । ಭಗಃ—ಪೂಜ್ಯನಾದ ಭಗನಾಗಿ । ವಸ್ವಃ—ಧನಕ್ಕೆ । ಈಶಿಷೇ—ಪ್ರಭುವಾಗಿದ್ದೀಯೆ । ಯಃ—ಯಾವ ಯಜಮಾನನು । ದಮೇ—ಯಜ್ಞಗೃಹದಲ್ಲಿ । ತೇ—ನಿನ್ನನ್ನು । ಅವಿಧತ್—ಉಪಚರಿಸುತ್ತಾನೆಯೋ ಅವನ । ಪಾಯುಃ—ಪಾಲಕನಾಗಿ । ತ್ವಂ—ನೀನು (ಇದ್ದೀಯೆ) ।

### ಭಾವಾರ್ಥ

ಎಲೈ ಅಗ್ನಿಯೇ, ನೀನು ನಿನ್ನನ್ನು ಅಲಂಕರಿಸುವ ಯಜಮಾನನಿಗೆ ಸುವರ್ಣಾದಿಗಳನ್ನು ಕೊಡುವ ದ್ರವಿಣೋದನಾಗಿದ್ದೀಯೆ. ರಮಣೀಯವಾದ ಮಣಿಮುಕ್ತಾದಿಗಳನ್ನು ಧರಿಸಿರುವ ನೀನು ಸಕಲ ಕರ್ಮಗಳಿಗೂ ಪ್ರೇರಕನಾದವನೂ, ದೇವತಾತ್ಮನೂ ಆದ ಸವಿತೃವಾಗಿದ್ದೀಯೆ ನರರಿಗೆಲ್ಲಾ ಪಾಲಕನಾದ ಎಲೈ ಅಗ್ನಿಯೇ, ನೀನು ಪೂಜ್ಯನಾದ ಭಗನಾಗಿ ಧನಕ್ಕೆ ಪ್ರಭುವಾಗಿದ್ದೀಯೆ ಯಾವ ಯಜಮಾನನು ನಿನ್ನನ್ನು ಉಪಚರಿಸುತ್ತಾನೆಯೋ ಅವನ ಪಾಲಕನಾಗಿದ್ದೀಯೆ.

### English Translation

You, Agni, are Dravinodas, to him who honours you : you are the divine Savitri, the possessor of precious things : protector of men, you are Bhaga and rule over wealth ; you are the cherisher of him who worships you in his dwelling.

### ವಿಶೇಷವಿಷಯಗಳು

ದ್ರವಿಣೋದಾಃ—ಈ ಶಬ್ದಕ್ಕೆ ಯಾಸ್ಕರು ವಿಸ್ತಾರವಾದ ವಿವರಣೆಯನ್ನು ಬರೆದಿರುವರು—

> ದ್ರವಿಣೋದಾಃ । ದ್ರವಿಣೋದಾಃ ಕಸ್ಮಾದ್ಧನಂ ದ್ರವಿಣಮುಚ್ಯತೇ । ಯದೇನದಭಿದ್ರವಂತಿ । ಬಲಂ ವಾ ದ್ರವಿಣಂ ಯದೇನೇನಾಭಿದ್ರವಂತಿ । ತಸ್ಯ ದಾತಾ ದ್ರವಿಣೋದಾಃ ।
> (ನಿ. ೮-೧)

ಇಲ್ಲಿ ದ್ರವಿಣೋದಾಃ ಎಂಬ ಶಬ್ದದ ನಿಷ್ಪತ್ತಿಯು, ದ್ರವಿಣಂ ದದಾತೀತಿ ದ್ರವಿಣೋದಾಃ ದ್ರವಿಣಶಬ್ದಕ್ಕೆ ಧನ, ಬಲ ಎಂದು ಎರಡು ಅರ್ಥಗಳಿರುವುವು. ಆದುದರಿಂದ ದ್ರವಿಣೋದಾಃ ಎಂದರೆ ಧನವನ್ನು ಅಥವಾ ಬಲವನ್ನು

ಕೊಡುವವನು ಎಂದರ್ಥವು. ಇದು ಈ ಶಬ್ದದ ಅವಯವಾರ್ಥವು. ಇದಲ್ಲದೆ ಯಾಸ್ಕರು ದ್ರವಿಣೋದಾ ದ್ರವಿಣಸಃ ಎಂಬ ಋಕ್ಕಿಗೆ (ಋ. ಸಂ. ೧-೧೫-೭) ನಿರ್ವಚನವನ್ನು ಹೀಗೆ ಹೇಳಿರುವರು—

> ದ್ರವಿಣೋದಾ ಯಸ್ತ್ವಂ । ದ್ರವಿಣಸ ಇತಿ ದ್ರವಿಣಸಾದಿನ ಇತಿ ವಾ ದ್ರವಿಣಸಾನಿನ ಇತಿ ವಾ ದ್ರವಿಣಸಸ್ತಸ್ಮಾತ್ ಪಿಬ ತ್ವಿತಿ ವಾ । ಯಜ್ಞೇಷು ದೇವಮೀಳತೇ । ಯಾಚಂತಿ ಸ್ತುವಂತಿ, ವರ್ಧಯಂತಿ ಪೂಜಯಂತೀತಿ ವಾ ॥

ಎಂದರೆ ಧನ, ಹವಿಸ್ಸು ಮುಂತಾದುವುಗಳನ್ನು ಅಪೇಕ್ಷಿಸುವ ಋತ್ವಿಜರು ದ್ರವಿಣೋದಾ ಎಂಬ ನಿನ್ನನ್ನು ಯಜ್ಞಗಳಲ್ಲಿ ಸೋಮಪಾನ ಮಾಡುವಂತೆ, ಪ್ರಾರ್ಥಿಸುತ್ತಾರೆ ಎಂದು ಮುಖ್ಯಾರ್ಥವು. ಇಲ್ಲಿ ದ್ರವಿಣೋದಾಃ ಎಂಬುದು ಪ್ರಥಮಾ ವಿಭಕ್ತಿಯ ಏಕವಚನವಾಗಿದ್ದರೂ ದೇವಂ ಎಂಬ ದ್ವಿತೀಯೈಕವಚನಕ್ಕೆ ಹೇಗೆ ವಿಶೇಷಣವಾಯಿತೆಂದರೆ—ದ್ರವಿಣೋದಾ ಯಃ ದೇವಃ ತಂ ದೇವಂ, ಯಾವ ದೇವನು ಧನದಾತನೋ ಆ ದೇವನನ್ನು ಎಂದು ಅರ್ಥವಾಗುವಂತೆ ಪದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕು. ದ್ರವಿಣಸಃ—ಎಂದರೆ ಧನ ಅಥವಾ ಹವಿಸ್ಸನ್ನು ದೇವತಾಯಜನಾರ್ಥವಾಗಿ ದೇವನನ್ನು ಪ್ರಾರ್ಥಿಸುವವರಾದುದರಿಂದ ದ್ರವಿಣಸಃ ಎಂಬ ಶಬ್ದಕ್ಕೆ ಋತ್ವಿಜರು ಎಂದರ್ಥವು ಮತ್ತು ಈಳತೇ ಎಂದರೆ ಯಾಚಿಸುತ್ತಾರೆ, ಸ್ತುತಿಸುತ್ತಾರೆ, ಪ್ರಶಂಸೆಮಾಡುತ್ತಾರೆ, ಪೂಜಿಸುತ್ತಾರೆ ಎಂಬ ಅನೇಕ ಅರ್ಥಗಳನ್ನು ಹೇಳಬಹುದು.

> ತತ್ಕೋ ದ್ರವಿಣೋದಾ ಇಂದ್ರ ಇತಿ ಕ್ರೌಷ್ಟುಕಿಃ ।
> ಸ ಬಲಧನಯೋರ್ದಾತೃತಮಸ್ತಸ್ಯ ಚ ಸರ್ವಾ ಬಲಕೃತಿಃ ॥

ದ್ರವಿಣೋದಾಃ ಎಂಬ ಶಬ್ದದ ಅವಯವಾರ್ಥವನ್ನೇನೋ ಹೇಳಿದ್ದಾಯಿತು. ಆದರೆ ಈ ದ್ರವಿಣೋದಾಃ ಎಂಬ ದೇವತೆಯು ಯಾರು ? ಎಂದರೆ, ಇಂದ್ರನೇ ದ್ರವಿಣೋದಾಃ ಎಂಬುದಾಗಿ ಹೇಳಲ್ಪಡುವನು, ಏಕೆಂದರೆ ದ್ರವಿಣ ಶಬ್ದವು ಸೂಚಿಸುವ, ಬಲ, ಧನ, ಇವುಗಳನ್ನು ಅತಿಶಯವಾಗಿ ಕೊಡುವವನು ಇಂದ್ರನೇ ಆದುದರಿಂದ ಇಂದ್ರನನ್ನೇ ದ್ರವಿಣೋದಾಃ ಎಂಬದಾಗಿ ಹೇಳಬೇಕೆಂದು ಕ್ರೌಷ್ಟುಕಿ ಎಂಬುವರ ಅಭಿಪ್ರಾಯವು.

> ಅಥಾಪ್ಯಗ್ನಿಂ ದ್ರವಿಣೋದಸಮಾಹೈಷ ಪುನರೇತಸ್ಮಾಜ್ಜಾಯತೇ ।
> ಯೋ ಅಶ್ಮನೋರಂತರಗ್ನಿಂ ಜಜಾನ ಇತ್ಯಪಿ ನಿಗಮೋ ಭವತಿ ॥

ಮತ್ತು ಇವರು ಈ ಶಬ್ದಕ್ಕೆ ಮತ್ತೊಂದು ಅರ್ಥವನ್ನು ಹೇಳುವರು. ಇಂದ್ರನು ದ್ಯಾವಾಪೃಥಿವಿಗಳನ್ನು ಸೃಷ್ಟಿಸಿದನು. ಅವುಗಳ ಮಧ್ಯದಲ್ಲಿ ಅಗ್ನಿಯನ್ನೂ ಸೃಷ್ಟಿಸಿದನು. ಆದುದರಿಂದ ದ್ರವಿಣೋದಾಃ ಶಬ್ದಕ್ಕೆ ಅಗ್ನಿಯೆಂದೂ ಹೇಳಬಹುದು ಎಂದು ಈ ಅರ್ಥವನ್ನು ಸಮರ್ಥಿಸುವುದಕ್ಕಾಗಿ "ಅಶ್ಮನೋರಂತರಗ್ನಿಂ ಜಜಾನ" ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು.

> ಅಥಾಪ್ಯೃತುಯಾಜೇಷು ದ್ರವಿಣೋದಸಃ ಪ್ರವಾದಾ ಭವಂತಿ । ತೇಷಾಂ ಪುನಃ ಪಾತ್ರಸ್ಯೇಂದ್ರಪಾನಮಿತಿ ಭವತಿ ॥ ಅಥಾಪ್ಯೇನಂ ಸೋಮಪಾನೇನ ಸ್ತೌತಿ ಅಥಾಪ್ಯಾಹ ದ್ರವಿಣೋದಾಃ ಪಿಬತು ದ್ರವಿಣೋದಸ ಇತಿ ॥

ಋತುಗಳನ್ನುದ್ದೇಶಿಸಿ ಮಾಡುವ ಯಜ್ಞಗಳಲ್ಲಿ ಋತ್ವಿಜರ ಹಸ್ತದಲ್ಲಿರುವ ಪಾತ್ರೆಯಿಂದ ಇಂದ್ರನು ಸೋಮಪಾನ ಮಾಡುವನೆಂದು ಹೇಳಿರುವುದರಿಂದಲೂ ಇಂದ್ರನನ್ನು ಸೋಮಪಾನಸಂಬಂಧವಾದ ಮಂತ್ರಗಳಿಂದ ಸ್ತೋತ್ರ ಮಾಡುವುದರಿಂದಲೂ, ಋತ್ವಿಜರನ್ನು ದ್ರವಿಣೋದಸರೆಂದು ಕರೆಯುವ ರೂಢಿ ಇದೆ. ಇದೆಲ್ಲವೂ ಕ್ರೌಷ್ಟುಕಿ ಎಂಬುವರ ಮತವು.

**ಅಯಮೇವಾಗ್ನಿರ್ದ್ರವಿಣೋದಾ ಇತಿ ಶಾಕಪೂಣಿಃ । ಆಗ್ನೇಯೇಷ್ವೇವ ಹಿ ಸೂಕ್ತೇಷು ದ್ರವಿಣೋದಸಾಃ ಪ್ರವಾದಾ ಭವಂತಿ.**

ಅಗ್ನಿಯೇ ದ್ರವಿಣೋದಾಃ ಎಂದು ಶಾಕಪೂಣಿಯವರ ಮತವು. ಏಕೆಂದರೆ ಅಗ್ನಿಸಂಬಂಧವಾದ ಸೂಕ್ತಗಳಲ್ಲಿ ಋತ್ವಿಜರು ಅಗ್ನಿಯನ್ನು ಸ್ತುತಿಸುವಾಗ ದ್ರವಿಣೋದಾಃ ಎಂಬ ಶಬ್ದವನ್ನು ಅಗ್ನಿಗೆ ವಿಶೇಷಣಪದವನ್ನಾಗಿ ಉಪಯೋಗಿಸುವರು.

**ಯಥೋ ಏತತ್ಸ ಬಲಧನಯೋರ್ದಾತೃತಮ ಇತಿ ಸರ್ವಾಸು ದೇವತಾಸ್ವೈಶ್ವರ್ಯಂ ವಿದ್ಯತೇ । ಯಥೋ " ಏತದೋಜಸೋ ಜಾತಮುತಮನ್ಯ ಏನಂ'' ಇತಿ ಚಾಹೇತ್ಯೆಯಮಪ್ಯಗ್ನಿರೋಜಸಾ ಬಲೇನ ಮಥ್ಯಮಾನೋ ಜಾಯತೇ ತಸ್ಮಾದೇನಮಾಹ ಸಹಸಸ್ಪುತ್ರಂ ಸಹಸಃ ಸೂನುಂ ಸಹಸೋ ಯಹುಂ ॥**

ಸಮಸ್ತ ದೇವತೆಗಳಲ್ಲಿಯೂ ಐಶ್ವರ್ಯವಿರುವುದು. ಆದುದರಿಂದ ಅಗ್ನಿಯೂ ಬಲ, ಧನ ಇವುಗಳನ್ನು ಕೊಡುವನು. ಬಲಧನಗಳನ್ನು ಕೊಡುವುದರಿಂದ ಅಗ್ನಿಯನ್ನೂ ದ್ರವಿಣೋದಾಃ ಎಂದು ಹೇಳಬಹುದು. ಇದಲ್ಲದೆ ದ್ರವಿಣಶಬ್ದಕ್ಕೆ ಬಲವೆಂದು ಅರ್ಥವಿರುವುದಷ್ಟೆ. ಅಗ್ನಿಯನ್ನು ಉತ್ಪತ್ತಿಮಾಡುವಾಗ ಬಲವನ್ನು ಉಪಯೋಗಿಸಿ (ಬಲವಾಗಿ) ಮಥನಮಾಡುವುದರಿಂದ ಅಗ್ನಿಯು ಬಲದಿಂದ ಹುಟ್ಟಿದನೆಂದು ಹೇಳುವ ಪ್ರತೀತಿ ಇದೆ. ಆದುದರಿಂದಲೇ ಅಗ್ನಿಯನ್ನು ಸಹಸಸ್ಪುತ್ರಂ, ( ಸಹಸಃ-ಬಲದ, ಪುತ್ರಂ-ಪುತ್ರನಾದ ಅಗ್ನಿಯನ್ನು ) ಸಹಸಃ ಸೂನುಂ, ಸಹಸೋ ಯಹುಂ ಎಂಬ ಶಬ್ದಗಳಿಂದ ಸ್ತುತಿಸುವರು—

**ದ್ರ್ವನ್ನಃ ಸರ್ಪಿರಾಸುತಿಃ ಪ್ರತ್ನೋ ಹೋತಾ ವರೇಣ್ಯಃ ।**
**ಸಹಸಸ್ಪುತ್ರೋ ಅದ್ಭುತಃ ॥**

(ಋ. ಸಂ. ೨-೭-೬)

**ತ್ವಂ ಹ ಯದ್ಯವಿಷ್ಠ್ಯ ಸಹಸಃ ಸೂನವಾಹುತ ।**
**ಋತಾವಾ ಯಜ್ಞಿಯೋ ಭುವಃ ॥**

(ಋ. ಸಂ ೮-೭೫-೩)

**ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।**
**ಅಸ್ಮೇ ಧೇಹಿ ಜಾತವೇದೋ ಮಹಿಶ್ರವಃ ॥**

(ಋ. ಸಂ. ೧-೭೯-೪)

ಎಂಬ ಋಕ್ಕುಗಳಲ್ಲಿ ಕ್ರಮವಾಗಿ ಸಹಸಸ್ಪುತ್ರ, ಸಹಸಃಸೂನು, ಸಹಸೋ ಯಹು ಎಂಬ ಶಬ್ದಗಳು ಅಗ್ನಿಯನ್ನು ಸ್ತುತಿಸುವಾಗ ಉಪಯೋಗಿಸಲ್ಪಟ್ಟಿರುವುವು. ಆದುದರಿಂದ ಬಲಧನಗಳನ್ನು ಇತರ ದೇವತೆಗಳು ಕೊಡುವವರಾದರೂ ಅಗ್ನಿಯೇ ವಿಶೇಷವಾಗಿ ದ್ರವಿಣೋದಾಃ ಎಂಬ ಶಬ್ದದಿಂದ ಪ್ರತಿಪಾದಿತನಾಗಿರುವನು.

---

ಸಂಹಿತಾಪಾಠ

ತ್ವಾಮಗ್ನೇ ದಮ ಆ ವಿಶ್ಪತಿಂ ವಿಶಸ್ತ್ವಾಂ ರಾಜಾನಂ ಸುವಿದತ್ರಮೃಂಜತೇ ।

ತ್ವಂ ವಿಶ್ವಾನಿ ಸ್ವನೀಕ ಪತ್ಯಸೇ ತ್ವಂ ಸಹಸ್ರಾಣಿ ಶತಾ ದಶ ಪ್ರತಿ ॥ ೮ ॥

ಪದಪಾಠಃ

ತ್ವಾಂ । ಅಗ್ನೇ । ದಮೇ । ಆ । ವಿಶ್ಪತಿಂ । ವಿಶಃ । ತ್ವಾಂ । ರಾಜಾನಂ । ಸುಽವಿದತ್ರಂ । ಋಂಜತೇ ।

ತ್ವಂ । ವಿಶ್ವಾನಿ । ಸುಽಅನೀಕ । ಪತ್ಯಸೇ । ತ್ವಂ । ಸಹಸ್ರಾಣಿ । ಶತಾ । ದಶ । ಪ್ರತಿ ॥ ೮ ॥

ಸಾಯಣಭಾಷ್ಯಂ

ಹೇ ಅಗ್ನೇ ವಿಶ್ಪತಿಂ ಯಜಮಾನಾನಾಂ ಪಾಲಕಂ ತ್ವಾಂ ವಿಶೋ ಯಜಮಾನಾ ದಮೇ ಸ್ವಕೀಯೇ ಯಜ್ಞಗೃಹ ಆ । ಆಸಾದಯಂತಿ ॥ ಉಪಸರ್ಗವಶಾದ್ಯೋಗ್ಯಕ್ರಿಯೊಧ್ಯಾಹಾರಃ । ತಥಾ ಕೃತ್ವಾ ರಾಜಾನಂ ದೀಪ್ಯಮಾನಂ ಸುವಿದತ್ರಂ ಶೋಭನಜ್ಞಾನಮಸ್ಮದನುಕೂಲಚೇತಸ್ಕಂ ಸುಧನಂ ವಾ ತ್ವಾಮೃಂಜತೇ । ಪ್ರಸಾಧಯಂತಿ ॥ ಋಂಜತಿಃ ಪ್ರಸಾಧನಕರ್ಮೇತಿ ಯಾಸ್ಕಃ ॥ ಯತ ಏವಂ ತತೋ ಹೇ ಸ್ವನೀಕ ಶೋಭನ-ಜ್ವಾಲಾರೂಪಸೇನ ತ್ವಂ ವಿಶ್ವಾನಿ ಸರ್ವಾಣಿ । ಹವೀಂಷೀತಿ ಶೇಷಃ ॥ ಷಷ್ಠ್ಯರ್ಥೇ ದ್ವಿತೀಯಾ । ವಿಶ್ವೇಷಾಂ ಹವಿಷಾಮಾಜ್ಯಸೋಮಪುರೋಡಾಶಾದೀನಾಂ ಪತ್ಯಸೇ । ಈಶ್ವರೋ ಭವಸಿ ॥ ಈಶ್ವರನಾಮ್ಯೈ-ತತ್ । ಇರಜ್ಯತಿ ಪತ್ಯತ ಇತಿ ತನ್ನಾಮಸು ಪಾಠಾತ್ ॥ ಯದ್ವಾ ಪತಿಭಾವಮಾಚರಸಿ। ತ್ವಂ ತು ಸಹಸ್ರಾಣಿ ಶತಾ ಶತಾನಿ ದಶ ಏತತ್ಸಂಖ್ಯಾಕಾನಿ ಪ್ರತಿ। ಏತತ್ಸಂಖ್ಯಾಕಾನಾಮಭಿಮತಸಾಧನಾನಾಂ ಪ್ರತಿನಿಧಿರಿತ್ಯರ್ಥಃ । ಪ್ರತಿಃ ಪ್ರತಿನಿಧಿಪ್ರತಿದಾನಯೋರಿತಿ ಕರ್ಮಪ್ರವಚನೀಯತ್ವಂ ॥ ತ್ವಯ್ಯರ್ಚತ್ಫಲಂ ಭವತಿ ತತ್ತ್ವಯಾ ಲಭ್ಯತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ವಿಶ್ಪತಿಂ—ಯಜಮಾನರ ಪಾಲಕನಾದ । ತ್ವಾಂ—ನಿನ್ನನ್ನು । ವಿಶಃ—ಯಜಮಾನರು । ದಮೇ—ತಮ್ಮಯಜ್ಞಗೃಹದಲ್ಲಿ । ಆ—ಉಪಚರಿಸುತ್ತಾರೆ । ರಾಜಾನಂ—ಪ್ರಕಾಶಮಾನನೂ । ಸುವಿದತ್ರಂ—ಶೋಭನಾತ್ಮಕವಾದ ಜ್ಞಾನ ಅಥವಾ ಧನವುಳ್ಳವನೂ ಆದ । ತ್ವಾಂ—ನಿನ್ನನ್ನು । ಋಂಜತೇ—ಅಲಂಕರಿಸಿ ಪೂಜಿಸುತ್ತಾರೆ । ಸ್ವನೀಕ—ಜ್ವಾಲಾರೂಪವಾದ ಸೇನೆಯುಳ್ಳ ಅಗ್ನಿಯೇ । ತ್ವಂ—ನೀನು । ವಿಶ್ವಾನಿ-ಸಕಲ ಹವಿಸ್ಸುಗಳಿಗೂ । ಪತ್ಯಸೇ—ಪ್ರಭುವಾಗಿದ್ದೀಯೆ । ತ್ವಂ—ನೀನು । ಸಹಸ್ರಾಣಿ—ಸಹಸ್ರಸಂಖ್ಯಾಕವೂ । ಶತಾ—ಶತಸಂಖ್ಯಾಕವೂ । ದಶ—ದಶಸಂಖ್ಯಾಕವೂ ಆದ (ಎಂದರೆ) ಇಷ್ಟಾರ್ಥಗಳಿಗೆ । ಪ್ರತಿ—ಪ್ರತಿನಿಧಿಯಾಗಿ ಅವುಗಳನ್ನು ಸಾಧಿಸಿಕೊಡುವವನಾಗಿದ್ದೀಯೆ. ।

ಭಾವಾರ್ಥ

ಎಲೈ ಅಗ್ನಿಯೇ, ಯಜಮಾನರು ತಮ್ಮ ಯಜ್ಞಗೃಹದಲ್ಲಿ ನಿನ್ನನ್ನು ಉಪಚರಿಸುತ್ತಾರೆ. ಪ್ರಕಾಶಮಾನನೂ, ಶೋಭನಾತ್ಮಕವಾದ ಜ್ಞಾನ ಅಥವಾ ಧನವುಳ್ಳವನೂ ಆದ ನಿನ್ನನ್ನು ಅಲಂಕರಿಸಿ ಪೂಜಿಸುತ್ತಾರೆ. ಜ್ವಾಲಾರೂಪ

ವಾದ ಸೇನೆಯುಳ್ಳ ಅಗ್ನಿಯೇ ನೀನು ಸಕಲಹವಿಸ್ಸುಗಳಿಗೂ ಪ್ರಭುವಾಗಿದ್ದೀಯೆ. ನೀನು ದಶಸಂಖ್ಯಾಕವೂ ಶತಸಂಖ್ಯಾಕವೂ, ಸಹಸ್ರಸಂಖ್ಯಾಕವೂ ಆದ ಇಷ್ಟಾರ್ಥಗಳಿಗೆ ಪ್ರತಿನಿಧಿಯಾಗಿ ಅವುಗಳನ್ನು ಸಾಧಿಸಿ ಕೊಡುವವ ನಾಗಿದ್ದೀಯೆ.

## English Translation

The people adore you, Agni, the protector of the people in their dwellings; they propitiate you as a benevolent sovereign; leader of a radiant host, you are lord over all offerings; you are the distributor of tens, and hundreds, and thousands (of good things).

### ವಿಶೇಷವಿಷಯಗಳು

**ಸುವಿದತ್ರಂ—ಸು** ಎಂಬ ಉಪಸರ್ಗ ಪೂರ್ವಕವಾಗಿ **ವಿದ ಜ್ಞಾನೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಒಳ್ಳೆಯ ಜ್ಞಾನವುಳ್ಳ ಎಂದರ್ಥ.

**ಋಂಜತೇ—ಪ್ರಸಾಧಯಂತಿ** ಅರಾಧಿಸುತ್ತಾರೆ ಯಾಸ್ಕರು ನಿರುಕ್ತದಲ್ಲಿ—**ಋಂಜತಿಃ ಪ್ರಸಾಧನ-ಕರ್ಮಾ । ಆ ವ ಋಂಜಸೇ ಊರ್ಜಾಂ ವ್ಯುಷ್ಟಿಷು ಇತ್ಯಪಿ ನಿಗಮೋ ಭವತಿ ।** (ನಿ. ೬-೨೧) ಎಂದು ಹೇಳಿದ್ದಾರೆ.

**ವಿಶ್ವಾನಿ ಪತ್ಯಸೇ—ಸರ್ವಾಣಿ ಹವೀಂಷೀತಿ ಶೇಷಃ । ಷಷ್ಠ್ಯರ್ಥೇ ದ್ವಿತೀಯಾ । ವಿಶ್ವೇಷಾಂ ಹವಿಷಾಮಾಜ್ಯಸೋಮಪುರೋಡಾಶಾದೀನಾಂ ಪತ್ಯಸೇ ಈಶ್ವರೋ ಭವಸಿ ॥** ಇಲ್ಲಿ **ವಿಶ್ವಾನಿ** ಎಂಬ ಶಬ್ದದ ಜತೆಗೆ ಹವೀಂಷಿ ಎಂಬ ಶಬ್ದವನ್ನು ಅಧ್ಯಾಹಾರಮಾಡಿಕೊಳ್ಳಬೇಕೆಂದೂ ದ್ವಿತೀಯಾವಿಭಕ್ತಿಗೆ ಷಷ್ಠೀ ವಿಭಕ್ತಿಯ ಅರ್ಥವನ್ನು ಹೇಳಬೇಕೆಂದೂ ಭಾಷ್ಯಕಾರರು ಹೇಳಿರುವರು. ಆದುದರಿಂದ **ವಿಶ್ವಾನಿ** ಎಂನರೆ ಹವಿಸ್ಸು, ಆಜ್ಯ, ಸೋಮ, ಪುರೋಡಾಶ ಮೊದಲಾದ ಹೋಮದ್ರವ್ಯಗಳಿಗೆ **ಪತ್ಯಸೇ**—ಸ್ವಾಮಿಯಾಗಿದ್ದೀಯೆ ಎಂದು ಅಗ್ನಿಯನ್ನು ಸ್ತುತಿಸಿದೆ. ಪತ್ಯತೇ (ಪತ್ಯಸೇ ಎಂಬುವುದು ಮಧ್ಯಮಪುರುಷೈಕವಚನವು) ಎಂಬ ಶಬ್ದವು **ಇರಜ್ಯತಿ ಪತ್ಯತೇ** ಮೊದಲಾದ ನಾಲ್ಕು ಐಶ್ವರ್ಯನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೧) **ಪತ್ಯಸೇ** ಎಂದರೆ ಪ್ರಭುವಾಗಿ ದ್ದೀಯೆ ಎಂದರ್ಥವು.

**ಸಹಸ್ರಾಣಿ ಶತಾ ದಶ ಪ್ರತಿ**—ಹತ್ತರಷ್ಟು, ನೂರರಷ್ಟು ಸಾವಿರಗಟ್ಟಲೆ ಇಷ್ಟಾರ್ಥಗಳನ್ನು ಕೊಡುವವ ನಾಗಿರುವೆ ಎಂದು ಅಗ್ನಿಯನ್ನು ಸ್ತುತಿಸಲಾಗಿದೆ. ಇಲ್ಲಿ **ಪ್ರತಿ** ಎಂಬ ಉಪಸರ್ಗಮಾತ್ರವಿದ್ದರೂ ಅದಕ್ಕನುಸಾರ ವಾದ ಪ್ರತಿನಿಧಿ ಎಂಬ ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಅಥವಾ ಸಾವಿರಾರು ಜನರಿಂದ ದೊರೆಯು ಬಹುದಾದ ಇಷ್ಟಾರ್ಥಗಳನ್ನು ನೀನೊಬ್ಬನೇ ಒದಗಿಸಿಕೊಡುವೆ ಎಂದಾದರೂ ಅರ್ಥವಾಗಬಹುದು.

**ಸ್ವನೀಕ—ಶೋಭನಜ್ವಾಲಾರೂಪಸೇನ ।** ಉತ್ತಮವಾದ ಜ್ವಾಲೆಗಳೇ ಅಗ್ನಿಗೆ ಸೇನಾರೂಪವಾಗಿರುವುವು. ಎಂದರೆ ಪ್ರಕಾಶಮಾನವಾದ ಜ್ವಾಲೆಗಳಿಂದ ಬೆಳಗುತ್ತಿರುವವನೆಂದಭಿಪ್ರಾಯವು. ಈ ಶಬ್ದಪ್ರಯೋಗವು ಋಗ್ವೇದದಲ್ಲಿ ಅಗ್ನಿಯ ಪರವಾಗಿ ಋ. ಸಂ. ೪-೬-೬, ೬-೧೫-೧೬, ೭-೧-೨೩, ೭-೩-೬ ಎಂಬ ಋಕ್ಕುಗಳಲ್ಲಿ ಇರುವುದು.

### ಸಂಹಿತಾಪಾಠಃ

ತ್ವಾಮಗ್ನೇ ಪಿತರಮಿಷ್ಟಿಭಿರ್ನರಸ್ತ್ವಾಂ ಭ್ರಾತ್ರಾಯ ಶಮ್ಯಾ ತನೂರುಚಂ ।
ತ್ವಂ ಪುತ್ರೋ ಭವಸಿ ಯಸ್ತೇಽವಿಧತ್ತ್ವಂ ಸಖಾ ಸುಶೇವಃ ಪಾಸ್ಯಾಧೃಷಃ
॥ ೯ ॥

### ಪದಪಾಠ

ತ್ವಾಂ । ಅಗ್ನೇ । ಪಿತರಂ । ಇಷ್ಟಿಽಭಿಃ । ನರಃ । ತ್ವಾಂ । ಭ್ರಾತ್ರಾಯ । ಶಮ್ಯಾ । ತನೂಽರುಚಂ ।

ತ್ವಂ । ಪುತ್ರಃ । ಭವಸಿ । ಯಃ । ತೇ । ಅವಿಧತ್ । ತ್ವಂ । ಸಖಾ । ಸುಽಶೇವಃ । ಪಾಸಿ । ಆಽಧೃಷಃ ॥ ೯ ॥

### ಸಾಯಣಭಾಷ್ಯಂ

ಹೇ ಅಗ್ನೇ ಪಿತರಂ ಪಾಲಕಂ ತ್ವಾಂ ನರೋ ನೇತಾರೋ ಯಜಮಾನಾ ಇಷ್ಟಿಭಿರೇಷಣಸಾಧನೈ-ರ್ಯಾಗೈರ್ಯಜಂತೆ ಇತಿ ಶೇಷಃ । ಪಿತೃವತ್ಪಾಲನಾಯ ಯಜಂತ ಇತ್ಯರ್ಥಃ । ತಥಾ ತನೂರುಚಂ ಶರೀರಾಣಾಂ ದೀಪಕಂ ಶರೀರೇಷು ದೀಪ್ಯಮಾನಂ ವೈಶ್ವಾನರಾತ್ಮನಾ ತ್ವಾಂ ಭ್ರಾತ್ರಾಯ ಭ್ರಾತೃತ್ವಾಯ ಸೌಭ್ರಾತ್ರಾಯ ಶಮ್ಯಾ ॥ ಕರ್ಮನಾಮ್ಯೇತತ್ ॥ ಕರ್ಮಣಾ ಯಜಂತೆ ಇತಿ ಶೇಷಃ । ಯದ್ವೋಭಯತ್ರ ವಕ್ಷ್ಯಮಾಣೇನಾವಿಧದಿತ್ಯನೇನ ಸಂಬಂಧಃ । ಹೇ ಅಗ್ನೇ ಯೋ ನರಸ್ತೇ ತ್ವಾಮವಿಧತ್ ಪರಿಚರತಿ ತಸ್ಯ ತ್ವಂ ಪುತ್ರೋ ಭವಸಿ । ಪುತ್ರವತ್ಪಾಲಯಿತಾ ಭವಸಿ । ತಥಾ ತ್ವಂ ಸಖಾ ಸಮಾನಖ್ಯಾನಃ ಸಖಿವದ್ಧಿತ-ಕಾರೀ ಸುಶೇವಃ ॥ ಶೇವಮಿತಿ ಸುಖನಾಮ ॥ ಸುಷ್ಠು ಸುಖಕಾರೀ ಸನ್ ಆಧೃಷ ಆಧರ್ಷಕಾತ್ತ್ವಾ ಪಾಸಿ । ರಕ್ಷಸಿ । ಪಿತೃತ್ವಕಾಮಾಯ ಪಿತೃತ್ವೇನ ಭ್ರಾತೃತ್ವಕಾಮಾಯ ಭ್ರಾತೃತ್ವೇನ ಪುತ್ರತ್ವಕಾಮಾಯ ಪುತ್ರ-ಸ್ಥಾನೀಯೋ ಭವಸಿ । ತ್ರಿಪ್ರಕಾರೇಣ ರಕ್ಷಸೀತ್ಯರ್ಥಃ ॥

### ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಪಿತರಂ ಪಾಲಕನಾದ । ತ್ವಾಂ—ನಿನ್ನನ್ನು । ನರಃ—ಯಜಮಾನರು । ಇಷ್ಟಿಭಿಃ—ಯಾಗಾದಿಗಳಿಂದ (ಪಿತೃವನ್ನು ಪೂಜಿಸುವಂತೆ ಪೂಜಿಸುತ್ತಾರೆ) । ತನೂರುಚಂ—ಶರೀರಕ್ಕೆ ಕಾಂತಿಯನ್ನು ಕೊಡತಕ್ಕ । ತ್ವಾಂ—ನಿನ್ನನ್ನು । ಶಮ್ಯಾ—ಕರ್ಮಗಳಿಂದ । ಭ್ರಾತ್ರಾಯ—ಸಹೋದರನಂತೆಯೂ ಉಪಚರಿಸುತ್ತಾರೆ । ಯಃ—ಯಾವ ಯಜಮಾನನು । ತೇ—ನಿನ್ನನ್ನು । ಅವಿಧತ್—ಉಪಚರಿಸುತ್ತಾನೆಯೋ (ಅವನಿಗೆ) । ತ್ವಂ—ನೀನು । ಪುತ್ರಃ – ಪುತ್ರನಾಗಿ । ಭವಸಿ—ಆಗುತ್ತೀಯೆ । ತ್ವಂ—ನೀನು । ಸಖಾ—ಸ್ನೇಹಿತನಂತೆ । ಸುಶೇವಃ—ಸುಖಕಾರಿಯಾಗಿರುತ್ತಾ । ಅಧೃಷಃ—ಆಸಕ್ತನಾಗಿರುತ್ತಲೂ । ಪಾಸಿ—ರಕ್ಷಿಸುತ್ತೀಯೆ.

### ಭಾವಾರ್ಥ

ಎಲೈ ಅಗ್ನಿಯೇ, ಪಾಲಕನಾದ ನಿನ್ನನ್ನು ಯಜಮಾನರು ಯಾಗಾದಿ ಕರ್ಮಗಳಿಂದ ಪಿತೃವಿನಂತೆಯೂ, ಶರೀರಕ್ಕೆ ಕಾಂತಿಯನ್ನು ಕೊಡತಕ್ಕ ನಿನ್ನನ್ನು ಸಹೋದರನಂತೆಯೂ, ಉಪಚರಿಸುತ್ತಾರೆ.. ನಿನ್ನನ್ನು ಉಪಚರಿಸುವ

ಯಜಮಾನನಿಗೆ ನೀನು ಪುತ್ರರೂಪನಾಗಿ ಉಪಕಾರಕನಾಗಿದ್ದೀಯೆ ನೀನು ಸುಹೃತ್ತಿನಂತೆ ಆಸಕ್ತನಾಗಿರುತ್ತಲೂ, ಸುಖಕಾರಿಯಾಗಿರುತ್ತಲೂ ರಕ್ಷಿಸುತ್ತೀಯೆ.

## English Translation

(Devout) men (worship) you, Agni, as a father, with secred rites; they (cherish) you, who are the illuminator of the body, with acts (of kindness), as a brother; you are as a son to him who propitiates you, and you protect-us, a faithful and firm friend.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಅಗ್ನಿಯನ್ನು ತಂದೆ, ಸಹೋದರ, ಪುತ್ರ, ಸ್ನೇಹಿತ ಎಂಬ ಪ್ರೀತಿವಿಶ್ವಾಸಸೂಚಕವಾದ ಶಬ್ದಗಳಿಂದ ಸ್ತುತಿಸಲಾಗಿದೆ-

**ಪಿತರಂ—ಪಾಲಕಂ** । ಜನರನ್ನು ತಂದೆಯಂತೆ ಸಂರಕ್ಷಿಸುವವನು. ಇಲ್ಲಿ ಪಿತೃಶಬ್ದಪ್ರಯೋಗವು ಆರಾಧಿಸುವ ಜನರಲ್ಲಿ ಅಗ್ನಿಗೆ ಇರುವ ಪ್ರೀತಿಯನ್ನೂ, ವಿಶ್ವಾಸವನ್ನೂ ಸೂಚಿಸುವುದು.

**ತನೂರುಚಂ—ಶರೀರಾಣಾಂ ದೀಪಕಂ, ಶರೀರೇಷು ದೀಪ್ಯಮಾನಂ ವೈಶ್ವಾನರಾತ್ಮನಾ** ।ಪ್ರಾಣಿಗಳ ಶರೀರದಲ್ಲಿ ಶಾಖರೂಪದಿಂದ ಬೆಳಗುತ್ತಿರುವವನು. ಪ್ರಾಣಿಗಳ ಶರೀರದಲ್ಲಿರುವ ಉಷ್ಣವು ಅಗ್ನಿಯಸ್ವರೂಪವೇ ಆಗಿರುವುದು. ಜಠರದಲ್ಲಿ ಅನ್ನಾದ್ಯಾಹಾರಗಳನ್ನು ಪಚನಮಾಡುವುದೂ ಅಗ್ನಿಯ ಕಾರ್ಯವೇ ಆಗಿರುವುದು. ಇಂತಹ ಸ್ವರೂಪದಿಂದಿರುವ ಅಗ್ನಿಗೆ ವೈಶ್ವಾನರಾಗ್ನಿಯೆಂದು ಹೆಸರು.

**ತ್ವಂ ಪುತ್ರೋ ಭವಸಿ ಯಸ್ತೇಽವಿಧತ್**—ಯಾವ ಪುರುಷನು ನಿನ್ನನ್ನು ಯಜ್ಞಾದಿಗಳಿಂದ ಉಪಚರಿಸುವನೋ ಆ ಪುರುಷನಿಗೆ ನೀನು ಪುತ್ರನಂತೆ ಪ್ರಿಯನಾಗಿಯೂ, ಪಾಲಕನಾಗಿಯೂ ಇರುವೆ ಎಂದಭಿಪ್ರಾಯವು.

**ತ್ವಂ ಸಖಾ ಸುಶೇವಃ ಪಾಸಿ ಆಧೃಷಃ**—ಸುಖವನ್ನುಂಟುಮಾಡುವ ಎಂದರೆ ಹಿತವನ್ನು ಕೋರುವ ಸ್ನೇಹಿತನಂತೆ ನಮ್ಮನ್ನು ಕಾಪಾಡುತ್ತೀಯೆ. ಎಂದರೆ ಅಗ್ನಿಯಾದ ನೀನು ತಂದೆಯಂತೆಯೂ, ಭ್ರಾತೃವಿನಂತೆಯೂ, ಪುತ್ರನಂತೆಯೂ, ಸ್ನೇಹಿತನಂತೆಯೂ ನಮ್ಮನ್ನು ನಾನಾವಿಧಪ್ರಕಾರಗಳಿಂದ ರಕ್ಷಿಸುತ್ತೀಯೆ ಎಂದು ಮುಖ್ಯಾಭಿಪ್ರಾಯವು

---

### ಸಂಹಿತಾಪಾಠಃ

**ತ್ವಮ॑ಗ್ನ ಋಭುರಾ॒ಕೇ ನ॑ಮ॒ಸ್ಯ೧॒ಸ್ತ್ವಂ॑ ವಾಜ॑ಸ್ಯ ಕ್ಷು॒ಮತೋ॑ ರಾ॒ಯ**
**ಈ॑ಶಿಷೇ ।**
**ತ್ವಂ ವಿ ಭಾ॒ಸ್ಯನು॑ ದಕ್ಷಿ ದಾ॒ವನೇ॒ ತ್ವಂ ವಿ॒ಶಿಕ್ಷು॑ರಸಿ ಯ॒ಜ್ಞಮಾ॒ತನಿಃ॑ ॥ ೧೦ ॥**

### ಪದಪಾಠಃ

ತ್ವಂ । ಅಗ್ನೇ । ಋಭುಃ । ಆಕೇ । ನಮಸ್ಯಃ । ತ್ವಂ । ವಾಜಸ್ಯ । ಕ್ಷುಽಮತಃ । ರಾಯಃ । ಈಶಿಷೇ ।

ತ್ವಂ । ವಿ । ಭಾಸಿ । ಅನು । ಧಕ್ಷಿ । ದಾವನೇ । ತ್ವಂ । ವಿಽಶಿಕ್ಷುಃ । ಅಸಿ । ಯಜ್ಞಂ । ಆಽತನಿಃ ॥ ೧೦ ॥

### ಸಾಯಣಭಾಷ್ಯಂ

ಹೇ ಅಗ್ನೇ ತ್ವಮೃಭುಃ । ಉರುಭಾಸಮಾನೋ ಮೇಧಾವೀ ವಾ । ತ್ವಮಾಕೇಽಂತಿಕೇ ಸನ್ನಿಧಾನೇವ ನಮಸ್ಯೋ ನಮಸ್ಕಾರ್ಯಃ । ಸ್ತುತ್ಯ ಇತ್ಯರ್ಥಃ ! ಇತರದೇವತಾವನ್ಮಂತ್ರಪ್ರತಿಪಾದ್ಯಾಕಾರೇಣ ಸ್ತುತ್ಯೋ ನ ಭವಸಿ ಕಿಂತು ಪ್ರತ್ಯಕ್ಷ ಇತ್ಯರ್ಥಃ । ತಥಾ ತ್ವಂ ಕ್ಷುಮತಃ ಶಬ್ದವತಃ ಸರ್ವತ್ರ ಶ್ರೂಯಮಾಣಸ್ಯ ವಾಜಸ್ಯಾನ್ನಸ್ಯ ರಾಯೋ ಧನಸ್ಯ ಚೇಶಿಷೇ । ಸ್ವಾಮೀ ಭವಸಿ । ಅತಸ್ತದ್ದೇಹೀತ್ಯರ್ಥಃ । ಹೇ ಅಗ್ನೇ ತ್ವಂ ವಿಭಾಸಿ । ವಿಶೇಷೇಣ ದೀಪ್ಯಸೇ । ತದರ್ಥಮನುಕ್ರಮೇಣೈವ ಧಕ್ಷಿ । ದಹಸಿ ಕಾಷ್ಠಾದೀನ್ ॥ ದಹೇರ್ಲಟಿ ಸಿಪಿ ರೂಪಂ । ಸಂಹಿತಾಯಾಂ ಭಷ್‌ಭಾವಾಭಾವಶ್ಛಾಂದಸಃ ॥ ಕಿಮರ್ಥಮೇವಂ । ದಾವನೇ ಛೇದನಾಯಾಂಧಕಾರಸ್ಯ । ಯದ್ವಾ ಹವಿಷೋ ದಾನವತೇ ಯಜಮಾನಾಯ ವಾ । ಕಿಂಚ ತ್ವಂ ಯಜ್ಞಂ ವಿಶಿಕ್ಷುರ್ವಿಶೇಷೇಣ ಶಿಕ್ಷಯಿತಾ ಸಾಧಯಿತಾಸಿ ॥ ನ ಲೋಕಾವ್ಯಯೇತಿ ಷಷ್ಠ್ಯಾ ನಿಷೇಧಃ ॥ ತಥಾತನಿಃ ಫಲಸ್ಯ ಸರ್ವತೋ ವಿಸ್ತಾರಯಿತಾ ॥

### ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ಋಭುಃ—ಅತಿಶಯವಾಗಿ ಪ್ರಕಾಶಿಸುವವನಾಗಿದ್ದೀಯೆ (ಅಥವಾ ಮೇಧಾವಿಯಾಗಿದ್ದೀಯೆ) । ಆಕೇ—ನೀನು ಸಮೀಪದಲ್ಲಿ ಪ್ರತ್ಯಕ್ಷನಾಗಿರುವಾಗಲೇ । ನಮಸ್ಯಃ—ಪೂಜಿಸಲ್ಪಡತಕ್ಕವನು । ತ್ವಂ—ನೀನು । ಕ್ಷುಮತಃ—ಸರ್ವತ್ರ ಪ್ರಸಿದ್ಧವಾದ । ವಾಜಸ್ಯ—ಅನ್ನಕ್ಕೂ । ರಾಯಃ—ಧನಕ್ಕೂ । ಈಶಿಷೇ—ಪ್ರಭುವಾಗಿದ್ದೀಯೆ । (ಎಲೈ ಪ್ರಭುವೇ) ತ್ವಂ—ನೀನು । ವಿ ಭಾಸಿ—ಅತಿಶಯವಾಗಿ ಪ್ರಜ್ವಲಿಸುತ್ತೀಯೆ । ದಾವನೇ—ಅಂಧಕಾರವನ್ನು ಹೋಲಾಡಿಸುವುದಕ್ಕಾಗಿ ಅಥವಾ ಹವಿಸ್ಸನ್ನು ಅರ್ಪಿಸುವ ಯಜಮಾನನಿಗಾಗಿ । ತ್ವಂ—ನೀನು । ಅನು ಧಕ್ಷಿ—ಕಾಷ್ಠಾದಿಗಳನ್ನು ದಹಿಸುತ್ತೀಯೆ । ಯಜ್ಞಂ—ಯಜ್ಞವನ್ನು । ವಿಶಿಕ್ಷುಃ—ವಿಶೇಷವಾದ ರೀತಿಯಲ್ಲಿ ಸಾಧಿಸುವವನಾಗಿ । ಅಸಿ—ಆಗಿದ್ದೀಯೆ (ಹಾಗೆಯೇ) । ಆತನಿಃ—ಆ ಯಜ್ಞಕ್ಕೆ ಫಲದಾತೃವಾಗಿಯೂ ಆಗಿದ್ದೀಯೆ.

### ಭಾವಾರ್ಥ

ಎಲೈ ಅಗ್ನಿಯೇ, ನೀನು ಅತಿಶಯವಾಗಿ ಪ್ರಕಾಶಿಸುತ್ತೀಯೆ. ನೀನು ಸಮೀಪದಲ್ಲಿ ಪ್ರತ್ಯಕ್ಷನಾಗಿರುವಾಗಲೇ ಪೂಜಿಸಲ್ಪಡತಕ್ಕವನು. ನೀನು ಪ್ರಸಿದ್ಧವಾದ ಅನ್ನಕ್ಕೂ, ಧನಕ್ಕೂ ಪ್ರಭುವಾಗಿದ್ದೀಯೆ. ಅತಿಶಯವಾಗಿ ಪ್ರಜ್ವಲಿಸುವ ನೀನು ಹವಿಸ್ಸನ್ನು ಅರ್ಪಿಸುವ ಯಜಮಾನನಿಗಾಗಿ ಕಾಷ್ಠಾದಿಗಳನ್ನು ದಹಿಸುತ್ತೀಯೆ. ಯಜ್ಞವನ್ನು ವಿಶೇಷ ರೀತಿಯಲ್ಲಿ ಸಾಧಿಸಿ ಆ ಯಜ್ಞಕ್ಕೆ ಫಲದಾತೃವೂ ಆಗಿದ್ದೀಯೆ

## Englih Tranlation

You, Agni, are (ever) resplendent, and are to be glorified when present ; you are lord over all renowned food and riches ; you shine brightly, and you consume (the oblation) for him who offers it ; you are the especial accomplisher of the sacrfice, and bestower (of its rewards).

### ವಿಶೇಷವಿಷಯಗಳು

**ಋಭುಃ—ಉರುಭಾಸಮಾನೋ ಮೇಧಾವೀ ವಾ |** ಬಹಳವಾಗಿ ಪ್ರಕಾಶಿಸುವ ಅಥವಾ ಮೇಧಾವಿಯಾದ (ಬುದ್ಧಿಯುಳ್ಳ) ಎಂದು ಸಾಯಣರ ವಿವರಣೆಯು. ಋಭು ಎಂಬ ದೇವತೆಯ ಸ್ವರೂಪವೆಂದು ಬೇಕಾದರೂ ಹೇಳಬಹುದು ಆದರೆ ಸಾಯಣರು ಹೇಳಿರುವ ಅರ್ಥವೇ ಇಲ್ಲಿ ಸಮಂಜಸವಾಗಿರುವುದು.

**ಆಕೇ ನಮಸ್ಯಃ—**ಆಕೇ ಎಂಬ ಶಬ್ದವು ಅಂತಿಕನಾಮಗಳಲ್ಲಿಯೂ (ನಿ ೩-೯) ದೂರನಾಮಗಳಲ್ಲಿಯೂ (ನಿ. ೩-೨೦) ಪಠಿತವಾಗಿದೆ. ಇಲ್ಲಿ ಸಾಯಣರು **ಅಂತಿಕೇ ಸನ್ನಿಧಾವೇವ ನಮಸ್ಯೋ ನಮಸ್ಕಾರ್ಯಃ ಸ್ತುತ್ಯ ಇತ್ಯರ್ಥಃ | ಇತರದೇವತಾವನ್ಮಂತ್ರಪ್ರತಿಪಾದ್ಯಾಕಾರೇಣ ಸ್ತುತ್ಯೋ ನ ಭವಸಿ ಕಿಂತು ಪ್ರತ್ಯಕ್ಷ ಇತ್ಯರ್ಥಃ|** ಇತರ ದೇವತೆಗಳು ನಮ್ಮ ಕಣ್ಣಿಗೆ ಕಾಣಿಸುವುದಿಲ್ಲ ದೂರದಲ್ಲಿರುತ್ತಾರೆ. ಆದುದರಿಂದ **ಪರೋಕ್ಷಂ ವಾ ಅನ್ಯೇ ತೇ ವಾ ಇಜ್ಯಂತೇ** (ತೈ. ಸಂ. ೧-೭-೩-೧) ಎಂಬ ಶ್ರುತಿವಾಕ್ಯದಂತೆ ಅವರನ್ನು ಸ್ತೋತ್ರ ಮುಂತಾದುವುಗಳಿಂದ ಪರೋಕ್ಷವಾಗಿ ಆರಾಧಿಸಬೇಕಾಗಿರುವುದು. ಆದರೆ ಅಗ್ನಿಯ ವಿಷಯವು ಹಾಗಲ್ಲ ಅಗ್ನಿಯು ನಮ್ಮ ಸಮೀಪದಲ್ಲಿಯೇ ಪ್ರತ್ಯಕ್ಷವಾಗಿ ಕಾಣಿಸುತ್ತಿರುವುದರಿಂದ ಅವನನ್ನು ಸ್ತೋತ್ರಾದಿಗಳಿಂದ ಸ್ತುತಿಸುವುದಲ್ಲದೆ ಅಭಿಮುಖವಾಗಿರುವ ಅವನಿಗೆ ನಮಸ್ಕಾರವನ್ನೂ ಮಾಡುತ್ತೇವೆ. ಆದುದರಿಂದ ಇಲ್ಲಿ **ಅಂತಿಕೇ ನಮಸ್ಯಃ** ಎಂಬ ಶಬ್ದಗಳ ಪ್ರಯೋಗವು ಅಗ್ನಿಯ ವಿಷಯದಲ್ಲಿ ವಿಹಿತವಾಗಿರುವುದು.

**ತ್ವಂ ವಾಜಸ್ಯ ಕ್ಷುಮತಃ ರಾಯ ಈಶಿಷೇ—ಕ್ಷುಮತಃ** ಎಂದರೆ ಶಬ್ದಮಾಡುತ್ತಿರುವ ಎಂದರೆ ಎಲ್ಲರೂ ಬೇಕೆಂದು ಕೇಳುತ್ತಿರುವ ಎಂದರ್ಥವು. ಎಲೈ ಅಗ್ನಿಯೇ, ನೀನು ಎಲ್ಲರೂ ಕೇಳುವ ಅನ್ನಕ್ಕೂ, ಧನಾದಿದ್ರವ್ಯಗಳಿಗೂ ಪ್ರಭುವಾಗಿದ್ದೀಯೆ ಎಂದಭಿಪ್ರಾಯವು.

**ತ್ವಂ ವಿ ಭಾಸ್ಯನು ಧಕ್ಷಿ ದಾವನೇ—**ಹವಿಸ್ಸನ್ನು ಅರ್ಪಿಸುವ ಯಜಮಾನನಿಗಾಗಿ ಪ್ರಕಾಶಿಸುವೆ ಮತ್ತು ಅಗ್ನಿಯಲ್ಲಿ ಅರ್ಪಿಸುವ ಕಾಷ್ಠಾದಿಗಳನ್ನೂ, ಹವಿರಾಜ್ಯಾದಿಗಳನ್ನೂ ದಹಿಸಿ ಯಜಮಾನನ ಸಂತೋಷಪ್ರಾಪ್ತಿಗಾಗಿ ಚೆನ್ನಾಗಿ ಪ್ರಜ್ವಲಿಸುವೆ ಎಂದಭಿಪ್ರಾಯವು

**ತ್ವಂ ವಿಶಿಕ್ಷುಃ ಅಸಿ ಯಜ್ಞಂ—**ಯಜ್ಞದಲ್ಲಿ ನೆರವೇರಿಸಬೇಕಾದ ಕಾರ್ಯಕ್ರಮಗಳನ್ನು ಯಜಮಾನನಿಗೂ ಋತ್ವಿಕ್ಕುಗಳಿಗೂ ಚೆನ್ನಾಗಿ ತಿಳಿಯುವಂತೆ ಹೇಳಿಕೊಡತಕ್ಕವನು. ನಿನಗೆ ಹೋತೃ, ಅಧ್ವರ್ಯು ಮೊದಲಾದವರ ಕರ್ತವ್ಯಕರ್ಮಗಳೆಲ್ಲವೂ ಚೆನ್ನಾಗಿ ತಿಳಿದಿರುವುದರಿಂದ ಯಜ್ಞವಿಧಾನವನ್ನು ಅವರಿಗೆ ಕಲಿಸುತ್ತೀಯೆ ಎಂದಭಿಪ್ರಾಯವು

**ಆತನಿಃ—ಫಲಸ್ಯ ಸರ್ವತೋ ವಿಸ್ತಾರಯಿತಾ |** ಯಜ್ಞಾದಿ ಕರ್ಮಗಳಿಗೆ ಲಭಿಸಬೇಕಾದ ಫಲಗಳನ್ನು ಅಧಿಕವಾಗಿ ಕೊಡುವವನು ಎಂದಭಿಪ್ರಾಯವು.

ಸಂಹಿತಾಪಾಠ

ತ್ವಮ॑ಗ್ನೇ ಅದಿ॑ತಿರ್ದೇ॑ವ ದಾ॒ಶುಷೇ॒ ತ್ವಂ ಹೋತ್ರಾ॒ ಭಾರ॑ತೀ ವರ್ಧಸೇ ಗಿ॒ರಾ।

ತ್ವಮಿಳಾ॑ ಶ॒ತಹಿ॑ಮಾಸಿ॒ ದಕ್ಷ॑ಸೇ॒ ತ್ವಂ ವೃ॑ತ್ರ॒ಹಾ ವ॑ಸುಪತೇ॒ ಸರ॑ಸ್ವತೀ ॥ ೧೧ ॥

ಪದಪಾಠ

ತ್ವಂ । ಅ॒ಗ್ನೇ॒ । ಅದಿ॑ತಿಃ । ದೇ॒ವ॒ । ದಾ॒ಶುಷೇ॑ । ತ್ವಂ । ಹೋತ್ರಾ॑ । ಭಾರ॑ತೀ । ವ॒ರ್ಧ॒ಸೇ॒ । ಗಿ॒ರಾ ।

ತ್ವಂ । ಇಳಾ॑ । ಶ॒ತಽಹಿ॑ಮಾ । ಅ॒ಸಿ॒ । ದಕ್ಷ॑ಸೇ । ತ್ವಂ । ವೃ॒ತ್ರ॒ಽಹಾ । ವ॒ಸು॒ಽಪ॒ತೇ॒ । ಸರ॑ಸ್ವತೀ ॥ ೧೧ ॥

ಸಾಯಣಭಾಷ್ಯಂ

ಹೇ ಅಗ್ನೇ ದೇವ ತ್ವಂ ದಾಶುಷೇ ಹವಿರ್ದತ್ತವತೇ ಯಜಮಾನಾಯಾದಿತಿರಖಂಡಯಿತಾ ಪರಿಪಾಲಯಿತಾಸಿ। ಯದ್ವಾ ಅದೀನಾ ಭೂಮಿರಸಿ। ಕಿಂಚ ತ್ವಂ ಹೋತ್ರಾ ಹೋಮನಿಷ್ಪಾದಕಾ ಭಾರತೀ ಭರತಸ್ಯಾದಿತ್ಯಸ್ಯಾದಿತ್ಯಸಂಬಂಧಿನೀ ರಶ್ಮಿರೂಪಾ ಸತೀ ಗಿರಾ ಸ್ತುತ್ಯಾ ವರ್ಧಸೇ। ಪ್ರವೃದ್ಧೋ ಭವಸಿ। ಕಿಂಚ ತ್ವಂ ಶತಹಿಮಾ। ಹಿಮಶಬ್ದಃ ಕಾಲೋಪಲಕ್ಷಕಃ। ಅಪರಿಮಿತಕಾಲಾ ನಿತ್ಯೇಳಾ ಭೂಮಿರಸಿ। ತಾದೃಶೀ ಸತೀ ದಕ್ಷಸೇ ದಾನಾಯ ಸಮರ್ಥೋ ಭವಸಿ ॥ತಿಙ ಉತ್ತರತ್ವಾದನಿಘಾತಃ॥ತಥಾ ಹೇ ವಸುಪತೇ ಧನಪಾಲಕ ವೃತ್ರಹಾ ಪಾಪಾದೇರ್ಹಂತಾ ತ್ವಂ ಸರಸ್ವತೀ। ಸರಣವಾನ್ವಾಯುಃ। ತತ್ಸಂಬಂಧಿನ್ಯೇತನ್ನಿಯಾಮಿಕಾ ಮಾಧ್ಯಮಿಕಾಸಿ। ಆದಿತ್ಯಾಗ್ನಿವಾಯೂನಾಂ ಸಂಬಂಧಿನ್ಯೋ ಭಾರತೀಳಾಸರಸ್ವತ್ಯಾಖ್ಯಾ ಯಾಸ್ತಿಸ್ರೋ ದೇವ್ಯಃ ಸಂತಿ ತಾ ಅಪಿ ತ್ವಮೇವೇತ್ಯರ್ಥಃ ॥

ಪ್ರತಿಪದಾರ್ಥ

ದೇವ—ದೇವತಾತ್ಮನಾದ । ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ದಾಶುಷೇ—ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ । ಅದಿತಿಃ—ಪೂರ್ಣಪಾಲಕಳಾದ ಅದಿತಿಯಾಗಿ ಇದ್ದೀಯೆ । ತ್ವಂ—ನೀನು । ಹೋತ್ರಾ—ಹೋಮಸಂಪಾದಕಿಯಾದ ಹೋತ್ರಳಾಗಿಯೂ । ಭಾರತೀ—ಆದಿತ್ಯಸಂಬಂಧಿಯಾದ ಭಾರತಿಯಾಗಿಯೂ । ಗಿರಾ—ಸ್ತುತಿಯಿಂದ । ವರ್ಧಸೇ—ಪ್ರವೃದ್ಧನಾಗುತ್ತೀಯೆ । ತ್ವಂ—ನೀನು । ಶತಹಿಮಾ—ಶತಸಂಖ್ಯಾಕವಾದ ಕಾಲವುಳ್ಳ ಎಂದರೆ ನಿತ್ಯಳಾದ । ಇಳಾ—ಇಳಾರೂಪದಲ್ಲಿ । ಅಸಿ—ಇದ್ದೀಯೆ, (ಮತ್ತು) । ದಕ್ಷಸೇ—ದಾನಾದಿಗಳಿಗೂ ಸಮರ್ಥನಾಗಿದ್ದೀಯೆ । ವಸುಪತೇ—ಧನಕ್ಕೆ ಪಾಲಕನಾದ ಎಲೈ ಅಗ್ನಿಯೇ ವೃತ್ರಹಾ—ಪಾಪಾದಿಗಳ ಹಂತಕನಾದ । ತ್ವಂ—ನೀನು । ಸರಸ್ವತೀ—(ವಾಯುಸಂಬಂಧಿಯಾದ) । ಅಸಿ—ಸರಸ್ವತಿಯಾಗಿಯೂ ಇದ್ದೀಯೆ.

ಭಾವಾರ್ಥ

ದೇವತಾತ್ಮಕನಾದ ಎಲೈ ಅಗ್ನಿಯೇ, ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ನೀನು ಪೂರ್ಣಪಾಲಕಳಾದ ಅದಿತಿಯಾಗ ಇದ್ದೀಯೆ. ನೀನು ಹೋಮಸಂಪಾದಿಕಯಾದ ಹೋತೃಳಾಗಿಯೂ, ಆದಿತ್ಯಸಂಬಂಧಿಯಾದ ಭಾರತಿ

ಯಾಗಿಯೂ ಸ್ತುತಿಯಿಂದ ಪ್ರವೃದ್ಧನಾಗುತ್ತೀಯೆ. ನೀನು ನಿತ್ಯಳಾದ ಇಳಾ (ಭೂಮಿ) ರೂಪದಲ್ಲಿದ್ದೀಯೆ. ಮತ್ತು ದಾನಾದಿಗಳಿಗೂ ಸಮರ್ಥನಾಗಿದ್ದೀಯೆ. ಧನಕ್ಕೆ ಪಾಲಕನಾದ ಎಲೈ ಅಗ್ನಿಯೇ, ಪಾಪಾದಿಗಳಿಗೆ ಹಂತಕನಾದ ನೀನು ವಾಯುಸಂಬಂಧಿಯಾದ ಸರಸ್ವತಿಯೂ ಆಗಿದ್ದೀಯೆ.

### English Translation

You, divine Agni, are Aditi to the donor of the oblation; you are Hotra and Bharati, and thrive by praise ; you are Ila of a hundred winters to him who makes you gifts ; you, lord of wealth, are the destroyer of Vritra, Saraswati.

### ವಿಶೇಷವಿಷಯಗಳು

**ಅದಿತಿಃ—ಅಖಂಡಯಿತಾ ಪರಿಪಾಲಯಿತಾಸಿ । ಯದ್ವಾ ಅದೀನಾ ಭೂಮಿರಸಿ ।** ಅವಿಚ್ಛಿನ್ನವಾದ ಪಾಲಕನಾಗಿರುವೆ. ಎಂದರೆ ಯಾವಾಗಲೂ ನಮ್ಮನ್ನು ರಕ್ಷಿಸುತ್ತಿರುವೆ. ಅಥವಾ ಭೂಮಿಯಂತೆ ಪೋಷಕನಾಗಿರುವೆ. ಅದಿತಿಶಬ್ದವು ಪೃಥಿವೀನಾಮಗಳಲ್ಲಿಯೂ (ನಿ. ೨-೫) ವಾಙ್ನಾಮಗಳಲ್ಲಿಯೂ (ನಿ ೩-೨೩) ಗೋನಾಮಗಳಲ್ಲಿಯೂ (ನಿ ೩-೯) ದ್ಯಾವಾಪೃಥಿವೀ (ಇಲ್ಲಿ ಅದಿತೀ ಎಂದು ದ್ವಿವಚನಾಂತ) ·ನಾಮಗಳಲ್ಲಿಯೂ (ನಿ ೩-೨೨) ಪಠಿತವಾಗಿದೆ. ಇಲ್ಲಿ ಭಾಷ್ಯಕಾರರು ಭೂಮಿಯೆಂಬ ಅರ್ಥವನ್ನು ಸ್ವೀಕರಿಸಿ ಅರ್ಥವಿವರಣೆಮಾಡಿದಾರೆ. ಅದಿತಿಶಬ್ದದ ವಿಸ್ತಾರವಾದ ಅರ್ಥವಿವರಣೆ ವಿಮರ್ಶೆಗಳನ್ನು ನಾವು ಋ. ಸಂ. ಭಾಗ 8, ಪೇಜು 559 ರಲ್ಲಿ ವಿವರಿಸಿದೇವೆ.

**ಭಾರತೀ - ಭರತಸ್ಯಾದಿತ್ಯಸ್ಯ ಸಂಬಂಧಿನೀ ರಶ್ಮಿರೂಪಾ ಸತೀ ।** ಭರತನೆಂದರೆ ದ್ವಾದಶಾದಿತ್ಯರಲ್ಲಿ ಒಬ್ಬನು. ಆದಿತ್ಯನ ದೀಪ್ತಿಗೆ ಭಾ ಎಂದು ಹೆಸರು. ಆದುದರಿಂದ ಭಾರತಿಯೆಂದರೆ ಸೂರ್ಯನ ಪ್ರಕಾಶವು ಅಥವಾ ಸೂರ್ಯಮಂಡಲದಲ್ಲಿ ಪ್ರಕಾಶರೂಪದಿಂದಿರುವ ಅಗ್ನಿಯು. ಇಲ್ಲಿ ಅಗ್ನಿಯ ರಶ್ಮಿಗಳಿಗೂ, ಆದಿತ್ಯನ ರಶ್ಮಿಗಳಿಗೂ ಸಂಬಂಧವನ್ನು ಹೇಳಿದೆ. ಅಗ್ನಿಯೇ ದ್ಯುಸ್ಥಾನದಲ್ಲಿ ಆದಿತ್ಯರೂಪದಿಂದ ಇರುವನೆಂದು ಹೇಳಿರುವುದರಿಂದ ಆದಿತ್ಯನ ರಶ್ಮಿಗೂ, ಅಗ್ನಿಯ ರಶ್ಮಿಗೂ ಸಂಬಂಧವಿದೆ.

**ಇಳಾ—ಭೂಮಿರಸಿ ।** ಇಳಾ ಶಬ್ದವು ಭೂನಾಮಗಳಲ್ಲಿ(ನಿ. ೨-೫) ಪಠಿತವಾಗಿರುವುದರಿಂದ ಭೂಮಿಯೆಂದು ಹೆಸರು.

**ಸರಸ್ವತೀ—ಸರಣವಾನ್ವಾಯುಃ । ತತ್ಸಂಬಂಧಿನ್ಯೇತನ್ನಿಯಾಮಕಾ ಮಾಧ್ಯಮಿಕಾಸಿ ।।** ಇಲ್ಲಿ ಭಾಷ್ಯಕಾರರು ಸರಸ್ವತೀ ಎಂಬ ಶಬ್ದಕ್ಕೆ ಚಲಿಸುವ ಸ್ವಭಾವವುಳ್ಳ ವಾಯುವೆಂದೂ ಆದ್ದರಿಂದ ಮಧ್ಯಸ್ಥಾನ (ಅಂತರಿಕ್ಷ) ದೇವತೆಯೆಂದೂ ಅರ್ಥವಿವರಣೆಮಾಡಿರುವರು. **ಆದಿತ್ಯಾಗ್ನಿವಾಯೂನಾಂ ಸಂಬಂಧಿನ್ಯೋ ಭಾರತೀಳಾಸರಸ್ವತ್ಯಾಖ್ಯಾ ಯಾಸ್ತಿಸ್ರೋ ದೇವ್ಯಃ ಸಂತಿ ತಾ ಅಪಿ ತ್ವಮೇವೇತ್ಯರ್ಥಃ ।** ಎಂದರೆ ಆದಿತ್ಯ ಅಗ್ನಿ ವಾಯುಸಂಬಂಧವುಳ್ಳ ಭಾರತೀಳಾಸರಸ್ವತಿಯರೆಂಬ ಮೂರು ಮಂದಿ ದೇವತೆಗಳ ಸ್ವರೂಪವೇ ನೀನೆಂದು ಅಗ್ನಿಯನ್ನು ಸ್ತುತಿಸಲಾಗಿದೆ.

———:o:———

ಸಂಹಿತಾಪಾಠಃ

ತ್ವಮ॑ಗ್ನೇ ಸುಭೃತ ಉತ್ತ॒ಮಂ ವಯ॒ಸ್ತವ ಸ್ಪಾ॒ರ್ಹೇ ವರ್ಣ॒ ಆ ಸಂ॒ದೃಶಿ॒ ಶ್ರಿಯಃ ।
ತ್ವಂ ವಾಜಃ ಪ್ರ॒ತರ॑ಣೋ ಬೃ॒ಹನ್ನ॑ಸಿ॒ ತ್ವಂ ರ॒ಯಿರ್ಬ॑ಹು॒ಲೋ ವಿ॒ಶ್ವತ॒ಸ್ಪೃಥುಃ ॥ ೧೨ ॥

ಪದಪಾಠ

ತ್ವಂ । ಅ॒ಗ್ನೇ॒ । ಸು॒ಽಭೃ॒ತಃ॒ । ಉ॒ತ್ಽತ॒ಮಂ । ವಯಃ॑ । ತವ॑ । ಸ್ಪಾ॒ರ್ಹೇ । ವರ್ಣೇ॑ । ಆ । ಸ॒ಂಽದೃಶಿ॑ । ಶ್ರಿಯಃ॑ ।
ತ್ವಂ । ವಾಜಃ॑ । ಪ್ರ॒ಽತರ॑ಣಃ । ಬೃ॒ಹನ್ । ಅ॒ಸಿ॒ । ತ್ವಂ । ರ॒ಯಿಃ । ಬ॒ಹು॒ಲಃ । ವಿ॒ಶ್ವತಃ॑ । ಪೃ॒ಥುಃ ॥ ೧೨ ॥

ಸಾಯಣಭಾಷ್ಯ

ಹೇ ಅಗ್ನೇ ತ್ವಂ ಸುಭೃತಃ ಸುಷ್ಠು ಪೋಷಿತಃ ಸನ್ ಉತ್ತಮಂ ನಿರತಿಶಯಂ ವಯೋಽನ್ನಮಾಯುಷ್ಯಂ ವಾ ತ್ವಮಸಿ । ತತ್ಸಂಪಾದಕೋಽಸೀತ್ಯರ್ಥಃ । ತಥಾ ತವ ಸ್ಪಾರ್ಹೇ ಸ್ಪೃಹಣೀಯೇ ವರ್ಣೇ ಲೋಹಿತಶುಕ್ಲಾದಿಲಕ್ಷಣೇ ಸಂದೃಶಿ ಸಮ್ಯಗ್ದರ್ಶನೀಯೇ ಶ್ರಿಯ ಐಶ್ವರ್ಯಾಣಿ ಕಾಂತಯೋ ವಾಶ್ರಿತ್ಯ ವರ್ತಂತೇ ॥ ಉಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ ॥ ಕಿಂಚ ತ್ವಂ ವಾಜೋಽನ್ನಂ । ತತ್ಸಾಧಕತ್ವಾತ್ತಾಚ್ಛಬ್ದ್ಯಂ । ಅನ್ನಸಾಧಕ ಇತ್ಯರ್ಥಃ । ಪ್ರತರಣಃ ಪ್ರತಾರಯಿತಾ ಪಾಪಾತ್ । ಅತ ಏವ ಬೃಹನ್ ಮಹಾನಸಿ । ತಥಾ ತ್ವಂ ರಯಿರ್ಧನರೂಪೋಽಸಿ । ಬಹುಲಃ ಸರ್ವವಿಷಯಬಾಹುಲ್ಯೋಪೇತೋ ವಿಶ್ವತಃ ಪೃಥುರ್ವಿಸ್ತೀರ್ಣಃ ಪ್ರಖ್ಯಾತ ಇತ್ಯರ್ಥಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ಸುಭೃತಃ—ಚೆನ್ನಾಗಿ ಪೋಷಿತನಾದಾಗ । ಉತ್ತಮಂ—ನಿರತಿಶಯವಾದ । ವಯಃ—ಅನ್ನ (ಆಯುಸ್ಸ) ಸಂಪಾದಕವಾಗುವೆ । ತವ—ನಿನ್ನ । ಸ್ಪಾರ್ಹೇ—ಆಕರ್ಷಕವಾದುದೂ । ವರ್ಣೇ—ಲೋಹಿತಾದಿರೂಪವುಳ್ಳದ್ದೂ । ಸಂದೃಶಿ—ದರ್ಶನೀಯವಾದುದೂ ಆದ ಸ್ವರೂಪದಲ್ಲಿ । ಶ್ರಿಯಃ—ಐಶ್ವರ್ಯಗಳು ಅಥವಾ ಕಾಂತಿಗಳು । ಆ—ಅಡಗಿವೆ । ತ್ವಂ—ನೀನು । ವಾಜಃ—ಅನ್ನವು (ಅನ್ನಸಾಧಕನು) । ಪ್ರತರಣಃ—(ಪಾಪದಿಂದ) ದಾಟಿಸತಕ್ಕವನು । ಬೃಹನ್—ಮಹಾತ್ಮನಾಗಿ । ಅಸಿ—ಆಗಿದ್ದೀಯೆ । ತ್ವಂ—ನೀನು । ರಯಿಃ—ಧನರೂಪನಾಗಿದ್ದೀಯೆ । ಬಹುಲಃ—ನಾನಾ ಸ್ವರೂಪವುಳ್ಳವನೂ । ವಿಶ್ವತಃ—ಎಲ್ಲಾ ಕಡೆಗಳಲ್ಲೂ । ಪೃಥುಃ—ವಿಸ್ತೃತವಾದವನೂ ಆಗಿದ್ದೀಯೆ ।

ಭಾವಾರ್ಥ

ಎಲೈ ಅಗ್ನಿಯೇ ನೀನು ಪೋಷಿತನಾದಾಗ ನಿರತಿಶಯವಾದ ಅನ್ನಸಂಪಾದಕನಾಗುವೆ. ನಿನ್ನ ಆಕರ್ಷಕವಾದುದೂ ಲೋಹಿತಾದಿರೂಪವುಳ್ಳದ್ದೂ, ದರ್ಶನೀಯವೂ ಆದ ಸ್ವರೂಪದಲ್ಲಿ ಐಶ್ವರ್ಯಗಳು ಅಡಗಿವೆ. ನೀನೇ ಅನ್ನಸಾಧಕನು. ಪಾಪದಿಂದ ದಾಟಿಸತಕ್ಕವನು ನೀನು ಮಹಾತ್ಮನೂ ಧನರೂಪನೂ, ಎಲ್ಲಾ ಕಡೆಗಳಲ್ಲಿಯೂ ವಿಸ್ತೃತವಾದ ಹರಡಿದ ಬಹು ವಿಧವಾದ ಸ್ವರೂಪವುಳ್ಳವನೂ ಆಗಿರುವೆ.

English Translation

When, well-cherished Agni, you are (the giver of) excellent food : in your desirable and delightful hues, beauties (abound) : you (are) food : (you are) the transporter (beyond sin) ; you are mighty ; you are wealth ; you are manifold, and everywhere diffused.

ವಿಶೇಷವಿಷಯಗಳು

**ಸ್ಪಾರ್ಹೇ ವರ್ಣೇ—ಸ್ಪೃಹಣೀಯೇ ವರ್ಣೇ ಲೋಹಿತಶುಕ್ಲಾದಿ ಲಕ್ಷಣೇ** । ಅಗ್ನಿಯ ಜ್ವಾಲೆಗಳು ಬಹಳ ಉತ್ತಮವಾಗಿಯೂ, ಲೋಹಿತಶುಕ್ಲಾದಿ ವರ್ಣಗಳಿಂದ ಕೂಡಿರುವುದಾಗಿಯೂ ಇರುವುವು.

**ಪ್ರತರಣಃ—ಪ್ರತಾರಯಿತಾ ಪಾಪಾತ್** । ಪಾಪಗಳ ದೆಸೆಯಿಂದ ನಮ್ಮನ್ನು ದಾಟಿಸುವವನು ಎಂದರೆ ಪಾಪಗಳು ನಮ್ಮನ್ನು ಆವರಿಸದಂತೆ ನಮ್ಮನ್ನು ಕಾಪಾಡುವವನು.

**ವಿಶ್ವತಃ ಪೃಥುಃ**—ಎಲ್ಲಾ ಕಡೆಗಳಲ್ಲಿಯೂ ಪ್ರಖ್ಯಾತನಾದವನು. ಅಥವಾ ಎಲ್ಲಾ ಕಡೆಗಳಲ್ಲಿಯೂ ವಿಸ್ತಾರವಾಗಿ ವ್ಯಾಪಿಸಿರುವವನು. ಎಂದರೆ ಭೂಮ್ಯಂತರಿಕ್ಷಸ್ವರ್ಗಗಳೆಂಬ ಮೂರು ಲೋಕಗಳಲ್ಲಿಯೂ ವ್ಯಾಪ್ತಿಯುಳ್ಳವನು.

———— :O: ————

ಸಂಹಿತಾಪಾಠ

ತ್ವಾಮಗ್ನ ಆದಿತ್ಯಾಸ ಆಸ್ಯಂ೧ತ್ವಾಂ ಜಿಹ್ವಾಂ ಶುಚಯಶ್ಚಕ್ರಿರೇ ಕವೇ ।
ತ್ವಾಂ ರಾತಿಷಾಚೋ ಅಧ್ವರೇಷು ಸಶ್ಚಿರೇ ತ್ವೇ ದೇವಾ ಹವಿರದಂತ್ಯಾಹುತಂ ॥ ೧೩ ॥

॥ ಪದಪಾಠಃ ॥

ತ್ವಾಂ । ಅಗ್ನೇ । ಆದಿತ್ಯಾಸಃ । ಆಸ್ಯಂ । ತ್ವಾಂ । ಜಿಹ್ವಾಂ । ಶುಚಯಃ । ಚಕ್ರಿರೇ । ಕವೇ ।
ತ್ವಾಂ । ರಾತಿऽಸಾಚಃ । ಅಧ್ವರೇಷು । ಸಶ್ಚಿರೇ । ತ್ವೇ ಇತಿ । ದೇವಾಃ । ಹವಿಃ । ಅದಂತಿ । ಆऽಹುತಂ ॥ ೧೩ ॥

ಸಾಯಣಭಾಷ್ಯ

ಹೇ ಅಗ್ನೇ ತ್ವಾಮಾದಿತ್ಯಾಸೋಽದಿತೇಃ ಪುತ್ರಾ ಇಂದ್ರಾದಯ ಆಸ್ಯಂ ಸ್ವಕೀಯಂ ಮುಖಂ ಭಕ್ಷಣಪಾನಾದಿಸಾಧನಂ ಚಕ್ರಿರ ಇತಿ ವಕ್ಷ್ಯಮಾಣೇನ ಸಂಬಂಧಃ । ತಥಾ ಹೇ ಕವೇ ಕ್ರಾಂತಪ್ರಜ್ಞ ತ್ವಾಮೇವ ಶುಚಯಃ ಶುದ್ಧಾ ದೀಪ್ತಾ ವಾ ದೇವಾ ಜಿಹ್ವಾಂ ಸ್ವಕೀಯಜಿಹ್ವಾಸ್ಥಾನೀಯಮಾಸ್ವಾದನ-ಸಾಧನಂ ಚಕ್ರಿರೇ । ತ್ವನ್ಮುಖೇನೈವ ಭಕ್ಷಯಂತಿ ತ್ವಜ್ಜಿಹ್ವಯೈವಾಸ್ವಾದಯಂತೀತ್ಯರ್ಥಃ । ತಥಾ ತ್ವಾಮೇವ ರಾತಿಷಾಚಃ । ರಾತಿರ್ದಾನಂ ದತ್ತಂ ಹವಿರಾದಿ ಧನಂ ವಾ । ತೇನ ಸಮವೇತಾ ದೇವಾ ಅಧ್ವರೇಷು ಯಜ್ಞೇಷು ಸಶ್ಚಿರೇ । ಸೇವಂತೇ । ತ್ವಾಮೇವ ಪ್ರತೀಕ್ಷಂತೇ ವಿನಾ ತ್ವಯಾ ಸ್ವೇಷಾಂ ಹವಿರ್ಭಕ್ಷಣಾಯೋ-ಗಾತ್ । ಏವಂ ಕೃತ್ವಾ ತ್ವೇ ತ್ವಯಿ ದೇವಾಃ ಸರ್ವ ಆಹುತಿಂ ಸರ್ವತೋ ದತ್ತಂ ಹವಿರದಂತಿ । ಭಕ್ಷ-ಯಂತಿ । ಏವಂ ಸರ್ವದೇವೋಪಕಾರಿಣಂ ಮಹಾನುಭಾವಂ ಸ್ತೌಮೀತ್ಯರ್ಥಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತ್ವಾಂ—ನಿನ್ನನ್ನು । ಆದಿತ್ಯಾಸಃ—ಅದಿತಿಪುತ್ರರಾದ ಇಂದ್ರಾದಿಗಳು । ಆಸ್ಯಃ—ಹವಿಸ್ಸನ್ನು ಭಕ್ಷಿಸುವ ಮುಖವನ್ನಾಗಿ (ಮಾಡಿಕೊಂಡರು) । ಕವೇ—ಕ್ರಾಂತಪ್ರಜ್ಞನಾದ ಅಗ್ನಿಯೇ । ತ್ವಾಂ—ನಿನ್ನನ್ನೇ । ಶುಚಯಃ—ಪ್ರಕಾಶಮಾನರಾದ ದೇವತೆಗಳು । ಜಿಹ್ವಾಂ—ಆಸ್ವಾದನೆಮಾಡತಕ್ಕ ನಾಲಿಗೆ ಯನ್ನಾಗಿ । ಚಕ್ರಿರೇ—ಮಾಡಿಕೊಂಡರು । ತ್ವಾಂ—ನಿನ್ನನ್ನೇ । ರಾತಿಷಾಚಃ—ಹವಿಸ್ಸಿನ ರೂಪದ ಧನವನ್ನು ಹೊಂದಿದ ದೇವತೆಗಳು । ಅಧ್ವರೇಷು—ಯಜ್ಞಗಳಲ್ಲಿ । ಸಶ್ಚಿರೇ—ಸೇವಿಸುತ್ತಾರೆ । ತ್ವೇ—ನಿನ್ನಲ್ಲಿ (ನಿನ್ನ ಮೂಲಕವೇ) । ದೇವಾಃ—ಸಕಲ ದೇವತೆಗಳೂ । ಆಹುತಂ—ಅರ್ಪಿತವಾದ । ಹವಿಃ—ಹವಿಸ್ಸನ್ನು । ಅದಂತಿ—ಭಕ್ಷಿಸುತ್ತಾರೆ.

ಭಾವಾರ್ಥ

ಕವಿಯಾದ ಎಲೈ ಅಗ್ನಿಯೇ, ನಿನ್ನನ್ನು ಇಂದ್ರಾದಿ ದೇವತೆಗಳು ಹವಿಸ್ಸನ್ನು ಭಕ್ಷಿಸುವ ಮುಖವನ್ನಾಗಿಯೂ, ರುಚಿನೋಡತಕ್ಕ ಜಿಹ್ವೆಯನ್ನಾಗಿಯೂ ಮಾಡಿಕೊಂಡರು. ಹವಿಸ್ಸಿನ ರೂಪದ ಧನವನ್ನು ಹೊಂದಿದ ದೇವತೆಗಳು ಯಜ್ಞಗಳಲ್ಲಿ ನಿನ್ನನ್ನೇ ಸೇವಿಸುತ್ತಾರೆ. ಸಕಲ ದೇವತೆಗಳೂ ತಮಗೆ ಅರ್ಪಿತವಾದ ಹವಿಸ್ಸನ್ನು ನಿನ್ನ ಮೂಲಕವೇ ಭಕ್ಷಿಸುತ್ತಾರೆ.

English Translation

The Adityas have made, you Agni, their mouth ; the pure (deities) have made you Kavi, their tongue : the (gods), the givers of wealth, depend upon you at sacrifices ; they eat the offered oblation through you.

ವಿಶೇಷವಿಷಯಗಳು

ತ್ವಾಂ ಅಗ್ನೇ ಆದಿತ್ಯಾಸಃ ಆಸ್ಯಂ ಚಕ್ರಿರೇ—ಅದಿತಿಯ ಎಂದರೆ ದೇವಮಾತೆಯ ಪುತ್ರರಾದ ಆದಿತ್ಯರು (ಮಿತ್ರಾವರುಣಾರ್ಯಮರು) ಅಥವಾ ದೇವತೆಗಳು ನಿನ್ನನ್ನು ತಮ್ಮ ಮುಖ (ಬಾಯಿ) ವನ್ನಾಗಿ ಮಾಡಿಕೊಂಡಿರುವರು. ಎಂದರೆ, ದೇವತೆಗಳು ಪ್ರತ್ಯಕ್ಷವಾಗಿ ಯಜ್ಞಭೂಮಿಗೆ ಬಂದು ಎಲ್ಲರೂ ನೋಡುವಂತೆ ಶರೀರಾದ್ಯಾಕಾರ

ಸಹಿತರಾಗಿ ಹವಿರಾದಿಗಳನ್ನು ಸ್ವೀಕರಿಸುವುದಿಲ್ಲ. ಆದರೆ ಅಗ್ನಿಯಲ್ಲಿ ದೇವತೆಗಳನ್ನುದ್ದೇಶಿಸಿ ಆಯಾಮಂತ್ರಪುರಸ್ಸರ ವಾಗಿ ಹೋಮಮಾಡುವ ಹವಿರಾದಿಗಳನ್ನು ಸ್ವೀಕರಿಸುವರು. ಅಗ್ನಿಯಲ್ಲಿ ಅರ್ಪಿಸಿದ ಆಹುತಿಯು ದೇವತೆಗಳಿಗೆ ಹೋಗಿ ಸೇರುವುದು ಆದುದರಿಂದ ಅಗ್ನಿಯೇ ದೇವತೆಗಳಿಗೆ ಮುಖದಂತಿರುವನು. ಅವನ ಮೂಲಕವೇ ದೇವತೆಗಳು ಹವಿಸ್ಸನ್ನು ಸ್ವೀಕರಿಸುವರು ಎಂದಭಿಪ್ರಾಯವು.

**ತ್ವಾಂ ಜಿಹ್ವಾಂ ಶುಚಯಶ್ಚಕ್ರಿರೇ ಕವೇ**—ಹಿಂದೆ ಹೇಳಿದಂತೆ ಪ್ರಕಾಶಮಾನರಾದ ದೇವತೆಗಳು ಅಗ್ನಿಯಾದ ನಿನ್ನನ್ನೇ ತಮ್ಮ ಜಿಹ್ವೆ (ನಾಲಗೆ) ಯನ್ನಾಗಿ ಮಾಡಿಕೊಂಡರು. ಎಂದರೆ ಅಗ್ನಿಯಾದ ನಿನ್ನ ಮುಖದಿಂದಲೇ (ನಿನ್ನಲ್ಲಿ ಹೋಮಮಾಡುವುದರಿಂದಲೇ) ದೇವತೆಗಳು ಹವಿರಾದಿಗಳನ್ನು ಭಕ್ಷಿಸುವರು. ನಿನ್ನ ಜಿಹ್ವೆ (ಜ್ವಾಲೆ) ಯಿಂದಲೇ ಆಸ್ವಾದನೆಮಾಡುವರು ಎಂದಭಿಪ್ರಾಯವು.

**ತ್ವಾಂ ರಾತಿಷಾಚಃ ಅಧ್ವರೇಷು ಸಶ್ಚಿರೇ**—ಯಜ್ಞಗಳಲ್ಲಿ ದೇವತೆಗಳೆಲ್ಲರೂ ಸೇರಿ ತಮ್ಮ ಹವಿರಾಪ್ತಿಗಾಗಿ ನಿನ್ನನ್ನೇ ನಿರೀಕ್ಷಿಸಿ ನಂಬಿಕೊಂಡಿರುವರು ನಿನ್ನಲ್ಲಿ ಯಜಮಾನರು ಅರ್ಪಿಸಿದ ಹವಿರಾದಿಗಳನ್ನು ದೇವತೆಗಳು ಸೇವಿಸುವರು.

**ತ್ವೇ ದೇವಾಃ ಹವಿಃ ಅದಂತಿ ಆಹುತಂ**—ನಿನ್ನಲ್ಲಿ (ಅಗ್ನಿಯಲ್ಲಿ) ಹೋಮಮಾಡಲ್ಪಡುವ ಹವಿಸ್ಸನ್ನು ದೇವತೆಗಳು ಭಕ್ಷಿಸುವರು. ಈ ಋಕ್ಕಿನ ನಾಲ್ಕು ಪಾದಗಳಲ್ಲಿ ಹೇಳಿರುವ ವಿಷಯಗಳು ಬೇರೆಬೇರೆ ಶಬ್ದಗಳಿಂದ ವರ್ಣಿಸಿದ್ದರೂ ಅರ್ಥವೆಲ್ಲಾ ಒಂದೇ ಆಗಿರುವುದು. ಎಂದರೆ ದೇವತೆಗಳು ಅಗ್ನಿಯ ಮೂಲಕವೇ, ಅಗ್ನಿಯಲ್ಲಿ ಹೋಮಮಾಡಿದ ಹವಿರಾದಿಗಳನ್ನು ಮಾತ್ರವೇ ಭಕ್ಷಿಸುವರು ಎಂದಭಿಪ್ರಾಯವು.

---

ಸಂಹಿತಾಪಾಠ

ತ್ವೇ ಅಗ್ನೇ ವಿಶ್ವೇ ಅಮೃತಾಸೋ ಅದ್ರುಹ ಆಸಾ ದೇವಾ ಹವಿರದಂತ್ಯಾ-
ಹುತಂ ।
ತ್ವಯಾ ಮರ್ತಾಸಃ ಸ್ವದಂತ ಆಸುತಿಂ ತ್ವಂ ಗರ್ಭೋ ವೀರುಧಾಂ
ಜಜ್ಞಿಷೇ ಶುಚಿಃ ॥ ೧೪ ॥

ಪದಪಾಠ

ತ್ವೇ ಇತಿ । ಅಗ್ನೇ । ವಿಶ್ವೇ । ಅಮೃತಾಸಃ । ಅದ್ರುಹಃ । ಆಸಾ । ದೇವಾಃ । ಹವಿಃ । ಅದಂತಿ । ಆऽಹುತಂ ।
ತ್ವಯಾ । ಮರ್ತಾಸಃ । ಸ್ವದಂತೇ । ಆऽಸುತಿಂ । ತ್ವಂ । ಗರ್ಭಃ । ವೀರುಧಾಂ । ಜಜ್ಞಿಷೇ । ಶುಚಿಃ ॥ ೧೪ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವೇ ತ್ವಯಿ ವಿಶ್ವೇ ಸರ್ವೇಽಮೃತಾಸೋಽಮರಣಧರ್ಮಾಣೋಽದ್ರುಹೋಽದ್ರೋಗ್ಧಾರೋ ದೇವಾ ಆಸಾ ತ್ವದೀಯೇನಾಸ್ಯೇನಾಹುತಂ ಹವಿರದಂತಿ । ಭಕ್ಷಯಂತಿ ॥ ಆಸ್ಯಶಬ್ದಸ್ಯ ತೃತೀಯೈಕವಚನೇ ಪದ್ದನ್ನೋಮಾಸಿತ್ಯಾದಿನಾಸನ್ನಾದೇಶಃ । ಊಡಿದಂಪದಾದೀತಿ ವಿಭಕ್ತೇರುದಾತ್ತತ್ವಂ ॥ ತಥಾ ಮರ್ತಾಸೋ ಮನುಷ್ಯಾ ಅಪಿ ತ್ವಯಾ ಸಾಧನಭೂತೇನಾಸುತಿಂ ರಸರೂಪಮನ್ನಾದಿಕಂ ಸ್ವದಂತೇ । ಆಸ್ವಾದಯಂತಿ । ತ್ವಮೇವ ವೀರುಧಾಂ ಲತಾದೀನಾಂ ಗರ್ಭೋ ಗರ್ಭಸ್ಥಾನೀಯಃ ತೇಷಾಂ ಮಧ್ಯಾವಸ್ಥಾನಾತ್ । ವಸುಃ ಸರ್ವೇಷಾಂ ನಿವಾಸಭೂತಃ ಸನ್ ಜಜ್ಞಿಷೇ । ಉತ್ಪಾದಯಸಿ ಸಸ್ಯಾದ್ಯನ್ನಂ ॥

ಶ್ರುತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತ್ವೇ—ನಿನ್ನಲ್ಲಿ । ವಿಶ್ವೇ—ಸಮಸ್ತವಾದ । ಅಮೃತಾಸಃ—ಮರಣಧರ್ಮರಹಿತರಾದವರೂ । ಅದ್ರುಹಃ—ಲೋಕಕ್ಕೆ ಹಿತವನ್ನೆಸಗುವವರೂ ಆದ । ದೇವಾಃ—ದೇವತೆಗಳು । ಆಸಾ—ನಿನ್ನ ಮುಖದಿಂದ । ಆಹುತಂ—ಯಜ್ಞದಲ್ಲಿ ಅರ್ಪಿಸಿದ । ಹವಿಃ—ಹವಿಸ್ಸನ್ನು । ಅದಂತಿ—ಭಕ್ಷಿಸುತ್ತಾರೆ । ಮರ್ತಾಸಃ—ಮಾನವರು । ತ್ವಯಾ—ನಿನ್ನ ಸಹಾಯದಿಂದಲೇ । ಆಸುತಿಂ—ರಸರೂಪವಾದ ಅನ್ನಾದಿಗಳನ್ನು । ಸ್ವದಂತೇ—ತಿನ್ನುತ್ತಾರೆ । ಶುಚಿಃ—ಕಾಂತಿಯುತನಾದ । ತ್ವಂ—ನೀನು । ವೀರುಧಾಂ—ಲತಾದಿಗಳ । ಗರ್ಭಃ—ಗರ್ಭರೂಪದಲ್ಲಿ ಅವುಗಳ ನಡುವೆ ಇದ್ದು । ಜಜ್ಞಿಷೇ—ಸಸ್ಯಾದ್ಯನ್ನವನ್ನು ಉತ್ಪಾದನೆಮಾಡುತ್ತೀಯೆ.

ಭಾವಾರ್ಥ

ಎಲೈ ಅಗ್ನಿಯೇ, ಮರಣಧರ್ಮರಹಿತರೂ, ಲೋಕಕ್ಕೆ ಹಿತವನ್ನೆಸಗುವವರೂ ಆದ ದೇವತೆಗಳು ನಿನ್ನ ಮುಖದಿಂದಲೇ ಯಜ್ಞದಲ್ಲಿ ಅರ್ಪಿಸಿದ ಹವಿಸ್ಸನ್ನು ಭಕ್ಷಿಸುತ್ತಾರೆ. ಮಾನವರೂ ಸಹ ನಿನ್ನ ಸಹಾಯದಿಂದಲೇ ರಸರೂಪವಾದ ಅನ್ನಾದಿಗಳನ್ನು ತಿನ್ನುತ್ತಾರೆ. ಕಾಂತಿಯುತನಾದ ನೀನು ಲತಾದಿಗಳ ಗರ್ಭರೂಪದಲ್ಲಿದ್ದು ಸಸ್ಯಾದ್ಯನ್ನವನ್ನು ಉತ್ಪಾದನೆಮಾಡುತ್ತೀಯೆ.

English Translation

All the benignant immortal gods eat the offered oblation through you, as their mouth ; mortals taste the flavour (of all viands) through you : you are born pure, the embryo of plants.

ವಿಶೇಷವಿಷಯಗಳು

ಹಿಂದಿನ ಋಕ್ಕಿನಲ್ಲಿ ಹೇಳಿರುವ ವಿಷಯವೇ ಎಂದರೆ ದೇವತೆಗಳು ಅಗ್ನಿಯಾದ ನಿನ್ನ ಮುಖದಿಂದಲೇ ಆಹುತಿಗಳನ್ನು ಭಕ್ಷಿಸುವರು ಎಂಬ ವಿಷಯವೇ ಇಲ್ಲಿಯೂ ಹೇಳಲ್ಪಟ್ಟಿರುವುದು.

**ಅಮೃತಾಸಃ— ಅಮರಧರ್ಮಾಣಃ** । ಮರಣರಹಿತರಾದವರು ; ದೇವತೆಗಳಿಗೆ ಮರಣವಿಲ್ಲವೆಂದು ಪ್ರತೀತಿ ಇರುವುದು. ಋಗ್ವೇದದಲ್ಲಿ ದೇವತೆಗಳನ್ನು ಅಮೃತ ಶಬ್ದದಿಂದಲೂ, ಮನುಷ್ಯರನ್ನು ಮರ್ತ ಅಥವಾ

**ಮರ್ತ್ಯ** ಶಬ್ದದಿಂದಲೂ ವರ್ಣಿಸುವ ರೂಢಿ ಇದೆ. ಆದುದರಿಂದ ಈ ಋಕ್ಕಿನ ಪೂರ್ವಾರ್ಧದಲ್ಲಿರುವ **ಅಮೃತಾಸಃ** ಎಂಬ ಶಬ್ದವು **ದೇವಾಃ** ಎಂಬ ಶಬ್ದಕ್ಕೆ ವಿಶೇಷಣಪದವಾಗಿದೆ. ಉತ್ತರಾರ್ಧದಲ್ಲಿ **ಮರ್ತಾಸಃ** ಎಂಬ ಶಬ್ದವು ಮನುಷ್ಯರೆಂಬ ಅರ್ಥವನ್ನು ಸೂಚಿಸುವುದು.

**ಅದ್ರುಹಃ—ಅದ್ರೋಗ್ಧಾರಃ** | ದೇವತೆಗಳು ಯಾರಿಗೂ ಕೇಡನ್ನು ಬಗೆಯದಿರುವುದರಿಂದ **ಅದ್ರುಹಃ** ಎಂಬ ವಿಶೇಷಣದಿಂದ ಸ್ತುತರಾಗಿದಾರೆ.

**ಆಸುತಿಂ—ರಸರೂಪಮನ್ನಾದಿಕಂ** | ಅನ್ನ, ಸೋಮ ಮೊಲಾದ ಭಕ್ಷಿಸುವ ಅಥವಾ ಪಾನಾರ್ಹವಾದ ಆಹಾರಾದಿಗಳು.

**ತ್ವಂ ಗರ್ಭೋ ವೀರುಧಾಂ ಜಜ್ಞಿಷೇ ಶುಚಿಃ**—ಎಲೈ ಅಗ್ನಿಯೇ, ನೀನು ಶುದ್ಧನಾದವನು. ಓಷಧಿಗಳ ಗರ್ಭಸ್ಥಾನೀಯವಾಗಿ ಹುಟ್ಟಿರುವೆ. **ವೀರುಧ** ಶಬ್ದಕ್ಕೆ ಯಾಸ್ಕರು—**ವೀರುಧ ಓಷಧಯೋ ಭವಂತಿ ವಿರೋಹಣಾತ್ | ವೀರುಧಃ ಪಾರಯಿಷ್ಣ್ವಃ ಇತ್ಯಪಿ ನಿಗಮೋ ಭವತಿ** ಎಂದು ನಿರ್ವಚನವನ್ನು ಹೇಳಿದಾರೆ. (ನಿ. ೬-೩) ಭೂಮಿಯಲ್ಲಿ ಇವು ಬೆಳೆಯುವುದರಿಂದ ಲತಾದಿಗಳಿಗೆ ಓಷಧಿಗಳೆಂದು ಹೆಸರು. ಸಸ್ಯಾದಿಗಳನ್ನೂ ಓಷಧಿಗಳೆಂದು ಹೇಳಬಹುದು. ಓಷಧಿ (ಅಥವಾ ಸಸ್ಯ) ಗಳ ಗರ್ಭದಲ್ಲಿ ಅಗ್ನಿಯು ಇದ್ದುಕೊಂಡು ಅವುಗಳ ಬೆಳವಣಿಗೆಗೂ, ಅನ್ನಾದ್ಯುತ್ಪತ್ತಿಗೂ ಸಹಾಯಕನಾಗಿರುವನೆಂದಭಿಪ್ರಾಯವು. ಅಥವಾ ವೀರುಧಶಬ್ದಕ್ಕೆ ವೃಕ್ಷವೆಂದು ಅರ್ಥಮಾಡಿದಲ್ಲಿ ವೃಕ್ಷಸಂಬಂಧವಾದ ಅರಣಿಗಳಲ್ಲಿ ಅಗ್ನಿಯು ಉತ್ಪನ್ನನಾಗುವನೆಂದೂ ಅರ್ಥವನ್ನು ಹೇಳಬಹುದು.

———:0:———

**ಸಂಹಿತಾಪಾಠಃ**

ತ್ವಂ ತಾನ್ತ್ಸಂ ಚ ಪ್ರತಿ ಚಾಸಿ ಮಜ್ಮನಾಗ್ನೇ ಸುಜಾತ ಪ್ರ ಚ ದೇವ ರಿಚ್ಯಸೇ ।
ಪೃಕ್ಷೋ ಯದತ್ರ ಮಹಿನಾ ವಿ ತೇ ಭುವದನು ದ್ಯಾವಾಪೃಥಿವೀ ರೋದಸೀ ಉಭೇ ॥ ೧೫ ॥

**ಪದಪಾಠಃ**

ತ್ವಂ । ತಾನ್ । ಸಂ । ಚ । ಪ್ರತಿ । ಚ । ಅಸಿ । ಮಜ್ಮನಾ । ಅಗ್ನೇ । ಸುऽಜಾತ । ಪ್ರ । ಚ । ದೇವ । ರಿಚ್ಯಸೇ ।
ಪೃಕ್ಷಃ । ಯತ್ । ಅತ್ರ । ಮಹಿನಾ । ವಿ । ತೇ । ಭುವತ್ । ಅನು । ದ್ಯಾವಾಪೃಥಿವೀ ಇತಿ । ರೋದಸೀ ಇತಿ । ಉಭೇ ಇತಿ । ॥ ೧೫ ॥

### ಸಾಯಣಭಾಷ್ಯಂ

ಹೇ ಅಗ್ನೇ ತ್ವಂ ಮಜ್ಮನಾ ಬಲೇನ ತಾನ್ ಪ್ರಸಿದ್ಧಾನ್ದೇವಾನ್ ಸಂ ಚಾಸಿ । ಸಂಗಚ್ಛಸಿ । ತೈಃ ಸಹಿತೋಽಪಿ ಭವಸಿ । ತಥಾ ಸಾಮರ್ಥ್ಯೇನ ಪ್ರತಿ ಚಾಸಿ ! ಪ್ರತ್ಯೇಕಂ ತೈರ್ವಿಭಿನ್ನಃ ಪ್ರತಿನಿಧಿರ್ವಾ ಭವಸಿ । ಪ್ರತಿಸ್ವೀಕಾರಸಮಯೇ ತೈಃ ಸಹಿತೋ ಭವಸಿ ವಿಯುಕ್ತಶ್ಚ ಭವಸೀತ್ಯರ್ಥಃ । ಹೇ ಸುಜಾತ ಶೋಭನ-ಜನನ । ಶೋಭನಮಂತ್ರಸಹಿತಮಥನೇನೋತ್ಪನ್ನತ್ವಾದಗ್ನೇಃ ಸುಜನ್ಮತ್ವಂ । ತಾದೃಶಾಗ್ನೇ ಹೇ ದೇವ ಪ್ರರಿಚ್ಯಸೇ ಚ। ತೈರ್ಬಲೇನ ಚಾಧಿಕೋ ಭವಸಿ। ಆಧಿಕ್ಯೇ ಕಾರಣಮಾಹ । ಯತ್ ಯಸ್ಮಾದತ್ರಾಸ್ಮಿನ್ಯಜ್ಞೇ ಪೃಕ್ಷಃ ಸರ್ವಸ್ಪೃಷ್ಟನ್ನಂ ॥ ವ್ಯತ್ಯಯೇನ ಬಹುವಚನಂ॥ ತೇ ತವೈವ ವಿಭುವತ್ । ಸಮರ್ಥಂ ಭವತಿ ಮಹಿನಾ ಮಾಹಾತ್ಮ್ಯೇನ । ಯತೋ ಮಹತ್ತ್ವಮಸ್ತಿ ಅತ ಇತ್ಯರ್ಥಃ । ಕುತ್ರೇತಿ ತದುಚ್ಯತೇ । ರೋದಸೀ ಸರ್ವನಿರೋಧನಸ್ವಭಾವೇ ಉಭೇ ದ್ಯಾವಾಪೃಥಿವ್ಯಾವನು । ತೇ ಪ್ರತಿ । ತಯೋರ್ಮಧ್ಯೇ ವ್ಯಾಪ್ತಮಿತ್ಯರ್ಥಃ । ತ್ವಯಿ ಹುತಮನ್ನಂ ತ್ವನ್ಮಹತ್ತ್ವೇನ ಲೋಕತ್ರಯೇ ವ್ಯಾಪ್ತಮಿತ್ಯರ್ಥಃ ॥

### ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ಮಜ್ಮನಾ—ಶಕ್ತಿಯಿಂದ । ತಾನ್—ಪ್ರಸಿದ್ಧರಾದ ದೇವತೆಗಳೊಡನೆ । ಸಂಚಾಸಿ—ಸೇರಿಕೊಂಡಿದ್ದೀಯೆ ! ಪ್ರತಿಚಾಸಿ—ವಿವಿಕ್ತನಾಗಿಯೂ ಇದ್ದೀಯೆ । ಯತ್—ಯಾವ ನಿನ್ನ । ಮಹಿನಾ—ಮಾಹಾತ್ಮ್ಯದಿಂದ । ಅತ್ರ—ಈ ಯಜ್ಞದಲ್ಲಿ (ಅರ್ಪಿತವಾದ) । ಪೃಕ್ಷಃ—ಸಮಸ್ತವಾದ ಅನ್ನವೂ । ತೇ—ನಿನ್ನ । ವಿ ಭುವತ್—ಅಧೀನದಲ್ಲಿಯೇ ಇದ್ದು (ಅನಂತರ) । ರೋದಸೀ ಉಭೇ—ದ್ಯಾವಾಪೃಥಿವಿಗಳೆರಡು ಲೋಕಗಳನ್ನೂ । ಅನು—ವ್ಯಾಪಿಸುತ್ತದೆಯೋ (ಆದ್ದರಿಂದ) । ಸುಜಾತ—ಶ್ರೇಷ್ಠವಾದ ಜನ್ಮವುಳ್ಳವನೂ । ದೇವ—ದೇವತಾತ್ಮನೂ ಆದ ಎಲೈ ಅಗ್ನಿಯೇ । ಪ್ರರಿಚ್ಯಸೇ ಚ—ನೀನು ಸಾಮರ್ಥ್ಯದಲ್ಲಿ ದೇವತೆಗಳೆಲ್ಲರನ್ನೂ ಮೀರಿಯೇ ಇದ್ದೀಯೆ.

### ಭಾವಾರ್ಥ

ಶ್ರೇಷ್ಠವಾದ ಜನ್ಮವುಳ್ಳವನೂ, ದೇವತಾತ್ಮನೂ ಆದ ಎಲೈ ಅಗ್ನಿಯೇ, ನೀನು ನಿನ್ನ ಶಕ್ತಿಯಿಂದ ದೇವತೆಗಳನ್ನು ಸೇರಿಕೊಂಡಿದ್ದೀಯೆ. ಬೇರೆಯಾಗಿಯೂ ಇದ್ದೀಯೆ. ಯಾವ ನಿನ್ನ ಮಹಾತ್ಮ್ಯದಿಂದ ಈ ಯಜ್ಞದಲ್ಲಿ ಅರ್ಪಿತವಾದ ಸಮಸ್ತವಾದ ಅನ್ನವೂ ಮೊದಲು ನಿನ್ನ ಅಧೀನದಲ್ಲಿದ್ದು ಅನಂತರ ದ್ಯಾವಾಪೃಥಿವಿಗಳೆರಡನ್ನೂ ವ್ಯಾಪಿಸಿ ಉಳಿದ ದೇವತೆಗಳಿಗೆ ವಿಭಕ್ತವಾಗುತ್ತದೆಯೋ, ಆದ್ದರಿಂದ (ಅಂತಹ) ನೀನು ಸಾಮರ್ಥ್ಯದಲ್ಲಿ ಉಳಿದ ದೇವತೆಗಳೆಲ್ಲರನ್ನೂ ಮೀರಿಸಿದ್ದೀಯೆ.

### English Translatin

You are associated, Agni, by your vigour, with those (goods) ; divine, well-born Agni, you exceed (them in strength), for the (sacrificial) food that is here prepared is, by your power, subsequently diffused through both regions, heaven and earth.

### ವಿಶೇಷವಿಷಯಗಳು

ತ್ವಂ ತಾನ್ ಸಂ ಚ ಪ್ರತಿ ಚ ಅಸಿ ಮಜ್ಮನಾ—ಮಜ್ಮನಾ ಎಂಬ ಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ. ಎಲೈ ಅಗ್ನಿಯೇ ನೀನು ಬಲದಿಂದ (ಬಲದಲ್ಲಿ) ದೇವತೆಗಳಿಗೆ ಸರಿಸಮನಾಗಿದ್ದೀಯೆ. ಅಥವಾ ದೇವತೆಗಳಲ್ಲಿ ಜತೆಯಲ್ಲಿರುವೆ. ಎಂದರೆ ಹವಿಸ್ಸ್ವೀಕಾರಕಾಲದಲ್ಲಿ ನೀನು ದೇವತೆಗಳೊಡನೆ ಇರುವೆ. ನಿನ್ನಲ್ಲಿ ಹೋಮ ಮಾಡಿದ ಆಹುತಿಗಳನ್ನು ದೇವತೆಗಳು ಭಕ್ಷಿಸುವುದರಿಂದ ಹವಿರರ್ಪಣಕಾಲದಲ್ಲಿ ನೀನೂ ದೇವತೆಗಳೂ ಒಟ್ಟಿಗೆ ಇರುತ್ತೀರಿ. ಇತರ ಕಾಲದಲ್ಲಿ ನೀನು ಬೇರೆಯಾಗಿಯೂ ಇರುತ್ತೀಯೆ ಎಂದಭಿಪ್ರಾಯವು.

ಅಗ್ನೇ ಸುಜಾತ ಪ್ರ ಚ ದೇವ ರಿಚ್ಯಸೇ—ಸುಜಾತ ಎಂದರೆ ಅಗ್ನಿಮಥನಕಾಲದಲ್ಲಿ ಶೋಭನಮಂತ್ರ ಪಠನಪೂರ್ವಕವಾಗಿ ಅಗ್ನಿಯು ಉತ್ಪನ್ನನಾಗುವುದರಿಂದ ಅಗ್ನಿಯನ್ನು ಸುಜಾತ-ಶೋಭನೋತ್ಪನ್ನ ಎಂದು ಕರೆದಿದೆ. ಅಂತಹ ಎಲೈ ಅಗ್ನಿಯೇ, ನೀನು ಬಲದಲ್ಲಿ ದೇವತೆಗಳನ್ನು ಮೀರಿಸಿದ್ದೀಯೆ ಎಂದಭಿಪ್ರಾಯವು. ಅದು ಹೇಗೆಂದರೆ—

ಪೃಕ್ಷಃ ಯದತ್ರ ರೋದಸೀ ಉಭೇ । ಈ ಯಜ್ಞದಲ್ಲಿ ನಿನ್ನಲ್ಲಿ ಅರ್ಪಿತವಾದ ಯಾವ ಹವೀರೂಪವಾದ ಅನ್ನವುಂಟೋ ಅದು ನಿನ್ನ ಮಹಿಮೆಯಿಂದ ದ್ಯಾವಾಪೃಥಿವಿಗಳ ಮಧ್ಯಪ್ರದೇಶವೆಲ್ಲವನ್ನೂ ವ್ಯಾಪಿಸಿರುವುದು. ಎಂದರೆ ಭೂಮ್ಯಂತರಿಕ್ಷ ಸ್ವರ್ಗಲೋಕಗಳಲ್ಲಿರುವ ಸಮಸ್ತದೇವತೆಗಳಿಗೂ ಹೋಗಿ ಸೇರುವುದೆಂದಭಿಪ್ರಾಯವು.

---

### ಸಂಹಿತಾಪಾಠಃ

ಯೇ ಸ್ತೋತೃಭ್ಯೋ ಗೋಅಗ್ರಾಮಶ್ವಪೇಶಸಮಗ್ನೇ ರಾತಿಮುಪಸೃಜಂತಿ ಸೂರಯಃ ।
ಅಸ್ಮಾಞ್ಚ ತಾಂಶ್ಚ ಪ್ರ ಹಿ ನೇಷಿ ವಸ್ಯ ಆ ಬೃಹದ್ವದೇಮ ವಿದಥೇ ಸುವೀರಾಃ ॥ ೧೬ ॥

### । ಪದಪಾಠಃ ।

ಯೇ । ಸ್ತೋತೃಽಭ್ಯಃ । ಗೋಽಅಗ್ರಾಂ । ಅಶ್ವಽಪೇಶಸಂ । ಅಗ್ನೇ । ರಾತಿಂ । ಉಪಽಸೃಜಂತಿ । ಸೂರಯಃ ।
ಅಸ್ಮಾನ್ । ಚ । ತಾನ್ । ಚ । ಪ್ರ । ಹಿ । ನೇಷಿ । ವಸ್ಯಃ । ಆ । ಬೃಹತ್ । ವದೇಮ । ವಿದಥೇ । ಸುಽವೀರಾಃ ॥ ೧೬ ॥

ಸಾಯಣಭಾಷ್ಯಂ

ಅನಯಾ ಹೋತಾ ಸ್ತುತಿನಿಗಮವ್ಯಾಜೇನಾಭಿಮತಮಾಶಾಸ್ತೇ । ಹೇ ಽಗ್ನೇ ಸೂರಯೋ ಮೇಧಾವಿನಃ ಪ್ರೇರಯಿತಾರೋ ವಾ ಯಜಮಾನಾಃ ಸ್ತೋತೃಭ್ಯಃ ಸ್ತುತಿಕರ್ತೃಭ್ಯೋ ಗೋಅಗ್ರಾಂ ಗಾವೋಽಗ್ರಗಾಮಿನ್ಯೋ ಯಸ್ಯಾಸ್ತಾದೃಶೀಂ ಗೋಪ್ರಮುಖಾಮಶ್ವಪೇಶಸಂ ॥ ಪೇಶ ಇತಿ ರೂಪನಾಮ ॥ ಅಶ್ವೇನ ನಿರೂಪಣೀಯಾಂ । ಏತದ್ದ್ವಯಪ್ರಾಧಾನ್ಯಾಭಿಪ್ರಾಯಂ। ಗೌಶ್ಚಾಶ್ವಶ್ಚಾಜಾಶ್ಚೇತಿ ದಕ್ಷಿಣಾಪರಿಗಣನೇಷು ಗವಾಶ್ವಯೋಃ ಪ್ರಾಥಮ್ಯಾತ್ । ತಾದೃಶೀಂ ರಾತಿಮುಪಸೃಜಂತಿ । ದದತೇ । ತಾನ್ಯಜಮಾನಾನಸ್ಮಾಂಶ್ಚರ್ತ್ವಿಜೋ ವಸ್ಯೋ ವಸೀಯಃ ಶ್ರೇಷ್ಠಂ ಸ್ವರ್ಗಾದಿಸ್ಥಾನಂ ಆ ಸರ್ವತಃ ಪ್ರ ಹಿ ನೇಷಿ । ಪ್ರಕರ್ಷೇಣ ನಯಸಿ ಖಲು । ನಯೇತ್ಯರ್ಥಃ । ಹಿ ಪ್ರಸಿದ್ಧೌ । ವಯಂ ಚ ಸುವೀರಾಃ ಶೋಭನಪುತ್ರಾದಿಸಹಿತಾ ವಿದಥೇ ಯಜ್ಞೇ ಬೃಹನ್ಮಹನ್ಮಂತ್ರಜಾತಂ ವದೇಮ । ಉಚ್ಚಾರಯಾಮಃ । ಸ್ತುಮ ಇತ್ಯರ್ಥಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಯೇ—ಯಾರು । ಸೂರಯಃ—ಸದ್ಬುದ್ಧಿಯಿಂದ ಪ್ರೇರಿತರಾಗಿದ್ದಾರೆಯೋ ಅಂತಹ ಯಜಮಾನರು । ಸ್ತೋತೃಭ್ಯಃ—ಸ್ತುತಿಕರ್ತರಿಗೆ । ಗೋಅಗ್ರಾಂ—ಗೋವುಗಳೇ ಮುಖ್ಯವಾಗಿರುವುದೂ । ಅಶ್ವಪೇಶಸಂ—ಅಶ್ವದಿಂದ ನಿರೂಪಿಸಲ್ಪಡುವುದೂ ಆದ । ರಾತಿಂ—ದಾನವನ್ನು । ಉಪಸೃಜಂತಿ—ಕೊಡುತ್ತಾರೆ । ತಾಂಶ್ಚ—ಯಜಮಾನರನ್ನೂ । ಅಸ್ಮಾಂಶ್ಚ—ಋತ್ವಿಕ್ಕುಗಳಾದ ನಮ್ಮನ್ನೂ । ವಸ್ಯಃ—ಉತ್ತಮವಾದ ಸ್ವರ್ಗಾದಿಸ್ಥಾನಕ್ಕೆ । ಆ ಪ್ರ ಹಿ ನೇಷಿ—ಅತಿಶಯವಾದ ರೀತಿಯಲ್ಲಿ ಕರೆದುಕೊಂಡು ಹೋಗು । ಸುವೀರಾಃ—ಶ್ರೇಷ್ಠವಾದ ಪುತ್ರಾದಿಗಳಿಂದ ಕೂಡಿದ ನಾವು । ವಿದಥೇ ಯಜ್ಞದಲ್ಲಿ । ಬೃಹತ್—ಮಹತ್ಪೂರಿತವಾದ ಮಂತ್ರವನ್ನು । ವದೇಮ—ಪಠಿಸುವೆವು ।

ಭಾವಾರ್ಥ

ಎಲೈ ಅಗ್ನಿಯೇ, ಸದ್ಬುದ್ಧಿಯಿಂದ ಪ್ರೇರಿತರಾದ ಯಜಮಾನರು ಸ್ತುತಿಕರ್ತರಿಗೆ ಗೋವುಗಳಿಂದಲೂ ಅಶ್ವಗಳಿಂದಲೂ ಕೂಡಿದ ದಾನವನ್ನು ಕೊಡುತ್ತಾರೆ. ಆ ಯಜಮಾನರನ್ನು ಋತ್ವಿಕ್ಕುಗಳಾದ ನಮ್ಮನ್ನೂ ಉತ್ತಮವಾದ ಸ್ವರ್ಗಾದಿಸ್ಥಾನಕ್ಕೆ ಅತಿಶಯವಾದ ರೀತಿಯಲ್ಲಿ ಕರೆದುಕೊಂಡು ಹೋಗು. ಶ್ರೇಷ್ಠವಾದ ಪುತ್ರಾದಿಗಳಿಂದ ಕೂಡಿದ ನಾವು ಯಜ್ಞದಲ್ಲಿ ಮಹತ್ಪೂರಿತವಾದ ಮಂತ್ರವನ್ನು ಪಠಿಸುವೆವು.

English Translation

The pious are they who present, as a gift, to the reciters of your praises, an excellent cow and an excellent horse; do you, Agni, lead both us and them to the best of abodes, (or heaven) ,that we and our worthy descendants may repeat the solemn prayer to you at the sacrifice.

ವಿಶೇಷವಿಷಯಗಳು

ಈ ಸೂಕ್ತದ ಕೊನೆಯದಾದ ಈ ಋಕ್ಕಿನಲ್ಲಿ ಋಷಿಯು ಅಗ್ನಿಯನ್ನು ಅಭಿಮತಸಿದ್ಧಿಗಾಗಿ ಪ್ರಾರ್ಥಿಸಿ ಉಪಸಂಹಾರಮಾಡುವನು.

**ಸ್ತೋತೃಭ್ಯಃ ಗೋ ಅಗ್ರಾಮಶ್ವಪೇಶಸಂ ರಾತಿಂ ಉಪಸೃಜಂತಿ ಸೂರಯಃ**—ಅಗ್ನಿಯನ್ನು ಸ್ತೋತ್ರ ಮಾಡುವ ಋತ್ವಿಗ್ಜನರು. ಇವರಿಗೆ ಯಜ್ಞಸಮಾಪ್ತಿಕಾಲದಲ್ಲಿ ದಕ್ಷಿಣಾರೂಪವಾಗಿ ಗೋವುಗಳು, ಅಶ್ವ, ಅಜ ಮುಂತಾದವುಗಳನ್ನು ಯಜಮಾನನು ಕೊಡುವುದು ರೂಢಿಯು. ಅದರಂತೆ ಇಲ್ಲಿಯೂ ಮೇಧಾವಿಗಳಾದ ಯಜಮಾನರು ಹೋತ್ರಾದಿ ಋತ್ವಿಜರಿಗೆ ಗೋವುಗಳೇ ಮೊದಲಾದ ದಕ್ಷಿಣೆಯನ್ನು ಕೊಡುವರೆಂದೂ ಅಂತಹ ಯಜಮಾನರನ್ನೂ ಋತ್ವಿಜರಾದ ನಮ್ಮನ್ನೂ ಉತ್ತಮವಾದ (ಸ್ವರ್ಗಾದಿ) ಸ್ಥಾನಕ್ಕೆ ಕರೆದೊಯ್ಯಬೇಕೆಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ. ಇಲ್ಲಿ **ಗೋಅಗ್ರಾಂ**—ಗೋವುಗಳೇ ಪ್ರಧಾನವಾದ, **ಅಶ್ವಪೇಶಸಂ**—ಅಶ್ವಾಕಾರಗಳಿಂದ ಎಂದರೆ ಅಶ್ವಗಳಿಂದ ಸಹಿತವಾದ **ರಾತಿಂ**—ದಾನವನ್ನು ಅಥವಾ ದಕ್ಷಿಣೆಯನ್ನು ಎಂದು ಈ ಶಬ್ದಗಳ ಅರ್ಥವು.

**ಬೃಹತ್ ವದೇಮ ವಿದಥೇ ಸುವೀರಾಃ**—ವೀರರಾದ ಪುತ್ರಮಿತ್ರಭೃತ್ಯಾದಿಗಳಿಂದ ಸಹಿತರಾದ ನಾವು ಈ ಯಜ್ಞದಲ್ಲಿ ಬಹಳವಾದ ಅಥವಾ ಮಹತ್ತ್ವಪೂರಿತವಾದ ಸ್ತೋತ್ರವನ್ನು ಪಠಿಸೋಣ ಎಂದು ಅಗ್ನಿಯನ್ನುದ್ದೇಶಿಸಿ ಪ್ರಾರ್ಥಿಸಲಾಗಿದೆ. ಈ ಋಕ್ಕಿನ **ಬೃಹದ್ವದೇಮ ವಿದಥೇ ಸುವೀರಾಃ** ಎಂಬ ನಾಲ್ಕನೆಯ ಪಾದವು ಈ ಗೃತ್ಸಮದ ಋಷಿದೃಷ್ಟವಾದ ಅನೇಕ ಸೂಕ್ತಗಳ ಕೊನೆಯ ಋಕ್ಕಿನ ಕೊನೆಯಪಾದದಲ್ಲಿ ಪುನಃ ಪುನಃ ಪಠಿತವಾಗಿದೆ.

---

## ಎರಡನೆಯ ಸೂಕ್ತವು.

---

ಸಾಯಣಭಾಷ್ಯಂ

**ಯಜ್ಞೇನ ವರ್ಧತೇತಿ ತ್ರಯೋದಶರ್ಚಂ ದ್ವಿತೀಯಂ ಸೂಕ್ತಂ ಮಂಡಲದ್ರಷ್ಟುರ್ಗೃತ್ಸಮದಸ್ಯಾರ್ಷಂ । ಮಂಡಲಾದಿತ್ವಾದಾಗ್ನೇಯಮಿತಿ ಪರಿಭಾಷಯಾಗ್ನೇಯಂ । ತುಶಬ್ದಾನುಕರ್ಷಾದಿದಮಪಿ ಜಾಗತಂ । ಯಜ್ಞೇನ ಸಪ್ತೋನೇತ್ಯನುಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ಜಾಗತೇ ಛಂದಸ್ಯಸ್ಯ ವಿನಿಯೋಗಃ । ಸೂತ್ರಂ ತು ಪೂರ್ವಸೂಕ್ತ ಏವೋಕ್ತಂ ॥ ತಥಾ ಚಾತುರ್ವಿಂಶಿಕೇ ತೃತೀಯಸವನೇ ಜಾತವೇದಸ್ಯನಿವಿದ್ಧಾನೀಯಮಿದಂ । ಯಜ್ಞೇನ ವರ್ಧತೇತ್ಯಾಗ್ನಿಮಾರುತಂ । ಆ. ೭-೪ । ಇತಿ ಸೂತ್ರಿತತ್ವಾತ್ ॥ ಪೃಷ್ಠ್ಯಾಭಿಪ್ಲವಷಡಹಯೋರ್ದ್ವಿತೀಯೇಽಹನ್ಯಪಿ ಜಾತವೇದಸ್ಯನಿವಿದ್ಧಾನಮಿದಂ । ಚಾತುರ್ವಿಂಶಿಕಂ ತೃತೀಯಸವನಮಿತಿ ಚತುರ್ವಿಂಶಾದತಿದಿಷ್ಟತ್ವಾತ್ ॥**

ಅನುವಾದವು—**ಯಜ್ಞೇನ ವರ್ಧತೆ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹದಿಮೂರು ಋಕ್ಕುಗಳಿರುವುವು. ಮಂಡಲದ್ರಷ್ಟೃವಾದ ಗೃತ್ಸಮದನೇ ಈ ಸೂಕ್ತಕ್ಕೂ ಋಷಿಯು; ಅಗ್ನಿಯು ದೇವತೆಯು; ಜಗತೀಛಂದಸ್ಸು, ಅನುಕ್ರಮಣಿಕೆಯಲ್ಲಿ—**ಯಜ್ಞೇನ ಸಪ್ತ** ಎಂದು ಮುಂತಾಗಿ ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿಯೂ, ಆಶ್ವಿನಶಸ್ತ್ರಮಂತ್ರಪಠನಕಾಲದಲ್ಲಿಯೂ ಜಗತೀಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದು. ಸೂತ್ರವಾಕ್ಯವು ಹಿಂದೆಯೇ ಹೇಳಲ್ಪಟ್ಟಿರುವುದು. ಮತ್ತು ಇಪ್ಪತ್ತನಾಲ್ಕು ದಿವಸಗಳವರೆಗೆ ಮಾಡುವ ಯಾಗದಲ್ಲಿ ತೃತೀಯಸವನಕಾಲದಲ್ಲಿ ಜಾತವೇದಸ್ ಎಂಬ ದೇವತೆಯ ಪರವಾಗಿ ಪಠಿಸುವ ನಿವಿದ್ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ

ಶ್ರೌತಸೂತ್ರದ ಯಜ್ಞೇನ ವರ್ಧತೇತ್ಯಾಗ್ನಿಮಾರುತಂ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೪) ಮತ್ತು ಪೃಷ್ಠ್ಯ ಅಭಿಪ್ಲವಷಡಹವೆಂಬ ಯಾಗಗಳ ಎರಡನೆಯ ದಿವಸದಲ್ಲಿಯೂ, ಜಾತವೇದಸ್ ಎಂಬ ದೇವತೆಯ ನಿವಿದ್ ಮಂತ್ರಗಳಿಗಾಗಿಯೂ, ಈ ಸೂಕ್ತದ ವಿನಿಯೋಗವಿರುವುದೆಂದು ಚಾತರ್ವಿಂಶಿಕಂ ತೃತೀಯಸವನಂ ಎಂಬ ವಾಕ್ಯದಿಂದ ನಿರ್ದಿಷ್ಟವಾಗಿರುವುದು.

---

॥ ಓಂ ॥

## ಸೂಕ್ತ—೨

॥ ಮಂಡಲ—೨ ॥ ಅನುವಾಕ—೧ ॥ ಸೂಕ್ತ—೨ ॥

॥ ಅಷ್ಟಕ—೨ ॥ ಅಧ್ಯಾಯ—೫ ॥ ವರ್ಗ—೨೦, ೨೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೧೩ ॥

ಋಷಿಃ—ಗೃತ್ಸಮದಃ ॥

ದೇವತಾ—ಅಗ್ನಿಃ ॥

ಛಂದಃ—ಜಗತೀ ॥

ಸಂಹಿತಾಪಾಠ

ಯಜ್ಞೇನ ವರ್ಧತ ಜಾತವೇದಸಮಗ್ನಿಂ ಯಜಧ್ವಂ ಹವಿಷಾ ತನಾ ಗಿರಾ।
ಸಮಿಧಾನಂ ಸುಪ್ರಯಸಂ ಸ್ವರ್ಣರಂ ದ್ಯುಕ್ಷಂ ಹೋತಾರಂ ವೃಜನೇಷು
ಧೂರ್ಷದಂ ॥ ೧ ॥

ಪದಪಾಠ

ಯಜ್ಞೇನ । ವರ್ಧತ । ಜಾತऽವೇದಸಂ । ಅಗ್ನಿಂ । ಯಜಧ್ವಂ । ಹವಿಷಾ । ತನಾ । ಗಿರಾ ।
ಸಂऽಇಧಾನಂ । ಸುऽಪ್ರಯಸಂ । ಸ್ವಃऽನರಂ । ದ್ಯುಕ್ಷಂ । ಹೋತಾರಂ । ವೃಜನೇಷು । ಧೂಃऽಸದಮ್ ॥೧॥

ಸಾಯಣಭಾಷ್ಯಂ

ಹೇ ಯಜಮಾನಾ ಋತ್ವಿಜೋ ವಾ ಯೂಯಂ ಜಾತವೇದಸಂ ಜಾತಾನಾಂ ವೇದಿತಾರಂ ಜಾತಧನಂ ಜಾತಪ್ರಜ್ಞಂ ವಾಗ್ನಿಂ ಯಜ್ಞೇನ ಯಾಗೇನ ವರ್ಧತ । ಪ್ರವರ್ಧತ। ಸಾಮಾನ್ಯೇನೋಕ್ತ್ವಾ ವಿಶೇಷೇಣಾಹ । ಹವಿಷಾ ಚರುಪುರೋಡಾಶಾದಿನಾ ತನಾ ವಿಸ್ತೃತಯಾ ಗಿರಾ ಸ್ತುತ್ಯಾ ಚ ಯಜಧ್ವಂ । ಪೂಜಯಧ್ವಂ ।

ಕೀದೃಶಂ ತಂ | ಸಮಿಧಾನಂ | ಸಮಿಧ್ಯಮಾನಂ | ಸುಪ್ರಯಸಂ | ಶೋಭನಾನ್ನಂ | ಸ್ವರ್ಣರಂ | ಸ್ವರ್ಗೇ ನೇತವ್ಯಾ ಯಜಮಾನಾ ಯಸ್ಯ ತಾದೃಶಂ | ಯದ್ವಾ ಸ್ವರಿತಿ ಸರ್ವಪರ್ಯಾಯಃ | ಸ್ತುತೀನಾಂ ನೇತಾರಃ ಸ್ತೋತಾರಃ | ಬಹುಸ್ತೋತಾರಮಿತ್ಯರ್ಥಃ | ದ್ಯುಕ್ಷಂ | ದೀಪ್ತಂ ದ್ಯುನಿವಾಸಿನಂ ವಾ | ಹೋತಾರಂ | ಹೋಮಸಂಪಾದಕಂ | ವೃಜನೇಷು ಬಲೇಷು ಧೂರ್ಷದಂ | ಬಲಸ್ಯ ಕರ್ತಾರಮಿತ್ಯರ್ಥಃ | ಅಗ್ನಿ-ಸಾಟನೇ ಸತಿ ಶರೀರಬಲಂ ಭವತೀತಿ ಪ್ರಸಿದ್ಧಂ ||

### ಪ್ರತಿಪದಾರ್ಥ

**ಸಮಿಧಾನಂ**—ಪ್ರಜ್ವಲಿತನಾದವನೂ | **ಸುಪ್ರಯಸಂ**—ಶ್ರೇಷ್ಠವಾದ ಅನ್ನವನ್ನು ಹೊಂದಿದವನೂ | **ಸ್ವರ್ಣರಂ**—(ಯಜಮಾನರನ್ನು) ಸ್ವರ್ಗಕ್ಕೆ ಒಯ್ಯುವವನೂ | **ದ್ಯುಕ್ಷಂ**—ಪ್ರಕಾಶಮಾನನೂ ಅಥವಾ ದ್ಯುಲೋಕ ವಾಸಿಯೂ | **ಹೋತಾರಂ**—ಹೋಮಸಂಪಾದಕನೂ | **ವೃಜನೇಷು ಧೂರ್ಷದಂ**—ಶರೀರದ ಶಕ್ತಿಯನ್ನು ವೃದ್ಧಿ ಮಾಡುವವನೂ | **ಜಾತವೇದಸಂ**—ಜಾತಪ್ರಜ್ಞನೂ ಆದ | **ಅಗ್ನಿಂ**—ಅಗ್ನಿಯನ್ನು | **ಯಜ್ಞೇನ**—ಯಾಗದಿಂದ | **ವರ್ಧತ**—ಪ್ರವೃದ್ಧನಾಗುವಂತೆ ಮಾಡಿರಿ | **ಹವಿಷಾ**—ಹವಿಸ್ಸಿನಿಂದಲೂ | **ತನಾ**—ವಿಸ್ತೃತವಾದ | **ಗಿರಾ**—ಸ್ತುತಿಯಿಂದಲೂ ಸಹ | **ಯಜಧ್ವಂ**—ಪೂಜಿಸಿರಿ.

### ಭಾವಾರ್ಥ

ಪ್ರಜ್ವಲಿತನಾದವನೂ, ಶ್ರೇಷ್ಠವಾದ ಅನ್ನವನ್ನು ಹೊಂದಿದವನೂ, ಯಜಮಾನರನ್ನು ಸ್ವರ್ಗಕ್ಕೆ ಒಯುವವನೂ, ಪ್ರಕಾಶಮಾನನೂ, ಹೋಮಸಂಪಾದಕನೂ, ಶರೀರದ ಶಕ್ತಿಯನ್ನು ವೃದ್ಧಿಮಾಡುವವನೂ, ಜಾತಪ್ರಜ್ಞನೂ ಆದ ಅಗ್ನಿಯನ್ನು ಯಾಗದಿಂದ ಪ್ರವೃದ್ಧನಾಗುವಂತೆ ಮಾಡಿರಿ. ಹವಿಸ್ಸಿನಿಂದಲೂ ವಿಸ್ತೃತವಾದ ಸ್ತುತಿಯಿಂದಲೂ ಪೂಜಿಸಿರಿ.

### English Translation

Exalt with sacrifice, Agni, who knows all that has been born ; worship him with oblations, and with ample praise ; him who is well kindled, well fed, much lauded, resplendent, the conveyer of oblations, the giver gf strength (to the body).

### ವಿಶೇಷವಿಷಯಗಳು

**ಯಜ್ಞೇನ—ಯಾಗೇನ** | ಹವಿಸ್ಸಿನ ರೂಪವಾದ ದ್ರವ್ಯವನ್ನು ಅಗ್ನಿಯಲ್ಲಿ ದೇವತೆಯ ಉದ್ದೇಶದಿಂದ ಅರ್ಪಿಸುವ ಕರ್ಮವೆಂದೂ, ಈ ಕರ್ಮಾಚರಣೆಯಿಂದ ಅಗ್ನಿಯನ್ನು ತೃಪ್ತಿಗೊಳಿಸುವ ಯಜಮಾನರು ಅಗ್ನಿಯನ್ನು ವೃದ್ಧಿಗೊಳಿಸುವರೆಂದೂ ಸಾಯಣರು ಅರ್ಥವನ್ನು ವಿವರಿಸಿದ್ದಾರೆ.

ಯಾಸ್ಕರು ಯಜ್ಞಶಬ್ದವನ್ನು **ಯಜ್ಞಃ ವೇನಃ** ಎಂಬಿವೇ ಮೊದಲಾದ ಹದಿನೈದು ಯಜ್ಞನಾಮಗಳಲ್ಲಿ (ನಿ. ೩-೧೯) ಪಾಠಮಾಡಿ, **ಯಜ್ಞಃ ಕಸ್ಮಾತ್ ಪ್ರಖ್ಯಾತಂ ಕರ್ಮೇತಿ ನೈರುಕ್ತಾಃ | ಯಾಚ್ಞೋ ಭವತೀತಿ ವಾ, ಯಜುರುನ್ನತೋ ಭವತೀತಿ ವಾ, ಬಹುಕೃಷ್ಣಾಜಿನ ಇತ್ಯೌಪಮನ್ಯವೋ, ಯಜೂಂಷ್ಯೇನಂ ನಯಂತೀತಿ ವಾ** | ಲೋಕದಲ್ಲಿಯೂ, ವೇದದಲ್ಲಿಯೂ ಅಗ್ನಿಯೇ ಮೊದಲಾದ ದೇವತೆಗಳನ್ನು ಹವಿಸ್ಸಿನ

ಅರ್ಪಣೆಯ ಮೂಲಕ ಪೂಜಿಸುವ ಕರ್ಮವೆಂದು ಪ್ರಸಿದ್ಧವಾಗಿದೆ ಎಂದು ಅರ್ಥವನ್ನು ವಿವರಿಸಿದ್ದಾರೆ. ಮತ್ತು **ಯಾಚನಾತ್ ಯಜ್ಞಃ, ಯಜುರುನ್ನೋ ಯಜ್ಞಃ, ಬಹುಕೃಷ್ಣಾಜಿನೋ ಯಜ್ಞಃ** । ಯಾಚನೆಮಾಡುವುದರಿಂದಲೇ ಯಜ್ಞವು ಎಂದೂ, ಯಜುರ್ವೇದದಿಂದಲೇ ಬಹಳಮಟ್ಟಿಗೆ ಆರಂಭದಿಂದ ಕೊನೆಯವರಿಗೂ, ಕರ್ಮವು ನೆರವೇರುವುದರಿಂದ ಯಜ್ಞವು ಎಂದೂ, ಕೃಷ್ಣಾಜಿನವನ್ನು ಆಯಾಯ ಕರ್ಮಗಳಲ್ಲಿ ಹೆಚ್ಚಾಗಿ ಉಪಯೋಗಿಸುವುದರಿಂದಲೂ ಯಜ್ಞವೆಂದು ಹೆಸರು ಬಂದಿರುವುದೆಂದೂ, ಉಪಮನ್ಯು ಎಂಬುವರು ಮೂರುವಿಧವಾಗಿ ಯಜ್ಞಶಬ್ದಾರ್ಥವನ್ನು ವಿವರಿಸಿರುವುದನ್ನು ಹೇಳಿರುವರು

**ಜಾತವೇದಸಂ—ಜಾತಾನಾಂ ವೇದಿತಾರಂ ಜಾತಧನಂ ಜಾತಪ್ರಜ್ಞಂ ವಾ** । ಉತ್ಪನ್ನವಾದವುಗಳೆಲ್ಲವನ್ನೂ ತಿಳಿಯುವವನು, ದ್ರವ್ಯವನ್ನು (ಧನವನ್ನು) ಉತ್ಪನ್ನಮಾಡುವವನು, ಜ್ಞಾನವನ್ನೂ, ಬುದ್ಧಿಯನ್ನೂ ಉತ್ಪನ್ನಮಾಡಿ ವೃದ್ಧಿಗೊಳಿಸುವವನು ಎಂದು ಮೂರು ವಿಧವಾಗಿ ಸಾಯಣರು ಈ ಶಬ್ದದ ಅರ್ಥವನ್ನು ವಿವರಿಸಿರುವರು.

ನಿರುಕ್ತಕಾರರು—**ಜಾತವೇದಾಃ ಕಸ್ಮಾತ್, ಜಾತಾನಿ ವೇದ, ಜಾತಾನಿ ವೈನಂ ವಿದುಃ, ಜಾತೇ ಜಾತೇ ವಿದ್ಯತ ಇತಿ ವಾ, ಜಾತವಿತ್ತೋ ಜಾತಧನಃ, ಜಾತವಿದ್ಯೋ ಜಾತಪ್ರಜ್ಞಾನಃ** । ಈ ಲೋಕದಲ್ಲಿ ಉತ್ಪನ್ನವಾದವು ಎಲ್ಲವೂ ಇವನಿಗೆ ತಿಳಿದಿರುವ ಕಾರಣ ಸರ್ವಜ್ಞನು ಎಂದೂ, ಉತ್ಪನ್ನವಾದ ಪ್ರಾಣಿಗಳು ಎಲ್ಲವೂ ಇವನನ್ನು ತಿಳಿದು ಇರುವುದರಿಂದ ಜಾತವೇದಸ್ ಎಂದು ವ್ಯವಹೃತನಾಗಿರುವನು ಎಂದೂ, ಉತ್ಪನ್ನವಾದವುಗಳಲ್ಲಿ ಇವನು ಇಲ್ಲದಿರುವುದು ಇಲ್ಲದ ಕಾರಣ ಉತ್ಪನ್ನವಾದವುಗಳೆಲ್ಲದರಲ್ಲಿಯೂ ಇರುವವನು ಎಂದೂ, ಧನವನ್ನು ಉತ್ಪನ್ನಮಾಡುವವನು ಎಂದೂ, ಸ್ವಭಾವದಿಂದಲೇ ನಿರತಿಶಯವಾದ ಜ್ಞಾನವುಳ್ಳವನು ಎಂದೂ, ನಾಲ್ಕುವಿಧವಾದ ಅರ್ಥವನ್ನು ವಿವರಿಸಿದ್ದಾರೆ. ದುರ್ಗಾಚಾರ್ಯರು ಜನೀ ಪ್ರಾದುರ್ಭಾವೇ ಎಂಬ ಧಾತುವಿನಿಂದಲೂ ವಿದಧಾತುವಿನಿಂದಲೂ ಜಾತವೇದಃ ಎಂಬ ಪದವು ನಿಷ್ಪನ್ನವಾಗಿದೆ ಎಂದು ಶಬ್ದನಿಷ್ಪತ್ತಿಯನ್ನು ವಿವರಿಸಿ, **ಯತ್ತಜ್ಜಾತಃ ಪಶೂನವಿಂದತ ತಜ್ಜಾತವೇದಸೋ ಜಾತವೇದಸ್ತ್ವಂ** ಎಂಬ ತೈತ್ತಿರೀಯಬ್ರಾಹ್ಮಣದ ವಾಕ್ಯವನ್ನು ಉದಾಹರಿಸಿದ್ದಾರೆ.

**ಅಗ್ನಿಂ—ಅಗ್ನಿಃ ಕಸ್ಮಾತ್, ಅಗ್ರಣೀರ್ಭವತಿ, ಅಗ್ರಂ ಯಜ್ಞೇಷು ಪ್ರಣೀಯತೇ, ಅಂಗಂ ನಯತಿ ಸನ್ನಮಮಾನಃ । ಅಕ್ನೋಪನೋ ಭವತೀತಿ ಸ್ಥೌಲಾಷ್ಠೀವಿಃ । ತ್ರಿಭ್ಯ ಆಖ್ಯಾತೇಭ್ಯೋ ಜಾಯತ ಇತಿ ಶಾಕಪೂಣಿಃ** । (೭-೧೪) ಅಗ್ನಿಶಬ್ದಾರ್ಥವನ್ನು ವಿವರಿಸುವಾಗ ಯಾಸ್ಕರು, ಶ್ರೌತಸ್ಮಾರ್ತಕರ್ಮಗಳ ಆಚರಣೆಯಲ್ಲಿ ಮುಂದಾಳಾಗಿರುವವನು ಎಂದೂ, ದೇವತೆಗಳ ಸೇನಾಧಿಪತಿಯಾಗಿರುವವನು ಎಂದೂ, ಯಜ್ಞಗಳಲ್ಲಿ ಮೊದಲು ಉತ್ಪನ್ನನಾಗುವವನು ಎಂದೂ, ಲೌಕಿಕವಾದ ಮತ್ತು ವೈದಿಕವಾದ ಕರ್ಮಗಳಲ್ಲಿ ತಾನು ಆಶ್ರಯಿಸಿರುವ ಕಾಷ್ಠಾದಿಗಳನ್ನೂ ತನಗೆ ಅಧೀನವಾಗಿರುವಂತೆ ಮಾಡಿಕೊಳ್ಳುವವನು ಎಂದೂ ಅಗ್ನಿಶಬ್ದಾರ್ಥವನ್ನು ವಿವರಿಸಿ, ಸ್ಥೌಲಾಷ್ಠೀವಿ ಮತ್ತು ಶಾಕಪೂಣಿ ಎಂಬುವರ ಮತಗಳನ್ನು ವಿವರಿಸಿದ್ದಾರೆ.

**ಸುಪ್ರಯಸಮ್—ಶೋಭನಾನ್ನಂ** । ಸಾಯಣರು ಉತ್ತಮವಾದ ಹವಿಸ್ಸಿನ ರೂಪವಾದ ಅನ್ನವುಳ್ಳವನು ಎಂದು ಅರ್ಥವನ್ನು ವಿವರಿಸಿದ್ದಾರೆ. ಇಪ್ಪತ್ತೆಂಟು ಅನ್ನನಾಮಗಳಲ್ಲಿ (ನಿ. ೩-೯) ಯಾಸ್ಕರು ಪ್ರಯಸ್ ಎಂಬ ಪದವನ್ನು ಪಠಿಸಿದ್ದಾರೆ.

**ಸ್ವರ್ಣರಂ—ಸ್ವರ್ಗೇ ನೇತವ್ಯಾ ಯಜಮಾನಾ ಯಸ್ಯ ತಾದೃಶಮ್** । **ಯದ್ವಾ ಸ್ವರಿತಿ ಸರ್ವ-ಪರ್ಯಾಯಃ ಸ್ತುತೀನಾಂ ನೇತಾರಃ ಸ್ತೋತಾರಃ ಬಹುಸ್ತೋತಾರಂ** । ಯಜಮಾನರನ್ನು ಸ್ವರ್ಗವನ್ನು

ಹೊಂದಿಸುವ ಮಹಿಮೆಯುಳ್ಳವನು ಅಥವಾ ಅನೇಕ ವಿಧವಾದ ಸ್ತುತಿಗಳಿಗೆ ಪಾತ್ರನಾಗಿರುವವನು ಎಂದು ಅಗ್ನಿಯ ಪ್ರಭಾವವನ್ನು ಈ ಪದಕ್ಕೆ ಎರಡು ವಿಧವಾದ ಅರ್ಥದಿಂದ ವರ್ಣಿಸಿದೆ. ಮತ್ತು ಅಗ್ನಿಯನ್ನು ಬಹಳ ಜನರು ಸ್ತುತಿ ಮಾಡುವರು ಎಂದೂ ಅರ್ಥವನ್ನೂ ವಿವರಿಸಿದೆ.

ದ್ಯುಕ್ಷಂ—ದೀಪ್ತಂ ದ್ಯುನಿವಾಸಿನಂ ವಾ । ಅಗ್ನಿಯು ಕಾಂತಿಯುಳ್ಳವನಾಗಿಯೂ, ಅಥವಾ ಅಂತರಿಕ್ಷದಲ್ಲಿ ವಾಸಮಾಡುವವನಾಗಿಯೂ, ಇರುವನೆಂದು ಅರ್ಥಮಾಡಿ, ಈ ಅಗ್ನಿಯ ಅನುಗ್ರಹವು ಇಲ್ಲದಿದ್ದರೆ ಪ್ರಾಣಿಗಳಿಗೆ ಶರೀರದ ಸಾಮರ್ಥ್ಯವು ಇರುವುದಿಲ್ಲವೆಂಬ ಅರ್ಥವನ್ನು ವೃಜಿನೇಷು ಧೂರ್ಷದಂ ಎಂಬ ಪದಕ್ಕೆ ವಿವರಿಸಿ, ಸಾಯಣರು ಅಗ್ನಿಪಾಟವೇ ಸತಿ ಶಾರೀರಂ ಬಲಂ ಭವತೀತಿ ಪ್ರಸಿದ್ಧಂ ಎಂದು ಲೋಕಾನುಭವವನ್ನೂ ವರ್ಣಿಸಿದ್ದಾರೆ.

ಈ ಋಕ್ಕಿನಲ್ಲಿ ಮಂತ್ರದ್ರಷ್ಟೃವಾದ ಋಷಿಯು ಅಗ್ನಿಯ ಅನೇಕ ವಿಧವಾದ ಮಹಿಮೆಯನ್ನು ವರ್ಣಿಸಿ, ಯಜಮಾನರನ್ನೂ ಮತ್ತು ಋತ್ವಿಜರನ್ನೂ ಸಂಬೋಧಿಸಿ, ಈ ಪ್ರಕಾರವಾದ ಮಾಹಾತ್ಮ್ಯದಿಂದ ಪೂರ್ಣನಾದ ಅಗ್ನಿಯನ್ನು ಹವಿಸ್ಸುಗಳಿಂದಲೂ ಚರುಪುರೋಡಾಶಗಳಿಂದಲೂ ಪೂಜಿಸಿರಿ, ಮತ್ತು ನಾನಾವಿಧವಾದ ಸ್ತುತಿಗಳಿಂದ ಸ್ತೋತ್ರಮಾಡಿರಿ ಎಂದು ಉಪದೇಶಮಾಡಿರುವನು.

---

### ಸಂಹಿತಾಪಾಠಃ

ಅಭಿ ತ್ವಾ ನಕ್ತೀರುಷಸೋ ವವಾಶಿರೇಽಗ್ನೇ ವತ್ಸಂ ನ ಸ್ವಸರೇಷು ಧೇನವಃ।
ದಿವ ಇವೇದರತಿರ್ಮಾನುಷಾ ಯುಗಾ ಕ್ಷಪೋ ಭಾಸಿ ಪುರುವಾರ ಸಂಯತಃ ॥ ೨ ॥

### ಪದಪಾಠಃ

ಅಭಿ । ತ್ವಾ । ನಕ್ತೀಃ । ಉಷಸಃ । ವವಾಶಿರೇ । ಅಗ್ನೇ । ವತ್ಸಂ । ನ । ಸ್ವಸರೇಷು । ಧೇನವಃ ।
ದಿವಃಽಇವ । ಇತ್ । ಅರತಿಃ । ಮಾನುಷಾ । ಯುಗಾ । ಆ । ಕ್ಷಪಃ । ಭಾಸಿ । ಪುರುಽವಾರ । ಸಂಯತಃ ॥ ೨ ॥

### ಸಾಯಣಭಾಷ್ಯಂ

ಹೇ ಅಗ್ನೇ ತ್ವಾ ತ್ವಾಮಭಿ ಪ್ರತಿ ನಕ್ತೀಃ ರಾತ್ರೀರ.ಷಸೋಽಹಾನಿ । ಸರ್ವಾಸು ರಾತ್ರಿಷು ಸರ್ವೇಷ್ವಪ್ಯಹಸ್ಸು । ಯದ್ವಾ ನಕ್ತಶಬ್ದಃ ಸಾಯಂಕಾಲಂ ಲಕ್ಷಯತಿ ಸಾಯಂ ಪ್ರಾತರಗ್ನಿಹೋತ್ರಸ್ಯ ಸದ್ಭಾವಾತ್ ।ಸರ್ವೇಷು ಕಾಲೇಷು ಸಾಯಂಪ್ರಾತಃಕಾಲೇಷು ವಾ ವವಾಶಿರೇ । ಆಕಾಂಕ್ಷಂತೇ ಯಜಮಾನಾ ಯುಷ್ಮಾಂ ।.ಯದ್ವಾ ಅಹಾನಿ ರಾತ್ರಯಶ್ಚ ತ್ವಾಮೇವ ಕಾಮಯಂತೇ ಹೋತುಂ । ಕಾಲೇ ಕರ್ಮಣಶ್ಚೋದನಾತ್ ಕಾಲಾನಾಂ ಕಾಮನಮುಪಚರ್ಯತೇ । ತತ್ರ ದೃಷ್ಟಾಂತಃ । ಸ್ವಸರೇಷು ಸ್ವಯಂಸರಣಶೀಲೇಷ್ವಹಸ್ಸು ಸ್ವಸರಣಾಧಿಕರಣೇಷು ಗೋಷ್ಠೇಷು ವಾ ಧೇನವೋ ವತ್ಸಂ ನ । ವತ್ಸಮಿವ । ಕಿಂಚ ಹೇ

ಪುರುವಾರ ಬಹುಭಿರ್ವರಣೀಯಾಗ್ನೇ ಸಂಯತೋ ನಿಯತಸ್ತ್ವಂ ದಿವ ಇವ ದ್ಯುಲೋಕಸ್ಯೇವಾರತಿಃ । ವ್ಯಾಪ್ತೋ ವಿಸ್ತೃತಃ । ತತ್ರತ್ಯಾನಾಂ ದೇವಾನಾಂ ಹವಿಃಪ್ರದಾನಾಯೈವ ಸರ್ವತ್ರ ವ್ಯಾಪ್ತ ಇತ್ಯರ್ಥಃ । ಮಾನುಷಾ ಮನುಷ್ಯಾಣಾಂ ಯಜಮಾನಾನಾಂ ಸಂಬಂಧೀನಿ ಯುಗಾ ಯುಗಾನಿ । ಯುಗಶಬ್ದಃ ಕಾಲೋಪಲಕ್ಷಕಃ । ಪ್ರಾತರಾದಿಸವನಾನಿ । ಸರ್ವೇಷು ಸವನೇಷು ॥ ಅತ್ಯಂತಸಂಯೋಗೇ ದ್ವಿತೀಯಾ ॥ ಕ್ಷಪೋ ರಾತ್ರೀಃ । ಸರ್ವಾಸು ರಾತ್ರಿಷ್ವಪ್ಯಾಭಾಸಿ । ಸಮಂತಾದ್ದೀಪ್ಯಸೇ ॥

### ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತ್ವಾ ಅಭಿ—ನಿನ್ನನ್ನುದ್ದೇಶಿಸಿ । ನಕ್ತೀಃ—ರಾತ್ರಿಕಾಲಗಳಲ್ಲೂ । ಉಷಸಃ—ಅಹಸ್ಸುಗಳಲ್ಲೂ ಸಹ । ಸ್ವಸರೇಷು—ಕೊಟ್ಟಿಗೆಗಳಲ್ಲಿ । ಧೇನವಃ—ಧೇನುಗಳು । ವತ್ಸಂ ನ—ಕರುವನ್ನು ಪ್ರೀತಿಸಿ ಅದರ ಸಾಮೀಪ್ಯವನ್ನು ಇಚ್ಛಿಸುವಂತೆ । ವವಾಶಿರೇ—(ಯಜಮಾನರು) ಯಜ್ಞಮಾಡುವುದಕ್ಕಾಗಿ ನಿನ್ನ ಸಾನ್ನಿಧ್ಯವನ್ನಪೇಕ್ಷಿಸುತ್ತಾರೆ । ಪುರುವಾರ—ಬಹುಜನರಿಂದ ಅಪೇಕ್ಷಿತನಾದವನೂ । ಸಂಯತಃ—ನಿಯತವಾದ ವ್ಯವಹಾರವುಳ್ಳವನೂ । ದಿವ ಇವ—ದ್ಯುಲೋಕದಂತೆ । ಅರತಿಃ—ವಿಸ್ತೃತನಾಗಿರುವವನೂ ಆದ ನೀನು । ಮಾನುಷಾ—ಮನುಷ್ಯರ । ಯುಗಾ—(ಯಜ್ಞ)ಕಾಲಗಳಲ್ಲಿಯೂ । ಕ್ಷಪಃ—ರಾತ್ರಿಕಾಲಗಳಲ್ಲಿಯೂ । ಆ ಭಾಸಿ—ಅತಿಶಯವಾಗಿ ಪ್ರಕಾಶಿಸುತ್ತೀಯೆ ।

### ಭಾವಾರ್ಥ

ಎಲೈ ಅಗ್ನಿಯೇ, ನಿನ್ನನ್ನು ಉದ್ದೇಶಿಸಿ ಯಜ್ಞಮಾಡುವುದಕ್ಕಾಗಿ ಯಜಮಾನರು ರಾತ್ರಿಕಾಲಗಳಲ್ಲೂ, ಅಹಸ್ಸುಗಳಲ್ಲೂ ಸಹ ಕೊಟ್ಟಿಗೆಗಳಲ್ಲಿ ಧೇನುಗಳು ಕರುವನ್ನು ಪ್ರೀತಿಸಿ ಅದರ ಸಾಮೀಪ್ಯವನ್ನು ಇಚ್ಛಿಸುವಂತೆ ನಿನ್ನ ಸಾನ್ನಿಧ್ಯವನ್ನು ಅಪೇಕ್ಷಿಸುತ್ತಾರೆ ಬಹುಜನರಿಂದ ಅಪೇಕ್ಷಿತನಾದವನೂ, ನಿಯತವಾದ ವ್ಯವಹಾರವುಳ್ಳವನೂ, ದ್ಯುಲೋಕದಂತೆ ವಿಸ್ತೃತನಾಗಿರುವವನೂ ಆದ ನೀನು ಮನುಷ್ಯರ ಯಜ್ಞಕಾಲಗಳಲ್ಲಿಯೂ , ರಾತ್ರಿಕಾಲಗಳಲ್ಲಿಯೂ ಅತಿಶಯವಾಗಿ ಪ್ರಕಾಶಿಸುತ್ತೀಯೆ.

### English Translation

The mornings and evenings, Agni, are desirous (of worshipping) you, as cows in their stalls long for their calves: adored of many, you self-controlled, are verily spread through the sky: you (are present at all) the sacred rites of men, and shine brightly by night.

### ವಿಶೇಷವಿಷಯಗಳು

ನಕ್ತೀಃ—ರಾತ್ರೀಃ । ಉಷಸಃ—ಅಹಾನಿ । ಅಗ್ನಿಯು—ಸರ್ವಾಸು ರಾತ್ರಿಷು ಸರ್ವೇಷ್ವಪ್ಯಹಸ್ಸು ಎಲ್ಲಾ ರಾತ್ರಿಗಳಲ್ಲಿಯೂ, ಎಲ್ಲಾ ಹಗಲಿನಲ್ಲಿಯೂ ಕೂಡ ಯಜಮಾನರಿಂದ ಪೂಜಿತನಾಗಿರಲು ಆಕಾಂಕ್ಷಿತನಾಗಿರುವನು ಎಂದು ಮೊದಲನೆಯ ಅರ್ಥವು ಅಭಿತ್ವಾ ರಾತ್ರೀರುಷಸೋ ವವಾಶಿರೇ ಎಂಬ ವಾಕ್ಯಕ್ಕೆ ವಿವೃತವಾಗಿದೆ.

ಎರಡನೆಯ ಅರ್ಥದಲ್ಲಿ ಯದ್ವಾ ನಕ್ತಶಬ್ದಃ ಸಾಯಂಕಾಲಂ ಲಕ್ಷಯತಿ । ಸಾಯಂ ಪ್ರಾತರಗ್ನಿಹೋತ್ರಸ್ಯ ಸದ್ಭಾವಾತ್ । ನಕ್ತಶಬ್ದಕ್ಕೆ ಸಾಯಂಕಾಲವೆಂಬ ಅರ್ಥವನ್ನು ಹೇಳಿದೆ. ಯಾಗ ಮಾಡುವವರು ಪ್ರತಿ

ಸಾಯಂಕಾಲದಲ್ಲಿಯೂ ಪ್ರಾತಃಕಾಲದಲ್ಲಿಯೂ ಹೋಮವನ್ನು ಆಚರಿಸುವುದಕ್ಕಾಗಿ ಅಗ್ನಿಯನ್ನು ಅಪೇಕ್ಷಿಸುವರು ಎಂದು ವಿವರಿಸಿದೆ.

**ಯದ್ವಾ ಅಹಾನಿ ರಾತ್ರಯಶ್ಚ ತ್ವಾಮೇವ ಕಾಮಯಂತೇ ಹೋತುಂ ಕಾಲೇ ಕರ್ಮಣಶ್ಚೋದನಾತ್ ಕಾಲಾನಾಂ ಕಾಮುನಮುಪಚರ್ಯತೇ |** ಅಚೇತನವಾಗಿರುವ ರಾತ್ರ್ಯಹಸ್ಸುಗಳೂ ಕೂಡ ಆಯಾಯ ಕಾಲಗಳಲ್ಲಿ ಅಗ್ನಿಹೋತ್ರವನ್ನು ಆಚರಿಸಬೇಕೆಂಬ ವಿಧಿಯನ್ನು ಅನುಸರಿಸಿ ಅಗ್ನಿಯನ್ನು ಪೂಜಿಸುವುದಕ್ಕಾಗಿ ತಾವಾಗಿಯೇ ಅಪೇಕ್ಷಿಸುತ್ತಿರುವುವು ಎಂದು ಮೂರನೆಯ ಅರ್ಥವನ್ನು ವಿವರಿಸಿದೆ. **ಸಾಯಂಪ್ರಾತರಗ್ನಿಹೋತ್ರಂ ಜುಹುಯಾತ್** ಎಂಬ ವಿಧಿಯು ಅಗ್ನಿಹೋತ್ರಾರಚಣೆಯ ವಿಷಯದಲ್ಲಿ ಅವಶ್ಯಕರ್ತವ್ಯವನ್ನು ಬೋಧಿಸುವುದರಿಂದ ಮಂತ್ರದ್ರಷ್ಟೃವಾದ ಋಷಿಯು ಇದೇ ಅಭಿಪ್ರಾಯವನ್ನು ವ್ಯಕ್ತಗೊಳಿಸಿರುವನು.

**ಸ್ವಸರೇಷು ಧೇನವಃ ವತ್ಸಂ ನ**—ಈ ವಾಕ್ಯದಲ್ಲಿ ನ ಎಂಬ ಪದವು ಉಪಮಾನವಾಚಕವಾಗಿರುವುದು. **ಸ್ವಸರ** ಶಬ್ದಕ್ಕೆ **ಸ್ವಯಂ ಸರಣಶೀಲೇಷು ಅಹಸ್ಸು** ತಾನಾಗಿ ಕಳೆದುಹೋಗುತ್ತಿರುವ ಹಗಲುಗಳು ಅಥವಾ **ಸುಖಸರಣಾಧಿಕರಣೇಷು ಗೋಷ್ಠೇಷು ವಾ** ಸುಖವಾಗಿ ಸಂಚರಿಸಲು ಅರ್ಹವಾಗಿರುವ, ಹಸುಗಳನ್ನು ಕಟ್ಟುವ ಪ್ರದೇಶಗಳು ಎಂದು ಎರಡು ವಿಧವಾದ ಅರ್ಥವನ್ನೂ ಭಾಷ್ಯದಲ್ಲಿ ವಿವರಿಸಿದೆ.

ಯಾಸ್ಕರು ಸ್ವಸರ ಶಬ್ದವನ್ನು ಅಹರ್ನಾಮಗಳಲ್ಲಿ (ನಿ ೧-೨೧) ಪಾಠಮಾಡಿ, **ಸ್ವಸರಾಣ್ಯಹಾನಿ ಭವನ್ತಿ ಸ್ವಯಂ ಸಾರೀಣ್ಯಪಿ ವಾ** ಎಂದು ಅರ್ಥವನ್ನು ವಿವರಿಸಿ, **ಉಸ್ರಾ ಇವ ಸ್ವಸರಾಣಿ** (ನಿ ೫-೪) ಎಂದು ಉದಾಹರಣೆಯನ್ನು ಹೇಳಿರುವರು. ಮತ್ತು ಗ್ರಹನಾಮಗಳ ಮಧ್ಯದಲ್ಲಿಯೂ ಸ್ವಸರಶಬ್ದವು (ನಿ. ೩-೧೩) ಪಠಿತವಾಗಿರುವುದು. ಹಾಲು ಕರೆಯುವ ಹಸುಗಳು ತಮ್ಮ ತಮ್ಮ ಕರುಗಳನ್ನು ಅಹೋರಾತ್ರಿಗಳಲ್ಲಿಯೂ ಹಾಲನ್ನು ಹಿಂಡುವುದಕ್ಕಾಗಿ ಅಪೇಕ್ಷಿಸುವ ಹಾಗೆ ಯಜಮಾನರು ಅಗ್ನಿಯನ್ನು ಹವಿಸ್ಸುಗಳ ಅರ್ಪಣೆಗಾಗಿ ಸಾಯಂಪ್ರಾತಃಕಾಲಗಳಲ್ಲಿ ಅಪೇಕ್ಷಿಸುವರು ಎಂದು ಹೋಲಿಸಿ ಹೇಳಿದೆ.

ಸಾಯಣರು ಅರತಿಃ ಎಂಬ ಶಬ್ದಕ್ಕೆ ವ್ಯಾಪಿಸಿರುವವನು ಎಂದು ಅರ್ಥವನ್ನು ವಿವರಿಸಿ, ಅಗ್ನಿಯು ಬಹಳ ಜನರಿಂದ ವರ್ಣಿತನಾಗಿ, ನಿಯತವಾದ ರೀತಿಯಿಂದ ಇರುತ್ತಾ, ಅಂತರಿಕ್ಷದ ಹಾಗೆ ಸರ್ವಪ್ರದೇಶಗಳಲ್ಲಿಯೂ **ತತ್ರತ್ಯಾನಾಂ ಹವಿಃ ಪ್ರದಾನಾಯೈವ ಸರ್ವತ್ರ ವ್ಯಾಪ್ತಃ** ಅಂತರಿಕ್ಷದಲ್ಲಿರುವ ದೇವತೆಗಳಿಗೆ ಹವಿಸ್ಸುಗಳನ್ನು ಒಪ್ಪಿಸುವುದಕ್ಕಾಗಿ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿ, ಯಜಮಾನರು ಆಚರಿಸುವ ಯಜ್ಞಗಳಲ್ಲಿ ಪ್ರಾತರಾದಿಸವನಗಳಲ್ಲಿ ಸರ್ವಕಾಲದಲ್ಲಿಯೂ ಬಹಳವಾಗಿ ಪ್ರಕಾಶಿಸುತ್ತಿರುವನು ಎಂಬ ಅರ್ಥವನ್ನು **ಮಾನುಷಾ ಯುಗಾ ಕ್ಷಪಃ ಆ ಭಾಸಿ** ಎಂಬ ವಾಕ್ಯದಿಂದ ವರ್ಣಿಸಿದ್ದಾರೆ.

**ಯುಗಾ ಯುಗಾನಿ | ಯುಗಶಬ್ದಃ ಕಾಲೋಪಲಕ್ಷಕಃ | ಪ್ರಾತರಾದಿ ಸವನಾನಿ ಸರ್ವೇಷು ಸವನೇಷು |** ಯುಗಶಬ್ದವು ಕಾಲವಾಚಿಯಾಗಿರುವುದೆಂದೂ, ಇದರಿಂದ ಪ್ರಾತರ್ಮಾಧ್ಯಾಹ್ನಿಕ ತೃತೀಯ ಸವನಗಳು ಎಂದೂ ಅರ್ಥವು ವಿವೃತವಾಗಿರುತ್ತದೆ.

ಪುರುವಾರ ಎಂಬ ಪದದಿಂದ ಅಗ್ನಿಯು ಬಹಳ ಜನಗಳಿಂದ ನಾನಾ ವಿಧವಾಗಿ ಸ್ತುತಿಸಲ್ಪಡುವನು ಎಂಬ ಅರ್ಥವು ವಿವೃತವಾಗಿದೆ.

---

ಸಂಹಿತಾಪಾಠಃ

ತಂ ದೇವಾ ಬುಧ್ನೇ ರಜಸಃ ಸುದಂಸಸಂ ದಿವಸ್ಪೃಥಿವ್ಯೋರರತಿಂ ನ್ಯೇರಿರೇ।
ರಥಮಿವ ವೇದ್ಯಂ ಶುಕ್ರಶೋಚಿಷಮಗ್ನಿಂ ಮಿತ್ರಂ ನ ಕ್ಷಿತಿಷು ಪ್ರಶಂಸ್ಯಂ ॥ ೩ ॥

ಪದಪಾಠಃ

ತಂ । ದೇವಾಃ । ಬುಧ್ನೇ । ರಜಸಃ । ಸುऽದಂಸಸಂ । ದಿವಃಪೃಥಿವ್ಯೋಃ । ಅರತಿಂ । ನಿ । ಏರಿರೇ ।
ರಥಂऽಇವ । ವೇದ್ಯಂ । ಶುಕ್ರऽಶೋಚಿಷಂ । ಅಗ್ನಿಂ । ಮಿತ್ರಂ । ನ । ಕ್ಷಿತಿಷು । ಪ್ರऽಶಂಸ್ಯಂ ॥ ೩ ॥

ಸಾಯಣಭಾಷ್ಯಂ

ತಂ ಪ್ರಸಿದ್ಧಮುಕ್ತಗುಣವಿಶಿಷ್ಟಮಗ್ನಿಂ ದೇವಾಃ ಪ್ರಸಿದ್ಧಾ ವ್ಯವಹರ್ತಾರ ಋತ್ವಿಜೋ ವಾ ರಜಸೋ-ರಂಜನಾತ್ಮಕಸ್ಯ ಲೋಕಸ್ಯ ಬುಧ್ನೇ ಮೂಲೇ । ಪೃಥಿವ್ಯಾಂ ವೇದ್ಯಾಮಿತ್ಯರ್ಥಃ। ತತ್ರ ನ್ಯೇರಿರೇ। ನಿತರಾಮೀರಯಂತಿ । ವ್ಯಾಪಾರಯಂತಿ ಸ್ವಸ್ವಹವಿರ್ಲಾಭಾಯ । ಋತ್ವಿಕ್‌ಪಕ್ಷೇ ಸ್ತೋತ್ರಾದಿನಾ ನಿತರಾಂ ಗಚ್ಛಂತಿ । ಭಜಂತೇ । ಕೀದೃಶಮಿತ್ಯಾಹ । ಸುದಂಸಸಂ ಶೋಭನದರ್ಶನಂ ದಿವಸ್ಪೃಥಿವ್ಯೋರ್ದ್ಯಾವಾ-ಪೃಥಿವ್ಯೋಃರರತಿಂ । ಈಶ್ವರಂ ಗಂತಾರಂ ವ್ಯಾಪ್ತಂ ವಾ । ವೇದ್ಯಂ । ವೇದೋ ಧನಂ । ತಸ್ಮೈ ಹಿತಂ ರಥಮಿವ । ರಥಂ ಯಥಾ ಸ್ವಾಭಿಮತಲಾಭಾಯಾಶ್ರಯಂತೇ ತದ್ವತ್ । ಯದ್ವಾ ರಥಮಿವ ಪ್ರಾಪ್ತಿ-ಸಾಧನತ್ವೇನ ವರ್ತಮಾನಂ । ವೇದ್ಯಂ ವೇದಿತವ್ಯಂ । ಶುಕ್ರಶೋಚಿಷಂ ದೀಪ್ತವರ್ಣಮಗ್ನಿಂ ಮಿತ್ರಂ ನ ಸಖಿವತ್ಕಾರ್ಯಸಾಧಕಂ । ಯದ್ವಾ ಆದಿತ್ಯಮಿವ । ಕ್ಷಿತಿಷು ಯಾಗಭೂಮಿಷು ಮನುಷ್ಯೇಷು ವಾ ಪ್ರಶಂಸ್ಯಂ । ಪ್ರಕರ್ಷೇಣ ಸ್ತುತ್ಯಂ । ಏವಂ ಮಹಾನುಭಾವಮಗ್ನಿಂ ನ್ಯೇರಿರ ಇತಿ ॥

। ಪ್ರತಿಪದಾರ್ಥ ।

**ಸುದಂಸಸಂ**— ಶೋಭನಾತ್ಮಕವಾದ ದರ್ಶನವುಳ್ಳವನೂ । **ದಿವಸ್ಪೃಥಿವ್ಯೋಃ**— ದ್ಯಾವಾಪೃಥಿವಿಗಳ ನಡುವೆಯೆಲ್ಲಾ (ಈಶ್ವರನಾಗಿದ್ದು) । **ಅರತಿಂ**— ವ್ಯಾಪಿಸಿ ಸಂಚರಿಸುವವನೂ । **ರಥಮಿವ**—(ಹವಿಸ್ಸನ್ನು ವಹಿಸುವುದರಿಂದ) ಭಾರವನ್ನು ವಹಿಸುವ ರಥದಂತೆ । **ವೇದ್ಯಂ**— ತಿಳಿಯಲ್ಪಡುವವನೂ । **ಶುಕ್ರಶೋಚಿಷಂ**— ಪ್ರಕಾಶಮಾನವಾದ ಕಾಂತಿಯುಳ್ಳವನೂ । **ಕ್ಷಿತಿಷು**— ಮಾನವರಲ್ಲಿ । **ಪ್ರಶಂಸ್ಯಂ**— ಅತ್ಯಂತ ಸ್ತುತ್ಯನಾದ । **ಮಿತ್ರಂ ನ**— ಸ್ನೇಹಿತನಂತಿರುವವನೂ ಆದ। **ತಂ ಅಗ್ನಿಂ**— ಪ್ರಸಿದ್ಧನಾದ ಅಗ್ನಿಯನ್ನು । **ದೇವಾಃ**— ದೇವತೆಗಳು । **ರಜಸಃ**— ರಂಜನಾತ್ಮಕವಾದ ಪೃಥಿವಿಯ । **ಬುಧ್ನೇ**— ಮೂಲದಲ್ಲಿ (ವೇದಿಯಲ್ಲಿ) । **ನ್ಯೇರಿರೇ**— ಸ್ಥಾಪಿಸುತ್ತಾರೆ ।

ಭಾವಾರ್ಥ

ಶೋಭನಾತ್ಮಕವಾದ ದರ್ಶನವುಳ್ಳವನೂ, ದ್ಯಾವಾಪೃಥಿವಿಗಳಿಗೆಲ್ಲಾ ಪ್ರಭುವಾಗಿಯೂ ಸರ್ವತ್ರ ವ್ಯಾಪಿಸಿ ಸಂಚರಿಸುವವನೂ, ಹವಿಸ್ಸನ್ನು ವಹಿಸುವುದರಿಂದ ಭಾರವನ್ನು ವಹಿಸುವ ರಥದಂತೆ ತಿಳಿಯಲ್ಪಡುವವನೂ, ಪ್ರಕಾಶ

ಮಾನವಾದ ಕಾಂತಿಯುಳ್ಳವನೂ, ಮಾನವರಲ್ಲಿ ಅತ್ಯಂತ ಸ್ತುತ್ಯನಾದ ಸ್ನೇಹಿತನಂತಿರುವವನೂ ಮತ್ತು ಪ್ರಸಿದ್ಧನೂ ಆದ ಅಗ್ನಿಯನ್ನು ದೇವತೆಗಳು ರಂಜನಾತ್ಮಕವಾದ ಪೃಥಿವಿಯ ಮೂಲಭಾಗವಾದ ವೇದಿಯಲ್ಲಿ ಸ್ಥಾಪಿಸಿದರು.

### English Translation

The gods have stationed at the root of the world, that Agni who is of goodly appearance ; the pervader of heaven and earth ; who is to be known as a car (to convey men to their wishes), who shines with pure radiance, and who is to be honoured as a friend amongst mankind.

#### ವಿಶೇಷವಿಷಯಗಳು

**ದೇವಾಃ ರಜಸಃ ಬುಧ್ನೇ ತಂ ನ್ಯೇರಿರೇ**—ಈ ವಾಕ್ಯದಲ್ಲಿ ಸಾಯಣರು ದೇವಪದಕ್ಕೆ **ವ್ಯವಹರ್ತಾರಃ ಋತ್ವಿಜೋ ವಾ** ಪ್ರಸಿದ್ಧರಾದ ದೇವತೆಗಳು ಅಗ್ನಿಯನ್ನು ಪೃಥಿವಿ ಎಂಬ ವೇದಿಕೆಯಲ್ಲಿ ತಮ್ಮ ತಮ್ಮ ಹವಿರ್ಭಾಗಗಳನ್ನು ಹೊಂದುವುದಕ್ಕಾಗಿ ಬಹಳವಾಗಿ ಸ್ತುತಿಮಾಡುವರು ಎಂದು ಒಂದು ವಿಧವಾದ ಅರ್ಥವನ್ನು ವರ್ಣಿಸಿದ್ದಾರೆ. ದೇವಶಬ್ದಕ್ಕೆ ಋತ್ವಿಜರು ಎಂದು ಇನ್ನೊಂದು ವಿಧವಾದ ಅರ್ಥವನ್ನು ಹೇಳುವಾಗ **ಸ್ತೋತ್ರಾದಿನಾ ನಿತರಾಂ ಗಚ್ಛಂತಿ ಭಜಂತೇ** ಋತ್ವಿಜರು ಮಹತ್ತಾದ ಮಹಿಮೆಯುಳ್ಳ ಅಗ್ನಿಯನ್ನು ಸ್ತೋತ್ರಗಳಿಂದ ಸೇವಿಸುವರು ಎಂದು ಎರಡನೆಯ ಅರ್ಥವನ್ನೂ ವಿವರಿಸಿದ್ದಾರೆ.

**ದಿವಸ್ಪೃಥಿವ್ಯೋಃ ಅರತಿಂ—ದ್ಯಾವಾಪೃಥಿವ್ಯೋಃ ಈಶ್ವರಂ ಗಂತಾರಂ ವ್ಯಾಪ್ತಂ ವಾ ।** ಅಗ್ನಿಯು ಭೂಮ್ಯಂತರಿಕ್ಷಗಳ ಒಡೆಯನು, ಭೂಮ್ಯಂತರಿಕ್ಷಗಳಲ್ಲಿ ಸಂಚರಿಸುವವನು, ದ್ಯಾವ್ಯಾಪೃಥಿವಿಗಳಲ್ಲಿ ವ್ಯಾಪಿಸಿರುವವನು ಎಂದು ಮೂರು ವಿಧವಾದ ಅರ್ಥವನ್ನು ವಿವರಿಸಿರುವುದರಿಂದ ಅಗ್ನಿಯ ಮಹಿಮೆಯು ವರ್ಣಿತವಾಗಿದೆ.

**ರಥಮಿವ ವೇದ್ಯಂ**—ಈ ವಾಕ್ಯದಲ್ಲಿ ವೇದಶಬ್ದಕ್ಕೆ ಧನವೆಂದು ಅರ್ಥವನ್ನು ವಿವರಿಸಿದೆ. **ಸ್ವಾಭಿಮತಲಾಭಾಯ ರಥಂ ಯಥಾ ಆಶ್ರಯಂತೇ**-ಜನರಿಗೆ ಅವರ ಇಷ್ಟಪ್ರಾಪ್ತಿಗಾಗಿ ರಥವು ಆಶ್ರಯವಾಗಿರುವಂತೆ ಅಗ್ನಿಯು ಧನಪ್ರಾಪಕನಾಗಿರುವನು ಎಂದು ಉಪಮಾನವನ್ನು ತೋರಿಸಿ ಅರ್ಥವು ವಿಸ್ತೃತವಾಗಿದೆ. **ಯದ್ವಾ ರಥಮಿವ ಪ್ರಾಪ್ತಿಸಾಧನತ್ವೇನ ವೇದ್ಯಂ** ರಥವು ಜನಗಳಿಗೆ ಹಿತವನ್ನು ಸಾಧಿಸಲು ಸಾಧನವಾಗಿರುವ ಹಾಗೆ ಅಗ್ನಿಯೂ ಹಿತಸಾಧಕನೆಂದು ಜನರಿಂದ ತಿಳಿಯಲ್ಪಟ್ಟಿರುವನೆಂದು ಎರಡು ವಿಧವಾದ ಅರ್ಥವೂ ವರ್ಣಿತವಾಗಿರುವುದು.

**ಮಿತ್ರಂ ನ ಶುಕ್ರಶೋಚಿಷಂ**—ಅಗ್ನಿಯು ಸ್ನೇಹಿತನ ಹಾಗೆ ಕಾರ್ಯವನ್ನು ಯಜಮಾನರಿಗೆ ಸಾಧಿಸಿಕೊಡುವವನು ಎಂದು ವಿವರಿಸಿದೆ.

**ಮಿತ್ರಂ ನ ಕ್ಷಿತಿಷು ಪ್ರಶಂಸ್ಯಂ**-ಈ ವಾಕ್ಯದಲ್ಲಿ ಮಿತ್ರಶಬ್ದವು ಆದಿತ್ಯನೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಅರ್ಥವನ್ನು ವಿವರಿಸಿ, ಅಗ್ನಿಯು ಆದಿತ್ಯನ ಹಾಗೆ (ಭೂಮಿಯಲ್ಲಿ) ಯಾಗಭೂಮಿಗಳಲ್ಲಿ, ಅಥವಾ ಮನುಷ್ಯರಲ್ಲಿ ನಿರತಿಶಯವಾದ ಸ್ತುತಿಗೆ ಅರ್ಹನಾಗಿರುವನು ಎಂದು ಅರ್ಥವನ್ನು ಹೇಳಿ ಅಗ್ನಿಗೆ ಸ್ನೇಹಿತನ ಅಥವಾ ಆದಿತ್ಯನ ಹೋಲಿಕೆಯನ್ನು ಉಪಪಾದನೆ ಮಾಡಿದೆ. ಅಗ್ನಿಯ ಮಾಹಾತ್ಮೆಯು ಈ ಪ್ರಕಾರವಾಗಿರುವುದೆಂದು ವಿವರಿಸಿದೆ.

ಯಾಸ್ಕರು ಮಿತ್ರಃ ಪ್ರಮೀತೇಸ್ತ್ರಾಯತೇ ಸಮ್ಮಿನ್ವಾನೋ ದ್ರವತೀತಿ ವಾ, ಮೇದಯತೇರ್ವಾ (ನಿ ೧೦-೨೨) ಎಂದು ಮಿತ್ರಶಬ್ದದ ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ಮಾತ್ರ ಇಲ್ಲಿ ಸಖಾ, ಆದಿತ್ಯ ಎಂಬ ಎರಡು ವಿಧವಾದ ಅರ್ಥವನ್ನು ವರ್ಣಿಸಿದ್ದಾರೆ.

---

ಸಂಹಿತಾಪಾಠಃ

ತಮುಕ್ಷಮಾಣಂ ರಜಸಿ ಸ್ವ ಆ ದಮೇ ಚಂದ್ರಮಿವ ಸುರುಚಂ ಹ್ವಾರ ಆ ದಧುಃ ।
ಪೃಶ್ನ್ಯಾಃ ಪತರಂ ಚಿತಯಂತಮಕ್ಷಭಿಃ ಪಾಥೋ ನ ಪಾಯುಂ ಜನಸೀ ಉಭೇ ಅನು ॥ ೪ ॥

ಪದಪಾಠಃ

ತಂ । ಉಕ್ಷಮಾಣಂ । ರಜಸಿ । ಸ್ವೇ । ಆ । ದಮೇ । ಚಂದ್ರಂऽಇವ । ಸುऽರುಚಂ । ಹ್ವಾರೇ । ಆ ದಧುಃ ।
ಪೃಶ್ನ್ಯಾಃ । ಪತರಂ । ಚಿತಯಂತಂ । ಅಕ್ಷऽಭಿಃ । ಪಾಥಃ । ನ । ಪಾಯುಂ । ಜನಸೀ ಇತಿ । ಉಭೇ ಇತಿ । ಅನು ।

ಸಾಯಣಭಾಷ್ಯಂ

ತಂ ಸ್ತುತ್ಯತರಂ ರಜಸ್ಯಂತರಿಕ್ಷ ಆ ಉಕ್ಷಮಾಣಂ ಸರ್ವತಃ ಸಿಂಚಂತಂ ವೃಷ್ಟಿಜಲಂ ರಜಸಿ ಪೃಥಿವ್ಯಾಂ ವೇದ್ಯಾಂ ಘೃತಾದಿನಾಸಿಚ್ಯಮಾನಂ ವಾ । ಸ್ವೇ ಸ್ವಕೀಯೇ ಹ್ವಾರೇ ವಿಜನೇ ದಮೇ ಯಾಗಗೃಹ ಆದಧುಃ । ಆದಧತೇ । ಕೀದೃಶಂ ತಂ । ಚಂದ್ರಮಿವ ಸುರುಚಂ । ಚಂದ್ರಮಿತಿ ಹಿರಣ್ಯನಾಮ । ಹಿರಣ್ಯಮಿವ ಶೋಭನದೀಪ್ತಿಂ । ಪಶ್ಚಾತ್ಪ್ರವೃದ್ಧಾವಸ್ಥಾಯಾಂ ಪೃಶ್ನ್ಯಾಃ ಪತರಂ । ದ್ಯುಲೋಕಸ್ಯಾಂತರಿಕ್ಷಸ್ಯ ಗಂತಾರಂ । ಅಕ್ಷಭಿಃ ಸ್ವಕೀಯೈರ್ಜ್ವಾಲಾರೂಪೈರವಯವೈಶ್ಚಿತಯಂತಂ ಚೇತಯಮಾನಂ । ಪಾಥೋ ನ ಪಾಯುಂ । ಉದಕಮಿವ ರಕ್ಷಕಂ । ಉಭೇ ಜನಸೀ ಸರ್ವಸ್ಯ ಜನಯಿತ್ರ್ಯೌ ದ್ಯಾವಾಪೃಥಿವ್ಯಾವನು ವ್ಯಾಪ್ತಂ । ಭೂಮ್ಯಾಂ ಹೋಮಾಧಾರತ್ವೇನ ಸ್ಥಿತ್ವಾ ಹವಿಷ್ಪ್ರಾಪಣಾಯ ದ್ಯುಲೋಕಗಾಮಿನಮಿತಿ ಭಾವಃ । ಏವಂರೂಪಮಗ್ನಿಮಾದಧತೇ ॥

ಪ್ರತಿಪದಾರ್ಥ

ಚಂದ್ರಮಿವ—ಚಿನ್ನದಂತೆ । ಸುರುಚಂ—ಶ್ರೇಷ್ಠವಾದ ಕಾಂತಿಯುಳ್ಳವನೂ । ಪೃಶ್ನ್ಯಾಃ—ಅಂತರಿಕ್ಷದಲ್ಲಿ । ಪತರಂ—ಸಂಚರಿಸುವವನೂ । ಅಕ್ಷಭಿಃ—ತನ್ನ ಜ್ವಾಲಾರೂಪವಾದ ಅವಯವಗಳಿಂದ । ಚಿತಯಂತಂ—

ಚೈತನ್ಯವನ್ನುಂಟುಮಾಡುವವನೂ | **ಪಾಥೋ ನ**— ಉದಕದಂತೆ | **ಪಾಯುಂ**—ರಕ್ಷಕನೂ | **ಉಭೇ ಜಾನಸೀ**—ಸಕಲಕ್ಕೂ ಜನನಿಯರಾದ ದ್ಯಾವಾಪೃಥಿವಿಗಳೆರಡನ್ನೂ | **ಅನು** – ವ್ಯಾಪಿಸಿರುವವನೂ | **ರಜಸಿ**—ಅಂತರಿಕ್ಷದಲ್ಲಿ ಆ **ಉಕ್ಷಮಾಣಂ**—ಸರ್ವತ್ರ ವೃಷ್ಟಿಯನ್ನು ಸುರಿಸುವವನೂ | **ತಂ**—ಪೂಜ್ಯನೂ ಆದ ಅಗ್ನಿಯನ್ನು | **ಸ್ವೇಹ್ವಾರೇ**—ಸ್ವಕೀಯವೂ ನಿರ್ಜನವೂ ಆದ | **ದಮೇ**—ಯಾಗಗೃಹದಲ್ಲಿ | **ಆ ದಧುಃ**—ಸ್ಥಾಪಿಸುತ್ತಾರೆ.

ಭಾವಾರ್ಥ

ಚಿನ್ನದಂತೆ ಶ್ರೇಷ್ಠವಾದ ಕಾಂತಿಯುಳ್ಳವನೂ, ಅಂತರಿಕ್ಷದಲ್ಲಿ ಸಂಚರಿಸುವವನೂ, ತನ್ನ ಜ್ವಾಲಾರೂಪದ ಅವಯವಗಳಿಂದ ಚೈತನ್ಯವನ್ನುಂಟುಮಾಡುವವನೂ, ಉದಕದಂತೆ ರಕ್ಷಕನೂ, ಸರ್ವಜನನಿಯರಾದ ದ್ಯಾವಾಪೃಥಿವಿಗಳೆರಡನ್ನೂ ವ್ಯಾಪಿಸಿರುವವನೂ, ಅಂತರಿಕ್ಷದಲ್ಲಿ ಸರ್ವತ್ರ ವೃಷ್ಟಿಯನ್ನು ಸುರಿಸುವವನೂ, ಪೂಜ್ಯನೂ ಆದ ಅಗ್ನಿಯನ್ನು ಸ್ವಕೀಯವೂ ನಿರ್ಜನವೂ ಆದ ಯಾಗಗೃಹದಲ್ಲಿ ಸ್ಥಾಪಿಸುತ್ತಾರೆ.

English Translation

They have placed him in his solitary dwelling, who is shedding moisture upon the earth ; resplendent as gold, traversing the firmament, animate with flames ; and pervading the two parents (of all things, heaven and earth) like refreshing water.

| ವಿಶೇಷವಿಷಯಗಳು |

**ಚಂದ್ರಮಿವ ಸುರುಚಂ ಉಕ್ಷಮಾಣಂ ತಂ ದಮೇ ಆ ದಧುಃ** | ಈ ವಾಕ್ಯದಲ್ಲಿ ಚಂದ್ರಶಬ್ದವು ಹದಿನೈದು ಹಿರಣ್ಯನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೧೦) ಹಿರಣ್ಯದ (ಚಿನ್ನದ) ಹಾಗೆ ಅಗ್ನಿಯು ಬಹಳವಾಗಿ ಕಾಂತಿಯುಳ್ಳವನಾಗಿರುವನು. ಮತ್ತು ಅಂತರಿಕ್ಷದಲ್ಲಿ ಇರುತ್ತಾ ಎಲ್ಲಾ ಕಡೆಯಲ್ಲಿಯೂ ವೃಷ್ಟ್ಯುದಕಗಳನ್ನು ಸುರಿಸುವನು, ಅಥವಾ ಭೂಮಿರೂಪವಾದ ಯಜ್ಞವೇದಿಯಲ್ಲಿ ಆಜ್ಯವೇ ಮೊದಲಾದ ಹೋಮದ್ರವ್ಯಗಳಿಂದ ತೃಪ್ತಿಯನ್ನು ಹೊಂದುವನು ಎಂದು ಎರಡು ವಿಧವಾದ ಅರ್ಥವನ್ನು ವರ್ಣಿಸಿದೆ. **ರಜಸಿ** ಎಂಬ ಪದಕ್ಕೆ ಯಾಸ್ಕರು ರಾತ್ರಿ ಎಂದೂ, (ನಿ. ೨-೧೮) ದ್ಯಾವಾಪೃಥಿವಿಗಳೆಂದೂ (ನಿ. ೩-೨೨) ಅರ್ಥವನ್ನು ಹೇಳಿದ್ದಾರೆ. ಸಾಯಣರು ಇಲ್ಲಿ ಈ ಪದಕ್ಕೆ ದ್ಯಾವಾಪೃಥಿವಿಗಳೆಂಬ ಅರ್ಥವನ್ನು ಹೇಳಿದ್ದಾರೆ.

**ಪಾಥೋ ನ ಪಾಯುಂ**—ಅಗ್ನಿಯು ಯಜ್ಞವೇದಿಯಲ್ಲಿ ತನ್ನ ಜ್ವಾಲಾರೂಪವಾದ ಅವಯವಗಳಿಂದ ವೃದ್ಧಿಯನ್ನು ಹೊಂದಿ, ಅಂತರಿಕ್ಷವನ್ನೂ ವ್ಯಾಪಿಸುವವನಾಗಿ ಉದಕವು ಎಲ್ಲವನ್ನೂ ರಕ್ಷಿಸುವ ಹಾಗೆ **ಭೂಮ್ಯಾಂ ಹೋಮಾಧಾರತ್ವೇನ ಸ್ಥಿತ್ವಾ ಹವಿಷ್ಪ್ರಪಣಾಯ ದ್ಯುಲೋಕಗಾಮಿನಂ**—ಭೂಮಿಯಲ್ಲಿ ಹೋಮಕ್ಕೆ ಆಧಾರವಾಗಿಯೂ, ಹವಿಸ್ಸುಗಳನ್ನು ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಅಂತರಿಕ್ಷದಲ್ಲಿ ಸಂಚರಣಶೀಲನಾಗಿಯೂ ಭೂಮ್ಯಂತರಿಕ್ಷಗಳೆರಡನ್ನೂ ವ್ಯಾಪಿಸಿ ಎಲ್ಲವನ್ನೂ ರಕ್ಷಿಸುತ್ತಿರುವನು ಎಂದು ವಿವೃತವಾಗಿದೆ.

**ಪೃಶ್ನಿ** ಶಬ್ದವು ಸ್ವಃ ಎಂಬಿವೇ ಮೊದಲಾದ ಆರು ಸಾಧಾರಣನಾಮಗಳಲ್ಲಿ (ನಿ. ೨-೧೪) ಪಠಿತವಾಗಿದೆ. ಸಾಯಣರು ಇಲ್ಲಿ **ಪೃಶ್ನ್ಯಾಃ ಪತರಂ ದ್ಯುಲೋಕಸ್ಯಾಂತರಿಕ್ಷಸ್ಯ ಗಂತಾರಂ** ಅಗ್ನಿಯು ಅಂತರಿಕ್ಷದಲ್ಲಿ ವ್ಯಾಪಿಸಿ ಸಂಚರಿಸುವನು ಎಂಬ ಅರ್ಥವನ್ನು ವರ್ಣಿಸಿದ್ದಾರೆ.

ದಮೇ ಎಂಬ ಪದವು ಗೃಹನಾಮುಗಳಲ್ಲಿ (ನಿ. ೩-೧೩) ಪಠಿತವಾಗಿದೆ. ಇಲ್ಲಿಯೂ ವಾಸಗೃಹವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

---

ಸಂಹಿತಾಪಾಠಃ

ಸ ಹೋತಾ ವಿಶ್ವಂ ಪರಿ ಭೂತ್ವಧ್ವರಂ ತಮು ಹವ್ಯೈರ್ಮನುಷ ಋಂಜತೇ ಗಿರಾ ।
ಹಿರಿಶಿಪ್ರೋ ವೃಧಸಾನಾಸು ಜರ್ಭುರದ್ದ್ಯೌರ್ನ ಸ್ತೃಭಿಶ್ಚಿತಯದ್ರೋದಸೀ ಅನು ॥ ೫ ॥

ಪದಪಾಠಃ

ಸಃ । ಹೋತಾ । ವಿಶ್ವಂ । ಪರಿ । ಭೂತು । ಅಧ್ವರಂ ತಂ । ಊಂ ಇತಿ । ಹವ್ಯೈಃ । ಮನುಷಃ । ಋಂಜತೇ । ಗಿರಾ ।
ಹಿರಿऽಶಿಪ್ರಃ । ವೃಧಸಾನಾಸು । ಜರ್ಭುರತ್ । ದ್ಯೌಃ । ನ । ಸ್ತೃऽಭಿಃ । ಚಿತಯತ್ ।ರೋದಸೀ ಇತಿ । ಅನು ॥ ೫ ॥

ಸಾಯಣಭಾಷ್ಯಂ

ಸೋऽಗ್ನಿರ್ಹೋತಾ ಹೋಮನಿಷ್ಪಾದಕಃ ಸನ್ ವಿಶ್ವಂ ಸರ್ವಮಧ್ವರಂ ಯಾಗಂ ಪರಿಭೂತು । ಪರಿತೋ ಭವತು । ತಮು ತಮೇವಾಗ್ನಿಂ ಹವ್ಯೈರ್ಹವಿರ್ಭಿರ್ಗಿರಾ ಸ್ತುತ್ಯಾ ಚ ಮನುಷೋ ಮನುಷ್ಯಾ ಋಂಜತೇ । ಪ್ರಸಾಧಯಂತಿ ॥ ಋಂಜತಿಃ ಪ್ರಸಾಧನಕರ್ಮಾ ॥ ಹಿರಿಶಿಪ್ರೋ ಹರಣಶೀಲಹನುರ್ದೀಪ್ತೋ-ಷ್ಣೀಷೋ ವಾ । ಶಿಪ್ರಾಃ ಶೀರ್ಷಸು ವಿತತಾ ಹಿರಣ್ಯಯೀಃ । ೫.೫೪-೧೧ । ಇತ್ಯಾದಿಮಂತ್ರಾಂತರಾತ್ । ವೃಧಸಾನಾಸು ಪ್ರವರ್ಧಮಾನಾಸ್ವೋಷಧೀಷು ಜ್ವಾಲಾಸು ವಾ ಜರ್ಭುರತ್ । ಪೂರ್ಯಮಾಣೋ ಯಜ್ಞಂ ಗಂತಾ ॥ ಶತ್ರಂತಂ ಪದಂ । ಯದ್ವಾ ದ್ವಿತೀಯಾರ್ಥೇ ಸಪ್ತಮೀ ॥ ವರ್ಧಮಾನಾ ಓಷಧೀರ್ಜರ್ಭುರತ್ । ಪುನಃಪುನರ್ದಹನ್ನಿತ್ಯರ್ಥಃ । ದ್ಯೌರ್ದ್ಯುಲೋಕಾಂತರಿಕ್ಷಂ ಸ್ತೃಭಿರ್ನಕ್ಷತ್ರೈರಿವ ರೋದಸೀ ಅನು ದ್ಯಾವಾಪೃಥಿವ್ಯಾವನು ಚಿತಯತ್ । ಚೇತಯತಿ । ಜ್ವಾಲಾಭಿರ್ವಿಸ್ಫುಲಿಂಗೈಶ್ಚ ಭುವಮಂತರಿಕ್ಷಂ ಚ ವ್ಯಾಪ್ನೋತೀತ್ಯರ್ಥಃ ॥

ಪ್ರತಿಪದಾರ್ಥ

ಸಃ—ಅಗ್ನಿಯು । ಹೋತಾ—ಹೋಮಸಂಪಾದಕನಾಗಿ । ವಿಶ್ವಂ ಅಧ್ವರಂ—ಸಮಸ್ತಯಾಗವನ್ನೂ । ಪರಿ ಭೂತು—ಸುತ್ತುವರಿದು ನಿಲ್ಲಲಿ । ತಮು—ಅದೇ ಅಗ್ನಿಯನ್ನು । ಹವ್ಯೈಃ—ಹವಿಸ್ಸುಗಳಿಂದಲೂ । ಗಿರಾ—ಸ್ತುತಿಯಿಂದಲೂ ಸಹ। ಮನುಷಃ—ಮಾನವರು । ಋಂಜತೇ—ಅಲಂಕರಿಸುತ್ತಾರೆ । ಹಿರಿಶಿಪ್ರಃ—ಪ್ರಕಾಶಮಾನ

ವಾದ ಜ್ವಾಲೆಯುಳ್ಳ ಅಗ್ನಿಯು | **ವೃಧಸಾನಾಸು**—ದಟ್ಟವಾಗಿ ಬೆಳೆದಿರುವ ಓಷಧಿಗಳ ಪೊದೆಯಲ್ಲಿ | **ಜರ್ಭುರತ್**—ದಹಿಸುತ್ತಾ | **ಸ್ತೃಭಿಃ**—ನಕ್ಷತ್ರಗಳಿಂದ | **ದ್ಯೌಃ ನ** - ಅಂತರಿಕ್ಷವನ್ನು ಕಾಂತಿಯುತವನ್ನಾಗಿ ಮಾಡುವಂತೆ | **ರೋದಸೀ ಅನು**—ದ್ಯಾವಾಪೃಥಿವಿಗಳೆರಡನ್ನೂ | **ಚಿತಯತ್**—ಚೈತನ್ಯಯುಕ್ತವಾಗುವಂತೆ ಮಾಡುತ್ತಾನೆ.

### ಭಾವಾರ್ಥ

ಹೋಮಸಂಪಾದಕನಾದ ಅಗ್ನಿಯು ಸಮಸ್ತಯಾಗವನ್ನೂ ಸುತ್ತುವರಿದು ನಿಲ್ಲಲಿ. ಅದೇ ಅಗ್ನಿಯನ್ನು ಹವಿಸ್ಸುಗಳಿಂದಲೂ, ಸ್ತುತಿಯಿಂದಲೂ ಮಾನವರು ಅಲಂಕರಿಸುತ್ತಾರೆ. ಪ್ರಕಾಶಮಾನವಾದ ಜ್ವಾಲೆಯುಳ್ಳ ಅಗ್ನಿಯು ದಟ್ಟವಾಗಿ ಬೆಳೆದಿರುವ ಓಷಧಿಗಳ ಪೊದೆಯನ್ನು ದಹಿಸುತ್ತಾ ನಕ್ಷತ್ರಗಳಿಂದ ಅಂತರಿಕ್ಷವನ್ನು ಕಾಂತಿಯುತವನ್ನಾಗಿ ಮಾಡುವಂತೆ ದ್ಯಾವಾಪೃಥಿವಿಗಳೆರಡನ್ನೂ ಚೈತನ್ಯಯುಕ್ತವಾಗುವಂತೆ ಮಾಡುತ್ತಾನೆ.

### English Translation

May he, the presenter of oblations (to the gods), be around all sacrifices; men propitiate him with oblations and with praises, when blazing with radiant tresses amongst the growing plants, and enlivening heaven and earth (with his sparks), like the sky with stars.

### ವಿಶೇಷವಿಷಯಗಳು

ಅಗ್ನಿಯು, ಋತ್ವಿಜರಲ್ಲಿ ಒಬ್ಬನಾದ ಹೋತೃವೆಂಬ ಋತ್ವಿಜನನ್ನು ಬೋಧಿಸುವ ಹೋತೃ ಶಬ್ದಬೋಧ್ಯನಾಗಿರುವನೆಂದು ಅರ್ಥವನ್ನು ಇಲ್ಲಿ ಹೋತಾ ಎಂಬ ಪದಕ್ಕೆ ಹೇಳಿದೆ. ಹೋಮನಿಷ್ಪಾದಕನೆಂಬ ಅರ್ಥವನ್ನು ವಿವರಿಸಿದೆ. ಈ ಅಗ್ನಿಯನ್ನು ಮನುಷ್ಯರು **ಹವ್ಯೈಃ ಗಿರಾ ಋಂಜತೇ** ಹವಿಸ್ಸುಗಳಿಂದಲೂ ಸ್ತುತಿಗಳಿಂದಲೂ ಪ್ರಸನ್ನನಾಗಿರುವಂತೆ ಪೂಜಿಸುವರೆಂದು ವರ್ಣಿಸಿದೆ.

**ಹಿರಿಶಿಪ್ರಃ—ಹರಣಶೀಲದೀಪ್ತೋಷ್ಣೀಷೋ ವಾ** ಅಗ್ನಿಯು ಮನೋಹರವಾಗಿರುವ ಮತ್ತು ಬಹಳ ಕಾಂತಿಯುಳ್ಳ ಉಷ್ಣೀಷವನ್ನು ಧರಿಸಿರುವವನೆಂದು ಅರ್ಥವನ್ನು ವಿವರಿಸಿದೆ. ಇಲ್ಲಿ ಶಿಪ್ರ ಶಬ್ದಕ್ಕೆ **ಉಷ್ಣೀಷ** (ರುಮಾಲು) ಎಂಬ ಅರ್ಥವನ್ನು ವರ್ಣಿಸಿ, ಈ ಅರ್ಥದಲ್ಲಿ ಈ ಶಬ್ದದ ಪ್ರಯೋಗವುಳ್ಳ—

**ಅಂಸೇಷು ವಾ ಋಷ್ಟಯಃ ಪತ್ಸು ಖಾದಯೋ ವಕ್ಷಸ್ಸು ರುಕ್ಮಾ ಮರುತೋ ರಥೇ ಶುಭಃ |**
**ಅಗ್ನಿಭ್ರಾಜಸೋ ವಿದ್ಯುತೋ ಗಭಸ್ತ್ಯೋಃ ಶಿಪ್ರಾಃ ಶೀರ್ಷಸು ವಿತತಾ ಹಿರಣ್ಯಯೀಃ ||**

ಋಕ್ಕನ್ನು ಉದಹರಿಸಿದೆ.　　　　(ಋ. ಸಂ. ೫-೫೪-೧೧)

**ವೃಧಸಾನಾಸು ಜರ್ಭುರತ್—ಪ್ರವರ್ಧಮಾನಾಸ್ವೋಷಧೀಷು ಜ್ವಾಲಾಸು ವಾ ಪೂರ್ಯಮಾಣೋ ಯಜ್ಞಂ ಗಂತಾ | ಯದ್ವಾ ದ್ವಿತೀಯಾರ್ಥೇ ಸಪ್ತಮೀ | ವರ್ಧಮಾನಾ ಓಷಧೀಃ ಪುನಃ ಪುನಃ ದರ್ಹ |** ಅಗ್ನಿಯು ವೃದ್ಧಿಹೊಂದುತ್ತಿರುವ ಮೂಲಿಕೆಗಳಲ್ಲಿಯೂ ಅಥವಾ ತನ್ನ ಜ್ವಾಲೆಗಳಲ್ಲಿಯೂ ವ್ಯಾಪಿಸುತ್ತಾ ಯಜ್ಞಗೃಹಕ್ಕೆ ಪ್ರವೇಶಿಸುವನೆಂದೂ, **ವೃಧಸಾನಾಸು** ಎಂಬ ಶಬ್ದದಲ್ಲಿ ಸಪ್ತಮೀವಿಭಕ್ತಿಯು ದ್ವಿತೀಯಾರ್ಥದಲ್ಲಿ ಬಂದಿರುವುದರಿಂದ ವೃದ್ಧಿಹೊಂದುತ್ತಿರುವ ಮೂಲಿಕೆಗಳನ್ನು ಆಗಾಗ್ಗೆ ಭಕ್ಷಿಸುವವನಾಗಿರುವನು ಎಂದೂ ಎರಡು ವಿಧವಾದ ಅರ್ಥವನ್ನು ವಿವರಿಸಿದೆ.

ದ್ಯೌ ಸ್ತೃಭಿರ್ನ ರೋದಸೀ ಅನು ಚಿತಯೆತ್—ನಕ್ಷತ್ರೈರಿವ ಜ್ವಾಲಾಭಿಃ ವಿಸ್ಫುಲಿಂಗೈಶ್ಚ ಭುವಮಂತರಿಕ್ಷಂ ಚ ವ್ಯಾಪ್ನೋತಿ—ಅಗ್ನಿಯು, ನಕ್ಷತ್ರಗಳು ಅಂತರಿಕ್ಷದಲ್ಲಿ ವ್ಯಾಪಿಸಿರುವ ಹಾಗೆ ತನ್ನ ಜ್ವಾಲೆಗಳಿಂದಲೂ ಕಿಡಿಗಳಿಂದಲೂ ಭೂಮಿಯನ್ನೂ, ಅಂತರಿಕ್ಷವನ್ನೂ ವ್ಯಾಪಿಸಿರುವನು ಎಂದು ವರ್ಣಿಸಿದೆ.

---

ಸಂಹಿತಾಪಾಠಃ

ಸ ನೋ ರೇವತ್ಸಮಿಧಾನಃ ಸ್ವಸ್ತಯೇ ಸಂದದಸ್ವಾನ್ರಯಿಮಸ್ಮಾಸು ದೀದಿಹಿ ।

ಆ ನಃ ಕೃಣುಷ್ವ ಸುವಿತಾಯ ರೋದಸೀ ಅಗ್ನೇ ಹವ್ಯಾ ಮನುಷೋ ದೇವ ವೀತಯೇ ॥ ೬ ॥

ಪದಪಾಠಃ

ಸಃ । ನಃ । ರೇವತ್ । ಸಂಽಇಧಾನಃ । ಸ್ವಸ್ತಯೇ । ಸಂಽದದಸ್ವಾನ್ । ರಯಿಂ । ಅಸ್ಮಾಸು । ದೀದಿಹಿ ।

ಆ । ನಃ । ಕೃಣುಷ್ವ । ಸುವಿತಾಯ । ರೋದಸೀ ಇತಿ । ಅಗ್ನೇ । ಹವ್ಯಾ । ಮನುಷಃ । ದೇವ । ವೀತಯೇ ॥ ೬ ॥

ಸಾಯಣಭಾಷ್ಯಂ

ಹೇ ಅಗ್ನೇ ಸ ತಾದೃಶಸ್ತ್ವಂ ನೋಽಸ್ಮಾಕಂ ಸ್ವಸ್ತಯೇ । ಸ್ವಸ್ತೀತ್ಯವಿನಾಶನಾಮ । ಕ್ಷೇಮಾಯ ರೇವದ್ರಯಿಮದ್ರಯಿಂ ಧನಂ ಉಪರ್ಯುಪರಿವೃದ್ಧಿಮದ್ದಾನಯೋಗ್ಯಂ ವಾ ಧನಮಸ್ಮಾಸು ಸಂದದಸ್ವಾನ್ ಸಮ್ಯಕ್ ಪ್ರಯಚ್ಛನ್ ಸಮಿಧಾನೋಽಸ್ಮಾಭಿಃ ಸಮ್ಯಗಿಧ್ಯಮಾನಃ ಸನ್ ದೀದಿಹಿ । ದೀಪ್ಯಸ್ವ । ಯದ್ವಾ ರೇವದಿತಿ ಕ್ರಿಯಾವಿಶೇಷಣಂ । ರಾ ಧನಂ ಸಮೃದ್ಧಿಮದ್ಯಥಾ ತಥಾ ದೀಪ್ಯಸ್ವೇತಿ । ತಥಾಭೂತಃ ಸನ್ ನೋಽಸ್ಮಭ್ಯಂ ಸುವಿತಾಯ ಸುಹಿತಾಯ ಶೋಭನಫಲಾಯ ರೋದಸೀ ದ್ಯಾವಾಪೃಥಿವ್ಯಾವಾಕೃಣುಷ್ವ । ಸರ್ವತಃ ಕುರುಷ್ವ । ಉಭೌ ಲೋಕೌ ಭೋಗಪ್ರದೌ ಕುರ್ವಿತ್ಯರ್ಥಃ । ಕಿಮರ್ಥಮಿತಿ ತದುಚ್ಯತೇ । ಹೇ ದೇವಾಗ್ನೇ ಮನುಷೋ ಮನುಷ್ಯಸ್ಯ ಯಜಮಾನಸ್ಯ ಮಮ ಸಂಬಂಧೀನಿ ಹವ್ಯಾ ಹವೀಂಷಿ ವೀತಯೇ ದೇವೇಭ್ಯೋ ಭಕ್ಷಣಾಯ । ಪುನಃಪುನರ್ಯಾಗಾದ್ಯನುಷ್ಠಾನಾಯೇತ್ಯರ್ಥಃ ॥

ಪ್ರತಿಪದಾರ್ಥ

ಸಃ—(ಎಲೈ ಅಗ್ನಿಯೇ) ಮೇಲೆ ವರ್ಣಿತವಾದ ಗುಣಗಳುಳ್ಳ । ನಃ—ನಮ್ಮ । ಸ್ವಸ್ತಯೇ—ಕ್ಷೇಮಕ್ಕಾಗಿ । ರೇವತ್ ರಯಿಂ—ವೃದ್ಧಿಯನ್ನು ಹೊಂದಿ ದಾನಕ್ಕೆ ಯೋಗ್ಯವಾದ ಧನವನ್ನು । ಅಸ್ಮಾಸು—ನಮಗೆ । ಸಂದದಸ್ವಾನ್—ಕೊಡುತ್ತಲೂ । ಸಮಿಧಾನಃ—(ನಮ್ಮಿಂದ) ಪ್ರಜ್ವಲಿತನಾಗಿಯೂ । ದೀದಿಹಿ—ಪ್ರಕಾಶಿಸು ।

**ನಃ**—ನಮಗೆ| **ಸುವಿತಾಯೆ**—ಉತ್ತಮವಾದ ಫಲವನ್ನು ಕೊಡುವುದಕ್ಕಾಗಿ | **ರೋದಸೀ**—ದ್ಯಾವಾಪೃಥಿವಿಗಳನ್ನು | **ಆ ಕೃಣುಷ್ವ**—ಭೋಗಪ್ರದವನ್ನಾಗಿ ಮಾಡು | **ದೇವ**—ದ್ಯೋತಮಾನನಾದ | **ಅಗ್ನೇ**—ಎಲೈ ಅಗ್ನಿಯೇ | **ಮನುಷಃ**—ಯಜಮಾನನು ಅರ್ಪಿಸಿದ | **ಹವ್ಯಾ**—ಹವಿಸ್ಸುಗಳನ್ನು | **ವೀತಯೇ**—ದೇವತೆಗಳ ಭಕ್ಷಣಕ್ಕೆ ಯೋಗ್ಯವಾದುದನ್ನಾಗಿ ಮಾಡು.

**ಭಾವಾರ್ಥ**

ದೇವತಾತ್ಮನಾದ ಎಲೈ ಅಗ್ನಿಯೇ, ನಮ್ಮ ಕ್ಷೇಮಕ್ಕಾಗಿ ನೀನು ವೃದ್ಧಿಯನ್ನು ಹೊಂದಿ ದಾನಕ್ಕೆ ಯೋಗ್ಯವಾದ ಧನವನ್ನು ನಮಗೆ ಕೊಡುತ್ತಲೂ ನಮ್ಮಿಂದ ಪ್ರಜ್ವಲಿತನಾಗಿಯೂ ಪ್ರಕಾಶಿಸು. ನಮಗೆ ಉತ್ತಮವಾದ ಫಲ ಕೊಡುವುದಕ್ಕಾಗಿ ದ್ಯಾವಾಪೃಥಿವಿಗಳನ್ನು ಭೋಗಪ್ರದವನ್ನಾಗಿಯೂ ಯಜಮಾನನು ಅರ್ಪಿಸಿದ ಹವಿಸ್ಸುಗಳನ್ನು ನನ್ನು ದೇವತೆಗಳ ಭಕ್ಷಣಕ್ಕೆ ಯೋಗ್ಯವಾದುದನ್ನಾಗಿಯೂ ಮಾಡು.

## English Translation

You, Agni, are he who, for our good, is possessed of riches; kindled by us, blaze as the liberal donor of wealth to us: render heaven earth propitious to us, so that divine Agni, (the gods) may partake of the oblations of the institutor of the rite.

**ವಿಶೇಷವಿಷಯಗಳು**

ಋತ್ವಿಜರು "ಅಗ್ನಿಯು ತಮ್ಮ ಕ್ಷೇಮಕ್ಕಾಗಿ ದಿನಂಪ್ರತಿಯಲ್ಲಿಯೂ ವೃದ್ಧಿಹೊಂದುವ ಧನವನ್ನು ಅನುಗ್ರಹಿಸುವವನಾಗಿಯೂ, ಅವರಿಂದ ಪ್ರಭೂತವಾಗಿ ಸೇವಿಸಲ್ಪಡುವವನಾಗಿಯೂ, ವೃದ್ಧಿಯನ್ನು ಹೊಂದಲಿ" ಎಂದು ಆಶಂಸಿರುವ ಅಭಿಮತವು ವರ್ಣಿತವಾಗಿದೆ ಈ ಅರ್ಥದಲ್ಲಿ **ರೇವತ್** ಎಂಬ ಪದವು **ರಯಿಂ** ಎಂಬ ಪದಕ್ಕೆ ವಿಶೇಷಣವಾಗಿದೆ. **ಸಃ ನಃ ಸ್ವಸ್ತಯೇ ರೇವತ್ ದೀದಿಹಿ** ಎಂದು ರೇವತ್ ಎಂಬ ಪದವನ್ನು ಕ್ರಿಯಾವಿಶೇಷಣವಾಗಿ ಪ್ರಯೋಗಿಸಿ, **ರಾ ಧನಂ ಸಮೃದ್ಧಿಮತ್ ಯಥಾ ತಥಾ ದೀಪ್ಯಸ್ವ** ಋತ್ವಿಜರಾದ ನಮ್ಮ ಕ್ಷೇಮಕ್ಕಾಗಿ ಧನವನ್ನು ಪ್ರಭೂತವಾಗಿರುವಂತೆ ಅನುಗ್ರಹವನ್ನು ಪ್ರಕಾಶಗೊಳಿಸುವ ಅಗ್ನಿಯು ಚೆನ್ನಾಗಿ ವೃದ್ಧಿಯನ್ನು ಹೊಂದಲಿ ಎಂದು ಎರಡನೆಯ ಅರ್ಥವೂ ವರ್ಣಿತವಾಗಿದೆ.

**ನಃ ಸುವಿತಾಯೆ ರೋದಸೀ ಕೃಣುಷ್ವ**--**ಅಸ್ಮಭ್ಯಂ ಸುವಿತಾಯ ಶೋಭನಫಲಾಯ ದ್ಯಾವಾ-ಪೃಥಿವ್ಯೌ ಉಭೌ ಲೋಕೌ ಭೋಗಪ್ರದೌ ಕುರ್ವಿತ್ಯರ್ಥಃ**—ಭೂಮಿ ಮತ್ತು ಅಂತರಿಕ್ಷಗಳೆಂಬ ಎರಡು ಲೋಕಗಳನ್ನೂ ನಮ್ಮ ಕ್ಷೇಮಕ್ಕಾಗಿಯೂ ಉತ್ತಮವಾದ ಇತರ ಹಿತಕ್ಕಾಗಿಯೂ ಅನುಕೂಲವಾಗಿರುವಂತೆ ಅಗ್ನಿಯು ಅನುಗ್ರಹಿಸಲಿ ಎಂಬ ಋತ್ವಿಜರ ಮತ್ತು ಯಜಮಾನರ ಆಶಂಸನೆಯು ಇಲ್ಲಿ ವರ್ಣಿತವಾಗಿದೆ. ಮತ್ತು ಅಗ್ನಿಯ ಅನುಗ್ರಹರೂಪವಾದ ದ್ಯಾವಾಪೃಥಿವೀ ಸಂಬಂಧಿಯಾದ ವಶೀಕಾರವು **ಮನುಷಃ ಹವ್ಯಾ ವೀತಯೇ**-**ಮನುಷ್ಯಸ್ಯ ಮಮ ಯಜಮಾನಸ್ಯ ಸಂಬಂಧೀನಿ ಹವೀಂಷಿ ದೇವೇಭ್ಯೋ ಭಕ್ಷಣಾಯ**-ಮನುಷ್ಯನಾದ ಯಜಮಾನನಾದವನಿಂದ ಅರ್ಪಿತವಾಗುವ ದೇವತೆಗಳ ಉದ್ದೇಶ್ಯವಾದ ಹವಿಸ್ಸುಗಳ ಸ್ವರೂಪದಿಂದ ಚರಿತಾರ್ಥವನ್ನು ಹೊಂದಲಿ ಎಂಬ ಆಶಂಸನೆಯು ವಿವೃತವಾಗಿದೆ.

ಸಂಹಿತಾಪಾಠಃ

ದಾ ನೋ ಅಗ್ನೇ ಬೃಹತೋ ದಾಃ ಸಹಸ್ರಿಣೋ ದುರೋ ನ ವಾಜಂ ಶ್ರುತ್ಯಾ ಅಪಾ ವೃಧಿ ।

ಪ್ರಾಚೀ ದ್ಯಾವಾಪೃಥಿವೀ ಬ್ರಹ್ಮಣಾ ಕೃಧಿ ಸ್ವರ್ಣ ಶುಕ್ರಮುಷಸೋ ವಿ ದಿದ್ಯುತಃ ॥ ೭ ॥

ಪದಪಾಠಃ

ದಾಃ । ನಃ । ಅಗ್ನೇ । ಬೃಹತಃ । ದಾಃ । ಸಹಸ್ರಿಣಃ । ದುರಃ । ನ । ವಾಜಂ । ಶ್ರುತ್ಯೈ । ಅಪ । ವೃಧಿ । ಪ್ರಾಚೀ ಇತಿ । ದ್ಯಾವಾಪೃಥಿವೀ ಇತಿ । ಬ್ರಹ್ಮಣಾ । ಕೃಧಿ । ಸ್ವಃ । ನ । ಶುಕ್ರಂ । ಉಷಸಃ । ವಿ । ದಿದ್ಯುತಃ ॥ ೭ ॥

ಸಾಯಣಭಾಷ್ಯಂ

ಹೇ ಅಗ್ನೇ ನೋಽಸ್ಮಭ್ಯಂ ಬೃಹತೋ ಮಹತಃ ಪ್ರಭೂತಾನ್ ಗವಾಶ್ವಾದಿಧನವಿಶೇಷಾನ್ ದಾಃ । ದೇಹಿ । ತಥಾ ಸಹಸ್ರಿಣಃ ಸಹಸ್ರಸಂಖ್ಯೋಪೇತಾನ್ಪುತ್ರಭೃತ್ಯಾದೀನ್ ದಾಃ ದೇಹಿ ॥ ದದಾತೇಶ್ಛಂದಸೇ ಲುಙಿ ರೂಪಂ । ವಾಕ್ಯಭೇದಾದನಿಘಾತಃ ॥ ಶ್ರುತ್ಯೈ ಕೀರ್ತ್ಯೈ ವಾಜಮನ್ನಂ ದುರೋ ನ ತಸ್ಯ ದ್ವಾರಾಣ್ಯಪಿ ॥ ನಶಬ್ದಶ್ಚಾರ್ಥೇ ॥ ಅಪಾವೃಧಿ ಅಪವೃಣು । ಪ್ರೇರಯೇತ್ಯರ್ಥಃ । ಯದ್ವಾ ದ್ವಾರಾಣೀವ । ತೇಷ್ವಪ್ರತ್ಯೃಪಾಯಾನ್ನಿಶದಯತಿ । ತದರ್ಥಂ ದ್ಯಾವಾಪೃಥಿವೀ ಬ್ರಹ್ಮಣಾ ಪರಿವೃಢೇನ ಕರ್ಮಣಾ ಪ್ರಾಚೀ ಪ್ರಕೃಷ್ಟಾಂಚನೇ । ಅಸ್ಮದನುಕೂಲೇ ಕೃಧಿ । ಕುರು । ಸ್ವರ್ಣ । ಆದಿತ್ಯ ಇವ । ಸ ಯಥಾಜಗತ್ಪ್ರಕಾಶಯತಿ ತದ್ವತ್ । ಶುಕ್ರಂ ದೀಪ್ತಂ ತ್ವಾಮುಷಸ ಉಷಃಕಾಲಾ ವಿದಿದ್ಯುತಃ । ವಿದ್ಯೋತಯಂತಿ । ಉಷಃಕಾಲೇ ಹ್ಯಗ್ನಯಃ ಪ್ರಜ್ವಾಲ್ಯಂತೇ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ, । ನಃ—ನಮಗೆ । ಬೃಹತಃ—ಪ್ರಭೂತವಾದ ಗವಾಶ್ವಾದಿಗಳನ್ನು । ದಾಃ—ಕೊಡು ।ಸಹಸ್ರಿಣಃ—ಸಹಸ್ರಸಂಖ್ಯಾಕವಾದ । ಪುತ್ರಭೃತ್ಯಾದಿಗಳನ್ನು । ದಾಃ—ಕೊಡು । ಶ್ರುತ್ಯೈ—ಕೀರ್ತಿಯನ್ನು ತರತಕ್ಕ । ಅನ್ನಂ—ಅನ್ನದ । ದುರೋ ನ—ಬಾಗಿಲನ್ನೂ ಸಹ । ಅಪಾ ವೃಧಿ—ತೆರೆ (ಅದಕ್ಕಾಗಿ) । ದ್ಯಾವಾಪೃಥಿವೀ—ದ್ಯಾವಾಪೃಥಿವಿಗಳನ್ನು । ಬ್ರಹ್ಮಣಾ—ಯಜ್ಞಾದಿಕರ್ಮದಿಂದ । ಪ್ರಾಚೀ—ನಮಗನುಕೂಲವಾಗುವಂತೆ । ಕೃಧಿ—ಮಾಡು । ಸ್ವರ್ಣ—ಆದಿತ್ಯನು ಜಗತ್ತನ್ನು ಪ್ರಕಾಶಿಸುವಂತೆ । ಶುಕ್ರಂ—ಪ್ರಕಾಶಮಾನನಾದ ನಿನ್ನನ್ನು । ಉಷಸಃ—ಉಷಃಕಾಲಗಳು । ವಿ ದಿದ್ಯುತಃ—ಬೆಳಗುವಂತೆ ಮಾಡುತ್ತವೆ.

### ಭಾವಾರ್ಥ

ಎಲೈ ಅಗ್ನಿಯೇ, ನಮಗೆ ಪ್ರಭೂತವಾದ ಗವಾಶ್ವಾದಿಗಳನ್ನು ಕೊಡು. ಸಹಸ್ರಸಂಖ್ಯಾಕವಾದ ಪುತ್ರ-ಪುತ್ರಭೃತ್ಯಾದಿಗಳನ್ನು ಕೊಡು. ಕೀರ್ತಿಯನ್ನು ತರತಕ್ಕ ಅನ್ನದ ಬಾಗಿಲನ್ನು ತೆರೆ. ದ್ಯಾವಾಪೃಥಿವಿಗಳನ್ನು ಯಜ್ಞಾದಿ ಕರ್ಮದಿಂದ ನಮಗನುಕೂಲವಾಗುವಂತೆ ಮಾಡು. ಆದಿತ್ಯನು ಜಗತ್ತನ್ನು ಪ್ರಕಾಶಪಡಿಸುವಂತೆ ಪ್ರಕಾಶಮಾನನಾದ ನಿನ್ನನ್ನು ಉಷಃಕಾಲಗಳು ಬೆಳಗುವಂತೆ ಮಾಡುತ್ತವೆ.

### English Translation

Bestow upon us, Agni, infinite possessions: grant us thousands (of cattle and dependants): open to us, for your reputation, the doors of abundance: make heaven and earth, propitiated by sacred prayer, favourable to us, and may the mornings light you up like the sun.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಬೃಹತಃ-ಮಹತಃ। ಪ್ರಭೂತಾನ್ ಗವಾಶ್ವಾದಿಧನವಿಶೇಷಾನ್-ಬೃಹತಃ ಎಂಬ ಪದಕ್ಕೆ ಪ್ರಭೂತವಾದ ಗೋವುಗಳು, ಅಶ್ವಗಳು ಇವೇ ಮೊದಲಾದ ಧನವನ್ನು ಎಂಬ ಅರ್ಥವನ್ನು ವರ್ಣಿಸಿ, ಈ ರೂಪವಾದ ಧನವನ್ನು ಅಗ್ನಿಯು (ಸಹಸ್ರ) ಸಾವಿರಗಟ್ಟಲೆಯಾಗಿ ಅನುಗ್ರಹಿಸಲಿ ಎಂದು ಆಶಿಸಿದೆ.

ಶ್ರುತ್ಯೈ ವಾಜಂ ದುರೋ ನ ಅಪಾವೃಧಿ—ಕೀರ್ತ್ಯೈ ಅನ್ನಂ ತಸ್ಯ ದ್ವಾರಾಣ್ಯಪಿ ಅಪವೃಣು। ಯದ್ವಾ ದ್ವಾರಾಣೀವ ತತ್ಪ್ರಾಪ್ತ್ಯುಪಾಯಾನ್ ವಿಶದಯ। ಈ ವಾಕ್ಯದಲ್ಲಿ ನ ಶಬ್ದಕ್ಕೆ ಸಮುಚ್ಚಯಾರ್ಥವನ್ನೂ ಉಪಮಾರ್ಥವನ್ನೂ ಹೇಳಿ ಅಗ್ನಿಯು ಕೀರ್ತಿಗಾಗಿ ಅನ್ನವನ್ನು ಅಥವಾ ಅನ್ನವು ದೊರಕುವ ಉಪಾಯವನ್ನು ಅನುಗ್ರಹಿಸಲಿ ಎಂದು ಒಂದು ವಿಧವಾದ ಅರ್ಥವನ್ನು ವರ್ಣಿಸಿ, ಅನ್ನವು ದೊರಕುವ ಮಾರ್ಗಗಳನ್ನೂ ಎಂದರೆ ದೊರಕುವ ಉಪಾಯಗಳನ್ನೂ (ತೋರಿಸು) ಬುದ್ಧಿಗೆ ಗೋಚರವಾಗುವಂತೆ ಅನುಗ್ರಹಿಸಲಿ ಎಂದೂ ವರ್ಣಿಸಿದೆ.

ದ್ಯಾವಾಪೃಥಿವೀ ಬ್ರಹ್ಮಣಾ ಪ್ರಾಚೀ ಕೃಧಿ—ಈ ವಾಕ್ಯದಲ್ಲಿ ಬ್ರಹ್ಮಣಾ ಎಂಬ ಪದಕ್ಕೆ ಪರಿವೃಢೇನ ಕರ್ಮಣಾ ಪ್ರಭೂತವಾದ ಪುಣ್ಯಸಂಪಾದಕವಾದ ಕರ್ಮವೆಂದು ಅರ್ಥವನ್ನು ವಿವರಿಸಿ, ಅಗ್ನಿಯು ಭೂಮ್ಯಂತರಿಕ್ಷಗಳನ್ನು ನಮ್ಮ ಕರ್ಮಾಚರಣೆಯಿಂದ ನಮಗೆ ಅನುಕೂಲವಾಗಿರುವಹಾಗೆ ಮಾಡಲಿ ಎಂದು ಆಶಿಸಿದೆ.

ಸ್ವರ್ಣ ಶುಕ್ರಮುಷಸೋ ವಿದಿದ್ಯುತಃ— ಉಷಃಕಾಲಾಃ ದೀಪ್ತಂ ತ್ವಾ ಆದಿತ್ಯ ಇವ ವಿದ್ಯೋತಯಂತಿ। ಉಷಃಕಾಲೇ ಹ್ಯಗ್ನಯಃ ಪ್ರಜ್ವಾಲ್ಯಂತೇ। ಸ್ವಃಶಬ್ದಕ್ಕೆ ಆದಿತ್ಯನೆಂದು ಅರ್ಥವನ್ನು ವಿವರಿಸಿದೆ. ಉಷಃಕಾಲಗಳಲ್ಲಿ ಆದಿತ್ಯನು ತನ್ನ (ಪ್ರಭೆಗಳಿಂದ) ಕಾಂತಿಗಳಿಂದ ಬೆಳಗುವಂತೆ ಉಷಃಕಾಲವು ಅಗ್ನಿಯನ್ನು ಅವನ ಕಾಂತಿಗಳಿಂದ ಪ್ರಕಾಶಿಸುವಂತೆ ಮಾಡುವುದು ಎಂದು ವರ್ಣಿಸಿದೆ.

---

ಸಂಹಿತಾಪಾಠಃ

ಸ ಇಧಾನ ಉಷಸೋ ರಾಮ್ಯಾ ಅನು ಸ್ವರ್ಣ ದೀದೇದರುಷೇಣ ಭಾನುನಾ ।
ಹೋತ್ರಾಭಿರಗ್ನಿರ್ಮನುಷಃ ಸ್ವಧ್ವರೋ ರಾಜಾ ವಿಶಾಮತಿಥಿಶ್ಚಾರುರಾಯವೇ ॥ ೮ ॥

ಪದಪಾಠಃ

ಸಃ । ಇಧಾನಃ । ಉಷಸಃ । ರಾಮ್ಯಾಃ । ಅನು । ಸ್ವಃ । ನ । ದೀದೇತ್ । ಅರುಷೇಣ । ಭಾನುನಾ ।
ಹೋತ್ರಾಭಿಃ । ಅಗ್ನಿಃ । ಮನುಷಃ । ಸುಽಅಧ್ವರಃ । ರಾಜಾ । ವಿಶಾಂ । ಅತಿಥಿಃ । ಚಾರುಃ । ಆಯವೇ ॥

ಸಾಯಣಭಾಷ್ಯಂ

ಸೋಽಗ್ನೀ ರಾಮ್ಯಾ ರಮಣಹೇತುಭೂತಾ ಉಷಸೋಽನು ಅನುಲಕ್ಷ್ಯೇಧಾನ ಇಧ್ಯಮಾನೋ ದೀಪಿತಃ ಸನ್ ಅರುಷೇಣ ರೋಚಮಾನೇನ ಭಾನುನಾ ತೇಜಸಾ ಸ್ವರ್ಣ ಆದಿತ್ಯ ಇವ ದೀದೇತ್। ದಿಪ್ಯತೇ। ಸೋಽಗ್ನಿರ್ಮನುಷೋ ಮನುಷ್ಯಸ್ಯ ಹೋತುರ್ಹೋತ್ರಾಭಿಃ। ಹೋತ್ರೇತಿ ವಾಙ್ನಾಮ। ಹೋಮಸಾಧನಭೂತಾಭಿಃ ಸ್ತುತಿಭಿಃ ಸ್ತೂಯಮಾನಃ ಸ್ವಧ್ವರಃ ಶೋಭನಯಾಗೋ ವಿಶಾಂ ಪ್ರಜಾನಾಂ ರಾಜಾ ರಾಜಮಾನಃ ಸ್ವಾಮ್ಯಾಯವೇ ಮನುಷ್ಯಾಯ ಯಜಮಾನಾಯ ತದರ್ಥಂ ಚಾರುಶ್ಚರಣಶೀಲೋಽತಿಥಿರತಿಥಿವತ್ಪೂಜ್ಯೋ ಭವತಿ ॥

ಪ್ರತಿಪದಾರ್ಥ

ಸಃ - ಅಗ್ನಿಯು । ರಾಮ್ಯಾಃ—ರಮಣೀಯವಾದ । ಉಷಸಃ ಅನು—ಉಷಸ್ಸಿನ ಉದಯವಾದೊಡನೆ । ಇಧಾನಃ—ಪ್ರಜ್ವಲಿತನಾಗಿ । ಅರುಷೇಣ—ಆರೋಚಮಾನವಾದ । ಭಾನುನಾ—ತೇಜಸ್ಸಿನಿಂದ । ಸ್ವರ್ಣ—ಆದಿತ್ಯನಂತೆ । ದೀದೇತ್—ಕಂಗೊಳಿಸುತ್ತಾನೆ । (ಸಃ) ಅಗ್ನಿಃ-ಅದೇ ಅಗ್ನಿಯು । ಮನುಷಃ—ಮಾನವನಾದ ಹೋತೃವಿನ । ಹೋತ್ರಾಭಿಃ—ಸ್ತುತಿಗಳಿಂದ ಸ್ತುತನಾಗಿಯೂ । ಸ್ವಧ್ವರಃ—ಶ್ರೇಷ್ಠವಾದ ಯಾಗವುಳ್ಳವನಾಗಿಯೂ । ವಿಶಾಂ—ಪ್ರಜೆಗಳಿಗೆ । ರಾಜಾ—ಸ್ವಾಮಿಯಾಗಿಯೂ । ಆಯವೇ—ಮಾನವನಿಗೆ । ಚಾರುಃ—ಆಗತನಾದ । ಅತಿಥಿಃ—ಅತಿಥಿಯಂತೆ ಪೂಜ್ಯನಾಗಿಯೂ ಇರುತ್ತಾನೆ ।

ಭಾವಾರ್ಥ

ಅಗ್ನಿಯು ರಮಣೀಯವಾದ ಉಷಸ್ಸಿನ ಉದಯವಾದೊಡನೆಯೇ ಪ್ರಜ್ವಲಿತನಾಗಿ ಆರೋಚಮಾನವಾದ ತೇಜಸ್ಸಿನಿಂದ ಆದಿತ್ಯನಂತೆ ಕಂಗೊಳಿಸುತ್ತಾನೆ ಅದೇ ಅಗ್ನಿಯು ಮಾನವನಾದ ಹೋತೃವಿನ ಸ್ತುತಿಗಳಿಂದ ಸ್ತುತನಾಗಿಯೂ, ಶ್ರೇಷ್ಠವಾದ ಯಾಗವುಳ್ಳವನಾಗಿಯೂ ಪ್ರಜೆಗಳಿಗೆ ಸ್ವಾಮಿಯಾಗಿಯೂ ಅತಿಥಿಯಂತೆ ಪೂಜ್ಯನಾಗಿಯೂ ಇರುತ್ತಾನೆ.

## English Translation

Kindled at the beautiful dawn, (Agni) shines with brilliant lustre, like the sun ; adored by the hymns of the worshipper, Agni, the king of men, (comes as) an agreeable guest to the institutor of the sacrifice.

### ವಿಶೇಷವಿಷಯಗಳು

**ಸಃ ಅರುಷೇಣ ಭಾನುನಾ ಸ್ವರ್ಣಃ ದೀದೇತ್— ಅಗ್ನಿಃ ಉಷಸಿ ದೀಪಿತಸ್ಸನ್ ರೋಚಮಾನೇನ ತೇಜಸಾ ಆದಿತ್ಯ ಇವ ದೀಪ್ಯತೇ**—ಅಗ್ನಿಯು ಉಷಃ ಕಾಲಗಳಲ್ಲಿ ಯಜಮಾನರಿಂದ ಅರ್ಪಿತವಾದ ಹವಿಸ್ಸುಗಳುಳ್ಳವನಾದ ಕಾರಣ ಕಾಂತಿಯಿಂದ ಬೆಳಗುವವನಾಗಿ, ಪ್ರಕಾಶಿಸುವ ತನ್ನ ತೇಜಸ್ಸುಗಳಿಂದ ಸೂರ್ಯನೆಹಾಗೆ ಹೊಳೆಯುತ್ತಿರುವನೆಂದು ವರ್ಣಿಸಿದೆ.

**ಸಃ ಮನುಷಃ ಹೋತ್ರಾಭಿಃ ಸ್ವಧ್ವರಃ**—ಅಗ್ನಿಯು ಹೋಮಸಂಪಾದಕನಾದ ಯಜಮಾನನ (ಹೋಮಸಾಧನವಾದ ) ಸ್ತುತಿಗಳಿಂದ ಸ್ತುತನಾಗಿ ನೆರವೇರಿದ ಯಾಗವುಳ್ಳವನಾಗಿರುವನು. ಇಲ್ಲಿ ಹೋತ್ರಪದವನ್ನು ವಾಙ್ನಾಮಗಳಲ್ಲಿ ಯಾಸ್ಕರು (ನಿ. ೨-೨೨) ಪಾಠಮಾಡಿರುವುದರಿಂದ ಈ ಪದಕ್ಕೆ ಸ್ತುತಿವಾಕ್ಕೆಂಬ ಅರ್ಥವು ವಿವೃತವಾಗಿದೆ.

**ವಿಶಾಂ ರಾಜಾ ಆಯವೇ ಅತಿಥಿಃ**—ಪ್ರಜೆಗಳ ವಿಷಯದಲ್ಲಿ ಪ್ರಕಾಶಿಸುತ್ತಿರುವ ಪ್ರಭುವಾಗಿ ತನ್ನನ್ನು ಪೂಜಿಸುವ ಯಜಮಾನನ ವಿಷಯದಲ್ಲಿ ಮನೋಹರನಾದ ಅತಿಥಿಯ ಹಾಗೆ ಪೂಜ್ಯನಾಗಿರುವನೆಂದು ಅಗ್ನಿಯು ವರ್ಣಿತನಾಗಿದ್ದಾನೆ.

ಯಾಸ್ಕರು ಮನುಷ್ಯನಾಮಗಳಲ್ಲಿ ವಿಶಃ ಆಯವಃ ಎಂಬ ಪದಗಳನ್ನು ( ನಿ. ೩-೮ ) ಪಾಠಮಾಡಿದ್ದಾರೆ. ಸಾಯಣರು ಇಲ್ಲಿ **ವಿಶಾಂ** ಎಂಬ ಪದಕ್ಕೆ **ಪ್ರಜಾನಾಂ** ಪ್ರಜೆಗಳೆಂಬ ಅರ್ಥವನ್ನೂ, **ಆಯವೇ—ಮನುಷ್ಯಾಯ ಯಜಮಾನಾಯ** ಮನುಷ್ಯನಾದ ಯಜಮಾನನು ಎಂದೂ ಅರ್ಥವನ್ನು ವಿವರಿಸಿದಾರೆ.

---

### ಸಂಹಿತಾಪಾಠಃ

ಏವಾ ನೋ ಅಗ್ನೇ ಅಮೃತೇಷು ಪೂರ್ವ್ಯ ಧೀಷ್ಪೀಪಾಯ ಬೃಹದ್ದಿವೇಷು ಮಾನುಷಾ ।
ದುಹಾನಾ ಧೇನುರ್ವೃಜನೇಷು ಕಾರವೇ ತ್ಮನಾ ಶತಿನಂ ಪುರುರೂಪಮಿಷಣಿ ॥ ೬ ॥

ಪದಪಾಠಃ

ಏವ । ನಃ । ಅಗ್ನೇ । ಅಮೃತೇಷು । ಪೂರ್ವ್ಯ । ಧೀಃ । ಪೀಪಾಯ । ಬೃಹತ್ಽದಿವೇಷು । ಮಾನುಷಾ ।

ದುಹಾನಾ । ಧೇನುಃ । ವೃಜನೇಷು । ಕಾರವೇ । ತ್ಮನಾ । ಶತಿನಂ । ಪುರುಽರೂಪಂ । ಇಷಣಿ ॥ ೯ ॥

ಸಾಯಣಭಾಷ್ಯಂ

ಬೃಹದ್ದಿವೇಷು ಪ್ರಭೂತದ್ಯುತಿಷ್ವಮೃತೇಷು ದೇವೇಷು ಮಧ್ಯೇ ಹೇ ಪೂರ್ವ್ಯ ಪೂರ್ವಭಾವಿನಗ್ನೇ ತ್ವಾಂ ಮಾನುಷಾ ಮನುಷ್ಯಾಣಾಂ ಮಧ್ಯೇ ನೋಽಸ್ಮದೀಯಾ ಧೀರ್ಬುದ್ಧಿಃ ಸ್ತುತಿಃ ಕರ್ಮ ವಾ ಏವ ಏವಂ ಪೀಪಾಯ । ಪ್ಯಾಯಯತಿ । ಯದ್ವಾ ಮಾನುಷಾ ಮನುಷ್ಯಾನ್ ಧೀಸ್ತ್ವದೀಯಾ ಬುದ್ಧಿಃ ಕರ್ಮ ವಾ ಪ್ಯಾಯಯತು । ತಥಾ ತ್ವದೀಯಾ ಧೀರ್ವೃಜನೇಷು ಯಜ್ಞೇಷು ಕಾರವೇ ಸ್ತೋತ್ರೇ ದುಹಾನಾ ಧೇನುಃ । ದೋಗ್ಧ್ರೀ ಧೇನುರಿವ । ಲುಪ್ತೋಪಮಮೇತತ್ । ತ್ಮನಾತ್ಮನೈವೇಷಣ್ಯೇಷಣಾಯಾಂ ಸತ್ಯಾಂ ಶತಿನಮಪರಿಮಿತಸಂಖ್ಯಾಕಂ ಪುರುರೂಪಂ ಗವಾಶ್ವಾದಿರೂಪೇಣ ನಾನಾರೂಪಂ ಧನಸಮೂಹಂ ದುಹಾನಾ ಭವತಿ ॥

ಪ್ರತಿಪದಾರ್ಥ

ಬೃಹದ್ದಿವೇಷು—ಅತ್ಯತಿಶಯವಾಗಿ ಪ್ರಕಾಶಿಸತಕ್ಕ । ಅಮೃತೇಷು—ದೇವತೆಗಳ ನಡುವೆ । ಪೂರ್ವ್ಯ—ಪ್ರಥಮನಾದ । ಅಗ್ನೇ—ಎಲೈ ಅಗ್ನಿಯೇ । ತ್ವಾಂ—ನಿನ್ನನ್ನು । ಮಾನುಷಾ—ಮಾನವರಾದ । ನಃ—ನಮ್ಮ । ಧೀಃ—ಕರ್ಮವು ಅಥವಾ ಸ್ತುತಿಯು । ಏವ—ಈ ರೀತಿಯಲ್ಲಿ । ಪೀಪಾಯ—ಕೊಂಡಾಡುತ್ತದೆ (ಹಾಗೆಯೇ ನಿನ್ನ ಬುದ್ಧಿಯೂ ಸಹ) । ವೃಜನೇಷು—ಯಜ್ಞಗಳಲ್ಲಿ । ಕಾರವೇ—ಸ್ತೋತೃವಿಗೆ । ದುಹಾನಾ ಧೇನುಃ—ಕರೆಯತಕ್ಕ ಹಸುವಿನಂತೆ । ತ್ಮನಾ—ಸ್ವಪ್ರೇರಣೆಯಿಂದಲೇ । ಇಷಣಿ—ಇಷ್ಟಾರ್ಥಗಳಲ್ಲಿರುವ ಕಾಲದಲ್ಲಿ । ಶತಿನಂ—ಅಪರಿಮಿತವಾಗಿ । ಪುರುರೂಪಂ—ಗವಾಶ್ವಾದಿರೂಪವಾದ ನಾನಾ ವಿಧ ಇಷ್ಟಾರ್ಥಗಳನ್ನು ಕೊಡುತ್ತದೆ.

ಭಾವಾರ್ಥ

ಅತ್ಯತಿಶಯವಾಗಿ ಪ್ರಕಾಶಿಸತಕ್ಕ ದೇವತೆಗಳ ನಡುವೆ ಪ್ರಥಮನಾದ ಎಲೈ ಅಗ್ನಿಯೇ, ನಿನ್ನನ್ನು ಮಾನವರಾದ ನಮ್ಮ ಸ್ತುತಿಯು ಬಹು ವಿಧವಾಗಿ ಹೊಗಳುತ್ತದೆ. ಕರೆಯತಕ್ಕ ಧೇನುವು ಸ್ವೇಚ್ಛೆಯಿಂದ ಪ್ರಭೂತವಾದ ಕ್ಷೀರವನ್ನು ಕೊಡುವಂತೆ ನಿನ್ನ ಬುದ್ಧಿಯೂ ಸಹ ನಮ್ಮ ಯಜ್ಞಕಾಲಗಳಲ್ಲಿ ನಮ್ಮ ಇಷ್ಟಾರ್ಥಗಳನ್ನು ನೆರವೇರಿಸುತ್ತದೆ.

## English Translation

Amongst men our praise, Agni, celebrtaes you, who are first amongst the greatly-splendid immortals ; (may it be to us) as a milch cow spontaneously yielding at sacrifices to the worshipper, infinite and multiform (blessings according to his) desire.

ವಿಶೇಷವಿಷಯ

ಅಗ್ನಿಯು ಬೃಹದ್ದಿವೇಷು ಅಮೃತೇಷು ಪೂರ್ವ್ಯ—ಬಹಳ ತೇಜಸ್ಸುಗಳಿಂದ ಪ್ರಕಾಶಿಸುತ್ತಿರುವ ದೇವತೆಗಳ ಮಧ್ಯದಲ್ಲಿ ಬಹಳ ಪ್ರಾಚೀನನಾಗಿರುವವನೆಂದು ಸಂಬೋಧಿತನಾಗಿದ್ದಾನೆ.

ನಃ ಧೀಃ ಪೀಪಾಯ—ಅಸ್ಮದೀಯಾ ಬುದ್ಧಿಃ ಸ್ತುತಿಃ ಕರ್ಮ ವಾ ಏವಂ ಪ್ಯಾಯಯತಿ । ಯದ್ವಾ (ಮಾನುಷಾ) ಮನುಷ್ಯಾ ಧೀಃ ತ್ವದೀಯಾ ಬುದ್ಧಿಃ ಕರ್ಮ ವಾ ಪ್ಯಾಯಯತು । ಈ ವಾಕ್ಯಕ್ಕೆ ಎರಡು ವಿಧವಾದ ಅರ್ಥವನ್ನು ವಿವರಿಸಿದೆ. ಧೀ ಶಬ್ದಕ್ಕೆಸ್ತುತಿ ಅಥವಾ ಕರ್ಮ ಎಂದು ಅರ್ಥವನ್ನು ವರ್ಣಿಸಿ, ಮನುಷ್ಯರ ಮಧ್ಯದಲ್ಲಿ ಯಜಮಾನರಾದ ನಮ್ಮ ಸ್ತುತಿಯು ಅಥವಾ ಕರ್ಮವು ಅಗ್ನಿಯ ವಿಷಯದಲ್ಲಿಯೂ ಹೀಗೆಯೇ ವೃದ್ಧಿಯಾಗುತ್ತಿರುವುದೆಂದು ಒಂದು ವಿಧವಾದ ಅರ್ಥವು. ಎರಡನೆಯ ಅರ್ಥದಲ್ಲಿ ಪೂಜೆಯನ್ನು ಸ್ವೀಕರಿಸುವ ಅಗ್ನಿಯ ಸಂಬಂಧಿಯಾದ ಬುದ್ಧಿಯೂ ಅಥವಾ ಕರ್ಮವೂ ಯಜಮಾನರನ್ನು ವೃದ್ಧಿಗೊಳಿಸುವುದೆಂದು ವಿವೃತವಾಗಿದೆ.

ತ್ವದೀಯಾ ಧೀಃ ವೃಜನೇಷು ಕಾರವೇ ದುಹಾನಾ ಧೇನುಃ—ಈ ವಾಕ್ಯದಿಂದ ಅಗ್ನಿಯ ಬುದ್ಧಿಯು ಯಾಗಗಳಲ್ಲಿ ಸ್ತುತಿಮಾಡುವ ಯಜಮಾನರ ವಿಷಯದಲ್ಲಿ ಹಾಲನ್ನು ಹಿಂಡುವ ಹಸುವಿನಂತೆ ಪೋಷಕ ಅಥವಾ ರಕ್ಷಣೆಯನ್ನು ಮಾಡುವುದಾಗಿರುವುದೆಂದು ವರ್ಣಿಸಿದೆ- ಇದೇ ಅಭಿಪ್ರಾಯವನ್ನೇ ಇಷಿಣಿ ತ್ಮನಾ ಶತಿನಂ ಪುರುರೂಪಂ—ಆತ್ಮನೈವ ಏಷಣಾಯಾಂ ಸತ್ಯಾಂ ಅಪರಿಮಿತಸಂಖ್ಯಾಕಂ ಗವಾಶ್ವಾದಿರೂಪೇಣ ನಾನಾರೂಪಂ ಧನಸಮೂಹಂ ದುಹಾನಾ ಭವತಿ । ಯಜಮಾನರ ವಿಷಯದಲ್ಲಿ ಅಗ್ನಿಯ ಹಿತೈಷಣೆಯು ಹಸು, ಕುದುರೆ, ಇವೇ ಮೊದಲಾದ ಅನೇಕ ವಿಧವಾದ ಧನವನ್ನು ಸಾವಿರಗಟ್ಟಲೆಯಾಗಿ ಕೊಡುವುದಾಗಿರುವುದೆಂದು ವಿಸ್ತರಿಸಿ ಹೇಳಿದೆ. ಇಲ್ಲಿ ಉಪಮಾವಾಚಕವು ಇಲ್ಲದಿದ್ದರೂ ಧೇನುಶಬ್ದಕ್ಕೆ ಧೇನುರಿವ ಎಂದು ಅರ್ಥವು ವಿವೃತವಾಗಿರುತ್ತದೆ.

---

ಸಂಹಿತಾಪಾಠಃ

ವಯಮಗ್ನೇ ಅರ್ವತಾ ವಾ ಸುವೀರ್ಯಂ ಬ್ರಹ್ಮಣಾ ವಾ ಚಿತಯೇಮಾ

ಜನಾ꣡ ಅತಿ ।

ಅಸ್ಮಾಕಂ ದ್ಯುಮ್ನಮಧಿ ಪಂಚ ಕೃಷ್ಟಿಷೂಚ್ಚಾ ಸ್ವ꣡ರ್ಣ ಶುಶುಚೀತ

ದುಷ್ಟರಂ ॥ ೧೦ ॥

ಪದಪಾಠಃ

ವಯಂ । ಅಗ್ನೇ । ಅರ್ವತಾ । ವಾ । ಸುಽವೀರ್ಯಂ । ಬ್ರಹ್ಮಣಾ । ವಾ । ಚಿತಯೇಮ । ಜನಾನ್ ।

ಅತಿ ।

ಅಸ್ಮಾಕಂ । ದ್ಯುಮ್ನಂ । ಅಧಿ । ಪಂಚ । ಕೃಷ್ಟಿಷು । ಉಚ್ಚಾ । ಸ್ವಃ । ನ । ಶುಶುಚೀತ । ದುಸ್ತರಂ ॥೧೦॥

ಸಾಯಣಭಾಷ್ಯಂ

ಹೇ ಅಗ್ನೇ ವಯಂ ಯಜಮಾನಾಃ ಸುವೀರ್ಯಂ ಶೋಭನಸಾಮರ್ಥ್ಯೋಪೇತಂ ಯಥಾ ತಥಾರ್ವತಾ ವಾ ರಣಕುಶಲೇನಾಶ್ವೇನ ॥ ವಾಶಬ್ದಶ್ಚಾರ್ಥೇ ।ಬ್ರಹ್ಮಣಾ ವಾನ್ನೇನ ಚ ತ್ವದ್ದತ್ತೇನ ಜನಾನ-ಸ್ಮತ್ಸಮಾನಾನತಿ ಚಿತಯೇಮ । ಅತಿಕ್ರಮ್ಯ ಜ್ಞಾಯೇಮಹಿ ॥ ಕರ್ಮಣಿ ಕರ್ತೃಪ್ರತ್ಯಯಃ ॥ ಯದ್ವಾ ತ್ವ-ದ್ದತ್ತೇನಾಶ್ವೇನಾನ್ನೇನ ಚ ಸುವೀರ್ಯಂ ಚಿತಯೇಮ । ಪ್ರಕಾಶಯೇಮ । ತದರ್ಥಮಸ್ಮಾಕಂ ಪಂಚ ಪಂಚಸು ಕೃಷ್ಟಿಷು ಜನೇಷು ನಿಷಾದಪಂಚಮೇಷು ಚತುರ್ಷು ವರ್ಣೇಷೂಚ್ಚಾ ಉಚ್ಚೈರತಿಪ್ರಭೂತಂ ದುಸ್ತರಮನ್ಯೇನಾಪ್ರಾಪ್ತಂ ದ್ಯುಮ್ನಂ ಧನಂ ಸ್ವರ್ಣ ಸೂರ್ಯ ಇವಾಧಿಕಂ ಶುಶುಚೀತ । ದೀಪ್ಯತಾಂ । ಅಧೀತ್ಯಯಮನರ್ಥಕೋ ವಾ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ವಯಂ**—ಯಜಮಾನರಾದ ನಾವು । **ಸುವೀರ್ಯಂ**—ಶ್ರೇಷ್ಠವಾದ ಸಾಮರ್ಥ್ಯ ದಿಂದೊಡಗೂಡಿರುವಂತೆ ಮಾಡತಕ್ಕ । **ಅರ್ವತಾ ವಾ** (ನಿನ್ನಿಂದ ದತ್ತವಾದ) ಅಶ್ವದಿಂದಲೂ । **ಬ್ರಹ್ಮಣಾ ವಾ**—ಅನ್ನದಿಂದಲೂ । **ಜನಾನ್**—ನಮ್ಮ ಸುತ್ತಲೂ ಇರತಕ್ಕ ಜನರನ್ನು । **ಅತಿ ಚಿತಯೇಮ**—ಮೀರಿಸಿ ಪ್ರಕಾಶಿಸು ವಂತಾಗಲಿ । **ಅಸ್ಮಾಕಂ**—ನಮ್ಮ । **ಉಚ್ಚಾ**—ಅತಿಪ್ರಭೂತವಾದುದೂ । **ದುಸ್ತರಂ**—ಇತರರಿಂದ ಪಡೆಯಲು ಸಾಧ್ಯವಿಲ್ಲದುದೂ ಆದ । **ದ್ಯುಮ್ನಂ**—ಧನವು । **ಪಂಚ ಕೃಷ್ಟಿಷು**—ನಿಷಾದಾದಿ ಪಂಚವರ್ಣದ ಜನರ ನಡುವೆ । **ಸ್ವರ್ಣ**—ಸೂರ್ಯನಂತೆ । **ಶುಶುಚೀತ**—ಪ್ರಕಾಶಿಸಲಿ ।

ಭಾವಾರ್ಥ

ಎಲೈಅಗ್ನಿಯೇ, ಯಜಮಾನರಾದ ನಾವು ಶ್ರೇಷ್ಠವಾದ ಸಾಮರ್ಥ್ಯದಿಂದೊಡಗೂಡಿರುವಂತೆ ಮಾಡತಕ್ಕದ್ದೂ ನಿನ್ನಿಂದ ದತ್ತವಾದದ್ದೂ ಆದ ಅಶ್ವದಿಂದಲೂ, ಅನ್ನದಿಂದಲೂ, ನಮ್ಮ ಸುತ್ತಲೂ ಇರತಕ್ಕ ಜನರನ್ನು ಮೀರಿಸಿ ಪ್ರಕಾಶಿಸುವಂತಾಗಲಿ. ನಮ್ಮ ಅತಿಪ್ರಭೂತವಾದುದೂ, ಇತರರಿಂದ ಪಡೆಯಲು ಸಾಧ್ಯವಿಲ್ಲದುದೂ ಆದ ಧನವು ನಿಷಾದಾದಿ ಪಂಚವರ್ಣದ ಜನರ ನಡುವೆ ಸೂರ್ಯನಂತೆ ಪ್ರಕಾಶಿಸಲಿ.

English Trnslation

May we manifest vigour among other men, Agni, through the steed and the food (which you have given) : and may our unsurpassed wealth shine like the sun over (that of) the five clases of beings.

ವಿಶೇಷವಿಷಯಗಳು

**ವಯಂ ಅರ್ವತಾ ವಾ ಬ್ರಹ್ಮಣಾ ವಾ ಜನಾನ್ ಅತಿ ಚಿತಯೇಮ**—ಈ ವಾಕ್ಯಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಿದ್ದಾರೆ. ಮೊದಲನೆಯ ಅರ್ಥದಲ್ಲಿ ವಯಂ ಯಜಮಾನಾಃ ಆರಣಕುಶಲೇನ ಅಶ್ವೇನ ತ್ವದ್ದ-

**ತ್ರೇನ ಅನ್ನೇನ ಚ ಅಸ್ಮತ್ಸಮಾನಾನ್ ಅತಿಕ್ರಮ್ಯ ಜ್ಞಾಯೇಮಹಿ**—ಯಜಮಾನರಾದ ನಾವು ಅಗ್ನಿಯಿಂದ ಅನುಗೃಹೀತವಾದ ಮತ್ತು ವೇಗವಾಗಿ ಸಂಚರಿಸುವ ಅಶ್ವವೇ ಮೊದಲಾದ ಧನದಿಂದಲೂ, ಅನ್ನದಿಂದಲೂ ಕೂಡ ನಮ್ಮ ಸಮಾನರಾದವರನ್ನು ಮೀರಿ ಇರುವುವೆಂದು ತಿಳಿಯುತ್ತೇವೆ ಎಂದು ಅಭಿಪ್ರಾಯವು. ಎರಡನೆಯ ಅರ್ಥದಲ್ಲಿ **ಯದ್ವಾ ತ್ವದ್ದತ್ತೇನಾನ್ನೇನ ಚ ಸುವೀರ್ಯಂ ಪ್ರಕಾಶಯೇಮ**—ಅಗ್ನಿಯಿಂದ ಅನುಗೃಹೀತವಾದ ಅಶ್ವಗಳಿಂದಲೂ, ಅನ್ನದಿಂದಲೂ ಕೂಡ ಯಜಮಾನರಾದ ನಾವು ಶಕ್ತಿವಂತರಾಗಿಯೂ ಇರುವೆವು ಎಂದು ಅಗ್ನಿಯ ಅನುಗ್ರಹವನ್ನೂ ವರ್ಣಿಸಿದೆ.

**ಪಂಚ ಕೃಷ್ಟಿಷು** ಎಂದರೆ, ಪಂಚಜನರು—ಗಂಧರ್ವರು, ಪಿತೃಗಳು, ದೇವತೆಗಳು. ಅಸುರರು, ರಾಕ್ಷಸರು ಎಂದು ಐದು ವಿಧ ಜನರೆಂದು ಕೆಲವರು ಹೇಳುವರು ಬ್ರಾಹ್ಮಣಾದಿ ನಾಲ್ಕು ವರ್ಣದವರೂ ನಿಷಾದ ಎಂಬ ಬೇಡರ ಜಾತಿಗೆ ಸೇರಿದ ಜನರೂ ಸೇರಿ ಐದು ವಿಧ ಜನರೆಂದು ಉಪಮನ್ಯು ಮುಂತಾದವರ ಮತವು. (ಇದನ್ನೇ ಸಾಯಣರು ಅನುಮೋದಿಸಿರುವರು). ನಿಷಾದರೆಂದರೆ ಪ್ರಾಣಿಗಳನ್ನು ಕೊಲ್ಲುವವರು ಅಥವಾ ಇವರಲ್ಲಿ ಪಾಪವು ತುಂಬಿರುವುದರಿಂದ ಇವರಿಗೆ ನಿಷಾದರೆಂದು ನೈರುಕ್ತಕಾರರು ಹೇಳಿರುವರು. ಇದಲ್ಲದೆ ಆ ಕಾಲದಲ್ಲಿ ಐದು ಮುಖ್ಯವಾದ ಪಂಗಡಗಳು (tribes) ಇದ್ದಿರಬಹುದು. ಕವಿಯು ಈ ಅಭಿಪ್ರಾಯವನ್ನೇ ಇಟ್ಟುಕೊಂಡು **ಪಂಚ ಕೃಷ್ಟಿಷು** ಎಂದು ಹೇಳಿರಬಹುದು. ಹೇಗಾದರೂ ಈ ವಿಚಾರದಲ್ಲಿ ನಿರುಕ್ತಕಾರರಾದ ಯಾಸ್ಕರ ಕಾಲದಲ್ಲಿಯೂ ಸಹ ಅಭಿಪ್ರಾಯಭೇದವಿದ್ದಿತೆಂಬುವುದು ಸ್ಪಷ್ಟವಾಗಿದೆ.

---

ಸಂಹಿತಾಪಾಠಃ

ಸ ನೋ ಬೋಧಿ ಸಹಸ್ಯ ಪ್ರಶಂಸ್ಯೋ ಯಸ್ಮಿನ್ತ್ಸುಜಾತಾ ಇಷಯಂತ ಸೂರಯಃ ।
ಯಮಗ್ನೇ ಯಜ್ಞಮುಪಯಂತಿ ವಾಜಿನೋ ನಿತ್ಯೇ ತೋಕೇ ದೀದಿವಾಂಸಂ ಸ್ವೇ ದಮೇ ॥ ೧೧ ॥

ಪದಪಾಠಃ

ಸಃ । ನಃ । ಬೋಧಿ । ಸಹಸ್ಯ । ಪ್ರಶಂಸ್ಯಃ । ಯಸ್ಮಿನ್ । ಸುಜಾತಾಃ । ಇಷಯಂತ । ಸೂರಯಃ । ಯಂ । ಅಗ್ನೇ । ಯಜ್ಞಂ । ಉಪಯಂತಿ । ವಾಜಿನಃ । ನಿತ್ಯೇ । ತೋಕೇ । ದೀದಿವಾಂಸಂ । ಸ್ವೇ । ದಮೇ ॥ ೧೧ ॥

ಸಾಯಣಭಾಷ್ಯಂ

ಹೇ ಅಗ್ನೇ ಸಹಸ್ಯ ಶತ್ರೂಣಾಮಭಿಭವಿತರ್ಬಲಪ್ರಭವ ವಾ ಪ್ರಶಂಸ್ಯಃ ಸ್ತುತ್ಯಃ ಸ ತ್ವಂ ನೋಽಸ್ಮದೀಯಂ ಸ್ತೋತ್ರಾದಿಕಂ ಬೋಧಿ । ಬುಧ್ಯಸ್ವ । ಸ ಇತ್ಯುಕ್ತಂ ಕ ಇತ್ಯಾಹ । ಯಸ್ಮಿನ್ನಗ್ನೌ

**ಸುಜಾತಾಃ ಶೋಭನಜನನಾಃ ಸೂರಯಃ ಸ್ತೋತಾರ ಋತ್ವಿಜ ಇಷಯಂತ । ಗಮಯಂತಿ ಸ್ತೋತ್ರಾಣಿ । ಕಿಂಚ ಹೇ ಅಗ್ನೇ ಯಜ್ಞಂ ಯಜನೀಯಂ ಯಂ ವಾಜಿನೋ ಹವಿರ್ಲಕ್ಷಣಾನ್ನವಂತೋ ಯಜಮಾನಾ ನಿತ್ಯೇ ತೋಕ ಔರಸೇ ಪುತ್ರೇ ನಿಮಿತ್ತಭೂತೇ ಸತಿ । ಯದ್ವಾ ತಸ್ಮಿನ್ಯಥಾ ದೀಪ್ಯತೇ । ಪುತ್ರಗೃಹೇ ಯಥಾ ಪಿತ್ರಾ ದೀಪ್ಯತೇ ತದ್ವತ್ ಸ್ವೇ ದಮೇ ಸ್ವಕೀಯೇ ಯಾಗಗೃಹೇ ಸವನೀಯಾದಿಸ್ಥಾನೇ ದೀದಿವಾಂಸಂ ದೀಪ್ಯಮಾನಮುಪಯಂತಿ ಹವಿಃಸ್ತೋತ್ರಾದಿನಾ । ಸ ಬೋಧೀತ್ಯನ್ವಯಃ ॥**

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ಯಜ್ಞಂ**—ಪೂಜಾರ್ಹನೂ । **ದೀದಿವಾಂಸಂ**—ಪ್ರಕಾಶಮಾನನೂ ಆದ **ಯಂ**—ಯಾವ ನಿನ್ನನ್ನು । **ವಾಜಿನಃ**—ಅನ್ನವಂತರಾದ ಯಜಮಾನರು । **ನಿತ್ಯೇ ತೋಕೇ**—ಶಾಶ್ವತವಾದ ಪುತ್ರಾದಿ ಸಂಪತ್ತಿಗೋಸ್ಕರ । **ಸ್ವೇ ದಮೇ**—ತಮ್ಮ ಯಾಗಗೃಹದಲ್ಲಿ । **ಉಪಯಂತಿ**—(ಸ್ತೋತ್ರಾದಿಗಳಿಂದ) ಸಮೀಪಿಸುತ್ತಾರೆಯೋ (ಮತ್ತು) । **ಯಸ್ಮಿನ್**—ಯಾವ ನಿನ್ನಲ್ಲಿ । **ಸುಜಾತಾಃ**—ಶ್ರೇಷ್ಠವಾದ ಉತ್ಪತ್ತಿಯುಳ್ಳ । **ಸೂರಯಃ**—ಸ್ತೋತೃಗಳು । **ಇಷಯಂತ**—ತಮ್ಮಸ್ತುತಿಗಳನ್ನರ್ಪಿಸುತ್ತಾರೆಯೋ ಅಂತಹ । **ಸಹಸ್ಯ**—ಶಕ್ತಿಯುತನಾದ ಅಗ್ನಿಯೇ । **ಪ್ರಶಂಸ್ಯಃ ಸಃ**—ಸ್ತುತ್ಯರ್ಹನಾದ ನೀನು । **ನಃ**—ನಮ್ಮ ಸೋತ್ರಾದಿಗಳನ್ನು । **ಬೋಧಿ**-ತಿಳಿ ।

ಭಾವಾರ್ಥ

ಶಕ್ತಿಯುತನಾದ ಎಲೈ ಅಗ್ನಿಯೇ, ಪೂಜಾರ್ಹನೂ, ಪ್ರಕಾಶಮಾನನೂ ಆದ ಯಾವ ನಿನ್ನನ್ನು ಅನ್ನವಂತರಾದ ಯಜಮಾನರು ಶಾಶ್ವತವಾದ ಪುತ್ರಾದಿಸಂಪತ್ತಿಗೋಸ್ಕರ ತಮ್ಮ ಯಾಗಗೃಹದಲ್ಲಿ ಸ್ತೋತ್ರಾದಿಗಳಿಂದ ಸಮೀಪಿಸುತ್ತಾರೆಯೋ ಮತ್ತು ಯಾವ ನಿನ್ನಲ್ಲಿ ಶ್ರೇಷ್ಠವಾದ ಜನ್ಮವುಳ್ಳ ಸ್ತೋತೃಗಳು ತಮ್ಮ ಸ್ತುತಿಗಳನ್ನರ್ಪಿಸುತ್ತಾರೆಯೋ ಅಂತಹವನೂ ಮತ್ತು ಸ್ತುತ್ಯರ್ಹನೂ ಆದ ನೀನು ನಮ್ಮ ಸ್ತೋತ್ರಾದಿಗಳನ್ನು ತಿಳಿ.

English Translation

Vigorous Agni, hear (our prayers); for you are he who is to be lauded; to whom the well-born priests address (their hymns); and whom, entitled to worship, and radiant in your own abode, the offerers of the oblation approach, for the sake of never-failing posterity.

ವಿಶೇಷವಿಷಯಗಳು

ಅಗ್ನಿಯು **ಶತ್ರೂಣಾಮಭಿಭವಿತಃ ಬಲಪ್ರಭವ ವಾ** ಶತ್ರುಗಳನ್ನು ತಿರಸ್ಕರಿಸುವವನು, ಅಥವಾ ಋತ್ವಿಜರ ಬಾಹುಗಳ ಬಲದಿಂದ ಅರಣಿಯಲ್ಲಿ ಮಥಿತನಾಗಿ ಉತ್ಪತ್ತಿಯನ್ನು ಹೊಂದಿದವನು ಎಂದು **ಸಹಸ್ಯ** ಪದಕ್ಕೆ ಅರ್ಥವನ್ನು ಹೇಳಿದ್ದಾರೆ. ಮತ್ತು ಈ ಅಗ್ನಿದೇವನು ಋತ್ವಿಜರು ಮತ್ತು ಯಜಮಾನರಾದ ನಾವು ಮಾಡುವ ಸ್ತೋತ್ರಾದಿಗಳನ್ನು ತಿಳಿದುಕೊಳ್ಳಲಿ ಮತ್ತು ಬಹಳ ಪ್ರಭಾವದಿಂದ ಕೂಡಿರುವ ಈ ಅಗ್ನಿದೇವನನ್ನು ಪೂಜಿಸಲು ಅರ್ಹತೆಯನ್ನು ಹೊಂದಿ ಭೂಮಿಯಲ್ಲಿ ಉತ್ಪನ್ನರಾದ ಋತ್ವಿಜರೇ ಮೊದಲಾದವರು ಪಠಿಸುವ ಸ್ತೋತ್ರಾದಿಗಳು ಈ ದೇವನನ್ನೇ ಹೊಂದಲಿ ಎಂಬ ಋತ್ವಿಜರ ಪ್ರಾರ್ಥನೆಯು ಆಶಂಸಿತವಾಗಿದೆ.

ವಾಜಿನಃ ಯಜ್ಞಂ ನಿತ್ಯೇ ತೋಕೇ ಸ್ವೇ ದಮೇ ಉಪಯಂತಿ—ಈ ವಾಕ್ಯಕ್ಕೆ ಎರಡು ವಿಧವಾದ ಅರ್ಥವನ್ನು ವಿವರಿಸಲಾಗಿದೆ. ಇಲ್ಲಿ ಪುತ್ರವಾಚಿಯಾದ ತೋಕ ಶಬ್ದವು ಉಪಾತ್ತವಾಗಿರುವುದರಿಂದ ಹವಿರ್ಲಕ್ಷಣಾನ್ನ-ವಂತೋ ಯಜಮಾನಾಃ ಔರಸೇ ಪುತ್ರೇ ನಿಮಿತ್ತಭೂತೇ ಸತಿ ಯದ್ವಾ ತಸ್ಮಿನ್ ಯಥಾ ದೀಪ್ಯತೇ ಹವಿಸ್ಸಿನ ರೂಪವಾದ ಅನ್ನವನ್ನು ಹೊಂದಿರುವ ಯಜಮಾನರು ಪುತ್ರಪ್ರಾಪ್ತಿಗಾಗಿ ನಿನ್ನನ್ನು (ಅಗ್ನಿಯನ್ನು) ಸಮೀಪಿಸುತ್ತಾರೆ ಎಂದೂ, ಪುತ್ರಗೃಹೇ ಪಿತಾ ಯಥಾ ದೀಪ್ಯತೇ ತದ್ವತ್ ಮಗನ ಮನೆಯಲ್ಲಿ ತಂದೆಯು ಪ್ರಕಾಶಿಸುವಂತೆ ಇರುವ ನಿನ್ನನ್ನು ಸಮೀಪಿಸುತ್ತಾರೆ ಎಂದೂ ಅರ್ಥಮಾಡಿ ಅಗ್ನಿಯ ವಾಸಸ್ಥಾನವಾದ ಯಾಗಭೂಮಿಗಳಲ್ಲಿಯೂ ಸವನಪ್ರದೇಶಗಳಲ್ಲಿಯೂ ಋತ್ವಿಜರು ಹವಿಸ್ಸಿನ ಅರ್ಪಣೆಗಳಿಂದಲೂ ಸ್ತೋತ್ರಗಳಿಂದಲೂ ಅಗ್ನಿಯನ್ನು ಸಮೀಪಿಸುವರು ಎಂದು ವಿವರಿಸಿದೆ.

ವಾಜಶಬ್ದವು ಯಾಸ್ಕರಿಂದ ಅನ್ನ, ಬಲ ಇವೇ ಮೊದಲಾದ ಅನೇಕಾರ್ಥಗಳಲ್ಲಿ ಪಠಿತವಾಗಿದೆ.

———— :o: ————

ಸಂಹಿತಾಪಾಠಃ

ಉಭಯಾಸೋ ಜಾತವೇದಃ ಸ್ಯಾಮ ತೇ ಸ್ತೋತಾರೋ ಅಗ್ನೇ ಸೂರಯಶ್ಚ ಶರ್ಮಣಿ ।
ವಸ್ವೋ ರಾಯಃ ಪುರುಶ್ಚಂದ್ರಸ್ಯ ಭೂಯಸಃ ಪ್ರಜಾವತಃ ಸ್ವಪತ್ಯಸ್ಯ ಶಗ್ಧಿ ನಃ ॥ ೧೨ ॥

ಪದಪಾಠಃ

ಉಭಯಾಸಃ । ಜಾತऽವೇದಃ । ಸ್ಯಾಮ । ತೇ । ಸ್ತೋತಾರಃ । ಅಗ್ನೇ । ಸೂರಯಃ । ಚ । ಶರ್ಮಣಿ ।
ವಸ್ವಃ । ರಾಯಃ । ಪುರುऽಚಂದ್ರಸ್ಯ । ಭೂಯಸಃ । ಪ್ರಜಾऽವತಃ । ಸುऽಅಪತ್ಯಸ್ಯ । ಶಗ್ಧಿ । ನಃ ॥ ೧೨ ॥

ಸಾಯಣಭಾಷ್ಯಂ

ಹೇ ಜಾತವೇದೋ ಜಾತಾನಾಂ ವೇದಿತರಗ್ನೇ ಸ್ತೋತಾರಸ್ತ್ವಾಂ ಸ್ತುವಂತ ಋತ್ವಿಜಃ ಸೂರಯೋ ಮೇಧಾವಿನೋ ಯಜಮಾನಾಶ್ಚೇತ್ಯುಭಯಾಸಃ । ಉಭಯೇ ವಯಂ ಶರ್ಮಣಿ ಸುಖೇ ನಿಮಿತ್ತಭೂತೇ ಸತಿ ತೇ ತ್ವತ್ಸಂಬಂಧಿನಃ ಸ್ಯಾಮ । ಭವೇಮ । ಯದ್ವಾ ತೇ ಶರ್ಮಣಿ ಸ್ಯಾಮ । ತ್ವಂ ಚ ನೋಽಸ್ಮಾಕಂ ವಸ್ವೋ ನಿವಾಸಹೇತೋರ್ವರ್ಸಿಷ್ಠಸ್ಯ ರಾಯೋ ಗವಾದಿಧನಸ್ಯ ಪುರುಶ್ಚಂದ್ರಸ್ಯಾತಿಶಯೇನಾಹ್ಲಾದಕಸ್ಯ ಬಹುಹಿರಣ್ಯೋಪೇತಸ್ಯ ವಾ ಭೂಯಸಃ ಪ್ರಭೂತಸ್ಯ ಪ್ರಜಾವತೋ ಭೃತ್ಯಾದ್ಯುಪೇತಸ್ಯ ಪುತ್ರಾದಿ-ಭೋಗಪರ್ಯಾಪ್ತಸ್ಯ ವಾ ಸ್ವಪತ್ಯಸ್ಯ ಶೋಭನಪುತ್ರಸ್ಯ । ಈದೃಗ್ರೂಪಂ ಧನಂ ನೋಽಸ್ಮಭ್ಯಂ ಶಗ್ಧಿ । ದೇಹಿ । ದಾತುಂ ಶಕ್ತೋ ಭವಸಿ ॥

ಪ್ರತಿಪದಾರ್ಥ

**ಜಾತವೇದಃ**—ಜಾತಪ್ರಜ್ಞನಾದ | **ಅಗ್ನೇ**—ಎಲೈ ಅಗ್ನಿಯೇ | **ಸ್ತೋತಾರಃ**—ಸ್ತುತಿಸತಕ್ಕ ಋತ್ವಿಕ್ಕುಗಳೂ | **ಸೂರಯಶ್ಚ**—ಮೇಧಾವಿಗಳಾದ ಯಜಮಾನರೂ | **ಉಭಯಾಸಃ**—ಇಬ್ಬರೂ ಸಹ | **ಶರ್ಮಣಿ**—ಸುಖವನ್ನು ಪಡೆಯುವ ನಿಮಿತ್ತವಾಗಿ | **ತೇ**—ನಿನ್ನ ಸೇವೆಯಲ್ಲಿ | **ಸ್ಯಾಮ**—ಇರುವೆವು (ನಮಗೆ) | **ವಸ್ವಃ**—ನಿವಾಸಯೋಗ್ಯವಾದುದೂ | **ರಾಯಃ**—ಗವಾಧಿಧನದಿಂದ ಕೂಡಿದುದೂ | **ಪುರುಶ್ಚಂದ್ರಸ್ಯ**—ಅತಿಶಯವಾಗಿ ಆಹ್ಲಾದಕವಾದುದೂ | **ಭೂಯಸಃ**—ಪ್ರಭೂತವಾದುದೂ | **ಪ್ರಜಾವತಃ**—ಭೃತ್ಯಾದಿಗಳಿಂದ ಕೂಡಿದುದೂ | **ಸ್ವಪತ್ಯಸ್ಯ**—ಶ್ರೇಷ್ಠವಾದ ಪುತ್ರಯುಕ್ತವಾದುದೂ ಆದ ಧನವನ್ನು | **ನಃ**—ನಮಗೆ | **ಶಗ್ಧಿ**—ಕೊಡು.

ಭಾವಾರ್ಥ

ಜಾತಪ್ರಜ್ಞನಾದ ಎಲೈ ಅಗ್ನಿಯೇ, ಸ್ತುತಿಕಾರರಾದ ಋತ್ವಿಕ್ಕುಗಳೂ ಮೇಧಾವಿಗಳಾದ ಯಜಮಾನರೂ ಸೇರಿಕೊಂಡು ಸುಖವನ್ನು ಪಡೆಯುವ ನಿಮಿತ್ತವಾಗಿ ನಿನ್ನ ಸೇವೆಯಲ್ಲಿ ಇರುವೆವು. ನಮಗೆ ನಿವಾಸಯೋಗ್ಯವಾದುದೂ, ಗವಾದಿಧನದಿಂದ ಕೂಡಿದುದೂ, ಅತಿಶಯವಾಗಿ ಆಹ್ಲಾದಕವಾದುದೂ, ಭೃತ್ಯಾದಿಗಳಿಂದ ಕೂಡಿದುದೂ ಶ್ರೇಷ್ಠವಾದ ಪುತ್ರಯುಕ್ತವಾದುದೂ ಆದ ಧನವನ್ನು ಕೊಡು.

## English Translation

Agni, knowing all that is born, may we, both adorers and priests, be yours for the sake of felicity ; and do you bestow upon us wealth of dwellings of cattle, of much gold, of many dependants, and virtuous offspring.

ವಿಶೇಷವಿಷಯಗಳು

ಇಲ್ಲಿ ಅಗ್ನಿಯನ್ನು ಜಾತವೇದಃ ಎಂಬ ಶಬ್ದದಿಂದ ಸಂಬೋಧಿಸಿದೆ. ಜಾತವೇದಶ್ಶಬ್ದದ ಅರ್ಥವು ಬಹಳ ಕಡೆಗಳಲ್ಲಿ ವಿವರಿಸಲಾಗಿದೆ.

(ಹೇ) **ಜಾತವೇದಃ ಅಗ್ನೇ ಸ್ತೋತಾರಃ ಸೂರಯಶ್ಚ ಉಭಯಾಸಃ**—ಜಾತವೇದಃ ಎಂಬ ಶಬ್ದದ ಅರ್ಥವನ್ನು ನಾವು ಹಿಂದೆಯೇ ವಿವರಿಸಿದ್ದೇವೆ. ಈ ಶಬ್ದಕ್ಕೆ ಎರಡುವಿಧವಾದ ಅರ್ಥವಿದೆ. ಹುಟ್ಟುವ ಅಥವಾ ಹುಟ್ಟಿರುವ ಸಮಸ್ತ ಪ್ರಾಣಿಗಳನ್ನೂ (ಅಥವಾ ಪ್ರಾಣಿಗಳ ವಿಷಯವನ್ನು) ತಿಳಿದಿರುವ ಅಗ್ನಿಯೆಂದು ಒಂದು ಅರ್ಥವೂ, ಹುಟ್ಟಿರುವ ಸಮಸ್ತ ಪ್ರಾಣಿಗಳೂ ಅಗ್ನಿಯನ್ನು ತಿಳಿದಿರುವುವು ಎಂದು ಇನ್ನೊಂದು ಅರ್ಥವೂ ಸಾಧ್ಯವಾಗುವುದು. **ಸ್ತೋತಾರಃ** ಎಂಬ ಶಬ್ದಕ್ಕೆ ಸ್ತೋತ್ರಮಾಡುವ ಋತ್ವಿಗ್ಜನರೆಂದೂ, **ಸೂರಯಃ** ಎಂಬ ಶಬ್ದಕ್ಕೆ ಮೇಧಾವಿಗಳಾದ ಯಜಮಾನರೆಂದೂ ಭಾಷ್ಯಕಾರರು ಅರ್ಥವಿವರಣೆ ಮಾಡಿರುವರು ಆದರೆ ಅಗ್ನಿಯನ್ನು ಸ್ತೋತ್ರಮಾಡತಕ್ಕವರು ಋತ್ವಿಗ್ಜನರಾಗಿಯೇ ಇರಬೇಕೆಂಬ ನಿಯಮವೇನೂ ಇಲ್ಲ. ಅದರಂತೆ **ಸೂರಯಃ** ಎಂಬ ಶಬ್ದದಿಂದ ಸೂಚಿತವಾಗುವ ಮೇಧಾವಿ ಜನರು (ಬುದ್ಧಿವಂತರು) ಯಜ್ಞಮಾಡುವ ಯಜಮಾನರಾಗಿಯೇ ಇರಬೇಕೆಂಬ ನಿಯಮವೂ ಇಲ್ಲ ಆದರೆ ಭಾಷ್ಯಕಾರರು, ಋತ್ವಿಗ್ಜನರು, ಯಜಮಾನರು ಎಂದು ಹೇಳಿ ಒಂದು ವಿಧವಾದ ಅರ್ಥವನ್ನು ಹೊಂದಿಸಿ ವಿವರಣೆಮಾಡಿರುವುದರಲ್ಲಿ ತಪ್ಪೇನೂ ಇಲ್ಲ.

ಈ ಋಕ್ಕಿನ ಉತ್ತರಾರ್ಧದಲ್ಲಿ ವಾಸಸ್ಥಾನವೇ ಮೊದಲಾದ ನಾಲ್ಕುವಿಧ ಅನುಕೂಲಗಳಿಗಾಗಿ ಅಗ್ನಿಯನ್ನು ಪ್ರಾರ್ಥಿಸಲಾಗಿದೆ. ವಸ್ವಃ ನಿವಾಸಹೇತೋರ್ವರ್ಸಿಷ್ಠಸ್ಯ—ವಾಸಮಾಡಲು ಅನುಕೂಲವಾದ ಮನೆ; ರಾಯಃ ಗವಾದಿಧನಸ್ಯ—ಗೋವುಗಳೇ ಮೊದಲಾದ ಪಶುಸಂಪತ್ತು; ಪುರುಶ್ಚಂದ್ರಸ್ಯ ಅತಿಶಯೇನಾಹ್ಲಾದಕಸ್ಯ ಬಹುಹಿರಣ್ಯೋಪೇತಸ್ಯ ವಾ—ಬಹಳ ಆಹ್ಲಾದಕರವಾಗಿರುವ ಎಂದರೆ ಬಹಳವಾದ ಸುವರ್ಣದಿಂದ ಕೂಡಿದ ಧನವು; ಭೂಯಸಃ ಪ್ರಜಾವತಃ ಭೃತ್ಯಾದ್ಯುಪೇತಸ್ಯ—ಅನೇಕ ಭೃತ್ಯರೇ ಮೊದಲಾದ ಆಶ್ರಿತ ಜನಗಳು; ಸ್ವಪತ್ಯಸ್ಯ ಶೋಭನಪುತ್ರಸ್ಯ—ಒಳ್ಳೆಯ ಮಕ್ಕಳು, ಮೊಮ್ಮಕ್ಕಳು ಮುಂತಾದ ಸಂತತಿಯು; ಇವುಗಳನ್ನೆಲ್ಲಾ ನಮಗೆ ಕೊಡಬೇಕೆಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ.

———:O:———

ಸಂಹಿತಾಪಾಠಃ

ಯೇ ಸ್ತೋತೃಭ್ಯೋ ಗೋಅಗ್ರಾಮಶ್ವಪೇಶಸಮಗ್ನೇ ರಾತಿಮುಪಸೃಜಂತಿ ಸೂರಯಃ ।

ಅಸ್ಮಾಞ್ಚ ತಾಂಶ್ಚ ಪ್ರ ಹಿ ನೇಷಿ ವಸ್ಯ ಆ ಬೃಹದ್ವದೇಮ ವಿದಥೇ ಸುವೀರಾಃ ॥ ೧೩ ॥

॥ ಪದಪಾಠಃ ॥

ಯೇ । ಸ್ತೋತೃಽಭ್ಯಃ । ಗೋಽಅಗ್ರಾಂ । ಅಶ್ವಽಪೇಶಸಂ । ಅಗ್ನೇ । ರಾತಿಂ । ಉಪಽಸೃಜಂತಿ । ಸೂರಯಃ ।

ಅಸ್ಮಾನ್ । ಚ । ತಾನ್ । ಚ । ಪ್ರ । ಹಿ । ನೇಷಿ । ವಸ್ಯಃ । ಆ । ಬೃಹತ್ । ವದೇಮ । ವಿದಥೇ । ಸುಽವೀರಾಃ ॥ ೧೩ ॥

ಸಾಯಣಭಾಷ್ಯಂ

ಅನಯಾ ಹೋತಾ ಸ್ತುತಿನಿಗಮವ್ಯಾಜೇನಾಭಿಮತಮಾಶಾಸ್ತೇ । ಹೇ ಅಗ್ನೇ ಸೂರಯೋ ಮೇಧಾವಿನಃ ಪ್ರೇರಯಿತಾರೋ ವಾ ಯಜಮಾನಾಃ ಸ್ತೋತೃಭ್ಯಃ ಸ್ತುತಿಕರ್ತೃಭ್ಯೋ ಗೋಅಗ್ರಾಂ ಗಾವೋಽಗ್ರಗಾಮಿನ್ಯೋ ಯಸ್ಯಾಸ್ತಾದೃಶೀಂ ಗೋಪ್ರಮುಖಾಮಶ್ವಪೇಶಸಂ ॥ ಪೇಶ ಇತಿ ರೂಪನಾಮ ॥ ಅಶ್ವೇನ ನಿರೂಪಣೀಯಾಂ । ಏತದ್ದ್ವಯಸ್ಯ ಪ್ರಾಧಾನ್ಯಾಭಿಪ್ರಾಯಂ । ಗೌಶ್ಚಾಶ್ವಶ್ಚಾಜಾಶ್ಚೇತಿ ದಕ್ಷಿಣಾಪರಿಗಣನೇಷು ಗವಾಶ್ವಯೋಃ ಪ್ರಾಥಮ್ಯಾತ್ । ತಾದೃಶೀಂ ರಾತಿಮುಪಸೃಜಂತಿ । ದದತೇ । ತಾನ್ಯಜಮಾನಾನಸ್ಮಾಂಶ್ಚರ್ತ್ವಿಜೋ ವಸ್ಯೋ ವಸೀಯಃ ಶ್ರೇಷ್ಠಂ ಸ್ವರ್ಗಾದಿಸ್ಥಾನಂ ಆ ಸರ್ವತಃ ಪ್ರ ಹಿ ನೇಷಿ । ಪ್ರಕರ್ಷೇಣ ನಯಸಿ ಖಲು । ನಯೇತ್ಯರ್ಥಃ । ಹಿ ಪ್ರಸಿದ್ಧೌ । ವಯಂ ಚ ಸುವೀರಾಃ ಶೋಭನಪುತ್ರಾದಿಸಹಿತಾ ವಿದಥೇ ಯಜ್ಞೇ ಬೃಹನ್ಮಹನ್ಮಂತ್ರಜಾತಂ ವದೇಮ । ಉಚ್ಚಾರಯಾಮಃ । ಸ್ತುಮ ಇತ್ಯರ್ಥಃ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ಯೇ**—ಯಾರು । **ಸೂರಯಃ**—ಸದ್ಬುದ್ಧಿಯಿಂದ ಪ್ರೇರಿತರಾಗಿದ್ದಾರೆಯೋ ಅಂತಹ ಯಜಮಾನರು । **ಸ್ತೋತೃಭ್ಯಃ**—ಸ್ತುತಿಕರ್ತರಿಗೆ । **ಗೋಅಗ್ರಾಂ**—ಗೋವುಗಳೇ ಮುಖ್ಯವಾಗಿರುವುದೂ । **ಅಶ್ವಪೇಶಸಂ**—ಅಶ್ವದಿಂದ ನಿರೂಪಿಸಲ್ಪಡುವುದೂ ಆದ । **ರಾತಿಂ**—ದಾನವನ್ನು । **ಉಪಸೃಜಂತಿ**—ಕೊಡುತ್ತಾರೆಯೋ ಅಂತಹ। **ತಾಂಶ್ಚ**—ಯಜಮಾನರನ್ನೂ। **ಅಸ್ಮಾಂಶ್ಚ**—ಋತ್ವಿಕ್ಕುಗಳಾದ ನಮ್ಮನ್ನೂ। **ವಸ್ಯಃ**—ಉತ್ತಮವಾದಸ್ವರ್ಗಾದಿಸ್ಥಾನಕ್ಕೆ । **ಅಪ್ರಹಿನೇಷಿ**—ಅತಿಶಯವಾದ ರೀತಿಯಲ್ಲಿ ಕರೆದುಕೊಂಡು ಹೋಗು । **ಸುವೀರಾಃ**—ಶ್ರೇಷ್ಠವಾದಪುತ್ರಾದಿಗಳಿಂದ ಕೂಡಿದ ನಾವು । **ವಿದಥೇ**—ಯಜ್ಞದಲ್ಲಿ । **ಬೃಹತ್**—ಮಹತ್ಪೂರಿತವಾದ ಮಂತ್ರವನ್ನು ।**ವದೇಮ**—ಪಠಿಸುವೆವು ।

ಭಾವಾರ್ಥ

ಎಲೈ ಅಗ್ನಿಯೇ, ಸದ್ಬುದ್ಧಿಯಿಂದ ಪ್ರೇರಿತರಾದ ಯಜಮಾನರು ಸ್ತುತಿಕರ್ತರಿಗೆ ಗೋವುಗಳಿಂದಲೂ ಅಶ್ವಗಳಿಂದಲೂ ಕೂಡಿದ ದಾನವನ್ನು ಕೊಡುತ್ತಾರೆ ಆ ಯಜಮಾನರನ್ನೂ ಋತ್ವಿಕ್ಕುಗಳಾದ ನಮ್ಮನ್ನೂ ಉತ್ತಮವಾದ ಸ್ವರ್ಗಾದಿಸ್ಥಾನಕ್ಕೆ ಅತಿಶಯವಾದ ರೀತಿಯಲ್ಲಿ ಕರೆದುಕೊಂಡು ಹೋಗು. ಶ್ರೇಷ್ಠವಾದ ಪುತ್ರಾದಿಗಳಿಂದ ಕೂಡಿದ ನಾವು ಯಜ್ಞದಲ್ಲಿ ಮಹತ್ಪೂರಿತವಾದ ಮಂತ್ರವನ್ನು ಪಠಿಸುವೆವು.

English Translation

The pious are they who present, as a gift, to the reciters of your praises an excellent cow and an elegant horse : do you, Agni, lead us and them to the best of abodes, (or heaven), that we and our worthy descendants may repeat the solemn prayer to you at the sacrifice.

ವಿಶೇಷವಿಷಯಗಳು

ಈ ಋಕ್ಕು ಮೊದಲನೆಯ ಸೂಕ್ತದ ಕೊನೆಯಲ್ಲಿಯೂ (೧೬ನೇ ಋಕ್ಕು) ಪಠಿತವಾಗಿರುವುದರಿಂದ ಅಲ್ಲಿಯೇ ವಿಶೇಷ ವಿಷಯಗಳನ್ನು ವಿವರಿಸಲಾಗಿದೆ. (p. 426 ನೋಡಿ)

## ಮೂರನೆಯ ಸೂಕ್ತವು.

---

**ಸಮಿದ್ಧೋ ಅಗ್ನಿಃ**—ಎಂಬ ಈ ಮೂರನೆಯ ಸೂಕ್ತವು ಈ ಮಂಡಲದಲ್ಲಿ ಆಪ್ರೀಸೂಕ್ತವು. ಆಪ್ರೀಸೂಕ್ತಗಳ ದೇವತೆಗಳ ವಿಷಯವಾಗಿ ನಾವು ಮೊದಲನೆಯ ಮಂಡಲದ ೧೮೮ನೆಯ ಸೂಕ್ತದ (೧೮೮ನೇಯ ಸೂಕ್ತವು ಆಪ್ರೀ ಸೂಕ್ತವೇ) ವಿಶೇಷವಿಷಯುಗಳಲ್ಲಿ (page 227-273) ವಿಸ್ತಾರವಾದ ವಿವರಣೆಯನ್ನು ಬರೆದಿದೇವೆ. ಆ ವಿವರಣೆಗಳೇ ಈ ಸೂಕ್ತದ ೧೧ ಋಕ್ಕುಗಳಲ್ಲಿರುವ ದೇವತೆಗಳಿಗೆ ಅನ್ವಯಿಸುವುದರಿಂದ ಇಲ್ಲಿ ಅದನ್ನು ಮತ್ತೆ ವಿವರಿಸಿಲ್ಲ. ಆದ್ದರಿಂದ ವಾಚಕರು ೧೮೮ನೇ ಸೂಕ್ತದಲ್ಲಿ ವಿವರಿಸಿರುವ ವಿಷಯವನ್ನೇ ಈ ಸೂಕ್ತದ ದೇವತೆಗಳ ವಿಷಯವಾಗಿ ಬರೆದಿರುವಂತೆ ಭಾವಿಸಿ ಓದಿಕೊಳ್ಳಬೇಕು.

ಸಾಯಣಭಾಷ್ಯಂ

**ಸಮಿದ್ಧೋ ಅಗ್ನಿರಿತ್ಯೇಕಾದಶರ್ಚಂ ತೃತೀಯಂ ಸೂಕ್ತಂ ಗಾರ್ತ್ಸಮದಂ ತ್ರೈಷ್ಟುಭಂ। ಸಪ್ತಮೀ ಜಗತೀ । ಸಮಿದ್ಧೋಽಗ್ನಿರಗ್ನಿನಾ ನರಾಶಂಸತನೂನಪಾದಾದಯ ಏಕಾದಶ ಪ್ರಯೋಜದೇವತಾಃ । ಸಮಿದ್ಧ**

ಏಕಾದಶಾಪ್ರಂ ಸಪ್ತಮೀಜಗತೀತ್ಯನುಕ್ರಮಣಿಕಾ ॥ ಪಶೌ ಶುನಕಾನಾಮಿದಮಾಪ್ರೀಸೂಕ್ತಂ। ಗೃತ್ಸ-ಮದಸ್ಯಾಪಿ ಶುನಕತ್ವಾತ್ । ಸಮಿದ್ಧೋ ಅಗ್ನಿರಿತಿ ಶುನಕಾನಾಮಿತಿ ಹಿ ಸೂತ್ರಿತಂ । ಆ. ೩-೨ ॥

ಅನುವಾದವು—**ಸಮಿದ್ಧೋ ಅಗ್ನಿಃ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು ; ತ್ರಿಷ್ಟುಪ್ ಛಂದಸ್ಸು, ಏಳನೆಯ ಋಕ್ಕುಮಾತ್ರ ಜಗತೀಛಂದಸ್ಕವು ಇದು ಆಪ್ರೀ ಸೂಕ್ತವಾದ್ದರಿಂದ ಸಮಿದ್ಧೋಽಗ್ನಿ ಮೊದಲಾದ ಹನ್ನೊಂದು ಪ್ರಯಾಜದೇವತೆಗಳೇ ಈ ಸೂಕ್ತಕ್ಕೆ ದೇವತೆಗಳು. ಅನುಕ್ರಮಣಿಕೆಯಲ್ಲಿ **ಸಮಿದ್ಧ ಏಕಾದ-ಶಾಪ್ರಂ ಸಪ್ತಮೀ ಜಗತೀ** ಎಂದು ಹೇಳಿರುವುದು. ಪಶುಯಾಗದಲ್ಲಿ ಶುನಕಋಷಿವಂಶಸ್ಥರಿಗೆ ಇದು ಆಪ್ರೀ ಸೂಕ್ತವು ಏಕೆಂದರೆ ಗೃತ್ಸಮದನೂ ಆ ಋಷಿಯ ವಂಶಸ್ಥನೇ ಆಗಿರುವುದರಿಂದಲೂ ಆಶ್ವಲಾಯನ ಶ್ರೌತಸೂತ್ರದಲ್ಲಿ ಸಮಿದ್ಧೋ ಅಗ್ನಿರಿತಿ ಶುನಕಾನಾಮಿತಿ ಹಿ ಎಂದು ಸೂತ್ರವಿರುವುದರಿಂದಲೂ (ಆ. ೩-೨) ಶುನವಂಶಸ್ಥರೂ ಈ ಆಪ್ರೀ ಸೂಕ್ತವನ್ನೇ ಉಪಯೋಗಿಸುವರು.

—— ——

॥ ಓಂ ॥

## ಸೂಕ್ತ—೩

॥ ಮಂಡಲ—೨ ॥ ಅನುವಾಕ—೧ ॥ ಸೂಕ್ತ—೩ ॥

॥ ಅಷ್ಟಕ—೨ ॥ ಅಧ್ಯಾಯ—೫ ॥ ವರ್ಗ—೨೨, ೨೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೧೧ ॥

ಋಷಿಃ—ಗೃತ್ಸಮದ (ಅಂಗಿರಸಃ ಶೌನಹೋತ್ರಃ ಪಶ್ಚಾತ್) ಭಾರ್ಗವ ಶೌನಕಃ।
ಆಪ್ರೀ ಸೂಕ್ತಂ ॥

ದೇವತಾ—೧. ಇಧ್ಮಃ ಸಮಿದ್ಧೋಽಗ್ನಿರ್ವಾ । ೨. ನರಾಶಂಸಃ । ೩. ಇಳಃ । ೪. ಬರ್ಹಿಃ । ೫. ದೇವೀರ್ದ್ವಾರಃ । ೬. ಉಷಾಸಾನಕ್ತಾ । ೭. ದೈವ್ಯೌ ಹೋತಾರೌ ಪ್ರಚೇತಸೌ । ೮. ತಿಸ್ರೋ ದೇವ್ಯಃ ಸರಸ್ವತೀಳಾ ಭಾರತ್ಯಃ । ೯. ತ್ವಷ್ಟಾ । ೧೦. ವನಸ್ಪತಿಃ । ೧೧. ಸ್ವಾಹಾಕೃತಯಃ ॥

ಛಂದಃ—೧-೬, ೮-೧೧. ತ್ರಿಷ್ಟುಪ್ । ೭, ಜಗತೀ ॥

——:o:——

ಸಂಹಿತಾಪಾಠಃ

ಸಮಿ॑ದ್ಧೋ ಅ॒ಗ್ನಿರ್ನಿಹಿ॑ತಃ ಪೃಥಿ॒ವ್ಯಾಂ ಪ್ರ॒ತ್ಯಙ್ ವಿಶ್ವಾ॑ನಿ॒ ಭುವ॑ನಾನ್ಯಸ್ಥಾತ್।
ಹೋತಾ॑ ಪಾವ॒ಕಃ ಪ್ರ॒ದಿವಃ॑ ಸುಮೇ॒ಧಾ ದೇ॒ವೋ ದೇ॒ವಾನ್ಯ॑ಜತ್ವ॒ಗ್ನಿರರ್ಹ॑ನ್ ॥ ೧ ॥

ಪದಪಾಠಃ

ಸಂऽಇದ್ಧಃ । ಅಗ್ನಿಃ । ನಿऽಹಿತಃ । ಪೃಥಿವ್ಯಾಂ । ಪ್ರತ್ಯಙ್ । ವಿಶ್ವಾನಿ । ಭುವನಾನಿ । ಅಸ್ಥಾತ್ ।

ಹೋತಾ । ಪಾವಕಃ । ಪ್ರऽದಿವಃ । ಸುऽಮೇಧಾಃ । ದೇವಃ । ದೇವಾನ್ । ಯಜತು । ಅಗ್ನಿಃ । ಅರ್ಹನ್ ॥ ೧ ॥

ಸಾಯಣಭಾಷ್ಯಂ

ಪೃಥಿವ್ಯಾಂ ವೇದಿಲಕ್ಷಣಾಯಾಂ ಸಮಿದ್ಧಃ ಸಮ್ಯಕ್ ದೀಪ್ತ ಏತನ್ನಾಮಕೋऽಗ್ನಿರ್ನಿಹಿತಃ ಸ್ಥಾಪಿತಃ ಸನ್ ವಿಶ್ವಾನಿ ಸರ್ವಾಣಿ ಭುವನಾನಿ ಭೂತಜಾತಾನಿ ಪ್ರತ್ಯಙ್ ಅಭಿಮುಖಃ ಸನ್ ಅಸ್ಥಾತ್ । ತಿಷ್ಠತಿ । ಯಥಾ ಸರ್ವೇ ಜನಾಃ ಪಶ್ಯಂತಿ ತಥಾ ಪ್ರವೃದ್ಧೋऽಭವದಿತ್ಯರ್ಥಃ । ಕಿಂಚ ಸೋऽಗ್ನಿರ್ಹೋತಾ ಹೋಮನಿಷ್ಪಾದಕೋ ದೇವಾನಾಮಾಹ್ವಾತಾ ವಾ ಪಾವಕಃ ಶೋಧಕಃ ಪ್ರದಿವಃ ಪುರಾಣಃ ಸುಮೇಧಾಃ ಶೋಭನಪ್ರಜ್ಞೋ ದೇವೋ ದ್ಯೋತಮಾನಃ । ಏವಂ ಮಹಾನುಭಾವೋऽಗ್ನಿರರ್ಹನ್ ಯೋಗಯೋಗ್ಯಃ ಸನ್ ದೇವಾನ್ಯಜತು । ಅತ್ರ ಯಷ್ಟವ್ಯಾನಿಂದ್ರಾದೀನ್ಪೂಜಯತು ॥

ಪ್ರತಿಪದಾರ್ಥ

ಹೋತಾ—ಹೋಮಸಂಪಾದಕನೂ । ಪಾವಕಃ—ಶುದ್ಧಿಕಾರಕನೂ । ಪ್ರದಿವಃ—ಪುರಾತನನೂ । ಸುಮೇಧಾಃ—ಶ್ರೇಷ್ಠವಾದ ಪ್ರಜ್ಞೆಯುಳ್ಳವನೂ । ದೇವಃ—ದ್ಯೋತಮಾನನೂ । ಪೃಥಿವ್ಯಾಂ—ವೇದಿರೂಪವಾದ ಪೃಥಿವಿಯಲ್ಲಿ । ಸಮಿದ್ಧಃ—ಚೆನ್ನಾಗಿ ಪ್ರಜ್ವಲಿತನಾದವನೂ (ಸಮಿದ್ಧನೂ) ಆದ । ಅಗ್ನಿಃ—ಅಗ್ನಿಯು । ನಿಹಿತಃ—ಸ್ಥಾಪಿತನಾಗಿ । ವಿಶ್ವಾನಿ—ಸಕಲವಾದ । ಭುವನಾನಿ—ಭೂತಜಾತಗಳನ್ನೂ । ಪ್ರತ್ಯಙ್—ಸಮ್ಮುಖದಲ್ಲಿಟ್ಟುಕೊಂಡು । ಅಸ್ಥಾತ್—ಸ್ಥಿತನಾಗಿದ್ದಾನೆ । ಅಗ್ನಿಃ—ಇಂತಹ ಮಹದ್ಗುಣಗಳುಳ್ಳ ಅಗ್ನಿಯು । ಅರ್ಹನ್—ಯಾಗಕ್ಕೆ ಯೋಗ್ಯನಾಗಿ (ಪೂಜ್ಯನಾಗಿ) ದೇವಾನ್—ದೇವತೆಗಳನ್ನುದ್ದೇಶಿಸಿ । ಯಜತು—ಯಜ್ಞಮಾಡಲಿ.

ಭಾವಾರ್ಥ

ಹೋಮಸಂಪಾದಕನೂ, ಶುದ್ಧಿಕಾರಕನೂ, ಪುರಾತನನೂ, ಶ್ರೇಷ್ಠವಾದ ಪ್ರಜ್ಞೆಯುಳ್ಳವನೂ, ವೇದಿರೂಪವಾದ ಪೃಥಿವಿಯಲ್ಲಿ ಚೆನ್ನಾಗಿ ಪ್ರಜ್ವಲಿತನಾದವನೂ ಆದ ಅಗ್ನಿಯು ಸ್ಥಾಪಿತನಾಗಿ ಸಕಲವಾದ ಭೂತಜಾತಗಳನ್ನೂ ಸಮ್ಮುಖದಲ್ಲಿಟ್ಟುಕೊಂಡು ಸ್ಥಿತನಾಗಿದ್ದಾನೆ. ಇಂತಹ ಮಹದ್ಗುಣಗಳುಳ್ಳ ಅಗ್ನಿಯು ಯಾಗಕ್ಕೆ ಅರ್ಹನಾಗಿದ್ದು ದೇವತೆಗಳನ್ನುದ್ದೇಶಿಸಿ ಯಜ್ಞಮಾಡಲಿ.

English Translation

Agni, the well-kindled, placed upon (the altar of) the earth, stands in the presence of all beings; the invoker (of the gods), the purifier, the ancient the intelligent, the divine: Let the venerable Agni minister to the gods.

ಸಂಹಿತಾಪಾಠಃ

ನರಾಶಂಸಃ ಪ್ರತಿ ಧಾಮಾನ್ಯಂಜನ್ ತಿಸ್ರೋ ದಿವಃ ಪ್ರತಿ ಮಹ್ನಾ ಸ್ವರ್ಚಿಃ।
ಘೃತಪ್ರುಷಾ ಮನಸಾ ಹವ್ಯಮುಂದನ್ಮೂರ್ಧನ್ಯಜ್ಞಸ್ಯ ಸಮನಕ್ತು ದೇವಾನ್ ॥ ೨ ॥

ಪದಪಾಠಃ

ನರಾಶಂಸಃ । ಪ್ರತಿ । ಧಾಮಾನಿ । ಅಂಜನ್ । ತಿಸ್ರಃ । ದಿವಃ । ಪ್ರತಿ । ಮಹ್ನಾ । ಸುಽಅರ್ಚಿಃ ।
ಘೃತಽಪ್ರುಷಾ । ಮನಸಾ । ಹವ್ಯಂ । ಉಂದನ್ । ಮೂರ್ಧನ್ । ಯಜ್ಞಸ್ಯ । ಸಂ । ಅನಕ್ತು । ದೇವಾನ್ ॥ ೨ ॥

ಸಾಯಣಭಾಷ್ಯಂ

ನರಾಶಂಸೋ ನರೈರ್ನೇತೃಭಿರ್ಋತ್ವಿಗ್ಭಿಃ ಶಂಸನೀಯ ಏತನ್ನಾಮಕೋಽಗ್ನಿಃ ಸ್ವರ್ಚಿಃ ಶೋಭನಜ್ವಾಲಃ ಸನ್ ಧಾಮಾನಿ ಸ್ಥಾನಾನ್ಯಾಹುತ್ಯಧಿಕರಣಾನಿ ತೇಜಾಂಸಿ ಪ್ರತಿ ಪ್ರತ್ಯೇಕಂ ಮಹ್ನಾ ಸ್ವಮಹಿಮ್ನಾಂಜನ್ ವ್ಯಕ್ತೀಕುರ್ವನ್ ತಿಸ್ರೋ ದಿವೋ ದ್ಯೋತಮಾನಾಂಸ್ತ್ರೀನ್ ಭೂಮ್ಯಾದಿಲೋಕಾಂಶ್ಚ ಪ್ರತಿ ಪ್ರತ್ಯೇಕಮಂಜನ್ । ಸ್ಥಿತ್ಯಾ ಭೂಮಿಂ ಪ್ರಕಾಶೇನಾಂತರಿಕ್ಷಂ ಹವಿಷ್ಪ್ರಾಪಣೇನ ದಿವಮಿತ್ಯಭಿಪ್ರಾಯಃ । ಯದ್ವಾ ಲೋಕಾನಾಂ ಪ್ರತ್ಯೇಕಂ ತ್ರಿತ್ವೋಪೇತತ್ವಾತ್ ತಿಸ್ರೋ ದಿವ ಇತ್ಯವಿರುದ್ಧಂ । ತಿಸ್ರೋ ದಿವಃ ಪೃಥಿವೀಸ್ತಿಸ್ರಃ । ೮-೫೩-೫ । ಇತ್ಯಾದಿಮಂತ್ರವರ್ಣಾತ್ ತ್ರಯೋ ವಾ ಇಮೇ ತ್ರಿವೃತೋ ಲೋಕಾ ಇತಿ ಬ್ರಾಹ್ಮಣಾಚ್ಚ । ತಥಾ ಘೃತಪ್ರುಷಾ ಘೃತಂ ಸಿಂಚತಾ ಮನಸಾ ಹವ್ಯಮುಂದನ್ ಕ್ಲೇದಯನ್ ಸ್ನಿಗ್ಧೀಕುರ್ವನ್ ಯಜ್ಞಸ್ಯ ಮೂರ್ಧನ್ ಮೂರ್ಧನಿ ಮುಖೇ ಹೋಮಸಮಯೇ ದೇವಾನ್ಯಷ್ಟವ್ಯಾನ್ ಸಮನಕ್ತು । ಸಮ್ಯಕ್ ವ್ಯಕ್ತೀಕರೋತು । ತರ್ಪಯತ್ವಿತ್ಯರ್ಥಃ ॥

ಪ್ರತಿಪದ ರ್ಥ

ನರಾಶಂಸಃ—ಋತ್ವಿಕ್ಕುಗಳಿಂದ ಶಂಸನೀಯನಾದ ನರಾಶಂಸನಾಮಕನಾದ ಅಗ್ನಿಯು । ಸ್ವರ್ಚಿಃ—ಶ್ರೇಷ್ಠವಾದ ಜ್ವಾಲೆಗಳಿಂದ ಕೂಡಿಕೊಂಡು । ಧಾಮಾನಿ—ಆಹುತಿಪಾತ್ರೆಗಳನ್ನು । ಪ್ರತಿ—ಪ್ರತ್ಯೇಕವಾಗಿ । ಮಹ್ನಾ—ತನ್ನ ಮಹಿಮೆಯಿಂದ । ಅಂಜನ್—ಪ್ರಕಾಶಪಡಿಸುತ್ತಲೂ । ತಿಸ್ರಃ ದಿವಃ—ಭೂಮ್ಯಾದಿ ತ್ರಿಲೋಕಗಳನ್ನೂ । ಪ್ರತಿ—ಪ್ರತ್ಯೇಕವಾಗಿ ಪ್ರಕಾಶಪಡಿಸುತ್ತಲೂ । ಘೃತಪ್ರುಷಾ—ಘೃತವನ್ನು ಪ್ರೋಕ್ಷಿಸತಕ್ಕ (ಶ್ರೇಯಸ್ಸನ್ನುಂಟುಮಾಡತಕ್ಕ) । ಮನಸಾ—ಮನಸ್ಸಿನಿಂದ । ಹವ್ಯಂ—ಹವಿಸ್ಸನ್ನು । ಉಂದನ್—ಸ್ನಿಗ್ಧವಾಗುವಂತೆ ಮಾಡುತ್ತಲೂ । ಯಜ್ಞಸ್ಯ—ಯಜ್ಞದ । ಮೂರ್ಧನ್—ಹೋಮಕಾಲದಲ್ಲಿ । ದೇವಾನ್—ದೇವತೆಗಳನ್ನು । ಸಮನಕ್ತು—ತೃಪ್ತಿಪಡಿಸಲಿ.

ಭಾವಾರ್ಥ

ನರಾಶಂಸನಾಮಕನಾದ ಅಗ್ನಿಯು ಶ್ರೇಷ್ಠವಾದ ಜ್ವಾಲೆಗಳಿಂದ ಕೂಡಿ ತನ್ನ ಮಹಿಮೆಯಿಂದ ಆಹುತಿಗಳನ್ನೂ, ಭೂಮ್ಯಾದಿ ತ್ರಿಲೋಕಗಳನ್ನೂ ಪ್ರತ್ಯೇಕವಾಗಿ ಪ್ರಕಾಶಪಡಿಸುತ್ತಲೂ, ಘೃತವನ್ನು ಪ್ರೋಕ್ಷಿಸತಕ್ಕ ಮನಸ್ಸಿನಿಂದ ಹವಿಸ್ಸನ್ನು ಸ್ನಿಗ್ಧವಾಗುವಂತೆ ಮಾಡುತ್ತಲೂ, ಯಜ್ಞದ ಹೋಮಕಾಲದಲ್ಲಿ ದೇವತೆಗಳನ್ನು ತೃಪ್ತಿಪಡಿಸಲಿ.

English Translation

May the bright Narashansa, illumining the receptacles (of the offering) making manifest by his greatness the three radiant (regions), and diffusing the oblation at the season of sacrifice with butter-dispensing purpose, satisfy the gods

ಸಂಹಿತಾಪಾಠಃ

ಈಳಿತೋ ಅಗ್ನೇ ಮನಸಾ ನೋ ಅರ್ಹನ್ದೇವಾನ್ಯಕ್ಷಿ ಮಾನುಷಾತ್ಪೂರ್ವೋ ಅದ್ಯ ।
ಸ ಆ ವಹ ಮರುತಾಂ ಶರ್ಧೋ ಅಚ್ಯುತಮಿಂದ್ರಂ ನರೋ ಬರ್ಹಿಷದಂ ಯಜಧ್ವಂ ॥ ೩ ॥

ಪದಪಾಠಃ

ಈಳಿತಃ । ಅಗ್ನೇ । ಮನಸಾ । ನಃ । ಅರ್ಹನ್ । ದೇವಾನ್ । ಯಕ್ಷಿ । ಮಾನುಷಾತ್ । ಪೂರ್ವಃ । ಅದ್ಯ ।
ಸಃ । ಆ । ವಹ । ಮರುತಾಂ । ಶರ್ಧಃ । ಅಚ್ಯುತಂ । ಇಂದ್ರಂ । ನರಃ । ಬರ್ಹಿಽಸದಂ । ಯಜಧ್ವಂ ॥ ೩ ॥

ಸಾಯಣಭಾಷ್ಯಂ

ಹೇ ಅಗ್ನೇ ಈಳಿತೋಽಸ್ಮಾಭಿಃ ಸ್ತುತಃ ಸನ್ ಮನಸಾಸ್ಮದನುರಕ್ತೇನ ದೇವಾನಾಂ ಯೋಗಬುದ್ಧ್ಯಾ ವಾರ್ಹನ್ ಯೋಗಯೋಗ್ಯಃ ಸನ್ ಮಾನುಷಾದ್ಧೋತುಃ ಪೂರ್ವಃ ಪೂರ್ವಭಾವೀ ನೋಽಸ್ಮದರ್ಥಮದ್ಯಾಸ್ಮಿನ್ದಿನೇ ದೇವಾನ್ ಯಷ್ಟವ್ಯಾನ್ ಯಕ್ಷಿ । ತ್ವಮೇವ ಯಜಸಿ । ಸ ತಾದೃಶೋ ಯಷ್ಟಾತ್ವಮಾವಹ । ಆಕಾರಯ । ಕಾನ್ । ಮರುತಾಂ ಶರ್ಧೋ ಗಣಂ । ಅಚ್ಯುತಮಕ್ಷೀಣಮಿಂದ್ರಂ ತದವಿನಾಭೂತಮಿಂದ್ರಮಪಿ । ಯದ್ವಾ ಮರುದ್ಬಲೋಪೇತಮಿಂದ್ರಂ । ಅನಂತರಂ ಹೇ ನರೋ ನೇತಾರ ಋತ್ವಿಜೋ ಬರ್ಹಿಷದಂ ಬರ್ಹಿಷಿ ಸೀದಂತಂ ತಮಿಂದ್ರಂ ಯಜಧ್ವಂ । ಪೂಜಯಧ್ವಂ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಈಳಿತಃ—ನಮ್ಮಿಂದ ಸ್ತುತನಾಗಿ । ಮನಸಾ—ನಮ್ಮಲ್ಲಿ ಅನುರಕ್ತವಾದ ಮನಸ್ಸಿನಿಂದ । ಅರ್ಹನ್—ಯೋಗಯೋಗ್ಯನಾಗಿ । ಮಾನುಷಾತ್—ಮಾನವನಾದ ಹೋತೃವಿಗಿಂತಲೂ ।

**ಪೂರ್ವಃ**—ಪೂರ್ವಭಾವಿಯಾಗಿ । **ನಃ**—ನಮಗೋಸ್ಕರ । **ಅದ್ಯ**—ಇಂದು । **ದೇವಾನ್**—ಯಾಗಾರ್ಹರಾದ ದೇವತೆಗಳನ್ನುದ್ದೇಶಿಸಿ । **ಯಕ್ಷಿ**—ಯಾಗಮಾಡು । **ಸಃ**—ಅಂತಹ ಪೂಜ್ಯನಾದ ನೀನು । **ಮರುತಾಂ ಶರ್ಧಃ**—ಮರುತ್ತುಗಳ ಸಂಘಾತರೂಪವಾದ ಗುಂಪನ್ನೂ । **ಅಚ್ಯುತಂ**—ಕ್ಷಯರಹಿತನಾದ । **ಇಂದ್ರಂ**—ಇಂದ್ರನನ್ನೂ । **ಆ ವಹ**—ಕರೆದುಕೊಂಡು ಬಾ (ಅನಂತರ) । **ನರಃ**—ಯಜ್ಞನೇತೃಗಳಾದ ಎಲೈ ಋತ್ವಿಕ್ಕುಗಳೇ । **ಬರ್ಹಿಷದಂ**—ದರ್ಭಾಸನದ ಮೇಲೆ ಕುಳಿತಿರುವ ಇಂದ್ರನನ್ನು । **ಯಜಧ್ವಂ**—ಪೂಜಿಸಿ ।

ಭಾವಾರ್ಥ

ಎಲೈ ಅಗ್ನಿಯೇ, ನಮ್ಮಿಂದ ಸ್ತುತನಾದ ನೀನು ನಮ್ಮಲ್ಲಿ ಅನುರಕ್ತವಾದ ಮನಸ್ಸಿನಿಂದ ಯಾಗಯೋಗ್ಯನಾಗಿ ಮಾನವನಾದ ಹೋತೃವಿಗಿಂತಲೂ ಪೂರ್ವಭಾವಿಯಾಗಿ ನಮಗೋಸ್ಕರ ಇಂದು ಯಗಾರ್ಹರಾದ ದೇವತೆಗಳನ್ನುದ್ದೇಶಿಸಿ ಯಾಗಮಾಡು. ಅಂತಹ ಪೂಜ್ಯನಾದ ನೀನು ಮರುತ್ತುಗಳ ಗುಂಪನ್ನೂ ಕ್ಷಯರಹಿತನಾದ ಇಂದ್ರನನ್ನೂ ಕರೆದುಕೊಂಡು ಬಾ. ಅನಂತರ ಯಜ್ಞನೇತೃಗಳಾದ ಎಲೈ ಋತ್ವಿಕ್ಕುಗಳೇ, ದರ್ಭಾಸನದ ಮೇಲೆ ಕುಳಿತಿರುವ ಇಂದ್ರನನ್ನು ಪೂಜಿಸಿ.

## English Translation

Agni, you are the venerable Ilita ; do you, with mind favourably disposed towards us, offer to-day sacrifice to the gods, before the human (ministrant priest) ; as such, bring hither the company of the Maruts, the undecaying Indra, to whom, seated on the sacred grass, do you priests, offer worship.

ಸಂಹಿತಾಪಾಠಃ

ದೇವ ಬರ್ಹಿರ್ವರ್ಧಮಾನಂ ಸುವೀರಂ ಸ್ತೀರ್ಣಂ ರಾಯೇ ಸುಭರಂ ವೇದ್ಯಸ್ಯಾಂ ।
ಘೃತೇನಾಕ್ತಂ ವಸವಃ ಸೀದತೇದಂ ವಿಶ್ವೇ ದೇವಾ ಆದಿತ್ಯಾ ಯಜ್ಞಿಯಾಸಃ ॥ ೪ ॥

ಪದಪಾಠಃ

ದೇವ । ಬರ್ಹಿಃ । ವರ್ಧಮಾನಂ । ಸುವೀರಂ । ಸ್ತೀರ್ಣಂ । ರಾಯೇ । ಸುಽಭರಂ । ವೇದೀ ಇತಿ । ಅಸ್ಯಾಂ । ಘೃತೇನ । ಅಕ್ತಂ । ವಸವಃ । ಸೀದತ । ಇದಂ । ವಿಶ್ವೇ । ದೇವಾಃ । ಆದಿತ್ಯಾಃ । ಯಜ್ಞಿಯಾಸಃ ॥ ೪ ॥

ಸಾಯಣಭಾಷ್ಯಂ

ಹೇ ಬರ್ಹಿರ್ದೇವ ಏತದಭಿಮಾನಿನ್ನಗ್ನೇ ವರ್ಧಮಾನಂ ಸುವೀರಂ ಶೋಭನವೀರಸಂಪಾದಕಂ ಸುಭರಂ ಸುಪೂರ್ಣಂ ಸ್ತೀರ್ಣಮಸ್ಮದೀಯೈರೃತ್ವಿಗ್ಭಿರಾಸ್ತೃತಂ ಭವ । ಕಿಮರ್ಥಂ । ರಾಯೇ

ಧನಾಯ | ಅಸ್ಯಾಂ ವೇದೀ ವೇದ್ಯಾಂ || ಸಪ್ತಮ್ಯರ್ಥೇ ಪ್ರಗೃಹ್ಯಸಂಜ್ಞಾ | ಸಂಹಿತಾಯಾಂ ಯಣಾದೇಶ-ಶ್ಛಾಂದಸಃ || ಘೃತೇನಾಜ್ಯೇನಾಕ್ತಮಿದಂ ಸ್ನಿಗ್ಧಂ ಬರ್ಹಿಃ ಸೀದತ | ಕೇ | ಹೇ ವಸವ ಏತನ್ನಾಮಕಾಃ ಹೇ ವಿಶ್ವೇಸರ್ವೇ ದೇವಾಃ | ಹೇ ಆದಿತ್ಯಾಃ | ಯಜ್ಞಿಯಾಸೋ ಯಜ್ಞಾರ್ಹಾಸ್ತೇ ಯೂಯಮಿದಂ ಬರ್ಹಿರ್ನಿಷೀದತ | ಅಸ್ಮಿನ್ಬರ್ಹಿಷಿ ನಿಷೀದತೇತ್ಯರ್ಥಃ ||

### ಪ್ರತಿಪದಾರ್ಥ

ಬರ್ಹಿಃ ದೇವ—ದೇವತಾತ್ಮನಾದ ಬರ್ಹಿಯೇ | ಅಸ್ಯಾಂ ವೇದೀ— ಈ ವೇದಿಯಲ್ಲಿ | ರಾಯೇ—ಸಂಪತ್ತಿಗಾಗಿ | ವರ್ಧಮಾನಂ—ವೃದ್ಧಿಯನ್ನು ತರತಕ್ಕವನಾಗಿಯೂ | ಸುವೀರಂ—ಶ್ರೇಷ್ಠವಾದ ವೀರ್ಯಸಂಪಾದಕನಾಗಿಯೂ | ಸುಭರಂ—ಸುಪೂರ್ಣನಾಗಿಯೂ | ಸ್ತೀರ್ಣಂ—(ನಮ್ಮಿಂದ) ಆಸ್ತೃತನಾಗಿಯೂ ಆಗಿರು | ಯಜ್ಞಿಯಾಸಃ—ಯಜ್ಞಾರ್ಹರಾದ | ವಸವಃ—ಎಲೈ ವಸುಗಳೇ | ವಿಶ್ವೇ ದೇವಾಃ—ಎಲೈ ವಿಶ್ವೇದೇವತೆಗಳೇ | ಆದಿತ್ಯಾಃ—ಎಲೈ ಆದಿತ್ಯರೇ | ಘೃತೇನ— ಘೃತದಿಂದ | ಅಕ್ತಂ—ಸಿಕ್ತವಾದ | ಇದಂ— ಈ ಬರ್ಹಿಯ ಮೇಲೆ | ಸೀದತ—ಕುಳಿತುಕೊಳ್ಳಿ.

### ಭಾವಾರ್ಥ

ದೇವತಾತ್ಮನಾದ ಬರ್ಹಿಯೇ, ನಮ್ಮ ಸಂಪತ್ತನ್ನು ವೃದ್ಧಿಮಾಡುವವನಾಗಿಯೂ, ಶ್ರೇಷ್ಠವಾದ ವೀರ್ಯಸಂಪಾದಕನಾಗಿಯೂ, ಸುಪೂರ್ಣನಾಗಿಯೂ ಇದ್ದು ನಮ್ಮ ವೇದಿಯಲ್ಲಿ ಆಸ್ತೃತನಾಗಿ ವೇದಿಯನ್ನು ಅಲಂಕರಿಸು. ಎಲೈ ಯಜ್ಞಾರ್ಹರಾದ ವಸುಗಳೇ, ವಿಶ್ವೇದೇವತೆಗಳೇ, ಆದಿತ್ಯರೇ, ಘೃತದಿಂದ ಸಿಕ್ತವಾದ ಈ ಬರ್ಹಿಯ ಮೇಲೆ ಕುಳಿತುಕೊಳ್ಳಿ.

### English Translation

Divine grass, let the Vasus, the Vishwedevas, the adorable Adityas, sit upon this flourishing, invigorating, well-grown, sacred grass, strewn for the sake of wealth upon this altar, and sprinkled with butter.

### ಸಂಹಿತಾಪಾಠಃ

ವಿ ಶ್ರಯಂತಾಮುರ್ವಿಯಾ ಹೂಯಮಾನಾ ದ್ವಾರೋ ದೇವೀಃ ಸುಪ್ರಾಯಣಾ ನಮೋಭಿಃ ।
ವ್ಯಚಸ್ವತೀರ್ವಿ ಪ್ರಥಂತಾಮಜುರ್ಯಾ ವರ್ಣಂ ಪುನಾನಾ ಯಶಸಂ ಸುವೀರಂ ॥ ೫ ॥

ಪದಪಾಠಃ

ವಿ । ಶ್ರಯಂತಾಂ । ಉರ್ವಿಯಾ । ಹೂಯಮಾನಾಃ । ದ್ವಾರಃ । ದೇವೀಃ । ಸುಪ್ರಃಅಯನಾಃ ।
ನಮಃಽಭಿಃ ।
ವ್ಯಚಸ್ವತೀಃ । ವಿ । ಪ್ರಥಂತಾಂ । ಅಜುರ್ಯಾಃ । ವರ್ಣಂ । ಪುನಾನಾಃ । ಯಶಸಂ । ಸುಽವೀರಂ ॥ ೫ ॥

ಸಾಯಣಭಾಷ್ಯಂ

ದ್ವಾರೋ ದೇವೀರಗ್ನೇರ್ದ್ವಾರಾಭಿಮಾನಿನ್ಯೋ ದೇವ್ಯೋ ವಿಶ್ರಯಂತಾಂ । ವಿವಿಚ್ಯ ಶ್ರಯಂತಾಂ। ವಿವೃತಾಪಿಧಾನಾ ಭವಂತು । ಕೀದೃಶ್ಯಸ್ತಾಃ । ಉರ್ವಿಯಾ । ಉರ್ವ್ಯೋ ಮಹತ್ಯಃ । ನಮೋಭಿರ್ನಮಸ್ಕಾರೋಪೇತೈಃ ಸ್ತೋತ್ರೈರ್ಹೂಯಮಾನಾಃ । ಸುಪ್ರಾಯಣಾಃ । ಸುಷ್ಠು ಪ್ರಕರ್ಷೇಣ ಗಂತವ್ಯಾಃ । ಈದೃಶ್ಯೋ ದೇವ್ಯೋ ವಿಶ್ರಯಂತಾಂ । ಕಿಂಚ ವ್ಯಚಸ್ವತೀರ್ವ್ಯಾಪ್ತಿಮತ್ಯೋಽಜುರ್ಯಾ ಅಹಿಂಸ್ಯಾ ಅಜನನಾ ವಾ ಸುವೀರಂ ಶೋಭನಪುತ್ರಾದ್ಯುಪೇತಂ ಯಶಸಂ ಯಶೋಯುಕ್ತಂ ವರ್ಣಂ ವರ್ಣನೀಯಂ ರೂಪವಿಶೇಷಂ ಪುನಾನಾ ಯಜಮಾನಾಯ ಶೋಧಯಿತ್ರ್ಯಃ ಸಂಪಾದಯಿತ್ರ್ಯೋ ದೇವ್ಯೋ ವಿಪ್ರಥಂತಾಂ । ವಿಶೇಷೇಣ ಪ್ರಖ್ಯಾತಾ ಭವಂತು ॥

ಪ್ರತಿಪದಾರ್ಥ

ಉರ್ವಿಯಾ—ಮಹತ್ತಿನಿಂದ ಕೂಡಿದ । ನಮೋಭಿಃ—ನಮಸ್ಕಾರಗಳಿಂದ । ಹೂಯಮಾನಾಃ—ಕರೆಯಲ್ಪಡತಕ್ಕವರೂ । ಸುಪ್ರಾಯಣಾಃ—ಸುಲಭವಾಗಿ ಸಮೀಪಿಸಲ್ಪಡತಕ್ಕವರೂ ಆದ । ದೇವೀಃ ದ್ವಾರಃ—ದ್ವಾರ ದೇವತೆಗಳು । ವಿಶ್ರಯಂತಾಂ—ಪೂರ್ಣವಾಗಿ ತೆರೆಯಲಿ । ವ್ಯಚಸ್ವತೀಃ—ವ್ಯಾಪಕವಾದ ಸ್ವರೂಪವುಳ್ಳವರೂ । ಅಜುರ್ಯಾಃ—ಅಹಿಂಸಕರೂ । ಸುವೀರಂ—ವೀರಪುತ್ರಾದಿಗಳಿಂದ ಕೂಡಿದುದೂ । ಯಶಸಂ—ಯಶೋಯುಕ್ತವಾದುದೂ । ವರ್ಣಂ—ಶ್ಲಾಘ್ಯವಾದುದೂ ಆದ ಸಂಪತ್ತನ್ನು । ಪುನಾನಾಃ—ಯಜಮಾನನಿಗೆ ಕೊಡತಕ್ಕವರೂ ಆದ ದೇವತೆಗಳು । ವಿ ಪ್ರಥಂತಾಂ—ಹೊಗಳಲ್ಪಡಲಿ ।

ಭಾವಾರ್ಥ

ಮಹತ್ತಿನಿಂದ ಕೂಡಿದವರೂ, ನಮಸ್ಕಾರಗಳಿಂದ ಕರೆಯಲ್ಪಡತಕ್ಕವರೂ ಸುಲಭವಾಗಿ ಸಮೀಪಿಸಲ್ಪಡತಕ್ಕವರೂ ಆದ ದ್ವಾರದೇವತೆಗಳು ಪೂರ್ಣವಾಗಿ ತೆರೆಯಲಿ. ವ್ಯಾಪಕವಾದ ಸ್ವರೂಪವುಳ್ಳವರೂ, ಅಹಿಂಸಕರೂ ಮತ್ತು ವೀರಪುತ್ರಾದಿಗಳಿಂದಲೂ ಯಶಸ್ಸಿನಿಂದಲೂ ಕೂಡಿದ ಸಂಪತ್ತನ್ನು ಯಜಮಾನನಿಗೆ ಕೊಡತಕ್ಕವರೂ ಆದ ದೇವತೆಗಳು ಸ್ತುತಿಸಲ್ಪಡಲಿ.

## English Translation

Let the divine doors, spacious and easily accessible, and to be saluted with prostrations, be set open: let them be celebrated as expansive, uninjurable and conferring sanctity upon the illustrious class (of worshippers), possessed of virtuous progeny.

ಸಂಹಿತಪಾಠಃ

ಸಾಧ್ವಪಾಂಸಿ ಸನತಾ ನ ಉಕ್ಷಿತೇ ಉಷಾಸಾನಕ್ತಾ ವಯ್ಯೇವ ರಣ್ವಿತೇ ।
ತಂತುಂ ತತಂ ಸಂವಯಂತೀ ಸಮೀಚೀ ಯಜ್ಞಸ್ಯ ಪೇಶಃ ಸುದುಘೇ
ಪಯಸ್ವತೀ ॥ ೬ ॥

ಪದಪಾಠಃ

ಸಾಧು । ಅಪಾಂಸಿ । ಸನತಾ । ನಃ । ಉಕ್ಷಿತೇ ಇತಿ । ಉಷಸಾನಕ್ತಾ । ವಯ್ಯಾऽಇವ । ರಣ್ವಿತೇ ಇತಿ ।
ತಂತುಂ । ತತಂ । ಸಂವಯಂತೀ ಇತಿ ಸಂऽವಯಂತೀ । ಸಮೀಚೀ ಇತಿ ಸಂऽಈಚೀ । ಯಜ್ಞಸ್ಯ ।
ಪೇಶಃ । ಸುದುಘೇ ಇತಿ ಸುऽದುಘೇ । ಪಯಸ್ವತೀ ಇತಿ ॥ ೬ ॥

ಸಾಯಣಭಾಷ್ಯಂ

ಸಾಧು ಸಾಧೂನಿ ನೋऽಸ್ಮದೀಯಾನ್ಯಪಾಂಸಿ ಕರ್ಮಾಣ್ಯುದ್ದಿಶ್ಯ ಸನತಾ ಸನಾತನೇನಾವಿಚ್ಛಿನ್ನ-ಪ್ರವೃತ್ತಿಕೇನ ಸ್ತೋತ್ರಾದಿನೋಕ್ಷಿತೇ ಪೂಜಿತೇ । ಯದ್ವಾ ಪುರಾಣವಾಚೀ ವಿಭಕ್ತ್ಯಂತಃ ಸನಚ್ಛಬ್ದೋऽಸ್ತಿ। ತಸ್ಯ ಪ್ರಥಮಾದ್ವಿವಚನಸ್ಯಾಕಾರಃ । ಸನಾತನೇ ನಿತ್ಯೇ ಇತ್ಯರ್ಥಃ । ಅಸ್ಮಿನ್ಪಕ್ಷ ಉಕ್ಷಿತೇ ಫಲಸ್ಯ ಸೇಚ-ಯಿತ್ರ್ಯೌ ॥ ಕರ್ತರಿ ನಿಷ್ಠಾ ॥ ಉಷಾಸಾನಕ್ತಾಹೋರಾತ್ರದೇವತೇ ವಯ್ಯಾ ಇವ ವಾನಕುಶಲೇ ಇವ ರಣ್ವಿತೇ ಶಬ್ದಿತೇ ಸ್ತುತೇ ಪರಸ್ಪರಂ ಗಚ್ಛಂತ್ಯೌ ವಾ ತತಂ ವಿಸ್ತೃತಂ ತಂತುಂ ತಂತುಸ್ಥಾನೀಯಂ ಯಜ್ಞಾವಯವಂ ಸಂವಯಂತೀ ಸಮ್ಯಕ್ ಚಿತ್ರಂ ಸಹ ವಾ ವಯಂತ್ಯಾವುತ್ಪಾದಯಿತ್ರ್ಯೌ ಸಮೀಚೀ ಸಮ್ಯಕ್ಪ್ರವೃತ್ತಿಕೇ ಪರಸ್ಪರಾನುಕೂಲೇ । ಕಿಮರ್ಥಂ ಸಂವಯಂತೀ । ಯಜ್ಞಸ್ಯಾನುಷ್ಠೀಯಮಾನಸ್ಯ ಪೇಶೋ ರೂಪಂ ನಿರ್ಮಾತುಮಿತಿ ಶೇಷಃ । ಯಜ್ಞಂ ನಿರ್ವರ್ತಯಿತುಂ ತದವಯವಾನುಕ್ರಮೇಣಾನು-ಷ್ಠಾಪಯಿತ್ರ್ಯಾವಿತ್ಯರ್ಥಃ । ಅಹೋರಾತ್ರಾಭ್ಯಾಂ ಹಿ ಯಜ್ಞಾಸ್ತನ್ಯಂತೇ । ಸುದುಘೇ ಸುಷ್ಠು ಫಲಸ್ಯ ದೋಗ್ಧ್ರ್ಯೌ ಪಯಸ್ವತೀ ಉದಕವತ್ಯೌ। ಅಹೋರಾತ್ರಾಭ್ಯಾಂ ಖಲು ವೃಷ್ಟಿರ್ಜಾಯತೇ। ಏವಂ ಮಹಾ-ನುಭಾವೇ ಅಹೋರಾತ್ರದೇವತೇ ಅಸ್ಮದ್ಯಜ್ಞಂ ನಿರ್ವಹತಾಮಿತ್ಯರ್ಥಃ ॥

ಪ್ರತಿಪದಾರ್ಥ

**ಸನತಾ**—ಪುರಾತನೆಯರೂ । **ಉಕ್ಷಿತೇ**—ಫಲವನ್ನು ಸುರಿಸುವವರೂ । [ಅಥವಾ **ಸನತಾ**—ಸ್ತೋತ್ರ ಗಳಿಂದ । **ಉಕ್ಷಿತೇ**—ಪೂಜಿತರಾದವರೂ । ] **ಸುದುಘೇ**—ಇಷ್ಟಾರ್ಥಗಳನ್ನು ಕರೆಯುವವರೂ । **ಪಯಸ್ವತೀ**—ಉದಕವನ್ನು ಹೊಂದಿರುವವರೂ ಆದ । **ಉಷಾಸಾನಕ್ತಾ**—ಅಹೋರಾತ್ರ ದೇವತೆಗಳು । **ಯಜ್ಞಸ್ಯ**—ಯಜ್ಞದ ।

ಪೇಶಃ—ರೂಪವನ್ನು (ನಿರ್ಮಿಸಲು) । ಸಾಧು—ಉತ್ತಮವಾದ । ನಃ—ನಮ್ಮ । ಅಪಾಂಸಿ—ಕರ್ಮಗಳನ್ನು ದ್ದೇಶಿಸಿ । ತತಂ—ವಿಸ್ತೃತವಾದ । ತಂತುಂ—ತಂತುಸ್ಥಾನೀಯವಾದ ಯಜ್ಞಾವಯವವನ್ನು । ರಣ್ವಿತೇ—ಒಟ್ಟಿಗೆ ಸೇರಿ ಕೆಲಸ ಮಾಡುವ । ವಯ್ಯಾ ಇವ—ನೆಯ್ಗೆಯ ಸ್ತ್ರೀಯರಂತೆ । ಸಮೀಚೀ—ಪರಸ್ಪರ ಅನುಕೂಲ ಕಾರಕರಾಗಿ । ಸಂವಯಂತೀ—ಯಜ್ಞವನ್ನು ನಿರ್ವಹಿಸುತ್ತಾರೆ.

ಭಾವಾರ್ಥ

ಪುರಾತನೆಯರೂ, ಫಲದಾಯಕಿಯರೂ, ಇಷ್ಟಾರ್ಥಗಳನ್ನು ಸುರಿಸುವವರೂ, ಉದಕವನ್ನು ಹೊಂದಿರುವವರೂ ಆದ ಅಹೋರಾತ್ರದೇವತೆಗಳು ಯಜ್ಞದ ರೂಪವನ್ನು ನಿರ್ಮಿಸಲು ಉತ್ತಮವಾದ ನಮ್ಮ ಕರ್ಮಗಳನ್ನು ಉದ್ದೇಶಿಸಿ ವಿಸ್ತೃತವಾದುದೂ, ತಂತುಸ್ಥಾನೀಯವಾದುದೂ ಆದ ಯಜ್ಞಾವಯವವನ್ನು ಒಟ್ಟಿಗೆ ಸೇರಿ ಕೆಲಸ ಮಾಡುವ ನೆಯ್ಗೆಯ ಸ್ತ್ರೀಯರಂತೆ ಪರಸ್ಪರ ಅನುಕೂಲಕಾರಕರಾಗಿ ಯಜ್ಞವನ್ನು ನಿರ್ವಹಿಸುತ್ತಾರೆ.

English Translation

In regard of our good deeds, Day and Night, perpetually reverenced, are interweaving in concert, like two famous female weavers, the extended, thread (to complete) the web of the sacrifice, liberal yielders (of rewards) containers of water.

ಸಂಹಿತಾ ಪಾಠಃ

ದೈವ್ಯಾ ಹೋತಾರಾ ಪ್ರಥಮಾ ವಿದುಷ್ಟರ ಋಜು ಯಕ್ಷತಃ ಸಮೃಚಾ ವಪುಷ್ಟರಾ ।
ದೇವಾನ್ ಯಜಂತಾವೃತುಥಾ ಸಮಂಜತೋ ನಾಭಾ ಪೃಥಿವ್ಯಾ ಅಧಿ ಸಾನುಷು ತ್ರಿಷು ॥ ೭ ॥

ಪದಪಾಠಃ

ದೈವ್ಯಾ । ಹೋತಾರಾ । ಪ್ರಥಮಾ । ವಿದುಃಽತರಾ । ಋಜು । ಯಕ್ಷತಃ । ಸಂ । ಋಚಾ । ವಪುಃಽತರಾ । ದೇವಾನ್ । ಯಜಂತೌ । ಋತುಽಥಾ । ಸಂ । ಅಂಜತಃ । ನಾಭಾ । ಪೃಥಿವ್ಯಾಃ । ಅಧಿ । ಸಾನುಷು । ತ್ರಿಷು ॥ ೭ ॥

### ಸಾಯಣಭಾಷ್ಯಂ

ದೈವ್ಯಾ । ದಿವಿ ಭವೋ ದಿವ್ಯೋಽಗ್ನಿಃ । ತಸ್ಮಾದ್ದಿವ್ಯಾದಗ್ನೇರ್ಜಾತೌ ಹೋತಾರಾಹ್ವಾತಾರೌ ದೇವಾನಾಂ ಹೋಮನಿಷ್ಪಾದಕೌ ವಾಗ್ನೀ ಪಾರ್ಥಿವಾಂತರಿಕ್ಷ್ಯೌ ಪ್ರಥಮಾ ಪ್ರಥಮಂ ಯಷ್ಟವ್ಯೌ ವಿದು-ಷ್ಟರಾ ವಿದ್ವತ್ತಮೌ ವಪುಷ್ಟರಾ ಪ್ರಕೃಷ್ಟವಪುಷೌ ದೇವಾವೃಚಾ ಮಂತ್ರೇಣ ಋಜು ಅವಿಕಲಂ ಯಥಾ ತಥಾ ಸಮ್ಯಕ್ ಯಕ್ಷತಃ । ಪೂಜಯತಃ । ಋತುಥಾ ತತ್ತದೃತೌ ತತ್ರ ತತ್ರ ಕಾಲೇ ದೇವಾನ್ಯಷ್ಟವ್ಯಾನ್ ಯಜಂತೌ ದೇವೌ ಪೃಥಿವ್ಯಾ ನಾಭಾ ನಾಭಾವುತ್ತರವೇದ್ಯಾಮಧಿ ಉಪರಿ ತ್ರಿಷು ಸಾನುಷು ಸಮುಚ್ಛ್ರಿ-ತೇಷು ಪ್ರದೇಶೇಷು ಗಾರ್ಹಪತ್ಯಾದಿಷು ಸಮಂಜತಃ । ಸಮಾಂಕ್ತಾಂ ॥ ಅಂಜೇರ್ಲೇಟ್ಯಡಾಗಮಃ ॥

### ಪ್ರತಿಪದಾರ್ಥ

ಪ್ರಥಮಾ—(ಯಜ್ಞಾರ್ಹರಾದ ದೇವತೆಗಳಲ್ಲಿ) ಮುಖ್ಯರೂ । ವಿದುಷ್ಟರಾ—ಪ್ರಾಜ್ಞರಲ್ಲೆಲ್ಲಾ ಶ್ರೇಷ್ಠರೂ। ವಪುಷ್ಟರಾ—ಅತ್ಯುತ್ತಮವಾದ ದೇಹವುಳ್ಳವರೂ । ಋಚಾ—ಮಂತ್ರದಿಂದ । ಋಜು—ನ್ಯೂನತೆಯಿಲ್ಲದೆ । ಸಂ ಯಕ್ಷತಃ—(ದೇವತೆಗಳನ್ನು) ಪೂರ್ಣವಾಗಿ ಪೂಜಿಸುವವರೂ । ಋತುಥಾ—ಯಜ್ಞಕಾಲಗಳಲ್ಲೆಲ್ಲಾ । ದೇವಾನ್—ಯಜ್ಞಾರ್ಹರಾದ ದೇವತೆಗಳನ್ನು ಉದೇಶಿಸಿ । ಯಜಂತೌ—ಯಜ್ಞಮಾಡುವವರೂ । ದೈವ್ಯಾ ಹೋತಾರಾ—ದೇವತೆಗಳನ್ನು ಯಜ್ಞಕ್ಕೆ ಕರೆಯುವವರೂ ಆದ ಅಗ್ನಿಯ ಎರಡು ರೂಪಗಳೂ ಸಹ । ಪೃಥಿವ್ಯಾಃ—ಪೃಥಿವಿಯ । ನಾಭಾ ಅಧಿ—ನಾಭಿರೂಪಿಯಾದ ಉತ್ತರವೇದಿಯಲ್ಲಿ । ತ್ರಿಷು ಸಾನುಷು—ಉಚ್ಚಪ್ರದೇಶಗಳಾದ ಗಾಹ್ಯಪತ್ಯಾದಿಸ್ಥಾನಗಳಲ್ಲಿ । ಸಮಂಜತಃ—ಒಟ್ಟಿಗೆ ಸೇರಿಕೊಂಡು ಪೂಜಿಸಲ್ಪಡಲಿ.

### ಭಾವಾರ್ಥ

ಯಜ್ಞಾರ್ಹರಾದ ದೇವತೆಗಳಲ್ಲಿ ಮುಖ್ಯರೂ, ಪ್ರಾಜ್ಞರಲ್ಲೆಲ್ಲಾ ಶ್ರೇಷ್ಠರೂ, ಅತ್ಯುತ್ತಮವಾದ ದೇಹವುಳ್ಳವರೂ, ನ್ಯೂನತೆಯಿಲ್ಲದೆ ಮಂತ್ರದಿಂದ ದೇವತೆಗಳನ್ನು ಪೂರ್ಣವಾಗಿ ಪೂಜಿಸುವವರೂ, ಯಜ್ಞಕಾಲಗಳಲ್ಲೆಲ್ಲಾ ಯಜ್ಞಾರ್ಹರಾದ ದೇವತೆಗಳನ್ನುದ್ದೇಶಿಸಿ ಯಜ್ಞಮಾಡುವವರೂ, ದೇವತೆಗಳನ್ನು ಯಜ್ಞಕ್ಕೆ ಕರೆಯುವವರೂ ಆದ ದೈವ್ಯಾಹೋತಾರಾ ಎಂಬ ಅಗ್ನಿಯ ಎರಡು ರೂಪಗಳೂ ಸಹ ಪೃಥಿವಿಯ ನಾಭಿರೂಪಿಯಾದ ಉತ್ತರವೇದಿಯಲ್ಲಿ ಉಚ್ಚಪ್ರದೇಶಗಳಾದ ಗಾರ್ಹಪತ್ಯಾದಿಸ್ಥಾನಗಳಲ್ಲಿ ಒಟ್ಟಿಗೆ ಸೇರಿಕೊಂಡು ಪೂಜಿಸಲ್ಪಡಲಿ

### English Translation

Let the two divine invokers of the gods, the first (to be reverenced), most wise, sincerely worshipping with sacred texts, most excellent in form, offering homage to the gods in due season, present oblations in the three high places upon the navel of the earth.

ಸಂಹಿತಾಪಾಠಃ

ಸರಸ್ವತೀ ಸಾಧಯಂತೀ ಧಿಯಂ ನ ಈಳಾ ದೇವೀ ಭಾರತೀ ವಿಶ್ವತೂರ್ತಿಃ।
ತಿಸ್ರೋ ದೇವೀಃ ಸ್ವಧಯಾ ಬರ್ಹಿರೇದಮಚ್ಛಿದ್ರಂ ಪಾಂತು ಶರಣಂ ನಿಷದ್ಯ ॥ ೮ ॥

ಪದಪಾಠಃ

ಸರಸ್ವತೀ । ಸಾಧಯಂತೀ । ಧಿಯಂ । ನಃ । ಇಳಾ । ದೇವೀ । ಭಾರತೀ । ವಿಶ್ವऽತೂರ್ತಿಃ ।
ತಿಸ್ರಃ । ದೇವೀಃ । ಸ್ವಧಯಾ । ಬರ್ಹಿಃ । ಆ । ಇದಂ । ಅಚ್ಛಿದ್ರಂ । ಪಾಂತು । ಶರಣಂ । ನಿऽಸದ್ಯ ॥ ೮ ॥

ಸಾಯಣಭಾಷ್ಯಂ

ನೋಽಸ್ಮದೀಯಾಂ ಧಿಯಂ ಬುದ್ಧಿಂ ಯಾಗಂ ವಾ ಸಾಧಯಂತೀ ನಿರ್ವರ್ತಯಂತೀ ಸರಸ್ವತೀ ಇಳೈತನ್ನಾಮಿಕಾ ದೇವೀ ಭಾರತೀ ಚ ವಿಶ್ವತೂರ್ತಿರ್ವಿಶ್ವಾನಿ ತೂರ್ಣಾನಿ ಯಸ್ಯಾಃ ಸಾ ತಾದೃಶೀ ಸರ್ವವಿಷಯಗತಾ ವಾಕ್ । ಏತದುಭಯವಿಶೇಷಣಂ । ತಿಸ್ರೋ ದೇವೀರೇತಾಸ್ತಿಸ್ರೋ ದೇವ್ಯಃ ಸ್ವಧಯಾಸ್ಮದ್ದತ್ತಹವಿಷಾ ನಿಮಿತ್ತೇನೇದಂ ಬರ್ಹಿರ್ಯಜ್ಞಮಚ್ಛಿದ್ರಂ ಯಥಾ ತಥಾ ಪಾಂತು । ಪಾಲಯಂತು । ಕಿಂ ಕೃತ್ವಾ । ಶರಣಂ ಯಾಗಗೃಹಮಾನಿಷದ್ಯ ಆಶ್ರಿತ್ಯ । ಯದ್ವಾ ಸ್ವಧಯೇದಂ ಬರ್ಹಿರಿಮಂ ಯಜ್ಞಮಾಗತ್ಯಾಸ್ಮದೀಯಂ ಶರಣಂ ಗೃಹಂ ನಿಷದ್ಯಾಚ್ಛಿದ್ರಂ ಯಥಾ ತಥಾ ಪಾಂತು ॥

ಪ್ರತಿಪದಾರ್ಥ

ನಃ—ನಮ್ಮ । ಧಿಯಂ—ಬುದ್ಧಿಯನ್ನು ಅಥವಾ ಯಾಗವನ್ನು । ಸಾಧಯಂತೀ—ಪರಿಷ್ಕರಿಸುವ । ಸರಸ್ವತೀ—ಸರಸ್ವತಿಯೂ । ದೇವೀ—ದೇವತಾತ್ಮಳಾದ । ಇಳಾ—ಇಳಾ ದೇವಿಯೂ । ವಿಶ್ವತೂರ್ತಿಃ—ಸಕಲವನ್ನೂ ವ್ಯಾಪಿಸಿರತಕ್ಕ ಅಥವಾ ಸರ್ವಶ್ರೇಷ್ಠಳಾದ । ಭಾರತೀ—ಭಾರತೀದೇವಿಯೂ । ತಿಸ್ರಃ ದೇವೀಃ—ಮೇಲೆ ನಿರ್ದಿಷ್ಟವಾದ ಈ ಮೂರು ದೇವತೆಗಳೂ । ಸ್ವಧಯಾ—(ನಮ್ಮಿಂದ) ದತ್ತವಾದ ಹವಿಸ್ಸಿನ ನಿಮಿತ್ತವಾಗಿ । ಶರಣಂ—ಯಾಗ ಗೃಹವನ್ನು । ಆ ನಿಷದ್ಯ—ಆಶ್ರಯಿಸಿ । ಇದಂ ಬರ್ಹಿಃ—ಈ ಯಜ್ಞವನ್ನು । ಅಚ್ಛಿದ್ರಂ—ಛಿದ್ರವಾಗದಿರುವಂತೆ । ಪಾಂತು—ರಕ್ಷಿಸಲಿ ।

ಭಾವಾರ್ಥ

ನಮ್ಮ ಬುದ್ಧಿಯನ್ನು ಪರಿಷ್ಕರಿಸುವ ಸರಸ್ವತಿಯೂ, ದೇವಾತ್ಮಳಾದ ಇಳಾದೇವಿಯೂ, ಸರ್ವಶ್ರೇಷ್ಠಳಾದ ಭಾರತಿಯೂ, ಈ ಮೂರು ದೇವತೆಗಳೂ ಸಹ ನಮ್ಮಿಂದ ದತ್ತವಾದ ಹವಿಸ್ಸಿನ ನಿಮಿತ್ತವಾಗಿ ಯಾಗಗೃಹವನ್ನು ಆಶ್ರಯಿಸಿ ಈ ಯಜ್ಞವನ್ನು ಛಿದ್ರವಾಗದಿರುವಂತೆ ರಕ್ಷಿಸಲಿ.

## English Translation

May the three goddesses, Saraswati, perfecting our understanding, the divine Ila, and all-impressive Bharati, having come to our dwelling, protect this faultless rite, (offered) for our welfare.

ಸಂಹಿತಾಪಾಠಃ

ಪಿಶಂಗರೂಪಃ ಸುಭರೋ ವಯೋಧಾಃ ಶ್ರುಷ್ಟೀ ವೀರೋ ಜಾಯತೇ ದೇವಕಾಮಃ ।

ಪ್ರಜಾಂ ತ್ವಷ್ಟಾ ವಿ ಷ್ಯತು ನಾಭಿಮಸ್ಮೇ ಅಥಾ ದೇವಾನಾಮಪ್ಯೇತು ಪಾಥಃ ॥ ೯ ॥

ಪದಪಾಠಃ

ಪಿಶಂಗಽರೂಪಃ । ಸುಽಭರಃ । ವಯಃಽಧಾಃ । ಶ್ರುಷ್ಟೀ । ವೀರಃ । ಜಾಯತೇ । ದೇವಽಕಾಮಃ ।

ಪ್ರಽಜಾಂ । ತ್ವಷ್ಟಾ । ವಿ । ಸ್ಯತು । ನಾಭಿಂ । ಅಸ್ಮೇ ಇತಿ । ಅಥ । ದೇವಾನಾಂ । ಅಪಿ । ಏತು । ಪಾಥಃ ॥ ೯ ॥

ಸಾಯಣಭಾಷ್ಯಂ

ಅಥ ಪಿಶಂಗರೂಪ ಇತಿ ನವಮೀ ತ್ವಾಷ್ಟ್ರೇ ಪಶೌ ಪುರೋಡಾಶಸ್ಯ ಯಾಜ್ಯಾ ಪಿಶಂಗರೂಪಃ ಸುಭರೋ ವಯೋಧಾಃ ಪ್ರಥಮಭಾಜಂ ಯಶಸಂ ವಯೋಧಾಂ । ಆ ೩-೮ । ಇತಿ ಸೂತ್ರಿತತ್ವಾತ್ । ಪಾಠಸ್ತು ॥

ಪಿಶಂಗರೂಪಃ ಸುವರ್ಣವರ್ಣೋ ನಾನಾರೂಪೋ ವಾ ಸುಭರಃ ಶೋಭನಯಜ್ಞಃ ಶೋಭನ-ಭರಣೋ ವಾ ವಯೋಧಾ ವಯಸೋಽನ್ನಸ್ಯ ಧಾರಯಿತಾ ದಾತಾ ವಾ ಶ್ರುಷ್ಟೀ ಕ್ಷಿಪ್ರಗುಣೋ ವೀರೋ ವಿವಿಧಮೀರಯಿತಾ ದೇವಕಾಮೋ ದೇವಾಃ ಕಾಮ್ಯಂತೇ ಯೇನ ತಾದೃಶಃ ಪುತ್ರೋ ಜಾಯತೇ । ಜಾಯ-ತಾಮುತ್ಪದ್ಯತಾಂ ತ್ವಷ್ಟುರನುಗ್ರಹಾತ್ । ಸ ಚ ತ್ವಷ್ಟೈತನ್ನಾಮಕೋ ದೇವೋಽಸ್ಮೇ ಅಸ್ಮಭ್ಯಂ ನಾಭಿಂ ಕುಲಸ್ಯ ಬಂಧಿಕಾಂ ಪ್ರಜಾಂ ಪುತ್ರಾದಿರೂಪಾಂ ವಿಷ್ಯತು । ವಿಮುಂಚತು । ವಿತರತ್ವಿತ್ಯರ್ಥಃ । ಅಥ ಅಪಿ ಚ ದೇವಾನಾಂ ಸಂಬಂಧಿ ಪಾಥೋಽನ್ನಮಪ್ಯಸ್ಮಾನೇತು । ಗಚ್ಛತು । ಅಪಿಃ ಕ್ರಿಯಯಾ ವಾ ಸಂಬಧ್ಯತೇ । ಗಚ್ಛತ್ವಿತ್ಯರ್ಥಃ ॥

ಪ್ರತಿಪದಾರ್ಥ

ಪಿಶಂಗರೂಪಃ—ಸುವರ್ಣದ ರೂಪವುಳ್ಳವನೂ, । ಸುಭರಃ—ಶ್ರೇಷ್ಠವಾದ ಯಜ್ಞವನ್ನು ನಿರ್ವಹಿಸು ವವನೂ । ವಯೋಧಾಃ—ಅನ್ನವನ್ನು ಧರಿಸಿರುವವನೂ । ಶ್ರುಷ್ಟೀ—(ಕರ್ಮಗಳಲ್ಲಿ) ಚುರುಕಾದ ಗುಣಗಳುಳ್ಳ

ವನೂ । ವೀರಃ—ಪೌರುಷಶಕ್ತಿಯುಳ್ಳವನೂ । ದೇವಕಾಮಃ—ದೇವತೆಗಳಿಂದ ಅಪೇಕ್ಷಿತನಾದವನೂ ಆದ ಪುತ್ರನು । ಜಾಯತೇ—( ತ್ವಷ್ಟೃವಿನ ಅನುಗ್ರಹದಿಂದ ) ಉತ್ಪನ್ನನಾಗಲಿ । ತ್ವಷ್ಟಾ—ತ್ವಷ್ಟೃನಾಮಕನಾದ ದೇವನು । ಅಸ್ಮೇ—ನಮಗೆ । ನಾಭಿಂ—ವಂಶಕ್ಕೆ ಬಂಧಕವಾದ । ಪ್ರಜಾಂ—ಪುತ್ರಾದಿರೂಪವಾದ ಪ್ರಜೆಗಳನ್ನು । ವಿಷ್ಯತು—ಅನುಗ್ರಹಿಸಿ ಕೊಡಲಿ । ಅಥ—ಮತ್ತು । ದೇವಾನಾಂ—ದೇವತೆಗಳ ಸಂಬಂಧಿಯಾದ । ಪಾಥಃ ಅಪಿ—ಅನ್ನವೂ ಕೂಡ । ಏತು—ನಮಗೆ ಸೇರಲಿ ।

### ಭಾವಾರ್ಥ

ಸುವರ್ಣದಂತೆ ಆಕರ್ಷಕವಾದ ರೂಪವುಳ್ಳವನೂ, ಶ್ರೇಷ್ಠವಾದ ಯಜ್ಞವನ್ನು ನಿರ್ವಹಿಸುವವನೂ, ಅನ್ನವನ್ನು ಧರಿಸಿರುವವನೂ, ಕರ್ಮಗಳಲ್ಲಿ ನಿರತನಾದ ಗುಣಗಳುಳ್ಳವನೂ, ಪೌರುಷಶಕ್ತಿಯುಳ್ಳವನೂ ದೇವತೆಗಳಿಂದ ಅಪೇಕ್ಷಿತನಾದವನೂ ಆದ ಪುತ್ರನು ನಮಗೆ ತ್ವಷ್ಟೃವಿನ ಅನುಗ್ರಹದಿಂದ ಉತ್ಪನ್ನವಾಗಲಿ. ತ್ವಷ್ಟೃನಾಮಕನಾದ ದೇವನು ನಮ್ಮ ವಂಶಕ್ಕೆ ಬಂಧಕವಾದ ಪುತ್ರಾದಿರೂಪವಾದ ಪ್ರಜೆಗಳನ್ನು ಅನುಗ್ರಹಿಸಿ ಕೊಡಲಿ. ದೇವತೆಗಳ ಸಂಬಂಧಿಯಾದ ಅನ್ನವೂ ನಮಗೆ ಸೇರಲಿ.

### English Translation

May a tawny-hued, well-grown (son), the bestower of food, active, manly, a worshipper of the gods, be born : may Twashtri prolong for us a continuous (line of) progeny, and may the food of the gods come also to us.

### ಸಂಹಿತಾಪಾಠಃ

ವನಸ್ಪತಿರವಸೃಜನ್ನುಪ ಸ್ಥಾದಗ್ನಿರ್ಹವಿಃ ಸೂದಯಾತಿ ಪ್ರ ಧೀಭಿಃ ।
ತ್ರಿಧಾ ಸಮಕ್ತಂ ನಯತು ಪ್ರಜಾನನ್ದೇವೇಭ್ಯೋ ದೈವ್ಯಃ ಶಮಿತೋಪ ಹವ್ಯಂ ॥ ೧೦ ॥

### ಪದಪಾಠಃ

ವನಸ್ಪತಿಃ । ಅವsಸೃಜನ್ । ಉಪ । ಸ್ಥಾತ್ । ಅಗ್ನಿಃ । ಹವಿಃ । ಸೂದಯಾತಿ । ಪ್ರ । ಧೀಭಿಃ ।
ತ್ರಿಧಾ । ಸಂsಅಕ್ತಂ । ನಯತು । ಪ್ರsಜಾನನ್ । ದೇವೇಭ್ಯಃ । ದೈವ್ಯಃ । ಶಮಿತಾ । ಉಪ । ಹವ್ಯಂ ॥ ೧೦ ॥

### ಸಾಯಣಭಾಷ್ಯಂ

ವನಸ್ಪತಿರ್ಯೂಪಾಭಿಮಾನ್ಯೇತನ್ನಾಮಕೋಽಗ್ನಿರವಸೃಜನ್ ಅಸ್ಮದೀಯಂ ಕರ್ಮಾನುಜಾನನ್ ಉಪಾಸ್ಮತ್ಸಮೀಪೇ ಸ್ಥಾತ್ । ತಿಷ್ಠತು । ಅಗ್ನಿಃ ಪಾಕಾಧಾರೋಽಗ್ನಿಶ್ಚ ಹವಿಃ ಪಶುರೂಪಂ ಧೀಭಿಃ ಕರ್ಮ-

ಭಿರ್ವಿಶೇಷೈಃ ಪಾಕಸಾಧನೈಃ ಪ್ರಕರ್ಷೇಣ ಸೂದಯಾತಿ । ಕ್ಷಾರಯತಿ । ಅಪಾಕಾಧಿಕಪಾಕಾದಿರಾಹಿತ್ಯೇನ ಹವಿಃ ಪಚತೀತ್ಯರ್ಥಃ । ಕಿಂಚ ದೈವ್ಯೋ ದೇವಸಂಬಂಧ್ಯಾಹುತ್ಯಧಿಕರಣಭೂತೋಽಗ್ನಿಃ ಶಮಿತಾ ಹವಿಷಃ ಸಂಸ್ಕರ್ತಾ । ಯದ್ವಾ ದೈವ್ಯಃ ಶಮಿತೈತನ್ನಾಮಕೋಽಗ್ನಿಃ । ಅಗ್ನಿರ್ವೈ ದೇವಾನಾಂ ಶಮಿತೇತಿ ಶ್ರೂಯತೇ । ತ್ರಿಧಾ ತ್ರಿಪ್ರಕಾರಮುಪಸ್ತರಣಾವದಾನಾಭಿಘಾರಣೈಃ ಸಮಕ್ತಂ ಸಮ್ಯಕ್ ಸಿಕ್ತಂ ಹವ್ಯಂ ಹವಿಃ ಪ್ರಜಾನನ್ ವಿದ್ವಾನ್ ನಯನಪ್ರಕಾರಾಭಿಜ್ಞಃ ಸನ್ ದೇವೇಭ್ಯ ಉಪನಯತು । ಸಮೀಪಂ ಪ್ರಾಪಯತು ॥

ಪ್ರತಿಪದಾರ್ಥ ॥

**ವನಸ್ಪತಿಃ**—ಯೂಪಾಭಿಮಾನಿದೇವತೆಯು । **ಅವಸೃಜನ್**—ನಮ್ಮ ಕರ್ಮವನ್ನು ಅನುಮೋದಿಸುತ್ತಾ । **ಉಪ**—ನಮ್ಮ ಸಮೀಪದಲ್ಲಿ । **ಸ್ಥಾತ್**—ಇರಲಿ । **ಅಗ್ನಿಃ**—ಪಾಕಾಧಾರನಾದ ಅಗ್ನಿಯು । **ಹವಿಃ**—ಪಶುರೂಪವಾದ ಹವಿಸ್ಸನ್ನು । **ಧೀಭಿಃ**—ಕರ್ಮಗಳಿಂದ । **ಸೂದಯಾತಿ**—ಸಂಸ್ಕರಿಸುತ್ತಾನೆ । **ದೈವ್ಯಃ ಶಮಿತಾ**—ದೇವತೆಗಳ ಶಮಿತೃವಾದ (ಪಶುವನ್ನು ಛೇದಿಸಿ ಸಂಸ್ಕರಿಸುವ) ಅಗ್ನಿಯು । **ತ್ರಿಧಾ**—ಮೂರು ಪ್ರಕಾರವಾಗಿ । **ಸಮಕ್ತಂ**—ಸಿಕ್ತವಾದ । **ಹವ್ಯಂ**—ಹವಿಸ್ಸನ್ನು । **ಪ್ರಜಾನನ್**—ತಿಳಿದುಕೊಂಡು । **ದೇವೇಭ್ಯಃ**—ದೇವತೆಗಳಿಗೆ । **ಉಪ ನಯತು**—ತೆಗೆದುಕೊಂಡು ಹೋಗಿ ಅರ್ಪಿಸಲಿ ।

ಭಾವಾರ್ಥ

ಯೂಪಾಭಿಮಾನಿದೇವತೆಯು ನಮ್ಮ ಕರ್ಮವನ್ನು ಅನುಮೋದಿಸುತ್ತಾ ನಮ್ಮ ಸಮೀಪದಲ್ಲಿರಲಿ. ಪಾಕಾಧಾರನಾದ ಅಗ್ನಿಯು ಪಶುರೂಪವಾದ ಹವಿಸ್ಸನ್ನು ಕರ್ಮಗಳಿಂದ ಸಂಸ್ಕರಿಸುತ್ತಾನೆ. ದೇವತೆಗಳಿಗಾಗಿ ಪಶುವನ್ನು ಛೇದಿಸಿ ಸಂಸ್ಕರಿಸುವ ಅಗ್ನಿಯು ಮೂರು ಪ್ರಕಾರವಾಗಿ ಸಿಕ್ತವಾದ ಹವಿಸ್ಸನ್ನು ತಿಳಿದುಕೊಂಡು ದೇವತೆಗಳಿಗೆ ತೆಗೆದುಕೊಂಡು ಹೋಗಿ ಅರ್ಪಿಸಲಿ.

## English Translation

May Agni, who is Vanaspati, approving (of our rite), approach : and by his especial acts fully dress the victim ; may the divine immolator convey the burnt-offering to the gods knowing it to have been thrice consecrated.

ಸಂಹಿತಾಪಾಠಃ

ಘೃತಂ ಮಿಮಿಕ್ಷೇ ಘೃತಮಸ್ಯ ಯೋನಿರ್ಘೃತೇ ಶ್ರಿತೋ ಘೃತಮ್ವಸ್ಯ ಧಾಮ ।
ಅನುಷ್ವಧಮಾ ವಹ ಮಾದಯಸ್ವ ಸ್ವಾಹಾಕೃತಂ ವೃಷಭ ವಕ್ಷಿ ಹವ್ಯಂ ॥೧೧॥

ಪದಪಾಠಃ

ಘೃತಂ । ಮಿಮಿಕ್ಷೇ । ಘೃತಂ । ಅಸ್ಯ । ಯೋನಿಃ । ಘೃತೇ । ಶ್ರಿತಃ । ಘೃತಂ । ಊಂ ಇತಿ । ಅಸ್ಯ ।

ಧಾಮ ।

ಅನುಽಸ್ವಧಂ । ಆ । ವಹ । ಮಾದಯಸ್ವ । ಸ್ವಾಹಾಽಕೃತಂ । ವೃಷಭ । ವಕ್ಷಿ । ಹವ್ಯಂ ॥ ೧೧ ॥

ಸಾಯಣಭಾಷ್ಯಂ

ಅಸ್ಯಾಗ್ನೇರ್ಘೃತಮಾಜ್ಯಂ ಮಿಮಿಕ್ಷೇ । ಸಿಂಚಾಮಿ । ಯತೋಽಸ್ಯ ಘೃತಂ ಯೋನಿಃ ಕಾರಣಂ ಉತ್ಪನ್ನೋಽಪಿ ಘೃತೇ ಶ್ರಿತಃ । ಆಶ್ರಿತಃ । ಅಸ್ಯಾಗ್ನೇರ್ಘೃತಮೇವ ಧಾಮ ತೇಜಃ । ಘೃತೇನ ಹ್ಯಯಂ ದೀಪ್ಯತೇ । ಇದಾನೀಂ ಸಂಬೋಧ್ಯೋಚ್ಯತೇ । ಹೇ ಅಗ್ನೇ ವೃಷಭ ಫಲಸ್ಯ ವರ್ಷಿತಸ್ತ್ವಮನುಷ್ವಧಂ ಪ್ರತಿಹವಿಃ ಸರ್ವೇಷ್ವಪಿ ಹವಿಃಷು ದೀಯಮಾನೇಷ್ವಾವಹ ದೇವಾನ್ । ಆಹೂಯ ತಾನ್ಮಾದಯಸ್ವ । ಪ್ರೀಣಯ । ತತಸ್ತ್ವಂ ಸ್ವಾಹಾಕೃತಂ ಸ್ವಾಹಾಕಾರೇಣ ದತ್ತಂ ಹವ್ಯಂ ವಕ್ಷಿ । ವಹ ॥

ಪ್ರತಿಪದಾರ್ಥ

ಅಸ್ಯ—ಈ ಅಗ್ನಿಗೆ । ಘೃತಂ—ಆಜ್ಯವು । ಯೋನಿಃ—ಉತ್ಪತ್ತಿಕಾರಣವು (ಆದುದರಿಂದ) । ಘೃತಂ—ಆಜ್ಯವನ್ನು । ಮಿಮಿಕ್ಷೇ—ಪ್ರೋಕ್ಷಿಸುತ್ತೇನೆ । ಘೃತೇ—ಘೃತದಲ್ಲಿ । ಶ್ರಿತಃ—(ಅಗ್ನಿಯು) ಆಶ್ರಯವನ್ನು ಪಡೆದಿದ್ದಾನೆ । ಅಸ್ಯ—ಈ ಅಗ್ನಿಗೆ । ಘೃತಮು—ಘೃತವೇ । ಧಾಮ—ತೇಜಸ್ಸಿನ ಆಧಾರವು । ವೃಷಭ—ಫಲಗಳನ್ನು ಸುರಿಸತಕ್ಕ ಎಲೈ ಅಗ್ನಿಯೇ । ಅನುಷ್ವಧಂ—ಅರ್ಪಿಸಿದ ಎಲ್ಲಾ ಹವಿಸ್ಸುಗಳಿಗಾಗಿಯೂ । ಆ ವಹ—ದೇವತೆಗಳನ್ನು ಕರೆದುಕೊಂಡು ಬಾ । ಮಾದಯಸ್ವ—ಅವರನ್ನು ತೃಪ್ತಿಗೊಳಿಸು । ಸ್ವಾಹಾಕೃತಂ—ಸ್ವಾಹಾಕಾರಪೂರ್ವಕವಾಗಿ ಅರ್ಪಿಸಿದ । ಹವ್ಯಂ—ಹವಿಸ್ಸನ್ನು । ವಕ್ಷಿ—ವಹಿಸು.

ಭಾವಾರ್ಥ

ಈ ಅಗ್ನಿಗೆ ಆಜ್ಯವೇ ಉತ್ಪತ್ತಿಕಾರಣವು. ಇವನು ಘೃತದಲ್ಲಿಯೇ ಆಶ್ರಯವನ್ನು ಪಡೆದಿದ್ದಾನೆ. ಆದುದರಿಂದ ಆಜ್ಯವನ್ನು ಪ್ರೋಕ್ಷಿಸುತ್ತೇನೆ. ಈ ಅಗ್ನಿಗೆ ಘೃತವೇ ತೇಜಸ್ಸಿನ ಆಧಾರವು. ಫಲದಾಯಕನಾದ ಎಲೈ ಅಗ್ನಿಯೇ, ಅರ್ಪಿಸಿದ ಎಲ್ಲಾ ಹವಿಸ್ಸುಗಳಿಗಾಗಿಯೂ ದೇವತೆಗಳನ್ನು ಕರೆದುಕೊಂಡು ಬಾ. ಅವರನ್ನು ತೃಪ್ತಿಗೊಳಿಸು ಮತ್ತು ಸ್ವಾಹಾಕಾರಪೂರ್ವಕವಾಗಿ ಅರ್ಪಿಸಿದ ಹವಿಸ್ಸನ್ನು ವಹಿಸು.

## English Translation

I sprinkle the butter, for butter is his birth-place, he is nourished by butter ; butter is his radiance ; Agni, showerer (of benefits), bring the gods to the offered oblation ; exhilarate them ; convey to them the offering that has been reverently sanctified.

# ನಾಲ್ಕನೆಯ ಸೂಕ್ತವು

ಸಾಯಣಭಾಷ್ಯಂ

ಹುವೇ ವ ಇತಿ ನವರ್ಚಂ ಚತುರ್ಥಂ ಸೂಕ್ತಂ । ಭಾರ್ಗವಃ ಸೋಮಾಹುತಿನಾಮಕ ಋಷಿಃ । ಅಗ್ನಿರ್ದೇವತಾ । ತ್ರಿಷ್ಟುಪ್ ಛಂದಃ । ಹುವೇ ನವ ಸೋಮಾಹುತಿರ್ಭಾರ್ಗವೋ ಹೇತ್ಯನುಕ್ರಮಣಿಕಾ ॥ ಪ್ರಾತರನುವಾಕಾಶ್ವಿನಶಸ್ತ್ರಯೋಸ್ತ್ರೈಷ್ಟುಭೇ ಛಂದಸೀದಂ । ಸೂತ್ರಿತಂ ಚ । ಹುವೇ ವಃ ಸುದ್ಯೋತ್ಮಾನಂ ನಿ ಹೋತಾ ಹೋತೃಷದನ ಇತಿ ಸೂಕ್ತೇ ॥ ಆ. ೪-೧೩ । ಇತಿ ॥

ಅನುವಾದವು—ಹುವೇ ವಃ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು ಭೃಗುಕುಲೋತ್ಪನ್ನನಾದ ಸೋಮಾಹುತಿ ಎಂಬುವನು ಈ ಸೂಕ್ತಕ್ಕೆ ಋಷಿಯು ; ಅಗ್ನಿಯು ದೇವತೆಯು; ತ್ರಿಷ್ಟುಪ್ ಛಂದಸ್ಸು ಅನುಕ್ರಮಣಿಕೆಯಲ್ಲಿ—ಹುವೇ ನವ ಸೋಮಾಹುತಿ-ರ್ಭಾರ್ಗವೋ ಹ ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನ ಕಾಲಗಳಲ್ಲಿ ತ್ರಿಸ್ಟುಪ್ ಛಂದಸ್ಸಿನ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—ಹುವೇ ವಃ ಸುದ್ಯೋತ್ಮಾನಂ ನಿ ಹೋತಾ ಹೋತೃಷದನ ಇತಿ ಸೂಕ್ತೇ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೧೩).

## ಸೂಕ್ತ—೪

॥ ಮಂಡಲ—೩ ॥ ಅನುವಾಕ— ೧॥ ಸೂಕ್ತ—೪ ॥
॥ ಅಷ್ಟಕ— ೩ ॥ ಅಧ್ಯಾಯ— ೫ ॥ ವರ್ಗ- ೨೪, ೨೫ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೯ ॥
ಋಷಿಃ—ಸೋಮಾಹುತಿರ್ಭಾರ್ಗವಃ ॥
ದೇವತಾ—ಅಗ್ನಿ: ॥
ಛಂದಃ—ತ್ರಿಷ್ಟುಪ್ ।

ಸಂಹಿತಾಪಾಠಃ

ಹುವೇ ವಃ ಸುದ್ಯೋತ್ಮಾನಂ ಸುವೃಕ್ತಿಂ ವಿಶಾಮಗ್ನಿಮತಿಥಿಂ ಸುಪ್ರಯಸಂ।
ಮಿತ್ರ ಇವ ಯೋ ದಿಧಿಷಾಯ್ಯೋ ಭೂದ್ದೇವ ಆದೇವೇ ಜನೇ ಜಾತವೇದಾಃ
॥ ೧ ॥

ಪದಪಾಠಃ

ಹುವೇ । ವಃ । ಸುಽದ್ಯೋತ್ಮಾನಂ । ಸುಽವೃಕ್ತಿಂ । ವಿಶಾಂ । ಅಗ್ನಿಂ । ಅತಿಥಿಂ । ಸುಽಪ್ರಯಸಂ ।
ಮಿತ್ರಃಽಇವ । ಯಃ । ದಿಧಿಷಾಯ್ಯಃ । ಭೂತ್ । ದೇವಃ । ಆಽದೇವೇ । ಜನೇ । ಜಾತಽವೇದಾಃ ॥ ೧ ॥

ಸಾಯಣಭಾಷ್ಯಂ

ಹೇ ಯಜಮಾನಾ ವೋ ಯುಷ್ಮದರ್ಥಮಗ್ನಿಂ ಹುವೇ । ಆಹ್ವಯಾಮಿ । ಕೀದೃಶಂ ತಂ । ಸುದ್ಯೋತ್ಮಾನಂ ಸುಷ್ಠು ದ್ಯೋತಮಾನಂ । ಸುವೃಕ್ತಿಂ ಸುವರ್ಜಿತಂ ಪಾಪೈಃ ಶೋಭನಸ್ತುತಿಂ ವಾ । ವಿಶಾಂ ಯಜಮಾನಾನಾಮತಿಥಿವತ್ಸದಾ ಪೂಜ್ಯಂ । ಸುಪ್ರಯಸಂ ಶೋಭನಹವಿರ್ಲಕ್ಷಣಾನ್ನಂ । ಕಿಂಚ ಜಾತವೇದಾ ಜಾತಾನಾಂ ವೇದಿತಾ ಯೋ ದೇವೋಽಗ್ನಿರ್ಮಿತ್ರ ಇವ ಸಖೇವ ಆದಿತ್ಯ ಇವ ವಾ ದೀಧಿಷಾಯ್ಯೋ ಧಾರಯಿತಾ ಭೂತ್ । ಭವತಿ । ಕುತ್ರೇತಿ ಉಚ್ಯತೇ । ಆದೇವೇ ದೇವಪರ್ಯಂತೇ ಜನೇ । ಮನುಷ್ಯಪ್ರಭೃತಿದೇವಪರ್ಯಂತೇಷು । ತೇಷಾಂ ಧಾರಕೋಽಭವದಿತ್ಯರ್ಥಃ ॥

ಪ್ರತಿಪದಾರ್ಥ

(ಎಲೈ ಯಜಮಾನರೇ) **ವಃ**—ನಿಮಗಾಗಿ । **ಸುದ್ಯೋತ್ಮಾನಂ**—ಶ್ರೇಷ್ಠವಾದ ಪ್ರಕಾಶವುಳ್ಳವನೂ । **ಸುವೃಕ್ತಿಂ**—ಪಾಪವರ್ಜಿತನೂ ಅಥವಾ ಉತ್ತಮವಾದ ಸ್ತುತಿಯುಳ್ಳವನೂ । **ವಿಶಾಂ**—ಯಜಮಾನರಿಗೆ । **ಅತಿಥಿಂ**-ಅತಿಥಿಯಂತೆ ಪೂಜ್ಯನೂ । **ಸುಪ್ರಯಸಂ**—ಹವಿಸ್ಸಿನ ರೂಪದ ಅನ್ನವುಳ್ಳವನೂ ಆದ । **ಅಗ್ನಿಂ**—ಅಗ್ನಿಯನ್ನು । **ಹುವೇ**—ಪ್ರಾರ್ಥಿಸಿ ಕರೆಯುತ್ತೇನೆ । **ಜಾತವೇದಾಃ** - ಜಾತಪ್ರಜ್ಞನಾದ । **ಯಃ ದೇವಃ**—ದೇವತಾತ್ಮನಾದ । ಯಾವ ಆದೇ ಅಗ್ನಿಯು । **ಮಿತ್ರ ಇವ**—ಸಖನಂತೆ ಅಥವಾ ಮಿತ್ರದೇವನಂತೆ । **ಆ ದೇವೇ ಜನೇ**—ಮಾನವರು ಮೊದಲುಗೊಂಡು ದೇವತೆಗಳವರೆಗೂ ಇರುವ ಪ್ರಜೆಗಳನ್ನು । **ದಿಧಿಷಾಯ್ಯಃ**—ಧರಿಸಿರುವವನಾಗಿ । **ಭೂತ್**—ಆಗಿರುತ್ತಾನೆ.

ಭಾವಾರ್ಥ

ಎಲೈ ಯಜಮಾನರೇ, ಶ್ರೇಷ್ಠವಾದ ಪ್ರಕಾಶವುಳ್ಳವನೂ, ಪಾಪರಹಿತನಾಗಿ ಉತ್ತಮವಾದ ಪ್ರಕಾಶವುಳ್ಳವನೂ, ಯಜಮಾನರಿಗೆ ಅತಿಥಿಯಂತೆ ಪೂಜ್ಯನೂ, ಹವಿಸ್ಸಿನ ರೂಪದ ಅನ್ನವುಳ್ಳವನೂ ಆದ ಅಗ್ನಿಯನ್ನು ನಿಮ್ಮ ಪರವಾಗಿ ಪ್ರಾರ್ಥಿಸಿ ಕರೆಯುತ್ತೇನೆ. ಜಾತಪ್ರಜ್ಞನೂ ದೇವತಾತ್ಮನೂ ಆದ ಅಗ್ನಿಯು ಮಾನವರು ಮೊದಲುಗೊಂಡು ದೇವತೆಗಳವರೆಗೂ ಇರತಕ್ಕ ಪ್ರಜೆಗಳನ್ನು ಸಖನಂತೆ ಧರಿಸಿದ್ದಾನೆ. (ಕಾಪಾಡುತ್ತಾನೆ).

## English Translation

I invoke, on your behalf, the resplendent, the sinless Agni, the guest of mortals, the accepter of (sacrificial) food, who, knowing all that has been born, is like a friend, the supporter (of all beings), from men to gods.

### ವಿಶೇಷವಿಷಯಗಳು

ಯಜಮಾನರನ್ನು ಸಂಬೋಧಿಸಿ, ಅವರ ಪರವಾಗಿ **ಸುವೃಕ್ತಿಂ—ಸುವರ್ಜಿತಂ ಪಾಪ್ಮೈಃ** ಪಾಪ ಎಂದರೆ ದುಃಖವನ್ನು ಉಂಟುಮಾಡುವ ಕರ್ಮಗಳಿಂದ ಬಿಡಲ್ಪಟ್ಟವನಾಗಿಯೂ ಅಥವಾ **ಶೋಭನಸ್ತುತಿಂ ವಾ** ಮಂಗಳಕರ ವಾದ ಸ್ತೋತ್ರಗಳಿಂದ ಸ್ತುತಿಸಲ್ಪಡುವವನೂ ಆದ ಅಗ್ನಿಯನ್ನು ಆಹ್ವಾನಮಾಡುವೆನೆಂದು ಮಂತ್ರದ್ರಷ್ಟೃವಾದ ಋಷಿಯು ಹೇಳಿರುವನು. ಮತ್ತು ಅಗ್ನಿಯು ಯಜಮಾನರಿಗೆ ಯಾವಾಗಲೂ ಅತಿಥಿಯ ಹಾಗೆ ಪೂಜ್ಯನಾಗಿರುವ ನೆಂದು ವರ್ಣಿಸಿದೆ-

**ಜಾತವೇದಾಃ ಯಃ ದೇವಃ ಮಿತ್ರ ಇವ ದಿಧಿಷಾಯ್ಯಃ ಅಗ್ನಿಃ ಸಖೇವ ಆದಿತ್ಯ ಇವ ವಾ ಮನುಷ್ಯ- ಪ್ರಭೃತಿ ದೇವಪರ್ಯಂತೇಷು ಜನೇಷು ಧಾರಯಿತಾ ಭವತಿ**—ಸರ್ವಜ್ಞನಾಗಿರುವ ಅಗ್ನಿಯು ಮನುಷ್ಯರು ಮೊದಲುಗೊಂಡು ದೇವತೆಗಳ ಪರ್ಯಂತವಾಗಿಯೂ ಇರುವ ಪ್ರಾಣಿಗಳೆಲ್ಲರನ್ನೂ ಸ್ನೇಹಿತನಂತೆ ಧರಿಸುವವನಾಗಿಯೂ ಎಂದರೆ ಎಲ್ಲಾ ಪ್ರಾಣಿಗಳಿಗೂ ಸ್ನೇಹಿತನು ಹಿತವನ್ನುಂಟುಮಾಡುವಹಾಗೆ ಹಿತಚಿಂತಕನೂ, ಸೂರ್ಯನಹಾಗೆ ರಕ್ಷಿಸುವವನೂ ಆಗಿರುವನೆಂದು ಎರಡು ವಿಧವಾಗಿ ವಿವರಿಸಿದೆ.

**ಅತಿಥಿಂ—ಅತಿಥಿವತ್ಪೂಜ್ಯಂ । ದರ್ಶಾದಿತಿಥಿಮಪೇಕ್ಷ್ಯ ಆಗಂತಾರಂ ವಾ ।** ಅಗ್ನಿಯು ಮನೆಗೆ ಬಂದಿರುವ ಅತಿಥಿಯಹಾಗೆ ಯಜಮಾನನಿಂದ ಪೂಜೆಗೆ ಅರ್ಹನಾಗಿರುವನು. ಅಥವಾ ಅಮಾವಾಸ್ಯೆ ಮೊದಲಾದ ತಿಥಿಗಳನ್ನು ಅನುಸರಿಸಿ (ದರ್ಶಪೂರ್ಣಮಾಸಾದಿಗಳನ್ನು) ಯಾಗಗಳನ್ನು ಆಚರಿಸುವ ಯಜಮಾನರ ಇಚ್ಛಾನುಸಾರ ವಾಗಿ ಅಗ್ನಿಯು ಬರುವನೆಂಬ ಅರ್ಥವನ್ನೂ ವಿವರಿಸಿದೆ. ನಿರುಕ್ತಕಾರರು—

**ಜುಷ್ಟೋ ದಮೂನಾ ಅತಿಥಿರ್ದುರೋಣ ಇಮಂ ನೋ ಯಜ್ಞಮುಪ ಯಾಹಿ ವಿದ್ವಾನ್ ।**
**ವಿಶ್ವಾ ಅಗ್ನೇ ಅಭಿಯುಜೋ ವಿಹತ್ಯಾ ಶತ್ರೂಯತಾಮಾ ಭರಾ ಭೋಜನಾನಿ ॥**

(ಋ. ಸಂ ೫-೪-೫)

ಎಂಬ ಋಕ್ಕನ್ನುದಾಹರಿಸಿ—

**ಅತಿಥಿರಭ್ಯತಿತೋ ಗೃಹಾನ್ ಭವತಿ । ಅಭ್ಯೇತಿ ತಿಥಿಷು ಪರಕುಲಾನೀತಿ ವಾ ಪರಗೃಹಾಣೀತಿ ವಾ।**
**ಅಯಮಪೀತರೋಽತಿಥೇರೇತಸ್ಮಾದೇವ ।**

(ನಿ ೪-೪)

ಎಂದು ನಿರ್ವಚನವನ್ನು ಹೇಳಿರುವರು. ದುರ್ಗಾಚಾರ್ಯರು ಇದಕ್ಕೆ ವ್ಯಾಖ್ಯಾನಮಾಡುತ್ತಾ—**ಗೃಹಾನ್ ಅಭಿ ಆಭಿಮುಖ್ಯೇನ ಅಸೌ ಅತಿತೋ ಭವತಿ** ಮನೆಗಳನ್ನು ಹುಡುಕಿಕೊಂಡು ಇವನು ಬರುವವನಾದಕಾರಣ ಇವನಿಗೆ ಅತಿಥಿಯೆಂದು ಹೆಸರು. ಅಥವಾ ಅಮಾವಾಸ್ಯೆಯೇ ಮೊದಲಾದ ತಿಥಿಗಳಲ್ಲಿ ಯಜ್ಞಮಾಡುವವರ ಮನೆಗಳಿಗೆ ಬಂದು ಸೇರುವನು. ಆದ್ದರಿಂದ ಅಗ್ನಿಗೆ ಅತಿಥಿಯೆಂದು ಹೆಸರು. ಅಥವಾ—**ಅಭ್ಯೇತಿ ತಿಥಿಷು ಪರಕುಲಾನಿ ಪೌರ್ಣ- ಮಾಸ್ಯಾದಿಷು ಯಜಮಾನಕುಲಾನಿ ಅಭ್ಯಾಗಚ್ಛತಿ ಇತಿ ಅತಿಥಿಃ । ಅಯಮಪೀತರೋಽತಿಥಿರೇತಸ್ಮಾದೇವ।** ಎಂದರೆ ಇತರ ತಿಥಿಗಳಲ್ಲಿ (ದಿನಗಳಲ್ಲಿ) ಬೇರೆ ಕುಲದವರ ಯಜ್ಞಗೃಹಗಳಿಗೆ ಹೋಗುವುದರಿಂದಲೂ, ಪೌರ್ಣಮಾ ಸ್ಯಾದಿ ಯಜ್ಞದಿನಗಳಲ್ಲಿ ಯಜಮಾನರ ಗೃಹಗಳಿಗೆ ಬರುವುದರಿಂದಲೂ, ಈ ಎರಡು ಕಾರಣಕ್ಕಾಗಿ ಅಗ್ನಿಗೆ ಅತಿಥಿ ಎಂದು ಹೆಸರು ಬಂದಿರುವುದು ಎಂದು ಅರ್ಥವಿವರಣೆಮಾಡಿದ್ದಾರೆ.

ಸಂಹಿತಾಪಾಠಃ

ಇಮಂ ವಿಧಂತೋ ಅಪಾಂ ಸಧಸ್ಥೇ ದ್ವಿತಾದಧುರ್ಭೃಗವೋ ವಿಕ್ಷ್ವಾ೩ಯೋಃ ।

ಏಷ ವಿಶ್ವಾನ್ಯಭ್ಯಸ್ತು ಭೂಮಾ ದೇವಾನಾಮಗ್ನಿರರತಿರ್ಜೀರಾಶ್ವಃ ॥ ೨ ॥

ಪದಪಾಠಃ

ಇಮಂ । ವಿಧಂತಃ । ಅಪಾಂ । ಸಧಽಸ್ಥೇ । ದ್ವಿತಾ । ಅದಧುಃ । ಭೃಗವಃ । ವಿಕ್ಷು । ಆಯೋಃ ।

ಏಷಃ । ವಿಶ್ವಾನಿ । ಅಭಿ । ಅಸ್ತು । ಭೂಮಾ । ದೇವಾನಾಂ । ಅಗ್ನಿಃ । ಅರತಿಃ । ಜೀರಽಅಶ್ವಃ ॥ ೨ ॥

ಸಾಯಣಭಾಷ್ಯಂ

ಇಮಮಗ್ನಿಂ ವಿಧಂತಃ ಪರಿಚರಂತೋ ಭೃಗವೋಽಸ್ಮತ್ಪೂರ್ವೇ ಮಹರ್ಷಯೋಽಪಾಂ ಸಧಸ್ಥೇ ಸಹಸ್ಥಾನೇಽಂತರಿಕ್ಷ ಆಯೋರ್ಮನುಷ್ಯಸ್ಯ ಯಜಮಾನಸ್ಯ ಸ್ವಭೂತಾಸು ವಿಕ್ಷು ಪ್ರಜಾಸ್ವೃತ್ವಿಕ್ಷು ತೇಷಾಂ ಮಧ್ಯೇ ಚ ದ್ವಿತಾ ದ್ವಯೋಃ ಸ್ಥಾನಾದದಧುಃ । ಅಧಾರಯನ್ ॥ ದಧಾತೇರ್ಲಙಿ ರೂಪಂ ॥ ಏಷೋಽಗ್ನಿರ್ಭೂಮಾ ಭೂಮ್ನಾ ತ್ಯರ್ಥಂ ವಿಶ್ವಾನಿ ಭೂತಜಾತಾನ್ಯಸ್ಮದ್ವಿರೋಧೀನ್ಯಭ್ಯಸ್ತು । ಅಭಿಭವತು । ಸ ಕೀದೃಶಃ । ದೇವಾನಾಮರತಿರೀಶ್ವರಃ । ತೇಷಾಂ ಮಧ್ಯೇ ಶೀಘ್ರಮರಣಶೀಲೋ ವಾಸ್ಮದ್ಯಾಗಂ ಪ್ರತಿ । ತಥಾ ಜೀರಾಶ್ವಃ ಕ್ಷಿಪ್ರಾಶ್ವಃ ॥

ಪ್ರತಿಪದಾರ್ಥ

ಇಮಂ—ಈ ಅಗ್ನಿಯನ್ನು । ವಿಧಂತಃ—ಪರಿಚರಿಸತಕ್ಕ । ಭೃಗವಃ—ಭೃಗುಋಷಿಗಳು । ಅಪಾಂ-ಸಧಸ್ಥೇ—ಅಂತರಿಕ್ಷದಲ್ಲಿಯೂ । ಆಯೋಃ ವಿಕ್ಷು—ಯಜಮಾನರಿಗೆ ಸೇರಿದ ಋತ್ವಿಕ್ಕುಗಳ ಗುಂಪಿನಲ್ಲಿಯೂ । ದ್ವಿತಾ—ಎರಡು ಸ್ಥಾನಗಳಿಂದಲೂ ಅಥವಾ ಎರಡು ಸಲ । ಅದಧುಃ—ಆವಿರ್ಭೂತನಾಗುವಂತೆ ಮಾಡಿದರು । ದೇವಾನಾಂ—ದೇವತೆಗಳ । ಅರತಿಃ—ಈಶ್ವರನೂ । ಜೀರಾಶ್ವಃ—ವೇಗವಾದ ಅಶ್ವಾರೂಢನಾಗಿರುವವನೂ ಆದ । ಏಷಃ ಅಗ್ನಿಃ—ಈ ಅಗ್ನಿಯು । ಭೂಮಾ—ಅಧಿಕವಾಗಿ । ವಿಶ್ವಾನಿ—ನಮ್ಮ ವಿರೋಧಿಗಳೆಲ್ಲರನ್ನೂ । ಅಭ್ಯಸ್ತು—ಸೋಲಿಸಿ ನಾಶಪಡಿಸಲಿ ।

ಭಾವಾರ್ಥ

ಈ ಅಗ್ನಿಯನ್ನು ಪರಿಚರಿಸತಕ್ಕ ಭೃಗುಋಷಿಗಳು ಅಂತರಿಕ್ಷದಲ್ಲಿ ಒಂದು ಸಲವೂ ಪೃಥ್ವಿಯ ಮೇಲೆ ಋತ್ವಿಕ್ಕುಗಳ ಮಧ್ಯೆ ಒಂದು ಸಲವೂ ಹೀಗೆ ಎರಡು ಸ್ಥಾನಗಳಲ್ಲಿಯೂ ಎರಡು ಸಲ ಆವಿರ್ಭೂತನಾಗುವಂತೆ ಮಾಡಿದರು. ದೇವತೆಗಳಿಗೆ ಈಶ್ವರನೂ, ವೇಗವಾದ ಅಶ್ವಾರೂಢನಾಗಿರುವವನೂ ಆದ ಈ ಅಗ್ನಿಯು ನಮ್ಮ ವಿರೋಧಿಗಳೆಲ್ಲರನ್ನೂ ಪೂರ್ಣವಾಗಿ ಸೋಲಿಸಿ ನಾಶಪಡಿಸಲಿ.

## English Translation

The Bhrigus, worshipping Agni, have twice made him manifest, (once) in the abode of the waters, and (once) amongst the sons of men ; may that Agni, the sovereign of the gods mounted on a rapid courser, ever overcome all (our foes).

। ವಿಶೇಷವಿಷಯಗಳು ।

ಇಲ್ಲಿ ಭೃಗವಃ ಎಂಬ ಶಬ್ದಕ್ಕೆ ಅಸ್ಮತ್ಪೂರ್ವೇ ಮಹರ್ಷಯಃ ಮಂತ್ರದ್ರಷ್ಟನಾದ ಗೃತ್ಸಮದನಿಗಿಂತಲೂ ಪ್ರಾಚೀನರಾದ ಮಹರ್ಷಿಗಳೆಂದು ಅರ್ಥವನ್ನು ವಿವರಿಸಿದೆ. ಮತ್ತು ಗೃತ್ಸಮದನು ಭೃಗುಕುಲಕ್ಕೆ ಸೇರಿದ್ದರಿಂದ ಭೃಗುಕುಲದ ಹಿಂದಿನ ಋಷಿಗಳನ್ನು ತನ್ನ ಪೂರ್ವಿಕರೆಂದು ಹೇಳಿಕೊಂಡಿರುವುದು ಸಹಜವಾಗಿದೆ.

ಆಯೋಃ ವಿಕ್ಷು—ಮನುಷ್ಯಸ್ಯ ಯಜಮಾನಸ್ಯ ಸ್ವಭೂತಾಸು ಪ್ರಜಾಸು ಋತ್ವಿಕ್ಷು—ಮನುಷ್ಯ ವಾಚಿಯಾದ ಆಯುಶಬ್ದಕ್ಕೆ ಯಜಮಾನನೆಂಬ ಅರ್ಥವನ್ನು ವಿವರಿಸಿ, ಋತ್ವಿಜರೂ, ಮತ್ತು ಪುತ್ರಪೌತ್ರಾದಿಗಳೂ ಯಜಮಾನರ ಆತ್ಮೀಯರಾದುದರಿಂದ ಮಹರ್ಷಿಗಳು ಅಗ್ನಿಯನ್ನು ಅಂತರಿಕ್ಷದಲ್ಲಿಯೂ ಎಂದರೆ ವಿದ್ಯುದ್ರೂಪದಲ್ಲಿಯೂ, ಯಜಮಾನರ ಆತ್ಮೀಯರಾದ ಋತ್ವಿಜರು ಮತ್ತು ಪ್ರಜೆಗಳ ಗೃಹಗಳಲ್ಲಿಯೂ (ಎರಡು ಕಡೆಯಲ್ಲಿ ಉತ್ಪನ್ನನಾಗುವಂತೆ ಮಾಡಿರುವರು. ಎಂದರೆ ಅಗ್ನಿಯು ಅಂತರಿಕ್ಷದಲ್ಲಿ ವೈದ್ಯುತರೂಪದಿಂದಲೂ, ಯಾಗಾರ್ಥವಾಗಿ ಋತ್ವಿಜರಲ್ಲಿಯೂ ಎರಡು ವಿಧವಾಗಿ ಇರುವುದೆಂದು ವಿವೃತವಾಗಿದೆ.

ವಿಷಃ ಭೂಮ ವಿಶ್ವಾನಿ ಅಭ್ಯಸ್ತು—ಅಗ್ನಿಃ ( ಭೂಮ್ನಾ ) ಅತ್ಯರ್ಥಂ ಅಸ್ಮದ್ವಿರೋಧೀನಿ ಭೂತಜಾತಾನಿ ಅಭಿಭವತು—ಅಗ್ನಿಯು ಯಜಮಾನರಾದ ನಮ್ಮ ಶತ್ರುವರ್ಗಕ್ಕೆ ಸೇರಿದ ಪ್ರಾಣಿಗಳೆಲ್ಲವನ್ನೂ ಸೋಲಿಸಲಿ ಎಂದು ಯಜಮಾನರ ಅಭಿಲಾಷೆಯು ವರ್ಣಿತವಾಗಿದೆ.

ದೇವಾನಾಂ ಅರತಿಃ—ಅವತಿರೀಶ್ವರಃ । ಶೀಘ್ರಮರಣಶೀಲೋ ವಾ । ಅಗ್ನಿಯು ದೇವತೆಗಳ ಅಧಿಪತಿಯೆಂದೂ ಅಥವಾ ದೇವತೆಗಳ ಮಧ್ಯದಲ್ಲಿ ಎಲ್ಲರಿಗಿಂತಲೂ ಜಾಗ್ರತೆಯಾಗಿ ಯಾಗಕ್ಕೆ ಬರುವವನೆಂದೂ ಅರತಿ ಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ವಿವರಿಸಲಾಗಿದೆ.

———:o:———

ಸಂಹಿತಾಪಾಠಃ

ಅಗ್ನಿಂ ದೇವಾಸೋ ಮಾನುಷೀಷು ವಿಕ್ಷು ಪ್ರಿಯಂ ಧುಃ ಕ್ಷೇಷ್ಯಂತೋ ನ ಮಿತ್ರಂ ।

ಸ ದೀದಯದುಶತೀರೂರ್ಮ್ಯಾ ಆ ದಕ್ಷಾಯ್ಯೋ ಯೋ ದಾಸ್ವತೇ ದಮ ಆ ॥ ೩ ॥

ಪದಪಾಠ:

ಅಗ್ನಿಂ । ದೇವಾಸಃ । ಮಾನುಷೀಷು । ವಿಕ್ಷು । ಪ್ರಿಯಂ । ಧುಃ । ಕ್ಷೇಷ್ಯಂತಃ । ನ । ಮಿತ್ರಂ ।

ಸಃ । ದೀದಯತ್ । ಉಶತೀಃ । ಊರ್ಮ್ಯಾಃ । ಆ । ದಕ್ಷಾಯ್ಯಃ । ಯಃ । ದಾಸ್ವತೇ । ದಮೇ । ಆ ॥ ೩ ॥

ಸಾಯಣಭಾಷ್ಯಂ

ದೇವಾಸೋ ದೇವಾಃ ಕ್ಷೇಷ್ಯಂತಃ ಸ್ವರ್ಗಂ ಪ್ರತಿ ಗಚ್ಛಂತಃ ಸಂತಃ ಪೂರ್ವಂ ಮಾನುಷೀಷು ಮನುಷ್ಯಸಂಬಂಧಿನೀಷು ವಿಕ್ಷು ಪ್ರಜಾಸು ಪ್ರಿಯಂ ದೇವಾನಾಂ ಪ್ರೀಣಯಿತಾರಮಗ್ನಿಂ ಧುಃ । ಅಧುಃ ಸ್ಥಾಪಿತವಂತಃ । ತತ್ರ ದೃಷ್ಟಾಂತಃ । ಕ್ಷೇಷ್ಯಂತೋ ಮಿತ್ರಂ ನ । ರಾಯಂ ಪ್ರತಿ ಗಚ್ಛಂತೋ ನರಾ ಮಿತ್ರಂ ಪ್ರಿಯಂ ಸಖಾಯಂ ಸ್ವಗೃಹರಕ್ಷಾರ್ಥಂ ಸ್ಥಾಪಯಂತಿ । ತದ್ವತ್ । ಸ ಏವಂ ದೇವೈಃ ಸ್ಥಾಪಿತೋ ಯೋಽಗ್ನಿರ್ದಾಸ್ವತೇ ಹವಿರ್ದತ್ತವತೇ ಯಜಮಾನಾಯ ತದರ್ಥಂ ದಮೇ ತದೀಯೇ ಯಾಗಗೃಹ ಆ ಆಹಿತಃ ಸ್ಥಾಪಿತೋ ದಕ್ಷಾಯ್ಯಃ ಸಮರ್ಧಯಿತಾ ದಾತಾ ವಾ ಸೋಽಗ್ನಿರುಶತೀಃ ಕಾಮಯಮಾನಾ ಊರ್ಮ್ಯಾ ರಾತ್ರೀಃ ಸರ್ವಾಸು ರಾತ್ರಿಷ್ವಾದೀದಯತ್ । ದೀಪ್ಯತೇ ಸರ್ವತಃ । ಸರ್ವರಾತ್ರೀರಾದೀಪಯತಿ ವಾ ॥

ಪ್ರತಿಪದಾರ್ಥ

ಕ್ಷೇಷ್ಯಂತಃ—ಧನಾರ್ಥವಾಗಿ ಹೊರಕ್ಕೆ ಹೋಗತಕ್ಕ ಮಾನವರು । ಮಿತ್ರಂ ನ—(ತಮ್ಮ ಗೃಹದ ರಕ್ಷಣೆಗೆ) ತಮ್ಮ ಸ್ನೇಹಿತರನ್ನಿರಿಸುವಂತೆ । ದೇವಾಸಃ—ದೇವತೆಗಳು । ಕ್ಷೇಷ್ಯಂತಃ—ಸ್ವರ್ಗವಾಸಿಗಳಾಗಿ ಹೋಗುವಾಗ । ಮಾನುಷೀಷು—ಮಾನವರಿಗೆ ಸಂಬಂಧಿಸಿದ । ವಿಕ್ಷು—ಪ್ರಜೆಗಳಲ್ಲಿ । ಪ್ರಿಯಂ—ದೇವತೆಗಳಿಗೆ ಪ್ರೀತಿಕಾರಕನಾದ ಅಗ್ನಿಯನ್ನು । ಧುಃ—ಸ್ಥಾಪಿಸಿದರು । ಯಃ—ದೇವತೆಗಳಿಂದ ಸ್ಥಾಪಿತನಾದ ಯಾವ ಅಗ್ನಿಯು। ದಾಸ್ವತೇ—ಹವಿಸ್ಸನ್ನು ಅರ್ಪಿಸತಕ್ಕ ಯಜಮಾನನಿಗಾಗಿ । ದಮೇ—ಅವನ ಯಾಗಗೃಹದಲ್ಲಿ । ಆ—ಸ್ಥಾಪಿತನಾಗಿ। ದಕ್ಷಾಯ್ಯಃ—(ಅವನ ಸಂಪತ್ತನ್ನು) ವೃದ್ಧಿಪಡಿಸುತ್ತಾನೆಯೋ । ಸಃ—ಆ ಅಗ್ನಿಯು । ಉಶತೀಃ—ಅವನನ್ನು ಅಪೇಕ್ಷಿಸತಕ್ಕ । ಊರ್ಮ್ಯಾಃ—ಸಕಲ ರಾತ್ರಿಗಳಲ್ಲೂ । ಆ ದೀದಯತ್—ಪ್ರಕಾಶಿಸುತ್ತಾನೆ.

ಭಾವಾರ್ಥ

ವಾಸಮಾಡಲು ದೇವತೆಗಳು ಸ್ವರ್ಗಕ್ಕೆ ಹೋಗುವಾಗ, ಧನಾರ್ಥವಾಗಿ ಹೊರಕ್ಕೆ ಹೋಗತಕ್ಕ ಪುರುಷನು ತನ್ನ ಗೃಹದ ರಕ್ಷಣೆಗಾಗಿ ತನ್ನ ಸ್ನೇಹಿತನನ್ನು ಇರಿಸುವಂತೆ ದೇವತೆಗಳಿಗೆ ಪ್ರೀತಿಕರನಾದ ಅಗ್ನಿಯನ್ನು ಮಾನವರಲ್ಲಿ ಸ್ಥಾಪಿಸಿದರು. ಯಾವ ಅಗ್ನಿಯು ಹವಿಸ್ಸನ್ನು ಅರ್ಪಿಸತಕ್ಕ ಯಜಮಾನನಿಗಾಗಿ ಅವನ ಗೃಹದಲ್ಲಿ ಸ್ಥಾಪಿತನಾಗಿ ಅವನ ಸಂಪತ್ತನ್ನು ವೃದ್ಧಿಪಡಿಸುತ್ತಾನೆಯೋ, ಆ ಅಗ್ನಿಯು ಅವನು ಅಪೇಕ್ಷಿಸತಕ್ಕ ಸಕಲ ರಾತ್ರಿಗಳಲ್ಲೂ ಪ್ರಕಾಶಿಸುತ್ತಾನೆ.

## English Translation

The gods, intending to dwell (in heaven), left, as a dear friend amongst the human races, that Agni, who, present in the chamber of sacrifice, is bounteous to the donor of offerings, aud shines on the nights when he is wished for.

ವಿಶೇಷವಿಷಯಗಳು

**ದೇವಾಃ ಶ್ಲೇಷ್ಯಂತಃ ಮಾನುಷೀಷು ವಿಕ್ಷು ಪ್ರಿಯಂ ಮಿತ್ರಂ ನ ಧುಃ**—ಈ ವಾಕ್ಯಕ್ಕೆ ಎರಡು ವಿಧವಾಗಿ ಅರ್ಥವು ವಿವೃತವಾಗಿದೆ. **ದೇವಾಃ ಸ್ವರ್ಗಂ ಪ್ರತಿಗಚ್ಛಂತಃ ಮನುಷ್ಯಸಂಬಂಧಿನೀಷು ಪ್ರಜಾಸು ಅಗ್ನಿಂ ಪ್ರೀಣಯಿತಾರಂ ಸ್ಥಾಪಿತವಂತಃ**—ದೇವತೆಗಳು ಸ್ವರ್ಗಕ್ಕೆ ಹೋಗುವಾಗ ತಮಗೆ ಸಂತೋಷವನ್ನುಂಟು ಮಾಡುವ ಅಗ್ನಿಯನ್ನು ಮನುಷ್ಯಸಂಬಂಧಿಗಳಾದ ಪ್ರಜೆಗಳಲ್ಲಿ ಮೊದಲು ಸ್ಥಾಪಿಸಿರುವರು ಎಂದು ಮೊದಲನೆಯ ಅರ್ಥವು. ಎರಡನೆಯ ಅರ್ಥವು ಈ ವಿಷಯದಲ್ಲಿ ದೃಷ್ಟಾಂತರೂಪವಾಗಿರುವುದು. **ಶ್ಲೇಷ್ಯಂತಃ ಮಿತ್ರಂ ನ**—**ರಾಯಂ ಪ್ರತಿಗಚ್ಛಂತೋ ನರಾಃ ಪ್ರಿಯಂ ಸಖಾಯಂ ಸ್ವಗೃಹರಕ್ಷಾರ್ಥಂ ಸ್ಥಾಪಯಂತಿ ತದ್ವತ್**—ತಮ್ಮ ದ್ರವ್ಯವನ್ನು ಸಾಧಿಸುವುದಕ್ಕಾಗಿ ಹೋಗುವ ಜನಗಳು ತಮ್ಮ ಆಪ್ತ ಸ್ನೇಹಿತರನ್ನು ತಮ್ಮ ಮನೆಯ ರಕ್ಷಣೆಗಾಗಿ ಇರಿಸುವ ಹಾಗೆ ದೇವತೆಗಳು ಅಗ್ನಿಯನ್ನು ಮನುಷ್ಯರಲ್ಲಿ ಇರಿಸಿರುವರೆಂದು ಎರಡನೆಯ ಅರ್ಥವೂ ವಿವೃತವಾಗಿರುತ್ತದೆ.

**ಯಃ ದಾಸ್ಯತೇ ದಮೇ ಆ ದಾಕ್ಷಾಯ್ಯಃ**—**ಏವಂ ದೇವೈಃ ಸ್ಥಾಪಿತಃ ಅಗ್ನಿಃ ಹವಿರ್ದತ್ತವತೇ ಯಜಮಾನಾಯ ಯಾಗಗೃಹೇ ಆಹಿತಃ ಸಮರ್ಧಯಿತಾ ದಾತಾ ವಾ**—ದೇವತೆಗಳಿಂದ ಸ್ಥಾಪಿತನಾಗಿರುವ ಅಗ್ನಿಯು ಯಾಗಶಾಲೆಯಲ್ಲಿ ತನ್ನ ವಾಸಸ್ಥಾನದಲ್ಲಿ ಯಜಮಾನರಿಂದ ಇರಿಸಲ್ಪಟ್ಟವನಾಗಿ ಹವಿಸ್ಸನ್ನು ಅರ್ಪಿಸುವ ಯಜಮಾನನ ಇಷ್ಟಾರ್ಥಗಳನ್ನು ಪೂರ್ತಿಮಾಡುವನು ಅಥವಾ ಯಜಮಾನರ ಸಂಪತ್ತನ್ನು ವೃದ್ಧಿಪಡಿಸುವನು ಎಂದು ವರ್ಣಿಸಿದೆ.

ಈ ಅಗ್ನಿಯು **ಉರ್ವ್ಯಾಃ ಆ ದೀದಯತ್**—**ಸರ್ವಾಸು ರಾತ್ರಿಷು ದೀಪ್ಯತೇ ಸರ್ವರಾತ್ರೀರಾದಿಪಯತಿ ವಾ**—ರಾತ್ರಿಕಾಲದಲ್ಲಿ ಪ್ರಕಾಶಿಸುವನು ಎಂದರೆ ಸಾಯಂಕಾಲದಿಂದ ಹಿಡಿದು ಪ್ರಾತಃಕಾಲದವರೆಗೆ ರಾತ್ರಿ ಕಾಲವೆಲ್ಲಾ ಪೂರ್ತಿಯಾಗಿ ಬೆಳಗುತ್ತಿರುವನು. ಅಥವಾ ಎಲ್ಲಾ ದಿವಸಗಳ ರಾತ್ರಿಗಳಲ್ಲಿಯೂ ಪ್ರಕಾಶಿಸುತ್ತಿರುವನು ಎಂದು ಎರಡುವಿಧ ಅರ್ಥಗಳನ್ನು ವಿವರಿಸಿರುವರು.

---

ಸಂಹಿತಾಪಾಠಃ

ಅಸ್ಯ ರಣ್ವಾ ಸ್ವಸ್ಯೇವ ಪುಷ್ಟಿಃ ಸಂದೃಷ್ಟಿರಸ್ಯ ಹಿಯಾನಸ್ಯ ಧಕ್ಷೋಃ ।
ವಿ ಯೋ ಭರಿಭ್ರದೋಷಧೀಷು ಜಿಹ್ವಾಮತ್ಯೋ ನ ರಥ್ಯೋ ದೋಧವೀತಿ
ವಾರಾನ್ ॥ ೪ ॥

ಪದಪಾಠಃ

ಅಸ್ಯ । ರಣ್ವಾ । ಸ್ವಸ್ಯಃಇವ । ಪುಷ್ಟಿಃ । ಸಂಽದೃಷ್ಟಿಃ । ಅಸ್ಯ । ಹಿಯಾನಸ್ಯ । ಧಕ್ಷೋಃ ।
ವಿ । ಯಃ । ಭರಿಭ್ರತ್ । ಓಷಧೀಷು । ಜಿಹ್ವಾಂ । ಅತ್ಯಃ । ನ । ರಥ್ಯಃ । ದೋಧವೀತಿ । ವಾರಾನ್ ॥ ೪॥

### ಸಾಯಣಭಾಷ್ಯಂ

ಅಸ್ಯಾಗ್ನೇಃ ಪುಷ್ಟಿಃ ಶರೀರವೃದ್ಧೀ ರಣ್ವಾ ರಮಣೀಯಾ ಶಬ್ದಯುಕ್ತಾ ವಾ । ತತ್ರ ದೃಷ್ಟಾಂತಃ । ಸ್ವಸ್ಯ ಪುಷ್ಟಿರಿವ । ಯಥಾ ಲೋಕೇ ಸ್ವಕೀಯಾ ಪುಷ್ಟಿಃ ಸ್ವಸ್ಮೈ ರಮಣೀಯಾ ಭವತಿ ತದ್ವತ್ । ಯದ್ವಾಸ್ಯಾಗ್ನೇಃ ಸಂಬಂಧಿನೀ ಪುಷ್ಟಿರ್ಯಥಾ ಯಜಮಾನವಿಷಯಾ ರಣ್ವಾ ತದ್ವತ್ । ಕಿಂಚ ಹಿಯಾನಸ್ಯ ಸಮೃದ್ಧಿಂ ಗಚ್ಛತೋ ವ್ಯಾಪ್ನುವತೋ ದಕ್ಷೋಃ ಕಾಷ್ಠಾನ್ ದಿಧಕ್ಷೋರ್ದಗ್ಧು-ಮಿಚ್ಛೋರಸ್ಯಾಗ್ನೇಃ ಸಂದೃಷ್ಟಿಃ ಸಂದರ್ಶನಾವಿರ್ಭಾವೋಽಪಿ ರಣ್ವಾ । ಯೋಽಗ್ನಿರೋಷಧೀಷು ಕಾಷ್ಠೇಷು ಜಿಹ್ವಾಂ ಜ್ವಾಲಾಂ । ಜಾತ್ಯೇಕವಚನಂ । ಜ್ವಾಲಾ ವಿಭರಿಭ್ರತ್ । ಅತ್ಯರ್ಥಂ ವಿಹರತಿ । ಕಂಪಯತೀ-ತ್ಯರ್ಥಃ ॥ ಹರತೇರ್ಯಜ್‌ಲುಗಂತತ್ವೇನ ದಾಧರ್ತ್ಯಾದಿಷು । ಪಾ. ೭-೪-೬೫ । ನಿಪಾತಿತಾಲ್ಲೇಟ್ಯ-ಡಾಗಮಃ । ಯದ್ವೋಗಾದನಿಘಾತಃ ॥ ತತ್ರ ದೃಷ್ಟಾಂತಃ । ರಥ್ಯೋ ರಥಾರ್ಹೋಽತ್ಯೋ ನ ವಾಜೀ ಯಥಾ ವಾರಾನ್ ದಂಶವಾರಣಸಾಧನಾನ್ವಾಲಾನ್ ದೋಧವೀತಿ । ಕಂಪಯತಿ ತದ್ವತ್ । ಯೋಽ-ಗ್ನಿರ್ಜ್ವಾಲಾಃ ಕಂಪಯತಿ ಅಸ್ಯಾಗ್ನೇಃ ಪುಷ್ಟೀ ರಣ್ವೇತಿ ॥

### ಪ್ರತಿಪದಾರ್ಥ

**ರಥ್ಯಃ**—ರಥವನ್ನು ವಹಿಸಲು ಯೋಗ್ಯವಾದ । **ಅತ್ಯಃ**—ಅಶ್ವವು । **ವಾರಾನ್**—ಸೊಳ್ಳೆಗಳನ್ನು ಒಡಿಸುವ ತನ್ನ ಬಾಲದ ಗೊಂಚಲನ್ನು । **ದೋಧವೀತಿ ನ**—ಬೀಸಿ ಆಡಿಸುವಂತೆ । **ಯಃ**—ಯಾವ ಅಗ್ನಿಯು । **ಓಷಧೀಷು**—ಕಾಷ್ಠಾದಿಗಳಲ್ಲಿ । **ಜಿಹ್ವಾಂ**—ಜಿಹ್ವಾರೂಪವಾದ ತನ್ನ ಜ್ವಾಲೆಯನ್ನು । **ವಿ ಭರಿಭ್ರತ್**—ನಾನಾ ಕಡೆಗಳಲ್ಲಿಯೂ ಪ್ರಸರಿಸಿ ವಿಹರಿಸುತ್ತಾನೆಯೋ । **ಅಸ್ಯ**—ಆ ಅಗ್ನಿಯ ಪುಷ್ಟಿಯುತವಾದ ಪ್ರಸರವು । **ಸ್ವಸ್ಯ**—ದ್ರಷ್ಟೃವಿನ । **ಪುಷ್ಟಿಃ ಇವ**—ಸ್ವಂತ ಶರೀರದ ಪುಷ್ಟಿಯುತವಾದ ಬೆಳವಣಿಗೆಯಂತೆ । **ರಣ್ವಾ**—ರಮಣೀಯವಾಗಿದೆ। **ಹಿಯಾನಸ್ಯ**—ವೃದ್ಧಿಯನ್ನು ಹೊಂದಿ ಹರಡುವವನೂ । **ಧಕ್ಷೋಃ**—ಕಾಷ್ಠಾದಿಗಳನ್ನು ದಹಿಸುವವನೂ ಆದ ಅದೇ ಅಗ್ನಿಯ । **ಸಂದೃಷ್ಟಿಃ**—ಮನೋಹರವಾದ ದರ್ಶನವೂ ಸಹ ಆಕರ್ಷಕವಾಗಿದೆ.

### ಭಾವಾರ್ಥ

ರಥವನ್ನು ವಹಿಸಲು ಯೋಗ್ಯವಾದ ಅಶ್ವವು ಸೊಳ್ಳೆಗಳನ್ನು ಓಡಿಸುವ ತನ್ನ ಬಾಲದ ಪೊದೆಯನ್ನು ಬೀಸಿ ಆಡಿಸುವಂತೆ ಯಾವ ಅಗ್ನಿಯು ಕಾಷ್ಠಾದಿಗಳಲ್ಲಿ ಜಿಹ್ವಾರೂಪವಾದ ತನ್ನ ಜ್ವಾಲೆಯನ್ನು ನಾನಾಕಡೆಗಳಲ್ಲಿಯೂ ಪ್ರಸರಿಸಿ ವಿಹರಿಸುತ್ತಾನೆಯೋ ಆ ಅಗ್ನಿಯ ಪುಷ್ಟಿಯುತವಾದ ಪ್ರಸರವು ದ್ರಷ್ಟೃವಿನ ಸ್ವಂತ ಶರೀರದ ಪುಷ್ಟಿಯುತವಾದ ಬೆಳವಣಿಗೆಯಂತೆ ರಮಣೀಯವಾಗಿದೆ. ಕಾಷ್ಠಾದಿಗಳನ್ನು ದಹಿಸಿ ಪ್ರಸರಿಸುವ ಅದೇ ಅಗ್ನಿಯ ದರ್ಶನವೂ ಸಹ ಆಕರ್ಷಕವಾಗಿಯೇ ಇದೆ.

### English Translation

The cherishing of Agni is as agreeable as (the cherishing) of one's self; (pleasant) is his appearance, when spreading abroad, and consuming (the fuel); he brandishes his flame amongst the bushes, as a chariot-horse lashes with his tail.

### ವಿಶೇಷವಿಷಯಗಳು

**ಅಸ್ಯ ಪುಷ್ಟಿಃ ರಣ್ವಾ ಸ್ವಸ್ಯ ಪುಷ್ಟಿರಿವ— ಅಗ್ನೇಃ ಶರೀರವೃದ್ಧಿಃ ರಮಣೀಯಾ ಶಬ್ದಯುಕ್ತಾ ವಾ।** ಅಗ್ನಿಯ ಶರೀರವೃದ್ಧಿಯು ಮನೋಹರವಾಗಿರುವುದೂ ಅಥವಾ ಧ್ವನಿಯಿಂದ ಕೂಡಿರುವುದೂ ಆಗಿರುತ್ತದೆ. ಈ ವಿಷಯದಲ್ಲಿ ದೃಷ್ಟಾಂತವು ಉಕ್ತವಾಗಿದೆ. **ಯಥಾ ಲೋಕೇ ಸ್ವಕೀಯಾ ಪುಷ್ಟಿಂ ಸ್ವಸ್ಮೈ ರಮಣೀಯಾ—** ಲೋಕದಲ್ಲಿ ಪ್ರಾಣಿಗಳ ಶರೀರಪುಷ್ಟಿಯು ಅವರವರಿಗೆ ಹಿತವಾಗಿರುವಂತೆ ಎಂದು ಅಗ್ನಿಯ ಶರೀರಾಭಿವೃದ್ಧಿಯ್ನು ವಿಷಯದಲ್ಲಿ ದೃಷ್ಟಾಂತವು. **ಯದ್ವಾ ಅಸ್ಯಾಗ್ನೇಃ ಸಂಬಂಧಿನೀ ಪುಷ್ಟಿಃ ಯಜಮಾನವಿಷಯಾ ರಣಾ ಸ್ವಸ್ಯಾಗ್ನೇಃ ಪುಷ್ಟಿಃ ಯಥಾ ರಣ್ವಾ ತದ್ವತ್—**ಯಜಮಾನರು ಅರ್ಪಿಸಿದ ಹವಿಸ್ಸುಗಳಿಂದ ಈ ಅಗ್ನಿಯ ಅಭಿವೃದ್ಧಿಯು ಯಜಮಾನರ ವಿಷಯದಲ್ಲಿ ಮನೋಹರವಾಗಿರುವಂತೆ ಈ ಅಗ್ನಿಯ ಸ್ವಶರೀರಾಭಿವೃದ್ಧಿಯೂ ಸಂತೋಷಜನಕವಾಗಿರುತ್ತದೆ ಎಂದು ಇನ್ನೊಂದು ವಿಧವಾದ ಅರ್ಥವನ್ನು ವಿವರಿಸಿದೆ.

**ಹಿಯಾನಸ್ಯ ಧಕ್ಷೋಃ ಸಂದೃಷ್ಟಿಃ ರಣ್ವಾ—ಸಮೃದ್ಧಿಂ ಗಚ್ಛತೋ ಕಾಷ್ಠಾನ್ ದಗ್ಧುಮಿಚ್ಛೋಃ ಅಸ್ಯಾಗ್ನೇಃ ಸಂದರ್ಶನಾವಿರ್ಭಾವೋಽಪಿ ರಣ್ವಾ।** ಅಭಿವೃದ್ಧಿಯನ್ನು ಹೊಂದಿ ವನದಲ್ಲಿರುವ ಓಷಧಿಗಳೇ ಮೊದಲಾದುವುಗಳನ್ನು ದಹಿಸಲು ಇಚ್ಛಿಪಡುವ ಅಗ್ನಿಯು ತನ್ನ ಆವಿರ್ಭಾವವನ್ನು ಪ್ರಕಟಗೊಳಿಸುವುದೂ ಸಹ ಪ್ರಕಾಶಮಾನವಾಗಿ ಎಲ್ಲರಿಗೂ ಆಹ್ಲಾದಜನಕವಾಗಿರುತ್ತದೆ ಎಂದು ವಿವರಿಸಿದೆ.

**ರಥ್ಯಃ ಅತ್ಯೋ ನ ವಾರಾನ್ ದೋಧವೀತಿ— ರಥಾರ್ಹಃ ವಾಜೀ ಯಥಾ ದಂಶವಾರಣಸಾಧನಾನ್ ವಾಲಾನ್ ಕಂಪಯತಿ ತದ್ವತ್ ಅಗ್ನಿಃ ಕಾಷ್ಠೇಷು ಜ್ವಾಲಾಃ ಕಂಪಯತಿ—**ರಥವನ್ನು ಎಳೆಯುವ ಅಶ್ವವು ತನ್ನ ಶರೀರವನ್ನು ಬಾಧಿಸುವ ನೊಣವೇ ಮುಂತಾದವನ್ನು ಓಡಿಸುವುದಕ್ಕಾಗಿ ತನ್ನ ಬಾಲವನ್ನು (ಬೀಸಿ) ಅಲುಗಾಡಿಸುವಂತೆ ಅಗ್ನಿಯು ಕಾಷ್ಠಗಳಲ್ಲಿ ವ್ಯಾಪಿಸುವಾಗ ತನ್ನ ಜ್ವಾಲೆಗಳನ್ನು ಸುತ್ತಲೂ ಹರಡಿ ಕಂಪಿಸುವಂತೆ ಮಾಡುತ್ತಾನೆ ಎಂದು ವಿವರಿಸಿದೆ ಅತ್ಯ ಶಬ್ದವು ಅಶ್ವ ನಾಮಗಳಲ್ಲಿ (ನಿ. ೨–೨೭) ಯಾಸ್ಕರಿಂದ ಪಠಿತವಾಗಿದೆ.

ಈ ಋಕ್ಕಿನಲ್ಲಿ ದಾವಾನಲರೂಪದಿಂದ ಇರುವ (ಕಾಡುಕಿಚ್ಚು) ಅಗ್ನಿಯನ್ನು ವರ್ಣಿಸಿದೆ. ಜನರಿಗೆ ಅವರವರ ಶರೀರಪುಷ್ಟಿಯು ಹಿತಕರವಾಗಿಯೂ, ಸಂತೋಷಪ್ರದವಾಗಿಯೂ ಇರುವಂತೆ ಅಗ್ನಿಯು ದೊಡ್ಡದಾಗಿ ಅಭಿವೃದ್ಧಿಗೊಂಡು ಶಬ್ದಮಾಡುತ್ತಾ ಕಾಷ್ಠಾದಿಗಳನ್ನು ದಹಿಸುವಾಗ ಅದನ್ನು ನೋಡುತ್ತಿರುವ ಜನಗಳಿಗೆ ರಮಣೀಯವಾಗಿಯೂ, ಆಹ್ಲಾದಕರವಾಗಿಯೂ ಇರುತ್ತದೆ. ಈ ವಿಷಯದಲ್ಲಿ ಒಂದು ದೃಷ್ಟಾಂತವು ಇಲ್ಲಿ ಉಕ್ತವಾಗಿದೆ. ಒಂದು ಕುದುರೆಯ ಪೃಷ್ಠಭಾಗವನ್ನು ಸೊಳ್ಳೆಗಳು ಮುತ್ತಿ ಕಡಿಯುತ್ತಿರುವಾಗ ಅದರ ನಿವಾರಣೆಗಾಗಿ ಕುದುರೆಯು ಸುತ್ತಲೂ ತನ್ನ ಬಾಲವು ಬೀಸುವುದಷ್ಟೆ. ಅದರಂತೆ ಅಗ್ನಿಯು ತನ್ನ ಜ್ವಾಲೆಗಳನ್ನು ಸುತ್ತಲೂ ಹರಡಿ ವೃಕ್ಷಾದಿಗಳನ್ನು ಆವರಿಸಿ ದಹಿಸುವನು ಎಂಬ ಅರ್ಥವು ಇಲ್ಲಿ ವರ್ಣಿತವಾಗಿದೆ. ಇಂತಹ ದೃಶ್ಯವು ಭೀಕರವಾಗಿದ್ದರೂ ಒಂದು ವಿಧದಲ್ಲಿ ನೋಡಲು ಆಕರ್ಷಕ ಅಥವಾ ರಮಣೀಯವಾಗಿಯೂ ಇರುವುದು ಎಂಬ ವಿಷಯವೂ ಸಹ ಉಕ್ತವಾಗಿದೆ.

———:o:———

ಸಂಹಿತಾಪಾಠಃ

ಆ ಯನ್ಮೇ ಅಭ್ವಂ ವನದಃ ಪನಂತೋಶಿಗ್ಭ್ಯೋ ನಾಮಿಮೀತ ವರ್ಣಂ ।
ಸ ಚಿತ್ರೇಣ ಚಿಕಿತೇ ರಂಸು ಭಾಸಾ ಜುಜುರ್ವಾಂ ಯೋ ಮುಹುರಾ ಯುವಾ ಭೂತ್ ॥ ೫ ॥

ಪದಪಾಠಃ

ಆ । ಯತ್ । ಮೇ । ಅಭ್ವಂ । ವನದಃ । ಪನಂತ । ಉಶಿಕ್ऽಭ್ಯಃ । ನ । ಅಮಿಮೀತ । ವರ್ಣಂ । ಸಃ । ಚಿತ್ರೇಣ । ಚಿಕಿತೇ । ರಂऽಸು । ಭಾಸಾ । ಜುಜುರ್ವಾನ್ । ಯಃ । ಮುಹುಃ । ಆ । ಯುವಾ । ಭೂತ್ ॥ ೫ ॥

ಸಾಯಣಭಾಷ್ಯಂ

ಯತ್ ಯಸ್ಯಾಭ್ವಂ ಮಹತ್ತ್ವಂ ಮೇ ಮಮ ಸಂಬಂಧಿನೋ ವನದೋ ವನಂತಃ ಸಂಭಕ್ತಾರಃ । ಯದ್ವಾ ವನದೋऽವನದೋ ಭೃಶಂ ಶಬ್ದಯಂತಃ ಸ್ತೋತಾರಃ ॥ ಅವಶಬ್ದೋ ಭೃಶಾರ್ಥವಾಚೀ । ತತ್ಪೂರ್ವಾನ್ನದೇಃ ಕ್ವಿಪ್ । ಅವಾಪ್ಯೋರಿತ್ಯಕಾರಲೋಪಃ ॥ ಆಪನಂತ । ಸಮಂತಾತ್ ಸ್ತುವಂತಿ । ಸೋऽಗ್ನಿರುಶಿಗ್ಭ್ಯೋऽಸ್ಮದೀಯಂ ರೂಪಂ ಕಾಮಯಮಾನೇಭ್ಯ ಋತ್ವಿಗ್ಭ್ಯೋ ವರ್ಣಂ ಸ್ವಸದೃಶಂ ರೂಪಂ ನಾಮಿಮೀತ ॥ ನಶಬ್ದಶ್ಚಾರ್ಥೇ ॥ ನಿರ್ಮಿಮೀತೇ ಚ । ಸ ಚ ರಂಸು ರಮಣೀಯೇಷ್ವಾಜ್ಯಾದಿಹವಿಃಷು ನಿಮಿತ್ತೇಷು ಚಿತ್ರೇಣ ಭಾಸಾ ಹಿರಣ್ಯಕನಕಾದಿನಾನಾವರ್ಣಯಾ ದೀಪ್ತ್ಯಾ ಚಿಕಿತೇ । ವಿಜ್ಞಾಯತೇ । ಕಿಂಚ ಯೋऽಗ್ನಿರ್ಜುಜುರ್ವಾನ್ ಜೀರ್ಣಃ ಸನ್ ಜ್ವಾಲೋಪಶಮೇ ಸ ಏವ ಮುಹುಃ ಪುನಃಪುನರಾ ಯುವಾ ಸರ್ವತೋ ಮಿಶ್ರಯಿತಾ ತರುಣೋ ವಾಭೂತ್ । ಅಭವತಿ ಪುನರಾಜ್ಯಾದಿಸಂಯೋಗಾತ್ ।

ಪ್ರತಿಪದಾರ್ಥ

ಯತ್—ಯಾವ ಅಗ್ನಿಯ । ಅಭ್ವಂ—ಮಹತ್ತ್ವವನ್ನು । ಮೇ—ನನ್ನ ಬಂಧುಗಳು । ವನದಃ—ಗಟ್ಟಿಯಾಗಿ ಶಬ್ದಮಾಡಿಸುತ್ತಾ । ಆ ಪನಂತ—ಸುತ್ತಲೂ ಸ್ತುತಿಸುತ್ತಾರೆಯೋ । ಸಃ—ಆ ಅಗ್ನಿಯು । ಉಶಿಗ್ಭ್ಯಃ—ಅವನ ರೂಪವನ್ನು ನೋಡಬೇಕೆಂದು ಅಪೇಕ್ಷಿಸುವ ಋತ್ವಿಕ್ಕುಗಳಿಗೆ । ವರ್ಣಂ—ತನ್ನ ರಮ್ಯವಾದ ರೂಪವನ್ನು । ನಾಮಿಮೀತ—ನಿರ್ಮಿಸಿ ತೋರಿಸುತ್ತಾನೆ (ಮತ್ತು) । ರಂಸು—ರಮಣೀಯವಾದ ಆಜ್ಯಾದಿ ಹವಿಸ್ಸುಗಳನ್ನು ಅರ್ಪಿಸಿದಾಗ । ಚಿತ್ರೇಣ—ನಾನಾರೂಪವಾದ । ಭಾಸಾ—ಕಾಂತಿಯಿಂದ । ಚಿಕಿತೇ—ಪ್ರಕಾಶಿತನಾಗುತ್ತಾನೆ । ಯಃ—ಯಾವ ಅಗ್ನಿಯು । ಜುಜುರ್ವಾನ್—ಜೀರ್ಣವಾಗುವನೋ (ಅವನೇ) । ಮುಹುಃ—ಪುನಃ ಪುನಃ (ಆಜ್ಯಾಹುತಿಗಳನ್ನು ಅರ್ಪಿಸುವುದರಿಂದ) । ಆ ಯುವಾ ಭೂತ್—ತರುಣನಾಗಿ ಆಗುತ್ತಾನೆ ।

### ಭಾವಾರ್ಥ

ಯಾವ ಅಗ್ನಿಯ ಮಹತ್ವವನ್ನು ನನ್ನ ಬಂಧುಗಳು ಗಟ್ಟಿಯಾದ ಧ್ವನಿಯಿಂದ ಸುತ್ತಲೂ ಸ್ತುತಿಸುತ್ತಾರೆಯೋ ಆ ಅಗ್ನಿಯು ಅವನ ರೂಪವನ್ನು ನೋಡಬೇಕೆಂದು ಅಪೇಕ್ಷಿಸುವ ಋತ್ವಿಕ್ಕುಗಳಿಗೆ ತನ್ನ ರಮ್ಯವಾದ ರೂಪವನ್ನು ನಿರ್ಮಿಸಿ ತೋರಿಸುತ್ತಾನೆ, ಮತ್ತು ರಮಣೀಯವಾದ ಆಜ್ಯಾದಿ ಹವಿಸ್ಸುಗಳನ್ನು ಅರ್ಪಿಸಿದಾಗ ನಾನಾ ರೂಪವಾದ ಕಾಂತಿಯಿಂದ ಪ್ರಕಾಶಿತನಾಗುತ್ತಾನೆ. ಜೀರ್ಣವಾದ ಕಾಲದಲ್ಲಿ ಆಜ್ಯಾಹುತಿಗಳನ್ನು ಅರ್ಪಿಸುವುದರಿಂದ ಪುನಃ ತಾರುಣ್ಯವನ್ನು ಹೊಂದುತ್ತಾನೆ.

### English Translation

Whose greatness my colleagues loudly extol, who has manifested his real form to the priests, who is recognized at oblations by his variegated radiance, and who though frequently growing old, again and again becomes young.

### ವಿಶೇಷವಿಷಯಗಳು

**ಅಭ್ವಂ ವನದಃ ಆ ಪನಂತ—ಯಸ್ಯ ಮಹತ್ತ್ವಂ ಸಂಭಕ್ತಾರಃ ಯದ್ವಾ ವನದೋ ಅವನದೋ ಭೃಶಂ ಶಬ್ದಯಂತಃ ಸ್ತೋತಾರಃ ಸಮಂತಾತ್ ಸ್ತುವಂತಿ**—ಅಭ್ವಶಬ್ದವು ಮಹನ್ನಾಮಗಳಲ್ಲಿ (ನಿ. ೩-೧೩) ಯಾಸ್ಕರಿಂದ ಪಠಿತವಾಗಿದೆ. ಇಲ್ಲಿ ಅಗ್ನಿಯ ಮಹತ್ತ್ವವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ವನದ ಎಂಬ ಪದಕ್ಕೆ ಮಹತ್ತ್ವವನ್ನು ವ್ಯಕ್ತಪಡಿಸುವರು ಅಥವಾ ಬಹಳವಾಗಿ ಧ್ವನಿಮಾಡುವರು ಎಂದು ಅರ್ಥವನ್ನು ವರ್ಣಿಸಿದೆ. ಯಜಮಾನರ ಋತ್ವಿಜರು ಅಗ್ನಿಯನ್ನು ಸ್ತುತಿಮಾಡುವಾಗ ಅಗ್ನಿಯ ಪ್ರಭೂತವಾದ ಮಹತ್ತ್ವವನ್ನು ಸ್ತೋತ್ರಗಳಿಂದ ವ್ಯಕ್ತಪಡಿಸುವರು ಅಥವಾ ಘಟ್ಟಿಯಾದ ಧ್ವನಿಯಿಂದ ಎಲ್ಲರೂ ತಿಳಿಯುವಹಾಗೆ ಸ್ತುತಿಸುವರು ಎಂದು ವರ್ಣಿಸಿದೆ.

**ಉಶಿಗ್ಭ್ಯಃ ವರ್ಣಂ ನಾಮಿಮೀತ**-ಅಗ್ನಿಯು ತನ್ನ ಸಂಬಂಧವಾದ ಆಕಾರವನ್ನು ನೋಡಲಿಚ್ಛಿಸುವ ಋತ್ವಿಜರಿಗಾಗಿ ತನ್ನ ಮಹಿಮೆಗೆ ಅನುರೂಪವಾದ ಆಕಾರವನ್ನು ನಿರ್ಮಾಣಮಾಡಿಕೊಳ್ಳುವನು ಎಂದು ಅರ್ಥವು. ಉಶಿಕ್ ಎಂಬ ಪದವು (ಅಪೇಕ್ಷಿಸುವ ಎಂಬರ್ಥವುಳ್ಳ) ಕಾಂತಿ ಕರ್ಮಗಳಲ್ಲಿ (ನಿ. ೩-೯) ಉಕ್ತವಾಗಿದೆ ಮತ್ತು **ಉಶಿಗ್ ವಷ್ಟೇಃ** ಕಾಂತಿ ಕರ್ಮಣಃ (ನಿ ೬-.೧) ಎಂದು ಯಾಸ್ಕರಿಂದ ವ್ಯಾಖ್ಯಾತವಾಗಿದೆ.

ಈ ಅಗ್ನಿಯು **ರಂಸು-ಚಿತ್ರೇಣ ಚಿಕಿತೇ** ಆಜ್ಯವೇ ಮೊದಲಾದ ಹವಿಸ್ಸುಗಳ ಅರ್ಪಣೆಯಿಂದ ಸುವರ್ಣವೇ ಮೊದಲಾದ ರಮಣೀಯವಸ್ತುಗಳ ಕಾಂತಿಗಳಿಂದ ಪ್ರಕಾಶಿಸುವನೆಂದು ವಿವೃತ ಪಾಗಿದೆ. ಎಂದರೆ ಅಗ್ನಿಯ ಜ್ವಾಲೆಗಳು, ಕೆಂಪು, ಹೊಂಬಣ್ಣ, ಬಿಳಪು ಮೊದಲಾದ ಅನೇಕವಿಧ ಬಣ್ಣಗಳಿಂದ ಕೂಡಿ ನೋಡುವುದಕ್ಕೆ ರಮಣೀಯವಾಗಿದೆ ಎಂದಭಿಪ್ರಾಯವು.

**ಜುಜುರ್ವಾನ್ ಮುಹುಃ ಆ ಯುವಾ—ಜ್ವಾಲೋಪಶಮೋ ಜೀರ್ಣಸ್ಸ್ಸ ಸ ಏವ ಪುನಃ ಪುನಃ ವಿಶ್ರಯಿತಾ ತರುಣೋ ವಾ ಭವತಿ.** ಅಗ್ನಿಯು ತನ್ನ (ಕಾಂತಿಗಳ) ಜ್ವಾಲೆಗಳ ಉಪಸಂಹಾರದಿಂದ ಕಾಂತಿ

ಇಲ್ಲದವನಾಗಿ ಇದ್ದಾಗ್ಯೂ ಪುನಃ ಹವಿಸ್ಸಿನ ಸ್ವೀಕಾರದ ಕಾಲದಲ್ಲಿ ಯೌವ್ವನವನ್ನು ಹೊಂದಿದವನಾಗಿ ಪ್ರಕಾಶಿಸುತ್ತಿರುವನು. ವೃದ್ಧನು ತರುಣನಾಗುವುದು ಲೋಕದಲ್ಲಿ ಅಪ್ರಸಿದ್ಧವು. ಆದರೆ ಅಗ್ನಿಯು ಅನೇಕಸಾರಿ ವೃದ್ಧನಾದರೂ ತಾರುಣ್ಯದಿಂದ ಶೋಭಿಸುವನೆಂದು ವ್ಯತಿರೇಕವು ಉಕ್ತವಾಗಿದೆ. ಇಲ್ಲಿ ಅಗ್ನಿಯು ಆರಿಹೋಗುತ್ತಿರುವಾಗ ವೃದ್ಧಾವಸ್ಥೆಯಲ್ಲಿರುವನೆಂದೂ, ಆದರೆ ಅಲ್ಪಸ್ವಲ್ಪವಿರುವ ಅಗ್ನಿಯ ಕೆಂಡಗಳಲ್ಲಿ, ಸಮಿತ್ತು, ಕಾಷ್ಠಗಳು, ಆಜ್ಯ, ಹವಿಸ್ಸು ಮೊದಲಾದುವನ್ನು ಹಾಕಿ ಹೋಮಮಾಡುವುದರಿಂದ ಸಣ್ಣದಾಗಿದ್ದ ಅಗ್ನಿಯು ಮತ್ತೆ ದೊಡ್ಡದಾಗಿ ಜ್ವಾಲೆಗಳಿಂದ ಪ್ರಕಾಶವಾಗಿ ಬೆಳಗುತ್ತಿರುವುದನ್ನು ಅಗ್ನಿಯು ಪುನಃ ಯುವಕನಾದನೆಂದು ಮೊದಲಾಗಿ ಇಲ್ಲಿ ವರ್ಣಿಸಿದೆ.

———— :o: ————

ಸಂಹಿತಾಪಾಠಃ

ಆ ಯೋ ವನಾ ತಾತೃಷಾಣೋ ನ ಭಾತಿ ವಾರ್ಣ ಪಥಾ ರಥ್ಯೇವ ಸ್ವಾನೀತ್।

ಕೃಷ್ಣಾಧ್ವಾ ತಪೂ ರಣ್ವಶ್ಚಿಕೇತ ದ್ಯೌರಿವ ಸ್ಮಯಮಾನೋ ನಭೋಭಿಃ ॥ ೬ ॥

ಪದಪಾಠಃ

ಆ । ಯಃ । ವನಾ । ತತೃಷಾಣಃ । ನ । ಭಾತಿ । ವಾಃ । ನ । ಪಥಾ । ರಥ್ಯಾಽಇವ । ಸ್ವಾನೀತ್ ।

ಕೃಷ್ಣಽಅಧ್ವಾ । ತಪುಃ । ರಣ್ವಃ । ಚಿಕೇತ । ದ್ಯೌಃಽಇವ । ಸ್ಮಯಮಾನಃ । ನಭಃಽಭಿಃ ॥ ೬ ॥

ಸಾಯಣಭಾಷ್ಯಂ

ಯೋಽಗ್ನಿರ್ವನಾ ವನಾನಿ ವೃಕ್ಷಸಮೂಹಾನ್ ತತೃಷಾಣೋ ನ ತೃಷಿತ ಇವ । ತ್ವರಮಾಣ ಇತ್ಯರ್ಥಃ । ಆಭಾತಿ । ಆಭಾಸಯತಿ । ದಹತೀತ್ಯರ್ಥಃ । ಯದ್ವಾ ವನಾ ವನೇ ಆಭಾತಿ । ಕಿಂಚ ವಾರ್ಣ ಉದಕಮಿವ ಪಥಾ ಪ್ರವಣೇನ ಮಾರ್ಗೇಣ ಗಚ್ಛತಿ । ತದ್ವತ್ ಇತಸ್ತತೋ ಗಚ್ಛತಿ । ರಥ್ಯೇವ ರಥಸ್ಯ ವೋಢಾಶ್ವ ಇವ ಸ್ವಾನೀತ್ । ಶಬ್ದಯತಿ । ಯದ್ವಾ ರಥಶಬ್ದಾತ್ ಸೋಢ್ಯಾರ್ಥಾದೇಶಃ । ಯಥಾ ರಥೋ ಯುದ್ಧಮಾರ್ಗೇಣ ಗಚ್ಛನ್ ಸ್ವನತಿ ತದ್ವತ್ । ಕಿಂಚ ಕೃಷ್ಣಾಧ್ವಾ ಕೃಷ್ಣವರ್ತ್ಮಾ ತಪುಸ್ತಾಪಕೋ ರಣ್ವೋ ರಮಣೀಯ ಏವಂಭೂತಃ ಸನ್ ಚಿಕೇತ । ಜ್ಞಾಯತೇ । ಪ್ರಕಾಶತೆ ಇತ್ಯರ್ಥಃ । ಕ ಇವ । ನಭೋಭಿರ್ನಕ್ಷತ್ರೈಃ ಸ್ಮಯಮಾನಃ ಪ್ರಕಾಶಮಾನೋ ದ್ಯೌರಿವ ದ್ಯುಲೋಕ ಇವ । ಯದ್ವಾ ನಭೋಭಿರಂತರಿಕ್ಷಪ್ರದೇಶವಿಶೇಷೈಃ ಸ್ಮಯಮಾನಃ ಶೋಭಮಾನೋ ದ್ಯೌರಾದಿತ್ಯ ಇವ । ನೀಲವರ್ಣಾಂತರಿಕ್ಷಚಾರ್ಯಾದಿತ್ಯೋ ಯಥಾ ಜ್ಞಾಯತೇ ತದ್ವತ್ ಸ್ವಸಂಚಾರೇಣ ಕೃಷ್ಣೀಭೂತೇ ಮಾರ್ಗೇ ಜ್ಞಾಯತೇ । ಪ್ರಕಾಶತ ಇತ್ಯರ್ಥಃ ॥

ಪ್ರತಿಪದಾರ್ಥ

**ಯಃ**—ಯಾವ ಅಗ್ನಿಯು । **ವನಾ**—ವನಗಳನ್ನು । **ತತೃಷಾಣೋ ನ** —ದಾಹದಿಂದ ಕೂಡಿರುವವನಂತೆ । **ಆ ಭಾತಿ**—ದಹಿಸುತ್ತಾನೆಯೋ [ಅಥವಾ । **ವನಾ**—ವನದಲ್ಲಿ । **ಆ ಭಾತಿ**—ಪ್ರಕಾಶಿಸುತ್ತಾನೆಯೋ] (ಮತ್ತು) । **ವಾರ್ಣ**—ಉದಕವು ಯಾವರೀತಿಯಲ್ಲಿ । **ಪಥಾ**—ಇಳಿಜಾರಾದ ಪ್ರದೇಶದಲ್ಲಿ ವೇಗವಾಗಿ ಹರಿಯುವುದೋ ಹಾಗೆ ವೇಗವಾಗಿ ಪ್ರಸರಿಸುವನೋ । **ರಥ್ಯಾ ಇವ**—ರಥವನ್ನು ವಹಿಸುವ ಯುದ್ಧಾಶ್ವವು । **ಸ್ವಾನೀತ್**—ಶಬ್ದಮಾಡುವಂತೆ ಶಬ್ದಮಾಡುವನೋ (ಆ ಅಗ್ನಿಯು) । **ಕೃಷ್ಣಾಧ್ವಾ**—ಕೃಷ್ಣವರ್ಣದ ಮಾರ್ಗವುಳ್ಳವನಾಗಿಯೂ । **ತಪುಃ**—ದಹಿಸುವವನಾಗಿಯೂ । **ರಣ್ವಃ**—(ಆದರೂ) ರಮಣೀಯನಾಗಿಯೂ । **ನಭೋಭಿಃ**—ನಕ್ಷತ್ರಗಳಿಂದ । **ಸ್ಮಯಮಾನಃ**—ಪ್ರಕಾಶಿಸತಕ್ಕ । **ದ್ಯೌರಿವ**—ಅಂತರಿಕ್ಷದಂತೆ [ಅಥವಾ । **ನಭೋಭಿಃ**—ಅಂತರಿಕ್ಷ ಪ್ರದೇಶಗಳಲ್ಲಿ । **ಸ್ಮಯಮಾನಃ**—ಶೋಭಿಸತಕ್ಕ । **ದ್ಯೌರಿವ**—ಆದಿತ್ಯನಂತೆ] । **ಚಿಕೇತ**—ತಿಳಿಯಲ್ಪಡುತ್ತಾನೆ ।

ಭಾವಾರ್ಥ

ಯಾವ ಅಗ್ನಿಯು ದಾಹದಿಂದ ಕೂಡಿರುವವನಂತೆ ವನಗಳನ್ನು ದಹಿಸುವನೋ ಯಾವನು ಇಳಿಜಾರಾದ ಪ್ರದೇಶದಲ್ಲಿ ಉದಕವು ವೇಗವಾಗಿ ಹರಿಯುವಂತೆ ವನದಲ್ಲಿ ವೇಗವಾಗಿ ಪ್ರಸರಿಸುವನೋ ಮತ್ತು ಯಾವನು ಯುದ್ಧದಲ್ಲಿ ರಥವನ್ನು ವಹಿಸುವ ಅಶ್ವದಂತೆ ಗಟ್ಟಿಯಾದ ಶಬ್ದವನ್ನು ಮಾಡುವನೋ ಆ ಅಗ್ನಿಯು ಕೃಷ್ಣರೂಪವಾದ ಮಾರ್ಗವುಳ್ಳವನಾಗಿಯೇ ದಹಿಸುವವನಾಗಿ ಆದರೂ ಸಹ ರಮಣೀಯನಾಗಿಯೂ ಅಂತರಿಕ್ಷ ಪ್ರದೇಶದಲ್ಲಿ ಪ್ರಕಾಶಿಸತಕ್ಕ ಆದಿತ್ಯನಂತೆ ತಿಳಿಯಲ್ಪಡುತ್ತಾನೆ.

English Translation

Who shines amidst the forests, as if satisfying himself (with food): who (rushes along), like water down a declivity, and thunders like a chariot (of war); dark-pathed, consuming, yet delightful, he is regarded like the sky smiling with constellations.

ವಿಶೇಷವಿಷಯಗಳು

ಇಲ್ಲಿ ದಾವಾಗ್ನಿಯ (ಕಾಡುಗಿಚ್ಚು) ರೂಪದಿಂದ ಇರುವವನೆಂದು ಅಗ್ನಿಯು ವರ್ಣಿತನಾಗಿರುವನು

**ವನಾ ತತೃಷಾಣೋ ನ ಆಭಾತಿ—ವೃಕ್ಷಸಮೂಹಾ್ ತೃಷಿತ ಇವ ತ್ವರಮಾಣಃ ಆಭಾಸಯತಿ** । ಅಗ್ನಿಯು ಕಾಡಿನಲ್ಲಿ ಮರಗಳ ಸಮೂಹಗಳನ್ನು ಹಶಿವೆಯಿಂದ ಕೂಡಿದವನು ಆಹಾರವನ್ನು ಜಾಗ್ರತೆಯಾಗಿ ತಿನ್ನುವ ಹಾಗೆ ವ್ಯಾಪಿಸುವನು ಎಂದೂ, ಯದ್ವಾ ವನೇ ಆಭಾತಿ ಅಥವಾ ಕಾಡಿನಲ್ಲಿ ತಾನೇತಾನಾಗಿ ಪ್ರಕಾಶಿಸುತ್ತಿರುವನು ಎಂದೂ ವರ್ಣಿಸಿದೆ. ಅಗ್ನಿಯ ವ್ಯಾಪನೆಯು ಬಹಳ ವೇಗದಿಂದ ಇರುವ ಕಾರಣ ಹಸಿವಿನಿಂದ ಕೂಡಿದವನ ಹೋಲಿಕೆಯು ಉಕ್ತವಾಗಿದೆ.

**ವಾರ್ಣ ಪಥಾ— ಉದಕಮಿವ ಪ್ರವಣೇನ ಮಾರ್ಗೇಣ ಇತಸ್ತತೋ ಗಚ್ಛತಿ**—ನೀರು ತಗ್ಗಾಗಿರುವ ಪ್ರದೇಶದಲ್ಲಿ ಬಹು ಬೇಗನೆ ಹರಿದು ವ್ಯಾಪಿಸುವಂತೆ ಅಗ್ನಿಯೂ ಕಾಡಿನಲ್ಲಿರುವ ಮರಗಳಲ್ಲಿ ಅಲ್ಲಲ್ಲಿ ಬೇಗನೆ ವ್ಯಾಪಿಸುವನು ಎಂದು ಅಗ್ನಿಯ ಪ್ರಸರಣೆಯನ್ನು ಉದಕವ್ಯಾಪನೆಗೆ ಹೋಲಿಸಿದೆ.

**ರಥ್ಯೇವ ಸ್ವಾನೀತ್—ರಥೋ ಯಥಾ ಯುದ್ಧಮಾರ್ಗೇಣ ಗಚ್ಛನ್ ಸ್ವನತಿ**—ರಥವನ್ನು ಎಳೆಯುವ ಕುದುರೆಯು ಯುದ್ಧದಲ್ಲಿ ಶತ್ರುಗಳ ಆಕ್ರಮಣಕ್ಕಾಗಿ ನುಗ್ಗುವಾಗ ಹೇಷಾಧ್ವನಿಯನ್ನು ಮಾಡುವ ಹಾಗೆ ಅಗ್ನಿಯು ( ತಾನು ) ಕಾಡಿನಲ್ಲಿ ವ್ಯಾಪಿಸಿ ದಹಿಸುತ್ತಿರುವಾಗ ಚಟಚಟ ಎಂದು ಭಯಂಕರ ಶಬ್ದಗಳನ್ನು ಮಾಡುತ್ತಿರುವುನೆಂದು ಅಥವಾ ರಥಿಕನು ಶತ್ರುಗಳ ಆಕ್ರಮಣವನ್ನು ಮಾಡುವಾಗ ವೇಗವಾಗಿ ಚಲಿಸುವ ರಥದಿಂದ ಉಂಟಾಗುವ ಧ್ವನಿ ಯಂತೆ ಧ್ವನಿಮಾಡುವನೆಂದು ಧ್ವನಿಯ ದೃಷ್ಟಾಂತವು ವಿವೃತವಾಗಿದೆ.

**ಕೃಷ್ಣಾಧ್ವಾ ತಪುಃ ರಣ್ವಃ ನಭೋಭಿಃ ಸ್ಮಯಮಾನಃ ದ್ಯೌರಿವ ಚಿಕೇತ**—ಇಲ್ಲಿ ಋಷಿಯು ಬಹಳ ಉತ್ತಮವಾದ ಮತ್ತು ಸಹಜವಾದ ಉಪಮಾನವನ್ನು ಕೊಟ್ಟು ಅರ್ಥವಿವರಣೆಮಾಡಿರುವನು. ದಾವಾಗ್ನಿಯು ವನಕ ವನ್ನು ದಹಿಸಿ ಮುಂದೆ ಮುಂದೆ ಹೋದಂತೆಲ್ಲಾ ಅಗ್ನಿಯಿಂದ ದಹಿಸಲ್ಪಟ್ಟ ಪ್ರದೇಶವು ಕಪ್ಪಾಗಿ ಕಾಡಿಗೆಯಂತಿರು ವುದು. ಯಾವ ಪ್ರದೇಶದಲ್ಲಿಯೇ ಆಗಲಿ ಬೆಂಕಿಯು ಚೆನ್ನಾಗಿ ದಹಿಸಿ ಕೆಂಡಗಳು ಆರಿಹೋಗುವಾಗ ಆ ಪ್ರದೇಶವು ಪ್ಪಾಗಿ ಕಾಣುವುದು ಲೋಕಪ್ರಸಿದ್ಧಿಯಾಗಿದೆ. ಈ ವಿಷಯವು ಕಾಡುಕಿಚ್ಚಿನಿಂದ ಸುಟ್ಟುಹೋದ ಭೂಪ್ರದೇಶಗಳನ್ನು ನೋಡಿದವರಿಗೆ ಚೆನ್ನಾಗಿ ಗೊತ್ತಾಗುವುದು. ಆದ್ದರಿಂದಲೇ ಅಗ್ನಿಯು ಸುಟ್ಟುಹೋದ ಪ್ರದೇಶವನ್ನು ಕಪಾದ್ವ ಮಾರ್ಗವೆಂದು ಕರೆದಿರುವುದು ಸಹಜವಾಗಿದೆ. ಹೀಗೆ ವನವು ಸುಟ್ಟುಹೋಗಿ ಭೂಮಿಯು ಕಪ್ಪಾಗಿ ಹೋಗಿದ್ದರೂ ಅಲ್ಲಲ್ಲಿ ಎಂದರೆ ಮಧ್ಯಮಧ್ಯ ಕೆಲವು ಕಡೆ ಕೆಂಡಗಳು, ಉರಿಯು ಇನ್ನೂ ಆರದೆ ಹಾಗೆಯೇ ಇರುವುದೂ ಸಹಜವಾ ಗಿದೆ. ಅಂತಹ ಪ್ರದೇಶವನ್ನು ನಕ್ಷತ್ರಸಹಿತವಾದ ಆಕಾಶಕ್ಕೆ ಹೋಲಿಸಿದೆ ಎಂದರೆ ಕಪ್ಪಾದ ಭೂಮಿಯನ್ನು ನೀಲ ವರ್ಣದ ಆಕಾಶಕ್ಕೂ ಅಲ್ಲಲ್ಲಿರುವ ಕೆಂಡಗಳು ಅಥವಾ ಅಗ್ನಿಯ ಉರಿಯನ್ನು ನಕ್ಷತ್ರಗಳಿಗೂ ಹೋಲಿಸಿದೆ. ಅಥವಾ ನೀಲವರ್ಣವುಳ್ಳ ಆಕಾಶದಲ್ಲಿ ಬಹಳ ಪ್ರಕಾಶದಿಂದ ಬೆಳಗುತ್ತಿರುವ ಸೂರ್ಯನಿಗೂ ಹೋಲಿಸಿದೆ. ಈ ಸಂದರ್ಭದಲ್ಲಿ ಸುಟ್ಟುಹೋದ ಕಪ್ಪಾದ ಭೂಮಿಯ ಮಧ್ಯದಲ್ಲಿ ಇನ್ನೂ ಆರದೆ ಉರಿಯುತ್ತಿರುವ ಅಗ್ನಿಯನ್ನು ಸೂರ್ಯನಿಗೆ ಹೋಲಿ ಸಿದೆ ಎಂದು ತಿಳಿಯಬೇಕು. ಇಲ್ಲಿ ಕವಿಯು **ದ್ಯೌರಿವ ಸ್ಮಯಮಾನಃ ನಭೋಭಿಃ** ಎಂಬ ಶಬ್ದಗಳನ್ನು ಬಹಳ ಗಂಭೀರವಾದ ಮತ್ತು ಅರ್ಥಗರ್ಭಿತವಾದ ಪ್ರಯೋಗದಲ್ಲಿ ಉಪಯೋಗಿಸಿರುವನು. ನಕ್ಷತ್ರಯುಕ್ತವಾದ ಆಕಾಶವು ನಗುತ್ತಿರುವ ಪುರುಷನಂತೆ ಶೋಭಿಸುತ್ತಿರುವುದು ಎಂದು ವರ್ಣಿಸಿರುವಾಗ ನಗುತ್ತಿರುವ ಪುರುಷ ಅಥವಾ ಸ್ತ್ರೀಯನ್ನು ನೋಡಿದಾಗ ಮನಸ್ಸಿಗೆ ಆಹ್ಲಾದವಾಗುವಂತೆ ನಕ್ಷತ್ರಯುಕ್ತವಾಗಿ ಕಂಗೊಳಿಸುವ ನೀಲವರ್ಣದ ಆಕಾಶವನ್ನು ನೋಡಿದರೂ ಮನಸ್ಸಿಗೆ ಆಹ್ಲಾದವಾಗುವುದು. ಅದರಂತೆ ಅಗ್ನಿಯಿಂದ ದಹಿಸಲ್ಪಟ್ಟ ಕೃಷ್ಣ (ಕಪ್ಪಾದ) ಭೂಮಿಯು ಇರುವುದೆಂದು ಋಷಿಯು ವಿವರಿಸಿ ತನ್ನ ರಚನಾಕೌಶಲ್ಯವನ್ನು ವ್ಯಕ್ತಪಡಿಸಿರುವನು.

---

ಸಂಹಿತಾಪಾಠಃ

**ಸ ಯೋ ವ್ಯಸ್ಥಾದಭಿ ದಕ್ಷದುರ್ವೀಂ ಪಶುರ್ನೈತಿ ಸ್ವಯುರಗೋಪಾಃ ।**

**ಅಗ್ನಿಃ ಶೋಚಿಷ್ಮಾಁ ಅತಸಾನ್ಯುಷ್ಣನ್ಕೃಷ್ಣವ್ಯಥಿರಸ್ವದಯನ್ನ ಭೂಮ ॥ ೭ ॥**

ಪದಪಾಠಃ

ಸಃ । ಯಃ । ವಿ । ಅಸ್ಥಾತ್ । ಅಭಿ । ಧಕ್ಷತ್ । ಉರ್ವೀಂ । ಪಶುಃ । ನ । ಏತಿ । ಸ್ವಽಯುಃ । ಅಗೋಪಾಃ ।

ಅಗ್ನಿಃ । ಶೋಚಿಷ್ಮಾನ್ । ಅತಸಾನಿ । ಉಷ್ಣನ್ । ಕೃಷ್ಣಽವ್ಯಥಿಃ । ಅಸ್ವದಯತ್ । ನ । ಭೂಮ ॥ ೭ ॥

ಸಾಯಣಭಾಷ್ಯಂ

ಯೋಽಗ್ನಿರ್ವ್ಯಸ್ಥಾತ್ । ವಿವಿಧಂ ತಿಷ್ಠತಿ । ವ್ಯಾಪ್ನೋತಿ ವಿಶ್ವಂ । ತಥಾ ಯೋಽಗ್ನಿರುರ್ವೀಂ ವಿಸ್ತೃತಾಂ ಪೃಥಿವೀಂ ಸರ್ವಾಂ । ಯಶ್ಚಾಭಿದಕ್ಷತ್ । ಅಭಿಮುಖ್ಯೇನ ಪ್ರವರ್ಧಮಾನೋ ಭವತಿ ॥ ಉಭೇ ಅಪಿ ಯಚ್ಛಬ್ದಯೋಗಾನ್ನ ನಿಹನ್ಯೇತೇ ॥ ಸೋಽಗ್ನಿಃ ಪಶುರ್ನ ಪಶುರಿವ । ಯಥಾ ಜಾತಃ ಪಶುಃ ಸ್ವಚ್ಛಂದೇನ ಚರತಿ ತಥಾ ಸ್ವಯುಃ ಸ್ವಯಮೇವ ಗಚ್ಛನ್ ಅಗೋಪಾ ಗೋಪರಹಿತಃ । ನಿಯಾಮಕ-ವರ್ಜಿತ ಇತ್ಯರ್ಥಃ । ಏತಿ । ಗಚ್ಛತಿ । ಕಿಂ ಕುರ್ವನ್ । ಶೋಚಿಷ್ಮಾನ್ ಪ್ರಕೃಷ್ಟದೀಪ್ತಿಃ ಕೃಷ್ಣವ್ಯಥಿಃ ಕೃಷ್ಣವರ್ಣಂ ಪ್ರಾಪ್ತಾ ದಗ್ಧಾ ವ್ಯಥಕರಾಃ ಕಂಟಕಾದಯೋ ಯೇನ ತಾದೃಶಃ ಸನ್ ಭೂಮಾತ್ಯಧಿಕಮ-ಸ್ವದಯನ್ನ । ಆಸ್ವಾದಯತೀವ ವೃಕ್ಷಗತಾನ್ ರಸಾನ್ । ಅತಸಾನಿ ಸತತಾನಿ ನೀರಸಾನಿ ವಾ ತರುಗುಲ್ಮಾ-ದೀನ್ಯುಷ್ಣನ್ ದಹನ್ನೇತಿ ॥

ಪ್ರತಿಪದಾರ್ಥ

ಯಃ—ಯಾವ ಅಗ್ನಿಯು । ವ್ಯಸ್ಥಾತ್—ನಾನಾಪ್ರದೇಶಗಳನ್ನು ವ್ಯಾಪಿಸಿರುತ್ತಾನೆಯೋ (ಮತ್ತು) । ಉರ್ವೀಂ—ವಿಸ್ತೃತವಾದ ಪೃಥಿವಿಯನ್ನು । ಅಭಿ ದಕ್ಷತ್—ವ್ಯಾಪಿಸಿ ಸುತ್ತಲೂ ಹರಡುತ್ತಾನೆಯೋ । ಸಃ ಅಗ್ನಿಃ—ಆ ಅಗ್ನಿಯು । ಪಶುರ್ನ—ಪಶುವು ಸ್ವಚ್ಛಂದದಿಂದ ಸುತ್ತುವಂತೆ । ಸ್ವಯುಃ—ತಾನೇ ಸ್ವತಂತ್ರವಾಗಿ ವಿಹರಿಸುತ್ತಲೂ । ಅಗೋಪಾಃ—ನಿಯಮರಹಿತನಾಗಿಯೂ । ಶೋಚಿಷ್ಮಾನ್—ಕಾಂತಿಯನ್ನು ಹರಡುತ್ತಲೂ । ಕೃಷ್ಣವ್ಯಥಿಃ—ದಹಿಸಿದ ಕಂಟಕಾದಿಗಳಿಗೆ ಕೃಷ್ಣರೂಪವಾದ ವಿಕಾರವನ್ನುಂಟುಮಾಡುತ್ತಲೂ । ಭೂಮ—ಅತ್ಯಧಿಕವಾಗಿ । ಅಸ್ವದಯನ್ನ—(ವೃಕ್ಷಗಳ ರಸವನ್ನು) ಆಸ್ವಾದನೆಮಾಡುವಂತೆಯೂ । ಅತಸಾನಿ—ತರುಗುಲ್ಮಾದಿಗಳನ್ನು ನೀರಸವಾಗಿ ಮಾಡುವಂತೆಯೂ । ಉಷ್ಣನ್—ದಹಿಸುತ್ತಲೂ । ಏತಿ—ಸಂಚರಿಸುತ್ತಾನೆ.

ಭಾವಾರ್ಥ

ಯಾವ ಅಗ್ನಿಯು ನಾನಾಪ್ರದೇಶಗಳನ್ನಾಕ್ರಮಿಸಿ ವಿಧವಿಧವಾದ ರೀತಿಯಲ್ಲಿ ಪ್ರಸರಿಸುತ್ತಾನೆಯೋ ಮತ್ತು ವಿಸ್ತೃತವಾದ ಪೃಥ್ವಿಯನ್ನು ವ್ಯಾಪಿಸಿ ಸುತ್ತಲೂ ಹರಡುತ್ತಾನೆಯೋ ಆ ಅಗ್ನಿಯು, ಪಶುವು ಸ್ವಚ್ಛಂದವಾಗಿ ಸುತ್ತುವಂತೆ ತಾನೇ ಸ್ವತಂತ್ರವಾಗಿ ವಿಹರಿಸುತ್ತಲೂ, ನಿಯಮರಹಿತನಾಗಿಯೂ, ಕಾಂತಿಯನ್ನು ಹರಡುತ್ತಲೂ ದಹಿಸಿದ ಕಂಟಕಾದಿಗಳಿಗೆ ಕೃಷ್ಣರೂಪವಾದ ವಿಕಾರವನ್ನೂ, ವ್ಯಥೆಯನ್ನೂ ಉಂಟುಮಾಡುತ್ತಲೂ ಸಹ ಅತ್ಯಧಿಕವಾಗಿ ವೃಕ್ಷಗಳ ರಸವನ್ನು ಆಸ್ವಾದನೆ ಮಾಡುವಂತೆಯೂ, ತರುಗುಲ್ಮಾದಿಗಳನ್ನು ನೀರಸವಾಗಿ ಮಾಡುವಂತೆ ದಹಿಸುತ್ತಲೂ ಸಂಚರಿಸುತ್ತಾನೆ.

## English Translation

He who is in many places ; who spreads over the whole earth, like an animal without a herdsman, that goes according to its own will, Agni, the bright-shining, consuming the dry-bushes, by whom the pain of blackness (is inflicted on the trees), entirely drinks up (their moisture).

### ವಿಶೇಷವಿಷಯಗಳು

ಅಗ್ನಿಯು ವನವನ್ನು ವ್ಯಾಪಿಸಿಕೊಂಡು ದಹಿಸುವ ಕಾಲದಲ್ಲಿ **ವ್ಯಸ್ಥಾತ್ ವಿವಿಧಂ ವಿಶ್ವಂ ವ್ಯಾಪ್ನೋತಿ** ವನವನ್ನೆಲ್ಲವನ್ನೂ ಕೊಂಚವೂ ಬಿಡದೆ ಇರುವಹಾಗೆ ನಾನಾ ವಿಧವಾಗಿ ವ್ಯಾಪಿಸುವನು ಮತ್ತು **ಉರ್ವೀಂ ಅಭಿ-ಪಪ್ಷತ್—ವಿಸ್ತೃತಾಂ ಪೃಥಿವೀಂ ಸರ್ವಾಂ ಅಭಿಮುಖ್ಯೇನ ಪ್ರವರ್ಧಮಾನೋ ಭವತಿ ।** ಕಾಡಿನಲ್ಲಿರುವ ವೃಕ್ಷೌಷಧಿಗಳು ಎಲ್ಲದರಲ್ಲಿಯೂ ವ್ಯಾಪಿಸುವುದು ಮಾತ್ರವಲ್ಲದೆ ವಿಸ್ತಾರವಾಗಿರುವ (ವನದ) ಕಾಡಿನ ಭೂಮಿಯ ಪ್ರದೇಶವನ್ನು ಇತರರು ಯಾರೂ ಪ್ರವೇಶಿಸಲು ಅವಕಾಶವಿಲ್ಲದ ಹಾಗೆ ವ್ಯಾಪಿಸುವನು ಎಂದು ವರ್ಣಿಸಿದೆ. ಈ ಅಗ್ನಿಯು ತಾನೇ ತಾನಾಗಿ ವನಗಳಲ್ಲಿ ವ್ಯಾಪಿಸಿ ಸಂಚರಿಸುವ ವಿಷಯದಲ್ಲಿ **ಪಶುರ್ನ ಸ್ವಯುಃ ಅಗೋಪಾಃ ಇತಿ—ಜಾತಃ ಪಶುಃ ಯಥಾ ಸ್ವಚ್ಛಂದೇನ ಚರತಿ ತಥಾ ಸ್ವಯಮೇವ ಗಚ್ಛನ್ ನಿಯಾಮಕವರ್ಜಿತೋ ಗಚ್ಛತಿ ।** ಎಂದು ಪಶುವಿನ ಉಪಮಾನವು ಉಕ್ತವಾಗಿದೆ. ಕಾಡಿನಲ್ಲಿ ಉತ್ಪನ್ನವಾಗಿ (ಬೆಳೆಯುತ್ತಿರುವ) ವೃದ್ಧಿಯನ್ನು ಹೊಂದುತ್ತಿರುವ ಪಶುವು (ಆನೆಯೇ ಮೊದಲಾದುವು) ಇನ್ನೊಬ್ಬರ ಅಧೀನತೆಗೆ ಸಿಕ್ಕದೆ ತನ್ನ ಇಚ್ಛಾನುಸಾರವಾದ ಸಂಚಾರವೇ ಮೊದಲಾದ ವರ್ತನೆಯಿಂದ ಇರುವಹಾಗೆ ಅಗ್ನಿಯು ಕಾಡಿನಲ್ಲಿ ಉತ್ಪನ್ನವಾಗಿ ತನ್ನನ್ನು ನಿಯಮದಿಂದ ಇರಿಸುವವರ ಅಧೀನಕ್ಕೆ ಒಳಪಡದೆ ತನ್ನ ಸ್ವಚ್ಛಂದವಾದ ವರ್ತನೆಯಿಂದ ವೃದ್ಧಿಹೊಂದುತ್ತಿರುವನೆಂದು ವಿವರಿಸಿದೆ. ಇಲ್ಲಿ ಪಶುವಿನ ಉಪಮಾನವು ಅಗ್ನಿಗೆ ಬಹಳ ಚೆನ್ನಾಗಿ ಹೊಂದುವುದು. ಕಾಡಿನಲ್ಲಿಯೇ ಹುಟ್ಟಿ ಬೆಳೆದು ಯಾರ ಅಧೀನಕ್ಕೂ ಒಳಪಡದ ಹುಲಿ, ಸಿಂಹ, ಕಾಡುಕೋಣ ಮೊದಲಾದ ಪ್ರಾಣಿಗಳು ತಮ್ಮ ಮನಸ್ಸು ಬಂದಂತೆ ಸಿಕ್ಕಿದ ಕಡೆ ಸಂಚರಿಸುತ್ತಾ ವಿಹರಿಸುತ್ತವೆ. ಅದರಂತೆ ಕಾಡಿನಲ್ಲಿಯೇ (ವೃಕ್ಷಗಳ ಘರ್ಷಣೆಯಿಂದ) ಹುಟ್ಟಿದ ಕಾಡುಕಿಚ್ಚು ವಿಸ್ತಾರವಾದ ವನವನ್ನೆಲ್ಲಾ ಆಕ್ರಮಿಸಿ ದಹಿಸುವುದು. ಇದನ್ನು ತಡೆಯುವುದಕ್ಕೆ ಯಾರಿಂದಲೂ ಆಗುವುದಿಲ್ಲ ಎಂದು ಮುಖ್ಯಾಭಿಪ್ರಾಯವು.

**ಕೃಷ್ಣವ್ಯಥಿಃ ಭೂಮ ಅಸ್ವದಯನ್ನ ಅತಸಾನಿ ಉಷ್ಣನ್—ಕೃಷ್ಣವರ್ಣಂ ಪ್ರಾಪ್ತಾಃ ದಗ್ಧಾಃ ವ್ಯಥಾಕರಾಃ ಕಂಟಕಾದಯೋ ಯೇನ**—ಮುಳ್ಳುಗಳೇ ಮೊದಲಾದವೆಲ್ಲವನ್ನೂ ದಹಿಸಿ, ನೋಡಿದವರಿಗೆ ದುಃಖವು ಉಂಟಾಗುವಹಾಗೆ ಕಪ್ಪಗೆ ಇರುವಂತೆ ಮಾಡಿ, **ವೃಕ್ಷಗತಾನ್ ರಸಾನ್ ಆಸ್ವಾದಯತೀವ**—ವೃಕ್ಷಗಳಲ್ಲಿರುವ ಸಾರವಾದ ರಸಗಳೆಲ್ಲವನ್ನೂ ಹೀರಿ, ಭಕ್ಷಿಸಿ, ರುಚಿನೋಡುವವನ ಹಾಗೆಯೂ, **ಸಂತತಾನಿ ನೀರಸಾನಿ ವಾ ತರುಗುಲ್ಮಾದೀನಿ ದಹನ್ನೇತಿ**—ನಿಬಿಡವಾಗಿ ಬೆಳೆದು ಇರುವ ರಸವರ್ಜಿತವಾದ (ಒಣಗಿದ) ಮರ ಮತ್ತು ಪೊದೆಗಳು ಇವುಗಳೆಲ್ಲವನ್ನೂ ದಹಿಸುತ್ತಾ ಅಗ್ನಿಯು ವನವನ್ನು ವ್ಯಾಪಿಸುತ್ತಾ ಮುಂದೆ ಮುಂದೆ ಹೋಗುವನು ಎಂದು ವರ್ಣಿಸಿದೆ. ಇಲ್ಲಿ ಅಗ್ನಿಯು ಹಸಿಯ ಮರಗಳನ್ನು ದಹಿಸುವಾಗ ವೃಕ್ಷಗಳಲ್ಲಿರುವ ರಸವು ಅಗ್ನಿಯ ತಾಪದಿಂದ ಇಂಗಿಹೋಗಿ ಮರವೂ ಸುಟ್ಟುಹೋಗುವುದನ್ನು ರಸಾಸ್ವಾದನೆಮಾಡುವುದಕ್ಕೆ ಹೋಲಿಸಿರುವುದೂ ಸಹ ಸಹಜವಾದುದೂ ಅರ್ಥಗರ್ಭಿತವಾದುದೂ ಆಗಿದೆ.

ಸಂಹಿತಾಪಾಠಃ

ನೂ ತೇ ಪೂರ್ವಸ್ಯಾವಸೋ ಅಧೀತೌ ತೃತೀಯೇ ವಿದಥೇ ಮನ್ಮ ಶಂಸಿ ।
ಅಸ್ಮೇ ಅಗ್ನೇ ಸಂಯದ್ವೀರಂ ಬೃಹಂತಂ ಕ್ಷುಮಂತಂ ವಾಜಂ ಸ್ವಪತ್ಯಂ
ರಯಿಂ ದಾಃ ॥ ೮ ॥

ಪದಪಾಠಃ

ನು । ತೇ । ಪೂರ್ವಸ್ಯ । ಅವಸಃ । ಅಧಿಽಇತೌ । ತೃತೀಯೇ । ವಿದಥೇ । ಮನ್ಮ । ಶಂಸಿ ।
ಅಸ್ಮೇ ಇತಿ । ಅಗ್ನೇ । ಸಂಯತ್ಽವೀರಂ । ಬೃಹಂತಂ । ಕ್ಷುಽಮಂತಂ । ವಾಜಂ । ಸುಽಅಪತ್ಯಂ ।
ರಯಿಂ । ದಾಃ ॥ ೮ ॥

ಸಾಯಣಭಾಷ್ಯಂ

ಹೇ ಅಗ್ನೇ ತೇ ತವ ಸಂಬಂಧಿನಃ ಪೂರ್ವಸ್ಯ ಪೂರ್ವಂ ಯೋಗಸಮಯೇ ಕೃತಸ್ಯಾವಸೋಽಭಿಮತತರ್ಪಣಸ್ಯಾಧೀತೌ ಸ್ಮರಣೇ ಸತಿ ತತ್ಸ್ಮೃತ್ಯಾ ನು ಅದ್ಯಾಪಿ ತೃತೀಯೇ ವಿದಥೇ ಯಾಗೇ ತೃತೀಯಸವನೇ । ಯದ್ವಾ ಪ್ರಾತರನುವಾಕಸಂಬಂಧಿನಾಮಾಗ್ನೇಯೋಷಸ್ಯಾಶ್ವಿನಾನಾಂ ಮಧ್ಯೇಽನ್ಯತಮೇ ತೃತೀಯೇ ಕ್ರತೌ ಮನ್ಮ ಮನನೀಯಂ ಸ್ತೋತ್ರಂ ಶಂಸಿ । ಆಶಂಸಿ । ಶಸ್ಯತೇಽಸ್ಮಾಭಿಃ । ಹೇ ಅಗ್ನೇ ತ್ವಂ ಚಾಸ್ಮೇ ಅಸ್ಮಭ್ಯಂ ಸಂಯದ್ವೀರಂ ಸಂಯತೋ ವೀರಾ ಯಸ್ಮಿನ್ ತಾದೃಶಂ ಬೃಹಂತಂ ಮಹಾಂತಂ ಕ್ಷುಮಂತಂ ಶಬ್ದವಂತಂ ಕೀರ್ತಿಮಂತಂ ವಾಜಮುಕ್ತಲಕ್ಷಣಮನ್ನಂ ಸ್ವಪತ್ಯಂ ರಯಿಂ ಚ ದಾಃ । ದೇಹಿ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತೇ—ನಿನಗೆ ಸಂಬಂಧಿಸಿದುದೂ । ಪೂರ್ವಸ್ಯ—ಹಿಂದಿನ ಸವನದ ಕಾಲದಲ್ಲಿ ಪಠಿಸಿದುದೂ । ಅವಸಃ—ನಿನಗೆ ತೃಪ್ತಿಯನ್ನುಂಟುಮಾಡಿದುದೂ ಆದ । ಅಧೀತೌ—ಸ್ತುತಿಯನ್ನು ಅನುಸರಿಸಿ । ನು—ಈಗಲೂ ಕೂಡ । ತೃತೀಯೇ ವಿದಥೇ—ತೃತೀಯ ಸವನದ ಕಾಲದಲ್ಲಿ । ಮನ್ಮ—ಮನನೀಯವಾದ ಸ್ತುತಿಯು । ಶಂಸಿ—ಪಠಿಸಲ್ಪಡುತ್ತದೆ । ಅಗ್ನೇ—ಎಲೈ ಅಗ್ನಿಯೇ । ಅಸ್ಮೇ—ನಮಗೆ । ಸಂಯದ್ವೀರಂ—ವೀರರಿಂದ ಕೂಡಿದುದೂ । ಬೃಹಂತಂ—ಮಹತ್ತಾದುದೂ । ಕ್ಷುಮಂತಂ—ಕೀರ್ತಿಯನ್ನು ಹರಡತಕ್ಕದ್ದೂ ಆದ । ವಾಜಂ—ಅನ್ನವನ್ನೂ । ಸ್ವಪತ್ಯಂ—ಶ್ರೇಷ್ಠವಾದ ಸಂತತಿಯನ್ನೂ । ರಯಿಂ—ಧನವನ್ನು । ದಾಃ—ಕೊಡು ।

ಭಾವಾರ್ಥ

ಎಲೈ ಅಗ್ನಿಯೇ, ನಿನಗೆ ಸಂಬಂಧಿಸಿದುದೂ, ಹಿಂದಿನ ಸವನದ ಕಾಲದಲ್ಲಿ ನಿನ್ನನ್ನುದ್ದೇಶಿಸಿ ಪಠಿಸಿದುದೂ, ನಿನಗೆ ತೃಪ್ತಿಯನ್ನುಂಟುಮಾಡಿದುದೂ ಆದ ಸ್ತುತಿಯನ್ನೇ ಅನುಸರಿಸಿ ಈಗಲೂ ಸಹ ತೃತೀಯಸವನದ

ಕಾಲದಲ್ಲಿ ಮನನೀಯವಾದ ಸ್ತುತಿಯು ಪಠಿಸಲ್ಪಡುತ್ತದೆ. ಎಲೈ ಅಗ್ನಿಯೇ, ನಮಗೆ ವೀರರಿಂದ ಕೂಡಿದುದೂ, ಮಹತ್ತಾದುದೂ, ಕೀರ್ತಿಯನ್ನು ಹರಡತಕ್ಕದ್ದೂ ಆದ ಅನ್ನವನ್ನೂ, ಶ್ರೇಷ್ಠವಾದ ಸಂತತಿಯನ್ನೂ, ಧನವನ್ನೂ ಕೊಡು.

## English Translation

Verily your praise has been recited (by us) at the third (daily) sacrifice, as it was in the repetition of your first propitiation : give us, Agni, ample and notorious food, posterity, riches, such as may be the support of numerous dependants.

### ವಿಶೇಷವಿಷಯಗಳು

ಇಲ್ಲಿ ಅಗ್ನಿಯನ್ನು ಸಂಬೋಧಿಸಿ, ಯಾಗವು ಪ್ರಾರಂಭವಾದ ಕಾಲದಿಂದ ಇದುವರಿಗೂ ಯಜಮಾನರು ಮತ್ತು ಋತ್ವಿಜರೂ, ಆಚರಿಸಿರುವ ಅಗ್ನಿಗೆ ತೃಪ್ತಿಕರವಾದ ಸ್ತೋತ್ರಾದಿಗಳನ್ನು ಅವನು ಸ್ಮರಿಸಿಕೊಂಡು, **ತೃತೀಯೇ ವಿದಥೇ**—ತೃತೀಯ ಸವನದಲ್ಲಿ ಅಥವಾ **ಯದ್ವಾ ಪ್ರಾತರನುವಾಕಸಂಬಂಧಿನಾಂ ಆಗ್ನೇಯೋಷಸ್ಯಾಶ್ವಿನಾನಾಂ ಮಧ್ಯೇ ತೃತೀಯಕ್ರತೌ** ಯಾಗಗಳನ್ನು ಆಚರಿಸುವಾಗ ಪ್ರಾತಃಕಾಲದಲ್ಲಿ ಪಠಿಸುವ ಪ್ರಾತರನುವಾಕ ಮಂತ್ರಗಳಿಗೆ ಸಂಬಂಧಿಸಿದ ಆಗ್ನೇಯಕ್ರತು, ಉಷಸ್ಯಕತ್ರು ಆಶ್ವಿನಕ್ರತು ಎಂಬ ಮೂರು ವಿಧ ಮಂತ್ರಗಳ ಮಧ್ಯದಲ್ಲಿ ಬೇರೆಯಾದ ಮೂರನೆಯ ಕರ್ಮದಲ್ಲಿ ಪಠಿಸುವ ಸ್ತೋತ್ರಾದಿಗಳು ನಮ್ಮಿಂದ ಪಠಿಸಲ್ಪಡುತ್ತವೆ. ಅಗ್ನಿಯು ಈ ಸ್ತೋತ್ರಗಳನ್ನು ಶ್ರವಣಮಾಡಲಿ ಎಂದು ಆಶಂಸೆಯು ವರ್ಣಿತವಾಗಿದೆ. ಇದರಿಂದ ಯಜಮಾನರು ಪ್ರಾರ್ಥಿಸುವ **ಸಂಯದ್ವೀರಂ** ವೀರರನ್ನು ನಿಗ್ರಹಮಾಡುವ ಪುತ್ರರನ್ನೂ **ಬೃಹಂತಂ ಕ್ಷುಮಂತಂ ವಾಜಂ** ಪ್ರಭೂತವಾದ ಅನ್ನವನ್ನೂ ಕೀರ್ತಿಯನ್ನೂ ಧನವನ್ನೂ ಅಗ್ನಿಯು ಅನುಗ್ರಹಿಸಲಿ ಎಂದು ವರ್ಣಿಸಿದೆ.

---

### ಸಂಹಿತಾಪಾಠಃ

ತ್ವಯಾ ಯಥಾ ಗೃತ್ಸಮದಾಸೋ ಅಗ್ನೇ ಗುಹಾ ವನ್ವಂತ ಉಪರಾ ಅಭಿ ಷ್ಯುಃ ।
ಸುವೀರಾಸೋ ಅಭಿಮಾತಿಷಾಹಃ ಸ್ಮತ್ಸೂರಿಭ್ಯೋ ಗೃಣತೇ ತದ್ವಯೋ ಧಾಃ ॥ ೯ ॥

### ಪದಪಾಠಃ

ತ್ವಯಾ । ಯಥಾ । ಗೃತ್ಸಽಮದಾಸಃ । ಅಗ್ನೇ । ಗುಹಾ । ವನ್ವಂತಃ। ಉಪರಾನ್ । ಅಭಿ । ಸ್ಯುರಿತಿ ಸ್ಯುಃ ।
ಸುಽವೀರಾಸಃ । ಅಭಿಮಾತಿಽಸಹಃ । ಸ್ಮತ್ । ಸೂರಿಽಭ್ಯಃ । ಗೃಣತೇ । ತತ್ । ವಯಃ । ಧಾಃ । ॥ ೯ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಯಾ ರಕ್ಷಕೇಣ ವನ್ವಂತಶ್ಶಾಂಡಸಂ ಭಜಂತೋ ಗೃತ್ಸಮದಾ ಋಷಯಃ । ಆತ್ಮನಿ ಪರೋಕ್ಷ್ಯೇಣ ವಚನಂ । ಯಥಾ ಗುಹಾ ಗುಹಾಯಾಂ ವರ್ತಮಾನಾನುಪರಾನ್ ಉಪರಮಣಸಾಧನಾನ್ ಉಪರಿ ಉತ್ಕೃಷ್ಟೇ ವರ್ತಮಾನಾನ್ವಾ ಧನವಿಶೇಷಾನಭಿಸ್ಯುಃ । ಅಭಿಭವೇಯುಃ । ಸ್ವಾಧೀನಾನ್ ಕುರ್ಯುಃ । ಯದ್ವಾ ಗೂಢಾನುಪರಾನ್ ಉಪರೇಽಧಿಕತ್ವೇನ ವರ್ತಮಾನಾನ್ಪಾಪಾನಭಿಸ್ಯುಃ । ಅಭಿಭವೇಯುಃ । ತಥಾ ಕುರ್ವಿತ್ಯರ್ಥಃ । ಕೀದೃಶಾಃ । ಸುವೀರಾಸಃ । ಶೋಭನಪುತ್ರಾದ್ಯುಪೇತಾಃ । ಅಭಿಮಾತಿಸಹಃ । ವೈರಿಣಾಂ ಪಾಪಾದೀನಾಂ ಸೋಢಾರಃ । ಕಿಂಚ ಸೂರಿಭ್ಯೋ ಮೇಧಾವಿಭ್ಯೋ ಯಜಮಾನೇಭ್ಯೋ ಗೃಣತೇ ॥ ವ್ಯತ್ಯಯೇನೈಕವಚನಂ । ಶಬ್ದಯದ್ಭ್ಯಃ ಸ್ತೋತೃಭ್ಯಃ । ಯದ್ವಾ ಸೂರಿಭ್ಯೋ ಯಜಮಾನೇಭ್ಯೋ ಗೃಣತೇ ಸ್ತೋತ್ರೇ ಚ ಸ್ಮತ್ ಸುಮತ್ ಅತಿಪ್ರಭೂತಂ ತತ್ ತಾದೃಶಂ ಪ್ರಸಿದ್ಧಂ ವಯೋಽನ್ನಂ ಧಾಃ । ಧೇಹಿ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ವನ್ವಂತಃ—ನಿನ್ನನ್ನು ಸ್ತುತಿಸಿ ಭಜಿಸುವ । ಗೃತ್ಸಮದಾಸಃ—ಗೃತ್ಸಮದ ಋಷಿಗಳು । ತ್ವಯಾ—ರಕ್ಷಕನಾದ ನಿನ್ನ ಸಹಾಯದಿಂದ । ಯಥಾ—ಯಾವ ರೀತಿಯಲ್ಲಿ । ಗುಹಾ—ಗುಹೆಯಲ್ಲಿ ಗೂಢವಾಗಿರತಕ್ಕ । ಉಪರಾನ್—ಉತ್ಕೃಷ್ಟವಾದ ಧನಗಳನ್ನು । ಅಭಿ ಸ್ಯುಃ—ಹೊಂದುವರೋ ಅದರಂತೆಯೂ (ಮತ್ತು) । ಸುವೀರಾಸಃ—ಶ್ರೇಷ್ಠರಾದ ವೀರಪುತ್ರರಿರುವಂತೆಯೂ । ಅಭಿಮಾತಿಸಹಃ—ಶತ್ರುಗಳನ್ನು ಸದೆಬಡಿಯುವ ಶಕ್ತಿವಂತರಾಗಿರುವಂತೆಯೂ ಮಾಡು । ಸೂರಿಭ್ಯಃ—ಯಜ್ಞಕರ್ತರಿಗಾಗಿ । ಗೃಣತೇ—ಸ್ತುತಿಯನ್ನು ಪಠಿಸತಕ್ಕ ಸ್ತೋತೃಗಳಿಗೆ । ಸ್ಮತ್—ಅತಿಪ್ರಭೂತವಾದುದೂ । ತತ್—ಪ್ರಸಿದ್ಧವಾದುದೂ ಆದ । ವಯಃ—ಅನ್ನವನ್ನು । ಧಾಃ—ಕೊಡು.

ಭಾವಾರ್ಥ

ಅಲೈ ಅಗ್ನಿಯೇ, ನಿನ್ನನ್ನು ಸ್ತುತಿಸಿ ಭಜಿಸುವ ಗೃತ್ಸಮದ ಋಷಿಗಳು ರಕ್ಷಕನಾದ ನಿನ್ನ ಸಹಾಯದಿಂದ ಯಾವ ರೀತಿಯಲ್ಲಿ ಗುಹೆಯಲ್ಲಿ ಗೂಢವಾಗಿರತಕ್ಕ ಉತ್ಕೃಷ್ಟವಾದ ಧನಗಳನ್ನು ಹೊಂದುವರೋ ಅದರಂತೆಯೂ ಶತ್ರುಗಳನ್ನು ಸದೆಬಡಿಯುವ ಶಕ್ತಿವಂತರಾಗಿರುವಂತೆಯೂ ಮಾಡು. ಯಜ್ಞಕರ್ತರಿಗಾಗಿ ಸ್ತುತಿಯನ್ನು ಪಠಿಸತಕ್ಕ ಸ್ತೋತೃಗಳಿಗೆ ಅತಿಪ್ರಭೂತವಾದುದೂ, ಪ್ರಸಿದ್ಧವಾದುದೂ ಆದ ಅನ್ನವನ್ನು ಕೊಡು.

## English Translation

By you (Agni), may the Gritsamadas, repeating your praise, become masters of the precious secret (treasures); so that they may be possessed of excellent dependants, and be able to resist (their) enemies, and do you give to (your) pious worshippers, and to him who glorifies (you), such (abundant) food.

### ವಿಶೇಷವಿಷಯಗಳು

**ವನ್ವಂತಃ—ಛಾಂದಸಂ ಭಜಂತೋ ಗೃತ್ಸಮದಾ ಋಷಯಃ**—ಅಗ್ನಿಯ ಅನುಗ್ರಹಕ್ಕೆ ಪಾತ್ರರಾಗಿ ವೇದಾಧ್ಯಯನವನ್ನು ಮಾಡುತ್ತಾ ಇರುವ ಗೃತ್ಸಮದನೇ ಮೊದಲಾದ ಅವನ ವಂಶಸ್ಥರಾದ ಅಥವಾ ಅವನ ಸಂಬಂಧಿಗಳಾದ ಋಷಿಗಳು ಎಂದು ಅರ್ಥವನ್ನು ವಿವರಿಸಿದೆ. ಇಲ್ಲಿ ಮಂತ್ರದ್ರಷ್ಟೃವಾದ ಗೃತ್ಸಮದಋಷಿಯೇ ತನ್ನನ್ನೂ ತನ್ನ ಕಡೆಯವರನ್ನೂ, ತನ್ನ ವಂಶದವರನ್ನೂ ಉದ್ದೇಶಿಸಿ ಹೇಳಿರುವನು.

**ಯಥಾ ಗುಹಾ ಉಪರ್ರ್ಅಭಿ ಸ್ಯುಃ—ಗುಹಾಯಾಂ ವರ್ತಮಾನಾರ್ ಉಪರಿ ವರ್ತಮಾನಾರ್ ವಾ ಧನವಿಶೇಷಾರ್ ಸ್ವಾಧೀನಾರ್ ಕುರ್ಯುಃ । ಯದ್ವಾ ಗೂಢಾರ್ ಅಧಿಕತ್ವೇನ ವರ್ತಮಾನಾರ್ ಪಾಪಾರ್ ಅಭಿಭವೇಯುಃ ತಥಾ ಕುರು** । ಅಗ್ನಿಯನ್ನು ಸಂಬೋಧಿಸಿ, ಗುಹೆಗಳಲ್ಲಿ (ವಿಜನವಾದ ಅಥವಾ ರಹಸ್ಯವಾದ ಪ್ರದೇಶದಲ್ಲಿ) ಹುದುಗಿಸಿ ಇರಿಸಿರುವ ಅಥವಾ ಭೂಮಿಯ ಮೇಲುಗಡೆಯಲ್ಲಿರುವ ಧನವು ವೇದಾಧ್ಯಯನಮಾತ್ರದಿಂದ ಜೀವಿಸುತ್ತಿರುವ ಋಷಿಗಳಾದ ನಮಗೆ ಅಧೀನವಾಗುವಹಾಗೆ ಅನುಗ್ರಹಿಸು ಎಂದು ಒಂದು ವಿಧವಾದ ಆಶಂಸನೆಯು ವಿವರಿಸಲಾಗಿದೆ. ಎರಡನೆಯದಾದ, ಯಾರಿಗೂ ತಿಳಿಯದ ಹಾಗೆ ನಾವು ಆಚರಿಸಿರುವ (ರಹಸ್ಯವಾದ) ಗೂಢವಾದ ಮತ್ತು ಪ್ರಭೂತವಾದ ಪಾತಕಗಳು (ಪಾಪಗಳು) ನಾಶವಾಗುವಂತೆ ನಮಗೆ ಶಕ್ತಿಯುಂಟಾಗಲಿ ಎಂದು ಅಗ್ನಿಯ ಅನುಗ್ರಹವು ಪ್ರಾರ್ಥಿತವಾಗಿದೆ.

**ಸೂರಿಭ್ಯಃ ಗೃಣತೇ—ಮೇಧಾವಿಭ್ಯಃ ಯಜಮಾನೇಭ್ಯಃ ಯದ್ವಾ ಸೂರಿಭ್ಯಃ ಸ್ತೋತೃಭ್ಯಃ** ಯಾಸ್ಕರಿಂದ ಸೂರಿಪದವು ಸ್ತೋತ್ರನಾಮಗಳಲ್ಲಿ (ನಿ. ೩-೧೯) ಪಠಿತವಾಗಿದೆ. ಇಲ್ಲಿ ಸ್ತೋತ್ರವನ್ನು ಪಠಿಸುವ ಋತ್ವಿಜರಿಗಾಗಿ ಅಥವಾ ಮೇಧಾವಿಗಳಾದ ಯಜಮಾನರಿಗಾಗಿ ಎಂದು ಸೂರಿಪದಕ್ಕೆ ಎರಡು ವಿಧವಾದ ಅರ್ಥವನ್ನು ವಿವರಿಸಿ, ಪ್ರಭೂತವಾದ ಪುತ್ರ, ಧನ, ಅನ್ನ ಮೊದಲಾದವನ್ನು ಕೊಡಬೇಕೆಂದು ಅಗ್ನಿಯನ್ನು ಪ್ರಾರ್ಥಿಸಿದೆ.

---

## ಐದನೆಯ ಸೂಕ್ತವು.

---

### ಸಾಯಣಭಾಷ್ಯಂ

**ಹೋತಾಜನಿಷ್ಟೇತ್ಯಷ್ಟರ್ಚಂ ಪಂಚಮಂ ಸೂಕ್ತಂ ಸೋಮಾಹುತೇರಾರ್ಷಮಾಗ್ನೇಯಮಾನುಷ್ಟುಭಂ। ಹೋತಾಷ್ಟಾವಾನುಷ್ಟುಭಮಿತ್ಯನುತ್ಯನುಕ್ರಾಂತಂ॥ ಪ್ರಾತರನುವಾಕಾಶ್ವಿನಶಸ್ತ್ರಯೋರಾಗ್ನೇಯೇ ಕ್ರತಾವಸ್ಯ ವಿನಿಯೋಗಃ । ಸೂತ್ರಿತಂ ಚ । ಅಗ್ನಾಯೋ ಹೋತಾಜನಿಷ್ಟ । ಆ. ೪-೧೩ । ಇತಿ ॥ ಚತುರ್ವಿಂಶೇಽಹನ್ಯಪೀದಮೇವಾಜ್ಯಂ । ಚತುರ್ವಿಂಶೇ ಹೋತಾಜನಿಷ್ಟೇತ್ಯಾಜ್ಯಂ । ಆ. ೭-೨ । ಇತಿ ॥ ಅಭಿಪ್ಲವಿಕೇ ದ್ವಿತೀಯೇಽಹನೀದಮೇವಾಜ್ಯಂ । ದ್ವಿತೀಯಸ್ಯ ಚತುರ್ವಿಂಶೇನಾಜ್ಯಂ । ಆ. ೭-೬ । ಇತ್ಯತಿದಿಷ್ಟತ್ವಾತ್ ॥**

ಅನುವಾದವು—**ಹೋತಾಜನಿಷ್ಟ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಸೋಮಾಹುತಿಯೆಂಬುವನು ಋಷಿಯು ; ಅಗ್ನಿಯು ದೇವತೆಯು , ಅನುಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಹೋತಾಷ್ಟಾವಾನುಷ್ಟುಭಂ** ಎಂದು ಹೇಳಿರುವುದು. ಪ್ರಾತಕನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕಾಲದಲ್ಲಿ ಆಗ್ನೇಯಕ್ರತು ಸಂಬಂಧವಾದ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುವೆಂದು ಆಶ್ವಲಾಯನ ಶ್ರೌತಸೂತ್ರದ—**ಆಗ್ನಾಯೋ ಹೋತಾಜನಿಷ್ಟ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೧೩) ; ಮತ್ತು ಇಪ್ಪತ್ತುನಾಲ್ಕು ದಿನಗಳವರೆಗೆ ಮಾಡುವ ಯಾಗವಿಶೇಷದಲ್ಲಿ ಇಪ್ಪತ್ತನಾಲ್ಕನೆಯ ದಿವಸದಲ್ಲಿ ಆಜ್ಯಹೋಮಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—**ಚತುರ್ವಿಂಶೇ ಹೋತಾಜನಿಷ್ಟೇತ್ಯಾಜ್ಯಂ** ಎಂಬ ಸೂತ್ರದಿಂದಲೂ (ಆ. ೭-೨) ಅಭಿಪ್ಲವಯಾಗದ ಎರಡನೆಯ ದಿವಸದಲ್ಲಿಯೂ ಆಜ್ಯಹೋಮಕ್ಕಾಗಿ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ದ್ವಿತೀಯಸ್ಯ ಚತುರ್ವಿಂಶೇನಾಜ್ಯಂ** ಎಂಬ ಸೂತ್ರದಿಂದಲೂ (ಆ. ೭-೬) ವಿವೃತವಾಗಿರುವುದು.

---

## ಸೂಕ್ತ—೫

॥ ಮಂಡಲ—೨ ॥ ಅನುವಾಕ— ೧॥ ಸೂಕ್ತ—೫ ॥

॥ ಅಷ್ಟಕ— ೨ ॥ ಅಧ್ಯಾಯ— ೫ ॥ ವರ್ಗ- ೨೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥

ಋಷಿಃ—ಸೋಮಾಹುತಿರ್ಭಾರ್ಗವಃ ॥

ದೇವತಾ—ಅಗ್ನಿ: ॥

ಛಂದಃ—ಅನುಷ್ಟುಪ್ ।

---

ಸಂಹಿತಾಪಾಠಃ

**ಹೋತಾಜನಿಷ್ಟ ಚೇತನಃ ಪಿತಾ ಪಿತೃಭ್ಯ ಊತಯೇ ।**

**ಪ್ರಯಕ್ಷಞ್ಜೇನ್ಯಂ ವಸು ಶಕೇಮ ವಾಜಿನೋ ಯಮಂ ॥ ೧ ॥**

॥ ಪದಪಾಠಃ ॥

**ಹೋತಾ । ಅಜನಿಷ್ಟ । ಚೇತನಃ । ಪಿತಾ । ಪಿತೃಽಭ್ಯಃ । ಊತಯೇ ।**

**ಪ್ರಽಯಕ್ಷನ್ । ಜೇನ್ಯಂ । ವಸು । ಶಕೇಮ । ವಾಜಿನಃ । ಯಮಂ ॥ ೧ ॥**

### ಸಾಯಣಭಾಷ್ಯಂ

ಹೋತಾ ಹೋಮನಿಷ್ಪಾದಕಶ್ಚೇತನಶ್ಚೇತಯಿತಾಸ್ಮದನುಷ್ಠಿತಸ್ಯ ಪಿತಾ ಪಾಲಕೋಽಸ್ಮದ್ಯಜ್ಞಸ್ಯ ಈದೃಶೋಽಗ್ನಿರಜನಿಷ್ಟ । ಉತ್ಪನ್ನಃ । ಕಿಮರ್ಥಂ । ಪಿತೃಭ್ಯಃ ಪಾಲಕೇಭ್ಯೋ ಯಜಮಾನೇಭ್ಯಃ ॥ ಷಷ್ಠ್ಯರ್ಥೇ ಚತುರ್ಥೀ ॥ ತೇಷಾಮೂತಯೇ ರಕ್ಷಣಾಯ ಚ । ವಯಂ ಚ ವಾಜಿನೋ ಹವಿರ್ಲಕ್ಷಣಾನ್ನವಂತಃ ಸಂತಃ ಪ್ರಯಕ್ಷಂ ಪ್ರಕರ್ಷೇಣ ಪೂಜ್ಯಂ ಜೇನ್ಯಂ ಜೇತವ್ಯಂ ಯಮಂ ಯಮಯಿತವ್ಯಂ ವಸು ಧನಂ ಶಕೇಮ । ಶಕ್ತಾ ಭೂಯಾಸ್ಮ ಲಬ್ಧುಮಿತಿ ಶೇಷಃ । ಯದ್ವಾ ವಾಜಿನೋಽನ್ನಸ್ಯ ಯಮಂ ಯಮನಂ ಕರ್ತುಂ ಶಕೇಮ । ಪ್ರಯಕ್ಷಂ ಜೇನ್ಯಂ ವಸು ಧನಮಿತ್ಯುಪಮಾನಂ । ಉಕ್ತಲಕ್ಷಣಂ ಧನಮಿವ । ತದ್ಯಥಾವರೋದ್ಧುಂ ಶಕ್ನುಮಸ್ತದ್ವತ್ ॥

### ಪ್ರತಿಪದಾರ್ಥ

**ಹೋತಾ**—ಹೋಮಸಂಪಾದಕನೂ । **ಚೇತನಃ**—(ನಮ್ಮ ಅನುಷ್ಠಾನಗಳಿಗೆ) ಚೈತನ್ಯವನ್ನುಂಟುಮಾಡುವವನೂ । **ಪಿತಾ**—ನಮ್ಮ ಯಜ್ಞದ ಪಾಲಕನೂ ಆದ ಅಗ್ನಿಯು । **ಪಿತೃಭ್ಯಃ**—ಯಜ್ಞಕರ್ತರ । **ಊತಯೇ**—ರಕ್ಷಣೆಗಾಗಿ । **ಅಜನಿಷ್ಟ**—ಉತ್ಪನ್ನನಾಗಿದ್ದಾನೆ । (**ವಯಂ**—ನಾವೂ ಸಹ) । **ವಾಜಿನಃ**—ಹವಿಸ್ಸಿನ ರೂಪದ ಅನ್ನವಂತರಾಗಿ । **ಪ್ರಯಕ್ಷಂ**—ಅತಿಶಯವಾಗಿ ಪೂಜ್ಯವಾದುದೂ । **ಜೇನ್ಯಂ**—ಜೇತವ್ಯವಾದುದೂ । **ಯಮಂ**—ನಮ್ಮ ನಿಯಮದಲ್ಲಿರತಕ್ಕದ್ದೂ ಆದ । **ವಸು**—ಧನವನ್ನು । **ಶಕೇಮ**—ಹೊಂದುವಂತಾಗಲಿ.

### ಭಾವಾರ್ಥ

ಹೋಮಸಂಪಾದಕನೂ, ನಮಗೆ ಚೈತನ್ಯದಾಯಕನೂ, ನಮ್ಮ ಯಜ್ಞದ ಪಾಲಕನೂ ಆದ ಅಗ್ನಿಯು ಯಜ್ಞಕರ್ತರ ರಕ್ಷಣೆಗಾಗಿ ಉತ್ಪನ್ನನಾಗಿದ್ದಾನೆ. ನಾವೂ ಸಹ ಹವಿಸ್ಸಿನ ರೂಪದ ಅಗ್ನಿವಂತರಾಗಿ ಅಗ್ನಿಯನ್ನು ಪೂಜಿಸುತ್ತಾ ಅತಿಶಯವಾಗಿ ಪೂಜ್ಯವಾದುದೂ ಮತ್ತು ನಮ್ಮ ನಿಯಮದಲ್ಲಿರುವುದೂ ಆದ ಧನವನ್ನು ಹೊಂದುವಂತಾಗಲಿ.

### English Translation

An invoker (of the gods), our instructor and protector, has heen born for the preservation of our patrons ; may we, possessed of (sacrificial) food be able to acquire worshipful, conquerable, and manageable riches.

### ವಿಶೇಷವಿಷಯಗಳು

**ಚೇತನಃ**—**ಚೇತಯಿತಾ ಅಸ್ಮದನುಷ್ಠಿತಸ್ಯ** । ನಾವು ನೆರವೇರಿಸುವ ಅಥವಾ ಮಾಡುತ್ತಿರುವ ಯಜ್ಞಾದಿ ಕರ್ಮಗಳಿಗೆ ಪ್ರೇರಕನಾಗಿರುವವನು. ಎಂದರೆ ಅವುಗಳನ್ನು ನೆರವೇರಿಸಲು ನಮಗೆ ಶಕ್ತಿಸಾಮರ್ಥ್ಯಗಳನ್ನು ಉಂಟುಮಾಡುವವನು ಎಂದಭಿಪ್ರಾಯವು.

**ಪಿತಾ**—ಪಾ ರಕ್ಷಿಸು ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಪಾಲಕನು ಎಂದು ಅರ್ಥವನ್ನು ಸಾಯಣರು ವಿವರಿಸಿದ್ದಾರೆ. ಯಾಸ್ಕರು—

ದ್ಯೌರ್ಮೇ ಪಿತಾ ಜನಿತಾ ನಾಭಿರತ್ರ ಬಂಧುರ್ಮೇ ಮಾತಾ ಪೃಥಿವೀ ಮಹೀಯಂ ।
ಉತ್ತಾನಯೋಶ್ಚಮ್ವೋ೩ ರ್ಯೋನಿರಂತರತ್ರಾ ಪಿತಾ ದುಹಿತುರ್ಗರ್ಭಮಾಧಾತ್ ॥

(ಋ. ಸಂ. ೧-೧೬೪-೩೩)

ಎಂಬ ಋಕ್ಕನ್ನುದಾಹರಿಸಿ ಅಲ್ಲಿರುವ ಪಿತಾ ಎಂಬ ಶಬ್ದಕ್ಕೆ ಪಾತಾ ವಾ ಪಾಲಯಿತಾ ವಾ ಪಾಲಕನು ಅಥವಾ ಸಂರಕ್ಷಕನು (ನಿ. ೪-೨೧) ಎಂದೂ,

ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ ।
ಅಸುಂ ಯ ಈಯುರವೃಕಾ ಋತಜ್ಞಾಸ್ತೇ ನೋಽವನ್ತು ಪಿತರೋ ಹವೇಷು ॥

(ಋ. ಸಂ. ೧೦-೧೫-೧)

ಎಂಬ ಋಕ್ಕನ್ನುದಾಹರಿಸಿ ಇದರಲ್ಲಿರುವ ಪಿತರಃ ಎಂಬ ಶಬ್ದಕ್ಕೆ ಪಿತೃದೇವತೆಗಳು ಎಂಬ ಅರ್ಥವನ್ನು (ನಿ. ೧೧-೧೮) ಹೇಳಿದ್ದಾರೆ. ಸಾಯಣರು ಪ್ರಕೃತವಾದ ಋಕ್ಕಿನಲ್ಲಿ ಇರುವ ಪಿತಾ, ಪಿತೃಭ್ಯಃ ಎಂಬ ಎರಡು ಶಬ್ದಗಳಿಗೂ ಪಾಲಕ ಎಂಬರ್ಥವನ್ನೇ ಹೇಳಿ ಪಿತಾ-ಪಾಲಕನು ಎಂಬರ್ಥವನ್ನು ಅಗ್ನಿಗೂ, ಪಿತೃಭ್ಯಃ-ಪಾಲಕರಾದ ಯಜ್ಞಕರ್ತರಿಗೆ ಎಂಬರ್ಥವನ್ನು ಯಜಮಾನರಿಗೂ ಅನ್ವಯಮಾಡಿ ಅರ್ಥವಿವರಣೆ ಮಾಡಿದಾರೆ ಇಲ್ಲಿ ಪಿತಾ ಎಂಬ ಶಬ್ದಕ್ಕೆ ಸಾಯಣರು ಹೇಳಿರುವ ಪಾಲಕನೆಂಬ ಅರ್ಥವು ಅಗ್ನಿಗೆ ಹೊಂದುವುದಾದರೂ ಪಿತೃಭ್ಯಃ ಎಂಬ ಶಬ್ದಕ್ಕೆ ಯಜಮಾನರಿಗೆ ಎಂಬ ಅರ್ಥವಲ್ಲದೆ ಪಿತೃದೇವತೆಗಳ (ರಕ್ಷಣೆಗಾಗಿ) ಎಂಬ ಅರ್ಥವನ್ನು ಹೇಳುವುದರಲ್ಲಿ ಅಭ್ಯಂತರವೇನೂ ಇಲ್ಲ. Wilson ಎಂಬ ಪಂಡಿತನು ಪಿತೃದೇವತೆಗಳೆಂಬ ಅರ್ಥವನ್ನೇ ಅನುಮೋದಿಸಿದ್ದಾನೆ.

**ವಾಜಿನಃ—ಹವಿರ್ಲಕ್ಷಣಾನ್ನವಂತಃ** । ವಾಜಃ ಎಂಬ ಶಬ್ದವು ಇಪ್ಪತ್ತೆಂಟು ಅನ್ನನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ವಾಜಿನಃ ಎಂದರೆ ಅನ್ನದಿಂದ ಸಹಿತರಾದ ಅಥವಾ ಅಗ್ನಿಯನ್ನುದ್ದೇಶಿಸಿ ಅರ್ಪಿಸಲು ಹವಿಸ್ಸಿನ ರೂಪದ ಅನ್ನವನ್ನು ಸಿದ್ಧಪಡಿಸಿಟ್ಟುಕೊಂಡಿರುವ ಎಂದರ್ಥವು.

**ಜೇಷ್ಯಂ ವಸು**—ವಸುವೆಂದರೆ ಧನವು. ಈ ಧನವು ನಮಗೆ ಗೆಲ್ಲಲು ಅರ್ಹವಾಗಿರಬೇಕು. ಎಂದರೆ, ಶತ್ರುಗಳನ್ನು ನಿಗ್ರಹಿಸಿ ಅವರಲ್ಲಿರುವ ಧನಾದಿಗಳನ್ನು ಗೆದ್ದು ನಮ್ಮ ವಶಪಡಿಸಿಕೊಳ್ಳುವಂತಿರಬೇಕು. ಇಂತಹ ಧನವನ್ನು ನಾವು ಪಡೆಯಲು ಸಮರ್ಥರಾಗೋಣ ಎಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ.

ಈ ಋಕ್ಕಿನಲ್ಲಿಯೂ, ಮುಂದಿನ ಋಕ್ಕುಗಳಲ್ಲಿಯೂ ಅಗ್ನಿಯನ್ನು ಯಜ್ಞದಲ್ಲಿ ಭಾಗವಹಿಸುವ ಹೋತಾ, ನೇತಾ, ಪ್ರಶಾಸ್ತಾ, ನೇಷ್ಟಾ, ಅಧ್ವರ್ಯು ಮೊದಲಾದ ಋತ್ವಿಜರೆಂದು ಸಂಬೋಧಿಸಿ ಸ್ತುತಿಸಲಾಗಿದೆ. ಪ್ರಕೃತವಾದ ಈ ಋಕ್ಕಿನಲ್ಲಿ ಹೋತಾ-ಯಜ್ಞದಲ್ಲಿ ದೇವತೆಗಳನ್ನು ಆಹ್ವಾನಮಾಡುವವನು, ಅಥವಾ **ಹೋಮನಿಷ್ಪಾದಕಃ**—ಹೋಮವನ್ನು ನೆರವೇರಿಸುವವನು ಎಂದು ಅಗ್ನಿಯನ್ನು ಸ್ತುತಿಸಿ, ಇಂತಹ ಮಹಿಮೆಯುಳ್ಳ ಅಗ್ನಿಯು (ನಮ್ಮ ಯಜ್ಞಾರ್ಥವಾಗಿ ಅರಣಿಗಳಲ್ಲಿ) ಉತ್ಪನ್ನನಾಗಿರುವನು ಎಂದು ವರ್ಣಿಸಿದೆ.

ಸಂಹಿತಾಪಾಠಃ

ಆ ಯಸ್ಮಿನ್ತ್ಸಪ್ತ ರಶ್ಮಯಸ್ತತಾ ಯಜ್ಞಸ್ಯ ನೇತರಿ ।

ಮನುಷ್ವದ್ದೈವ್ಯಮಷ್ಟಮಂ ಪೋತಾ ವಿಶ್ವಂ ತದಿನ್ವತಿ ॥ ೨ ॥

ಪದಪಾಠಃ

ಆ । ಯಸ್ಮಿನ್ । ಸಪ್ತ । ರಶ್ಮಯಃ । ತತಾಃ । ಯಜ್ಞಸ್ಯ । ನೇತರಿ ।

ಮನುಷ್ವತ್ । ದೈವ್ಯಂ । ಅಷ್ಟಮಂ । ಪೋತಾ । ವಿಶ್ವಂ । ತತ್ । ಇನ್ವತಿ ॥ ೨ ॥

ಸಾಯಣಭಾಷ್ಯಂ

ಯಜ್ಞಸ್ಯ ನೇತರಿ ಯಾಗಸ್ಯ ನಿರ್ವಾಹಕೇ ಯಸ್ಮಿನ್ನಗ್ನೌ ಸಪ್ತ ರಶ್ಮಯಃ ಸಪ್ತಸಂಖ್ಯಾಕಾ ರಶ್ಮಿವದ್ವ್ಯಾಪ್ತಾ ಹೋತ್ರಕಾ ಆತತಾಃ । ಸ್ವಸ್ವಕರ್ಮಭಿಃ ಸರ್ವತೋ ವ್ಯಾಪ್ತಾ ಭವಂತಿ । ಸ ಪೋತಾ ಪಾವಕೋ ದೇವಾನಾಂ ಪೋತ್ರಾಖ್ಯ ಋತ್ವಿಗ್ರೂಪೋ ವಾಗ್ನಿರ್ಮನುಷ್ವತ್ ಮನುಷ್ಯಪೋತೃವತ್ ದೈವ್ಯಂ । ದೇವೋ ಯಜ್ಞಃ । ತತ್ಸಂಬಂಧ್ಯಷ್ಟಮಮಷ್ಟರ್ತ್ವಿಕ್ಸಂಬಂಧಿ ತದ್ವಿಶ್ವಂ ಕರ್ತವ್ಯಜಾತಂ ಸಪ್ತ ಹೋತ್ರಕೈಃ ಸಹ ಸ್ವಯಮಷ್ಟಮಃ ಸನ್ ಇನ್ವತಿ । ವ್ಯಾಪ್ನೋತಿ । ಯದ್ವಾ ತದಿತ್ಯಸ್ಯ ಲಿಂಗವ್ಯತ್ಯಯಃ। ಸ ಪೋತೇತಿ ಸಂಬಂಧಃ । ಸಪ್ತಹೋತ್ರಕೈಃ ಸಹಾಷ್ಟಮೋ ಭೂತ್ವಾ ತದ್ವದ್ಯಜ್ಞಂ ನಿರ್ವಹತೀತ್ಯರ್ಥಃ ॥

ಪ್ರತಿಪದಾರ್ಥ

**ಯಜ್ಞಸ್ಯ ನೇತರಿ**—ಯಜ್ಞಕ್ಕೆ ನೇತೃವಾದ (ನಿರ್ವಾಹಕನಾದ) । **ಯಸ್ಮಿನ್**—ಯಾವ ಅಗ್ನಿಯಲ್ಲಿ । **ಸಪ್ತ ರಶ್ಮಯಃ**—(ಸಪ್ತರಶ್ಮಿರೂಪದಲ್ಲಿರುವ) ಸಪ್ತಸಂಖ್ಯಾಕರಾದ ಹೋತೃಗಳೂ । **ಆ ತತಾಃ**—ತಮ್ಮ ತಮ್ಮ ಕರ್ತವ್ಯಗಳೊಡನೆ ಸರ್ವತ್ರ ವ್ಯಾಪಿಸಿದ್ದಾರೆಯೋ ಅಂತಹ । **ಪೋತಾ**—(ದೇವತೆಗಳಿಗೆ) ಪೋತೃವೆಂಬ ಋತ್ವಿಕ್ಕಾದ ಅಗ್ನಿಯು । **ಮನುಷ್ವತ್**—ಮಾನವ ಋಕ್ಕುಗಳಲ್ಲಿ ಒಬ್ಬನಾದ ಪೋತೃವಿನಂತೆ । **ದೈವ್ಯಂ**—ದೇವತಾತ್ಮವಾದ ಯಜ್ಞದಲ್ಲಿ । **ಅಷ್ಟಮಂ**—(ಉಳಿದ ಏಳು ಋತ್ವಿಕ್ಕುಗಳೊಡನೆ) ಸೇರಿ ಎಂಟನೆಯ ಋತ್ವಿಕ್ಕಾಗಿ । **ತತ್ ವಿಶ್ವಂ**—ಸಮಸ್ತವಾದ ಕರ್ತವ್ಯವನ್ನು । **ಇನ್ವತಿ**—ವ್ಯಾಪಿಸುತ್ತಾನೆ. (ನಿರ್ವಹಿಸುತ್ತಾನೆ) ।

ಭಾವಾರ್ಥ

ಯಜ್ಞದ ನಿರ್ವಾಹಕನಾದ ಯಾವ ಅಗ್ನಿಯಲ್ಲಿ ಸಪ್ತರಶ್ಮಿರೂಪದಲ್ಲಿರುವ ಸಪ್ತಸಂಖ್ಯಾಕರಾದ ಹೋತೃಗಳೂ ತಮ್ಮ ತಮ್ಮ ಕರ್ತವ್ಯಗಳೊಡನೆ ಸರ್ವತ್ರವ್ಯಾಪಿಸಿದ್ದಾರೆಯೋ ಅಂತಹ ದೇವಪೋತೃವಾದ ಅಗ್ನಿಯು ಮಾನವ ಪೋತೃವಿನಂತೆ ಯಜ್ಞದಲ್ಲಿ ಸಮಸ್ತ ಕರ್ತವ್ಯವನ್ನೂ ನಿರ್ವಹಿಸುತ್ತಾನೆ.

## English Translation

In whom, as conductor of the sacrifice, the seven rays are manifested and who, as a human Potri, officiates in the eighth place to perfect every divine (rite).

। ವಿಶೇಷವಿಷಯಗಳು ।

**ನೇತರಿ—ಯಾಗಸ್ಯ ನಿರ್ವಾಹಕೇ ಯಸ್ಮಿನ್ನಗ್ನೌ** । ಯಜ್ಞವನ್ನು ನಿರ್ವಹಿಸುವ ಯಾವ ಅಗ್ನಿಯಲ್ಲಿ ಎಂದು ಭಾಷ್ಯಕಾರರ ಅರ್ಥವು. ಈ ಋಕ್ಕಿನಲ್ಲಿ ನೇತೃ ಮತ್ತು ಪೋತೃ ಎಂಬ ಋತ್ವಿಜರ ಕರ್ತವ್ಯವನ್ನು ಅಗ್ನಿಯು ಮಾಡುವನೆಂದು ಉಕ್ತವಾಗಿದೆ.

**ಸಪ್ತ ರಶ್ಮಯಸ್ತತಾ—ಸಪ್ತಸಂಖ್ಯಾಕಾ ರಶ್ಮಿವದ್ವ್ಯಾಪ್ತಾ ಹೋತ್ರಕಾ ಆ ತತಾಃ । ಸ್ವಸ್ವಕರ್ಮಭಿಃ ಸರ್ವತೋ ವ್ಯಾಪ್ತಾ ಭವಂತಿ** । ಸಪ್ತರಶ್ಮಿಗಳಂತೆ ಅಥವಾ ಅಗ್ನಿಯ ಸಪ್ತಜ್ವಾಲೆಗಳಂತೆ ಇರುವ ಸಪ್ತಸಂಖ್ಯಾಕರಾದ ಹೋತೃಗಳು ಅಗ್ನಿಯ ಸುತ್ತಲೂ ಸೇರಿಕೊಂಡು ತಮ್ಮ ತಮ್ಮ ಯಜ್ಞಕಾರ್ಯಗಳಲ್ಲಿ ಪ್ರವೃತ್ತರಾಗಿರುವರು ಎಂದರ್ಥವು. ಇಲ್ಲಿ ಸಪ್ತಹೋತೃಗಳು ಯಾರು ಎಂದರೆ ಹಿಂದೆ ಭಾಷ್ಯಕಾರರು ಹೇಳಿರುವಂತೆ ಹೋತೃವರ್ಗದ ನಾಲ್ಕು ಜನ ಹೋತೃಗಳು, ಬ್ರಹ್ಮವರ್ಗದ ಮೂರುಮಂದಿ ಋತ್ವಿಜರು ಒಟ್ಟು ಏಳು ಮಂದಿ ಹೋಮಕಾರ್ಯದಲ್ಲಿ ಪ್ರವೃತ್ತರಾಗುವರು ಎಂದಭಿಪ್ರಾಯವು. ಯಾಸ್ಕರು ಸಪ್ತಹೋತೃಶಬ್ದಕ್ಕೆ ಅಗ್ನಿಯ ಸಪ್ತರಶ್ಮಿಗಳೆಂದು—

**ದಕ್ಷಸ್ಯ ವಾದಿತೇ ಜನ್ಮನಿ ವ್ರತೇ ರಾಜಾನಾ ಮಿತ್ರಾವರುಣಾ ವಿವಾಸಸಿ ।**
**ಅತೂರ್ತಪಂಥಾಃ ಪುರುರಥೋ ಅರ್ಯಮಾ ಸಪ್ತಹೋತಾ ವಿಷುರೂಪೇಷು ಜನ್ಮಸು ॥**

(ಋ. ಸಂ. ೧೦-೬೪-೫)

ಎಂಬ ಋಕ್ಕಿನ ನಿರ್ವಚನದಲ್ಲಿ—**ಸಪ್ತಹೋತಾ ಸಪ್ತಾಸ್ಮೈ ರಶ್ಮಯೋ ರಸಾನಭಿಸನ್ನಾಮಯಂತಿ । ಸಪ್ತೈನಮೃಷಯಃ ಸ್ತುವಂತೀತಿ ವಾ** । ಎಂದು ಹೇಳಿರುವರು (ನಿ. ೧೧-೨೩) ಎಂದರೆ ಅಗ್ನಿಗೆ ಸಪ್ತಹೋತೃವೆಂದು ಹೆಸರು ಬರಲು—ಅಗ್ನಿಯ ರಶ್ಮಿಗಳು (ಜ್ವಾಲೆಗಳು) ಏಳು ಇರುವುದರಿಂದಲೂ ಅಥವಾ ಸಪ್ತಋಷಿಗಳು ಈ ಅಗ್ನಿಯನ್ನು ಸ್ತುತಿಸುವುದರಿಂದಲೂ ಅಗ್ನಿಗೆ ಸಪ್ತಹೋತೃವೆಂಬ ಹೆಸರು ಎಂದು ಅರ್ಥವಿವರಣೆಮಾಡಿರುವರು. ಪ್ರಕೃತವಾದ ಋಕ್ಕಿನಲ್ಲಿ ಸಪ್ತರಶ್ಮಿಗಳಂತೆ ಇರುವ ಸಪ್ತಹೋತೃಗಳು ಅಥವಾ ಸಪ್ತಋತ್ವಿಜರು ಎಂದಭಿಪ್ರಾಯವು.

**ಮನುಷ್ವತ್ ದೈವ್ಯಂ ಅಷ್ಟಮಂ ಪೋತಾ ವಿಶ್ವಂ ತತ್ ಇನ್ವತಿ**—ಎಂಬ ಉತ್ತರಾರ್ಧದ ಈ ವಾಕ್ಯದಲ್ಲಿ ಅಗ್ನಿಯು ಮೇಲೆ ಹೇಳಿದ ಸಪ್ತಋತ್ವಿಜರೊಡನೆ ಮನುಷ್ಯರು ಮಾಡುವ ಯಜ್ಞದಲ್ಲಿ ಪೋತೃವೆಂಬ ಎಂಟನೆಯ ಋತ್ವಿಜನಾಗಿ ತಾನೂ ಯಜ್ಞಕರ್ಮವನ್ನು ನೆರವೇರಿಸಲು ಸಹಾಯಕನಾಗುವನು ಎಂಬರ್ಥವು ವಿವೃತವಾಗಿದೆ.

———:o:———

ಸಂಹಿತಾಪಾಠಃ

ದಧನ್ವೇ ವಾ ಯದೀಮನು ವೋಚದ್ಬ್ರಹ್ಮಾಣಿ ವೇರು ತತ್ ।

ಪರಿ ವಿಶ್ವಾನಿ ಕಾವ್ಯಾ ನೇಮಿಶ್ಚಕ್ರಮಿವಾಭವತ್ ॥ ೩ ॥

ಪದಪಾಠಃ

ದಧನ್ವೇ । ವಾ । ಯತ್ । ಈಂ । ಅನು । ವೋಚತ್ । ಬ್ರಹ್ಮಾಣಿ । ವೇಃ । ಊಂ ಇತಿ । ತತ್ ।

ಪರಿ । ವಿಶ್ವಾನಿ । ಕಾವ್ಯಾ । ನೇಮಿಃ । ಚಕ್ರಂಽಇವ । ಅಭವತ್ ॥ ೩ ॥

ಸಾಯಣಭಾಷ್ಯಂ

ಪೂರ್ವೇ ಮಂತ್ರೇ ಹೋತ್ರಾದಿವತ್ ಸ್ವಯಮಪಿ ಯಜ್ಞಂ ನಿರ್ವಹತೀತ್ಯುಕ್ತಂ । ಅತ್ರ ತು ಸರ್ವಂ ತತ್ತದಾತ್ಮನಾ ಸ್ಥಿತ್ವಾ ಸ್ವಯಮೇವ ನಿರ್ವಹತೀತ್ಯಾಹ । ವಾ ಅಥವಾ ಈಮೇನಂ ಯಜ್ಞಮನು ಲಕ್ಷೀಕೃತ್ಯ ಯದ್ಧವಿರಾದಿಕಂ ದಧನ್ವೇ ಧಾರಯತ್ಯಧ್ವರ್ಯ್ವಾದಿರೂಪಃ । ಯಾನಿ ಬ್ರಹ್ಮಾಣಿ ಶಸ್ತ್ರಾದೀನ್ಯನುವೋಚತ್ । ಅನುವಕ್ತಿ ಹೋತ್ರಾದಿರೂಪಃ । ಅತ್ರ ವಾನ್ವಿತ್ಯೇತದ್ಯೋಜ್ಯಂ । ತತ್ಸರ್ವಂ ವೇರು । ವೇರೇವ । ಕಾಮಯತೇ ಜಾನಾತಿ ವಾ ಸ್ವಯಮನುಷ್ಠಾತುಂ । ಅಯಮಗ್ನಿರ್ವಿಶ್ವಾನಿ ಸರ್ವಾಣಿ ಕಾವ್ಯಾನಿ । ಕವಯೋ ಮೇಧಾವಿನ ಋತ್ವಿಜಃ । ತತ್ಸಂಬಂಧೀನಿ ಕರ್ಮಾಣಿ ಪರ್ಯಭವತ್ । ಪರಿಭವತಿ । ಸ್ವಾಯತ್ತಾನಿ ಕರೋತಿ । ವ್ಯಾಪ್ನೋತೀತ್ಯರ್ಥಃ । ವ್ಯಾಪ್ತೌ ದೃಷ್ಟಾಂತಃ । ನೇಮಿಃ ವಹಿರ್ವೇಷ್ಟನವಲಯಶ್ಚಕ್ರಂ ರಥಾಂಗಂ ಯಥಾ ಕಾರ್ತ್ಸ್ನ್ಯೇನ ವ್ಯಾಪ್ನೋತಿ ತದ್ವತ್ ॥

ಪ್ರತಿಪದಾರ್ಥ

ವಾ—ಅಥವಾ । ಈಂ ಅನು—ಈ ಯಜ್ಞವನ್ನು ಉದ್ದೇಶಿಸಿ । ಯತ್—ಯಾವ ಹವಿಸ್ಸುಗಳನ್ನು । ದಧನ್ವೇ—(ಅಧ್ವರ್ಯ್ವಾದಿಗಳು) ಅರ್ಪಿಸುವರೋ ಮತ್ತು । ಬ್ರಹ್ಮಾಣಿ—ಯಾವ ಶಸ್ತ್ರಾದಿಯಾದ ಮಂತ್ರಗಳನ್ನು । ವೋಚತ್—(ಹೋತ್ರಾದಿಗಳು) ಪಠಿಸುವರೋ । ತತ್—ಆ ಎಲ್ಲವನ್ನೂ ಸಹ । ವೇರು—ಅಗ್ನಿಯು ತಿಳಿದೇ ಇರುತ್ತಾನೆ (ಅಪೇಕ್ಷಿಸುತ್ತಾನೆ ಈ ಅಗ್ನಿಯು) । ವಿಶ್ವಾನಿ—ಸಮಸ್ತವಾದ । ಕಾವ್ಯಾ—ಋತ್ವಿಕ್ಕುಗಳ ಕರ್ಮಗಳನ್ನು । ನೇಮಿಃ—ಚಕ್ರದ ಹೊರವಲಯವು । ಚಕ್ರಂ ಇವ—ಚಕ್ರವನ್ನು ಪೂರ್ಣವಾಗಿ ವ್ಯಾಪಿಸುವಂತೆ । ಪರಿ ಅಭವತ್—ಪೂರ್ಣವಾಗಿ ವ್ಯಾಪಿಸಿದ್ದಾನೆ ।

ಭಾವಾರ್ಥ

ಈ ಯಜ್ಞವನ್ನುದ್ದೇಶಿಸಿ ಅಧ್ವರ್ಯ್ವಾದಿಗಳು ಯಾವ ಹವಿರಾದಿಗಳನ್ನು ಅರ್ಪಿಸುವರೋ ಮತ್ತು ಹೋತ್ರಾದಿಗಳು ಯಾವ ಯಾವ ಮಂತ್ರಗಳನ್ನು ಪಠಿಸುವರೋ ಅವೆಲ್ಲವನ್ನೂ ಸಹ ಅಗ್ನಿಯು ತಿಳಿದೇ ಇದ್ದಾನೆ. ಚಕ್ರದ ಹೊರವಲಯವು ಚಕ್ರವನ್ನು ಪೂರ್ಣವಾಗಿ ವ್ಯಾಪಿಸುವಂತೆ ಈ ಅಗ್ನಿಯು ಸಮಸ್ತ ಋತ್ವಿಕ್ಕರ್ಮಗಳನ್ನೂ ಇಚ್ಛಿಸಿ ರಿಂತು ವ್ಯಾಪಿಸಿದ್ದಾನೆ.

## English Translation

Whatever (offerings the priest) presents, whatever prayers he recites, he, (Agni), knows them all : he comprehends all priestly acts, as the circumference (includes the spokes) of a wheel.

### ವಿಶೇಷವಿಷಯಗಳು

ಹಿಂದಿನ ಋಕ್ಕಿನಲ್ಲಿ ಅಗ್ನಿಯು ಹೋತ್ರಾದಿ ಋತ್ವಿಜರಂತೆ ತಾನೂ ಸಹ ಯಜ್ಞನಿರ್ವಹಣಕಾರ್ಯದಲ್ಲಿ ಪ್ರವೃತ್ತನಾಗುವನು ಎಂದು ಹೇಳಿರುವುದಷ್ಟೆ. ಈ ಋಕ್ಕಿನಲ್ಲಿ ಅಗ್ನಿಯೇ ಆಯಾ ಋತ್ವಿಕ್ಕುಗಳಲ್ಲಿ ಆಯಾ ಅಂಶದಿಂದ ಇದ್ದುಕೊಂಡು ತಾನೇ ಎಲ್ಲಾ ಋತ್ವಿಕ್ಕುಗಳ ಕಾರ್ಯವನ್ನು ನಿರ್ವಹಿಸುವನೆಂದು ವರ್ಣಿತವಾಗಿದೆ.

**ವಾ ಈಂ ಅನು ದಧನ್ವೇ**—ಅಧ್ವರ್ಯು ಮೊದಲಾದ ಋತ್ವಿಜರು ಯಜ್ಞದಲ್ಲಿ ಯಾವ ಹವಿಸ್ಸನ್ನು ಅರ್ಪಿಸುವರೋ ಅದನ್ನೆಲ್ಲಾ ತಿಳಿದು ಅಗ್ನಿಯೇ ಅಧ್ವರ್ಯುರೂಪದಿಂದ ಹವಿಸ್ಸನ್ನು ಹೋಮಮಾಡುತ್ತಾನೆ, ಅದರಂತೆ,

**ಬ್ರಹ್ಮಾಣಿ ವೋಚತ್ ತತ್ ವೇರು**—ಹೋತೃವರ್ಗದ ಋತ್ವಿಜರು ಪಠಿಸುವ ಶಸ್ತ್ರವೇ ಮೊದಲಾದ ಮಂತ್ರಗಳನ್ನೂ ಸ್ತೋತ್ರಗಳನ್ನೂ ಅಗ್ನಿಯು ತಿಳಿದೇ ಇರುವನು ಮತ್ತು ಅವುಗಳನ್ನು ತಾನೇ ಪಠಿಸುವನು.

**ಪರಿ ವಿಶ್ವಾನಿ ಕಾವ್ಯಾ ನೇಮಿಃ ಚಕ್ರಮಿವ ಅಭವತ್**— ಇದಲ್ಲದೆ ಅಗ್ನಿಯು ಮೇಧಾವಿಗಳಾದ ಋತ್ವಿಜರು ಯಜ್ಞದಲ್ಲಿ ಯಾವ ಯಾವ ಕರ್ಮಗಳನ್ನು ಮಾಡುವರೋ ಅವೆಲ್ಲವನ್ನೂ ತಾನೇ ಮಾಡುವನು ಅಥವಾ ಮಾಡಲು ಸಮರ್ಥನಾಗಿರುವನು ಈ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಇಲ್ಲಿ ಹೇಳಿದೆ ಚಕ್ರದ ನೇಮಿಯು ಎಂದರೆ ಹೊರವಳಯದ ಪಟ್ಟೆಯು (Tyre) ಚಕ್ರವನ್ನು ಯಾವ ರೀತಿ ಸುತ್ತಲೂ ವ್ಯಾಪಿಸಿರುವುದೋ ಎಂದರೆ ಚಕ್ರವನ್ನೆಲ್ಲಾ ವ್ಯಾಪಿಸಿರುವುದೋ ಆ ರೀತಿ ಅಗ್ನಿಯು ಯಜ್ಞದಲ್ಲಿ ನಡೆಯುವ ಸಮಸ್ತ ಕರ್ಮಗಳಲ್ಲಿಯೂ ವ್ಯಾಪಿಸಿರುವನು ಎಂದರೆ ಸಮಸ್ತ ಯಜ್ಞಕರ್ಮಗಳಲ್ಲಿಯೂ ತಾನೇ ಭಾಗವಹಿಸಿ ಯಜ್ಞವನ್ನು ನೆರವೇರಿಸುವನು ಎಂದಭಿಪ್ರಾಯವು.

---

### ಸಂಹಿತಾಪಾಠಃ

ಸಾಕಂ ಹಿ ಶುಚಿನಾ ಶುಚಿಃ ಪ್ರಶಾಸ್ತಾ ಕ್ರತುನಾಜನಿ ।
ವಿದ್ವಾಁ ಅಸ್ಯ ವ್ರತಾ ಧ್ರುವಾ ವಯಾ ಇವಾನು ರೋಹತೇ ॥ ೪ ॥

### ಪದಪಾಠಃ

ಸಾಕಂ । ಹಿ । ಶುಚಿನಾ । ಶುಚಿಃ । ಪ್ರಶಾಸ್ತಾ । ಕ್ರತುನಾ । ಅಜನಿ ।
ವಿದ್ವಾನ್ । ಅಸ್ಯ । ವ್ರತಾ । ಧ್ರುವಾ । ವಯಾಃಽಇವ । ಅನು । ರೋಹತೇ ॥ ೪ ॥

### ಸಾಯಣಭಾಷ್ಯಂ

ಶುಚಿಃ ಸ್ವಯಂ ಶೋಧಕಃ ಪ್ರಶಾಸ್ತಾ ದೇವಾನಾಂ ಏತನ್ನಾಮಕ ಋತ್ವಿಕ್ ಪ್ರಶಾಸಿತಾ ವಾ ಯಜ್ಞವಿಘ್ನಾನಾಂ ಶುಚಿನಾ ಕ್ರತುನಾ ಶೋಧಕೇನಾಗ್ನಿಹೋತ್ರಾದಿಕರ್ಮಣಾ ಸಾಕಂ ಹಿ ಸಹೈವಾಜನಿ । ಉತ್ಪನ್ನಃ । ಜಾತಮಾತ್ರ ಏವ ಶುದ್ಧಃ ಸರ್ವಸ್ಯ ಪ್ರಶಾಸ್ತಾ ಚ ಸನ್ನಗ್ನಿಹೋತ್ರಾದಿನಿರ್ವೋಢಾಭವದಿ-ತ್ಯರ್ಥಃ । ಅಸ್ಯಾಗ್ನೇರ್ಧ್ರುವಾ ಧ್ರುವಾಣಿ ಫಲಪರ್ಯವಸಾಯೀನಿ ವ್ರತಾನಿ ಕರ್ಮಾಣಿ ವಿದ್ವಾನ್ ಜಾನನ್ ಯಜಮಾನೋ ವಯಾ ಇವ ವಿಸ್ತೃತಾಃ ಶಾಖಾ ಇವಾನುರೋಹತೇ । ಕ್ರಮೇಣಾನುತಿಷ್ಠತಿ ॥

### ಪ್ರತಿಪದಾರ್ಥ

ಶುಚಿಃ—ಸ್ವಯಂ ಶುದ್ಧಿಕಾರಕನೂ । **ಪ್ರಶಾಸ್ತಾ**—ಯಜ್ಞದ ವಿಘ್ನಗಳನ್ನು ನಾಶಮಾಡುವವನೂ । ಅಥವಾ ಪ್ರಶಾಸ್ತೃನಾಮಕನಾದ ಋತ್ವಿಕ್ಕೂ ಆದ ಅಗ್ನಿಯು । **ಶುಚಿನಾ**—ಶುದ್ಧಿಕಾರಕವಾದ । **ಕ್ರತುನಾ ಸಾಕಂ ಹಿ**—ಅಗ್ನಿಹೋತ್ರಾದಿ ಕರ್ಮಗಳೊಡನೆಯೇ । **ಅಜನಿ**—ಉತ್ಪನ್ನನಾದನು । **ಅಸ್ಯ**—ಈ ಅಗ್ನಿಯ । **ಧ್ರುವಾ ವ್ರತಾ**—ಫಲಪರ್ಯವಸಾಯಿಯಾದ ಕರ್ಮಗಳನ್ನು । **ವಿದ್ವಾನ್**—ಅರಿತಿರುವ ಯಜಮಾನನು । **ವಯಾ ಇವ**—ವಿಸ್ತೃತವಾದ ಶಾಖೆಗಳಂತೆ । **ಅನು ರೋಹತೇ**—ಅಗ್ನಿಯ ಮಾದರಿಯನ್ನನುಸರಿಸಿ ಕ್ರಮವಾಗಿ ನೆರವೇರಿಸುತ್ತಾನೆ.

### ಭಾವಾರ್ಥ

ಸ್ವಯಂ ಶೋಧಕನೂ, ಯಜ್ಞದ ವಿಘ್ನಗಳನ್ನು ನಾಶಮಾಡುವವನೂ ಆದ ಅಗ್ನಿಯು ಶುದ್ಧಿಕಾರಕವಾದ ಅಗ್ನಿಹೋತ್ರಾದಿಕರ್ಮಗಳೊಡನೆಯೇ ಉತ್ಪನ್ನನಾದನು. ಮೂಲಭೂತನಾದ ಈ ಅಗ್ನಿಯ ಫಲಪರ್ಯವಸಾಯಿಯಾದ ಕರ್ಮಗಳನ್ನು ಅರಿತ ಯಜಮಾನರು, ವೃಕ್ಷದ ಶಾಖೆಗಳು ಮೂಲಭೂತವಾದ ವೃಕ್ಷವನ್ನನುಸರಿಸಿ ಪ್ರಸರಿಸುವಂತೆ, ಅಗ್ನಿಯ ಮಾದರಿಯನ್ನೇ ಅನುಸರಿಸಿ ನೆರವೇರಿಸುತ್ತಾರೆ.

### English Translation

The pure regulator (of the sacrifice) is born verily together with the holy act ; the wise (worshipper) performs all his, (Agni's), prescribed rites in succession, as the branches spring (from a common stem).

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಅಗ್ನಿಯು ಪ್ರಶಾಸ್ತೃವಿನ ಕರ್ಮವನ್ನು ನೆರವೇರಿಸುವಂತೆ ವರ್ಣಿತವಾಗಿದೆ. ಪ್ರಶಾಸ್ತಾ ಎಂಬುವನು ೧೬ ಜನ ಋತ್ವಿಜರಲ್ಲಿ ಒಬ್ಬನು. ಯಜ್ಞದಲ್ಲಿ ಸಂಭವಿಸಬಹುದಾದ ವಿಘ್ನಗಳನ್ನು ನಿವಾರಿಸಿ ಯಜ್ಞವು ಸಾಂಗವಾಗಿ ನಡೆಯುವಂತೆ ಮಾಡುವುದೇ ಈ ಋತ್ವಿಜನ ಕರ್ತವ್ಯವು. ಆದುದರಿಂದಲೇ **ಪ್ರಶಾಸ್ತಾ ಪ್ರಶಾಸಿತಾ ವಾ ಯಜ್ಞವಿಘ್ನಾನಾಂ ಶುಚಿನಾ ಕ್ರತುನಾ ಶೋಧಕೇನಾಗ್ನಿಹೋತ್ರಾದಿಕರ್ಮಣಾ**—ಎಂದರೆ ಯಜ್ಞವಿಘ್ನಗಳನ್ನು ಇವನು ತನ್ನ ಆಜ್ಞೆಯಿಂದ ಅಥವಾ ಪ್ರಾಯಶ್ಚಿತ್ತರೂಪವಾದ ಅಗ್ನಿಹೋತ್ರಾದಿಕರ್ಮಗಳಿಂದ ಶುದ್ಧಿಗೊಳಿಸಿ ಯಜ್ಞವು ಮುಂದುವರೆಯುವಂತೆ ಮಾಡುವನು. ಆದ್ದರಿಂದ ಇವನಿಗೆ **ಪ್ರಶಾಸ್ತಾ**—(ಯಜ್ಞವು ಹೀಗೆಯೇ ನಡೆಯ

ಬೇಕೆಂದು) ನಿಯಮಿಸುವವನು, ಶಾಸನಮಾಡುವವನು, ಆಜ್ಞೆಮಾಡುವವನು ಎಂದು ಹೆಸರು. ಇಂತಹ ಋತ್ವಿಗ್ರೂಪ ದಿಂದಲೇ ಅಗ್ನಿಯು ಉತ್ಪನ್ನನಾದನು ಎಂದು ಇಲ್ಲಿ ವರ್ಣಿಸಿದೆ.

ಯಜ್ಞದಲ್ಲಿ ನೆರವೇರಿಸಲ್ಪಡುವ ಕರ್ಮಗಳಿಗೆ ಇಲ್ಲಿ ಒಂದು ದೃಷ್ಟಾಂತವನ್ನು ಹೇಳಿದೆ. **ವಯೋ ಇವ ಅನು ರೋಹತೇ**—ಒಂದು ವೃಕ್ಷವು ಬೆಳೆಯುತ್ತಿರುವಾಗ ಅದರ ಕಾಂಡದ ಸುತ್ತಲೂ ಒಂದರಮೇಲೊಂದು ಕೊಂಬೆ ಗಳು ಬೆಳೆಯುವಂತೆ ಯಜ್ಞದಲ್ಲಿ ಒಂದು ವ್ಯವಸ್ಥಿತವಾದ ನಿಯಮಪ್ರಕಾರ ಒಂದು ಕರ್ಮವಾದ ಕೂಡಲೆ ಅದರ ಮುಂದಿನ ಕರ್ಮವು ಆಚರಿಸಲ್ಪಡುವುದು. ಇಂತಹ ಅಗ್ನಿಯ ನಿಯಮರೂಪವಾದ ಕರ್ಮಗಳನ್ನು ಯಜ್ಞಮಾಡುವ ಯಜಮಾನನು ತಿಳಿದು ಅದರಂತೆ ಆಚರಿಸುವನು ಎಂದಭಿಪ್ರಾಯವು.

ಕ್ರತುಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ. ೩-೨) ಮತ್ತು ಕ್ರತುಶಬ್ದಕ್ಕೆ **ಕ್ರತುಂ-ಕರ್ಮ ವಾ ಪ್ರಜ್ಞಾಂ ವಾ**—ಎಂದು ಪ್ರಜ್ಞೆಯೆಂಬ ಅರ್ಥವನ್ನೂ ಅಲ್ಲಿಯೇ ಹೇಳಿದೆ. (ನಿ. ೩-೨೮) ಅಥವಾ ಕೇತಃ ಮೊದದಲಾದ ೧೧ ಪ್ರಜ್ಞಾನಾಮಗಳಲ್ಲಿ ಕ್ರತು ಶಬ್ದವು ಪಠಿತವಾಗಿದೆ. (ನಿ. ೩-೧೩)

**ವ್ರತಾ—ವ್ರತಾನಿ** । ಕರ್ಮಗಳು, ನಿಯಮಗಳು. ವ್ರತಮಿತಿ, ಕರ್ಮನಾಮ, ವೃಣೋತೀತಿ ಸತಃ ವ್ರತವೆಂದರೆ ಕರ್ಮವು. ಈ ಕರ್ಮವು (ಪಾಪ ಅಥವಾ ಪುಣ್ಯಕರ್ಮವು) ಕರ್ಮಮಾಡುವ ಕರ್ತನನ್ನು ಸದಾ ಆವರಿಸಿಕೊಂಡೇ (ಸುತ್ತುವರೆದುಕೊಂಡೇ) ಇರುವುದರಿಂದ ಕರ್ಮಕ್ಕೆ ವ್ರತ ಎಂದು ಹೆಸರು. ಅಥವಾ,

> **ಇದಮಪೀತರತ್ ವ್ರತಮೇತಸ್ಮಾದೇವ ನಿವೃತ್ತಿಕರ್ಮ ವಾರಯತೀತಿ ಸತಃ । ಅನ್ನಮಪಿ ವ್ರತಮುಚ್ಯತೇ ಯದಾ ವೃಣೋತಿ ಶರೀರಂ ॥**
>
> (ನಿ ೨-೧೩)

ಇದಲ್ಲದೆ ಯಮನಿಯಮಾದಿನಿವೃತ್ತಿಕರ್ಮಗಳಿಗೂ ವ್ರತವೆಂದು ಹೆಸರು. ಅಗ್ನಿಸನ್ನಿಧಿಯಲ್ಲಿ ಮಾಡುವ ವೈದಿಕಕರ್ಮ ಅಥವಾ ಇತರ ಕರ್ಮಗಳಿಗೂ ಇದು ಅನ್ವಯಿಸುವುದು. ಆದ್ದರಿಂದಲೇ ವಾರಯತೀತಿ ಸತಃ ನಿವೃತ್ತಿಕರ್ಮಕ್ಕೆ ವಿಘ್ನವನ್ನುಂಟುಮಾಡುವ ಸ್ತ್ರೀವಿಷಯಾದಿಗಳನ್ನು ಪುರುಷರ ಬಳಿಗೆ ಬರದಂತೆ ಇದು ನಿವಾರಣೆ ಮಾಡುವುದರಿಂದ ಇದು ವ್ರತವೆನಿಸುವುದು. ಮತ್ತು ಶರೀರಕ್ಕೆ ಅನ್ನವು ಆಧಾರವಾಗಿ ಶರೀರವನ್ನು ವ್ಯಾಪಿಸಿ ಅದನ್ನು ಪೋಷಣೆಮಾಡುವುದರಿಂದ ಅನ್ನಕ್ಕೂ ವ್ರತವೆಂದು ಹೆಸರು ಎಂದು ವ್ರತಶಬ್ದದ ನಿರ್ವಚನವನ್ನು ಹೇಳಿರುವರು.

---

ಸಂಹಿತಾಪಾಠಃ

ತಾ ಅಸ್ಯ ವರ್ಣಮಾಯುವೋ ನೇಷ್ಟುಃ ಸಚಂತ ಧೇನವಃ ।

ಕುವಿತ್ತಿಸೃಭ್ಯ ಆ ವರಂ ಸ್ವಸಾರೋ ಯಾ ಇದಂ ಯಯುಃ ॥ ೫ ॥

ಪದಪಾಠಃ

ತಾಃ । ಅಸ್ಯ । ವರ್ಣಂ । ಆಯುವಃ । ನೇಷ್ಟುಃ । ಸಚಂತ । ಧೇನವಃ ।

ಕುವಿತ್ । ತಿಸೃಭ್ಯಃ । ಆ । ವರಂ । ಸ್ವಸಾರಃ । ಯಾಃ । ಇದಂ । ಯಯುಃ ॥ ೫ ॥

ಸಾಯಣಭಾಷ್ಯಂ

ಯಾ ವಕ್ಷ್ಯಮಾಣಲಕ್ಷಣಾ ಯಾ ಅಂಗುಲಯ ಇದಮನುಷ್ಠೀಯಮಾನಂ ಕರ್ಮ ಯಯುಃ । ಅನುತಿಷ್ಠಂತಿ । ತಾ ಆಯುವೋ ಗಂತ್ರ್ಯೋ ವ್ಯಾಪ್ತಾ ಧೇನವಃ ಪ್ರೀಣಯಿತ್ರ್ಯಃ ಸ್ವಸಾರಃ ಸ್ವಯಂ ಸಾರಿಣ್ಯೋಽಂಗುಲಯೋ ನೇಷ್ಟುರ್ಹವಿರ್ಯಾಚಿತುರ್ಭಕ್ಷಯಿತುಃ ಶೋಧಯಿತುಃ ಪೋಷಯಿತುರ್ನೇತುರ್ವಾಸ್ಯಾಗ್ನೇಃ । ಯದ್ವೈತನ್ನಾಮಕಋತ್ವಿಗ್ರೂಪಸ್ಯ । ತಿಸೃಭ್ಯ ಆ ಗಾರ್ಹಪತ್ಯಾದಿಮೂರ್ತೀನಾಮಪಿ ವರಂ ವರ್ಣಂ ಕುವಿತ್ ಬಹುಕೃತ್ವಃ ಸಚಂತ । ಸೇವಂತೇ । ಪರಿಚರಂತಿ ॥

ಪ್ರತಿಪದಾರ್ಥ

ಯಾಃ—ಯಾವ ಅಂಗುಲಿಗಳು । ಇದಂ—ನಿರ್ದಿಷ್ಟವಾದ ಈ ಕರ್ಮವನ್ನು । ಯಯುಃ—ನೆರವೇರಿಸುತ್ತವೆಯೋ । ತಾಃ—ಅದೇ ಅಂಗುಲಿಗಳು । ಆಯುವಃ—ಕರ್ಮಕ್ಕಾಗಿ ಪ್ರಸರಿಸುವುವೂ । ಧೇನವಃ—ಪ್ರೀತಿದಾಯಕಗಳೂ । ಸ್ವಸಾರಃ—ಪರಸ್ಪರ ಸ್ವಸೃಭೂತವಾದವೂ ಆಗಿ । ನೇಷ್ಟುಃ—ನೇಷ್ಟೃರೂಪನಾದ । ಅಸ್ಯ—ಈ ಅಗ್ನಿಯ । ತಿಸೃಭ್ಯಃ ಆ—ಗಾರ್ಹಪತ್ಯಾದಿ ಮೂರು ಮೂರ್ತಿಗಳಿಗೂ ಸೇರಿದ । ವರಂ ವರ್ಣಂ—ಶ್ರೇಷ್ಠವಾದ ಸ್ವರೂಪವನ್ನು । ಕುವಿತ್—ಬಹುವಿಧವಾಗಿ । ಸಚಂತ—ಸೇವಿಸುತ್ತವೆ ।

ಭಾವಾರ್ಥ

ಯಾವ ಅಂಗುಲಿಗಳು ನಿರ್ದಿಷ್ಟವಾದ ಈ ಕರ್ಮವನ್ನು ನೆರವೇರಿಸುತ್ತವೆಯೋ, ಅದೇ ಅಂಗುಲಿಗಳು ಕರ್ಮಕ್ಕಾಗಿ ಪ್ರಸರಿಸುವುವೂ ಪ್ರೀತಿದಾಯಕಗಳೂ, ಪರಸ್ಪರ ಸ್ವಸೃಭೂತವೂ ಆಗಿ ನೇಷ್ಟೃರೂಪನಾದ ಈ ಅಗ್ನಿಯ ಗಾರ್ಹಪತ್ಯಾದಿ ಮೂರು ಮೂರ್ತಿಗಳಿಗೂ ಸೇರಿದ ಶ್ರೇಷ್ಠವಾದ ಸ್ವರೂಪವನ್ನು ಬಹು ವಿಧವಾಗಿ ಸೇವಿಸುತ್ತವೆ.

## English Translation

The sister fingers, which are the milch cows of the Neshtri, are those which accomplish his, (Agni's), worship; and in various ways are combined for this purpose through the three (sacred fires).

ವಿಶೇಷವಿಷಯಗಳು

ಸ್ವಸಾರಃ—ಸ್ವಸಾರಃ ಎಂಬ ಶಬ್ದವು ಅಂಗುಲಿನಾಮಗಳಲ್ಲಿ ಪಠಿತವಾಗಿರುವುದರಿಂದ ( ನಿ. ೩-೮ ) ಬೆರಳುಗಳೆಂದು ಹೆಸರು. ಸು ಎಂಬ ಉಪಸರ್ಗದಿಂದ ಸಹಿತವಾದ ಅಸು-ಕ್ಷೇಪಣೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಸುಷ್ಠು ಅಸ್ಯತೇ ಕ್ಷಿಪ್ಯತೇ ಪದಾರ್ಥಃ ಆಭಿಃ ಕಾರ್ಯೇಷು ಕ್ಷೇಪ್ತ್ರ್ಯಾ ವಾ—ಎಂದರೆ ಯಾವು

ದಾದರೂ ಕೆಲಸಗಳನ್ನು ಮಾಡುವಾಗ ಈ ಬೆರಳುಗಳಿಂದ ಪದಾರ್ಥಗಳು ಆಯಾ ಸ್ಥಳಕ್ಕೆ ಇಡಲ್ಪಡುತ್ತವೆ ಎಂದರೆ ಕೆಲಸ ಮಾಡುವಾಗ ಬೆರಳುಗಳನ್ನು ಉಪಯೋಗಿಸುವುದರಿಂದ ಈ ಬೆರಳುಗಳಿಗೆ ಸ್ವಸಾರಃ ಎಂದು ಹೆಸರು. ಅಥವಾ ಸ್ವ ಎಂಬ ಶಬ್ದದಿಂದ ಕೂಡಿದ **ಷದ್ಲೃ-ವಿಶರಣೇ** ಎಂಬ ಧಾತುವಿನಿಂದಲಾದರೂ ಸ್ವಸಾರಃ ಎಂಬ ಶಬ್ದವು ನಿಷ್ಪನ್ನ ವಾಗಬಹುದು. ಈ ಸಂದರ್ಭದಲ್ಲಿ, **ಸ್ವಂ ಸ್ವಂ ವ್ಯಾಪಾರಂ ಗಚ್ಛಂತಿ ಪ್ರಾಪ್ನುವಂತಿ ಸ್ವಸ್ಮಿನ್ ಸ್ವಸ್ಮಿನ್ ಹಸ್ತೇ ಸೀದಂತೀತಿ ವಾ**—ಈ ಬೆರಳುಗಳು ತಮ್ಮ ತಮ್ಮ ಕೈಗಳಲ್ಲಿ ಎಂದರೆ ಎಡಗೈ ಅಥವಾ ಬಲಗೈಗಳಲ್ಲಿ ಇದ್ದುಕೊಂಡು ತಮ್ಮ ತಮ್ಮ ವ್ಯಾಪಾರ (ಕೆಲಸ) ಗಳಲ್ಲಿ ಪ್ರವೃತ್ತವಾಗುಗವುದರಿಂದ ಸ್ವಸಾರಃ ಎಂದರೆ ಬೆರಳುಗಳು ಎಂದರ್ಥವು. **ಅಥವಾ ಪರಸ್ಪರಂ ಭಗಿನೀವ ದೃಶ್ಯಂತೇ, ಏಕಹಸ್ತಪ್ರಭುತ್ವಾತ್ ಸ್ವಸಾರ ಉಚ್ಯಂತೇ**—ಎಂದರೆ ಒಂದು ಹಸ್ತ ದಲ್ಲಿ ಹುಟ್ಟಿದ ಅದರಲ್ಲಿರುವ ಬೆರಳುಗಳು ಒಂದರ ಪಕ್ಕದಲ್ಲೊಂದು ಇದ್ದು ಪರಸ್ಪರ ಅಕ್ಕ ತಂಗಿಯರಂತೆ ಕಾಣುತ್ತಿರು ವುದರಿಂದ ಸ್ವಸಾರಃ ಎಂಬ ಶಬ್ದಕ್ಕೆ ಬೆರಳುಗಳೆಂದು ಅರ್ಥವು ಎಂದು ಈ ಶಬ್ದದ ಅವಯವಾರ್ಥವನ್ನು ಮೂರು ವಿಧವಾಗಿ ಮಾಡಬಹುದು. ಋಗ್ವೇದದಲ್ಲಿ ಸ್ವಸಾರಃ ಎಂಬ ಶಬ್ದದ ಪ್ರಯೋಗವು ಅಂಗುಲಿಗಳು ( ಬೆರಳುಗಳು ) ಎಂಬ ಅರ್ಥದಲ್ಲಿ ಅನೇಕ ಕಡೆ ಇರುವುದು—

**ಪುರೂ ಸಹಸ್ರಾ ಜನಯೋ ನ ಪತ್ನೀರ್ದುವಸ್ಯಂತಿ ಸ್ವಸಾರೋ ಅಹ್ರಯಾಣಂ ।**

(ಋ. ಸಂ. ೧-೬೨-೧೦)

ಎಂಬ ಋಕ್ಕಿನಲ್ಲಿ ಸ್ವಸಾರಃ ಎಂಬ ಶಬ್ದಕ್ಕೆ ಸ್ವಯಮೇವ ಸರಂತ್ಯೋಂಗುಲಯಃ—ಕೆಲಸಕಾರ್ಯಗಳಲ್ಲಿ ಇವುಗಳ ಚಲನ ವಲನಗಳು ತಾವಾಗಿಯೇ ನಡೆಯುವುದರಿಂದ ಈ ಶಬ್ದಕ್ಕೆ ಬೆರಳುಗಳೆಂದು ಹೆಸರು ಎಂದು ಭಾಷ್ಯಕಾರರು ಅರ್ಥವಿವ ರಣೆಮಾಡಿರುವರು. ಮತ್ತು—

**ಸ್ವಸಾರಃ ಶ್ಯಾವೀಮರುಷೀಮಜುಷ್ರಞ್ಚಿತ್ರಮುಚ್ಛಂತೀಮುಷಸಂ ನ ಗಾವಃ ।**

(ಋ ಸಂ. ೧-೭೧-೧)

**ದಶ ಸ್ವಸಾರೋ ಅಗ್ರುವಃ ಸಮೀಚೀಃ ಪುಮಾಂಸಂ ಜಾತಮಭಿ ಸಂ ರಭಂತೇ ।**

(ಋ. ಸಂ. ೩-೨೯-೧೩)

**ದ್ವಿರ್ಯಂ ಪಂಚ ಜೀಜನನ್ತ್ಸಂವಸಾನಾಃ ಸ್ವಸಾರೋ ಅಗ್ನಿಂ ಮಾನುಷೀಷು ವಿಕ್ಷು ।**

(ಋ. ಸಂ. ೪-೬-೮)

ಇತ್ಯಾದಿ ಋಕ್ಕುಗಳಲ್ಲಿ ಸ್ವಸಾರಃ ಎಂಬ ಶಬ್ದಕ್ಕೆ ಅಂಗುಲಿಗಳು ಎಂದೇ ಅರ್ಥಮಾಡಿದೆ.

**ಕುವಿತ್**—ಉರು, ತುವಿ ಮೊದಲಾದ ಹನ್ನೆರಡು ಬಹುನಾಮಗಳ ಮಧ್ಯದಲ್ಲಿ ಕುವಿತ್ ಎಂಬ ಶಬ್ದವು ಪಠಿತವಾಗುವುದರಿಂದ (ನಿ. ೩-೧೩) ಕುವಿತ್ ಎಂದರೆ ಬಹಳವಾಗಿ, ಅನೇಕಸಾರಿ ಎಂದರ್ಥವು.

**ನೇಷ್ಟುಃ—ಹವಿರ್ಯಾಚಿತುರ್ಭಕ್ಷಯಿತುಃ ಪೋಷಯಿತುರ್ನೇತುರ್ವಾಸ್ಯಾಗ್ನೇಃ । ಯದ್ವೈತನ್ನಾ-ಮಕಋತ್ವಿಗ್ರೂಪಸ್ಯ ।** ಈ ಶಬ್ದಕ್ಕೆ ಸಾಯಣರು ಹವಿಸ್ಸನ್ನು ಯಾಚಿಸುವ, ಭಕ್ಷಿಸುವ, ಪೋಷಣೆ (ಅಭಿವೃದ್ಧಿ) ಮಾಡುವ ಅಥವಾ ದೇವತೆಗಳಿಗೆ ಒಯ್ಯುವ ಎಂದೂ ಅಥವಾ ನೇಷ್ಟಾ ಎಂಬ ಹೆಸರಿನ ಋತ್ವಿಗ್ರೂಪನಾದ ಅಗ್ನಿಯ ಎಂದೂ ಅರ್ಥವಿವರಣೆಮಾಡಿರುವರು. ಎಂದರೆ ಅಗ್ನಿಯು ಹವಿಸ್ಸನ್ನು ಅಪೇಕ್ಷಿಸುವವನು ಅದನ್ನು ಭಕ್ಷಿಸುವವನು,

ವೃದ್ಧಿಮಾಡುವವನು, ಯಜಮಾನರು ಅಗ್ನಿಯಲ್ಲಿ ಹೋಮಮಾಡುವ ಹವಿಸ್ಸನ್ನು ದೇವತೆಗಳಿಗೆ ತೆಗೆದುಕೊಂಡು ಹೋಗಿ ಕೊಡುವವನು, ಅಥವಾ ನೇಷ್ಟಾ ಎಂಬ ಋತ್ವಿಜನ ಕರ್ಮವನ್ನು ತಾನೇ ನೆರವೇರಿಸುವವನು ಎಂದಭಿಪ್ರಾಯವು.

ತಿಸ್ರಃ ಆ ವರಂ—ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿ ಎಂಬ ಮೂರು ರೂಪ (ಅಗ್ನಿಕುಂಡ) ಗಳಲ್ಲಿರುವ ಅಗ್ನಿಯನ್ನು ಎಂದರ್ಥವು

ಇಲ್ಲಿ ಧೇನವಃ ಎಂಬ ಶಬ್ದವು ಧೇನುವಿನಂತೆ ಪ್ರೀತಿದಾಯಕಗಳಾದ ಎಂಬರ್ಥದಲ್ಲಿ ಸ್ವಸಾರಃ ಎಂಬ ಶಬ್ದಕ್ಕೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ ನೇಷ್ಟೃಎಂಬ ಋತ್ವಿಜನ ಹಸ್ತದಲ್ಲಿರುವ ಬೆರಳುಗಳು ಯಜ್ಞಕರ್ಮಗಳಲ್ಲಿ ಅಗ್ನಿಯ ಮೂರು ರೂಪಗಳನ್ನು ಬಹಳವಾಗಿ ಸೇವಿಸುತ್ತವೆ. ಧೇನುಗಳು ಹಾಲನ್ನು ಕೊಟ್ಟು ಸಂತೋಷಪಡಿಸುವಂತೆ ನೇಷ್ಟೃವಿನ ಬೆರಳುಗಳಿಂದ ಮಾಡಲ್ಪಡುವ ಉಪಚಾರಾದಿಗಳು ಅಗ್ನಿಯನ್ನು ಸಂತೋಷಪಡಿಸುತ್ತವೆ ಎಂದು ಮುಖ್ಯಾಭಿಪ್ರಾಯವು.

---

ಸಂಹಿತಾಪಾಠಃ

ಯದೀ ಮಾತುರುಪ ಸ್ವಸಾ ಘೃತಂ ಭರಂತ್ಯಸ್ಥಿತ ।

ತಾಸಾಮಧ್ವರ್ಯುರಾಗತೌ ಯವೋ ವೃಷ್ಟೀವ ಮೋದತೇ ॥ ೬ ॥

ಪದಪಾಠಃ

ಯದಿ । ಮಾತುಃ । ಉಪ । ಸ್ವಸಾ । ಘೃತಂ । ಭರಂತೀ । ಅಸ್ಥಿತ ।

ತಾಸಾಂ । ಅಧ್ವರ್ಯುಃ । ಆಽಗತೌ । ಯವಃ । ವೃಷ್ಟೀಽಇವ । ಮೋದತೇ ॥ ೬ ॥

ಸಾಯಣಭಾಷ್ಯಂ

ಯದಿ ಯದಾ ಮಾತುಃ ಸರ್ವಸ್ಯ ನಿರ್ಮಾತುರ್ಭೂಮ್ಯಾ ವೇದಿಲಕ್ಷಣಾಯಾಃ ಸ್ವಸಾ ಸ್ವಸೃಸ್ಥಾನೀಯಾ ಜುಹೂರ್ಘೃತಂ ಭರಂತೀ ಸತ್ಯುಪಾಸ್ಥಿತ । ಉಪತಿಷ್ಠೇದಗ್ನಿಂ । ಏಕವಚನಮವಿವಕ್ಷಿತಂ । ಜುಹೂಪಭೃದ್ಧ್ರುವಾ ಘೃತಂ ಭರಂತ್ಯಸ್ತಿಷ್ಠಂತೀತ್ಯರ್ಥಃ । ತದಾ ತಾಸಾಂ ಜುಹ್ವಾದೀನಾಮಾಗತೌ ಯೋಗಾಯ ಪ್ರಾಪ್ತೌ ಸತ್ಯಾಮಧ್ವರ್ಯುರೇತನ್ನಾಮಕ ಋತ್ವಿಗ್ರೂಪೋಽಧ್ವರಂ ಕಾಮಯಮಾನೋ ವಾಯುಮಗ್ನಿರ್ಮೋದತೇ । ಹೃಷ್ಯತಿ । ಯವೋ ವೃಷ್ಟೀವ ವೃಷ್ಟ್ಯಾ ಯಥಾ ಮೋದತೇ ತದ್ವತ್ ॥

॥ ಪ್ರತಿಪದಾರ್ಥ ॥

ಯದಿ—ಯಾವಾಗ । ಮಾತುಃ—ಜಗನ್ನಿರ್ಮಾತ್ರಿಯೂ ವೇದಿರೂಪವೂ ಆದ ಭೂಮಿಯ । ಸ್ವಸಾ—ಸ್ವಸೃಭೂತವಾದ ಜುಹೂಪಾತ್ರೆಗಳು । ಘೃತಂ—ಆಜ್ಯವನ್ನು । ಭರಂತಿ—ತುಂಬಿಕೊಂಡು । ಉಪ ಅಸ್ಥಿತ—

ಅಗ್ನಿಯ ಸಮೀಪದಲ್ಲಿ ಇಡಲ್ಪಟ್ಟರುವುವೋ (ಆಗ) **ತಾಸಾಂ**—ಆ ಜುಹ್ವಾದಿಪಾತ್ರೆಗಳ । **ಆಗತೌ**—ಆಗಮನ ಕಾಲದಲ್ಲಿ । **ಅಧ್ವರ್ಯುಃ**—ಯಜ್ಞವನ್ನು ಇಚ್ಛಿಸುವ ಅಥವಾ ಅಧ್ವರ್ಯುನಾಮಕನಾದ ಅಗ್ನಿಯು । **ಯವಃ**—ಯವ ಧಾನ್ಯವು । **ವೃಷ್ಟೀವ**—ವೃಷ್ಟ್ಯಾಗಮನದ ವೇಳೆಯಲ್ಲಿ ಹರ್ಷವನ್ನು ಸೂಚಿಸುವಂತೆ । **ಮೋದತೇ**—ಸಂತೋಷ ಪಡುತ್ತಾನೆ.

### ಭಾವಾರ್ಥ

ವೇದಿರೂಪವಾದ ಭೂಮಿಗೆ ಸ್ವಸೃಭೂತರಾದ ಜುಹ್ವಾದಿಪಾತ್ರೆಗಳು ಆಜ್ಯವನ್ನು ತುಂಬಿಕೊಂಡು ಯಾವಾಗ ಅಗ್ನಿಯ ಸಮೀಪಕ್ಕೆ ಬರುವುವೋ ಆಗ ಯವಧಾನ್ಯವು ವೃಷ್ಟ್ಯಾಗಮನದ ವೇಳೆಯಲ್ಲಿ ಹರ್ಷವನ್ನು ಸೂಚಿಸುವಂತೆ ಯಜ್ಞೇಚ್ಛುವಾದ ಅಗ್ನಿಯು ಅತ್ಯಂತವಾಗಿ ಸಂತೋಷಪಡುತ್ತಾನೆ.

### English Translation

When the sister, (vessel), bearing the clarified butter, is placed near the maternal (altar), the Adhwaryu (Agni) rejoices at their approach, like barley (at the fall of) rain.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ **ಮಾತುಃ ಸ್ವಸಾ** ಎಂಬ ಶಬ್ದಗಳಿಗೆ ಸ್ಪಷ್ಟವಾದ ಅರ್ಥವು ನಿರ್ದೇಶಿಸಲ್ಪಡದಿದ್ದರೂ ಭಾಷ್ಯ ಕಾರರು ವೇದಿ, ಜುಹೂ ಎಂಬ ಅರ್ಥಗಳನ್ನು ಸಂದರ್ಭಕ್ಕನುಸಾರವಾಗಿ ಇಲ್ಲಿ ಹೊಂದಿಸಿ ಅರ್ಥವಿವರಣೆ ಮಾಡಿರುವರು. ಮಾತೃಶಬ್ದಕ್ಕೆ ತಾಯಿ, ನಿರ್ಮಾತೃ, ವೇದಿ, ಜಗತ್ತು, ಪೃಥಿವೀ ಎಂಬ ನಾನಾರ್ಥಗಳನ್ನು ಸಂದರ್ಭಾನುಸಾರವಾಗಿ ಹೇಳಿರುವರು. ಇಲ್ಲಿ ಯಜ್ಞವೇದಿಯೆಂಬ ಅರ್ಥವನ್ನು ಹೇಳಿ ಸ್ವಸಾ ಎಂಬ ಶಬ್ದಕ್ಕೆ ವೇದಿಗೆ ಭಗಿನಿಯಂತಿರುವ ಜುಹೂ-ಆಜ್ಯವನ್ನು ಹೋಮಮಾಡುವ ಮರದ ಸೌಟು ಎಂದೂ ಅರ್ಥವಿವರಣೆಮಾಡಿರುವರು. ಈ ವಿಧವಾದ ವಿವ ರಣೆಯಿಂದ ಅರ್ಥವು ಸಮಂಜಸವಾಗಿ ಹೊಂದುವುದಾದರೂ ಈ ಶಬ್ದಗಳು ಈ ಅರ್ಥಗಳಲ್ಲಿಯೇ ಪ್ರಯೋಗಿಸಲ್ಪಟ್ಟಿ ವೆಯೋ ಎಂಬ ವಿಷಯದಲ್ಲಿ ಸಂಶಯವಿದ್ದೇ ಇರುವುದು.

**ಅಧ್ವರ್ಯೋಃ ಘೃತಂ ಭರಂತೀ ಆಗತೌ ಯವಃ ವೃಷ್ಟೀವ ಮೋದತೇ**—ಈ ದೃಷ್ಟಾಂತದಲ್ಲಿ ಉಕ್ತ ವಾಗಿರುವ ಉಪಮಾನವು ಚೆನ್ನಾಗಿ ಹೊಂದಿಕೊಂಡಿರುವುದು. ಅಧ್ವರ್ಯುವೆಂಬ ಋತ್ವಿಜನು ಅಗ್ನಿಯಲ್ಲಿ ಹೋಮ ಮಾಡುವುದಕ್ಕಾಗಿ ಆಜ್ಯವನ್ನು (ತುಪ್ಪವನ್ನು) ಹೋಮಮಾಡುವ ಸೌಟುಗಳಲ್ಲಿ ತುಂಬಿಕೊಂಡು ಅಗ್ನಿಯ ಸಮೀಪಕ್ಕೆ ಬಂದಾಗ, ಅಗ್ನಿಗೆ ಉಂಟಾಗುವ ಸಂತೋಷವನ್ನು—ಯವಧಾನ್ಯದ ಸಸ್ಯಗಳು ತಮಗೆ ಆವಶ್ಯಕವಾಗಿ ಬೇಕಾದ ಮಳೆಯನ್ನು ಎಷ್ಟು ಸಂತೋಷದಿಂದ ಸ್ವಾಗತಿಸುವವೋ ಅದರಂತೆ ಅಗ್ನಿಗೂ ಸಂತೋಷವಾಗುವುನು ಎಂಬುದನ್ನು ವರ್ಣಿಸಿದೆ.

---

ಸಂಹಿತಾಪಾಠಃ

ಸ್ವಃ ಸ್ವಾಯ ಧಾಯಸೇ ಕೃಣುತಾಮೃತ್ವಿಗೃತ್ವಿಜಂ ।

ಸ್ತೋಮಂ ಯಜ್ಞಂ ಚಾದರಂ ವನೇಮಾ ರರಿಮಾ ವಯಂ ॥ ೭ ॥

ಪದಪಾಠಃ

ಸ್ವಃ । ಸ್ವಾಯ । ಧಾಯಸೇ । ಕೃಣುತಾಂ । ಋತ್ವಿಕ್ । ಋತ್ವಿಜಂ ।

ಸ್ತೋಮಂ । ಯಜ್ಞಂ । ಚ । ಆತ್ । ಅರಂ । ವನೇಮ । ರರಿಮ । ವಯಂ ॥ ೭ ॥

ಸಾಯಣಭಾಷ್ಯಂ

ಅಯಮಗ್ನಿಃ ಸ್ವಃ ಸ್ವಯಮೇವ ಸ್ವಾಯ ಸ್ವಕೀಯಾಯ ಧಾಯಸೇ ಕರ್ಮಣೇ ಹವಿಷಾಂ ಧಾರಣಾಯ ವಾ ಋತ್ವಿಕ್ ಹೋತಾಜನಿಷ್ಟೇತ್ಯಾದಿನೋಕ್ತಲಕ್ಷಣೋ ಹೋತೃಪೋತೃಪ್ರಶಾಸ್ತ್ರಾದ್ಯೃತ್ವಿಗ್ರೂಪಃ ಸನ್ ಋತ್ವಿಜಮಾರ್ತ್ವಿಜ್ಯಂ ॥ ಭಾವಪ್ರಧಾನೋಽಯಂ ನಿರ್ದೇಶಃ ॥ ದೇವರ್ತ್ವಿಗ್ರೂಪಃ ಸನ್ ಋತ್ವಿಜಂ ಮಾನುಷಮಾರ್ತ್ವಿಜ್ಯಂ ಕೃಣುತಾಂ । ಕರೋತು । ವಯಂ ಚ ತದನುಗ್ರಹಾತ್ ಆದನಂತರಮೇವ ಸ್ತೋಮಂ ಸ್ತೋತ್ರಂ ಯಜ್ಞಂ ಚ ತದಾಶ್ರಯಂ ಯಾಗಮಪ್ಯರಮಲಮತ್ಯರ್ಥಂ ವನೇಮ । ಸಂಭಜೇಮಹಿ । ರರಿಮ ದದೇಮಹಿ ಚ ಹವಿಃ । ಯದ್ವಾ ಸ್ತೋಮಂ ವನೇಮ ಯಜ್ಞಂ ಯಜ್ಞಯೋಗ್ಯಂ ಹವೀ ರರಿಮ ॥

ಪ್ರತಿಪದಾರ್ಥ

(ಅಯಮಗ್ನಿಃ—ಈ ಅಗ್ನಿಯು) । **ಸ್ವಃ**—ತಾನೇ । **ಸ್ವಾಯ**—ತನ್ನದೇ ಆದ । **ಧಾಯಸೇ**—ಕರ್ಮಕ್ಕಾಗಿ ಅಥವಾ ಹವಿಸ್ಸನ್ನು ಧರಿಸುವುದಕ್ಕಾಗಿ । **ಋತ್ವಿಕ್**—ಹಿಂದೆ ವರ್ಣಿತವಾದ ಹೋತ್ರಾದಿ ಋತ್ವಿಗ್ರೂಪನಾಗಿ । **ಋತ್ವಿಜಂ**—ಹೋತ್ರಾದಿಗಳು ನೆರವೇರಿಸಬೇಕಾದ ಕರ್ಮವನ್ನು । **ಕೃಣುತಾಂ**—ನೆರವೇರಿಸಲಿ । **ವಯಂ**—ನಾವೂ ಸಹ । **ಆತ್**—ಆ ಒಡನೆಯೇ । **ಸ್ತೋಮಂ**—ಸ್ತೋತ್ರವನ್ನೂ । **ಯಜ್ಞಂ ಚ**—ತದಾಶ್ರಯವಾದ ಯಾಗವನ್ನೂ । **ಅರಂ**—ಪೂರ್ಣವಾಗಿ । **ವನೇಮ**—ಭಜಿಸುತ್ತೇವೆ । **ರರಿಮ**—ಹವಿಸ್ಸನ್ನೂ ಅರ್ಪಿಸುತ್ತೇವೆ.

ಭಾವಾರ್ಥ

ಈ ಅಗ್ನಿಯು ತನ್ನದೇ ಆದ ಕರ್ಮಕ್ಕಾಗಿ ತಾನೇ ಋತ್ವಿಗ್ರೂಪನಾಗಿ ಹೋತ್ರಾದಿಗಳು ನೆರವೇರಿಸಬೇಕಾದ ಕರ್ಮವನ್ನು ನೆರವೇರಿಸಲಿ. ಆ ಒಡನೆಯೇ ನಾವೂ ಸಹ ಸ್ತೋತ್ರವನ್ನೂ, ತದಾಶ್ರಯವಾದ ಯಾಗವನ್ನೂ ಪೂರ್ಣವಾಗಿ ಭಜಿಸುತ್ತೇವೆ. (ನೆರವೇರಿಸುತ್ತೇವೆ) ಹವಿಸ್ಸನ್ನೂ ಅರ್ಪಿಸುತ್ತೇವೆ

## English Translation

May he, the ministering priest, discharge the office of priest at his own ceremony, and may we worthily repeat (his) praise, and offer (him) sacrifice·

### ವಿಶೇಷವಿಷಯಗಳು

**ಸಃ ಋತ್ವಿಕ್ ಋತ್ವಿಜಂ ಕೃಣುತಾಂ**—ಅಗ್ನಿಯು ತಾನೇ ನೆರವೇರಿಸುವ ಈ ಯಜ್ಞದಲ್ಲಿ ಹಿಂದೆ ಹೇಳಿದಂತೆ ಹೋತೃ, ಪೋತೃ, ಪ್ರಶಾಸ್ತೃ ಮೊದಲಾದ ಯಜ್ಞದಲ್ಲಿ ಭಾಗವಹಿಸುವ ಅನೇಕ ಋತ್ವಿಜರ ಕರ್ತವ್ಯಕರ್ಮಗಳನ್ನು ತಾನೇ ನಿರ್ವಹಿಸಿ ಯಜ್ಞವನ್ನು ಪೂರ್ಣಗೊಳಿಸಲಿ ಎಂಬ ಆಶಂಸನೆಯು ಇಲ್ಲಿ ಉಕ್ತವಾಗಿದೆ. **ಋತ್ವಿಕ್ ಋತ್ವಿಜಂ** ಎಂಬ ಪದಗಳ ಪ್ರಯೋಗವು ಇಲ್ಲಿ ಹೋತೃ ಮೊದಲಾದ ಸಮಸ್ತ ಋತ್ವಿಜರನ್ನೂ ಸೂಚಿಸುವುದಾಗಿರುವುದು. ಎಂದರೆ ಎಲ್ಲರೂ ಮಾಡುವ ಕರ್ಮಗಳನ್ನು ಅಗ್ನಿಯು ತಾನೇ (ಆಯಾಯ ಋತ್ವಿಗ್ರೂಪದಿಂದ) ಮಾಡುವನು. ಎಂದರೆ ದೇವಋತ್ವಿಗ್ರೂಪನಾದ ಅಗ್ನಿಯು ಮನುಷ್ಯಋತ್ವಿಜರು ಮಾಡುವ ಕರ್ಮಗಳನ್ನು ಮಾಡುವನೆಂದಭಿಪ್ರಾಯವು.

**ಸ್ತೋಮಂ ಯಜ್ಞಂ ಚಾದರಂ ವನೇಮಾ ರರಿಮಾ ವಯಂ**—ಮೇಲೆ ಹೇಳಿದಂತೆ ಅಗ್ನಿಯೇ ಎಲ್ಲಾ ಋತ್ವಿಜರೂ ಮಾಡುವ ಯಜ್ಞಕರ್ಮಗಳನ್ನು ಮಾಡುವುದಾದರೆ ನಾವು ಮಾಡಬೇಕಾದುದೇನು ? ಎಂದರೆ ನಾವೂ ಸಹ ಯಜ್ಞದಲ್ಲಿ ಸ್ತೋತ್ರಾದಿಗಳನ್ನು ಪಠಿಸಿ ದೇವತೆಗಳನ್ನು ಸ್ತುತಿಸುತ್ತೇವೆ ಮತ್ತು ಹವಿರಾದಿಗಳನ್ನು ಅರ್ಪಿಸುತ್ತೇವೆ ಎಂದು ನಾವು ( ಯಜಮಾನರು ಮೊದಲಾದವರು) ಮಾಡುವ ಕರ್ಮಗಳನ್ನೂ ವಿವರಿಸಿರುವುದು

———— :೦: ————

### ಸಂಹಿತಾಪಾಠಃ

ಯಥಾ ವಿದ್ವಾँ ಅರಂ ಕರದ್ವಿಶ್ವೇಭ್ಯೋ ಯಜತೇಭ್ಯಃ ।

ಅಯಮಗ್ನೇ ತ್ವೇ ಅಪಿ ಯಂ ಯಜ್ಞಂ ಚಕೃಮಾ ವಯಂ ॥ ೮ ॥

### ಪದಪಾಠಃ

ಯಥಾ । ವಿದ್ವಾನ್ । ಅರಂ । ಕರತ್ । ವಿಶ್ವೇಭ್ಯಃ । ಯಜತೇಭ್ಯಃ ।

ಅಯಂ । ಅಗ್ನೇ । ತ್ವೇ ಇತಿ । ಅಪಿ । ಯಂ । ಯಜ್ಞಂ । ಚಕೃಮ । ವಯಂ ॥ ೮ ॥

### ಸಾಯಣಭಾಷ್ಯಂ

ಹೇ ಅಗ್ನೇ ವಿದ್ವಾನ್ ತ್ವನ್ಮಾಹಾತ್ಮ್ಯಭಿಜ್ಞಃ ಪ್ರಯೋಗಜ್ಞೋ ವಾ ಯಜಮಾನೋ ಯಥಾ ವಿಶ್ವೇಭ್ಯೋ ಯಜತೇಭ್ಯಃ ಸರ್ವೇಭ್ಯೋ ಯಜನೀಯೇಭ್ಯೋ ದೇವೇಭ್ಯೋऽರಂ ಪರ್ಯಾಪ್ತಂ ಕರತ್

**ಕುರ್ಯಾತ್ ತಥಾ ತ್ವಮನುಗೃಹಾಣೇತ್ಯರ್ಥಃ । ವಯಮಪಿ ಯಂ ಯಜ್ಞಂ ಯಾಗವಿಶೇಷಂ ಚಕೃಮ ಕುರ್ಮಹೇ ಸ ಯಾಗಸ್ತ್ವೇ ಅಪಿ ॥ ಅಪಿರೇವಾರ್ಥೇ ॥ ತವೈವ ತೃಪ್ತ್ಯೈ ಇತ್ಯರ್ಥಃ । ತ್ವಮೇವ ತಸ್ಮಾತ್ತ್ವಂ ಸರ್ವದೇವಾರ್ಥಯಾಗಂ ತತ್ತದ್ವೃತ್ತಿಗ್ರೂಪಃ ಸನ್ ನಿರ್ವಹೇತ್ಯರ್ಥಃ ॥**

### ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ವಿದ್ವಾನ್**—ನಿನ್ನ ಮಾಹಾತ್ಮ್ಯವನ್ನು ತಿಳಿದಿರುವ (ಅಥವಾ ಪ್ರಯೋಗಜ್ಞನಾದ) ಯಜಮಾನನು । **ಯಥಾ**—ಯಾವ ರೀತಿಯಲ್ಲಿ । **ವಿಶ್ವೇಭ್ಯಃ**—ಸಮಸ್ತವಾದವರೂ । **ಯಜತೇಭ್ಯಃ**—ಯಜ್ಞಾರ್ಹರೂ ಆದ ದೇವತೆಗಳಿಗೆ । **ಅರಂ**—ಪೂರ್ಣವಾಗುವಂತೆ । **ಕೆರತ್**—ಪೂಜೆಯನ್ನು ಅರ್ಪಿಸುವನೋ । (ಹಾಗೆ ಅವನನ್ನು ಅನುಗ್ರಹಿಸು) । **ವಯಮಪಿ**—ನಾವೂ ಸಹ । **ಯಂ ಯಜ್ಞಂ**—ಯಾವ ಯಾಗವನ್ನು । **ಚಕೃಮ**—ನೆರವೇರಿಸುವೆವೋ (ಆ ಯಾಗವು) । **ತ್ವೇ ಅಪಿ**—ನಿನ್ನಲ್ಲಿಯೂ ಸಹ ಪೂರ್ಣತೆಯನ್ನು (ಪಡೆಯಲಿ).

### ಭಾವಾರ್ಥ

ಎಲೈ ಅಗ್ನಿಯೇ, ನಿನ್ನ ಮಾಹಾತ್ಮ್ಯವನ್ನು ತಿಳಿದವನೂ, ಪ್ರಯೋಗದ ಸ್ವರೂಪವನ್ನು ತಿಳಿದವನೂ ಆದ ಯಜಮಾನನು ಅರ್ಪಿಸುವ ಪೂಜೆಯು ಯಜ್ಞಾರ್ಹರಾದ ಸಮಸ್ತ ದೇವತೆಗಳಿಗೂ ಸೇರಿ ಅವರಿಗೆ ತೃಪ್ತಿಯನ್ನುಂಟು ಮಾಡುವಂತೆ ಅನುಗ್ರಹಿಸು. ನಾವು ನೆರವೇರಿಸತಕ್ಕ ಯಾಗವು ನಿನಗೂ ಅರ್ಪಿತವಾಗಿ ನಿನ್ನಲ್ಲಿಯೂ ಪೂರ್ಣತೆಯನ್ನು ಪಡೆಯಲಿ.

### English Translation

And do you, Agni, (grant), that this wise (worshipper) may worthily offer (worship) to all the adorable (divinities), and that the sacrifice which we offer may also be perfected in you.

### ವಿಶೇಷವಿಷಯಗಳು

ಈ ಋಕ್ಕು ಈ ಸೂಕ್ತಕ್ಕೆ ಉಪಸಂಹಾರರೂಪವಾಗಿರುವುದು. ನಾವು ಮಾಡುವ ಯಜ್ಞವು ದೇವತೆಗಳಿಗೂ ಅಗ್ನಿಯಾದ ನಿನಗೂ ತೃಪ್ತಿಯನ್ನುಂಟುಮಾಡಲಿ ಎಂಬ ಪ್ರಾರ್ಥನೆಯು ಉಕ್ತವಾಗಿರುವುದು.

**ವಿದ್ವಾನ್—ತ್ವನ್ಮಾಹಾತ್ಮ್ಯಾಭಿಜ್ಞಃ ಪ್ರಯೋಗಜ್ಞೋ ವಾ ಯಜಮಾನಃ**—ಅಗ್ನಿಯಾದ ನಿನ್ನ ಮಹಾತ್ಮೆಯನ್ನೂ, ಅಸಾಧಾರಣ ವ್ಯಕ್ತಿತ್ವವನ್ನೂ ತಿಳಿದಿರುವ ಅಥವಾ ಯಜ್ಞದಲ್ಲಿ ಮಾಡಬೇಕಾದ ನಾನಾ ಕಾರ್ಯಕ್ರಮಗಳನ್ನೂ, ಅವುಗಳನ್ನು ನೆರವೇರಿಸುವ ವಿಧಾನಗಳನ್ನೂ ತಿಳಿದಿರುವ ಯಜ್ಞಮಾಡುವ ಯಜಮಾನನೆಂದರ್ಥವು.

**ವಿಶ್ವೇಭ್ಯಃ ಯಜತೇಭ್ಯಃ**— ಈ ಯಜ್ಞದಲ್ಲಿ ನಾವು ಯಾವ ದೇವತೆಗಳನ್ನು ಆಹ್ವಾನಮಾಡಿ ಸ್ತೋತ್ರಾದಿಗಳಿಂದಲೂ ಹವಿರರ್ಪಣೆಗಳಿಂದಲೂ ತೃಪ್ತಿಯನ್ನುಂಟುಮಾಡಬೇಕೆಂದು ಉದ್ದೇಶಪಟ್ಟಿರುವೆವೋ ಅವರಿಗೆಲ್ಲಾ ತೃಪ್ತಿಯಾಗುವಂತೆ ಅನುಗ್ರಹಮಾಡೆಂದು ಅಗ್ನಿಯನ್ನು ಪ್ರಾರ್ಥಿಸಿದೆ.

**ಅಯಂ ಅಗ್ನೇ ತ್ವೇ ಅಪಿ ಯಜ್ಞಂ ಚಕೃಮಾ ವಯಂ**—ಸಂಬಂಧಪಟ್ಟ ದೇವತೆಗಳಿಗೆ ತೃಪ್ತಿಯಾಗುವಂತೆ ಅನುಗ್ರಹಿಸುವುದಲ್ಲದೆ ನಾವು ಮಾಡುವ ಈ ಯಜ್ಞದಲ್ಲಿ ನಿನಗೂ (ಅಗ್ನಿಗೂ) ಸಂತೋಷವುಂಟಾಗುವಂತೆ

ನಾವು ಯಜ್ಞವನ್ನು ಮಾಡುವಂತೆಯೂ ನಮಗೆ ಅನುಗ್ರಹಮಾಡು ಎಂದೂ ಈ ಯಾಗವನ್ನು ನಾವು ಅಗ್ನಿಪ್ರೀತ್ಯರ್ಥವಾಗಿ ಮಾಡುವೆವು, ಆದುದರಿಂದ ನೀನೇ ಸಮಸ್ತ ದೇವತೆಗಳನ್ನೂ ಉದ್ದೇಶಿಸಿ ಆಯಾಯ ಋತ್ವಿಗ್ರೂಪದಿಂದ ಯಜ್ಞಕರ್ಮಗಳನ್ನು ಸಾಂಗವಾಗಿ ನೆರವೇರಿಸಬೇಕೆಂದೂ ಅಗ್ನಿಯನ್ನು ಪ್ರಾರ್ಥಿಸಲಾಗಿದೆ.

## ಆರನೆಯ ಸೂಕ್ತವು

### ಸಾಯಣಭಾಷ್ಯಂ

**ಇಮಾಂ ಮ ಇತ್ಯಷ್ಟರ್ಚಂ ಷಷ್ಠಂ ಸೂಕ್ತಂ ಸೋಮಾಹುತ್ಯಾರ್ಷಮಾಗ್ನೇಯಂ ಗಾಯತ್ರಂ । ಇಮಾಂ ಮೇ ಗಾಯತ್ರಂ ಹೀತ್ಯನುಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ಗಾಯತ್ರೇ ಛಂದಸ್ಯಸ್ಯ ವಿನಿಯೋಗಃ । ಸೂತ್ರಿತಂ ಚ । ಇಮಾಂ ಮೇ ಅಗ್ನೇ ಸಮಿಧಮಿಮಾಮಿತಿ ತ್ರಯೋಣಾಮುತ್ತಮಾಮುದ್ಧರೇತ್ । ಆ. ೪-೧೩ । ಇತಿ ॥ ಅಪರಾಹ್ಣಿಕ್ಯಾಮುಪಸದೀಮಾಂ ಮೇ ಅಗ್ನೇ ಸಮಿಧಮಿತಿ ತಿಸ್ರ ಋಚಸ್ತ್ರಿರಭ್ಯಸ್ತಾ ನವ ಸಾಮಿಧೇನ್ಯಃ ಕೃತ್ವಾ ವಿನಿಯೋಕ್ತವ್ಯಾಃ । ಅಥೋಪಸದಿತಿ ಖಂಡೇ ಸೂತ್ರಿತಂ । ಇಮಾಂ ಮೇ ಅಗ್ನೇ ಸಮಿಧಮಿಮಾಮಿತಿ ತು ಸಾಮಿಧೇನ್ಯಃ । ಆ- ೪-೮ । ಇತಿ ॥**

ಅನುವಾದವು—**ಇಮಾಂ ಮೇ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಹಿಂದಿನ ಸೂಕ್ತಕ್ಕೆ ಋಷಿಯಾದ ಸೋಮಾಹುತಿರ್ಭಾರ್ಗವನೆಂಬುವನೇ ಋಷಿಯು ; ಅಗ್ನಿಯು ದೇವತೆಯು ; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಇಮಾಂ ಮೇ ಗಾಯತ್ರಂ ಹಿ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕಾಲದಲ್ಲಿ ಗಾಯತ್ರೀ ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತ ಸೂತ್ರದ—**ಇಮಾಂ ಮೇ ಸಮಿಧಮಿಮಾಮಿತಿ ತ್ರಯೋಣಾಮುತ್ತಮಾಮುದ್ಧರೇತ್** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೧೩) ಮತ್ತು ಅಪರಾಹ್ಣಕಾಲದಲ್ಲಿ ಮಾಡುವ ಉಪಸದ್ಯಾಗದಲ್ಲಿ ಈ ಸೂಕ್ತದ **ಇಮಾಂ ಮೇ ಅಗ್ನೇ ಸಮಿಧಂ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಪ್ರತಿಯೊಂದನ್ನು ಮೂರು ಮೂರುಸಲ ಪಠಿಸಿ ಒಂಭತ್ತು ಸಾಮಿಧೇನೀ ಎಂಬ ಋಕ್ಕುಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶೌತ್ರಸೂತ್ರದ **ಅಥೋಪಸತ್** ಎಂಬ ಖಂಡದ—**ಇಮಾಂ ಮೇ ಅಗ್ನೇ ಸಮಿಧಮಿಮಾಮಿತಿ ತು ಸಾಮಿಧೇನ್ಯಃ** (ಆ. ೪-೮) ಎಂಬ ಸೂತ್ರದಿಂದ ವಿವೃತವಾಗಿರುವುದು.

॥ ಓಂ ॥

## ಸೂಕ್ತ—೬

॥ ಮಂಡಲ—೧ ॥ ಅನುವಾಕ—೧ ॥ ಸೂಕ್ತ—೬ ॥

॥ ಅಷ್ಟಕ—೧ ॥ ಅಧ್ಯಾಯ—೫ ॥ ವರ್ಗ—೨೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥

ಋಷಿಃ—ಸೋಮಾಹುತಿರ್ಭಾರ್ಗವಃ ॥

ದೇವತಾ—ಅಗ್ನಿಃ ॥

ಛಂದಃ—ಗಾಯತ್ರೀ ।

ಸಂಹಿತಾಪಾಠಃ

ಇಮಾಂ ಮೇ ಅಗ್ನೇ ಸಮಿಧಮಿಮಾಮುಪಸದಂ ವನೇಃ ।

ಇಮಾ ಉ ಷು ಶ್ರುಧೀ ಗಿರಃ ॥ ೧ ॥

ಪದಪಾಠಃ

ಇಮಾಂ । ಮೇ । ಅಗ್ನೇ । ಸಂऽಇಧಂ । ಇಮಾಂ । ಉಪऽಸದಂ । ವನೇರಿತಿ ವನೇಃ ।

ಇಮಾಃ । ಊಂ ಇತಿ । ಸು । ಶ್ರುಧಿ । ಗಿರಃ ॥ ೧ ॥

ಸಾಯಣಭಾಷ್ಯಂ

ಹೇ ಅಗ್ನೇ ಮೇ ಮದೀಯಾಮಿಮಾಮಾಧೀಯಮಾನಾಂ ಸಮಿಧಂ ಇಮಾಮುಪಸದಮುಪ-ಸದನಸಾಧನಾಮಾಹುತಿಮುಪಸದ್ಯಾಗೇ ಕ್ರಿಯಮಾಣಾಂ ವಾ ವನೇಃ । ಸಂಭಜೇಥಾಃ । ತಥೇಮಾ ಉ ಇಮಾ ಅಪಿ ಗಿರಃ ಸ್ತುತೀಃ ಸು ಸುಷ್ಠು ಶ್ರುಧಿ । ಶೃಣು ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಮೇ—ನನ್ನ (ನನ್ನಿಂದ ಅರ್ಪಿತವಾದ) । ಇಮಾಂ ಸಮಿಧಂ—ಈ ಸಮಿತ್ತನ್ನೂ । ಇಮಾಂ ಉಪಸದಂ—ಉಪಸದ್ಯಾಗಾಂಗವಾದ ಈ ಆಹುತಿಯನ್ನು । ವನೇಃ—ಸ್ವೀಕರಿಸಿ ಭಜಿಸು । ಇಮಾ ಉ ಗಿರಃ—ಈ ಸ್ತುತಿಗಳನ್ನೂ ಸಹ । ಸು ಶ್ರುಧಿ—ಅಭಿಮಾನದಿಂದ ಕೇಳು.

ಭಾವಾರ್ಥ

ಎಲೈ ಅಗ್ನಿಯೇ, ನನ್ನಿಂದ ಅರ್ಪಿತವಾದ ಈ ಸಮಿತ್ತನ್ನೂ, ಉಪಸದ್ಯಾಗಾಂಗವಾದ ಈ ಆಹುತಿಯನ್ನೂ ಸ್ವೀಕರಿಸು. ಈ ಸ್ತುತಿಗಳನ್ನೂ ಸಹ ಅಭಿಮಾನದಿಂದ ಕೇಳು.

English Translation

Agni, accept this my fuel, this my oblation ; listen, well pleased, to my praises.

ವಿಶೇಷವಿಷಯಗಳು

ಉಪಸದಂ—ಉಪಸತ್ ಎಂಬುದು ಜ್ಯೋತಿಷ್ಟೋಮಯಜ್ಞದ ಒಂದು ಮುಖ್ಯವಾದ ಭಾಗವೆಂದು ಹೇಳಲ್ಪಡುವುದು.

ಸಮಿಧಂ—ಇಂಧ್ ದೀಪ್ತೌ । ಚೆನ್ನಾಗಿ ಪ್ರಕಾಶಿಸು, ಉರಿ ಎಂಬ ಅರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಚೆನ್ನಾಗಿ ಉರಿಯುವ ಒಣಗಿದ ಕೆಲವು ವೃಕ್ಷಗಳ ಕೊನೆಯು ಎಂದು ಹೆಸರು. ಅಗ್ನಿಯಲ್ಲಿ

ಹೋಮಮಾಡುವಾಗ ಅಶ್ವತ್ಥವೃಕ್ಷವೇ ಮೊದಲಾದ ಕೆಲವು ಯಜ್ಞಾರ್ಹವಾದ ವೃಕ್ಷಗಳ ಕೆಳಗೆ ಒಣಗಿ ಉದರಿರುವ ಸಣ್ಣ ಕೊನೆಗಳು. ಇವು ಸುಮಾರು ಕಿರುಬೆರಳಿಗಿಂತ ಸಣ್ಣದಾಗಿದ್ದು ನಾಲ್ಕರಿಂದ ಆರು ಅಂಗುಲ ಉದ್ದವಿರುವುದು. ಇದರ ತುದಿಯ (ಕೊನೆಯ) ಭಾಗಕ್ಕೆ ಅಗ್ರಭಾಗವೆಂದು ಹೆಸರು. ಇಂತಹ ಅಗ್ರಭಾಗದಿಂದ ಕೂಡಿರುವ ಸಮಿತ್ತುಗಳನ್ನು ಅಗ್ನಿಯಲ್ಲಿ ಹೋಮಮಾಡುವುದಕ್ಕೆ ಉಪಯೋಗಿಸುವರು. ಸಮಿತ್ತನ್ನು ಹೋಮಮಾಡುವಾಗ ಕೆಲವು ನಿರ್ದಿಷ್ಟವಾದ ಋಕ್ಕುಗಳನ್ನು ಪಠಿಸುವರು ಇವುಗಳಿಗೆ ಸಾಮಿಧೇನೀ ಮಂತ್ರಗಳೆಂದು ಹೆಸರು. ಇವು ಹದಿನೇಳು ಇರುವುವು.

ಗಿರಃ—ವಾಕ್ಯರೂಪದಿಂದ ಅಥವಾ ಋಕ್ಕಿನ ರೂಪದಲ್ಲಿರುವ ಸ್ತೋತ್ರಗಳು. ಯಾಸ್ಕರು ಗೀಃ ಎಂಬ ಶಬ್ದವನ್ನು ವಾಙ್ನಾಮಗಳಲ್ಲಿ ಪಠಿಸಿದ್ದಾರೆ. (ನಿ. ೨-೨೩) ಮತ್ತು ಗಿರಃ—ಸ್ತುತಯೋ ಗಿರೋ ಗೃಣಾತೇಃ (ನಿ. ೧ ೧೦) ಗೄ ಶಬ್ದೇ ಎಂಬ ಧಾತುವಿನಿಂದ ಗಿರಃ ಎಂಬ ಶಬ್ದವು ನಿಷ್ಪನ್ನವಾಗಿದೆ. ಗಿರಃ ಎಂದರೆ ಸ್ತುತಿಗಳು ಎಂದರ್ಥವು. ಗೃಣಾತಿಃ ಸ್ತುತಿಕರ್ಮಾ (ನಿ. ೩-೫) ಎಂದೂ ನಿರ್ವಚನವಿರುವುದು. ಇದಲ್ಲದೆ ಗಿರಾ—ಗೀತ್ಯಾ ಸ್ತುತ್ಯಾ (ನಿ. ೬-೨೪ ಮತ್ತು ನಿ ೧೦-೫) ಎಂದೂ ನಿರ್ವಚನವಿರುವುದರಿಂದ ಗಿರಃ ಎಂದರೆ ಸ್ತೋತ್ರಗಳು ಎಂದರ್ಥವು.

---

ಸಂಹಿತ-ಪಾಠಃ

ಅಯಾ ತೇ ಅಗ್ನೇ ವಿಧೇಮೋರ್ಜೋ ನಪಾದಶ್ವಮಿಷ್ಟೇ ।
ಏನಾ ಸೂಕ್ತೇನ ಸುಜಾತ ॥ ೨ ॥

ಪದಪಾಠಃ

ಅಯಾ । ತೇ । ಅಗ್ನೇ । ವಿಧೇಮ । ಊರ್ಜಃ । ನಪಾತ್ । ಅಶ್ವಂऽಇಷ್ಟೇ ।
ಏನಾ । ಸುऽಉಕ್ತೇನ । ಸುऽಜಾತ ॥ ೨ ॥

ಸಾಯಣಭಾಷ್ಯಂ

ಹೇ ಅಗ್ನೇ ತೇ ತ್ವಾಮಯಾನಯಾಹುತ್ಯಾ ವಿಧೇಮ । ಪರಿಚರೇಮ । ಹೇ ಊರ್ಜೋ ನಪಾತ್ ಬಲಸ್ಯ ನಪ್ತಃ ತಸ್ಯ ನಪಾತಯಿತರ್ವಾ ಹೇ ಅಶ್ವಮಿಷ್ಟೇ ವ್ಯಾಪಕಯಜ್ಞ । ಯದ್ವಾ ಆಶು ಕ್ರಿಯಮಾಣಂ ಕರ್ಮಾಶ್ವಂ । ತದಿಚ್ಛತೀತ್ಯಶ್ವಮಿಷ್ಟಿಃ । ಸಂತ್ವರಮಾಣಾ ಹ್ಯುಪಸದಮಾಚರಂತಿ । ತೇ ಕರ್ಮಭಿಃ ಸಮುತ್ವರಂತ ತೇ ತಿಸ್ರಃ ಸಾಮಿಧೇನೀರನೂಚ್ಯ ತಿಸ್ರೋ ದೇವತಾ ಅಯಜನ್ನಿತಿ ಬ್ರಾಹ್ಮಣಂ । ಐ। ಬ್ರಾ ೩-೪೫। ತಾದೃಶಾಗ್ನೇ ತೇ ತ್ವಾಮಯಾನಯಾಹುತ್ಯಾ ವಿಧೇಮ । ಪರಿಚರೇಮ । ತಥಾ ಹೇ ಸುಜಾತ ಶೋಭನಜನನ ಏನಾ ಏತೇನ ಸೂಕ್ತೇನ ಸ್ತೋತ್ರೇಣ ಪ್ರೀಣಯೇಮೇತಿ ಶೇಷಃ । ಯದ್ವಾ ಸ್ತುತ್ಯುಪವೃಂಹಿತೇನ ವಿಧೇಮ ॥

ಪ್ರತಿಪದಾರ್ಥ

**ಊರ್ಜೋ ನಪಾತ್**—ಶಕ್ತಿಪುತ್ರನಾದವನೂ | **ಅಶ್ವಮಿಷ್ಟೇ**—ತ್ವರಿತವಾಗಿಯೂ, ಶ್ರದ್ಧೆಯಿಂದಲೂ ಆಚರಿಸುವ ಉಪಸದ್ಯಾಗವನ್ನು ಇಚ್ಛಿಸುವವನೂ ಆದ | **ಅಗ್ನೇ**—ಎಲೈ ಅಗ್ನಿಯೇ | **ತೇ**—ನಿನ್ನನ್ನು | **ಅಯಾ**—ಈ ಆಹುತಿಯಿಂದ | **ವಿಧೇಮ**—ಪರಿಚರಿಸುವೆವು | **ಸುಜಾತೆ**—ಶ್ರೇಷ್ಠವಾದ ಜನ್ಮವುಳ್ಳ ಎಲೈ ಅಗ್ನಿಯೇ | **ಏನಾ ಸೂಕ್ತೇನ**—ಸ್ತೋತ್ರರೂಪವಾದ ಈ ಮಂತ್ರದಿಂದಲೂ (ಉಪಚರಿಸುತ್ತೇವೆ).

ಭಾವಾರ್ಥ

ಶಕ್ತಿಪುತ್ರನಾದವನೂ, ತ್ವರಿತವಾಗಿಯೂ, ಶ್ರದ್ಧೆಯಿಂದಲೂ ಆಚರಿಸುವ ಉಪಸದ್ಯಾಗವನ್ನು ಇಚ್ಛಿಸುವವನೂ ಆದ ಎಲೈ ಅಗ್ನಿಯೇ ನಿನ್ನನ್ನು ಈ ಆಹುತಿಯಿಂದ ಪರಿಚರಿಸುವೆವು. ಶ್ರೇಷ್ಠವಾದ ಜನ್ಮವುಳ್ಳ ಎಲೈಅಗ್ನಿಯೇ, ನಿನ್ನನ್ನು ಸ್ತೋತ್ರರೂಪವಾದ ಈ ಮಂತ್ರದಿಂದಲೂ ಉಪಚರಿಸುತ್ತೇವೆ.

## English Translation

May we propitiate you, Agni, by this (oblation) ; grandson of strength, you are gratified by prompt sacrifice ; (my we please you), well-born, by this hymn.

ವಿಶೇಷವಿಷಯಗಳು

**ಸೂಕ್ತೇನ—ಸುಷ್ಠು ಉಕ್ತೇನ** | ಚೆನ್ನಾಗಿ ಪಠಿಸಲ್ಪಟ್ಟ ಎಂದರೆ ದೇವತೆಗಳ ಗುಣಗಳನ್ನು ಚೆನ್ನಾಗಿ ಪ್ರಶಂಸೆಮಾಡಿರುವ ಸ್ತೋತ್ರ ಅಥವಾ ಋಕ್ಕೆಂದರ್ಥವು. ಋಗ್ವೇದದಲ್ಲಿ ಇಂತಹ ಅನೇಕ ಋಕ್ಕುಗಳ ಸಮೂಹಕ್ಕೆ ಸೂಕ್ತವೆಂದು ಹೆಸರು. ಒಟ್ಟಿನಲ್ಲಿ ಸೂಕ್ತವೆಂದರೆ ಸ್ತೋತ್ರವೆಂದಭಿಪ್ರಾಯವು.

**ಊರ್ಜೋ ನಪಾತ್—ಬಲಸ್ಯ ನಪ್ತಃ** | ಅಗ್ನಿಯನ್ನು ಅರಣಿಗಳಲ್ಲಿ ಮಥನಮಾಡುವಾಗ ಬಹಳ ಶಕ್ತಿಯನ್ನು ಉಪಯೋಗಿಸಿ ಮಥನಮಾಡುವುದರಿಂದ ಮಾತ್ರವೇ ಅಗ್ನಿಯು ಉತ್ಪನ್ನನಾಗುವನು. ಆದ್ದರಿಂದ ಅಗ್ನಿಯನ್ನು ಸಹಸಸ್ಪುತ್ರ, ಊರ್ಜೋನಪಾತ್ ಎಂಬ ಶಬ್ದಗಳಿಂದ ಸಂಬೋಧಿಸಿದೆ.

**ಅಶ್ವಮಿಷ್ಟೇ—ವ್ಯಾಪಕಯಜ್ಞ** | ಯಜ್ಞದಲ್ಲಿ ವ್ಯಾಪಿಸಿರುವವನು. ಅಶೂ ವ್ಯಾಪ್ತೌ ಎಂಬ ಧಾತುವಿನಿಂದ ಅಶ್ವಶಬ್ದವು ನಿಷ್ಪನ್ನವಾಗಿದೆಯೆಂದು ಭಾವಿಸಿದರೆ ಮೇಲೆ ಹೇಳಿದ ಅರ್ಥವು ಸಾಧ್ಯವಾಗುವುದು. ಅಥವಾ **ಆಶು ಕ್ರಿಯಾಮಣಂ ಕರ್ಮ ಅಶ್ವಂ**—ಬೇಗನೆ ಎಂಬರ್ಥವುಳ್ಳ ಆಶು ಎಂಬ ಶಬ್ದದ ನಿಷ್ಪತ್ತಿಯಾದ ಅಶ್ವಂ ಎಂಬ ಶಬ್ದಕ್ಕೆ ಬೇಗನೆ ಮಾಡಲ್ಪಡುವ ಯಜ್ಞ ಎಂದೂ ಅರ್ಥವು. ಇಲ್ಲಿ ಎರಡು ವಿಧವಾದ ಅರ್ಥಗಳಿಗೂ ಅವಕಾಶ ವಿರುವುದು.

**ಅಯಾ—ಅನಯಾ** | ಛಂದಸ್ಸಿನ ಅನುಕೂಲಕ್ಕಾಗಿ ಅನಯಾ ಎಂಬ ಶಬ್ದದ ನಕಾರವು ಲೋಪವಾಗಿ ಅಯಾ ಎಂದಾಗಿರುವುದು. ಇದರಂತೆ **ಆತ್ಮನಾ** ಎಂಬ ಶಬ್ದದ ಆಕಾರವು ಲೋಪವಾಗಿ **ತ್ಮನಾ** ಎಂಬ ಶಬ್ದವು ಅನೇಕ ಕಡೆಗಳಲ್ಲಿ ಉಪಯೋಗಿಸಲ್ಪಟ್ಟಿರುವುದು. ಇಂತಹ ಪ್ರಯೋಗಗಳು ಋಗ್ವೇದದಲ್ಲಿ ಬಹಳವಾಗಿವೆ.

---

ಸಂಹಿತಾಪಾಠಃ

ತಂ ತ್ವಾ ಗೀರ್ಭಿರ್ಗಿರ್ವಣಸಂ ದ್ರವಿಣಸ್ಯುಂ ದ್ರವಿಣೋದಃ ।

ಸಪರ್ಯೇಮ ಸಪರ್ಯವಃ ॥ ೩ ॥

ಪದಪಾಠಃ

ತಂ । ತ್ವಾ । ಗೀಃಽಭಿಃ । ಗಿರ್ವಣಸಂ । ದ್ರವಿಣಸ್ಯುಂ । ದ್ರವಿಣಃಽದಃ ।

ಸಪರ್ಯೇಮ । ಸಪರ್ಯವಃ ॥ ೩ ॥

ಸಾಯಣಭಾಷ್ಯಂ

ಹೇ ದ್ರವಿಣೋದೋ ಧನಸ್ಯ ದಾತರಗ್ನೇ ತಂ ತಾದೃಶಂ ಗಿರ್ವಣಸಂ ಗೀರ್ಭಿಃ ಸ್ತುತಿಭಿರ್ವನನೀಯಂ ದ್ರವಿಣಸ್ಯುಂ ಹವಿರ್ಲಕ್ಷಣಧನೇಚ್ಛುಂ ತ್ವಾ ತ್ವಾಂ ಸಪರ್ಯವಃ ಪರಿಚರಣಕರ್ತಾರೋ ವಯಂ ಗೀರ್ಭಿಃ ಸ್ತುತಿಭಿಃ ಸಪರ್ಯೇಮ । ಪರಿಚರೇಮ ॥

ಪ್ರತಿಪದಾರ್ಥ

ದ್ರವಿಣೋದಃ—ಧನದ ದಾತನಾದ ಎಲೈ ಅಗ್ನಿಯೇ । ಗಿರ್ವಣಸಂ—ಸ್ತುತಿಗಳಿಂದ ಭಜಿಸಲ್ಪಡುವವನೂ । ದ್ರವಿಣಸ್ಯುಂ—ಹವಿಸ್ಸಿನ ರೂಪದ ಧನವನ್ನು ಇಚ್ಛಿಸುವವನೂ । ತಂ ತ್ವಾ—ಪ್ರಸಿದ್ಧನೂ ಆದ ನಿನ್ನನ್ನು । ಸಪರ್ಯವಃ—ನಿನ್ನ ಪೂಜಕರಾದ ನಾವು । ಗೀರ್ಭಿಃ—ಸ್ತುತಿಗಳಿಂದ । ಸಪರ್ಯೇಮ—ಪೂಜಿಸುವೆವು.

ಭಾವಾರ್ಥ

ಧನದ ದಾತನಾದ ಎಲೈ ಅಗ್ನಿಯೇ, ಸ್ತುತಿಗಳಿಂದ ಭಜಿಸಲ್ಪಡುವವನೂ, ಹವಿಸ್ಸಿನ ರೂಪದ ಧನವನ್ನು ಇಚ್ಛಿಸುವವನೂ, ಪ್ರಸಿದ್ಧನೂ ಆದ ನಿನ್ನನ್ನು ನಿನ್ನ ಪೂಜಕರಾದ ನಾವು ಸ್ತುತಿಗಳಿಂದ ಪೂಜಿಸುವೆವು.

English Translation

Granter of riches, may we, your worshippers, propitiate you, who are desirous of (sacrificial) wealth, and deserving of laudation, by our praises.

ವಿಶೇಷವಿಷಯಗಳು

ದ್ರವಿಣೋದಃ—ಈ ಶಬ್ದದ ವಿಸ್ತಾರವಾದ ವಿವರಣೆಯನ್ನು ಇದೇ ಭಾಗದ 407-409 ನೇ ಪೇಜುಗಳಲ್ಲಿ ವಿವರಿಸಿದೆ.

ಗಿರ್ವಣಸಂ—ಸ್ತುತಿಲಕ್ಷಣೈರ್ವಚೋಭಿಃ ಸಂಭಜನೀಯಂ । ಸ್ತುತಿಗಳಿಂದ ಹೊಂದುಲ್ಪಡುವವನು ಎಂದರೆ ಸ್ತೋತ್ರಾರ್ಹನೂ, ಸ್ತುತ್ಯನೂ ಎಂದರ್ಥವು. ಗಿರ್ವಣಾ ದೇವೋ ಭವತಿ ಗೀರ್ಭಿರೇನಂ ವನಯಂತಿ (ನಿ. ೬.೧೪) ಎಂದು ಯಾಸ್ಕರ ನಿರ್ವಚನವಿರುವುದು.

ಸಪರ್ಯವಃ—ಪರಿಚರಣಕರ್ತಾರೋ ವಯಂ । ನಿನ್ನನ್ನು ಸೇವೆಮಾಡುವ ಯಜಮಾನರೂ, ಋತ್ವಿಗ್ಜನರೂ ಆದ ನಾವು.

---

ಸಂಹಿತಾಪಾಠಃ

ಸ ಬೋಧಿ ಸೂರಿರ್ಮಘವಾ ವಸುಪತೇ ವಸುದಾವನ್ ।

ಯುಯೋಧ್ಯ೧ಸ್ಮದ್ದ್ವೇಷಾಂಸಿ ॥ ೪ ॥

ಪದಪಾಠಃ

ಸಃ । ಬೋಧಿ । ಸೂರಿಃ । ಮಘವಾ । ವಸುಪತೇ । ವಸುದಾವನ್ ।

ಯುಯೋಧಿ । ಅಸ್ಮತ್ । ದ್ವೇಷಾಂಸಿ ॥ ೪ ॥

ಸಾಯಣಭಾಷ್ಯಂ

ಮಘವಾನ್ಧನವಾನ್ ಸೂರಿರ್ವಿದ್ವಾನ್ ಪ್ರೇರಕೋ ವಾ ಸ ಉಕ್ತಲಕ್ಷಣಕಸ್ತ್ವಂ ಬೋಧಿ । ಬುಧ್ಯಸ್ವಾಸ್ಮದೀಯಂ ಸ್ತೋತ್ರಂ । ಕಿಂಚ ಹೇ ಅಗ್ನೇ ದ್ವೇಷಾಂಸಿ ದ್ವೇಷ್ಟ್ಯಾನಸ್ಮದಸ್ಮತ್ತೋ ಯುಯೋಧಿ । ಪೃಥಕ್ಕುರು ॥

ಪ್ರತಿಪದಾರ್ಥ

ವಸುಪತೇ—ಧನಕ್ಕೆ ಪ್ರಭುವೂ । ವಸುದಾವನ್—ಧನದ ದಾತನೂ ಆದ ಎಲೈ ಅಗ್ನಿಯೇ । ಮಘವಾ—ಧನವಂತನೂ । ಸೂರಿಃ—ಪ್ರಾಜ್ಞನೂ ಅಥವಾ ಕರ್ಮಕ್ಕೆ ಪ್ರೇರಕನೂ ಆದ । ಸಃ—ಆ ನೀನು । ಬೋಧಿ—(ನಮ್ಮ ಕರ್ಮವನ್ನೂ ಸ್ತುತಿಯನ್ನೂ) ತಿಳಿ । ದ್ವೇಷಾಂಸಿ—ನಮ್ಮನ್ನು ದ್ವೇಷಿಸುವ ನಮ್ಮ ಶತ್ರುಗಳನ್ನು । ಅಸ್ಮತ್—ನಮ್ಮಿಂದ । ಯುಯೋಧಿ—ಬೇರೆಮಾಡು (ದೂರವಾಗಿ ಓಡಿಸು).

ಭಾವಾರ್ಥ

ಧನಕ್ಕೆ ಪ್ರಭುವೂ, ಧನದ ದಾತನೂ ಆದ ಎಲೈ ಅಗ್ನಿಯೇ, ಧನವಂತನೂ, ಪ್ರಾಜ್ಞನೂ ಅಥವಾ ಕರ್ಮಕ್ಕೆ ಪ್ರೇರಕನೂ ಆದ ನೀನು ನಮ್ಮ ಕರ್ಮವನ್ನೂ, ಸ್ತುತಿಯನ್ನೂ ತಿಳಿ. ನಮ್ಮನ್ನು ದ್ವೇಷಿಸುವ ಶತ್ರುಗಳನ್ನು ನಮ್ಮಿಂದ ಬೇರೆಮಾಡು.

English Translation

Lord of wealth, giver of wealth, possessor of riches, Agni, you are wise, understand (our prayers), and scatter our enemies.

ವಿಶೇಷವಿಷಯಗಳು

**ಮಘವಾ**—ಮಘಶಬ್ದವು ಧನನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) **ಮಘಮಿತಿ ಧನನಾಮಧೇಯಂ ಮಹಂತೇರ್ದಾನಕರ್ಮಣಃ** (ನಿ. ೧-೭) ಎಂದೂ ನಿರ್ವಚನವಿರುವುದು ದಾನಕರ್ಮವನ್ನು (ಕೊಡುವುದನ್ನು) ಸೂಚಿಸುವ ಮಂಹತಿ ಧಾತುವಿನಿಂದ ನಿಷ್ಪನ್ನವಾದ ಮಘಶಬ್ದಕ್ಕೆ ಧನವೆಂದು ಹೆಸರು ಮಘವಾನ್ ಎಂದರೆ ಧನವುಳ್ಳವನು ಎಂದರ್ಥವು. ಈ ಶಬ್ದವು ಅಗ್ನಿ, ಇಂದ್ರ ಮುಂತಾದ ಇತರ ದೇವತೆಗಳ ವಿಷಯದಲ್ಲಿಯೂ ಉಪಯೋಗಿಸಲ್ಪಡುವುದು ಇಂದ್ರನ ವಿಷಯದಲ್ಲಿಯೇ ಈ ಶಬ್ದದ ಪ್ರಯೋಗವು ಹೆಚ್ಚಾಗಿರುವುದರಿಂದ ಆಧುನಿಕ ಸಂಸ್ಕೃತದಲ್ಲಿ ಮಘವಚ್ಛಬ್ದಕ್ಕೆ ಇಂದ್ರನೆಂದಲ್ಲದೆ ಬೇರೆ ಅರ್ಥವಿಲ್ಲ.

**ಸೂರಿಃ**—ಸೂರಿ ಶಬ್ದವು ಸ್ತೋತೃನಾಮಗಳಲ್ಲಿ ಪಠಿತವಾಗಿದೆ. (ನಿ. ೨-೧೯) ಈ ಶಬ್ದಕ್ಕೆ ಮೇಧಾವಿ, ಪ್ರಾಜ್ಞ, ಬುದ್ಧಿವಂತ, ಪ್ರೇರಕ ಇತ್ಯಾದ್ಯರ್ಥಗಳಿರುವುವು.

---

ಸಂಹಿತಾಪಾಠಃ

**ಸ ನೋ ವೃಷ್ಟಿಂ ದಿವಸ್ಪರಿ ಸ ನೋ ವಾಜಮನರ್ವಾಣಂ ।**

**ಸ ನಃ ಸಹಸ್ರಿಣೀರಿಷಃ ॥ ೫ ॥**

ಪದಪಾಠಃ

ಸಃ । ನಃ । ವೃಷ್ಟಿಂ । ದಿವಃ । ಪರಿ । ಸಃ । ನಃ । ವಾಜಂ । ಅನರ್ವಾಣಂ ।

ಸಃ । ನಃ । ಸಹಸ್ರಿಣೀಃ । ಇಷಃ ॥ ೫ ॥

ಸಾಯಣಭಾಷ್ಯಂ

ಸಃ ಸ ಏವಾಗ್ನಿರ್ನೋಽಸ್ಮದರ್ಥಂ ದಿವಸ್ಪರಿ ದ್ಯುಲೋಕಾದಂತರಿಕ್ಷಾತ್ ॥ ಪರೀತಿ ಪಂಚಮ್ಯರ್ಥಾನುವಾದೀ ॥ ವೃಷ್ಟಿಂ ಕರೋತಿ ಚ ಶೇಷಃ । ಸ ಏವ ನೋಽಸ್ಮದರ್ಥಮನರ್ವಾಣಮವಿಚಲಮನಲ್ಪಂ ವಾಜಂ ಬಲಂ ದದಾತು । ತಥಾ ಸಹಸ್ರಿಣೀರಪರಿಮಿತಪ್ರಕಾರಾಣೀಷೋಽನ್ನಾನಿ ಸ ಏವಾಗ್ನಿರ್ದದಾತು ॥

ಪ್ರತಿಪದಾರ್ಥ

ಸಃ—ಮೇಲೆ ವರ್ಣಿತನಾದ ಆದೇ ಅಗ್ನಿಯು । ನಃ—ನಮಗೆ । ದಿವಸ್ಪರಿ—ಅಂತರಿಕ್ಷದಿಂದ । ವೃಷ್ಟಿಂ—ಮಳೆಯನ್ನು (ಸುರಿಸುತ್ತಾನೆ) । ಸಃ—ಅವನೇ । ನಃ—ನಮಗೆ । ಅನರ್ವಾಣಂ—( ಶಾಶ್ವತವಾಗಿರುವಂತೆ ) ಪ್ರಭೂತವಾದ । ವಾಜಂ—ಶಕ್ತಿಯನ್ನು (ಕೊಡಲಿ ಹಾಗೆಯೇ) । ನಃ—ನಮಗೆ । ಸಹಸ್ರಿಣೀಃ—ಅಪರಿಮಿತವಾದ । ಇಷಃ—ಅನ್ನಗಳನ್ನು । ಸಃ—ಆದೇ ಅಗ್ನಿಯು ಕೊಡಲಿ ।

### ಭಾವಾರ್ಥ

ಮೇಲೆ ವರ್ಣಿತನಾದ ಅದೇ ಅಗ್ನಿಯು ನಮಗೆ ಅಂತರಿಕ್ಷದಿಂದ ವೃಷ್ಟಿಯನ್ನು ಸುರಿಸುತ್ತಾನೆ. ಅವನೇ ನಮಗೆ ಪ್ರಭೂತವಾದ ಶಕ್ತಿಯನ್ನೂ ಅಪರಿಮಿತವಾದ ಅನ್ನವನ್ನೂ ಕೊಡಲಿ.

### English Translation

(For you are) he (who gives) us rain from heaven ; he (who gives) us undecaying strength, he (who gives) us infinite (abundance of) food.

### ಸಂಹಿತಾಪಾಠಃ

ಈಳಾನಾಯಾವಸ್ಯವೇ ಯವಿಷ್ಠ ದೂತ ನೋ ಗಿರಾ ।

ಯಜಿಷ್ಠ ಹೋತರಾ ಗಹಿ ॥ ೬ ॥

### ಪದಪಾಠಃ

ಈಳಾನಾಯ । ಅವಸ್ಯವೇ । ಯವಿಷ್ಠ । ದೂತ । ನಃ । ಗಿರಾ ।

ಯಜಿಷ್ಠ । ಹೋತಃ । ಆ । ಗಹಿ ॥ ೬ ॥

### ಸಾಯಣಭಾಷ್ಯಂ

ಹೇ ಯವಿಷ್ಠ ಯುವತ್ತಮ ದೂತ ದೇವಾನಾಂ ಯಜ್ಞಾದಿಸೂಚಕ ಯಜಿಷ್ಠಾತಿಶಯೇನ ಯಷ್ಟವ್ಯ ಹೋತರ್ದೇವಾನಾಮಾಹ್ವಾತರಗ್ನೇ ನೋ ಗಿರಾಸ್ಮದೀಯಯಾ ಸ್ತುತ್ಯೈಳಾನಾಯ ಪೂಜಯಿತ್ರೇಽವಸ್ಯವೇ ಸ್ವರಕ್ಷಣಮಿಚ್ಛತೇ ಮದರ್ಥಮಾಗಹಿ । ಆಗಚ್ಛ ॥

### ಪ್ರತಿಪದಾರ್ಥ

ಯವಿಷ್ಠ—ಅತ್ಯಂತ ಯುವಕನೂ । ದೂತ—ದೇವದೂತನೂ । ಯಜಿಷ್ಠ—ಅತಿಶಯವಾದ ಯಜ್ಞಾರ್ಹತೆಯುಳ್ಳವನೂ । ಹೋತಃ—ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ ಆದ ಎಲೈ ಅಗ್ನಿಯೇ । ನಃ—ನಮ್ಮ । ಗಿರಾ—ಸ್ತುತಿರೂಪವಾದ ವಾಕ್ಕಿನಿಂದ । ಈಳಾನಾಯ—ಪೂಜಿಸುವವನೂ । ಅವಸ್ಯವೇ—ರಕ್ಷಣೆಯನ್ನು ಇಚ್ಛಿಸುವವನೂ ಆದ ನನಗಾಗಿ । ಆ ಗಹಿ—ದಯಮಾಡು.

### ಭಾವಾರ್ಥ

ಅತ್ಯಂತ ಯುವಕನೂ, ದೇವದೂತನೂ, ಅತಿಶಯವಾದ ಯಜ್ಞಾರ್ಹತೆಯುಳ್ಳವನೂ, ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ ಆದ ಎಲೈ ಅಗ್ನಿಯೇ, ಸ್ತುತಿರೂಪವಾದ ವಾಕ್ಕಿನಿಂದ ಪೂಜಿಸುವವನೂ, ನಿನ್ನಿಂದ ರಕ್ಷಣೆಯನ್ನು ಇಚ್ಛಿಸುವವನೂ ಆದ ನನಗಾಗಿ ದಯಮಾಡು.

## English Translation

Youngest (of the gods), their messenger, their invoker, most deserving of worship, come, upon our praise, to him who offers (you) adoration, and is desirous of (your) protection.

ಸಂಹಿತಾಪಾಠಃ

ಅಂತರ್ಹ್ಯ॑ಗ್ನ ಈಯ॑ಸೇ ವಿದ್ವಾಂಜನ್ಮೋ॒ಭಯಾ॑ ಕವೇ ।

ದೂ॒ತೋ ಜನ್ಯೇ॑ವ ಮಿತ್ರ್ಯಃ॑ ॥ ೭ ॥

ಪದಪಾಠಃ

ಅಂತಃ । ಹಿ । ಅಗ್ನೇ । ಈಯ॑ಸೇ । ವಿದ್ವಾನ್ । ಜನ್ಮ॑ । ಉಭಯಾ॑ । ಕವೇ ।

ದೂತಃ । ಜನ್ಯಾ॑ಽಇವ । ಮಿತ್ರ್ಯಃ॑ ॥ ೭ ॥

ಸಾಯಣಭಾಷ್ಯಂ

ಹೇ ಕವೇ ಮೇಧಾವಿನ್ನಗ್ನೇ ಅಂತರ್ಜನಾನಾಂ ಹೃದಯ ಈಯಸೇ ಹಿ । ಗಚ್ಛಸಿ ಜಾನಾಸಿ ವಾ । ಹಿಃ ಸ ಹೋತಾ ಸೇದು ದೂತ್ಯಂ ಚಿಕಿತ್ವಾಁ ಅಂತರೀಯತೇ । ೪-೮-೪ । ಇತ್ಯಾದಿಮಂತ್ರಾಂತರಪ್ರಸಿದ್ಧಿ-ದ್ಯೋತನಾರ್ಥಃ । ಕೀದೃಶಸ್ತ್ವಂ । ಉಭಯಾ ಉಭಯವಿಧಾನಿ ಜನ್ಮ ಜನ್ಮಾನಿ ಯಷ್ಟವ್ಯಾನಾಂ ಯಜ-ಮಾನಾನಾಂ ಯಷ್ಟವ್ಯಾನಾಂ ದೇವಾನಾಂ ಚ ಸಂಬಂಧೀನಿ ವಿದ್ವಾನ್ ಜಾನನ್ ಸನ್ । ಈಯಸ ಇತಿ ಸಂಬಂಧಃ । ತತ್ರ ದೃಷ್ಟಾಂತಃ । ಜನ್ಯೇ ಜನೇಭ್ಯೋ ಹಿತೋ ಮಿತ್ರ್ಯೋ ವಿಶೇಷೇಣ ಮಿತ್ರೇಭ್ಯೋ ಹಿತೋ ದೂತ ಇವ । ಸ ಯಥಾ ಪ್ರಜಾನಾಂ ಚಿತ್ತವೃತ್ತಿಜ್ಞಾನಾಯ ರಾಜ್ಞಾ ಪ್ರೇರಿತಸ್ತಾಸಾಂ ಮನೋ ಜಾನಾತಿ ತದ್ವತ್ ತ್ವಮಪ್ಯಸ್ಮಾಕಮಂತರೀಯಸ ಇತ್ಯರ್ಥಃ ॥

ಪ್ರತಿಪದಾರ್ಥ

**ಕವೇ**—ಮೇಧಾವಿಯಾದ। **ಅಗ್ನೇ**—ಎಲೈ ಅಗ್ನಿಯೇ। **ಉಭಯಾ ಜನ್ಮ**—ಯಜಮಾನರ ಮತ್ತು ಯಜ್ಞಾರ್ಹರಾದ ದೇವತೆಗಳೆಂಬ ಎರಡು ಬಗೆಯವರ ಜನ್ಮಗಳನ್ನೂ । **ವಿದ್ವಾನ್**—ಚೆನ್ನಾಗಿ ತಿಳಿದವನಾಗಿ । **ಜನ್ಯಃ**—ಜನಕ್ಕೆ ಹಿತಕಾರಿಯೂ । **ಮಿತ್ರ್ಯಃ**—ಅದರಲ್ಲಿಯೂ ಮಿತ್ರರಿಗೆ ಉಪಕಾರವನ್ನುಂಟುಮಾಡುವವನೂ ಆದ । **ದೂತ ಇವ**—ದೂತನು ತನ್ನ ಸ್ವಾಮಿಯ ಮನಸ್ಸನ್ನರಿತು ಅವನ ಹಿತವನ್ನಾಚರಿಸುವಂತೆ (ನೀನೂ ಸಹ) । **ಅಂತಃ**—ಜನರ ಹೃದಯದಲ್ಲಿ । **ಈಯಸೇ ಹಿ**—ಪ್ರವೇಶಿಸಿ ಅದನ್ನು ಖಂಡಿತವಾಗಿಯೂ ಅರ್ಥಮಾಡಿಕೊಳ್ಳುತ್ತೀಯೆ ।

ಭಾವಾರ್ಥ

ಮೇಧಾವಿಯಾದ ಎಲೈ ಅಗ್ನಿಯೇ, ಯಜ್ಞಕರ್ತರ ಜನ್ಮವನ್ನೂ ಯಜ್ಞಾರ್ಹರಾದ ದೇವತೆಗಳ ಜನ್ಮವನ್ನೂ ಚೆನ್ನಾಗಿ ತಿಳಿದವನಾಗಿ ಜನಕ್ಕೆ ಹಿತಕಾರಿಯೂ, ಅದರಲ್ಲಿಯೂ ಮಿತ್ರರಿಗೆ ಉಪಕಾರವನ್ನುಂಟುಮಾಡುವವನೂ ಆದ

ದೂತನು ತನ್ನ ಸ್ವಾಮಿಯ ಮನಸ್ಸನ್ನರಿತು ಅವನ ಹಿತವನ್ನಾಚರಿಸುವಂತೆ ನೀನೂ ಸಹ ಜನರ ಹೃದಯದಲ್ಲಿ ಪ್ರವೇಶಿಸಿ ಅವರವರ ಇಂಗಿತಗಳನ್ನರಿತು ಅವರ ಇಷ್ಟಾರ್ಥವನ್ನು ನೆರವೇರಿಸು.

### English Translation

Sage Agni, you penetrate the innermost (man) knowing the birth of both (the worshipper and the worshipped) ; like a messenger favourable to men, especially to his friends.

### ವಿಶೇಷವಿಷಯಗಳು

**ಅಂತಃ ಹಿ ಅಗ್ನೇ ಈಯಸೇ**–ಎಲೈ ಅಗ್ನಿಯೇ ನೀನು ಜನರ ಹೃದಯವನ್ನು ಪ್ರವೇಶಿಸುತ್ತೀಯೆ, ಎಂದರೆ ಜನರ ಹೃದಯ ಅಥವಾ ಮನಸ್ಸಿನಲ್ಲಿರುವ ವಿಷಯಗಳನ್ನೆಲ್ಲಾ ತಿಳಿದುಕೊಳ್ಳುತ್ತೀಯೆ ಎಂದಭಿಪ್ರಾಯವು. ಇದೇ ಅರ್ಥವನ್ನು ಸೂಚಿಸುವುದೆಂದು.

**ಸ ಹೋತಾ ಸೇದು ದೂತ್ಯಂ ಚಿಕಿತ್ವಾँ ಅಂತರೀಯತೇ ।**

(ಋ. ಸಂ. ४–८–४)

ಎಂಬ ಋಕ್ಕನ್ನು ಭಾಷ್ಯಕಾರರು ಉದಾಹಣೆಯಾಗಿ ಕೊಟ್ಟಿದ್ದಾರೆ. ಆದರೆ ಆ ಋಕ್ಕಿನ ಭಾಷ್ಯದಲ್ಲಿ ಜನರ ಹೃದಯವನ್ನು ಹೊಕ್ಕು ಮನಸ್ಸಿನಲ್ಲಿರುವುದನ್ನು ತಿಳಿಯುತ್ತಾನೆ ಎಂಬ ಅಭಿಪ್ರಾಯವನ್ನು ಸೂಚಿಸಿಲ್ಲ. ಅದಕ್ಕೆ ಬದಲಾಗಿ **ಅಂತಃ ಈಯತೇ** ಎಂಬ ಶಬ್ದಗಳಿಗೆ **ಅಂತರ್ದ್ಯಾವಾಪೃಥಿವ್ಯೋರ್ಮಧ್ಯ ಈಯತೇ ಗಚ್ಛತಿ**— ಎಂದರೆ ದ್ಯಾವಾಪೃಥಿವಿಗಳ (ಭೂಮ್ಯಂತರಿಕ್ಷಗಳ) ಮಧ್ಯದಲ್ಲಿ ಹೋಗುತ್ತಾನೆ (ಸಂಚರಿಸುತ್ತಾನೆ) ಎಂಬರ್ಥವನ್ನು ವಿವರಿಸಿರುವರು. ಆದ್ದರಿಂದ ಇಲ್ಲಿ ಉದಾಹರಣೆಗಾಗಿ ಕೊಟ್ಟಿರುವ ಋಕ್ಕು ಪ್ರಕೃತಋಕ್ಕಿನ ಅರ್ಥವನ್ನು ಪ್ರತಿಪಾದಿಸುವುದಿಲ್ಲ.

**ಜನ್ಮ ಉಭಯಾ ವಿದ್ವಾನ್**— **ಉಭಯವಿಧಾನಿ ಜನ್ಮಾನಿ ಯಷ್ಟ್ವ್ಯಾಣಾಂ ಯಜಮಾನಾನಾಂ ಯಷ್ಟವ್ಯಾನಾಂ ದೇವಾನಾಂ ಚ ಸಂಬಂಧೀನಿ ಚ ಜಾನನ್**—ಇಲ್ಲಿ ಎರಡು ವಿಧವಾದ ಜನ್ಮಗಳನ್ನು ಅಗ್ನಿಯು ಬಲ್ಲವನೆಂದು ವರ್ಣಿಸಿದೆ. ಇದಕ್ಕೆ ಭಾಷ್ಯಕಾರರು ಯಜ್ಞಮಾಡತಕ್ಕ ಯಜಮಾನರ ಮತ್ತು ಯಜ್ಞದಲ್ಲಿ ಪೂಜಿಸಲ್ಪಡುವ ದೇವತೆಗಳ ಜನ್ಮ ಅಥವಾ ಉತ್ಪತ್ತಿಕ್ರಮವನ್ನು ಬಲ್ಲವನೆಂದು ಅರ್ಥವಿವರಣೆ ಮಾಡಿರುವರು.

**ದೂತೋ ಜನ್ಯೇವ ಮಿತ್ರ್ಯಃ**—ಇಲ್ಲಿ ಒಂದು ದೃಷ್ಟಾಂತವನ್ನು ಹೇಳಿದೆ. **ಜನೇಭ್ಯೋ ಹಿತೋ ವಿಶೇಷೇಣ ಮಿತ್ರೇಭ್ಯೋ ಹಿತೋ ದೂತ ಇವ। ಸ ಯಥಾ ಪ್ರಜಾನಾಂ ಚಿತ್ತವೃತ್ತಿಜ್ಞಾನಾಯ ರಾಜ್ಞಾ ಪ್ರೇರಿತಸ್ತಾಸಾಂ ಮನೋ ಜಾನಾತಿ ತದ್ವತ್ ತ್ವಮಪ್ಯಸ್ಮಾಕಮಂತರೀಯಸ ಇತ್ಯರ್ಥಃ ।** ಜನರಿಗೆ ಅದರಲ್ಲಿಯೂ ಸ್ನೇಹಿತರಾದವರಿಗೆ ಹಿತಚಿಂತಕನಾದ ದೂತನಂತೆ ಇರುತ್ತೀಯೆ ಎಂದು ಅಗ್ನಿಯನ್ನು ಸ್ತುತಿಸಿದೆ. ಹೇಗೆಂದರೆ ಲೋಕದಲ್ಲಿ ರಾಜನಿಂದ ಪ್ರೇರಿತನಾದ (ಕಳುಹಿಸಲ್ಪಟ್ಟ) ದೂತನು ಪ್ರಜೆಗಳ ಮನಸ್ಸನ್ನು ತಿಳಿಸಲು ಅವರ ಮಧ್ಯದಲ್ಲಿ ವ್ಯವಹರಿಸುತ್ತಾ ಅವರ ಇಂಗಿತಗಳನ್ನು ತಿಳಿದು ರಾಜನಿಗೆ ತಿಳಿಸುವಂತೆ ಅಗ್ನಿಯೂ ಸಹ ಜನರ ಮನಸ್ಸನ್ನು ಪ್ರವೇಶಿಸಿ ಹಿತಚಿಂತಕನಂತೆ ಅವರ ಮನೋಭಿಲಾಷೆಯನ್ನು ಉದ್ದಿಷ್ಟರಾದ ದೇವತೆಗಳಿಗೆ ತಿಳಿಯಪಡಿಸುವನೆಂದಭಿಪ್ರಾಯವು.

ಈ ಋಕ್ಕಿಗೆ ಒಂದು ವಿಧವಾಗಿ ಅರ್ಥವಾಗುವಂತೆ ವಿವರಣೆ ಮಾಡಿದ್ದರೂ ಸರಿಯಾದ ಅರ್ಥವು ಹೀಗೆಯೇ ಇರುವುದೆಂದು ಹೇಳುವುದಕ್ಕಾಗುವುದಿಲ್ಲ. ಮುಖ್ಯಾಭಿಪ್ರಾಯ ವಿಷಯದಲ್ಲಿ ಸಂಶಯಕ್ಕೆ ಅವಕಾಶವಿದ್ದೇ ಇರುವುದು

---

ಸಂಹಿತಾಪಾಠಃ

ಸ ವಿದ್ವಾ ಆ ಚ ಪಿಪ್ರಯೋ ಯಕ್ಷಿ ಚಿಕಿತ್ವ ಆನುಷಕ್ ।

ಆ ಚಾಸ್ಮಿನ್ತ್ಸತ್ಸಿ ಬರ್ಹಿಷಿ ॥ ೮ ॥

॥ ಪದಪಾಠಃ ॥

ಸಃ । ವಿದ್ವಾನ್ । ಆ । ಚ । ಪಿಪ್ರಯಃ । ಯಕ್ಷಿ । ಚಿಕಿತ್ವಃ । ಆನುಷಕ್ ।

ಆ । ಚ । ಅಸ್ಮಿನ್ । ಸತ್ಸಿ । ಬರ್ಹಿಷಿ ॥ ೮ ॥

ಸಾಯಣಭಾಷ್ಯಂ

ಹೇ ಅಗ್ನೇ ಸ ತ್ವಂ ವಿದ್ವಾನ್ ವಿಶೇಷಾಭಿಜ್ಞಃ ಸನ್ ಆ ಚ ಪಿಪ್ರಯಃ । ಸರ್ವತೋಽಸ್ಮಾನ್ಪೂರಯ ಚ ಕಾಮೈಃ । ಹೇ ಚಿಕಿತ್ವಶ್ಚೇತನಾವನ್ ಆನುಷಕ್ ಅನುಕ್ರಮೇಣ ಯಕ್ಷಿ । ಯಜ ದೇವಾನ್ । ಆಸತ್ಸಿ । ಆಸೀದ ಚಾಸ್ಮಿನ್ ಸ್ತೀರ್ಣೇ ಬರ್ಹಿಷಿ ॥

ಪ್ರತಿಪದಾರ್ಥ

ಸಃ—(ಎಲೈ ಅಗ್ನಿಯೇ) ನೀನು । ವಿದ್ವಾನ್—ಸಕಲವನ್ನೂ ತಿಳಿದವನಾಗಿ । ಆ ಚ—ಎಲ್ಲಾ ವಿಧದಲ್ಲಿಯೂ । ಪಿಪ್ರಯಃ—ನಮ್ಮ ಇಷ್ಟಾರ್ಥಗಳನ್ನು ನೆರವೇರಿಸು । ಚಿಕಿತ್ವಃ—ಪ್ರಾಜ್ಞನಾದ ನೀನು । ಆನುಷಕ್—ಅನುಕ್ರಮವಾಗಿ । ಯಕ್ಷಿ—(ದೇವತೆಗಳನ್ನು) ಆರಾಧಿಸು । ಅಸ್ಮಿನ್—ಇಲ್ಲಿ ಆಸ್ತೃತವಾದ । ಬರ್ಹಿಷಿ ಚ—ದರ್ಭಾಸನದ ಮೇಲೆಯೂ । ಆ ಸತ್ಸಿ—ಕುಳಿತುಕೊ.

ಭಾವಾರ್ಥ

ಎಲೈ ಅಗ್ನಿಯೇ, ಸರ್ವಜ್ಞನಾದ ನೀನು ನಮ್ಮ ಇಷ್ಟಾರ್ಥಗಳನ್ನು ಎಲ್ಲಾ ವಿಧದಲ್ಲಿಯೂ ನೆರವೇರಿಸು ಮತ್ತು ಅನುಕ್ರಮವಾಗಿ ದೇವತೆಗಳನ್ನು ಆರಾಧಿಸು. ಇಲ್ಲಿ ಆಸ್ತೃತವಾದ ದರ್ಭಾಸನದ ಮೇಲೆಯೂ ಕುಳಿತುಕೊ.

English Translation

Agni, you are all-wise ; fulfil (our desires) : you, who are intelligent, worship ( the gods) in order ; and sit down on this sacred grass.

। ವಿಶೇಷವಿಷಯಗಳು ।

ಆನುಷಕ್—ಅನುಕ್ರಮವಾಗಿ ಎಂದರ್ಥವು. ಈ ಶಬ್ದಕ್ಕೆ ಯಾಸ್ಕರು ಆನುಷಗಿತಿ ನಾಮಾನುಪೂರ್ವಸ್ಯಾನುಷಕ್ತಂ ಭವತಿ । ಸ್ತೃಣಂತಿ ಬರ್ಹಿರಾನುಷಕ್ ಇತ್ಯಪಿ ನಿಗಮೋ ಭವತಿ—ಆನುಷಕ್ ಎಂದರೆ ಒಂದಾದನಂತರ ಮತ್ತೊಂದು ಎಂಬ ಅರ್ಥವನ್ನು ಕೊಡುವ ಅನುಪೂರ್ವ, ಆನುಕ್ರಮ ಎಂಬ ಶಬ್ದಗಳ ಪರ್ಯಾಯವಾಚಿಯೆಂದು ಹೇಳಿ ಸ್ತೃಣಂತಿ ಬರ್ಹಿರಾನುಷಕ್ ಎಂಬ ಉದಾಹರಣೆಯನ್ನು ಕೊಟ್ಟಿರುವರು.

ಆ ಘಾ ಯೇ ಅಗ್ನಿಮಿಂಧತೇ ಸ್ತೃಣಂತಿ ಬರ್ಹಿರಾನುಷಕ್ ।
ಯೇಷಾಮಿಂದ್ರೋ ಯುವಾ ಸಖಾ ॥

(ಋ. ಸಂ. ೮-೪೫-೧)

ಈ ಉದಾಹರಣೆಯಲ್ಲಿ—ಮೊದಲು ಅಗ್ನಿಯನ್ನು ಹೊತ್ತಿಸುವರು. ಅನಂತರ ಬರ್ಹಿಸ್ಸೆಂಬ ದರ್ಭೆಯನ್ನು ಆಸನಾರ್ಥವಾಗಿ ಹರಡುವರು ಎಂದಿರುವುದು. ಇಲ್ಲಿ ಅಗ್ನಿಯನ್ನು ಹೊತ್ತಿಸುವುದು ಒಂದು ಕಾರ್ಯವು. ದರ್ಭೆಯನ್ನು ಹರಡುವುದು ಮತ್ತೊಂದು ಕಾರ್ಯವು. ಅಗ್ನಿಯನ್ನು ಹೊತ್ತಿಸುವ ಮೊದಲನೆಯ ಕಾರ್ಯವಾದನಂತರ ಎರಡನೆಯ ಕಾರ್ಯವಾದ ದರ್ಭೆಯನ್ನು ಹರಡುವುದು ನೆರವೇರಿಸಲ್ಪಡುವುದು. ಹೀಗೆ ಒಂದಾದನಂತರ ಮತ್ತೊಂದು ಕಾರ್ಯವನ್ನು ಕ್ರಮವಾಗಿ ಮಾಡುವ ಸಂದರ್ಭದಲ್ಲಿ ಆ ಕ್ರಮವನ್ನು ಸೂಚಿಸುವುದಕ್ಕಾಗಿ ಆನುಷಕ್ ಎಂಬ ಪದದ ಪ್ರಯೋಗವಿರುವುದು. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅಗ್ನಿಯು ನಮ್ಮ ಇಷ್ಟಾರ್ಥಗಳನ್ನು ನೆರವೇರಿಸುವುದು, ದೇವತೆಗಳನ್ನು ಆರಾಧಿಸುವುದು, ದರ್ಭೆಯಮೇಲೆ ಕುಳಿತುಕೊಳ್ಳುವುದು ಎಂಬ ಮೂರು ಕಾರ್ಯಗಳಿವೆ. ಅವುಗಳನ್ನು ಕ್ರಮವರಿತು ಮಾಡುವುದಕ್ಕಾಗಿ ಆನುಷಕ್ ಎಂಬ ಶಬ್ದವನ್ನು ಇಲ್ಲಿ ಉಪಯೋಗಿಸಿದೆ.

---

## ಏಳನೆಯ ಸೂಕ್ತವು.

---

ಸಾಯಣಭಾಷ್ಯಂ

ಶ್ರೇಷ್ಠಂ ಯವಿಷ್ಠೇತಿ ಷಡೃಚಂ ಸಪ್ತಮಂ ಸೂಕ್ತಂ ಸೋಮಾಹುತ್ಯಾರ್ಷಮಾಗ್ನೇಯಂ ಗಾಯತ್ರಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ಗಾಯತ್ರೇ ಛಂದಸ್ಯಸ್ಯ ವಿನಿಯೋಗಃ ಪೂರ್ವಸೂಕ್ತ ಏವೋಕ್ತಃ ॥ ಶ್ರವಣಾಕರ್ಮಣ್ಯಾದ್ಯಾ ವಿನಿಯುಕ್ತಾ ॥

ಅನುವಾದವು—ಶ್ರೇಷ್ಠಂ ಯವಿಷ್ಠ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಸೋಮಾಹುತಿರ್ಭಾರ್ಗವನೆಂಬುವನು ಋಷಿಯು ; ಅಗ್ನಿಯು ದೇವತೆಯು ; ಗಾಯತ್ರೀ ಛಂದಸ್ಸು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳ ಪಠನಕಾಲದಲ್ಲಿ ಗಾಯತ್ರೀ ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ (ಹಿಂದಿನ ಸೂಕ್ತದ ಪೀಠಿಕೆಯಲ್ಲಿಯೇ) ಹೇಳಿರುವುದು. ಶ್ರವಣಾಕರ್ಮದಲ್ಲಿ ಈ ಸೂಕ್ತದ ಮೊದಲನೆಯ ಋಕ್ಕಿನ ವಿನಿಯೋಗವಿರುವುದು.

———:o:———

॥ ಓಂ ॥

## ಸೂಕ್ತ—೭

॥ ಮಂಡಲ—೨ ॥ ಅನುವಾಕ— ೧॥ ಸೂಕ್ತ—೭ ॥

॥ ಅಷ್ಟಕ— ೨ ॥ ಅಧ್ಯಾಯ— ೫ ॥ ವರ್ಗ- ೨೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೬ ॥

ಋಷಿಃ—ಸೋಮಾಹುತಿರ್ಭಾರ್ಗವಃ ॥

ದೇವತಾ—ಅಗ್ನಿ: ॥

ಛಂದಃ—ಗಾಯತ್ರೀ ।

---

ಸಂಹಿತಾಪಾಠಃ

ಶ್ರೇಷ್ಠಂ ಯವಿಷ್ಠ ಭಾರತಾಗ್ನೇ ದ್ಯುಮಂತಮಾ ಭರ ।

ವಸೋ ಪುರುಸ್ಪೃಹಂ ರಯಿಂ ॥ ೧ ॥

ಪದಪಾಠಃ

ಶ್ರೇಷ್ಠಂ । ಯವಿಷ್ಠ । ಭಾರತ । ಅಗ್ನೇ । ದ್ಯುಽಮಂತಂ । ಆ । ಭರ ।

ವಸೋ ಇತಿ । ಪುರುಽಸ್ಪೃಹಂ । ರಯಿಂ ॥ ೧ ॥

ಸಾಯಣಭಾಷ್ಯಂ

ಹೇ ಅಗ್ನೇ ಯವಿಷ್ಠ ಯುವತ್ತಮ ಹೇ ಭಾರತ । ಭರತಾ ಋತ್ವಿಜಃ । ತೇಷಾಂ ಸಂಬಂಧೀ ಭಾರತಃ । ತೇಽಧ್ವರ್ಯ್ವಾದಿಭಿರ್ಮಂಥನಹವಿಃಸ್ತೋತ್ರಾದಿನಾ ವ್ಯಾಪ್ರಿಯಮಾಣತ್ವಾತ್ । ತಾದೃಶ ಹೇ ವಸೋ ವಾಸಕ ವ್ಯಾಪ್ತ ವಾ ಏವಂರೂಪಾಗ್ನೇ ಶ್ರೇಷ್ಠಮತಿಪ್ರಶಸ್ಯಂ ದ್ಯುಮಂತಂ ದೀಪ್ತಿಮಂತಂ ಪುರುಸ್ಪೃಹಂ ಬಹುಭಿರರ್ಥಿಭಿಃ ಸ್ಪೃಹಣೀಯಂ ರಯಿಮಾಭರ । ಆಹರ ॥

ಪ್ರತಿಪದಾರ್ಥ

ಯವಿಷ್ಠ—ಅತ್ಯಂತ ಯುವಕನೂ । ಭಾರತ—ಋತ್ವಿಕ್ಕುಗಳ ಬಂಧುವೂ । ವಸೋ—ವಾಸಸ್ಥಾನವನ್ನು ಕೊಡುವವನೂ ಆದ । ಅಗ್ನೇ—ಎಲೈ ಅಗ್ನಿಯೇ । ಶ್ರೇಷ್ಠಂ—ಅತಿಪ್ರಶಸ್ಯವಾದುದೂ । ದ್ಯುಮಂತಂ—ಪ್ರಕಾಶಮಾನವಾದುದೂ । ಪುರುಸ್ಪೃಹಂ—ಅನೇಕರಿಂದ ಅಪೇಕ್ಷಿತವಾದುದೂ ಆದ । ರಯಿಂ—ಧನವನ್ನು । ಆ ಭರ—ತೆಗೆದುಕೊಂಡು ಬಾ.

ಭಾವಾರ್ಥ

ಅತ್ಯಂತ ಯುವಕನೂ, ಋತ್ವಿಕ್ಕುಗಳ ಬಂಧುವೂ, ವಾಸಸ್ಥಾನವನ್ನು ಕೊಡುವವನೂ ಆದ ಎಲೈ ಅಗ್ನಿಯೇ, ಅತಿಪ್ರಶಸ್ಯವಾದುದೂ, ಪ್ರಕಾಶಮಾನವಾದುದೂ, ಅನೇಕರಿಂದ ಅಪೇಕ್ಷಿತವಾದುದೂ ಆದ ಧನವನ್ನು ನಮಗಾಗಿ ತೆಗೆದುಕೊಂಡು ಬಾ.

English Translation

Youngest (of the gods), Agni, descendant of Bharata, granter of dwellings, bring (to us) excellent, splendid, and enviable riches.

ವಿಶೇಷವಿಷಯಗಳು

ಭಾರತ—ಭಾರತಶಬ್ದವು ಋತ್ವಿಙ್ನಾಮಗಳಲ್ಲಿ ಪಠಿತವಾಗಿರುವುದು (ನಿ. ೩-೧೮). ಭಾರತ ಎಂದರೆ ಋತ್ವಿಜನು. ಈ ಶಬ್ದವು ಭೃಞ್ ಭರಣೇ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಯಜ್ಞದ್ವಾರೇಣ ನ್ಯೈನ್ ಸಂಭರತೀತಿ—ಯಜ್ಞವನ್ನು ಮಾಡಿಸಿ ಆ ಮೂಲಕ ಮನುಷ್ಯರನ್ನು (ಯಜಮಾನರನ್ನು) ಉದ್ಧರಿಸುವವನು. ಆದ್ದರಿಂದ ಈ ಋತ್ವಿಜನಿಗೆ ಭಾರತನೆಂದು ಹೆಸರು ಎಂದು ಸ್ಕಂದಸ್ವಾಮಿಗಳ ವಿವರಣೆಯು; ನಿರುಕ್ತ ವ್ಯಾಖ್ಯಾಕಾರರಾದ ದುರ್ಗಾಚಾರ್ಯರು ಭ್ರಿಯಂತೇ ದಕ್ಷಿಣಾಭಿಸ್ತೇ ಇತಿ ಭಾರತಾಃ—ಯಜ್ಞಮಾಡಿಸಿ ಅದಕ್ಕಾಗಿ ದಕ್ಷಿಣಾದಿಗಳಿಂದ ತೃಪ್ತಿಯನ್ನು ಪಡೆಯುವವರಾದ್ದರಿಂದ ಈ ಋತ್ವಿಜರಿಗೆ ಭಾರತಾ ಎಂದು ಹೆಸರು ಎಂದೂ ಭರತಶಬ್ದಕ್ಕೆ ಎರಡು ವಿಧವಾದ ಅವಯವಾರ್ಥವಿರುವುದು.

—— :0: ——

ಸಂಹಿತಾಪಾಠಃ

ಮಾ ನೋ ಅರಾತಿರೀಶತ ದೇವಸ್ಯ ಮರ್ತ್ಯಸ್ಯ ಚ ।
ಪರ್ಷಿ ತಸ್ಯಾ ಉತ ದ್ವಿಷಃ ॥ ೨ ॥

ಪದಪಾಠಃ

ಮಾ । ನಃ । ಅರಾತಿಃ । ಈಶತ । ದೇವಸ್ಯ । ಮರ್ತ್ಯಸ್ಯ । ಚ ।
ಪರ್ಷಿ । ತಸ್ಯಾಃ । ಉತ । ದ್ವಿಷಃ ॥ ೨ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವದನುಗ್ರಹಾನ್ನೋಽಸ್ಮಾನರಾತಿರದಾನಂ ಶತ್ರುತ್ವಂ । ಯದ್ವಾ ಛಂದಸ್ಯರಾತಿಶಬ್ದಃ ಶತ್ರುವಾಚೀ ಸ್ತ್ರೀಲಿಂಗೋ ಭವತಿ । ಅದಾತಾ ಶತ್ರುರ್ಮೇಶತ । ಪರಾಭವಿತುಂ ಶಕ್ತೋ ಮಾ ಭೂತ್ ।

**ಮಾ ವಿಷಯೀಕುರ್ಯಾತ್ । ಅರಾತಿರ್ವಿಶೇಷ್ಯತೇ । ದೇವಸ್ಯ ಚ ಮರ್ತ್ಯಸ್ಯ ಚ ಸಂಬಂಧಿನೀ ತೈಃ ಕಾರಿತಾ । ಉತ ಅಪಿ ಚ ತಸ್ಯಾ ಉಭಯವಿಧಾಯಾ ದ್ವಿಷೋಽಸ್ಮದರಾತೇಃ ಪರ್ಷಿ । ಪೂರಯ ॥**

### ಪ್ರತಿಪದಾರ್ಥ

( ಎಲೈ ಅಗ್ನಿಯೇ ) **ದೇವಸ್ಯ**—ದೇವತೆಗಳ ಗುಂಪಿಗೆ ಸೇರಿದವನಾಗಲಿ । **ಮರ್ತ್ಯಸ್ಯ ಚ**—ಮಾನವರ ಗುಂಪಿಗೆ ಸೇರಿದವನಾಗಲಿ ಆದ । **ಅರಾತಿಃ**—ಶತ್ರುವು । **ನಃ**—ನಮ್ಮನ್ನು । **ಮಾ ಈಶತ**—ಪ್ರತಿಭಟಿಸಿ ಸೋಲಿಸಲು ಸಮರ್ಥನಾಗದಿರಲಿ । **ಉತ**—ಮತ್ತು । **ತಸ್ಯಾಃ**—ಆ ಎರಡು ಬಗೆಯ । **ದ್ವಿಷಃ**—ಶತ್ರುಗಳಿಂದಲೂ । **ಪರ್ಷಿ**—ನಮ್ಮನ್ನು ರಕ್ಷಿಸು ।

### ಭಾವಾರ್ಥ

ಎಲೈ ಅಗ್ನಿಯೇ, ದೇವತೆಗಳ ಗುಂಪಿಗೆ ಸೇರಿದವನಾಗಲಿ ಅಥವಾ ಮಾನವ ಗುಂಪಿಗೆ ಸೇರಿದವನಾಗಲಿ ಆದ ಶತ್ರುವು ನಮ್ಮನ್ನು ಪ್ರತಿಭಟಿಸಿ ಸೋಲಿಸಲು ಸಮರ್ಥನಾಗದಿರಲಿ, ಮತ್ತು ಆ ಎರಡು ಬಗೆಯ ಶತ್ರುಗಳಿಂದಲೂ ನಮ್ಮನ್ನು ರಕ್ಷಿಸು.

### English Translation

Let no enemy prevail against us, whether of god or man ; protect us from both such foes.

### ವಿಶೇಷವಿಷಯಗಳು

**ಅರಾತಿಃ— ಅರಾತಿರದಾನಂ । ಯದ್ವಾ ಛಂದಸ್ಯರಾತಿಶಬ್ದಃ ಶತ್ರುವಾಚೀ ಸ್ತ್ರೀಲಿಂಗೋ ಭವತಿ ।** ಎಂದರೆ ಯಾರಿಗೂ ಏನನ್ನೂ ಕೊಡದಿರುವ ಅಥವಾ ದೇವತೆಗಳಿಗೆ ಹವಿರಾದಿಗಳನ್ನು ಕೊಡದಿರುವ ಮನುಷ್ಯನಿಗೆ ಅರಾತಿಯೆಂದು ಹೆಸರು. ಅಥವಾ ವೇದದಲ್ಲಿ ಅರಾತಿ ಶಬ್ದವು ಶತ್ರುವೆಂಬರ್ಥದಲ್ಲಿ ವಿಶೇಷವಾಗಿ ಉಪಯೋಗಿಸಲ್ಪಡುವುದು. ಆಗ ಅರಾತಿಶಬ್ದವು ಸ್ತ್ರೀಲಿಂಗವು ಎಂದು ಭಾಷ್ಯಕಾರರ ವಿವರಣೆ ಇರುವುದು ಯಾಸ್ಕರು ನಿರುಕ್ತದಲ್ಲಿ— **ಅರಾತಯೋಽದಾನಕರ್ಮಾಣಃ** -- ದಾನವನ್ನು ಮಾಡದಿರುವವರಿಗೆ ಅರಾತಿಗಳೆಂದೂ. ( ನಿ. ೩-೧೧ ) ಅಥವಾ **ಅರಾತೀಃ— ಅಮಿತ್ರಾನದಾನಾನಿತಿ ವಾ**—ಎಂದರೆ ಮಿತ್ರರಲ್ಲದ ಶತ್ರುಗಳು ಅಥವಾ ದಾನಮಾಡದಿರುವವರು (ನಿ. ೧೧-೧) ಎಂದು ಎರಡು ವಿಧವಾದ ಅರ್ಥವನ್ನು ಹೇಳಿರುವರು.

**ದೇವಸ್ಯ**—ದೇವಶಬ್ದಕ್ಕೆ ಯಾಸ್ಕರು **ದೇವೋ ದಾನಾದ್ವಾ, ದೀಪನಾದ್ವಾ, ದ್ಯೋತನಾದ್ವಾ, ದ್ಯುಸ್ಥಾನೋ ಭವತೀತಿ ವಾ**—ಎಂದರೆ ಕೊಡುವವನು, ಬೆಳಗುವವನು, ತೇಜಸ್ಸಿನಿಂದ ಪ್ರಕಾಶಿಸುವವನು ಅಥವಾ ಸ್ವರ್ಗದಲ್ಲಿ ವಾಸಿಸುವನು, ಆದ್ದರಿಂದ ಇವನಿಗೆ ದೇವನೆಂಬ ಹೆಸರು ಎಂದು ನಿರ್ವಚನವನ್ನು ಹೇಳಿರುವರು. (ನಿ. ೭-೧೫).

**ಮರ್ತ್ಯಸ್ಯ— ಮೃಜ್ ಪ್ರಾಣತ್ಯಾಗೇ**—ಎಂಬ ಧಾತುವಿನಿಂದ-ನಿಷ್ಪನ್ನವಾದ ಈ ಶಬ್ದಕ್ಕೆ **ಮ್ರಿಯಂತ ಇತಿ ಮರ್ತ್ಯಾಃ**—ಸಾವಿಗೀಡಾಗುವವರಾದ್ದರಿಂದ ಮನುಷ್ಯರಿಗೆ ಮರ್ತ್ಯರೆಂದು ಹೆಸರು. ದೇವತೆಗಳು ಅಮರ್ತ್ಯರೆಂದು ಹೇಳಲ್ಪಡುವರು. ಋಗ್ವೇದದಲ್ಲಿ ಮರ್ತ್ಯ (ಮರ್ತ) ಮತ್ತು ಅಮರ್ತ್ಯಶಬ್ದಗಳ ಪ್ರಯೋಗವು ವಿಶೇಷವಾಗಿದೆ.

ಸಂಹಿತಾಪಾಠಃ

ವಿಶ್ವಾ ಉತ ತ್ವಯಾ ವಯಂ ಧಾರಾ ಉದನ್ಯಾ ಇವ ।

ಅತಿ ಗಾಹೇಮಹಿ ದ್ವಿಷಃ ॥ ೩ ॥

ಪದಪಾಠಃ

ವಿಶ್ವಾಃ । ಉತ । ತ್ವಯಾ । ವಯಂ । ಧಾರಾಃ । ಉದನ್ಯಾಃಽಇವ ।

ಅತಿ । ಗಾಹೇಮಹಿ । ದ್ವಿಷಃ ॥ ೩ ॥

ಸಾಯಣಭಾಷ್ಯಂ

ಉತ ಅಪಿ ಚ ಹೇ ಅಗ್ನೇ ವಯಂ ತ್ವದನುಗ್ರಹಾದ್ವಿಶ್ವಾ ದ್ವಿಷಃ ಸರ್ವಾನಪಿ ದ್ವೇಷ್ಟ್ರ್ಯಾನ್ ಉದನ್ಯಾ ಧಾರಾ ಇವ ಉದಕಸಂಬಂಧಿನೀರ್ಧಾರಾ ಅಲ್ಪಸ್ರುತೀರಿವ ತ್ಮನಾತ್ಮನೈವಾನ್ಯನಿರಪೇಕ್ಷೇಣಾತಿ-ಗಾಹೇಮಹಿ । ಅತಿಕ್ರಮ್ಯ ಗಚ್ಛೇಮ ॥

ಪ್ರತಿಪದಾರ್ಥ

ಉತ—ಮತ್ತು । ವಯಂ—ನಾವು । ಉದನ್ಯಾಃ ಧಾರಾಃ ಇವ—ಸ್ವಲ್ಪ ನೀರು ಮಾತ್ರ ಹರಿಯುತ್ತಿರುವ ಹಳ್ಳಗಳನ್ನು ಅನಾಯಾಸವಾಗಿ ದಾಟುವಂತೆ । ವಿಶ್ವಾಃ ದ್ವಿಷಃ—ನಮ್ಮ ಸಮಸ್ತ ಶತ್ರುಗಳನ್ನೂ । ತ್ವಯಾ—ನಿನ್ನ ಅನುಗ್ರಹದಿಂದ । ಅತಿ ಗಾಹೇಮಹಿ—ಸೋಲಿಸಿ ದಾಟಲು ಶಕ್ತರಾಗುವಂತಾಗಲಿ ।

ಭಾವಾರ್ಥ

ಎಲೈ ಅಗ್ನಿಯೇ (ಜನರು) ಸ್ವಲ್ಪ ನೀರಿನಿಂದ ಪ್ರವಹಿಸುವ ಸಣ್ಣ ತೊರೆಗಳನ್ನು ಅಥವಾ ಹಳ್ಳಗಳನ್ನು ಅನಾಯಾಸವಾಗಿ ದಾಟಿಹೋಗುವಂತೆ, ನಾವೂ ಸಹ ನಿನ್ನ ಅನುಗ್ರಹದಿಂದ ನಮ್ಮ ಸಮಸ್ತ ಶತ್ರುಗಳನ್ನೂ ಸೋಲಿಸುವ ಶಕ್ತಿಯನ್ನು ಪಡೆಯುವಂತಾಗಲಿ.

## English Translation

Let us, through your favour, overwhelm all our foes, like torrents of water.

ವಿಶೇಷವಿಷಯಗಳು

ಧಾರಾ ಉದನ್ಯಾ ಇವ—ಬಹಳವಾದ ನೀರಿನಿಂದ ಆಳವಾಗಿ ಮತ್ತು ರಭಸದಿಂದ ಪ್ರವಹಿಸುತ್ತಿರುವ ನದಿಗಳನ್ನು ಜನರು ಸುಲಭವಾಗಿ ದಾಟಲಾಗುವುದಿಲ್ಲ. ಆದರೆ ಅಲ್ಪಸ್ವಲ್ಪ ನೀರುಮಾತ್ರವಿದ್ದು ಮೆಲ್ಲಗೆ ಹರಿಯುತ್ತಿರುವ ಸಣ್ಣದಾದ ಹಳ್ಳವನ್ನು ಜನರು ಅನಾಯಾಸವಾಗಿ ಹಾದುಹೋಗುವರು. ಅದರಂತೆ ನಾವು ನಮ್ಮ ಶತ್ರುಗಳನ್ನು ಅನಾಯಾಸವಾಗಿ ಸೋಲಿಸುವಂತಾಗಲಿ ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ.

———:o:———

ಸಂಹಿತಾಪಾಠಃ

ಶುಚಿಃ ಪಾವಕ ವಂದ್ಯೋಽಗ್ನೇ ಬೃಹದ್ವಿ ರೋಚಸೇ ।

ತ್ವಂ ಘೃತೇಭಿರಾಹುತಃ ॥ ೪ ॥

ಪದಪಾಠಃ

ಶುಚಿಃ । ಪಾವಕ । ವಂದ್ಯಃ । ಅಗ್ನೇ । ಬೃಹತ್ । ವಿ । ರೋಚಸೇ ।

ತ್ವಂ । ಘೃತೇಭಿಃ । ಆऽಹುತಃ ॥ ೪ ॥

ಸಾಯಣಭಾಷ್ಯಂ

ಹೇ ಪಾವಕ ಶೋಧಕಾಗ್ನೇ ಶುಚಿಃ ಶುದ್ಧೋ ವಂದ್ಯೋ ನಮಸ್ಕಾರ್ಯಃ ಸನ್ ಬೃಹತ್ ಮಹತ್ ಅತ್ಯಧಿಕಂ ವಿರೋಚಸೇ । ವಿವಿಧಂ ದೀಪ್ಯಸೇ । ಯತಸ್ತ್ವಂ ಘೃತೇಭಿರ್ಘೃತೈರಾಹುತಃ । ಸಮಂತಾತ್ಸಿಕ್ತಃ । ಅತೋ ವಿರೋಚಸೇ ॥

ಪ್ರತಿಪದಾರ್ಥ

ಪಾವಕ—ಶುದ್ಧಿಕಾರಕನಾದ । ಅಗ್ನೇ—ಎಲೈ ಅಗ್ನಿಯೇ । ಶುಚಿಃ—ಶುದ್ಧನಾಗಿಯೂ । ವಂದ್ಯಃ—ನಮಸ್ಕಾರಕ್ಕೆ ಅರ್ಹನಾಗಿಯೂ ಆದ । ತ್ವಂ—ನೀನು । ಘೃತೇಭಿಃ—ಆಜ್ಯಾಹುತಿಗಳಿಂದ । ಆಹುತಃ—ಅಭಿಷಿಕ್ತನಾಗಿ । ಬೃಹತ್—ಅತ್ಯಧಿಕವಾಗಿ । ವಿ ರೋಚಸೇ—ನಾನಾವಿಧವಾಗಿ ಪ್ರಕಾಶಿಸುತ್ತೀಯೆ ।

ಭಾವಾರ್ಥ

ಶುದ್ಧಿಕಾರಕನಾದ ಎಲೈ ಅಗ್ನಿಯೇ, ಶುದ್ಧನಾಗಿಯೂ, ನಮಸ್ಕಾರಕ್ಕೆ ಅರ್ಹನಾಗಿಯೂ ಇರುವ ನೀನು ಆಜ್ಯಾಹುತಿಗಳಿಂದ ಅಭಿಷಿಕ್ತನಾಗಿ ಅತ್ಯಧಿಕವಾಗಿಯೂ ನಾನಾವಿಧವಾಗಿಯೂ ಪ್ರಕಾಶಿಸುತ್ತೀಯೆ.

English Translation

Purifier, Agni, holy, adorable, you shine exceedingly when (you are) worshipped with (oblations of) butter.

ವಿಶೇಷವಿಷಯಗಳು

ಪಾವಕ, ಶುಚಿಃ, ವಂದ್ಯಃ—ಅಗ್ನಿಯಲ್ಲಿ ದಹಿಸಲ್ಪಡುವುದರಿಂದ ಅನೇಕ ಪದಾರ್ಥಗಳು ಶುದ್ಧಿಯಾಗುವವು. ನೀರನ್ನು ಕಾಯಿಸುವುದರಿಂದ ನೀರಿನಲ್ಲಿರುವ ದೋಷಗಳೆಲ್ಲವೂ ನಾಶವಾಗಿ ಪಾನಕ್ಕೆ ಯೋಗ್ಯವಾಗುವುದು. ಹಾಗೆಯೇ ಕ್ರಿಮಿಕೀಟಾದಿಗಳಿಂದಲೂ ರೋಗಾಣುಗಳಿಂದಲೂ ವ್ಯಾಪ್ತವಾದ ವಸ್ತು ಅಥವಾ ಪ್ರದೇಶಗಳನ್ನು ಅಗ್ನಿಯಿಂದ ಶುದ್ಧಪಡಿಸಬಹುದು. ಇತ್ಯಾದಿ ಅನೇಕ ಶುದ್ಧಿಕಾರ್ಯಗಳು ಅಗ್ನಿಯಿಂದ ನಿರ್ವಹಿಸಲ್ಪಡುವುದರಿಂದ ಅಗ್ನಿಯನ್ನು ಪಾವಕ-

ಶುದ್ಧಗೊಳಿಸುವವನನು, **ಶುಚಿಃ**—ಸ್ವಯಂ ಶುದ್ಧನಾದವನು, **ವಂದ್ಯಃ**—ಆದುದರಿಂದಲೇ ನಮಸ್ಕಾರಾರ್ಹನು ಎಂಬ ವಿಶೇಷಣಗಳಿಂದ ಸ್ತುತಿಸಲಾಗಿದೆ

**ಅಗ್ನೇ ಬೃಹತ್ ವಿರೋಚಸೇ ತ್ವಂ ಘೃತೇಭಿಃ ಆಹುತಃ**—ಈ ವಾಕ್ಯಕ್ಕೆ ಅರ್ಥವು ಸ್ಪಷ್ಟವಾಗಿಯೇ ಇದೆ. ಅಗ್ನಿಯಲ್ಲಿ ಆಜ್ಯ, ಸಮಿತ್ತು, ಹವಿಸ್ಸು, ಕಾಷ್ಠ ಮುಂತಾದವುಗಳನ್ನು ಹಾಕಿ ಹೋಮಮಾಡುವುದರಿಂದ ಅವರಲ್ಲಿಯೂ ಆಜ್ಯಾಹುತಿಯಿಂದ (ತುಪ್ಪವನ್ನು ಹೋಮಮಾಡುವುದರಿಂದ) ಅಗ್ನಿಯ ಜ್ವಾಲೆಗಳು ವೃದ್ಧಿಗೊಂಡು ಬಹಳವಾದ ಕಾಂತಿಯಿಂದ ಪ್ರಕಾಶಿಸುವವು. ಆದುದರಿಂದ ಎಲೈ ಅಗ್ನಿಯೇ, ಆಜ್ಯಾಹುತಿಯಿಂದ ನೀನು ಬಹಳವಾಗಿ ಬೆಳಗುತ್ತೀಯೆ ಎಂದು ಅಗ್ನಿಯನ್ನು ಸ್ತುತಿಸಲಾಗಿದೆ.

---

**ಸಂಹಿತಾಪಾಠಃ**

**ತ್ವಂ ನೋ ಅಸಿ ಭಾರತಾಗ್ನೇ ವಶಾಭಿರುಕ್ಷಭಿಃ ।**

**ಅಷ್ಟಾಪದೀಭಿರಾಹುತಃ ॥ ೫ ॥**

**ಪದಪಾಠಃ**

**ತ್ವಂ । ನಃ । ಅಸಿ । ಭಾರತ । ಅಗ್ನೇ । ವಶಾಭಿಃ । ಉಕ್ಷಽಭಿಃ ।**

**ಅಷ್ಟಾಽಪದೀಭಿಃ । ಆಽಹುತಃ ॥ ೫ ॥**

**ಸಾಯಣಭಾಷ್ಯಂ**

**ಹೇ ಭಾರತ ಋತ್ವಿಜಾಂ ಪುತ್ರಸ್ಥಾನೀಯೋಗ್ನೇ ನೋಽಸ್ಮದೀಯಸ್ತ್ವಂ ವಶಾಭಿರ್ವಂಧ್ಯಾಭಿರ್ಗೋಭಿಃ ಉಕ್ಷಭಿಃ ಸೇಕ್ತೃಭಿರ್ಬಲೀವರ್ದೈಃ ಅಷ್ಟಾಪದೀಭಿರ್ಗರ್ಭಿಣೀಭಿಶ್ಚಾಹುತ ಆರಾಧಿತೋಽಸಿ ॥**

**ಪ್ರತಿಪದಾರ್ಥ**

**ಭಾರತ**—ಋತ್ವಿಕ್ಕುಗಳಿಗೆ ಪುತ್ರಸ್ಥಾನೀಯನಾದ । **ಅಗ್ನೇ**—ಎಲೈ ಅಗ್ನಿಯೇ । **ನಃ**—ನಮ್ಮ ಸಂಬಂಧಿಯಾದ । **ತ್ವಂ**—ನೀನು । **ವಶಾಭಿಃ**—ಬಂಜೆಯಾದ ಗೋವುಗಳಿಂದಲೂ । **ಉಕ್ಷಭಿಃ**—ಹೋರಿಗಳಿಂದಲೂ । **ಅಷ್ಟಾಪದೀಭಿಃ**—ಗರ್ಭಿಣೀಪಶುಗಳಿಂದಲೂ । **ಆಹುತಃ ಅಸಿ**—(ಇವುಗಳನ್ನು ಅರ್ಪಿಸುವುದರಿಂದ) ಆರಾಧಿತನಾಗಿದ್ದೀಯೆ.

**ಭಾವಾರ್ಥ**

ಋತ್ವಿಕ್ಕುಗಳಿಗೆ ಪುತ್ರಸ್ಥಾನೀಯನಾದ ಎಲೈ ಅಗ್ನಿಯೇ, ನಮ್ಮ ಸಂಬಂಧಿಯಾದ ನೀನು ವಂಧ್ಯಾಗೋವುಗಳಿಂದಲೂ, ಹೋರಿಗಳಿಂದಲೂ ಮತ್ತು ಗರ್ಭಿಣೀಪಶುಗಳಿಂದಲೂ ಎಂದರೆ ಇವುಗಳನ್ನು ಆಹುತಿರೂಪದಲ್ಲಿ ಅರ್ಪಿಸುವುದರಿಂದ ನೀನು ಆರಾಧಿತನಾಗಿದ್ದೀಯೆ.

## English Translation

Agni, descendant of Bharata, you are entirely ours, when sacrificed to with pregnant cows, with barren cows, or bulls.

### ವಿಶೇಷವಿಷಯಗಳು

**ಭಾರತ**— ಭಾರತಶಬ್ದವು ಋತ್ವಿಙ್ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೮) ಇಲ್ಲಿ ಭಾರತಶಬ್ದಕ್ಕೆ **ಋತ್ವಿಜಾಂ ಪುತ್ರಸ್ಥಾನೀಯ**— ಋತ್ವಿಕ್ಕುಗಳಿಗೆ ಪುತ್ರನಂತಿರುವ ಎಲೈ ಅಗ್ನಿಯೇ ಎಂದು ಭಾಷ್ಯಕಾರರು ಅರ್ಥ-ವಿವರಣೆ ಮಾಡಿರುವರು. ಯಜ್ಞಾರಂಭದಲ್ಲಿ ಋತ್ವಿಕ್ಕುಗಳು ಅರಣಿಗಳಲ್ಲಿ ಮಥನಮಾಡಿ ಅಗ್ನಿಯನ್ನು ಉತ್ಪತ್ತಿ ಮಾಡುವುದರಿಂದ ಋತ್ವಿಕ್ಕುಗಳಿಗೆ ಅಗ್ನಿಯು ಪುತ್ರಸ್ಥಾನೀಯನಾಗುವನು ಎಂದು ಹೇಳಿರುವುದು ಸಮಂಜಸವಾಗಿದೆ.

**ವಶಾಭಿಃ ಉಕ್ಷಭಿಃ ಅಷ್ಟಾಪದೀಭಿಃ ಆಹುತಃ**— **ವಶಾಭಿರ್ವಂಧ್ಯಾಭಿರ್ಗೋಭಿಃ ಉಕ್ಷಭಿಃ ಸೇಕ್ತೃಭಿ-ರ್ಬಲಿವರ್ದೈಃ ಅಷ್ಟಾಪದೀಭಿರ್ಗರ್ಭಿಣೀಭಿಶ್ಚಾಹುತಃ ।** ಎಂದರೆ ಎಲೈ ಅಗ್ನಿಯೇ, ನಾವು ನಿನಗೆ ಅರ್ಪಿಸುವ ಬಂಜೆಯಾದ ಗೋವುಗಳಿಂದಲೂ, ಸೇಚನಸಾಮರ್ಥ್ಯವುಳ್ಳ ಹೋರಿಗಳಿಂದಲೂ, ಗರ್ಭದಿಂದ ಕೂಡಿದ ಹಸುಗಳಿಂದಲೂ ಆರಾಧಿಸಲ್ಪಡುವೆ ಎಂದು ಸಾಯಣರು ಅರ್ಥವಿವರಣೆ ಮಾಡಿರುವರು. ಪಶುಗಳಲ್ಲಿ ಈರೀತಿ ಮೂರುವಿಧವಿರುವು ದಾದರೂ ಗೋವುಗಳನ್ನು ಆಹುತಿಯಾಗಿ ಅಗ್ನಿಯಲ್ಲಿ ಅರ್ಪಿಸುವುದು ಎಲ್ಲಿಯೂ ಕಂಡುಬಂದಿಲ್ಲ. ಅಥವಾ ವಶಾಭಿಃ ಮೊದಲಾದ ಶಬ್ದಗಳಿಗೆ ಗೋವುಗಳೆಂಬ ಅರ್ಥವನ್ನೇ ಹೇಳಬೇಕಾಗಿಲ್ಲ. ಅಜಾದಿ (ಆಡು ಮೊದಲಾದ) ಯಾದ ಇತರ ಯಜ್ಞಾರ್ಹವಾದ ಪಶುಗಳೇ ಇಲ್ಲಿ ನಿರ್ದೇಶಿಸಲ್ಪಟ್ಟಿರಬೇಕು. ಅಷ್ಟಾಪದೀಭಿಃ ಎಂಬ ಶಬ್ದಕ್ಕೆ ಎಂಟು ಪಾದ ಗಳಿಂದ ಸಹಿತವಾದ ಪ್ರಾಣಿಯೆಂದರ್ಥವು. ಹೇಗೆಂದರೆ ಗರ್ಭಸಹಿತವಾದ ಪ್ರಾಣಿಗೆ ಸಹಜವಾದ ನಾಲ್ಕು ಪಾದ ಗಳೂ, ಗರ್ಭದಲ್ಲಿರುವ ಕರುವಿಗೆ ಇರುವ ನಾಲ್ಕು ಪಾದಗಳೂ ಸೇರಿ ಎಂಟು ಪಾದಗಳಾಗುವುವು. ಆದುದರಿಂದ ಗರ್ಭವತಿಯಾದ ಹೆಣ್ಣುಪ್ರಾಣಿಯನ್ನು ನಿರ್ದೇಶಿಸಲು ಅಷ್ಟಾಪದೀಭಿಃ ಎಂಬ ಶಬ್ದದ ಪ್ರಯೋಗವಿರುವುದು.

---

### ಸಂಹಿತಾಪಾಠಃ

ದ್ರ್ವನ್ನಃ ಸರ್ಪಿರಾಸುತಿಃ ಪ್ರತ್ನೋ ಹೋತಾ ವರೇಣ್ಯಃ ।

ಸಹಸಸ್ಪುತ್ರೋ ಅದ್ಭುತಃ ॥ ೬ ॥

### ಪದಪಾಠಃ

ದ್ರುಽಅನ್ನಃ । ಸರ್ಪಿಃಽಆಸುತಿಃ । ಪ್ರತ್ನಃ । ಹೋತಾ । ವರೇಣ್ಯಃ ।

ಸಹಸಃ । ಪುತ್ರಃ । ಅದ್ಭುತಃ ॥ ೬ ॥

ಸಾಯಣಭಾಷ್ಯಂ

ದ್ರ್ವನ್ನಃ ಸಮಿದ್ರೂಪಾನ್ನಃ ಸರ್ಪಿರಾಸುತಿಃ ಸರ್ಪಿರಾಸೂಯತ ಆಸಿಚ್ಯತೇ ಯಸ್ಮಿನ್ ತಾದೃಶಃ ಪ್ರತ್ನಃ ಪುರಾತನೋ ಹೋತಾ ಹೋಮನಿಷ್ಪಾದಕೋ ವರೇಣ್ಯೋ ವರಣೀಯಃ ಸಹಸಸ್ಪುತ್ರಃ ಸಹಸೋ ಬಲಸ್ಯ ಪುತ್ರಸ್ಥಾನೀಯಃ । ಬಲೇನೋತ್ಪನ್ನತ್ವಾತ್ । ಅದ್ಭುತ ಆಶ್ಚರ್ಯಭೂತಃ । ರಮಣೀಯ ಇತ್ಯರ್ಥಃ । ಏವಂ ಮಹಾನುಭಾವೋಽಗ್ನಿರ್ನೋಽನುಜಾನಾತ್ವಿತ್ಯರ್ಥಃ ॥

ಪ್ರತಿಪದಾರ್ಥ

**ದ್ರ್ವನ್ನಃ**—ಸಮಿದ್ರೂಪವಾದ ಅನ್ನವುಳ್ಳವನೂ । **ಸರ್ಪಿರಾಸುತಿಃ**—ಆಜ್ಯದಿಂದ ಪ್ರೋಕ್ಷಿತನಾಗುವವನೂ । **ಪ್ರತ್ನಃ**—ಪುರಾತನನೂ । **ಹೋತಾ**—ಹೋಮಸಂಪಾದಕನೂ । **ವರೇಣ್ಯಃ**—ಅಪೇಕ್ಷಿತನೂ। **ಸಹಸಸ್ಪುತ್ರಃ**—ಶಕ್ತಿಪುತ್ರನೂ । **ಅದ್ಭುತಃ**—ಆಶ್ಚರ್ಯಭೂತನೂ (ಆದ ಅಗ್ನಿಯು ನಮ್ಮನ್ನು ಅನುಗ್ರಹಿಸಲಿ) ।

ಭಾವಾರ್ಥ

ಸಮಿದ್ರೂಪವಾದ ಅನ್ನವುಳ್ಳವನೂ, ಆಜ್ಯದಿಂದ ಪ್ರೋಕ್ಷಿತನಾಗುವವನೂ, ಪುರಾತನನೂ; ಹೋಮಸಂಪಾದಕನೂ, ಎಲ್ಲರಿಂದಲೂ ಅಪೇಕ್ಷಿತನೂ, ಶಕ್ತಿಪುತ್ರನೂ, ಆಶ್ಚರ್ಯಭೂತನೂ ಆದ ಅಗ್ನಿಯು ನಮ್ಮನ್ನು ಅನುಗ್ರಹಿಸಲಿ.

English Translation

Feeder upon fuel, to whom butter is offered, (you are) the ancient, the invoker of the gods, the excellent; the son of strength, the wonderful.

ವಿಶೇಷವಿಷಯಗಳು

**ದ್ರ್ವನ್ನಃ**—ದ್ರುಃ ಅನ್ನಃ । **ಸಮಿದ್ರೂಪಾನ್ನಃ** । ಅಗ್ನಿಗೆ ಸಮಿತ್ತುಗಳೇ ಅನ್ನ ( ಆಹಾರ ) ರೂಪವಾಗಿರುವವು. ಸಮಿತ್ತುಗಳು ದ್ರು-ವೃಕ್ಷಸಂಬಂಧವಾದುದರಿಂದ ದ್ರ್ವನ್ನಃ ಎಂದರೆ ವೃಕ್ಷಸಂಬಂಧವಾದ ಸಮಿತ್ತುಗಳೇ ಆಹಾರವಾಗಿ ಉಳ್ಳ ಅಗ್ನಿಯು ಎಂದರ್ಥವು.

**ಸರ್ಪಿರಾಸುತಿಃ**—ಸರ್ಪಿಶ್ಶಬ್ದವು ಉದಕನಾಮಗಳಲ್ಲಿ ಪಠಿತವಾಗಿದ್ದರೂ (ನಿ. ೨-೨೪) ಸರ್ಪಿಃ ಎಂಬ ಶಬ್ದಕ್ಕೆ ಘೃತವೆಂದೂ ಅರ್ಥವು ಭಾಷ್ಯಕಾರರು—

**ತ್ವಂ ಹಿ ಮಾನುಷೇ ಜನೇಽಗ್ನೇ ಸುಪ್ರೀತ ಇಧ್ಯಸೇ ।**
**ಸ್ರುಚಸ್ತ್ವಾ ಯಂತ್ಯಾನುಷಕ್ಸುಜಾತ ಸರ್ಪಿರಾಸುತೇ ॥**

(ಋ. ಸಂ. ೫-೨೧-೨)

**ಆ ಯಸ್ತೇ ಸರ್ಪಿರಾಸುತೇಽಗ್ನೇ ಶಮಸ್ತಿ ಧಾಯಸೇ ।**

(ಋ ಸಂ. ೫-೭-೯)

ಎಂಬ ಋಕ್ಕುಗಳಲ್ಲಿರುವ **ಸರ್ಪಿರಾಸುತೇ** ಎಂಬ ಶಬ್ದಗಳಿಗೆ ಘೃತಯುಕ್ತಾನ್ನ ಎಂದೇ ಅರ್ಥವಿವರಣೆಮಾಡಿರುವರು. ಅಗ್ನಿಯಲ್ಲಿ ಘೃತವನ್ನು ಯಜ್ಞಾದಿಗಳಲ್ಲಿ ಹೋಮಮಾಡುವುದರಿಂದ ಆ ಘೃತವೇ ಅಗ್ನಿಗೆ ಅನ್ನವೆಂದು ಹೇಳಲ್ಪಡುವುದು. ಆದುದರಿಂದ ಅಗ್ನಿಯನ್ನು ಸರ್ಪಿರಾಸುತಿಶಬ್ದದಿಂದ ಅನೇಕಕಡೆ ಸಂಬೋಧಿಸಿದೆ.

**ಪ್ರತ್ನಃ**—ಪ್ರತ್ನಶಬ್ದವು ಪುರಾಣನಾಮಗಳಲ್ಲಿ ಪಠಿತವಾಗಿದೆ (ನಿ. ೩-೨೦) ಪುರಾತನನಾದವನು, ಬಹಳ ಹಿಂದಿನಿಂದ ಇರುವವನು ಎಂದರ್ಥವು. ಅಗ್ನಿಯನ್ನು ಸ್ತೋತ್ರಮಾಡುವ ಈ ಋಷಿಯಲ್ಲದೆ ಈ ಋಷಿಗೆ ಪುರಾತನರಾದವರೂ ಬಹು ಕಾಲದಿಂದ ಸ್ತೋತ್ರಮಾಡುತ್ತಿದ್ದರು. ಆದ್ದರಿಂದ ಅಗ್ನಿಯು ಬಹು ಪುರಾತನಕಾಲದವನು ಎಂದು ಹೇಳಿದೆ.

**ಸಹಸಃ ಪುತ್ರಃ**—ಅರಣಿಗಳಲ್ಲಿ ಅಗ್ನಿಯನ್ನು ಕಡೆದು ಉತ್ಪತ್ತಿಮಾಡುವಾಗ ಋತ್ವಿಜರು ತಮ್ಮ ಬಾಹುಬಲವನ್ನು ಬಹಳವಾಗಿ ಉಪಯೋಗಿಸಬೇಕಾಗಿರುವುದರಿಂದ ಅಗ್ನಿಯು ಬಲದಿಂದ ಉತ್ಪನ್ನನಾದವನು, ಬಲದ ಪುತ್ರನು ಎಂದು ಹೇಳುವುದು ಋಗ್ವೇದದಲ್ಲಿ ಬಹಳ ರೂಢಿಯಾಗಿದೆ.

---

# ಎಂಟನೆಯ ಸೂಕ್ತವು

---

ಸಾಯಣಭಾಷ್ಯಂ

**ವಾಜಯನ್ನಿವೇತಿ ಷಡೃಚಮಷ್ಟಮಂ ಸೂಕ್ತಂ । ಸೋಮಾಹುತೇರ್ಹಶಬ್ದಾನುವೃತ್ತ್ಯಾಭಾವಾನ್ಮಂಡಲದ್ರಷ್ಟಾ ಗೃತ್ಸಮದ ಋಷಿಃ । ಅಗ್ನಿರ್ದೇವತಾ । ಹಿಶಬ್ದಾದ್ಗಾಯತ್ರೀ ಛಂದಃ । ಅಂತ್ಯಾನುಷ್ಟುಪ್ । ವಾಜಯನ್ನಿವಾಂತ್ಯಾನುಷ್ಟುಬಿತ್ಯನುಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋಸ್ತೃತೀಯಸೂಕ್ತತ್ವೇನಾಸ್ಯೋಕ್ತಮಾವರ್ಜಿತಸ್ಯ ವಿನಿಯೋಗ ಉಕ್ತಃ ॥**

ಅನುವಾದವು—ವಾಜಯನ್ನಿವ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಮಂಡಲದ್ರಷ್ಟೃವಾದ ಗೃತ್ಸಮದನು ಋಷಿಯು ; ಅಗ್ನಿಯು ದೇವತೆಯು ; ಗಾಯತ್ರೀ ಛಂದಸ್ಸು. ಕೊನೆಯ ಋಕ್ಕು ಮಾತ್ರ ಅನುಷ್ಟುಪ್ ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ವಾಜಯನ್ನಿವಾಂತ್ಯಾನುಷ್ಟುಪ್** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳ ಪಠನಕಾಲದಲ್ಲಿ ಗಾಯತ್ರೀ ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ (ಕೊನೆಯ ಋಕ್ಕನ್ನು ಬಿಟ್ಟು ಉಳಿದ) ಋಕ್ಕುಗಳ ವಿನಿಯೋಗವಿರುವುದೆಂದು ಹಿಂದೆಯೇ ಹೇಳಲಾಗಿದೆ.

---

**॥ ಓಂ ॥**

## ಸೂಕ್ತ—೮

॥ ಮಂಡಲ—೨ ॥ ಅನುವಾಕ—೧ ॥ ಸೂಕ್ತ—೮ ॥

॥ ಅಷ್ಟಕ—೨ ॥ ಅಧ್ಯಾಯ—೫ ॥ ವರ್ಗ—೨೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೬ ॥

ಋಷಿಃ—ಗೃತ್ಸಮದಃ ॥

ದೇವತಾ—ಅಗ್ನಿಃ ॥

ಛಂದಃ—೧-೫, ಗಾಯತ್ರೀ ೬: ಅನುಷ್ಟುಪ್ ।

ಸಂಹಿತಾಪಾಠಃ

ವಾಜಯನ್ನಿವ ನೂ ರಥಾನ್ಯೋಗಾँ ಅಗ್ನೇರುಪ ಸ್ತುಹಿ ।
ಯಶಸ್ತಮಸ್ಯ ಮೀಳ್ಹುಷಃ ॥ ೧ ॥

ಪದಪಾಠಃ

ವಾಜಯನ್ऽಇವ । ನು । ರಥಾನ್ । ಯೋಗಾನ್ । ಅಗ್ನೇಃ । ಉಪ । ಸ್ತುಹಿ ।
ಯಶಃऽತಮಸ್ಯ । ಮೀಳ್ಹುಷಃ ॥ ೧ ॥

ಸಾಯಣಭಾಷ್ಯಂ

ಹೇ ಅಂತರಾತ್ಮನ್ ನು ಕ್ಷಿಪ್ರಮಗ್ನೇರ್ಯೋಗಾನಶ್ವಾನುಪಸ್ತುಹಿ । ಕೀದೃಶಸ್ಯಾಗ್ನೇಃ । ಯಶಸ್ತ-ಮಸ್ಯ ಪ್ರವೃದ್ಧಯಶಸಃ ॥ ಮತ್ವರ್ಥೋ ಲುಪ್ಯತೇ ॥ ಮೀಳ್ಹುಷಃ ಸೇಕ್ತುಃ ಫಲಸ್ಯ । ಈದೃಶಸ್ಯ ಯೋಗಾನ್ ಸ್ತುಹಿ । ಹೋತರಿತಿ ವಾ ಸಂಬೋಧ್ಯಂ । ಸ್ತುತೌ ದೃಷ್ಟಾಂತಃ । ವಾಜಯನ್ನಿವ । ಅನ್ನ-ಮಿಚ್ಛನ್ ಪುರುಷ ಇವ । ಸ ಯಥಾಶ್ವಾನ್ ಗಮನಾಯ ಸ್ತೌತಿ ತದ್ವತ್ । ಯದ್ವೋಕ್ತಲಕ್ಷಣಸ್ಯಾಗ್ನೇ-ರ್ಗಮನಸಾಧನಾನ್ರಥಾನ್ ಸ್ತುಹಿ ॥

ಪ್ರತಿಪದಾರ್ಥ

ಯಶಸ್ತಮಸ್ಯ—ಅತ್ಯಂತ ವಿಸ್ತೃತವಾಗಿ ಹರಡಿದ ಯಶಸ್ಸುಳ್ಳವನೂ । ಮೀಳ್ಹುಷಃ—ಉದಾರವಾಗಿ ಫಲಗಳನ್ನು ಕೊಡತಕ್ಕವನೂ ಆದ । ಅಗ್ನೇಃ—ಅಗ್ನಿಯ । ಯೋಗಾನ್—ಅಶ್ವಗಳನ್ನೂ । ರಥಾನ್—ರಥ ಗಳನ್ನೂ । ವಾಜಯನ್ನಿವ—ಅನ್ನವನ್ನಪೇಕ್ಷಿಸುವವನು ತನ್ನ ರಥದ ಕುದುರೆಗಳನ್ನು ಉತ್ತೇಜಿಸುವಂತೆ । ನು—ಕ್ಷಿಪ್ರವಾಗಿ । ಉಪ ಸ್ತುಹಿ—ಸ್ತುತಿಸು.

ಭಾವಾರ್ಥ

ಎಲೈ ಅಂತರಾತ್ಮನೇ, ಅನ್ನವನ್ನಪೇಕ್ಷಿಸುವವನು ತನ್ನ ರಥದ ಕುದುರೆಗಳನ್ನು ಉತ್ತೇಜಿಸುವಂತೆ, ನೀನು, ಅತ್ಯಂತ ವಿಸ್ತೃತವಾಗಿ ಹರಡಿದ ಯಶಸ್ಸುಳ್ಳವನೂ, ಉದಾರವಾಗಿ ಫಲಗಳನ್ನು ಕೊಡತಕ್ಕವನೂ ಆದ ಅಗ್ನಿಯ ಅಶ್ವಗಳನ್ನೂ, ರಥಗಳನ್ನೂ ಕ್ಷಿಪ್ರವಾಗಿ ಸ್ತುತಿಸು.

English Translation

Praise quickly the yoked chariot of the glorious and munificent Agni, like one who is desirous of food.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಅಗ್ನಿಯ ಅಶ್ವಗಳನ್ನೂ, ರಥಗಳನ್ನೂ ಸ್ತುತಿಸೆಂದು ಅಂತರಾತ್ಮನನ್ನು ಸಂಬೋಧಿಸಿ ಸಾಯಣರು ಋಕ್ಕಿನ ಅರ್ಥವನ್ನು ವಿವರಿಸಿರುವರು. ಇಲ್ಲಿ ಅಂತರಾತ್ಮನನ್ನೇ ಸಂಬೋಧಿಸಬೇಕಾಗಿಲ್ಲ. ಯಜ್ಞದಲ್ಲಿ ಭಾಗವಹಿಸುವ ಋತ್ವಿಜರಲ್ಲಿ ಯಾರನ್ನಾಗಲಿ, ಯಜಮಾನನನ್ನಾಗಲಿ ಸಂಬೋಧಿಸಬಹುದು.

**ಯೋಗಾನ್ ರಥಾನ್**—ಅಶ್ವಗಳನ್ನೂ ಮತ್ತು ರಥಗಳನ್ನೂ ಸ್ತುತಿಸು ಎಂದಾಗಲಿ ಅಥವಾ ಅಶ್ವಗಳನ್ನು ಹೂಡಿದ ರಥಗಳನ್ನು ಸ್ತುತಿಸು ಎಂದಾಗಲಿ ಅರ್ಥಮಾಡಬಹುದು.

**ವಾಜಯನ್ನಿವ**—ವಾಜಃ ಎಂಬ ಶಬ್ದವು ಅನ್ನನಾಮಗಳಲ್ಲಿಯೂ (ನಿ. ೩-೯) ಸಂಗ್ರಾಮನಾಮಗಳಲ್ಲಿಯೂ (ವಾಜೇ) (ನಿ. ೩-೯) ಪಠಿತವಾಗಿದೆ. ಇಲ್ಲಿ ಅನ್ನವೆಂಬ ಅರ್ಥವನ್ನು ಸ್ವೀಕರಿಸಿ ಅನ್ನವನ್ನಪೇಕ್ಷಿಸುವ ಪುರುಷನಂತೆ ಎಂದು ದೃಷ್ಟಾಂತವನ್ನು ಹೇಳಿದೆ.

**ನು**—**ನು ಇತ್ಯೇಷೋಽನೇಕಕರ್ಮಾ । ಇದಂ ಕರಿಷ್ಯತೀತಿ ಹೇತ್ವಪದೇಶೇ । ಕಥಂ ನು ಕರಿಷ್ಯತೀತ್ಯನುಪೃಷ್ಟೇ** (ನಿ. ೧-೪) ನು ಎಂಬ ನಿಪಾತಕ್ಕೆ ಅನೇಕ ಅರ್ಥಗಳಿವೆ. **ಇದಂ ನು ಕರಿಷ್ಯತಿ** ಎನ್ನುವಾಗ **ನು** ಎಂಬ ಪದಕ್ಕೆ ಆದ್ದರಿಂದ ಎಂದು ಹೇತ್ವರ್ಥ (ಕಾರಣವನ್ನು ಸೂಚಿಸುವ) ವಾಗುತ್ತದೆ. **ಕಥಂ ನು ಕರಿಷ್ಯತಿ** ಎನ್ನುವಾಗ **ನು** ಎಂಬುದು ಪ್ರಶ್ನಾರ್ಥಕವಾಗುತ್ತದೆ. ಹೀಗೆಯೇ **ಅಥಾಪ್ಯುಪಮಾರ್ಥೇ ಭವತಿ**—ಉಪಮಾನವನ್ನು ಸೂಚಿಸುವಾಗಲೂ ಸಹ ನು ಎಂಬ ಶಬ್ದದ ಪ್ರಯೋಗವಿದೆ. ಉದಾಹರಣೆಗೆ—

**ಅಕ್ಷೋ ನ ಚಕ್ರ್ಯೋಃ ಶೂರ ಬೃಹನ್ಪ್ರ ತೇ ಮಹ್ನಾ ರಿರಿಚೇ ರೋದಸ್ಯೋಃ ।**
**ವೃಕ್ಷಸ್ಯ ನು ತೇ ಪುರುಹೂತ ವಯಾ ವ್ಯೂ೩ತಯೋ ರುರುಹುರಿಂದ್ರ ಪೂರ್ವೀಃ ॥**

(ಋ. ಸಂ. ೬-೨೪-೩)

ಎಂಬ ಋಕ್ಕನ್ನು ನಿರುಕ್ತಕಾರರು ಉದಹರಿಸಿ **ವೃಕ್ಷಸ್ಯೇವ ತೇ ಪುರುಹೂತ**-ಶಾಖಾಃ ವೃಕ್ಷದಂತೆ ಅಥವಾ ವೃಕ್ಷದ ಶಾಖೆಗಳಂತೆ ಎಂದು **ನು** ಎಂಬ ಪದಕ್ಕೆ ಉಪಮಾರ್ಥವನ್ನು ಹೇಳಿದೆ ಹೀಗೆಯೇ,

**ನೂ ಮರ್ತೋ ದಯತೇ ಸನಿಷ್ಯನ್ಯೋ ವಿಷ್ಣವ ಉರುಗಾಯಾಯ ದಾಶತ್ ।**
**ಪ್ರ ಯಃ ಸತ್ರಾಚಾ ಮನಸಾ ಯಜಾತ ಏತಾವಂತಂ ನರ್ಯಮಾವಿವಾಸಾತ್ ॥**

(ಋ. ಸಂ. ೭-೧೦೦-೧)

ಇತ್ಯಾದಿ ಋಕ್ಕುಗಳಲ್ಲಿ **ನು** ಎನ್ನುವುದಕ್ಕೆ **ಕ್ಷಿಪ್ರಂ**—ಜಾಗ್ರತೆಯಾಗಿ ಎಂಬರ್ಥವೂ,

**ನೂ ಇಂದ್ರ ಶೂರ ಸ್ತವಮಾನ ಊತೀ ಬ್ರಹ್ಮಜೂತಸ್ತನ್ವಾ ವಾವೃಧಸ್ವ ।**
**ಉಪ ನೋ ವಾಜಾನ್ಮಿಮೀಹ್ಯುಪ ಸ್ತೀನ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥**

(ಋ. ಸಂ. ೭-೧೯-೧೧)

ಇವೇ ಮೊದಲಾದ ಋಕ್ಕುಗಳಲ್ಲಿ ಅದ್ಯ ಎಂದರೆ ಈಗ, ಒಡನೆಯೇ ಎಂಬ ಅರ್ಥವೂ, ಹಾಗೆಯೇ ನಿರುಕ್ತಕಾರರು **ನು ಇತ್ಯೇಷೋಽನೇಕಕರ್ಮಾ** (ನಿ ೧-೪) ಎಂದು ಹೇಳಿರುವಂತೆ ಇನ್ನೂ ಅನೇಕಾರ್ಥಗಳಲ್ಲಿ ನು ಎಂಬ ಶಬ್ದದ ಪ್ರಯೋಗವಿರುವುದು. ಪ್ರಕೃತವಾದ ಋಕ್ಕಿನಲ್ಲಿ ಕ್ಷಿಪ್ರವಾಗಿ, ಬೇಗನೆ ಎಂದರ್ಥವು.

---

### ಸಂಹಿತಾಪಾಠಃ

ಯಃ ಸುನೀಥೋ ದದಾಶುಷೇಽಜುರ್ಯೋ ಜರಯನ್ನರಿಂ ।
ಚಾರುಪ್ರತೀಕ ಆಹುತಃ ॥ ೨ ॥

### ಪದಪಾಠಃ

ಯಃ । ಸುಽನೀಥಃ । ದದಾಶುಷೇ । ಅಜುರ್ಯಃ । ಜರಯನ್ । ಅರಿಂ ।
ಚಾರುಽಪ್ರತೀಕಃ । ಆಽಹುತಃ ॥ ೨ ॥

### ಸಾಯಣಭಾಷ್ಯಂ

ಸುನೀಥಃ ಶೋಭನನಯನೋಽಜುರ್ಯೋಽಜರಣೋಽನಭಿಭಾವ್ಯಃ ಚಾರುಪ್ರತೀಕಃ ಶೋಭನೋಪಕ್ರಮೋ ಯೋಽಸ್ತಿ ಸೋಽಗ್ನಿರ್ದದಾಶುಷೇ ಹವಿರ್ದತ್ತವತೇ ಯಜಮಾನಾಯ ತದರ್ಥಮರಿಂ ತಸ್ಯ ಶತ್ರುಂ ಜರಯನ್ ನಾಶಯನ್ ಆಹುತಃ । ಸಮಂತಾದಾರಾಧಿತೋ ಭವತಿ ॥

### ಪ್ರತಿಪದಾರ್ಥ

**ಸುನೀಥಃ**—ಅತಿಶಯವಾದ ಮಾರ್ಗದರ್ಶಕನೂ । **ಅಜುರ್ಯಃ**—ಅಪ್ರತಿಹತನೂ । **ಚಾರುಪ್ರತೀಕಃ**—ರಮ್ಯವಾದ ರೂಪವುಳ್ಳವನೂ ಆದ । **ಯಃ**—ಯಾವ ಅಗ್ನಿಯಿದ್ದಾನೆಯೋ (ಅವನು) । **ದದಾಶುಷೇ**—ಹವಿಸ್ಸನ್ನು ಅರ್ಪಿಸತಕ್ಕ ಯಜಮಾನನಿಗಾಗಿ । **ಅರಿಂ**—ಅವನ ಶತ್ರುವನ್ನು । **ಜರಯನ್**—ನಾಶಪಡಿಸುತ್ತಾ । **ಆಹುತಃ**—ಆರಾಧಿತನಾಗುತ್ತಾನೆ ।

### ಭಾವಾರ್ಥ

ಅತಿಶಯವಾದ ಮಾರ್ಗದರ್ಶಕನೂ, ಅಪ್ರತಿಹತನೂ, ರಮ್ಯವಾದ ರೂಪವುಳ್ಳವನೂ ಆದ ಯಾವ ಅಗ್ನಿಯಿದ್ದಾನೆಯೋ ಅವನು, ಹವಿಸ್ಸನ್ನು ಅರ್ಪಿಸತಕ್ಕ ಯಜಮಾನನಿಗಾಗಿ ಅವನ ಶತ್ರುವನ್ನು ನಾಶಪಡಿಸುತ್ತಾ ಆರಾಧಿತನಾಗುತ್ತಾನೆ.

### English Translation

Who, sagacious, invincible, and of graceful gait, destroys, when propitiated, his foe, for him who presents (offerings).

### ವಿಶೇಷ ವಿಷಯಗಳು

**ಸುನೀಥಃ—ಶೋಭನನಯನಃ** । ಒಳ್ಳೆಯ ಮಾರ್ಗದರ್ಶಕನೆಂದು ಸಾಯಣರು ಅರ್ಥಮಾಡಿದಾರೆ. ಯಾಸ್ಕರು **ಸುನೀಥ** ಶಬ್ದವನ್ನು **ಅಸ್ರೇಮಾಃ, ಅನೇಮಾಃ** ಮೊದಲಾದ ಹತ್ತು ಪ್ರಶಸ್ಯನಾಮುಗಳಲ್ಲಿ ಪಾಠಮಾಡಿರುವುದರಿಂದ (ನಿ. ೩–೧೩) **ಸುನೀಥಃ** ಎಂದರೆ ಪ್ರಶಸ್ಯನು, ಸ್ತುತ್ಯರ್ಹನು ಎಂದೂ ಅರ್ಥವಾಗಬಹುದು. ಇದಲ್ಲದೆ

ತ್ವಾಮಿಂದ್ರ ಮತಿಭಿಃ ಸುತೇ ಸುನಿಥಾಸೋ ವಸೂಯವಃ । ಗೋಭಿಃ ಕ್ರಾಣಾ ಅನೂಷತ ।

ಎಂಬ ಮಂತ್ರದ ವಾಖ್ಯಾನದಲ್ಲಿ ದುರ್ಗಾಚಾರ್ಯರು—ಸುನೀಥಾಸಃ ಸುಷ್ಠು ಯೇ ಸ್ತೋತುಂ ಶಕ್ನುವಂತಿ ತೇ ಸುನೀಥಾಃ । ಚೆನ್ನಾಗಿ ಸ್ತೋತ್ರಮಾಡಲು ಶಕ್ತರಾದವರು ಎಂದು ಅರ್ಥವಿವರಣೆಮಾಡಿದ್ದಾರೆ. (ನಿ ೪-೧೯)

ಅಜುರ್ಯಃ—ಅಜರಣೀಯೋಽನಭಿಭಾವ್ಯಃ । ಜ್ಯಾ ವಯೋಹಾನೌ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ನಿಷೇಧಾರ್ಥವಾದ ಅ ಎಂಬ ಉಪಸರ್ಗವಿರುವುದರಿಂದ ವೃದ್ಧನಲ್ಲದವನು ಎಂದರೆ ಯುವಕನಂತೆ ಅಪ್ರತಿಹತನಾದವನು ಎಂದರ್ಥವು.

ಚಾರುಪ್ರತೀಕಃ—ಪ್ರತೀಕಶಬ್ದಕ್ಕೆ ಯಾಸ್ಕರು ಪ್ರತೀಕಂ-ಪ್ರತ್ಯಕ್ತಂ ಭವತಿ ಪ್ರತ್ಯೆಂಚಿತಂ ಪ್ರತಿಗಸಂಪ್ರಕಾಶಸ್ಯ (ನಿ. ೭-೩೧) ಎಂದು ನಿರ್ವಚನವನ್ನು ಹೇಳಿರುವುದರಿಂದ ಚಾರುಪ್ರತೀಕಃ ಎಂದರೆ ಮನೋಹರವಾದ ರೂಪ ಅಥವಾ ಆಕಾರವುಳ್ಳವನು ಎಂದರ್ಥವು.

---

ಸಂಹಿತಾಪಾಠಃ

ಯ ಉ ಶ್ರಿಯಾ ದಮೇಷ್ವಾ ದೋಷೋಷಸಿ ಪ್ರಶಸ್ಯತೇ ।

ಯಸ್ಯ ವ್ರತಂ ನ ಮೀಯತೇ ॥ ೩ ॥

ಪದಪಾಠಃ

ಯಃ । ಊಂ ಇತಿ । ಶ್ರಿಯಾ । ದಮೇಷು । ಆ । ದೋಷಾ । ಉಷಸಿ । ಪ್ರಽಶಸ್ಯತೇ ।

ಯಸ್ಯ । ವ್ರತಂ । ನ । ಮೀಯತೇ ॥ ೩ ॥

ಸಾಯಣಭಾಷ್ಯಂ

ಯೋಽಗ್ನಿರು ಶ್ರಿಯಾ ಜ್ವಾಲಯಾ ಯುಕ್ತಃ ಸನ್ ದಮೇಷು ಆ ಆಗತ್ಯ ದೋಷಾ ರಾತ್ರಿಷು ಉಷಸ್ಯಹಃಸು ಚ ಪ್ರಶಸ್ಯತೇ । ಸ್ತೂಯತೇ । ಯಸ್ಯಾಗ್ನೇರ್ವ್ರತಂ ಕರ್ಮ ನ ಮೀಯತೇ । ನ ಹಿಂಸ್ಯತೇ ನ ಕ್ಷೀಯತೇ ವಾ ॥

॥ ಪ್ರತಿಪದಾರ್ಥ ॥

ಯ ಉ—ಯಾವ ಅದೇ ಅಗ್ನಿಯು । ಶ್ರಿಯಾ—ಪ್ರಭಾಪೂರಿತವಾದ ಜ್ವಾಲಾಯುಕ್ತನಾಗಿ । ದಮೇಷು-ಯಜ್ಞಗೃಹಗಳಲ್ಲಿ । ಆ—ಬಂದು । ದೋಷಾ—ರಾತ್ರಿಕಾಲಗಳಲ್ಲಿಯೂ । ಉಷಸಿ—ಅಹಸ್ಸುಗಳಲ್ಲಿಯೂ । ಪ್ರಶಸ್ಯತೇ—ಸ್ತುತಿಸಲ್ಪಡುತ್ತಾನೆ (ಮತ್ತು) । ಯಸ್ಯ—ಯಾವ ಅದೇ ಅಗ್ನಿಯ । ವ್ರತಂ ಕರ್ಮವು । ನ ಮೀಯತೇ—ಕುಂಠಿತವಾಗುವುದಿಲ್ಲ.

ಭಾವಾರ್ಥ

ಮೇಲೆ ವರ್ಣಿತನಾದ ಅದೇ ಅಗ್ನಿಯು ಪ್ರಭಾಪೂರಿತವಾದ ಜ್ವಾಲಾಯುಕ್ತನಾಗಿ ಯಜ್ಞಗೃಹಗಳಲ್ಲಿ ಬಂದು ರಾತ್ರಿಕಾಲಗಳಲ್ಲಿಯೂ, ಉಷಃಕಾಲಗಳಲ್ಲಿಯೂ, ಅಹಸ್ಸುಗಳಲ್ಲಿಯೂ ಸ್ತುತಿಸಲ್ಪಡುತ್ತಾನೆ. ಮತ್ತು ಆ ಅಗ್ನಿಯನ್ನು ಪೂಜಿಸುವ ಕರ್ಮವೂ ಯಾವಾಗಲೂ ಕುಂಠಿತವಾಗುವುದಿಲ್ಲ.

English Translation

Who, invested with radiance, is glorified, morning and evening, in (our) dwelling : whose worship is never neglected.

ಸಂಹಿತಾಪಾಠಃ

ಆ ಯಃ ಸ್ವ೧ರ್ಣ ಭಾನುನಾ ಚಿತ್ರೋ ವಿಭಾತ್ಯರ್ಚಿಷಾ ।

ಅಂಜಾನೋ ಅಜರೈರಭಿ ॥ ೪ ॥

ಪದಪಾಠಃ

ಆ । ಯಃ । ಸ್ವಃ । ನ । ಭಾನುನಾ । ಚಿತ್ರಃ । ವಿಽಭಾತಿ । ಅರ್ಚಿಷಾ ।

ಅಂಜಾನಃ । ಅಜರೈಃ । ಅಭಿ ॥ ೪ ॥

ಸಾಯಣಭಾಷ್ಯಂ

ಯೋಽಗ್ನಿಶ್ಚಿತ್ರಶ್ಚಾಯನೀಯೋ ನಾನಾವರ್ಣೋ ವಾರ್ಚಿಷಾ ಜ್ವಾಲಯಾ ರಶ್ಮಿಸಮೂಹೇನಾವಿಭಾತಿ । ಸರ್ವತೋ ಭಾಸತೇ । ತತ್ರ ದೃಷ್ಟಾಂತಃ । ಸ್ವರ್ಭಾನುನಾ । ಕಿರಣೇನ ಸೂರ್ಯ ಇವ । ಸ ಯಥಾ ವಿಭಾತಿ ತದ್ವತ್ । ಕಿಂ ಕುರ್ವನ್ । ಅಜರೈರ್ನಿತ್ಯೈರ್ಜ್ವಾಲಾಸಮೂಹೈರಭಿ ಸರ್ವತೋಽಂಜಾನೋ ವ್ಯಂಜಯನ್ ಪ್ರಕಾಶಯನ್ ॥

ಪ್ರತಿಪದಾರ್ಥ

ಸ್ವಃ—ಆದಿತ್ಯನು । ಭಾನುನಾ ನ—ತನ್ನ ಕಿರಣಗಳಿಂದ ಪ್ರಕಾಶಿಸುವಂತೆ । ಯಃ—ಯಾವ ಅದೇ ಅಗ್ನಿಯು । ಚಿತ್ರಃ –ನಾನಾ ವರ್ಣಾತ್ಮಕನಾಗಿಯೂ । ಅರ್ಚಿಷಾ—ರಶ್ಮಿ ಸಮೂಹಗಳಿಂದ ಕೂಡಿದವನಾಗಿಯೂ ಆಗಿ । ಅಜರೈಃ—ನಿತ್ಯಗಳಾದ ಜ್ವಾಲೆಗಳಿಂದ । ಅಭಿ—ಸುತ್ತಲೂ । ಅಂಜಾನಃ—ಕಾಂತಿಯನ್ನು ಹರಡುತ್ತಾ । ಆ ವಿಭಾತಿ—ಪೂರ್ಣವಾಗಿ ಬೆಳಗುತ್ತಾನೆ ।

ಭಾವಾರ್ಥ

ಆದಿತ್ಯನು ತನ್ನ ಕಿರಣಗಳಿಂದ ಪ್ರಕಾಶಿಸುವಂತೆ ಅಗ್ನಿಯು ನಾನಾವರ್ಣಾತ್ಮಕವಾಗಿಯೂ, ರಶ್ಮಿ ಸಮೂಹಗಳಿಂದ ಕೂಡಿದವನಾಗಿಯೂ ಆಗಿ ನಿತ್ಯವಾದ ತನ್ನ ಜ್ವಾಲೆಗಳಿಂದ ಸುತ್ತಲೂ ಕಾಂತಿಯನ್ನು ಹರಡುತ್ತಾ ಪೂರ್ಣವಾಗಿ ಬೆಳಗುತ್ತಾನೆ.

## English Translation

Who, many-tinted, shines with radiance, like the sun with (his) lustre, spreading light over (all) by his imperishable (flames),

ವಿಶೇಷವಿಷಯಗಳು.

ಸ್ವಃ ನ ಭಾನುನಾ—ಆದಿತ್ಯನು ತನ್ನ ಕಿರಣಗಳಿಂದ ಪ್ರಕಾಶಿಸುವಂತೆ ಎಂದರ್ಥವು. ಸ್ವಃ ಪೃಶ್ನಿಃ ನಾಕಃ ಇತ್ಯಾದಿ ಸಾಧಾರಣನಾಮಗಳಲ್ಲಿ ಸ್ವಃ ಎಂಬ ಶಬ್ದವು ಪಠಿತವಾಗಿದೆ. ಸಾಧಾರಣಾನ್ಯುತ್ತರಾಣಿ ಷಟ್ ದಿವಶ್ಚಾದಿತ್ಯಸ್ಯ ಚ (ನಿ. ೨-೧೩) ಎಂದರೆ ಸ್ವಃ ಪೃಶ್ನಿಃ ನಾಕಃ ಗೌಃ ವಿಷ್ಟಪಂ ನಭಃ ಎಂಬ ಆರು ಪದಗಳೂ ಸಹ ದ್ಯುಲೋಕಪರ್ಯಾಯವಾಗಿಯೂ, ಆದಿತ್ಯಪರವಾಗಿಯೂ ಸಾಧಾರಣವಾಚಕಗಳಾಗಿವೆಯೆಂದು ನಿರುಕ್ತಕಾರರು ತಿಳಿಸಿದ್ದಾರೆ. ಅನಂತರ ಆದಿತ್ಯಪರ್ಯಾಯವಾಗಿ ಸ್ವಃ ಎಂಬ ಶಬ್ದದ ಮೂಲಧಾತುವೇನು ಮತ್ತು ಈ ಪದದ ನಿಷ್ಪತ್ತಿಯು ಹೇಗೆಂಬುದನ್ನು ವಿವರಿಸುತ್ತಾ—

> ಸ್ವರಾದಿತ್ಯೋ ಭವತಿ ಸು ಅರಣಃ ಸು ಈರಣಃ ಸ್ವೃತೋ ರಸಾನ್ ಸ್ವೃತೋ ಭಾಸಂ ಜ್ಯೋತಿಷಾಂ । ಸ್ವೃತೋ ಭಾಸೇತಿ ವಾ ॥
>
> (ನಿ. ೨-೧೪)

ಬಹಳ ದೂರವರ್ತಿಯಾಗಿರುವುದರಿಂದಾಗಲಿ ತಮಸ್ಸನ್ನು ಪೂರ್ಣವಾಗಿ ಚದುರಿಸಿ ನಾಶಮಾಡುವುದರಿಂದಾಗಲಿ, ರಸದಲ್ಲಿ ಒಳಹೊಕ್ಕು ಪ್ರವೇಶಿಸಿ ಅದರೊಂದಿಗೆ ಅಂತರ್ಗತವಾಗುವುದರಿಂದಾಗಲಿ, ತೇಜೋಮಂಡಲದಲ್ಲಿ ತನ್ನ ಪ್ರಕಾಶವನ್ನು ಪ್ರಸರಿಸಿ ಐಕ್ಯವಾಗುವುದರಿಂದಾಗಲಿ, ಅಥವಾ ಪ್ರಭೆಯ ರೂಪದಲ್ಲಿ ವಿಶ್ವವ್ಯಾಪಿಯಾಗುವುದರಿಂದಾಗಲಿ ಆದಿತ್ಯನಿಗೆ ಈ ಹೆಸರು ಮತ್ತು ಏತೇನ ದ್ಯೌರ್ವ್ಯಾಖ್ಯಾತಾ ಈ ಕಾರಣದಿಂದಲೇ ದ್ಯುಲೋಕಕ್ಕೂ ಸ್ವಃ ಎಂಬ ಹೆಸರು ಎಂದು ನಿರುಕ್ತಕಾರರು ತಿಳಿಸಿದ್ದಾರೆ.

> ಸ್ವರಾದಿತ್ಯೋ ಭವತಿ ಸ ಏನಾನಿ ಸಾರಯತಿ ।
>
> (ನಿ. ೫-೪)

ಅಹಸ್ಸುಗಳನ್ನು ಚಲಿಸುವಂತೆ ಮಾಡುವುದರಿಂದಲೂ ಸಹ ಆದಿತ್ಯನಿಗೆ ಸ್ವಃ ಎಂದು ಹೆಸರು. ಋಗ್ವೇದದಲ್ಲಿ ಈ ಪದದ ಪ್ರಯೋಗವಿರುವಾಗ—

> ಪ್ರತ್ಯಙ್ ದೇವಾನಾಂ ವಿಶಃ ಪ್ರತ್ಯಙ್ಙುದೇಷಿ ಮಾನುಷಾನ್ । ಪ್ರತ್ಯಙ್ ವಿಶ್ವಂ ಸ್ವರ್ದೃಶೇ ॥
>
> (ಋ. ಸಂ. ೧-೫೦-೫)

ಇತ್ಯಾದಿ ಋಕ್ಕುಗಳಲ್ಲಿ ಸ್ವಃ ಎಂಬ ಶಬ್ದಕ್ಕೆ ಸ್ವರ್ಗಲೋಕವೆಂದು ಹೆಸರು.

> ತ್ಮನಾ ವಹಂತೋ ದುರೋ ವ್ಯೃಣ್ವನ್ನವಂತ ವಿಶ್ವೇ ಸ್ವ೧ರ್ದೃಶೀಕೇ ।
>
> (ಋ. ಸಂ. ೧-೬೯-೧೦)

ಇತ್ಯಾದಿ ಋಕ್ಕುಗಳಲ್ಲಿರುವ ಸ್ವಃ ಎಂಬ ಶಬ್ದಕ್ಕೆ ನಭಸಿ ಅಂತರಿಕ್ಷದಲ್ಲಿ ಎಂದು ಅರ್ಥವು.

> ದಾನೋ ಅಗ್ನೇ ಬೃಹತೋ ದಾಃ ಸಹಸ್ರಿಣೋ ದುರೋ ನ ವಾಜಂ ಶ್ರುತ್ಯಾ ಅಪಾ ವೃಧಿ ।
> ಪ್ರಾಚೀ ದ್ಯಾವಾಪೃಥಿವೀ ಬ್ರಹ್ಮಣಾ ಕೃಧಿ ಸ್ವ೧ರ್ಣ ಶುಕ್ರಮುಷಸೋ ವಿ ದಿದ್ಯುತುಃ ॥
>
> (ಋ. ಸಂ. ೨-೨-೭)

ಇತ್ಯಾದಿ ಋಕ್ಕುಗಳಲ್ಲಿ ಸ್ವಃ ಎಂಬ ಶಬ್ದಕ್ಕೆ ಆದಿತ್ಯನೆಂದು ಅರ್ಥಮಾಡಿದ್ದಾರೆ. ಇದರಂತೆಯೇ ವತ್ ಇತ್ಯಾದಿ ಪ್ರತ್ಯಯಗಳೊಡನೆ ಕೂಡಿದ ಸ್ವರ್ವತ್ ಇತ್ಯಾದಿ ಶಬ್ದಗಳಿಗೂ ಸಹ ಸಂದರ್ಭಾನುಸಾರವಾಗಿ ಅರ್ಥಮಾಡಬೇಕು. ಉದಾಹರಣೆಗೆ—

**ಯಾ ಇಂದ್ರ ಭುಜ ಆಭರಃ ಸ್ವರ್ವಾँ ಅಸುರೇಭ್ಯಃ ।**
**ಸ್ತೋತಾರಮಿನ್ಮಘವನ್ನಸ್ಯ ವರ್ಧಯ ಯೇ ಚ ತ್ವೇ ವೃಕ್ತಬರ್ಹಿಷಃ ॥**

(ಋ ಸಂ. ೮-೯೭-೧)

ಎಂಬ ಋಕ್ಕಿನಲ್ಲಿ—ಸುಖವಾನ್, ಸ್ವರ್ಗವಾನ್ ವಾ ಅಥವಾ **ಸ್ವಶಬ್ದಃ ಸರ್ವಪರ್ಯಾಯಃ । ಸರ್ವಂ ಭೂತಜಾತಂ ಆತ್ಮನ ಏವೋತ್ಪನ್ನತ್ವಾತ್ತದ್ವಾನ್ ।** ಸ್ವಃ ಎಂಬ ಶಬ್ದಕ್ಕೆ ಸುಖ, ಸ್ವರ್ಗ ಅಥವಾ ಸಮಸ್ತ ಎಂಬರ್ಥಗಳಾಗುವುದರಿಂದ ಸ್ವರ್ವಾನ್ ಎಂದರೆ ಸುಖವಂತ, ಸ್ವರ್ಗವಾಸಿ ಅಥವಾ ಸಮಸ್ತವನ್ನೂ ಪಡೆದಿರುವವನು ಎಂದಾಗುವುದು. ಇಂದ್ರನಿಗೆ ವಿಶೇಷಣವಾದಾಗ ಈ ಎಲ್ಲಾ ಅರ್ಥಗಳೂ ಹೊಂದಿಕೊಳ್ಳುವವು, ಮತ್ತು,

**ತಂ ಶಿಶೀತಾ ಸ್ವಧ್ವರಂ ಸತ್ಯಂ ಸತ್ವಾನಮೃತ್ವಿಯಂ ।**
**ಉತೋ ನು ಚಿದ್ಯ ಓಹತ ಆಂಡಾ ಶುಷ್ಣಸ್ಯ ಭೇದತ್ಯಜೈಃ ಸ್ವರ್ವತೀರಪೋ ನಭಂತಾಮನ್ಯಕೇ ಸಮೇ ॥**

(ಋ. ಸಂ. ೮-೪೦-೧೧)

ಇತ್ಯಾದಿ ಸ್ಥಳಗಳಲ್ಲಿ **ಸರ್ವತೀಃ ಅಪಃ** ಎಂದು ಉದಕಕ್ಕೆ ವಿಶೇಷಣವಾದಾಗ **ದಿವ್ಯಾನಿ** ಎಂದರೆ ಸ್ವರ್ಗಲೋಕದಲ್ಲಿ ಉತ್ಪನ್ನವಾದ ಉದಕವೆಂದರ್ಥ. ಈ ವಿಶೇಶಣವು ಅಗ್ನಿಯೇ ಮೊದಲಾದ ಇತರ ದೇವತೆಗಳ ಗುಣಗಳನ್ನೂ ವರ್ಣಿಸುತ್ತದೆ.

**ಜ್ಯೋತಿಷ್ಮತೀಮದಿತಿಂ ಧಾರಯತ್‌ಕ್ಷಿತಿಂ ಸ್ವರ್ವತೀಮಾ ಸಚೇತೇ ದಿವೇ ದಿವೇ ಜಾಗೃವಾಂಸಾ ದಿವೇದಿವೇ ॥**

(ಋ. ಸಂ. ೧-೧೩೬-೩)

ಎಂಬಲ್ಲಿ ಸ್ವರ್ವತೀ ಎಂಬುದು ಅದಿತಿಗೆ ವಿಶೇಷಣವಾಗಿದೆ. ಇಲ್ಲಿ—**ಯಜ್ಞನಿಷ್ಪತ್ತಿದ್ವಾರಾ ಸ್ವರ್ಗವತೀಂ** ಎಂದು ಅರ್ಥಮಾಡಿರುವಂತೆ ವಿವರಿಸಿದೆ

**ಆ ತೇ ಶುಷ್ಮೋ ವೃಷಭ ಏತು ಪಶ್ಚಾದೋತ್ತರಾದಧರಾದ ಪುರಸ್ತಾತ್ ।**
**ಆ ವಿಶ್ವತೋ ಅಭಿ ಸಮೇತ್ವರ್ವಾಙಿಂದ್ರ ದ್ಯುಮ್ನಂ ಸ್ವರ್ವದ್ಧೇಹ್ಯಸ್ಮೇ ॥**

(ಋ. ಸಂ. ೬-೧೯-೯)

ಇತ್ಯಾದಿ ಋಕ್ಕುಗಳಲ್ಲಿ ಸುಖಯುಕ್ತಂ ಧನಂ ಎಂಬರ್ಥವನ್ನೂ ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಆದಿತ್ಯ ಎಂದರ್ಥವು.

**ಭಾನುನಾ**—**ಭಾನುಃ** ಎಂಬ ಶಬ್ದವು **ವಸ್ತೋಃ ದ್ಯೌಃ** ಮೊದಲಾದ ಹನ್ನೆರಡು ಅಹರ್ನಾಮಗಳಲ್ಲಿ ಪಠಿತವಾಗಿರುವುದರಿಂದ ಪ್ರಕಾಶಮಾನವಾದ ಹಗಲು ಎಂದರ್ಥವು. **ಭಾನುಃ ಭಾಸತೇ ಹ್ಯೇತತ್ ಜ್ಯೋತಿಷಾ**-ಸ್ವಪ್ರಕಾಶದಿಂದ ಬೆಳಗುತ್ತಿರುವುದರಿಂದ ಸೂರ್ಯನ ಕಿರಣಗಳೆಂದು ಇಲ್ಲಿ ಅರ್ಥಮಾಡಿದೆ.

ಸಂಹಿತಾಪಾಠಃ

ಅತ್ರಿಮನು ಸ್ವರಾಜ್ಯಮಗ್ನಿಮುಕ್ಥಾನಿ ವಾವೃಧುಃ ।

ವಿಶ್ವಾ ಅಧಿ ಶ್ರಿಯೋ ದಧೇ ॥ ೫ ॥

ಪದಪಾಠಃ

ಅತ್ರಿಂ । ಅನು । ಸ್ವಽರಾಜ್ಯಂ । ಅಗ್ನಿಂ । ಉಕ್ಥಾನಿ । ವವೃಧುಃ ।

ವಿಶ್ವಾಃ । ಅಧಿ । ಶ್ರಿಯಃ । ದಧೇ ॥ ೫ ॥

ಸಾಯಣಭಾಷ್ಯಂ

ಅತ್ರಿಂ ಶತ್ರೂಣಾಮನ್ನಾನಾಂ ವಾ ಭಕ್ಷಕಂ ಸ್ವರಾಜ್ಯಂ ಸ್ವಯಮೇವ ರಾಜಮಾನಂ ಸ್ವರಾಜ್ಯ-ಮನು ಅಭಿಲಕ್ಷ್ಯ ವಾಗ್ನಿಮುಕ್ಥಾನಿ ಶಸ್ತ್ರಾಣಿ ವವೃಧುಃ । ವರ್ಧಯಂತಿ । ಸ ಚಾಗ್ನಿರ್ವಿಶ್ವಾಃ ಸರ್ವಾಃ ಶ್ರಿಯೋಽಧಿ ದಧೇ ಧಾರಯತಿ ॥

ಪ್ರತಿಪದಾರ್ಥ

ಅತ್ರಿಂ—ಶತ್ರುಭಕ್ಷಕನೂ ಅಥವಾ ಅನ್ನವನ್ನು ಭಕ್ಷಿಸತಕ್ಕವನೂ । ಸ್ವರಾಜ್ಯಂ—ತಾನೇ ಪೂರ್ಣವಾದ ಪ್ರಭುವಾಗಿ ಪ್ರಕಾಶಿಸುವವನೂ ಆದ । ಅಗ್ನಿಂ ಅನು—ಅಗ್ನಿಯನ್ನು ಉದ್ದೇಶಿಸಿ ಪಠಿಸಿದ । ಉಕ್ಥಾನಿ—ನಮ್ಮ ಶಸ್ತ್ರಮಂತ್ರಗಳು । ವವೃಧುಃ—(ಅವನನ್ನು) ಪ್ರವೃದ್ಧನನ್ನಾಗಿ ಮಾಡುತ್ತವೆ (ಅವನು) । ವಿಶ್ವಾಃ ಶ್ರಿಯಃ-ಸಕಲ ಸಂಪತ್ತುಗಳನ್ನೂ । ಅಧಿ ದಧೇ—ಹೊಂದಿದ್ದಾನೆ

ಭಾವಾರ್ಥ

ಶತ್ರುಭಕ್ಷಕನೂ, ತಾನೇ ಪೂರ್ಣವಾದ ಪ್ರಭುವಾಗಿ ಪ್ರಕಾಶಿಸುವವನೂ ಆದ ಅಗ್ನಿಯನ್ನು ಸ್ತುತಿಸಿ ಪಠಿಸಿದ ನಮ್ಮ ಶಸ್ತ್ರಮಂತ್ರಗಳು ಅವನನ್ನು ಪ್ರವೃದ್ಧನನ್ನಾಗಿ ಮಾಡುತ್ತವೆ. ಅವನು ಸಕಲ ಸಂಪತ್ತುಗಳನ್ನೂ ಹೊಂದಿದ್ದಾನೆ.

English Translation

Our praises have increased the self-irradiating devouring Agni: he is possessed of all glory.

ವಿಶೇಷವಿಷಯಗಳು

ಅತ್ರಿಂ—ಅದ ಭಕ್ಷಣೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಭಾಷ್ಯಕಾರರು ಎರಡು ವಿಧವಾದ ಅರ್ಥಗಳನ್ನು ವಿವರಿಸಿರುವರು. ಅತ್ರಿಂ—ಶತ್ರೂನ್ ಅತ್ತಿ ಭಕ್ಷಯತಿ (ದಹತಿ) ಧ್ವಂಸಯತಿ ಇತಿ ಅತ್ರಿಃ— ಶತ್ರುಗಳನ್ನು ಭಕ್ಷಿಸುವವನಾದ್ದರಿಂದ ಅಥವಾ ದಹಿಸಿ ಧ್ವಂಸಮಾಡುವವನಾದ್ದರಿಂದ ಅತ್ರಿಯೆಂದು ಹೆಸರು ಅಥವಾ

ಅದ್ಯತ್ತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತ ಇತಿ ಎಂಬ ಶ್ರುತಿವಾಕ್ಯಾನುಸಾರವಾಗಿ ತಿನ್ನಲ್ಪಡುವುದಕ್ಕೆ ಯೋಗ್ಯವಾದ ವಸ್ತುವಿಗೆ ಅನ್ನವೆಂದು ಹೆಸರು. ಅಂತಹ ಅನ್ನವನ್ನು ಅಥವಾ ಹವೀರೂಪವಾದ ಅನ್ನವನ್ನು ಭಕ್ಷಿಸುವವನಾದ್ದರಿಂದ (ದಹಿಸುವವನಾದ್ದರಿಂದ) ಅತ್ರಿಯೆಂದು ಹೆಸರು ಎಂದು ಎರಡು ವಿಧವಾದ ಅರ್ಥಗಳನ್ನು ಹೇಳಿರುವರು. ಆದ್ದರಿಂದ ಅಗ್ನಿಯು ಶತ್ರುಗಳನ್ನು ಧ್ವಂಸಮಾಡುವವನು ಅಥವಾ ಹವೀರೂಪವಾದ ಅನ್ನವನ್ನು ಭಕ್ಷಿಸುವವನು ಎಂದಭಿಪ್ರಾಯವು.

ಸ್ವರಾಜ್ಯಂ--ಸ್ವಯಮೇವ ರಾಜಮಾನಂ ಸ್ವರಾಜ್ಯಮನು ಅಭಿಲಕ್ಷ್ಯ ವಾ । ಅಗ್ನಿಯು ಇನ್ನೊಂದು ಪ್ರಕಾಶಮಾನವಾದ ವಸ್ತುವಿನ ಸಹಾಯವಿಲ್ಲದೆ ತನ್ನ ಸ್ವಶಕ್ತಿಯಿಂದಲೇ ಪ್ರಕಾಶಿಸುವವನು ಅಥವಾ ಅಗ್ನಿಯು ಜನರಿಗೂ, ಪ್ರಾಣಿಗಳಿಗೂ ಧನಾದಿಗಳನ್ನು ಕೊಡುವ ಪ್ರಭುವಾಗಿರುವನು ಎಂದು ಎರಡು ಅರ್ಥಗಳನ್ನು ವಿವರಿಸಿದೆ.

ಉಕ್ಥಾನಿ—ಉಕ್ಥ್ಯ ಶಬ್ದವು ಪ್ರಶಸ್ಯನಾಮಗಳಲ್ಲಿ (ನಿ. ೩-೧೩) ಪಠಿತವಾಗಿದೆ. ದೇವತೆಗಳ ಗುಣಗಳನ್ನು ವರ್ಣಿಸಿ ಪಠಿಸುವ ಸ್ತೋತ್ರಾದಿಗಳು ಎಂದರ್ಥವು.

---

ಸಂಹಿತಾಪಾಠಃ

ಅಗ್ನೇರಿಂದ್ರಸ್ಯ ಸೋಮಸ್ಯ ದೇವಾನಾಮೂತಿಭಿರ್ವಯಂ ।

ಅರಿಷ್ಯಂತಃ ಸಚೇಮಹ್ಯಭಿ ಷ್ಯಾಮ ಪೃತನ್ಯತಃ ॥ ೬ ॥

ಪದಪಾಠಃ

ಅಗ್ನೇಃ । ಇಂದ್ರಸ್ಯ । ಸೋಮಸ್ಯ । ದೇವಾನಾಂ । ಊತಿಽಭಿಃ । ವಯಂ ।

ಅರಿಷ್ಯಂತಃ । ಸಚೇಮಹಿ । ಅಭಿ । ಸ್ಯಾಮ । ಪೃತನ್ಯತಃ ॥ ೬ ॥

ಸಾಯಣಭಾಷ್ಯಂ

ಅರಿಷ್ಯಂತಃ ಕೇನಾಪ್ಯಹಿಂಸ್ಯಮಾನಾ ವಯಮಗ್ನೇರಿಂದ್ರಸ್ಯ ಸೋಮಸ್ಯ ದೇವಾನಾಮನ್ಯೇಷಾಮಪ್ಯೂತಿಭೀ ರಕ್ಷಣಾಭಿಃ ಸಚೇಮಹಿ । ಯುಕ್ತಾ ಭವೇಮ । ತಥಾ ರಕ್ಷಾಯುಕ್ತಾ ವಯಂ ಪೃತನ್ಯತಃ ಪೃತನಾಮಾತ್ಮನ ಇಚ್ಛತಃ ಶತ್ರೂನಭಿಷ್ಯಾಮ । ಅಭಿಭವೇಮ ॥ ಪೃತನಾಶಬ್ದಾತ್ಕ್ಯಚಿ ಕವ್ಯಧ್ವರಪೃತನಸ್ಯರ್ಚಿ ಲೋಪ ಇತ್ಯವರ್ಣಲೋಪಃ ॥

ಪ್ರತಿಪದಾರ್ಥ

ಅರಿಷ್ಯಂತಃ—ಯಾರಿಂದಲೂ ಹಿಂಸಿತರಾಗದ । ವಯಂ—ನಾವು । ಅಗ್ನೇಃ—ಅಗ್ನಿಯ । ಇಂದ್ರಸ್ಯ—ಇಂದ್ರನ । ಸೋಮಸ್ಯ—ಸೋಮನ (ಮತ್ತು) । ದೇವಾನಾಂ—ಇತರ ಎಲ್ಲಾ ದೇವತೆಗಳ । ಊತಿಭಿಃ—ರಕ್ಷಣೆ

ಗಳೊಂದಿಗೆ । **ಸಚೇಮಹಿ**—ಸಂಯುಕ್ತರಾಗೋಣ (ಹಾಗೆಯೇ) । **ಪೃತನ್ಯತಃ**—ಸೈನ್ಯಯುಕ್ತರಾದ ಶತ್ರುಗಳನ್ನೂ । **ಅಭಿಷ್ಯಾಮ**—ಸೋಲಿಸುವ ಶಕ್ತಿಯನ್ನು ಪಡೆಯೋಣ.

ಭಾವಾರ್ಥ

ಯಾರ ಹಿಂಸೆಗೂ ಸಿಲುಕದಂತೆ ನಾವು ಅಗ್ನಿ, ಇಂದ್ರ, ಸೋಮ ಇವರ ರಕ್ಷಣೆಗಳೊಂದಿಗೂ ಹಾಗೆಯೇ ಇತರ ಎಲ್ಲಾ ದೇವತೆಗಳ ರಕ್ಷಣೆಗಳೊಂದಿಗೂ ಸಂಯುಕ್ತರಾಗೋಣ. ಅತಿಯಾದ ಸೈನ್ಯಶಕ್ತಿಯನ್ನು ಪಡೆದಿರುವ ಶತ್ರುಗಳನ್ನು ಸೋಲಿಸುವ ಶಕ್ತಿಯನ್ನು ಪಡೆಯೋಣ.

## English Translation

May we, uninjured, be secure in the protection of Agni, Indra, Soma, and the gods, and, confident in battle, overcome (our enemies).

ವಿಶೇಷವಿಷಯಗಳು

ಸೂಕ್ತದ ಉಪಸಂಹಾರರೂಪವಾದ ಈ ಋಕ್ಕಿನಲ್ಲಿ ಅಗ್ನಿ, ಇಂದ್ರ, ಸೋಮ ಮತ್ತು ಇತರ ಎಲ್ಲಾ ದೇವತೆಗಳ ರಕ್ಷಣೆಯನ್ನು ಅಪೇಕ್ಷಿಸಿ ಪ್ರಾರ್ಥಿಸಲಾಗಿದೆ.

ಪೃತನ್ಯತಃ—ಪ್ರತನಾಶಬ್ದವು ರಣಃ ಮೊದಲಾದ ನಲವತ್ತಾರು ಸಂಗ್ರಾಮ ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) ಪೃತನಾ ಎಂದರೆ ಯುದ್ಧವು. ಪೃತನ್ಯತಃ ಎಂದರೆ ಸೈನ್ಯಸಹಿತರಾಗಿ ಯುದ್ಧವನ್ನು ಮಾಡಬೇಕೆಂದಿರುವ ಶತ್ರುಗಳನ್ನು ಎಂದಭಿಪ್ರಾಯವು.

———:o:———

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕಭೂಪಾಲಸಾಮ್ರಾಜ್ಯ-
ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಋಕ್ಸಂಹಿತಾಭಾಷ್ಯೇ ದ್ವಿತೀಯಾಷ್ಟಕೇ ಪಂಚಮೋಽಧ್ಯಾಯಃ
॥ ಸಮಾಪ್ತಃ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ದ್ವಿತೀಯಾಷ್ಟಕದಲ್ಲಿ
ಐದನೆಯ ಅಧ್ಯಾಯವು ಸಮಾಪ್ತವಾದುದು.

———:o:———

॥ ಓಂ ತತ್ಸತ್ ॥

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥

———:o:———

॥ ಶ್ರೀ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ದ್ವಿತೀಯಾಷ್ಟಕಮಧ್ಯಸ್ಥಃ ಪಂಚಮೋಽಧ್ಯಾಯ ಆದರಾತ್ ।
ವ್ಯಾಖ್ಯಾತಃ ಸಾಯಣಾರ್ಯೇಣ ಷಷ್ಠಶ್ಚ ವ್ಯಾಕರಿಷ್ಯತೇ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದ ಸಂಹಿತಾ

## ॥ ದ್ವಿತೀಯಾಷ್ಟಕೇ ಷಷ್ಠೋಽಧ್ಯಾಯಃ ॥

### ॥ ಎರಡನೆಯ ಅಷ್ಟಕದಲ್ಲಿ ಆರನೆಯ ಅಧ್ಯಾಯವು ॥

### ಎರಡನೆಯ ಮಂಡಲದ ಸೂಕ್ತಗಳು ೯–೨೩

ಸಾಯಣಭಾಷ್ಯಂ

ನಿ ಹೋತೇತಿ ಷಡೃಚಂ ನವಮಂ ಸೂಕ್ತಂ ಗೃತ್ಸಮದಸ್ಯಾರ್ಷಂ ನಿ ಹೋತೇತ್ಯನುಕ್ರಾಂತ-ತ್ವಾತ್ । ಅನುಕ್ತತ್ವಾತ್ ತ್ರಿಷ್ಟುಪ್ । ಮಂಡಲಾದಿಪರಿಭಾಷಯಾಗ್ನಿರ್ದೇವತಾ ॥ ಪ್ರಾತರನುವಾಕಾಶ್ವಿನ-ಶಸ್ತ್ರಯೋರಾಗ್ನೇಯೇ ಕ್ರತೌ ತ್ರೈಷ್ಟುಭೇ ಛಂದಸ್ಯಸ್ಯ ವಿನಿಯೋಗಃ । ಅಥೈತಸ್ಯಾ ಇತಿ ಖಂಡೇ ಸೂತ್ರಿತಂ । ನಿ ಹೋತಾ ಹೋತೃಷದನ ಇತಿ ಸೂಕ್ತೇ । ಆ. ೪–೧೩ । ಇತಿ ॥ ಅಗ್ನಿಪ್ರಣಯನ ಆದ್ಯೇ ಋಚೌ ವಿನಿಯುಕ್ತೇ । ಪಂಚಮ್ಯಾಂ ಪೌರ್ಣಮಾಸ್ಯಾಮಿತಿ ಖಂಡೇ ಸೂತ್ರಿತಂ । ನಿ ಹೋತಾ ಹೋತೃ-ಷದನ ಇತಿ ದ್ವೇ । ಆ. ೨–೧೭ ॥

ಅನುವಾದವು—ನಿ ಹೋತಾ ಎಂಬ ಈ ಸೂಕ್ತವು, ಎರಡನೆಯ ಮಂಡಲದ ಮೊದಲನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಮಂಡಲದ್ರಷ್ಟೃವಾದ ಗೃತ್ಸಮದನೇ ಋಷಿಯು ; ಅಗ್ನಿಯು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಪ್ರಾತರನುವಾಕಾಶ್ವಿನಶಸ್ತ್ರಮಂತ್ರಗಳ ಪಠನಕಾಲದಲ್ಲಿ ಆಗ್ನೇಯ ಕ್ರತುಸಂಬಂಧವಾದ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ ಅಥೈತಸ್ಯಾ ಎಂಬ ಖಂಡದ—ನಿ ಹೋತಾ ಹೋತೃಷದನ ಇತಿ ಸೂಕ್ತೇ ಎಂಬ ಸೂತ್ರದಿಂದ ವಿವೃತವಾಗಿರುವುದು (ಆ ೪-೧೩) ಮತ್ತು ಅಗ್ನಿಪ್ರಣಯನವೆಂಬ ಯಜ್ಞಾಂಗವಾದ ಕರ್ಮದಲ್ಲಿ ಈ ಸೂಕ್ತದ ಮೊದಲಿನ ಎರಡು ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—ಪಂಚ-ಮ್ಯಾಂ ಪೌರ್ಣಮಾಸ್ಯಾಂ ಎಂಬ ಖಂಡದ ನಿ ಹೋತಾ ಹೋತೃಷದನ ಇತಿ ದ್ವೇ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೨-೧೭).

---

॥ ಓಂ ॥

## ಸೂಕ್ತ—೯

॥ ಮಂಡಲ—೨ ॥ ಅನುವಾಕ—೧ ॥ ಸೂಕ್ತ—೯ ॥
॥ ಅಷ್ಟಕ—೨ ॥ ಅಧ್ಯಾಯ—೬ ॥ ವರ್ಗ-೧ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ಗೃತ್ಸಮದಃ ॥
ದೇವತಾ—ಅಗ್ನಿಃ ॥
ಛಂದಃ—ತ್ರಿಷ್ಟುಪ್ ।

---

ಸಂಹಿತಾಪಾಠಃ

ನಿ ಹೋತಾ ಹೋತೃಷದನೇ ವಿದಾನಸ್ತ್ವೇಷೋ ದೀದಿವಾँ ಅಸದತ್ಸುದಕ್ಷಃ ।
ಅದಬ್ಧವ್ರತಪ್ರಮತಿರ್ವಸಿಷ್ಠಃ ಸಹಸ್ರಂಭರಃ ಶುಚಿಜಿಹ್ವೋ ಅಗ್ನಿಃ ॥ ೧ ॥

ಪದಪಾಠಃ

ನಿ । ಹೋತಾ । ಹೋತೃऽಸದನೇ । ವಿದಾನಃ । ತ್ವೇಷಃ । ದೀದಿऽವಾನ್ । ಅಸದತ್ । ಸುऽದಕ್ಷಃ ।
ಅದಬ್ಧವ್ರತऽಪ್ರಮತಿಃ । ವಸಿಷ್ಠಃ । ಸಹಸ್ರಂऽಭರಃ । ಶುಚಿऽಜಿಹ್ವಃ । ಅಗ್ನಿಃ ॥ ೧ ॥

### ಸಾಯಣಭಾಷ್ಯಂ

ಗೃತ್ಸಮದಃ ಸ್ತೌತಿ । ಹೋತಾ ದೇವಾನಾಮಾಹ್ವಾತಾ ವಿದಾನೋ ವಿದ್ವಾನ್ ತ್ವೇಷಃ ಪ್ರವೃದ್ಧೋ ದೀದಿವಾನ್ ದೀಪ್ಯಮಾನಃ ಸುದಕ್ಷಃ ಶೋಭನಬಲೋಽದಬ್ಧವ್ರತಪ್ರಮತಿಃ । ಅದಬ್ಧಾನ್ಯ-ಹಿಂಸಿತಾನಿ ವ್ರತಾನಿ ಕರ್ಮಾಣಿ ಯಸ್ಯಾಃ ಸಾದಬ್ಧವ್ರತಾ ಪ್ರಮತಿಃ ಪ್ರಕೃಷ್ಟಾ ಬುದ್ಧಿರ್ಯಸ್ಯ ಸ ತಥೋಕ್ತಃ । ವಸಿಷ್ಠಃ ಸರ್ವಸ್ಯ ವಾಸಯಿತೃತಮಃ ॥ ವಾಸಯತೇಸ್ತೃಜಂತಸ್ಯೇಷ್ಠನಿ ರೂಪಂ ॥ ಸಹಸ್ರಂಭರಃ ಸಹಸ್ರಸ್ಯಾನೇಕವಿಧಸ್ಯ ಭರ್ತಾ । ವಿಹರಣೇನ ನಾನಾವಿಧರೂಪಸ್ಯ ಧಾರಕ ಇತ್ಯರ್ಥಃ । ಯದ್ವಾ ಸಹಸ್ರಸ್ಯ ಸರ್ವಸ್ಯ ಭರ್ತಾ । ತಥಾ ಚ ವಾಜಸನೇಯಿಂ । ಸರ್ವಂ ವೈ ಸಹಸ್ರಂ ಸರ್ವಂ-ಭರ ಇತ್ಯೇವ ತದಾಹೇತಿ । ಶುಚಿಜಿಹ್ವಃ । ಶುಚಿರ್ದೀಪ್ತಾ ಜಿಹ್ವಾ ಜ್ವಾಲಾ ಯಸ್ಯ ಸ ತಥೋಕ್ತಃ । ಏವಂಭೂತೋಽಗ್ನಿರ್ಹೋತೃಷದನೇ । ಹೋತಾತ್ರ ಸೀದತೀತಿ ಹೋತೃಷದನಮುತ್ತರಾ ವೇದೀ ॥ ಅಧಿಕರಣೇ ಲ್ಯುಟ್ ॥ ತತ್ರ ನ್ಯಸದತ್ । ನಿತರಾಂ ಸೀದತು ॥ ಉಕ್ತಾರ್ಥೇ ಬ್ರಾಹ್ಮಣಂ । ನಿ ಹೋತಾ ಹೋತೃಷದನೇ ವಿದಾದ ಇತ್ಯಗ್ನಿರ್ವೈ ದೇವಾನಾಂ ಹೋತಾ ತಸ್ಯೈತದ್ಧೋತೃಷದನಂ ಯದುತ್ತರವೇದೀನಾಭಿಸ್ತ್ವೇಷೋ ದೀದಿವಾ ಅಸದತ್ಸುದಕ್ಷ ಇತ್ಯಾಸನ್ನೋ ಹಿ ಸ ತರ್ಹಿ ಭವತ್ಯ-ದಬ್ಧವ್ರತಪ್ರಮತಿರ್ವಸಿಷ್ಠ ಇತ್ಯಗ್ನಿರ್ವೈ ದೇವಾನಾಂ ವಸಿಷ್ಠಃ ಸಹಸ್ರಂಭರಃ ಶುಚಿಜಿಹ್ವೋ ಅಗ್ನಿರಿತ್ಯೇಷಾ ಹ ವಾ ಅಸ್ಯ ಸಹಸ್ರಂಭರತಾ ಯದೇನಮೇಕಂ ಸಂತಂ ಬಹುಧಾ ವಿಹರಂತಿ । ಐ. ಬ್ರಾ. ೧. ೨೮. । ಇತಿ ॥

### ಪ್ರತಿಪದಾರ್ಥ

**ಹೋತಾ**—ದೇವತೆಗಳನ್ನು ಯಜ್ಞಕ್ಕೆ ಕರೆಯತಕ್ಕವನೂ । **ವಿದಾನಃ**—ಪ್ರಾಜ್ಞನೂ । **ತ್ವೇಷಃ**—ಪ್ರವೃದ್ಧನೂ । **ದೀದಿವಾನ್**—ಪ್ರಕಾಶಮಾನನೂ । **ಸುದಕ್ಷಃ**—ಶ್ರೇಷ್ಠವಾದ ಬಲವುಳ್ಳವನೂ । **ಅದಬ್ಧ-ವ್ರತಪ್ರಮತಿಃ**—ತನ್ನ ವ್ರತವು ಹಿಂಸಿತವಾಗಲಾರದು ಎಂಬ ನಿಷ್ಕೃಷ್ಟವಾದ ಜ್ಞಾನವುಳ್ಳವನೂ । **ವಸಿಷ್ಠಃ**—ಶ್ರೇಷ್ಠವಾದ ವಾಸಸ್ಥಾನವುಳ್ಳವನೂ । **ಸಹಸ್ರಂಭರಃ**—ಸಹಸ್ರಾರು ರೂಪಗಳನ್ನು ಧರಿಸಿರುವವನೂ । **ಶುಚಿಜಿಹ್ವಃ**-ಪ್ರಕಾಶಮಾನವಾದುದೂ ಜ್ವಾಲಾರೂಪವಾದುದೂ ಆದ ಜಿಹ್ವೆಯುಳ್ಳವನೂ ಆದ । **ಅಗ್ನಿಃ**—ಅಗ್ನಿಯು । **ಹೋತೃಷದನೇ**—ಹೋತೃವಿನ ಸ್ಥಾನವಾದ ಉತ್ತರವೇದಿಯಲ್ಲಿ । **ನಿ ಅಸದತ್**—ಕುಳಿತುಕೊಳ್ಳಲಿ ।

### ಭಾವಾರ್ಥ

ದೇವತೆಗಳನ್ನು ಯಜ್ಞಕ್ಕೆ ಕರೆಯತಕ್ಕವನೂ, ಪ್ರಾಜ್ಞನೂ, ಪ್ರವೃದ್ಧನೂ, ಪ್ರಕಾಶಮಾನನೂ, ಶ್ರೇಷ್ಠವಾದ ಬಲವುಳ್ಳವನೂ, ತನ್ನ ವ್ರತವು ಹಿಂಸಿತವಾಗಲಾರದೆಂಬ ನಿಷ್ಕೃಷ್ಟವಾದ ಜ್ಞಾನವುಳ್ಳವನೂ, ಶ್ರೇಷ್ಠವಾದ ವಾಸಸ್ಥಾನವುಳ್ಳವನೂ, ಸಹಸ್ರಾರು ರೂಪಗಳನ್ನು ಧರಿಸಿರುವವನೂ, ಪ್ರಕಾಶಮಾನವಾದುದೂ, ಜ್ವಾಲಾರೂಪವುಳ್ಳದ್ದೂ ಆದ ಜಿಹ್ವೆಯುಳ್ಳವನೂ ಆದ ಅಗ್ನಿಯು ಹೋತೃವಿನ ಸ್ಥಾನವಾದ ಉತ್ತರವೇದಿಯಲ್ಲಿ ಕುಳಿತುಕೊಳ್ಳಲಿ.

### English Translation

May Agni, the invoker (of the gods), the intelligent, the resplendent, the radiant, the very powerful; he who knows (how to maintain) his rites

**undisturbed ; who is steady in (his own) place, and is the cherisher of thousands, sit in the station of the invoking priest.**

**ವಿಶೇಷವಿಷಯಗಳು**

ಈ ಋಕ್ಕಿನಲ್ಲಿ ಗೃತ್ಸಮದಋಷಿಯು ಅಗ್ನಿಯನ್ನು ನಾನಾವಿಧ ವಿಶೇಷಣಶಬ್ದಗಳಿಂದ ವರ್ಣಿಸಿ ಸ್ತೋತ್ರ ಮಾಡಿರುವನು

**ಹೋತಾ**—ದೇವತೆಗಳನ್ನು ಆಹ್ವಾನಮಾಡುವವನು ಎಂದರೆ ಯಜ್ಞದಲ್ಲಿ ಆಹೂತರಾದ ದೇವತೆಗಳನ್ನು ಯಜ್ಞವೇದಿಗೆ ಕರೆತರುವ ಅಗ್ನಿಯು. ಹೋತೃಶಬ್ದವು ಯಜ್ಞದಲ್ಲಿ ಮನುಷ್ಯಹೋತೃಗಳೆಂಬ ಅರ್ಥದಲ್ಲಿಯೂ, ಹೋಮನಿಷ್ಪಾದಕನಾದ ಎಂದರೆ ಹೋಮವನ್ನು ನೆರವೇರಿಸುವ ಅಗ್ನಿಯೆಂಬರ್ಥದಲ್ಲಿಯೂ, ದೇವತೆಗಳನ್ನು ಆಹ್ವಾನ ಮಾಡುವ ಅಗ್ನಿಯೆಂಬರ್ಥದಲ್ಲಿಯೂ ಉಪಯೋಗಿಸಲ್ಪಡುವುದು. ಇಲ್ಲಿ ದೇವತೆಗಳನ್ನು ಆಹ್ವಾನಮಾಡುವ ಅಗ್ನಿ ಯಂದೇ ಉಕ್ತವಾಗಿರುವುನು.

**ತ್ವೇಷಃ**—ಪ್ರವೃದ್ಧನಾದ ಎಂದರೆ ಸಮಿತ್, ಕಾಷ್ಠ ಮೊದಲಾದವುಗಳಿಂದ ಜಾಜ್ವಲ್ಯಮಾನವಾಗಿ ಧಗಧಗನೆ ಉರಿಯುತ್ತಿರುವ ಅಗ್ನಿಯು. ಅಗ್ನಿಯನ್ನು ಅರಣಿಗಳಲ್ಲಿ ಮಥನಮಾಡಿದಾಗ ಅಗ್ನಿಯು ಬಹಳ ಸಣ್ಣದಾಗಿರುವುದರಿಂದ ಶಿಶುರೂಪದಲ್ಲಿರುವುದೆಂದು ಹೇಳಲ್ಪಡುವುದು. ಅದೇ ಅಗ್ನಿಯು ಆಹವನೀಯಾದಿಗಳಲ್ಲಿ ಸ್ಥಾಪಿತವಾಗಿ ಕಾಷ್ಠಾದಿಗಳಿಂದಲೂ, ಆಜ್ಯಾದ್ಯಾಹುತಿಗಳಿಂದಲೂ ದೊಡ್ಡದಾಗಿ ಉರಿಯುತ್ತಿರುವಾಗ ಪ್ರವೃದ್ಧನೆಂದು ಹೇಳಲ್ಪಡುವುದು. ತ್ವೇಷಃ ಎಂಬ ಶಬ್ದವು ತ್ವಿಷ್ ಬೆಳಗು ಎಂಬ ಧಾತುವಿನಿಂದ ನಿಷ್ಪನ್ನವಾಗಿ, ಪ್ರಕಾಶಮಾನವಾಗಿ ಬೆಳಗುತ್ತಿರುವವನು ಎಂಬರ್ಥವನ್ನು ಸೂಚಿಸುವುದು

**ಸುದಕ್ಷಃ**—ದಕ್ಷಃ ಎಂಬ ಶಬ್ದವು ಓಜಃ ಪಾಜಃ ಮೊದಲಾದ ಇಪ್ಪತ್ತೆಂಟು ಬಲನಾಮಗಳಲ್ಲಿ ಪಠಿತ ವಾಗಿರುವುದರಿಂದ (ನಿ. ೩-೯) ಸುದಕ್ಷಃ ಎಂದರೆ ಅತ್ಯಂತ ಬಲವುಳ್ಳವನು ಎಂದರ್ಥವು.

**ಅದಬ್ಧವ್ರತಪ್ರಮತಿಃ**—ಅದಬ್ಧಾನ್ಯಹಿಂಸಿತಾನಿ ವ್ರತಾನಿ ಕರ್ಮಾಣಿ ಯಸ್ಯಾಃ ಸಾದಬ್ಧವ್ರತಾ ಪ್ರಮತಿಃ ಪ್ರಕೃಷ್ಟಾ ಬುದ್ಧಿರ್ಯಸ್ಯ ಸ ತಥೋಕ್ತಃ । ಎಂದರೆ, ಅಗ್ನಿಯ ಕರ್ಮಗಳು ಎಂದರೆ ದೇವತಾಹ್ವಾನ, ಹವಿರ್ನಿರ್ವಹಣ ಮೊದಲಾದ ಯಜ್ಞಾಂಗಕರ್ಮಗಳು ಅಹಿಂಸಿತವಾದವು ಎಂದರೆ ಯಾರಿಗೂ ಹಿಂಸೆಯನ್ನು ಮಾಡ ದಿರುವ ಸ್ವಭಾವವುಳ್ಳವು. ತಾನು ಮಾಡುವ ಕರ್ಮಗಳು ಇಂತಹ ಸ್ವಭಾವವುಳ್ಳವುಗಳೆಂಬ ಪ್ರಕೃಷ್ಟವಾದ ಜ್ಞಾನವುಳ್ಳ ಅಗ್ನಿಯೆಂದಭಿಪ್ರಾಯವು. ಋಗ್ವೇದದಲ್ಲಿ ಎರಡು ಪದಗಳಿಗಿಂತ ಹೆಚ್ಚಾಗಿರುವ ಸಮಾಸಪದಗಳು (compound words) ಬಹಳ ಅಪರೂಪವು. ಈ ಶಬ್ದದಲ್ಲಿ ಅದಬ್ಧ + ವ್ರತ + ಪ್ರಮತಿ ಎಂಬ ಮೂರು ಪದಗಳು ಸೇರಿ ಒಂದು ಸಮಾಸಪದವಾಗಿದೆ. ಇಂತಹ ಪ್ರಯೋಗಗಳು ಅತಿವಿರಳ.

**ವಸಿಷ್ಠಃ**—ಸರ್ವಸ್ಯ ವಾಸಯಿತೃತಮಃ । ಸರ್ವರಿಗೂ ವಾಸಸ್ಥಾನವನ್ನು ಒದಗಿಸಿಕೊಡುವವರಲ್ಲಿ ಶ್ರೇಷ್ಠನು. ಅಥವಾ ಉತ್ತಮವಾದ ವಾಸಸ್ಥಾನವುಳ್ಳವನು.

**ಸಹಸ್ರಂಭರಃ**—ಸಹಸ್ರಸ್ಯಾನೇಕವಿಧಸ್ಯ ಭರ್ತಾ । ವಿಹರಣೇನ ನಾನಾವಿಧರೂಪಸ್ಯ ಧಾರಕ ಇತ್ಯರ್ಥಃ । ಯದ್ವಾ ಸಹಸ್ರಸ್ಯ ಸರ್ವಸ್ಯ ಭರ್ತಾ । ಇಲ್ಲಿ ಸಹಸ್ರಶಬ್ದಕ್ಕೆ ಅನೇಕವೆಂದು ಅರ್ಥವು; ಅಗ್ನಿಯು

ಅನೇಕವಿಧರೂಪಗಳನ್ನು ತನ್ನ ಇಷ್ಟಾನುಸಾರವಾಗಿ ಧರಿಸಲು ಸಮರ್ಥನು ಅಥವಾ ಅನೇಕ ಜನರಿಗೆ ಪ್ರಭುವಾಗಿ ಅವರನ್ನು ಧರಿಸುವವನು (ಪೋಷಿಸುವವನು) ಎಂದಭಿಪ್ರಾಯವು ಈ ವಿಷಯದಲ್ಲಿ ಭಾಷ್ಯಕಾರರು— **ಸರ್ವಂ ವೈ ಸಹಸ್ರಂ ಸರ್ವಂಭರ ಇತ್ಯೇವ ತದಾಹ** ಎಂಬ ವಾಜಸನೇಯ (ಶುಕ್ಲಯಜುರ್ವೇದ) ಶ್ರುತಿವಾಕ್ಯವನ್ನು ಉದಾಹರಣೆಯಾಗಿ ಕೊಟ್ಟಿರುವರು.

**ಶುಚಿಜಿಹ್ವಃ ಶುಚಿರ್ದೀಪ್ತಾ ಜಿಹ್ವಾ ಜ್ವಾಲಾ ಯಸ್ಯ** । ಶುಚಿಯೆಂದರೆ ಪ್ರಕಾಶಮಾನವಾದ; ಜಿಹ್ವಾ ಎಂದರೆ ನಾಲಗೆಯು; ಪ್ರಕಾಶಮಾನವಾದ ನಾಲಗೆಯುಳ್ಳವನು ಎಂದರೆ ಪ್ರಕಾಶಮಾನವಾಗಿ ಉರಿಯುತ್ತಿರುವ ಜ್ವಾಲೆಗಳುಳ್ಳವನು ಎಂದರ್ಥವು ಅಗ್ನಿಯ ಜ್ವಾಲೆಗಳೇ ಅಗ್ನಿಗೆ ನಾಲಗೆಗಳೆಂದು (ಜಿಹ್ವ) ಹೇಳಲ್ಪಡುವುದು

**ಹೋತೃಷದನೇ—ಹೋತಾತ್ರ ಸೀದತೀತಿ ಹೋತೃಷದನಮುತ್ತರಾ ವೇದೀ** । ಹೋತೃವೆಂಬ ಋತ್ವಿಜನು ಯಜ್ಞವೇದಿಯಲ್ಲಿ ಕುಳಿತುಕೊಳ್ಳುವ ಸ್ಥಳಕ್ಕೆ ಹೋತೃಷದನ (ಹೋತೃ+ಸದನ) ವೆಂದು ಹೆಸರು. ಎಂದರೆ ಉತ್ತರವೇದಿಯೆಂಬ ಸ್ಥಳವೆಂದಭಿಪ್ರಾಯವು. ಈ ವಿಷಯದಲ್ಲಿ ಭಾಷ್ಯಕಾರರು ಐತರೇಯ ಬ್ರಾಹ್ಮಣದ ವಾಕ್ಯವನ್ನು ಉದಾಹರಿಸಿದ್ದಾರೆ. (ಐ. ಬ್ರಾ. ೧-೨೮) ಈ ಸೂಕ್ತದ ಮೊದಲನೇ ಎರಡು ಋಕ್ಕುಗಳು-ಯಜ್ಞದಲ್ಲಿ ಅಗ್ನಿಪ್ರಣಯನವೆಂಬ (ಅಗ್ನಿಯನ್ನು ಉತ್ತರವೇದಿಯಲ್ಲಿ ಸ್ಥಾಪಿಸುವುದು) ಕರ್ಮವನ್ನು ಮಾಡುವಾಗ ಪಠಿಸಬೇಕಾದ ಎಂಟು ಋಕ್ಕುಗಳಲ್ಲಿ ಕೊನೆಯ ಎರಡು ಋಕ್ಕುಗಳು (೭-೮ನೆಯ ಋಕ್ಕುಗಳು) ; ಅಗ್ನಿಪ್ರಣಯನವೆಂಬ ಈ ಕಾರ್ಯವು ಪಶುಯಾಗ, ಮತ್ತು ಸೋಮಯಾಗಗಳಲ್ಲಿ ನೆರವೇರಿಸಲ್ಪಡುವ ಒಂದು ಮುಖ್ಯವಾದ ಕರ್ಮವು ಆಹವನೀಯಾಗ್ನಿ ಯಲ್ಲಿರುವ ಅಗ್ನಿಯನ್ನು ಉತ್ತರ ವೇದಿಗೆ ತೆಗೆದುಕೊಂಡು ಹೋಗುವ ಕರ್ಮಕ್ಕೆ ಅಗ್ನಿಪ್ರಣಯನವೆಂದು ಹೇಳಲ್ಪಡು ವುದು. ಅದನ್ನು ಅಧ್ವರ್ಯುವು ಮಾಡುವಾಗ ಆ ಸಮಯಕ್ಕೆ ಬೇಕಾಗುವ ಮಂತ್ರಗಳನ್ನು ಪಠಿಸುವಂತೆ ಹೋತೃ ವೆಂಬ ಋತ್ವಿಜನಿಗೆ ಪ್ರೈಷಮಂತ್ರದ ಮೂಲಕ ನಿರ್ದೇಶಿಸುವನು. ಆದುದರಿಂದ ಅಗ್ನಿಪ್ರಣಯನವೆಂಬ ಕರ್ಮದ ವಿವರವನ್ನು ಐತರೇಯ ಬ್ರಾಹ್ಮಣದಲ್ಲಿ ಹೇಳಿರುವಂತೆ ಇಲ್ಲಿ ವಿವರಿಸಲಾಗಿದೆ—

### ॥ ಅಗ್ನಿಪ್ರಣಯನವೆಂಬ ಕರ್ಮವು ॥

**ಅಗ್ನಯೇ ಪ್ರಣೀಯಮಾನಾಯಾನುಬ್ರೂಹೀತ್ಯಾಹಾಧ್ವರ್ಯುಃ** ।

ಯಜ್ಞದಲ್ಲಿ ಮಾಡಲ್ಪಡುವಸೋಮಕ್ರಯಣ (ಸೋಮಲತೆಗಳನ್ನು ಕೊಂಡುಕೊಳ್ಳುವುದು) ಎಂಬ ಕರ್ಮವನ್ನು ಮಾಡಿ ಮುಗಿಸಿದ ಬಳಿಕ ಆಹವನೀಯ ಕುಂಡದಲ್ಲಿರುವ ಅಗ್ನಿಯನ್ನು ಉತ್ತರವೇದಿಗೆ ತೆಗೆದುಕೊಂಡು ಹೋಗುವುದಕ್ಕಾಗಿ ನೆರವೇರಿಸಲ್ಪಡುವ ಅಗ್ನಿಪ್ರಣಯನ ಎಂಬ ಕರ್ಮವನ್ನು ಮಾಡುವುದಕ್ಕಾಗಿ ಅಧ್ವರ್ಯುವು (ಋತ್ವಿಜನು) ಹೋತೃವ- ನ್ನುದ್ದೇಶಿಸಿ ಎಲೈ ಹೋತೃವೇ, ಅಗ್ನಿಪ್ರಣಯನಕಾರ್ಯಕ್ಕಾಗಿ ನಿರ್ದಿಷ್ಟವಾಗಿರುವ ಋಕ್ಕುಗಳನ್ನು ಪಠಿಸು ಎಂದು (ಮೇಲಿನ ಪ್ರೈಷಮಂತ್ರದಿಂದ) ನಿರ್ದೇಶಿಸುವನು. ಆಗ ಹೋತೃವು ಈ ಕಾರ್ಯಕ್ಕಾಗಿ ಪಠಿಸಬೇಕಾಗಿರುವ ಎಂಟು ಋಕ್ಕುಗಳಲ್ಲಿ-

(1) **ಪ್ರ ದೇವಂ ದೇವ್ಯಾ ಧಿಯಾ ಭರತಾ ಜಾತವೇದಸಂ** ।

**ಹವ್ಯಾ ನೋ ವಕ್ಷದಾನುಷಗಿತಿ ಗಾಯತ್ರೀಂ ಬ್ರಾಹ್ಮಣಸ್ಯಾನುಬ್ರೂಯಾತ್**॥

(ಋ. ಸಂ. ೧೦-೧೭೬-೨)

ಎಂಬ ಮೊದಲನೆಯ ಋಕ್ಕನ್ನು ಪಠಿಸುವನು— [ಈ ಋಕ್ಕಿನ ಮುಖ್ಯಾಭಿಪ್ರಾಯವು --ಯಜಮಾನನು ಋತ್ವಿಕ್ಕು ಗಳನ್ನು ಸಂಬೋಧಿಸಿ ಎಲೈ ಋತ್ವಿಕ್ಕುಗಳೇ, ಜಾತವೇದನಾಮಕನಾದ ಈ ಅಗ್ನಿಯನ್ನು ಈ ದೇವನಿಗೆ ತಕ್ಕಸ್ತೋತ್ರಾ ದಿಗಳಿಂದ ಮತ್ತು ಸಮಯೋಚಿತವಾದ ಕರ್ಮದಿಂದ ಕೂಡಿ ಉತ್ತರವೇದಿಯ ಬಳಿಗೆ ತೆಗೆದುಕೊಂಡು ಹೋಗಿ.

ಅನಂತರ ಈ ಅಗ್ನಿಯು ನಾವು ಅರ್ಪಿಸುವ ಹವಿರಾದಿಗಳನ್ನು ದೇವತೆಗಳಿಗೆ ವಹಿಸಲಿ ಎಂದು ಹೇಳುವನು]. ಮೇಲೆ ಹೇಳಿದ ಋಕ್ಕು ಗಾಯತ್ರೀಛಂದಸ್ಸಿನದು. ಈ ಛಂದಸ್ಸಿನ ಋಕ್ಕನ್ನೇ ಏತಕ್ಕೆ ಪಠಿಸಬೇಕೆಂದರೆ—

**ಗಾಯತ್ರೋ ವೈ ಬ್ರಾಹ್ಮಣಸ್ತೇಜೋ ವೈ ಬ್ರಹ್ಮವರ್ಚಸಂ ಗಾಯತ್ರೀ ತೇಜಸೈವೈನಂ ತದ್ಬ್ರಹ್ಮ-ವರ್ಚಸೇನ ಸಮರ್ಧಯತಿ ॥**

ಯಜ್ಞಮಾಡುವ ಯಜಮಾನನು ಬ್ರಾಹ್ಮಣನಾಗಿದ್ದರೆ ಗಾಯತ್ರೀಛಂದಸ್ಸಿನ ಋಕ್ಕನ್ನು ಪಠಿಸಬೇಕು ಏಕೆಂದರೆ, ಬ್ರಾಹ್ಮಣನು ಗಾಯತ್ರಿಯ ಸ್ವರೂಪವುಳ್ಳವನು. ಬ್ರಾಹ್ಮಣನು ಪ್ರಜಾಪತಿಯ (ಪರಬ್ರಹ್ಮನ) ಮುಖದಿಂದ ಹುಟ್ಟಿರುವುದರಿಂದ (**ಬ್ರಾಹ್ಮಣೋಽಸ್ಯ ಮುಖಮಾಸೀತ್** ಋ. ಸಂ. ೧೦-೯೦-೧೨) ಪ್ರಜಾಪತಿಯ ತೇಜಸ್ಸೇ ಬ್ರಾಹ್ಮಣನಲ್ಲಿರುವುದು. ಗಾಯತ್ರಿಯಲ್ಲಿಯೂ ಅಂತಹ ಬ್ರಹ್ಮವರ್ಚಸ್ಸಿರುವುದು. ಆದುದರಿಂದ ಬ್ರಹ್ಮವರ್ಚಸ್ಸಿನಿಂದ ಕೂಡಿದ ಗಾಯತ್ರೀಛಂದಸ್ಸಿನ ಋಕ್ಕಿನಿಂದಲೇ ಬ್ರಾಹ್ಮಣನಾದವನು ಈ ಕರ್ಮವನ್ನು ನೆರವೇರಿಸಬೇಕು. ಯಜ್ಞಕರ್ಮಗಳಲ್ಲಿ ಬ್ರಹ್ಮ ಕ್ಷತ್ರಿಯ ವೈಶ್ಯರು ಯಾವ ಯಾವ ಛಂದಸ್ಸಿನ ಋಕ್ಕುಗಳನ್ನು ಪಠಿಸಿ ಕರ್ಮವನ್ನು ನೆರವೇರಿಸಬೇಕೆಂಬ ವಿಷಯದಲ್ಲಿ ಯಜುರ್ವೇದದ ತೈತ್ತಿರೀಯ ಬ್ರಾಹ್ಮಣವಾಕ್ಯವು ಈ ರೀತಿ ಇರುವುದು—

**ಗಾಯತ್ರೀಭಿರ್ಬ್ರಾಹ್ಮಣಸ್ಯಾದಧ್ಯಾತ್ । ಗಾಯತ್ರಛಂದಾ ವೈ ಬ್ರಾಹ್ಮಣಃ । ಸ್ವಸ್ಯ ಛಂದಸಃ ಪ್ರತ್ಯಯನಸ್ತ್ವಾಯ । ತ್ರಿಷ್ಟುಗ್ಭೀ ರಾಜನ್ಯಸ್ಯ । ತ್ರಿಷ್ಟುಪ್‌ಛಂದಾ ವೈ ರಾಜನ್ಯಃ । ಸ್ವಸ್ಯ ಛಂದಸಃ ಪ್ರತ್ಯಯನಸ್ತ್ವಾಯ । ಜಗತೀಭಿರ್ವೈಶ್ಯಸ್ಯ । ಜಗತೀಛಂದಾ ವೈ ವೈಶ್ಯಃ । ಸ್ವಸ್ಯ ಛಂದಸಃ ಪ್ರತ್ಯಯನಸ್ತ್ವಾಯ ॥**

(ತೈ. ಬ್ರಾ. ೧-೧-೯-೬, ೭)

ಎಂದರೆ ಬ್ರಾಹ್ಮಣನಾದವನು ಗಾಯತ್ರೀಛಂದಸ್ಸಿನ ಮಂತ್ರಗಳಿಂದಲೇ ಅಗ್ನ್ಯಾಧಾನವನ್ನು (ಹೊಸದಾಗಿ ಮಾಡುವ ಯಜ್ಞಕರ್ಮವನ್ನು) ನೆರವೇರಿಸಬೇಕು ಏಕೆಂದರೆ, ಬ್ರಾಹ್ಮಣನು ಗಾಯತ್ರೀಛಂದಸ್ಸಿನ ಸ್ವರೂಪವುಳ್ಳವನು. ಆದಕ್ಕಾಗಿಯೇ ಬ್ರಹ್ಮವರ್ಚಸ್ಸಿನ ಪ್ರಾಪ್ತಿಗಾಗಿ ಗಾಯತ್ರೀಛಂದಸ್ಸಿನ ಋಕ್ಕುಗಳನ್ನೇ ಉಪಯೋಗಿಸಿ ಯಜ್ಞಕರ್ಮಗಳನ್ನು ಮಾಡಬೇಕು. ಅದರಂತೆ ಕ್ಷತ್ರಿಯರು ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಿಂದಲೂ, ವೈಶ್ಯರು ಜಗತೀಛಂದಸ್ಸಿನ ಋಕ್ಕುಗಳಿಂದಲೂ ಯಜ್ಞಕರ್ಮಗಳನ್ನು ನೆರವೇರಿಸಬೇಕು ಎಂದು ಹೇಳಿದೆ. ಹೀಗೆ ಹೇಳಿರುವುದರಿಂದ ಯಜ್ಞಮಾಡುವ ಯಜಮಾನನು ಕ್ಷತ್ರಿಯನಾಗಿದ್ದರೆ ಅಗ್ನಿಪ್ರಣಯನಕಾರ್ಯದಲ್ಲಿ—

**ಇಮಂ ಮಹೇ ವಿದಥ್ಯಾಯ ಶೂಷಮಿತಿ ತ್ರಿಷ್ಟುಭಂ ರಾಜನ್ಯಸ್ಯಾನುಬ್ರೂಯಾತ್ ತ್ರೈಷ್ಟುಭೋ ವೈ ರಾಜನ್ಯ ಓಜೋ ವಾ ಇಂದ್ರಿಯಂ ವೀರ್ಯಂ ತ್ರಿಷ್ಟುಬೋಜಸೈವೈನಂ ತದಿಂದ್ರಿಯೇಣ ವೀರ್ಯೇಣ ಸಮರ್ಧಯತಿ ।**

**ಇಮಂ ಮಹೇ ವಿದಥ್ಯಾಯ ಶೂಷಂ** ಎಂಬ ತ್ರಿಷ್ಟುಪ್‌ಛಂದಸ್ಸಿನ ಋಕ್ಕನ್ನು ಪಠಿಸಬೇಕು. ಏಕೆಂದರೆ, ಕ್ಷತ್ರಿಯನು ಪ್ರಜಾಪತಿಯ ಬಾಹುವಿನಿಂದ ಉತ್ಪನ್ನನಾಗಿರುವನು. (**ಬಾಹೂ ರಾಜನ್ಯಃ ಕೃತಃ** । ಋ ಸಂ. ೧೦-೯೦-೧೨) ಬಾಹುವು ಓಜಸ್ಸು, (ಬಲ) ಇಂದ್ರಿಯ, ವೀರ್ಯ (ಬಲ ಪರಾಕ್ರಮ ಶಕ್ತಿ ಸಾಮರ್ಥ್ಯಗಳ)ಗಳ ಸಂಕೇತವಾಗಿರುವುದು. ತ್ರಿಷ್ಟುಪ್‌ಛಂದಸ್ಸಿನಿಂದ ಓಜಸ್ಸು ಮೊದಲಾದವು ಲಭಿಸುವುದರಿಂದ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಿಂದಲೇ ಕ್ಷತ್ರಿಯನಾದವನು ಯಜ್ಞಕರ್ಮವನ್ನು ನೆರವೇರಿಸಬೇಕು. ಆದ್ದರಿಂದಲೇ ಹೋತೃವು—

(1) ಇಮಂ ಮಹೇ ವಿದಥ್ಯಾಯ ಶೂಷಂ ಶಶ್ವತ್ ಕೃತ್ವ ಈಡ್ಯಾಯ ಪ್ರ ಜಭ್ರುಃ ।
ಶೃಣೋತು ನೋ ದಮ್ಯೇಭಿರನೀಕೈಃ ಶೃಣೋತ್ವಗ್ನಿರ್ದಿವ್ಯೈರಜಸ್ರಃ ॥

(ಋ. ಸಂ. ೩-೫೪-೧)

ಎಂಬ ತ್ರಿಷ್ಟುಪ್‌ಛಂದಸ್ಸಿನ ಋಕ್ಕನ್ನು ಪಠಿಸುವನು. ಈ ಋಕ್ಕಿನ ಅರ್ಥವಿವರಣೆಯು ಸಹ ಬ್ರಾಹ್ಮಣವಾಕ್ಯದಲ್ಲಿಯೇ ಉಕ್ತವಾಗಿರುವುದು—

ಶಶ್ವತ್ಕೃತ್ವ ಈಡ್ಯಾಯ ಪ್ರಜಭ್ರುರಿತಿ ಸ್ವಾನಾಮೇವೈನಂ ತಚ್ಛ್ರೈಷ್ಠ್ಯಂ ಗಮಯತಿ ಶೃಣೋತು ನೋ ದಮ್ಯೇಭಿರನೀಕೈಃ ಶೃಣೋತ್ವಗ್ನಿರ್ದಿವ್ಯೈರಜಸ್ರ ಇತಿ ಆಜರಸಂ ಹಾಸ್ಮಿನ್ನಜಸ್ರೋ ದೀದಾಯ ಯ ಏವಂ ವೇದ ॥

ಇಮಂ ಮಹೇ ಎಂಬ ಮೇಲಿನ ಋಕ್ಕಿನ ಅರ್ಥವು—ಸುಖಹೇತುವಾದ ಅಗ್ನಿಯನ್ನು (ರಾಜರ ಯಾಗಸಿದ್ಧಿಗಾಗಿ) ಋತ್ವಿಕ್ಕುಗಳು ಉತ್ತರವೇದಿಯ ಬಳಿಗೆ ತೆಗೆದುಕೊಂಡು ಬಂದರು. ಅಗ್ನಿಯು ಯಾವಾಗಲೂ ಸ್ತುತಿಸಲ್ಪಡುವವನು. ಹೋತೃವು ಯಜಮಾನನನ್ನು ಮುಖ್ಯನನ್ನಾಗಿ (ಅವನ ಬಂಧುಗಳ ಮುಂದುಗಡೆ ಇರುವಹಾಗೆ) ಕರೆದುಕೊಂಡು ಬರುವನು. ಇದು ಈ ಋಕ್ಕಿನ ಪೂರ್ವಾರ್ಧದ ಅರ್ಥವು; ಉತ್ತರಾರ್ಧದ ಅರ್ಥವು—ಯಜಮಾನನ ಶತ್ರುಸೇನೆಗಳನ್ನು ಅಂಕಿತದಲ್ಲಿಡಲು ಅಗ್ನಿಯು ತನ್ನ ಜ್ವಾಲಾರೂಪದಿಂದಿರುವ ಸೈನ್ಯಗಳಿಂದ ಯಜಮಾನನಿಗೆ ಸಹಾಯ ಮಾಡುತ್ತಾ ನಮ್ಮ ಸ್ತೋತ್ರಾದಿಗಳನ್ನು ಕೇಳಲಿ. ಯಜಮಾನರು ಚೆನ್ನಾಗಿ ಮಾಡುವ ಯಜ್ಞಕರ್ಮಗಳನ್ನು ಅಗ್ನಿಯು ತಿಳಿಯಲಿ ಮತ್ತು ಈ ಅಗ್ನಿಯು ದೇವಲೋಕಯೋಗ್ಯವಾದ ಭೋಗಾದಿಗಳಿಂದ ಯುಕ್ತನಾಗಿ ನಮ್ಮ ಮನೆಗಳಲ್ಲಿದ್ದುಕೊಂಡು ಯಾವಾಗಲೂ ಎಂದರೆ ಜೀವಿತಕಾಲಪರ್ಯಂತರವಾಗಿ ನಮ್ಮ ಯಜಮಾನರನ್ನು ರಕ್ಷಿಸುತ್ತಿರಲಿ ಎಂದು ಮುಖ್ಯಾಭಿಪ್ರಾಯವು. ಇನ್ನು ವೈಶ್ಯರು ಪಠಿಸಬೇಕಾದ ಮಂತ್ರಗಳು ಈರೀತಿ ಇವೆ—

ಅಯಮಿಹ ಪ್ರಥಮೋ ಧಾಯಿ ಧಾತೃಭಿರಿತಿ ಜಗತೀಂ ವೈಶ್ಯಸ್ಯಾನುಬ್ರೂಯಾತ್ । ಜಾಗತೋ ವೈ ವೈಶ್ಯೋ ಜಾಗತಾಃ ಪಶವಃ ಪಶುಭಿರೇವೈನಂ ತತ್ಸಮರ್ಧಯತಿ । ವನೇಷು ಚಿತ್ರಂ ವಿಭ್ವಂ ವಿಶೇವಿಶ ಇತ್ಯಭಿರೂಪಾ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ॥

ಪ್ರಜಾಪತಿಯ ಮಧ್ಯಪ್ರದೇಶ ಅಥವಾ ಊರುಪ್ರದೇಶದಿಂದ (ಊರೂ ತದಸ್ಯ ಯದ್ವೈಶ್ಯಃ ಋ. ಸಂ. ೧೦-೯೦-೧೨) ವೈಶ್ಯನು ಉತ್ಪನ್ನನಾಗಿರುವನು. ಈ ವಿಷಯವು ತೈತ್ತಿರೀಯ ಸಂಹಿತೆಯಲ್ಲಿ—ಮಧ್ಯತಃ ಸಪ್ತದಶಂ ನಿರಮಿಮೀತ ತಂ ವಿಶ್ವೇ ದೇವಾ ದೇವತಾ ಅನ್ವಸೃಜ್ಯಂತ ಜಗತೀಛಂದೋ ವೈರೂಪಂ ಸಾಮ ವೈಶ್ಯೋ ವೈ ಮನುಷ್ಯಾಣಾಂ । ಎಂದು ಹೇಳಿರುವುದು. ವೈಶ್ಯನು ಜಗತೀಛಂದಸ್ಸಿನ ಸ್ವರೂಪವುಳ್ಳವನು. ಏಕೆಂದರೆ ಪಶುಗಳೂ (ಪಶುಸಂಪತ್ತು) ಜಗತೀಛಂದಸ್ಸಿನ ಸ್ವರೂಪವುಳ್ಳವು. ಈ ಪಶುಸಂಪತ್ತಿನಿಂದ ಕೂಡಿರುವಂತೆ ಮಾಡಬೇಕಾದರೆ ವೈಶ್ಯನು ಜಗತೀಛಂದಸ್ಸಿನ ಋಕ್ಕುಗಳನ್ನು ಪಠಿಸಿ ಯಜ್ಞಕರ್ಮವನ್ನು ನೆರವೇರಿಸಬೇಕು ಆದುದರಿಂದ ಯಜ್ಞಮಾಡುವ ಯಜಮಾನನು ವೈಶ್ಯನಾಗಿದ್ದರೆ ಹೋತೃವು—

(1) ಅಯಮಿಹ ಪ್ರಥಮೋ ಧಾಯಿ ಧಾತೃಭಿರ್ಹೋತಾ ಯಜಿಷ್ಠೋ ಅಧ್ವರೇಷ್ವೀಡ್ಯಃ ।
ಯಮಪ್ನವಾನೋ ಭೃಗವೋ ವಿರುರುಚುರ್ವನೇಷು ಚಿತ್ರಂ ವಿಭ್ವಂ ವಿಶೇವಿಶೇ ॥

(ಋ. ಸಂ. ೪-೭-೧)

ಎಂಬ ಜಗತೀಛಂದಸ್ಸಿನ ಋಕ್ಕನ್ನು ಪಠಿಸುವನು. ಏಕೆಂದರೆ, ಹಿಂದೆ ಹೇಳಿದಂತೆ ವೈಶ್ಯನು ಜಗತೀಛಂದಸ್ಸಿಗೆ ಸೇರಿದವನು. ಪಶುಗಳೂ (ಪಶುಸಂಪತ್ತು) ಅದೇ ವರ್ಗಕ್ಕೆ ಸೇರಿದವು. ಆದ್ದರಿಂದ ವೈಶ್ಯನು ಸಂಪತ್ತಿನಿಂದ ಕೂಡಿ ಅಭಿವೃದ್ಧಿಯಾಗುವುದಕ್ಕಾಗಿ ಜಗತೀಛಂದಸ್ಸಿನ ಮಂತ್ರವನ್ನು ಪಠಿಸುವನು. ಈ ಋಕ್ಕಿನ ಕೊನೆಯ ಪಾದದಲ್ಲಿ ವಿಶೆವಿಶೇ ಎಂದು ವೈಶ್ಯಶಬ್ದ ಸೂಚಕವಾದ ಪದಪ್ರಯೋಗವಿರುವುದು. ಯಜ್ಞಗಳಲ್ಲಿ ಆಯಾ ಸಂದರ್ಭಕ್ಕನುಸಾರವಾದ ಪದಗಳ ಜೋಡಣೆಯಿಂದ ಇರುವ ಋಕ್ಕುಗಳನ್ನು ಪಠಿಸಿದರೆ ಉದ್ದಿಷ್ಟವಾದ ಫಲವು ವಿಶೇಷವಾಗಿ ಲಭಿಸುವುದು. ಆದ್ದರಿಂದ ವೈಶ್ಯಸೂಚಕಪದಯುಕ್ತವಾದ ಜಗತೀಛಂದಸ್ಸಿನ ಈ ಋಕ್ಕನ್ನು ಇಲ್ಲಿ ಪಠಿಸಿರುವುದು ಈ ಸಂದರ್ಭಕ್ಕೆ ಅನುಸಾರವಾಗಿದೆ. ಈರೀತಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬುವರು ಅವರವರು ಅಪೇಕ್ಷಿಸುವ ಫಲಕ್ಕನುಸಾರವಾಗಿ ಗಾಯತ್ರೀ, ತ್ರಿಷ್ಟುಪ್, ಜಗತೀ ಎಂಬ ಮೂರು ಬೇರೆಬೇರೆ ಛಂದಸ್ಸಿನಿಂದ ಕೂಡಿದ ಒಂದೊಂದು ಪ್ರಥಮ ಮಂತ್ರವನ್ನು (ಋಕ್ಕನ್ನು) ಹೇಳಿ ಈಗ ಈ ಅಗ್ನಿಪ್ರಣಯನ ಕರ್ಮದಲ್ಲಿ ಎಲ್ಲಾ ವರ್ಣದವರೂ ಸಾಮಾನ್ಯವಾಗಿ ಪಠಿಸಬೇಕಾದ ಎರಡನೆಯ ಋಕ್ಕನ್ನು (ಮಂತ್ರವನ್ನು) ಹೋತೃವು ಪಠಿಸುವನು—

ಅಯಮು ಷ್ಯ ಪ್ರ ದೇವಯುರಿತಿ ಅನುಷ್ಟುಭ ವಾಚಂ ವಿಸೃಜತೇ । ವಾಗ್ವಾ ಅನುಷ್ಟುಬ್ವಾಚ್ಯೇವ ತದ್ವಾಚಂ ವಿಸೃಜತೇ । ಅಯಮು ಷ್ಯ ಇತಿ ಯದಾಹಾಯಮು ಸ್ಯಾಗಮಂ ಯಾ ಪುರಾ ಗಂಧರ್ವೇಷ್ವವಾತ್ಸಮಿತ್ಯೇವ ತದ್ವಾಕ್ಪ್ರಬ್ರೂತೇ ॥

ಸೋಮಕ್ರಯಣಕಾಲದಲ್ಲಿಯೂ ಅಲ್ಲಿಂದ ಇದುವರೆಗೂ ನಡೆದ ಕರ್ಮಗಳಲ್ಲಿ ಮಂತ್ರಗಳನ್ನು ಉಪಾಂಶುಕ್ರಮದಿಂದ ಎಂದರೆ ಮೆತ್ತನೆಯ ಧ್ವನಿಯಿಂದ ಪಠಿಸಬೇಕೆಂಬ ವಿಧಿಯಂತೆ ಮಂತ್ರಗಳನ್ನು ಸಣ್ಣ ಧ್ವನಿಯಿಂದ ಪಠಿಸಿದ್ದಾಯಿತು. ಈಗ ಎಂದರೆ ಇನ್ನುಮುಂದೆ ಆ ನಿಯಮವನ್ನು ವಿಸರ್ಜನೆಮಾಡಲಾಗುವುದು. ಎಂದರೆ ಮೆಲ್ಲಗೆ ಹೇಳುವುದನ್ನು ಬಿಟ್ಟು ಘಟ್ಟಿಯಾದ ಧ್ವನಿಯಿಂದ ಮಂತ್ರಗಳನ್ನು ಪಠಿಸಲಾಗುವುದು. ಈ ಕ್ರಮಕ್ಕೆ ವಾಜೋವಿಸರ್ಜನವೆಂದು ಹೆಸರು. ಇದನ್ನು ಅನುಷ್ಟುಪ್ ಛಂದಸ್ಸಿನ ಋಕ್ಕಿನಿಂದ ಪ್ರಾರಂಭಿಸುವುದು ಪ್ರಸಿದ್ಧವಾಗಿದೆ. ಏಕೆಂದರೆ ವಾಕ್ಕೇ (ವಾಕ್ಯವೇ) ಅನುಷ್ಟುಪ್ ಛಂದಸ್ವರೂಪವು ಆದ್ದರಿಂದ ಆ ಛಂದಸ್ಸಿನ ಮಂತ್ರದಿಂದಲೇ ಮೆಲ್ಲಗೆ ಹೇಳುವುದನ್ನು ಬಿಟ್ಟುಬಿಡಲಾಗುವುದು ಎಂದು, ಹೋತೃವು,

(2) ಅಯಮು ಷ್ಯ ಪ್ರ ದೇವಯುರ್ಹೋತಾ ಯಜ್ಞಾಯ ನೀಯತೇ ।
ರಥೋ ನ ಯೋರಭೀವೃತೋ ಘೃಣೀವಾಞ್ಚೇತತಿ ತ್ಮನಾ ॥

(ಋ. ಸಂ. ೧೦-೧೭೬-೩)

ಈ ಋಕ್ಕನ್ನು ಘಟ್ಟಿಯಾಗಿ ಪಠಿಸುವನು ಈ ವಾಕ್ಯವು (ವಾಗ್ದೇವತೆಯು) ಹಿಂದೆ ಗಂಧರ್ವರಲ್ಲಿದ್ದಿತು. ಈಗ ಅದು ಹೀಗೆ ಹೇಳುವುದು—ನಾನು ಹಿಂದೆ ಸೋಮಕ್ರಯಣಕಾಲದಲ್ಲಿ ಗಂಧರ್ವರಲ್ಲಿದ್ದೆನು. ಈಗ ಹಿಂದಕ್ಕೆ ಬಂದಿರುವೆನು ಎಂದು ಹೇಳಿರುವುದರಿಂದ ಹೋತೃವು ಅದಕ್ಕನುಸಾರವಾಗಿ ಮಂತ್ರವನ್ನು ಘಟ್ಟಿಯಾಗಿ ಹೇಳುವನು.

ವಾಗ್ದೇವತೆಯು ಗಂಧರ್ವರಲ್ಲಿದ್ದು ಈಗ ಹಿಂದಕ್ಕೆ ಬಂದಿರುವೆನೆಂದು ಹೇಳಿರುವ ವಿಷಯದಲ್ಲಿ ಒಂದು ಉಪಾಖ್ಯಾನವು ತೈತ್ತಿರೀಯ ಸಂಹಿತೆಯಲ್ಲಿ ಹೇಳಲ್ಪಟ್ಟಿರುವುದು (ತೇಗ್ಂ ಸೋಮಮಾಹ್ರಿಯಮಾಣಂ ಗಂಧರ್ವೋ ವಿಶ್ವಾವಸುಃ ಪರ್ಯಮುಷ್ಣಾತ್ಸ..................ತೇಭ್ಯ ಏವ ದದತಿ ॥ (ತೈ. ಸಂ. ೬-೧-೬-೫, ೬) ಸ್ವರ್ಗ ಲೋಕದಲ್ಲಿದ್ದ ಸೋಮವನ್ನು ತರುತ್ತಿರುವಾಗ ದಾರಿಯ ಮಧ್ಯದಲ್ಲಿ ವಿಶ್ವಾವಸುವೆಂಬ ಗಂಧರ್ವನು ಅದನ್ನು ಕದ್ದು

ಮೂರು ರಾತ್ರಿಗಳವರೆಗೆ ಬಚ್ಚಿಟ್ಟಿದ್ದನು. ಈಗಲೂ ಸೋಮಕ್ರಯಣಾನಂತರ ಅದನ್ನು ಮೂರು ರಾತ್ರಿಗಳವರೆಗೆ ಹಾಗೆಯೇ ಇಟ್ಟಿರುವುದು ರೂಢಿಯಲ್ಲಿ ಬಂದಿದೆ. ಆಗ ದೇವತೆಗಳೆಲ್ಲಾ ಸೇರಿ ಆ ಗಂಧರ್ವನಿಂದ ಸೋಮನನ್ನು ಹೇಗೆ ಹಿಂದಕ್ಕೆ ತರಬೇಕೆಂದು ಆಲೋಚನೆಮಾಡಲು ಅವರಿಗೆ ಒಂದು ವಿಷಯವು ತಟ್ಟನೆ ಮನಸ್ಸಿಗೆ ಹೊಳೆಯಿತು. ಗಂಧರ್ವರು ಸ್ತ್ರೀಯರನ್ನು ಕಂಡರೆ ಬಹಳವಾಗಿ ಮೋಹಿಸುವರು. ಆದ್ದರಿಂದ ಓರ್ವ ಸುಂದರಿಯಾದ ತರುಣಿಯನ್ನು ಗಂಧರ್ವರಿಗೆ ಕೊಟ್ಟು ಅದಕ್ಕೆ ಬದಲಾಗಿ ಸೋಮವನ್ನು ಕೊಂಡುಕೊಳ್ಳಬಹುದೆಂದು ಯೋಚಿಸಿದರು. ಅನಂತರ ಅದಕ್ಕಾಗಿ ದೇವತೆಗಳು ವಾಗ್ದೇವತೆಯನ್ನು ಕರೆದು ಎಲೈ ವಾಗ್ದೇವತೆಯೇ, ನೀನು ಓರ್ವಸುಂದರ ತರುಣಿಯಾಗಿ ರೂಪವನ್ನು ಧರಿಸು ನಿನ್ನನ್ನು ಗಂಧರ್ವರಿಗೆ ಮಾರಿ ಸೋಮವನ್ನು ತಂದು ಯಜ್ಞವನ್ನು ನೆರವೇರಿಸುವೆವು ಎಂದು ಹೇಳಲು ಅದಕ್ಕೆ ವಾಗ್ದೇವತೆಯು ಒಪ್ಪಿಕೊಂಡಳು. ಬಳಿಕ ಆ ಸುಂದರ ತರುಣಿಯನ್ನು ವಿಶ್ವಾವಸುವೆಂಬ ಗಂಧರ್ವರಾಜನಿಗೆ ಮಾರಿ ಸೋಮನನ್ನು ಕೊಂಡುತಂದರು. ದೇವತೆಗಳ ಕಾರ್ಯವಾದನಂತರ ಸುಂದರ ಯುವತಿಯ ರೂಪದಲ್ಲಿದ್ದ ವಾಗ್ದೇವತೆಯು ಕೆಂಪುಜಿಂಕೆಯ ರೂಪವನ್ನು ಧರಿಸಿ ಗಂಧರ್ವರ ಬಳಿಯಿಂದ ದೇವತೆಗಳ ಸಮೀಪಕ್ಕೆ ಓಡಿಬಂದಳು. ಈ ವಿಷಯವನ್ನೇ ಇಲ್ಲಿ ವಾಗ್ದೇವತೆಯು ಹಿಂದಕ್ಕೆ ಬಂದಿರುವೆನು ಎಂದು ಹೇಳಲಾಗಿದೆ. ವಾಗ್ದೇವತೆಯು ಸುಂದರಯುವತಿಯ ರೂಪದಿಂದ ಗಂಧರ್ವರ ಬಳಿ ಇದ್ದು ಮತ್ತೆ ದೇವತೆಗಳ ಸಮೀಪಕ್ಕೆ ಬರುವವರೆಗೂ ನಡೆದ ಸೋಮಕ್ರಯಣ (ಸೋಮವನ್ನು ಕೊಂಡುಕೊಳ್ಳುವುದು) ಮತ್ತು ಅಗ್ನಿ ಪ್ರಣಯನದಲ್ಲಿ ಇದುವರೆಗೆ ನಡೆದ ಕರ್ಮ ಇವೆಲ್ಲವನ್ನೂ ವಾಗ್ದೇವತೆಯು ಹತ್ತಿರ ಇಲ್ಲದ ಕಾರಣ ಉಪಾಂಶುಧ್ವನಿಯಿಂದ (ಮೆತ್ತಗೆ) ಹೇಳುವರು. ವಾಗ್ದೇವತೆಯು ಹಿಂದಕ್ಕೆ ಬಂದ ಬಳಿಕ ಹೋತೃವು ನಿರ್ಭಯವಾಗಿ ಮಂತ್ರಗಳನ್ನು ಘಟ್ಟಿಯಾಗಿ ಉಚ್ಚರಿಸಲು ಪ್ರಾರಂಭಮಾಡುವನು ಎಂದು ಮುಖ್ಯಾಭಿಪ್ರಾಯವು.

ಈಗ ಹೋತೃವು ಮುಂದುವರೆದು ಮೂರನೆಯ ಋಕ್ಕನ್ನು ಪಠಿಸುವನು.

> **ಅಯಮಗ್ನಿರುರುಷ್ಯತೀತಿ ಅಯಂ ವಾ ಅಗ್ನಿರುರುಷ್ಯತಿ ಅಮೃತಾ ದಿವ ಜನ್ಮನ ಇತ್ಯಮೃತತ್ವಮೇವಾಸ್ಮಿಂಸ್ತದ್ದಧಾತಿ ಸಹಸಶ್ಚಿತ್ಸಹೀಯಾನ್ದೇವೋ ಜೀವಾತವೇ ಕೃತ ಇತಿ ದೇವೋ ಹ್ಯೇಷ ಏತಜ್ಜೀವಾತವೇ ಕೃತೋ ಯದಗ್ನಿಃ ॥**

ಮೂರನೆಯ ಋಕ್ಕಾದ ಮಂತ್ರವು ಈ ರೀತಿ ಇರುವುದು—

> **(3) ಅಯಮಗ್ನಿರುರುಷ್ಯತ್ಯಮೃತಾದಿವ ಜನ್ಮನಃ ।**
> **ಸಹಸಶ್ಚಿತ್ಸಹೀಯಾನ್ ದೇವೋ ಜೀವಾತವೇ ಕೃತಃ ॥**
>
> (ಋ. ಸಂ. ೧೦-೧೭೬-೪)

ಈ ಋಕ್ಕಿನ ಮುಖ್ಯಾಭಿಪ್ರಾಯವು-ಈ ಅಗ್ನಿಯು ಯಜಮಾನರಿಗೆ ದೇವತಾರೂಪವಾದ ಜನ್ಮವನ್ನು ಉಂಟುಮಾಡುವುದರಿಂದ ಮನುಷ್ಯರಿಂದ ಪ್ರಾಪ್ತವಾಗುವ ಭಯವನ್ನೂ ಮತ್ತು ದೇವತೆಗಳಿಂದ ಪ್ರಾಪ್ತವಾಗುವ ಭಯವನ್ನೂ ನಿವಾರಣೆಮಾಡಿ ಕಾಪಾಡುವನು. ಈ ಅಗ್ನಿಯು ಶಕ್ತಿಗಿಂತಲೂ ಅತಿಬಲಿಷ್ಠನಾದವನು. ಯಜ್ಞಕ್ಕಾಗಿ ಅಥವಾ ದೀರ್ಘಾಯುಸ್ಸನ್ನು ಅನುಗ್ರಹಿಸುವುದಕ್ಕಾಗಿ ನಿರ್ಮಿಸಲ್ಪಟ್ಟಿರುವನು ಎಂದು ಇಲ್ಲಿ ಹೋತೃವು ಈ ಋಕ್ಕಿನ ಪೂರ್ವಾರ್ಧಪಠನದಿಂದ ಯಜಮಾನನನ್ನು ಮರಣರಹಿತನನ್ನಾಗಿ ಎಂದರೆ ದೀರ್ಘಾಯುಸ್ಸುಳ್ಳವನನ್ನಾಗಿ ಮಾಡುವನು. ಉತ್ತರಾರ್ಧಪಠನದಿಂದ ಈ ಅಗ್ನಿಯ ಶಕ್ತಿಯು ಬಹಳ ಸಾಮರ್ಥ್ಯವುಳ್ಳದ್ದಾಗುವುದು. ಆದುದರಿಂದ ಈ ಋಕ್ಕನ್ನು ಪಠಿಸುವುದರಿಂದ ಅಗ್ನಿಯು ನಮ್ಮ ಜೀವಿತವನ್ನು ರಕ್ಷಿಸಲು ಅನುಕೂಲವಾಗುವುದು.

ಇಳಾಯಾಸ್ತ್ವಾ ಪದೇ ವಯಂ ನಾಭಾ ಪೃಥಿವ್ಯಾ ಅಧೀತಿ ಏತದ್ವಾ ಇಳಾಯಾಸ್ಪದಂ ಯದು-
ತ್ತರವೇದೀನಾಭಿಃ । ಜಾತವೇದೋ ನಿಧೀಮಹೀತಿ ನಿಧಾಸ್ಯಂತೋ ಹ್ಯೇನಂ ಭವಂತಿ । ಅಗ್ನೇ
ಹವ್ಯಾಯ ವೋಳ್ಹವ ಇತಿ ಹವ್ಯಂ ಹಿ ವಕ್ಷ್ಯನ್ಭವತಿ ॥

ಬಳಿಕ ಹೋತೃವು ನಾಲ್ಕನೆಯ ಋಕ್ಕನ್ನು ಪಠಿಸುವನು—

(4) ಇಳಾಯಾಸ್ತ್ವಾ ಪದೇ ವಯಂ ನಾಭಾ ಪೃಥಿವ್ಯಾ ಅಧಿ ।
ಜಾತವೇದೋ ನಿ ಧೀಮಹ್ಯಗ್ನೇ ಹವ್ಯಾಯ ವೋಳ್ಹವೇ ॥

(ಋ. ಸಂ. ೩–೨೯–೪)

ಈ ಋಕ್ಕಿನ ಮುಖ್ಯಾಭಿಪ್ರಾಯವು—ಎಲೈ ಜಾತವೇದನಾಮಕನಾದ ಅಗ್ನಿಯೇ, ಪೃಥಿವಿಯ ನಾಭಿಸ್ಥಾನವೆಂದು ಹೇಳಲ್ಪಡುವ ಉತ್ತರವೇದಿಯಲ್ಲಿ ನಾವು ನಿನ್ನನ್ನು ಸ್ಥಾಪಿಸುವೆವು (ಇಡುವೆವು) ಎಂದು. ಇಳಾಶಬ್ದವು ಗೋವಾಚಿಯಾಗಿರುವುದು. ಇಳಾಯಾಃ ಪದೇ ಎಂದರೆ ಘೃತನಿಷ್ಪೀಡನಾದಿಕರ್ಮಗಳಿಂದ ಪ್ರಶಸ್ತವಾದ ಗೋವಿನ ಕಾಲುಗಳು ಇಡಲ್ಪಟ್ಟಿರುವ ಉತ್ತರವೇದಿಯ ನಾಭಿ ಪ್ರದೇಶವೇ ಇಳಾಯಾಸ್ಪದಂ ಎಂಬ ಶಬ್ದಗಳಿಂದ ವರ್ಣಿಸಲ್ಪಡುವುದು. ಜಾತವೇದೋ ನಿಧೀಮಹಿ ಎಂಬ ವಾಕ್ಯದಿಂದ ಅಗ್ನಿಯನ್ನು ಉತ್ತರವೇದಿಯಲ್ಲಿ ಋತ್ವಿಜರಾದ ನಾವು ಇಡುವೆವು ಎಂಬರ್ಥವು ಸೂಚಿತವಾಗುವುದು. ಕೊನೆಯ ಪಾದದಲ್ಲಿರುವ ಅಗ್ನೇ ಹವ್ಯಾಯ ವೋಳ್ಹವೇ ಎಂಬ ವಾಕ್ಯವು-ದೇವತೆಗಳಿಗೆ ಹವಿರಾದಿಗಳನ್ನು ಅಗ್ನಿಯುವಹಿಸುವುದಕ್ಕಾಗಿ ಇಲ್ಲಿ ಸ್ಥಾಪಿಸಲ್ಪಟ್ಟಿರುವುದು ಎಂಬರ್ಥವನ್ನು ಸೂಚಿಸುವುದು

ಅಗ್ನೇ ವಿಶ್ವೇಭಿಃ ಸ್ವನೀಕ ದೇವೈರೂರ್ಣಾವಂತಂ ಪ್ರಥಮಃ ಸೀದ ಯೋನಿಮಿತಿ ವಿಶ್ವೈರೇವೈನಂ
ತದ್ದೇವೈಃ ಸಹಾಸಾದಯತಿ । ಕುಲಾಯಿನಂ ಘೃತವಂತಂ ಸವಿತ್ರ ಇತಿ ಕುಲಾಯಮಿವ
ಹ್ಯೇತದ್ಯಜ್ಞೇ ಕ್ರಿಯತೇ ಯತ್ಪೈತುದಾರವಾಃ ಪರಿಧಯೋ ಗುಗ್ಗುಲೂರ್ಣಾಸ್ತುಕಾಃ ಸುಗಂಧಿ-
ತೇಜನಾನೀತಿ ಯಜ್ಞಂ ನಯ ಯಜಮಾನಾಯ ಸಾಧ್ವಿತಿ ಯಜ್ಞಮೇವ ತದೃಜುಧಾ ಪ್ರತಿಷ್ಠಾ-
ಪಯತಿ ॥

ಹೋತೃವು ಅನಂತರ ಐದನೆಯ ಋಕ್ಕನ್ನು ಪಠಿಸುವನು—

(5) ಅಗ್ನೇ ವಿಶ್ವೇಭಿಃ ಸ್ವನೀಕ ದೇವೈರೂರ್ಣಾವಂತಂ ಪ್ರಥಮಃ ಸೀದ ಯೋನಿಂ ।
ಕುಲಾಯಿನಂ ಘೃತವಂತಂ ಸವಿತ್ರೇ ಯಜ್ಞಂ ನಯ ಯಜಮಾನಾಯ ಸಾಧು ॥

(ಋ. ಸಂ ೬–೧೫–೧೬)

ಎಲೈ ಅಗ್ನಿಯೇ ಜ್ವಾಲಾಖ್ಯಸೇನೆಗಳಿಂದ ಯುಕ್ತನಾದ ನೀನು ಸಮಸ್ತದೇವತೆಗಳಿಗೂ ಮುಖ್ಯನಾಗಿ ಈ ಉತ್ತರವೇದಿಯೆಂಬ ನಾಭಿಸ್ಥಾನದಲ್ಲಿ ಬಂದು ಕುಳಿತುಕೋ ಎಂದು ಈ ಋಕ್ಕಿನ ಪೂರ್ವಾರ್ಧದ ಮುಖ್ಯಾಭಿಪ್ರಾಯವು. ಇಲ್ಲಿ ವಿಶ್ವೇಭಿಃ ಎಂಬ ಪದಪ್ರಯೋಗದಿಂದ ಅಗ್ನಿಯೊಡನೆ ಸಮಸ್ತದೇವತೆಗಳನ್ನು ಸ್ಥಾಪಿಸಲಾಗಿದೆಯೆಂದು ನಿರ್ದೇಶಿಸಲಾಗಿರುವುದು ಎಂದರೆ ಅಗ್ನಿಯು ಸಮಸ್ತದೇವತೆಗಳ ಸಹಿತನಾಗಿ ಉಣ್ಣೆಯ ಧಾರಗಳನ್ನು ಹಾಸಿ ಮೆತ್ತಗೆಮಾಡಿರುವ ಪಕ್ಷಿಯ ಗೂಡಿನಂತಿರುವ ಉತ್ತರವೇದಿಯಲ್ಲಿ ಕೂಡುವನೆಂದಭಿಪ್ರಾಯವು. ಕಾಷ್ಠಾದಿಗಳಿಂದ ಸಮೃದ್ಧವಾಗಿಯೂ, ಘೃತಸಿಕ್ತವಾಗಿಯೂ ಇರುವ ನಾಭಿಪ್ರದೇಶವಾದ ಉತ್ತರವೇದಿಯಲ್ಲಿದ್ದು ಯಜಮಾನನ ಯಜ್ಞಕರ್ಮಗಳನ್ನು

ಚೆನ್ನಾಗಿ ನೆರವೇರಿಸು ಎಂದು ಉತ್ತರಾರ್ಧದ ಅಭಿಪ್ರಾಯವು. ಇಲ್ಲಿ ಮೂರನೆಯ ಪಾದದಲ್ಲಿ ಹೇಳಿರುವ **ಕುಲಾ-ಯಿನಂ ಘೃತವಂತಂ** ಎಂಬ ಶಬ್ದಗಳಿಂದ ಪಕ್ಷಿಯ ಗೂಡು ಸೂಚಿತವಾಗುವುದು. ಎಂದರೆ ಪಕ್ಷಿಯು ತನ್ನ ಗೂಡನ್ನು ಖದಿರ ಅಥವಾ ದೇವದಾರುವೃಕ್ಷದ ಸಣ್ಣ ಸಣ್ಣ ಕಡ್ಡಿಗಳು, ಗುಗ್ಗುಲು (ಅಂಟು) ಉಣ್ಣೆಯ ದಾರಗಳು, ಒಂದು ವಿಧ ಸುವಾಸನೆಯುಳ್ಳ ಹುಲ್ಲುಗರಿಕೆ ಇವುಗಳನ್ನೆಲ್ಲಾ ಸೇರಿಸಿ ಹೆಣೆದು ಗೂಡನ್ನು ಕಟ್ಟುವುದು. ಅಗ್ನಿಯ ನಾಭಿಸ್ಥಾನವೂ ಅದರಂತಿರುವುದೆಂದು ಇಲ್ಲಿ ಹೋಲಿಸಿದೆ. ಹೇಗೆಂದರೆ ಗೂಡನ್ನು ಕಟ್ಟುವಾಗ ಪಕ್ಷಿಯು ಕಡ್ಡಿಗಳನ್ನು ಉಪಯೋಗಿಸುವುದಷ್ಟೆ. ಇಲ್ಲಿ ಅಗ್ನಿಯ ಸುತ್ತಲೂ ಪರಿಧಿಯೆಂಬ ಕಾಷ್ಠಗಳನ್ನು ಇಟ್ಟಿರುವರು. ಹಾಗೆಯೇ, ಅಂಟಿಗೆ ಬದಲಾಗಿ ಹೋಮಕ್ಕಾಗಿ ಇಟ್ಟಿರುವ ಘೃತಾದಿ ಸುಗಂಧದ್ರವ್ಯವೂ, ಉಣ್ಣೆಯದಾರಗಳಿಗೆ ಬದಲಾಗಿ ಆಡು ಮೊದಲಾದ ಯಜ್ಞ ಪಶುಗಳೂ, ಹುಲ್ಲುಗರಿಕೆಗೆ ಬದಲಾಗಿ ಸಮಿತ್ತುಗಳೂ ಅಗ್ನಿಯ ಸುತ್ತಲೂ ಸಿದ್ಧಪಡಿಸಿ ಇಟ್ಟಿರುವುದರಿಂದ ಅಗ್ನಿಗಾಗಿ ಸ್ಥಾಪಿತವಾಗಿರುವ ಉತ್ತರವೇದಿಯನ್ನು (ಅಗ್ನಿಕುಂಡವನ್ನು) ಪಕ್ಷಿಯ ಗೂಡಿಗೆ ಹೋಲಿಸಿ ವರ್ಣಿಸಿದೆ. ಇಂತಹ ಪಕ್ಷಿಯ ಗೂಡಿನಂತಿರುವ ಉತ್ತರವೇದಿಸ್ಥಾನದಲ್ಲಿ ಸ್ಥಾಪಿತನಾದ ಅಗ್ನಿಯು ಯಜಮಾನನ ಯಜ್ಞಕಾರ್ಯಗಳನ್ನು ಚೆನ್ನಾಗಿ ನೆರವೇರಿಸಲಿ ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ.

**ಸೀದ ಹೋತಃ ಸ್ವ ಉ ಲೋಕೇ ಚಿಕಿತ್ವಾನಿತ್ಯಗ್ನಿರ್ವೈ ದೇವಾನಾಂ ಹೋತಾ ತಸ್ಯೈಷ ಸ್ವೋ ಲೋಕೋ ಯದುತ್ತರವೇದೀನಾಭಿಃ । ಸಾದಯಾ ಯಜ್ಞಂ ಸುಕೃತಸ್ಯ ಯೋನಾವಿತಿ ಯಜಮಾನೋ ವೈ ಯಜ್ಞೋ ಯಜಮಾನಾಯೈವೈತಾಮಾಶಿಷಮಾಶಾಸ್ತೇ । ದೇವಾವೀ-ರ್ದೇವಾನ್ ಹವಿಷಾ ಯಜಾಸ್ಯಗ್ನೇ ಬೃಹದ್ಯಜಮಾನೇ ವಯೋ ಧಾ ಇತಿ ಪ್ರಾಣೋ ವೈ ವಯಃ ಪ್ರಾಣಮೇವ ತದ್ಯಜಮಾನೇ ದಧಾತಿ ॥**

ಅನಂತರ ಹೋತೃವು ಮುಂದುವರೆಯುತ್ತಾ ಈ ಕರ್ಮಾಂಗದಲ್ಲಿ ಹೇಳಬೇಕಾದ—

(6) **ಸೀದ ಹೋತಃ ಸ್ವ ಉ ಲೋಕೇ ಚಿಕಿತ್ವಾನ್ತ್ಸಾದಯಾ ಯಜ್ಞಂ ಸುಕೃತಸ್ಯ ಯೋನೌ ।**
**ದೇವಾವೀರ್ದೇವಾನ್ ಹವಿಷಾ ಯಜಾಸ್ಯಗ್ನೇ ಬೃಹದ್ಯಜಮಾನೇ ವಯೋ ಧಾಃ ॥**

(ಋ. ಸಂ. ೩-೨೯-೮)

ಎಂಬ ಆರನೆಯ ಋಕ್ಕನ್ನು ಪಠಿಸುವನು ಅಗ್ನಿಯು ದೇವತೆಗಳಿಗೆ ಹೋತೃವೆಂಬ ಋತ್ವಿಜನು. ಮತ್ತು ಉತ್ತರ-ವೇದಿನಾಭಿಯೇ ಅಗ್ನಿಯ ಸ್ವಸ್ಥಾನವು. ಆದ್ದರಿಂದ ಎಲೈ ಅಗ್ನಿಯೇ ನೀನು ಹೋಮನಿಷ್ಪಾದಕನು, ದೇವತೆಗಳಿಗೆ ಹೋತೃವು. ಇಂತಹ ನೀನು ನಿನ್ನ ಸ್ವಸ್ಥಾನವಾದ ಉತ್ತರವೇದಿಯಲ್ಲಿ ಕುಳಿತುಕೋ ಎಂಬ ಪ್ರಾರ್ಥನೆಯು ಪ್ರಥಮ ಪಾದದಲ್ಲಿ ಹೇಳಲ್ಪಟ್ಟಿರುವುದು; ಎರಡನೆಯ ಪಾದದಲ್ಲಿರುವ ಯಜ್ಞಶಬ್ದಕ್ಕೆ ಯಜ್ಞಮಾಡುವ ಯಜಮಾನನೆಂದರ್ಥವು. ಇಂತಹ ಯಜಮಾನನನ್ನು, ಎಲೈ ಅಗ್ನಿಯೇ, ಪುಣ್ಯಕರ್ಮಗಳನ್ನು ಮಾಡುವ ಸುಕೃತಶಾಲಿಗಳ ಸ್ಥಾನದಲ್ಲಿ ಸ್ಥಾಪಿಸು ಎಂದು ದ್ವಿತೀಯಪಾದಾರ್ಥವು; ಉತ್ತರಾರ್ಧದಲ್ಲಿರುವ ವಯಃ ಎಂಬ ಶಬ್ದಕ್ಕೆ ಪ್ರಾಣವೆಂದರ್ಥವು. ಆದ್ದರಿಂದ ದೇವತೆಗಳಿಗೆ ಪ್ರಿಯನಾದ ಎಲೈ ಅಗ್ನಿಯೇ, ನೀನು ದೇವತೆಗಳನ್ನು ಹವಿಸ್ಸಿನಿಂದ ಪೂಜಿಸಿ ತೃಪ್ತಿಪಡಿಸು ಮತ್ತು ಯಜ್ಞಮಾಡುವ ಯಜಮಾನನಲ್ಲಿ ಪ್ರಾಣವನ್ನು ಎಂದರೆ ಆಯುಸ್ಸನ್ನು ಧರಿಸು ಎಂದರೆ ವೃದ್ಧಿಪಡಿಸು—**ಯಾವದಸ್ಮಿನ್ ಶರೀರೇ ಪ್ರಾಣೋ ವಸತಿ ತಾವದಾಯುಃ** ಎಂಬ ಶ್ರುತಿವಾಕ್ಯರೀತ್ಯಾ ಶರೀರದಲ್ಲಿ ಪ್ರಾಣವಿರು

ವವರೆಗೂ ಪುರುಷನಿಗೆ ಆಯುಷ್ಯವಿರುವುದು ಎಂದು ಹೇಳಿರುವುದರಿಂದ ಇಲ್ಲಿ ಪ್ರಾಣಶಬ್ದವನ್ನು ಆಯುಷ್ಯವೆಂಬ ಅರ್ಥದಲ್ಲಿ ಪ್ರಯೋಗಿಸಿದೆ. ಯಜಮಾನನಿಗೆ ದೀರ್ಘಾಯುಷ್ಯವನ್ನು ಅನುಗ್ರಹಿಸು ಎಂದು ತಾತ್ಪರ್ಯವು.

ನಿ ಹೋತಾ ಹೋತೃಷದನೇ ವಿದಾನ ಇತ್ಯಗ್ನಿರ್ವೈ ದೇವಾನಾಂ ಹೋತಾ ತಸ್ಯೈತದ್ಧೋತೃಷದನಂ ಯದುತ್ತರವೇದೀನಾಭಿಃ । ತ್ವೇಷೋ ದೀದಿವಾ꣡ ಅಸದತ್ಸುದಕ್ಷ ಇತ್ಯಾಸನ್ನೋ ಹಿ ಸ ತರ್ಹಿ ಭವತಿ । ಅದಬ್ಧವ್ರತಪ್ರಮತಿರ್ವಸಿಷ್ಠ ಇತ್ಯಗ್ನಿರ್ವೈ ದೇವಾನಾಂ ವಸಿಷ್ಠಃ । ಸಹಸ್ರಂಭರಃ ಶುಚಿಜಿಹ್ವೋ ಅಗ್ನಿರಿತ್ಯೇಷಾ ಹ ವಾ ಅಸ್ಯ ಸಹಸ್ರಂಭರತಾ ಯದೇನಮೇಕಂ ಸಂತಂ ಬಹುಧಾ ವಿಹರಂತಿ ಪ್ರ ಹ ವೈ ಸಾಹಸ್ರಂ ಪೋಷಮಾಪ್ನೋತಿ ಯ ಏವಂ ವೇದ ॥

ಅನಂತರ ಹೋತೃವು ಏಳನೆಯ ಋಕ್ಕಾದ—

(7) ನಿ ಹೋತಾ ಹೋತೃಷದನೇ ವಿದಾನಸ್ತ್ವೇಷೋ ದೀದಿವಾ꣡ ಅಸದತ್ಸುದಕ್ಷಃ ।
ಅದಬ್ಧವ್ರತಪ್ರಮತಿರ್ವಸಿಷ್ಠಃ ಸಹಸ್ರಂಭರಃ ಶುಚಿಜಿಹ್ವೋ ಅಗ್ನಿಃ ॥

(ಋ. ಸಂ. ೨-೯-೧)

ಎಂಬ ಮಂತ್ರವನ್ನು ಪಠಿಸುವನು. ಅಗ್ನಿಯು ದೇವತೆಗಳ ಹೋತೃವು. ಉತ್ತರವೇದಿನಾಭಿಸ್ಥಾನವೇ ಈ ದೇವ ಹೋತೃವಾದ ಅಗ್ನಿಯು ಕುಳಿತುಕೊಳ್ಳುವ ಹೋತೃಷದನವೆಂಬ ಸ್ಥಳವು ಎಂದು ಪ್ರಥಮಪಾದಾರ್ಥವು; ಪ್ರಕಾಶಮಾನನಾಗಿಯೂ, ಯಜ್ಞಕರ್ಮಗಳಲ್ಲಿ ಕುಶಲನಾಗಿಯೂ ಇರುವ ಈ ಅಗ್ನಿಯು ಈ ಹೋತೃಷದನವೆಂಬ ಉತ್ತರವೇದಿನಾಭಿಯಲ್ಲಿ ಕುಳಿತಿರುವನೆಂದು ದ್ವಿತೀಯಪಾದಾರ್ಥವು; ಅಗ್ನಿಯು ಹವಿಸ್ಸನ್ನು ದೇವತೆಗಳ ಬಳಿಗೆ ತೆಗೆದುಕೊಂಡು ಹೋಗುವುದರಿಂದ ದೇವತೆಗಳ ಸ್ವಸ್ಥಾನವಾದ ಸ್ವರ್ಗದಲ್ಲಿ ಅಗ್ನಿಯೂ ಉತ್ತಮಸ್ಥಾನವನ್ನು ಪಡೆದಿರುವನು. ಅಹಿಂಸಿತವಾದ ಯಜ್ಞಾದಿಕರ್ಮಮನಸ್ಕನಾದ ಈ ಅಗ್ನಿಯು ಶ್ರೇಷ್ಠವಾದ ನಿವಾಸಸ್ಥಾನವುಳ್ಳವನು ಎಂದು ತೃತೀಯಪಾದಾರ್ಥವು; ಅಗ್ನಿಯು ಒಂದೇ ರೂಪದಿಂದ ಕಾಣಿಸುತ್ತಿದ್ದರೂ ಋತ್ವಿಜರಾದಿ ಸಮಸ್ತರಲ್ಲಿಯೂ ಇದ್ದು ಅವರವರ ಕರ್ತವ್ಯನಿರ್ವಹಣವನ್ನು ಮಾಡುವುದರಿಂದ ಅನೇಕ ರೂಪಗಳನ್ನು ಧರಿಸಿರುವನೆಂದು ಸಹಸ್ರಂಭರಶಬ್ದಾರ್ಥವು ಅಥವಾ ಅಗ್ನಿಯು ಅನೇಕ ಯಾಗಗೃಹಗಳಲ್ಲಿ ಇದ್ದು ಅನೇಕ ಯಜಮಾನರ ಯಜ್ಞಗಳನ್ನು ನೆರವೇರಿಸುವುದರಿಂದ ಅನೇಕ ರೂಪಗಳನ್ನು ಧರಿಸಿ ಇರುವವನೆಂದು ಸಹಸ್ರಂಭರಶಬ್ದದ ಅರ್ಥವು. ಹವಿಸ್ಸ್ವೀಕಾರಾದಿಯಿಂದ ಶುದ್ಧವಾದ ಜಿಹ್ವೆ (ಜ್ವಾಲೆ) ಯುಳ್ಳವನಾದ್ದರಿಂದ ಅಗ್ನಿಗೆ ಶುಚಿಜಿಹ್ವನೆಂದು ಹೆಸರು. ಇಂತಹ ಅಗ್ನಿಯು ಯಜಮಾನನಿಗೆ ಸಾವಿರಗಟ್ಟಲೆಯಾಗಿ ಗೋಸುವರ್ಣಾದಿಪುಷ್ಟಿಯನ್ನು ಕೊಡುವನು ಎಂದು ಇಲ್ಲಿ ಸ್ತುತಿಸಿದೆ

ತ್ವಂ ದೂತಸ್ತ್ವಮು ನಃ ಪರಸ್ಪಾ ಇತ್ಯುತ್ತಮಯಾ ಪರಿದಧಾತಿ ತ್ವಂ ವಸ್ಯ ಆ ವೃಷಭ ಪ್ರಣೇತಾ । ಅಗ್ನೇ ತೋಕಸ್ಯ ನಸ್ತನೇ ತನೂನಾಮಪ್ರಯುಚ್ಛನ್ದೀದ್ಯದ್ಬೋಧಿ ಗೋಪಾ ಇತಿ ಅಗ್ನಿರ್ವೈ ದೇವಾನಾಂ ಗೋಪಾ ಅಗ್ನಿಮೇವ ತತ್ಸರ್ವತೋ ಗೋಪ್ತಾರಂ ಪರಿದತ್ತ ಆತ್ಮನೇ ಚ ಯಜಮಾನಾಯ ಚ ಯತ್ರೈವಂ ವಿದ್ವಾನೇತಯಾ ಪರಿದಧಾತ್ಯಥೋ ಸಂವತ್ಸರೀಣಾಮೇವೈತಾಂ ಸ್ವಸ್ತಿಂ ಕುರುತೇ ॥

ಅನಂತರ ಹೋತೃವು ಕೊನೆಯದಾದ ಎಂಟನೇ ಋಕ್ಕನ್ನು ಹೇಳಿ ಅಗ್ನಿಪ್ರಣಯನಕಾರ್ಯವನ್ನು ಸಮಾಪ್ತಿಗೊಳಿಸುವನು—

(೪) ತ್ವಂ ದೂತಸ್ತ್ವಮು ನಃ ಪರಸ್ಪಾಸ್ತ್ವಂ ವಸ್ಯ ಆ ವೃಷಭ ಪ್ರಣೇತಾ ।
ಅಗ್ನೇ ತೋಕಸ್ಯ ನಸ್ತನೇ ತನೂನಾಮಪ್ರಯುಚ್ಛನ್ ದೀದ್ಯದ್ಬೋಧಿ ಗೋಪಾಃ ॥
(ಋ. ಸಂ ೨-೯-೨)

ಅಗ್ನಿಪ್ರಣಯನ ಕಾರ್ಯದಲ್ಲಿ ಇದೇ ಕೊನೆಯ ಋಕ್ಕು. ಸಾಧಾರಣವಾಗಿ ಒಂದು ಕರ್ಮದ ಕೊನೆಯ ಋಕ್ಕನ್ನು ಆ ಕರ್ಮದ ಪರಿಧಾನ (ಹೊದಿಕೆ) ವೆಂದು ಹೇಳುವರು. **ಅಗ್ನಿರ್ದೇವಾನಾಂ ದೂತ ಆಸೀತ್** ಎಂಬ ಶ್ರುತಿವಾಕ್ಯ ದಂತೆ ಎಲೈ ಅಗ್ನಿಯೇ, ನೀನು ದೇವತೆಗಳ ದೂತನಾಗಿದ್ದೀಯೆ; ನೀನೇ ನಮ್ಮ ಪಾಲಕನು ಎಂದು ಪ್ರಥಮಪಾದದ ಅರ್ಥವು. ಇದನ್ನು ಪಠಿಸಿ ಹೋತೃವು ಅಗ್ನಿಪ್ರಣಯನಕಾರ್ಯಕ್ಕೆ ಸಮಾಪ್ತಿಸೂಚಕವಾದ ಮಂತ್ರವನ್ನು ಹೇಳು ವನು. ಎಲೈ ಅಗ್ನಿಯೇ, ನೀನು ದೇವತೆಗಳಲ್ಲಿ ಅಥವಾ ಮನುಷ್ಯರಲ್ಲಿ ಶ್ರೇಷ್ಠನು; ಸರ್ವಸ್ಥಳಗಳಲ್ಲಿಯೂ ನಿವಾಸ-ಸ್ಥಾನವುಳ್ಳವನು. ಅನೇಕ ಕರ್ಮಗಳಲ್ಲಿ ಪ್ರೇರಕನಾದವನು; ನಮ್ಮ ಪುತ್ರಪೌತ್ರಾದಿಗಳನ್ನೂ, ನಮ್ಮನ್ನೂ ಯಾವ ಪ್ರಮಾದವೂ ಸಂಭವಿಸದಂತೆ ನೋಡುತ್ತಾ ನಮ್ಮನ್ನು ರಕ್ಷಿಸುವವನು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು. ಅಗ್ನಿಯು ದೇವತೆಗಳಿಗೂ ರಕ್ಷಕನು. ನನಗೂ, ಯಜಮಾನನಿಗೂ ರಕ್ಷಣೆಯನ್ನುಂಟುಮಾಡುವವನು. ಎಂದು ಯಾವ ಪುರುಷನು ತಿಳಿಯುತ್ತಾನೆಯೋ ಅವನು ಒಂದು ಸಂವತ್ಸರಪರ್ಯಂತರವೂ ಅಗ್ನಿಯಿಂದ ರಕ್ಷಣೆಯನ್ನು ಪಡೆದು ಕ್ಷೇಮದಿಂದಿರುವನು.

**ತಾ ಏತಾ ಅಷ್ಟಾವನ್ವಾಹ ರೂಪಸಮೃದ್ಧಾ ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣಮೃಗಭಿವದತಿ । ತಾಸಾಂ ತ್ರಿಃ ಪ್ರಥಮಾಮನ್ವಾಹ ತ್ರಿರುತ್ತಮಾಂ ತಾ ದ್ವಾದಶ ಸಂಪದ್ಯಂತೇ ದ್ವಾದಶ ವೈ ಮಾಸಾಃ ಸಂವತ್ಸರಃ ಸಂವತ್ಸರಃ ಪ್ರಜಾಪತಿಃ ಪ್ರಜಾಪ್ರತ್ಯಾಯತನಾಭಿರೇವಾಭೀ ರಾಧ್ನೋತಿ ಯ ಏವಂ ವೇದ ತ್ರಿಃ ಪ್ರಥಮಾಂ ತ್ರಿರುತ್ತ-ಮಾಮನ್ವಾಹ ಯಜ್ಞಸ್ಯೈವ ತದ್ಬರ್ಸೋ ನಹ್ಯತಿ ಸ್ಥೇಮ್ನೇ ಬಲಾಯಾವಿಸ್ರಂಸಾಯ ॥**
**(ಐ. ಬ್ರಾ. ೫-೨)**

ಈ ರೀತಿಯಾಗಿ ಹೋತೃವು ಹಿಂದೆ ಹೇಳಿದ ಎಂಟು ಋಕ್ಕುಗಳನ್ನು ಪಠಿಸುವನು. ಇವೆಲ್ಲವೂ ಸೇರಿ ಒಂದು ಸಂಪೂರ್ಣ ವಾದ ರೂಪವನ್ನು ಪಡೆದಿರುವ ಕರ್ಮವಾಗಿರುವುದು. ಆಯಾ ಕರ್ಮಗಳಿಗೆ ಅನುಗುಣವಾದ ಎಂದರೆ ಆ ಕರ್ಮಗಳ ಅರ್ಥಾನುವಾದ ವಿವರಣೆಗಳನ್ನು ವರ್ಣಿಸುವ ಮಂತ್ರಗಳನ್ನು ಆಯಾ ಕಾಲದಲ್ಲಿ ಹೇಳುವುದರಿಂದ ಯಜ್ಞಕರ್ಮವು ಸಾಂಗವಾಗಿ ನೆರವೇರುವುದಕ್ಕೆ ಸಹಾಯಕವಾಗಿರುವುದು. ಈ ಎಂಟು ಮಂತ್ರಗಳಲ್ಲಿ ಮೊದಲನೆಯ ಮತ್ತು ಕೊನೆಯ ಋಕ್ಕುಗಳನ್ನು ಹೋತೃವು ಮೂರುಮೂರಾವೃತ್ತಿ ಪಠಿಸುವನು. ಇದರಿಂದ ಈ ಕರ್ಮದಲ್ಲಿ ಒಟ್ಟು ಹನ್ನೆರಡು ಋಕ್ಕು ಗಳಿದ್ದಂತಾಯಿತು. ಹನ್ನೆರಡು ಮಾಸಗಳು ಸೇರಿ ಒಂದು ಸಂವತ್ಸರವಾಗುವುದು. ಪ್ರಜಾಪತಿಯು ಸಂವತ್ಸರ ಸ್ವರೂಪನು. ಆದ್ದರಿಂದ ಪ್ರಜಾಪತಿಯಲ್ಲಿ ಸ್ಥಾಪಿತವಾಗಿರುವ ಈ ಮಂತ್ರಗಳ ಸ್ವರೂಪವನ್ನೂ ಕ್ರಮವನ್ನೂ ಯಾವ ಪುರುಷನು ತಿಳಿದುಕೊಳ್ಳುವನೋ ಅವನು ಅಭಿವೃದ್ಧಿಯನ್ನೈದುವನು. ಮೊದಲಿನ ಮತ್ತು ಕೊನೆಯ ಋಕ್ಕುಗಳನ್ನು ಮೂರುಮೂರುಸಲ ಹೋತೃವು ಪಠಿಸುವುದರಿಂದ ಯಜ್ಞದ ಎರಡು ತುದಿಗಳು ಜಾರಿಹೋಗಿ ಬೀಳದಹಾಗೆ ಭದ್ರವಾಗಿ ಗಂಟುಹಾಕಿದಂತಾಗುವುದು.

ಅಗ್ನಿಪ್ರಣಯನಕಾರ್ಯವು ಸಮಾಪ್ತವು.

ಸಂಹಿತಾಪಾಠಃ

ತ್ವಂ ದೂತಸ್ತ್ವಮು ನಃ ಪರಸ್ಪಾಸ್ತ್ವಂ ವಸ್ಯ ಆ ವೃಷಭ ಪ್ರಣೇತಾ ।
ಅಗ್ನೇ ತೋಕಸ್ಯ ನಸ್ತನೇ ತನೂನಾಮಪ್ರಯುಚ್ಛನ್ದೀದ್ಯದ್ಬೋಧಿ ಗೋಪಾಃ ॥ ೨॥

ಪದಪಾಠಃ

ತ್ವಂ । ದೂತಃ । ತ್ವಂ । ಊಂ ಇತಿ । ನಃ । ಪರಃಽಪಾಃ । ತ್ವಂ । ವಸ್ಯಃ । ಆ । ವೃಷಭ । ಪ್ರಽನೇತಾ ।
ಅಗ್ನೇ । ತೋಕಸ್ಯ । ನಃ । ತನೇ । ತನೂನಾಂ । ಅಪ್ರಽಯುಚ್ಛನ್ । ದೀದ್ಯತ್ । ಬೋಧಿ । ಗೋಪಾಃ ॥ ೨॥

ಸಾಯಣಭಾಷ್ಯಂ

ಹೇ ವೃಷಭ ಅಭಿಮತಫಲವರ್ಷಕ ಹೇ ಅಗ್ನೇ ತ್ವಂ ದೂತೋಽಸ್ಮದೀಯೇ ಯಜ್ಞೇ ದೇವಾಹ್ವಾನಾರ್ಥಂ ದೂತೋ ಭವ । ತ್ವಮು ತ್ವಮೇವ ನೋಽಸ್ಮಾಕಂ ಪರಸ್ಪಾ ಆಪದ್ಭ್ಯಃ ಪಾರಯಿತಾ ಪಾತಾ ಚ ಭವ । ಕಿಂಚ ತ್ವಂ ವಸ್ಯೋ ವಸುನೋ ಧನಸ್ಯ ಆ ಪ್ರಣೇತಾಸ್ಮದಾಭಿಮುಖ್ಯೇನ ಪ್ರಾಪಯಿತಾ ಭವ । ಅಪ್ರಯುಚ್ಛನ್ ಅಪ್ರಮಾದ್ಯನ್ । ದೀದ್ಯತ್ ॥ ದೀಪಯತಿರ್ದೀಪ್ತಿಕರ್ಮಾ ॥ ಶೋಭಮಾನಃ । ತ್ವಂ ನೋಽಸ್ಮಾಕಂ ತೋಕಸ್ಯ ಪುತ್ರಸ್ಯ ತನೇ । ತನೋತಿ ವಿಸ್ತಾರಯತಿ ಕುಲಮಿತಿ ತನಃ ಪೌತ್ರಃ । ತಸ್ಮಿನ್ ಅಸ್ಮದೀಯಾನಾಂ ತನೂನಾಂ ಗೋಪಾ ಗೋಪಾಯಿತಾ । ತಥಾ ಚ ಬ್ರಾಹ್ಮಣಂ । ಅಗ್ನಿರ್ವೈ ದೇವಾನಾಂ ಗೋಪಾ ಅಗ್ನಿಮೇವ ತತ್ಸರ್ವತೋ ಗೋಪ್ತಾರಂ ಪರಿದತ್ತ ಆತ್ಮನೇ ಚ ಯಜಮಾನಾಯ ಚ । ಐ. ಬ್ರಾ. ೧. ೨೮. । ಇತಿ । ತಾದೃಶಸ್ತ್ವಂ ಚ ಗೋಪಾಯಿತಾ ಭವಾಮೀತಿ ಬೋಧಿ । ಬುಧ್ಯಸ್ವ ॥

ಪ್ರತಿಪದಾರ್ಥ

ವೃಷಭ-ಇಷ್ಟಾರ್ಥಗಳನ್ನು ಸುರಿಸತಕ್ಕ । ಅಗ್ನೇ-ಎಲೈ ಅಗ್ನಿಯೇ । ತ್ವಂ—ನೀನು । ದೂತಃ—(ನಮ್ಮ ಯಜ್ಞಕ್ಕೆ) ದೇವತೆಗಳನ್ನು ಕರೆಯುವ ದೂತನಾಗಿರು । ತ್ವಮು—ನೀನೇ । ನಃ—ನಮಗೆ । ಪರಸ್ಪಾಃ—ಆಪದ್ರಕ್ಷಕನಾಗಿರು । ತ್ವಂ—ನೀನು । ವಸ್ಯಃ—ಧನದ (ಧನವನ್ನು) । ಆ ಪ್ರಣೇತಾ ನಮ್ಮ ಅಭಿಮುಖವಾಗಿ ಸೇರಿಸುವವನಾಗಿರು । ಅಪ್ರಯುಚ್ಛನ್—ನೆಟ್ಟ ದೃಷ್ಟಿಯುಳ್ಳವನಾಗಿಯೂ । ದೀದ್ಯತ್—ಪ್ರಕಾಶಮಾನನಾಗಿಯೂ । ನಃ—ನಮ್ಮ । ತೋಕಸ್ಯ—ಪುತ್ರರಿಗೂ । ತನೇ—ಪೌತ್ರರಿಗೂ । ತನೂನಾಂ—ನಮ್ಮ ಸ್ವಶರೀರಕ್ಕೂ । ಗೋಪಾಃ—ರಕ್ಷಕನಾಗಿರು.

ಭಾವಾರ್ಥ

ಇಷ್ಟಾರ್ಥಪ್ರದನಾದ ಎಲೈ ಅಗ್ನಿಯೇ, ನೀನು ನಮ್ಮ ಯಜ್ಞಕ್ಕೆ ದೇವತೆಗಳನ್ನು ಕರೆಯುತಕ್ಕ ದೂತನಾಗಿಯೂ, ನಮಗೆ ಆಪದ್ರಕ್ಷಕನಾಗಿಯೂ, ನಮಗೆ ಧನಸಂಪತ್ತನ್ನೊದಗಿಸುವವನಾಗಿಯೂ, ಪ್ರಮಾದರಹಿತವಾದ ದೃಷ್ಟಿಯುಳ್ಳವ

ನಾಗಿಯೂ, ಪ್ರಕಾಶಮಾನನಾಗಿಯೂ ಮತ್ತು ನಮ್ಮ ಪುತ್ರರಿಗೂ, ಪೌತ್ರರಿಗೂ ಹಾಗೆಯೇ ನಮ್ಮ ಸ್ವಶರೀರಕ್ಕೂ ರಕ್ಷಕನಾಗಿಯೂ ಇರು.

## English Translation

Showerer (of benefits), Agni, be our messenger (to the gods); our preserver from evil; the conveyer to us of wealth; the protector of our sons and grandsons, and of our persons; understand (our prayer), ever heedful and resplendent.

### ವಿಶೇಷವಿಷಯಗಳು

**ದೂತಃ**—ಅಗ್ನಿರ್ದೇವಾನಾಂ ದೂತ ಆಸೀತ್ ಎಂಬ ಶ್ರುತಿವಾಕ್ಯಾನುಸಾರವಾಗಿ ಅಗ್ನಿಯು—ಮನುಷ್ಯರಾದ ಯಜಮಾನರು ಮಾಡುವ ಯಜ್ಞಕರ್ಮಗಳಲ್ಲಿ ದೇವತೆಗಳನ್ನು ಆಹ್ವಾನಮಾಡುವುದು, ಅವರಿಗೆ ಅಗ್ನಿಯಲ್ಲಿ ಹೋಮಮಾಡಿದ ಹವಿಸ್ಸನ್ನು ತಲಪಿಸುವುದು, ಋತ್ವಿಗ್ಜನರು ಮಾಡುವ ಸ್ತೋತ್ರಗಳನ್ನೂ, ಪ್ರಾರ್ಥನೆಗಳನ್ನೂ ದೇವತೆಗಳಿಗೆ ಸಲ್ಲಿಸುವುದು ಮೊದಲಾದ ಕಾರ್ಯಗಳನ್ನು ನಿರ್ವಹಿಸುವವನಾದ್ದರಿಂದ ದೇವಮನುಷ್ಯರ ಮಧ್ಯದಲ್ಲಿ ಅಗ್ನಿಯು ದೂತನಾಗಿರುವನೆಂದು ಹೇಳಿರುವುದು.

**ಪರಸ್ಪಾಃ**—ಅಸ್ಮಾಕಂ ಆಪದ್ಭ್ಯಃ ಪಾರಯಿತಾ ಪಾತಾ ಚ । ನಾನಾವಿಧ ಆಪತ್ತುಗಳಿಂದಲೂ, ಶತ್ರುಭಯದಿಂದಲೂ ನಮ್ಮನ್ನು ಪಾರುಮಾಡಿ ಕಾಪಾಡುವವನು.

**ವೃಷಭ**—ಅಭಿಮತಫಲವರ್ಷಕ । ನಮಗೆ ಬೇಕಾದ ಇಷ್ಟಾರ್ಥಗಳನ್ನು ವೃಷ್ಟಿಯಂತೆ ಸುರಿಸುವವನು ಎಂದರೆ ಕೊಡುವವನು ಎಂದಭಿಪ್ರಾಯವು

**ತೋಕಸ್ಯ, ತನೇ**—ತೋಕಶಬ್ದವು ಹದಿನೈದು ಅಪತ್ಯನಾಮಗಳಲ್ಲಿ ಪಠಿತವಾಗಿದೆ. (ನಿ. ೩-೨) ಆದ್ದರಿಂದ ತೋಕಶಬ್ದಕ್ಕೆ ಪುತ್ರನೆಂದರ್ಥವು. ತನಯಶಬ್ದವೂ ಸಹ ಅಲ್ಲಿಯೇ ಪಠಿತವಾಗಿ ಅದಕ್ಕೂ ಪುತ್ರನೆಂಬ ಅರ್ಥವಿದ್ದರೂ ತನಯ ಅಥವಾ ತನಶಬ್ದಕ್ಕೆ—ಅದರಲ್ಲಿಯೂ ಈ ಎರಡು ಶಬ್ದಗಳೂ ಒಂದೇ ಋಕ್ಕಿನಲ್ಲಿ ಪಠಿತವಾಗಿದ್ದರೆ—ಪೌತ್ರ ಅಥವಾ ಮೊಮ್ಮಗನೆಂದು ಅರ್ಥಮಾಡುವುದು ರೂಢಿಯಾಗಿದೆ.–ಯಾಸ್ಕರು ಈ ವಿಷಯವಾಗಿ—

> **ಯಾ ತೇ ದಿದ್ಯುದವಸೃಷ್ಟಾ ದಿವಸ್ಪರಿ ಕ್ಷ್ಮಯಾ ಚರತಿ ಪರಿ ಸಾ ವೃಣಕ್ತು ನಃ ।**
> **ಸಹಸ್ರಂ ತೇ ಸ್ವಪಿವಾತ ಭೇಷಜಾ ಮಾನಸ್ತೋಕೇಷು ತನಯೇಷು ರೀರಿಷಃ ॥**

(ಋ. ಸಂ. ೭-೪೬-೩)

ಎಂಬ ಋಕ್ಕನ್ನುದಾಹರಿಸಿ ಅದರಲ್ಲಿರುವ **ತೋಕೇಷು**, **ತನಯೇಷು** ಎಂಬ ಶಬ್ದಗಳಿಗೆ **ಪುತ್ರೇಷು ಚ ಪೌತ್ರೇಷು ಚ** ಎಂದು ನಿರ್ವಚನವನ್ನು ಹೇಳಿದ್ದಾರೆ. (ನಿ. ೧೦-೭) ಸಾಯಣರು ತನೇ ಎಂಬ ಶಬ್ದಕ್ಕೆ—**ತನೋತಿ ವಿಸ್ತಾರಯತಿ ಕುಲಮಿತಿ ತನಃ ಪೌತ್ರಃ ।** ಎಂದರೆ ತನು ವಿಸ್ತಾರೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ—ಕುಲವನ್ನು (ವೃದ್ಧಿಮಾಡುವುದರ ಮೂಲಕ) ವಿಸ್ತಾರಮಾಡುವವನಾದ್ದರಿಂದ ತನ ಎಂದರೆ ಪೌತ್ರನು,

ಮೊಮ್ಮಗನು ಎಂದು ಅರ್ಥವಿವರಣೆಮಾಡಿರುವರು. ಆದುದರಿಂದ ಯಾಸ್ಕರ ಮತದಂತೆ ತೋಕ ಶಬ್ದಕ್ಕೆ ಪುತ್ರನೆಂದೂ, ತನ ಅಥವಾ ತನಯ ಶಬ್ದಕ್ಕೆ ಪೌತ್ರ ಎಂದರೆ ಮೊಮ್ಮಗನೆಂದೂ ಅರ್ಥಮಾಡಬಹುದು.

ನಃ ತನೂನಾಂ ಗೋಪಾಃ—ಅಸ್ಮದೀಯಾನಾಂ ತನೂನಾಂ ಗೋಪಾ ಗೋಪಾಯಿತಾ । ನಮ್ಮ ಶರೀರಗಳನ್ನು ಎಂದರೆ ನಮ್ಮನ್ನು ಕಾಪಾಡುವವನು ಎಂದು ವಿವರಿಸಿ—ಅಗ್ನಿರ್ವೈ ದೇವಾನಾಂ ಗೋಪಾ ಅಗ್ನಿಮೇವ ತತ್ಸರ್ವತೋ ಗೋಪ್ತಾರಂ ಪರಿದತ್ತ ಆತ್ಮನೇ ಚ ಯಜಮಾನಾಯ ಚ (ಐ. ಬ್ರಾ. ೧-೨೮) ಎಂಬ ಬ್ರಾಹ್ಮಣವಾಕ್ಯವನ್ನು ಉದಾಹರಿಸಿದ್ದಾರೆ. ಈ ಬ್ರಾಹ್ಮಣವಾಕ್ಯದ ಅರ್ಥವನ್ನು ನಾವು ಹಿಂದೆಯೇ ಅಗ್ನಿಪ್ರಣಯನಕಾರ್ಯದಲ್ಲಿ ವಿವರಿಸಿದ್ದೇವೆ. (ಪುಟ. 449)

---

ಸಂಹಿತಾಪಾಠಃ

ವಿಧೇಮ ತೇ ಪರಮೇ ಜನ್ಮನ್ನಗ್ನೇ ವಿಧೇಮ ಸ್ತೋಮೈರವರೇ ಸಧಸ್ಥೇ ।
ಯಸ್ಮಾದ್ಯೋನೇರುದಾರಿಥಾ ಯಜೇ ತಂ ಪ್ರ ತ್ವೇ ಹವೀಂಷಿ ಜುಹುರೇ
ಸಮಿದ್ಧೇ ॥ ೩ ॥

ಪದಪಾಠಃ

ವಿಧೇಮ । ತೇ । ಪರಮೇ । ಜನ್ಮನ್ । ಅಗ್ನೇ । ವಿಧೇಮ । ಸ್ತೋಮೈಃ । ಅವರೇ । ಸಧಽಸ್ಥೇ ।
ಯಸ್ಮಾತ್ । ಯೋನೇಃ । ಉತ್ಽಆರಿಥ । ಯಜೇ । ತಂ । ಪ್ರ । ತ್ವೇ ಇತಿ । ಹವೀಂಷಿ । ಜುಹುರೇ ।
ಸಂಽಇದ್ಧೇ ॥ ೩ ॥

ಸಾಯಣಭಾಷ್ಯಂ

ಹೇ ಅಗ್ನೇ ಪರಮ ಉತ್ಕೃಷ್ಟೇ ಜನ್ಮನ್ । ಜಾಯತೇ ಪ್ರಾದುರ್ಭವತ್ಯಸ್ಮಿನ್ನಿತಿ ಜನ್ಮಸ್ಥಾನಂ ದ್ಯೌಃ । ತಸ್ಮಿನ್ ದ್ಯುಲೋಕೇಽವಸ್ಥಿತಾಯ ತೇ ತುಭ್ಯಂ ವಿಧೇಮ । ಸ್ತುತಿಭಿಃ ಪರಿಚರೇಮ । ಅವರೇ ದ್ಯುಲೋಕಾದಧಸ್ತನೇ ಸಧಸ್ಥೇಽಂತರಿಕ್ಷೇ ಸ್ಥಿತಾಯ ತುಭ್ಯಂ ಸ್ತೋಮೈಃ ಸ್ತೋತ್ರೈರ್ವಿಧೇಮ । ಪರಿಚರೇಮ । ಯಸ್ಮಾದ್ಯೋನೇಃ ಪೃಥಿವೀರೂಪಾತ್ಸ್ಥಾನಾತ್ ತ್ವಮುದಾರಿಥ ಉದ್ಗತೋಽಸಿ ಪ್ರಾದು-ರ್ಭೂತೋಽಸಿ ತಂ ಪೃಥಿವೀಪ್ರದೇಶಂ ಯಜೇ । ಪೂಜಯಾಮಿ । ತತ್ರ ಹಿ ಸಮಿದ್ಧೇ ಸಮಿದ್ಭಿಃ ಸಮಿಧ್ಯಮಾನೇ ತ್ವೇ ತ್ವಯಿ ಹವೀಂಷಿ ಪುರೋಡಾಶಾದೀನಿ ಪ್ರಜುಹುರೇ । ಅಧ್ವರ್ಯ್ವಾದಯಃ ಪ್ರಜುಹ್ವತಿ । ಜುಹೋತೇರ್ಲಿಟಿ ರೂಪಂ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಪರಮೇ—ಅತ್ಯುತ್ತಮವಾದ ದ್ಯುಲೋಕದಲ್ಲಿ । ಜನ್ಮನ್—ಉತ್ಪತ್ತಿಯುಳ್ಳ । ತೇ—ನಿನಗೆ (ನಿನ್ನನ್ನು) ವಿಧೇಮ—ಸ್ತುತಿಗಳಿಂದ ಪರಿಚರಿಸುವೆವು । ಅವರೇ—ಅದಕ್ಕಿಂತ ಅಧೋಭಾಗದಲ್ಲಿರುವ ।

ಸಧಸ್ಥೇ—ಅಂತರಿಕ್ಷದಲ್ಲಿರುವ ನಿನ್ನನ್ನು | ಸ್ತೋಮೈಃ-ಸ್ತೋತ್ರಗಳಿಂದ | ವಿಧೇಮ—ಪರಿಚರಿಸುವೆವು | ಯಸ್ಮಾ-ದ್ಯೋನೇಃ—ಯಾವ ಪೃಥಿವಿಯೇ ನಿನಗೆ ಉತ್ಪತ್ತಿಸ್ಥಾನವಾಗಿ | ಉದಾರಿಥ—ಅಲ್ಲಿಂದ ಪ್ರಾದುರ್ಭೂತನಾಗಿದ್ದೀಯೋ | ತಂ—ಪೃಥಿವೀಸ್ಥಾನದಲ್ಲಿರುವ ಆ ನಿನ್ನನ್ನು | ಯಜೇ—ಪೂಜಿಸುತ್ತೇನೆ | ಸಮಿದ್ಧೇ—ನೀನು ಪ್ರಜ್ವಲಿತನಾದಾಗ | ತ್ವೇ—ನಿನ್ನಲ್ಲಿ | ಹವೀಂಷಿ—ಹವಿಸ್ಸುಗಳನ್ನು | ಪ್ರ ಜುಹುರೇ—ಅರ್ಪಿಸುತ್ತಾರೆ.

ಭಾವಾರ್ಥ

ಎಲೈ ಅಗ್ನಿಯೇ, ಅತ್ಯುತ್ತಮವಾದ ದ್ಯುಲೋಕದಲ್ಲಿ ಉತ್ಪನ್ನನಾದವನೂ, ಅಂತರಿಕ್ಷದಲ್ಲಿರತಕ್ಕವನೂ, ಪೃಥಿವೀರೂಪವಾದ ಯೋನಿಯೇ ಉತ್ಪತ್ತಿಸ್ಥಾನವಾಗಿ ಉಳ್ಳವನೂ ಆದ ನಿನ್ನನ್ನು ಸ್ತೋತ್ರಗಳಿಂದ ಪೂಜಿಸುತ್ತೇನೆ. ಮತ್ತು ನೀನು ಪ್ರಜ್ವಲಿತನಾದಾಗ ಅಧ್ವರ್ಯುವೇ ಮುಂತಾದ ಋತ್ವಿಕ್ಕುಗಳು ನಿನಗೆ ಹವಿಸ್ಸನ್ನು ಅರ್ಪಿಸುತ್ತಾರೆ.

English Translation

We adore you, Agni, in your loftiest birth-(place), and with hymns in your inferior station ; I worship that seat whence you have issued ; the priests have offered you, when kindled, oblations.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಅಗ್ನಿಯು ಸ್ವರ್ಗಾಂತರಿಕ್ಷಭೂಮಿಗಳಲ್ಲಿ ಜನಿಸಿರುತ್ತಾನೆಂದು ವರ್ಣಿಸಿದೆ. ಇದೇ ವಿಷಯವು ಋ. ಸಂ. ೧-೯೫-೩ ರಲ್ಲಿಯೂ ಸಹ ಸ್ವಲ್ಪ ವ್ಯತ್ಯಾಸದಿಂದ ವರ್ಣಿತವಾಗಿದೆ.

ತ್ರೀಣಿ ಜಾನಾ ಪರಿ ಭೂಷಂತ್ಯಸ್ಯ ಸಮುದ್ರ ಏಕಂ ದಿವ್ಯೇಕಮಪ್ಸು |
ಪೂರ್ವಾಮನು ಪ್ರ ದಿಶಂ ಪಾರ್ಥಿವಾನಾಮೃತೂನ್ಪ್ರಶಾಸದ್ವಿ ದಧಾವನುಷ್ಠು ||

(ಋ. ಸಂ. ೧-೯೫-೩)

ಇಲ್ಲಿ ಅಗ್ನಿಗೆ ತ್ರೀಣಿ ಜಾನಾ ತ್ರಿಸಂಖ್ಯಾಕಾನಿ | ಎಂದರೆ ಮೂರು ವಿಧವಾದ ಜನ್ಮಗಳು ಎಂದು ಅಗ್ನಿಯ ಜನ್ಮಸ್ಥಾನಗಳನ್ನು ಒಂದೊಂದಾಗಿ ಹೇಳಿದೆ. ಈ ವರ್ಣನೆಯು ಅಗ್ನಿಯ ಆವಿರ್ಭಾವಕ್ಕೆ ಮೂಲಸ್ವರೂಪವನ್ನು ತಿಳಿಸುತ್ತದೆ. ಅಗ್ನಿಯ ಮೂರು ವಿಧವಾದ ಅಸ್ತಿತ್ವವೂ, ಅವಕ್ಕೆ ಅನುಗುಣವಾಗಿ ಮೂರು ವಿಧವಾದ ಆವಿರ್ಭಾವವೂ ಜಗತ್ತಿನ ಮೂಲತತ್ತ್ವವನ್ನೇ ಪ್ರತಿಬಿಂಬಿಸುತ್ತವೆ ಎಂಬುದು ಬೃಹದ್ದೇವತೆಯ ವಿವರಣೆಯಿಂದ ತಿಳಿಯುತ್ತದೆ.

ಭವದ್ಭೂತಸ್ಯ ಭವ್ಯಸ್ಯ ಜಂಗಮಸ್ಥಾವರಸ್ಯ ಚ |
ಅಸ್ಯೈಕೇ ಸೂರ್ಯಮೇವೈಕಂ ಪ್ರಭವಂ ಪ್ರಲಯಂ ವಿದುಃ ||
ಏತದ್ಭೂತೇಷು ಲೋಕೇಷು ಅಗ್ನಿಭೂತಂ ಸ್ಥಿತಂ ತ್ರಿಧಾ |
ಋಷಯೋ ಗೀರ್ಭಿರರ್ಚಂತಿ ವ್ಯಂಜಿತಂ ನಾಮಭಿಸ್ತ್ರಿಭಿಃ ||

(ಬೃ. ದೇ. ೧-೬೧ ; ೧-೬೪)

ಎಂಬ ಶ್ಲೋಕಗಳಲ್ಲಿ ಬೃಹದ್ದೇವತಾಕಾರರು ಅಗ್ನಿಯ ಮಹತ್ತ್ವವನ್ನು ವರ್ಣಿಸುವ ಸಂದರ್ಭದಲ್ಲಿ ಸಕಲ ಭೂತಗಳಿಗೂ ಯೋನಿಯಾದ ಜಾಪತಿಯು ಭೂತಭವಿಷ್ಯದ್ವರ್ತಮಾನಗಳಲ್ಲಿರುವ ಸಕಲ ಚರಾಚರವಾದ ಭೂತಗಳಿಗೂ ಸೃಷ್ಟಿ

ಪ್ರಳಯಗಳ ಮೂಲವಾಗಿ ಅಗ್ನಿರೂಪದಿಂದ ಮೂರು ವಿಧವಾಗಿ ಮೂರು ಸ್ಥಾನಗಳಲ್ಲಿ ತನ್ನ ಅಸ್ತಿತ್ವವನ್ನು ಪಡೆದಿರುತ್ತಾನೆ. ಈ ಮೂರು ವಿಧವಾದ ಅಗ್ನಿಯ ಆವಿರ್ಭಾವವನ್ನೂ ಸಹ ಋಷಿಗಳು ಮೂರು ಹೆಸರುಗಳಿಂದ ಕೆಳಗೆ ಕಂಡಂತೆ ಹೇಳುತ್ತಾರೆ, ಎಂದು ಅದೇ ಅಗ್ನಿಯ ಪ್ರಶಂಸೆಯನ್ನು ಮುಂದುವರಿಸುತ್ತಾ—

ತ್ರಿಸ್ಥಾನಂ ಚೈನಮರ್ಚಂತಿ ಹೋತ್ರಾಯಾಂ ವ್ಯಕ್ತಬರ್ಹಿಷಃ ॥
ಇಹೈವ ಪವಮಾನೋಽಗ್ನಿರ್ಮಧ್ಯಮೋಽಗ್ನಿರ್ವನಸ್ಪತಿಃ ।
ಅಮುಷ್ಮಿನ್ನೇವ ವಿಪ್ರೈಸ್ತು ಲೋಕೇಽಗ್ನಿಃ ಶುಚಿರುಚ್ಯತೇ ॥
ಇಹಾಗ್ನಿಭೂತಸ್ತ್ವೃಷಿಭಿರ್ಲೋಕೇ ಸ್ತುತಿಭಿರೀಳಿತಃ ।
ಜಾತವೇದಾಃ ಸ್ತುತೋ ಮಧ್ಯೇ ಸ್ತುತೋ ವೈಶ್ವಾನರೋ ದಿವಿ ॥

(ಬೃ. ದೇ. ೧-೬೫ ರಿಂದ ೬೭)

ಈ ಮೂರು ವಿಧಗಳಲ್ಲಿ ಪೃಥ್ವಿಯಲ್ಲಿ ಆವಿರ್ಭವಿಸುವ ಅಗ್ನಿಗೆ ಪವಮಾನಾಗ್ನಿಯೆಂತಲೂ, ಮಧ್ಯಮಲೋಕವರ್ತಿಯಾದ ಅಗ್ನಿಗೆ ವನಸ್ಪತಿಯೆಂದೂ, ದ್ಯುಲೋಕಸ್ಥನಾದ ಅಗ್ನಿಗೆ ಶುಚಿಯೆಂದೂ ಪ್ರಸಿದ್ಧಿಯಿದೆ. ಈ ಮೂರು ಪ್ರಭೇದಗಳೂ ತೈತ್ತಿರೀಯ ಸಂಹಿತೆಯಲ್ಲಿ (೨-೨-೪) ಪವಮಾನ, ಶುಚಿ, ಪಾವಕ, ಎಂಬ ವಿಭಾಗದಿಂದ ಪಠಿತವಾಗಿವೆ. ಇದಲ್ಲದೇ ಅಗ್ನಿ, ಜಾತವೇದಸ್ ಮತ್ತು ವೈಶ್ವಾನರ ಎಂಬ ಹೆಸರೂ ಸಹ ಮೂರು ಸ್ಥಾನಗಳನ್ನೂ ಮೂರು ವಿಧವಾದ ಸ್ವರೂಪಗಳನ್ನೂ ತಿಳಿಸುತ್ತವೆ. ನಿರುಕ್ತಕಾರರೂ ಸಹ ಋಕ್ಸಂಹಿತೆಯ—

ಸ್ತೋಮೇನ ಹಿ ದಿವಿ ದೇವಾಸೋ ಅಗ್ನಿಮಜೀಜನಞ್ಛಕ್ತಿಭೀ ರೋದಸಿಪ್ರಾಂ ।
ತಮೂ ಅಕೃಣ್ವನ್ ತ್ರೇಧಾ ಭುವೇ ಕಂ ಸ ಓಷಧೀಃ ಪಚತಿ ವಿಶ್ವರೂಪಾಃ ॥

(ಋ. ಸಂ. ೧೦-೮೮-೧೦)

ಎಂಬ ಋಕ್ಕನ್ನು ಉದಹರಿಸಿ ತಮಕುರ್ವಂಸ್ತ್ರೇಧಾಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ । ಶಾಕಪೂಣಿಯ ವಿವರಣೆಯನ್ನನುಸರಿಸಿ ಪೃಥಿವೀ ಅಂತರಿಕ್ಷಮತ್ತು ದ್ಯುಲೋಕಗಳೆಂಬ ಪ್ರಭೇದಗಳುಳ್ಳ ಈ ಮೂರು ಸ್ಥಾನಗಳಲ್ಲೂ ಅಗ್ನಿಃ, ಜಾತವೇದಾಃ ಮತ್ತು ವೈಶ್ವಾನರ ಎಂಬ ಮೂರು ರೂಪಗಳಲ್ಲಿ ಅಗ್ನಿಯು ಆವಿರ್ಭವಿಸಿದ್ದಾನೆ ಎಂದು ಈ ಮೂರು ಸ್ವರೂಪಗಳನ್ನು ಸಂಹಿತಾವಾಕ್ಯಗಳ ಉದಾಹರಣೆಯಿಂದ ವಿಶದವಾಗಿ ವಿವರಿಸುತ್ತಾರೆ. (ನಿ. ೭-೧೪ ರಿಂದ ೭-೨೫).

ಇದರಂತೆಯೇ ಈ ಋಕ್ಕಿನಲ್ಲಿಯೂ ಸಹ ಮೂರು ಸ್ಥಾನಗಳನ್ನೂ ಕ್ರಮವಾಗಿ ಸಮುದ್ರೇ, ದಿವಿ, ಅಪ್ಸು ಎಂಬ ಹೆಸರುಗಳಿಂದ ವಿವರಿಸಿ ಸಮುದ್ರದಲ್ಲಿ ಬಡಬಾನಲ ರೂಪದಲ್ಲಿಯೂ ದ್ಯುಲೋಕದಲ್ಲಿ ಆದಿತ್ಯ ರೂಪದಲ್ಲಿಯೂ ಅಪ್ಸು ಎಂದರೆ ಅಂತರಿಕ್ಷದಲ್ಲಿ ಮಿಂಚಿನ ರೂಪನಲ್ಲಿಯೂ ಗೋಚರಿಸುತ್ತಾನೆ ಎಂದು ವ್ಯಾಸರಿಸಿದೆ ಒಂದೊಂದು ಸಲ ಈ ಸ್ಥಾನಗಳ ಹೆಸರುಗಳು ವ್ಯತ್ಯಾಸವಾದರೂ ಅಭಿಪ್ರಾಯಗಳೆಲ್ಲಾ ಒಂದೇ ಆಗಿರುವುದು. ಉದಾಹರಣೆಗೆ, ಇಲ್ಲಿ ಪೃಥಿವಿಗೆ ಬದಲಾಗಿ ಸಮುದ್ರವೆಂದು ಈ ಸನ್ನಿವೇಶಕ್ಕೆ ತಕ್ಕಂತೆ ವಿಭಾಗಿಸಿದೆ. ಒಟ್ಟಿನಲ್ಲಿ ಈ ವಿಧವಾಗಿ ಮೂರು ಪ್ರಭೇದಗಳು ನಾಲ್ಕು ವೇದಗಳಲ್ಲಿಯೂ ನಾನಾಸನ್ನಿವೇಶಗಳಲ್ಲಿ ಹೇಳಲ್ಪಟ್ಟಿದೆ.

ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿರಸ್ಮದ್ ದ್ವಿತೀಯಂ ಪರಿ ಜಾತವೇದಾಃ ।
ತೃತೀಯಮಪ್ಸು ನೃಮಣಾ ಅಜಸ್ರಮಿಂಧಾನ ಏನಂ ಜರತೇ ಸ್ವಾಧೀಃ ॥

(ಋ. ಸಂ. ೧೦-೪೫-೧ ; ವಾ. ಸಂ- ೧೨-೧೮ ; ತೈ. ಸ. ೧-೩-೧೪-೫)

ಅಗ್ನಿರಸ್ಮಿ ಜನ್ಮನಾ ಜಾತವೇದಾ ಘೃತಂ ಮೇ ಚಕ್ಷುರಮೃತಂ ಮ ಆಸನ್ ।
ಅರ್ಕಸ್ತ್ರಿಧಾತೂ ರಜಸೋ ವಿಮಾನೋಽಜಸ್ರೋ ಘರ್ಮೋ ಹವಿರಸ್ಮಿ ನಾಮ ॥

(ಋ. ಸಂ. ೩-೨೬-೭ ; ವಾ. ಸಂ. ೧೮-೧೬ ; ನಿ. ೧೪-೨)

ಇತ್ಯಾದಿ ವಿವರಣೆಗಳಿಂದ ತ್ರೀಣಿ ಜಾನಾ ಎಂಬ ವರ್ಣನೆಯ ಸ್ವರೂಪವು ವಿಶದವಾಗಿ ತಿಳಿಯುತ್ತದೆ.

ಇದಮುಕ್ತಂ ಭವತಿ । ನ ಸಾಧಾರಣವತ್ಸವದಯಮಗ್ನಿರ್ವತ್ಸೋ ದೃಶ್ಯಮಾನೋ ಮಾತುರುದರೇ ವರ್ಧತೇ ತರ್ಹಿ ದೃಶ್ಯಮಾನ ಏವ ವರ್ಧತೇ । ಪಶುವತ್ತಿರಶ್ಚೀನಾನಾಂ ಅಬ್ರೂಪಮಾತೃಣಾಮುದರೇ ಚ ತಿರಶ್ಚೀನೋ ನ ವರ್ಧತೇ ತರ್ಹಿ ಊರ್ಧ್ವಃ ಸನ್ ವರ್ಧತೇ । ತಾ ಇವ ಛಾಯಂ ನ ದೀಪ್ತಿಹೀನಸ್ತರ್ಹಿ ಸ್ವಯಶಾಃ ಸ್ವಾಯತ್ತದೀಪ್ತಿರ್ಭವತಿ । ತ್ವೇಷಪ್ಟುಸ್ತು ಯದಾಯಮಗ್ನಿರ್ಜಾತಸ್ತದಾ ದ್ಯಾವಾಪೃಥಿವ್ಯಾವಪಿ ತಸ್ಮಾದ್ಭೀತ್ವಾ ಪರಾಗತೇ । ಪಶ್ಚಾತ್ಪುನರಾಗತ್ಯ ತಂ ಸಿಂಹಸದೃಶಮಗ್ನಿಂ ಬಾಲವತ್ಸೇವೇತೇ ಸ್ಮೇತಿ ಭಾವಃ ॥ ಎಂದರೆ—ಸಾಧಾರಣ ಶಿಶುಗಳಂತೆ ಈ ಅಗ್ನಿಯು ತಾಯಿಯ ಉದರದಲ್ಲಿ ಯಾರಿಗೂ ಕಾಣಿಸದಂತೆ ಒಳಗೇ ಇದ್ದು ಬೆಳೆಯಲಿಲ್ಲ. ಆದರೆ ಎಲ್ಲರಿಗೂ ಕಾಣುವಂತೆಯೇ (ಕಾಷ್ಠಾದಿಗಳ ದಹನದಿಂದ) ಬೆಳೆಯುವವನು. ಇದಲ್ಲದೆ ಪಶುಗಳಂತೆ ಜಲರೂಪವಾದ ಮಾತೃಗಳ ಉದರದಲ್ಲಿ ಅಡಗಿದ್ದು ಬೆಳೆಯಲಿಲ್ಲ. ಪ್ರತ್ಯಕ್ಷವಾಗಿ ಎಲ್ಲರಿಗೂ ಕಾಣಿಸುವಂತೆ ಊರ್ಧ್ವಮುಖವಾದ ಎಂದರೆ ಮೇಲಕ್ಕೇಳುವ ಜ್ವಾಲೆಗಳಿಂದ ಕೂಡಿ ಬೆಳೆಯುತ್ತಿರುವನು. ಇವನ ಮಾತೃಗಳಾದ ನೀರಿನಂತೆ ಇವನು ಪ್ರಕಾಶಹೀನನೂ ಅಲ್ಲ. ತಾನೇ ಸ್ವಯಂ ಪ್ರಕಾಶದಿಂದ ಬೆಳಗುವವನು. ಈ ರೀತಿ ಸ್ವಯಂಪ್ರಕಾಶತ್ವದಿಂದ ಜನಿಸಿದ ಅಗ್ನಿಯನ್ನು ನೋಡಿ ದ್ಯಾವಾಪೃಥಿವಿಗಳು ಭೀತರಾದರೂ ಮತ್ತೆ ಸಿಂಹಸದೃಶನಾದ ಅವನಲ್ಲಿಗೆ ಬಂದು ಅವನನ್ನು ಸೇವಿಸಿದರು ಎಂದಭಿಪ್ರಾಯವು

ಇಲ್ಲಿ ವೈದ್ಯುತಾಗ್ನಿಯ ಸ್ವರೂಪವನ್ನು ವರ್ಣಿಸಿದೆ. ಏಕಕಾಲದಲ್ಲಿಯೇ ಚಿತ್ತಾಕರ್ಷಕವಾದ ರಮಣೀಯತೆಯಿಂದಲೂ ಭೀತಿಯನ್ನುಂಟುಮಾಡುವ ಭೀಮಗುಣಗಳಿಂದಲೂ ಕೂಡಿರುವ ವಿದ್ಯುತ್ತಿನ ಪ್ರಭಾವವನ್ನು ಹೊಗಳುತ್ತಾ ಆದರ ವಿವರಣೆಯನ್ನು ಕೊಟ್ಟಿದೆ. ತರಂಗರೂಪದಲ್ಲಿರುವ ವೃಷ್ಟ್ಯುದಕಗಳ ನಡುವೆ ಪ್ರಕಾಶಮಾನನಾಗಿಯೂ ಮನೋಹರವಾದ ಕಾಂತಿಯುಳ್ಳವನಾಗಿಯೂ ಆವಿರ್ಭವಿಸುವ ಮಿಂಚಿನರೂಪದ ಅಗ್ನಿಯು:ಉತ್ಪನ್ನನಾದೊಡನೆಯೇ ಅತ್ಯಂತ ರಮ್ಯನಾಗಿರುತ್ತಾನೆ. ಅದೇ ಕಾಲದಲ್ಲಿಯೇ, ಆ ಮಿಂಚಿನ ಪ್ರಭಾವವು ಸಕಲ ಶಕ್ತಿಗಳಿಗಿಂತಲೂ ಹೆಚ್ಚಿನದಾಗಿ, ಅಪ್ರತಿಹತವಾದ ವೇಗದಿಂದಲೂ ದಾಹದಿಂದಲೂ ಲೋಕವನ್ನಾಕ್ರಮಿಸುವಾಗ ಸಿಂಹದಂತೆ ಭಯಜನಕವಾಗಿರುತ್ತದೆ. ಆದುದರಿಂದಲೇ ದ್ಯಾವಾಪೃಥಿವಿಗಳೆರಡೂ ಈ ಅಗ್ನಿಗೆ ಗೌರವವನ್ನು ಸಲ್ಲಿಸಿ ಸೇವಿಸುತ್ತವೆ. ಆಗ ವಿದ್ಯುದ್ರೂಪದ ಅಗ್ನಿಯೇ ಆಗದೇ, ಪಾರ್ಥಿವವಾದ ಅಗ್ನಿಯೂ ಈ ಗುಣಗಳಿಂದ ಕೂಡಿ ವರ್ಣಿತನಾಗಿರಬಹುದು. ಈ ಅರ್ಥಭೇದಗಳನ್ನು ವಿವರಣೆಯಿಂದ ತಿಳಿಯಬಹುದು.

ಅತ್ರೇದಮುಕ್ತಂ ಭವತಿ । ಯದಾ ಮೇಘೋದಕರೂಪಾಭಿರ್ಗೋಭಿರ್ಯುಕ್ತಃ ಸನ್ನಗ್ನಿರ್ವೈದ್ಯುತಃ ಸ್ವಕೀಯಮುತ್ಕೃಷ್ಟತರಂ ತೇಜಸ್ತೇಜಃಪುಂಜಪೂರ್ಣೇಂತರಿಕ್ಷೇ ಪ್ರಾದುರ್ಭಾವಯತಿ ತದಾ ತತ್ಸರ್ವಮಂತರಿಕ್ಷಂ ತೇನ ತೇಜಸಾ ಪ್ರಮೃಷ್ಟಂ ಭವತಿ ಯಚ್ಚ ತತ್ಸ್ವರೂಪಪ್ರಾದುರ್ಭವನಂ ತದೇವ ದೇವಾಂತರೈಃ ಸಹಾಗ್ನೇರ್ಗಮನಂ ಭವತೀತಿ । ಎಂದರೆ ಮೇಘಗಳ ಮಧ್ಯದಲ್ಲಿ ಅಗ್ನಿಯು ವಿದ್ಯುದ್ರೂಪದಿಂದ ತನ್ನ ಪೂರ್ಣ ತೇಜಸ್ಸಿನೊಡನೆ ಪ್ರಕಾಶಮಾನವಾಗಿ ಅಂತರಿಕ್ಷದಲ್ಲಿ ಆವಿರ್ಭವಿಸುವಾಗ ಅಗ್ನಿಯ ಪ್ರಕಾಶದಿಂದ ಅಂತರಿಕ್ಷವೆಲ್ಲವೂ ತೇಜಸ್ಸಿನಿಂದ ತುಂಬಿಹೋಗುವುದು. ಎಂದರೆ ಅತಿಪ್ರಕಾಶಮಾನವಾಗಿ ಬೆಳಗುವುದು. ಈ ರೀತಿ ಅಗ್ನಿಯು ಪ್ರಾದುರ್ಭವಿಸಿ ಇತರ ದೇವತೆಗಳೊಡನೆ ಸೇರುವನೆಂದಭಿಪ್ರಾಯವು.

ಈ ಋಕ್ಕಿನ ಪೂರ್ವಾರ್ಧದ ಮತ್ತು ಉತ್ತರಾರ್ಧದ ಎರಡು ವಾಕ್ಯಗಳಿಗೂ ಎರಡು ವಿಧವಾದ ಅನ್ವಯವು ಸಾಧ್ಯವಾಗುತ್ತದೆ. ಪೂರ್ವಾರ್ಧಕ್ಕೆ, ಮೊದಲನೆಯದಾಗಿ ಅಗ್ನಿಯು ಅಂತರಿಕ್ಷದಲ್ಲಿ ವೃಷ್ಟ್ಯುದಕಗಳೊಡನೆ ಸೇರಿಕೊಂಡು ಮಿಂಚಿನ ರೂಪದಲ್ಲಿ ತನ್ನ ತೇಜಸ್ಸನ್ನು ಉತ್ಪನ್ನವಾಗುವಂತೆ ಮಾಡುತ್ತಾನೆ ಎಂತಲೂ, ಎರಡನೆಯದಾಗಿ, ಯಜ್ಞಗೃಹದಲ್ಲಿ ಸ್ತುತಿಗಳಿಂದಲೂ, ಸೋಮರಸಗಳಿಂದಲೂ ಕೂಡಿಕೊಂಡು ತನ್ನ ಉಜ್ವಲವಾದ ಕಾಂತಿಯನ್ನು ಉಂಟುಮಾಡುತ್ತಾನೆ. ಎಂತಲೂ ಅಭಿಪ್ರಾಯಗಳಾಗಬಹುದು

ಈ ರೀತಿಯಾಗಿ ಅಗ್ನಿಗೆ ಸ್ವರ್ಗ ಅಂತರಿಕ್ಷ ಪೃಥಿವಿಗಳಲ್ಲಿ ಜನ್ಮವಿರುವುದೆಂಬ ಅಭಿಪ್ರಾಯವು ಈ ಋಕ್ಕಿನಲ್ಲಿ ವಿವೃತವಾಗಿದೆ.

---

ಸಂಹಿತಾಪಾಠಃ

ಅಗ್ನೇ ಯಜಸ್ವ ಹವಿಷಾ ಯಜೀಯಾಞ್ಛ್ರುಷ್ಟೀ ದೇಷ್ಣಮಭಿ ಗೃಣೀಹಿ ರಾಧಃ ।
ತ್ವಂ ಹ್ಯಸಿ ರಯಿಪತೀ ರಯೀಣಾಂ ತ್ವಂ ಶುಕ್ರಸ್ಯ ವಚಸೋ ಮನೋತಾ ॥ ೪ ॥

ಪದಪಾಠಃ

ಅಗ್ನೇ । ಯಜಸ್ವ । ಹವಿಷಾ । ಯಜೀಯಾನ್ । ಶ್ರುಷ್ಟೀ । ದೇಷ್ಣಂ । ಅಭಿ । ಗೃಣೀಹಿ । ರಾಧಃ ।
ತ್ವಂ । ಹಿ । ಅಸಿ । ರಯಿಽಪತಿಃ । ರಯೀಣಾಂ । ತ್ವಂ । ಶುಕ್ರಸ್ಯ । ವಚಸಃ । ಮನೋತಾ ॥ ೪ ॥

ಸಾಯಣಭಾಷ್ಯಂ

ಹೇ ಅಗ್ನೇ ಯಜೀಯಾನ್ ಯಷ್ಟೃತಮಸ್ತ್ವಂ ಹವಿಷಾಸ್ಮದ್ದತ್ತೇನ ಯಜಸ್ವ । ದೇವಾನ್ ಸಂಯೋಜಯ । ದೇಷ್ಣಂ ದೇಯಂ ರಾಧೋಽನ್ನಂ ಶ್ರುಷ್ಟೀ ॥ ಶ್ರುಷ್ಟೀತಿ ಕ್ಷಿಪ್ರನಾಮ ॥ ಕ್ಷಿಪ್ರಮಭಿಗೃಣೀಹಿ ।

ದೇವಾನಾಂ ಪುರತ ಇದಂ ಸ್ವಾದುತರಮಿದಂ ಸ್ವಾದುತರಮಿತಿ ಬ್ರೂಹಿ । ಯದ್ವಾ ಶ್ರುಷ್ಟೀ ಕ್ಷಿಪ್ರಕಾರೀ ತ್ವಂ ದೇಷ್ಣಂ ದೇಯಂ ರಾಧೋ ಧನಮಭಿಗೃಣೀಹಿ । ಅಸ್ಮದಾಭಿಮುಖ್ಯೇನ ಬ್ರೂಹಿ । ಪ್ರಯಚ್ಛೇತ್ಯರ್ಥಃ । ದಾನಸಾಮರ್ಥ್ಯಂ ದರ್ಶಯತಿ । ತ್ವಂ ರಯೀಣಾಂ ಧನಾನಾಂ ಮಧ್ಯೇ ರಯಿಪತಿರುತ್ತಮಸ್ಯ ಧನಸ್ಯ ಪತಿರಸಿ ಹಿ । ಯದ್ವಾ ರಯೀಣಾಂ ರಯಿಪತಿರಿತ್ಯತ್ರೈಕೋ ರಯಿಶಬ್ದೋಽನುವಾದಃ । ತ್ವಂ ಶುಕ್ರಸ್ಯ ದೀಪ್ತಸ್ಯ ವಚಸೋಽಸ್ಮದೀಯಸ್ಯ ಸ್ತೋತ್ರಸ್ಯ ಮನೋತಾ ಪ್ರಜ್ಞಾತಾ ಭವಸಿ । ಯದ್ವಾ ಮಾನಯಿತಾ ॥

### ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಯಜೀಯಾನ್—ಉತ್ತಮವಾದ ಯಜ್ಞಕರ್ತೃವಾದ ನೀನು । ಹವಿಷಾ—(ನಮ್ಮಿಂದ ದತ್ತವಾದ) ಹವಿಸ್ಸಿನಿಂದ । ಯಜಸ್ವ—ದೇವತೆಗಳನ್ನುದ್ದೇಶಿಸಿ ಯಾಗಮಾಡು । ದೇಷ್ಣಂ—(ದೇವತೆಗಳಿಗೆ) ಅರ್ಪಿಸಬೇಕಾದ । ರಾಧಃ—ಅನ್ನವನ್ನು । ಶ್ರುಷ್ಟೀ—ಬೇಗನೆ । ಅಭಿ ಗೃಣೀಹಿ—(ಅವರ ಮುಂದೆ) ಪ್ರಕಟಿಸು । [ಅಥವಾ ದೇಷ್ಣಂ—ನಮಗೆ ಕೊಡಬೇಕಾದ । ರಾಧಃ—ಧನವನ್ನು । ಶ್ರುಷ್ಟೀ—ಬೇಗನೆ । ಅಭಿ ಗೃಣೀಹಿ—ನಮಗೆ ತಿಳಿಸು] । ತ್ವಂ—ನೀನು । ರಯೀಣಾಂ—ಧನಗಳ ನಡುವೆ । ರಯಿಪತಿಃ—ಅತ್ಯುತ್ತಮವಾದ ಧನಪತಿಯಾಗಿ । ಅಸಿ ಹಿ—ಇದ್ದೀಯಲ್ಲವೇ ? । ತ್ವಂ—ನೀನು । ಶುಕ್ರಸ್ಯ—ಪ್ರಕಾಶಮಾನವಾದ । ವಚಸಃ—ನಮ್ಮ ಸ್ತೋತ್ರದ ಮಹಿಮೆಯನ್ನು । ಮನೋತಾ—ತಿಳಿಯುವವನಾಗಿದ್ದೀಯೆ.

### ಭಾವಾರ್ಥ

ಎಲೈ ಅಗ್ನಿಯೇ, ಉತ್ತಮವಾದ ಯಜ್ಞಕರ್ತೃವಾದ ನೀನು ನಮ್ಮಿಂದ ದತ್ತವಾದ ಹವಿಸ್ಸಿನಿಂದ ದೇವತೆಗಳನ್ನುದ್ದೇಶಿಸಿ ಯಾಗಮಾಡು. ದೇವತೆಗಳಿಗೆ ಅರ್ಪಿಸಬೇಕಾದ ಅನ್ನವನ್ನು ಬೇಗನೆ ಅವರ ಮುಂದೆ ಪ್ರಕಟಿಸು. ಮತ್ತು ನಮಗೆ ಕೊಡಬೇಕಾದ ಧನವನ್ನು ನಮಗೆ ತಿಳಿಸು. ನೀನು ಅತ್ಯುತ್ತಮವಾದ ಧನಪತಿಯಾಗಿಯೂ, ಪ್ರಕಾಶಮಾನವಾದ ನಮ್ಮ ಸ್ತುತಿಯ ಮಹಿಮೆಯನ್ನು ತಿಳಿಯುವವನಾಗಿಯೂ ಇದ್ದೀಯೆ.

### English Translation

Agni, you are the chief of sacrificers; worship (the gods) with the oblation, and earnestly commend to them the (sacrificial) food that is to be given (them); for you, indeed, are the sovereign lord of riches; you are the appreciator of our pious prayer.

### । ವಿಶೇಷವಿಷಯಗಳು ।

ರಾಧಃ—ರಾಧಃ ಎಂಬ ಶಬ್ದವು ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೯) ರಾಧಃ ಎಂದರೆ ಧನವು. ಈ ಋಕ್ಕಿನಲ್ಲಿ ಸಾಯಣರು ರಾಧಃ ಎಂಬ ಶಬ್ದಕ್ಕೆ ಅನ್ನವೆಂದೂ, ಧನವೆಂದೂ ಎರಡು ವಿಧವಾದ ಅರ್ಥವನ್ನು ಹೇಳಿರುವರು.

ಶ್ರುಷ್ಟೀ—ಬೇಗನೆ. ಶ್ರುಷ್ಟೀತಿ ಕ್ಷಿಪ್ರನಾಮ ಎಂದು ಯಾಸ್ಕರ ನಿರ್ವಚನವಿದೆ. (ನಿ. ೬-೧೩)

**ರಯೀಣಾಂ ರಯಿಪತಿಃ**—ಧನಪತಿಯು ಎಂದರ್ಥವು. ಇಲ್ಲಿ **ರಯಿಪತಿಃ** ಎಂಬ ಶಬ್ದಕ್ಕೇ ಧನಪತಿ ಎಂಬರ್ಥವಿರುವಾಗ **ರಯೀಣಾಂ** ಎಂಬ ಶಬ್ದವು ಕೇವಲ ದ್ವಿರುಕ್ತಿಯಾಗಿದೆ. ಆದರೂ ಇಂತಹ ದ್ವಿರುಕ್ತಿಪ್ರಯೋಗ ಗಳು ಋಗ್ವೇದದಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. **ಗಣಾನಾಂ ತ್ವಾ ಗಣಪತಿಂ ; ವಸೋರಿಂದ್ರಂ ವಸುಪತಿಂ** ಇತ್ಯಾದಿ.

---

ಸಂಹಿತಾಪಾಠಃ

**ಉಭಯಂ ತೇ ನ ಕ್ಷೀಯತೇ ವಸವ್ಯಂ ದಿವೇದಿವೇ ಜಾಯಮಾನಸ್ಯ ದಸ್ಮ ।**
**ಕೃಧಿ ಕ್ಷುಮಂತಂ ಜರಿತಾರಮಗ್ನೇ ಕೃಧಿ ಪತಿಂ ಸ್ವಪತ್ಯಸ್ಯ ರಾಯಃ ॥ ೫ ॥**

ಪದಪಾಠಃ

**ಉಭಯಂ । ತೇ । ನ । ಕ್ಷೀಯತೇ । ವಸವ್ಯಂ । ದಿವೇऽದಿವೇ । ಜಾಯಮಾನಸ್ಯ । ದಸ್ಮ ।**
**ಕೃಧಿ । ಕ್ಷುऽಮಂತಂ । ಜರಿತಾರಂ । ಅಗ್ನೇ । ಕೃಧಿ । ಪತಿಂ । ಸುऽಅಪತ್ಯಸ್ಯ । ರಾಯಃ ॥ ೫ ॥**

ಸಾಯಣಭಾಷ್ಯಂ

ದಸ್ಮ ದರ್ಶನೀಯ ಹೇ ಅಗ್ನೇ ದಿವೇದಿವೇ ಪ್ರತಿದಿನಮಗ್ನಿಹೋತ್ರಕಾಲೇ ಜಾಯಮಾನಸ್ಯ ತೇ ತವೋಭಯಂ ವಸವ್ಯಂ ದಿವ್ಯಂ ಭೌಮಂ ಚ ವಸು ॥ ವಸ್ವಾದಿತ್ವಾತ್ಸ್ವಾರ್ಥಿಕೋ ಯತ್ಪ್ರತ್ಯಯಃ । ಪಾ. ೫. ೪. ೩೦. ೪ ॥ ತಾದೃಶಮುಭಯಂ ವಸು ನ ಕ್ಷೀಯತೇ । ನ ಹೀಯತೇ । ಅಸ್ಯೋಭಯವಿಧಧನ- ಸದ್ಭಾವೇ ಮಂತ್ರವರ್ಣಃ ತ್ವಂ ಹ್ಯಗ್ನೇ ದಿವ್ಯಸ್ಯ ರಾಜಸಿ ತ್ವಂ ಪಾರ್ಥಿವಸ್ಯೇತ್ಯತ್ರೋಕ್ತಃ । ಅತಸ್ತ್ವಂ ಜರಿತಾರಂ ತವ ಸ್ತೋತ್ರಂ ಕುರ್ವಾಣಮಿಮಂ ಯಜಮಾನಂ ಕ್ಷುಮಂತಮನ್ನವಂತಂ ಕೀರ್ತಿಮಂತಂ ವಾ ಕೃಧಿ । ಕುರು । ಕಿಂಚ ಸ್ವಪತ್ಯಸ್ಯ ಶೋಭನಾಪತ್ಯಯುಕ್ತಸ್ಯ ರಾಯೋ ಧನಸ್ಯ ಪತಿಂ ಸ್ವಾಮಿನಂ ಕುರು ॥

ಪ್ರತಿಪದಾರ್ಥ

**ದಸ್ಮ**—ಸುಂದರವಾದ ರೂಪವುಳ್ಳ । **ಅಗ್ನೇ**—ಎಲೈ ಅಗ್ನಿಯೇ । **ದಿವೇದಿವೇ**—ಪ್ರತಿದಿನವೂ । **ಜಾಯಮಾನಸ್ಯ**—ಉತ್ಪನ್ನವಾಗತಕ್ಕ । **ತೇ**—ನಿನ್ನ । **ಉಭಯಂ ವಸವ್ಯಂ**—ದ್ಯಾವಾಪೃಥಿವೀರೂಪಗಳಾದ ಎರಡು ವಾಸಸ್ಥಾನಗಳೂ ಸಹ **ನ ಕ್ಷಯತೇ**—ನಾಶರಹಿತವಾದವು । **ಜರಿತಾರಂ**—ನಿನ್ನನ್ನು ಸ್ತುತಿಸುವ ಯಜಮಾನನನ್ನು । **ಕ್ಷುಮಂತಂ**—ಅನ್ನವಂತನನ್ನಾಗಿ । **ಕೃಧಿ**—ಮಾಡು । **ಸ್ವಪತ್ಯಸ್ಯ**—ಶ್ರೇಷ್ಠವಾದ ಅಪತ್ಯದೊಂದಿಗೆ ಕೂಡಿದ । **ರಾಯಃ**—ಧನಕ್ಕೆ । **ಪತಿಂ ಕೃಧಿ**—ಸ್ವಾಮಿಯನ್ನಾಗಿಯೂ ಮಾಡು.

ಭಾವಾರ್ಥ

ಸುಂದರವಾದ ರೂಪವುಳ್ಳ ಎಲೈ ಅಗ್ನಿಯೇ, ಪ್ರತಿದಿನವೂ ಉತ್ಪನ್ನನಾಗತಕ್ಕ ನಿನ್ನ ದ್ಯಾವಾಪೃಥಿವೀರೂಪ ಗಳಾದಎರಡು ವಾಸಸ್ಥಾನಗಳೂ ಸಹ ನಾಶರಹಿತವಾದವು ನಿನ್ನನ್ನು ಸ್ತುತಿಸುವ ಯಜಮಾನನನ್ನು ಅನ್ನವಂತನನ್ನಾಗಿ ಮಾಡು. ಶ್ರೇಷ್ಠವಾದ ಅಪತ್ಯದೊಂದಿಗೆ ಕೂಡಿದ ಧನಕ್ಕೆ ಸ್ವಾಮಿಯನ್ನಾಗಿಯೂ ಮಾಡು.

## English Translation

Beautiful Agni, the two dwelling-places (heaven and earth) of you, who are born day by day, never perish ; confer upon him who praises you (abundant) food, and make him the master of riches, (supporting) virtuous offspring.

### ವಿಶೇಷವಿಷಯಗಳು

ದಿನೇದಿನೇ ಜಾಯಮಾನಸ್ಯ—ಪ್ರತಿದಿನಮಗ್ನಿಹೋತ್ರಕಾಲೇ ಜಾಯಮಾನಸ್ಯ । ಅಗ್ನಿಹೋತ್ರ ಕಾಲದಲ್ಲಿಯೂ, ಇತರ ಕಾಲಗಳಲ್ಲಿಯೂ ಜನರು ಅಗ್ನಿಯನ್ನು ಪ್ರತಿದಿನವೂ ಹೊತ್ತಿಸಿ ಪೂಜಿಸುವುದರಿಂದ ಪ್ರತಿ ದಿನವೂ ಉತ್ಪನ್ನನಾಗುವನೆಂದು ಹೇಳಿದೆ. ಇದರಂತೆ ಉಷೋದೇವತೆಯನ್ನೂ, ಸೂರ್ಯನನ್ನೂ ಪ್ರತಿದಿನವೂ ಉತ್ಪನ್ನರಾಗುತ್ತಾರೆಂದು ಅನೇಕ ವರ್ಣನೆಗಳಿವೆ.

ಜರಿತಾರಂ—ತವ ಸ್ತೋತ್ರಂ ಕುರ್ವಾಣಮಿಮಂ ಯಜಮಾನಂ । ನಿನ್ನನ್ನು ಸ್ತೋತ್ರಮಾಡುತ್ತಿರುವ ಈ ಯಜಮಾನನನ್ನು ಎಂದರ್ಥವು. ಜರಿತೃಶಬ್ದವು ಸ್ತೋತೃನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೯)

ಉಭಯಂ ವಸವ್ಯಂ—ದ್ಯಾವಾಪೃಥಿವಿಗಳಲ್ಲಿರುವ ವಾಸಸ್ಥಾನವು. ಸ್ವರ್ಗದಲ್ಲಿ ದೇವತೆಗಳ ನಡುವೆ, ಭೂಮಿಯಲ್ಲಿ, ಯಜ್ಞಮಾಡುವ ಯಜಮಾನರ ಯಜ್ಞಗೃಹದಲ್ಲಿ ಎಂದು ಎರಡುವಿಧ ವಾಸಸ್ಥಾನವು ಇಲ್ಲಿ ಉಕ್ತವಾಗಿದೆ.

ಕ್ಷುಮಂತಂ—ಅನ್ನವಂತನನ್ನಾಗಿ. ಕ್ಷು ಎಂಬ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ಕ್ಷುಮಂತಂ ಎಂದರೆ ಅನ್ನವುಳ್ಳವನು ಎಂದರ್ಥವು.

---

### ಸಂಹಿತಾಪಾಠಃ

ಸೈನಾನೀಕೇನ ಸುವಿದತ್ರೋ ಅಸ್ಮೇ ಯಷ್ಟಾ ದೇವಾಁ ಆಯಜಿಷ್ಠಃ ಸ್ವಸ್ತಿ ।
ಅದಬ್ಧೋ ಗೋಪಾ ಉತ ನಃ ಪರಸ್ಪಾ ಅಗ್ನೇ ದ್ಯುಮದುತ ರೇವದ್ದಿದೀಹಿ ॥ ೬ ॥

### ಪದಪಾಠಃ

ಸಃ । ಏನಾ । ಅನೀಕೇನ । ಸುಽವಿದತ್ರಃ । ಅಸ್ಮೇ ಇತಿ । ಯಷ್ಟಾ । ದೇವಾನ್ । ಆಽಯಜಿಷ್ಠಃ । ಸ್ವಸ್ತಿ ।
ಅದಬ್ಧಃ । ಗೋಪಾಃ । ಉತ । ನಃ । ಪರಃಽಪಾಃ । ಅಗ್ನೇ । ದ್ಯುಽಮತ್ । ಉತ । ರೇವತ್ । ದಿದೀಹಿ ॥ ೬ ॥

ಸಾಯಣಭಾಷ್ಯಂ

**ಸಾಕಮೇಧೇ ಪರ್ವಣಿ ಪೂರ್ವೇದ್ಯುರನುಸವನಂ ತಿಸ್ರ ಇಷ್ಟಯಃ ಕರ್ತವ್ಯಾಃ । ಪ್ರಥಮಾಯಾಮಗ್ನೇರನೀಕವತಃ ಸೈನಾನೀಕೇನೇತಿ ಯಾಜ್ಯಾ । ತಥಾ ತತಃ ಸಾಕಮೇಧಾ ಇತಿ ಖಂಡೇ ಸೂತ್ರಿತಂ। ಸೈನಾನೀಕೇನ ಸುವಿದತ್ರೋ ಅಸ್ಮೇ । ಆ. ೨. ೧೮. । ಇತಿ ॥**

**ಹೇ ಅಗ್ನೇ ಸ ತಾದೃಶಸ್ತ್ವಮೇನಾನೇನಾನೀಕೇನ ಯುಕ್ತಸ್ತ್ವಂ ಸುವಿದತ್ರಃ ಸುಪ್ರತಿಜ್ಞಃ ಸುಧನೋ ವಾಸ್ಮೇ ಅಸ್ಮಾಕಂ ಭವ । ದೇವಾನ್ಯಷ್ಟಾ ದೇವಾನಾಂ ಹವಿಷ್ಪ್ರದಾನೇನ ಪೂಜಕ ಆಯಜಿಷ್ಠೋ ಯಷ್ಟೃತಮೋಽದಬ್ಧಃ ಕೇನಾಪ್ಯತಿರಸ್ಕೃತೋ ಗೋಪಾ ದೇವಾನಾಂ ಗೋಪಾಯಿತಾ । ಉತ ಅಪಿ ಚ ನೋಽಸ್ಮಾಕಂ ಪರಸ್ಪಾ ದುರಿತೇಭ್ಯಃ ಪಾರಯಿತಾ ಪಾತಾ ಚ ತ್ವಂ ದ್ಯುಮತ್ ಕಾಂತಿಯುಕ್ತಂ ಉತ ಅಪಿ ಚ ರೇವತ್ ಧನಯುಕ್ತಂ ಯಥಾ ಭವತಿ ತಥಾ ಸ್ವಸ್ತಿ ದಿದೀಹಿ । ಕ್ಷೇಮೇಣ ಸರ್ವತೋ ದಿದೀಹಿ । ಕ್ಷೇಮೇಣ ಸರ್ವತೋ ದೀಪ್ಯಸ್ವ ॥**

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ಸಃ**—ಮೇಲೆ ವರ್ಣಿತವಾದ ಗುಣಗಳುಳ್ಳ ನೀನು । **ಏನಾ ಅನೀಕೇನ**—ನಿನ್ನ ಎಲ್ಲಾ ಪರಿವಾರಗಳೊಡನೆಯೂ ಕೂಡಿ । **ಅಸ್ಮೇ**—ನಮಗೆ । **ಸುವಿದತ್ರಃ**—ಶ್ರೇಷ್ಠವಾದ ಆಶಂಸೆಯನ್ನು ಕೊಡುವವನಾಗಿ ಇರು । **ದೇವಾನ್**—ದೇವತೆಗಳನ್ನು । **ಯಷ್ಟಾ**—ಪೂಜಿಸತಕ್ಕವನೂ । **ಆಯಜಿಷ್ಠಃ**—ಪೂಜಕರಲ್ಲಿಯೂ ಶ್ರೇಷ್ಠನೂ । **ಅದಬ್ಧಃ**—ಯಾರಿಂದಲೂ ತಿರಸ್ಕರಿಸಲ್ಪಡದವನೂ । **ಗೋಪಾಃ**—(ದೇವತೆಗಳಿಗೆ) ರಕ್ಷಕನೂ । **ಉತ**—ಮತ್ತು । **ನಃ**—ನಮಗೆ । **ಪರಸ್ಪಾಃ**—ಪಾಪದಿಂದ ಬಿಡಿಸುವವನಾಗಿಯೂ ಇರುವ ನೀನು । **ದ್ಯುಮತ್**—ಕಾಂತಿಯುತವಾದುದೂ । **ಉತ**—ಮತ್ತು । **ರೇವತ್**—ಧನಯುಕ್ತವಾದುದೂ ಆದ। **ಸ್ವಸ್ತಿ**—ಕಲ್ಯಾಣವು ಲಭಿಸುವಂತೆ । **ದಿದೀಹಿ**—ಪ್ರಕಾಶಿಸು.

ಭಾವಾರ್ಥ

ಎಲೈ ಅಗ್ನಿಯೇ, ಅತ್ಯುತ್ತಮನಾದ ನೀನು ನಿನ್ನ ಎಲ್ಲಾ ಪರಿವಾರಗಳೊಡನೆಯೂ ಕೂಡಿ ನಮಗೆ ಶ್ರೇಷ್ಠವಾದ ಆಶಂಸೆಯನ್ನು ಕೊಡುವವನಾಗು. ದೇವತೆಗಳನ್ನು ಪೂಜಿಸತಕ್ಕವನೂ, ಪೂಜಕರಲ್ಲಿ ಶ್ರೇಷ್ಠನೂ, ಯಾರಿಂದಲೂ ತಿರಸ್ಕರಿಸಲ್ಪಡದವನೂ, ರಕ್ಷಕನೂ, ನಮ್ಮನ್ನು ಪಾಪದಿಂದ ಬಿಡಿಸುವವನೂ ಆದ ನೀನು ಕಾಂತಿಯುತವಾದುದೂ ಮತ್ತು ಧನಯುತವಾದುದೂ ಆದ ಕಲ್ಯಾಣವು ಲಭಿಸುವಂತೆ ಪ್ರಕಾಶಿಸು.

## English Translation

Do you, with this (your) host (of attendants), be of good promise to us ; be, the especial worshipper of the gods, their unassailable protector, as well as our preserver ; light up (all) with shining and affluent well-being.

### ವಿಶೇಷವಿಷಯಗಳು

ಸಾಕಮೇಧವೆಂಬ ಯಾಗದಲ್ಲಿ ಸವನದ ಹಿಂದಿನ ದಿನದಲ್ಲಿ ಮೂರು ಇಷ್ಟಿ (ಯಾಗ) ಗಳನ್ನು ಮಾಡಬೇಕು. ಮೊದಲನೆಯ ಇಷ್ಟಿಯಲ್ಲಿ ಅಗ್ನಿರನೀಕನಾನ್ ಎಂಬ ಅಗ್ನಿದೇವತಾಕವಾದ ಯಾಜ್ಯಾಹೋಮದಲ್ಲಿ **ಸೈನಾನೀಕೇನ** ಎಂಬ ಈ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ **ತತಃ ಸಾಕಮೇಧಾ** ಎಂಬ ಖಂಡದ **ಸೈನಾನೀಕೇನ ಸುವಿದತ್ರೋ ಅಸ್ಮೇ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೨-೧೮)

ಸೂಕ್ತದ ಉಪಸಂಹಾರವಾದ ಈ ಋಕ್ಕಿನಲ್ಲಿ ನಮ್ಮನ್ನು ಪಾಪರಹಿತರನ್ನಾಗಿ ಮಾಡಿ, ಧನವನ್ನೂ ಶ್ರೇಯಸ್ಸನ್ನೂ ಅನುಗ್ರಹಿಸಬೇಕೆಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ.

**ಸುವಿದತ್ರಃ—ಸುಪ್ರತಿಜ್ಞಃ ಸುಧನೋ ವಾ** । ಒಳ್ಳೆಯಪ್ರತಿಜ್ಞೆ ಅಥವಾ ಧನವುಳ್ಳವನೆಂದು ಸಾಯಣರ ವಿವರಣೆಯು. ಯಾಸ್ಕರು—

**ಸುವಿದತ್ರಃ ಕಲ್ಯಾಣವಿದ್ಯಃ । ಆಗ್ನೇ ಯಾಹಿ ಸುವಿದತ್ರೇಭಿರರ್ವಾಙ್ ಇತ್ಯಪಿ ನಿಗಮೋ ಭವತಿ ॥**
(ನಿ. ೬-೧೪)

ಎಂದರೆ ಸುವಿದತ್ರಶಬ್ದಕ್ಕೆ ಕಲ್ಯಾಣವಿದ್ಯ ಅಥವಾ ಒಳ್ಳೆಯವಿದ್ಯ ಎಂದು ಅರ್ಥವನ್ನು ಹೇಳಿ ಆಗ್ನೇ ಯಾಹಿ ಎಂಬ ಉದಾಹರಣೆಯನ್ನು ಕೊಟ್ಟಿರುವರು. ಮತ್ತು-

**ಪೂಷಾ ತ್ವೇತಶ್ಚ್ಯಾವಯತು ಪ್ರ ವಿದ್ವಾನನಷ್ಟಪಶುರ್ಭುವನಸ್ಯ ಗೋಪಾಃ ।**
**ಸ ತ್ವೈತೇಭ್ಯಃ ಪರಿ ದದತ್ಪಿತೃಭ್ಯೋಽಗ್ನಿರ್ದೇವೇಭ್ಯಃ ಸುವಿದತ್ರಿಯೇಭ್ಯಃ ॥**
(ಋ. ಸಂ. ೧೦-೧೭-೩)

ಎಂಬ ಋಕ್ಕಿಗೆ ನಿರ್ವಚನವನ್ನು ಹೇಳುವಾಗ—

**ಸುವಿದತ್ರಂ ಧನಂ ಭವತಿ ವಿಂದತೇರ್ವ್ಯೇಕೋಪಸರ್ಗಾದ್ದದಾತೇರ್ವಾ ಸ್ಯಾತ್ ದ್ವ್ಯುಪಸರ್ಗಾತ್ ।**
(ನಿ. ೭-೯)

ಎಂದು ಹೇಳಿರುವರು. ಎಂದರೆ **ಸುವಿದತ್ರ** ಎಂದರೆ ಧನವು. ಈ ಶಬ್ದವು ಸು ಎಂಬ ಒಂದು ಉಪಸರ್ಗಸಹಿತವಾದ ಹೊಂದು ಎಂಬರ್ಥವುಳ್ಳ ವಿಂದತಿಧಾತುವಿನಿಂದಾಗಲಿ, **ಸು, ವಿ** ಎಂದು ಎರಡು ಉಪಸರ್ಗಸಹಿತವಾದ ಕೊಡು ಎಂಬರ್ಥವುಳ್ಳ ದದಾತಿ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದೆಂದು ವಿವರಿಸಿದ್ದಾರೆ.

---

## ಹತ್ತನೆಯ ಸೂಕ್ತವು

---

**ಜೋಹೂತ್ರ ಇತಿ ಷಡೃಚಂ ದಶಮಂ ಸೂಕ್ತಂ ಗಾರ್ತ್ಸಮದಂ ತ್ರೈಷ್ಟುಭಮಾಗ್ನೇಯಂ ಜೋಹೂತ್ರ ಇತ್ಯನುಕ್ರಾಂತತ್ವಾತ್ । ಸೂಕ್ತವಿನಿಯೋಗಃ ಪೂರ್ವೇಣ ಸಹೋಕ್ತಃ ॥**

ಅನುವಾದವು—**ಜೋಹೂತ್ರಃ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು ; ಅಗ್ನಿಯು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಜೋಹೂತ್ರ** ಎಂದು ಮೊದಲಾಗಿ ಹೇಳಿರುವುದು. ಈ ಸೂಕ್ತದ ವಿನಿಯೋಗವು ಹಿಂದೆಯೇ ಹೇಳಲ್ಪಟ್ಟಿರುವುದು.

॥ ಓಂ ॥

## ಸೂಕ್ತ—೧೦

॥ ಮಂಡಲ—೨ ॥ ಅನುವಾಕ— ೧॥ ಸೂಕ್ತ—೧೦ ॥

॥ ಅಷ್ಟಕ— ೨ ॥ ಅಧ್ಯಾಯ— ೬ ॥ ವರ್ಗ–೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ–೬ ॥

ಋಷಿಃ—ಗೃತ್ಸಮದಃ ॥

ದೇವತಾ—ಅಗ್ನಿಃ ॥

ಛಂದಃ—ತ್ರಿಷ್ಟುಪ್ ।

---

ಸಂಹಿತಾಪಾಠಃ

ಜೋಹೂತ್ರೋ ಅಗ್ನಿಃ ಪ್ರಥಮಃ ಪಿತೇವೇಳಸ್ಪದೇ ಮನುಷಾ ಯತ್ಸಮಿದ್ಧಃ।

ಶ್ರಿಯಂ ವಸಾನೋ ಅಮೃತೋ ವಿಚೇತಾ ಮರ್ಮೃಜೇನ್ಯಃ ಶ್ರವಸ್ಯ೧ಃ ಸ ವಾಜೀ ॥ ೧ ॥

ಪದಪಾಠಃ

ಜೋಹೂತ್ರಃ । ಅಗ್ನಿಃ । ಪ್ರಥಮಃ । ಪಿತಾಽಇವ । ಇಳಃ । ಪದೇ । ಮನುಷಾ । ಯತ್ । ಸಂಽಇದ್ಧಃ ।

ಶ್ರಿಯಂ । ವಸಾನಃ । ಅಮೃತಃ । ವಿಽಚೇತಾಃ । ಮರ್ಮೃಜೇನ್ಯಃ । ಶ್ರವಸ್ಯಃ । ಸಃ । ವಾಜೀ ॥ ೧ ॥

ಸಾಯಣಭಾಷ್ಯಂ

ಜೋಹೂತ್ರಃ ಸರ್ವೈರ್ಯಜ್ಞಾರ್ಥಂ ಹ್ವಾತವ್ಯೋ ಹೋತವ್ಯೋ ವಾ ॥ ಹೂಯತೇರ್ಜುಹೋತೇರ್ವಾ ರೂಪಂ ॥ ತಾದೃಶಃ ಪ್ರಥಮಃ । ಅಗ್ನಿರ್ವೈ ದೇವಾನಾಮವಮ ಇತ್ಯಾಮ್ನಾನಾತ್ । ಮುಖ್ಯೋ ಯೋ ಅಗ್ನಿಃ । ಯತ್ ಯದೇಳ ಇಳಾಯಾಃ ಪದ ಉತ್ತರವೇದ್ಯಾತ್ಮಕೇ ಸ್ಥಾನೇ ಮನುಷಾ ಮನುಷ್ಯೇಣ ಯಜಮಾನೇನ ಸಮಿದ್ಧಃ ಸೋಽಗ್ನಿಃ ಪಿತೇವ ದೇವಾನಾಂ ಹವಿಷ್ಪ್ರಾಪಣೇನ ಪಾಲಕೋ ಭವತಿ । ಶ್ರಿಯಂ ದೀಪ್ತಿಂ ವಸಾನ ಆಚ್ಛಾದಯನ್ ಅಮೃತೋ ಮರಣಧರ್ಮರಹಿತೋ ವಿಚೇತಾ ವಿವಿಧಪ್ರಜ್ಞಃ ಶ್ರವಸ್ಯಃ । ಶ್ರವ ಇತ್ಯನ್ನನಾಮ । ತಸ್ಮೈ ಹಿತಃ । ವಾಜೀ ಬಲವಾನ್ । ಸೋಽಗ್ನಿರ್ಮರ್ಮೃಜೇನ್ಯಃ ಸರ್ವೈಃ ಪರಿಚರಣೀಯೋ ಭವತಿ ॥ ಯಙ್ಲುಗಂತಾತ್ಕೇನ್ಯಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ಜೋಹೂತ್ರಃ**—ಎಲ್ಲರಿಂದಲೂ ಕರೆಯಲ್ಪಡುವವನೂ ಅಥವಾ ಪೂಜಿಸಲ್ಪಡುವವನೂ । **ಪ್ರಥಮಃ**—(ದೇವತೆಗಳಲ್ಲೆಲ್ಲಾ) ಮುಖ್ಯನೂ ಆದ । **ಅಗ್ನಿಃ**—ಅಗ್ನಿಯು । **ಯತ್**—ಯಾವಾಗ । **ಇಳೇಃ**—ಭೂಮಿಯ । **ಪದೇ** ಉತ್ತರವೇದಿರೂಪವಾದ ಸ್ಥಾನದಲ್ಲಿ । **ಮನುಷಾ**—ಮಾನವನಿಂದ । **ಸಮಿದ್ಧಃ**-ಪ್ರಜ್ವಲಿತನಾಗುತ್ತಾನೆಯೋ (ಆಗ) । **ಪಿತೇವ**—(ದೇವತೆಗಳಿಗೆ ಹವಿಸ್ಸನ್ನು ವಹಿಸುವುದರಿಂದ ಅವರ) ಪಾಲಕನಾದ ಪಿತೃವಿನಂತಾಗುತ್ತಾನೆ । **ಶ್ರಿಯಂ**—ಕಾಂತಿಯನ್ನು । **ವಸಾನಃ**—ಧರಿಸಿದವನೂ । **ಅಮೃತಃ**—ಮರಣಧರ್ಮರಹಿತನೂ । **ವಿಚೇತಾಃ**—ನಾನಾವಿಧವಾದ ಪ್ರಜ್ಞೆಯುಳ್ಳವನೂ । **ಶ್ರವಸ್ಯಃ**—ಅನ್ನವನ್ನು ದಾನಮಾಡುವವನೂ । **ವಾಜೀ**—ಬಲಶಾಲಿಯೂ ಆದ । **ಸಃ**—ಅಗ್ನಿಯು । **ಮರ್ಮೃಜೇನ್ಯಃ**—ಎಲ್ಲರಿಂದಲೂ ಪೂಜಿಸಲ್ಪಡುವವನಾಗಿದ್ದಾನೆ.

ಭಾವಾರ್ಥ

ಎಲ್ಲರಿಂದಲೂ ಸಹಾಯಕ್ಕಾಗಿ ಕರೆಯಲ್ಪಡುವವನೂ, ದೇವತೆಗಳಲ್ಲೆಲ್ಲಾ ಮುಖ್ಯನೂ ಆದ ಅಗ್ನಿಯು ಯಾವಾಗ ಭೂಮಿಯ ಉತ್ತರವೇದಿರೂಪವಾದ ಸ್ಥಾನದಲ್ಲಿ ಮಾನವನಿಂದ ಪ್ರಜ್ವಲಿತನಾಗುತ್ತಾನೆಯೋ ಆಗ ದೇವತೆಗಳಿಗೆ ಹವಿಸ್ಸನ್ನು ವಹಿಸುವುದರಿಂದ ಅವರ ಪಾಲಕನಾದ ಪಿತೃವಿನಂತಾಗುತ್ತಾನೆ. ಕಾಂತಿಯನ್ನು ಧರಿಸಿದವನೂ, ಮರಣಧರ್ಮರಹಿತನೂ, ನಾನಾವಿಧವಾದ ಪ್ರಜ್ಞೆಯುಳ್ಳವನೂ, ಅನ್ನವನ್ನು ದಾನಮಾಡುವವನೂ, ಬಲಶಾಲಿಯೂ ಆದ ಅಗ್ನಿಯು ಎಲ್ಲರಿಂದಲೂ ಪೂಜಿಸಲ್ಪಡುವವನಾಗಿದ್ದಾನೆ.

## English Translation

The adorable Agni, the first (of the gods), and their nourisher when kindled by man upon the altar; he who is clothed in radiance, is immortal, discriminating, food-bestowing, powerful; he is to be worshipped.

ವಿಶೇಷವಿಷಯಗಳು

**ಜೋಹೂತ್ರಃ**—ಈ ಶಬ್ದವು ಆಹ್ವಾನಮಾಡು ಎಂಬರ್ಥವುಳ್ಳ ಹ್ವಯೆತಿ ಧಾತುವಿನಿಂದಾಗಲಿ, ಹೋಮ ಮಾಡು ಎಂಬರ್ಥವುಳ್ಳ ಜುಹೋತಿ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಈ ಶಬ್ದಕ್ಕೆ—**ಸರ್ವೈರ್ಯಜ್ಞಾರ್ಥಂ ಹ್ವಾತವ್ಯೋ ಹೋತವ್ಯೋ ವಾ**—ಎಂದರೆ ಯಜ್ಞಾರ್ಥವಾಗಿ ಸರ್ವರಿಂದಲೂ ಆಹ್ವಾನಿಸಲ್ಪಡುವವನು (ಕರೆಯಲ್ಪಡುವವನು) ಅಥವಾ ಹೋಮಮಾಡಲ್ಪಡುವವನು ಎಂದರೆ ಯಜ್ಞದಲ್ಲಿ ಎಲ್ಲಾ ಯಜಮಾನರೂ ಅಗ್ನಿಯನ್ನು ಆಹ್ವಾನಮಾಡಿ ಕರೆಯುವರು ಮತ್ತು ಅಗ್ನಿಯಲ್ಲಿ ಅಗ್ನಿಯನ್ನೂ ಇತರ ದೇವತೆಗಳನ್ನೂ ಉದ್ದೇಶಿಸಿ ಹೋಮಮಾಡುವರು ಎಂದಭಿಪ್ರಾಯವು.

**ಪ್ರಥಮಃ**—ಪ್ರಥಮಶಬ್ದಕ್ಕೆ ಯಾಸ್ಕರು—**ಪ್ರಥಮ ಇತಿ ಮುಖ್ಯನಾಮ ಪ್ರತಮೋ ಭವತಿ** । ಎಂದರೆ ಪ್ರಥಮಶಬ್ದಕ್ಕೆ ಮುಖ್ಯ ಎಂದರ್ಥವು ಅಥವಾ **ಪ್ರಥಮಃ—ಪ್ರಕೃಷ್ಟತಮಃ** ಶ್ರೇಷ್ಠನಾದವನು ಎಂದೂ ಅರ್ಥವು ಎಂದು ನಿರ್ವಚನವನ್ನು ಹೇಳಿರುವರು. (ನಿ. ೨-೨೨) ಪ್ರಕೃತ ಋಕ್ಕಿನಲ್ಲಿ ಪ್ರಥಮಃ ಎಂದರೆ ಅಗ್ನಿಯು ದೇವತೆಗಳಲ್ಲಿ

ಮುಖ್ಯನು ಅಥವಾ ಶ್ರೇಷ್ಠನು ಎಂದಭಿಪ್ರಾಯವು. ಈ ವಿಷಯವನ್ನು ಸಮರ್ಥಿಸುವುದಕ್ಕಾಗಿ **ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ ಪರಮಃ** ಎಂಬ ಐತರೇಯಬ್ರಾಹ್ಮಣವಾಕ್ಯವನ್ನು (ಐ. ಬ್ರಾ. ೧-೧) ಉದಾಹರಿಸಿರುವರು ಎಂದರೆ ದೇವತೆಗಳ ಪಟ್ಟಿಯಲ್ಲಿ ಅಗ್ನಿಯು ಮೊದಲನೆಯವನು ವಿಷ್ಣುವು ಕೊನೆಯವನು, ಎಂದರ್ಥವು. ಇದಲ್ಲದೆ **ಅಗ್ನಿರಗ್ರೇ ಪ್ರಥಮೋ ದೇವತಾನಾಂ । ಸಂಯಾತಾನಾಮುತ್ತಮೋ ವಿಷ್ಣುರಾಸೀತ್ ॥** ದೇವತೆಗಳಲ್ಲೆಲ್ಲಾ ಅಗ್ನಿಗೇ ಪ್ರಥಮಸ್ಥಾನವು, ವಿಷ್ಣುವಿಗೆ ಕೊನೆಯಸ್ಥಾನವು ಎಂದು ತೈತ್ತಿರೀಯಬ್ರಾಹ್ಮಣವಾಕ್ಯವೂ (ತೈ. ಬ್ರಾ. ೨-೪-೩-೩) ಇರುವುದು.

**ಇಳಸ್ಪದೇ—ಯತ್ ಯದೇಳ ಇಳಾಯಾಃ ಪದ ಉತ್ತರವೇದ್ಯಾತ್ಮಕೇ ಸ್ಥಾನೇ ।** ಇಳಾಶಬ್ದವು ಪೃಥಿವೀನಾಮಗಳಲ್ಲಿಯೂ (ನಿ. ೨-೫) ವಾಙ್ನಾಮಗಳಲ್ಲಿಯೂ (ನಿ. ೨-೨೩) ಅನ್ನನಾಮಗಳಲ್ಲಿಯೂ (ನಿ ೩-೯) ಗೋನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಮತ್ತು ಇಳಾ **ಈಟ್ಟೇಃಸ್ತುತಿಕರ್ಮಣಃ—**ಸ್ತುತಿಸು ಎಂಬರ್ಥವುಳ್ಳ ಈಟ್ಟೇಧಾತುವಿನಿಂದ ಇಳಾ ಎಂಬ ಶಬ್ದವು ನಿಷ್ಪನ್ನವಾಗಿದೆ ಎಂದೂ ನಿರ್ವಚನವನ್ನು (ನಿ. ೧೧-೪೮) ಹೇಳಿದ್ದಾರೆ. ಸಾಧಾರಣವಾಗಿ **ಇಳಸ್ಪದೇ** ಎಂಬ ಶಬ್ದದಲ್ಲಿರುವ ಇಳಾಶಬ್ದವು ಪೃಥಿವೀವಾಚಕವಾಗಿರುವುದು. ಇಳಸ್ಪದೇ ಎಂದರೆ ಪೃಥಿವೀನಾಭಿಸ್ಥಾನವಾದ ಉತ್ತರವೇದಿಯೆಂದರ್ಥವು. ಇಂತಹ ಉತ್ತರವೇದಿಯಲ್ಲಿ ಅಗ್ನಿಯು **ಮನುಷಾ ಸಮಿದ್ಧಃ** ಮನುಷ್ಯಯಜಮಾನನಿಂದ ಹೊತ್ತಿಸಲ್ಪಟ್ಟು ಪ್ರಜ್ವಲಿತನಾಗಿರುವನು ಎಂದರ್ಥವು.

**ಇಳಸ್ಪದೇ ಸಮಿಧ್ಯಸೇ ಸ ನೋ ವಸೂನ್ಯಾಭರ ।**

(ಋ ಸಂ. ೧೦-೧೯೧-೧)

ಎಂಬ ಋಕ್ಕಿನಲ್ಲಿಯೂ ಇದೇ ಅರ್ಥವು ವಿವೃತವಾಗಿರುವುದು

**ವಿಚೇತಾಃ—ವಿವಿಧಪ್ರಜ್ಞಃ ।** ನಾನಾವಿಧವಾದ ತಿಳಿವಳಿಕೆಯುಳ್ಳವನು ಎಂದರೆ ಎಲ್ಲವನ್ನೂ ತಿಳಿದಿರುವ ಸರ್ವಜ್ಞನು ಎಂದಭಿಪ್ರಾಯವು.

**ಮರ್ಮೃಜೇನ್ಯಃ—ಸರ್ವೈಃ ಪರಿಚರಣೀಯಃ ।** ಎಲ್ಲರಿಂದಲೂ ಎಂದರೆ ಯಜಮಾನ ಋತ್ವಿಗ್ಜನರೇ ಮೊದಲಾದ ಸಮಸ್ತರಿಂದಲೂ ಸೇವಿಸಲ್ಪಡುವವನು ಎಂದರ್ಥವು.

---

ಸಂಹಿತಾಪಾಠಃ

## ಶ್ರಾಯಾ ಅಗ್ನಿಶ್ಚಿತ್ರಭಾನುರ್ಹವಂ ಮೇ ವಿಶ್ವಾಭಿರ್ಗೀರ್ಭಿರಮೃತೋ ವಿಚೇತಾಃ ।

## ಶ್ಯಾವಾ ರಥಂ ವಹತೋ ರೋಹಿತಾ ವೋತಾರುಷಾಹ ಚಕ್ರೇ ವಿಭೃತ್ರಃ ॥ ೨॥

ಪದಪಾಠಃ

ಶ್ರುಯಾಃ । ಅಗ್ನಿಃ । ಚಿತ್ರಽಭಾನುಃ । ಹವಂ । ಮೇ । ವಿಶ್ವಾಭಿಃ । ಗೀಃಽಭಿಃ । ಅಮೃತಃ । ವಿಽಚೇತಾಃ ।

ಶ್ಯಾವಾ । ರಥಂ । ವಹತಃ । ರೋಹಿತಾ । ವಾ । ಉತ । ಅರುಷಾ । ಅಹ । ಚಕ್ರೇ । ವಿಽಭೃತ್ರಃ ॥ ೨ ॥

ಸಾಯಣಭಾಷ್ಯಂ

ಅಮೃತೋ ಮರಣಧರ್ಮರಹಿತೋ ವಿಚೇತಾ ವಿಶಿಷ್ಟಪ್ರಜ್ಞಶ್ಚಿತ್ರಭಾನುರ್ವಿಚಿತ್ರದೀಪ್ತಿಶ್ಚಾಯ-ನೀಯದೀಪ್ತಿರ್ವಾ ಸೋಽಗ್ನಿರ್ವಿಶ್ವಾಭಿರ್ಗೀರ್ಭಿಃ ಸ್ತುತಿಸಾಧನಭೂತೈಃ ಸರ್ವೈರ್ವಾಕ್ಯೈಃ ಕ್ರಿಯಮಾಣಂ ಮೇ ಮಮ ಹವಂ ಸ್ತೋತ್ರಂ ಶ್ರೂಯಾಃ । ಶೃಣೋತು । ತಸ್ಯಾಗ್ನೇ ರಥಂ ಶ್ಯಾವಾ ಶ್ಯಾವವರ್ಣಾವಶ್ವೌ ವಹತಃ । ವಾ ಅಪಿ ವಾ ರೋಹಿತಾ ರೋಹಿದ್ವರ್ಣಾವಶ್ವೌ ರಥಂ ವಹತಃ । ರೋಹಿದ್ವರ್ಣಯೋರಶ್ವಯೋಃ ಶ್ಯಾವಾದಿವರ್ಣಪರಿಗ್ರಹಃ ಸ್ವೇಚ್ಛಯಾ ಭವತಿ । ವಿಭೃತ್ರೋ ನಾನಾಸ್ಥಾನೇಷು ವಿಹೃತಶ್ಚಕ್ರೇ । ಋತ್ವಿಗ್ಭಿರ-ಕಾರಿ ಖಲು ॥ ಕರೋತೇಃ ಕರ್ಮಣಿ ಲಿಟ್ ॥

ಪ್ರತಿಪದಾರ್ಥ

ಅಮೃತಃ—ಮರಣಧರ್ಮರಹಿತನೂ । ವಿಚೇತಾಃ—ವಿಶಿಷ್ಟವಾದ ಪ್ರಜ್ಞೆಯುಳ್ಳವನೂ । ಚಿತ್ರಭಾನುಃ—ಚಿತ್ರಾತ್ಮಕವಾದ ಕಾಂತಿಯುಳ್ಳವನೂ ಆದ । ಅಗ್ನಿಃ—ಅಗ್ನಿಯು । ವಿಶ್ವಾಭಿರ್ಗೀರ್ಭಿಃ—ಸಮಸ್ತವಾದ ವಾಕ್ಯಗಳಿಂದ ರಚಿಸಿದ । ಮೇ—ನನ್ನ । ಹವಂ—ಸ್ತೋತ್ರವನ್ನು । ಶ್ರೂಯಾಃ—ಕೇಳಲಿ । ಶ್ಯಾವಾ—ಕಂದುಬಣ್ಣವುಳ್ಳವೂ । ವಾ—ಅಥವಾ (ಮತ್ತು) । ರೋಹಿತಾ—ಕೆಂಪುಬಣ್ಣವುಳ್ಳವೂ । ಉತ—ಮತ್ತು । ಅರುಷಾ—ಕುಂಕುಮ ವರ್ಣವುಳ್ಳವೂ ಆದ ಅಶ್ವಗಳು । ರಥಂ—ಅಗ್ನಿಯ ರಥವನ್ನು ವಹಿಸುತ್ತವೆ (ಮತ್ತು) । ವಿಭೃತಃ—(ಋತ್ವಿಕ್ಕುಗಳಿಂದ) ನಾನಾಸ್ಥಾನಕ್ಕೆ ವಹಿಸಲ್ಪಡುವವನಾಗಿ । ಚಕ್ರೇ ಅಹ—ಮಾಡಲ್ಪಡುವನಲ್ಲವೇ ? ।

ಭಾವಾರ್ಥ

ಮರಣಧರ್ಮರಹಿತನೂ, ವಿಶಿಷ್ಟವಾದ ಪ್ರಜ್ಞೆಯುಳ್ಳವನೂ, ಚಿತ್ರಾತ್ಮಕವಾದ ಕಾಂತಿಯುಳ್ಳವನೂ ಆದ ಅಗ್ನಿಯು ಸಮಸ್ತವಾದ ವಾಙ್ಮಯಗಳಿಂದಲೂ ನನ್ನಿಂದ ರಚಿಸಲ್ಪಟ್ಟ ಈ ಸ್ತುತಿಯನ್ನು ಕೇಳಲಿ. ಕಂದುಬಣ್ಣವುಳ್ಳವೂ, ಕುಂಕುಮವರ್ಣವುಳ್ಳವೂ ಆದ ಅಶ್ವಗಳು ಅಗ್ನಿಯ ರಥವನ್ನು ವಹಿಸುತ್ತವೆ. ಇಂತಹ ಅಗ್ನಿಯನ್ನು ಋತ್ವಿಕ್ಕುಗಳು ನಾನಾ ಸ್ಥಾನಗಳಿಗೆ ತೆಗೆದುಕೊಂಡು ಹೋಗಿ ಸ್ಥಾಪಿಸುತ್ತಾರೆ.

## English Translation

May Agni, who is immortal, of manifold wisdom, and wonderful splendour, hear my invocation, (preferred) with all laudations: tawny, or red, or purple horses draw his car; he has been borne in various directions.

ವಿಶೇಷವಿಷಯಗಳು

**ಚಿತ್ರಭಾನುಃ—ವಿಚಿತ್ರದೀಪ್ತಿಶ್ಚಾಯನೀಯದೀಪ್ತಿರ್ವಾ** । ವಿಚಿತ್ರ ಅಥವಾ ನಾನಾ ವಿಧವಾದ ಎಂದರೆ ಬಿಳವು, ಕೆಂಪು, ಹಳದಿ ಮೊದಲಾದ ಅನೇಕ ವರ್ಣಗಳಿಂದ ಕೂಡಿದ ಜ್ವಾಲೆಗಳಿಂದ ಪ್ರಕಾಶಿಸುತ್ತಿರುವವನು ಭಾ—ದೀಪ್ತೌ ಎಂಬ ಧಾತುವಿನಿಂದ ನಿಷ್ಪನ್ನವಾದ ಭಾನುಶಬ್ದವು ಅಹರ್ನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೦) ಭಾನುಶಬ್ದಕ್ಕೆ ಸೂರ್ಯ, ರಶ್ಮಿ, ಕಾಂತಿ, ಅಹಸ್ಸು, ಇತ್ಯಾದ್ಯನೇಕಾರ್ಥಗಳಿರುವವು. ಇಲ್ಲಿ ದೀಪ್ತಿ ಅಥವಾ ಕಾಂತಿ ಯೆಂಬ ಅರ್ಥವು ವಿವೃತವಾಗಿದೆ.

**ಶ್ಯಾವಾ ರಥಂ ವಹತಃ ರೋಹಿತಾ ವಾ ಉತ ಅರುಷಾ**—ಅಗ್ನಿಯ ರಥವನ್ನು ಶ್ಯಾವಾ—ಬೂದು ಬಣ್ಣದ (Tawny) ಅಥವಾ ರೋಹಿತಾ ಕೆಂಪುಬಣ್ಣದ (red) ಅಥವಾ ಅರುಷಾ (purple) ಮಾಸಲು ಕೆಂಪು ಬಣ್ಣದ ಕುದುರೆಗಳು ವಹಿಸುವವು ಎಂದು ಇಲ್ಲಿ ಹೇಳಿದೆ. ಅಗ್ನಿಯ ಕುದುರೆಯು ಕೆಂಪುಬಣ್ಣದ್ದೆಂದು—

> **ಹರೀ ಇಂದ್ರಸ್ಯ । ರೋಹಿತೋಽಗ್ನೇಃ । ಹರಿತ ಆದಿತ್ಯಸ್ಯ । ರಾಸಭಾವಶ್ವಿನೋಃ । ಅಜಾಃ ಪೂಷ್ಣಃ । ಪೃಷತ್ಯೋರ್ಮರುತಾಂ । ಅರುಣ್ಯೋ ಗಾವ ಉಷಸಃ । ಶ್ಯಾವಾಃ ಸವಿತುಃ । ವಿಶ್ವರೂಪಾ ಬೃಹಸ್ಪತೇಃ । ನಿಯುತೋ ವಾಯೋಃ ॥**
>
> (ನಿ. ೨-೨೮)

ಯಾಸ್ಕರು ದೇವತೆಗಳ ವಿವಿಧವಾಹನಗಳಲ್ಲಿ ಹೇಳಿರುವರು. ಎಂದರೆ ಹರೀ ಎಂಬ ಕುದುರೆಗಳು ಇಂದ್ರನಿಗೂ, ಕೆಂಪು ಕುದುರೆಯು ಅಗ್ನಿಗೂ, ಹಸರು ಕುದುರೆಯು ಆದಿತ್ಯನಿಗೂ, ಕತ್ತೆಗಳು ಅಶ್ವಿನೀದೇವತೆಗಳಿಗೂ, ಆಡುಗಳು ಪೂಷ ದೇವತೆಗೂ, ಚಿಕ್ಕೆಗಳುಳ್ಳಜಿಂಕೆಗಳು ಮರುದ್ದೇವತೆಗಳಿಗೂ, ಕೆಂಪುವರ್ಣದ ಗೋವುಗಳು ಉಷೋದೇವತೆಗೂ, ಬೂದು ಬಣ್ಣದ ಕುದುರೆಗಳು ಸವಿತೃದೇವತೆಗೂ, ನಾನಾವರ್ಣದ ಕುದುರೆಗಳು ಬೃಹಸ್ಪತಿಗೂ, ನಿಯುತವೆಂಬ ಜಿಂಕೆಯು ವಾಯುವಿಗೂ ವಾಹನಗಳೆಂದು ಹೇಳಿದ್ದಾರೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಅಗ್ನಿಯ ಕುದುರೆಗಳು ಕೆಂಪಾಗಿರುವವು ಎನ್ನುವುದು ಸಹಜವಾಗಿದೆ. ಆದರೆ ಶ್ಯಾವಾ, ಅರುಷಾ ಎಂಬ ವರ್ಣದ ಕುದುರೆಗಳೂ ಅಗ್ನಿಯ ರಥವನ್ನು ಎಳೆಯುವವು ಎಂದು ಹೇಳಿರುವುದು ಉತ್ಪ್ರೇಕ್ಷೆಯಾಗಿರಬಹುದು. ಉಷೋದೇವತೆಯೂ, ಸವಿತೃದೇವನೂ ಪ್ರಾತಃಕಾಲದಲ್ಲಿಯೇ ಉದಯಿಸಿರುವುದರಿಂದ ಅಂತಹ ಪ್ರಾತಃಕಾಲವಲ್ಲಿ ಜ್ವಲಿತನಾದ ಅಗ್ನಿಯ ರಥವನ್ನು ಉಷೋದೇವತೆ ಮತ್ತು ಸವಿತೃದೇವತೆಗಳ ವಾಹನಗಳಾದ ಶ್ಯಾವಾ, ಅರುಷಾ ಎಂಬ ಕುದುರೆಗಳೂ ಎಳೆಯುತ್ತವೆ ಎಂದು ಋಷಿಯು ವರ್ಣಿಸಿರಬಹುದು.

**ಚಕ್ರೇ ವಿಭೃತ್ರಃ—ವಿಭೃತ್ರೋ ನಾನಾಸ್ಥಾನೇಷು ವಿಹೃತಶ್ಚಕ್ರೇ । ಋತ್ವಿಗ್ಭಿರಕಾರಿ ಖಲು ।** ಯಜ್ಞದಲ್ಲಿ ಅಧ್ವರ್ಯ್ವಾದಿಋತ್ವಿಜರು ಅಗ್ನಿಯನ್ನು ಆಹವನೀಯಾದಿ ವಿವಿಧಸ್ಥಾನಗಳಲ್ಲಿ ಸ್ಥಾಪಿಸುವುದರಿಂದ ಅಗ್ನಿಯು ನಾನಾಸ್ಥಳಗಳಲ್ಲಿ ಸ್ಥಾಪಿತನಾಗುವನು ಎಂದು ಇಲ್ಲಿ ವಿವರಿಸಲಾಗಿದೆ.

---

ಸಂಹಿತಾಪಾಠಃ

ಉತ್ತಾನಾಯಾಮಜನಯನ್ತ್ಸುಷೂತಂ ಭುವದಗ್ನಿಃ ಪುರುಪೇಶಾಸು ಗರ್ಭಃ ।
ಶಿರಿಣಾಯಾಂ ಚಿದಕ್ತುನಾ ಮಹೋಭಿರಪರೀವೃತೋ ವಸತಿ ಪ್ರಚೇತಾಃ ॥ ೩ ॥

ಪದಪಾಠಃ

ಉತ್ತಾನಾಯಾಂ । ಅಜನಯನ್ । ಸುಽಸೂತಂ । ಭುವತ್ । ಅಗ್ನಿಃ । ಪುರುಽಪೇಶಾಸು । ಗರ್ಭಃ ।
ಶಿರಿಣಾಯಾಂ । ಚಿತ್ । ಅಕ್ತುನಾ । ಮಹಃಽಭಿಃ । ಅಪರಿಽವೃತಃ । ವಸತಿ । ಪ್ರಽಚೇತಾಃ ॥ ೩ ॥

ಸಾಯಣಭಾಷ್ಯಂ

ಉತ್ತಾನಾಯಾಮುತ್ತಾನಶಯಾಯಾಮರಣ್ಯಾಂ ಸುಷೂತಮಗ್ನಿಹೋತ್ರಾರ್ಥಂ ಸುಷ್ಠು ಪ್ರೇರಿತಮಗ್ನಿಮಜನಯನ್ । ಅಧ್ವರ್ಯ್ವಾದಯ ಉದಪಾದಯನ್ । ಸೋಽಗ್ನಿಃ ಪುರುಪೇಶಾಸು । ಪೇಶ ಇತಿ ರೂಪನಾಮ । ಬಹುರೂಪಾಸ್ವೋಷಧೀಷು ಗರ್ಭೋ ಭುವತ್ । ಅಂತರ್ವರ್ತಮಾನತಯಾ ಗರ್ಭ ಇವ ಭವೇತ್ । ಭವತೇರ್ಲಿಙಿ ರೂಪಂ ॥ ಶಿರಿಣಾಯಾಂ । ಶೀರ್ಯಂತೇಽಸ್ಯಾಂ ಭೂತಾನೀತಿ ಶಿರಿಣಾ ರಾತ್ರಿಃ । ತಸ್ಯಾಮಪ್ಯಕ್ತುನಾ । ಅಂಜನಾದಕ್ತುಸ್ತಮಃ । ತೇನ ತಮಸಾಪರೀವೃತೋಽಸಂಸ್ಪೃಷ್ಟಃ ಅತ ಏವ ಮಹೋಭಿಸ್ತೇಜೋಭಿರ್ಯುಕ್ತಃ ಪ್ರಚೇತಾಃ ಪ್ರಕೃಷ್ಟಪ್ರಜ್ಞಃ ಸನ್ ವಸತಿ । ದೀಪ್ಯಮಾನೋ ವರ್ತತೇ ॥

ಪ್ರತಿಪದಾರ್ಥ

ಉತ್ತಾನಾಯಾಂ—ಊರ್ಧ್ವಮುಖವಾಗಿರತಕ್ಕ ಅರಣಿಯಲ್ಲಿ । ಸುಷೂತಂ—(ಅಗ್ನಿಹೋತ್ರಾರ್ಥವಾಗಿ) ಪ್ರೇರಿತನಾದ ಅಗ್ನಿಯನ್ನು । ಅಜನಯನ್—(ಅಧ್ವರ್ಯುಗಳು) ಉತ್ಪನ್ನವಾಗುವಂತೆ ಮಾಡಿದರು । ಅಗ್ನಿಃ—ಅದೇ ಅಗ್ನಿಯು । ಪುರುಪೇಶಾಸು—ನಾನಾರೂಪಗಳುಳ್ಳ ಓಷಧಿಗಳಲ್ಲಿ । ಗರ್ಭಃ—ಗರ್ಭರೂಪನಾಗಿ । ಭುವತ್—ಅಂತರ್ವರ್ತಿಯಾಗುತ್ತಾನೆ । ಶಿರಿಣಾಯಾಂ ಚಿತ್—ರಾತ್ರಿಯಲ್ಲಾದರೂ । ಅಕ್ತುನಾ—ತಮಸ್ಸಿನಿಂದ । ಅಪರೀವೃತಃ—ಆವೃತನಾಗದೇ । ಮಹೋಭಿಃ—ತನ್ನ ಮಹತ್ತಾದ ತೇಜಸ್ಸಿನೊಡಗೂಡಿದವನಾಗಿಯೂ । ಪ್ರಚೇತಾಃ—ಪ್ರಕೃಷ್ಟವಾದ ಜ್ಞಾನದಿಂದ ಕೂಡಿದವನಾಗಿಯೂ । ವಸತಿ—ಪ್ರಕಾಶಿಸುತ್ತಾ ಇರುತ್ತಾನೆ.

ಭಾವಾರ್ಥ

ಊರ್ಧ್ವಮುಖವಾಗಿರತಕ್ಕ ಅರಣಿಯಲ್ಲಿ ಪ್ರಸುಪ್ತನಾಗಿದ್ದು ಅಗ್ನಿಹೋತ್ರಾರ್ಥವಾಗಿ ಪ್ರೇರಿತನಾದ ಅಗ್ನಿಯನ್ನು ಅಧ್ವರ್ಯುಗಳು ಉತ್ಪನ್ನವಾಗುವಂತೆ ಮಾಡಿದರು. ಅದೇ ಅಗ್ನಿಯು ನಾನಾರೂಪಗಳುಳ್ಳ ಓಷಧಿಗಳಲ್ಲಿ

ಗರ್ಭರೂಪನಾಗಿ ಅಂತರ್ವರ್ತಿಯಾಗಿದ್ದಾನೆ. ರಾತ್ರಿಕಾಲದಲ್ಲಿ ತಮಸ್ಸಿನಿಂದ ಆವೃತನಾಗದೇ ತನ್ನ ಮಹತ್ತಾದ ತೇಜಸ್ಸಿನೊಡಗೂಡಿದವನಾಗಿಯೂ, ಪ್ರಕೃತವಾದ ಜ್ಞಾನದಿಂದ ಕೂಡಿದವನಾಗಿಯೂ ಪ್ರಕಾಶಿಸುತ್ತಾ ಇರುತ್ತಾನೆ.

## English Translation

They have generated (Agni) when soundly sleeping on his upturned (couch): that Agni who is an embryo in many (vegetable) forms, and who, (rendered manifest) by the oblation, abides conscious in the night, unenveloped by darkness.

### ವಿಶೇಷವಿಷಯಗಳು

**ಉತ್ತಾನಾಯಾಂ ಅಜನಯನ್ ಸುಸೂತಂ—ಉತ್ತಾನಾ** ಎಂದರೆ ಅಗ್ನಿಯನ್ನು ಮಥಿಸುವುದಕ್ಕಾಗಿ ಉಪಯೋಗಿಸುವ ಅರಣಿಗಳಲ್ಲಿ ಕೆಳಭಾಗದ್ದು. ಇದು ಶಮೀವೃಕ್ಷದಿಂದ ಮಾಡಲ್ಪಟ್ಟಿರುವುದು. ಇದು ಅಗಲವಾಗಿ ಹಲಗೆಯಂತಿದ್ದು ಮಧ್ಯಭಾಗದಲ್ಲಿ ಸ್ವಲ್ಪ ಹಳ್ಳವಾಗಿರುವುದು. ಮೇಲುಭಾಗದ ಅರಣಿಯು ಅಶ್ವತ್ಥವೃಕ್ಷದ ಮರದಿಂದ ಮಾಡಿದ್ದಾಗಿ ಕೋಲಿನಂತಿರುವುದು. ಇದನ್ನು ಕೆಳಗಿನ ಶಮೀಮರದ ಅರಣಿಯಮೇಲಿಟ್ಟು ಒಂದು ಹಗ್ಗದ ಸಹಾಯದಿಂದ ಮೊಸರನ್ನು ಕಡೆಯುವಂತೆ ಕಡೆಯುವರು. ಕೆಳಭಾಗದ ಅರಣಿಯ ಬಾಯಿಯು (ಅಥವಾ ಮುಖವು) ಯಾವಾಗಲೂ ಮೇಲ್ಮುಖವಾಗಿರುವುದು. ಆದುದರಿಂದ ಇಲ್ಲಿ ಉತ್ತಾನಾಯಾಂ ಎಂಬ ಶಬ್ದಕ್ಕೆ ಸಾಯಣರು ಎರಡು ಅರಣಿಗಳಲ್ಲಿ ಶಮೀಮರದ ಮೇಲ್ಮುಖವಾಗಿರುವ ಕೆಳಗಿನ ಅರಣಿಯಲ್ಲಿ ಎಂದರ್ಥಮಾಡಿರುವರು. **ಸುಸೂತಂ** ಎಂದರೆ ಸುಷ್ಠು ಪ್ರೇರಿತಂ ಚೆನ್ನಾಗಿ ಪ್ರೇರಿತನಾದ ಅಗ್ನಿಯನ್ನು ಎಂದರೆ (ಅರಣಿಗಳಲ್ಲಿ) ಸುಪ್ತಾವಸ್ಥೆಯಲ್ಲಿದ್ದ (ನಿದ್ರಿಸುತ್ತಿದ್ದ) ಅಗ್ನಿಯನ್ನು ಅಧ್ವರ್ಯ್ವಾದಿ ಋತ್ವಿಜರು ಪ್ರೇರೇಪಿಸಿ (ಎಚ್ಚರಗೊಳಿಸಿ) ಉತ್ಪತ್ತಿಮಾಡಿದರು ಎಂದು ಮುಖ್ಯಾಭಿಪ್ರಾಯವು. ಈ ಅರ್ಥವನ್ನೇ—**ಶಮೀಗರ್ಭಾದಗ್ನಿಂ ಮಂಥತಿ । ಏಷಾ ವಾ ಅಗ್ನೇರ್ಯಜ್ಞಿಯಾ ತನೂಃ ।** (ತೈ. ಬ್ರಾ. ೧–೧–೯–೧) ಎಂಬ ಬ್ರಾಹ್ಮಣವಾಕ್ಯವು ಸಮರ್ಥಿಸುವುದು.

**ಭುವತ್ ಅಗ್ನಿಃ ಪುರುಪೇಶಾಸು ಗರ್ಭಃ—ಪೇಶ ಇತಿ ರೂಪನಾಮ । ಬಹುರೂಪಾಸ್ವೋಷಧೀಷು ಗರ್ಭೋ ಭುವತ್ । ಅಂತರ್ವರ್ತಮಾನತಯಾ ಗರ್ಭ ಇವ ಭವೇತ್ ।** ಪೇಶಶಬ್ದವು ಹಿರಣ್ಯನಾಮಗಳಲ್ಲಿಯೂ (ನಿ ೨-೧೦) ರೂಪನಾಮಗಳಲ್ಲಿಯೂ (ನಿ ೩-೧೩) ಪಠಿತವಾಗಿರುವುದಲ್ಲದೆ **ಪೇಶ ಇತಿ ರೂಪನಾಮ ಪಿಂಶತೇರ್ವಿಪಿಶಿತಂ ಭವತಿ** (ನಿ ೮-೧೨) ಎಂದು ನಿರ್ವಚನವೂ ಇರುವುದು. ಪೇಶವೆಂಬ ಶಬ್ದವು ವಿಕಸಿತಾರ್ಥವನ್ನು ಕೊಡುವ ಪಿಂಶತಿಧಾತುವಿನಿಂದ ನಿಷ್ಪನ್ನವಾಗಿ ರೂಪವೆಂಬ ಅರ್ಥವುಳ್ಳದ್ದಾಗಿರುವುದು. ಪ್ರಕೃತ ಋಕ್ಕಿನಲ್ಲಿ **ಪುರುಪೇಶಾಸು** ಎಂಬ ಶಬ್ದಕ್ಕೆ ಅವಯವಾರ್ಥಪ್ರಕಾರ ಅನೇಕ ರೂಪಗಳಲ್ಲಿ ಎಂದರ್ಥವಾಗುವುದಾದರೂ ಇಲ್ಲಿ ಭಾಷ್ಯಕಾರರು ಅನೇಕ ರೂಪಗಳುಳ್ಳ ಓಷಧಿಗಳಲ್ಲಿ ಎಂಬರ್ಥವನ್ನು ಹೇಳಿರುವರು. ಓಷಧಿಗಳನ್ನೂ, ವೃಕ್ಷಾದಿಗಳನ್ನೂ ಅಗ್ನಿಯು ದಹಿಸುವುದರಿಂದ ಅಗ್ನಿಯು ಅವುಗಳ ಗರ್ಭದಲ್ಲಿ ಎಂದರೆ ಅಂತಃಪ್ರದೇಶದಲ್ಲಿ (ಒಳಗೆ) ಅಡಗಿರುವನೆಂದು ಹೇಳುವುದು ರೂಢಿಯಾಗಿದೆ. ಅಥವಾ ವೃಕ್ಷವಿಕಾರವಾದ ಅರಣಿಗಳಿಂದ ಅಗ್ನಿಯು ಉತ್ಪನ್ನನಾಗುವುದರಿಂದ ವೃಕ್ಷಾದಿಗಳ ಗರ್ಭದಲ್ಲಿ ಅಗ್ನಿಯು ನೆಲಸಿರುವನೆಂದು ಬೇಕಾದರೂ ಅರ್ಥವನ್ನು ಹೇಳಬಹುದು.

**ಶಿರಿಣಾಯಾಂ ಚಿತ್ ಅಕ್ತುನಾ ಅಪರೀವೃತಃ**—ಶಿರಿಣಾ ಎಂಬ ಶಬ್ದವು ರಾತ್ರಿನಾಮಗಳಲ್ಲಿ ಪಠಿತವಾಗಿದೆ. (ನಿ. ೨-೧೮) ಶೀಙ್ ಸ್ವಪ್ನೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ **ಶೀರ್ಯಂತೇಽಸ್ಯಾಂ ಭೂತಾನೀತಿ ಶಿರಿಣಾ ರಾತ್ರಿಃ** ಅಥವಾ **ಶಾಯಯತಿ ಪ್ರಾಣಿನಃ ಇತಿ ಶಿರಿಣಾ** ಎಂದರೆ ಪ್ರಾಣಿಗಳು ಈ ಕಾಲದಲ್ಲಿ ನಿದ್ರಿಸುವುದ ರಿಂದ ಶಿರಿಣಾ ಎಂದರೆ ರಾತ್ರಿಯು. ಇದಲ್ಲದೆ **ಅಕ್ತುಃ** ಎಂಬ ಶಬ್ದವೂ ಸಹ ರಾತ್ರಿನಾಮಗಳಲ್ಲಿ ಪಠಿತವಾಗಿದೆ. (ನಿ. ೨-೧೮) ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಅಕ್ತುವೆಂಬ ಶಬ್ದವು **ಅಜ್ಯತೇ ಸಿಚ್ಯತೇಽಸ್ಯಾಮವಶ್ಯಾಯೇನ ಜಗತ್**—ಜಗತ್ತೆಲ್ಲಾ ಇದರಿಂದ (ಕತ್ತಲೆಯಿಂದ) ಆವರಿಸಲ್ಪಡು ವುದರಿಂದ ಅಕ್ತುಶಬ್ದಕ್ಕೆ ರಾತ್ರಿಯೆಂದು ಹೆಸರು. ಅಥವಾ ಗತ್ಯರ್ಥವನ್ನು ಹೇಳುವುದಾದರೆ **ಗಚ್ಛತಿ ವಾ ಪ್ರತಿದಿನಂ ಅಕ್ತುಃ**—ಪ್ರತಿ ದಿನಸವೂ ಪ್ರಾಪ್ತವಾಗುವುದರಿಂದ ರಾತ್ರಿಗೆ ಅಕ್ತುವೆಂದು ಹೆಸರು. ಈ ಋಕ್ಕಿನಲ್ಲಿ **ಶಿರಿಣಾಯಾಂ ಅಕ್ತುನಾ** ಎಂಬ ಎರಡು ಶಬ್ದಗಳೂ ರಾತ್ರಿವಾಚಕಗಳಾದ್ದರಿಂದ ಭಾಷ್ಯಕಾರರು ಶಿರಿಣಾಯಾಂ ಎಂಬ ಶಬ್ದಕ್ಕೆ ರಾತ್ರಿಯಲ್ಲಿ ಎಂದೂ, ಅಕ್ತುನಾ ಎಂಬ ಶಬ್ದಕ್ಕೆ ತಮಸ್ಸು ಅಥವಾ ಕತ್ತಲೆಯಿಂದ ಎಂದೂ ಅರ್ಥವಿವರಣೆ ಮಾಡಿರುವರು. ಇಂತಹ ರಾತ್ರಿಯ ಗಾಢವಾದ ಅಂಧಕಾರದಿಂದ ಆವರಿಸಲ್ಪಡದಿರುವ ಎಂದರೆ ಸಂಪರ್ಕವಿಲ್ಲದಿರುವ ಅಗ್ನಿಯು ಎಂದರ್ಥವು ಅಗ್ನಿಯು ಯಾವಾಗಲೂ ಪ್ರಕಾಶಿಸುತ್ತಲೇ ಇರುವುದರಿಂದ ಅವನಿಗೆ ರಾತ್ರಿಯಲ್ಲಿ ಇರುವ ಕತ್ತಲೆಯ ಸಂಪರ್ಕವಿರುವುದಿಲ್ಲವೆಂದಭಿಪ್ರಾಯವು. ಇಂತಹ ಅಗ್ನಿಯು ಪ್ರಕೃಷ್ಟಜ್ಞಾನಯುಕ್ತನಾಗಿ ರಾತ್ರಿಕಾಲದಲ್ಲಿ ತನ್ನ ಸ್ವಪ್ರಕಾಶದಿಂದ ಬೆಳಗುತ್ತಿರುವನೆಂದು ಮುಖ್ಯಾಭಿಪ್ರಾಯವು.

---

**ಸಂಹಿತಾಪಾಠಃ**

ಜಿಘರ್ಮ್ಯಗ್ನಿಂ ಹವಿಷಾ ಘೃತೇನ ಪ್ರತಿಕ್ಷಿಯಂತಂ ಭುವನಾನಿ ವಿಶ್ವಾ ।
ಪೃಥುಂ ತಿರಶ್ಚಾ ವಯಸಾ ಬೃಹಂತಂ ವ್ಯಚಿಷ್ಠಮನ್ನೈ ರಭಸಂ ದೃಶಾನಂ ॥ ೪ ॥

**ಪದಪಾಠಃ**

ಜಿಘರ್ಮಿ । ಅಗ್ನಿಂ । ಹವಿಷಾ । ಘೃತೇನ । ಪ್ರತಿಽಕ್ಷಿಯಂತಂ । ಭುವನಾನಿ । ವಿಶ್ವಾ ।
ಪೃಥುಂ । ತಿರಶ್ಚಾ । ವಯಸಾ । ಬೃಹಂತಂ । ವ್ಯಚಿಷ್ಠಂ । ಅನ್ನೈಃ । ರಭಸಂ । ದೃಶಾನಂ ॥ ೪ ॥

**ಸಾಯಣಭಾಷ್ಯಂ**

**ವಿಶ್ವಾ** ಸರ್ವಾಣಿ **ಭುವನಾನಿ ಪ್ರತಿಕ್ಷಿಯಂತಂ** ವೈಶ್ವಾನರಾತ್ಮನಾಧಿತಿಷ್ಠಂತಂ **ಪೃಥುಂ** ಮಹಾಂತಂ **ತಿರಶ್ಚಾ** ಸರ್ವತಃ ಪ್ರವರ್ತಮಾನೇನ **ವಯಸಾ** ಪೇಶಸಾ **ಬೃಹಂತಂ** ಪ್ರವೃದ್ಧಮನ್ನೈರ್ಹವಿಲಕ್ಷಣೈರ್ವ್ಯ- ಚಿಷ್ಠಂ ವ್ಯಾಪ್ತಂ **ರಭಸಂ** ಬಲವಂತಂ **ದೃಶಾನ**ಮೇವಂಗುಣವತ್ತಯಾ ದೃಶ್ಯಮಾನಮ**ಗ್ನಿಂ** ಪುರೋ-

ಡಾಶಾದಿಲಕ್ಷಣೇನ ಹವಿಷಾ ಘೃತೇನ ಚ ಜಿಘರ್ಮಿ ॥ ಪ್ರತಿ ಹ್ಯೇಷ ಸರ್ವಾಣಿ ಭೂತಾನಿ ಕ್ಷೇತಿ ಪೃಥುಂ ತಿರಶ್ಚಾ ವಯಸಾ ಧೂಮೇನ ಬೃಹಂತಂ ವ್ಯಚಿಷ್ಠಮನ್ನೈಃ ರಭಸಂ ದೃಶಾನಮಿತ್ಯವಕಾಶನವಂತಮನ್ನೈರ-ನ್ನಾದಂ ದೀಪ್ಯಮಾನಮಿತ್ಯೇತದಾ ವಿಶ್ವತ ಇತ್ಯಾ ಸರ್ವತಃ ಪ್ರತ್ಯಂಚಂ ಜುಹೋಮೀತ್ಯೇತದರಕ್ಷಸೇತ್ಯ-ಹೇಳಮಾನೇನ ಮನಸೇದಂ ಜುಷೇತೇತ್ಯೇತನ್ಮರ್ಯಶ್ರೀರಿತಿ ಮರ್ಯಶ್ರೀರಿತ್ಯೇಷ ಸ್ಪೃಹಯದ್ವರ್ಣೋ ಅಗ್ನಿರ್ನಾಭಿಮೃಶ ಇತಿ ನ ಹ್ಯೇಷ ಮೃಶೀತೆ ದೀಪ್ಯಮಾನೋ ಭವತೀತಿ ॥

ಪ್ರತಿಪದಾರ್ಥ

ವಿಶ್ವಾ—ಸಮಸ್ತವಾದ । ಭುವನಾನಿ—ಲೋಕಗಳನ್ನು । ಪ್ರತಿಕ್ಷಿಯಂತಂ—ವೈಶ್ವಾನರರೂಪದಿಂದ ವ್ಯಾಪಿಸಿರುವವನೂ । ಪೃಥುಂ—ಮಹತ್ತ್ವವುಳ್ಳವನೂ । ತಿರಶ್ಚಾ—ಸರ್ವತ್ರ ಪ್ರವರ್ತಮಾನವಾದ । ವಯಸಾ—ರೂಪದಿಂದ । ಬೃಹಂತಂ—ಪ್ರವೃದ್ಧನಾದವನೂ । ಅನ್ನೈಃ—ಹವಿಸ್ಸಿನ ರೂಪದ ಅನ್ನಗಳಿಂದ । ವ್ಯಚಿಷ್ಠಂ—ವ್ಯಾಪ್ತನಾದವನೂ । ರಭಸಂ—ಶಕ್ತಿವಂತನೂ । ದೃಶಾನಂ—ಇಂತಹ ಸಕಲಗುಣಗಳಿಂದಲೂ ಕಾಣಲ್ಪಡುವವನೂ ಆದ । ಅಗ್ನಿಂ—ಅಗ್ನಿಯನ್ನು । ಹವಿಷಾ—ಹವಿಸ್ಸಿನಿಂದಲೂ । ಘೃತೇನ—ಆಜ್ಯದಿಂದಲೂ । ಜಿಘರ್ಮಿ—ಪ್ರಕಾಶಿಸುವಂತೆ ಮಾಡುತ್ತೇನೆ ।

ಭಾವಾರ್ಥ

ಸಮಸ್ತಲೋಕಗಳನ್ನೂ ವೈಶ್ವಾನರರೂಪದಿಂದ ವ್ಯಾಪಿಸಿರುವವನೂ, ಮಹತ್ತ್ವವುಳ್ಳವನೂ, ಸರ್ವತ್ರ ಪ್ರವರ್ತಮಾನವಾದ ರೂಪದಿಂದ ಪ್ರವೃದ್ಧನಾದವನೂ, ಹವಿಸ್ಸಿನ ರೂಪದ ಅನ್ನದಿಂದ ವ್ಯಾಪ್ತನಾದವನೂ, ಶಕ್ತಿವಂತನೂ ಆದ ಅಗ್ನಿಗೆ ಹವಿಸ್ಸನ್ನೂ ಆಜ್ಯವನ್ನೂ ಅರ್ಪಿಸುತ್ತೇನೆ.

English Translation

I offer oblations with butter to Agni, who spreads through all regions, vast, expanding, with all-comprehending form, nourished (with sacrificial) food, powerful, conspicuous.

ವಿಶೇಷವಿಷಯಗಳು.

ಪ್ರತಿಕ್ಷಿಯಂತಂ ಭುವನಾನಿ ವಿಶ್ವಾ-ಪ್ರತಿ ಹ್ಯೇಷ ಸರ್ವಾಣಿ ಭೂತಾನಿ ಕ್ಷೇತಿ । ಈ ಅಗ್ನಿಯು ವೈಶ್ವಾನರರೂಪದಿಂದ ಸಮಸ್ತಪ್ರಾಣಿಗಳಲ್ಲಿಯೂ ವಾಸವಾಗಿರುವನು. ಎಂದರೆ ವೈಶ್ವಾನರಾಗ್ನಿರೂಪದಿಂದ ಓಷಧಿ ವನಸ್ಪತಿಲತಾವೃಕ್ಷಾದಿಗಳಲ್ಲಿಯೂ, ಜಾಠರಾಗ್ನಿರೂಪದಿಂದ ಮನುಷ್ಯಾದಿಪ್ರಾಣಿವರ್ಗಗಳಲ್ಲಿಯೂ, ಪಾರ್ಥಿವಾಗ್ನಿ ರೂಪದಿಂದ ಪೃಥ್ವಿಯಲ್ಲಿಯೂ, ವೈದ್ಯುತಾಗ್ನಿ (ಮಿಂಚು) ರೂಪದಿಂದ ಅಂತರಿಕ್ಷದಲ್ಲಿಯೂ ಆದಿತ್ಯರೂಪದಿಂದ ಸ್ವರ್ಗದಲ್ಲಿಯೂ ವಾಸವಾಗಿರುವನು. ಆದುದರಿಂದ ಭುವನಾನಿ ವಿಶ್ವಾ-ಸಮಸ್ತಲೋಕಗಳಲ್ಲಿಯೂ, ಸಮಸ್ತಪ್ರಾಣಿ ಗಳಲ್ಲಿಯೂ, ವಾಸಿಸುವನೆಂದು ಹೇಳಿದೆ

ಪೃಥುಂ ತಿರಶ್ಚಾ ವಯಸಾ ಬೃಹಂತಂ-ಮಹಾಂತಂ ಸರ್ವತಃ ಪ್ರವರ್ತಮಾನೇನ ಪೇಶಸಾ ಪ್ರವೃದ್ಧಂ ಅಗ್ನಿಯು ಸರ್ವಸ್ಥಳಗಳಲ್ಲಿಯೂ (ದಾವಾನಲಮೊದಲಾದ ರೂಪಗಳಿಂದ) ವ್ಯಾಪಿಸಿ ಹರಡುವುದರಿಂದ ಅತಿವಿಸ್ತಾರವಾದ ಮತ್ತು ದೊಡ್ಡದಾದ ರೂಪವುಳ್ಳವನೆಂದು ಇಲ್ಲಿ ವರ್ಣಿಸಿದೆ.

ವ್ಯಚಿಷ್ಠಂ ಅನ್ನೈಃ ರಭಸಂ ದೃಶಾನಂ-ಹವಿರ್ಲಕ್ಷಣೈರನ್ನೈರ್ವ್ಯಾಪ್ತಂ ಬಲವಂತಮೇವಂಗುಣವತ್ತಯಾ ದೃಶ್ಯಮಾನಂ । ಹವಿಸ್ಸು, ಕಾಷ್ಠಗಳು, ಸಮಿತ್ತು ಆಜ್ಯಮೊದಲಾದವುಗಳಿಂದ ಪ್ರವೃದ್ಧಮಾನನಾಗಿ ಬಲಶಾಲಿಯಾಗಿ ಎಂದರೆ ಜ್ವಾಲೆಗಳಿಂದಲೂ, ಕಾಂತಿಯಿಂದಲೂ ಜಾಜ್ವಲ್ಯಮಾನನಾಗಿ ಬೆಳಗುತ್ತಿರುದ ನಮ್ಮ ಕಣ್ಣಿಗೆ ಕಾಣಿಸುತ್ತಾ ನಮಗೆ ಅಭಿಮುಖನಾಗಿರುವ ಅಗ್ನಿಯೆಂದರ್ಥವು. ಇಂತಹ ಅಗ್ನಿಯಲ್ಲಿ ಹವಿಸ್ಸನ್ನೂ, ಘೃತವನ್ನೂ ಹೋಮಮಾಡುವೆನು ಎಂದು ಋಷಿಯು ವರ್ಣಿಸಿರುವನು.

---

ಸಂಹಿತಾಪಾಠಃ

ಆ ವಿಶ್ವತಃ ಪ್ರತ್ಯಂಚಂ ಜಿಘರ್ಮ್ಯರಕ್ಷಸಾ ಮನಸಾ ತಜ್ಜುಷೇತ ।

ಮರ್ಯಶ್ರೀಃ ಸ್ಪೃಹಯದ್ವರ್ಣೋ ಅಗ್ನಿರ್ನಾಭಿಮೃಶೇ ತನ್ವಾ೩ ಜರ್ಭುರಾಣಃ ॥ ೫ ॥

ಪದಪಾಠಃ

ಆ । ವಿಶ್ವತಃ । ಪ್ರತ್ಯಂಚಂ । ಜಿಘರ್ಮಿ । ಅರಕ್ಷಸಾ । ಮನಸಾ । ತತ್ । ಜುಷೇತ ।

ಮರ್ಯऽಶ್ರೀಃ । ಸ್ಪೃಹಯತ್ऽವರ್ಣಃ । ಅಗ್ನಿಃ । ನ । ಅಭಿऽಮೃಶೇ । ತನ್ವಾ । ಜರ್ಭುರಾಣಃ ॥ ೫ ॥

ಸಾಯಣಭಾಷ್ಯಂ

ವಿಶ್ವತಃ ಸರ್ವತ್ರ ವ್ಯಾಪ್ಯ ವರ್ತಮಾನಂ ಪ್ರತ್ಯಂಚಂ ಯಜ್ಞಂ ಪ್ರತ್ಯಾಗಚ್ಛಂತಮಗ್ನಿಂ ಯೇನ ಘೃತೇನಾಜಿಘರ್ಮಿ । ಆಸಿಂಚಾಮಿ । ಅರಕ್ಷಸಾ ಬಾಧಕರಹಿತೇನ ಮನಸಾ ಸ್ತೋತ್ರೇಣ ಸಹ ತದಾಜ್ಯಂ ಜುಷೇತ । ಭವಾನ್ ಸೇವೇತ । ಮರ್ಯಶ್ರೀಃ । ಮರ್ಯೈರ್ಮರ್ತ್ಯೈಃ ಶ್ರಯಣೀಯೋ ಭಜನೀಯಃ । ಸ್ಪೃಹಯದ್ವರ್ಣಃ । ಯಾದೃಶಂ ವರ್ಣಂ ಯಜಮಾನಃ ಸ್ಪೃಹಯತಿ ತಾದೃಶವರ್ಣೋಪೇತಃ । ತೇನಾ ತೇಜಸಾ ಜರ್ಭುರಾಣಃ ಪೂರ್ಯಮಾಣೋಽಗ್ನಿರ್ನಾಭಿಮೃಶೇ । ಅತಿತೇಜಸ್ವಿತಯಾಭಿಮರ್ಶನೀಯೋ ನ ಭವತಿ ॥ ಅಭಿಪೂರ್ವಾನ್ಮೃಶೇಃ ಕೃತ್ಯಾರ್ಥೇ ಕೇನ್ಪ್ರತ್ಯಯಃ ।

ಪ್ರತಿಪದಾರ್ಥ

ವಿಶ್ವತಃ—ಸರ್ವತ್ರ ವ್ಯಾಪಿಸಿರುವವನೂ । ಪ್ರತ್ಯಂಚಂ—ಯಜ್ಞದ ಅಭಿಮುಖವಾಗಿ ಬರುವವನೂ ಆದ ಅಗ್ನಿಯನ್ನುದ್ದೇಶಿಸಿ । ಆ ಜಿಘರ್ಮಿ-ಸೇಚನರೂಪದಲ್ಲಿ ಆಜ್ಯವನ್ನರ್ಪಿಸುತ್ತೇನೆ । ಅರಕ್ಷಸಾ—ಬಾಧಕರಹಿತವಾದ। ಮನಸಾ—ಸ್ತೋತ್ರದೊಡನೆ ಅರ್ಪಿಸಿದ । ತತ್—ಆ ಆಜ್ಯವನ್ನು । ಜುಷೇತ—ಅಗ್ನಿಯು ಸೇವಿಸಲಿ । ಮರ್ಯಶ್ರೀಃ—ಮಾನವರಿಂದ ಭಜಿಸಲ್ಪಡುವವನೂ । ಸ್ಪೃಹಯದ್ವರ್ಣಃ—ಯಜಮಾನನನ್ನು ಆಕರ್ಷಿಸುವ ವರ್ಣ

ವುಳ್ಳವನೂ । ತೆನ್ವಾ—ತೇಜಸ್ಸಿನಿಂದ । ಜರ್ಭುರಾಣಃ—ಪೂರಿತನಾದವನೂ ಆದ । ಅಗ್ನಿಃ—ಅಗ್ನಿಯು । ನಾಭಿಮೃಶೇ—ಎದುರಿಸಲಸಾಧ್ಯವಾದ ದೀಪ್ತಿಯಿಂದ ಕೂಡಿದ್ದಾನೆ.

### ಭಾವಾರ್ಥ

ಸರ್ವತ್ರ ವ್ಯಾಪಿಸಿರುವವನೂ, ಯಜ್ಞದ ಅಭಿಮುಖವಾಗಿ ಬರುವವನೂ ಆದ ಅಗ್ನಿಯನ್ನುದ್ದೇಶಿಸಿ ಸೇಚನ ರೂಪದಲ್ಲಿ ಆಜ್ಯವನ್ನರ್ಪಿಸುತ್ತೇನೆ. ಬಾಧಕರಹಿತವಾದ ಸ್ತೋತ್ರದೊಡನೆ ಅರ್ಪಿಸಿದ ಆ ಆಜ್ಯವನ್ನು ಅಗ್ನಿಯು ಸೇವಿಸಲಿ. ಮಾನವರಿಂದ ಭಜಿಸಲ್ಪಡುವವನೂ, ಯಜಮಾನನನ್ನು ಆಕರ್ಷಿಸುವ ವರ್ಣವುಳ್ಳವನೂ, ತೇಜಸ್ಸಿನಿಂದ ಪೂರಿತನಾದವನೂ ಆದ ಅಗ್ನಿಯು ಎದುರಿಸಲಸಾಧ್ಯವಾದ ದೀಪ್ತಿಯಿಂದ ಕೂಡಿದ್ದಾನೆ.

### English Translation

I offer oblations to Agni, who is present at all (sacrifices); may he accept (them), offered with an unhesitating mind, (to him) who is the refuge of man, endowed with any form that may be desired, blazing with a radiance (that it is) not (possible) to endure.

### ವಿಶೇಷವಿಷಯಗಳು

ಆ ವಿಶ್ವತಃ ಪ್ರತ್ಯಂಚಂ—ಎಲ್ಲಾ ಕಡೆಯಲ್ಲಿಯೂ ಇರುವವನೂ ಮತ್ತು ಯಜ್ಞವನ್ನು ಉದ್ದೇಶಿಸಿ ಬರುವವನೂ ಆದ ಅಗ್ನಿಯನ್ನು ಎಂದರ್ಥವು.

ಅರಕ್ಷಸಾ ಮನಸಾ—ಬಾಧಕರಹಿತೇನ ಮನಸಾ, ಸ್ತೋತ್ರೇಣ ಸಹ । ಕೆಟ್ಟ ಆಲೋಚನೆಯಿಲ್ಲದ ಮನಸ್ಸಿನಿಂದ ಎಂದರೆ ಒಳ್ಳೆಯ ಮನಸ್ಸಿನಿಂದ, ಅಗ್ನಿಯಲ್ಲೇ ನೆಟ್ಟಮನಸ್ಸಿನಿಂದ ಅಥವಾ ಸ್ತೋತ್ರದಿಂದ ಸಹಿತವಾಗಿ.

ಮರ್ಯಶ್ರೀಃ—ಮರ್ಯೈರ್ಮರ್ತ್ಯೈಃ ಶ್ರಯಣೀಯೋ ಭಜನೀಯಃ । ಮನುಷ್ಯರಿಂದ ಭಜಿಸಲ್ಪಡುವವನು ಅಥವಾ ಸ್ತುತಿಸಲ್ಪಡುವವನು.

ಸ್ಪೃಹಯದ್ವರ್ಣಃ—ಯಾದೃಶಂ ವರ್ಣಂ ಯಜಮಾನಃ ಸ್ಪೃಹಯತಿ ತಾದೃಶವರ್ಣೋಪೇತಃ । ಅಗ್ನಿಯನ್ನು ಯಜಿಸುವ ಯಜಮಾನನು ಅಗ್ನಿಯನ್ನು ಯಾವ ವರ್ಣ ಅಥವಾ ಆಕಾರದಿಂದ ಇರಬೇಕೆಂದು ಅಪೇಕ್ಷಿಸುವನೋ ಅಂತಹ ರೂಪವನ್ನು ಧರಿಸುವ ಎಂದರೆ ಯಜಮಾನನಿಗೆ ಬೇಕಾದ ಆಕಾರವನ್ನು ಧರಿಸುವ ಅಗ್ನಿಯೆಂದಭಿಪ್ರಾಯವು.

ನ ಅಭಿಮೃಶೇ—ಅತಿತೇಜಸ್ವಿತಯಾ ಅಭಿಮರ್ಶನೀಯೋ ನ ಭವತಿ । ಅಗ್ನಿಯು ಅತಿ ತೇಜಸ್ಸಿನಿಂದ ಪ್ರಕಾಶಿಸುವವನಾದ್ದರಿಂದ ಅವನ ತೇಜಸ್ಸನ್ನು ಸಹಿಸುವುದಕ್ಕೆ ಸಾಧ್ಯವಿಲ್ಲವೆಂದು ಅಭಿಪ್ರಾಯವು.

---

ಸಂಹಿತಾಪಾಠಃ

ಜ್ಞೇಯಾ ಭಾಗಂ ಸಹಸಾನೋ ವರೇಣ ತ್ವಾದೂತಾಸೋ ಮನುವದ್ವದೇಮ।
ಅನೂನಮಗ್ನಿಂ ಜುಹ್ವಾ ವಚಸ್ಯಾ ಮಧುಪೃಚಂ ಧನಸಾ ಜೋಹವೀಮಿ
॥ ೬ ॥

ಪದಪಾಠಃ

ಜ್ಞೇಯಾಃ । ಭಾಗಂ । ಸಹಸಾನಃ । ವರೇಣ । ತ್ವಾಽದೂತಾಸಃ । ಮನುಽವತ್ । ವದೇಮ ।
ಅನೂನಂ । ಅಗ್ನಿಂ । ಜುಹ್ವಾ । ವಚಸ್ಯಾ । ಮಧುಽಪೃಚಂ । ಧನಽಸಾಃ । ಜೋಹವೀಮಿ ॥ ೬ ॥

ಸಾಯಣಭಾಷ್ಯಂ

ವರೇಣ । ವಾರಯತ್ಯನೇನ ಶತ್ರೂನಿತಿ ವರಂ ತೇಜಃ । ತೇನ ಸಹಸಾನಃ ಶತ್ರೂನಭಿಭವನ್ ತ್ವಂ ಭಾಗಂ ಭಜನೀಯಂ ಸ್ತೋತ್ರಂ ಜ್ಞೇಯಾಃ । ಜಾನೀಹಿ ॥ ಆಶೀರ್ಲಿಙಿ ವಾನ್ಯಸ್ಯ ಸಂಯೋಗಾದೇಃ । ಪಾ. ೬-೪-೬೮ । ಇತ್ಯೇತ್ವಂ ॥ ತ್ವಾದೂತಾಸಃ । ತ್ವಂ ದೂತೋ ಯೇಷಾಮಸಿ ತೇ ತ್ವಾದೂತಾಸಃ । ಯದ್ವಾ ತ್ವಯಾ ಪ್ರೇರಿತಾ ವಯಂ ಮನುವತ್ ಮನುರಿವ ವದೇಮ । ಸ್ತೋತ್ರಂ ಬ್ರೂಯಾಮಃ । ಜುಹ್ವಾ । ಹೂಯತೇಽಸ್ಯಾಮಿತಿ ಜುಹೂರ್ಜ್ವಾಲಾ ಪಾತ್ರವಿಶೇಷೋ ವಾ । ತಯಾನೂನಂ ಸಂಪೂರ್ಣಂ ಮಧುಪೃಚಂ ಮಧುನಾ ಕರ್ಮಫಲೇನ ಯಜಮಾನಂ ಸಂಯೋಜಯಂತಮಗ್ನಿಂ ಧನಸಾ ಧನಸ್ಯ ಸಂಭಕ್ತಾಹಂ ವಚಸ್ಯಾ ಸ್ತುತಿಕಾಮನಯಾ ಜೋಹವೀಮಿ । ಆಹ್ವಯಾಮಿ ॥

ಪ್ರತಿಪದಾರ್ಥ

(ಎಲೈ ಅಗ್ನಿಯೇ) ವರೇಣ—ತೇಜಸ್ಸಿನಿಂದ । ಸಹಮಾನಃ—ಶತ್ರುಗಳನ್ನು ಎದುರಿಸಿ ಸೋಲಿಸುವ ನೀನು । ಭಾಗಂ—ಭಜನೀಯವಾದ ಸ್ತೋತ್ರವನ್ನು । ಜ್ಞೇಯಾಃ—ತಿಳಿ । ತ್ವಾದೂತಾಸಃ—ನಿನ್ನನ್ನು ದೇವ ದೂತನನ್ನಾಗಿ ತಿಳಿದಿರುವ ನಾವು । ಮನುವತ್—ಹಿಂದೆ ಮನವು ಸ್ತುತಿಸಿದಂತೆ । ವದೇಮ—ನಿನ್ನ ಸ್ತೋತ್ರವನ್ನು ಪಠಿಸುತ್ತೇವೆ । ಜುಹ್ವಾ—ಜುಹೂಪಾತ್ರೆಯೊಡನೆ ಅಥವಾ ಜ್ವಾಲೆಯೊಡನೆ । ಅನ ನಂ—ಪೂರ್ಣನಾದವನೂ । ಮಧುಪೃಚಂ—ಮಧುರವಾದ ಕರ್ಮಫಲದೊಡನೆ ಸೇರಿಸತಕ್ಕವನೂ ಆದ । ಅಗ್ನಿಂ—ಅಗ್ನಿಯನ್ನು । ಧನಸಾಃ—ಧನಾರ್ಥಿಯಾದ ನಾನು । ವಚಸ್ಯಾ—ಸ್ತುತಿಪೂರ್ವಕವಾಗಿ । ಜೋಹವೀಮಿ—ಕರೆಯುತ್ತೇನೆ.

ಭಾವಾರ್ಥ

ತೇಜಸ್ಸಿನಿಂದ ಶತ್ರುಗಳನ್ನು ಎದುರಿಸಿ ಸೋಲಿಸುವ ನೀನು ಭಜನೀಯವಾದ ಸ್ತೋತ್ರವನ್ನರಿತು ಸ್ವೀಕರಿಸು. ನಿನ್ನನ್ನು ದೇವದೂತನನ್ನಾಗಿ ತಿಳಿದಿರುವ ನಾವು ಹಿಂದೆ ಮನುವು ನಿನ್ನನ್ನು ಸ್ತುತಿಸಿದಂತೆ ನಿನ್ನ ಸ್ತೋತ್ರವನ್ನು ಪಠಿಸುತ್ತೇವೆ. ಜ್ವಾಲೆಯೊಡನೆ ಪೂರ್ಣನಾದವನೂ, ಮಧುರವಾದ ಕರ್ಮಫಲದೊಡನೆ ನಮ್ಮನ್ನು ಸೇರಿಸತಕ್ಕವನೂ ಆದ ಅಗ್ನಿಯನ್ನು ಧನಾರ್ಥಿಯಾದ ನಾನು ಸ್ತುತಿಪೂರ್ವಕವಾಗಿ ಕರೆಯುತ್ತೇನೆ.

## English Translation

Overpowering ( your foes ) with lustre, may you recognize your portion: may we, having you for our messenger, recite (praise) like Manu: desiring wealth, I offer oblation with the sacrificial ladle and with praises, to that entire Agni, who rewards (the worshipper) with the sweet (fruit) of the sacrifice.

### ವಿಶೇಷವಿಷಯಗಳು

**ವರೇಣ ಸಹಸಾನಃ—ವಾರಯತ್ಯನೇನ ಶತ್ರೂನಿತಿ ವರಂ ತೇಜಃ ತೇನ ಸಹಸಾನಃ ಶತ್ರೂನಭಿಭವನ್** । ಶತ್ರುವನ್ನು ನಿವಾರಣೆ ಅಥವಾ ಸೋಲಿಸುವುದಾದ್ದರಿಂದ ವರಂ ಎಂದರೆ ತೇಜಸ್ಸು, ಪರಾಕ್ರಮ ಎಂದರ್ಥವು. ಇಂತಹ ತೇಜಸ್ಸಿನಿಂದ ಶತ್ರುಗಳನ್ನು ಸೋಲಿಸುವ ಅಗ್ನಿಯೆಂದಭಿಪ್ರಾಯವು.

**ಭಾಗಂ—ಭಜನೀಯಂ ಸ್ತೋತ್ರಂ** । ದೇವತೆಗಳನ್ನು ಹೋಗಿ ಸೇರುವುದಾದ್ದರಿಂದ ಭಾಗಕ್ಕೆ ಸ್ತೋತ್ರವೆಂದು ಹೆಸರು.

**ತ್ವಾದೂತಾಸಃ ಮನುವದ್ವದೇಮ—ತ್ವಂ ದೂತೋ ಯೇಷಾಮಸಿ ತೇ ತ್ವಾದೂತಾಸಃ । ಯದ್ವಾ ತ್ವಯಾ ಪ್ರೇರಿತಾ ವಯಂ ಮನುವತ್ ಮನುರಿವ ವದೇಮ । ಸ್ತೋತ್ರಂ ಬ್ರೂಮಃ ।** ನೀನು (ಅಗ್ನಿ) ಯಾರಿಗೆ ದೂತನಾಗಿದ್ದೀಯೋ ಅವರು ಎಂದರೆ ದೇವತೆಗಳಿಗೆ ಮನುಷ್ಯರ ಪರವಾಗಿ ಅಗ್ನಿಯು ದೂತನಾಗಿರುವುದರಿಂದ ಇಂತಹ ನಿನ್ನನ್ನು ದೂತನೆಂದು ಭಾವಿಸಿರುವ ನಾವು ಎಂದರ್ಥವು. ಅಥವಾ ನಿನ್ನಿಂದ ಪ್ರೇರಿತರಾದ ನಾವು ಮನುವಿನಂತೆ ಸ್ತೋತ್ರವನ್ನು ಪಠಿಸುವೆವು ಎಂದಭಿಪ್ರಾಯವು

ಋಗ್ವೇದದಲ್ಲಿ ಮನುವಿನ ಹೆಸರು ಅನೇಕಕಡೆ ಪಠಿತವಾಗಿದ್ದರೂ ಹೆಚ್ಚು ವಿವರಣೆ ಎಲ್ಲಿಯೂ ದೊರಕುವುದಿಲ್ಲ ಮನುವು ಮಾನವಕುಲಕ್ಕೆ ಮೂಲಪುರುಷನೆಂದೂ, ಯಜ್ಞಯಾಗಾದಿಗಳ ಅನುಷ್ಠಾನಕ್ರಮದಲ್ಲಿ ಮಾರ್ಗದರ್ಶಕನೆಂದೂ ತಿಳಿಯಬರುವುದು. ಇವನು ತನ್ನ ಆಸ್ತಿಯನ್ನು ತನ್ನ ಮಕ್ಕಳಿಗೆ ಹಂಚಿಕೊಡುವಾಗ ಇವನ ಕಿರಿಯಮಗನಾದ ನಾಭಾನೇದಿಷ್ಠನೆಂಬುವನು ಗುರುಕುಲದಲ್ಲಿ ಬ್ರಹ್ಮಚರ್ಯದಿಂದ ವಿದ್ಯಾಭ್ಯಾಸವನ್ನು ಮಾಡುತ್ತಿದ್ದುದರಿಂದ ಅವನಿಗೆ ಯಾವ ದಾಯಭಾಗವೂ ದೊರಕಲಿಲ್ಲವೆಂದೂ ಅವನು ವಿದ್ಯಾಭ್ಯಾಸಮುಗಿಸಿಕೊಂಡು ಬಂದು ತಂದೆಯನ್ನು ತನ್ನ ದಾಯಭಾಗಕ್ಕಾಗಿ ಪ್ರಶ್ನೆಮಾಡಲು ಇವನನ್ನು ಅಂಗಿರಾಋಷಿಗಳು ಯಜ್ಞಮಾಡುವ ಸ್ಥಳಕ್ಕೆ ಹೋಗಿ ಅವರಿಗೆ ಕೆಲವು ಮಂತ್ರಗಳನ್ನು ಉಪದೇಶಮಾಡಿದರೆ ನಿನಗೆ ಯಥೇಚ್ಛವಾಗಿ ಧನವನ್ನು ಕೊಡುವರೆಂದೂ ಹೇಳಿಕಳುಹಿಸಿದನು.

ಈ ವೃತ್ತಾಂತವು ಐತರೇಯಬ್ರಾಹ್ಮಣದಲ್ಲಿಯೂ, ಯಜುರ್ವೇದತೈತ್ತಿರೀಯಸಂಹಿತೆಯಲ್ಲಿಯೂ ವಿವರಿಸಿರುವುದು ಮುಖ್ಯವಾಗಿ ಮನುವು ಮಾಡಿದ ಯಜ್ಞವು ಪ್ರಸಿದ್ಧಿಯಾಗಿರುವುದರಿಂದ ಋಗ್ವೇದದಲ್ಲಿ ಮನುವು ಮಾಡಿದ ಯಜ್ಞದ ವಿಷಯವು ಅಲ್ಲಲ್ಲಿ ಪ್ರಸ್ತಾಪಿಸಲ್ಪಟ್ಟಿರುವುದು.

ಋಗ್ವೇದದಲ್ಲಿ ತಿಳಿದುಬರುವಂತೆ ಯಾಗಗಳನ್ನು ಆರಂಭಿಸಿದವನೇ ಮನುವು. ಅಗ್ನಿಯನ್ನು ಉದ್ದೀಪನಗೊಳಿಸಿ ಸಪ್ತರ್ಷಿಸಹಿತನಾಗಿ ದೇವತೆಗಳಿಗೆ ಮೊದಲನೆಯ ಆಹುತಿಯನ್ನು ಕೊಟ್ಟನು. (ಋ. ಸಂ. ೧೦-೬೩-೭)

ಮನುವಿನಿಂದ ಆಚರಿತವಾದ ಯಾಗವನ್ನೇ ಈಗ ಎಲ್ಲರೂ ಆಚರಿಸುತ್ತಿರುವರು; ಮನುಗಳು ದೇವತೆಗಳನ್ನುದ್ದೇಶಿಸಿ ಮಾಡಿದ ಯಾಗಕ್ಕೆ ಈಗಿನ ಯಾಗವನ್ನು ಹೋಲಿಸಿರುವುದು. (೧-೭೬-೫); ಮನುಷ್ವತ್ (ಮನುವಿನಂತೆ) ಎಂಬ ಕ್ರಿಯಾವಿಶೇಶಣದಿಂದ ಪದೇಪದೇ ಯಾಗಕರ್ಮಗಳು ಹೋಲಿಸಲ್ಪಡುತ್ತವೆ; ಮನುವಿನಂತೆ ಅಗ್ನಿಯನ್ನು ಹೊತ್ತಿಸುತ್ತಾರೆ (೫-೨೧-೧) ಮನುವಿನಿಂದ ಉದ್ದೀಪಿತನಾದ ಅಗ್ನಿಯನ್ನು ಮನುವಿನಂತೆಯೇ ಸ್ತುತಿಸುತ್ತಾರೆ. (೭-೨-೩) ಮನುವಿನಂತೆ ಸೋಮರಸವನ್ನು ಅರ್ಪಿಸುತ್ತಾರೆ. (೪-೩೭-೩) ಹಿಂದೆ ಮನುವಿಗೋಸ್ಕರ ಪ್ರವಹಿಸಿದಂತೆ ಈಗ ತಮಗೋಸ್ಕರ ಪ್ರವಹಿಸಬೇಕೆಂದು ಸೋಮವನ್ನು ಪ್ರಾರ್ಥಿಸಿದ್ದಾರೆ. (೯-೯೬ ೧೨) ಇತ್ಯಾದಿ ಕಾರ್ಯಗಳನ್ನು ಮನುವಿನ ಕಾರ್ಯಗಳಂತೆ ಎಂದು ಹೋಲಿಸಿದೆ. ಎಲ್ಲಾ ಪ್ರಜೆಗಳಿಗೂ ಬೆಳಕಾಗಿರಲೆಂದು ಅಗ್ನಿಯನ್ನು ಮನುವು ಸ್ಥಾಪಿಸಿದನು. (೧-೩೬-೧೯) ಇಂದ್ರನು ವಿವಸ್ವಂತನ ಮಗನಾದ ಮನುವಿನ (ವಾ. ೪-೧) ಅಥವಾ ಮನುಸಾಂವರಣಿಯ (ವಾ. ಸಂ. ೩-೧) ಜೊತೆಯಲ್ಲಿ ಸೋಮಪಾನಮಾಡಿದನು. ವೃತ್ರಾಸುರನೊಡನೆ ಯುದ್ಧಮಾಡುವುದಕ್ಕೆ ಬೇಕಾದ ಶಕ್ತಿಗಾಗಿ ಇಂದ್ರನು ಮನುವಿಗೆ ಸೇರಿದ ಸೋಮರಸವನ್ನು ಪಾನಮಾಡಿದನು. (೫-೨೯-೭) ಇತ್ಯಾದಿ ವರ್ಣನೆಗಳಿವೆ.

ಮನುವು ವಿವಸ್ವತನ ಮಗನೆಂದು ಭಾವನೆ. ಅವನಿಗೆ ವೈವಸ್ವತಮನುವೆಂಬ ನಾಮಧೇಯವಿದೆ. (ವಾ. ಸಂ. ೪-೧; ೩-೧; ಅ. ವೇ. ೮-೧೦-೨೪; ಶ. ಬ್ರಾ. ೧೩-೪-೩-೩) ಪುರಾಣಾದಿಗಳಲ್ಲಿ ಮನುವಿಗೆ ವೈವಸ್ವತನೆಂದೇ ಹೆಸರು ರೂಢಿಯಾಗಿದೆ. ವಿವಸ್ವತನ ಮಕ್ಕಳಲ್ಲಿ ಯಮನೂ ಒಬ್ಬನು, ಮತ್ತು ಅವನು ಮಾನವರಲ್ಲಿ ಮೊದಲನೆಯವನು. ಎಂದರೆ ಮನು ಮತ್ತು ಯಮರು ಮನುಷ್ಯರ ಮೂಲಪುರುಷರೆಂದಾಯಿತು. ಆದರೆ ಮನುವು ಜೀವದಿಂದಿರುವವರಲ್ಲಿ ಮೊದಲನೆಯವನು. ಯಮನು ಮೃತರಾದವರಲ್ಲಿ ಮೊದಲನೆಯವನಾಗಿ ಮೃತರ ಲೋಕಕ್ಕೆ ಒಡೆಯನಾದವನು ಎಂದಿದೆ. ಶತಪಥಬ್ರಾಹ್ಮಣದಲ್ಲಿ ವೈವಸ್ವತಮನುವನ್ನು ಮನುಷ್ಯರ ರಾಜನೆಂದೂ, ಯಮನನ್ನು ಮೃತರ ರಾಜನೆಂದೂ ಹೇಳಿದೆ. (ಶ. ಬ್ರಾ ೧೩-೪-೩-೩) ನಿರುಕ್ತದಲ್ಲಿ (ನಿ. ೧೨-೧೦) ಮನುವನ್ನು ವಿವಸ್ವತನೆಂಬ ಆದಿತ್ಯನ ಮಗ ಮತ್ತು ಸವರ್ಣಾ ಎಂಬುವಳ ಮಗನೆಂದು ವಿವರಿಸಿ (೧೦-೧೭-೨) ಸ್ವರ್ಗಲೋಕದ ದೇವತೆಗಳಲ್ಲಿ ಒಬ್ಬನೆಂದು ನಿರ್ದೇಶಿಸಿದೆ.

ಪ್ರಳಯಕಾಲದಲ್ಲಿ ಇತರ ಎಲ್ಲಾ ಪ್ರಾಣಿಗಳೂ ಮುಳುಗಿಹೋದರೂ ಮನುವೊಬ್ಬನೇ ಒಂದು ಹಡಗಿನಲ್ಲಿ ಒಂದು ಮತ್ಸ್ಯದಿಂದ (ವಿಷ್ಣುವಿನ ಅವತಾರ) ರಕ್ಷಿಸಲ್ಪಟ್ಟನೆಂಬ ಕಥೆಯೊಂದು ಶತಪಥಬ್ರಾಹ್ಮಣದಲ್ಲಿದೆ. (ಶ. ಬ್ರಾ. ೧-೮-೧-೧ರಿಂದ ೧೦) ಆಗಲೇ ಮನುವು ಆಹುತಿಗಳಿಂದ ಜನಿಸಿದ ಇಡಾ (ಇಳಾ) ಎಂಬ ತನ್ನ ಮಗಳ ಮೂಲಕ ಮಾನವವರ್ಗಕ್ಕೆ ಕಾರಣಭೂತನಾದನು. ಈ ಪ್ರಳಯದ ಕಥೆಯು ಅಥರ್ವವೇದದಲ್ಲಿಯೂ ಉಕ್ತವಾಗಿದೆ. (ಅ. ವೇ. ೧೯-೩೯-೮).

ಈ ಮನುವಿನ ವಿಷಯವು ಋಗ್ವೇದದಲ್ಲಲ್ಲದೆ ಅಥರ್ವವೇದ (೧೪-೨-೪೧) ತೈತ್ತಿರೀಯಸಂಹಿತಾ (೧-೫-೧-೩; ೭-೫-೧೫-೩; ೨-೫-೯-೧; ೨-೬-೭-೧; ೩-೩-೨-೧; ೫-೪-೧೦-೫; ೬-೬-೬-೧) ಕಾಠಕ ಸಂಹಿತಾ (೮-೧೫) ಶತಪಥಬ್ರಾಹ್ಮಣ (೧-೧-೪-೧೪) ಜೈಮಿನೀಯ ಉಪನಿಷದ್ಬ್ರಾಹ್ಮಣ (೩-೧೫-೨) ಮೊದಲಾದ ಸ್ಥಳಗಳಲ್ಲಿ ಉಕ್ತವಾಗಿರುವುದು.

---

# ಹನ್ನೊಂದನೆಯ ಸೂಕ್ತವು.

---

ಸಾಯಣಭಾಷ್ಯಂ

ಶ್ರುಧೀ ಹವಮಿತ್ಯೇಕವಿಂಶತ್ಯೃಚಮೇಕಾದಶಂ ಸೂಕ್ತಂ ಗಾರ್ತ್ಸಮದಂ । ಅತ್ರಾನುಕ್ರಮಣಿಕಾ। ಶ್ರುಧಿ ಸೈಕೈಂದ್ರಂ ವಿರಾಟ್ಸ್ಥಾನಮ್ಯತ್ರೇಽಂತ್ಯಾಮಿತಿ । ವಿರಾಟ್ಸ್ಥಾನಾ ತ್ರಿಷ್ಟುಪ್ । ತಲ್ಲಕ್ಷಣಮನುಕ್ರಮ- ಣ್ಯಾಮುಕ್ತಂ । ನವಕೌ ವೈರಾಜಸ್ತ್ರೈಷ್ಟುಭಶ್ಚ ದ್ವೌ ವಾ ವೈರಾಜೌ ನವಕಸ್ತ್ರೈಷ್ಟುಭಶ್ಚ ವಿರಾಟ್ಸ್ಥಾನೇತಿ । ಅಂತ್ಯಾ ತ್ರಿಷ್ಟುಪ್ ವಿಶೇಷಸ್ಯಾನುಕ್ತತ್ವಾತ್ । ಇಂದ್ರೋ ದೇವತಾ ॥ ಪೃಷ್ಠ್ಯಸ್ಯ ಚತುರ್ಥೇಽಹನಿ ಮರುತ್ವತೀಯಶಸ್ತ್ರೇ ದ್ವೇ ಸೂಕ್ತೇ ನಿವಿದ್ಧಾನೇ । ತತ್ರೇದಂ ತೃತೀಯಂ ಸೂಕ್ತಂ । ಚತುರ್ಥೇಽಹನೀತಿ ಖಂಡೇ ಸೂತ್ರಿತಂ । ಶ್ರುಧೀ ಹವಮಿಂದ್ರ ಮರುತ್ವಾ ಇಂದ್ರೇತಿ ಮರುತ್ವತೀಯಂ । । ಆ. ೭-೧೧ । ಇತಿ ॥

ಅನುವಾದವು—ಶ್ರುಧೀ ಹವಂ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಇಪ್ಪತ್ತೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ಅನುಕ್ರಮ ಣಿಕೆಯಲ್ಲಿ—ಶ್ರುಧಿ ಸೈಕೈಂದ್ರಂ ವಿರಾಟ್ಸ್ಥಾನಮ್ಯತ್ರೇಽನ್ತ್ಯಾಂ ಎಂದು ಹೇಳಿರುವುದು. ಈ ಸೂಕ್ತದ ಇಪ್ಪತ್ತು ಋಕ್ಕುಗಳು ವಿರಾಟ್ಸ್ಥಾನಾ ತ್ರಿಷ್ಟುಪ್ ಎಂಬ ಛಂದಸ್ಸಿನವು. ಅದರ ಲಕ್ಷಣವು ಅನುಕ್ರಮಣಿಕೆಯಲ್ಲಿ—ನವಕೌ ವೈರಾಜಸ್ತ್ರೈಷ್ಟುಭಶ್ಚ ದ್ವೌ ವಾ ವೈರಾಜೌ ನವಕಸ್ತ್ರೈಷ್ಟುಭಶ್ಚ ವಿರಾಟ್ಸ್ಥಾನೇತಿ ಎಂದು ಹೇಳಿರುವುದು. ಎಂದರೆ ವೈರಾಜತ್ರಿಷ್ಟುಪ್ ಛಂದಸ್ಸಿಗೆ ಎರಡು ಪಾದಗಳಲ್ಲಿ ಒಂಭತ್ತು ಒಂಭತ್ತು ಅಕ್ಷರಗಳೂ ಇನ್ನೊಂದು ಪಾದದಲ್ಲಿ ವಿರಾಟ್ ಛಂದಸ್ಸಿನಂತೆ ಹತ್ತು ಅಕ್ಷರಗಳೂ ಮತ್ತೊಂದು ಪಾದದಲ್ಲಿ ತ್ರಿಷ್ಟುಪ್ ಛಂದಸ್ಸಿನಂತೆ ಹನ್ನೊಂದು ಅಕ್ಷರಗಳೂ (ಒಟ್ಟು ೩೯ ಅಕ್ಷರಗಳೂ) ಇರುವವು; ವಿರಾಟ್ಸ್ಥಾನಾ ತ್ರಿಷ್ಟುಪ್ ಎಂಬ ಛಂದಸ್ಸಿನಲ್ಲಿ ಎರಡು ಪಾದಗಳಿಗೆ ವಿರಾಟ್ ಛಂದಸ್ಸಿನಂತೆ ಹತ್ತು ಹತ್ತು ಅಕ್ಷರಗಳೂ ಒಂದು ಪಾದಕ್ಕೆ ಒಂಭತ್ತು ಅಕ್ಷರಗಳೂ ಮತ್ತೊಂದು ಪಾದಕ್ಕೆ ತ್ರಿಷ್ಟುಪ್ ಛಂದಸ್ಸಿನಂತೆ ಹನ್ನೊಂದು ಅಕ್ಷರಗಳೂ (ಒಟ್ಟು ೪೦ ಅಕ್ಷರಗಳು) ಇರುವವು ಎಂದು ಈ ಛಂದಸ್ಸುಗಳ ಲಕ್ಷಣವು ಉಕ್ತವಾಗಿರುವುದು. ಈ ಸೂಕ್ತದ ಕೊನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು. ಇಂದ್ರನೇ ದೇವತೆಯು, ಪೃಷ್ಠ್ಯ ವೆಂಬ ಯಾಗದ ನಾಲ್ಕನೆಯ ದಿವಸದಲ್ಲಿ ಮರುತ್ವತೀಯಶಸ್ತ್ರಮಂತ್ರಪಠನಮಾಡುವಾಗ ಎರಡು ಸೂಕ್ತಗಳನ್ನು ನಿವಿನ್ಮಂತ್ರಗಳನ್ನಾಗಿ ಪಠಿಸಿದಬಳಿಕ ಈ ಸೂಕ್ತವನ್ನು ಮೂರನೆಯದನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ—ಚತುರ್ಥೇಽಹನಿ ಎಂಬ ಖಂಡದ ಶ್ರುಧೀ ಹವಮಿಂದ್ರ ಮರುತ್ವಾ ಇಂದ್ರೇತಿ ಮರುತ್ವತೀಯಂ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೧೧).

---

॥ ಓಂ ॥

## ಸೂಕ್ತ—೧೧

॥ ಮಂಡಲ—೨ ॥ ಅನುವಾಕ—೧ ॥ ಸೂಕ್ತ—೧೧ ॥
॥ ಅಷ್ಟಕ—೨ ॥ ಅಧ್ಯಾಯ—೬ ॥ ವರ್ಗ—೩, ೪, ೫, ೬ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೨೧ ॥

ಋಷಿಃ—ಗೃತ್ಸಮದಃ ॥
ದೇವತಾ—ಇಂದ್ರಃ ॥
ಛಂದಃ—೧-೨೦. ವಿರಾಟ್‌ಸ್ಥಾನಾ ತ್ರಿಷ್ಟುಪ್ । ೨೧. ತ್ರಿಷ್ಟುಪ್ ।

---

ಸಂಹಿತಾಪಾಠಃ

ಶ್ರುಧೀ ಹವಮಿಂದ್ರ ಮಾ ರಿಷಣ್ಯಃ ಸ್ಯಾಮ ತೇ ದಾವನೇ ವಸೂನಾಂ ।
ಇಮಾ ಹಿ ತ್ವಾಮೂರ್ಜೋ ವರ್ಧಯಂತಿ ವಸೂಯವಃ ಸಿಂಧವೋ ನ ಕ್ಷರಂತಃ ॥ ೧ ॥

ಪದಪಾಠಃ

ಶ್ರುಧಿ । ಹವಂ । ಇಂದ್ರ । ಮಾ । ರಿಷಣ್ಯಃ । ಸ್ಯಾಮ । ತೇ । ದಾವನೇ । ವಸೂನಾಂ ।
ಇಮಾಃ । ಹಿ । ತ್ವಾಂ। ಊರ್ಜಃ । ವರ್ಧಯಂತಿ । ವಸುಯವಃ । ಸಿಂಧವಃ । ನ । ಕ್ಷರಂತಃ ॥ ೧ ॥

ಸಾಯಣಭಾಷ್ಯಂ

ಗೃತ್ಸಮದಃ ಸ್ತೌತಿ । ಹೇ ಇಂದ್ರ ಮೇ ಹವಂ ಮದೀಯಮಿದಂ ಸ್ತೋತ್ರಂ ಶ್ರುಧಿ । ಶೃಣು । ಮಾ ರಿಷಣ್ಯಃ । ಮಾ ಹಿಂಸೀಃ । ಇದಮಲ್ಪಂ ನ ಸಾಧೀಯ ಇತಿ ಮಾ ನಿರಾಕಾರ್ಷೀಃ ॥ ದುರಸ್ಯುರ್ದ್ರವಿಣಸ್ಯುರ್ವೃಷಣ್ಯತಿ ರಿಷಣ್ಯತೀತಿ ನಿಪಾತಿತಃ ॥ ವಯಂ ತೇ ತವ ವಸೂನಾಂ ದಾವನೇ ದಾನಾಯ ಸ್ಯಾಮ। ಪಾತ್ರಭೂತಾ ಭವೇಮ । ಇಮಾ ಅಸ್ಮಾಭಿರ್ದತ್ತಾನಿ ವಸೂಯವೋ ದಾತುರ್ಯಜಮಾನಸ್ಯ ಧನಮಿಚ್ಛಂತಿ ॥ ಛಂದಸಿ ಪರೇಚ್ಛಾಯಾಂ ಕ್ಯಚ್ ॥ ತಾದೃಶಾನಿ ಕ್ಷರಂತಃ ಸ್ರವಂತಃ ಸಿಂಧವ ಇವ ಘೃತಕ್ಷರಣೋಪೇತಾನ್ಯೂರ್ಜೋ ಹವಿರ್ಲಕ್ಷಣಾನ್ಯನ್ನಾನಿ ತ್ವಾಂ ವರ್ಧಯಂತಿ ಹಿ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಹವಂ—ನನ್ನಿಂದ ಕೃತವಾದ ಈ ಸ್ತೋತ್ರವನ್ನು । ಶ್ರುಧಿ—ಕೇಳು । ಮಾ ರಿಷಣ್ಯಃ—ಅದನ್ನು ತಿರಸ್ಕರಿಸಬೇಡ । ವಯಂ—ನಾವು । ತೇ—ನಿನ್ನ । ವಸೂನಾಂ—ಧನಗಳ । ದಾವನೇ-

**ದಾನಕ್ಕೆ** । **ಸ್ಯಾಮ**—ಪಾತ್ರರಾಗುವಂತಾಗಲಿ । **ಇಮಾಃ**—ಈ ನಮ್ಮಿಂದ ದತ್ತವಾದವೂ । **ವಸೂಯವಃ**—ಯಜಮಾನನಿಗೆ ಧನವನ್ನಿಚ್ಛಿಸುವುವೂ । **ಸಿಂಧವಃ ನ**—ನದಿಗಳಂತೆ । **ಕ್ಷರಂತಃ**—ಪ್ರವಹಿಸುವುವೂ ಆದ । **ಊರ್ಜಃ**—ಆಜ್ಯಾದಿ ರೂಪವಾದ ಅನ್ನಗಳು । **ತ್ವಾಂ**—ನಿನ್ನನ್ನು । **ವರ್ಧಯಂತಿ ಹಿ**—ಪ್ರವೃದ್ಧನನ್ನಾಗಿ ಮಾಡುತ್ತವೆಯಲ್ಲವೆ ।

### ಭಾವಾರ್ಥ

ಎಲೈ ಇಂದ್ರನೇ, ನನ್ನಿಂದ ಕೃತವಾದ ಈ ಸ್ತೋತ್ರವನ್ನು ಕೇಳು. ಅದನ್ನು ತಿರಸ್ಕರಿಸಬೇಡ. ನಿನ್ನ ಧನದ ದಾನಕ್ಕೆ ನಾವು ಪಾತ್ರರಾಗುವಂತಾಗಲಿ. ನಮ್ಮಿಂದ ದತ್ತವಾದವೂ, ಯಜಮಾನನಿಗೆ ಧನವನ್ನಿಚ್ಛಿಸುವುವೂ, ನದಿಗಳಂತೆ ಪ್ರವಹಿಸುವುವೂ ಆಜ್ಯಾದಿರೂಪವೂ ಆದ ಅನ್ನಗಳು ನಿನ್ನನ್ನು ಪ್ರವೃದ್ಧನನ್ನಾಗಿ ಮಾಡುತ್ತವೆ.

## English Translation

Indra, hear (my) invocation ; disregard it not: may we be (thought worthy) of the gift of your treasures: these oblations, designed to obtain wealth, flowing (abundantly) like rivers, bring to you augmented vigour.

### । ವಿಶೇಷವಿಷಯಗಳು ।

ಮಂಡಲದ್ರಷ್ಟೃವಾದ ಗೃತ್ಸಮದ ಋಷಿಯು ಇದುವರೆಗೂ ಅಗ್ನಿಯನ್ನು ಸ್ತುತಿಸಿ ಈಗ ಇಲ್ಲಿಂದ ಮುಂದಕೆ ಹನ್ನೆರಡು ಸೂಕ್ತಗಳಿಂದ ಇಂದ್ರನನ್ನು ಸ್ತುತಿಸುವನು.

**ಶ್ರುಧೀ ಹವಮಿಂದ್ರ ಮಾರಿಷಣ್ಯಃ**—ಎಲೈ ಇಂದ್ರನೇ, ನಮ್ಮ ಆಹ್ವಾನವನ್ನೂ ನಾವು ಮಾಡುವ ಸ್ತೋತ್ರಗಳನ್ನೂ ಕೇಳು ; ನಾವು ಮಾಡುವ ಸ್ತೋತ್ರವು ಸ್ವಲ್ಪವಾಗಿರುವುದೆಂದು ನಮ್ಮನ್ನು ಹಿಂಸಿಸಬೇಡ ಎಂಬ ಪ್ರಾರ್ಥನೆಯು ಉಕ್ತವಾಗಿದೆ

**ಇಮಾ ಊರ್ಜಃ**—ಊರ್ಕ್‌ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ (ನಿ ೨-೭) ಇಲ್ಲಿ ಹವಿಸ್ಸಿನ ರೂಪವಾದ ಅಥವಾ ಆಜ್ಯರೂಪವಾದ ಅನ್ನವೆಂದು ಹೇಳಬಹುದು. ಸಾಧಾರಣವಾಗಿ ಊರ್ಕ್‌ಶಬ್ದವು ದ್ರವರೂಪದಲ್ಲಿರುವ ಅನ್ನವನ್ನು (ಆಹಾರವನ್ನು) ಆಜ್ಯ, ಕ್ಷೀರ, ಸೋಮ ಇತ್ಯಾದಿಗಳನ್ನು ಸೂಚಿಸುವಾಗ ವಿಶೇಷವಾಗಿ ಉಪಯೋಗಿಸಲ್ಪಡುವುದು.

**ಸಿಂಧವೋ ನ ಕ್ಷರಂತಃ**—ಹರಿಯುತ್ತಿರುವ ನದಿಗಳಂತೆ ; ನ ಎಂಬ ಶಬ್ದವು ಇಲ್ಲಿ ಉಪಮಾರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಇಲ್ಲಿ ಹರಿಯುತ್ತಿರುವ ನದಿಯ ಉಪಮಾನವನ್ನು ಅನ್ನಕ್ಕೆ ಕೊಟ್ಟಿರುವುದರಲ್ಲಿ ಎರಡುವಿಧವಾದ ಉದ್ದೇಶವಿದೆ. ಇಲ್ಲಿ ಆಜ್ಯವೇ ಮೊದಲಾದ ದ್ರವರೂಪದಲ್ಲಿರುವ ಅನ್ನವು ನಿರ್ದಿಷ್ಟವಾಗಿರಬಹುದು. ಆದ್ದರಿಂದ ನದಿಯಲ್ಲಿ ನೀರು ಹರಿಯುವಂತೆ ಆಜ್ಯಾದಿದ್ರವ್ಯಗಳು ಇಂದ್ರನನ್ನು ವೃದ್ಧಿಪಡಿಸಲಿ ಎಂದು ಹೇಳಿದೆ. ಅಥವಾ ಹರಿಯುತ್ತಿರುವ ನದಿಯಲ್ಲಿ ಉದಕವು ಹೆಚ್ಚಾದ ಪ್ರಮಾಣದಲ್ಲಿರುವುದರಿಂದ ನಾವು ಇಂದ್ರನಿಗೆ ಅರ್ಪಿಸುವ ಆಜ್ಯಾದಿದ್ರವ್ಯಗಳೂ ಬಹಳ ಹೆಚ್ಚಾಗಿರುವವು ಎಂಬ ಅರ್ಥವೂ ಭಾಸವಾಗಬಹುದು.

---

ಸಂಹಿತಾಪಾಠಃ

ಸೃಜೋ ಮಹೀರಿಂದ್ರ ಯಾ ಅಪಿನ್ವಃ ಪರಿಷ್ಠಿತಾ ಅಹಿನಾ ಶೂರ ಪೂರ್ವೀಃ ।
ಅಮರ್ತ್ಯಂ ಚಿದ್ದಾಸಂ ಮನ್ಯಮಾನಮವಾಭಿನದುಕ್ಥೈರ್ವಾವೃಧಾನಃ ॥ ೨ ॥

ಪದಪಾಠಃ

ಸೃಜಃ । ಮಹೀಃ । ಇಂದ್ರ । ಯಾಃ । ಅಪಿನ್ವಃ । ಪರಿऽಸ್ಥಿತಾಃ । ಅಹಿನಾ । ಶೂರ । ಪೂರ್ವೀಃ ।
ಅಮರ್ತ್ಯಂ । ಚಿತ್ । ದಾಸಂ । ಮನ್ಯಮಾನಂ । ಅವ । ಅಭಿನತ್ । ಉಕ್ಥೈಃ । ವವೃಧಾನಃ ॥ ೨ ॥

ಸಾಯಣಭಾಷ್ಯಂ

ಶೂರ ಶತ್ರೂಣಾಂ ಹಿಂಸಕ ಹೇ ಇಂದ್ರ ಯಾ ಅಪೋಽಪಿನ್ವಃ । ಅವರ್ಧಯಃ । ಪೂರ್ವೀಃ-ಪ್ರಭೂತಾಸ್ತಾ ಅಹಿನಾ ಮೇಘೇನ ವೃತ್ರೇಣ ವಾ ಪರಿಷ್ಠಿತಾಃ । ಅಧಿಷ್ಠಿತಾ ಆಕ್ರಾಂತಾಃ । ತತಸ್ತ್ವಂ ತಸ್ಮಾದಹೇಃ ಸಕಾಶಾತ್ ಮಹೀರ್ಮಹತೀರಪಃ ಸೃಜಃ । ವ್ಯಸೃಜಃ । ಉಕ್ಥೈಃ ಶಸ್ತ್ರೈರ್ವಾವೃಧಾನೋ ವರ್ಧಮಾನಸ್ತ್ವಂ ದಾಸಂ ಸರ್ವಸ್ಯೋಪಕ್ಷಪಯಿತಾರಮುಮರ್ತ್ಯಂ ಚಿತ್ ಮರಣಧರ್ಮರಹಿತಮೇವಾ-ತ್ಮಾನಂ ಮನ್ಯಮಾನಂ ತಮಸುರಮವಾಭಿನತ್ । ಅವಾಙ್ಮುಖಂ ಯಥಾ ಭವತಿ ತಥಾ ॥ ಭಿದಿರ್ ವಿದಾ-ರಣೇ । ಲಙ ಸಿಪಿ ರೂಪಂ ॥

ಪ್ರತಿಪದಾರ್ಥ

ಶೂರ—ಶತ್ರುಹಿಂಸಕನಾದ । ಇಂದ್ರ—ಎಲೈ ಇಂದ್ರನೇ । ಯಾಃ—ಯಾವ ಉದಕಗಳನ್ನು । ಅಪಿನ್ವಃ-ವೃದ್ಧಿಯಾಗುವಂತೆ ಮಾಡಿದೆಯೋ ಅಂತಹ । ಪೂರ್ವೀಃ—ಪ್ರಭೂತವಾದ ಉದಕಗಳು । ಅಹಿನಾ—ಮೇಘದಿಂದ ಅಥವಾ ವೃತ್ರಾಸುರನಿಂದ । ಪರಿಷ್ಠಿತಾಃ—ಆಕ್ರಮಿಸಲ್ಪಟ್ಟವು (ಅನಂತರ) । ಮಹೀಃ—ಮಹತ್ಪರಿಣಾಮವುಳ್ಳ ಆ ಉದಕಗಳನ್ನು। ಸೃಜಃ—ನೀನು ಬಿಡಿಸಿ ಹರಿಯುವಂತೆ ಮಾಡಿದೆ। ಉಕ್ಥೈಃ—ಶಸ್ತ್ರಮಂತ್ರಗಳಿಂದ। ವಾವೃಧಾನಃ—ಪ್ರವೃದ್ಧನಾದ ನೀನು । ದಾಸಂ—ಎಲ್ಲರನ್ನೂ ಹಿಂಸಿಸತಕ್ಕವನೂ । ಅಮರ್ತ್ಯಂ ಚಿತ್—ತಾನು ಮರಣರಹಿತನೇ ಎಂದು । ಮನ್ಯಮಾನಂ—ತಿಳಿದವನೂ ಆದ ಅಸುರನನ್ನು । ಅವ ಅಭಿನತ್—ಕೆಳಕ್ಕೆ ಬೀಳುವಂತೆ ಸೀಳಿಹಾಕಿದೆ.

ಭಾವಾರ್ಥ

ಶತ್ರುಹಿಂಸಕನಾದ ಎಲೈ ಇಂದ್ರನೇ, ಯಾವ ಉದಕಗಳನ್ನು ನೀನು ವೃದ್ಧಿಯಾಗುವಂತೆ ಮಾಡಿದೆಯೋ ಅಂತಹ ಪ್ರಭೂತವಾದ ಉದಕಗಳು ವೃತ್ರಾಸುರನಿಂದ ಮೊದಲು ಆಕ್ರಮಿಸಲ್ಪಟ್ಟಿದ್ದವು. ಅನಂತರ ನೀನು ಮಹತ್ಪರಿಣಾಮವುಳ್ಳ ಆ ಉದಕಗಳನ್ನು ಬಿಡಿಸಿ ಹರಿಯುವಂತೆ ಮಾಡಿದೆ. ಶಸ್ತ್ರಮಂತ್ರಗಳಿಂದ ಪ್ರವೃದ್ಧನಾದ ನೀನು ಎಲ್ಲರನ್ನೂ ಹಿಂಸಿಸತಕ್ಕವನೂ, ತಾನೇ ಮರಣರಹಿತನೆಂದು ತಿಳಿದವನೂ ಆದ ಅಸುರನನ್ನು ಕೆಳಕ್ಕೆ ಬೀಳುವಂತೆ ಸೀಳಿಹಾಕಿದೆ.

## English Translation

Indra, hero, you have set free the copious (waters) which were formerly arrested by Ahi, and which you have distributed : invigorated by hymns, you have cast down headlong the slave, conceiting himself immortal.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ವೃತ್ರಾಸುರನ ವಧೆಯ ವಿಷಯವು ಉಕ್ತವಾಗಿರುವುದು. ಇಂದ್ರನು ವೃತ್ರನನ್ನು ಸಂಹಾರ ಮಾಡಿ ಅವನು ತಡೆದಿದ್ದ ಮೇಘರೂಪದಲ್ಲಿದ್ದ ಉದಕಗಳನ್ನು ವೃಷ್ಟಿರೂಪದಿಂದ ಅಧೋಮುಖವಾಗಿ ಬೀಳುವಂತೆ ಮಾಡಿದನೆಂಬ ಅಭಿಪ್ರಾಯವು ಇಲ್ಲಿ ಹೇಳಿದೆ. ಈ ವಿಷಯವು ಋ. ಸಂ. ೧-೩೨ನೆಯ ಸೂಕ್ತದಲ್ಲಿ (ಋ ಸಂ ಭಾಗ ೩, ಪೇಜು 588) ವಿಸ್ತಾರವಾಗಿ ವಿವರಿಸಲ್ಪಟ್ಟಿದೆ.

**ಅಹಿನಾ—ಮೇಘೇನ** । ಮೇಘದಿಂದ ; ಅದ್ರಿಃ, ಗ್ರಾವಾ ಮೊದಲಾದ ಮೂವತ್ತು ಮೇಘನಾಮಗಳ ಮಧ್ಯದಲ್ಲಿ ಅಹಿಃ ಎಂಬ ಶಬ್ದವು ಪಠಿತವಾಗಿದೆ. (ನಿ. ೨-೨೧) ಅಹಿ ಎಂದರೆ ಉದಕವೆಂದೂ ಅರ್ಥವು. (ನಿ. ೨-೨೪) ಆಧುನಿಕಸಂಸ್ಕೃತದಲ್ಲಿ ಅಹಿ ಎಂದರೆ ಸರ್ಪವು

**ದಾಸಂ—ಸರ್ವಸ್ಯೋಪಕ್ಷಪಯಿತಾರಂ** । ಎಲ್ಲರಿಗೂ ಹಿಂಸೆಕೊಡುವ ವೃತ್ರನು ಎಂದರ್ಥವು. ದಾಸ ಶಬ್ದಕ್ಕೆ ಯಾಸ್ಕರು ಅರ್ಥವನ್ನು ಹೇಳುತ್ತಾ—

**ದಾಸಪತ್ನೀರಹಿಗೋಪಾ ಅತಿಷ್ಠನ್ನಿರುದ್ಧಾ ಆಪಃ ಪಣಿನೇವ ಗಾವಃ ।**
**ಅಪಾಂ ಬಿಲಮಪಿಹಿತಂ ಯದಾಸೀದ್ವೃತ್ರಂ ಜಘನ್ವಾँ ಅಪ ತದ್ವವಾರ ॥**

(ಋ. ಸಂ. ೧-೩೨-೧೧)

ಎಂಬ ಋಕ್ಕಿಗೆ ನಿರ್ವಚನವನ್ನು ಹೇಳುವಾಗ ವಿವರಿಸಿರುವರು—**ದಾಸಪತ್ನೀರ್ದಾಸಾಧಿಪತ್ನ್ಯಃ** । **ದಾಸೋ ದಸ್ಯತೇರುಪದಾಸಯತಿ ಕರ್ಮಾಣಿ** (ನಿ. ೨-೧೭) ಎಂದು ಹೇಳಿರುವರು. ಎಂದರೆ, ದಾಸ ಎಂದರೆ ಕರ್ಮಕರಃ ಕೆಲಸಮಾಡುವವನು. ಕೃಷ್ಯಾದಿ ಕರ್ಮಗಳನ್ನು ಮಾಡುವವನಿಗೆ ದಾಸನೆಂದು ಹೇಳಬೇಕು ಎಂದು ರೂಪನಿಷ್ಪತ್ತಿ ಇರುವುದು.

ದಾಸ, ದಸ್ಯು ಎಂಬ ಶಬ್ದಗಳು ಋಗ್ವೇದದಲ್ಲಿ ಅನೇಕಕಡೆ ಆರ್ಯರಿಗೆ ಶತ್ರುವಾದ ಈ ದೇಶದ ಪೂರ್ವ ನಿವಾಸಿಗಳೆಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದು.

**ಇಂದ್ರೋ ವಿಶ್ವಸ್ಯ ದಮಿತಾ ವಿಭೀಷಣೋ ಯಥಾವಶಂ ನಯತಿ ದಾಸಮಾರ್ಯಃ ।**

(ಋ. ಸಂ. ೫-೩೪-೬)

**ಯಥಾ ದಾಸಾನ್ಯಾರ್ಯಾಣಿ ವೃತ್ರಾ ಕರೋ ವಜ್ರಿನ್ ಸುತುಕಾ ನಾಹುಷಾಣಿ ।**

(ಋ. ಸಂ. ೬-೨೨-೧೦)

ತ್ವಂ ತಾಁ ಇಂದ್ರೋಭಯಾಁ ಅಮಿತ್ರಾನ್ ದಾಸಾ ವೃತ್ರಾಣ್ಯಾರ್ಯಾ ಚ ಶೂರ ।

(ಋ. ಸಂ. ೬-೩೩-೩)

ಹತೋ ವೃತ್ರಾಣ್ಯಾರ್ಯಾ ಹತೋ ದಾಸಾನಿ ಸತ್ಪತೀ । ಹತೋ ವಿಶ್ವಾ ಅಪ ದ್ವಿಷಃ ।

(ಋ. ಸಂ. ೬-೬೦-೬)

ಎಂಬ ಋಕ್ಕುಗಳಲ್ಲಿಯೂ, ಋ. ಸಂ ೭-೮೩-೧ ; ೧೦-೩೮-೩ ; ೧೦-೬೯-೬ ; ೧೦-೮೩-೧ ; ಅ. ವೇ. ೫-೧೧-೩ ; ಇತ್ಯಾದಿ ಋಕ್ಕುಗಳಲ್ಲಿ ದಾಸರೆಂಬ ಜನಾಂಗದವರು ಆರ್ಯರ ಶತ್ರುಗಳೆಂದು ಹೇಳಿದೆ. ಆರ್ಯರ ಶತ್ರುಗಳಾದ ಈ ದಸ್ಯುಗಳನ್ನು ಸಂಹಾರಮಾಡಬೇಕೆಂದು ಇಂದ್ರನು ಪ್ರಾರ್ಥಿಸಲ್ಪಟ್ಟಾಗ ಇಂದ್ರನು ದಸ್ಯುಗಳಮೇಲೆ ಯುದ್ಧಮಾಡುತ್ತಾನೆ.( ಋ. ಸಂ. ೬-೧೮-೩ ; ೬-೫೨-೨) ಆದ್ದರಿಂದ ಇಂದ್ರನಿಗೆ ದಸ್ಯುಹಾ ಎಂಬ ಹೆಸರು ಪ್ರಸಿದ್ಧವಾಗಿದೆ.

ಪ್ರತಿ ಯದಸ್ಯ ವಜ್ರಂ ಬಾಹ್ವೋರ್ಧುರ್ಹತ್ವೀ ದಸ್ಯೂನ್ ಪುರ ಆಯಸೀರ್ನಿ ತಾರೀತ್ ।

(ಋ ಸಂ ೨-೨೦-೮)

ಎಂಬ ಋಕ್ಕಿನಲ್ಲಿ ಈ ದಸ್ಯುಜನರು ಕಬ್ಬಿಣದಿಂದ ನಿರ್ಮಿತವಾದ ಕೋಟೆ (ಅಥವಾ ಪಟ್ಟಣ) ಗಳನ್ನು ಹೊಂದಿದ್ದರೆಂದು ಹೇಳಿದೆ. ಈ ದಾಸರೆಂಬ ಜನರು ಒಂದು ಬುಡಕಟ್ಟಿಗೆ (clans) ಸೇರಿ ಗುಂಪಾಗಿ ವಾಸಿಸುತ್ತಿದ್ದರೆಂದು (ಋ ಸಂ ೨-೧೧-೪ ; ೪-೨೮-೪ ; ೬-೨೫-೨) ಹೇಳಿದೆ. ಇವರ ಮೈ ಬಣ್ಣವು ಆರ್ಯರಂತಿರದೆ ಕಪ್ಪಾಗಿದ್ದುದರಿಂದ ಕೃಷ್ಣಾಂ ತ್ವಚಂ (ಕಪ್ಪಾದ ಚರ್ಮವುಳ್ಳವರು) ಎಂಬ ವರ್ಣನೆಯು,

ಮನವೇ ಶಾಸದವ್ರತಾನ್ ತ್ವಚಂ ಕೃಷ್ಣಾಮರಂಧಯತ್ ।

(೧-೧೩೦-೮)

ಪ್ರ ಯೇ ಗಾವೋ ನ ಭೂರ್ಣಯಸ್ತ್ವೇಷಾ ಅಯಾಸೋ ಅಕ್ರಮುಃ ।
ಘ್ನಂತಃ ಕೃಷ್ಣಾಮಪ ತ್ವಚಂ ॥

(ಋ. ಸಂ. ೯-೪೧-೧)

ಇತ್ಯಾದಿ ಋಕ್ಕುಗಳಲ್ಲಿ ಕಂಡುಬರುವುದು ಅದಕ್ಕೆ ವಿರುದ್ಧವಾಗಿ ಆರ್ಯರ ವರ್ಣವು ಚೆನ್ನಾಗಿರುವುದೆಂದು ಋ. ಸಂ ೩-೩೪-೯ ಎಂಬ ಋಕ್ಕಿನಲ್ಲಿ ಹೇಳಿದೆ.

ಅನಾಸೋ ದಸ್ಯೂಁರಮೃಣೋ ವಧೇನ ನಿ ದುರ್ಯೋಣ ಆವೃಣಙ್ ಮೃಧ್ರವಾಚಃ ।

(ಋ. ಸಂ. ೫-೨೯-೧೦)

ಎಂಬ ಋಕ್ಕಿನಲ್ಲಿ ಈ ದುಸ್ಯುಗಳನ್ನು ನಾಸಿಕವಿಲ್ಲದವರೆಂದೂ ಅಥವಾ ಚಪ್ಪಟೆಯಾದ ಮೂಗುಳ್ಳವರೆಂದೂ, ಕೆಟ್ಟ ಭಾಷೆಯನ್ನು ಮಾತನಾಡುವವರೆಂದೂ ವರ್ಣಿಸಿದೆ. ಇವರು ಯಜ್ಞಗಳನ್ನು ಮಾಡುವವರಲ್ಲವೆಂದೂ (ಅಯಜ್ವಾನಃ) ಇವರಿಗೆ ದೇವರಿಲ್ಲವೆಂದೂ (ಅಬ್ರಹ್ಮಾ) ದೇವತೆಗಳಿಗೆ ಶತ್ರುಗಳೆಂದೂ (ಬ್ರಹ್ಮದ್ವಿಷಃ) ಕೆಟ್ಟಕೆಲಸಮಾಡುವವರೆಂದೂ (ಅಪವ್ರತಾನ್, ಅಕರ್ಮಾ, ಅನ್ಯವ್ರತಃ) ಮನುಷ್ಯಸ್ವಭಾವಕ್ಕೆ ವಿರುದ್ಧವಾಗಿ ವರ್ತಿಸುವವರೆಂದೂ (ಅಮಾನುಷಃ) ಋ. ಸಂ. ೧-೩, ೩-೪, ೫ ; ೪-೧೬-೯ ; ೫-೭-೧೦ ; ೫-೪೨-೯ ; ೬-೧೪-೩ ; ೮-೭೦-೧೦ ; ೧೦-೨೨-೭, ೮ ಇತ್ಯಾದ್ಯನೇಕ ಋಕ್ಕುಗಳಲ್ಲಿ ವರ್ಣನೆಗಳಿವೆ.

ಅರಂ ದಾಸೋ ನ ಮೀಳ್ಹುಷೇ ಕರಾಣ್ಯಹಂ ದೇವಾಯ ಭೂರ್ಣಯೇಽನಾಗಾಃ ।

(ಋ. ಸಂ. ೭-೮೬-೭)

ಶತಂ ಮೇ ಗರ್ದಭಾನಾಂ ಶತಮೂರ್ಣಾವತೀನಾಂ । ಶತಂ ದಾಸಾँ ಅತಿ ಸ್ರಜಃ ।

(ಋ. ಸಂ. ೮-೫೬-೩)

ಉತ ದಾಸಾ ಪರಿವಿಷೇ ಸ್ಮದ್ದಿಷ್ಟೀ ಗೋಪರೀಣಸಾ । ಯದುಸ್ತುರ್ವಶ್ಚ ಮಾಮಹೇ ।

(ಋ. ಸಂ. ೧೦-೬೨-೧೦)

ಎಂಬ ಋಕ್ಕುಗಳಲ್ಲಿ ಈ ದಾಸರು ಗುಲಾಮರೆಂಬ ಅರ್ಥದಲ್ಲಿ ಅಭಿಪ್ರಾಯವು ಸೂಚಿಸಲ್ಪಟ್ಟಿದೆ. ಪ್ರಾಯಶಃ ಆರ್ಯರು ಯುದ್ಧಮಾಡಿ ಸೋಲಿಸಿದ ಈ ಜನರನ್ನು ಗುಲಾಮರನ್ನಾಗಿ ಕೆಲಸಮಾಡುವಂತೆ ನಿಯಮಿಸಿದ್ದರೆಂದು ತೋರುತ್ತದೆ. ಈ ಜನರಲ್ಲಿ ಬಹಳ ಧನಾದಿದ್ರವ್ಯಗಳಿದ್ದವೆಂದು ತೋರುತ್ತದೆ. ಏಕೆಂದರೆ—

ಅಪಿ ವೃಶ್ಚ ಪುರಾಣವದ್ವ್ರತತೇರಿವ ಗುಷ್ಪಿತಮೋಜೋ ದಾಸಸ್ಯ ದಂಭಯ ।
ವಯಂ ತದಸ್ಯ ಸಂಭೃತಂ ವಸ್ವಿಂದ್ರೇಣ ವಿ ಭಜೇಮಹಿ ನಭಂತಾಮನ್ಯಕೇ ಸಮೇ ॥

(ಋ ಸಂ ೮-೪೦-೬)

ವೃಕ್ಷದ ಕೊಂಬೆಯನ್ನು ಕತ್ತರಿಸುವಂತೆ ಈ ದಾಸನನ್ನು ಕತ್ತರಿಸೆಂದು ಇಂದ್ರನನ್ನು ಪ್ರಾರ್ಥಿಸಿದೆ. ಮತ್ತು ಇಂದ್ರನು ಅವನನ್ನು ಗೆದ್ದು ತಂದುಕೊಟ್ಟ ಧನವನ್ನು ನಾವು ಹಂಚಿಕೊಳ್ಳೋಣವೆಂದು ಈ ಋಕ್ಕಿನಲ್ಲಿ ಹೇಳಿದೆ. ಈ ದಾಸ ಜನಾಂಗದವರಲ್ಲಿ ಇಲೀಬಿಶ, ಚುಮುರಿ, ಧುನಿ, ಪಿಪ್ರು, ವರ್ಶಿ, ಶಂಬರ ಎಂಬುವರು ಮುಖ್ಯರಾದವರು. ಇವರ ವಿಷಯವನ್ನು ಆಯಾ ಋಕ್ಕುಗಳಲ್ಲಿ ಸಂದರ್ಭಾನುಸಾರ ವಿವರಿಸಲಾಗುವುದು.

**ಉಕ್ಥಂ ಸ್ತೋತ್ರಂ ।** ಸ್ತೋತ್ರವನ್ನು ಎಂದು ಸಾಧಾರಣವಾದ ಅರ್ಥವನ್ನು ಮಾತ್ರ ವ್ಯಾಖ್ಯಾನದಲ್ಲಿ ಹೇಳಿದೆ. ಆದರೆ, **ತ್ಯತ್ ತೇ ಉಕ್ಥಂ ।** ಪ್ರಸಿದ್ಧವಾದುದೂ ನಿನ್ನನ್ನು ಉದ್ದೇಶಿಸಿದುದೂ ಆದ **ಉಕ್ಥ**ವನ್ನು ಎಂದು ಹೇಳಿರುವುದರಿಂದ ಇಂದ್ರಪರವಾದುದೂ ಯಾಗಕಾಲದಲ್ಲಿ ಹಿಂದಿನಿಂದಲೂ ಪಠಿಸಲ್ಪಡುತ್ತಿರುವುದೂ ಆದ ಉಕ್ಥವೆಂದು ಸೂಚಿಸಿದೆ. ಇಂದ್ರಪರವಾದ ಈ ಉಕ್ಥಕ್ಕೆ ಒಂದು ಅಸಾಧಾರಣವಾದ ವೈಶಿಷ್ಟ್ಯವಿದೆ.

ಉಕ್ಥದ ಸ್ವರೂಪವನ್ನೂ, ಅದರ ಮಹಿಮೆಯನ್ನೂ, ಶಸ್ತ್ರ, ಉಕ್ಥ, ಸಾಮ ಇವುಗಳಿಗಿರುವ ಸಂಬಂಧ ಮತ್ತು ಸೂಕ್ಷ್ಮವಾದ ವ್ಯತ್ಯಾಸಗಳನ್ನೂ, ಹೋತೃವೂ ಅವನ ಸಹಾಯಕರಾದ ಋತ್ವಿಕ್ಕುಗಳೂ ಇದನ್ನು ಸವನಕಾಲ ದಲ್ಲಿ ಪಠಿಸಬೇಕಾದ ಕ್ರಮವನ್ನೂ ಹಿಂದಿನ ಸಂಪುಟದಲ್ಲಿ ವಿಶದವಾಗಿ ವಿವರಿಸಿದೆ. ಇಲ್ಲಿ ಇಂದ್ರನ ಮಹಿಮೆಯನ್ನು ಉಕ್ಥದ ಮೂಲಕ ಪ್ರಶಂಸಿಸಿರುವುದರಿಂದ ಅದಕ್ಕೆ ಸಂಬಂಧಿಸಿದ ಪೂರ್ವಕಥಾಸಂದರ್ಭದೊಂದಿಗೆ ಉಕ್ಥದ ಪ್ರಭಾ ವವೂ ತನ್ಮೂಲಕ ಇಂದ್ರನ ಮಹಿಮೆಯೂ ಸೂಕ್ಷ್ಮವಾಗಿ ತಿಳಿಸಲ್ಪಡುತ್ತದೆ. ಉಕ್ಥದ ಶಕ್ತಿಯು ಅತ್ಯಧಿಕವಾದು ದೆಂದೂ ಅಸುರರು ಅದರ ಮರೆಹೊಕ್ಕಿದುದರಿಂದ ಅವರ ಶಕ್ತಿಯೂ ವೃದ್ಧಿಯಾಯಿತೆಂದೂ ಆಗ ಇಂದ್ರನು ಸ್ತುತ ನಾಗಿ ಬಂದು ಇವರನ್ನು ಓಡಿಸಿದನೆಂದೂ ಐತರೇಯ ಬ್ರಾಹ್ಮಣದಲ್ಲಿ ಒಂದು ಕಥೆಯಿದೆ.

**ತೇ ವಾ ಅಸುರಾ ಮೈತ್ರಾವರುಣಸ್ಯೋಕ್ಥಮಶ್ರಯಂತ ಸೋಽಬ್ರವೀದಿಂದ್ರಃ ಕಶ್ಚಾಹಂ ಚೇಮಾ- ನಿತೋಽಸುರಾನ್ನೋತ್ಸ್ಯಾವಹಾ ಇತ್ಯಹಂ ಚೇತ್ಯಬ್ರವೀದ್ವರುಣಸ್ತಸ್ಮಾದೈಂದ್ರಾವರುಣಂ**

ಮೈತ್ರಾವರುಣಸ್ತೃತೀಯಸವನೇ ಶಂಸತೀಂದ್ರಶ್ಚ ಹಿ ತಾನ್ವರುಣಶ್ಚ ತತೋ ನುದೇತಾಂ ॥

ಅಸುರರು ಮೈತ್ರಾವರುಣ ಉಕ್ಥವನ್ನು ಪ್ರವೇಶಿಸಿದರು. ಆಗ ಇಂದ್ರನು ಈ ಅಸುರರನ್ನು ಈ ಉಕ್ಥದಿಂದ ಓಡಿಸಲು ನನಗೆ ನಿಮ್ಮಲ್ಲಿ ಯಾರು ಸಹಾಯಮಾಡುತ್ತೀರಿ ಎಂದಾಗ ವರುಣನು ತಾನು ಸಹಾಯಮಾಡುವುದಾಗಿ ಹೇಳಿದನು ಆ ಕಾಲದಲ್ಲಿ ಹೋತೃವಿಗೆ ಸಹಾಯಕನಾದ ಮೈತ್ರಾವರುಣನು ತೃತೀಯಸವನಕಾಲದಲ್ಲಿ,

ಇಂದ್ರಾವರುಣಾ ಯುವಮಧ್ವರಾಯ ನೋ ವಿಶೇ ಜನಾಯ ಮಹಿ ಶರ್ಮ ಯಚ್ಛತಂ ।

(ಋ. ಸಂ. ೭-೮೩-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನು ಪಠಿಸಿ ಇಂದ್ರನನ್ನೂ ವರುಣನನ್ನೂ ಸ್ತುತಿಸಿದನು. ಆಗ ಇಂದ್ರಾವರುಣರು ಆ ಅಸುರರನ್ನು ಮಿತ್ರಾವರುಣ ಶಸ್ತ್ರದಿಂದ ಓಡಿಸಿದರು.

ತೇ ವೈ ತತೋಽಪಹತಾ ಅಸುರಾ ಬ್ರಾಹ್ಮಣಾಚ್ಛಂಸಿನ ಉಕ್ಥಮಶ್ರಯಂತ ಸೋಽಬ್ರವೀದಿಂದ್ರಃ ಕಶ್ಚಾಹಂ ಚೇಮಾನಿತೋಽಸುರಾನ್ನೋತ್ಸ್ಯಾವಹಾ ಇತ್ಯಹಂ ಚೇತ್ಯಬ್ರವೀದ್ಬೃಹಸ್ಪತಿಸ್ತಸ್ಮಾ-ದೈಂದ್ರಾಬಾರ್ಹಸ್ಪತ್ಯಂ ಬ್ರಾಹ್ಮಣಾಚ್ಛಂಸೀ ತೃತೀಯಸವನೇ ಶಂಸತೀಂದ್ರಶ್ಚ ಹಿ ತಾನ್ಬೃಹ-ಸ್ಪತಿಶ್ಚ ಹಿ ತತೋ ನುದೇತಾಂ ॥

ಅಲ್ಲಿಂದ ಓಡಿಸಲ್ಪಟ್ಟ ಅಸುರರು ಬ್ರಾಹ್ಮಣಾಚ್ಛಂಸಿಯ ಉಕ್ಥದಲ್ಲಿ ಪ್ರವೇಶಿಸಿದರು.

ಆಗ ಇಂದ್ರನು ಎದ್ದು ಈ ಅಸುರರನ್ನು ಇಲ್ಲಿಂದ ಓಡಿಸಲು ಯಾರು ಸಹಾಯಮಾಡುತ್ತೀರಿ ಎಂದಾಗ ಬೃಹಸ್ಪತಿಯು ಎದ್ದು ತಾನು ಸಹಾಯಮಾಡುವುದಾಗಿ ಹೇಳಿದನು. ಆಗ ಬ್ರಾಹ್ಮಣಾಚ್ಛಂಸಿಯು ತೃತೀಯಸವನ ಕಾಲದಲ್ಲಿ,

ಉದುಪ್ರುತೋ ನ ವಯೋ ರಕ್ಷಮಾಣಾ ವಾವದತೋ ಅಭ್ರಿಯಸ್ಯೇವ ಘೋಷಾಃ ।

(ಋ. ಸಂ ೧೦-೬೮-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನು ಪಠಿಸಿ ಇಂದ್ರನನ್ನೂ ಬೃಹಸ್ಪತಿಯನ್ನೂ ಸ್ತುತಿಸಿದನು. ಆಗ ಇಂದ್ರನೂ ಬೃಹಸ್ಪತಿಯೂ ಸಹ ಅಸುರರನ್ನು ಅಲ್ಲಿಂದ ಓಡಿಸಿದರು.

ತೇ ವೈ ತತೋಽಪಹತಾ ಅಸುರಾ ಅಚ್ಛಾವಾಕಸ್ಯೋಕ್ಥಮಶ್ರಯಂತ ಸೋಽಬ್ರವೀದಿಂದ್ರಃ ಕಶ್ಚಾಹಂ ಚೇಮಾನಿತೋಽಸುರಾನ್ನೋತ್ಸ್ಯಾವಹಾ ಇತ್ಯಹಂ ಚೇತ್ಯಬ್ರವೀದ್ವಿಷ್ಣುಸ್ತಸ್ಮಾ-ದೈಂದ್ರಾವೈಷ್ಣವಮಚ್ಛಾವಾಕಸ್ತೃತೀಯಸವನೇ ಶಂಸತೀಂದ್ರಶ್ಚ ಹಿ ತಾನ್ವಿಷ್ಣುಶ್ಚ ತತೋ ನುದೇತಾಂ ॥

(ಐ. ಬ್ರಾ. ೧೫-೬)

ಬ್ರಾಹ್ಮಣಾಚ್ಛಂಸಿಯ ಉಕ್ಥದಿಂದ ಓಡಿಸಲ್ಪಟ್ಟ ಅಸುರರು ಅಚ್ಛಾವಾಕನ ಉಕ್ಥದಲ್ಲಿ ಸೇರಿಕೊಂಡರು. ಆಗ ಇಂದ್ರನು ಎದ್ದು ಇವರನ್ನು ಇಲ್ಲಿಂದ ಓಡಿಸಲು ನಿಮ್ಮಲ್ಲಿ ಯಾರು ಸಹಾಯಮಾಡುತ್ತೀರೆಂದು ಕೇಳಿದನು. ಆಗ ವಿಷ್ಣುವು ತಾನು ಸಹಾಯಮಾಡುತ್ತೇನೆಂದು ಹೇಳಿದನು. ಆ ಕಾಲದಲ್ಲಿ ಅಚ್ಛಾವಾಕನು,

ಸಂ ವಾಂ ಕರ್ಮಣಾ ಸಮಿಷಾ ಹಿನೋಮೀಂದ್ರಾವಿಷ್ಣೂ ಅಪಸಸ್ಪಾರೇ ಅಸ್ಯ ।
(ಋ. ಸಂ. ೬-೬೯-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನು ಪಠಿಸಿ ಇಂದ್ರನನ್ನೂ ವಿಷ್ಣುವನ್ನೂ ಸ್ತುತಿಸಿದನು. ಆಗ ಅವರು ಅಸುರರನ್ನು ಅಲ್ಲಿಂದಲೂ ಓಡಿಸಿದರು ಎಂಬ ಕಥೆಯು ಐತರೇಯಬ್ರಾಹ್ಮಣದಲ್ಲಿ (೧೫-೬) ಪಠಿತವಾಗಿದೆ. ಇದರಿಂದ ಉಕ್ಥದ ಶಕ್ತಿಯೂ, ಇಂದ್ರನ ಮಹಿಮೆಯೂ ತಿಳಿಯುತ್ತದೆ. ಆದುದರಿಂದಲೇ ಶತಪಥಬ್ರಾಹ್ಮಣದಲ್ಲಿಯೂ ಸಹ,

ಇಂದ್ರೋ ವೈ ಯಜ್ಞಸ್ಯ ದೇವತಾ ತಸ್ಮಾದಾಹೇಂದ್ರಾಯ ತ್ವೇತಿ ಬೃಹದ್ವತೇ ವಯಸ್ವತ ಇತಿ ವೀರ್ಯವತ ಇತ್ಯೇವೈತದಾಹ ಯದಾಹ ಬೃಹದ್ವತೇ ವಯಸ್ವತ ಇತ್ಯುಕ್ಥಾಖ್ಯಂ ಗೃಹ್ಣಾಮೀ-ತ್ಯುಕ್ಥೇಭ್ಯೋ ಹ್ಯೇನಂ ಗೃಹ್ಣಾತಿ । (ಶ. ಬ್ರಾ. ೪-೨-೩-೧೦)

ಇಂದ್ರನೇ ಯಜ್ಞಕ್ಕೆಲ್ಲಾ ದೇವತೆ. ಆದುದರಿಂದಲೇ “ ಬೃಹದುಕ್ಥದಿಂದ ಕೂಡಿದವನೂ, ವೀರ್ಯವಂತನೂ ಆದ ಇಂದ್ರನಿಗೆ ” ಎಂದು ಇಂದ್ರನ ವೀರ್ಯಕ್ಕೂ ತೃಪ್ತಿಗೂ ಕಾರಣವಾದ ಉಕ್ಥವನ್ನೂ ತನ್ಮೂಲಕ ಇಂದ್ರನನ್ನೂ ಸ್ತುತಿಸಿದೆ.

ಯಾಗಾದಿ ಕರ್ಮಗಳ ಕಾಲದಲ್ಲಿ ಯಾವ ರೀತಿ ಉಕ್ಥದ ಪ್ರಭಾವವನ್ನು ವರ್ಣಿಸಿದೆಯೋ ಅದೇ ರೀತಿ ಆಧ್ಯಾತ್ಮಿಕವಾದ ಜ್ಞಾನವನ್ನು ಉಪದೇಶಿಸುವ ಕಾಲದಲ್ಲೂ ಸಹ ಸ್ತೋತ್ರಾತ್ಮಕವಾದ ಈ ಉಕ್ಥದ ಮಹಿಮೆಯನ್ನು ಪ್ರಶಂಸಿಸಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ—

ಉಕ್ಥಂ ಪ್ರಾಣೋ ವಾ ಉಕ್ಥಂ ಪ್ರಾಣೋ ಹೀದಂ ಸರ್ವಮುತ್ಥಾಪಯತ್ಯುದ್ಧಾಸ್ಮಾದುಕ್ಥವಿ-ದ್ವೀರಸ್ತಿಷ್ಠತ್ಯುಕ್ಥಸ್ಯ ಸಾಯುಜ್ಯಂ ಸಲೋಕತಾಂ ಜಯತಿ ಯ ಏವಂ ವೇದ ।
(ಬೃ. ಉ. ೫-೧೩-೧)

ಉಕ್ಥಂ ತಥೋಪಾಸನಾಂತರಂ । ಉಕ್ಥಂ ಶಸ್ತ್ರಂ । ತದ್ಧಿ ಪ್ರಧಾನಂ ಮಹಾವ್ರತೇ ಕ್ರತೌ ।
(ಶಾಂಕರಭಾಷ್ಯ)

ಮಹಾವ್ರತರೂಪವಾದ ಯಾಗದಲ್ಲಿ ಪ್ರಧಾನಶಸ್ತ್ರವಾದ ಉಕ್ಥವೇ ಪ್ರಾಣವು. ಇದರಿಂದಲೇ ಉತ್ಥಾನವಾಗುತ್ತದೆ. ಆದರಿಂದ ಉಕ್ಥಜ್ಞನಾದ ಪುತ್ರನು ಉತ್ಪನ್ನನಾಗಿ ತತ್ಸಮಾನತೆಯನ್ನೂ ಸಮಾನವಾದ ಮಾನ್ಯತೆಯನ್ನೂ ಪಡೆಯುತ್ತಾನೆ, ಎಂದು ಉಕ್ಥದ ಮಹತ್ವವನ್ನು ಹೇಳಿದೆ.

---

ಸಂಹಿತಾಪಾಠಃ

ಉಕ್ಥೇಷ್ವಿನ್ನು ಶೂರ ಯೇಷು ಚಾಕನ್ತ್ಸ್ತೋಮೇಷ್ವಿಂದ್ರ ರುದ್ರಿಯೇಷು ಚ ।

ತುಭ್ಯೇದೇತಾ ಯಾಸು ಮಂದಸಾನಃ ಪ್ರ ವಾಯವೇ ಸಿಸ್ರತೇ ನ ಶುಭ್ರಾಃ

ಪದಪಾಠಃ

ಉಕ್ಥೇಷು । ಇತ್ । ನು । ಶೂರ । ಯೇಷು । ಚಾಕನ್ । ಸ್ತೋಮೇಷು । ಇಂದ್ರ । ರುದ್ರಿಯೇಷು । ಚ ।

ತುಭ್ಯ । ಇತ್ । ಏತಾಃ । ಯಾಸು । ಮಂದಸಾನಃ । ಪ್ರ । ವಾಯವೇ । ಸಿಸ್ರತೇ । ನ । ಶುಭ್ರಾಃ । ॥ ೩ ॥

ಸಾಯಣಭಾಷ್ಯಂ

ಹೇ ಶೂರೇಂದ್ರ ಯೇಷೂಕ್ಥೇಷು ಹೋತ್ರಾದಿಭಿಃ ಕ್ರಿಯಮಾಣೇಷು ಶಸ್ತ್ರೇಷು ರುದ್ರಿಯೇಷು । ರುದ್ರಿಯಂ ಸುಖಂ । ತತ್ಸಾಧನಭೂತೇಷು । ಯದ್ವಾ ರುದ್ರಾಃ ಸ್ತೋತಾರಃ । ತತ್ಕೃತೇಷು ಉದ್ಗಾತ್ರ್ಯಾಣಾಂ ಸ್ತೋಮೇಷು ಚ ನು ಕ್ಷಿಪ್ರಂ ಚಾಕನ್ । ಸ್ತುತೀಃ ಕಾಮಯಸೇ ॥ ಕಮುತೇಃ ಕನತೇರ್ವಾ ಯಙ್ಲುಕಿ ರೂಪಂ ॥ ಯಾಸು ಸ್ತೋತ್ರಶಸ್ತ್ರರೂಪಾಸು ಸ್ತುತಿಷು ಮಂದಸಾನೋ ಹೃಷ್ಯನ್ ಭವಸಿ ತಾ ಏತಾಃ ಶುಭ್ರಾ ದೀಪ್ಯಮಾನಾಃ ಸ್ತುತಯೋ ವಾಯವೇಽಸ್ಮದೀಯಂ ಯಜ್ಞಂ ಪ್ರತ್ಯಾಗಚ್ಛತೇ ತುಭ್ಯೇತ್ ತುಭ್ಯಮೇವ ಪ್ರಸಿಸ್ರತೇ । ತ್ವದರ್ಥಮೇವ ಪ್ರಸರಂತಿ । ನ ಸಂಪ್ರತ್ಯರ್ಥೇ । ತಾ ಅಧುನಾ ಸೇವಸ್ವ ॥

ಪ್ರತಿಪದಾರ್ಥ

ಶೂರ—ಪರಾಕ್ರಮಿಯಾದ । ಇಂದ್ರ—ಎಲೈ ಇಂದ್ರನೇ । ಯೇಷು—ಯಾವ । ಉಕ್ಥೇಷು—ಉಕ್ಥರೂಪವಾದ ಸ್ತುತಿಗಳಲ್ಲಿಯೂ (ಮತ್ತು) । ರುದ್ರಿಯೇಷು—ಸುಖಕಾರಕಗಳಾದ ಅಥವಾ ಉದ್ಗಾತೃಗಳಿಂದ ಪಠಿತವಾದ । ಸ್ತೋಮೇಷು—ಸ್ತೋಮರೂಪವಾದ ಸ್ತುತಿಗಳಲ್ಲಿಯೂ । ಚ ನು— ಪಠಿತವಾದೊಡನೆಯೇ । ಚಾಕನ್—ಪ್ರೀತಿಯನ್ನು ತೋರಿಸುವೆಯೋ (ಅಲ್ಲದೇ) । ಯಾಸು—ಯಾವ ಸ್ತೋತ್ರರೂಪವಾದ ಮಂತ್ರಗಳಲ್ಲಿ । ಮಂದಸಾನಃ—ಹರ್ಷವನ್ನು ಹೊಂದುತ್ತಿಯೋ । ಏತಾಃ—ಅಂತಹ । ಶುಭ್ರಾಃ—ಪ್ರಕಾಶಮಾನವಾದ ಸ್ತುತಿಗಳು । ವಾಯವೇ—ಯಜ್ಞಕ್ಕಾಗಿ ಬರುತ್ತಿರುವ । ತುಭ್ಯೇತ್—ನಿನಗಾಗಿಯೇ । ನ—ಈಗ । ಪ್ರ ಸಿಸ್ರತೇ—ಪ್ರಸರಿಸಿ ನಿನ್ನನ್ನು ಸಮೀಪಿಸುತ್ತವೆ.

ಭಾವಾರ್ಥ

ಪರಾಕ್ರಮಿಯಾದ ಎಲೈ ಇಂದ್ರನೇ, ಯಾವ ಉಕ್ಥರೂಪವಾದ ಸ್ತುತಿಗಳಲ್ಲಿಯೂ, ಸುಖಕಾರಕಗಳಾದ ಸ್ತೋಮಗಳಲ್ಲಿಯೂ ಅವು ಪಠಿತವಾದೊಡನೆಯೇ ನೀನು ಪ್ರೀತಿಯನ್ನು ತೋರಿಸುವೆಯೋ, ಮತ್ತು ಯಾವ ಸ್ತೋತ್ರರೂಪವಾದ ಮಂತ್ರಗಳಿಂದ ಹರ್ಷವನ್ನು ಹೊಂದುತ್ತೀಯೋ ಅಂತಹ ಪ್ರಕಾಶಮಾನವಾದ ಸ್ತುತಿಗಳು ಯಜ್ಞಕ್ಕಾಗಿ ಬರುತ್ತಿರುವ ನಿನಗಾಗಿಯೇ ಈಗ ಪಠಿತವಾಗಿ ನಿನ್ನನ್ನು ಸಮೀಪಿಸುತ್ತಿವೆ. ಅವುಗಳನ್ನು ಸ್ವೀಕರಿಸು.

## English Translation

Indra, hero, these brilliant (laudations), in (the form of) hymns, in which you delight, and in (that of) the praises uttered by the worshippers by which you are gratified, are addressed to you, to bring you, (to our sacrifice).

### ವಿಶೇಷವಿಷಯಗಳು

**ರುದ್ರಿಯೇಷು**—**ರುದ್ರಃ** ಎಂಬ ಶಬ್ದವು ರೇಭಃ, ಜರಿತಾ ಮೊದಲಾದ ಹದಿಮೂರು ಸ್ತೋತೃನಾಮಗಳಲ್ಲಿ ಪಠಿತವಾಗಿರುವುದರಿಂದ ರುದ್ರಿಯೇಷು ಎಂದರೆ ಉದ್ಗಾತೃವೆಂಬ ಋತ್ವಿಜರು ಪಠಿಸುವ ಸ್ತೋತ್ರಗಳಲ್ಲಿ ಅಥವಾ ಸ್ತೋಮಗಳಲ್ಲಿ ಎಂದರ್ಥವು.

**ವಾಯವೇ**—ವಾ ಗತಿಗಂಧನಯೋಃ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಬರುತ್ತಿರುವ ಎಂದರೆ ನಮ್ಮ ಯಜ್ಞವನ್ನು ಉದ್ದೇಶಿಸಿ ಯಜ್ಞಭೂಮಿಗೆ ಬರುತ್ತಿರುವ ನಿನಗೋಸ್ಕರ ಎಂದಭಿಪ್ರಾಯವು.

**ಸ್ತೋಮೇಷು**—ಅಭಿಪ್ಲವಷಡಹಯಾಗದಲ್ಲಿ ವಿಷಮದಿನಗಳು ಎಂದರೆ, ಪ್ರಥಮ, ತೃತೀಯ, ಪಂಚಮದಿನಗಳಲ್ಲಿ ನಡೆಯುವ ಮಾಧ್ಯಂದಿನಸವನಗಳಲ್ಲಿ (ಮಧ್ಯಾಹ್ನಕಾಲದಲ್ಲಿ ಸೋಮರಸವನ್ನು ಹಿಂಡುವ ಕರ್ಮವಿಶೇಷಕಾಲದಲ್ಲಿ) ಉದ್ಗಾತೃಮೊದಲಾದ ಋತ್ವಿಜರು **ರಥಂತರವೆಂಬ** ಸಾಮಗಾನಗಳಿಂದ ಸ್ತೋತ್ರಮಾಡುವುದರಿಂದ ಈ ದಿನಗಳಿಗೆ **ರಥಂತರಪೃಷ್ಠ**ಗಳೆಂದು ಹೆಸರು. ಅದರಂತೆಯೇ ಸಮದಿನಗಳಲ್ಲಿ ಎಂದರೆ ದ್ವಿತೀಯ, ಚತುರ್ಥ, ಷಷ್ಠದಿನಗಳಲ್ಲಿ **ಬೃಹತ್ಸಾಮ**ವೆಂಬ ಸಾಮಗಾನಗಳಿಂದ ಸ್ತೋತ್ರಮಾಡುವುದರಿಂದ ಈ ದಿನಗಳಿಗೆ **ಬೃಹತ್ಪೃಷ್ಠ** ದಿನಗಳೆಂದು ಹೆಸರು. ಮೂರನೆಯ ದಿನದಿಂದ ಪ್ರಾರಂಭಿಸಿ ಪ್ರತಿದಿನವೂ ಪೃಷ್ಠ್ಯಸ್ತೋತ್ರಗಳನ್ನು ಪಠಿಸುವಾಗ ಅದಕ್ಕೆ ಪ್ರತಿಯಾಗಿ ವೈರೂಪ, ವೈರಾಜ, ಶಾಕ್ವರರೈವತಗಳೆಂದು ಹೇಳಲ್ಪಡುವ ವಿಶೇಷಸಾಮಮಂತ್ರಗಳು ಗಾನಮಾಡಲ್ಪಡುತ್ತವೆ. ಆ ಕಾಲದಲ್ಲಿ ಸಾಮಗಾನಕ್ಕೆ ಅನುಸಾರವಾಗಿ ಹೋತೃವರ್ಗದ ಋತ್ವಿಜರು **ಸ್ತೋಮ**ವೆಂದು ಹೇಳಲ್ಪಡುವ ಕೆಲವು ಋಕ್ಕುಗಳನ್ನು ಪಠಿಸುವರು. ಸ್ತೋಮದ ವಿವರಣೆಯು ಈ ರೀತಿ ಇರುವುದು—

**ಏಕಂ ಸಾಮ ತೃಚೇ ಕ್ರಿಯತೇ । ತಸ್ಯ ಚ ತೃಚಸ್ಯ ಆವೃತ್ತ್ಯಾ ಋಚಾಂ**
**ಸಂಖ್ಯಾ ವರ್ಧನೀಯಾ ಭವತಿ ಯಾ ಸ್ತೋಮಶಬ್ದೇನೋಚ್ಯತ ಇತಿ ॥**

ತೃಚವೆಂದರೆ ಮೂರು ಋಕ್ಕುಗಳು. ಈ ಮೂರು ಋಕ್ಕುಗಳೂ ಒಂದೇ ದೇವತೆಯನ್ನು ಪ್ರತಿಪಾದಿಸುವುದಾಗಿ ಇರಬೇಕು. ಇಂತಹ ಋಕ್ಕುಗಳನ್ನು ಸ್ಥಾನಭೇದಗಳಿಂದ ವಿಧವಿಧವಾಗಿಯೂ, ಒಂದೊಂದು ಋಕ್ಕನ್ನು ಒಂದಾವರ್ತಿಗಿಂತ ಹೆಚ್ಚಾಗಿ ಪಠಿಸುವುದರಿಂದಲೂ ತೃಚವನ್ನು ಅನೇಕ ಋಕ್ಕುಗಳನ್ನಾಗಿ ವೃದ್ಧಿಪಡಿಸಬಹುದು. ಉದಾ.—ಒಂದು ತೃಚದಲ್ಲಿ ೧, ೨, ೩ ಎಂಬ ಋಕ್ಕುಗಳಿವೆ. ಅವುಗಳನ್ನು,

೧, ೨, ೩ ; ೩, ೨, ೧ ; ೧, ೩, ೨ ; ೨, ೧, ೩ ; ೨, ೩, ೧ ; ೩, ೧, ೨ ಇತ್ಯಾದಿ ಸ್ಥಾನಭೇದಗಳಿಂದಲೂ

೧, ೧, ೧, ೨, ೩ ; ೧, ೨, ೨, ೨, ೩ ; ೧, ೨, ೩, ೩, ೩ ; ಇತ್ಯಾದಿ ಅಧಿಕ ಆವೃತ್ತಿಗಳಿಂದಲೂ,

ಪಠಿಸುವಾಗ ಮೂರು ಋಕ್ಕುಗಳು ಅನೇಕ ಋಕ್ಕುಗಳಾಗುವುವು. ಈ ರೀತಿಯಾಗಿ ತೃಚವೆಂಬ ಮೂರು ಋಕ್ಕುಗಳನ್ನು ಯಾವುದಾದರೂ ಒಂದು ಕ್ರಮದಲ್ಲಿ ಪಠಿಸುವುದಕ್ಕೆ ಎಂದರೆ ೧, ೨, ೩ ಅಥವಾ ೧, ೨, ೩, ೩, ೩ ಎಂದು ಮೊದಲಾಗಿ ಪಠಿಸುವುದಕ್ಕೆ ಪರ್ಯಾಯವೆಂದು ಹೆಸರು. ಇಂತಹ ಪರ್ಯಾಯಗಳು ಮೂರಾದರೆ ಒಂದು ವಿಷ್ಟುತಿಯಾಗುವುದು. ಪ್ರತಿಯೊಂದು ಸ್ತೋಮಕ್ಕೂ ಇಂತಹ ವಿಷ್ಟುತಿಗಳು ಬೇರೆಬೇರೆ ಹೆಸರಿನಿಂದ ಅನೇಕ

ವಿಧಗಳಾಗಿರುವುವು. ಆದುದರಿಂದ ಮೂರು ಋಕ್ಕಿನ ತೃಚವನ್ನು ಮೂರು ಪರ್ಯಾಯಗಳಲ್ಲಿ ವಿಧವಿಧವಾದ ಕ್ರಮದಿಂದ ಪಠಿಸುವುದೇ ಸ್ತೋಮವೆನಿಸುವುದು. ಸ್ತೋಮಗಳಲ್ಲಿ ತ್ರಿವೃತ್, ಪಂಚದಶಃ ಸಪ್ತದಶಃ, ಏಕವಿಂಶಃ, ತ್ರಿಣವಃ, ತ್ರಯಸ್ತ್ರಿಂಶಃ, ಚತುರ್ವಿಂಶಃ, ಚತುಶ್ಚತ್ವಾರಿಂಶಃ, ಅಷ್ಟಾಚತ್ವಾರಿಂಶಃ ಎಂದು ಒಂಭತ್ತುವಿಧವಾದ ಸ್ತೋಮಗಳಿರುವವು. ತ್ರಿವೃತ್‌ಸ್ತೋಮದಲ್ಲಿ ತೃಚವನ್ನು ಬೇರೆ ಬೇರೆ ಕ್ರಮಗಳಲ್ಲಿ ಮೂರಾವರ್ತಿ ಪಠಿಸುವುದರಿಂದ ಈ ಸ್ತೋಮಕ್ಕೆ ತ್ರಿವೃತ್ಸ್ತೋಮವೆಂದು ಹೆಸರು. ಆದುದರಿಂದ ತ್ರಿವೃತ್ಸ್ತೋಮದ ಮೂರು ಪರ್ಯಾಯಗಳ ಒಟ್ಟು ಋಕ್ಕುಗಳ ಸಂಖ್ಯೆ ೯ ಆಗುವುದು. ಪಂಚದಶ ಮೊದಲಾದ ಸ್ತೋಮಗಳಲ್ಲಿ ಮೂರು ಪರ್ಯಾಯಗಳಿಂದ ಹದಿನೈದು ಅಥವಾ ಹೆಚ್ಚಿನ ಸಂಖ್ಯೆಯ ಋಕ್ಕುಗಳು ಆಯಾ ಸ್ತೋಮದ ಹೆಸರಿಗೆ ತಕ್ಕಂತೆ ಇರುವವು. ಎಂದರೆ ಪಂಚದಶಸ್ತೋಮದಲ್ಲಿ ಮೂರು ಪರ್ಯಾಯಗಳಿಂದ ಒಟ್ಟು ೧೫ ಋಕ್ಕುಗಳೂ, ಸಪ್ತದಶಸ್ತೋಮದಲ್ಲಿ ಮೂರು ಪರ್ಯಾಯಗಳಿಂದ ಒಟ್ಟು ೧೭ ಋಕ್ಕುಗಳೂ ಇರುವವು, ಇತ್ಯಾದಿ. ಆದುದರಿಂದ ಋಕ್ಸಂಖ್ಯೆಗಳಿಗೆ ಅನುಸಾರವಾಗಿ ಸ್ತೋಮಗಳಿಗೆ ಆಯಾ ಹೆಸರು ಬಂದಿರುವುದು. ಪ್ರತಿಪರ್ಯಾಯದಲ್ಲಿಯೂ ಒಂದೇ ಸಂಖ್ಯೆಯ ಋಕ್ಕುಗಳಿರ ಬೇಕೆಂಬ ನಿಯಮವಿಲ್ಲ. ಮೂರು ಪರ್ಯಾಯಗಳಿಂದ ಕ್ಲೃಪ್ತಸಂಖ್ಯೆಯ ಋಕ್ಕುಗಳು ಆಯಾ ಸ್ತೋಮಗಳ ವಿಷ್ಟುತಿಗಳಲ್ಲಿರಬೇಕು. ಅವುಗಳ ವಿವರವು ಈ ರೀತಿ ಇದೆ—

| | | | | |
|---|---|---|---|---|
| (೧) | ತ್ರಿವೃತ್ಸ್ತೋಮ—ಮೂರು ಪರ್ಯಾಯಗಳಿಂದ ಒಟ್ಟು | | ೯ | ಋಕ್ಕುಗಳು |
| (೨) | ಪಂಚದಶಸ್ತೋಮ | ,, | ೧೫ | ,, |
| (೩) | ಸಪ್ತದಶಸ್ತೋಮ | ,, | ೧೭ | ,, |
| (೪) | ಏಕವಿಂಶಸ್ತೋಮ | ,, | ೨೧ | ,, |
| (೫) | ತ್ರಿಣವಸ್ತೋಮ | ,, | ೨೭ | ,, |
| (೬) | ತ್ರಯಸ್ತ್ರಿಂಶಸ್ತೋಮ | ,, | ೩೩ | ,, |
| (೭) | ಚತುರ್ವಿಂಶಸ್ತೋಮ | ,, | ೨೪ | ,, |
| (೮) | ಚತುಶ್ಚತ್ವಾರಿಂಶಸ್ತೋಮ | ,, | ೪೪ | ,, |
| (೯) | ಅಷ್ಟಾಚತ್ವಾರಿಂಶಸ್ತೋಮ | ,, | ೪೮ | ,, |

ಈ ರೀತಿ ೯ ಸ್ತೋಮಗಳ ಋಕ್ಸಂಖ್ಯೆಗಳು ಆಯಾ ಸ್ತೋಮದ ಹೆಸರಿಗೆ ತಕ್ಕಂತೆ ಇರುವವು. ಈ ಸಂಖ್ಯೆಯು ಸ್ತೋಮದಲ್ಲಿರುವ ಒಂದೊಂದು ವಿಷ್ಟುತಿಗೆ ಅನ್ವಯಿಸುವುದು ಎಂದು ತಿಳಿಯಬೇಕು. ಎಂದರೆ ತ್ರಿವೃತ್ಸ್ತೋಮ ದಲ್ಲಿ ಮೂರು ವಿಷ್ಟುತಿಗಳಿರುವುದರಿಂದ ಒಂದೊಂದು ವಿಷ್ಟುತಿಯು ಮೂರು ಪರ್ಯಾಯಗಳಿಗೂ ೯ ಋಕ್ಕುಗಳಿರು ವುವೆಂದು ತಿಳಿಯಬೇಕು. ಒಟ್ಟು ಮೂರು ವಿಷ್ಟುತಿಗಳಿಂದ ಸೇರಿ ೯ ಋಕ್ಕುಗಳಲ್ಲ, ೨೭ ಋಕ್ಕುಗಳಾಗುವವು. ಇತ್ಯಾದಿ.

ಪ್ರತಿಯೊಂದು ಸ್ತೋಮಕ್ಕೂ ಅನೇಕ ವಿಷ್ಟುತಿಗಳಿರುವುವೆಂದು ಹಿಂದೆಯೇ ಹೇಳಿರುವುದಷ್ಟೆ. ಅವುಗಳ ವಿವರವನ್ನು ಕೆಳಗೆ ಕೊಟ್ಟಿದೆ—

I ತ್ರಿವೃತ್ಸ್ತೋಮಕ್ಕೆ—

(೧) ಉದ್ಯತೀ (೨) ಪರಿವರ್ತಿನೀ (೩) ಕುಲಾಯಿನೀ ಎಂದು ಮೂರು ವಿಷ್ಟುತಿಗಳು.

II ಪಂಚದಶಸ್ತೋಮಕ್ಕೆ—

(೧) ಪಂಚಪಂಚಿನೀ (೨) ಉದ್ಯತೀ ಪ್ರಥಮಾ (೩) ಉದ್ಯತೀ ದ್ವಿತೀಯಾ ಎಂದು ಮೂರು ವಿಷ್ಟುತಿಗಳು.

III ಸಪ್ತದಶಸ್ತೋಮಕ್ಕೆ—

(೧) ದಶಸಪ್ತಾ ಪ್ರಥಮಾ (೨) ದಶಸಪ್ತಾ ದ್ವಿತೀಯಾ (೩) ಸಪ್ತಸ್ಥಿತಾ ಪ್ರಥಮಾ (೪) ಸಪ್ತಸ್ಥಿತಾ ದ್ವಿತೀಯಾ (೫) ಅನಾಮಿಕಾ (೬) ಉದ್ಯತೀ (೭) ಭಸ್ತ್ರಾ ಎಂದು ಏಳು ವಿಷ್ಟುತಿಗಳು.

IV ಏಕವಿಂಶಸ್ತೋಮಕ್ಕೆ—

(೧) ಸಪ್ತಸಪ್ತಿನೀ (೨) ಉದ್ಯತೀ (೩) ಪ್ರತಿಷ್ಟುತಿಃ (೪) ಸೂರ್ಮಿ ಎಂದು ನಾಲ್ಕು ವಿಷ್ಟುತಿಗಳು.

V ತ್ರಿಣವಸ್ತೋಮಕ್ಕೆ—

(೧) ಪ್ರತಿಷ್ಠಿತಾ (೨) ಉದ್ಯತೀ ಎಂದು ಎರಡು ವಿಷ್ಟುತಿಗಳು.

VI ತ್ರಯಸ್ತ್ರಿಂಶಸ್ತೋಮಕ್ಕೆ—

(೧) ಸಮತ್ರ್ಯಂಶಾ (೨) ನೇದೀಯಸ್ಸಂಕ್ರಮಾ (೩) ಉದ್ಯತೀ (೪) ಪ್ರತ್ಯವರೋಹಿಣೀ (೫) ಅಂತಿಮಾ ಎಂದು ಐದು ವಿಷ್ಟುತಿಗಳು.

VII ಚತುರ್ವಿಂಶಸ್ತೋಮಕ್ಕೆ—

ಇದಕ್ಕೆ ಒಂದೇ ವಿಷ್ಟುತಿ ಇರುವುದು.

VIII ಚತುಶ್ಚತ್ವಾರಿಂಶಸ್ತೋಮಕ್ಕೆ—

(೧) ಪ್ರಥಮಾ (೨) ನಿರ್ಮಧ್ಯಾ (೩) ತೃತೀಯಾ ಎಂದು ಮೂರು ವಿಷ್ಟುತಿಗಳು.

IX ಅಷ್ಟಾಚತ್ವಾರಿಂಶಸ್ತೋಮಕ್ಕೆ—

(೧) ಪ್ರಥಮಾ (೨) ನೇದೀಯಸ್ಸಂಕ್ರಮಾ ಎಂದು ಎರಡು ವಿಷ್ಟುತಿಗಳು.

ಒಟ್ಟು ಒಂಭತ್ತು ಸ್ತೋಮಗಳಿಗೆ ಮೂವತ್ತು ವಿಷ್ಟುತಿಗಳಿರುವವು.

ಸ್ತೋಮಗಳು, ಅವುಗಳ ವಿಷ್ಟುತಿಗಳು, ಅವುಗಳಲ್ಲಿರುವ ಋಕ್ಸಂಖ್ಯೆಯನ್ನು ಪಠಿಸುವ ಕ್ರಮ ಮೊದಲಾದ ವಿಷಯಗಳು ಸಾಮವೇದದ ತಾಂಡ್ಯಬ್ರಾಹ್ಮಣದಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿವೆ.

ಈ ವಿಧವಾದ ಸ್ತೋಮಗಳಲ್ಲಿ ತ್ರಿವೃತ್ಸ್ತೋಮವು ಪ್ರಾತಸ್ಸವನ ಕಾಲದಲ್ಲಿಯೂ ಪಂಚದಶಸ್ತೋಮವು ಮಾಧ್ಯಂದಿನ ಸವನದಲ್ಲಿಯೂ, ಸಪ್ತದಶಸ್ತೋಮವು ತೃತೀಯಸವನದಲ್ಲಿಯೂ ಪಠಿಸಲ್ಪಡುವವು. ಅಭಿಪ್ಲವಷಡಹ ಮೊದಲಾದ ಯಾಗಗಳಲ್ಲಿ ಪ್ರಾತಸ್ಸವನಾದಿ ಕರ್ಮಗಳಲ್ಲಿ ಗಾನಮಾಡಲ್ಪಡಬೇಕಾದ ತ್ರಿವೃದಾದಿಸ್ತೋಮಗಳನ್ನು ಗಾನಮಾಡಿದನಂತರ ಅವುಗಳ ಜತೆಗೆ ಕೆಲವು ಸಂದರ್ಭಗಳಲ್ಲಿ ಉತ್ತರಸ್ತೋಮಗಳೆಂದು ಹೇಳಲ್ಪಡುವ ಇನ್ನೂ ಕೆಲವು ಸ್ತೋಮಗಳನ್ನು ಗಾನಮಾಡುವುದು ಪದ್ಧತಿಯು. ಈ ರೀತಿಯಾಗಿ ಅಧಿಕಸ್ತೋಮಗಳನ್ನು ಗಾನಮಾಡುವುದಕ್ಕೆ ಸ್ತೋಮವೃದ್ಧಿಯೆಂದು ಹೆಸರು ಈ ಸ್ತೋಮವೃದ್ಧಿಯ ಗಾನಗಳನ್ನು ಉದ್ಗಾತೃಮೊದಲಾದವರು ಮಾಡಿದಮೇಲೆ ಅದಕ್ಕೆ ಅನುಸಾರವಾಗಿ ಎಂದರೆ ಸ್ತೋಮವೃದ್ಧಿಗೆ ಸಮನಾಗುವಂತೆ ಕೆಲವು ಅಧಿಕ ಸಂಖ್ಯೆಯ ಋಕ್ಕುಗಳನ್ನು

ಹೋತೃವರ್ಗದ ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ, ಅಚ್ಛಾವಾಕ ಎಂಬ ಋತ್ವಿಜರು ಪಠಿಸಬೇಕಾಗಿರುವುದು. ಎಂದರೆ ತ್ರಿವೃದಾದಿಸ್ತೋಮಗಳಲ್ಲಿ ಗಾನಮಾಡಬೇಕಾದ ಕ್ಲೃಪ್ತಸಂಖ್ಯೆಯ ಮಂತ್ರಗಳನ್ನು ಹೇಳಿದ ಮೇಲೆ ಉದ್ಗಾತೃ ಮೊದಲಾದ ಸಾಮಕರು ಇನ್ನೂ ಕೆಲವು ಹೆಚ್ಚು ಮಂತ್ರಗಳನ್ನು ಗಾನಮಾಡುವ ಸಂದರ್ಭದಲ್ಲಿ ಅದಕ್ಕೆ ಸಮನಾಗಿ ಹೊಂದಿಕೊಳ್ಳುವಂತೆ ಅಷ್ಟೇಸಂಖ್ಯೆಯ ಋಕ್ಕುಗಳನ್ನು ಹೋತೃವರ್ಗದ ಮೈತ್ರಾವರುಣಾದಿಗಳು ಪಠಿಸಬೇಕು. ಹೀಗೆ ಕ್ಲೃಪ್ತಸಂಖ್ಯೆಗಿಂತ ಹೆಚ್ಚಾಗಿ ಗಾನಮಾಡುವ ಸಾಮಮಂತ್ರಗಳಿಗೆ ಅಥವಾ ಸ್ತೋಮಗಳಿಗೆ **ಸ್ತೋಮವೃದ್ಧಿ** ಎಂದೂ ಅದರಂತೆ ಕ್ಲೃಪ್ತಸಂಖ್ಯೆಗಿಂತ ಹೆಚ್ಚಾಗಿ ಪಠಿಸುವ ಋಕ್ಕುಗಳಿಗೆ **ಆವಾಪ** ವೆಂದೂ ಹೆಸರು ಪ್ರಸಕ್ತ ಸಂದರ್ಭದಲ್ಲಿ ಈ ಆವಾಪಋಕ್ಕುಗಳ ಪಠನೆಗಾಗಿ **ಸುರೂಪಕೃತ್ನುಮೂತಯೇ** ಎಂದು ಮೊದಲಾಗುವ ಆರು ಸೂಕ್ತಗಳನ್ನು (ಋ. ಸಂ. ೧-೪ ರಿಂದ ಋ. ಸಂ. ೧-೯ರ ವರೆಗಿನ ಸೂಕ್ತಗಳು) ಪಠಿಸುವರು.’ ಎಂದರೆ ಆವಾಪಕ್ಕಾಗಿ ಆರು ಸೂಕ್ತಗಳನ್ನೂ ಪೂರ್ತಿಯಾಗಿ ಪಠಿಸಬೇಕೆಂದಲ್ಲ. ಉದ್ಗಾತೃ ಮೊದಲಾದ ಸಾಮಕರು ಎಷ್ಟು ಋಕ್ಕುಗಳನ್ನು ಗಾನಮಾಡುವರೋ ಅಷ್ಟೇ ಋಕ್ಕುಗಳನ್ನು (ಸುರೂಪಕೃತ್ನು ಮೊದಲಾದ ಮೇಲೆ ಹೇಳಿದ ಸೂಕ್ತಗಳಲ್ಲಿರುವ ಅಷ್ಟೇ ಋಕ್ಕುಗಳನ್ನು) ಪಠಿಸಬೇಕೆಂದರ್ಥವು. ಈರೀತಿ ಆವಾಪಕ್ರಮದಲ್ಲಿಯೂ ಎಂದರೆ ಅಧಿಕ ಋಕ್ಕುಗಳನ್ನು ಪಠಿಸುವುದಕ್ಕೂ ಒಂದು ಕ್ರಮವಿರುವುದು ಅದನ್ನು ಆಶ್ವಲಾಯನರು ತಮ್ಮ ಶ್ರೌತಸೂತ್ರ ದಲ್ಲಿ ಈರೀತಿ ಹೇಳಿರುವರು.—

> **ನಿತ್ಯಾಧಿಕಂ ಸ್ತೋಮಕರಣಾತ್ಪಂಚ ಸಪ್ತದಶೇ ನವೈಕವಿಂಶೇ ದ್ವಾದಶ ಚತು-**
> **ರ್ವಿಂಶೇ ಪಂಚದಶ ತ್ರಿಣವ ಏಕವಿಂಶತಿಂ ತ್ರಯಸ್ತ್ರಿಂಶೇ ದ್ವಾತ್ರಿಂಶತಂ ಚತು-**
> **ಶ್ಚತ್ವಾರಿಂಶೇ ಷಟ್ತ್ರಿಂಶತಮಷ್ಟಾಚತ್ವಾರಿಂಶೇ ॥ ಇತಿ ॥**

ಎಂದರೆ ಸಪ್ತದಶಸ್ತೋಮವನ್ನು ಪಠಿಸುವ ಸಂದರ್ಭದಲ್ಲಿ ಆವಾಪವು ಎಂದರೆ ಅಧಿಕ ಋಕ್ಕುಗಳ ಪಠನೆಯು ಐದು ಋಕ್ಕುಗಳಾಗಿರಬೇಕು. ಏಕವಿಂಶಸ್ತೋಮಕ್ಕೆ ಆವಾಪವು ಒಂಭತ್ತು ಋಕ್ಕುಗಳು ; ಚತುರ್ವಿಂಶಸ್ತೋಮಕ್ಕೆ ಹನ್ನೆರಡು ಋಕ್ಕುಗಳು ; ತ್ರಿಣವಸ್ತೋಮಕ್ಕೆ ಹದಿನೈದು ಋಕ್ಕುಗಳು ; ತ್ರಯಸ್ತ್ರಿಂಶಸ್ತೋಮಕ್ಕೆ ಇಪ್ಪತ್ತೊಂದು ಋಕ್ಕುಗಳು ; ಚತುಶ್ಚತ್ವಾರಿಂಶಸ್ತೋಮಕ್ಕೆ ಮೂವತ್ತೆರಡು ಋಕ್ಕುಗಳು ; ಅಷ್ಟಾಚತ್ವಾರಿಂಶಸ್ತೋಮಕ್ಕೆ ಮೂವತ್ತಾರು ಋಕ್ಕುಗಳು ” ಎಂದು. ಈ ಕ್ರಮವನ್ನೇ ಭಾಷ್ಯಕಾರರು ಸುರೂಪಕೃತ್ನುಮೂತಯೇ ಎಂಬ ಸೂಕ್ತದ ವಿನಿಯೋಗವನ್ನು ಹೇಳುವಾಗ—“ ಅಭಿಪ್ಲವಷಡಹೇ ಬ್ರಾಹ್ಮಣಾಚ್ಛಂಸಿನಃ ಪ್ರಾತಸ್ಸವನೇ ಸ್ತೋಮ ವೃದ್ಧಾವಾವಾಪಾರ್ಥಾನಿ ಸುರೂಪಕೃತ್ನುಮೂತಯ ಇತ್ಯಾದೀನಿ ಷಟ್ ಸೂಕ್ತಾನಿ” ಎಂಬ ವಾಕ್ಯದಿಂದ ವಿವರಿ ಸಿರುವರು.

**ಉಕ್ಥೈಃ ಪರಿಭೂಷತಿ** ಎಂದು ಹೇಳಿರುವಂತೆ **ಸ್ತೋಮೈಃ ಆಭೂಷತಿ।** ಎಂದು ವ್ರತವನ್ನು ಪೂರ್ಣವಾಗಿ ಮಾಡತಕ್ಕ ಕ್ರಮವನ್ನೂ ತಿಳಿಸಿದೆ. **ಉಕ್ಥ**ದಂತೆಯೇ ಸ್ತೋಮವೂ ಪ್ರಭಾವಪೂರಿತವಾದುದು. ಸ್ತೋಮದ ಸ್ವರೂಪವನ್ನು ವೈವಿಧ್ಯವನ್ನೂ ಋಗ್ವೇದಸಂಹಿತೆಯ ೨ ನೇ ಭಾಗದ 138 ರಿಂದ 150 ನೇ ಪೇಜುಗಳಲ್ಲಿ ವಿಶದವಾಗಿ ತಿಳಿಸಿದೆ. ಇಲ್ಲಿ ಸ್ತೋಮಪಠನದಿಂದ ಲಭಿಸತಕ್ಕ ಪ್ರಯೋಜನಗಳನ್ನು ಮಾತ್ರ ತಿಳಿಸಲಾಗುತ್ತದೆ.

> **ಪ್ರಾತಸ್ಸವನೇ ವೈ ಗಾಯತ್ರೇಣ ಛಂದಸಾ ತ್ರಿವೃತೇ ಸ್ತೋಮಾಯ ಜ್ಯೋತಿರ್ದಧದೇತಿ ತ್ರಿವೃತಾ**
> **ಬ್ರಹ್ಮವರ್ಚಸೇನ ಪಂಚದಶಾಯ ಜ್ಯೋತಿರ್ದಧದೇತಿ ಪಂಚದಶೇನೌಜಸಾ ವೀರ್ಯೇಣ**

ಸಪ್ತದಶಾಯ ಜ್ಯೋತಿರ್ದಧದೇತಿ ಸಪ್ತದಶೇನ ಪ್ರಾಜಾಪತ್ಯೇನ ಪ್ರಜನನೇನೈಕವಿಗ್ಂಶಾಯ ಜ್ಯೋತಿರ್ದಧದೇತಿ ಸ್ತೋಮ ಏವ ತತ್ಸ್ತೋಮಾಯ ಜ್ಯೋತಿರ್ದಧದೇತ್ಯಥೋ ಸ್ತೋಮ ಏವ ಸ್ತೋಮಮಭಿ ಪ್ರಣಯತಿ ಯಾವಂತೋ ವೈ ಸ್ತೋಮಾಸ್ತಾವಂತಃ ಕಾಮಾಸ್ತಾವಂತೋ ಲೋಕಾಸ್ತಾವಂತಿ ಜ್ಯೋತೀಗ್ಷ್ಯೇತಾವತ ಏವ ಸ್ತೋಮಾನೇತಾವತಃ ಕಾಮಾನೇತಾವತೋ ಲೋಕಾನೇತಾವಂತಿ ಜ್ಯೋತೀಗ್ಷ್ಯವರುಂಧೇ ॥

(ತೈ. ಸಂ. ೭-೧-೨-೧)

ಎಂಬ ತೈತ್ತಿರೀಯಸಂಹಿತಾವಾಕ್ಯಗಳಲ್ಲಿ ಸ್ತೋಮಗಳ ಪ್ರಭಾವಗಳನ್ನು ತಿಳಿಸಿದೆ. ಯಜ್ಞಕರ್ತನು ಪ್ರಾತಃಸವನ ಕಾಲದಲ್ಲಿ ಗಾಯತ್ರೀಛಂದಸ್ಸಿನಿಂದ ತ್ರಿವೃತ್ಸ್ತೋಮವನ್ನು ಮಹತ್ತ್ವದ ಸ್ಥಾನದಲ್ಲಿರಿಸುತ್ತಾನೆ. ಹೀಗೆಯೇ ಜ್ಯೋತೀರೂಪವಾದ ತ್ರಿವೃತದಿಂದ ಪಂಚದಶಸ್ತೋಮವನ್ನೂ, ವೀರ್ಯಯುತವಾದ ಪಂಚದಶದಿಂದ ಸಪ್ತದಶಸ್ತೋಮವನ್ನೂ, ಪ್ರಜಾಪತಿಯೊಡನೆ ಸಂಬಂಧವನ್ನು ಹೊಂದಿ ಪ್ರಜನನಕ್ಕೆ ಸಾಧಕವಾದ ಸಪ್ತದಶಸ್ತೋಮದಿಂದ ಏಕವಿಂಶಸ್ತೋಮವನ್ನೂ ತೇಜೋಯುತವಾಗುವಂತೆ ಮಾಡುತ್ತಾನೆ. ಹೀಗೆಯೇ ಒಂದು ಬಗೆಯ ಸ್ತೋಮವು ಇನ್ನೊಂದು ವಿಧವಾದ ಸ್ತೋಮಕ್ಕೆ ಪ್ರಭಾವವನ್ನೂ ತೇಜಸ್ಸನ್ನೂ ಉಂಟುಮಾಡುತ್ತದೆ. ಸ್ತೋಮದಲ್ಲಿ ಎಷ್ಟು ಬಗೆಗಳಿವೆಯೋ ಅಷ್ಟು ಲೋಕಗಳೂ, ಅಷ್ಟು ಬಗೆಯ ತೇಜಸ್ಸುಗಳೂ, ಅಷ್ಟು ವಿಧವಾದ ಇಷ್ಟಾರ್ಥಗಳೂ ಇವೆ. ಮತ್ತು ಸ್ತೋಮ ಪಠನದಿಂದ ಯಜಮಾನನು ಅಷ್ಟುವಿಧವಾದ ಲೋಕಗಳನ್ನೂ, ತೇಜಸ್ಸುಗಳನ್ನೂ, ಮತ್ತು ಇಷ್ಟಾರ್ಥಗಳನ್ನೂ ಪಡೆಯುವನು ಎಂದು ಸ್ತೋಮದ ಪ್ರಭಾವವನ್ನು ತಿಳಿಸಿ, ಅನಂತರ ಸ್ತೋಮಪಠನವಿಲ್ಲದಿರುವುದರಿಂದ ಆಗುವ ನಷ್ಟವನ್ನೂ ತಿಳಿಸಿದೆ.

ಬ್ರಹ್ಮವಾದಿನೋ ವದಂತಿ ಸತ್ತ್ರೈ ಯಜೇತ ಯೋಽಗ್ನಿಷ್ಟೋಮೇನ ಯಜಮಾನೋಽಥ ಸರ್ವಸ್ತೋಮೇನ ಯಜೇತೇತಿ ಯಸ್ಯ ತ್ರಿವೃತಮಂತರ್ಯಂತಿ ಪ್ರಾಣಾಗ್‌ಸ್ತಸ್ಯಾಂತರ್ಯಂತಿ ಪ್ರಾಣೇಷು ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ಪಂಚದಶಮಂತರ್ಯಂತಿ ವೀರ್ಯಂ ತಸ್ಯಾಂತರ್ಯಂತಿ ವೀರ್ಯೇ ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ಸಪ್ತದಶಮಂತರ್ಯಂತಿ ಪ್ರಜಾಂ ತಸ್ಯಾಂತರ್ಯಂತಿ ಪ್ರಜಾಯಾಂ ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯೈಕ-ವಿಗ್ಂಶಮಂತರ್ಯಂತಿ ಪ್ರತಿಷ್ಠಾಂ ತಸ್ಯಾಂತರ್ಯಂತಿ ಪ್ರತಿಷ್ಠಾಯಾಂ ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ತ್ರಿಣವಮಂತರ್ಯಂತ್ಯೃತೂಗ್ಂಶ್ಚ ತಸ್ಯ ನ-ಕ್ಷತ್ರಿಯಾಂ ಚ ವಿರಾಜಮಂತರ್ಯಂತ್ಯೃತುಷು ಮೇಽಪ್ಯಸನ್ನಕ್ಷತ್ರಿಯಾಯಾಂ ಚ ವಿರಾಜೇತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ತ್ರಯಸ್ತ್ರಿಗ್ಂಶಮಂತರ್ಯಂತಿ ದೇವತಾಸ್ತಸ್ಯಾಂತರ್ಯಂತಿ ದೇವತಾಸು ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯೋ ವೈ ಸ್ತೋಮಾನಾಮವಮಂ ಪರಮತಾಂ ಗಚ್ಛಂತಂ ವೇದ ಪರಮತಾಮೇವ ಗಚ್ಛತಿ ತ್ರಿವೃದ್ವೈ ಸ್ತೋಮಾನಾಮವಮಸ್ತ್ರಿವೃತ್ಪರಮೋ ಯ ಏವಂ ವೇದ ಪರಮತಾಮೇವ ಗಚ್ಛತಿ ॥

(ತೈ. ಸಂ. ೭-೧-೩-೧, ೨, ೩,)

ಅಗ್ನಿಷ್ಟೋಮದಿಂದ ಯಜ್ಞಮಾಡತಕ್ಕವರು ಸರ್ವಸ್ತೋಮದಿಂದಲೂ ಮಾಡಬೇಕೆಂದು ಶಾಸ್ತ್ರಜ್ಞರು ವಿಧಿಸಿದ್ದಾರೆ. ಈ ವಿಧಿಯಲ್ಲಿ ತ್ರಿವೃತ್‌ಸ್ತೋಮವನ್ನು ಬಿಟ್ಟರೆ ಅವನ ಮುಖ್ಯಪ್ರಾಣವೇ ಮಾಯವಾಗುತ್ತದರಿಂದ ಯಜಮಾನನು ಈ ಯಜ್ಞವು ನನ್ನ ಮುಖ್ಯಪ್ರಾಣದಲ್ಲಿ ಅಂತರ್ಗತವಾಗಲಿ ಎಂಬ ಉದ್ದಿಶ್ಯದಿಂದ ಯಾಗಮಾಡುತ್ತಾನೆ. ಹೀಗೆಯೇ ಪಂಚದಶಸ್ತೋಮವನ್ನು ಬಿಟ್ಟರೆ ಶಕ್ತ್ಯಭಾವವಾಗುವುದರಿಂದಲೂ, ಏಕವಿಂಶಸ್ತೋಮವನ್ನು ಬಿಟ್ಟರೆ ತನ್ನ ಜೀವನಾಧಾರವೇ ಕಳಚಿಹೋಗುವುದರಿಂದಲೂ, ತ್ರಿಣವ ಸ್ತೋಮವನ್ನು ಬಿಟ್ಟರೆ ತನ್ನ ಪ್ರಯೋಜನಕ್ಕಾಗಿ ಇರತಕ್ಕ ಋತುಗಳೂ ನಕ್ಷತ್ರಗಳ ಶಕ್ತಿಗಳೂ ತನ್ನ ಭಾಗಕ್ಕೆ ಸಹಾಯಕವಾಗದಿರುವುದರಿಂದಲೂ ತ್ರಯಸ್ತ್ರಿಂಶಸ್ತೋಮವನ್ನು ಬಿಟ್ಟರೆ ಮುಖ್ಯವಾದ ದೇವತಾಸಾನ್ನಿಧ್ಯವೇ ಇಲ್ಲದಿರುವುದರಿಂದಲೂ ಸಹ ಯಜಮಾನನು ಶಕ್ತಿಸಂಪಾದನೆಗಾಗಿ ಪಂಚದಶಸ್ತೋಮದಿಂದಲೂ ಸಂತತಿ ಲಾಭಕ್ಕಾಗಿ ಸಪ್ತದಶಸ್ತೋಮದಿಂದಲೂ ಜೀವನಾಧಾರಕ್ಕಾಗಿ ಏಕವಿಂಶಸ್ತೋಮದಿಂದಲೂ ಋತುಗಳ ಮತ್ತು ನಕ್ಷತ್ರಗಳ ಪ್ರಭಾವಗಳ ಪ್ರಯೋಜನವನ್ನು ಪಡೆಯುವುದಕ್ಕಾಗಿ ತ್ರಿಣವಸ್ತೋಮದಿಂದಲೂ ತನ್ನ ಮುಖ್ಯದೇವತಾ ಸಾನ್ನಿಧ್ಯದ ಲಾಭಕ್ಕಾಗಿ ತ್ರಯಸ್ತ್ರಿಂಶಸ್ತೋಮದ ಪಠನದಿಂದಲೂ ಯಾಗವನ್ನು ನೆರವೇರಿಸುತ್ತಾನೆ. ಯಾವ ಯಜಮಾನನು ಸ್ತೋಮಗಳಲ್ಲೆಲ್ಲಾ ಪ್ರಥಮಸ್ಥಾನವನ್ನು ಪಡೆದಿರುವ ತ್ರಿವೃತ್‌ಸ್ತೋಮದ ಮಹಿಮೆಯನ್ನು ತಿಳಿಯುತ್ತಾನೆಯೋ ಆ ಯಜಮಾನನು ಯಜ್ಞಕರ್ತರಲ್ಲಿ ಮೊದಲನೆಯ ಸ್ಥಾನವನ್ನು ಪಡೆಯುತ್ತಾನೆ. ಮತ್ತು ತ್ರಿವೃತ್‌ಸ್ತೋಮದೊಡನೆ ಕೂಡಿದ ಅಗ್ನಿಷ್ಟೋಮದಿಂದ ತೇಜಸ್ಸನ್ನೂ ಪಂಚದಶಸ್ತೋಮದಿಂದ ವೀರ್ಯವನ್ನೂ ಸಪ್ತದಶದಿಂದ ಅನ್ನವನ್ನೂ ಏಕವಿಂಶದಿಂದ ಪ್ರತಿಷ್ಠೆಯನ್ನೂ ತ್ರಿಣವದಿಂದ ಜಯವನ್ನೂ ತ್ರಯಸ್ತ್ರಿಂಶದಿಂದ ಮಹತ್ತ್ವವನ್ನೂ ಪಡೆಯುತ್ತಾನೆ.

ಸ್ತೋಮಮಹದುರುಗಾಯಂ ಪ್ರತಿಷ್ಠಾಂ ದೃಷ್ಟ್ವಾ ಧೀರೋ ನಚಿಕೇತೋಽತ್ಯಸ್ರಾಕ್ಷೀಃ ॥

(ಕ. ಉ. ೨-೧೧)

ಎಂದು ಕಠೋಪನಿಷತ್ತಿನಲ್ಲಿ ಸ್ತೋಮದ ಮಹತ್ವವನ್ನೂ ಅದರಿಂದ ಲಭಿಸತಕ್ಕ ಆಧ್ಯಾತ್ಮಿಕವಾದ ಶಾಂತಿಯನ್ನೂ ತೋರಿಸಿದೆ.

ಯೇನ ಚ್ಛಂದಸಾ ಸ್ತೋಷ್ಯನ್ಸ್ಯಾತ್ತಚ್ಛಂದ ಉಪಧಾವೇದ್ಯೇನ ಸ್ತೋಮೇನ ಸ್ತೋಷ್ಯ-
ಮಾಣಃ ಸ್ಯಾತ್ತಂ ಸ್ತೋಮಮುಪಧಾವೇತ್ ॥

(ಛಾ. ಉ. ೧-೩-೧೦)

ಎಂದು ಛಾಂದೋಗ್ಯದಲ್ಲಿಯೂ ಸಹ ಉದ್ಗೀಥದ ಮಹತ್ವವನ್ನು ವರ್ಣಿಸುತ್ತಾ ಯಾವ ಸ್ತೋಮದಿಂದ ಆಯಾಸನ್ನಿವೇಶಕ್ಕನುಗುಣವಾಗಿ ಸ್ತೋತ್ರವು ಪೂರ್ಣವಾಗುತ್ತದೆಯೋ ಆ ಸ್ತೋಮವನ್ನಾಶ್ರಯಿಸಿ ಧ್ಯಾನಮಾಡಬೇಕೆಂದು ತಿಳಿಸಿದೆ.

ಇದೇ ರೀತಿ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಹೋತ್ರಾದಿಗಳಿಂದ ಕರ್ಮಕಾಲದಲ್ಲಿ ಪಠಿತವಾಗತಕ್ಕ ಗಾನಾತ್ಮಕವಾದುದೂ ಅತಿಶಯವಾದ ಪ್ರಯೋಜನವನ್ನು ಕೊಡತಕ್ಕದ್ದೂ, ಕರ್ಮಕ್ಕೆ ಅಲಂಕಾರಭೂತವಾದದ್ದೂ ಆದ ಸ್ತೋತ್ರವೆಂದರ್ಥ. ಸಾಯಣರು ಸ್ತೋತ್ರೈರ್ಗಾನಯುಕ್ತಮಂತ್ರಸಾಧ್ಯೈಃ । ಎಂದು ವಿವರಿಸಿದ್ದಾರೆ.

ಸಂಹಿತಾಪಾಠಃ

**ಶುಭ್ರಂ ನು ತೇ ಶುಷ್ಮಂ ವರ್ಧಯಂತಃ ಶುಭ್ರಂ ವಜ್ರಂ ಬಾಹ್ವೋರ್ದಧಾನಾಃ ।**
**ಶುಭ್ರಸ್ತ್ವಮಿಂದ್ರ ವಾವೃಧಾನೋ ಅಸ್ಮೇ ದಾಸೀರ್ವಿಶಃ ಸೂರ್ಯೇಣ ಸಹ್ಯಾಃ ॥ ೪ ॥**

ಪದಪಾಠಃ

ಶುಭ್ರಂ । ನು । ತೇ । ಶುಷ್ಮಂ । ವರ್ಧಯಂತಃ । ಶುಭ್ರಂ । ವಜ್ರಂ । ಬಾಹ್ವೋಃ । ದಧಾನಾಃ ।
ಶುಭ್ರಃ । ತ್ವಂ । ಇಂದ್ರ । ವವೃಧಾನಃ । ಅಸ್ಮೇ ಇತಿ । ದಾಸೀಃ । ವಿಶಃ । ಸೂರ್ಯೇಣ । ಸಹ್ಯಾಃ ॥ ೪ ॥

ಸಾಯಣಭಾಷ್ಯಂ

ಹೇ ಇಂದ್ರ ತೇ ತವ ಶುಭ್ರಂ ಶೋಭನಂ ಶುಷ್ಮಂ ಬಲಂ ಸ್ತೋತ್ರೈರ್ವರ್ಧಯಂತಃ ಶುಭ್ರಂ ದೀಪ್ತಂ ವಜ್ರಮಾಯುಧಂ ನು ಕ್ಷಿಪ್ರಂ ತವ ಬಾಹ್ವೋರ್ದಧಾನಾ ನಿದಧಾನಾಃ । ಸ್ತೂಯಮಾನೋ ಹೀಂದ್ರೋಽಸುರವಧಾಯ ವಜ್ರಮಾದತ್ತ ಇತೀತ್ಥಂರೂಪೇಣಾಯುಧಂ ನಿದಧಾನಾ ಭವಾಮಃ । ವಾವೃಧಾನಃ ಸ್ತೋತ್ರೈರ್ವರ್ಧಮಾನಃ ಶುಭ್ರಸ್ತೇಜಸಾ ಯುಕ್ತಸ್ತ್ವಮಸ್ಮೇ ಅಸ್ಮಾಕಂ ದಾಸೀರುಪಕ್ಷಪಯಿತ್ರೀರ್ವಿಶ ಆಸುರೀಃ ಪ್ರಜಾಃ ಸೂರ್ಯೇಣ ಸುಷ್ಠು ಪ್ರೇರಕೇಣ । ಆಯುಧಂ ಹಿ ಪ್ರೇರಯತಿ ತ್ವಂ ಯುಧ್ಯಸ್ವೇತಿ । ಏವಂರೂಪೇಣ ಬಾಹ್ವೋರ್ನಿಹಿತೇನ ವಜ್ರೇಣ ಸಹ್ಯಾಃ । ಅಭಿಭವ । ಸಹತೇರ್ವ್ಯತ್ಯಯೇನ ಲಿಙಃ ಪರಸ್ಮೈಪದಂ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ಶುಭ್ರಂ—ಶೋಭನಾತ್ಮಕವಾದ । ಶುಷ್ಮಂ—ಬಲವನ್ನು । ವರ್ಧಯಂತಃ—(ಸ್ತೋತ್ರಾದಿಗಳಿಂದ) ಬೆಳೆಯುವಂತೆ ಮಾಡುತ್ತಾ । ಶುಭ್ರಂ—ಪ್ರಕಾಶಮಾನವಾದ । ವಜ್ರಂ—ವಜ್ರಾಯುಧವನ್ನು । ನು—ಶೀಘ್ರವಾಗಿಯೇ । ಬಾಹ್ವೋಃ—ನಿನ್ನ ಬಾಹುಗಳಲ್ಲಿ । ದಧಾನಾಃ—ಇಡುತ್ತೇವೆ । ವಾವೃಧಾನಃ—(ಸ್ತೋತ್ರಾದಿಗಳಿಂದ) ಪ್ರವೃದ್ಧನಾದವನೂ । ಶುಭ್ರಃ—ತೇಜೋಯುತನಾದವನೂ ಆದ । ತ್ವಂ—ನೀನು । ಅಸ್ಮೇ—ನಮ್ಮ । ದಾಸೀಃ—ಹಿಂಸಕರಾದ । ವಿಶಃ—ಆಸುರೀಪ್ರಜೆಗಳನ್ನು । ಸೂರ್ಯೇಣ—ಶ್ರೇಷ್ಠವಾಗಿ ಪ್ರಯೋಗಿಸತಕ್ಕ ಆಯುಧದಿಂದ । ಸಹ್ಯಾಃ—ಸೋಲಿಸು.

ಭಾವಾರ್ಥ

ಎಲೈ ಇಂದ್ರನೇ, ನಿನ್ನ ಶೋಭನಾತ್ಮಕವಾದ ಬಲವನ್ನು ಸ್ತೋತ್ರಾದಿಗಳಿಂದ ಬೆಳೆಯುವಂತೆ ಮಾಡುತ್ತಾ ಪ್ರಕಾಶಮಾನವಾದ ವಜ್ರಾಯುಧವನ್ನು ಶೀಘ್ರವಾಗಿಯೇ ನಿನ್ನ ಬಾಹುಗಳಲ್ಲಿಡುತ್ತೇವೆ- ಪ್ರವೃದ್ಧನಾದವನೂ,

ತೇಜೋಯುತನಾದವನೂ ಆದ ನೀನು ನಮ್ಮ ಹಿಂಸಕರಾದ ಆಸುರೀಪ್ರಜೆಗಳನ್ನು ಶ್ರೇಷ್ಠವಾಗಿ ಪ್ರಯೋಗಿಸತಕ್ಕ ಆಯುಧದಿಂದ ಸೋಲಿಸು.

English Translation

We are invigorating your brilliant strength (by our praises), and placing the thunderbolt in your hands : do you, Indra, radiant, increasing in strength, and (encouraged) by the sun, overpower, for our (good), the servile people.

ವಿಶೇಷವಿಷಯಗಳು

ಅಸ್ಮೇ—ಅಸ್ಮೇ ಎಂಬ ಶಬ್ದವು ಏಳು ವಿಭಕ್ತ್ಯರ್ಥಗಳಲ್ಲಿಯೂ ಉಪಯೋಗಿಸಲ್ಪಡುವುದು. ಎಂದರೆ ನಾವು, ನಮ್ಮನ್ನು, ನಮ್ಮಿಂದ, ಇತ್ಯಾದ್ಯರ್ಥಗಳಲ್ಲಿ ಈ ಪದದ ಪ್ರಯೋಗವಿರುವುದು. ಈ ಋಕ್ಕಿನಲ್ಲಿ ಷಷ್ಠೀವಿಭಕ್ತಿಯ ಅರ್ಥವಾದ ನಮ್ಮ ಎಂಬರ್ಥವನ್ನು ಹೇಳಬೇಕು. ಅಸ್ಮೇ ಎಂಬ ಶಬ್ದದ ವಿವಿಧ ಪ್ರಯೋಗಗಳನ್ನು ಉದಾಹರಣೆ ಸಹಿತವಾಗಿ ಋ. ಸಂ. ಭಾಗ 6, ಪೇಜು 538 ; 9-82 ; 10-170 ಇತ್ಯಾದಿ ಸ್ಥಳಗಳಲ್ಲಿ ವಿವರಿಸಲಾಗಿದೆ.

ದಾಸೀ ವಿಶಃ—ಆಸುರೀಃ ಪ್ರಜಾಃ । ದಾಸ, ದಸ್ಯು ಎಂಬ ಪದಗಳ ವಿವರಣೆಯನ್ನೂ ಇತರ ವಿಷಯ ಗಳನ್ನೂ ನಾವು ಈ ಭಾಗದಪುಟಗಳಲ್ಲಿ 580-582 ವಿಸ್ತಾರವಾಗಿ ವಿವರಿಸಿದೇವೆ.

ಸೂರ್ಯೇಣ—ಸುಷ್ಠು ಪ್ರೇರಕೇಣ । ಇಲ್ಲಿ ಸೂರ್ಯೇಣ ಎಂಬ ಶಬ್ದಕ್ಕೆ ಭಾಷ್ಯಕಾರರು ಚೆನ್ನಾಗಿ ಪ್ರೇರಿಸುವ ಎಂದು ಅರ್ಥಮಾಡಿ ಇಂದ್ರನಿಗೆ ವಿಶೇಷಣಪದವನ್ನಾಗಿ ಹೇಳಿರುವರು.

---

ಸಂಹಿತಾಪಾಠಃ

ಗುಹಾ ಹಿತಂ ಗುಹ್ಯಂ ಗೂಳ್ಹಮಪ್ಸ್ವಪೀವೃತಂ ಮಾಯಿನಂ ಕ್ಷಿಯಂತಂ ।
ಉತೋ ಅಪೋ ದ್ಯಾಂ ತಸ್ತಭ್ವಾಂಸಮಹನ್ನಹಿಂ ಶೂರ ವೀರ್ಯೇಣ ॥ ೫ ॥

ಪದಪಾಠಃ

ಗುಹಾ । ಹಿತಂ । ಗುಹ್ಯಂ । ಗೂಳ್ಹಂ । ಅಪ್ಽಸು । ಅಪಿಽವೃತಂ । ಮಾಯಿನಂ । ಕ್ಷಿಯಂತಂ ।

ಉತೋ ಇತಿ । ಅಪಃ । ದ್ಯಾಂ । ತಸ್ತಭ್ವಾಂಸಂ । ಅಹನ್ । ಅಹಿಂ । ಶೂರ । ವೀರ್ಯೇಣ ॥ ೫ ॥

ಸಾಯಣಭಾಷ್ಯಂ

ಹೇ ಶೂರೇಂದ್ರ ಗುಹಾ ಗುಹಾಯಾಂ ಹಿತಂ ನಿಹಿತಂ ಅತ ಏವ ಗುಹ್ಯಮಪ್ರಕಾಶ್ಯಂ ಗೂಳ್ಹಂ ಗೂಢಮಪೀವೃತಂ ತಿರೋಹಿತಂ । ಅತ್ರೈಕಸ್ಮಿಂಸ್ತಿರೋಧಾನರೂಪೇಽರ್ಥೇ ಪುನರುಕ್ತ್ಯಸ್ತಿರೋಧಾನ-

ಭೂಯಸ್ತ್ವಪ್ರತಿಪಾದನಪರಾಃ । ಅಭ್ಯಾಸೇ ಹಿ ಭೂಯಾನರ್ಥೋ ಭವತಿ । ಯಥಾಹೋ ದರ್ಶನೀಯಾ-ಹೋ ದರ್ಶನೀಯೇತಿ । ತಾದೃಶಂ ಮಾಯಿನಂ ಮಾಯಾವಿನಮಸುರಂ ಕ್ಷಿಯಂತಂ ನಿವಸಂತಂ ಉತೋ ಅಪಿ ಚಾಪೋ ದ್ಯಾಂ ದಿವಂ ಚ ತಸ್ತಭ್ವಾಂಸಂ ಸ್ವಸಾಮರ್ಥ್ಯೇನ ಸ್ತಂಭಯಂತಂ ಇತ್ಥಂಭೂತಮಹಿಮ-ಸುರಂ ಮೇಘಂ ವಾ ವೀರ್ಯೇಣ ಸಾಮರ್ಥ್ಯಭೂತೇನ ವಜ್ರೇಣಾಹನ್ । ಹತವಾನಸಿ ॥ ಹನಹಿಂಸಾ-ಗತ್ಯೋರಿತ್ಯಸ್ಯ ಲಙಃ ರೂಪಂ ॥

॥ ಪ್ರತಿಪದಾರ್ಥ ॥

**ಶೂರ**—ಪರಾಕ್ರಮಿಯಾದ ಇಂದ್ರನೇ । **ಗುಹಾ ಹಿತಂ**—ಗುಹೆಯಲ್ಲಿ ಅಡಗಿರುವವನೂ । **ಗುಹ್ಯಂ**—ಪ್ರಕಾಶವಿಲ್ಲದಿರುವವನೂ । **ಗೂಳ್ಹಂ**—ಗೂಢವಾಗಿರುವವನೂ । **ಅಪೀವೃತಂ**—ಮರೆಸಲ್ಪಟ್ಟಿರುವವನೂ । **ಮಾಯಿನಂ**—ವಂಚಕಬುದ್ಧಿಯುಳ್ಳವನೂ । **ಅಪ್ಸು**—ಉದಕಗಳಲ್ಲಿ। **ಕ್ಷಿಯಂತಂ**—ಗುಪ್ತವಾಗಿ ವಾಸಿಸುವವನೂ । **ಉತೋ**—ಅಲ್ಲದೇ । **ಅಪಃ**—ಉದಕಗಳನ್ನೂ । **ದ್ಯಾಂ**—ದ್ಯುಲೋಕವನ್ನೂ । **ತಸ್ತಭ್ವಾಂಸಂ**—(ತನ್ನ ಸಾಮರ್ಥ್ಯದಿಂದ) ತಡೆದಿರುವವನೂ ಆದ । **ಅಹಿಂ**—ಅಸುರನನ್ನು । **ವೀರ್ಯೇಣ**—ಸ್ವಸಾಮರ್ಥ್ಯದಿಂದ ಕೂಡಿದ ವಜ್ರದಿಂದ । **ಅಹನ್**—ಕೊಂದಿರುವೆ.

ಭಾವಾರ್ಥ

ಪರಾಕ್ರಮಿಯಾದ ಇಂದ್ರನೇ, ಗುಹೆಯಲ್ಲಿ ಅಡಗಿರುವವನೂ, ಪ್ರಕಾಶವಿಲ್ಲದಿರುವವನೂ, ಗೂಢವಾಗಿರುವವನೂ, ಮರೆಸಲ್ಪಟ್ಟಿರುವವನೂ, ವಂಚಕಬುದ್ಧಿಯುಳ್ಳವನೂ, ಉದಕಗಳಲ್ಲಿ ಗುಪ್ತವಾಗಿ ವಾಸಿಸುವವನೂ, ಅಲ್ಲದೇ ಉದಕಗಳನ್ನೂ, ದ್ಯುಲೋಕವನ್ನೂ ತನ್ನ ಸಾಮರ್ಥ್ಯದಿಂದ ತಡೆದಿರುವವನೂ ಆದ ಅಸುರನನ್ನು ನಿನ್ನ ಸ್ವಸಾಮರ್ಥ್ಯದಿಂದ ಕೂಡಿದ ವಜ್ರದಿಂದ ಕೊಂದಿರುವೆ.

English Translation

Indra, hero, you have slain by your prowess the glorified Ahi, hidden privily in a cave, lurking in concealment, covered by the waters in which he was abiding, and arresting the rains in the sky.

ವಿಶೇಷವಿಷಯಗಳು.

**ಗುಹಾ ಹಿತಂ**—ಗುಹೆಯಂತಿರುವ ಎಂದರೆ ದುರ್ಗಮವಾದ ರಹಸ್ಯಪ್ರದೇಶದಲ್ಲಿ ಬಚ್ಚಿಡಲ್ಪಟ್ಟ ಎಂದರ್ಥವು. ಇಲ್ಲಿ ಗುಹಾ ಎಂದರೆ ಗುಹೆಯೆಂದಾಗಲಿ ರಹಸ್ಯಪ್ರದೇಶವೆಂದಾಗಲಿ ಅರ್ಥಮಾಡಬಹುದು. ಋಗ್ವೇದದಲ್ಲಿಯೂ, ಉಪನಿಷತ್ತುಗಳಲ್ಲಿಯೂ—ಯಾರಿಗೂ ತಿಳಿಯದಂತಿರುವ ರಹಸ್ಯಪ್ರದೇಶದಲ್ಲಿ ಇಡಲ್ಪಟ್ಟ ವಸ್ತುವನ್ನು ಗುಹಾ ಹಿತಂ ಎಂಬ ಶಬ್ದಗಳಿಂದ ನಿರ್ದೇಶಿಸುವುದು ರೂಢಿಯಾಗಿದೆ—

**ಗುಹಾ ತ್ರೀಣಿ ನಿಹಿತಾ ನೇಂಗಯಂತಿ ತುರೀಯಂ ವಾಚೋ ಮನುಷ್ಯಾ ವದಂತಿ ।**

(ಋ. ಸಂ. ೧-೧೬೪-೪೫)

**ಅವಿಂದದ್ದಿವೋ ನಿಹಿತಂ ಗುಹಾ ನಿಧಿಂ ವೇರ್ನ ಗರ್ಭಂ ಪರಿವೀತಮಶ್ಮನ್ಯನಂತೇ ಅಂತರಶ್ಮನಿ ।**

(ಋ ಸಂ. ೧-೧೩೦-೩)

ತಿಸ್ರೋ ಮಹೀ ರುಪರಾಸ್ತಸ್ಥುರತ್ಯಾಗುಹಾ ದ್ವೇ ನಿಹಿತೇ ದರ್ಶ್ಯೇಕಾ ।

(ಋ. ಸಂ. ೩-೫೬-೨)

ಇತ್ಯಾದ್ಯನೇಕ ಋಕ್ಕುಗಳಲ್ಲಿ ಇದೇ ಅರ್ಥವು ವಿವೃತವಾಗಿರುವುದು.

---

ಸಂಹಿತಾಪಾಠಃ

ಸ್ತವಾ ನು ತ ಇಂದ್ರ ಪೂರ್ವ್ಯಾ ಮಹಾನ್ಯುತ ಸ್ತವಾಮ ನೂತನಾ ಕೃತಾನಿ।

ಸ್ತವಾ ವಜ್ರಂ ಬಾಹ್ವೋರುಶಂತಂ ಸ್ತವಾ ಹರೀ ಸೂರ್ಯಸ್ಯ ಕೇತೂ ॥ ೬ ॥

ಪದಪಾಠಃ

ಸ್ತವ । ನು । ತೇ । ಇಂದ್ರ । ಪೂರ್ವ್ಯಾ । ಮಹಾನಿ । ಉತ । ಸ್ತವಾಮ । ನೂತನಾ । ಕೃತಾನಿ ।

ಸ್ತವ । ವಜ್ರಂ । ಬಾಹ್ವೋಃ । ಉಶಂತಂ । ಸ್ತವ । ಹರೀ ಇತಿ । ಸೂರ್ಯಸ್ಯ । ಕೇತೂ ಇತಿ ॥ ೬ ॥

ಸಾಯಣಭಾಷ್ಯಂ

ಹೇ ಇಂದ್ರ ಪೂರ್ವ್ಯಾ ಪುರಾತನಾನಿ ಮಹಾನಿ ಮಹಾಂತಿ ತೇ ತವ ಕರ್ಮಾಣಿ ನು ಕ್ಷಿಪ್ರಂ ಸ್ತವ । ಸ್ತವಾಮ । ಉತ ಅಪಿ ಚ ನೂತನಾಧುನಾತನಾನಿ ಕೃತಾನಿ ಕರ್ಮಾಣಿ ಸ್ತವಾಮ । ಬಾಹ್ವೋರುಶಂತಂ ದೀಪ್ಯಮಾನಂ ವಜ್ರಂ ಸ್ತವ । ಸ್ತವಾಮ । ಕಿಂಚ ಸೂರ್ಯಸ್ಯ ಸುಷ್ಠು ಪ್ರೇರಕಸ್ಯ ಸುವೀರ್ಯಸ್ಯ ವಾ ಸೂರ್ಯಾತ್ಮನೋ ವೇಂದ್ರಸ್ಯ ಕೇತೂ ಪ್ರಜ್ಞಾಪಕೌ ಹರೀ ಏತನ್ನಾಮಕಾವಶ್ವೌ ಸ್ತವ। ಸ್ತವಾಮ॥ ಷ್ಟುಞ್ ಸ್ತುತೌ । ತಿಙಾಂ ತಿಙೋ ಭವಂತೀತ್ಯುತ್ತಮಬಹುವಚನಸ್ಯ ಮಧ್ಯಮೈಕವಚನಾದೇಶಃ । ಬಹುಲಂ ಛಂದಸೀತಿ ಶಪೋ ಲುಗಭಾವಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಪೂರ್ವ್ಯಂ—ಪುರಾತನವಾದವೂ । ಮಹಾಂತಿ—ಮಹದ್ಗುಣಗಳಿಂದ ಕೂಡಿದವೂ ಆದ । ತೇ—ನಿನ್ನ ಕರ್ಮಗಳನ್ನು । ನು—ಕ್ಷಿಪ್ರವಾಗಿ । ಸ್ತವ—ಸ್ತುತಿಸುತ್ತೇವೆ । ಉತ—ಮತ್ತು । ನೂತನ—ಹೊಸದಾದ । ಕೃತಾನಿ—ಕರ್ಮಗಳನ್ನೂ । ಸ್ತವಾಮ—ಸ್ತುತಿಸುವೆವು । ಬಾಹ್ವೋಃ—ನಿನ್ನ ಬಾಹುಗಳ ನಡುವೆ । ಉಶಂತಂ—ಪ್ರಕಾಶಿಸುವ । ವಜ್ರಂ—ವಜ್ರವನ್ನೂ । ಸ್ತವ—ಸ್ತುತಿಸುವೆವು । ಸೂರ್ಯಸ್ಯ—ವೀರ್ಯೋಪೇತನಾದ ಅಥವಾ ಪ್ರೇರಕನಾದ ಇಂದ್ರನ (ನಿನ್ನ)। ಕೇತೂ—ಪ್ರಜ್ಞಾಪಕಗಳಿಂದ । ಹರೀ-ಹರೀನಾಮಕಗಳಾದ ಅಶ್ವಗಳನ್ನೂ । ಸ್ತವ—ಸ್ತುತಿಸುವೆವು.

ಭಾವಾರ್ಥ

ಎಲೈ ಇಂದ್ರನೇ, ಪುರಾತನವಾದವೂ, ಮಹದ್ಗುಣಗಳಿಂದ ಕೂಡಿದವೂ ಆದ ನಿನ್ನ ಪುರಾತನವಾದ ಕರ್ಮಗಳನ್ನೂ, ನೂತನವಾದ ಕರ್ಮಗಳನ್ನೂ ಸ್ತುತಿಸುವೆವು. ನಿನ್ನ ಬಾಹುಗಳ ನಡುವೆ ಪ್ರಕಾಶಿಸುವ ವಜ್ರವನ್ನೂ ವೀರ್ಯೋಪೇತನಾದ ನಿನ್ನ ಪ್ರಜ್ಞಾಪಕಗಳೂ, ಹರಿನಾಮುಕಗಳೂ ಆದ ಅಶ್ವಗಳನ್ನೂ ಸ್ತುತಿಸುತ್ತೇವೆ.

English Translation

We glorify, Indra, your mighty (deeds) of old : we glorify your (more) recent exploits: we praise the thunderbolt shining in your arms, and we celebrate the horses, the signs of (Indra as) the sun.

ವಿಶೇಷವಿಷಯಗಳು

**ಸೂರ್ಯಸ್ಯ**—ಈ ಋಕ್ಕಿನಲ್ಲಿಯೂ ಈ ಶಬ್ದಕ್ಕೆ **ಸುಷ್ಠು ಪ್ರೇರಕಸ್ಯ** ಎಂದರೆ ಚೆನ್ನಾಗಿ ಪ್ರೇರಿಸುವವನು ಎಂದೂ ಅಥವಾ ಸೂರ್ಯಾತ್ಮಕನಾದ ಎಂದೂ ಇಂದ್ರನಿಗೆ ವಿಶೇಷಣಪದವನ್ನಾಗಿ ಅರ್ಥವಿವರಣೆಮಾಡಿದೆ.

**ಕೇತೂ—ಕೇತು** ಶಬ್ದವು ಪ್ರಜ್ಞಾನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩)

**ಹರೀ—ಹರೀ** ಎಂದರೆ ಇಂದ್ರನ ಎರಡು ಕುದುರೆಗಳಿಗೆ ಹೆಸರು. ಹರಿಶಬ್ದವು ಕುದುರೆಯೆಂಬ ಅರ್ಥದಲ್ಲಿ ಇತರ ದೇವತೆಗಳ ಪರವಾಗಿ ಉಪಯೋಗಿಸಿದ್ದರೂ ಹರೀ ಎಂಬ ದ್ವಿವಚನಾಂತಶಬ್ದವು ಯಾವಾಗಲೂ ಇಂದ್ರನ ರಥದ ಕುದುರೆಗಳ ಪರವಾಗಿಯೇ ಉಪಯೋಗಿಸಲ್ಪಡುವುದು. ಯಾಸ್ಕರು—**ಹರೀ ಇಂದ್ರಸ್ಯ । ರೋಹಿತೋಽಗ್ನೇಃ ।** ಇತ್ಯಾದಿಯಾಗಿ ನಾನಾ ದೇವತೆಗಳ ವಾಹನಗಳನ್ನು ವಿವರಿಸಿರುವರು. (ನಿ. ೨-೨೮)

ಈ ಋಕ್ಕಿನಲ್ಲಿ ಇಂದ್ರನು ಹಿಂದೆ ಮಾಡಿರುವ ಮತ್ತು ಈಗ ಹೊಸದಾಗಿ ಮಾಡುವ ಸಾಹಸಕೃತ್ಯಗಳನ್ನು ವರ್ಣಿಸುವುದಾಗಿ ಋಷಿಯು ಹೇಳಿರುವನು.

---

ಸಂಹಿತಾಪಾಠಃ

ಹರೀ ನು ತ ಇಂದ್ರ ವಾಜಯಂತಾ ಘೃತಶ್ಚುತಂ ಸ್ವಾರಮಸ್ವಾರ್ಷ್ಟಾಂ ।
ವಿ ಸಮನಾ ಭೂಮಿರಪ್ರಥಿಷ್ಟಾರಂಸ್ತ ಪರ್ವತಶ್ಚಿತ್ಸರಿಷ್ಯನ್ ॥ ೭ ॥

ಪದಪಾಠಃ

ಹರೀ ಇತಿ । ನು । ತೇ । ಇಂದ್ರ । ವಾಜಯಂತಾ । ಘೃತಽಶ್ಚುತಂ । ಸ್ವಾರಂ । ಅಸ್ವಾರ್ಷ್ಟಾಂ ।
ವಿ । ಸಮನಾ । ಭೂಮಿಃ । ಅಪ್ರಥಿಷ್ಟ । ಅರಂಸ್ತ । ಪರ್ವತಃ । ಚಿತ್ । ಸರಿಷ್ಯನ್ ॥ ೭ ॥

### ಸಾಯಣಭಾಷ್ಯಂ

ಹೇ ಇಂದ್ರ ವಾಜಯಂತಾ ವೇಗಂ ಕುರ್ವಂತೌ॥ ತತ್ಕರೋತೀತಿ ಣಿಚ್॥ ತೇ ತವ ಹರೀ ಏತನ್ನಾಮಕಾವಶ್ವೌ ಘೃತಶ್ಚುತಂ ಘೃತಸ್ಯೋದಕಸ್ಯ ಚ್ಯಾವಯಿತಾರಂ ಸ್ವಾರಂ ಮೇಘಧ್ವನಿಂ ನು ಕ್ಷಿಪ್ರಮಸ್ವಾರ್ಷ್ಟಾಂ ॥ ಸ್ವರತಿಃ ಶಬ್ದಕರ್ಮಾ । ಪಾಕಂ ಪಚತೀತಿವದೇಕಧಾತೋರನುವಾದಃ। ಲಙಃ ರೂಪಂ॥ ಸಮನಾ ಸಮಸ್ಥಲಾ ಯದ್ವಾ ಸಮನಾ ಸರ್ವತೋ ವ್ಯಪ್ರಥಿಷ್ಟ । ಗರ್ಜನಂ ಶ್ರುತ್ವಾ ಮಮೋಪರಿ ವೃಷ್ಟಿರ್ಭವತೀತಿ ಪ್ರಥಿತಾಭೂತ್ । ತಥಾ ಪರ್ವತಶ್ಚಿತ್ ಮೇಘೋऽಪಿ ಸರಿಷ್ಯನ್ ವರ್ಷಣಾರ್ಥಮಿತಸ್ತತೋ ಗಮಿಷ್ಯನ್ ಅರಂಸ್ತ । ಅರಮತ ॥ ರಮತೇರ್ಲುಙಿ ರೂಪಂ ॥

### ಪ್ರತಿಪದಾರ್ಥ

ಇಂದ್ರ ಎಲೈ ಇಂದ್ರನೇ । ವಾಜಯಂತಾ—ವೇಗಗಾಮಿಗಳಾದ । ತೇ—ನಿನ್ನ । ಹರೀ—ಹರಿಯೆಂಬ ಅಶ್ವಗಳು । ಘೃತಶ್ಚುತಂ—ಉದಕವನ್ನು ಸುರಿಸತಕ್ಕ । ಸ್ವಾರಂ—ಮೇಘದ ಧ್ವನಿಯನ್ನು । ನು—ಕ್ಷಿಪ್ರವಾಗಿ । ಅಸ್ವಾರ್ಷ್ಟಾಂ—ಮೊಳಗಿದವು । ಸಮನಾ—ಸಮಸ್ಥಲವುಳ್ಳ ಪೃಥ್ವಿಯು [ಅಥವಾ] । ಭೂಮಿಃ—ಪೃಥ್ವಿಯು ಸರ್ವತ್ರ । ವಿ ಅಪ್ರಥಿಷ್ಟ—ವೃಷ್ಟಿಯನ್ನು ನಿರೀಕ್ಷಿಸಿದಳು । ಪರ್ವತಶ್ಚಿತ್—ಮೇಘವೂ ಸಹ । ಸರಿಷ್ಯನ್—ವರ್ಷಣಾರ್ಥವಾಗಿ ಸಂಚರಿಸುತ್ತಾ । ಅರಂಸ್ತ—ವಿಹರಿಸಿತು.

### ಭಾವಾರ್ಥ

ಎಲೈ ಇಂದ್ರನೇ, ವೇಗಗಾಮಿಗಳೂ, ಹರಿಯೆಂಬ ಹೆಸರುಳ್ಳವೂ ಆದ ನಿನ್ನ ಅಶ್ವಗಳು ಉದಕವನ್ನು ಸುರಿಸತಕ್ಕ ಮೇಘದ ಧ್ವನಿಯನ್ನು ಬೇಗನೆ ಮೊಳಗಿದವು. ಆಗ ಪೃಥ್ವಿಯು ಸರ್ವತ್ರ ವೃಷ್ಟಿಯನ್ನು ನಿರೀಕ್ಷಿಸಿದಳು. ಮೇಘವೂ ಸಹ ವರ್ಷಣಾರ್ಥವಾಗಿ ಸಂಚರಿಸುತ್ತಾ ವಿಹರಿಸಿತು.

### English Translation

Your swift horses, Indra, have uttered a loud sound, announcing rain: the level earth anxiously expects its fall, as the gathering cloud has passed.

### ವಿಶೇಷವಿಷಯಗಳು

ಘೃತಶ್ಚುತಂ—ಘೃತಶಬ್ದಕ್ಕೆ ನಾನಾರ್ಥಗಳಿರುವುವು. ಅಥಾಪಿ ನೈಗಮೇಭ್ಯೋ ಭಾಷಿಕಾ ಉಷ್ಣಂ ಘೃತಮಿತಿ ( ನಿ. ೨-೨ ) ಸಾಧಾರಣವಾಗಿ ವೇದದಲ್ಲಿ ಘೃತಶಬ್ದಕ್ಕೆ ದಹಿಸುವ ಸ್ವಭಾವವುಳ್ಳ ಉಷ್ಣವೆಂಬ ಅರ್ಥವಿರುವುದೆಂದು ಯಾಸ್ಕರ ವಿವರಣೆ ಇದೆ. ಮತ್ತು ಅಣಃ ಕ್ಷೋದ ಮೊದಲಾದ ನೂರೊಂದು ಉದಕನಾಮಗಳಲ್ಲಿ ಘೃತ ಶಬ್ದವು ಪಠಿತವಾಗಿರುವುದರಿಂದ ಘೃತವೆಂದರೆ ಉದಕವೆಂಬರ್ಥದಲ್ಲಿಯೂ (ನಿ. ೨-೨೪) ಘೃತಶಬ್ದದ ಪ್ರಯೋಗವು ಋಗ್ವೇದದಲ್ಲಿ ಬಹಳವಾಗಿರುವುದು

ಕೃಷ್ಣಂ ನಿಯಾನಂ ಹರಯಃ ಸುಪರ್ಣಾ ಅಪೋ ವಸಾನಾ ದಿವಮುತ್ಪತಂತಿ ।
ತ ಆ ವವೃತ್ರನ್ತ್ಸದನಾದೃತಸ್ಯಾದಿದ್ಘೃತೇನ ಪೃಥಿವೀ ವ್ಯುದ್ಯತೇ ॥

(ಋ. ಸಂ. ೧.೧೬೪-೪೭)

ಇತ್ಯಾದಿ ಋಕ್ಕುಗಳಲ್ಲಿ ಘೃತಶಬ್ದಕ್ಕೆಉದಕವೆಂದು ಅರ್ಥವಿವರಣೆ ಇರುವುದು. ಪ್ರಕೃತ ಋಕ್ಕಿನಲ್ಲಿ ಘೃತಶ್ಚುತಂ ಎಂದರೆ ಉದಕವನ್ನು ಸುರಿಸುತ್ತಿರುವ (ಮೇಘ) ವೆಂದರ್ಥವು.

ಪರ್ವತಃ—ಪರ್ವತಿ ಪೂರಯಿತವ್ಯಪ್ರದೇಶಯುಕ್ತೇ ಸ್ವಕೀಯನಿವಾಸಸ್ಥಾನೇ । ಪರ್ವವಾನ್ ಪರ್ವತಃ । ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ ( ನಿ. ೧-೨೦ ) ಪರ್ವ ಶಬ್ದಕ್ಕೆ ಯಾಸ್ಕರು ಕಲ್ಲು ಶಿಖರ ಮುಂತಾದ ವಸ್ತುಗಳಿಂದ ತುಂಬಿರುವುದು ಎಂದರ್ಥಮಾಡಿದ್ದಾರೆ. ಪ್ರೀಣಾತೇರ್ವಾ ಎಂದು ಹೇಳಿ ಕೇವಲ ಶಿಲಾ ಪೂರಣಾರ್ಥವೆಂದೇ ಹೇಳಬೇಕಾಗಿಲ್ಲ. ಶಿಲಾದಿವಸ್ತುಗಳಿಂದ ಮನೋಹರವಾಗಿ ದೇವತೆಗಳನ್ನು ತೃಪ್ತಿಪಡಿಸುವ ವಸ್ತು (ಪರ್ವತ) ಎಂದು ಹೇಳಬಹುದೆಂದು ವಿವರಿಸಿದ್ದಾರೆ. ಪರ್ವತಶಬ್ದವು ಮೇಘನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೧) ಪ್ರಕೃತಋಕ್ಕಿನಲ್ಲಿ ಪರ್ವತಶಬ್ದಕ್ಕೆ ಮೇಘವೆಂದೇ ಅರ್ಥ.

ಸಂಹಿತಾಪಾಠಃ

ನಿ ಪರ್ವತಃ ಸಾದ್ಯಪ್ರಯುಚ್ಛನ್ತ್ಸಂ ಮಾತೃಭಿರ್ವಾವಶಾನೋ ಅಕ್ರಾನ್ ।
ದೂರೇ ಪಾರೇ ವಾಣೀಂ ವರ್ಧಯಂತ ಇಂದ್ರೇಷಿತಾಂ ಧಮನಿಂ ಪಪ್ರಥನ್ನಿ॥

ಪದಪಾಠಃ

ನಿ । ಪರ್ವತಃ । ಸಾದಿ । ಅಪ್ರಯುಚ್ಛನ್ । ಸಂ । ಮಾತೃಽಭಿಃ । ವಾವಶಾನಃ । ಅಕ್ರಾನ್ ।
ದೂರೇ । ಪಾರೇ । ವಾಣೀಂ । ವರ್ಧಯಂತಃ । ಇಂದ್ರಽಇಷಿತಾಂ । ಧಮನಿಂ । ಪಪ್ರಥನ್ । ನಿ ॥ ೮ ॥

ಸಾಯಣಭಾಷ್ಯಂ

ಅಪ್ರಯುಚ್ಛನ್ ಅಪ್ರಮಾದ್ಯನ್ ವರ್ಷಣೇ ಸಾವಧಾನಃ ಪರ್ವತೋ ಮೇಘೋ ನಿಷಾದಿ । ನಭಸಿ ನಿಷಣ್ಣ ಆಸೀತ್ । ಮಾತೃಭಿರದ್ಭಿರ್ಮಾಧ್ಯಮಿಕಾಭಿರ್ವಾಗ್ಭಿರ್ವಾ ಸಂವಾವಶಾನಃ ಸಹ ಶಬ್ದಂ ಕುರ್ವಾಣೋಽಕ್ರಾನ್ । ಅಕ್ರಮೀತ್ । ಇತಸ್ತತಃ ಸಂಚಾರಮಕರೋತ್ ॥ ಕ್ರಮತೇರ್ಲಙಃ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥ ದೂರೇ ಪಾರೇಽತಿದೂರೇಽಂತರಿಕ್ಷೇ ಸ್ಥಿತಾಂ ವಾಣೀಂ ಮಾಧ್ಯಮಿಕಾಂ ವಾಚಂ ವರ್ಧಯಂತಃ ಸ್ತೋತ್ರೈಃ ಸಮೃದ್ಧಾಂ ಕುರ್ವಂತಃ ಸ್ತೋತಾರೋ ಮರುತೋ ವೇಂದ್ರೇಷಿತಾ-ಮಿಂದ್ರೇಣ ಪ್ರೇರಿತಾಂ ಧಮನಿಂ ಶಬ್ದಂ ಕುರ್ವಾಣಾಂ ತಾಂ ವಾಚಂ ನಿತರಾಂ ಪಪ್ರಥನ್ । ಅಪ್ರಥಯನ್॥

ಪ್ರತಿಪದಾರ್ಥ

ಅಪ್ರಯುಚ್ಛನ್—ಪ್ರಮಾದವಿಲ್ಲದ ಸಾವಧಾನ ಮನಸ್ಸಿನಿಂದ ಕೂಡಿದ । ಪರ್ವತಃ—ಮೇಘವು । ನಿ ಷಾದಿ—ಅಂತರಿಕ್ಷದಲ್ಲಿ ಸ್ಥಿತವಾಗಿದೆ। ಮಾತೃಭಿಃ—ಮಾಧ್ಯಮಿಕಾವಾಕ್ಕುಗಳೊಂದಿಗೆ ಅಥವಾ ಉದಕಗಳೊಂದಿಗೆ।

**ಸಂವಾವಶಾನಃ**—ಒಟ್ಟಿಗೆ ಸೇರಿಕೊಂಡು ಶಬ್ದವನ್ನು ಮಾಡುತ್ತಾ । **ಅಕ್ರಾನ್**—ಸುತ್ತಲೂ ಸಂಚರಿಸಿತು । **ದೂರೇ ಪಾರೇ**—ಅತಿದೂರದಲ್ಲಿ ಅಂತರಿಕ್ಷಸ್ಥವಾದ । **ವಾಣೀಂ**—ಮಾಧ್ಯಮಿಕಾವಾಕ್ಕನ್ನು । **ವರ್ಧಯಂತಃ**—ದೀರ್ಘವಾಗಿ ಬೆಳೆಸತಕ್ಕ ಮರುತ್ತುಗಳು ಅಥವಾ ಸ್ತೋತೃಗಳು । **ಇಂದ್ರೇಷಿತಾಂ**—ಇಂದ್ರನಿಂದ ಪ್ರೇರಿತವಾದ । **ಧಮನಿಂ**—ಶಬ್ದಾತ್ಮಕವಾದ ಆ ವಾಕ್ಕನ್ನು । **ನಿ ಪಪ್ರಥನ್**—ಅತಿಶಯವಾಗಿ ಪ್ರಕಟಿಸಿ ವೃದ್ಧಿಮಾಡಿದರು.

ಭಾವಾರ್ಥ

ಪ್ರಮಾದವಿಲ್ಲದೇ ಸಾವಧಾನಚಿತ್ತದಿಂದ ಕೂಡಿದ ಮೇಘವು ಅಂತರಿಕ್ಷದಲ್ಲಿ ಸ್ಥಿತವಾಗಿದೆ ಮತ್ತು ಮಾಧ್ಯಮಿಕಾ ವಾಕ್ಕುಗಳೊಂದಿಗೆ ಸೇರಿಕೊಂಡು ಶಬ್ದವನ್ನು ಮಾಡುತ್ತಾ ಸುತ್ತಲೂ ಸಂಚರಿಸಿತು. ಅತಿದೂರದಲ್ಲಿ ಅಂತರಿಕ್ಷಸ್ಥವಾದ ಮಾಧ್ಯಮಿಕಾವಾಕ್ಕನ್ನು ದೀರ್ಘವಾಗಿ ಬೆಳೆಸತಕ್ಕ ಮರುತ್ತುಗಳು ಇಂದ್ರನಿಂದ ಪ್ರೇರಿತವಾದುದೂ, ಶಬ್ದಾತ್ಮಕವಾದದ್ದೂ ಆದ ಆ ವಾಕ್ಕನ್ನು ಅತಿಶಯವಾಗಿ ಪ್ರಕಟಿಸಿ ವೃದ್ಧಿಮಾಡಿದರು.

English Translation

The cloud, not heedless(of its office), is suspended(in the sky); resonant with maternal (waters), it has spread about; (the winds), augmenting the sound in the distant horizon, have promulgated the voice uttered by Indra.

ವಿಶೇಷವಿಷಯಗಳು

**ನಿ ಪರ್ವತಃ ಸಾದಿ ಅಪ್ರಯುಚ್ಛನ್**—ಇಲ್ಲಿಯೂ ಪರ್ವತಶಬ್ದಕ್ಕೆ ಮೇಘವೆಂದರ್ಥವು. ಮೇಘವು ವೃಷ್ಟಿಯನ್ನು ಕರೆಯುವುದರಲ್ಲಿ ಪ್ರಮಾದಮಾಡದಿದ್ದರೂ ಸಾವಧಾನವಾಗಿದ್ದು ವೃಷ್ಟಿಯನ್ನು ಕರೆಯದೆ ಸುಮ್ಮನೆ ಕುಳಿತಿತ್ತು ಎಂದರೆ ಅಂತರಿಕ್ಷದಲ್ಲಿ ತೇಲಾಡುತ್ತಿತ್ತು ಎಂದಭಿಪ್ರಾಯವು.

**ಸಂ ಮಾತೃಭಿಃ ವಾವಶಾನಃ ಅಕ್ರಾನ್**—**ಮಾತೃಭಿರದ್ಭಿರ್ಮಾಧ್ಯಮಿಕಾಭಿರ್ವಾಗ್ಭಿರ್ವಾ ಸಂವಾವಶಾನಃ ಸಹ ಶಬ್ದಂ ಕುರ್ವಾಣೋಽಕ್ರಾನ್ । ಅಕ್ರಮೀತ್ । ಇತಸ್ತತಃ ಸಂಚಾರಮಕರೋತ್ ।** ಇಲ್ಲಿ ಮಾತೃಶಬ್ದವು ನದೀನಾಮಗಳಲ್ಲಿ ಉಕ್ತವಾಗಿದ್ದರೂ (ನಿ. ೨-೨೪) ಭಾಷ್ಯಕಾರರು **ಅದ್ಭಿಃ**—ಉದಕಗಳಿಂದ ಎಂದು ಅರ್ಥಮಾಡಿದಾರೆ ಅಥವಾ **ಮಾಧ್ಯಮಿಕಾ ವಾಗ್ಭಿರ್ವಾ**—ಶಿಡಿಲು, ಗುಡುಗು ಇವುಗಳ ರೂಪವಾದ ಧ್ವನಿಯಿಂದ ಎಂದರ್ಥವು. ಯಾಸ್ಕರು—**ವಾಗರ್ಥೇಷು ವಿಧೀಯತೇ ತಸ್ಮಾನ್ಮಾಧ್ಯಮಿಕಾಂ ವಾಚಂ ಮನ್ಯಂತೇ** (ನಿ- ೧೧-೨೭) ಎಂದು **ಮಾಧ್ಯಮಿಕಾ ವಾಕ್** ಎಂಬ ಶಬ್ದಗಳಿಗೆ ನಿರ್ವಚನವನ್ನು ಹೇಳಿರುವರು. ಮತ್ತು—

**ಯದ್ವಾಗ್ವದಂತ್ಯವಿಚೇತನಾನಿ ರಾಷ್ಟ್ರೀ ದೇವಾನಾಂ ನಿಷಸಾದ ಮಂದ್ರಾ ।**
**ಚತಸ್ರ ಊರ್ಜಂ ದುದುಹೇ ಪಯಾಂಸಿ ಕ್ವ ಸ್ವಿದಸ್ಯಾಃ ಪರಮಂ ಜಗಾಮ ॥**

(ಋ. ಸಂ. ೮-೧೦೦-೧೦)

ಎಂಬ ಋಕ್ಕಿನ ನಿರ್ವಚನವನ್ನು ಹೇಳುತ್ತಾ—**ಮಾಧ್ಯಮಿಕಾ ವಾಗ್ವದಂತೀ ನಿರ್ವಚಯಂತೀ ಅವಿಚೇತನಾನಿ ಅವಿಜ್ಞಾತಾರ್ಥಾನಿ ಶಬ್ದರೂಪಾಣಿ ಸ್ತನಯಿತ್ನುಲಕ್ಷಣಾನಿ ಯಾ ಮಾಧ್ಯಮಿಕಾನಾಂ ದೇವತಾನಾಂ ।**

ಎಂದರೆ ಅಂತರಿಕ್ಷಸ್ಥದೇವತೆಗಳ ವಾಕ್ಕೇ ಮಾಧ್ಯಮಿಕಾ ವಾಕ್. ಆ ವಾಕ್ಕಿನ ಅರ್ಥವು ಚೆನ್ನಾಗಿ ಗೊತ್ತಾಗುವಂತಿಲ್ಲ ಮತ್ತು ಮೇಘಗರ್ಜನೆಯ ಸ್ವರೂಪದಲ್ಲಿರುವುದು ಎಂಬಭಿಪ್ರಾಯವನ್ನು ಸೂಚಿಸಿದ್ದಾರೆ ಪ್ರಕೃತವಾದ ಋಕ್ಕಿನಲ್ಲಿರುವ **ಮಾತೃಭಿಃ ಸಂ ವಾವಶಾನಃ** ಎಂಬ ಶಬ್ದಗಳಿಗೆ ಅಂತರಿಕ್ಷದಲ್ಲಿರುವ ಮೇಘಗಳು ಉದಕಗಳೊಡನೆ ಅಥವಾ ಮೇಘಧ್ವನಿಯೊಡನೆ ಮಿಳಿತವಾಗಿ ಅಂತರಿಕ್ಷದಲ್ಲಿಯೇ (ಗಾಳಿಯ ಹೊಡೆತದಿಂದ) ಇತ್ತಲಿಂದತ್ತ ಸಂಚರಿಸುತ್ತಲಿರುವವು ಎಂದು ಮುಖ್ಯಾಭಿಪ್ರಾಯವು.

**ದೂರೇ ಪಾರೇ ವಾಣೀಂ ವರ್ಧಯಂತಃ ಇಂದ್ರೇಷಿತಾಂ ಧಮನಿ ಪಪ್ರಥನ್ ನಿ**—ಈ ಋಕ್ಕಿನ ಉತ್ತರಾರ್ಧದಲ್ಲಿರುವ ಈ ವಾಕ್ಯಕ್ಕೆ–ಅಂತರಿಕ್ಷಪ್ರದೇಶದಲ್ಲಿ ಅತಿ ದೂರದಲ್ಲಿ ಕೇಳಬರುತ್ತಿರುವ ಮೇಘಗರ್ಜನೆಯೊಡನೆ ಋತ್ವಿಕ್ಕುಗಳು ತಾವು ಪಠಿಸುವ ಸ್ತೋತ್ರಗಳ ಧ್ವನಿಯನ್ನು ಮಿಳನಮಾಡುವರು ಅಥವಾ ಮರುದ್ದೇವತೆಗಳು (ಮರುತ್ತುಗಳು, ವೇಗವಾಗಿ ಬೀಸುತ್ತಿರುವ ಚಂಡಮಾರುತವು) ಇಂದ್ರನ ವಾಕ್ಕಿನೊಡನೆ ತಮ್ಮ ಬೀಸುವ ಧ್ವನಿಯನ್ನು ಸೇರಿಸಿ ಶಬ್ದವನ್ನು ಅಧಿಕವಾಗುವಂತೆ ಮಾಡುವರು ಎಂದು ಎರಡು ವಿಧವಾದ ವಿವರಣೆಯನ್ನು ಭಾಷ್ಯಕಾರರು ಇಲ್ಲಿ ಕೊಟ್ಟಿರುವರು. ವೃಷ್ಟಿಯು (ಮಳೆಯು) ಸಿಡಿಲು, ಮಿಂಚು, ಗುಡುಗು ಇವುಗಳಿಂದ ಸಹಿತವಾಗಿ ಬಹು ರಭಸವಾಗಿ ಬೀಸುತ್ತಿರುವ ಗಾಳಿಯೊಡನೆ ಸುರಿಯುತ್ತಿರುವಾಗ, ಋತ್ವಿಗ್ಜನರು ಪಠಿಸುವ ಸ್ತೋತ್ರಾದಿಗಳು ಅತಿ ದೂರದಲ್ಲಿ ಕೇಳಬರುತ್ತಿರುವ ಮೇಘಧ್ವನಿಯೊಡನೆ ಸೇರಿಹೋಗುವವು ಅಥವಾ ಇಂದ್ರಪ್ರೇರಿತವಾದ ಮೇಘಧ್ವನಿಯೊಡನೆ ಚಂಡಮಾರುತವು ರಭಸವಾಗಿ ಬೀಸುವ ಧ್ವನಿಯೂ ಸೇರಿಹೋಗಿ ಆ ಧ್ವನಿ ಅತ್ಯಧಿಕವಾಗಿ ಎಲ್ಲೆಲ್ಲಿಯೂ ಹರಡುವುದು ಎಂದು ಮುಖ್ಯಾಭಿಪ್ರಾಯವು

---

ಸಂಹಿತಾಪಾಠಃ

## ಇಂದ್ರೋ ಮಹಾಂ ಸಿಂಧುಮಾಶಯಾನಂ ಮಾಯಾವಿನಂ ವೃತ್ರಮಸ್ಫುರನ್ನಿಃ।

## ಅರೇಜೇತಾಂ ರೋದಸೀ ಭಿಯಾನೇ ಕನಿಕ್ರದತೋ ವೃಷ್ಣೋ ಅಸ್ಯ ವಜ್ರಾತ್

ಪದಪಾಠಃ

**ಇಂದ್ರಃ । ಮಹಾಂ । ಸಿಂಧುಂ । ಆऽಶಯಾನಂ । ಮಾಯಾऽವಿನಂ । ವೃತ್ರಂ । ಅಸ್ಫುರತ್ । ನಿಃ ।**

**ಅರೇಜೇತಾಂ । ರೋದಸೀ ಇತಿ । ಭಿಯಾನೇ ಇತಿ । ಕನಿಕ್ರದತಃ । ವೃಷ್ಣಃ । ಅಸ್ಯ । ವಜ್ರಾತ್ ॥ ೯ ॥**

ಸಾಯಣಭಾಷ್ಯಂ

ಬಲವಾನಿಂದ್ರೋ ಮಹಾಂ ಸಿಂಧುಂ । ಸ್ಯಂದತ ಇತಸ್ತತಃ ಸಂಚರತೀತಿ ಸಿಂಧುರ್ಮೇಘಃ । ತಮಾಶಯಾನಂ ತಮಧಿಷ್ಠಾಯ ಶಯಾನಂ ಮಾಯಾವಿನಂ ವೃತ್ರಮಸುರಂ । ಯದ್ವಾ ಸಿಂಧುರುದಕಂ । ತದಧಿಷ್ಠಾಯ ಶಯಾನಂ ವೃತ್ರಂ । ವೃಣೋತ್ಯಾಕಾಶಮಿತಿ ವೃತ್ರೋ ಮೇಘಃ । ತಂ ನಿರಸ್ಫುರತ್ ।

ನಿರಹನ್ । ವೃಷ್ಣೋ ವರ್ಷಕಸ್ಯಾಸ್ಯೇಂದ್ರಸ್ಯ ಕನಿಕ್ರದತಃ ಶಬ್ದಂ ಕುರ್ವಾಣಾದ್ವಜ್ರಾದ್ಭಿಯಾನೇ ಭಯಂ ಪ್ರಾಪ್ತೇ ರೋದಸೀ ದ್ಯಾವಾಪೃಥಿವ್ಯಾವರೇಜೇತಾಂ । ಅಕಂಪೇತಾಂ ॥ ದಾಧರ್ತಿದರ್ಧರ್ತೀತ್ಯಾದಿನಾ ಕನಿಕ್ರದತ್ಯಬ್ದೋ ನಿಪಾತಿತಃ ॥

ಪ್ರತಿಪದಾರ್ಥ

**ಇಂದ್ರಃ**—ಇಂದ್ರನು । **ಮಹಾಂ**—ಮಹತ್ತಾದ । **ಸಿಂಧುಂ**—ಮೇಘವನ್ನು ಅಥವಾ ಉದಕವನ್ನು । **ಆಶಯಾನಂ**—ಆಶ್ರಯಿಸಿ ಮಲಗಿದ್ದವನೂ । **ಮಾಯಾವಿನಂ**—ವಂಚಕನೂ ಆದ । **ವೃತ್ರಂ** ಅಸುರನನ್ನು । **ನಿಃ ಅಸ್ಫುರತ್**—ಪೂರ್ಣವಾಗಿ ನಾಶಮಾಡಿದನು । **ವೃಷ್ಣಃ**—ವರ್ಷಕನಾದ । **ಅಸ್ಯ**—ಈ ಇಂದ್ರನ । **ಕನಿಕ್ರದತಃ**—ಶಬ್ದವನ್ನು ಮಾಡತಕ್ಕ । **ವಜ್ರಾತ್**—ವಜ್ರಾಯುಧದಿಂದ । **ಭಿಯಾನೇ**—ಭಯವು ಪ್ರಾಪ್ತವಾದಾಗ । **ರೋದಸೀ**—ದ್ಯಾವಾಪೃಥಿವಿಗಳೆರಡೂ । **ಅರೇಜೇತಾಂ**—ಕಂಪಿಸಿದವು.

ಭಾವಾರ್ಥ

ಮಹತ್ತಾದ ಮೇಘವನ್ನು ಆಶ್ರಯಿಸಿ ಮಲಗಿದ್ದವನೂ, ವಂಚಕನೂ ಆದ ಅಸುರನನ್ನು ಇಂದ್ರನು ಪೂರ್ಣವಾಗಿ ನಾಶಮಾಡಿದನು. ವರ್ಷಕನಾದ ಈ ಇಂದ್ರನ ವಜ್ರಾಯುಧದ ಶಬ್ದದಿಂದ ಭಯವು ಪ್ರಾಪ್ತವಾದಾಗ ದ್ಯಾವಾಪೃಥಿವಿಗಳೆರಡೂ ಕಂಪಿಸಿದವು.

## English Translation

The mighty Indra has shattered the guileful Vritra, reposing in the cloud: heaven and earth shook, alarmed at the thundering bolt of the showerer.

ವಿಶೇಷವಿಷಯಗಳು

**ಸಿಂಧುಂ—ಸ್ಯಂದತೆ ಇತಸ್ತತಃ ಸಂಚರತೀತಿ ಸಿಂಧುರ್ಮೇಘಃ** । ಅಂತರಿಕ್ಷದಲ್ಲಿ ಗಾಳಿಯ ಹೊಡತದಿಂದ ಇತ್ತಲಿಂದತ್ತ ಸಂಚರಿಸುವ ಸ್ವಭಾವವುಳ್ಳದ್ದಾದ್ದರಿಂದ ಸಿಂಧು ಎಂದರೆ ಮೇಘವು. ಇಲ್ಲಿ ಸಿಂಧುಶಬ್ದಕ್ಕೆ ಉದಕರಾಶಿ ಎಂದರ್ಥವಿದ್ದು ಅಂತರಿಕ್ಷದಲ್ಲಿ ಚಲಿಸುವುದರಿಂದ ಅಥವಾ ಅಂತರಿಕ್ಷದಲ್ಲಿ ಚಲಿಸುವ ಉದಕರಾಶಿಯೆಂದರೆ ಮೇಘವು ಎಂದು ಅರ್ಥವು

**ವೃತ್ರಂ**—ವೃತ್ರಶಬ್ದವು ಮೇಘನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೧) **ವೃಣೋತ್ಯಾಕಾಶಮಿತಿ ವೃತ್ರೋ ಮೇಘಃ** । ಆಕಾಶವನ್ನೆಲ್ಲಾ ಆವರಿಸುವ ಸ್ವಭಾವವುಳ್ಳದ್ದಾದುದರಿಂದ (ಅಂತರಿಕ್ಷದ ಉದಕರಾಶಿಗೆ) ವೃತ್ರ ಎಂದರೆ ಮೇಘವು.

**ಮಾಯಾವಿನಂ**—ಅಸುರರು ಮಾಯಾವಿಗಳೆಂಬುದು ಪ್ರಸಿದ್ಧವು. ಮಾಯಾವಿಗಳೆಂದರೆ ತಂತ್ರ ಅಥವಾ ಮೋಸದಿಂದ ಯುದ್ಧ ಮೊದಲಾದವುಗಳನ್ನು ಮಾಡುವವರು, ವಂಚಕರು ಎಂದರ್ಥವು. ಇಂತಹ ಶತ್ರುಗಳನ್ನು ತಂತ್ರ, ಉಪಾಯ, ಮೋಸ ಮೊದಲಾದವುಗಳಿಂದಲೇ ಇಂದ್ರನು ಸಂಹಾರಮಾಡಿದನೆಂದು ಋಗ್ವೇದದಲ್ಲಿ ಅನೇಕ ಕಡೆ ವರ್ಣಿತವಾಗಿದೆ.

ಮಾಯಾಭಿರಿಂದ್ರ ಮಾಯಿನಂ ತ್ವಂ ಶುಷ್ಣಮವಾತಿರಃ ।

(ಋ ಸಂ. ೧-೧೧-೭)

ವೃಜನೇನ ವೃಜಿನಾನ್ತ್ಸಂ ಪಿಪೇಷ ಮಾಯಾಭಿರ್ದಸ್ಯೂಁರಭಿಭೂತ್ಯೋಜಾಃ ।

(ಋ. ಸಂ. ೩-೩೪-೬)

ತ್ವಂ ಮಾಯಾಭಿರನವದ್ಯ ಮಾಯಿನಂ ಶ್ರವಸ್ಯತಾ ಮನಸಾ ವೃತ್ರಮರ್ದಯಃ ।

(ಋ. ಸಂ. ೧೦-೧೪೭-೨)

ಇತ್ಯಾದಿ ಸ್ಥಳಗಳಲ್ಲಿ ಇಂದ್ರನು ಮಾಯಾವಿಗಳಾದ ಅಸುರರನ್ನು ಮಾಯೆಯಿಂದಲೇ ಸಂಹಾರಮಾಡಿದನೆಂಬ ವರ್ಣನೆಗಳಿವೆ.

ಈ ಋಕ್ಕಿನ ಪೂರ್ವಾರ್ಧದಲ್ಲಿ—ಮೇಘವನ್ನಾಶ್ರಯಿಸಿ ವೃಷ್ಟಿಯನ್ನು ಸುರಿಸುವುದಕ್ಕೆ ಅಡ್ಡಿಮಾಡುತ್ತಾ ಮಲಗಿರುವ ವೃತ್ರನನ್ನು ಇಂದ್ರನು ಸಂಹಾರಮಾಡಿದನೆಂದು ಹೇಳಿದೆ. ಉತ್ತರಾರ್ಧದಲ್ಲಿ ಇಂದ್ರನು ವೃತ್ರಸಂಹಾರಕ್ಕಾಗಿ ವಜ್ರಾಯುಧವನ್ನು ಝಳಪಿಸಿದಾಗ ಅದರ ಶಬ್ದದಿಂದ (ಸಿಡಲಿನಿಂದ) ದ್ಯಾವಾಪೃಥಿವಿಗಳು (ಭೂಮ್ಯಂತರಿಕ್ಷಗಳು) ಭಯದಿಂದ ತತ್ತರಿಸಿ ನಡುಗಿದವೆಂದು ಹೇಳಿದೆ. ಒಂದು ಸ್ಥಳದಲ್ಲಿ—

ಅರೇಜೇತಾಂ ರೋದಸೀ ಹೋತೃವೂರ್ಯೇಽಸಘ್ನೋರ್ಭಾರಮಯಜೋ ಮಹೋ ವಸೋ ।

(ಋ ಸಂ ೧-೩೧-೩)

ಎಂಬ ಋಕ್ಕಿನಲ್ಲಿ ಅಗ್ನಿಯ ಮಹಿಮೆಯನ್ನು ಕಂಡು ದ್ಯಾವಾಪೃಥಿವಿಗಳು ಭಯದಿಂದ ನಡುಗಿದವೆಂದು ಉಕ್ತವಾಗಿದೆ.

---

ಸಂಹಿತಾಪಾಠಃ

ಅರೋರವೀದ್ವೃಷ್ಣೋ ಅಸ್ಯ ವಜ್ರೋಽಮಾನುಷಂ ಯನ್ಮಾನುಷೋ ನಿಜೂರ್ವಾತ್ ।

ನಿ ಮಾಯಿನೋ ದಾನವಸ್ಯ ಮಾಯಾ ಅಪಾದಯತ್ಪಪಿವಾನ್ತ್ಸುತಸ್ಯ ॥೧೦॥

ಪದಪಾಠಃ

ಅರೋರವೀತ್ । ವೃಷ್ಣಃ । ಅಸ್ಯ । ವಜ್ರಃ । ಅಮಾನುಷಂ । ಯತ್ । ಮಾನುಷಃ । ನಿಽಜೂರ್ವಾತ್ ।

ನಿ । ಮಾಯಿನಃ । ದಾನವಸ್ಯ । ಮಾಯಾಃ । ಅಪಾದಯತ್ । ಪಪಿಽವಾನ್ । ಸುತಸ್ಯ ॥ ೧೦ ॥

ಸಾಯಣಭಾಷ್ಯಂ

ವೃಷ್ಣಃ ಕಾಮಾನಾಂ ವರ್ಷಕಸ್ಯಾಸ್ಯೇಂದ್ರಸ್ಯ ವಜ್ರೋಽರೋರವೀತ್ । ಭೃಶಂ ಶಬ್ದಮಕರೋತ್। ಕದೇತ್ಯಪೇಕ್ಷಾಯಾಮಾಹ । ಯದ್ಯದಾ ಅಮಾನುಷಂ ಮನುಷ್ಯಾಣಾಂ ರಹಿತಂ। ಯದ್ವಾ ಮಾನುಷೋಽ-

ಹಂ ನ ಭವಾಮೀತ್ಯೇವಂ ಮನ್ಯಮಾನಂ ತಮಸುರಂ ಮಾನುಷೋ ಮನುಷ್ಯಾಣಾಂ ಹಿತಕಾರೀ ಯದ್ವಾ ಮತಿಮಾನಿಂದ್ರೋ ನಿಜೂರ್ವಾತ್ । ನಿತರಾಂ ಹಿಂಸ್ಯಾತ್ । ಜಿಘಾಂಸತೀತ್ಯರ್ಥಃ ॥ ಜೂರ್ವತೇರ್ಹಿಂಸಾ-ಕರ್ಮಣೋ ಲೇಟಿ ರೂಪಂ ॥ ಸುತಸ್ಯಾಭಿಷುತಂ ಸೋಮಂ ಪಪಿವಾನ್ ಪೀತವಾನ್ ಮಾಯಿನೋ ಮಾಯಾವಿನೋ ದಾನವಸ್ಯ । ದಾನುರ್ನಾಮ ವೃತ್ರಮಾತಾ ದಾನುಃ ಶಯ ಇತ್ಯಾದಿಷು ದೃಷ್ಟತ್ವಾತ್ । ತಸ್ಯಾಃ ಪುತ್ರಸ್ಯ ವೃತ್ರಸ್ಯ ಮಾಯಾ ವಚನಾನಿ ನ್ಯಪಾದಯೇತ್ । ನ್ಯಪಾತಯೇತ್ । ಬಬಾಧೇತಿ ಯಾವತ್ ॥

### ಪ್ರತಿಪದಾರ್ಥ

**ಯತ್**—ಯಾವಾಗ । **ಅಮಾನುಷಂ**—ಕ್ರೂರಿಯಾದ ಅಸುರನನ್ನು । **ಮಾನುಷಃ**—ಮಾನವರಿಗೆ ಹಿತ ಕಾರಿಯಾದ ಇಂದ್ರನು । **ನಿಜೂರ್ವಾತ್**—ಕೊಂದನೋ (ಆಗ) । **ವೃಷ್ಣಃ**—ಇಷ್ಟಾರ್ಥಗಳನ್ನು ಸುರಿಸತಕ್ಕ । **ಅಸ್ಯ**—ಇಂದ್ರನ । **ವಜ್ರಃ**—ವಜ್ರಾಯುಧವು । **ಅರೋರವೀತ್**-ಗಟ್ಟಿಯಾಗಿ ಶಬ್ದವನ್ನು ಮಾಡಿತು । **ಸುತಸ್ಯ**—ಅಭಿಷುತವಾದ ಸೋಮವನ್ನು । **ಪಪಿವಾನ್**—ಕುಡಿದ ಇಂದ್ರನು । **ಮಾಯಿನಃ**—ವಂಚಕನಾದ । **ದಾನವಸ್ಯ**—ಅಸುರಪುತ್ರನ (ವೃತ್ರನ) । **ಮಾಯಾಃ**—ಮೋಸದ ಕೃತ್ಯಗಳನ್ನು । **ನ್ಯಪಾದಯೇತ್**—ನಾಶಪಡಿಸಿದನು ।

### ಭಾವಾರ್ಥ

ಮಾನವರಿಗೆ ಹಿತಕಾರಿಯಾದ ಇಂದ್ರನು ಕ್ರೂರಿಯಾದ ಅಸುರರನ್ನು ಕೊಂದಾಗ ಇಷ್ಟಾರ್ಥಗಳನ್ನು ಸುರಿಸ ತಕ್ಕ ಇಂದ್ರನ ವಜ್ರಾಯುಧವು ಗಟ್ಟಿಯಾಗಿ ಶಬ್ದವನ್ನು ಮಾಡಿತು. ಹಿಂಡಲ್ಪಟ್ಟ ಸೋಮರಸವನ್ನು ಕುಡಿದ ಇಂದ್ರನು ವಂಚಕನಾದ ವೃತ್ರನ ಮೋಸದ ಕೃತ್ಯಗಳನ್ನು ನಾಶಪಡಿಸಿದನು.

### English Translation

The thunderbolt of the showerer roared aloud, when (Indra), the friend of man, sought to slay the enemy of mankind. Drinking the Soma juice, he, (Indra), baffled the devices of the guileful Danava.

### ವಿಶೇಷವಿಷಯಗಳು

**ದಾನವಸ್ಯ**—ದಾನು ಎಂದರೆ ದನುವಿನ ಮಗಳು ಕಶ್ಯಪಋಷಿಗೆ ದನು ಎಂಬ ಪತ್ನಿಯಲ್ಲಿ ಹುಟ್ಟಿದ ರಾಕ್ಷಸ ಜಾತಿಗೆ ಸೇರಿದ ಸಂತತಿಗೆ ದಾನವರೆಂದು ಹೆಸರು. ವೃತ್ರನ ತಾಯಿಯು ಆ ದಾನವಜಾತಿಗೆ ಸೇರಿದವಳೆಂದು

**ಉತ್ತರಾ ಸೂರಧರಃ ಪುತ್ರ ಆಸೀದ್ದಾನುಃ ಶಯೇ ಸಹವತ್ಸಾ ನ ಧೇನುಃ ।**

(ಋ. ಸಂ. ೧-೩೨-೯)

ಎಂಬ ಋಕ್ಕಿನಲ್ಲಿ ಹೇಳಿದೆ, ದಾನುವಿನ ( ದನುವಿನ ) ಮಗನಾದ ವೃತ್ರನನ್ನು ಇಲ್ಲಿ ದಾನವನೆಂಬ ಹೆಸರಿನಿಂದ ಕರೆಯ ಲಾಗಿದೆ.

ವೃತ್ರನ ತಾಯಿಗೆ ದಾನು ಎಂದು ಹೆಸರು ಮತ್ತು ಅವಳನ್ನು ಗೋವಿಗೆ ಹೋಲಿಸಿದೆ. (ಋ. ಸಂ. ೧-೩೨-೯) ಇದೇ ಪದವು (ದಾನು) ನಪುಂಸಕಲಿಂಗದಲ್ಲಿ ಪ್ರವಾಹವನ್ನೂ, ಸ್ತ್ರೀಲಿಂಗದಲ್ಲಿ ಸ್ವರ್ಗೀಯೋದಕವನ್ನೂ

ಸೂಚಿಸುತ್ತದೆ. ಈ ಎರಡು ಶಬ್ದಗಳೂ ಒಂದೇ ಇರಬಹುದು. ಇದೇ ಪದವನ್ನು ಪುಲ್ಲಿಂಗದಲ್ಲಿ ವೃತ್ರಾಸುರನಿಗೆ ಉಪಯೋಗಿಸಿದೆ. ಪ್ರಾಯಶಃ ದಾನುವಿನ ಮಗನಾದುದರಿಂದ ಆ ಹೆಸರಿರಬಹುದು ( ಋ. ಸಂ. ೨-೧೨-೧೧ ; ೪-೩೦-೭) ಅದೇ ರೀತಿ ಔರ್ಣವಾಭ (ಜಾಡರ ಹುಳು)ವಿನಂತಿರುವ ವೃತ್ರನಿಗೂ (೨-೧೧-೧೮) ಇಂದ್ರನಿಂದ ಹತರಾವ ಏಳುಜನ ರಾಕ್ಷಸರಿಗೂ (೧೦-೧೨೦-೬) ಅದೇ ಹೆಸರಿದೆ. ದಾನು ಪದದಿಂದ (ದಾನುವಿನ ಮಗನೆಂದರ್ಥಕೊಡುವ) ನಿಷ್ಪನ್ನವಾದ ದಾನವ ಎಂಬ ಪದವು ಇಂದ್ರನೊಡನೆ ಯುದ್ಧಮಾಡಿದ ರಾಕ್ಷಸನನ್ನು ( ಪ್ರಾಯಶಃ ವೃತ್ರಾಸುರನು ) ಸೂಚಿಸುತ್ತದೆ. ಕಪಟಿಯಾದ ದಾನವನ ಮಾಯೆಗಳನ್ನೆಲ್ಲಾ ಇಂದ್ರನು ಪರಿಹರಿಸಿದನೆಂದು ಪ್ರಕೃತ ಋಕ್ಕಿನಲ್ಲಿ ಹೇಳಿದೆ. ಮತ್ತು ಘೂಂಕರಿಸುತ್ತಿದ್ದ ದಾನವನನ್ನು ಹೊಡೆದು ಕೆಡವಿದನು (೫-೨೯-೪) ಅನಂತರ ನೀರುಗಳನ್ನು ಬಿಡುಗಡೆ ಮಾಡಿದನು. (೫-೩೨-೧) ಎಂದು ಹೇಳಿದೆ. ಋ ಸಂ. ೧-೩೨ ನೆಯ ಸೂಕ್ತದಲ್ಲಿ (ಇಂದ್ರಸ್ಯನು ವೀರ್ಯಾಣಿ ಎಂಬ ಸೂಕ್ತದಲ್ಲಿ) ಹೇಳಿರುವ ವೃತ್ರವಧ ಸಂಬಂಧವಾದ ವಿಷಯಗಳನ್ನೇ ಅಲ್ಪಸ್ವಲ್ಪ ವ್ಯತ್ಯಾಸದಿಂದ ಈ ಸೂಕ್ತದಲ್ಲಿ ವರ್ಣಿಸಿದೆ.

**ಅರೋರವೀತ್ ವೃಷ್ಣೋ ಅಸ್ಯ ವಜ್ರೋ ಅಮಾನುಷಂ**—ಇಲ್ಲಿ ಅಮಾನುಷಂ ಎಂಬ ಶಬ್ದಕ್ಕೆ ಭಾಷ್ಯಕಾರರು–**ಯದ್ವಾ ಅಮಾನುಷಂ ಮನುಷ್ಯಾಣಾಂ ರಹಿತಂ ।ಯದ್ವಾಮಾನುಷೋಽಹಂ ನ ಭವಾಮೀತ್ಯೇವಂ ಮನ್ಯಮಾನಂ ತಮಸುರಂ ।** ಎಂದರೆ ಮನುಷ್ಯರಹಿತವಾದ ಅಥವಾ ನಾನು ಅಲ್ಪನಾದ ಮನುಷ್ಯನಲ್ಲ ಎಂದು ತಿಳಿದು ದುರಹಂಕಾರದಿಂದ ಮೆರೆಯುತ್ತಿರುವ ವೃತ್ರಾಸುರನನ್ನು ಎಂದು ಎರಡು ವಿಧವಾದ ಅರ್ಥವನ್ನು ಹೇಳಿರುವರು. ಇಂದ್ರನು ವೃತ್ರನನ್ನು ಸಂಹಾರಮಾಡುವ ಕಾಲದಲ್ಲಿ ತನ್ನ ವಜ್ರಾಯುಧದಿಂದ ಅತಿಭಯಂಕರವಾದ ಶಬ್ದವನ್ನು (ಸಿಡಿಲು) ಮಾಡಿದನೆಂದು ಈ ವಾಕ್ಯದ ಮುಖ್ಯಾಭಿಪ್ರಾಯವು. ಮಳೆಯು ಹುಯ್ಯುತ್ತಿರುವಾಗ ಅಂತರಿಕ್ಷದಲ್ಲಿ ಅತಿ ಪ್ರಕಾಶಮಾನವಾಗಿ ತಟ್ಟನೆ ಹೊಳೆಯುವ ಮಿಂಚೇ ಇಂದ್ರನ ವಜ್ರಾಯುಧವೆಂದೂ ಆ ಮಿಂಚುಕಾಣಿಸಿದ ಅತ್ಯಲ್ಪಕಾಲದಲ್ಲಿಯೇ ಮಹಾಶಬ್ದದಿಂದ ಕೂಡಿದ ಸಿಡಿಲುಗುಡುಗುಗಳು ಕೇಳಿಸುವುದರಿಂದ ಆ ಶಬ್ದವು ಇಂದ್ರನ ವಜ್ರಾಯುಧ ಪ್ರಯೋಗದಿಂದ ಉಂಟಾಯಿತೆಂದೂ ತಿಳಿಸುವ ಅಂಶವು ಇಲ್ಲಿ ಉಕ್ತವಾಗಿದೆ.

**ನಿ ಮಾಯಿನಃ ದಾನವಸ್ಯ ಮಾಯಾಃ ಅಪಾದಯತ್ ಪಪಿವಾನ್ ಸುತಸ್ಯ**—ಈ ಋಕ್ಕಿನ ಉತ್ತರಾರ್ಧದ ಈ ವಾಕ್ಯದಲ್ಲಿ ಇಂದ್ರನು ಸೋಮಪಾನಮಾಡಿ ಶತ್ರುಗಳ ಕಪಟಗಳನ್ನು ನಾಶಮಾಡಿದನೆಂಬ ವಿಷಯವು ಉಕ್ತವಾಗಿದೆ. ವೃತ್ರವಧಾದಿಕಾರ್ಯಗಳಲ್ಲಿಯೂ ಇಂದ್ರನು ಸೋಮಪಾನಮಾಡಿ ತನ್ನ ಶಕ್ತಿಸಾಮರ್ಥ್ಯಗಳನ್ನೂ ಹೆಚ್ಚಿಸಿಕೊಂಡನೆಂದು ಅಲ್ಲಲ್ಲಿ ಹೇಳಿದೆ—

**ತ್ರಿಕದ್ರುಕೇಷ್ವಪಿಬತ್ಸುತಸ್ಯಾಸ್ಯ ಮದೇ ಅಹಿಮಿಂದ್ರೋ ಜಘಾನ ।**

(ಋ ಸಂ. ೨-೧೫-೧)

**ಅಸ್ಯ ಮಂದಾನೋ ಮಧ್ವೋ ವಜ್ರಹಸ್ತೋಽಹಿಮಿಂದ್ರೋ ಅರ್ಣೋವೃತಂ ವಿ ವೃಶ್ಚತ್ ।**

(ಋ. ಸಂ. ೨-೧೯-೨)

**ಉತೋ ನ್ವ ೧ ಸ್ಯ ಪಪಿವಾಂಸಮಿಂದ್ರಂ ನ ಕಶ್ಚನ ಸಹತ ಆಹವೇಷು ।**
**ಅಯಂ ಸ್ವಾದುರಿಹ ಮದಿಷ್ಠ ಆಸ ಯಸ್ಯೇಂದ್ರೋ ವೃತ್ರಹತ್ಯೇ ಮಮಾದ ॥**

(ಋ. ಸಂ. ೬-೪೭-೧, ೨)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನು ಪಾನಮಾಡಿದ ಸೋಮವು ವೃತ್ರವಧಕಾರ್ಯದಲ್ಲಿ ಬಹಳವಾಗಿ ಸಹಾಯವನ್ನುಂಟುಮಾಡಿತು ಎಂಬ ಅಭಿಪ್ರಾಯವು ವರ್ಣಿತವಾಗಿದೆ.

ಸಂಹಿತಾಪಾಠಃ

ಪಿಬಾಪಿಬೇದಿಂದ್ರ ಶೂರ ಸೋಮಂ ಮಂದಂತು ತ್ವಾ ಮಂದಿನಃ ಸುತಾಸಃ।
ಪೃಣಂತಸ್ತೇ ಕುಕ್ಷೀ ವರ್ಧಯಂತ್ವಿತ್ಥಾ ಸುತಃ ಪೌರ ಇಂದ್ರಮಾವ ॥ ೧೧॥

ಪದಪಾಠಃ

ಪಿಬ್ಯಪಿಬ । ಇತ್ । ಇಂದ್ರ । ಶೂರ । ಸೋಮಂ । ಮಂದಂತು । ತ್ವಾ । ಮಂದಿನಃ । ಸುತಾಸಃ ।

ಪೃಣಂತಃ । ತೇ । ಕುಕ್ಷೀ ಇತಿ । ವರ್ಧಯಂತು । ಇತ್ಥಾ । ಸುತಃ । ಪೌರಃ । ಇಂದ್ರಂ । ಆವ ॥ ೧೧ ॥

ಸಾಯಣಭಾಷ್ಯಂ

ಶೂರ ಬಲವನ್ ಹೇ ಇಂದ್ರ ಪಿಬ ಪಿಬೇತ್ । ಅಭಿಷುತಮಿಮಂ ಸೋಮಂ ಪಿಬೈವ । ಆದರಾ-ರ್ಥೌಷಾ ವೀಪ್ಸಾ । ಮಂದಿನೋ ಮದಕರಾಃ ಸುತಾಸ್ತ್ವೇಽಭಿಷುತಾಃ ಸೋಮಾಸ್ತ್ವಾ ಮಂದಂತು । ತ್ವಾಂ ಮಾದಯಂತು ॥ ಮದಿ ಸ್ತುತ್ಯಾದಿಷು । ವ್ಯತ್ಯಯೇನ ಪರಸ್ಮೈಪದಂ ॥ ತೇ ಸೋಮಾಸ್ತೇ ತವ ಕುಕ್ಷೀ ಉದರಸ್ಯೋಭೌ ಪಾರ್ಶ್ವೌ ಪೃಣಂತಃ ಪೂರಯಂತಃ ಸಂತಸ್ತ್ವಾಂ ವರ್ಧಯಂತು । ಇತ್ಥಾನೇನ ಪ್ರಕಾರೇಣ ಪೌರ ಉದರಪೂರಕಃ ಸುತೋಽಭಿಷುತಃ ಸೋಮ ಇಂದ್ರಂ ತ್ವಾಮಾವ । ತರ್ಪಯತು ॥ ಅವತೇಸ್ತರ್ಪ-ಣಾರ್ಥಸ್ಯ ಲಿಟಿ ರೂಪಂ ॥

ಪ್ರತಿಪದಾರ್ಥ

ಶೂರ—ಬಲಶಾಲಿಯಾದ । ಇಂದ್ರ—ಎಲೈ ಇಂದ್ರನೇ । ಸೋಮಂ—ಸೋಮರಸವನ್ನು । ಪಿಬಪಿ-ಬೇತ್—ಪೂರ್ಣವಾಗಿಯೂ ಕುಡಿ । ಮಂದಿನಃ—ಹರ್ಷದಾಯಕವಾದವೂ । ಸುತಾಸಃ—ಅಭಿಷುತವಾದವೂ ಆದ ಸೋಮರಸಗಳು । ತ್ವಾ—ನಿನ್ನನ್ನು । ಮಂದಂತು—ತೃಪ್ತಿಗೊಳಿಸಲಿ (ಮತ್ತು) । ತೇ—ನಿನ್ನ । ಕುಕ್ಷೀ—ಉದ ರದ ಎರಡು ಪಾರ್ಶ್ವಗಳನ್ನೂ । ಪೃಣಂತಃ—ತುಂಬುತ್ತಾ । ವರ್ಧಯಂತು—ಬೆಳೆಯುವಂತೆ ಮಾಡಲಿ । ಇತ್ಥಾ-ಈ ಪ್ರಕಾರವಾಗಿ । ಪೌರಃ—ಉದರಪೂರಕವಾದುದೂ । ಸುತಃ—ಅಭಿಷುತವಾದುದೂ ಆದ ಸೋಮವು । ಇಂದ್ರಂ-ಪ್ರಭುವಾದ ನಿನ್ನನ್ನು । ಆವ—ತೃಪ್ತಿಗೊಳಿಸಲಿ ।

ಭಾವಾರ್ಥ

ಪರಾಕ್ರಮಿಯಾದ ಎಲೈ ಇಂದ್ರನೇ, ಅರ್ಪಿತವಾದ ಈ ಸೋಮರಸವನ್ನು ಪೂರ್ಣವಾಗಿಯೂ ಕುಡಿ. ಹರ್ಷದಾಯಕವಾದವೂ, ಅಭಿಷುತವಾದವೂ ಆದ ಸೋಮರಸಗಳು ನಿನ್ನನ್ನು ತೃಪ್ತಿಗೊಳಿಸಲಿ. ಮತ್ತು ನಿನ್ನ ಉದರದ ಎರಡು ಪಾರ್ಶ್ವಗಳನ್ನೂ ತುಂಬುತ್ತಾ ಬೆಳೆಯುವಂತೆ ಮಾಡಲಿ. ಈ ಪ್ರಕಾರವಾಗಿ ಉದರಪೂರಕವಾದುದೂ ಹಿಂಡಲ್ಪಟ್ಟುದೂ ಆದ ಸೋಮರಸವು ಪ್ರಭುವಾದ ನಿನ್ನನ್ನು ತೃಪ್ತಿಗೊಳಿಸಲಿ

## English Translation

Drink, hero, Indra, drink the Soma: may the exhilarating juices delight you: may they, distending your flanks, augment (your prowess), and in this manner may the replenishing effused libation satisfy Indra.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಇಂದ್ರನ ಸೋಮಪಾನವಿಷಯವು ಉಕ್ತವಾಗಿರುವುದು. ಋಗ್ವೇದದಲ್ಲಿ ದೇವತೆಗಳನ್ನು ಸೋಮಪಾನಕ್ಕೆ ಆಹ್ವಾನಮಾಡುವಾಗ ಇಂದ್ರನನ್ನು ಆಹ್ವಾನಮಾಡಿರುವಷ್ಟು ಮತ್ತೆ ಯಾವ ದೇವತೆಯನ್ನೂ ಕರೆದಿಲ್ಲ, ದೇವತೆಗಳ ಸೋಮಪಾನವಿಚಾರದಲ್ಲಿ—

**ಮಾದ್ಯಂತೀವ ವೈ ಮಧ್ಯಂದಿನೇ ದೇವತಾಃ ಸಮೇವ ತೃತೀಯೆಸವನೇ ಮಾದಯಂತೇ ।**

(ಐ. ಬ್ರಾ. ೨೮-೩)

ಎಂದರೆ, ಮಾಧ್ಯಂದಿನಸವನದಲ್ಲಿ (ಮಧ್ಯಾಹ್ನದಲ್ಲಿ) ದೇವತೆಗಳು ಸೋಮಪಾನಮಾಡುವರು. ಮತ್ತು ತೃತೀಯ ಸವನದಲ್ಲಿ (ಸಾಯಂಕಾಲದಲ್ಲಿ) ದೇವತೆಗಳು ಅತಿಯಾಗಿ ಸೋಮಪಾನಮಾಡಿ ಮತ್ತರಾಗುವರು (ಹರ್ಷಗೊಳ್ಳುವರು) ಎಂದು ಹೇಳಿದೆ. ಇಂದ್ರನನ್ನು ಸೋಮಪಾನಮಾಡಬೇಕೆಂದೂ ಅಥವಾ ಇಂದ್ರನು ಸೋಮಪಾನದಿಂದ ಹರ್ಷಗೊಳ್ಳುವನೆಂದೂ (ಅಥವಾ ಹರ್ಷಗೊಂಡನೆಂದೂ) ಋ. ಸಂ. ೧-೪-೮ ; ೧-೩೨-೩ ; ೧-೮೪-೧ ; ೨-೧೫-೧ ; ೨-೧೫-೨ ; ೨-೧೯-೧ ; ೨-೨೨-೧ ; ೩-೩೬-೩ ; ೩-೪೦-೧ ; ೩-೪೨-೧ ; ೬-೨೩-೧, ೫, ೬ ; ೬-೨೭-೧ ; ೬-೨೯-೪ ; ೭-೨೨-೧ ; ೭-೨೯-೧ ; ೮-೩-೧ ; ೮-೮೧-೫, ೬, ; ೧೦-೧೦೪-೧ ಇತ್ಯಾದಿ ಋಕ್ಕುಗಳಲ್ಲಿ ವರ್ಣನೆಗಳಿವೆ.

**ಅರ್ವಾಙೇಹಿ ಸೋಮಕಾಮಂ ತ್ವಾಹುರಯಂ ಸುತಸ್ತಸ್ಯ ಪಿಬಾ ಮದಾಯ ।**
**ಉರುವ್ಯಚಾ ಜಠರ ಆ ವೃಷಸ್ವ ಪಿತೇವ ನಃ ಶೃಣುಹಿ ಹೂಯಮಾನಃ ॥**

(ಋ. ಸಂ. ೧-೧೦೪-೯)

ಎಂಬ ಋಕ್ಕಿನಲ್ಲಿ—ಎಲೈ ಇಂದ್ರನೇ ನಿನಗೆ ಸೋಮರಸವು ಬಹಳ ಪ್ರಿಯವೆಂದು ಪ್ರಾಜ್ಞರು ಹೇಳುತ್ತಾರೆ. ನಾವು ನಿನಗಾಗಿ ಈ ಸೋಮರಸವನ್ನು ಹಿಂಡಿ ಸಿದ್ಧಮಾಡಿದ್ದೇವೆ. ಆದ್ದರಿಂದ ನಮ್ಮ ಅಭಿಮುಖವಾಗಿ ಬಂದು ನಿನ್ನ ಹರ್ಷಾರ್ಥವಾಗಿ ಆ ಸೋಮರಸವನ್ನು ಪಾನಮಾಡು. ವಿಸ್ತಾರವಾಗಿ ವ್ಯಾಪಿಸುವ ಅವಯವಗಳುಳ್ಳವನಾದ್ದರಿಂದ ನಿನ್ನ ಉದರವನ್ನು ಹಿಗ್ಗಿಸಿ ಆ ರಸವನ್ನು ತುಂಬು. ನಾವು ಸ್ತೋತ್ರಮಾಡಿ ಕರೆದಾಗ ತಂದೆಯು ಮಕ್ಕಳ ಮಾತನ್ನು ಕೇಳುವಂತೆ ನೀನೂ ಸಹ ನಮ್ಮ ಆಹ್ವಾನವನ್ನು ಕೇಳು—ಎಂದು ಇಂದ್ರನಿಗೆ ಸೋಮಪಾನದಲ್ಲಿರುವ ಅತಿಶಯವಾದ ಆಸಕ್ತಿಯನ್ನು ವರ್ಣಿಸಿದೆ. ಮತ್ತು—

**ಇಂದ್ರ ಇತ್ಸೋಮಪಾ ಏಕ ಇಂದ್ರಃ ಸುತಪಾ ವಿಶ್ವಾಯುಃ । ಅಂತರ್ದೇವಾನ್ಮರ್ತ್ಯಾಂಶ್ಚ ॥**

(ಋ. ಸಂ. ೮-೨-೪)

ಎಂಬ ಋಕ್ಕಿನಲ್ಲಿ—ದೇವತೆಗಳಲ್ಲಿಯೂ, ಮನುಷ್ಯರಲ್ಲಿಯೂ ಇಂದ್ರನೇ ಅತಿಶಯವಾಗಿ ಸೋಮಪಾನಮಾಡುವವನು ಎಂದೂ ಹೇಳಿದೆ.

**ಅದ್ರೋಘ ಸತ್ಯಂ ತವ ತನ್ಮಹಿತ್ವಂ ಸದ್ಯೋ ಯಜ್ಜಾತೋ ಅಪಿಬೋ ಹ ಸೋಮಂ ।**

(ಋ. ಸಂ. ೩-೩೨-೯)

**ತ್ವಂ ಸದ್ಯೋ ಅಪಿಬೋ ಜಾತ ಇಂದ್ರ ಮದಾಯ ಸೋಮಂ ಪರಮೇ ವ್ಯೋಮನ್ ।**

(ಋ. ಸಂ. ೩-೩೨-೧೦)

ಎಂಬ ಋಕ್ಕುಗಳಲ್ಲಿ—ಎಲೈ ಇಂದ್ರನೇ ನೀನು ಹುಟ್ಟಿದ ಕೂಡಲೆ ಸೋಮವನ್ನು ಪಾನಮಾಡಿದೆ. ಇದಲ್ಲವೇ ನಿನ್ನ ಮಹಿಮೆಯು ಎಂದು ಹೇಳಿದೆ.

**ಏಕಯಾ ಪ್ರತಿಧಾಪಿಬತ್ಸಾಕಂ ಸರಾಂಸಿ ತ್ರಿಂಶತಂ । ಇಂದ್ರಃ ಸೋಮಸ್ಯ ಕಾಣುಕಾ ॥**

(ಋ. ಸಂ. ೮-೭೭-೪)

ಎಂಬ ಋಕ್ಕಿನಲ್ಲಿ ಇಂದ್ರನು ಒಂದೇ ಗುಟುಕಿಗೆ ಮೂವತ್ತು ಪಾತ್ರೆಗಳ ತುಂಬ ಸೋಮರಸವನ್ನು ಪಾನಮಾಡಿದನೆಂದು ಹೇಳಿದೆ. ಈ ಋಕ್ಕಿನ ನಿರ್ವಚನವನ್ನು ಹೇಳುತ್ತಾ ಯಾಸ್ಕರು—

**ತತ್ರೈತದ್ಯಾಜ್ಞಿಕಾ ವೇದಯಂತೇ—ತ್ರಿಂಶದುಕ್ಥಪಾತ್ರಾಣಿ ಮಾಧ್ಯಂದಿನೇ ಸವನ ಏಕದೇವತಾನಿ ತಾನ್ಯೇತಸ್ಮಿನ್ ಕಾಲ ಏಕೇನ ಪ್ರತಿಧಾನೇನ ಪಿಬಂತಿ ತಾನ್ಯತ್ರ ಸರಾಂಸ್ಯುಚ್ಯಂತೇ ॥**

(ನಿ. ೫-೧೧)

ಎಂದು ಹೇಳಿದ್ದಾರೆ. ಎಂದರೆ ಸರಾಂಸಿ ಶಬ್ದಕ್ಕೆ ಉಕ್ಥಪಾತ್ರೆಗಳೆಂದೂ ಮೂವತ್ತು ಪಾತ್ರೆಗಳ ತುಂಬ ಸೋಮರಸವನ್ನು ಇಂದ್ರನು ಮಾಧ್ಯಂದಿನಸವನಕಾಲದಲ್ಲಿ ಪಾನಮಾಡಿದನೆಂದೂ ಅಭಿಪ್ರಾಯವು. ಋ. ಸಂ. ೬-೧೭-೧೧ ಮತ್ತು ೮-೭-೧೦ನೇ ಋಕ್ಕುಗಳಲ್ಲಿ **ತ್ರೀಣಿ ಸರಾಂಸಿ** ಮೂರು ಪಾತ್ರೆಗಳ ತುಂಬ ಸೋಮಪಾನಮಾಡಿದನೆಂದು ಹೇಳಿದೆ. ಅನೇಕ ಸಂದರ್ಭಗಳಲ್ಲಿ ಯಜ್ಞಮಾಡುವ ಯಜಮಾನರೂ, ಋತ್ವಿಜರೂ, ಋಷಿಗಳೂ ಇಂದ್ರನನ್ನು ಸೋಮಪಾನಕ್ಕಾಗಿ ಪ್ರಾರ್ಥಿಸಿ ಕರೆಯುವಾಗ—**ಧೃಷತ್ ಪಿಬ ಕಲಶೇ ಸೋಮಮಿಂದ್ರ** (ಋ. ಸಂ. ೬-೪೭-೬) ಎಲೈ ಇಂದ್ರನೇ, ಈ ಕಲಶದಲ್ಲಿರುವ ಸೋಮರಸವನ್ನು ನಿರ್ಭಯವಾಗಿ ಪಾನಮಾಡು; **ಋಶ್ಯೋ ನ ತೃಷ್ಯನ್ನವಪಾನಮಾ ಗಹಿ ಪಿಬಾ ಸೋಮಂ ವಶಾँ ಅನು** (ಋ. ಸಂ. ೮-೪-೧೦) ಎಲೈ ಇಂದ್ರನೇ, ಬಾಯಾರಿಕೆಯಿಂದ ಬಳಲಿದ ಜಿಂಕೆಯು ನೀರುಕುಡಿಯುವಂತೆ, ಬೇಗನೆ ಬಂದು ಸೋಮಪಾನಮಾಡು; **ಧನ್ವಚರೋ ನ ವಂಸಗಸ್ತೃಷಾಣಶ್ಚಕ್ರಮಾನಃ ಪಿಬತು ದುಗ್ಧಮಂಶುಂ** ಎಲೈ ಇಂದ್ರನೇ, ನೀರಿಲ್ಲದ ಬೆಂಗಾಡಿನಲ್ಲಿ ಬಾಯಾರಿಕೆಯಿಂದ ಅಲೆದು ಬೆಂಡಾಗಿರುವ ವೃಷಭವು ನೀರುಕುಡಿಯುವಂತೆ, ಸೋಮರಸವನ್ನು ಪಾನಮಾಡು; ಇತ್ಯಾದಿ ಉಪಮಾನಗಳಿಂದ ಇಂದ್ರನು ಸೋಮಪಾನಮಾಡಲೆಂದು ಆಹ್ವಾನಮಾಡಿದ್ದಾರೆ. ಇಂದ್ರನ ಉದರವು ಸರೋವರದಂತೆ (ಅಥವಾ ಸಮುದ್ರದಂತೆ) ದೊಡ್ಡದಾಗಿರುವುದೆಂದೂ ಅವುಗಳನ್ನು ಇಂದ್ರನು ಸೋಮಪಾನದಿಂದ ತುಂಬಬೇಕೆಂದೂ ಇತ್ಯಾದಿ ವರ್ಣನೆಗಳು, ಋ. ಸಂ. ೧-೮-೭; ೧-೧೦೪-೯; ೨-೧೭-೧೧; ೨-೧೪-೧೦; ೨-೧೬-೨; ೩-೩೫-೬; ೩-೩೬-೭,೮; ೩.೪೦-೫; ೩-೪೭-೧; ೩-೫೧-೧೨; ೮-೧೨-೨೩; ೮-೨-೧; ೮-೧೭-೫,೮; ೮-೬೭-೭; ೮-೮೧-೨೨, ೨೩, ೨೪; ೧೦-೨೮-೨; ೧೦-೪೩-೭; ೧೦-೧೦೪-೨; ಇತ್ಯಾದಿ ಋಕ್ಕುಗಳಲ್ಲಿ ಕಂಡುಬರುವುದು.

ಇಂದ್ರನು ಸೋಮಪಾನಮಾಡಿ ಅದರಿಂದ ತನಗುಂಟಾದ ಸಂತೋಷಾತಿಶಯವನ್ನು ಋ. ಸಂ. ೧೦-೧೧೯ನೇ ಸೂಕ್ತದಲ್ಲಿ ನಾನಾವಿಧವಾಗಿ ತಾನೇ ವರ್ಣಿಸಿದಾನೆ—

ಇತಿ ವಾ ಇತಿ ಮೇ ಮನೋ ಗಾಮಶ್ವಂ ಸನುಯಾಮಿತಿ । ಕುವಿತ್ಸೋಮಸ್ಯಾಪಾಮಿತಿ ॥ ೧॥
ಪ್ರ ವಾತಾ ಇವ ದೋಧತ ಉನ್ಮಾ ಪೀತಾ ಅಯಂಸತ । ಕುವಿತ್ಸೋಮಸ್ಯಾಪಾಮಿತಿ ॥ ೨ ॥
ಉನ್ಮಾ ಪೀತಾ ಅಯಂಸತ ರಥಮಶ್ವಾ ಇವಾಶವಃ । ಕುವಿತ್ಸೋಮಸ್ಯಾಪಾಮಿತಿ ॥ ೩ ॥
ಅಹಂ ತಷ್ಟೇವ ವಂಧುರಂ ಪರ್ಯಚಾಮಿ ಹೃದಾ ಮತಿಂ । ಕುವಿತ್ಸೋಮಸ್ಯಾಪಾಮಿತಿ ॥ ೪ ॥
ಉಪ ಮಾ ಮತಿರಸ್ಥಿತ ವಾಶ್ರಾ ಪುತ್ರಮಿವ ಪ್ರಿಯಂ । ಕುವಿತ್ಸೋಮಸ್ಯಾಪಾಮಿತಿ ॥ ೫ ॥
ನಹಿ ಮೇ ಅಕ್ಷಿಪಚ್ಚನಾಚ್ಛಾಂತ್ಸುಃ ಪಂಚ ಕೃಷ್ಟಯಃ । ಕುವಿತ್ಸೋಮಸ್ಯಾಪಾಮಿತಿ ॥ ೬ ॥
ನಹಿ ಮೇ ರೋದಸೀ ಉಭೇ ಅನ್ಯಂ ಪಕ್ಷಂ ಚನ ಪ್ರತಿ । ಕುವಿತ್ಸೋಮಸ್ಯಾಪಾಮಿತಿ ॥ ೭ ॥
ಅಭಿ ದ್ಯಾಂ ಮಹಿನಾ ಭುವಮಭೀಇಮಾಂ ಪೃಥಿವೀಂ ಮಹೀಂ । ಕುವಿತ್ಸೋಮಸ್ಯಾಪಾಮಿತಿ ॥
ಹಂತಾಹಂ ಪೃಥಿವೀಮಿಮಾಂ ನಿ ದಧಾನೀಹ ವೇಹ ವಾ । ಕುವಿತ್ಸೋಮಸ್ಯಾಪಾಮಿತಿ ॥ ೯ ॥
ಓಷಮಿತ್ಪೃಥಿವೀಮಹಂ ಜಂಘನಾನೀಹ ವೇಹ ವಾ । ಕುವಿತ್ಸೋಮಸ್ಯಾಪಾಮಿತಿ ॥ ೧೦ ॥
ದಿವಿ ಮೇ ಅನ್ಯಃ ಪಕ್ಷೋಽಧೋ ಅನ್ಯಮಚೀಕೃಷಂ ಕುವಿತ್ಸೋಮಸ್ಯಾಪಾಮಿತಿ ॥ ೧೧ ॥
ಅಹಮಸ್ಮಿ ಮಹಾಮಹೋಽಭಿನಭ್ಯಮುದೀಷಿತಃ । ಕುವಿತ್ಸೋಮಸ್ಯಾಪಾಮಿತಿ ॥ ೧೨ ॥
ಗೃಹೋ ಯಾಮ್ಯರಂಕೃತೋ ದೇವೇಭ್ಯೋ ಹವ್ಯವಾಹನಃ । ಕುವಿತ್ಸೋಮಸ್ಯಾಪಾಮಿತಿ ॥

(ಋ. ಸಂ. ೧೦-೧೧೯-೧ ರಿಂದ ೧೩)

೧. ನಾನು ಸೋಮಪಾನಮಾಡಿರುವೆನು. (ಆ ಸೋಮಪಾನದಿಂದುಂಟಾದ ಹರ್ಷದಿಂದ ನನ್ನನ್ನು ಸ್ತೋತ್ರಮಾಡುವವರಿಗೆ) ಗೋವುಗಳನ್ನೂ, ಕುದುರೆಗಳನ್ನೂ ಕೊಡಬೇಕೆಂದು ಮನಸ್ಸುಮಾಡಿರುವೆನು.

೨. ನಾನು ಪಾನಮಾಡಿರುವ ಸೋಮವು ರಭಸವಾಗಿ ಬೀಸುವ ಗಾಳಿಯಂತೆ ನನ್ನನ್ನು ಉತ್ತೇಜನಗೊಳಿಸುತ್ತದೆ. ನಾನು ಸೋಮಪಾನಮಾಡಿರುವೆನು.

೩. ನಾನು ಪಾನಮಾಡಿರುವ ಸೋಮವು ರಥದ ಅಶ್ವಗಳು ರಥವನ್ನು ವೇಗವಾಗಿ ಒಯ್ಯುವಂತೆ ನನ್ನ ಮನಸ್ಸನ್ನು ಉಲ್ಬಣಗೊಳಿಸುತ್ತದೆ. ನಾನು ಸೋಮಪಾನಮಾಡಿರುವೆನು.

೪. ನನ್ನನ್ನು ಭಜಿಸುವವರು ಪಠಿಸಿದ ಸ್ತೋತ್ರವು, ಗೋವು ತನ್ನ ಪ್ರೀತಿಪಾತ್ರವಾದ ಕರುವಿನ ಸಮೀಪಕ್ಕೆ ಆತುರದಿಂದ ಬರುವಂತೆ ನನ್ನನ್ನು ತ್ವರಿತಗೊಳಿಸುತ್ತದೆ. ನಾನು ಸೋಮಪಾನಮಾಡಿರುವೆನು.

೫. ಮರಗೆಲಸಮಾಡುವ ಬಡಗಿಯು ಮರದ ತುಂಡನ್ನು ತಿರುಗಿಸುವಂತೆ ಆ ಸ್ತೋತ್ರವನ್ನು ನಾನು ನನ್ನ ಮನಸ್ಸಿನಲ್ಲಿ ತಿರಿಗಿಸುತ್ತೇನೆ (ಮನನಮಾಡುತ್ತೇನೆ). ನಾನು ಸೋಮಪಾನಮಾಡಿರುವೆನು

೬. ಪಂಚಜನರು (ಐದು ಪಂಗಡದ ಜನಾಂಗದವರು) ನನ್ನ ಕಣ್ಣಿಗೆ ಒಂದು ಹುಲ್ಲುಕಡ್ಡಿ (ಅತಿ ಸಣ್ಣ ವಸ್ತು) ಗಿಂತ ಕಡೆಯಾಗಿ ಕಾಣಿಸುವರು. ನಾನು ಸೋಮಪಾನಮಾಡಿದ್ದೇನೆ.

೭. (ಭೂವ್ಯಂತರಿಕ್ಷಗಳೆಂಬ) ಎರಡು ಲೋಕಗಳು ಸೇರಿದರೂ ನನ್ನ (ಶಕ್ತಿಯ) ಅರ್ಧಕ್ಕೂ ಸಾಟಿಯಾಗಲಾರವು. ನಾನು ಸೋಮಪಾನಮಾಡಿದ್ದೇನೆ.

೮. ನಾನು ಮಹಿಮೆಯಲ್ಲಿ (ಶಕ್ತಿಸಾಮರ್ಥ್ಯಗಳಲ್ಲಿ) ಸ್ವರ್ಗವನ್ನೂ, ಈ ವಿಸ್ತಾರವಾದ ಭೂಮಿಯನ್ನೂ ಮೀರಿದ್ದೇನೆ. ನಾನು ಸೋಮಪಾನಮಾಡಿರುವೆನು.

೯. ಹಾ ! ಈ ಭೂಮಿಯನ್ನು ಇಲ್ಲಾಗಲಿ, ಮತ್ತೆಲ್ಲಾಗಲಿ ನಾನು ಸ್ಥಾಪಿಸುವೆನು. ನಾನು ಸೋಮಪಾನ ಮಾಡಿರುವೆನು.

೧೦. ಹಾ ! ನಾನು ಈ ಭೂಮಿಯನ್ನು ಇಲ್ಲಿಂದಲ್ಲಿಗೆ ವೇಗವಾಗಿ ಬಡಿದಟ್ಟುವೆನ್ನು. ನಾನು ಸೋಮಪಾನ ಮಾಡಿರುವೆನು.

೧೧. ನನ್ನ (ಶರೀರದ) ಅರ್ಧಭಾಗವು ಅಂತರಿಕ್ಷದಲ್ಲಿದೆ. ಉಳಿದ ಅರ್ಧಭಾಗವನ್ನು ಕೆಳಗೆ ಇಳಿಸಿರುವೆನು. ನಾನು ಸೋಮಪಾನಮಾಡಿರುವೆನು.

೧೨. ನಾನು ನನ್ನ ಮಹಾಮಹಿಮೆಯಿಂದ ಸ್ವರ್ಗಕ್ಕೆ ಏರಿಸಲ್ಪಟ್ಟಿರುವೆನು. ನಾನು ಸೋಮಪಾನಮಾಡಿ ರುವೆನು.

೧೩. ನಾನು (ಅಗ್ನಿಯಂತೆ) ಯಜ್ಞಗೃಹದಲ್ಲಿ ಋತ್ವಿಜನಾಗಿಯೂ, ದೇವತೆಗಳಿಗೆ ಹವಿಸ್ಸನ್ನು ವಹಿಸು ವವನೂ ಆಗಿದ್ದೇನೆ. ನಾನು ಸೋಮಪಾನಮಾಡಿರುವೆನು.

ಇತ್ಯಾದಿ ಅನೇಕ ಋಕ್ಕುಗಳಲ್ಲಿ ಇಂದ್ರನ ಸೋಮಪಾನ ವರ್ಣನೆಯು ಉಕ್ತವಾಗಿರುವುದು. ಅತಿ ವಿಸ್ತಾರ ವಾಗುವುದರಿಂದ ಅವುಗಳನ್ನೆಲ್ಲಾ ಇಲ್ಲಿ ವಿವರಿಸಲು ಸಾಧ್ಯವಿಲ್ಲ. ಆಯಾ ಸಂದರ್ಭಗಳಲ್ಲಿ ಮಾತ್ರ ಆ ವಿಷಯಗಳನ್ನು ವಿಮರ್ಶಿಸಲಾಗುವುದು.

---

**ಸಂಹಿತಾಪಾಠಃ**

ತ್ವೇ ಇಂದ್ರಾಪ್ಯಭೂಮ ವಿಪ್ರಾ ಧಿಯಂ ವನೇಮ ಋತಯಾ ಸಪಂತಃ ।

ಅವಸ್ಯವೋ ಧೀಮಹಿ ಪ್ರಶಸ್ತಿಂ ಸದ್ಯಸ್ತೇ ರಾಯೋ ದಾವನೇ ಸ್ಯಾಮ ॥೧॥

**ಪದಪಾಠಃ**

ತ್ವೇ ಇತಿ । ಇಂದ್ರ । ಅಪಿ । ಅಭೂಮ । ವಿಪ್ರಾಃ । ಧಿಯಂ । ವನೇಮ । ಋತ್ಸಯಾ । ಸಪಂತಃ ।

ಅವಸ್ಯವಃ । ಧೀಮಹಿ । ಪ್ರsಶಸ್ತಿಂ । ಸದ್ಯಃ । ತೇ । ರಾಯಃ । ದಾವನೇ । ಸ್ಯಾಮ ॥ ೧ ॥

**ಸಾಯಣಭಾಷ್ಯಂ**

ಹೇ ಇಂದ್ರ ವಿಪ್ರಾ ಮೇಧಾವಿನೋ ವಯಂ ತ್ವೇ ತ್ವಯಿ ತ್ವದ್ಧೃದಯೇಽಭೂಮ । ಅಪಿ ಸಾನು-ನಯಪ್ರಶ್ನೇ ವರ್ತತೇ । ತೇ ತವ ಹೃದಯೇ ಕಿಂ ವರ್ತಾಮಹ ಇತಿ । ಋತೆಯಾ । ಋತಂ ಕರ್ಮಫಲಂ । ತತ್ಕಾಮನಯಾ ಸಪಂತಸ್ತ್ವಾಂ ಪರಿಚರಣಾಖ್ಯೇನ ಕರ್ಮಣಾ ಸ್ಪೃಶಂತೋ ವಯಂ ಧಿಯಂ ತ್ವದುದ್ದೇ-ಶೇನ ಕ್ರಿಯಮಾಣಂ ಕರ್ಮ ವನೇಮ । ಸಂಭಜೇಮಹಿ ॥ ವನ ಷಣ ಸಂಭಕ್ತೌ । ಆಶೀರ್ಲಿಙಿ ಲಿಙ್ಯಾ-

**ಶಿಷ್ಯಜ್ಞತ್ಯಜ್ಪ್ರತ್ಯಯಃ ॥ ಕಿಂಚ ಅವಸ್ಯವಸ್ತ್ವತ್ತೋ ರಕ್ಷಣಮಿಚ್ಛಂತಃ ಪ್ರಶಸ್ತಿಂ । ಶಸ್ತಿಃ ಶಂಸನಂ । ಪ್ರಕೃಷ್ಟಶಂಸನಂ ಸ್ತೋತ್ರಂ ಧೀಮಹಿ । ತ್ವಯಿ ನಿದಧೀಮಹಿ । ತತಸ್ತೇ ತ್ವದೀಯಸ್ಯ ರಾಯೋ ಧನಸ್ಯ ದಾವನೇ ದಾನಾಯ ಪಾತ್ರಭೂತಾಃ ಸದ್ಯಃ ಸ್ಯಾಮ । ಇದಾನೀಂ ಭವೇಮ ॥**

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ವಿಪ್ರಾಃ**—ಮೇಧಾವಿಗಳಾದ ನಾವು । **ತ್ವೇ**—ನಿನ್ನ ಹೃದಯದಲ್ಲಿಯೇ । **ಅಭೂಮ**—ಇರುವಂತಾಗಲಿ । **ಋತಯಾ**—ಕರ್ಮಫಲದ ಇಚ್ಛೆಯಿಂದ । **ಸಪಂತಃ**—ನಿನ್ನನ್ನುಪಚರಿಸುತ್ತಾ । **ಧಿಯಂ**—ನಿನ್ನನ್ನುದ್ದೇಶಿಸಿದ ಕರ್ಮವನ್ನು । **ವನೇಮ**—ಭಜಿಸುತ್ತೇವೆ । **ಅವಸ್ಯವಃ**—ನಿನ್ನ ರಕ್ಷಣೆಯನ್ನು ಇಚ್ಛಿಸಿದವರಾಗಿ । **ಪ್ರಶಸ್ತಿಂ**—ನಿನ್ನ ಪ್ರಶಂಸೆಯನ್ನು । **ಧೀಮಹಿ**—ಅರ್ಪಿಸುತ್ತೇವೆ । **ತೇ**—ನಿನ್ನ । **ರಾಯಃ**—ಧನದ । **ದಾವನೇ**—ದಾನಕ್ಕೆ । **ಸದ್ಯಃ ಸ್ಯಾಮ**—ಈಗಲೇ ಪಾತ್ರರಾಗೋಣ ।

ಭಾವಾರ್ಥ

ಎಲೈ ಇಂದ್ರನೇ, ಮೇಧಾವಿಗಳಾದ ನಾವು ನಿನ್ನ ಹೃದಯದಲ್ಲಿಯೇ ಇರುವಂತಾಗಲಿ. ಕರ್ಮಫಲದ ಇಚ್ಛೆಯಿಂದ ನಿನ್ನನ್ನುಪಚರಿಸುತ್ತಾ ನಿನ್ನನ್ನುದ್ದೇಶಿಸಿದ ಕರ್ಮವನ್ನು ಭಜಿಸುತ್ತೇವೆ. ನಿನ್ನ ರಕ್ಷಣೆಯನ್ನು ಇಚ್ಛಿಸಿದವರಾಗಿ ನಿನ್ನ ಪ್ರಶಂಸೆಯನ್ನು ಅರ್ಪಿಸುತ್ತೇವೆ. ನಿನ್ನ ಧನದ ದಾನಕ್ಕೆ ಈಗಲೇ ಪಾತ್ರರಾಗೋಣ.

English Translation

May we, your pious (worshippers), abide in you : approaching you with devotion, may we enjoy (the reward of) our adoration : desirous of protection, we meditate your glorification ; may we ever be (thought worthy) of the gift of your treasures.

ವಿಶೇಷವಿಷಯಗಳು

**ಅಪಿ—ಅಪೀತಿ ಸಂಸರ್ಗಂ** (ನಿ. ೧-೪) ಅಪಿ ಎಂಬ ಶಬ್ದವು ಸಾಧಾರಣವಾಗಿ ಎರಡು ಪದಗಳಿಗಿರುವ ಸಂಸರ್ಗ ಅಥವಾ ಸಂಬಂಧವನ್ನು ಸೂಚಿಸುತ್ತದೆ. ಸಂಸರ್ಗವೆಂದರೆ ಒಂದು ವಸ್ತುವಿನ ಜತೆಗೆ ಇನ್ನೊಂದನ್ನು ಸೇರಿಸುವುದು. ಉದಾ—**ಅಹಸ್ಸು ರಾತ್ರಿಷ್ವಪಿ** ಎಂದರೆ ಹಗಲಿನಲ್ಲಿ, ಮತ್ತು ರಾತ್ರಿಯಲ್ಲಿಯೂ ಕೂಡ; ಹಗಲಿನಲ್ಲಿ ಯಾವ ಕಾರ್ಯವು ನಡೆಯುವುದೋ ಅದು ರಾತ್ರಿಯಲ್ಲಿಯೂ ನಡೆಯುವುದು ಎಂಬ ರಾತ್ರಿಗೂ ಹಗಲಿಗೂ ಇರುವ ಸಂಬಂಧವನ್ನು ಅಥವಾ ಸಮಾನಧರ್ಮವನ್ನು ಅಪಿ ಎಂಬ ಶಬ್ದವು ಸೂಚಿಸುವುದು. ಪ್ರಕೃತವಾದ ಋಕ್ಕಿನಲ್ಲಿ—**ಅಪಿ ಸಾನುನಯಪ್ರಶ್ನೇ ವರ್ತತೇ** ಎಂದು ಸಾಯಣರು ಹೇಳಿರುವಂತೆ ವಿನಯಪೂರ್ವಕವಾದ ಪ್ರಾರ್ಥನೆಯನ್ನು ಸೂಚಿಸುವುದಾಗಿದೆ.

**ವಿಪ್ರಾಃ—ಮೇಧಾವಿನೋ ವಯಂ**—ಮೇಧಾವಿಗಳಾದ ನಾವು. ಇಲ್ಲಿ ಅಸ್ಮಚ್ಛಬ್ದಪ್ರಯೋಗವಿಲ್ಲದಿದ್ದರೂ ಈ ಋಕ್ಕಿನಲ್ಲಿ **ವನೇಮ, ಸ್ಯಾಮ** ಎಂಬ ಉತ್ತಮಪುರುಷಕ್ರಿಯಾಪದಗಳಿರುವುದರಿಂದ ವಯಂ-ನಾವು ಎಂಬ ಶಬ್ದವನ್ನು ಅಧ್ಯಾಹಾರಮಾಡಿಕೊಳ್ಳಬೇಕು.

ಋತಯಾ—ಋತಶಬ್ದದ ನಾನಾರ್ಥಗಳನ್ನು ನಾವು ಋ. ಸಂ. ಭಾಗ ೧೦ ಪುಟ 143 ಮತ್ತು 673 ರಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ. ಇಲ್ಲಿ ಋತಶಬ್ದಕ್ಕೆ ಭಾಷ್ಯಕಾರರು ಕರ್ಮಫಲಂ ಎಂದರ್ಥಮಾಡಿ ಋತಯಾ—ಆ ಕರ್ಮಫಲಾಪೇಕ್ಷೆಯಿಂದ ಎಂದು ವಿವರಿಸಿರುವರು.

ಧಿಯಂ ವನೇಮ ಋತಯಾ ಸಪಂತಃ—ಎಲೈ ಇಂದ್ರನೇ, ನಾವು ಮಾಡುತ್ತಿರುವ ಕರ್ಮಫಲಾಪೇಕ್ಷೆಯಿಂದ ನಿನ್ನನ್ನು ಸೇವಿಸುತ್ತಾ ಅಥವಾ ನಿನ್ನನ್ನುದ್ದೇಶಿಸಿ ಕರ್ಮಮಾಡುತ್ತಾ ನಿನ್ನ ಸಮೀಪಕ್ಕೆ ಬರುವೆವು. (ನಿನ್ನನ್ನು ಹೊಂದುವೆವು) ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು.

ತ್ವೇ ಇಂದ್ರಾಸ್ಯಭೂಮ—ವಯಂ ತ್ವದ್ಧೃದಯೇಽಭೂಮ । ನಾವು ನಿನ್ನಲ್ಲಿಯೇ ನೆಟ್ಟಮನಸುಳ್ಳವರಾಗಿರೋಣ ಅಥವಾ ನಾವು ನಿನಗೆ ಪ್ರೀತಿಪಾತ್ರರಾಗುವಂತೆ ಇರೋಣ ಎಂದರ್ಥವು. ಉತ್ತರಾರ್ಧದ ಅಭಿಪ್ರಾಯವು ಸ್ಪಷ್ಟವಾಗಿರುವುದು.

---

ಸಂಹಿತಾಪಾಠಃ

ಸ್ಯಾಮ ತೇ ತ ಇಂದ್ರ ಯೇ ತ ಊತೀ ಅವಸ್ಯವ ಊರ್ಜಂ ವರ್ಧಯಂತಃ।

ಶುಷ್ಮಿಂತಮಂ ಯಂ ಚಾಕನಾಮ ದೇವಾಸ್ಮೇ ರಯಿಂ ರಾಸಿ ವೀರವಂತಂ॥

ಪದಪಾಠಃ

ಸ್ಯಾಮ । ತೇ । ತೇ । ಇಂದ್ರ । ಯೇ । ತೇ । ಊತೀ । ಅವಸ್ಯವಃ । ಊರ್ಜಂ । ವರ್ಧಯಂತಃ ।

ಶುಷ್ಮಿನ್ಽತಮಂ । ಯಂ । ಚಾಕನಾಮ । ದೇವ । ಅಸ್ಮೇ ಇತಿ । ರಯಿಂ । ರಾಸಿ । ವೀರಽವಂತಂ ॥ ೧೩ ॥

ಸಾಯಣಭಾಷ್ಯಂ

ಹೇ ಇಂದ್ರ ತೇ ತವೋತೀ ಊತ್ಯಾ ಪ್ರಣಯನೇನ ॥ ಅವತೇಃ ಪ್ರಾಪ್ತ್ಯರ್ಥಸ್ಯ ಕ್ತಿನಿ ರೂಪಂ ॥ ಯೇ ತೇ ತವಾವಸ್ಯವೋ ರಕ್ಷಾಕಾಮಾ ಊರ್ಜಂ ಹವಿರ್ಲಕ್ಷಣಮನ್ನಂ ವರ್ಧಯಂತೋ ಭವಂತಿ ತೇ ತವ ವಯಂ ತೇ ಸ್ಯಾಮ । ತ್ವದಧೀನಾ ಭವೇಮ । ದೇವ ದ್ಯೋತಮಾನ ಹೇ ಇಂದ್ರ ಶುಷ್ಮಿಂತಮಂ ದಾನಭಾಗಾಯೋರ್ಹತಯಾ ಬಲವತ್ತಮಂ ಯದ್ವಾ ಶತ್ರೂಣಾಂ ಶೋಷಯಿತೃತಮಂ ಯಂ ರಯಿಂ ಚಾಕನಾಮ । ಕಾಮಯಾಮಹೇ ॥ ಕನತೇಃ ಕಾಂತ್ಯರ್ಥಸ್ಯ ಯಙ್ಲುಗಂತಸ್ಯ ಲೋಟಿ ರೂಪಂ ॥ ವೀರವಂತಂ ಪುತ್ರಪೌತ್ರೈಃ ಸಹಿತಂ ತಾದೃಶಂ ರಯಿಮಸ್ಮೇ ಅಸ್ಮಭ್ಯಂ ರಾಸಿ । ದೇಹಿ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ಊತೀ—ಅನುಗ್ರಹದಿಂದ । ಯೇ—ಯಾವ ಭಕ್ತರು । ತೇ—ನಿನ್ನ । ಅವಸ್ಯವಃ—ರಕ್ಷಣೆಯನ್ನು ಇಚ್ಛಿಸಿದವರಾಗಿ । ಊರ್ಜಂ—ಹವಿಸ್ಸಿನರೂಪದ ಅನ್ನವನ್ನು ।

**ವರ್ಧಯಂತಃ**—ಅಧಿಕವಾಗಿ ಅರ್ಪಿಸಿ ನಿನ್ನ ಶಕ್ತಿಯನ್ನು ವೃದ್ಧಿಮಾಡುತ್ತಾರೆಯೋ । **ತೇ**—ಅವರ ಗುಂಪಿಗೆ ಸೇರಿದವರಾಗಿ । **ಸ್ಯಾಮ**—ನಾವೂ ಆಗುವೆವು । **ದೇವ**—ದೇವತಾತ್ಮನಾದ ಎಲೈ ಇಂದ್ರನೇ । **ಶುಷ್ಮಿಂತಮಮ್**—ಶತ್ರುಗಳನ್ನು ಶೋಷಿಸತಕ್ಕ ಬಲವುಳ್ಳ । **ಯಂ**—ಯಾವ ಧನವನ್ನು । **ಚಾಕನಾಮ**—ಇಚ್ಛಿಸುತ್ತೇವೆಯೋ । **ವೀರವಂತಂ**—ವೀರಪುತ್ರಾದಿಗಳಿಂದ ಕೂಡಿದ । **ರಯಿಂ**—ಅಂತಹ ಧನವನ್ನು । **ಅಸ್ಮೇ**—ನಮಗೆ । **ರಾಸಿ**—ಕೊಡು ।

ಭಾವಾರ್ಥ

ಎಲೈ ಇಂದ್ರನೇ, ಯಾವ ಯಾವ ಭಕ್ತರು ನಿನ್ನ ಅನುಗ್ರಹದಿಂದ ನಿನ್ನ ರಕ್ಷಣೆಯನ್ನು ಇಚ್ಛಿಸಿದವರಾಗಿ ಹವಿಸ್ಸಿನ ರೂಪದ ಅನ್ನವನ್ನು ಅಧಿಕವಾಗಿ ನಿನಗೆ ಅರ್ಪಿಸಿ ನಿನ್ನ ಶಕ್ತಿಯನ್ನು ವೃದ್ಧಿಮಾಡುತ್ತಾರೆಯೋ, ನಾವೂ ಸಹ ಅವರ ಗುಂಪಿಗೆ ಸೇರುವೆವು. ದೇವತಾತ್ಮನಾದ ಎಲೈ ಇಂದ್ರನೇ, ಶತ್ರುಗಳನ್ನು ಶೋಷಿಸುವ ಬಲವುಳ್ಳ ಯಾವ ಧನವನ್ನು ಇಚ್ಛಿಸುತ್ತೇವೆಯೋ, ವೀರಪುತ್ರಾದಿಗಳಿಂದ ಕೂಡಿದ ಅಂತಹ ಧನವನ್ನು ನಮಗೆ ಕೊಡು

## English Translation

May we, (through) your (favour), Indra, be such as those are, who; desirous of your protection, augment (by their praises) your vigour: divine (Indra), you grant the wealth which we desire, (the source of) great power and of (numerous) progeny.

। ವಿಶೇಷವಿಷಯಗಳು ।

**ಊತೀ—ಊತೀ ಊತ್ಯಾ ಪ್ರಣಯನೇನ । ಅವತೇಃ ಪ್ರಾಪ್ತ್ಯರ್ಥಸ್ಯ ಕ್ತಿನಿ ರೂಪಂ ।** ಸಾಧಾರಣವಾಗಿ ಊತಿಶಬ್ದವು ಋಗ್ವೇದದಲ್ಲಿ **ಅವ-ರಕ್ಷಣೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿ ರಕ್ಷಣೆ ಎಂಬರ್ಥದಲ್ಲಿ ಉಪಯೋಗಿಸಲ್ಪಡುವುದಾದರೂ ಇಲ್ಲಿ ಭಾಷ್ಯಕಾರರು ಪ್ರಾಪ್ತ್ಯರ್ಥ (ಹೊಂದು ಎಂಬ ಅರ್ಥ) ವುಳ್ಳ ಅವತಿ ಧಾತುವಿನಿಂದ ಇಲ್ಲಿರುವ ಊತಿ ಶಬ್ದವು ನಿಷ್ಪನ್ನವಾಗಿದೆಯೆಂದೂ, ಪ್ರಥಮಾವಿಭಕ್ತಿಯಲ್ಲಿರುವ **ಊತೀ** ಎಂಬ ಪದಕ್ಕೆ **ಊತ್ಯಾ** ಎಂಬ ತೃತೀಯಾ ವಿಭಕ್ತ್ಯರ್ಥವನ್ನು ಹೇಳಬೇಕೆಂದೂ ಆದ್ದರಿಂದ ಇಲ್ಲಿ ಊತೀ ಎಂದರೆ ಪ್ರಾಪ್ತಿಯನ್ನುಂಟುಮಾಡುವುದರಿಂದ ಅಥವಾ ಮಾರ್ಗದರ್ಶನದಿಂದ ಎಂದೂ ಈ ಶಬ್ದಕ್ಕೆ ಅರ್ಥವಿವರಣೆಮಾಡಿರುವರು.

**ಅವಸ್ಯವಃ**—ಈ ಶಬ್ದವೂ ಸಹಾ **ಅವ-ರಕ್ಷಣೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿ ರಕ್ಷಾಕಾಮಾಃ ಸಂರಕ್ಷಣೆಯನ್ನು ಅಪೇಕ್ಷಿಸುವ ಎಂಬರ್ಥದಲ್ಲಿ ವಯಂ ಎಂಬ ಅಧ್ಯಾಹೃತಪದಕ್ಕೆ ವಿಶೇಷಣವಾಗಿದೆ.

**ಶುಷ್ಮಿಂತಮಂ ವೀರವಂತಂ ರಯಿಂ ಚಾಕನಾಮ**—ಈ ವಾಕ್ಯದಲ್ಲಿ ಶುಷ್ಮಿಂತಮಂ ಎಂಬ ಶಬ್ದಕ್ಕೆ ದಾನಭಾಗಾಯಾರ್ಹತಯಾ ಬಲವತ್ತಮಂ-ಕೊಡುವುದಕ್ಕೆ ತಕ್ಕ ಯೋಗ್ಯತೆ ಇರುವುದರಿಂದ ಅತ್ಯಂತ ಬಲಶಾಲಿಯಾದುದೂ ಅಥವಾ ಶತ್ರೂಣಾಂ ಶೋಷಯಿತೃತಮಂ-ಶತ್ರುಗಳನ್ನು ಶೋಷಣೆ ಅಥವಾ ನಾಶಗೊಳಿಸಲು ಸಮರ್ಥವಾದುದೂ ಆದ ರಯಿಂ-ಧನವನ್ನು ಎಂದರ್ಥವು. ಅದರಂತೆಯೇ ವೀರವಂತಂ ಎಂಬ ಶಬ್ದಕ್ಕೆ ಪುತ್ರಪೌತ್ರೈಃ ಸಹಿತಂ-ವೀರರಾದ ಪುತ್ರ, ಪೌತ್ರ ಭೃತ್ಯಾದಿಗಳಿಂದ ಸಹಿತವಾದ ರಯಿಂ-ಧನವನ್ನು ಎಂದು ಅರ್ಥವು. ಇಲ್ಲಿ

ಶುಷ್ಮಿಂತಮಂ, ವೀರವಂತಂ ಎಂಬ ಎರಡು ಶಬ್ದಗಳೂ ರಯಿಂ ಎಂಬ ಶಬ್ದಕ್ಕೆ ವಿಶೇಷಣ ಪದಗಳು. ಪದಶಃ ಅರ್ಥ ಮಾಡುವುದಾದರೆ ಅತ್ಯಂತ ಬಲಶಾಲಿಯಾದುದೂ, ವೀರರಾದ ಪುತ್ರಾದಿಗಳಿಂದ ಸಹಿತವಾದುದೂ ಆದ ಧನವನ್ನು ಎಂದರ್ಥವು. ಸಂಸ್ಕೃತದಲ್ಲಿ ಅದರಲ್ಲಿಯೂ ಋಗ್ವೇದದಲ್ಲಿ ಅನೇಕ ವಸ್ತುಗಳನ್ನು ನಿರ್ದೇಶಿಸುವಾಗ ಮುಖ್ಯವಾದ ಒಂದು ವಸ್ತುವನ್ನು ಹೇಳಿ ಇತರ ವಸ್ತುಗಳನ್ನು ಆ ಮುಖ್ಯವಸ್ತುವಿನೊಂದಿಗೆ ಇರುವಂತೆ ವಿಶೇಷಣ ಪದಪ್ರಯೋಗ ದಿಂದ ವಿವರಿಸುವುದು ರೂಢಿಯು. ಆದರೆ ಮುಖ್ಯಾಭಿಪ್ರಾಯವು—ನಮಗೆ ಅತ್ಯಂತ ಬಲವನ್ನೂ ಎಂದರೆ ಶಕ್ತಿಸಾಮರ್ಥ್ಯಗಳನ್ನೂ, ಪರಾಕ್ರಮಶಾಲಿಗಳಾದ ಎಂದರೆ ಯುದ್ಧದಲ್ಲಿ ವೀರಭಟರಂತೆ ಹೋರಾಡುವ ಪುತ್ರ, ಪೌತ್ರ, ಭಟರೇ ಮೊದಲಾದ ಅನುಚರರನ್ನೂ, ಧನವನ್ನೂ ಕೊಡಬೇಕೆಂದು ಮುಖ್ಯಾಭಿಪ್ರಾಯವಿರುವುದು.

ಅಸ್ಮೇ—ಅಸ್ಮೇ ಎಂಬ ಶಬ್ದವು ಏಳು ವಿಭಕ್ತ್ಯರ್ಥಗಳಲ್ಲಿಯೂ ಉಪಯೋಗಿಸಲ್ಪಡುವುದು. ಪ್ರಕೃತ ಋಕ್ಕಿನಲ್ಲಿ ಅಸ್ಮೇ-ಅಸ್ಮಭ್ಯಂ, ನಮಗೆ ಎಂದು ಚತುರ್ಥೀವಿಭಕ್ತ್ಯರ್ಥವನ್ನು ಹೇಳಿದೆ.

---

ಸಂಹಿತಾಪಾಠಃ

ರಾಸಿ ಕ್ಷಯಂ ರಾಸಿ ಮಿತ್ರಮಸ್ಮೇ ರಾಸಿ ಶರ್ಧ ಇಂದ್ರ ಮಾರುತಂ ನಃ ।

ಸಜೋಷಸೋ ಯೇ ಚ ಮಂದಸಾನಾಃ ಪ್ರ ವಾಯವಃ ಪಾಂತ್ಯಗ್ರಣೀತಿಂ ॥ ೧೪ ॥

ಪದಪಾಠಃ

ರಾಸಿ । ಕ್ಷಯಂ । ರಾಸಿ । ಮಿತ್ರಂ । ಅಸ್ಮೇ ಇತಿ । ರಾಸಿ । ಶರ್ಧಃ । ಇಂದ್ರ । ಮಾರುತಂ । ನಃ ।

ಸಽಜೋಷಸಃ । ಯೇ । ಚ । ಮಂದಸಾನಾಃ । ಪ್ರ । ವಾಯವಃ । ಪಾಂತಿ । ಅಗ್ರಽನೀತಿಂ ॥ ೧೪ ॥

ಸಾಯಣಭಾಷ್ಯಂ

ಹೇ ಇಂದ್ರ ಕ್ಷಯಂ । ಕ್ಷಿಯಂತಿ ನಿವಸಂತ್ಯತ್ರೇತಿ ಕ್ಷಯೋ ಗೃಹಂ । ತದಸ್ಮಭ್ಯಂ ರಾಸಿ । ದೇಹಿ ತಥಾ ಮಿತ್ರಂ ಸಖಾಯಮಸ್ಮೇ ಅಸ್ಮಭ್ಯಂ ರಾಸಿ॥ ವಾಕ್ಯಭೇದಾದನಿಘಾತಃ॥ ಮಾರುತಂ ಮರುತಾಂ ದೇವ-ವಿಶಾಂ ಸಂಬಂಧಿ ಶರ್ಧೋ ಬಲಂ ನೋಽಸ್ಮಭ್ಯಂ ರಾಸಿ । ಏತೇನ ಮರುತಾಮಪ್ಯಾಗಮನಂ ಪ್ರಾರ್ಥ್ಯತೇ । ಯೇ ಮರುತಃ ಸಜೋಷಸಃ ಸಹ ಪ್ರೀಯಮಾಣಾ ಮದಂತೋ ಮೋದಮಾನಾ ವಾಯವೋ ಯಜ್ಞಂ ಪ್ರತಿ ಗಂತಾರಃ ಸಂತೋಽಗ್ರಣೀತಿಮಗ್ರೇ ನೀಯಮಾನಂ ಸೋಮಂ ಪ್ರಪಾಂತಿ । ಪ್ರಕರ್ಷೇಣ ಪಿಬಂತಿ ತೇಷಾಂ ಶರ್ಧ ಇತಿ ಸಮನ್ವಯಃ । ಯದ್ವಾ ಯೇ ಚ ವಾಯವೋಽಗ್ರೇ ನೀಯಮಾನಂ ಸೋಮಂ ಪಿಬಂತಿ ತೇಷಾಂ ವಾಯೂನಾಂ ಬಲಂ ರಾಸಿ ॥ ವಾಯವ ಇತಿ ಪೂಜಾಯಾಂ ಬಹುವಚನಂ । ವಾಯು-ರ್ಹಿ ಸೋಮಸ್ಯಾಗ್ರಪಾತೇತಿ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ಕ್ಷಯಂ**—ವಾಸಕ್ಕೆ ಯೋಗ್ಯವಾದ ಗೃಹವನ್ನು । **ರಾಸಿ**—ಕೊಡು । **ಮಿತ್ರಂ**—ಸ್ನೇಹಿತನನ್ನು । **ಅಸ್ಮೇ**—ನಮಗೆ । **ರಾಸಿ**—ಕೊಡು । **ಯೇ ಚ**—ಯಾವ ಮರುತ್ತುಗಳು । **ಸಜೋಷಸಃ**—ಒಟ್ಟಿಗೆ ಕೂಡಿದವರಾಗಿಯೂ । **ಮಂದಸಾನಾಃ**—ಹರ್ಷಚಿತ್ತವುಳ್ಳವರಾಗಿಯೂ । **ವಾಯವಃ**—ಯಜ್ಞಾಭಿಮುಖವಾಗಿ ಹೋಗುತ್ತಾ । **ಅಗ್ರಣೀತಿಂ**—ಅಗ್ರಭಾಗದಲ್ಲಿ ತರಲ್ಪಡುವ ಸೋಮವನ್ನು । **ಪ್ರ ಪಾಂತಿ**—ಪೂರ್ಣವಾಗಿ ಕುಡಿಯುತ್ತಾರೆಯೋ ಅಂತಹ । **ಮಾರುತಂ**—ಮರುದ್ದೇವತೆಗಳಿಗೆ ಸಂಬಂಧಿಸಿದ । **ಶರ್ಧಃ**—ಸಂಘಾತ್ಮಕವಾದ ಶಕ್ತಿಯನ್ನು । **ನಃ**—ನಮಗೆ । **ರಾಸಿ**—ಕೊಡು.

ಭಾವಾರ್ಥ

ಎಲೈ ಇಂದ್ರನೇ, ವಾಸಕ್ಕೆ ಯೋಗ್ಯವಾದ ಗೃಹವನ್ನೂ, ಸಹವಾಸಕ್ಕೆ ಯೋಗ್ಯರಾದ ಮಿತ್ರರನ್ನೂ ನಮಗೆ ಕೊಡು. ಮತ್ತು ಯಾವ ಮರುತ್ತುಗಳು ಒಟ್ಟಿಗೆ ಕೂಡಿದವರಾಗಿಯೂ ಯಜ್ಞಾಭಿಮುಖವಾಗಿ ಹೋಗಿ ಅಲ್ಲಿ ಅಗ್ರಭಾಗದಲ್ಲಿ ತರಲ್ಪಡುವ ಸೋಮರಸವನ್ನು ಪೂರ್ಣವಾಗಿ ಕುಡಿಯುವರೋ ಅಂತಹ ಮರುದ್ದೇವತೆಗಳಿಗೆ ಸಂಬಂಧಿಸಿದ ಸಂಘಾತ್ಮಕವಾದ ಶಕ್ತಿಯನ್ನು ನಮಗೆ ಕೊಡು.

## English Translation

Grant us a habitation; grant us friends; grant us, Indra, the strength of the Maruts: the winds, who, propitious and exulting, drink copiously of the first offering (of the Soma juice).

ವಿಶೇಷವಿಷಯಗಳು

**ಕ್ಷಯಂ**—**ಕ್ಷಿಯಂತಿ ನಿವಸಂತ್ಯತ್ರೇತಿ ಕ್ಷಯೋ ಗೃಹಂ** । ಕ್ಷಿ-ವಾಸಮಾಡು ಎಂಬ ಧಾತುವಿನಿಂದ ಕ್ಷಯಶಬ್ದವು ನಿಷ್ಪನ್ನವಾಗಿದೆ. ವಾಸಮಾಡುವ ಪ್ರವೇಶವೆಂದರೆ ಗೃಹವು, ಮನೆಯು ಎಂದರ್ಥವು

**ಮಿತ್ರಂ**—**ಸಖಾಯಂ** । ಸ್ನೇಹಿತನನ್ನು ಅಥವಾ ಹಿತಚಿಂತಕನನ್ನು. ಮಿತ್ರಶಬ್ದವು ಞಿಮಿದಾ ಸ್ನೇಹನೇ (ಭ್ವಾದಿ, ಆತ್ಮನೇಪದಿ) ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಮಿತ್ರ ಅಥವಾ ಸ್ನೇಹಿತನಿಗೆ ಇರಬೇಕಾದ ಮುಖ್ಯ ಲಕ್ಷಣವೇನೆಂದರೆ ಒಬ್ಬರಿಗೊಬ್ಬರು ಸಮಯದಲ್ಲಿ ಸಹಾಯಮಾಡುವುದು. ಈ ವಿಷಯದಲ್ಲಿ—

**ನ ಸ ಸಖಾ ಯೋ ನ ದದಾತಿ ಸಖ್ಯೇ ಸಚಾಭುವೇ ಸಚಮಾನಾಯ ಪಿತ್ವಃ** ।

(ಋ. ಸಂ ೧೦-೧೧೭-೪)

ಎಂದು ಋಗ್ವೇದದಲ್ಲಿಯೇ ಹೇಳಿರುವುದು. ಎಂದರೆ— ಯಾವ ಪುರುಷನು ತನ್ನ ಸ್ನೇಹಿತನಿಗೆ ಸಮಯದಲ್ಲಿ ಏನನ್ನೂ ಕೊಡುವುದಿಲ್ಲವೋ (ಉಪಕಾರಮಾಡುವುದಿಲ್ಲವೋ) ಅವನು ಸ್ನೇಹಿತನೇ ಅಲ್ಲ. ಸ್ನೇಹಿತನಂತೆ ನಟಿಸುವ ಕಪಟಿಯು ಎಂದರ್ಥವು. ಇದಲ್ಲದೆ—

**ದದಾತಿ ಪ್ರತಿಗೃಹ್ಣಾತಿ ಗುಹ್ಯಮಾಖ್ಯಾತಿ ಪೃಚ್ಛತಿ ।**
**ಭುಂಕ್ತೇ ಚ ಭೋಜಯತ್ಯೇವ ಷಡ್ವಿಧಂ ಮಿತ್ರಲಕ್ಷಣಂ ॥**

ಎಂದು ಸ್ನೇಹಿತನಿಗೆ ಇರಬೇಕಾದ ಗುಣಗಳನ್ನು ಕವಿಯು ವರ್ಣಿಸಿದಾನೆ. ಎಂದರೆ ಸ್ನೇಹಿತನಾದವನು (ನಿಜವಾದ ಸ್ನೇಹಿತನಾಗಿದ್ದರೆ) ತನ್ನ ಸ್ನೇಹಿತನಿಗೆ ಬೇಕಾದ ವಸ್ತುಗಳನ್ನು ಕೊಡುವನು. ತಾನೂ ಅವನಿಂದ ಬೇಕಾದ ವಸ್ತುವನ್ನು ಸ್ವೀಕರಿಸುವನು ; ತನ್ನ ಗುಟ್ಟನ್ನು ಅವನಿಗೆ ಹೇಳುವನು, ಅವನು ಹೇಳುವ ಗುಟ್ಟನ್ನು (ರಹಸ್ಯ ವಿಷಯಗಳನ್ನು) ತಾನೂ ಶ್ರದ್ಧೆಯಿಂದ ಕೇಳುವನು ; ಸ್ನೇಹಿತನಿಗೆ ಭೋಜನವನ್ನಿಕ್ಕುವನು, ತಾನೂ ಅವನ ಮನೆಯಲ್ಲಿ ಊಟಮಾಡುವನು. ಈ ಆರು ವಿಧಗಳೂ ಸ್ನೇಹಿತರಿಗೆ ಇರಬೇಕಾದ ಲಕ್ಷಣಗಳು ಎಂದು ಹೇಳಿದೆ. ಇಂತಹ ಹಿತಚಿಂತಕನಾದ ಸ್ನೇಹಿತನನ್ನು ಕೊಡಬೇಕೆಂದು ಇಂದ್ರನನ್ನು ಪ್ರಾರ್ಥಿಸಿದೆ.

**ಮಾರುತಂ ಶರ್ಧಃ**—ಮರುದ್ದೇವತೆಗಳ ಸಂಘಾತ್ಮಕವಾದ ಶಕ್ತಿಯನ್ನು ಕೊಡಬೇಕೆಂದು ಪ್ರಾರ್ಥಿಸಿದೆ. ಇಲ್ಲಿ ದೇವತೆಗಳಿಗೆಲ್ಲಾ ಅಧಿಕವಾದ ಶಕ್ತಿಯಿದ್ದರೂ ಮರುದ್ದೇವತೆಗಳ ಶಕ್ತಿಯನ್ನು ಮಾತ್ರ ಬೇಕೆಂದು ಪ್ರಾರ್ಥಿಸಿರುವುದಕ್ಕೆ ಕಾರಣವೇನೆಂದರೆ, ಮರುದ್ದೇವತೆಗಳು ನಲವತ್ತೊಂಬತ್ತು ಮಂದಿ ಇರುವರು. ಇವರಿಗೆಲ್ಲಾ ಸಮಾನಾಕಾರವೂ ಸಮಾನಶಕ್ತಿಯೂ ಇರುವುದೆಂದು ಹೇಳಿದೆ. ಆದ್ದರಿಂದ ಈ ನಲವತ್ತೊಂಬತ್ತು ಮಂದಿ ಮರುದ್ದೇವತೆಗಳ ಒಟ್ಟು ಶಕ್ತಿಯನ್ನೂ ಕೂಡಿಸಿದರೆ ಆ ಸಂಘಶಕ್ತಿಯು ಅತ್ಯಧಿಕವಾಗುವುದು. ಆದ್ದರಿಂದ ಅಂತಹ ಶಕ್ತಿಯನ್ನು ಕೊಡಬೇಕೆಂಬ ಪ್ರಾರ್ಥನೆ ಇದೆ. ಯಾವಾಗಲೂ ಅತಿಶಯವಾದ ಶಕ್ತಿಯನ್ನು ಹೇಳಬೇಕಾಗುವ ಸಂದರ್ಭದಲ್ಲಿ **ಮಾರುತಂ ಶರ್ಧಃ** ಎಂದು ಮರುದ್ದೇವತೆಗಳ ಸಂಘಾತ್ಮಕವಾದ (ಒಟ್ಟುಗೂಡಿಸಿದ) ಶಕ್ತಿಯನ್ನು ಹೋಲಿಸುವುದು ರೂಢಿಯಾಗಿದೆ. **ಮಾರುತಂ ಶರ್ಧಃ** ಎಂಬ ಪದಪ್ರಯೋಗದಿಂದ ಮರುದ್ದೇವತೆಗಳ ಆಗಮನವೂ ಸೂಚಿತವಾಗುವುದೆಂದು ಭಾಷ್ಯಕಾರರು ಹೇಳಿರುವರು.

**ಸಜೋಷಸಃ**—**ಸಹ ಪ್ರೀಯಮಾಣಾಃ । ಸಮಾನಪ್ರೀತಿಯುಕ್ತಾಃ ಐಕಮತ್ಯಭಾಜಃ ।** ದೇವತೆಗಳು ಇಂದ್ರನಲ್ಲಿ ತಮ್ಮತಮ್ಮಲ್ಲಿರುವ ಪ್ರೀತಿಗೆ ಸಮವಾದ ಪ್ರೀತಿಯುಳ್ಳವರಾಗಿ ಅಸುರರನ್ನು ಜಯಿಸುವುದಕ್ಕಾಗಿ ಐಕಮತ್ಯದಿಂದ ಇರುತ್ತಾ ಇಂದ್ರನನ್ನು ಮುಂದುಗಡೆಯಲ್ಲಿರುವಂತೆ ಎಂದರೆ ತಮ್ಮ ನಾಯಕನಾಗಿರುವಂತೆ ಮಾಡಿ ಇಂದ್ರನ ಮೂಲಕವಾಗಿಯೇ ಜಯವನ್ನು ಹೊಂದುವರೆಂದರ್ಥವು. **ಸಜೋಷಸಃ** ಎಂಬ ಶಬ್ದಕ್ಕೆ ನಿರುಕ್ತದಲ್ಲಿ ಒಡಗೂಡಿರುವುದು ಎಂದು ಅರ್ಥಮಾಡಿದೆ. (ನಿ. ೮-೮) ಯಾಸ್ಕರು—

**ಆಜುಹ್ವಾನ ಈಡ್ಯೋ ವಂದ್ಯಶ್ಚಾಯಾಹ್ಯಗ್ನೇ ವಸುಭಿಃ ಸಜೋಷಾಃ**
**ತ್ವಂ ದೇವನಾಮಸಿ ಯಹ್ವ ಹೋತಾ ಸ ಏನಾನ್ಯಕ್ಷೀಷಿತೋ ಯಜೀಯಾನ್ ।**

(ಋ. ಸಂ. ೧೦-೧೧೦-೩)

ಎಂಬ ಋಕ್ಕನ್ನುದಾಹರಿಸಿ ಅದರಲ್ಲಿರುವ **ಸಜೋಷಾಃ** ಎಂಬ ಪದಕ್ಕೆ **ಸಹ ಜೋಷಣಃ** ಸಮಾನಪ್ರೀತಿಯುಳ್ಳವನೆಂದು ಅರ್ಥವಿವರಣೆಮಾಡಿದಾರೆ.

**ಆ ರುದ್ರಾಸ ಇಂದ್ರವಂತಸ್ಸಜೋಷಸೋ ಹಿರಣ್ಯರಥಾಃ ಸುವಿತಾಯ ಗಂತನ ।**
**ಇಯಂ ವೋ ಅಸ್ಮತ್ಪ್ರತಿಹರ್ಯತೇ ಮತಿಸ್ತೃಷ್ಣಜೇ ನ ದಿವ ಉತ್ಸಾ ಉದನ್ಯವೇ ॥**

(ಋ. ಸಂ ೪-೩-೨-೧೧)

ಎಂಬ ಋಕ್ಕಿನಲ್ಲಿ **ಇಂದ್ರೇಣ ಸಹ ಜೋಷಣಾಃ ಸಜೋಷಸಃ ಪರಮೈಶ್ವರ್ಯೇಣ ನಿತ್ಯಮಾಸೇವಿತಾಃ** ಇಂದ್ರನೊಡನೆ ಉತ್ಕೃಷ್ಟವಾದ ಐಶ್ವರ್ಯದಿಂದ ಸೇವಿತರಾದವರು ಎಂದು ಅರ್ಥವನ್ನು ಹೇಳಿದೆ.

**ವಾಯವಃ**— ವಾ ಗತಿಗಂಧನಯೋಃ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಗತ್ಯರ್ಥಕವಾದ ಹೋಗುವವರು ಎಂಬರ್ಥವಿರುವುದು. ಎಂದರೆ, ಯಜ್ಞಭೂಮಿಯನ್ನುದ್ದೇಶಿಸಿ ಹೋಗುವ ಮರುದ್ದೇವತೆಗಳೆಂದಭಿಪ್ರಾಯವು. ಅಥವಾ **ವಾಯುರ್ಹಿ ಸೋಮಸ್ಯಾಗ್ರಪಾತಾ** ಎಂಬ ವಚನದಂತೆ ವಾಯುದೇವತೆಯು ಮೊದಲು ಸೋಮಪಾನಮಾಡುವುದರಿಂದ ಅವನಿಗೆ ಅದರಿಂದ ಲಭಿಸುವ ಅಧಿಕವಾದ ಶಕ್ತಿಯನ್ನು ಕೊಡು ಎಂದು ಬೇಕಾದರೂ ಅರ್ಥಮಾಡಬಹುದು. ಇಲ್ಲಿ ವಾಯವಃ ಎಂದು ಬಹುವಚನವಿದ್ದರೂ ಅದು ಪೂಜಾರ್ಥದಲ್ಲಿ (ಗೌರವವನ್ನು ಸೂಚಿಸುವ ಸಂದರ್ಭದಲ್ಲಿ) ಉಪಯೋಗಿಸಿರುವುದರಿಂದ ವಾಯುದೇವನ ಬಲವನ್ನು ಎಂದು ಏಕವಚನಾರ್ಥವೇ ನಿರ್ದಿಷ್ಟವಾಗಿರುವುದು.

**ಅಗ್ರನೀತಿಂ**— ಅಗ್ರೇ ನೀಯಮಾನಂ ಸೋಮಂ । ಎಲ್ಲರಿಗೂ ಕಾಣುವಂತೆ ಮುಂಭಾಗದಲ್ಲಿ ತಂದು ಎದುರಿಗೆ ಇಟ್ಟಿರುವ ಸೋಮರಸವನ್ನು ಎಂದಭಿಪ್ರಾಯವು.

---

**ಸಂಹಿತಾಪಾಠಃ**

**ವ್ಯಂತ್ವಿನ್ನು ಯೇಷು ಮಂದಸಾನಸ್ತೃಪತ್ಸೋಮಂ ಪಾಹಿ ದ್ರಹ್ಯದಿಂದ್ರ ।**
**ಅಸ್ಮಾನ್ತ್ಸು ಪೃತ್ಸ್ವಾ ತರುತ್ರಾವರ್ಧಯೋ ದ್ಯಾಂ ಬೃಹದ್ಭಿರರ್ಕೈಃ ॥ ೧೫ ॥**

**ಪದಪಾಠಃ**

ವ್ಯಂತು । ಇತ್ । ನು । ಯೇಷು । ಮಂದಸಾನಃ । ತೃಪತ್ । ಸೋಮಂ । ಪಾಹಿ । ದ್ರಹ್ಯತ್ । ಇಂದ್ರ ।
ಅಸ್ಮಾನ್ । ಸು । ಪೃತ್ऽಸು । ಆ । ತರುತ್ರ । ಅವರ್ಧಯಃ । ದ್ಯಾಂ । ಬೃಹತ್ऽಭಿಃ । ಅರ್ಕೈಃ ॥ ೧೫ ॥

**ಸಾಯಣಭಾಷ್ಯಂ**

ಹೇ ಇಂದ್ರ ಯೇಷು ತವ ಸಹಾಯಭೂತೇಷು ಮರುತ್ಸು ಮಂದಸಾನೋ ಮಾದ್ಯನ್ಭವಸಿ ತೇ ಮರುತೋ ನು ಕ್ಷಿಪ್ರಂ ವ್ಯಂತು । ಸೋಮಂ ಭಕ್ಷಯಂತು । ಇತ್ ಏವಾರ್ಥೇ । ದ್ರಹ್ಯತ್॥ ದೃಂಹತೇರಿದಂ ರೂಪಂ ॥ ಆತ್ಮಾನಂ ದೃಢೀಕುರ್ವನ್ ತ್ವಂ ತೃಪತ್ ತರ್ಪಯಂತಮಿಮಂ ಸೋಮಂ ಪಾಹಿ । ಪಿಬ । ತರುತ್ರ ಶತ್ರೂಣಾಂ ಹಿಂಸಕ ಹೇ ಇಂದ್ರ ಬೃಹದ್ಭಿರ್ಬಲವದ್ಭಿರರ್ಕೈರರ್ಚನೀಯೈರ್ಮರುದ್ಭಿಃ ಸಹಿತಸ್ತ್ವಂ। ಆ ಇತಿ ಚಾರ್ಥೇ । ತೇನಾಸ್ಮಾನ್ ದ್ಯಾಂ ಚ ಸು ಸುಷ್ಠು ಪೃತ್ಸು ಪಶುಪುತ್ರಾದಿಭಿರಸ್ಮಾನ್ ಅಸ್ಮತ್ಪಾಲನೇನ ಚ ದಿವಮವರ್ಧಯಃ । ಯದ್ವಾ ಯೇಷು ಸೋಮೇಷು ಮಂದಸಾನೋ ಮೋದಮಾನೋ ಭವಸಿ ತೇ ಸೋಮಾ ವ್ಯಂತು । ತ್ವಾಂ ಗಚ್ಛಂತು । ಶೇಷಂ ಪೂರ್ವವತ್ ॥

**ಪ್ರತಿಪದಾರ್ಥ**

**ಇಂದ್ರ**—ಎಲೈ ಇಂದ್ರನೇ । **ಯೇಷು**—(ನಿನಗೆ ಸಹಾಯಭೂತರಾದ) ಯಾವ ಮರುತ್ತುಗಳಲ್ಲಿ । **ಮಂದಸಾನಃ**—ಹರ್ಷಯುಕ್ತನಾಗಿರುವೆಯೋ ಆ ಮರುತ್ತುಗಳು । **ನು**—ಕ್ಷಿಪ್ರವಾಗಿ । **ವ್ಯಂತು ಇತ್**—ಆಗಮಿಸಿ

ಸೋಮನ್ನು ಭಕ್ಷಿಸಲಿ । ದ್ರೃಹ್ಯತ್—ದಾರ್ಢ್ಯವನ್ನು ಹೊಂದಿರುವ ನೀನು । ತೃಪತ್—ತೃಪ್ತಿಯನ್ನುಂಟುಮಾಡತಕ್ಕ। ಸೋಮಂ—ಸೋಮರಸವನ್ನು । ಪಾಹಿ—ಕುಡಿ । ತರುತ್ರ—ಶತ್ರುಹಿಂಸಕನಾದ ಇಂದ್ರನೇ । ಬೃಹದ್ಭಿಃ— ಶಕ್ತಿಯುತವಾದವೂ । ಅರ್ಕೈಃ—ಪೂಜ್ಯವಾದವೂ ಆದ ಮರುತ್ತುಗಳೊಡಗೂಡಿದ (ನೀನು) । ಅಸ್ಮಾನ್ ಆ ದ್ಯಾಂ—ನಮ್ಮನ್ನೂ ದೇವಲೋಕದ ಪ್ರಜೆಗಳನ್ನೂ । ಸು—ಶ್ರೇಷ್ಟವಾದ ರೀತಿಯಲ್ಲಿಯೂ । ಪೃತ್ಸು—ಪಶುಪುತ್ರಾದಿ ಗಳಿಂದ ಕೂಡಿರುವಂತೆಯೂ । ಅವರ್ಧಯಃ—ವೃದ್ಧಿ ಪಡಿಸು.

ಭಾವಾರ್ಥ

ಎಲೈ ಇಂದ್ರನೇ, ನಿನಗೆ ಸಹಾಯಭೂತರಾದ ಯಾವ ಮರುತ್ತುಗಳಲ್ಲಿ ಹರ್ಷಯುಕ್ತನಾಗಿರುವೆಯೋ ಆ ಮರುತ್ತುಗಳು ಕ್ಷಿಪ್ರವಾಗಿ ಆಗಮಿಸಿ ಸೋಮವನ್ನುಭಕ್ಷಿಸಲಿ (ಪಾನಮಾಡಲಿ). ದಾರ್ಢ್ಯವನ್ನು ಹೊಂದಿರುವ ನೀನು ತೃಪ್ತಿಯನ್ನುಂಟುಮಾಡತಕ್ಕ ಸೋಮರಸವನ್ನು ಕುಡಿ. ಶತ್ರುಹಿಂಸಕನಾದ ಎಲೈ ಇಂದ್ರನೇ, ಶಕ್ತಿಯುತ ವಾದವೂ, ಪೂಜ್ಯವಾದವೂ ಆದ ಮರುತ್ತುಗಳೊಡಗೂಡಿದ ನೀನು ನಮ್ಮನ್ನೂ, ದೇವಲೋಕದ ಪ್ರಜೆಗಳನ್ನೂ ಸಹ ಪಶುಪುತ್ರಾದಿಗಳಿಂದ ಕೂಡಿರುವಂತೆಯೂ ಶ್ರೇಷ್ಠವಾದ ರೀತಿಯಲ್ಲಿಯೂ ವೃದ್ಧಿಪಡಿಸು.

## English Translation

Let those in whom you are delighted repair (to the libation), and do you, Indra, confiding, drink the satiating Soma: liberator (from evil), associated with the mighty and adorable (Maruts), augment our prosperity, and (that of) heaven.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಇಂದ್ರನು ಮರುದ್ದೇವತೆಗಳೊಡನೆ ಸೋಮಪಾನಮಾಡಿದ ವಿಷಯವು ಸೂಚಿತವಾಗಿರುವುದು. ಈ ವಿಷಯದಲ್ಲಿ—

ಸಜೋಷಾ ಇಂದ್ರ ಸಗಣೋ ಮರುದ್ಭಿಃ ಸೋಮಂ ಪಿಬ ವೃತ್ರಹಾ ಶೂರ ವಿದ್ವಾನ್ ।
ಜಹಿ ಶತ್ರೂಁರಪ ಮೃಧೋ ನುದಸ್ವಾಥಾಭಯಂ ಕೃಣುಹಿ ವಿಶ್ವತೋ ನಃ ॥

(ಋ. ಸಂ. ೩-೪೭-೨)

ಅಧಾ ನಿಯುತ್ವಃ ಸಗಣೋ ಮರುದ್ಭಿರಸ್ಮಿನ್ ಯಜ್ಞೇ ಬರ್ಹಿಷಿ ಮಾದಯಸ್ವ

(ಋ ಸಂ. ೧-೧೦೧-೯)

ಯೇ ತ್ವಾ ನೂನಮನುಮದಂತಿ ವಿಪ್ರಾಃ ಪಿಬೇಂದ್ರ ಸೋಮಂ ಸಗಣೋ ಮರುದ್ಭಿಃ ।

(ಋ. ಸಂ ೩-೪೭-೪)

ಅಪೂಷಮದ್ಧಿ ಸಗಣೋ ಮರುದ್ಭಿಃ ಸೋಮಂ ಪಿಬ ವೃತ್ರಹಾ ಶೂರ ವಿದ್ವಾನ್ ।

(ಋ. ಸಂ. ೩-೫೨-೭)

ಸಜೋಷಾ ಇಂದ್ರ ವರುಣೇನ ಸೋಮಂ ಸಜೋಷಾಃ ಪಾಹಿ ಗಿರ್ವಣೋ ಮರುದ್ಭಿಃ ।

(ಋ. ಸಂ. ೪-೩೪-೭)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನನ್ನು ಮರುದ್ದೇವತೆಗಳೊಡನೆ ಸೋಮಪಾನಮಾಡಬೇಕೆಂದು ಆಹ್ವಾನಿಸಿ ಪ್ರಾರ್ಥಿಸಲಾಗಿದೆ.

**ತರುತ್ರ—ಶತ್ರೂಣಾಂ ಹಿಂಸಕ ।** ಶತ್ರುಗಳನ್ನು ಹಿಂಸೆಮಾಡುವವನು ಎಂದು ಸಾಯಣರು ತರುತ್ರ ಶಬ್ದಕ್ಕೆ ಅರ್ಥವಿವರಣೆಮಾಡಿರುವರು. ಯಾಸ್ಕರು—

**ತ್ಯಮೂಷು ವಾಜಿನಂ ದೇವಜೂತಂ ಸಹಾವಾನಂ ತರುತಾರಂ ರಥಾನಾಂ ।**

(ಋ. ಸಂ. )

ಎಂಬ ಋಕ್ಕಿಗೆ ನಿರ್ವಚನವನ್ನು ಹೇಳುವಾಗ ತರುತಾರಂ ಎಂಬ ಶಬ್ದಕ್ಕೆ ತಾರಯಿತಾರಂ (ಆಪತ್ತುಗಳಿಂದ) ದಾಟಿಸುವವನು ಎಂದು ಅರ್ಥವಿವರಣೆಮಾಡಿರುವರು.

**ನು, ಇತ್—ನು** ಎಂದರೆ ಕ್ಷಿಪ್ರಂ—ಬೇಗನೆ ; **ಇತ್—ಏವಾರ್ಥೇ,** ಏವಾರ್ಥದಲ್ಲಿಯೂ ಉಪಯೋಗಿಸಲ್ಪಟ್ಟಿದೆ.

**ಅರ್ಕೈಃ—ಅರ್ಚನೀಯೈಃ ।** ಪೂಜಾರ್ಹರಾದ ಎಂದು ಮರುದ್ದೇವತೆಗಳಿಗೆ ವಿಶೇಷಣಪದವನ್ನಾಗಿ ಉಪಯೋಗಿಸಲ್ಪಟ್ಟಿದೆ.

**ಅಸ್ಮಾನ್ ಸು ಪೃತ್ಸ್ವಾ ತರುತ್ರ ಅವರ್ಧಯಃ ದ್ಯಾಂ ಬೃಹದ್ಭಿಃ ಅರ್ಕೈಃ**—ಉತ್ತರಾರ್ಧದಲ್ಲಿರುವ ಈ ವಾಕ್ಯಕ್ಕೆ ಭಾಷ್ಯಕಾರರು ಒಂದು ವಿಧವಾಗಿ ಮಾಡಿರುವ ಅರ್ಥವು ಇಲ್ಲಿ ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಈ ವಾಕ್ಯಕ್ಕೆ ಇನ್ನೊಂದು ವಿಧವಾಗಿಯೂ ಅರ್ಥಮಾಡಬಹುದು. ಪೃತ್ಸು ಶಬ್ದವು ಸಂಗ್ರಾಮನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ದ್ಯುಶಬ್ದಕ್ಕೆ—**ದ್ಯುರಿತ್ಯಹ್ನೋ ನಾಮಧೇಯಂ ದ್ಯೋತತೆ ಇತಿ ಸತಃ** ಹಗಲೆಂದು ನಿರ್ವಚನವಿದೆ. (ನಿ. ೧-೭) ಅರ್ಕಶಬ್ದಕ್ಕೆ—**ಅರ್ಕಮನ್ನಂ ಭವತಿ** (ನಿ. ೩-೯) ಅನ್ನವೆಂದೂ ಅರ್ಥವಾಗುವುದು ಈ ಅರ್ಥಗಳನ್ನು ಇಟ್ಟುಕೊಂಡು ಮೇಲಿನ ವಾಕ್ಯಕ್ಕೆ ಅರ್ಥಮಾಡುವುದಾದರೆ—

**ತರುತ್ರ ಶತ್ರುಹಿಂಸಕೇಂದ್ರ । ಪೃತ್ಸು ಸಂಗ್ರಾಮೇಷು ಅಸ್ಮಾನ್ ಸು ಆ ಅವರ್ಧಯಃ ಶತ್ರುಭಿಃ ರಕ್ಷಿತ್ವಾ ಯಥಾ ಜಯಂ ಲಭೇಮಹಿ ತಥಾ ಸುಷ್ಠು ವೃದ್ಧಿಂ ಕುರುಷ್ವ । ಕಿಂಚ ದ್ಯಾಂ ಅಹಸ್ಸು ದಿವಸೇಷು ಬೃಹದ್ಭಿರರ್ಕೈಃ ಪ್ರಭೂತಾನ್ನೈರ್ನಾನಾವಿಧೈರನ್ನೈರ್ವಾ ಅಸ್ಮಾನವರ್ಧಯಃ ತ್ವತ್ಪ್ರಸಾದದನ್ನವೃದ್ಧಿಂ ಲಭೇಮಹಿ ॥**

ಎಂದರೆ ಎಲೈ ಶತ್ರುನಾಶಕನಾದ ಇಂದ್ರನೇ, ಯುದ್ಧಗಳಲ್ಲಿ ನಮ್ಮನ್ನು ಶತ್ರುಗಳಿಂದ ಕಾಪಾಡಿ ನಾವು ಚೆನ್ನಾಗಿ ವೃದ್ಧಿಹೊಂದುವಂತೆ ಮಾಡು ಮತ್ತು ಪ್ರತಿದಿವಸದಲ್ಲಿಯೂ ನಾವು ಬಹಳವಾದ ಅನ್ನದಿಂದ ವೃದ್ಧಿಯಾಗುವಂತೆ ಅನುಗ್ರಹಿಸು ಎಂದು ಇನ್ನೊಂದು ವಿಧವಾದ ಅರ್ಥವನ್ನೂ ಹೇಳಬಹುದು.

---

ಸಂಹಿತಾಪಾಠಃ

ಬೃಹಂತ ಇನ್ನು ಯೇ ತೇ ತರುತ್ರೋಕ್ಥೇಭಿರ್ವಾ ಸುಮ್ನಮಾವಿವಾಸಾನ್ ।

ಸ್ತೃಣಾನಾಸೋ ಬರ್ಹಿಃ ಪಸ್ತ್ಯವತ್ತ್ವೋತಾ ಇದಿಂದ್ರ ವಾಜಮಗ್ಮನ್

॥ ೧೬ ॥

ಪದಪಾಠಃ

ಬೃಹಂತಃ । ಇತ್ । ನು । ಯೇ । ತೇ । ತರುತ್ರ । ಉಕ್ಥೇಭಿಃ । ವಾ । ಸುಮ್ನಂ । ಆಽವಿವಾಸಾನ್ ।

ಸ್ತೃಣಾನಾಸಃ । ಬರ್ಹಿಃ । ಪಸ್ತ್ಯಽವತ್ । ತ್ವಾಽಊತಾಃ । ಇತ್ । ಇಂದ್ರ । ವಾಜಂ । ಅಗ್ಮನ್ ॥ ೧೬ ॥

ಸಾಯಣಭಾಷ್ಯಂ

ತರುತ್ರ ಆಪದ್ಭ್ಯಸ್ತಾರಕ ಹೇ ಇಂದ್ರ ಯೇ ಪುಮಾಂಸಃ ಸುಮ್ನಂ ಸುಖಕರಂ ತ್ವಾಮುಕ್ಥೈಃ ಶಸ್ತ್ರೈರಾವಿವಾಸಾನ್ । ಪರಿಚರೇಯುಃ ॥ ವಿವಾಸತೇರ್ಲೇಟ್ಯಡಾಗಮಃ ॥ ತ ಏವ ಪುಮಾಂಸೋ ನು ಕ್ಷಿಪ್ರಮವಿಲಂಬೇನ ಬೃಹಂತೋ ಮಹಾಂತೋ ಭವಂತೀತಿ ಪೂರಣಃ । ಕಿಂಚ ಬರ್ಹಿಃ ಸ್ತೃಣಾನಾಸೋ ವೇದ್ಯಾಂ ಬರ್ಹಿರಾಚ್ಛಾದಯಂತೋ ಯೇ ತ್ವಾಂ ಪರಿಚರಂತಿ ತೇ ತ್ವೋತಾ ಇತ್ ತ್ವಯಾ ರಕ್ಷಿತಾಃ ಸಂತ ಏವ ಪಸ್ತ್ಯವತ್ ಗೃಹಸಹಿತಂ ವಾಜಮನ್ನಮಗ್ಮನ್ । ಗಚ್ಛಂತಿ ॥

ಪ್ರತಿಪದಾರ್ಥ

ತರುತ್ರ—ಆಪದ್ರಕ್ಷಕನಾದ । ಇಂದ್ರ—ಇಂದ್ರನೇ । ಯೇ—ಯಾವ ಪುರುಷರು । ಸುಮ್ನಂ—ಸುಖಕರವಾದ ನಿನ್ನನ್ನು ಸ್ತುತಿಗಳಿಂದ । ಆವಿವಾಸಾನ್—ಪೂಜಿಸುತ್ತಾರೆಯೋ । ತೇ—ನಿನ್ನ ಭಕ್ತರಾದ ಅವರು । ನು ಇತ್—ಕ್ಷಿಪ್ರವಾಗಿಯೇ । ಬೃಹಂತಃ—ಮಹದ್ಗುಣವುಳ್ಳವರೂ ಮಹತ್ತಾದ ಸ್ಥಿತಿಯುಳ್ಳವರೂ ಆಗುತ್ತಾರೆ । ಬರ್ಹಿಃ—ದರ್ಭಾಸನವನ್ನು । ಸ್ತೃಣಾನಾಸಃ—(ವೇದಿಯಮೇಲೆ) ನಿನಗಾಗಿ ಹರಡಿ ನಿನ್ನನ್ನು ಪೂಜಿಸುವವರು । ತ್ವೋತಾ ಇತ್—ನಿನ್ನಿಂದಲೇ ರಕ್ಷಿತರಾಗಿ । ಪಸ್ತ್ಯವತ್—ಗೃಹಸಹಿತವಾದ । ವಾಜಂ—ಅನ್ನವನ್ನು । ಅಗ್ಮನ್—ಪಡೆಯುತ್ತಾರೆ

ಭಾವಾರ್ಥ

ಆಪದ್ರಕ್ಷಕನಾದ ಎಲೈ ಇಂದ್ರನೇ, ಯಾವ ಪುರುಷರು ಸುಖಕರವಾದ ಸ್ತುತಿಗಳಿಂದ ನಿನ್ನನ್ನು ಪೂಜಿಸುತ್ತಾರೆಯೋ, ನಿನ್ನ ಭಕ್ತರಾದ ಅವರು ಕ್ಷಿಪ್ರವಾಗಿಯೇ ಮಹದ್ಗುಣವುಳ್ಳವರೂ, ಮಹತ್ತಾದ ಸ್ಥಿತಿಯುಳ್ಳವರೂ ಆಗುತ್ತಾರೆ. ನಿನಗಾಗಿ ವೇದಿಯ ಮೇಲೆ ದರ್ಭಾಸನವನ್ನು ಹರಡಿ ನಿನ್ನನ್ನು ಪೂಜಿಸುವವರು ನಿನ್ನಿಂದಲೇ ರಕ್ಷಿತರಾಗಿ ಗೃಹಸಹಿತವಾದ ಅನ್ನವನ್ನು ಪಡೆಯುತ್ತಾರೆ.

## English Translation

Liberator (from evil), they who worship you, the giver of happiness, with holy hymns, quickly become great: they who strew the sacred grass (in honour of you) are protected by you, and, together with their families, obtain (abundant) food.

### ವಿಶೇಷವಿಷಯಗಳು

**ಸ್ತೃಣಾನಾಸೋ ಬರ್ಹಿಃ**— ಬರ್ಹಿ ಎಂಬ ದರ್ಭೆಯನ್ನು ದೇವತೆಗಳು ಬಂದು ಕುಳಿತುಕೊಳ್ಳುವ ಆಸನಕ್ಕಾಗಿ ಹರಡಿ ಸಿದ್ಧಪಡಿಸುವುದಕ್ಕೆ ಬರ್ಹಿಸ್ತರಣವೆಂದು ಹೆಸರು. ಈ ದರ್ಭೆಗಳನ್ನು ಒಂದೇ ಅಳತೆಗೆ ಸರಿಯಾಗಿ ಕತ್ತರಿಸಿ ಮೆತ್ತಗಿರುವುದಕ್ಕಾಗಿ ಮೂರು ಪದರಗಳಿರುವ ಹಾಗೆ ಹಾಸುವರು. ಈ ವಿಷಯದಲ್ಲಿ—

**ತ್ರಿವೃದ್ಬರ್ಹಿರ್ಭವತಿ । ಮಾತಾ ಪಿತಾ ಪುತ್ರಃ । ........ತ್ರೇಧಾ ಸನ್ನದ್ಧಂ ಭವತಿ । ತ್ರಯ ಇಮೇ ಲೋಕಾಃ । ಏಷ್ವೇವ ಲೋಕೇಷು ಪ್ರತಿತಿಷ್ಠತಿ ॥**

(ತೈ. ಬ್ರಾ. ೧-೬-೩.೧)

ಎಂದು ತೈತ್ತಿರೀಯ ಬ್ರಾಹ್ಮಣದಲ್ಲಿ ಹೇಳಿದೆ. ಬರ್ಹಿಸ್ಸೆಂಬ ದರ್ಭೆಯನ್ನು ಮೂರು ಪದರವಾಗಿ ಹರಡಬೇಕು. ಏಕೆಂದರೆ ಈ ಮೂರು ಪದರಗಳಿಗೆ ತಾಯಿ, ತಂದೆ, ಪುತ್ರ ಎಂದೂ ಅಥವಾ ಭೂಮ್ಯಂತರಿಕ್ಷ ಸ್ವರ್ಗಗಳೆಂಬ ಮೂರು ಲೋಕಗಳೆಂದೂ ಸಂಕೇತವಿರುವುದು ಎಂದು ಹೇಳಿದೆ. ಯಾಸ್ಕರು ಈ ಶಬ್ದದ ವಿಷಯದಲ್ಲಿ—

**ಬರ್ಹಿಃ ಪರಿಬರ್ಹಣಾತ್ ಪರಿಚ್ಛೇದನಾತ್ ।**

(ನಿ. ೮-೯)

ದರ್ಭೆಯು ಒಂದೇ ಸಮನಾಗಿ ಕತ್ತರಿಸಲ್ಪಟ್ಟು ಯಜ್ಞದಲ್ಲಿ ಆಸನಕ್ಕಾಗಿ ಉಪಯೋಗಿಸಲ್ಪಡುವುದಕ್ಕೆ ಬರ್ಹಿಸ್ಸೆಂದು ಹೆಸರು ಪ್ರಸಿದ್ಧವಾಗಿರುವುದು ಎಂದು ವಿವರಿಸಿ ಉದಾಹರಣೆಗಾಗಿ—

**ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸ್ತೋರಸ್ಯಾ ವೃಜ್ಯತೇ ಅಗ್ರೇ ಅಹ್ನಾಂ ।**
**ವ್ಯು ಪ್ರಥತೇ ವಿತರಂ ವರೀಯೋ ದೇವೇಭ್ಯೋ ಅದಿತಯೇ ಸ್ಯೋನಂ ॥**

(ಋ. ಸಂ. ೧೦-೧೧೦-೪)

ಎಂಬ ಋಕ್ಕನ್ನು ಹೇಳಿ ಅದರ ನಿರ್ವಚನವನ್ನು ಹೇಳಿರುವರು—

**ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸನಾಯಾಸ್ಯಾಃ ಪ್ರವೃಜ್ಯತೇ ಅಗ್ರೇ ಅಹ್ನಾಂ ಬರ್ಹಿಃ ಪೂರ್ವಾಹ್ಣೇ ತದ್ವಿಪ್ರಥತೇ ವಿತರಂ ವಿಕೀರ್ಣತರಮಿತಿ ವಾ ವಿಸ್ತೀರ್ಣತರಮಿತಿ ವಾ ವರೀಯೋ ವರತರಮುರುತರಂ ವಾ ದೇವೇಭ್ಯಶ್ಚಾದಿತಯೇ ಚ ಸ್ಯೋನಂ । ಸ್ಯೋನಮಿತಿ ಸುಖನಾಮ ಸ್ಯತೇರವಸ್ಯಂತ್ಯೇತತ್ ಸೇವಿತವ್ಯಂ ಭವತೀತಿ ವಾ ॥**

(ನಿ. ೮-೯)

ಏಂದರೆ ಯಜ್ಞಕಾಲದಲ್ಲಿ ದೇವತೆಗಳು ಯಜ್ಞವೇದಿಯಲ್ಲಿ ಬಂದು ಕುಳಿತುಕೊಳ್ಳಲು ಆಸನವನ್ನು ಸಿದ್ಧಪಡಿಸುವುದಕ್ಕಾಗಿ ದರ್ಭೆಗಳನ್ನು ಒಂದೇ ಸಮವಾಗಿ ಕತ್ತರಿಸಿ ಮೆತ್ತಗಿರುವುದಕ್ಕಾಗಿ ಒಂದರಮೇಲೊಂದು ಪದರದಂತೆ ಮೂರು

ಪದರಗಳನ್ನು ಹಾಸಿ ಸಿದ್ಧಪಡಿಸುವರು. ಹೀಗೆ ಹಾಸಿರುವ ದರ್ಭೆಗಳು ಬಹಳವಾಗಿಯೂ; ವಿಸ್ತಾರವಾಗಿಯೂ ಚೆನ್ನಾಗಿ ಮೆತ್ತಗಿರುವಂತೆ ಹರಡಲ್ಪಡುವುದು. ಈರೀತಿ ಹರಡಿರುವ ದರ್ಭೆಗಳಿಗೆ ಬರ್ಹಿಸ್ಸೆಂದು ಅಥವಾ ಬರ್ಹಿರಾಸ್ತರಣವೆಂದು ಹೇಳುವರು. ಈ ಬರ್ಹಿರಾಸ್ತರಣದ ವಿಷಯವು ದೇವತೆಗಳನ್ನು ಆಹ್ವಾನಮಾಡಿ ಕರೆಯುವ ಅನೇಕ ಸಂದರ್ಭಗಳಲ್ಲಿ ಸೂಚಿಸಲ್ಪಡುವುದು.

**ಪಸ್ತ್ಯಾವತ್ ವಾಜಂ**—ಪಸ್ತ್ಯಶಬ್ದವು ಗೃಹನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) ಪಸ್ತ್ಯವೆಂದರೆ ಗೃಹವು. ವಾಜ ಶಬ್ದವು ಅನ್ನ ನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಇಲ್ಲಿ ಗೃಹಸಹಿತವಾದ ಅನ್ನವನ್ನು ಎಂದರೆ ಗೃಹವನ್ನೂ, ಅನ್ನವನ್ನೂ ಪಡೆಯುತ್ತಾರೆ ಎಂದಭಿಪ್ರಾಯವು.

---

ಸಂಹಿತಾಪಾಠಃ

ಉಗ್ರೇಷ್ವಿನ್ನು ಶೂರ ಮಂದಸಾನಸ್ತ್ರಿಕದ್ರುಕೇಷು ಪಾಹಿ ಸೋಮಮಿಂದ್ರ ।
ಪ್ರದೋಧುವಚ್ಛ್ಮಶ್ರುಷು ಪ್ರೀಣಾನೋ ಯಾಹಿ ಹರಿಭ್ಯಾಂ ಸುತಸ್ಯ ಪೀತಿಂ

ಪದಪಾಠಃ

ಉಗ್ರೇಷು । ಇತ್ । ನು । ಶೂರ । ಮಂದಸಾನಃ । ತ್ರಿऽಕದ್ರುಕೇಷು । ಪಾಹಿ । ಸೋಮಂ । ಇಂದ್ರ । ಪ್ರऽದೋಧುವತ್ । ಶ್ಮಶ್ರುಷು । ಪ್ರೀಣಾನಃ । ಯಾಹಿ । ಹರಿऽಭ್ಯಾಂ । ಸುತಸ್ಯ । ಪೀತಿಂ ॥ ೧೭ ॥

ಸಾಯಣಭಾಷ್ಯಂ

ಹೇ ಶೂರ ಬಲವನ್ನಿಂದ್ರ ಉಗ್ರೇಷೂದ್ಗೂರ್ಣೇಷು ಬಹುಸ್ತೋತ್ರಶಸ್ತ್ರವತ್ಸು ತ್ರಿಕದ್ರುಕೇಷು ಜ್ಯೋತಿರ್ಗೌರಾಯುರಿತ್ಯೇತನ್ನಾಮಕೇಷ್ವಾಭಿಪ್ಲವಿಕೇಷ್ವಹಃಸು ಮಂದಸಾನೋ ಹೃಷ್ಯನ್ ಸೋಮಂ ಪಾಹಿ । ಪಿಬ । ತತಃ ಪ್ರೀಣಾನಃ ಸೋಮಪಾನೇನ ಪ್ರೀತೋ ಭವನ್ ಶ್ಮಶ್ರುಷು ಲಿಪ್ತಂ ಸೋಮಂ ಪ್ರದೋಧುವತ್ ॥ ಧೂಞ್ ಕಂಪನೇ । ಯಙ್ಲುಗಂತಸ್ಯ ಶತರಿ ರೂಪಂ॥ ಪುನಃಪುನರ್ಧೂನ್ವನ್ ಸುತಸ್ಯಾಭಿಷುತಸ್ಯ ಪೀತಿಂ ಪಾನಮುದ್ದಿಶ್ಯ ಹರಿಭ್ಯಾಮಶ್ವಿಭ್ಯಾಂ ಯುಕ್ತಃ ಸನ್ ಯಾಹಿ । ಗಚ್ಛ ॥

ಪ್ರತಿಪದಾರ್ಥ

**ಶೂರ**—ಬಲಶಾಲಿಯಾದ । **ಇಂದ್ರ**—ಎಲೈ ಇಂದ್ರನೇ । **ಉಗ್ರೇಷು**—ಶಸ್ತ್ರಮಂತ್ರಗಳಿಂದ ಗಭೀರವಾಗಿ ನೆರವೇರಿಸಲ್ಪಟ್ಟ। **ತ್ರಿಕದ್ರುಕೇಷು**—ತ್ರಿಕದ್ರುಕದ ದಿವಸಗಳಲ್ಲಿ।**ಮಂದಸಾನಃ**—ಹರ್ಷಯುಕ್ತನಾಗಿ। **ಸೋಮಂ**—ಸೋಮರಸವನ್ನು । **ಪಾಹಿ**—ಕುಡಿ (ಅನಂತರ) । **ಪ್ರೀಣಾನಃ**—ಅದರಿಂದ ಪ್ರೀತನಾಗಿ । **ಶ್ಮಶ್ರುಷು**—ಮುಖದ ಕೂದಲುಗಳನ್ನು । **ಪ್ರದೋಧುವತ್**—ಪದೇಪದೇ ಒರಸಿಕೊಳ್ಳುತ್ತಾ। **ಸುತಸ್ಯ**—ಹಿಂಡಲ್ಪಟ್ಟ ರಸದ । **ಪೀತಿಂ**—ಪಾನಕ್ಕಾಗಿ । **ಹರಿಭ್ಯಾಂ**—ನಿನ್ನ ಅಶ್ವಗಳೊಡನೆ । **ಯಾಹಿ**—ದಯಮಾಡು.

ಭಾವಾರ್ಥ

ಬಲಶಾಲಿಯಾದ ಎಲೈ ಇಂದ್ರನೇ, ಶಸ್ತ್ರಮಂತ್ರಗಳಿಂದ ಗಭೀರವಾಗಿ ನೆರವೇರಿಸಲ್ಪಟ್ಟ ತ್ರಿಕದ್ರುಕದ ದಿವಸಗಳಲ್ಲಿ ಹರ್ಷಯುಕ್ತನಾಗಿ ಸೋಮರಸವನ್ನು ಕುಡಿ, ಅನಂತರ ಅದರಿಂದ ಪ್ರೀತನಾಗಿ ಮುಖದ ಶ್ಮಶ್ರುಗಳನ್ನು ಪದೇ ಪದೇ ಒರಿಸಿಕೊಳ್ಳುತ್ತಾ ಹಿಂಡಿದ ರಸದ ಪಾನಕ್ಕಾಗಿ ನಿನ್ನ ಅಶ್ವಗಳೊಡನೆ ಬಾ. (ಹೋಗು).

English Translation

Indra, hero, exulting in the solemn Trikadruka rites, quaff the Soma juice, and repeatedly shaking it from your beard, repair, well pleased with your steeds, to the drinking of the effused libation.

ವಿಶೇಷವಿಷಯಗಳು

ತ್ರಿಕದ್ರುಕೇಷು—ಈ ಶಬ್ದಕ್ಕೆ ಸಾಯಣರು—ಅಭಿಪ್ಲವವೆಂಬ ಯಾಗದ ಜ್ಯೋತಿಃ ಗೌಃ ಆಯುಃ ಎಂಬ ಹೆಸರಿನ ಮೊದಲ ಮೂರು ದಿವಸಗಳಲ್ಲಿ ಎಂದು ಅರ್ಥವಿವರಣೆಮಾಡಿರುವರು. ಈ ಶಬ್ದಕ್ಕೆ ಸೋಮರಸವನ್ನು ಇಡುವ ಮರದ ಪಾತ್ರೆಯೆಂದೂ ಹೇಳುವರು. ಈ ಶಬ್ದವು ಯಾವಾಗಲೂ ಬಹುವಚನದಲ್ಲಿ ಪ್ರಯೋಗಿಸಲ್ಪಡುವುದು. ಈ ದಿನಗಳಲ್ಲಿ ಸೋಮಪಾನವು ವಿಶೇಷವಾಗಿ ನಡೆಯುವುದರಿಂದ ಇಂದ್ರನನ್ನು ಆ ಕಾಲದಲ್ಲಿ ಸೋಮಪಾನಕ್ಕಾಗಿ ಪುನಃಪುನಃ ಬರಬೇಕೆಂದು ಇಲ್ಲಿ ಪ್ರಾರ್ಥಿಸಲಾಗಿದೆ.

---

ಸಂಹಿತಾಪಾಠಃ

ಧಿಷ್ವಾ ಶವಃ ಶೂರ ಯೇನ ವೃತ್ರಮವಾಭಿನದ್ದಾನುಮೌರ್ಣವಾಭಂ ।
ಅಪಾವೃಣೋರ್ಜ್ಯೋತಿರಾರ್ಯಾಯ ನಿ ಸವ್ಯತಃ ಸಾದಿ ದಸ್ಯುರಿಂದ್ರ ॥೧೮॥

ಪದಪಾಠಃ

ಧಿಷ್ವ । ಶವಃ । ಶೂರ । ಯೇನ । ವೃತ್ರಂ । ಅವ॒ಅಭಿನತ್ । ದಾನುಂ । ಔರ್ಣ॒ವಾಭಂ ।
ಅಪ । ಅವೃಣೋಃ । ಜ್ಯೋತಿಃ । ಆರ್ಯಾಯ । ನಿ । ಸವ್ಯತಃ । ಸಾದಿ । ದಸ್ಯುಃ । ಇಂದ್ರ ॥ ೧೮ ॥

ಸಾಯಣಭಾಷ್ಯಂ

ಶೂರ ಹೇ ಇಂದ್ರ ಶವಸ್ತಾದೃಶಂ ಬಲಂ ಧಿಷ್ವ । ಧಾರಯ ॥ ದಧಾತೇರ್ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ಛಂದಸ್ಯುಭಯಥೇತಿ ವಾ ಸ ಆರ್ಧಧಾತುಕತ್ವಾದಿಡಾಗಮಃ ॥ ಯೇನ ಬಲೇನ ದಾನುಂ ದಾನೋಃ ಪುತ್ರಂ ವೃತ್ರಮೌರ್ಣವಾಭಂ । ಊರ್ಣನಾಭಿಃ ಕೀಟವಿಶೇಷ ಔರ್ಣನಾಭ

ಇತ್ಯುಚ್ಯತೇ । ತಮಿವಾವಾಭಿನತ್ । ಬಿಭೇದಿಥ । ಯದ್ವಾ ಔರ್ಣ ಊರ್ಣನಾಭಿಃ । ತದಾಭಂ ತತ್ಸದೃಶ-ಮಿತ್ಯರ್ಥಃ । ತತಸ್ತ್ವನೋರರೂಪಸ್ಯ ಹನನಾದಾರ್ಯಾಯ ಕರ್ಮಣಾಮನುಷ್ಠಾತ್ರೇ ಜನಾಯ ಕುತ್ಸಾಯ ರಾಜರ್ಷಯೇ ವಾ ಜ್ಯೋತಿಃ ಪ್ರಕಾಶಕಮಾದಿತ್ಯಮಪಾವೃಣೋಃ । ಉದ್ಘಾಟಿತವಾನಸಿ । ದಸ್ಯುಃ ಕರ್ಮ-ಣಾಮುಪಕ್ಷಪಯಿತಾ ಸ ವೃತ್ರಃ ಸವ್ಯತಸ್ತವ ಸವ್ಯಪಾರ್ಶ್ವೇ ನಿಷಾದಿ । ತ್ವಯಾ ನಿತರಾಂ ಸನ್ನೋ ಬಾಧಿತೋ ವರ್ತತೇ ॥

ಪ್ರತಿಪದಾರ್ಥ

ಶೂರ—ಪರಾಕ್ರಮಿಯಾದ । ಇಂದ್ರ—ಎಲೈ ಇಂದ್ರನೇ । ಯೇನ—ಯಾವ ಬಲದಿಂದ । ದಾನುಂ—ದಾನುವಿನ ಪುತ್ರನಾದ । ವೃತ್ರಂ—ವೃತ್ರಾಸುರನನ್ನು । ಔರ್ಣವಾಭಂ—ಆವರಕವಾದ ಜೇಡರ ಹುಳುವನ್ನು ನಾಶ ಮಾಡುವಂತೆ । ಅವಾಭಿನತ್—ಹೊಡೆದುಹಾಕಿದೆಯೋ ಮತ್ತು (ಯಾವ ಬಲದಿಂದ) । ಆರ್ಯಸ್ಯ-ಕರ್ಮಾನುಷ್ಠಾನ ವನ್ನು ಮಾಡ.ವ ರಾಜರ್ಷಿಗೆ । ಜ್ಯೋತಿಃ—ಪ್ರಕಾಶಕನಾದ ಆದಿತ್ಯನನ್ನು । ಅಪಾವೃಣೋಃ—ಆವರಣವನ್ನು ಬಿಡಿಸಿ ಪ್ರಕಾಶಿಸುವಂತೆ ಮಾಡಿದೆಯೋ ಅಂತಹ । ಶವಃ—ಬಲವನ್ನು । ಧಿಷ್ವ—ಧರಿಸಿರು । ದಸ್ಯುಃ—ಕರ್ಮ ನಾಶಕನಾದ ವೃತ್ರನು । ಸವ್ಯತಃ—ನಿನ್ನ ಎಡಭಾಗದಲ್ಲಿ । ನಿ ಷಾದಿ—(ನಿನ್ನಿಂದ ಹೊಡೆಯಲ್ಪಟ್ಟು) ಬಿದ್ದಿದ್ದಾನೆ.

ಭಾವಾರ್ಥ

ಪರಾಕ್ರಮಿಯಾದ ಎಲೈ ಇಂದ್ರನೇ, ಯಾವ ನಿನ್ನ ಸಹಜವಾದ ಬಲದಿಂದ ದಾನುವಿನ ಪುತ್ರನಾದ ವೃತ್ರಾಸುರ ನನ್ನು ಆವರಕವಾದ ಜೇಡರಹುಳುವನ್ನು ನಾಶಮಾಡುವಂತೆ ಹೊಡೆದುಹಾಕಿದೆಯೋ ಮತ್ತು ಯಾವ ಬಲದಿಂದ ಕರ್ಮಾನುಷ್ಠಾನವನ್ನು ಮಾಡುವ ರಾಜರ್ಷಿಗೆ ಪ್ರಕಾಶಕನಾದ ಆದಿತ್ಯನನ್ನು ಆವರಣದಿಂದ ಬಿಡಿಸಿ ಪ್ರಕಾಶಿಸುವಂತೆ ಮಾಡಿದೆಯೋ ಅಂತಹ ಬಲವನ್ನು ಧರಿಸಿರು. ಕರ್ಮನಾಶಕನಾದ ವೃತ್ರನು ನಿನ್ನ ಎಡಭಾಗದಲ್ಲಿ ನಿನ್ನಿಂದ ಹೊಡೆ ಯಲ್ಪಟ್ಟು ಬಿದ್ದಿದ್ದಾನೆ.

English Translation

Indra, hero, keep up the strength wherewith you have crushed Vritra, the spider-like son of Danu, and let open the light to the Arya: the Dasyu has been aset side on your left hand.

ವಿಶೇಷವಿಷಯಗಳು

ದಾನುಂ—ದಾನುವೆಂಬುವಳು ವೃತ್ರನ ತಾಯಿಯು. ಇಲ್ಲಿ ದಾನುಶಬ್ದವು ದಾನುವಿನ ಪುತ್ರನಾದ ವೃತ್ರ ನೆಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ.

ಔರ್ಣವಾಭಂ—ಊರ್ಣವಾಭ ಅಥವಾ ಊರ್ಣನಾಭಿ ಎಂದರೆ ನಾಭಿಪ್ರದೇಶದಿಂದ ದಾರವನ್ನು ತೆಗೆಯುವ ಜೇಡರಹುಳುವೆಂದರ್ಥವು. ಇಲ್ಲಿ ಔರ್ಣವಾಭವೆಂದರೆ ಜೇಡರಹುಳುವು ತನ್ನ ಬಲೆಯನ್ನು ಕಟ್ಟಿ ಬಹಳ ಪ್ರದೇಶವನ್ನು ಆಕ್ರಮಿಸಿಕೊಂಡು ಅಥವಾ ಆವರಿಸಿ ಇತರ ಸೊಳ್ಳೆ, ನೊಣ ಮುಂತಾದ ಕೀಟಾದಿಗಳ ಸಂಚಾರಕ್ಕೆ

ಅಡ್ಡಿಮಾಡುವಂತೆ ವೃತ್ರಾಸುರನು ಅಂತರಿಕ್ಷದಲ್ಲಿ ವ್ಯಾಪಿಸಿ ಮೇಘಗಳನ್ನು ಅಡ್ಡಗಟ್ಟಿ ಅವುಗಳ ಸಂಚಾರಕ್ಕೂ, ವೃಷ್ಟಿಗೂ ಅಡಚಣೆಯನ್ನು ಮಾಡುತ್ತಿರುವುದರಿಂದ ವೃತ್ರನನ್ನು ಜೇಡರ ಹುಳುವಿಗೆ ಹೋಲಿಸಿದೆ.

ಇಂತಹ ವೃತ್ರನನ್ನು ಇಂದ್ರನು ಹೊಡೆದುಹಾಕಿ ವೃತ್ರನು ತಡೆದಿದ್ದ ಮೇಘಗಳ ಆವರಣದಿಂದ ಮುಚ್ಚಿ ಹೋಗಿ ಕಾಣಿಸದಂತೆ ಇದ್ದ ಸೂರ್ಯನನ್ನು (ಸೂರ್ಯನ ಬೆಳಕನ್ನು) ಆರ್ಯರೆಲ್ಲರಿಗೂ (ಸಜ್ಜನರೆಲ್ಲರಿಗೂ) ಕಾಣುವಂತೆ ಮಾಡಿ ದಸ್ಯುವಾದ ವೃತ್ರನನ್ನು ನಿನ್ನ ಎಡಭಾಗದಲ್ಲಿ ಬೀಳುವಂತೆ ಮಾಡಿದೆ ಎಂಬ ಅಭಿಪ್ರಾಯವು ಈ ಋಕ್ಕಿನ ಉತ್ತರಾರ್ಧದಲ್ಲಿ ಉಕ್ತವಾಗಿದೆ.

---

ಸಂಹಿತಾಪಾಠಃ

ಸನೇಮ ಯೇ ತ ಊತಿಭಿಸ್ತರಂತೋ ವಿಶ್ವಾಃ ಸ್ಪೃಧ ಆರ್ಯೇಣ ದಸ್ಯೂನ್।

ಅಸ್ಮಭ್ಯಂ ತತ್ತ್ವಾಷ್ಟ್ರಂ ವಿಶ್ವರೂಪಮರಂಧಯಃ ಸಾಖ್ಯಸ್ಯ ತ್ರಿತಾಯ॥

॥ ೧೯ ॥

ಪದಪಾಠಃ

ಸನೇಮ । ಯೇ । ತೇ । ಊತಿಽಭಿಃ । ತರಂತಃ । ವಿಶ್ವಾಃ । ಸ್ಪೃಧಃ । ಆರ್ಯೇಣ । ದಸ್ಯೂನ್ ।

ಅಸ್ಮಭ್ಯಂ । ತತ್ । ತ್ವಾಷ್ಟ್ರಂ । ವಿಶ್ವಽರೂಪಂ । ಅರಂಧಯಃ । ಸಾಖ್ಯಸ್ಯ । ತ್ರಿತಾಯ ॥ ೧೯ ॥

ಸಾಯಣಭಾಷ್ಯಂ

ಸನೇಮ ತಾನ್ಪುರುಷಾನ್ ಸಂಭಜೇಮ ಯೇ ತೇ ತವೋತಿಭಿಃ ಪಾಲನೈರ್ವಿಶ್ವಾಃ ಸ್ಪೃಧಃ ಸ್ಪರ್ಧಮಾನಾಃ ಸರ್ವಾ ವಿಶಸ್ತರಂತೋ ಹಿಂಸಂತಃ ತಥಾರ್ಯೇಣಾರ್ಯಭಾವೇನ ದಸ್ಯೂನುಪಕ್ಷಪಯಿತ್ವಾನ್ ಹಿಂಸಂತೋ ಭವಂತಿ । ತದಸ್ಮಭ್ಯಂ ವಶಮಾನಯ । ಕಿಂ ತತ್ । ತದಾಹ । ತ್ವಾಷ್ಟ್ರಂ ತ್ವಷ್ಟುಃ ಸುತಂ ವಿಶ್ವರೂಪಮೇತನ್ನಾಮಕಮಸುರಮರಂಧಯಃ ॥ ರಧ್ಯತಿರ್ವಶಗಮನೇ ॥ ವಶಮಾನಯಃ । ಯದ್ವಾ ತಮಸುರಮವಧೀಃ ॥ ರಧ ಹಿಂಸಾಸಂರಾದ್ಧ್ಯೋಃ । ರಧಿಜಭೋರಚೀತಿ ನುಮ್ ॥ ಇಂದ್ರಸ್ತ್ವಾಷ್ಟ್ರಮವಧೀದಿತ್ಯಯಮರ್ಥಸ್ತೈತ್ತಿರೀಯಕೇ ವಿಶ್ವರೂಪೋ ವೈ ತ್ವಾಷ್ಟ್ರಃ । ತೈ. ೨-೫-೧ । ಇತ್ಯತ್ರ ಮಹತಾ ಪ್ರಬಂಧೇನ ಪ್ರಪಂಚಿತಃ । ಕಿಂಚ ಸಾಖ್ಯಸ್ಯ ಸಖಿಭಾವಸ್ಯಾನುಪಾಲನಾಯ ತ್ರಿತಾಯ ಮಹರ್ಷಯೇ ವಶಮಾನಯಃ । ಯದ್ವಾ ಸನೇಮ ತೇ ವಯಂ ಪ್ರವೃದ್ಧಾ ಭವೇಮ ಯೇ ವಯಂ ತವ ರಕ್ಷಾಭಿಃ ಸ್ಪರ್ಧಮಾನಾಃ ಪ್ರಜಾ ದಸ್ಯೂಂಶ್ಚ ತರಂತೋಽತಿಕ್ರಾಮಂತೋ ಭವೇಮ ॥ ಸನೇಮೇತಿ ವೃದ್ಧ್ಯರ್ಥ ಆದ್ಯುದಾತ್ತಃ । ಯಥಾ ಸನೇಮ ಮಿತ್ರಾವರುಣಾ ಸನಂತಃ । ೭-೫೨-೧ । ಇತಿ । ಸಕರ್ಮಕಶ್ಚೇತ್ ಮಧ್ಯೋದಾತ್ತಃ । ಸನೇಮ ವಾಜಂ ತವ । ೮-೬೧-೪ । ಇತಿ । ತರಂತಃ । ತೄ ಪ್ಲವನತರಣಯೋಃ । ಶತರಿ ರೂಪಂ । ಸಂಜ್ಞಾವಚನಶ್ಚೇದಂತೋದಾತ್ತಃ । ಯಥಾ ತರಂತ ಇವ ಮಂಹನಾ । ೫-೬೧-೧೦ । ಇತಿ ।

### ಪ್ರತಿಪದಾರ್ಥ

**ಯೇ**—ಯಾವ ನಾವು । **ತೇ**—ನಿನ್ನ । **ಊತಿಭಿಃ**—ರಕ್ಷಣೆಗಳಿಂದ ಕೂಡಿ । **ವಿಶ್ವಾಃ ಸ್ಪೃಧಃ**—ನಮ್ಮೊಂದಿಗೆ ಸ್ಪರ್ಧಿಸತಕ್ಕ (ನಮ್ಮನ್ನು ಎದುರಿಸತಕ್ಕ) ಸಕಲವಾದ ಆಸುರೀ ಪ್ರಜೆಗಳನ್ನು (ದಸ್ಯುಜನರನ್ನು) । **ತರಂತಃ**—ಹಿಂಸಿಸುವವರಾಗಿಯೂ । **ಆರ್ಯೇಣ**—ಆರ್ಯಭಾವದಿಂದ । **ದಸ್ಯೂನ್**—ಹಿಂಸಕರಾದ ಅಸುರರನ್ನು ಹಿಂಸಿಸುತ್ತಲೂ ಇರುವೆವೋ ಅಂತಹ ನಾವು । **ಸನೇಮ**—ವೃದ್ಧಿಯನ್ನು ಪಡೆಯುವಂತಾಗಲಿ । **ತತ್**—ಆ ಅಸುರರನ್ನು ನಾಶಮಾಡುವ ಕಾರ್ಯವನ್ನು । **ಅಸ್ಮಭ್ಯಂ**-ನಮಗಾಗಿ (ನೀನು ಮಾಡಿದೆ) । **ಸಾಖ್ಯಸ್ಯ**—ಸಖಿಭಾವವನ್ನು ಹೊಂದಿದ। **ತ್ರಿತಾಯ**—ತ್ರಿತನೆಂಬ ಮಹರ್ಷಿಗಾಗಿ । **ತ್ವಾಷ್ಟ್ರಂ**—ತ್ವಷ್ಟೃವಿನ ಸುತನಾದ । **ವಿಶ್ವರೂಪಂ**—ವಿಶ್ವರೂಪನೆಂಬ ಅಸುರನನ್ನು । **ಅರಂಧಯಃ**—ಕೊಂದಿರುವೆ.

### ಭಾವಾರ್ಥ

ಎಲೈ ಇಂದ್ರನೇ, ನಿನ್ನ ರಕ್ಷಣೆಗಳಿಂದ ಕೂಡಿ ನಮ್ಮೊಂದಿಗೆ ಸ್ಪರ್ಧಿಸತಕ್ಕ ಸಕಲವಾದ ಆಸುರೀ ಪ್ರಜೆಗಳನ್ನು ಹಿಂಸಿಸುವವರಾಗಿಯೂ ಆರ್ಯಭಾವದಿಂದ ಕರ್ಮವನ್ನಾಚರಿಸುತ್ತಾ ಹಿಂಸಕರಾದ ಅಸುರರನ್ನು ದೂರಮಾಡುತ್ತಾ ಇರತಕ್ಕ ನಾವು ವೃದ್ಧಿಯನ್ನು ಪಡೆಯುವಂತಾಗಲಿ. ಅಸುರರನ್ನು ನಾಶಮಾಡುವ ಕಾರ್ಯವನ್ನು ನೀನು ನಮಗಾಗಿ ಮಾಡಿದೆ. ಸಖಿಭಾವವನ್ನು ಹೊಂದಿದ ತ್ರಿತನೆಂಬ ಮಹರ್ಷಿಗಾಗಿ ತ್ವಷ್ಟೃವಿನ ಸುತನಾದ ವಿಶ್ವರೂಪನೆಂಬ ಅಸುರನನ್ನು ಕೊಂದಿರುವೆ.

### English Translation

Let us honour those men, who, through your protection, surpass all their rivals, as the Dasyus (are surpassed) by the Arya: this (have you wrought) for us: you have slain Vishvarupa, the son of Twashtri, through friendship for Trita.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ತ್ರಿತನೆಂಬ ರಾಜರ್ಷಿಗಾಗಿ ವಿಶ್ವರೂಪನೆಂಬ ತ್ವಷ್ಟೃವಿನ ಮಗನನ್ನು ಸಂಹರಿಸಿದೆ ಎಂದು ಋಷಿಯು ಇಂದ್ರನನ್ನು ಸ್ತುತಿಸಿರುವರು. ಈ ತ್ರಿತನು ಯಾರು, ಇವನ ವಿಷಯವೇನು ಎಂದು ಮುಂತಾದ ಇವನಿಗೆ ಸಂಬಂಧಿಸಿದ ಅನೇಕವಿಷಯಗಳನ್ನು ನಾವು ಹಿಂದೆಯೇ ಎಂದರೆ. ಋ ಸಂ. ಭಾಗ 5. ಪುಟ 230 ; ಭಾಗ ೮ ಪುಟ. 443 ಮತ್ತು 473 ಇತ್ಯಾದಿ ಸ್ಥಳಗಳಲ್ಲಿ ವಿಸ್ತಾರವಾಗಿ ವಿವರಿಸಿದೇವೆ. ತ್ರಿತಶಬ್ದವು ಅನೇಕಋಕ್ಕುಗಳಲ್ಲಿರುವುದಾದರೂ ಇವನ ವಿಷಯವಾಗಿ ಅಧಿಕಾಂಶಗಳು ಏನೂ ತಿಳಿಯಬರುವಂತಿಲ್ಲ. ಅಥರ್ವವೇದದಲ್ಲಿಯೂ ಐದಾರು ಸ್ಥಳಗಳಲ್ಲಿ ತ್ರಿತ ಎಂಬ ಶಬ್ದದ ಪ್ರಯೋಗವಿದ್ದರೂ ಅಲ್ಲಿಯೂ ಏನೂ ತಿಳಿಯಬರುವುದಿಲ್ಲ. ಇವನಿಗೂ ಇಂದ್ರನಿಗೂ ಇರುವ ಸಾಹಚರ್ಯವು ಮಾತ್ರ ಅನೇಕಕಡೆಗಳಲ್ಲಿದೆ. ಎಲ್ಲ ಕಡೆಗಳಲ್ಲಿಯೂ ಹೇಳಿರುವಂತೆ ತ್ರಿತನು ಬಹಳದೂರದಲ್ಲಿರುವ ದೇವತೆ, ಅವನಲ್ಲಿಗೆ ಪಾಪ ಅಥವಾ ದುಃಸ್ವಪ್ನಗಳು ಕಳುಹಿಸಲ್ಪಡುತ್ತವೆ, ಎಂದು ಮಾತ್ರ ಜ್ಞಾತವಾಗುತ್ತದೆ. (ಅ. ವೇ. ೧-೧೩೧-೧, ೩ ; ೧೯-೫೬-೪) ತೈತ್ತಿರೀಯಸಂಹಿತೆಯಲ್ಲಿ ಅವನು ದೀರ್ಘಾಯುಸ್ಸನ್ನು ಕೊಡತಕ್ಕವನು

ಎಂದಿದೆ (ತೈ. ಸಂ. ೧-೮-೧೦-೨) ಅವನು ಅಮರತ್ವದಾಯಕವಾದ ಸೋಮರಸವನ್ನು ಸಿದ್ಧಮಾಡುವವನು ತ್ರಿತನು ಏಕತ, ದ್ವಿತ ಮತ್ತು ತ್ರಿತರೆಂಬ ಮೂರುಮಂದಿ ದೇವತೆಗಳಲ್ಲೊಬ್ಬನು ; ಈ ಮೂವರೂ ಅಗ್ನಿಪುತ್ರರು ; ತ್ರಿತನು ನೀರಿನಿಂದ ಉದ್ಭವಿಸಿದನು ಎಂದು ಶ. ಬ್ರಾ. ೧-೨-೩-೧, ೨ ಮತ್ತು ತೈ. ಬ್ರಾ. ೩-೨-೮-೧೦, ೧೧ ಇತ್ಯಾದಿ ಬ್ರಾಹ್ಮಣಗಳಲ್ಲಿ ಹೇಳಿದೆ.

ಋಗ್ವೇದದಲ್ಲಿ ಹೇಳಿರುವಂತೆ ೩-೪ ಸಂದರ್ಭಗಳಲ್ಲಿ ಇಂದ್ರ ಮತ್ತು ತ್ರಿತರು ಒಂದೇ ಕಾರ್ಯವನ್ನು (ರಾಕ್ಷಸ ವಧೆಯನ್ನು) ಮಾಡಿದಾರೆ. ಒಂದು ಸಲ ಇಂದ್ರನು ತ್ರಿತನಿಗೆ ಪ್ರಜೋದಕನಾಗಿದಾನೆ. ಮತ್ತೊಂದು ಕಡೆ ತ್ರಿತನಿಂದ ಇಂದ್ರನೇ ಪ್ರೋತ್ಸಾಹಿತನಾಗಿದಾನೆ ಎಂದು ಹೇಳಿದೆ. ಎರಡು ಸಲ ಇಂದ್ರನು ತ್ರಿತನಿಗಾಗಿ ಕೆಲಸ ಮಾಡಿದಾನೆ. ಪ್ರಕೃತವಾದ ಈ ಋಕ್ಕಿನಲ್ಲಿ ಹೇಳಿರುವಂತೆಯೂ ಮುಂದಿನಋಕ್ಕಿನಲ್ಲಿ ಹೇಳಿರುವಂತೆಯೂ ತ್ರಿತನಿಗಾಗಿ ಇಂದ್ರನು ವಿಶ್ವರೂಪನೆಂಬುವನನ್ನೂ, ಅರ್ಬುದನನ್ನೂ ಸಂಹರಿಸಿದಾನೆ. ತ್ರಿತನು ಅಗ್ನಿಯನ್ನು ಹುಡುಕುತ್ತಾನೆ ; ಸ್ವರ್ಗದಲ್ಲಿ ಅಗ್ನಿಯನ್ನು ಜ್ವಲನಗೊಳಿಸುತ್ತಾನೆ ; ಮನುಷ್ಯರ ಗೃಹಗಳಲ್ಲಿ ಅಗ್ನಿಯ ಬದಲು ವಾಸಿಸುತ್ತಾನೆ ; ಅವನ ವಾಸಸ್ಥಳ ಬಹುದೂರದಲ್ಲಿ ಗುಪ್ತವಾಗಿದೆ ; ಅಲ್ಲಿ ಸೋಮವೂ ಇದೆ. ಇಂದ್ರನು ಸೋಮಪಾನಮಾಡುತ್ತಾನೆ. ಆದರೆ ತ್ರಿತನು ಸೋಮವನ್ನು ಸಿದ್ಧಪಡಿಸುತ್ತಾನೆ. ಇಂದ್ರತ್ರಿತರಿಗೆ ಈ ವ್ಯತ್ಯಾಸವಿದೆ

ಮೇಲೆ ಹೇಳಿದ ಅಂಶಗಳಿಂದ ತ್ರಿತನು ವಿದ್ಯುದ್ದೇವತೆ ಎಂದರೆ, ಅಗ್ನಿಯ ಅಂತರಿಕ್ಷದ ರೂಪವೆನ್ನಬಹುದು ; ಅಗ್ನಿ, ವಾಯು, ಇಂದ್ರ ಮತ್ತು ಸೂರ್ಯರೆಂಬ ದೇವತೆಗಳಂತೆ ಇವನು ಮಧ್ಯಮದೇವತೆ. ಆದರೆ ಈ ದೇವತೆಯ ಕಾರ್ಯಗಳೆಲ್ಲವೂ ಇಂದ್ರನಿಂದಲೇ ಮಾಡಲ್ಪಟ್ಟವೆಯಾಗಿ ಋಗ್ವೇದದಲ್ಲಿ ಇವನು ಅಪ್ರಧಾನದೇವತೆಯಾಗಿದಾನೆ. ವಿದ್ಯುದ್ರೂಪನಾಗಿ ಸ್ವರ್ಗದಿಂದ ಸೋಮವನ್ನು ಭೂಮಿಗೆ ತಂದುದರಿಂದಲೇ ತ್ರಿತನಿಗೂ ಸೋಮನಿಗೂ ಸಂಬಂಧವು ಉಕ್ತವಾಗಿರಬಹುದು. ಆಧಾರಗಳು ಹೆಚ್ಚಾಗಿಲ್ಲದ್ದರಿಂದ ಇವನ ವಿಷಯದಲ್ಲಿ ಒಬ್ಬೊಬ್ಬ ಪಂಡಿತರು ಒಂದೊಂದು ರೀತಿ ಅಭಿಪ್ರಾಯಪಟ್ಟಿದಾರೆ. ಕೆಲವನ್ನು ಮಾತ್ರ ಹೇಳುವುದಾದರೆ ರಾತ್ (Roth) ಎಂಬ ಪಂಡಿತನು ನೀರು ಮತ್ತು ಗಾಳಿಯ ದೇವತೆಯೆಂದೂ, ಹಿಲ್‌ಬ್ರಾಂಡ್ (Hillbrandt) ಎಂಬುವನು ಉದ್ದೀಪ್ತವಾದ ಆಕಾಶದದೇವತೆ ಯೆಂದೂ, ಪೆರಿ (Perry) ಎಂಬುವನು ಬಿರುಗಾಳಿಯ ದೇವತೆಯೆಂತಲೂ ಹೇಳಿರುತ್ತಾರೆ. ಪಿಶ್ಚೆಲ್ (Pischel) ಎಂಬ ಮತ್ತೊಬ್ಬಪಂಡಿತನು ಮೊದಲು ಸಮುದ್ರ ಮತ್ತು ನೀರಿನ ದೇವತೆ, ಅನಂತರ ಮನುಷ್ಯರಲ್ಲಿ ವೈದ್ಯ, ಆಮೇಲೆ ದೇವತ್ವವನ್ನು ಪಡೆದನೆಂದು ಹೇಳಿದಾನೆ. ಹಾರ್ಡಿ (Hardy) ಎಂಬುವನು ಚಂದ್ರದೇವತೆಯೆಂದಿದಾನೆ.

ಪ್ರಕೃತಋಕ್ಕಿನಲ್ಲಿ ತ್ರಿತನು ಇಂದ್ರನ ಸ್ನೇಹಭಾವವನ್ನು ಹೊಂದಿರುವುದರಿಂದ ಅದಕ್ಕಾಗಿ ಇಂದ್ರನು ವಿಶ್ವರೂಪ ನೆಂಬ ತ್ವಷ್ಟೃಪುತ್ರನನ್ನು ಕೊಂದನೆಂದು ಹೇಳಿದೆ.

**ಆರ್ಯೇಣ ದಸ್ಯೂನ್**—ದಸ್ಯುಶಬ್ದಾರ್ಥವಿವರಣೆಯನ್ನೂ ದಸ್ಯುವಿಚಾರವಾದ ಇತರ ವಿಷಯಗಳನ್ನೂ ನಾವು ಈ ಭಾಗದ 580-582ನೇ ಪುಟಗಳಲ್ಲಿ ವಿವರಿಸಿದೇವೆ.

**ವಿಶ್ವರೂಪಂ**—ವಿಶ್ವರೂಪನೆಂಬುವನನ್ನು ಇಂದ್ರನು ಸಂಹಾರಮಾಡಿದ ವಿಷಯವು ತೈತ್ತಿರೀಯ ಸಂಹಿತೆಯ ಎರಡನೇ ಕಾಂಡದಲ್ಲಿ ಐದನೆಯ ಪ್ರಪಾಠಕದ ಪ್ರಾರಂಭಭಾಗದಲ್ಲಿ ಹೇಳಿದೆ. ಋಗ್ವೇದದಲ್ಲಿಯೂ ಈವಿಷಯವಾಗಿ-

ಭೂರೀದಿಂದ್ರ ಉದಿನಕ್ಷಂತಮೋಜೋಽವಾಭಿನತ್ಸತ್ಪತಿರ್ಮನ್ಯಮಾನಂ ।
ತ್ವಾಷ್ಟ್ರಸ್ಯ ಚಿದ್ವಿಶ್ವರೂಪಸ್ಯ ಗೋನಾಮಾಚಕ್ರಾಣಸ್ತ್ರೀಣಿ ಶೀರ್ಷಾ ಪರಾ ವರ್ಕ್ ॥

(ಋ. ಸಂ. ೧೦-೮-೯)

ಎಂಬ ಋಕ್ಕಿನಲ್ಲಿ ಇಂದ್ರನು—ತ್ವಷ್ಟೃಪುತ್ರನಾದ ವಿಶ್ವರೂಪನೆಂಬುವನ ಮೂರು ತಲೆಗಳನ್ನು ಕತ್ತರಿಸಿಹಾಕಿದನು ಎಂದು ಹೇಳಿದೆ. ಈ ಕಾರ್ಯವನ್ನು ಇಂದ್ರನು ತ್ರಿತನಿಗಾಗಿ ಮಾಡಿದನೆಂದೂ ತ್ರಿತನು ಈ ವಿಷಯದಲ್ಲಿ ಇಂದ್ರನಿಗೆ ಸಹಾಯಮಾಡಿದನೆಂದೂ ಅದೇ ಸೂಕ್ತದ ೭ನೆಯ ಋಕ್ಕಿನಲ್ಲಿ ಹೇಳಿದೆ—

ಅಸ್ಯ ತ್ರಿತಃ ಕ್ರತುನಾ ವವ್ರೇ ಅಂತರಿಚ್ಛನ್ ಧೀತಿಂ ಪಿತುರೇವೈಃ ಪರಸ್ಯ ।
ಸಚಸ್ಯಮಾನಃ ಪಿತ್ರೋರುಪಸ್ಥೇ ಜಾಮಿ ಬ್ರುವಾಣ ಆಯುಧಾನಿ ವೇತಿ ।
ಸ ಪಿತ್ರ್ಯಾಣ್ಯಾಯುಧಾನಿ ವಿದ್ವಾನಿಂದ್ರೇಷಿತ ಆಪ್ತ್ಯೋ ಅಭ್ಯಯುಧ್ಯತ್ ।
ತ್ರಿಶೀರ್ಷಾಣಂ ಸಪ್ತರಶ್ಮಿಂ ಜಘನ್ವಾನ್ ತ್ವಾಷ್ಟ್ರಸ್ಯ ಚಿನ್ನಿಃ ಸಸೃಜೇ ತ್ರಿತೋ ಗಾಃ ॥

(ಋ. ಸಂ. ೧೦-೮-೭, ೮)

ಈ ಋಕ್ಕುಗಳ ಭಾಷ್ಯದಲ್ಲಿ ಸಾಯಣರು ಒಂದು ಉಪಾಖ್ಯಾನವನ್ನು ಹೇಳಿದ್ದಾರೆ—ಇಂದ್ರನು ಮೂರು ಶಿರಸ್ಸುಗಳುಳ್ಳ ತ್ವಷ್ಟೃಪುತ್ರನಾದ ವಿಶ್ವರೂಪನನ್ನು ಕೊಲ್ಲಲು ತ್ರಿತನ ಸಹಾಯವನ್ನು ಕೋರಿದನು. ಅದಕ್ಕೆ ತ್ರಿತನು ತನ್ನ ಶಕ್ತಿಯನ್ನು ಹೆಚ್ಚಿಸಿಕೊಳ್ಳಲು ತನಗೆ ಯಜ್ಞಗಳಲ್ಲಿ ಹವಿರ್ಭಾಗವನ್ನು ಕೊಡಬೇಕೆಂದು ವರವನ್ನು ಕೇಳಿದನು. ಇಂದ್ರನು ಅದಕ್ಕೊಪ್ಪಿ ಹಸ್ತಪ್ರಕ್ಷಾಳನಕ್ಕಾಗಿ ನೀರನ್ನೂ ಯಜ್ಞಭಾಗವನ್ನೂ ಕೊಟ್ಟನು. ಬಳಿಕ ತ್ರಿತನು ತನ್ನ ತಂದೆಯ ಸಂಬಂಧವಾದ ಆಯುಧಗಳಿಂದ ಸಜ್ಜುಗೊಂಡು ಇಂದ್ರಪ್ರೇರಿತನಾಗಿ ತ್ವಷ್ಟೃಪುತ್ರನಾದ ವಿಶ್ವರೂಪನೆಂಬುವನ ಕೂಡ ಯುದ್ಧಮಾಡಿ ಅವನನ್ನು ತನ್ನ ಆಯುಧಗಳಿಂದ ಬಲವಾಗಿ ಹೊಡೆದು ಮೂರ್ಛೆಗೊಳಿಸಿದನು. ಅನಂತರ ಇಂದ್ರನು ಆ ವಿಶ್ವರೂಪನ ಮೂರು ತಲೆಗಳನ್ನು ಕತ್ತರಿಸಿಹಾಕಿದನು ಎಂದು ಮೇಲಿನ ಋಕ್ಕುಗಳಲ್ಲಿ ಹೇಳಿದೆ.

ಇದೇ ವಿಷಯವನ್ನೇ ವಿಸ್ತಾರವಾಗಿ ತೈತ್ತಿರೀಯ ಸಂಹಿತೆಯಲ್ಲಿ ಹೇಳಿದೆ. (ತೈ. ಸಂ. ೨-೫-೧-೧) ಅದನ್ನೂ ಅರ್ಥಸಹಿತವಾಗಿ ಇಲ್ಲಿ ವಿವರಿಸಿದೆ—

ವಿಶ್ವರೂಪೋ ವೈ ತ್ವಾಷ್ಟ್ರಃ ಪುರೋಹಿತೋ ದೇವಾನಾಮಾಸೀತ್ ಸ್ವಸ್ರೀಯೋಽಸುರಾಣಾಂ ತಸ್ಯ ತ್ರೀಣಿ ಶೀರ್ಷಾಣ್ಯಾಸನ್ತ್ಸೋಮಪಾನಗ್ಂ ಸುರಾಪಾನಮನ್ನಾದನಗ್ಂ ಸ ಪ್ರತ್ಯಕ್ಷಂ ದೇವೇಭ್ಯೋ ಭಾಗಮವದತ್ ಪರೋಕ್ಷಮಸುರೇಭ್ಯಃ ॥

ಪೂರ್ವಕಾಲದಲ್ಲಿ ತ್ವಷ್ಟೃಪುತ್ರನಾದ ವಿಶ್ವರೂಪನೆಂಬುವನು ದೇವತೆಗಳಿಗೆ ಪುರೋಹಿತನಾಗಿದ್ದನು. ಇವನು ಅಸುರರ ತಂಗಿಯ ಮಗನಾದ್ದರಿಂದ ಅಸುರರಲ್ಲಿಯೂ ಇವನಿಗೆ ಅಭಿಮಾನವಿತ್ತು. ಈ ವಿಶ್ವರೂಪನಿಗೆ ಮೂರು ಶಿರಸ್ಸು (ತಲೆಗಳು) ಇದ್ದವು. ಆ ಮೂರು ತಲೆಗಳಲ್ಲಿ ಒಂದರಿಂದ ಸೋಮಪಾನಮಾಡುತ್ತಿದ್ದನು, ಮತ್ತೊಂದರಿಂದ ಸುರಾ (ಮದ್ಯ) ಪಾನಮಾಡುತ್ತಿದ್ದನು, ಮೂರನೆಯ ಶಿರಸ್ಸಿನಿಂದ ಅನ್ನಾದ್ಯಾಹಾರಗಳನ್ನು ತಿನ್ನುತ್ತಿದ್ದನು. ಹೀಗಿರುವಾಗ ಈ ವಿಶ್ವರೂಪನು ಯಜ್ಞದಲ್ಲಿ ದೇವತೆಗಳಿಗೆ ಹವಿರ್ಭಾಗವನ್ನು ದೊರಕಿಸಿಕೊಡುವುದಾಗಿ ಎಲ್ಲರೆದುರಿಗೂ ಹೇಳುತ್ತಿದ್ದನು. ಆದರೆ ಒಳೊಗೊಳಗೇ ಯಾರಿಗೂ ತಿಳಿಯದಂತೆ ಅಸುರರಿಗೆ ಸಹಾಯಮಾಡುತ್ತಿದ್ದನು.

ಸರ್ವಸ್ಮೈ ವೈ ಪ್ರತ್ಯಕ್ಷಂ ಭಾಗಂ ವದಂತಿ ಯಸ್ಮಾ ಏವ ಪರೋಕ್ಷಂ ವದಂತಿ ತಸ್ಯ ಭಾಗ ಉದಿತ. ಸ್ತಸ್ಮಾದಿಂದ್ರೋಽಬಿಭೇದೀದೃಙ್ ವೈ ರಾಷ್ಟ್ರಂ ವಿಪರ್ಯಾವರ್ತಯತೀತಿ ತಸ್ಯ ವಜ್ರ-ಮಾದಾಯ ಶೀರ್ಷಾಣ್ಯಚ್ಛಿನತ್ ॥

ಜನರು ಎಲ್ಲರಿಗೂ ಭಾಗವನ್ನು ಕೊಡುತ್ತೇವೆಂದು ಪ್ರತ್ಯಕ್ಷವಾಗಿ ಎಲ್ಲರೆದುರಿಗೂ ಮಾತುಕೊಡುವರು. ಆದರೆ ಆ ಕೊಟ್ಟಮಾತನ್ನು ನೆರವೇರಿಸುವವರು ಅತಿವಿರಳ ಭಾಗವನ್ನು ಕೊಡುತ್ತೇವೆಂದು (ಪರೋಕ್ಷವಾಗಿ) ರಹಸ್ಯವಾಗಿ (ಏಕಾಂತವಾಗಿ) ನಂಬಿಕೆಯಾಗುವಂತೆ ಮಾತುಕೊಟ್ಟಲ್ಲಿ ಆ ವಚನವನ್ನು ಖಂಡಿತವಾಗಿಯೂ ಪಾಲಿಸುತ್ತಾರೆ. ಆದುದರಿಂದ ವಿಶ್ವರೂಪನ ರಹಸ್ಯಸಂಧಾನವನ್ನು ಕಂಡು ಇಂದ್ರನು ಹೆದರಿದನು. ಇವನು ತನಗೆ ದ್ರೋಹವೆಸಗಿ ರಾಷ್ಟ್ರವನ್ನು ಬೇರೆಯವರ (ಅಸುರರ) ವಶಮಾಡುವನೆಂದು ಹೆದರಿ ತನ್ನ ವಜ್ರಾಯುಧವನ್ನು ತೆಗೆದುಕೊಂಡು ಆ ವಿಶ್ವರೂಪನ ಮೂರು ಶಿರಸ್ಸುಗಳನ್ನೂ ಕತ್ತರಿಸಿದನು.

ಯತ್ಸೋಮಪಾನಮಾಸೀತ್ಸ ಕಪಿಂಜಲೋಽಭವದ್ಯತ್ಸುರಾಪಾನಗ್ಂ ಸ ಕಲವಿಂಕೋ ಯದನ್ನಾ-ದನಗ್ಂ ಸ ತಿತ್ತಿರಿಸ್ತಸ್ಯಾಂಜಲಿನಾ ಬ್ರಹ್ಮಹತ್ಯಾಮುಪಾಗೃಹ್ಣಾತ್ತಾಗ್ಂ ಸಂವತ್ಸರಮಬಿಭಸ್ತಂ ಭೂತಾನ್ಯಭ್ಯಕ್ರೋಶನ್ ಬ್ರಹ್ಮಹನ್ನಿತಿ ॥

ಆಗ ಇಂದ್ರನು ಕತ್ತರಿಸಿದ ಮೂರುಶಿರಸ್ಸುಗಳಲ್ಲಿ ಸೋಮಪಾನಮಾಡುತ್ತಿದ್ದ ಶಿರಸ್ಸು ಕಪಿಂಜಲವೆಂಬ (hazecock) ಪಕ್ಷಿಯಾಯಿತು ; ಸುರಾಪಾನವನ್ನು ಮಾಡುತ್ತಿದ್ದ ಎರಡನೆಯ ಶಿರಸ್ಸು ಕಲವಿಂಕ ಎಂದರೆ ಗುಬ್ಬಚ್ಚಿ (sparrow) ಆಯಿತು ; ಅನ್ನವನ್ನು ತಿನ್ನುತ್ತಿದ್ದ ಮೂರನೆಯ ಶಿರಸ್ಸು ತಿತ್ತಿರಿಯೆಂಬ (partridge) ಪಕ್ಷಿಯಾಯಿತು. ಆಗ ಇಂದ್ರನು ಬ್ರಾಹ್ಮಣನಾದ ವಿಶ್ವರೂಪನನ್ನು ಕೊಂದದ್ದರಿಂದ ಬ್ರಹ್ಮಹತ್ಯಾದೋಷವು ಪ್ರಾಪ್ತವಾಗಲು ಅದನ್ನು ಇಂದ್ರನು ತನ್ನ ಕೈಯಿಂದಲೇ ಸ್ವೀಕರಿಸಬೇಕಾಯಿತು. ಅದರಂತೆ ಅವನು ಬ್ರಹ್ಮಹತ್ಯಾದೋಷವನ್ನು ಒಂದು ಸಂವತ್ಸರದವರೆಗೂ ಧರಿಸಿದ್ದನು. ಪ್ರಾಣಿಗಳೆಲ್ಲಾ ಅವನನ್ನು (ಇಂದ್ರನನ್ನು) ನೋಡಿ "ಎಲೈ ಇಂದ್ರನೇ, ನೀನು ಬ್ರಹ್ಮಹತ್ಯೆಯನ್ನು ಮಾಡಿದವನು" ಎಂದು ಕೂಗುತ್ತಿದ್ದವು.

ಸ ಪೃಥಿವೀಮುಪಾಸೀದದಸ್ಯೈ ಬ್ರಹ್ಮಹತ್ಯಾಯೈ ತೃತೀಯಂ ಪ್ರತಿಗೃಹಾಣೇತಿ ಸಾಬ್ರವೀದ್ವರಂ ವೃಣೈ ಖಾತಾತ್ಪರಾಭವಿಷ್ಯಂತೀ ಮನ್ಯೇ ತತೋ ಮಾ ಪರಾಭೂವಮಿತಿ ಪುರಾ ತೇ ಸಂವತ್ಸರಾ-ದಪಿರೋಹಾದಿತ್ಯಬ್ರವೀತ್ತಸ್ಮಾತ್ಪುರಾ ಸಂವತ್ಸರಾತ್ಪೃಥಿವ್ಯೈ ಖಾತಮಪಿರೋಹತಿ ವಾರೇ-ವೃತಗ್ಗ್ ಹ್ಯಸ್ಯೈ ತೃತೀಯಂ ಬ್ರಹ್ಮಹತ್ಯಾಯೈ ಪ್ರತ್ಯಗೃಹ್ಣಾತ್ತತ್ಸ್ವಕೃತಮಿರಿಣಮಭವತ್ತಸ್ಮಾ-ದಾಹಿತಾಗ್ನಿಃ ಶ್ರದ್ಧಾದೇವಃ ಸ್ವಕೃತ ಇರಿಣೇ ನಾವಸ್ಯೇದ್ಬ್ರಹ್ಮಹತ್ಯಾಯೈ ಹ್ಯೇಷ ವರ್ಣಃ ॥

ಇದನ್ನು ಕಂಡು ಇಂದ್ರನು (ಲಜ್ಜೆಗೊಂಡು) ಬ್ರಹ್ಮಹತ್ಯಾಪರಿಹಾರಕ್ಕಾಗಿ ಪೃಥಿವಿಯ (ಭೂಮಿಯ) ಬಳಿಗೆ ಹೋಗಿ ಎಲೈ ಭೂಮಿಯೇ, ನನಗೆ ಪ್ರಾಪ್ತವಾಗಿರುವ ಈ ಬ್ರಹ್ಮಹತ್ಯದಲ್ಲಿ ಮೂರನೇ ಒಂದು ಭಾಗವನ್ನು ನೀನು ತೆಗೆದುಕೊ ಎಂದು ಹೇಳಲು, ಅದಕ್ಕೆ ಭೂಮಿಯು ಹಾಗಾದರೆ ನಾನು ಒಂದು ವರವನ್ನು ಕೇಳುವೆನು—ಜನರು ಭೂಮಿಯನ್ನು ಅಗೆದು ಹಳ್ಳಮಾಡುವರು, ಆದರಿಂದ ನನಗೆ ಅಪಮಾನವಾಗಿರುವುದು. ಆರೀತಿ ಆಗದಂತೆ ವರವನ್ನು ಕೊಡಬೇಕು ಎಂದು ಕೇಳಿತು. ಇಂದ್ರನು ಹಾಗೆಯೇ ಆಗಲಿ. ಆರೀತಿ ಅಗೆದ ಹಳ್ಳವು ಯಾವ ಪ್ರಯತ್ನವೂ ಇಲ್ಲದೆ ಒಂದುವರ್ಷ

ದೊಳಗಾಗಿ ತಾನಾಗಿಯೇ ಮುಚ್ಚಿಹೋಗಿ ಭೂಮಿಯು ಮುಂಚಿನಂತೆ ಸಮನಾಗಲಿ ಎಂದು ವರವನ್ನು ಕೊಟ್ಟನು. ಆದ್ದರಿಂದ ಭೂಮಿಯಲ್ಲಿ ಅಗೆದ ಹಳ್ಳ ಮುಂತಾದವು ಒಂದುವರ್ಷ ಕಳೆಯುವುದರೊಳಗಾಗಿ ತಾನಾಗಿಯೇ ಮುಚ್ಚಿ ಹೋಗುವುದು. ಇದನ್ನೇ ಭೂಮಿಯು ಕೇಳಿಕೊಂಡ ವರವು. ಈರೀತಿಯಾದ ವರವನ್ನು ಪಡೆದು ಭೂಮಿಯು ಇಂದ್ರನ ಬ್ರಹ್ಮಹತ್ಯಾದೋಷದ ಮೂರನೇ ಒಂದು ಭಾಗವನ್ನು ತೆಗೆದುಕೊಂಡಿತು ಆಲಾಗಾಯಿತು ಭೂಮಿಗೆ ಅದು ಸ್ವಾಭಾವಿಕವಾಯಿತು. ಆದ್ದರಿಂದ ಅಗ್ನಿಹೋತ್ರ ಅಥವಾ ಯಜ್ಞಯಾಗಾದಿಗಳನ್ನು ಮಾಡಿದ ಮತ್ತು ದೇವತೆ ಗಳಲ್ಲಿ ಶ್ರದ್ಧಾ ಭಕ್ತಿಗಳನ್ನಿಟ್ಟಿರುವ ಪುರುಷನು ಭೂಮಿಯಲ್ಲಿ ಅಗೆದು ಹಳ್ಳವಾಗಿರುವ ಭಾಗವನ್ನು ಯಜ್ಞಮಾಡಲು ಯಜ್ಞವೇದಿಯನ್ನಾಗಿ ಆರಿಸಿಕೊಳ್ಳಬಾರದು. ಏಕೆಂದರೆ ಅಂತಹ ಅಗೆದಿರುವ ಹಳ್ಳಪ್ರದೇಶವು ಭೂಮಿಯು ತಾನು ವಹಿಸಿಕೊಂಡ ಬ್ರಹ್ಮಹತ್ಯದ ಸಂಕೇತ (ವರ್ಣ) ವಾಗಿರುವುದು

> ಸ ವನಸ್ಪತೀನುಪಾಸೀದದಸ್ಯೈ ಬ್ರಹ್ಮಹತ್ಯಾಯೈ ತೃತೀಯಂ ಪ್ರತಿಗೃಹ್ಣೀತೇತಿ ತೇಽಬ್ರುವನ್ ವರಂ ವೃಣಾಮಹೈ ವೃಕ್ಣಾತ್ಪರಾಭವಿಷ್ಯಂತೋ ಮನ್ಯಾಮಹೇ ತತೋ ಮಾ ಪರಾಭೂಮೇ-ತ್ಯಾವೃಶ್ಚನಾದ್ವೋ ಭೂಯಾಗ್‌ಂಸ ಉತ್ತಿಷ್ಠಾನಿತ್ಯಬ್ರವೀತ್ತಸ್ಮಾದಾವ್ರಶ್ಚನಾದ್ವೃಕ್ಷಾಣಾಂ ಭೂಯಾಗ್‌ಂಸ ಉತ್ತಿಷ್ಠಂತಿ ವಾರೇವೃತಗ್ಗ್ ಹ್ಯೇಷಾಂ ತೃತೀಯಂ ಬ್ರಹ್ಮಹತ್ಯಾಯೈ ಪ್ರತ್ಯ-ಗೃಹ್ಣನ್ತ್ಸ ನಿರ್ಯಾಸೋಽಭವತ್ತಸ್ಮಾನ್ನಿರ್ಯಾಸಸ್ಯ ನಾಶ್ಯಂ ಬ್ರಹ್ಮಹತ್ಯಾಯೈ ಹ್ಯೇಷ ವರ್ಣೋಽಥೋ ಖಲು ಯ ಏವ ಲೋಹಿತೋ ಯೋ ವಾವ್ರಶ್ಚನಾನ್ನಿರ್ಯೇಷತಿ ತಸ್ಯ ನಾಶ್ಯಂ ಕಾಮಮನ್ಯಸ್ಯ ॥

ಬಳಿಕ ಇಂದ್ರನು ವೃಕ್ಷಗಳ ಸಮೀಪಕ್ಕೆ ಹೋಗಿ—ಎಲೈ ವೃಕ್ಷಗಳೇ, ನನ್ನ ಬ್ರಹ್ಮಹತ್ಯಾದೋಷದಲ್ಲಿ ಮೂರನೇ ಒಂದು ಭಾಗವನ್ನು ನೀವು ತೆಗೆದುಕೊಳ್ಳಿ ಎನಲು, ಆದಕ್ಕೆ ವೃಕ್ಷಗಳು—ಹಾಗಾದರೆ ನಾವು ಒಂದು ವರವನ್ನು ಅಪೇಕ್ಷಿಸುವೆವು—ಜನರು ವೃಕ್ಷದ ಕೊಂಬೆ ಮೊದಲಾದವನ್ನು ಕತ್ತರಿಸುವರು. ಅದರಿಂದ ನಮಗೆ ಅಭಿಭವವಾಗುವುದು. ಅಂತಾಗದಂತೆ ವರವನ್ನುಕೊಡಬೇಕೆನ್ನಲು, ಇಂದ್ರನು-ಒಳ್ಳೇದು, ಹಾಗೆ ಕತ್ತರಿಸಿದಾಗ ಕತ್ತರಿಸಿದ ಭಾಗದ ಸುತ್ತಲೂ ಅಧಿಕವಾದ ಕೊನೆಗಳು ಚಿಗುರುವಂತಾಗಲಿ ಎಂದು ವರವನ್ನು ಕೊಟ್ಟನು. ಆದ್ದರಿಂದ, ವೃಕ್ಷಗಳು ಕೇಳಿಕೊಂಡ ವರದಂತೆ ಕೊನೆಗಳನ್ನು ಕತ್ತರಿಸಿದಾಗ ಆ ಭಾಗದಲ್ಲಿ ಹೆಚ್ಚು ಕೊನೆಗಳು ಚಿಗುರುವವು. ಬಳಿಕ ವೃಕ್ಷಗಳು ತಮ್ಮ ಮಾತಿನಂತೆ ಇಂದ್ರನ ಬ್ರಹ್ಮಹತ್ಯೆಯಲ್ಲಿ ಮೂರನೇ ಒಂದು ಭಾಗವನ್ನು ಸ್ವೀಕರಿಸಿದವು ಮರವನ್ನು ಕಡಿದಾಗ ಹೊರಡುವ ರಸವೇ ಈ ಬ್ರಹ್ಮಹತ್ಯೆಯ ಚಿಹ್ನೆಯು. ಆದ್ದರಿಂದ ಈ ಮರ ಕಡಿಯುವುದರಿಂದ ಹೊರಹೊರಡುವ ರಸವನ್ನು ಯಾರೂ ಕುಡಿಯಬಾರದು. ಏಕೆಂದರೆ ಅದು ಬ್ರಹ್ಮಹತ್ಯೆಯ ವರ್ಣವು. ಅಥವಾ ವೃಕ್ಷದ ಕತ್ತರಿಸುವಿಕೆಯಿಂದ ಹೊರಡುವ ರಸವು ಕೆಂಪಾಗಿ ಇದ್ದಲ್ಲಿ ಅದನ್ನು ಕುಡಿಯಬಾರದು ಹಾಗಿಲ್ಲದಿದ್ದರೆ ಇಷ್ಟಪಟ್ಟರೆ ಕುಡಿಯಬಹುದು.

> ಸ ಸ್ತ್ರೀಷಗ್‌ಂಸಾದಮುಪಾಸೀದದಸ್ಯೈ ಬ್ರಹ್ಮಹತ್ಯಾಯೈ ತೃತೀಯಂ ಪ್ರತಿಗೃಹ್ಣೀತೇತಿ ತಾ ಅಬ್ರುವನ್ವರಂ ವೃಣಾಮಹಾ ಋತ್ವಿಯಾತ್ ಪ್ರಜಾಂ ವಿಂದಾಮಹೈ ಕಾಮಮಾವಿಜನಿತೋಃ ಸಂಭವಾಮೇತಿ ತಸ್ಮಾದೃತ್ವಿಯಾತ್ ಸ್ತ್ರಿಯಃ ಪ್ರಜಾಂ ವಿಂದಂತೇ ಕಾಮಮಾ ವಿಜನಿತೋಃ ಸಂಭವಂತಿ ವಾರೇವೃತಗ್ಗ್ ಹ್ಯಾಸಾಂ ತೃತೀಯಂ ಬ್ರಹ್ಮಹತ್ಯಾಯೈ ಪ್ರತ್ಯಗೃಹ್ಣನ್ತ್ಸಾ ಮಲ-ವದ್ವಾಸಾ ಅಭವತ್ ॥

ಅನಂತರ ಇಂದ್ರನು ಸ್ತ್ರೀಯರ ಗುಂಪಿಗೆ ಹೋಗಿ ಅವರನ್ನು ಕುರಿತು—ಎಲೌ ಸ್ತ್ರೀಯರೇ, ನನ್ನ ಬ್ರಹ್ಮಹತ್ಯಾದೋಷದಲ್ಲಿ ಉಳಿದಿರುವ ಮೂರನೇ ಒಂದು ಭಾಗವನ್ನು ನೀವು ತೆಗೆದುಕೊಳ್ಳಿ ಎನಲು. ಅದಕ್ಕೆ ಸ್ತ್ರೀಯರು-ಹಾಗಾದರೆ ನಾವು ಒಂದು ವರವನ್ನಪೇಕ್ಷಿಸುವೆವು-ನಾವು ಮುಟ್ಟಾದನಂತರ (ಋತುಸ್ನಾನಾನಂತರ) ನಮಗೆ ಮಕ್ಕಳಾಗಬೇಕು. ಮತ್ತು ಪ್ರಸವವಾಗುವವರೆಗೂ (ಹೆರಿಗೆಯಾಗುವವರೆಗೂ) ನಾವು ಇಷ್ಟಪಟ್ಟಲ್ಲಿ ಸಂಭೋಗದಿಂದ ಕಾಮತೃಪ್ತಿಯನ್ನು ಹೊಂದುವಂತಾಗಬೇಕೆಂದು ಕೇಳಲು, ಇಂದ್ರನು ಹಾಗೆಯೇ ಆಗಲೆಂದನು. ಆದುದರಿಂದ ಸ್ತ್ರೀಯರು ಮುಟ್ಟಾದನಂತರ ಸಂತಾನವನ್ನು ಪಡೆಯುವರು ಮತ್ತು ಹೆರಿಗೆಯಾಗುವವರೆಗೂ ತಮ್ಮಿಷ್ಟಬಂದಾಗ ಸಂಭೋಗಿಸುವರು. ಏಕೆಂದರೆ ಇದನ್ನೇ ಅವರು ಕೇಳಿಕೊಂಡಿರುವ ವರವು. ಅನಂತರ ಆ ಸ್ತ್ರೀಯರು ಇಂದ್ರನ ಬ್ರಹ್ಮಹತ್ಯಾದೋಷದ ಮೂರನೇ ಒಂದು ಭಾಗವನ್ನು ವಹಿಸಿಕೊಂಡರು. ಸ್ತ್ರೀಯರು ಮುಟ್ಟಾದಾಗ ದ್ರವಿಸುವ ರಜಸ್ಸೇ ಈ ಬ್ರಹ್ಮಹತ್ಯದ ಚಿಹ್ನೆಯಾಗಿರುವುದು. ರಜಸ್ಸು ದ್ರವಿಸುವ ಕಾಲದಲ್ಲಿ (ಮುಟ್ಟಾದಾಗ) ಸ್ತ್ರೀಯರು ಅಪವಿತ್ರರು (ಅಶುದ್ಧರು).

> ತಸ್ಮಾನ್ಮಲವದ್ವಾಸಸಾ ನ ಸಂವದೇತ ನ ಸಹಾಸೀತ ನಾಸ್ಯಾ ಅನ್ನಮದ್ಯಾದ್ಬ್ರಹ್ಮಹತ್ಯಾಯೈ ಹ್ಯೇಷಾ ವರ್ಣಂ ಪ್ರತಿಮುಚ್ಯಾಸ್ತೇಽಥೋ ಖಲ್ವಾಹುರಭ್ಯಂಜನಂ ವಾವ ಸ್ತ್ರಿಯಾ ಅನ್ನಮಭ್ಯಂಜನಮೇವ ನ ಪ್ರತಿಗೃಹ್ಯಂ ಕಾಮಮನ್ಯದಿತಿ ॥

ಆದುದರಿಂದ ಮುಟ್ಟಾಗಿರುವ ಸ್ತ್ರೀಯೊಡನೆ ಮಾತನಾಡಬಾರದು, ಅವಳು ಕೊಟ್ಟ ಅಥವಾ ಮುಟ್ಟಿದ ಆಹಾರವನ್ನು ತಿನ್ನಬಾರದು. ಏಕೆಂದರೆ ಬ್ರಹ್ಮಹತ್ಯಾದೋಷದ ಚಿಹ್ನೆಯಾದ ಅಶುದ್ಧವಾದ ರಜೋದ್ರವವನ್ನು ಸ್ರವಿಸುತ್ತಿರುವಳು ಮುಟ್ಟಾಗಿರುವ ಕಾಲದಲ್ಲಿ ತೈಲಾಭ್ಯಂಜನಾದಿಗಳನ್ನು ಮಾಡಬಾರದು ಅಥವಾ ಆಕಾಲದಲ್ಲಿ ಅವಳಿಂದ (ಅವಳು ಮುಟ್ಟಿದ) ಅನ್ನಾದಿಗಳನ್ನು ಯಾರೂ ಸ್ವೀಕರಿಸಬಾರದು.

> ಯಾಂ ಮಲವದ್ವಾಸಸಗ್‌ಂ ಸಂಭವಂತಿ ಯಸ್ತತೋ ಜಾಯತೇ ಸೋಽಭಿಶಸ್ತೋ ಯಾಮರಣ್ಯೇ ತಸ್ಯೈ ಸ್ತೇನೋ ಯಾಂ ಪರಾಚೀಂ ತಸ್ಯೈ ಹ್ರೀತಮುಖ್ಯಪಗಲ್ಭೋ ಯಾ ಸ್ನಾತಿ ತಸ್ಯಾ ಅಪ್ಸು ಮಾರುಕೋ ಯಾಭ್ಯಂಕ್ತೇ ತಸ್ಯೈ ದುಶ್ಚರ್ಮಾ ಯಾ ಪ್ರಲಿಖತೇ ತಸ್ಯೈ ಖಲತಿರಪಮಾರೀ ಯಾಂಕ್ತೇ ತಸ್ಯೈ ಕಾಣೋ ಯಾ ದತೋ ಧಾವತೇ ತಸ್ಯೈ ಶ್ಯಾವದನ್ ಯಾ ನಖಾನಿ ನಿಕೃಂತತೇ ತಸ್ಯೈ ಕುನಖೀ ಯಾ ಕೃಣತ್ತಿ ತಸ್ಯೈ ಕ್ಲೀಬೋ ಯಾ ರಜ್ಜುಗ್‌ಂ ಸೃಜತಿ ತಸ್ಯಾ ಉದ್ಬಂಧುಕೋ ಯಾ ಪರ್ಣೇನ ಪಿಬತಿ ತಸ್ಯಾ ಉನ್ಮಾದುಕೋ ಯಾ ಖರ್ವೇಣ ಪಿಬತಿ ತಸ್ಯೈ ಖರ್ವಸ್ತಿಸ್ರೋ ರಾತ್ರೀರ್ವ್ರತಂ ಚರೇದಂಜಲಿನಾ ವಾ ಪಿಬೇದಖರ್ವೇಣ ವಾ ಪಾತ್ರೇಣ ಪ್ರಜಾಯೈ ಗೋಪೀಥಾಯ ॥

(ತೈ. ಸಂ. ೨-೫-೧-೧ ರಿಂದ ೭)

ರಜಸ್ವಲೆಯಾಗಿರುವ ಕಾಲದಲ್ಲಿ (ಮುಟ್ಟಾಗಿರುವಾಗ) ಸಂಭೋಗಮಾಡಿದರೆ ಅದರಿಂದ ಹುಟ್ಟುವ ಪುತ್ರನು ಶಾಪಗ್ರಸ್ತನಾಗುವನು ; ರಜಸ್ವಲೆಯಾದ ಸ್ತ್ರೀಯು ಅರಣ್ಯದಲ್ಲಿ ಸಂಭೋಗಿಸಿದರೆ ಅವಳಿಗೆ ಹುಟ್ಟುವ ಪುತ್ರನು ಕಳ್ಳನಾಗುವನು ; ಮುಖವನ್ನು ಮುಚ್ಚಿಕೊಂಡು ಅಥವಾ ಬೇರೆಕಡೆ ತಿರುಗಿಸಿಕೊಂಡು ಸಂಭೋಗಮಾಡಿದರೆ ಹುಟ್ಟುವ ಮಗನು ನಾಚಿಕೆಯಿಂದ ಯಾರೊಡನೆಯೂ ಸರಿಯಾಗಿ ಮಾತನಾಡಲಾರದ ಮುಖೇಡಿಯಾಗುವನು ; ಮುಟ್ಟಾದಕಾಲದಲ್ಲಿ ಸ್ನಾನಮಾಡುವ ಸ್ತ್ರೀಗೆ ಹುಟ್ಟುವ ಮಗನು ನೀರಿನಲ್ಲಿ ಮುಳುಗಿ ಸಾಯುವನು ; ಅಭ್ಯಂಜನ

ಮಾಡಿಕೊಳ್ಳುವ ಸ್ತ್ರೀಯ ಪುತ್ರನು ಚರ್ಮ ರೋಗದಿಂದ, (ಕುಷ್ಠ, ತೊನ್ನು) ಪೀಡಿತನಾಗುವನು ; ತಲೆಯನ್ನು ಬಾಚಿಕೊಳ್ಳುವ ಸ್ತ್ರೀಗೆ ಹುಟ್ಟುವ ಮಗನು ತಲೆಯಲ್ಲಿ ಕೂದಲಿಲ್ಲದ ಬೋಳನಾಗುವನು ಮತ್ತು ಶಕ್ತಿಹೀನನಾಗುವನು. ಕಣ್ಣಿಗೆ ಕಪ್ಪನ್ನು ಹಚ್ಚಿಕೊಳ್ಳುವ ಸ್ತ್ರೀಗೆ ಹುಟ್ಟುವ ಪುತ್ರನು ಕುರುಡನಾಗುವನು ; ಆಕಾಲದಲ್ಲಿ ಹಲ್ಲನ್ನು ಜ್ಜಿಕೋಳ್ಳುವ ಸ್ತ್ರೀಗೆ ಹುಟ್ಟುವ ಪುತ್ರನಿಗೆ ಕೊಳಕಾದ ಹಲ್ಲುಗಳಿರುವವು ; ಉಗುರನ್ನು ಕತ್ತರಿಸಿಕೋಳ್ಳುವ ಸ್ತ್ರೀಗೆ ಹುಟ್ಟುವ ಮಗನಿಗೆ ನೋಡುವುದಕ್ಕೆ ವಿಕಾರಾವಾದ ಕೆಟ್ಟ ಉಗುರುಗಳಿರುವವು ; ಆಕಾಲದಲ್ಲಿ (ಚಾಪೆ ಮೊದಲಾದವನ್ನು) ಹೆಣೆಯುವ) ಸ್ತ್ರೀಗೆ ಹುಟ್ಟುವ ಪುತ್ರನು ನಪುಂಸಕನಾಗುವನು ; ಹಗ್ಗವನ್ನು ಹೊಸೆಯುವ ಸ್ತ್ರೀಗೆ ಹುಟ್ಟುವ ಪುತ್ರನು ಆತ್ಮಹತ್ಯೆಯಿಂದ ಮೃತನಾಗುವನು ; (ಪದ್ಮಪತ್ರಾದಿ) ಎಲೆಗಳಿಂದ ನೀರುಕುಡಿಯುವ ಸ್ತ್ರೀಗೆ ಹುಟ್ಟುವ ಪುತ್ರನು ಕುಡುಕನಾಗುವನು ; ಮುರಿದುಹೋದ ಅಥವಾ ಒಡಕಾದ ಪಾತ್ರೆಯಿಂದ ನೀರುಕುಡಿಯುವ ಸ್ತ್ರೀಗೆ ಅಂಗಹೀನನಾದ ಅಥವಾ ಅಂಗವಿಕಾರವುಳ್ಳ ಪುತ್ರನಾಗುವನು. ಆದುದರಿಂದ ಸ್ತ್ರೀಯರು ಮುಟ್ಟಾಗಿರುವಾಗ ಮೂರು ರಾತ್ರಿಗಳು ಕಳೆಯುವವರೆಗೆ ಬಹಳ ಕಟ್ಟುನಿಟ್ಟಾಗಿ ವ್ರತವನ್ನು (ನಿಯಮವನ್ನು) ಪಾಲಿಸಬೇಕು. ಒಳ್ಳೆಯ ಸಂತತಿಪ್ರಾಪ್ತಿಗಾಗಿ ಸ್ತ್ರೀಯರು ಆಕಾಲದಲ್ಲಿ ನೀರುಕುಡಿಯುವಾಗ ಬೊಗಸೆಯಿಂದಾಗಲಿ ಅಥವಾ ಮುರಿಯದಿರುವ ಚೆನ್ನಾಗಿರುವ ಪಾತ್ರೆಯಿಂದಲೇ ನೀರುಕುಡಿಯಬೇಕು.

ಮೇಲೆ ಹೇಳಿದ ಅಂಶಗಳಲ್ಲಿ ಇಂದ್ರನು ವಿಶ್ವರೂಪನನ್ನು ಸಂಹರಿಸಿದ ವಿಷಯವೂ ಅವನ ಸಂಹಾರದಿಂದ ಇಂದ್ರನಿಗೆ ಪ್ರಾಪ್ತವಾದ ಬ್ರಹ್ಮಹತ್ಯಾದೋಷವೂ, ಆ ದೋಷಪರಿಹಾರಕ್ಕಾಗಿ ಇಂದ್ರನು ಆಚರಿಸಿದ ಕೃತ್ಯಗಳೂ ಅದರ ಪರಿಣಾಮವಾಗಿ ಸ್ತ್ರೀಯರು ರಜಸ್ವಲೆಯರಾಗಿರುವಾಗ ನಿಯಮವಾಗಿರಬೇಕೆಂಬ ವಿಷಯವೂ ಉಕ್ತವಾಗಿದೆ. ಪ್ರಕೃತಸಂದರ್ಭದಲ್ಲಿ ವಿಶ್ವರೂಪನ ವಧೆಯ ವಿವರ ಮಾತ್ರ ಗ್ರಾಹ್ಯವಾಗಿದ್ದರೂ ಅದಕ್ಕೆ ಸಂಬಂಧಿಸಿದ ಮತ್ತು ಅದೇ ಅನುವಾಕದಲ್ಲಿರುವ ಇತರವಿಷಯಗಳ ಪ್ರಸ್ತಾಪವನ್ನೂ ಇಲ್ಲಿ ಮಾಡಲಾಗಿದೆ. ಏಕೆಂದರೆ, ಪುರಾಣಾದಿಗಳಲ್ಲಿ ಇಂದ್ರನಿಗೆ ವೃತ್ರವಧೆಯಿಂದ ಬ್ರಹ್ಮಹತ್ಯಾದೋಷಪ್ರಾಪ್ತವಾಯಿತೆಂದೂ ಆದರ ಪರಿಹಾರಕ್ಕಾಗಿ ಇಂದ್ರನು ಮೇಲೆ ಹೇಳಿದಂತೆ ಪ್ರಯತ್ನಪಟ್ಟನೆಂದೂ ಹೇಳಿರುವುದರಿಂದ ವೇದ ಮತ್ತು ಪುರಾಣಾದಿಗಳ ವಿವರಗಳಿಗೆ ಇರುವ ವ್ಯತ್ಯಾಸವನ್ನು ತೋರಿಸುವುದಕ್ಕಾಗಿ ಈ ವಿವರಣೆಯು ಅವಶ್ಯಕವಾಯಿತು.

---

ಸಂಹಿತಾಪಾಠಃ

ಅಸ್ಯ ಸುವಾನಸ್ಯ ಮಂದಿನಸ್ತ್ರಿತಸ್ಯ ನ್ಯರ್ಬುದಂ ವಾವೃಧಾನೋ ಅಸ್ತಃ ।
ಅವರ್ತಯತ್ಸೂರ್ಯೋ ನ ಚಕ್ರಂ ಭಿನದ್ವಲಮಿಂದ್ರೋ ಅಂಗಿರಸ್ವಾನ್

ಪದಪಾಠಃ

ಅಸ್ಯ । ಸುವಾನಸ್ಯ । ಮಂದಿನಃ । ತ್ರಿತಸ್ಯ । ನಿ । ಅರ್ಬುದಂ । ವವೃಧಾನಃ । ಅಸ್ತರಿತ್ಯಸ್ತಃ ।
ಅವರ್ತಯತ್ । ಸೂರ್ಯಃ । ನ । ಚಕ್ರಂ । ಭಿನತ್ । ವಲಂ । ಇಂದ್ರಃ । ಅಂಗಿರಸ್ವಾನ್ ॥ ೨೦ ॥

ಸಾಯಣಭಾಷ್ಯಂ

ಮಂದಿನೋಽಸ್ಯ ಮದಕರಮಿಮಂ ಸುವಾನಸ್ಯ ಸುತವತಸ್ತ್ರಿತಸ್ಯ ತೀರ್ಣತಮಸ್ಕಸ್ಯ ಮಹರ್ಷೇ-ರರ್ಥಂ ವಾವೃಧಾನಃ ಸೋಮೇನ ವರ್ಧಮಾನ ಇಂದ್ರೋಽರ್ಬುದಂ । ಅಂಬೂನಿ ಪದಾತೀತ್ಯರ್ಬುದೋ ಮೇಘಃ । ಅನುಸ್ವಾರಸ್ಯ ರೇಫಶ್ಛಾಂದಸಃ । ಯದ್ವಾ ನಾಮೈತತ್ । ಅರ್ಬುದಾಖ್ಯಮಸುರಂ ನ್ಯಸ್ತಃ ॥ ಸ್ತೃ ಹಿಂಸಾಯಾಮಿತ್ಯಸ್ಯ ಲಙಿ ತಿಪಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಗುಣೇ ಕೃತೇ ಹಲ್ಙ್ಯಾ-ದಿನಾ ತಿಲೋಪಃ ॥ ನಿತರಾಮವಧೀತ್ । ಮಹಾಂತಂ ಚಿದರ್ಬುದಂ ನಿ ಕ್ರಮೀಃ ಪದಾ । ೧-೫೧-೬ ॥ ಇತ್ಯಾದಿಷ್ವರ್ಬುದವಧಃ ಸ್ಪಷ್ಟಮುಕ್ತಃ । ಕಿಂಚ ಅಂಗಿರಸ್ವಾನ್ ಅಂಗಿರೋಭಿಃ ಸಹಿತ ಇಂದ್ರೋಽ-ವರ್ತಯತ್ । ಅಸುರಹನನಾರ್ಥಂ ವಜ್ರಮಭ್ರಾಮಯತ್ । ಸೂರ್ಯೋ ನ । ಯಥಾ ಸೂರ್ಯಶ್ಚಕ್ರಂ ಭ್ರಾಮಯತಿ ತದ್ವತ್ । ಯದ್ವಾ ಯಸ್ಮಾದಸುರಾದ್ಭಿಯಾ ಸೂರ್ಯಃ ಸ್ವಕೀಯಂ ರಥಚಕ್ರಂ ನಾವರ್ತ-ಯತ್ । ನಿಷೇಧಾರ್ಥೀಯೋಽತ್ರ ನಕಾರಃ । ವರ್ತಯಿತುಂ ನಾಶಕತ್ । ತಂ ವಲಂ ಪಣೀನಾಂ ಪ್ರಭು-ಮಸುರಂ ಭಿನತ್ । ವಜ್ರೇಣಾಭಿನತ್ । ಯದ್ವಾ ದ್ವಿಚಕ್ರೋ ಹಿ ಪೂರ್ವಂ ಸೂರ್ಯಸ್ಯ ರಥಃ । ತಸ್ಯೈಕಂ ಚಕ್ರಮಿಂದ್ರೇಣಾಪಹೃತಂ । ಸೂರ್ಯ ಇತಿ ಸುಪಾಂ ಸುಲುಗಿತಿ ಷಷ್ಠ್ಯೇಕವಚನಸ್ಯ ಸುಃ । ಸೂರ್ಯಸ್ಯ ಸಂಬಂಧ್ಯಪಹೃತಂ ತದೇಕಂ ಚಕ್ರಮವರ್ತಯತ್ । ರಕ್ಷೋಹನನಾರ್ಥಮಭ್ರಾಮಯತ್ । ತೇನ ಚಕ್ರೇಣ ವಲಮಭಿನಚ್ಚ । ನಶ್ಚಾರ್ಥೇ ॥

ಪ್ರತಿಪದಾರ್ಥ

ಮಂದಿನಃ—ಮದಕಾರಕವಾದ । ಅಸ್ಯ—ಈ ಸೋಮರಸವನ್ನು । ಸುವಾನಸ್ಯ—ಹಿಂಡತಕ್ಕ । ತ್ರಿತಸ್ಯ—ತ್ರಿತನೆಂಬ ಋಷಿಗಾಗಿ । ವಾವೃಧಾನಃ—(ಸೋಮರಸದ ಪಾನದಿಂದ) ಬೆಳೆದವನಾಗಿ (ನೀನು) । ಅರ್ಬುದಂ—ಮೇಘವನ್ನು ಅಥವಾ ಅರ್ಬುದನೆಂಬ ಅಸುರನನ್ನು । ನ್ಯಸ್ತಃ—ಪೂರ್ಣವಾಗಿ ನಾಶಮಾಡಿದೆ । ಸೂರ್ಯೋ ನ ಚಕ್ರಂ—ಸೂರ್ಯನು ತನ್ನ ಚಕ್ರವನ್ನು ತಿರುಗಿಸುವಂತೆ। ಅಂಗಿರಸ್ವಾನ್—ಅಂಗಿರಸ್ಸೆಂಬ ಋಷಿಗಳೊಡನೆ ಕೂಡಿ । ಇಂದ್ರಃ—ಇಂದ್ರನು । ಅವರ್ತಯತ್—ವಜ್ರಾಯುಧವನ್ನು ತಿರುಗಿಸಿದನು । ವಲಂ—ಪಣಿಗಳಿಗೆ ಪ್ರಭುವಾದ ವಲನೆಂಬ ಅಸುರನನ್ನು । ಭಿನತ್—ಸೀಳಿಹಾಕಿದನು ।

ಭಾವಾರ್ಥ

ಮದಕಾರಕವಾದ ಸೋಮರಸವನ್ನು ಹಿಂಡಿತಕ್ಕ ತ್ರಿತನೆಂಬ ಋಷಿಗಾಗಿ ಸೋಮರಸದ ಪಾನದಿಂದ ಬೆಳೆದ ನೀನು ಅರ್ಬುದನೆಂಬ ಅಸುರನನ್ನು ಕೊಂದೆ. ಸೂರ್ಯನು ತನ್ನ ಚಕ್ರವನ್ನು ತಿರುಗಿಸುವಂತೆ ಅಂಗಿರಸ್ಸೆಂಬ ಋಷಿಗಳೊಂದಿಗೆ ಕೂಡಿ ಇಂದ್ರನು ತನ್ನ ವಜ್ರಾಯುಧವನ್ನು ತಿರುಗಿಸಿದನು ಮತ್ತು ಪಣಿಗಳಿಗೆ ಪ್ರಭುವಾದ ವಲನೆಂಬ ಅಸುರನನ್ನು ಸೀಳಿಹಾಕಿದನು.

## English Translation

Invigorated (by the libation) of the exulting Trita, offering you the Soma, you have annihilated Arbuda: Indra aided by the Angirasas, has whirled round his bolt, as the sun turns round his wheel, and slain Vala.

ವಿಶೇಷವಿಷಯಗಳು

ಅರ್ಬುದಂ—ಅರ್ಬುದಂ । ಅಂಬೂನಿ ದದಾತೀತ್ಯರ್ಬುದೋ ಮೇಘಃ । ಯದ್ವಾ ನಾಮ್ನೈತತ್ । ಅರ್ಬುದಾಖ್ಯಮಸುರಂ । ನೀರನ್ನು ಕೊಡುವುದರಿಂದ (ವೃಷ್ಟಿರೂಪವಾದ ನೀರನ್ನು ಸುರಿಸುವುದರಿಂದ) ಅರ್ಬುದಕ್ಕೆ ಮೇಘವೆಂದು ಹೆಸರು. ಅಥವಾ ಅರ್ಬುದನೆಂಬ ಒಬ್ಬ ರಾಕ್ಷಸನು ಎಂದು ಎರಡು ವಿಧವಾದ ಅರ್ಥವನ್ನು ಭಾಷ್ಯ ಕಾರರು ಹೇಳಿರುವರು. ಯಾಸ್ಕರು ಅರ್ಬುದ ಶಬ್ದಕ್ಕೆ—

ಅರ್ಬುದೋ ಮೇಘೋ ಭವತಿ । ಅರಣಮಂಬು ತದ್ದೋऽಮ್ಬುದಃ । ಅಂಬುಮದ್ಭಾತೀತಿ ವಾ । ಅಂಬುಮದ್ಭವತೀತಿ ವಾ । ಸ ಯಥಾ ಮಹಾನ್ ಬಹುರ್ಭವತಿ ವರ್ಷಂಸ್ತದಿವಾರ್ಬುದಂ ॥

(ನಿ. ೩–೧೦)

ಎಂದು ನಿರ್ವಚನವನ್ನು ಹೇಳಿರುವರು. ಅರ್ಬುದವೆಂದರೆ ಮೇಘವು ಅರಣಂ-ಅರಣಶೀಲಂ ಗಮನಶೀಲಂ ಅಂಬು ಹರಿಯುವ ಸ್ವಭಾವವುಳ್ಳದ್ದಾದ್ದರಿಂದ ಅರಣಂ ಅಥವಾ ಅಂಬುವೆಂದರೆ ನೀರು. ತದ್ದಃ-ಅದನ್ನು (ನೀರನ್ನು) ಕೊಡುವುದರಿಂದ ಅಂಬುದಃ ಅಥವಾ ಅರ್ಬುದಃ ಎಂದರೆ ಮೇಘವು ಎಂದರ್ಥವು. ಮೇಘವು ಮಳೆಯನ್ನು ಸುರಿಸುವಾಗ ಬಹಳವಾಗಿ ನೀರನ್ನು ಸುರಿಸುವುದು ಪ್ರಸಿದ್ಧವು. ಆ ಉದಕವು ಹೇಗೆ ಬಹಳವಾಗಿರುವುದೋ ಅದರಂತೆ ಅರ್ಬುದಃ ಎಂಬ ಮೇಘವಾಚಕಪದವೂ ಬಹು (ಹೆಚ್ಚಾದ) ಸಂಖ್ಯಾವಾಚಕವಾಗಿಯೂ ಇರುವುದು ಎಂದೂ ಅರ್ಬುದ ಶಬ್ದದ ವಿವರಣೆ ಇರುವುದು- ಸಂಖ್ಯಾವಾಚಕಾರ್ಥದಲ್ಲಿ ಅರ್ಬುದವೆಂದರೆ ನೂರುಕೋಟಿ ಎಂದರ್ಥವು. ಪ್ರಕೃತ ಸಂದರ್ಭದಲ್ಲಿ ಈ ಅರ್ಥವು ಅವಶ್ಯಕವಾಗಿಲ್ಲ.

ಅರ್ಬುದ ಶಬ್ದಕ್ಕೆ ಈ ಹೆಸರಿನ ಅಸುರನು ಎಂಬರ್ಥದಲ್ಲಿ—

ಮಹಾಂತಂ ಚಿದರ್ಬುದಂ ನಿ ಕ್ರಮೀಃ ಪದಾ ಸನಾದೇವ ದಸ್ಯುಹತ್ಯಾಯ ಜಜ್ಞಿಷೇ ।

(ಋ. ಸಂ. ೧-೫೧-೬)

ಯೋ ಅರ್ಬುದಮವ ನೀಚಾ ಬಬಾಧೇ ತಮಿಂದ್ರಂ ಸೋಮಸ್ಯ ಭೃಥೇ ಹಿನೋತ ।

(ಋ. ಸಂ. ೨–೧೪–೪)

ಅಹನ್ ವೃತ್ರಮೃಚೀಷಮ ಔರ್ಣವಾಭಮಹೀಶುವಂ । ಹಿಮೇನಾವಿಧ್ಯದರ್ಬುದಂ ।

(ಋ. ಸಂ. ೮-೩೨-೨೬)

ನಿರರ್ಬುದಸ್ಯ ಮೃಗಯಸ್ಯ ಮಾಯಿನೋ ನಿಃ ಪರ್ವತಸ್ಯ ಗಾ ಆಜಃ ।

(ಋ. ಸಂ. ೮-೩-೧೯)

ನ್ಯರ್ಬುದಸ್ಯ ವಿಷ್ಟಪಂ ವರ್ಷ್ಮಾಣಂ ಬೃಹತಸ್ತಿರ । ಕೃಷೇ ತದಿಂದ್ರ ಪೌಂಸ್ಯಂ ॥

(ಋ. ಸಂ. ೮-೩೨-೩)

ಇಂದ್ರೋ ಮಹ್ನಾ ಮಹತೋ ಅರ್ಣವಸ್ಯ ವಿ ಮೂರ್ಧಾನಮಭಿನದರ್ಬುದಸ್ಯ ।

(ಋ. ಸಂ. ೧೦–೬೭-೧೨)

ಈ ಋಕ್ಕುಗಳಲ್ಲಿ ಅರ್ಬುದನೆಂಬ ಅಸುರನನ್ನು ಇಂದ್ರನು ಸಂಹರಿಸಿದನು ಎಂಬ ವರ್ಣನೆಗಳಿವೆ. ಆದರೆ ಋಗ್ವೇದದಲ್ಲಿ ಮೇಲೆ ಸೂಚಿಸಿದ ಋಕ್ಕುಗಳಲ್ಲಿ ಮಾತ್ರ ಅರ್ಬುದನ ಹೆಸರು ಉಕ್ತವಾಗಿರುವುದರಿಂದ ಇವನ ವಿಷಯವಾಗಿ ಹೆಚ್ಚು ಸಂಗತಿ ತಿಳಿಯಲು ಆಧಾರಗಳಿಲ್ಲ.

ಅರ್ಬುದ ಶಬ್ದಕ್ಕೆ ಅಸುರನೆಂಬರ್ಥವಲ್ಲದೆ ಒಬ್ಬ ಋಷಿಯೆಂದೂ ಅರ್ಥವಿರುವುದು. ಐತರೇಯ ಬ್ರಾಹ್ಮಣದಲ್ಲಿ (ಐ. ಬ್ರಾ. ೨೬-೧) – **ಅರ್ಬುದೋನಾಮಕಃ ಕಾದ್ರವೇಯಃ ಕಶ್ಚಿದೃಷಿಃ**—ಎಂದರೆ ಕದ್ರು ಎಂಬ ಸ್ತ್ರೀಯಲ್ಲಿ ಹುಟ್ಟಿದ ಸರ್ಪಜಾತಿಗೆ ಸೇರಿದ ಒಬ್ಬ ಋಷಿಯು. ಈ ಋಷಿಯು ಹೋತೃವರ್ಗದವರಲ್ಲಿ ಒಬ್ಬನಾದ ಗ್ರಾವಸ್ತುತ್ (ಗ್ರಾವ ಎಂದರೆ ಸೋಮಲತೆಯನ್ನು ಜಜ್ಜುವ ಕಲ್ಲು, ಅದನ್ನು ಮಂತ್ರಪೂರ್ವಕವಾಗಿ ಯಜ್ಞದಲ್ಲಿ ಸೋಮಾಭಿಷವಣ ಕಾಲದಲ್ಲಿ ಸ್ತುತಿಸುವ ಋತ್ವಿಜನಿಗೆ **ಗ್ರಾವಸ್ತುತ್** ಎಂದು ಹೆಸರು) ಎಂಬ ಋತ್ವಿಜನ ಕಾರ್ಯವನ್ನು ಮಾಡಿದನೆಂದು ಒಂದು ಉಪಾಖ್ಯಾನವು ಉಕ್ತವಾಗಿದೆ. ಆ ವಿಷಯವು ಇಲ್ಲಿ ಅಪ್ರಕೃತವಾದ್ದರಿಂದ ಅದನ್ನು ಆಯಾ ಸಂದರ್ಭದಲ್ಲಿ ವಿವರಿಸಲಾಗುವುದು.

**ಅವರ್ತಯತ್ ಸೂರ್ಯಃ ನ ಚಕ್ರಂ**—ಇಲ್ಲಿ **ಅಸುರಹನನಾರ್ಥಂ ವಜ್ರಮುಭ್ರಾಮಯತ್ । ಸೂರ್ಯೋ ನ । ಯಥಾ ಸೂರ್ಯಶ್ಚಕ್ರಂ ಭ್ರಾಮಯತಿ ತದ್ವತ್ ।** ಎಂದರೆ–ಇಂದ್ರನು ಅಸುರವಧಾರ್ಥವಾಗಿ ವಜ್ರಾಯುಧವನ್ನು ಸೂರ್ಯನು ಚಕ್ರವನ್ನು ತಿರುಗಿಸುವಂತೆ ತಿರುಗಿಸಿದನು ಅಥವಾ ತಿರುಗಿಸಿ ಹೊಡೆದನು ಎಂಬ ಅಭಿಪ್ರಾಯವು ಉಕ್ತವಾಗಿದೆ. ಇಲ್ಲಿ ನ ಎಂಬ ಶಬ್ದವು ಉಪಮಾರ್ಥದಲ್ಲಿ ಪ್ರಯುಕ್ತವಾಗಿದೆ, ಅಥವಾ **ಯದ್ವಾ ಯಸ್ಮಾದಸುರಾದ್ಭಿಯಾ ಸೂರ್ಯಃ ಸ್ವಕೀಯಂ ರಥಚಕ್ರಂ ನಾವರ್ತಯತ್ । ವರ್ತಯಿತುಂ ನಾಶಕತ್ । ನಿಷೇಧಾರ್ಥೀಯೋಽತ್ರ ನಕಾರಃ ।** ಎಂದರೆ—ಸೂರ್ಯನು ಈ ಅಸುರನ ಭಯದಿಂದ ತನ್ನ ರಥಚಕ್ರವನ್ನು ತಿರುಗಿಸಲಿಲ್ಲ (ತಿರುಗಿಸಲಸಮರ್ಥನಾದನು ಎಂದು ಇನ್ನೊಂದು ವಿಧವಾದ ಅರ್ಥವು. ಇಲ್ಲಿ ನ ಎಂಬ ಶಬ್ದವು ನಿಷೇಧಾರ್ಥದಲ್ಲಿ ಪ್ರಯುಕ್ತವಾಗಿದೆ. **ಯದ್ವಾ ದ್ವಿಚಕ್ರೋ ಹಿ ಪೂರ್ವಂ ಸೂರ್ಯಸ್ಯ ರಥಃ । ತಸ್ಯೈಕಂ ಚಕ್ರಮಿಂದ್ರೇಣಾಪಹೃತಂ । ಸೂರ್ಯಸ್ಯ ಸಂಬಂಧ್ಯಪಹೃತಂ ತದೇಕಂ ಚಕ್ರಮವರ್ತಯತ್ । ರಕ್ಷೋಹನನಾರ್ಥಮುಭ್ರಾಮಯತ್ । ತೇನ ಚಕ್ರೇಣ ವಲಮಭಿನಚ್ಚ । ನಶ್ಚಾರ್ಥೇ ।** ಎಂದರೆ ಸೂರ್ಯನ ರಥಕ್ಕೆ ಪೂರ್ವದಲ್ಲಿ ಎರಡು ಚಕ್ರಗಳಿದ್ದವು. ಅವುಗಳಲ್ಲಿ ಒಂದನ್ನು ಇಂದ್ರನು ಕಾರಣಾಂತರದಿಂದ ಅಪಹರಿಸಿದನು ಆ ಅಪಹೃತಚಕ್ರದಿಂದ ಈಗ ವಲನೆಂಬ ರಾಕ್ಷಸನನ್ನು ಸಂಹಾರಮಾಡುವುದಕ್ಕಾಗಿ ಜೋರಾಗಿ ತಿರುಗಿಸಿ ಹೊಡೆದನು ಎಂದು ಇನ್ನೊಂದು ವಿಧವಾದ ಅರ್ಥವು. ಇಲ್ಲಿ ನ ಎಂಬ ಶಬ್ದವು ಚ–ಮತ್ತು ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಈರೀತಿ ಸಾಯಣರು ಈ ವಾಕ್ಯಕ್ಕೆ ಮೂರು ವಿಧವಾದ ಅರ್ಥಗಳನ್ನು ಹೇಳಿರುವರು—

ಸ್ವಲ್ಪ ಅಸ್ಪಷ್ಟವಾದ ಕಥೆಯೊಂದಿದೆ. ಏತಸಾ ಎಂಬ ಅಶ್ವಕ್ಕೂ ಸೂರ್ಯನ ಹರಿತಗಳೆಂಬ ಅಶ್ವಗಳಿಗೂ ಪಂದ್ಯ ನಡೆದು ಸೂರ್ಯನೇ ಮುಂದುವರೆಯುತ್ತಾನೆ. ಆಗ ಇಂದ್ರನು ಸೂರ್ಯನನ್ನು ಅಡ್ಡಿಪಡಿಸುತ್ತಾನೆ. ಈ ಸಮಯದಲ್ಲಿ ಸೂರ್ಯನ ರಥದ ಒಂದು ಚಕ್ರವು ಕಳೆದುಹೋಗುತ್ತದೆ. ಆ ಚಕ್ರದಿಂದಲೇ ಇಂದ್ರನು ವಲನನ್ನು ಹೊಡೆದು ಸಂಹರಿಸಿದನು ಎಂದು ಇಲ್ಲಿ ಉಕ್ತವಾಗಿರಬಹುದು.

**ವಲಂ**—ವಲನ ವಿಷಯದಲ್ಲಿ ಭಾಷ್ಯಕಾರರು ಹಿಂದೆ ಒಂದು ಇತಿಹಾಸವನ್ನು ಹೇಳಿರುವರು. ವಲನೆಂಬ ಅಸುರನು ದೇವತೆಗಳ ಗೋವುಗಳನ್ನು ಅಪಹರಿಸಿ ಒಂದು ಗುಹೆಯಲ್ಲಿ ಬಚ್ಚಿಟ್ಟಿದ್ದನು ಆಗ ಇಂದ್ರನು ತನ್ನ ಸೈನ್ಯ

ಸಹಾಯದಿಂದ ಆ ಗುಹೆಯನ್ನು ಮುತ್ತಿ ಅಲ್ಲಿದ್ದ ಗೋವುಗಳನ್ನು ಬಿಡಿಸಿದನು. ಈ ವಿಷಯವು ಯಜುರ್ವೇದ ತೈತ್ತಿರೀಯ ಸಂಹಿತೆಯಲ್ಲಿ ೨-೧-೧-೧ ರಲ್ಲಿಯೂ ಋಗ್ವೇದದ ಇತರ ಮಂತ್ರಗಳಲ್ಲಿಯೂ ಅಲ್ಲಲ್ಲಿ ವಿವರಿಸಲ್ಪಟ್ಟಿದೆ. ಋಗ್ವೇದದಲ್ಲಿ ಈ ವಲನ ವಿಷಯವು ಋ. ಸಂ. ೧-೬೨-೪; ೨-೧೧-೨೦; ೨-೧೪-೩; ೨-೧೫-೮; ೨-೧೨-೩; ೨-೨೪-೩; ೩-೩೦-೧೦; ೩-೩೪-೧೦; ೪೦-೫೦-೫; ೬-೧೮-೫; ೬-೩೯-೨; ೮-೧೪-೭; ೮-೨೪-೩೦; ೧೦-೬೨-೨; ೧೦-೬೭-೬; ೧೦-೬೮-೬, ೯, ೧೦; ೧೦-೧೩೮-೧ ಎಂಬ ಋಕ್ಕುಗಳಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. ಈ ವಲನ ಸೈನಿಕರಿಗೆ ಪಣಿಗಳೆಂದು ಹೇಳುವ ರೂಢಿಯಿದೆ. ಇವರು ಗೋವುಗಳನ್ನು ಕದ್ದು ಗುಹೆಗಳಲ್ಲಿ ಬಚ್ಚಿಡುತ್ತಿದ್ದರೆಂದು ಅನೇಕ ಕಡೆಗಳಲ್ಲಿ ಹೇಳಿದ ಈ ವಿಷಯವಾಗಿ ನಾವು ಋ. ಸಂ. ಭಾಗ ೨, ಪುಟ 228; 3-630; 5-698; 6-15; 10-175; 13-536 ಎಂಬ ಸ್ಥಳಗಳಲ್ಲಿ ವಿಸ್ತಾರವಾಗಿ ಬರೆದಿದೇವೆ.

ಈ ಪಣಿಗಳು ಮಹಾ ಲೋಭಿಗಳು. ಯಾಗಾದಿಗಳಿಗೋಸ್ಕರ ಅಪೇಕ್ಷಿಸಿದಾಗ್ಯೂ ಕೊಡದೆ ಗೋವುಗಳನ್ನು ಬಚ್ಚಿಡುತ್ತಾರೆ. ಇಂದ್ರನ ದೂತಳಾದ ಸರಮೆ ಎಂಬ ದೇವಶುನಿಯು ಆ ಗೋವುಗಳಿರುವ ಸ್ಥಳವನ್ನು ಕಂಡುಹಿಡಿದು ಅವುಗಳನ್ನು ಹಿಂದಕ್ಕೆ ಕೊಡಬೇಕೆಂದು ಹೇಳುತ್ತಾಳೆ. ಪಣಿಗಳು ಅವಳನ್ನು ಹಾಸ್ಯಮಾಡುತ್ತಾರೆ. ಇತ್ಯಾದಿ ವಿಷಯಗಳು ಋ. ಸಂ. ೧೦-೧೦೮ ನೆಯ ಸೂಕ್ತದಲ್ಲಿ ವಿಸ್ತಾರವಾಗಿ ಹೇಳಿದೆ. ಗೋವುಗಳನ್ನು ಪಡೆಯಬೇಕೆಂಬಾಶೆಯಿಂದ ಇಂದ್ರನು ವಲನ ಕೋಟೆಯನ್ನು ಭೇದಿಸಿ ಪಣಿಗಳನ್ನು ಸೋಲಿಸಿ ಅವುಗಳನ್ನು ಬಿಡುಗಡೆಮಾಡಿದನೆಂದು ಇನ್ನೊಂದು ಸ್ಥಳದಲ್ಲಿ ಹೇಳಿದೆ. (ಋ. ಸಂ. ೬-೩೯-೨) ಮತ್ತೊಂದು ಸ್ಥಳದಲ್ಲಿ (ಋ. ಸಂ. ೨-೧೨-೩; ೩-೩೦-೧೦) ವಲನು ಗೋವುಗಳನ್ನು ಹಿಡಿದಿಟ್ಟಿದ್ದನು; ಅವುಗಳನ್ನು ಇಂದ್ರನು ಹೊರಕ್ಕಟ್ಟಿದನು ಎಂದಿದೆ. ಇಲ್ಲಿ ಪಣಿಗಳ ಹೆಸರೇ ಇಲ್ಲ. ಅನೇಕ ಸ್ಥಳಗಳಲ್ಲಿ—ಪ್ರಕೃತ ಋಕ್ಕಿನಲ್ಲಿ ಸಹ—ಈ ವಲನ ಪರಾಜಯ ಮತ್ತು ಗೋವಿಮೋಚನಕಾರ್ಯಗಳಲ್ಲಿ ಅಂಗಿರಸರು ಇಂದ್ರನಿಗೆ ಸಹಾಯಕರಾಗಿದ್ದರೆಂದು ವರ್ಣನೆಗಳಿವೆ

ಅಂಗಿರಸ್ವಾನ್—ಅಂಗಿರಾ ಋಷಿಗಳು ಯಾರು, ಇವರ ಉತ್ಪತ್ತಿಕ್ರಮವೇನು ಮುಂತಾದ ವಿಷಯವನ್ನು ನಾವು ಋ. ಸಂ ಭಾಗ ೩, ಪುಟ 520-522ರಲ್ಲಿ ವಿಸ್ತಾರವಾಗಿ ವಿವರಿಸಿದೇವೆ. ಮತ್ತು ಇವರ ವಿಷಯಕವಾದ ವಿವರಗಳನ್ನು ಋ. ಸಂ. ಭಾಗ 6-365; 8-187; 9-215; 10-239; 10-522 ಈ ಸ್ಥಳಗಳಲ್ಲಿ ಬರೆದಿದೇವೆ.

ಈ ಅಂಗಿರಸರು ಅಗ್ನಿಯ ಪುತ್ರರು (೧೦-೬೨-೪) ಅವರಲ್ಲಿಯೇ ಒಬ್ಬ ಅಂಗಿರಸನು ಮೂಲಪುರುಷನೆಂದೂ ಭಾವನೆ. ಅನೇಕ ಮಂತ್ರಗಳಲ್ಲಿ (ಋ. ಸಂ. ೧೦-೧೪-೫, ೬ ಇತ್ಯಾದಿ) ಅಂಗಿರಸರನ್ನು ಪಿತೃಗಳೆಂದು ಕರೆದಿದಾರೆ. ವಿಶೇಷವಾಗಿ ಯಮ ಮತ್ತು ಅಂಗಿರಸರೇ ಪಿತೃಗಳೆಂದು ಪರಿಗಣಿತರಾಗಿದಾರೆ. ಆದಿತ್ಯರು, ವಸುಗಳು, ಮರುತ್ತುಗಳು ಇವರೊಡನೆ ಅಂಗಿರಸರಿಗೆ ಸೋಮವು ಅರ್ಪಿತವಾಗಿದೆ. (೭-೪೪-೪ ; ೮-೩೫-೧೪) ಮತ್ತು ದೇವತೆಗಳಂತೆ ಸ್ತುತರಾಗಿದಾರೆ. (೩-೫೩-೭; ೧೦ ೬-೨). ಅವರು ಯಾಗದಲ್ಲಿ ಬ್ರಹ್ಮನೆಂಬ ಋತ್ವಿಜನ ಸ್ಥಾನದಲ್ಲಿರುವವರು (೭-೪೨-೧); ವನಗಳಲ್ಲಿ ಅಡಗಿದ್ದ ಅಗ್ನಿಯನ್ನು ಕಂಡುಹಿಡಿದರು (೫-೧೧-೬) ಮತ್ತು ಯಾಗಸಂಬಂಧವಾದ ಮೊದಲನೆಯ ನಿಯಮವನ್ನು ಚಿಂತಿಸಿ ನಿಶ್ಚಯಿಸಿದರು (೧೦-೬೭-೨) ಯಾಗದಿಂದಲೇ ಅವರು ಅಮರತ್ವವನ್ನೂ ಇಂದ್ರನ ಮೈತ್ರಿಯನ್ನೂ ಗಳಿಸಿದರು (೧೦-೬೨ ೧) ಇತ್ಯಾದಿ ವರ್ಣನೆಗಳಿವೆ. ಇವರು ಯಜ್ಞಮಾಡಿದ ವಿಷಯವು ತೈ. ಬ್ರಾ. ೨-೧-೧ ರಲ್ಲಿ ಹೇಳಿದೆ.

ಇಂದ್ರನಿಗೂ ಇವರಿಗೂ ಬಹಳ ಸಮೀಪ ಸಂಬಂಧವಿದೆ. ಇವರಿಗೋಸ್ಕರಲೇ ಇಂದ್ರನು ಗೋವುಗಳನ್ನು ತೋರಿಸಿದುದು (೮-೫೨-೩) ಇವರಿಗೋಸ್ಕರಲೇ ಇಂದ್ರನು ಗೋಶಾಲೆಗಳ ದ್ವಾರಗಳನ್ನು ತೆರೆದನು (೧-೫೧-೩) ; ಇವರಿಂದ ಸಹಚರಿತನಾಗಿಯೇ ಇಂದ್ರನು ವಲನನ್ನು ಇರಿದು ಕೊಂಪನು (೨-೧೧-೨೦) ಗೋವುಗಳನ್ನು ಹೊರಕ್ಕೆ ಓಡಿಸಿದನು (೬-೧೭-೬) ; ಇವರಿಗೆ ಮುಖಂಡನೆಂಬ ಅಭಿಪ್ರಾಯದಿಂದಲೇ ಇಂದ್ರನನ್ನು ಎರಡು ಸಂದರ್ಭಗಳಲ್ಲಿ (೧-೧೦೦-೪ ; ೧-೧೩೦-೩) ಅಂಗಿರಸ್ತಮ ಎಂದು ಕರೆಯಲಾಗಿದೆ ; ಇದರಂತೆಯೇ ಅಗ್ನಿಯನ್ನು ಅಂಗಿರಸರ ಮುಖಂಡನೆಂದು ಕರೆದಿದೆ.(೧-೩೧-೧, ೨) ; ಇಂದ್ರನಿಗೆ ಉತ್ಸಾಹದಾಯಕವಾದ ಸೋಮವೂ ಅಂಗಿರಸರಿಗೋಸ್ಕರ ಗೋಶಾಲೆಗಳ ದ್ವಾರಗಳನ್ನು ತೆರೆಯಿತೆಂದು ಹೇಳಿದೆ (೯-೮೬-೨೩) ; ಗೋವಿಮೋಚನಪ್ರಸಂಗದಲ್ಲಿ ಅಂಗಿರಸರ ಗಾನವು ವಿಲಕ್ಷಣವಾದುದು ಅವರಿಂದ ಸ್ತುತನಾಗಿ ಇಂದ್ರನು ವಲನನ್ನು ಇರಿದನು (೨-೧೫-೮) ಗೋಶಾಲಾ ದ್ವಾರಗಳನ್ನು ಭೇದಿಸಿದನು (೪-೧೬-೧೮) ; ವಲನನ್ನು ಕೊಂದು ಅವನ ದುರ್ಗದ್ವಾರಗಳನ್ನು ತೆರೆದನು. (೬-೧೮-೫) ; ನಾನಾವಿಧವಾಗಿ ಗಾನಮಾಡುವ ಮರುತ್ತುಗಳ ಗಾನವನ್ನು ಅಂಗಿರಸರ ಗಾನಕ್ಕೆ ಹೋಲಿಸಿದೆ. (೧೦-೭೮-೫) ಮತ್ತು ಅಂಗಿರಸರ ಸಾಮಗಾನಗಳಿಂದಲೇ ದೇವತೆಗಳನ್ನು ಯಾಗಕ್ಕೆ ಕರೆಯಲಾಗುವುದೆಂದು ಹೇಳಿದೆ. (೧-೧೦೭-೨) ಸಾಧಾರಣ ಋತ್ವಿಜರಿಂದ ಉಚ್ಚರಿಸಲ್ಪಡುವ ಸ್ತುತಿವಾಕ್ಯಗಳನ್ನು ಅಂಗಿರಸರ ಸ್ತುತಿಗೆ ಹೋಲಿಸುತ್ತಾರೆ (೧-೬೨-೧, ೨ ಇತ್ಯಾದಿ) : ಇಂದ್ರನನ್ನು ಜತೆಯಲ್ಲಿಟ್ಟುಕೊಂಡು ಅಂಗಿರಸರು ಗೋ ಮತ್ತು ಅಶ್ವಶಾಲೆಗಳನ್ನು ಬಂದುಮಾಡಿದರು (೧೦-೬೨-೭) ; ತಾವು ಆಚರಿಸಿದ ಕರ್ಮಬಲದಿಂದ ಅವರು ಗೋವುಗಳನ್ನು ಹೊರಕ್ಕೆ ಅಟ್ಟಿ ವಲನನ್ನು ಇರಿದು ಕೊಂದರು (೧೦-೬೨-೨) ; ತಾವು ಆಚರಿಸಿದ ಯಾಗಕರ್ಮದ ಬಲದಿಂದ ಬಂಡೆಯನ್ನು ಒಡೆದು ಗೋವುಗಳೊಡನೆ ತಾವೂ ಸಂತೋಷದಿಂದ ಹರ್ಷಧ್ವನಿಗೈದರು (೪-೩-೧೧) ; ತಮ್ಮ ಗಾನಗಳಿಂದ ಅವರು ಬಂಡೆಯನ್ನು ಒಡೆದು ಬೆಳಕನ್ನು ಕಂಡರು (೧-೭೨-೨) ; ಇಂದ್ರನಿಗೋಸ್ಕರ ಪಣಿಯೆಂಬ ಅಸುರನಿಂದ ಅಪಹೃತವಾಗಿದ್ದ ಗೋವುಗಳನ್ನು ಸರಮೆಯು ಹುಡುಕಿದ ಪ್ರಸಂಗದಲ್ಲಿಯೂ ಅಂಗಿರಸರ ಪಾತ್ರವಿದೆ (೧೦-೧೦೮-೮, ೧೦) ಅಂಗಿರಸರೇ ಸ್ವತಃ (ತಾವೇ) ಪಣಿಗಳು ಬಚ್ಚಿಟ್ಟದ್ದ ಗೋ ಅಶ್ವಗಳನ್ನು ಕಂಡುಹಿಡಿದರೆಂದೂ ಹೇಳಿದೆ. (೧-೮೩-೪).

ಪಣಿಸಂಬಂಧವಾದ ಗೋವುಗಳ ವಿಮೋಚನದಲ್ಲಿ ಬೃಹಸ್ಪತಿಯೂ ಸೇರಿದಾನೆ (೧೦-೧೦೮-೬, ೧೦) ; ಪರ್ವತವನ್ನು ಭೇದಿಸಿ ಗೋವುಗಳನ್ನು ತರುವಾಗ ಅವನಿಗೂ ಅಂಗಿರಸನೆಂಬ ವಿಶೇಷಣವಿದೆ ಅನೇಕ ಸಂದರ್ಭಗಳಲ್ಲಿ ಅಗ್ನಿಯನ್ನು ಅಂಗಿರಶಬ್ದದಿಂದ ಕರೆಯಲಾಗಿದೆ. ಇಂದ್ರನ ಜೊತೆಯಲ್ಲಿದ್ದು ಗೋವುಗಳನ್ನು ಓಡಿಸಿ, ನೀರನ್ನು ಹರಿಯುವಂತೆ ಮಾಡಿದಾಗ ಬೃಹಸ್ಪತಿಯನ್ನು ಅಂಗಿರಸನೆಂತಲೇ ಕರೆಯಲಾಗಿದೆ (೨-೨೩-೧೮) ಇದೊಂದು ಸಂದರ್ಭವನ್ನು ಬಿಟ್ಟರೆ ಉಳಿದ ಅಂಗಿರಸಶಬ್ದದ ಏಕವಚನ ಪ್ರಯೋಗವೆಲ್ಲಾ ಅಗ್ನಿಪರವೇ ಆಗಿರುವುದು. ಅಗ್ನಿಯನ್ನು ಅಂಗಿರಾಋಷಿಗಳಲ್ಲಿ ಮೊದಲನೆಯವನು (೧-೩೧-೧) ಪುರಾತನನಾದ ಅಂಗಿರಸನು (೧೦-೯೨-೧೫ : ೧-೧೨೭-೨) ಹೆಚ್ಚು ಸ್ಫೂರ್ತಿಯುಳ್ಳವನು (೬-೧೧-೩) ಮತ್ತು ಅಂಗಿರಸರಲ್ಲಿ ಮುಖಂಡನು (೧-೭೫-೨) ಎಂದು ಮುಂತಾಗಿ ಕರೆಯಲಾಗಿಡೆ.

ಪಿತೃಗಣದಲ್ಲಿ ಅಂಗಿರಸರೂ ಸೇರಿದಾರೆ (೧-೧೬೯-೧) ; ಅನುಕ್ರಮಣಿಕೆಯಲ್ಲಿ ಅಂಗಿರಸರು ಪುರೋಹಿತರ ವಂಶದವರು ಎಂದಿದೆ. ಒಂಭತ್ತನೆಯ ಮಂಡಲದ ಮಂತ್ರದ್ರಷ್ಟ್ರರು, ಅಥರ್ವ-ಅಂಗಿರಸ ಎಂಬಲ್ಲಿಯೂ ಅವರೇ

ಉದ್ದಿಷ್ಟರು. ಅಥರ್ವವೇದಕ್ಕೆ ಅಥರ್ವಾಂಗಿರಸ ಎಂದೂ ಹೆಸರು (ಅ. ವೇ. ೧೦-೭-೨೦) ಇದೇ ಅಭಿಪ್ರಾಯವು ಶತಪಥಬ್ರಾಹ್ಮಣದಲ್ಲಿಯೂ ಇದೆ.(ಶ. ಬ್ರಾ. ೧೧-೫-೬-೭ ಇತ್ಯಾದಿ).

ಅಂಗಿರಸರೊಡನೆ ಸಂಬಂಧ ಹೊಂದಿರುವ ವಿರೂಪರೆಂಬುವರ ಹೆಸರು ಬಹುವಚನದಲ್ಲಿ (ವಿರೂಪಾಸಃ) ಮೂರುಕಡೆ ಉಕ್ತವಾಗಿದೆ (೩-೫೩-೭, ೧೦-೬೨-೫, ೬) ಅಂಗಿರಸರು ಮತ್ತು ವಿರೂಪರು ದ್ಯುದೇವತೆಯ ಪುತ್ರರು (ದಿವಸ್ಪುತ್ರಾಸಃ) ಎಂದು ಹೇಳಿದೆ (೩-೫೩-೭) ವಿರೂಪರೂ ಮತ್ತು ಅಂಗಿರಸರೂ ಅಗ್ನಿಯ ಪುತ್ರರೆಂದೂ ಅಲ್ಲಿಯೇ ಹೇಳಿದೆ. ಸಾಯಣರು ವಿರೂಪಾಸಃ ಎಂಬ ಶಬ್ದಕ್ಕೆ ನಾನಾವಿಧರೂಪವುಳ್ಳ ಎಂದು ಅರ್ಥಮಾಡಿ ಅಂಗಿರಸರಿಗೆ ವಿಶೇಷಣ ಪದವನ್ನಾಗಿ ಅನ್ವಯಮಾಡಿದ್ದಾರೆ. ಈ ವಿರೂಪಾಸಃ ಎಂಬ ಶಬ್ದಕ್ಕೆ ಸಾಯಣರು ಹೇಳಿರುವಂತೆ ನಾನಾರೂಪವುಳ್ಳ ಅಂಗಿರಸರೇ ಅಥವಾ ವಿರೂಪ ಎಂಬ ಹೆಸರಿನ ಬೇರೆ ಋಷಿಗಳೇ ಎಂಬುದು ಸ್ಪಷ್ಟವಾಗಿಲ್ಲ. ಇದುವರೆಗೆ ಹೇಳಿದ ವರ್ಣನೆಗಳಲ್ಲದೆ ಅಂಗಿರಸರ ವಿಷಯವಾಗಿ ಇನ್ನೂ ಅನೇಕ ವಿಷಯಗಳು ಅಲ್ಲಲ್ಲಿ ಉಕ್ತವಾಗಿವೆ. ಅವುಗಳನ್ನು ಸಂದರ್ಭಾನುಸಾರ ವಿಮರ್ಶೆಮಾಡಲಾಗುವುದು.

---

ಸಂಹಿತಾಪಾಠಃ

ನೂನಂ ಸಾ ತೇ ಪ್ರತಿ ವರಂ ಜರಿತ್ರೇ ದುಹೀಯದಿಂದ್ರ ದಕ್ಷಿಣಾ ಮಘೋನೀ।
ಶಿಕ್ಷಾ ಸ್ತೋತೃಭ್ಯೋ ಮಾತಿ ಧಗ್ಭಗೋ ನೋ ಬೃಹದ್ವದೇಮ ವಿದಥೇ ಸುವೀರಾಃ ॥ ೨೧ ॥

ಪದಪಾಠಃ

ನೂನಂ । ಸಾ । ತೇ । ಪ್ರತಿ । ವರಂ । ಜರಿತ್ರೇ । ದುಹೀಯತ್ । ಇಂದ್ರ । ದಕ್ಷಿಣಾ । ಮಘೋನೀ ।
ಶಿಕ್ಷ । ಸ್ತೋತೃಽಭ್ಯಃ । ಮಾ । ಅತಿ । ಧಕ್ । ಭಗಃ । ನಃ । ಬೃಹತ್ । ವದೇಮ । ವಿದಥೇ । ಸುಽವೀರಾಃ ॥

ಸಾಯಣಭಾಷ್ಯಂ

ಅಹರ್ಗಣೇಷು ಮಾಧ್ಯಂದಿನಸವನೇಷು ತಾಯಿಮಾನರೂಪೇಷ್ವಚ್ಛಾವಾಕಸ್ಯಾಹರಹಃ ಶಸ್ಯಸಂಜ್ಞಕಮಭಿತಷ್ಟೇವೇತಿ ಸೂಕ್ತಂ । ನೂನಂ ಸಾ ತ ಇತ್ಯೇಷಾ ತಸ್ಯಾಂತೇ ಶಂಸನೀಯಾ । ಸೂತ್ರಿತಂ ಚ । ನೂನಂ ಸಾ ತ ಇತ್ಯಂತಮುತ್ತಮಂ । ಆ. ೭-೪ । ಇತಿ ॥

ಹೇ ಇಂದ್ರ ಯಾ ದಕ್ಷಿಣಾ ದಕ್ಷಮುತ್ಸಾಹನಂ ಕರೋತೀತಿ ದಕ್ಷಿಣಾ ಸ್ತೋತೃಭ್ಯೋ ದೇಯಾ ತೇ ತ್ವತ್ಸಂಬಂಧಿನೀ ಮಘೋನೀ ಧನವತೀ ಜರಿತ್ರೇ ಸ್ತೋತ್ರೇ ವರಂ ಶ್ರೇಷ್ಠಮಭಿಮತಮರ್ಥಂ ನೂನಂ

ಪ್ರತಿದುಹೀಯತ್ । ಇದಾನೀಂ ಪ್ರತಿದೋಗ್ಧಿ । ಸಂಪಾದಯತೀತ್ಯರ್ಥಃ । ತಾದೃಶೀಂ ದಕ್ಷಿಣಾಂ ಸ್ತೋತೃಭ್ಯೋಽಸ್ಮಭ್ಯಂ ಶಿಕ್ಷ । ಪ್ರಯಚ್ಛ । ಕಿಂಚ ಭಗೋ ಭಜನೀಯಸ್ತ್ವಂ ಮಾತಿ ಧಕ್ ॥ ದಹೇರ್ದಾನಾರ್ಥಸ್ಯ ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ ॥ ನೋಽಸ್ಮಾನತಿಕ್ರಮ್ಯಾನ್ಯೇಭ್ಯೋ ದಕ್ಷಿಣಾಂ ಮಾ ದಾಃ । ಪ್ರಥಮಮಸ್ಮಭ್ಯಂ ದತ್ವಾ ಪಶ್ಚಾದನ್ಯೇಭ್ಯೋ ದೀಯತಾಮಿತ್ಯರ್ಥಃ । ಯದ್ವಾ ನೋಽಸ್ಮಾಕಂ ಕಾಮಾನ್ ಮಾ ಧಕ್ । ಮಾ ಧಾಕ್ಷೀಃ । ಅಪೇಕ್ಷಿತಫಲದಾನೇನ ಪೂರಯೇತ್ಯರ್ಥಃ । ಸುವೀರಾಃ ಶೋಭನಪುತ್ರಪೌತ್ರಾಃ ಸಂತೋ ವಯಂ ವಿದಥೇಽಸ್ಮಿನ್ಯಜ್ಞೇ ಬೃಹತ್ ಪ್ರಭೂತಂ ಸ್ತೋತ್ರಂ ವದೇಮ । ತ್ವಾಮುದ್ದಿಶ್ಯ ಬ್ರವಾಮ ॥ ಅತ್ರ ಸಾ ತೇ ಪ್ರತಿದುಗ್ಧಾಮಿತಿ ಪ್ರಕೃತ್ಯ ವೀರೋ ವೀರಯತ್ಯಮಿತ್ರಾನ್ ವೇತೇರ್ವಾ ಸ್ಯಾದ್ಗತಿಕರ್ಮಣೋ ವೀರಯತೇರ್ವೇತ್ಯಂತಂ ನಿರುಕ್ತಮನುಸಂಧೇಯಂ । ನಿ. ೧-೭ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನಿಂದ ದತ್ತವಾಗತಕ್ಕದ್ದೂ । **ಮಘೋನೀ** ಪ್ರಭೂತವಾದ ಸಂಪತ್ತುಳ್ಳದ್ದೂ ಆದ । **ಸಾ ದಕ್ಷಿಣಾ**—ಆ ದಕ್ಷಿಣೆಯು । **ಜರಿತ್ರೇ**—ಸ್ತುತಿಕರ್ತನಾದ ಯಜಮಾನನಿಗೆ । **ನೂನಂ**—ಖಂಡಿತವಾಗಿಯೂ । **ವರಂ**—ಶ್ರೇಷ್ಠವಾಗಿ । **ಪ್ರತಿ ದುಹೀಯತ್**—ಇಷ್ಟಾರ್ಥವನ್ನು ಪೂರೈಸುತ್ತದೆ (ಅಂತಹ ದಕ್ಷಿಣೆಯನ್ನು) । **ಸ್ತೋತೃಭ್ಯಃ**—ಸ್ತುತಿಕರ್ತರಾದ ನಮಗೂ ಸಹ । **ಶಿಕ್ಷ**—ಕೊಡು । **ಭಗಃ**—ಪೂಜ್ಯನಾದ ನೀನು। **ನಃ**—ನಮ್ಮನ್ನು । **ಮಾತಿ ಧಕ್**—ತಿರಸ್ಕರಿಸಬೇಡ । **ಸುವೀರಾಃ**—ಶ್ರೇಷ್ಠವಾದ ಪುತ್ರರಿಂದೊಡಗೂಡಿದ ನಾವು । **ವಿದಥೇ**—ಈ ಯಜ್ಞದಲ್ಲಿ । **ಬೃಹತ್**—ಪ್ರಭೂತವಾದ ಸ್ತೋತ್ರವನ್ನು । **ವದೇಮ**—ಪಠಿಸುತ್ತೇವೆ.

ಭಾವಾರ್ಥ

ಎಲೈ ಇಂದ್ರನೇ, ನಿನ್ನಿಂದ ದತ್ತವಾಗತಕ್ಕದ್ದೂ, ಪ್ರಭೂತವಾದ ಸಂಪತ್ತುಳ್ಳದ್ದೂ ಆದ ಆ ದಕ್ಷಿಣೆಯು ಸ್ತುತಿಕರ್ತನಾದ ಯಜಮಾನನಿಗೆ ಖಂಡಿತವಾಗಿಯೂ ಇಷ್ಟಾರ್ಥವನ್ನು ಶ್ರೇಷ್ಠವಾದ ರೀತಿಯಲ್ಲಿ ಪೂರೈಸುತ್ತದೆ. ಅಂತಹ ದಕ್ಷಿಣೆಯನ್ನು ಸ್ತುತಿಕರ್ತರಾದ ನಮಗೂ ಕೊಡು. ಪೂಜ್ಯನಾದ ನೀನು ನಮ್ಮನ್ನು ತಿರಸ್ಕರಿಸಬೇಡ. ಶ್ರೇಷ್ಠರಾದ ಪುತ್ರರಿಂದೊಡಗೂಡಿದ ನಾವು ಈ ಯಜ್ಞದಲ್ಲಿ ಪ್ರಭೂತವಾದ ಸ್ತೋತ್ರವನ್ನು ಪಠಿಸುತ್ತೇವೆ.

English Translation

That opulent donation, which proceeds, Indra, from you, assuredly bestows upon him who praises you the boon (which he desires): grant it to us, your praisers ; do not you, who are the object of adoration, disregard (our prayer): so that, blessed with worthy descendants, we may glorify you at this sacrifice.

ವಿಶೇಷವಿಷಯಗಳು

**ಮಾ ಅತಿ ಧಕ್ ಭಗಃ ನಃ**—ಅಸ್ಮಾನತಿಕ್ರಮ್ಯಾನ್ಯೇಭ್ಯೋ ದಕ್ಷಿಣಾಂ ಮಾ ದಾಃ । ಪ್ರಥಮಮಸ್ಮಭ್ಯಂ ದತ್ವಾ ಪಶ್ಚಾದನ್ಯೇಭ್ಯೋ ದೀಯತಾಮಿತ್ಯರ್ಥಃ । ಯದ್ವಾ ನೋಽಸ್ಮಾಕಂ ಕಾಮಾನ್ ಮಾ

ಧಕ್ ಮಾ ಧಾಕ್ಷೀಃ । ಎಂದರೆ ಅಂತಹ ದಕ್ಷಿಣೆಯನ್ನು ಕೊಡುವಾಗ ನಮ್ಮನ್ನು ಬಿಟ್ಟು ಇತರರಿಗೆ ಕೊಡಬೇಡ, ಅಥವಾ ನಮಗೆ ಮೊದಲು ಕೊಟ್ಟು ಅನಂತರ ಇತರರಿಗೆ ಕೊಡು ಅಥವಾ ನಮ್ಮ ಇಷ್ಟಾರ್ಥಗಳನ್ನು ಕೊಡದೆ ತಿರಸ್ಕರಿಸ ಬೇಡ ಎಂದು ಅರ್ಥವಿವರಣೆಮಾಡಿರುವರು.

ದಕ್ಷಿಣಾ—ದಕ್ಷಿಣಾ ಶಬ್ದಕ್ಕೆ ಅನೇಕಾರ್ಥಗಳಿರುವವು ; ಯಜ್ಞಯಾಗಾದಿಗಳಲ್ಲಿಯೂ, ಇತರ ಸತ್ಕರ್ಮಾ-ನುಷ್ಠಾನದಲ್ಲಿಯೂ ಯಜಮಾನನಿಗಾಗಿ ಪಾತ್ರವಹಿಸಿ ಕೆಲಸಕಾರ್ಯಗಳನ್ನು ನೆರವೇರಿಸುವ ಋತ್ವಿಜರಿಗೂ, ಪುರೋ ಹಿತರಿಗೂ ಅವರು ನೆರವೇರಿಸಿದ ಕಾರ್ಯಕ್ಕಾಗಿ ಪ್ರತಿಫಲರೂಪವಾಗಿ ಕೊಡುವ ದ್ರವ್ಯವೇ ಮುಂತಾದ ವಸ್ತುಗಳಿಗೆ ದಕ್ಷಿಣಾ ಎಂದು ಹೆಸರು. ಈ ದಕ್ಷಿಣೆಯು ದ್ರವ್ಯರೂಪದಲ್ಲಾಗಲಿ, ಗೋವುಗಳೇ ಮೊದಲಾದ ಉಪಯುಕ್ತವಸ್ತುಗಳ ರೂಪದಲ್ಲಾಗಲಿ, ರತ್ನಗಳು, ವಾಸಮಾಡುವ ಮನೆ, ಆಹಾರಾದಿವಸ್ತುಗಳು ಇವುಗಳ ರೂಪದಲ್ಲಾಗಲಿ ಇರಬಹುದು. ಮತ್ತು ದಕ್ಷಿಣಾ ಶಬ್ದವು ದಕ್ಷಿಣಾಭಿಮಾನಿಯಾದ ಒಂದು ದೇವತೆಯನ್ನೂ ನಿರ್ದೇಶಿಸುವುದು; ಈ ವಿಷಯದಲ್ಲಿ ದಕ್ಷಿಣೆ, ದಕ್ಷಿಣೆಯನ್ನು ಕೊಡುವ ಯಜಮಾನ, ದಕ್ಷಿಣೆಯನ್ನು ತೆಗೆದುಕೊಳ್ಳುವ ಋತ್ವಿಗ್ಜನರು ಮೊದಲಾದವರ ವಿಷಯವನ್ನು ಪ್ರಶಂಸೆಮಾಡುವ ಒಂದು ಇಡೀ ಸೂಕ್ತವೇ ಋಗ್ವೇದದಲ್ಲಿರುವುದು. (ಋ. ಸಂ. ೧೦-೧೦೭) ಇದಲ್ಲದೆ ಅಲ್ಲಲ್ಲಿ ಈ ವಿಷ ಯಕವಾದ ಋಕ್ಕುಗಳೂ ಇರುವವು. (ಋ. ಸಂ. ೧-೧೮-೫, ೧-೧೨೫-೬). ಪ್ರಜಾಪತಿಯ ದುಹಿತೃವಿಗೂ ದಕ್ಷಿಣಾ ಎಂಬ ಹೆಸರಿದೆ. ಯಾಸ್ಕರು ತಮ್ಮ ನಿರುಕ್ತದಲ್ಲಿ ದಕ್ಷಿಣಾಶಬ್ದಕ್ಕೆ ಈರೀತಿ ಅರ್ಥನಿಷ್ಪತ್ತಿಯನ್ನು ಮಾಡಿರುವರು—

> ದಕ್ಷಿಣಾ ದಕ್ಷತೇಃ ಸಮರ್ಧಯತಿ ಕರ್ಮಣೋ ವ್ಯೃದ್ಧಂ ಸಮರ್ಧಯತೀತಿ । ಅಪಿ ವಾ ಪ್ರದಕ್ಷಿ-ಣಾಗಮನಾತ್ । ದಿಶಮಭಿಪ್ರೇತ್ಯ ದಿಗ್ಘಸ್ತಪ್ರಕೃತಿಃ ದಕ್ಷಿಣೋ ಹಸ್ತೋ ದಕ್ಷತೇರುತ್ಸಾಹ-ಕರ್ಮಣಃ । ದಾಶತೇರ್ವಾ ಸ್ಯಾದ್ದಾನಕರ್ಮಣಃ ॥
>
> (ನಿ. ೧-೭)

ಎಂದು ನಾಲ್ಕು ವಿಧವಾದ ಅರ್ಥಗಳನ್ನು ಹೇಳಿರುವರು—

(೧) ದಕ್ಷಿಣಾ ದಕ್ಷತೇಃ ಸಮರ್ಧಯತಿ ಕರ್ಮಣೋ ವ್ಯೃದ್ಧಂ ಸಮರ್ಧಯತೀತಿ—ದಕ್ಷಿಣಾ ಎಂಬ ಶಬ್ದವು ದಕ್ಷತಿಧಾತುವಿನಿಂದ ನಿಷ್ಪನ್ನವಾಗಿದೆ. ಈ ಧಾತುವಿಗೆ (ದ್ರವ್ಯವನ್ನು) ವೃದ್ಧಿಮಾಡು ಎಂದರ್ಥವು. ಯಜ್ಞದಲ್ಲಿ ವ್ಯಯಮಾಡಿದ ಎಂದರೆ ದಕ್ಷಿಣಾರೂಪವಾಗಿ ಕೊಟ್ಟ ಸ್ವಲ್ಪ ಧನವನ್ನು ಅತಿಶಯವಾಗಿ (ಫಲರೂಪದಲ್ಲಿ) ವೃದ್ಧಿಮಾಡುವುದರಿಂದ ಈ ಶಬ್ದಕ್ಕೆ ದಕ್ಷಿಣಾ ಎಂದು ಹೆಸರು.

(೨) ಅಪಿ ವಾ ಪ್ರದಕ್ಷಿಣಾಗಮನಾತ್—ಯಜ್ಞವೇದಿಯಲ್ಲಿ ಗಾರ್ಹಪತ್ಯ, ಸದಃ, ಆಗ್ನೀಧ್ರೀಯಗಳೆಂಬ ಸ್ಥಾನಗಳನ್ನು ಪ್ರದಕ್ಷಿಣಾಕಾರವಾಗಿ ಬಳಸಿ ಬಂದು ಅಂತರ್ವೇದಿಯಲ್ಲಿ ನಿಲ್ಲುವುದರಿಂದ ಈರೀತಿ ಮಾಡುವ ಪ್ರದಕ್ಷಿಣಾಗಮನಕ್ಕೆ ದಕ್ಷಿಣಾ ಎಂದು ಹೆಸರು.

(೩) ದಿಶಮಭಿಪ್ರೇತ್ಯ ದಿಗ್ಘಸ್ತಪ್ರಕೃತಿಃ ದಕ್ಷಿಣೋ ಹಸ್ತೋ ದಕ್ಷತೇರುತ್ಸಾಹಕರ್ಮಣಃ—ಪ್ರಾಙ್ಮುಖನಾಗಿರುವ ಪ್ರಜಾಪತಿಯ ಹಸ್ತಗಳಲ್ಲಿ ಬಲಗೈಯು ದಕ್ಷಿಣಾಭಿಮುಖವಾಗಿರುವುದರಿಂದಲೂ (ದಕ್ಷಿಣದಿಕ್ಕಿನಕಡೆ) ಇರುವುದರಿಂದಲೂ), ಯಾವ ಕೆಲಸವನ್ನು ಮಾಡಬೇಕಾದರೂ ಬಲಗೈಯು ಉತ್ಸಾಹದಿಂದ ಕೂಡಿ ಮಾಡುವುದರಿಂದಲೂ ಬಲಗೈಯಿಗೆ ದಕ್ಷಿಣೋ ಹಸ್ತಃ ಎಂದು ದಕ್ಷಿಣ ಶಬ್ದದಿಂದ ಹೇಳುವುದು ರೂಢಿಯಾಗಿದೆ.

(೪) **ದಾಶತೇರ್ವಾ ಸ್ಯಾದ್ದಾನಕರ್ಮಣಃ**—ದಾಶತಿಧಾತುವಿಗೆ ದಾನಕೊಡುವುದು ಎಂದರ್ಥವು. ಸಾಧಾರಣವಾಗಿ ದಾನಕೊಡುವಾಗ ದಕ್ಷಿಣಹಸ್ತವನ್ನು (ಬಲಗೈಯನ್ನು) ಉಪಯೋಗಿಸುವುದರಿಂದ ದಾನಕರ್ಮಕ್ಕೆ ದಕ್ಷಿಣಾ ಎಂದು ಹೆಸರು.

ಈ ನಾಲ್ಕುವಿಧ ಅರ್ಥಗಳಲ್ಲಿ ಕೊನೆಯಲ್ಲಿ ಹೇಳಿರುವ ದಾನಕರ್ಮವೆಂಬ ಅರ್ಥವೇ ಈ ಋಕ್ಕಿನಲ್ಲಿ ಹೇಳಲ್ಪಟ್ಟಿರುವುದು. ದಕ್ಷಿಣಾರೂಪದ ದಾನದ ಮಹಿಮೆಯನ್ನು ನಾನಾಕಡೆಗಳಲ್ಲಿ ಈ ವಿಧವಾಗಿ ಸ್ತುತಿಸಿದೆ—

**ಅಯಮಾತ್ಮಾ ದಕ್ಷಿಣಾನ್ನಂ ವನುತೇ ಯೋ ನ ಆತ್ಮೇತಿ ಹ್ಯಸ್ಯೃಷಿಣಾಭ್ಯುಕ್ತಂ ।**

(ಶ. ಬ್ರಾ. ೧೦-೧-೧-೧೦)

ಎಂಬಲ್ಲಿ ದಕ್ಷಿಣಾದಾನವು ಅನ್ನವನ್ನು ಸಂಪಾದಿಸಿ ಕೊಡುತ್ತದೆಂದು ಹೇಳಿದೆ.

**ಯ ಏಷ ತಪತಿ ತದ್ಯತ್ತ್ರದಾದಿತ್ಯೋ ಯಶೋ ಯಜ್ಞೋ ಹ್ಯೆವ ತದ್ಯಶಸ್ತ್ರದ್ಯತ್ತ್ರದೃತ್ವಿಜೋ ಯಶೋ ದಕ್ಷಿಣಾ ಹ್ಯೆವ ತದ್ಯಶಸ್ತಸ್ಮಾದ್ಯಾಮಸ್ಮೈ ದಕ್ಷಿಣಾಮಾನಯೇಯುರ್ನ ತಾ ಇತ್ಸೆದ್ಯೋಽನ್ಯಸ್ಮಾ ಅತಿದಿಶೇತ್ ॥**

(ಶ. ಬ್ರಾ. ೪-೧.೧-೩೨)

ದಕ್ಷಿಣೆಯೇ ಯಶೋರೂಪವಾದ ಶ್ರೇಯಸ್ಸಾದುದರಿಂದ ಅದನ್ನು ತಿರಸ್ಕರಿಸಬಾರದು. ಎಂದೂ ಮತ್ತು ಸಾಯಣರು ಉದಹರಿಸಿರುವಂತೆ,

**ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ।**

(ಬೃ. ಉ. ೪-೪-೨೨)

ಯಜ್ಞದಿಂದಲೂ, ದಾನದಿಂದಲೂ ಸಹ ಬ್ರಹ್ಮವಿತ್ತುಗಳು ಜ್ಞಾನಿಗಳಾಗಲು ಅಪೇಕ್ಷಿಸುತ್ತಾರೆಂದೂ,

**ದಾನಮಿತಿ ಸರ್ವಾಣಿ ಭೂತಾನಿ ಪ್ರಶಗ್‌ಂಸಂತಿ ದಾನಾನ್ನಾತಿದುಶ್ಚರಂ ತಸ್ಮಾದ್ದಾನೇ ರಮಂತೇ ।**

(ತೈ. ಉ. ೪-೧೦೦)

**ದಾನಂ ಯಜ್ಞಾನಾಂ ವರೂಥಂ ದಕ್ಷಿಣಾ ಲೋಕೇ ದಾತಾರಗ್‌ಂ ಸರ್ವಭೂತಾನ್ಯುಪಜೀವಂತಿ ದಾನೇನಾರಾತೀರಪಾನುದಂತ ದಾನೇನ ದ್ವಿಷಂತೋ ಮಿತ್ರಾ ಭವಂತಿ ದಾನೇ ಸರ್ವಂ ಪ್ರತಿಷ್ಠಿತಂ ತಸ್ಮಾದ್ದಾನಂ ಪರಮಂ ವದಂತಿ ।**

(ತೈ. ಉ. ೪-೧೦೧)

ಎಂದರೆ ದಾನಕರ್ಮವನ್ನು ಸಮಸ್ತರೂ ಪ್ರಶಂಸೆಮಾಡುವರು. ದಾನಕೊಡುವುದರಿಂದ ಎಲ್ಲ ಕೆಲಸಕಾರ್ಯಗಳೂ ನೆರವೇರುವವು. ಅದರಿಂದ ಅಸಾಧ್ಯವಾದುದು ಯಾವುದೂ ಇಲ್ಲ. ದಾನವೇ ಯಜ್ಞವು ಚೆನ್ನಾಗಿ ನಡೆಯುವುದಕ್ಕೆ ರಥದಂತಿರುವ ಸಾಧನವಾಗಿರುವುದು. ಲೋಕದಲ್ಲಿ ಕೊಡುವ ದಾತನನ್ನು ಎಲ್ಲರೂ ಆಶ್ರಯಿಸಿ ಜೀವಿಸುವರು ದಾನದಿಂದ ಶತ್ರುಗಳೂ ಮಿತ್ರರಾಗುವರು. ದಾನದಲ್ಲಿಯೇ ಸಮಸ್ತ ಧರ್ಮಗಳೂ ನೆಲಸಿರುವವು. ಆದ್ದರಿಂದ ದಾನವು ಬಹುಶ್ರೇಷ್ಠವಾದ ಕರ್ಮವೆಂದು ಹೇಳುವರು ಎಂದು ದಕ್ಷಿಣಾ ಅಥವಾ ದಾನದ ಪ್ರಶಂಸೆಯು ಅನೇಕ ಕಡೆಗಳಲ್ಲಿ ಹೇಳಿದೆ. ಹಿಂದೆ ಹೇಳಿದಂತೆ–**ಆವಿರಭೂನ್ಮಹಿ ಮಾಘೋನಮೇಷಾಂ** ಎಂಬ ಋ. ಸಂ. ೧೦-೧೦೭ನೆಯ ಸೂಕ್ತದ ೧೧ ಋಕ್ಕುಗಳೂ ದಕ್ಷಿಣಾ ಮತ್ತು ದಕ್ಷಿಣೆಯನ್ನು ಕೊಡುವವರ ಪ್ರಶಂಸೆಯೇ ಆಗಿರುವುದು. ಅದನ್ನೆಲ್ಲಾ ಬರೆಯಲು ಅತಿವಿಸ್ತಾರವಾಗುವುದರಿಂದ ಬೇರೆ ಸಂದರ್ಭದಲ್ಲಿ ಅದನ್ನು ವಿವರಿಸಲಾಗುವುದು.

---

# ಹನ್ನೆರಡನೆಯ ಸೂಕ್ತವು

## ಸಾಯಣಭಾಷ್ಯಂ

ದ್ವಿತೀಯೇಽನುವಾಕ ಏಕಾದಶ ಸೂಕ್ತಾನಿ । ತತ್ರ ಯೋ ಜಾತ ಇತಿ ಪಂಚದಶರ್ಚಂ ಪ್ರಥಮಂ ಸೂಕ್ತಂ ಗಾರ್ತ್ಸಮದಂ ತ್ರೈಷ್ಟುಭಮೈಂದ್ರಂ ॥ ಸಂಸವೇ ನಿಷ್ಕೇವಲ್ಯೇ ನಿವಿದ್ಧಾನೀಯಸ್ಯ ಪುರಸ್ತಾದ್ಯೋ ಜಾತ ಏವೇತಿ ಶಂಸ್ಯೇತ್ । ಯದಿ ಪರ್ಯಾಯಾನಿತಿ ಖಂಡೇ ಸೂತ್ರಿತಂ । ಯೋ ಜಾತ ಏವೇತಿ ನಿಷ್ಕೇ-ವಲ್ಯೇ । ಆ. ೬-೬ । ಇತಿ ॥ ಆಭಿಪ್ಲವಿಕೇ ತೃತೀಯೇಽಹನಿ ನಿಷ್ಕೇವಲ್ಯೇ ಯೋ ಜಾತ ಏವೇತಿ ನಿವಿದ್ಧಾ-ನೀಯಂ । ಸೂತ್ರಿತಂ ಚ । ತೃತೀಯಸ್ಯ ತ್ರ್ಯರ್ಯಮಾ ಯೋ ಜಾತ ಏವೇತಿ ಮಧ್ಯಂದಿನಃ । ಆ. ೭-೭ । ಇತಿ ॥ ವಿಶ್ವಜಿತಿ ಮಾಧ್ಯಂದಿನಸವನೇ ಮೈತ್ರಾವರುಣಃ ಸ್ವಶಸ್ತ್ರೇ ಪ್ರಾಕೃತಾತ್ಸೂಕ್ತಾತ್ಪೂರ್ವಂ ಯೋ ಜಾತ ಇತಿ ಸಾಮಸೂಕ್ತಂ ಶಂಸೇತ್। ವಿಶ್ವಜಿತೋಽಗ್ನಿಂ ನರ ಇತಿ ಖಂಡೇ ಸೂತ್ರಿತಂ । ಸತ್ರಾ ಮದಾಸೋ ಯೋ ಜಾತ ಏವಾಭೂರೇಕ ಇತಿ ಸಾಮಸೂಕ್ತಾನಿ । ಆ. ೮-೭ । ಇತಿ ॥ ಅಗ್ನಿಷ್ಟುನ್ನಿಷ್ಕೇವಲ್ಯೇ ನಿವಿ-ದ್ಧಾನಮಿದಂ । ಶ್ಯೇನಾಜಿರಾಭ್ಯಾಮಿತಿ ಖಂಡೇ ಸೂತ್ರಿತಂ । ತಿಷ್ಠಾ ಹರೀ ಇತಿ ಯೋ ಜಾತ ಏವೇತಿ ಮಧ್ಯಂದಿನಃ । ಆ. ೯-೭ । ಇತಿ ॥ ಮಹಾವ್ರತೇ ನಿಷ್ಕೇವಲ್ಯೇ ಯೋ ಜಾತ ಏವೇತಿ ಸೂಕ್ತಂ । ಊರೂ ಇತಿ ಖಂಡೇ ಸೂತ್ರಿತಂ । ವನೇ ನ ವಾ ಯೋ ನ್ಯಧಾಯಿ ಚಾಕನ್ ಯೋ ಜಾತ ಏವ ಪ್ರಥಮೋ ಮನ-ಸ್ವಾನ್ । ಐ. ಆ. ೫-೩-೧ ಇತಿ ॥ ಅತ್ರೇತಿಹಾಸೋ ಬೃಹದ್ದೇವತಾಯಾಮುಕ್ತಃ । ಸಂಯುಜ್ಯ ತಪಸಾ-ತ್ಮಾನಮೈಂದ್ರಂ ಬಿಭ್ರನ್ಮಹದ್ವಪುಃ । ಅದೃಶ್ಯತ ಮುಹೂರ್ತೇನ ದಿವಿ ಚ ವ್ಯೋಮ್ನಿ ಚೇಹ ಚ ॥ ತಮಿಂದ್ರ ಇತಿ ಮತ್ವಾ ತು ದೈತ್ಯೌ ಭೀಮಪರಾಕ್ರಮೌ । ಧುನಿಶ್ಚ ಚುಮುರಿಶ್ಚೋಭೌ ಸಾಯುಧಾವಭಿಪೇತತುಃ ॥ ವಿದಿತ್ವಾ ಸ ತಯೋರ್ಭಾವಮೃಷಿಃ ಪಾಪಂ ಚಿಕೀರ್ಷತೋಃ । ಯೋ ಜಾತ ಇತಿ ಸೂಕ್ತೇನ ಕರ್ಮಾ-ಣ್ಯೈಂದ್ರಾಣ್ಯಕೀರ್ತಯತ್ । ಅನ್ಯೇ ತ್ವನ್ಯಥಾ ವರ್ಣಯಂತಿ । ಪುರಾ ಕಿಲೇಂದ್ರಾದಯೋ ವೈನ್ಯಯಜ್ಞಂ ಸಮಾಜಗ್ಮುಃ । ಗೃತ್ಸಮದೋಽಪಿ ತತ್ರಾಗತ್ಯ ಸದಸ್ಯಾಸೀತ್ । ದೈತ್ಯಾಶ್ಚೇಂದ್ರಜಿಘಾಂಸಯಾ ತತ್ರ ಸಮಾಗಮನ್ । ತಾನ್ ದೃಷ್ಟ್ವಾ ನಿರ್ಜಗಾಮೇಂದ್ರೋ ಯಜ್ಞಾದ್ಗೃತ್ಸಮದಾಕೃತಿಃ। ಸ ಚ ಗೃತ್ಸಮದೋ ವೈನ್ಯೇನ ಪೂಜಿತೋ ಯಜ್ಞವಾಟಾನ್ನಿರಗಚ್ಛತ್ । ನಿರ್ಗಚ್ಛಂತಂ ತಮೃಷಿಂ ದೃಷ್ಟ್ವಾ ಅಯಮೇವೇಂದ್ರ ಇತಿ ಮನ್ಯಮಾನಾಸ್ತಮಸುರಾಃ ಪರಿವವ್ರುಃ। ನಾಹಮಿಂದ್ರಸ್ತು ಚ್ಛಃ ಕಿಂತ್ವೇವಂಗುಣೋಪೇತಃ ಸ ಇತ್ಯನೇನ ಸೂಕ್ತೇನ ತಾನ್ಪ್ರತ್ಯುವಾಚ ॥ ಅಪರೇ ತ್ವೇವಂ ಕಥಯಂತಿ । ಗೃತ್ಸಮದಸ್ಯ ಯಜ್ಞೇ ಪ್ರವಿಷ್ಟಮೇಕಾಕಿನ-ಮಿಂದ್ರಂ ಜ್ಞಾತ್ವಾಸುರಾಃ ಪರಿವವ್ರುಃ । ಸ ಇಂದ್ರೋ ಗೃತ್ಸಮದರೂಪೇಣ ಯಜ್ಞವಾಟಾನ್ನಿರ್ಗತ್ಯ ಸ್ವರ್ಗಂ ಜಗಾಮ । ತತೋಽಸುರಾ ಇಂದ್ರೋ ವಿಲಂಬಿತ ಇತ್ಯಂತಃ ಪ್ರವಿಶ್ಯ ಗೃತ್ಸಮದಂ ದೃಷ್ಟ್ವಾ ಪೂರ್ವಮೇವ ಗೃತ್ಸಮದೋ ಗತಃ ಅಯಂ ತ್ವಿಂದ್ರೋಽಸ್ಮದ್ಭಯಾದ್ಗೃತ್ಸಮದರೂಪೇಣಾಸ್ತ ಇತಿ ತಂ ಜಗೃಹುಃ । ಸ ತಾನ್ ನಾಹಮಿಂದ್ರೋಽಯಮಿತ್ಯನೇನ ಸೂಕ್ತೇನ ಪ್ರತ್ಯುವಾಚ । ಅಯಮೇವಾರ್ಥೋ ಮಹಾಭಾರತೇ ಪ್ರಪಂಚಿತಃ ॥

ಅನುವಾದವು— ಈ ಸೂಕ್ತದಿಂದ ಈ ದ್ವಿತೀಯಮಂಡಲದ ಎರಡನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ ಹನ್ನೊಂದು ಸೂಕ್ತಗಳಿರುವವು. ಅವುಗಳಲ್ಲಿ **ಯೋ ಜಾತ ಏವ** ಎಂದು ಪ್ರಾರಂಭವಾಗುವ ಸೂಕ್ತವು ಮೊದಲನೆಯದು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ಇಂದ್ರನು ದೇವತೆಯು, ತ್ರಿಷ್ಟುಪ್ ಛಂದಸ್ಸು. ಸಂಪ್ರವಯಾಗದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ ನಿವಿದ್ಧಾನೀಯ ಸೂಕ್ತಗಳನ್ನು ಪಠಿಸುವುದಕ್ಕೆ ಮುಂಚಿತವಾಗಿ— **ಯೋ ಜಾತ ಏವ** ಎಂಬ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಯದಿ ಪರ್ಯೋಯಾನ್** ಎಂಬ ಖಂಡದ **ಯೋ ಜಾತ ಏವೇತಿ ನಿಷ್ಕೇವಲ್ಯೇ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ ೬-೬), ಮತ್ತು ಅಭಿಪ್ಲವಯಾಗದ ಮೂರನೆಯ ದಿವಸದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರ ಪಠನಕಾಲದಲ್ಲಿ **ಯೋ ಜಾತ ಏವ** ಎಂಬ ಈ ಸೂಕ್ತವನ್ನು ನಿವಿದ್ಧಾನೀಯ ಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ತೃತೀಯಸ್ಯ ತ್ರ್ಯರ್ಯಮಾ ಯೋ ಜಾತ ಏವೇತಿ ಮಧ್ಯಂದಿನಃ।** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ ೭-೭); ಮತ್ತು ವಿಶ್ವಜಿದ್ಯಾಗದಲ್ಲಿ ಮಾಧ್ಯಂದಿನಸವನಕಾಲದಲ್ಲಿ ಮೈತ್ರಾವರುಣಶಸ್ತ್ರಮಂತ್ರಪಠನಮಾಡುವಾಗ ಆ ಮಂತ್ರಗಳ ಪೂರ್ವಭಾವಿಯಾಗಿ **ಯೋ ಜಾತ ಏವ** ಎಂದು ಸಾಮಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ವಿಶ್ವಜಿತೋಽಗ್ನಿಂ ನರ** ಎಂಬ ಖಂಡದ **ಸತ್ರಾ ಮದಾಸೋ ಯೋ ಜಾತ ಏವಾಭೂರೇಕ ಇತಿ ಸಾಮಸೂಕ್ತಾನಿ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ ೮-೭), ಮತ್ತು ಅಗ್ನಿಸ್ತುತಿ ಸಂಬಂಧವಾದ ನಿಷ್ಕೇವಲ್ಯಶಸ್ತ್ರ ಮಂತ್ರಗಳನ್ನು ಪಠನ ಮಾಡುವಾಗ ಈ ಸೂಕ್ತವನ್ನು ನಿವಿದ್ ಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ— **ಶ್ಯೇನಾಜಿರಾಭ್ಯಾಂ** ಎಂಬ ಖಂಡದ— **ತಿಷ್ಠಾ ಹರೀ ಇತಿ ಯೋ ಜಾತ ಏವೇತಿ ಮಧ್ಯಂದಿನಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೯-೭), ಮಹಾವ್ರತವೆಂಬ ಯಾಗದಲ್ಲಿಯೂ ನಿಷ್ಕೇವಲ್ಯಶಸ್ತ್ರಮಂತ್ರಗಳ ಪಠನಕ್ಕಾಗಿ **ಯೋ ಜಾತ ಏವ** ಎಂಬ ಈ ಸೂಕ್ತವನ್ನು ಪಠಿಸಬೇಕೆಂದು ಐತರೇಯಆರಣ್ಯಕದಲ್ಲಿ **ಊರೂ** ಎಂಬ ಖಂಡದಲ್ಲಿ **ವನೇ ನ ವಾ ಯೋ ನ್ಯಧಾಯಿ ಚಾಕನ್ ಯೋ ಜಾತ ಏವ ಪ್ರಥಮೋ ಮನಸ್ವಾನ್** ಎಂಬ ವಾಕ್ಯದಲ್ಲಿ ಉಕ್ತವಾಗಿರುವುದು (ಐ. ಆ. ೫-೩-೧).

ಬೃಹದ್ದೇವತಾ ಎಂಬ ಗ್ರಂಥದಲ್ಲಿ ಈ ಸೂಕ್ತದ ವಿಷಯವಾಗಿ ಒಂದು ಇತಿಹಾಸವಿರುವುದು—

**ಸಂಯುಜ್ಯ ತಪಸಾತ್ಮಾನಮೈಂದ್ರಂ ಬಿಭ್ರನ್ಮಹದ್ವಪುಃ।**
**ಅದೃಶ್ಯತ ಮುಹೂರ್ತೇನ ದಿವಿ ಚ ವ್ಯೋಮ್ನಿ ಚೇಹ ಚ॥**
**ತಮಿಂದ್ರ ಇತಿ ಮತ್ವಾ ತು ದೈತ್ಯೌ ಭೀಮಪರಾಕ್ರಮೌ।**
**ಧುನಿಶ್ಚ ಚುಮುರಿಶ್ಚೋಭೌ ಸಾಯುಧಾವಭಿಪೇತತುಃ॥**
**ವಿದಿತ್ವಾ ಸ ತಯೋರ್ಭಾವಮೃಷಿಃ ಪಾಪಂ ಚಿಕೀರ್ಷತೋಃ।**
**ಯೋ ಜಾತ ಇತಿ ಸೂಕ್ತೇನ ಕರ್ಮಾಣ್ಯೈಂದ್ರಾಣ್ಯಕೀರ್ತಯತ್॥**

ಒಂದಾನೊಂದು ಕಾಲದಲ್ಲಿ ಈ ಸೂಕ್ತದ್ರಷ್ಟೃವಾದ ಗೃತ್ಸಮದ ಋಷಿಯು ತಪಸ್ಸನ್ನುಮಾಡಿ ಅದರ ಸಾಮರ್ಥ್ಯದಿಂದ ಇಂದ್ರನ ಮಹಾರೂಪವನ್ನು ಧರಿಸಿ ಮುಹೂರ್ತಮಾತ್ರದಲ್ಲಿ ಅಂತರಿಕ್ಷ ಸ್ವರ್ಗ ಮೊದಲಾದ ಇಂದ್ರನಿರುವ ಪ್ರದೇಶಗಳಲ್ಲಿ ಕಣ್ಣಿಗೆ ಕಾಣಿಸದಂತೆ ಅದೃಶ್ಯನಾಗಿ ಸಂಚರಿಸುತ್ತಿದ್ದನು. ಆಗ ಮಹಾಪರಾಕ್ರಮಶಾಲಿಗಳಾದ ಧುನಿ ಮತ್ತು ಚುಮುರಿ ಎಂಬ ಇಬ್ಬರು ದೈತ್ಯರು ಈರೀತಿ ಸಂಚರಿಸುತ್ತಿದ್ದ ಗೃತ್ಸಮದಋಷಿಯನ್ನೇ ಇಂದ್ರನೆಂದು ತಿಳಿದು ಅವನನ್ನು

ಕೊಲ್ಲುವುದಕ್ಕಾಗಿ ತಮ್ಮ ಆಯುಧಗಳನ್ನು ಝಳಪಿಸುತ್ತಾ ಆ ಋಷಿಯನ್ನು ಅಟ್ಟಿಸಿಕೊಂಡು ಬಂದರು. ಈ ದೈತ್ಯರ ದುರಭಿಪ್ರಾಯವನ್ನು ಇಂದ್ರನ ರೂಪದಲ್ಲಿದ್ದ ಗೃತ್ಸಮದಋಷಿಯು ತಿಳಿದು **ಯೋ ಜಾತ ಏವ** ಎಂಬ ಈ ಪ್ರಕೃತವಾದ ಸೂಕ್ತದಿಂದ ಇಂದ್ರನ ಸಾಹಸಕೃತ್ಯಗಳನ್ನು ವರ್ಣಿಸಿ ಸ್ತೋತ್ರಮಾಡಿದನು ಎಂದು ಹೇಳಿದೆ. ಇದಲ್ಲದೆ—

> **ಅನ್ಯೇ ತ್ವನ್ಯಥಾ ವರ್ಣಯಂತಿ । ಪುರಾ ಕಿಲೇಂದ್ರಾದಯೋ ವೈನ್ಯಯಜ್ಞಂ ಸಮಾಜಗ್ಮುಃ । ಗೃತ್ಸಮದೋಽಪಿ ತತ್ರಾಗತ್ಯ ಸದಸ್ಯಾಸೀತ್ । ದೈತ್ಯಾಶ್ಚೇಂದ್ರಜಿಘಾಂಸಯಾ ತತ್ರ ಸಮಾಗಮನ್ । ತಾನ್ ದೃಷ್ಟ್ವಾ ನಿರ್ಜಗಾಮೇಂದ್ರೋ ಯಜ್ಞಾದ್ಗೃತ್ಸಮದಾಕೃತಿಃ । ಸ ಚ ಗೃತ್ಸಮದೋ ವೈನ್ಯೇನ ಪೂಜಿತೋ ಯಜ್ಞವಾಟಾನ್ನಿರಗಚ್ಛತ್ । ನಿರ್ಗಚ್ಛಂತಂ ತಮೃಷಿಂ ದೃಷ್ಟ್ವಾ ಅಯಮೇವೇಂದ್ರ ಇತಿ ಮನ್ಯಮಾನಾಸ್ತಮಸುರಾಃ ಪರಿವವ್ರುಃ । ನಾಹಮಿಂದ್ರಸ್ತು ಚ್ಛೈಃ ಕಿಂತ್ವೇವಂಗುಣೋಪೇತ ಸ ಇತ್ಯನೇನ ಸೂಕ್ತೇನ ತಾನ್ಪ್ರತ್ಯುವಾಚ ॥**

ಇನ್ನು ಕೆಲವರು ಬೇರೆ ವಿಧವಾಗಿ ಹೇಳುವರು—ಪೂರ್ವದಲ್ಲಿ ಇಂದ್ರಾದಿ ದೇವತೆಗಳು ವೇನನೆಂಬುವನು ಮಾಡಿದ ಯಜ್ಞಕ್ಕೆ ಬಂದಿದ್ದರು. ಗೃತ್ಸಮದಋಷಿಯೂ ಅಲ್ಲಿಗೆ ಬಂದು ಕುಳಿತ್ತಿದ್ದನು. ಆಗ ದೈತ್ಯರು ಇಂದ್ರನನ್ನು ಕೊಲ್ಲಬೇಕೆಂದು ಅಲ್ಲಿಗೆ ಬಂದರು. ಇಂದ್ರನು ಈ ಸುಳುವನ್ನು ತಿಳಿದು ಗೃತ್ಸಮದನ ವೇಷದಿಂದ ಯಜ್ಞಭೂಮಿಯನ್ನು ಬಿಟ್ಟು ಹೊರಟುಹೋದನು. ಗೃತ್ಸಮದ ಋಷಿಯು ಮಾತ್ರ ವೇನನ ಯಜ್ಞಪೂರ್ತಿಯಾಗುವವರೆಗೂ ಅಲ್ಲಿಯೇ ಇದ್ದು ವೇನನಿಂದ ಸತ್ಕೃತನಾಗಿ ತನ್ನ ಆಶ್ರಮಕ್ಕೆ ಹೊರಟುಬರುತ್ತಿದ್ದನು. ತನ್ನ ಆಶ್ರಮಕ್ಕೆ ಹೋಗುತ್ತಿರುವ ಆ ಋಷಿಯನ್ನು ದೈತ್ಯರು ನೋಡಿ ಇಂದ್ರನೇ ಋಷಿಯಂತೆ ವೇಷಮರೆಸಿಕೊಂಡು ಹೋಗುತ್ತಿರುವನೆಂದು ಯೋಚಿಸಿ ಅವನನ್ನು ಮುತ್ತಿದರು. ಆಗ ಗೃತ್ಸಮದನು ಆ ದೈತ್ಯರನ್ನು ಕುರಿತು—ನಾನು ಆ ಇಂದ್ರನಲ್ಲ- ತುಚ್ಛನಾದ ಆ ಇಂದ್ರನ ಗುಣಗಳು ಹೀಗಿವೆ, ಎಂದು ಪ್ರತಿಋಕ್ಕಿನಲ್ಲಿಯೂ ಇಂದ್ರನ ಒಂದೊಂದು ಗುಣವನ್ನು ವರ್ಣಿಸಿ, ಎಲೈ ದೈತ್ಯಜನರೇ, ಇಂತಹ ಗುಣವುಳ್ಳವನೇ ಆ ಇಂದ್ರನು, ನಾನಲ್ಲ ಎಂದು ಅವರನ್ನು ಸಮಾಧಾನಪಡಿಸಿ ತನ್ನ ಆಶ್ರಮಕ್ಕೆ ಹೊರಟುಹೋದನು-

> **ಅಪರೇ ತ್ವೇವಂ ಕಥಯಂತಿ । ಗೃತ್ಸಮದಸ್ಯ ಯಜ್ಞೇ ಪ್ರವಿಷ್ಟಮೇಕಾಕಿನಮಿಂದ್ರಂ ಜ್ಞಾತ್ವಾಸುರಾಃ ಪರಿವವ್ರುಃ । ಸ ಇಂದ್ರೋ ಗೃತ್ಸಮದರೂಪೇಣ ಯಜ್ಞವಾಟಾನ್ನಿರ್ಗತ್ಯ ಸ್ವರ್ಗಂ ಜಗಾಮ । ತತೋಽಸುರಾ ಇಂದ್ರೋ ವಿಲಂಬಿತ ಇತ್ಯಂತಃ ಪ್ರವಿಶ್ಯ ಗೃತ್ಸಮದಂ ದೃಷ್ಟ್ವಾ ಪೂರ್ವಮೇವ ಗೃತ್ಸಮದೋ ಗತಃ ಅಯಂ ತ್ವಿಂದ್ರೋಽಸ್ಮದ್ಭಯಾದ್ಗೃತ್ಸಮದರೂಪೇಣಾಸ್ತ ಇತಿ ತಂ ಜಗೃಹುಃ । ಸ ತಾನ್ ನಾಹಮಿಂದ್ರೋಽಯಮಿತ್ಯನೇನ ಸೂಕ್ತೇನ ಪ್ರತ್ಯುವಾಚ । ಅಯಮೇವಾರ್ಥೋ ಮಹಾಭಾರತೇ ಪ್ರಪಂಚಿತಃ ॥**

ಇನ್ನೂ ಕೆಲವರು ಹೀಗೆ ಹೇಳುವರು—ಗೃತ್ಸಮದಋಷಿಯು ಒಂದಾನೊಂದು ಕಾಲದಲ್ಲಿ ಯಜ್ಞಮಾಡುತ್ತಿದ್ದನು- ಆಗ ಇಂದ್ರನು ಅಲ್ಲಿಗೆ ಒಬ್ಬಂಟಿಗನಾಗಿ ಒಳಕ್ಕೆ ಬಂದುದನ್ನು ಅಸುರರು ತಿಳಿದು ಯಜ್ಞಗೃಹವನ್ನು ಮುತ್ತಿದರು ಅಷ್ಟರಲ್ಲಿ ಇದನ್ನು ತಿಳಿದ ಇಂದ್ರನು ಗೃತ್ಸಮದಋಷಿಯ ರೂಪವನ್ನು ಧರಿಸಿ ಯಜ್ಞಗೃಹದಿಂದ ಹೊರಟು ಹೋಗಿ ತನ್ನ ವಾಸಸ್ಥಾನವಾದ ಸ್ವರ್ಗವನ್ನು ಸೇರಿದನು- ಬಳಿಕ ಅಸುರರು ಬಹಳ ಹೊತ್ತಿನವರೆಗೂ ಕಾದು ನೋಡಿದಾಗ್ಯೂ ಇಂದ್ರನು ಈಚೆಗೆ ಬರದಿರಲು ಯಜ್ಞಗೃಹದ ಒಳಕ್ಕೆ ಪ್ರವೇಶಿಸಿ ಅಲ್ಲಿದ್ದ ಗೃತ್ಸಮದನನ್ನು ಕಂಡು, ಇದೇನು ?

ಗೃತ್ಸಮದನು ಆಗಲೇ ಹೊರಟುಹೋದನಲ್ಲಾ, ಮತ್ತೆ ಇಲ್ಲಿ ಗೃತ್ಸಮದನು ಹೇಗೆ ಬಂದನು ? ಇಂದ್ರನೇ ನಮಗೆ ಹೆದರಿ ಈ ಗೃತ್ಸಮದನ ರೂಪದಿಂದ ಇಲ್ಲಿ ಕೂತಿದ್ದಾನೆ ಎಂದು ಅವನನ್ನು (ಗೃತ್ಸಮದನನ್ನು) ಹಿಡಿದುಕೊಂಡರು. ಆಗ ಗೃತ್ಸಮದನು ಆ ಅಸುರರನ್ನು ಕುರಿತು—ನಾನು ಇಂದ್ರನಲ್ಲ ಎಂದು ಇಂದ್ರನ ಗುಣಗಳನ್ನು ಈ ಸೂಕ್ತದಿಂದ ವರ್ಣಿಸಿ ಹೇಳಿ ಅಸುರರನ್ನು ಸಮಾಧಾನಮಾಡಿ ಕಳುಹಿಸಿದನು. ಈ ಕಥೆಯು ಮಹಾಭಾರತದಲ್ಲಿಯೂ ಉಕ್ತವಾಗಿದೆ.

---

॥ ಓಂ ॥

## ಸೂಕ್ತ—೧೨

॥ ಮಂಡಲ—೨ ॥ ಅನುವಾಕ— ೨॥ ಸೂಕ್ತ—೧೨ ॥

॥ ಅಷ್ಟಕ— ೨ ॥ ಅಧ್ಯಾಯ—೬ ॥ ವರ್ಗ—೭, ೮, ೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥

ಋಷಿಃ—ಗೃತ್ಸಮದಃ ॥

ದೇವತಾ—ಇಂದ್ರಃ ॥

ಛಂದಃ—ತ್ರಿಷ್ಟುಪ್ ।

---

ಸಂಹಿತಾಪಾಠಃ

ಯೋ ಜಾತ ಏವ ಪ್ರಥಮೋ ಮನಸ್ವಾನ್ದೇವೋ ದೇವಾನ್ಕ್ರತುನಾ ಪರ್ಯಭೂಷತ್ ।

ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಂ ನೃಮ್ಣಸ್ಯ ಮಹ್ನಾ ಸ ಜನಾಸ ಇಂದ್ರಃ ॥ ೧ ॥

ಪದಪಾಠಃ

ಯಃ । ಜಾತಃ । ಏವ । ಪ್ರಥಮಃ । ಮನಸ್ವಾನ್ । ದೇವಃ । ದೇವಾನ್ । ಕ್ರತುನಾ । ಪರಿಅಭೂಷತ್ ।

ಯಸ್ಯ । ಶುಷ್ಮಾತ್ । ರೋದಸೀ ಇತಿ । ಅಭ್ಯಸೇತಾಂ । ನೃಮ್ಣಸ್ಯ । ಮಹ್ನಾ । ಸಃ । ಜನಾಸಃ । ಇಂದ್ರಃ ॥

## ಸಾಯಣಭಾಷ್ಯಂ

ಗೃತ್ಸಮದೋ ಬ್ರೂತೇ । ಜನಾಸೋ ಜನಾ ಹೇ ಅಸುರಾಃ ಯೋ ಜಾತ ಏವ ಜಾಯಮಾನ ಏವ ಸನ್ ಪ್ರಥಮೋ ದೇವಾನಾಂ ಪ್ರಧಾನಭೂತೋ ಮನಸ್ವಾನ್ ಮನಸ್ವಿನಾಮಗ್ರಗಣ್ಯೋ ದೇವೋ ದ್ಯೋತಮಾನಃ ಸನ್ ಕ್ರತುನಾ ವೃತ್ರವಧಾದಿಲಕ್ಷಣೇನ ಸ್ವಕೀಯೇನ ಕರ್ಮಣಾ ದೇವಾನ್ ಸರ್ವಾನ್ಯಾಗದೇವಾನ್ಪರ್ಯಭೂಷತ್ । ರಕ್ಷಕತ್ವೇನ ಪರ್ಯಗ್ರಹೀತ್ ॥ ಭೂಷ ಅಲಂಕಾರೇ ಭೂವಾದಿಃ । ಲಙಿ ರೂಪಂ ॥ ಯದ್ವಾ ಸರ್ವಾನನ್ಯಾನ್ದೇವಾನ್ಪರ್ಯಭೂಷತ್ ಪರ್ಯಭವತ್ । ಅತ್ಯಕ್ರಾಮತ್ ॥ ಅಸ್ಮಿನ್ಪಕ್ಷೇ ಭವತೇರ್ವ್ಯತ್ಯಯೇನ ಕ್ಸಃ । ಶ್ರ್ಯುಕಃ ಕಿತೀತೀಟ್ಪ್ರತಿಷೇಧಃ ॥ ಯಸ್ಯೇಂದ್ರಸ್ಯ ಶುಷ್ಮಾತ್ ಶರೀರಾತ್ ಬಲಾತ್ ರೋದಸೀ ದ್ಯಾವಾಪೃಥಿವ್ಯಾವಭ್ಯಸೇತಾಂ । ಅಬಿಭೀತಾಂ ॥ ಭ್ಯಸ ಭಯೇ । ಅನುದಾತ್ತೇತ್ । ಭ್ಯಸ ಭಯವೇಪನಯೋರಿತಿ ನೈರುಕ್ತಾಃ । ನಿ- ೩-೨೧ ॥ ಅಭ್ಯಸೇತಾಮವೇಪೇತಾಂ ವಾ । ತಥಾ ಚ ಮಂತ್ರಾಂತರಂ । ಇಮೇ ಚಿತ್ತವ ಮನ್ಯವೇ ವೇಪೇತೇ ಭಿಯಸಾ ಮಹೀ । ೧-೮೦-೧೧ । ಇತಿ । ನೃಮ್ಣಸ್ಯ ಸೇನಾಲಕ್ಷಣಸ್ಯ ಬಲಸ್ಯ ಮಹ್ನಾ ಮಹತ್ತ್ವೇನ ಯುಕ್ತಃ ಸ ಇಂದ್ರೋ ನಾಹಮಿತಿ ॥ ಅತ್ರ ನಿರುಕ್ತಂ । ಯೋ ಜಾಯಮಾನ ಏವ ಪ್ರಥಮೋ ಮನಸ್ವೀ ದೇವೋ ದೇವಾನ್ಕ್ರತುನಾ ಕರ್ಮಣಾ ಪರ್ಯಭವತ್ಪರ್ಯಗೃಹ್ಣಾತ್ಪರ್ಯರಕ್ಷದತ್ಯಕ್ರಾಮದಿತಿ ವಾ ಯಸ್ಯ ಬಲಾದ್ದ್ಯಾವಾಪೃಥಿವ್ಯಾವಪ್ಯಬಿಭೀತಾಂ ನೃಮ್ಣಸ್ಯ ಮಹ್ನಾ ಬಲಸ್ಯ ಮಹತ್ತ್ವೇನ ಸ ಜನಾಸ ಇಂದ್ರ ಇತ್ಯೃಷೇರ್ದೃಷ್ಟಾರ್ಥಸ್ಯ ಪ್ರೀತಿರ್ಭವತ್ಯಾಖ್ಯಾನಸಂಯುಕ್ತಾ । ನಿ- ೧೦-೧೦ । ಇತಿ ॥

## ಪ್ರತಿಪದಾರ್ಥ

**ಜನಾಸಃ**—ಎಲೈ ಜನರೇ । **ಯಃ**—ಯಾವನು । **ಜಾತ ಏವ**—ಉತ್ಪನ್ನನಾದೊಡನೆಯೇ । **ಪ್ರಥಮಃ**—ದೇವತೆಗಳಿಗೆ ಪ್ರಧಾನಭೂತನೂ । **ಮನಸ್ವಾನ್**—ಸ್ಥಿರಮನಸ್ಕನೂ । **ದೇವಃ**—ದ್ಯೋತಮಾನನೂ ಆಗಿ । **ಕ್ರತುನಾ**—ವೃತ್ರವಧಾದಿರೂಪವಾದ ಕರ್ಮದಿಂದ । **ದೇವಾನ್**—ಸಕಲ ದೇವತೆಗಳನ್ನೂ । **ಪರ್ಯಭೂಷತ್**—ಗೌರವಿಸಿ ರಕ್ಷಿಸಿದನೋ (ಮತ್ತು) । **ಯಸ್ಯ**—ಯಾವನ । **ಶುಷ್ಮಾತ್**—ಶರೀರದ ಬಲದಿಂದ । **ರೋದಸೀ**—ದ್ಯಾವಾಪೃಥಿವಿಗಳೆರಡೂ । **ಅಭ್ಯಸೇತಾಂ**—ಭೀತಿಗೊಂಡವೋ । **ನೃಮ್ಣಸ್ಯ**—ಸೇನಾರೂಪವಾದ ಬಲದ । **ಮಹ್ನಾ**—ಮಹತ್ತ್ವದೊಡನೆ ಕೂಡಿದ । **ಸಃ**—ಅವನೇ । **ಇಂದ್ರಃ**—ಇಂದ್ರನು.

## ಭಾವಾರ್ಥ

ಎಲೈ ಜನರೇ, ಯಾವನು ಉತ್ಪನ್ನನಾದೊಡನೆಯೇ ದೇವತೆಗಳಿಗೆ ಪ್ರಧಾನಭೂತನೂ, ಸ್ಥಿರಮನಸ್ಕನೂ, ದ್ಯೋತಮಾನನೂ ಆಗಿ ವೃತ್ರವಧಾದಿರೂಪವಾದ ಕರ್ಮದಿಂದ ಸಕಲ ದೇವತೆಗಳನ್ನೂ ಗೌರವಿಸಿ ರಕ್ಷಿಸಿದನೋ ಮತ್ತು ಯಾವನ ಶರೀರದ ಬಲದಿಂದ ದ್ಯಾವಾಪೃಥಿವಿಗಳೆರಡೂ ಭೀತಿಗೊಂಡವೋ, ಸೇನಾರೂಪವಾದ ಬಲದ ಮಹತ್ತ್ವದೊಡನೆ ಕೂಡಿದ ಅವನೇ ಇಂದ್ರನು

## English Translation

He who as soon as born, is the first (of the deities) ; who has done honour to the gods by his exploits ; he, at whose might heaven and earth are alarmed, and (who is known) by the greatness of his strength, he, men, is Indra.

### ವಿಶೇಷವಿಷಯಗಳು

ಈ ಸೂಕ್ತದ ಪ್ರತಿಯೊಂದು ಋಕ್ಕಿನಲ್ಲಿಯೂ ಇಂದ್ರನ ಒಂದೆರಡು ಗುಣಗಳನ್ನು ಅಥವಾ ಸಾಹಸ ಕಾರ್ಯಗಳನ್ನೂ ವರ್ಣಿಸಿ, ಇಂತಹ ಮಹಾ ಸಾಹಸದ ಕೆಲಸವನ್ನು ಮಾಡಿನವನೇ ಇಂದ್ರನು ಎಂದರೆ ಇಂದ್ರನಲ್ಲದೆ ಇತರರು ಅಂತಹ ಕಾರ್ಯವನ್ನು ಮಾಡಲು ಅಸಮರ್ಥರು, ಇಂದ್ರನು ಮಾತ್ರ ಅಂತಹ ಕೆಲಸವನ್ನು ಮಾಡಲು ಅವನಿಗೆ ಅದ್ಭುತವಾದ ಶಕ್ತಿಸಾಮರ್ಥ್ಯಗಳಿರುವವು ಎಂದು ವರ್ಣಿಸಿದೆ. ಆದ್ದರಿಂದ ಈ ಸೂಕ್ತದ ಋಕ್ಕುಗಳಲ್ಲಿ ಪ್ರತಿಯೊಂದು ಋಕ್ಕಿನ ಕೊನೆಯಲ್ಲಿಯೂ **ಸ ಜನಾಸ ಇಂದ್ರಃ**—ಎಲೈ ಜನರೇ, (ಇಂತಹ ಅದ್ಭುತ ಕಾರ್ಯವನ್ನು ಯಾವನು ಮಾಡಿದನೋ) ಅವನೇ ಇಂದ್ರನು ಎಂದು ಪಲ್ಲವಿಯಂತೆ ಗುಣವರ್ಣನೆ ಇದೆ. ಋ. ಸಂ. ೧–೧೧೨ ನೆಯ **ಈಳೇ ದ್ಯಾವಾಪೃಥಿವೀ** ಎಂಬ ೨೫ ಋಕ್ಕುಗಳಿರುವ ಸೂಕ್ತದಲ್ಲಿಯೂ ಸಹ ಕುತ್ಸ ಆಂಗಿರಸನೆಂಬ ಋಷಿಯು—**ಯಾಭಿರ್ಭರೇ ಕಾರಮಂಶಾಯ ಜಿನ್ವಥಸ್ತಾಭಿರೂಷು ಊತಿಭಿರಶ್ವಿನಾ ಗತಂ** ಎಂದು ಪ್ರತಿಯೊಂದು ಋಕ್ಕಿನಲ್ಲಿಯೂ ಅಶ್ವಿನೀದೇವತೆಗಳ ಸಾಹಸಕೃತ್ಯಗಳನ್ನು ವರ್ಣಿಸಿ **ಯಾಭಿಃ .......ತಾಭಿರೂಷು ಊತಿಭಿರಶ್ವಿನಾಗತಂ**—ಇಂತಹ ಸಾಹಸಕೃತ್ಯಗಳನ್ನೊಳಗೊಂಡ ನಿಮ್ಮ ರಕ್ಷಣೆಗಳಿಂದ ಸಹಿತರಾಗಿ ನಮ್ಮ ಯಜ್ಞಭೂಮಿಗೆ ಬನ್ನಿ ಎಂದು ಅಶ್ವಿನೀದೇವತೆಗಳನ್ನು ಪ್ರಾರ್ಥಿದಾನೆ. ಈ ವಿಧವಾದ ಸೂಕ್ತಗಳು ಋಗ್ವೇದದಲ್ಲಿ ಅನೇಕ ಕಡೆ ಇವೆ.

**ಜನಾಸಃ—ಜನಾ ಹೇ ಅಸುರಾಃ ।** ಎಲೈ ಅಸುರಜನರೇ ಎಂದು ಅಸುರರನ್ನು ಸಂಬೋಧಿಸಿ, ಅವರಿಗೆ ಇಂದ್ರನ ಗುಣಗಳನ್ನು ಒಂದೊಂದಾಗಿ ತಿಳಿಯುವಂತೆ ವರ್ಣಿಸಿ, ಇಂತಹ ಕೆಲಸಗಳನ್ನು ಮಾಡಿದವನೇ ಇಂದ್ರನು, ನಾನಲ್ಲ ಎಂದು ಹೇಳಿ ಅಸುರರ ಸಂಶಯವನ್ನು ನಿವಾರಣೆಮಾಡಲು ಋಷಿಯು ಪ್ರಯತ್ನಿಸಿರುವನು. ಒಂದಾನೊಂದು ಕಾಲದಲ್ಲಿ ಇಂದ್ರನು ಗೃತ್ಸಮದನ ಯಜ್ಞಭೂಮಿಯಲ್ಲಿದ್ದು ಅಸುರರು ತನ್ನನ್ನು ಕೊಲ್ಲಲು ಹೊಂಚು ಕಾಯುತ್ತಿರುವುದನ್ನು ತಿಳಿದು ಗೃತ್ಸಮದಋಷಿಯ ವೇಷದಿಂದ ತಪ್ಪಿಸಿಕೊಂಡು ಹೋದನಂತರ ಅಸುರರು ಇಂದ್ರನಿಗಾಗಿ ಬಹಳ ಹೊತ್ತು ಕಾದಿದ್ದರೂ ಅವನು ಈಚೆಗೆ ಬರದಿರಲು, ನಿಜವಾದ ಗೃತ್ಸಮದನನ್ನೇ ಇಂದ್ರನು ಈ ವೇಷದಲ್ಲಿರಬಹುದೆಂದು ಹಿಡಿದುಕೊಂಡಾಗ ಆ ಅಸುರರ ಸಂಶಯನಿವಾರಣೆಗಾಗಿ (ತಾನು ಇಂದ್ರನಲ್ಲ, ಇಂದ್ರನು ಇಂತಹ ಗುಣವುಳ್ಳವನು ಎಂದು ಇಂದ್ರನ ಗುಣವರ್ಣನೆ ಮಾಡಿ) ಈ ಸೂಕ್ತವನ್ನು ಪಠಿಸಿದನೆಂಬ ವೃತ್ತಾಂತವನ್ನು ನಾವು ಈ ಸೂಕ್ತದ ಪೀಠಿಕಾನುವಾದದಲ್ಲಿ ವಿಸ್ತಾರವಾಗಿ ವಿವರಿಸಿದೇವೆ. (ಪುಟ 642)

**ಯೋ ಜಾತ ಏವ ಪ್ರಥಮೋ ಮನಸ್ವಾನ್ ದೇವೋ ದೇವಾನ್ ಕ್ರತುನಾ ಪರ್ಯಭೂಷತ್**—ಈ ಋಕ್ಕಿನ ಪೂರ್ವಾರ್ಧದಲ್ಲಿರುವ ಈ ವಾಕ್ಯಕ್ಕೆ ಇಂದ್ರನು ಹುಟ್ಟಿದ ಕೂಡಲೇ ದೇವತೆಗಳಿಗೆಲ್ಲಾ ಮುಖಂಡನಾಗಿ ತನ್ನ ಪರಾಕ್ರಮದಿಂದ ಇತರ ದೇವತೆಗಳಿಗೂ ಗೌರವಾರ್ಹನಾದನು ಅಥವಾ ಇತರ ದೇವತೆಗಳಿಗೂ ಗೌರವವನ್ನು ಹೆಚ್ಚಿಸಿದನು, ಅಥವಾ ಇತರ ದೇವತೆಗಳಿಗೆ ಅಲಂಕಾರಪ್ರಾಯನಾದನು ಎಂದಭಿಪ್ರಾಯವು.

**ಪ್ರಥಮಃ**—ಯಾಸ್ಕರು ಪ್ರಥಮಶಬ್ದಕ್ಕೆ—**ಪ್ರಥಮ ಇತಿ ಮುಖ್ಯನಾಮ ಪ್ರತಮೋ ಭವತಿ** (ನಿ. ೨–೨೨) ಎಂದರೆ, ಪ್ರಥಮಶಬ್ದಕ್ಕೆ ಮುಖ್ಯವೆಂದು ಹೆಸರು. ಇಂದ್ರನು ದೇವತೆಗಳಲ್ಲಿ ಮುಖ್ಯನಾದವನು, ದೇವತೆಗಳಿಗೆ ಮುಂದಾಳು, ಮುಖಂಡನು, ನಾಯಕನು ಎಂದರ್ಥವು.

**ಜಾತಃ**—ಸಾಧಾರಣವಾಗಿ ಮನುಷ್ಯರಾಗಲಿ, ದೇವತೆಗಳಾಗಲಿ ಅವರು ದೊಡ್ಡವರಾಗಿ ಮಾಡುವ ಸಾಹಸ ಕೃತ್ಯಗಳಿಂದ ಅಥವಾ ಅವರ ಗುಣಗಳಿಂದ ಅವರು ಮಹತ್ತ್ವವನ್ನು ಪಡೆಯುವರು. ಆದರೆ ಇಂದ್ರನ ವಿಷಯ

ಹಾಗಲ್ಲ. ಅವನು ಹುಟ್ಟಿದ ಕೂಡಲೆ ದೇವತೆಗಳಲ್ಲೆಲ್ಲಾ ಮುಖ್ಯನೂ, ಶ್ರೇಷ್ಠನೂ ಆದನು ಎಂದು ಋಷಿಯು ವರ್ಣಿಸಿದಾನೆ. ಇತರ ಸ್ಥಳಗಳಲ್ಲಿಯೂ ಇದಕ್ಕೆ ಸಮರ್ಥನೆ ಇದೆ. ಋ. ಸಂ. ೩–೪೮, ೪–೧೮ ಎಂಬ ಸೂಕ್ತಗಳಲ್ಲಿ ಇಂದ್ರನ ಜನನ ವಿಷಯವು ಪ್ರಸ್ತಾಪಿಸಲ್ಪಟ್ಟಿದೆ. ಹುಟ್ಟಿದ ತಕ್ಷಣವೇ ಸೂರ್ಯನ ಚಕ್ರವನ್ನು ಚಲಿಸುವಂತೆ ಮಾಡಿದನು (ಋ. ಸಂ. ೧–೧೩೦–೯) ಅವನು ಹುಟ್ಟಿದ ಕೂಡಲೇ ಯೋಧನಾದನು (ಋ. ಸಂ. ೩-೫೧-೮, ೫-೩೦-೫, ೮-೪೫-೪, ೮–೬೬-೧, ೧೦-೧೧೩-೪), ಅವನು ಜನ್ಮಾರಭ್ಯ ಅಪ್ರತಿಹತನು (ಋ. ಸಂ. ೧–೧೦೨–೮, ೧೦-೧೩೩-೨) ಇತ್ಯಾದಿ ಇಂದ್ರಜನನ ವಿಷಯದಲ್ಲಿ ವರ್ಣನೆಗಳಿವೆ

**ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಂ ನೃಮ್ಣಸ್ಯ ಮಹ್ನಾ**—ಈ ವಾಕ್ಯದಲ್ಲಿ ಇಂದ್ರನ ಮಹಾಬಲದ ಮಹಿಮೆಯಿಂದ ದ್ಯಾವಾಪೃಥಿವಿಗಳು ನಡುಗಿದವೆಂದು ಹೇಳಿದೆ. ಶುಷ್ಮಂ ಎಂಬ ಶಬ್ದವು ಬಲನಾಮಗಳಲ್ಲಿಯೂ (ನಿ ೩-೯) ರೋದಸೀ ಎಂಬ ಶಬ್ದವು ದ್ಯಾವಾಪೃಥಿವೀನಾಮಗಳಲ್ಲಿಯೂ (ನಿ. ೩-೧೩) ನೃಮ್ಣ ಶಬ್ದವು ಬಲ (ಮತ್ತು ಧನ) ನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. **ಭ್ಯಸತೇ ರೇಜತೆ ಇತಿ ಭಯವೇಪನಯೋಃ। "ಯಸ್ಯ ಶುಷ್ಮಾದ್ರೋದಸಿ ಅಭ್ಯಸೇತಾಂ," "ರೇಜತೇ ಅಗ್ನೇ ಪೃಥಿವೀ ಮಖೇಭ್ಯಃ" ಇತ್ಯಪಿ ನಿಗಮೌ ಭವತಃ** (ನಿ. ೩-೨೧) ಎಂದು ನಿರ್ವಚನವಿರುವುದರಿಂದ ಅಭ್ಯಸೇತಾಂ ಎಂಬ ಶಬ್ದಕ್ಕೆ **ಅವೇಪೇತಾಂ, ಅಬಿಭೀತಾಂ**- ಭಯದಿಂದ ತತ್ತರಿಸಿ ನಡುಗಿದವು ಎಂದರ್ಥವು. ಇಂದ್ರನ ಅಪಾರವಾದ ಶಕ್ತಿಗೆ ದ್ಯಾವಾಪೃಥಿವಿಗಳು ನಡುಗಿದವೆಂಬ ವಿಷಯದಲ್ಲಿ—

**ತವ ತ್ವಿಷೋ ಜನಿಮನ್ ರೇಜತ ದ್ಯೌ ರೇಜದ್ಭೂಮಿರ್ಭಿಯಸಾ ಸ್ವಸ್ಯ ಮನ್ಯೋಃ।**

(ಋ. ಸಂ. ೪–೧೭–೨)

ಎಂಬ ಋಕ್ಕಿನಲ್ಲಿ—ಇಂದ್ರನ ಜನನ ಕಾಲದಲ್ಲಿ ಅವನ ಕೋಪದ ಭಯದಿಂದ ಸ್ವರ್ಗ ಮತ್ತು ಭೂಮಿಗಳು ನಡುಗಿದವು ಎಂದು ಹೇಳಿದೆ

**ಅಸ್ಯೇದು ಭಿಯಾ ಗಿರಯಶ್ಚ ದೃಳ್ಹಾ ದ್ಯಾವಾ ಚ ಭೂಮಾ ಜನುಷಸ್ತುಜೇತೇ।**

(ಋ. ಸಂ. ೧-೬೧-೧೪)

ಎಂಬ ಋಕ್ಕಿನಲ್ಲಿ ಇಂದ್ರನು ಹುಟ್ಟಿದ ಕೂಡಲೇ ಅವನ ಭಯಕ್ಕೆ ಅಚಲವಾದ ಪರ್ವತಗಳು, ಸ್ವರ್ಗ ಮತ್ತು ಭೂಮಿಗಳು ಕಂಪಿಸಿದವು ಎಂದಿದೆ

**ಇಮೇ ಚಿತ್ತ್ರವ ಮನ್ಯವೇ ವೇಪೇತೇ ಭಿಯಸಾ ಮಹೀ।**

(ಋ. ಸಂ. ೮-೭೦-೧೧)

ಎಂಬ ಋಕ್ಕಿನಲ್ಲಿ ಭೂಮಿ ಮತ್ತು ಸ್ವರ್ಗಲೋಕಗಳು ನಿನ್ನ (ಇಂದ್ರನ) ಕೋಪಕ್ಕೆ ಹೆದರಿ ನಡುಗಿದವು ಎಂದು ಹೇಳಿದೆ

**ಅತಶ್ಚಿದಿಂದ್ರಾದಭಯಂತ ದೇವಾ ವಿಶ್ವಾ ಅಪೋ ಅಜಯದ್ದಾಸಪತ್ನೀಃ।**

(ಋ. ಸಂ. ೫–೩೦–೫)

ಎಂಬಲ್ಲಿ ದೇವತೆಗಳೆಲ್ಲಾ ಇಂದ್ರನಿಗೆ ಹೆದರಿಕೊಂಡರು ಎಂದಿದೆ. ಈರೀತಿ ಇಂದ್ರನು ಹುಟ್ಟಿದ ಕೂಡಲೇ ಅವನ ಶಕ್ತಿಪರಾಕ್ರಮಗಳು ದೇವತೆಗಳನ್ನೂ, ದ್ಯಾವಾಪೃಥಿವಿಗಳನ್ನೂ ಭಯದಿಂದ ನಡುಗಿಸುವಂತೆ ಅತಿಶಯವಾಗಿದ್ದವು

ಎಂದು ಅನೇಕಕಡೆ ಹೇಳಿದೆ. ಇಂತಹ ಅಪರಿಮಿತಪರಾಕ್ರಮಶಾಲಿಯಾದವನು ಇಂದ್ರನೇ ಹೊರತು ನಾನಲ್ಲ ಎಂದು ಗೃತ್ಸಮದಋಷಿಯು ತನ್ನನ್ನು ಕೊಲ್ಲುವುದಕ್ಕೆ ಬಂದ ಅಸುರರನ್ನು ಸಮಾಧಾನಮಾಡಿದನು.

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಈರೀತಿ ಹೇಳಿರುವರು—

ಯೋ ಜಾಯಮಾನ ಏವ ಪ್ರಥಮೋ ಮನಸ್ವೀ ದೇವೋ ದೇವಾನ್ ಕ್ರತುನಾ ಕರ್ಮಣಾ ಪರ್ಯಭವತ್ ಪರ್ಯಗೃಹ್ಣಾತ್ ಪರ್ಯರಕ್ಷದತ್ಯಕ್ರಾಮದಿತಿ ವಾ । ಯಸ್ಯ ಬಲಾದ್ದ್ಯಾವಾ-ಪೃಥಿವ್ಯಾವಪ್ಯಬಿಭೀತಾಂ ನೃಮ್ಣಸ್ಯ ಮಹ್ನಾ ಬಲಸ್ಯ ಮಹತ್ತ್ವೇನ ಸ ಜನಾಸ ಇಂದ್ರ ಇತಿ । ಋಷೇರ್ದೃಷ್ಟಾರ್ಥಸ್ಯ ಪ್ರೀತಿರ್ಭವತ್ಯಾಖ್ಯಾನಸಂಯುಕ್ತಾ ॥

(ನಿ. ೧೦-೧೦)

ಈ ನಿರ್ವಚನಕ್ಕೆ ದುರ್ಗಾಚಾರ್ಯರು ಬರೆದಿರುವ ವ್ಯಾಖ್ಯಾನವು ಅತಿವಿಶದವಾಗಿರುವುದರಿಂದ ಅದನ್ನು ಇಲ್ಲಿ ತಿಳಿಸಿ ಯಾಸ್ಕರ ಅಭಿಪ್ರಾಯವನ್ನು ವಿವರಿಸಿರುವೆವು.

ಯೋ ಜಾತ ಏವ ಜಾತಮಾತ್ರ ಏವ ಪ್ರಥಮಃ ಮುಖ್ಯಃ ಸರ್ವಭೂತಾನಾಂ ಪ್ರತಿಮುಖ್ಯತಾಂ ಸಂಪೇದೇ । ಮನಸ್ವೀ ಚ ಮೇಧಾವೀ, ಅನ್ಯೇ ಹಿ ಕಾಲೇನ ಮುಖ್ಯಾಃ ಸಂಪದ್ಯಂತೇ ಮೇಧಾವಿನಶ್ಚ । ದೇವೋ ದೇವಾನ್ ಕ್ರತುನಾ ಪರ್ಯಭೂಷತ್ । ಸತ್ಯಪಿ ದೇವತ್ವಾವಿಶೇಷೇ ಇತರಾನ್ ದೇವಾನ್ ಕ್ರತುನಾ ಕರ್ಮಣಾ ಪರ್ಯಭೂಷತ್ ಪರ್ಯಗೃಹ್ಣಾತ್, ಪರಿಗೃಹೀತ-ವಾನ್ ಸ್ವಾಮಿತ್ವೇನ ಪರ್ಯರಕ್ಷದ್ವಾ) ಮುಖ್ಯತ್ವಾತ್ ಅತ್ಯಕ್ರಾಮದ್ವಾ ಪ್ರಭಾವೇಣ । ಯಸ್ಯ ಚ ಶುಷ್ಮಾತ್ ಶಾರೀರಾದ್ಬಲಾತ್ ರೋದಸೀ ದ್ಯಾವಾಪೃಥಿವ್ಯಾವಪಿ ಅಭ್ಯಸೇತಾಮಬಿಭೀತಾಂ। ನೃಮ್ಣಸ್ಯ ಮಹ್ನಾ ಬಲಸ್ಯ ಸೇನಾಲಕ್ಷಣಸ್ಯ ಮಹತ್ತ್ವೇನ ಅತಿಮಹದಸಹ್ಯಮಸ್ಯ ಬಲಮ-ವಶ್ಯಮಯಮಾವಾಂ ಸಾದಯಿಷ್ಯತೀತ್ಯೇವಮತಿಮಹತ್ವಾನ್ನೇತೇ ದ್ಯಾವಾಪೃಥಿವ್ಯಾವಬಿ-ಭೀತಾಂ ಯಸ್ಯ ಶುಷ್ಮಾತ್ । ಜನಾಸಃ ಹೇ ಅಸುರಜನಾಃ ಸ ಇಂದ್ರಃ ನಾಹಮಿಂದ್ರಃ ಬ್ರಾಹ್ಮಣೋಽಹಂ, ತತ್ಪ್ರಸಾದಾದೇವಾಪ್ತತದ್ರೂಪ ಇತಿ । ಋಷೇರ್ದೃಷ್ಟಾರ್ಥಸ್ಯ ಅನುಭೂ-ತೇಂದ್ರವೈಭವಸ್ಯೇಂದ್ರವಯಸ್ಯಸ್ಯ ಗೃತ್ಸಮದಸ್ಯ ಇಂದ್ರಂ ಪ್ರತಿ ಪ್ರೀತಿಸ್ತುಷ್ಟಿರ್ಭವತ್ಯಾಖ್ಯಾನ-ಸಂಯುಕ್ತಾ ಆಖ್ಯಾನಸಂಬಂಧಾತ್। ಅತಶ್ಚ ದರ್ಶಯತಿ ಮಂತ್ರಾಣಾಮೈತಿಹಾಸಿಕೋಽಪ್ಯರ್ಥ ಉಪೇಕ್ಷಿತವ್ಯೋಽಸಾವಪಿ ತೇಷಾಂ ವಿಷಯ ಇತಿ ॥

(ನಿ ೧೦-೧೦ ದು. ವ್ಯಾಖ್ಯಾ.)

ಇದರ ಮುಖ್ಯಾಭಿಪ್ರಾಯವು-ಇಂದ್ರನು ಹುಟ್ಟಿದ ಕೂಡಲೆ ಸಮಸ್ತ ಪ್ರಾಣಿಗಳ (ಮತ್ತು ದೇವತೆಗಳ) ಮುಖ್ಯತ್ವವನ್ನು ಹೊಂದಿದನು ಎಂದರೆ ಎಲ್ಲರಿಗೂ ಶ್ರೇಷ್ಠನಾದ ಮುಖಂಡನಾದನು. ಈ ಇಂದ್ರನು ಬಹಳ ಮೇಧಾವಿಯು (ಬುದ್ಧಿವಂತನು) ಬುದ್ಧಿವಂತರಾದ ಇತರ ಪುರುಷರು ಹುಟ್ಟಿ ಕೆಲವು ಕಾಲಾನಂತರ ಶ್ರೇಷ್ಠಸ್ಥಾನವನ್ನು ಪಡೆಯುವರು. ಆದರೆ ಇಂದ್ರನು ಹುಟ್ಟಿದ ಕೂಡಲೆ ಶ್ರೇಷ್ಠಸ್ಥಾನವನ್ನು ಗಳಿಸಿದನು. ಈ ಇಂದ್ರನು ದೇವತೆಯಾಗಿ ಜನಿಸಿದರೂ ತನ್ನ ಸಾಹಸೋದ್ಯಮಗಳಿಂದ ಇತರ ದೇವತೆಗಳಿಗೆ ಮುಖ್ಯನೂ, ಸ್ವಾಮಿಯೂ ಆಗಿರುವನೆಂದು ಸ್ವೀಕಾರಯೋಗ್ಯ ನಾದನು. ಅಷ್ಟೇಅಲ್ಲ, ತನ್ನ ಪ್ರಭಾವದಿಂದ ಇತರ ಎಲ್ಲಾ ದೇವತೆಗಳನ್ನು ಶಕ್ತಿಸಾಹಸಗಳಲ್ಲಿ ಮೀರಿಸಿದನು.

ಇಂತಹ ಇಂದ್ರನ ಶರೀರಸಂಬಂಧವಾದ ಮಹಾಸಾಮರ್ಥ್ಯಕ್ಕೆ ಹೆದರಿ ದ್ಯಾವಾಪೃಥಿವಿಗಳು (ಸ್ವರ್ಗಭೂಮಿಗಳು) ನಡುಗಿದವು. ಏಕೆಂದರೆ, ಈ ಇಂದ್ರನು ತನ್ನ ಸೇನಾಸಹಿತವಾದ ಮಹಾಪರಾಕ್ರಮದ ಮಹಿಮೆಯಿಂದ ತಮ್ಮನ್ನು (ದ್ಯಾವಾಪೃಥಿವಿಗಳನ್ನು) ಎಲ್ಲಿ ನಾಶಮಾಡುವನೋ ಎಂದು ಹೆದರಿ ನಡುಗಿದವು. ಆದ್ದರಿಂದ ಎಲೈ ಅಸುರಜನರೇ! ಇಂತಹ ಮಾಹಾತ್ಮ್ಯೆಯುಳ್ಳವನೇ ಇಂದ್ರನು. ನಾನಲ್ಲ, ನಾನು ಒಬ್ಬ ಬಡಬ್ರಾಹ್ಮಣನು ಮಾತ್ರ. ಆ ಇಂದ್ರನ ಅನುಗ್ರಹದಿಂದ ಅವನಂತೆ ರೂಪವನ್ನು ಧರಿಸಿರುವೆನು ಎಂದು ಮಂತ್ರದ್ರಷ್ಟೃವಾದ ಗೃತ್ಸಮದಋಷಿಗೆ ಇಂದ್ರನ ಮೇಲಿರುವ ಅತಿಶಯವಾದ ಪ್ರೀತಿಯನ್ನು ಈ ಆಖ್ಯಾನವು ತಿಳಿಸುವುದು. ಈ ಉಪಾಖ್ಯಾನವು ಐತಿಹಾಸಿಕವಾದ್ದರಿಂದ ಈ ವಿಧವಾದ ಅರ್ಥವೇ ಮಂತ್ರಗಳಿಗಿರುವುದೆಂದು ಹೇಳಲು ಸಾಧ್ಯವಿಲ್ಲವಾದ್ದರಿಂದ ಈ ಉಪಾಖ್ಯಾನದಲ್ಲಿರುವ ವಿಷಯವನ್ನು ಕೆಲವರು ಉಪೇಕ್ಷಿಸುವರು, ಎಂದು ಮುಖ್ಯಾಭಿಪ್ರಾಯವು.

---

ಸಂಹಿತಾಪಾಠಃ

ಯಃ ಪೃಥಿವೀಂ ವ್ಯಥಮಾನಾಮದೃಂಹದ್ಯಃ ಪರ್ವತಾನ್ಪ್ರಕುಪಿತಾಁ ಅರಮ್ಣಾತ್ ।
ಯೋ ಅಂತರಿಕ್ಷಂ ವಿಮಮೇ ವರೀಯೋ ಯೋ ದ್ಯಾಮಸ್ತಭ್ನಾತ್ಸ ಜನಾಸ ಇಂದ್ರಃ ॥ ೨ ॥

ಪದಪಾಠಃ

ಯಃ । ಪೃಥಿವೀಂ । ವ್ಯಥಮಾನಾಂ । ಅದೃಂಹತ್ । ಯಃ । ಪರ್ವತಾನ್ । ಪ್ರಕುಪಿತಾನ್ । ಅರಮ್ಣಾತ್ ।
ಯಃ । ಅಂತರಿಕ್ಷಂ । ವಿಮಮೇ । ವರೀಯಃ । ಯಃ । ದ್ಯಾಂ । ಅಸ್ತಭ್ನಾತ್ । ಸಃ । ಜನಾಸಃ । ಇಂದ್ರಃ॥

ಸಾಯಣಭಾಷ್ಯಂ

ಹೇ ಜನಾಃ ಯ ಇಂದ್ರೋ ವ್ಯಥಮಾನಾಂ ಚಲಂತೀಂ ಪೃಥಿವೀಮದೃಂಹತ್ । ಶರ್ಕರಾದಿಭಿರ್ದೃಢಾಮಕರೋತ್ ॥ ದೃಹ ದೃಹಿ ವೃದ್ಧೌ ॥ ಯಶ್ಚ ಪ್ರಕುಪಿತಾನ್ ಇತಸ್ತತಶ್ಚಲಿತಾನ್ಪಕ್ಷಯುಕ್ತಾನ್ಪರ್ವತಾನರಮ್ಣಾತ್ । ನಿಯಮಿತವಾನ್। ಸ್ವೇ ಸ್ವೇ ಸ್ಥಾನೇ ಸ್ಥಾಪಿತವಾನ್ ॥ ಅರಮ್ಣಾತ್ ರಮು ಕ್ರೀಡಾಯಾಂ। ಅಂತರ್ಭಾವಿತಣ್ಯರ್ಥಸ್ಯ ವ್ಯತ್ಯಯೇನ ಶ್ನಾಪ್ರತ್ಯಯಃ ॥ ಯಶ್ಚ ವರೀಯ ಉರುತಮಮಂತರಿಕ್ಷಂ ವಿಮಮೇ । ನಿರ್ಮಮೇ । ವಿಸ್ತೀರ್ಣಂ ಚಕಾರೇತ್ಯರ್ಥಃ । ಯಶ್ಚ ದ್ಯಾಂ ದಿವಮಸ್ತಭ್ನಾತ್ । ಸ್ತಂಭನಿರುದ್ಧಾಮಕರೋತ್ ॥ ಸ್ತಂಭು ರೋಧನ ಇತಿ ಸೌತ್ರೋ ಧಾತುಃ ॥ ಸ ಏವೇಂದ್ರೋ ನಾಹಮಿತಿ ॥

ಪ್ರತಿಪದಾರ್ಥ

ಜನಾಸಃ—ಎಲೈ ಜನರೇ । ಯಃ—ಯಾವನು । ವ್ಯಥಮಾನಾಂ—ಅಲುಗಾಡುತ್ತಿದ್ದ । ಪೃಥಿವೀಂ—ಪೃಥಿವಿಯನ್ನು । ಅದೃಂಹತ್—ದೃಢವಾಗಿ ನಿಲ್ಲುವಂತೆ ಮಾಡಿದನೋ । ಯಃ—ಯಾವನು । ಪ್ರಕುಪಿತಾನ್—

ರೆಕ್ಕೆಗಳೊಡನೆ ಸರ್ವತ್ರ ಸಂಚರಿಸುತ್ತಿದ್ದ । **ಪರ್ವತಾನ್**—ಪರ್ವತಗಳನ್ನು । **ಅರಮ್ಣಾತ್**—ತನ್ನ ನಿಯಮನಕ್ಕೆ ಬಾಗಿ ಸ್ಥಿರವಾಗಿರುವಂತೆ ಮಾಡಿದನೋ । **ಯಃ**—ಯಾವನು । **ವರೀಯಃ**—ವಿಸ್ತೃತವಾದ । **ಅಂತರಿಕ್ಷಂ**—ಅಂತರಿಕ್ಷವನ್ನು । **ವಿಮಮೇ**—ನಿರ್ಮಿಸಿದನೋ । **ಯಃ** ಯಾವನು । **ದ್ಯಾಂ**—ದ್ಯುಲೋಕವನ್ನು । **ಅಸ್ತಭ್ನಾತ್**—ತಡೆದು ನಿಲ್ಲಿಸಿದನೋ । **ಸಃ**—ಅವನೇ । **ಇಂದ್ರಃ**—ಇಂದ್ರನು.

**ಭಾವಾರ್ಥ**

ಎಲೈ ಜನರೇ, ಯಾವನು ಅಲುಗಾದುತ್ತಿದ್ದ ಪೃಥಿವಿಯನ್ನು ದೃಢವಾಗಿ ನಿಲ್ಲುವಂತೆ ಮಾಡಿದನೋ, ಯಾವನು ರೆಕ್ಕೆಗಳೊಡನೆ ಸರ್ವತ್ರ ಸಂಚರಿಸುತ್ತಿದ್ದ ಪರ್ವತಗಳನ್ನು ತನ್ನ ನಿಯಮನಕ್ಕೆ ಬಾಗಿ ಸ್ಥಿರವಾಗಿರುವಂತೆ ಮಾಡಿದನೋ, ಯಾಹನು ವಿಸ್ತೃತವಾದ ಅಂತರಿಕ್ಷವನ್ನು ನಿರ್ಮಿಸಿದನೋ, ಯಾವನು ದ್ಯುಲೋಕವನ್ನು ತಡೆದು ನಿಲ್ಲಿಸಿದನೋ, ಅವನೇ ಇಂದ್ರನು.

## English Translation

He, who fixed firm the moving earth; who tranquillized the incensed mountains; who spread the spacious firmament; who consolidated the heaven; he, men, is Indra.

**ವಿಶೇಷವಿಷಯಗಳು**

ಈ ಋಕ್ಕಿನಲ್ಲಿ ಇಂದ್ರನ ನಾಲ್ಕು ಸಾಹಸಕಾರ್ಯಗಳು ಉಕ್ತವಾಗಿವೆ. ಇಂದ್ರನು ಭೂಮಿಯನು ಅಲ್ಲಾಡದಿರುವಂತೆ ದೃಢವಾಗಿ ಸ್ಥಾಪಿಸಿದನು; ಕೋಪದಿಂದ ಕೂಡಿದ್ದ ಪರ್ವತಗಳ ದುಷ್ಕೃತ್ಯಗಳನ್ನು ಶಮನಮಾಡಿದನು; ವಿಸ್ತಾರವಾದ ಅಂತರಿಕ್ಷವನ್ನು ನಿರ್ಮಿಸಿದನು; ಸ್ವರ್ಗವನ್ನು (ಕೆಳಕ್ಕೆ ಬೀಳದಿರುವಂತೆ) ಘಟ್ಟಿಯಾಗಿರುವಂತೆ ಸ್ಥಾಪಿಸಿದನು ಎಂಬ ಈ ನಾಲ್ಕು ವಿಷಯುಗಳ ವರ್ಣನೆಗಳಿವೆ.

**ಯಃ ಪೃಥಿವೀಂ ವ್ಯಥಮಾನಾಂ ಅದೃಂಹತ್**—ಇಂದ್ರನು ಅಲ್ಲಾಡುತ್ತಿದ್ದ ಭೂಮಿಯನ್ನು ಚಲಿಸದಂತೆ ಎಂದರೆ ಅಲುಗಾಡದೆ ದೃಢವಾಗಿ ಒಂದುಕಡೆ ನಿಂತಿರುವಂತೆ ಮಾಡಿದನು. ಭೂಮಿಯು ಅತ್ತಿತ್ತ ಅಲುಗಾಡದೆ ಯಾವಾಗಲೂ ಒಂದೇ ಸ್ಥಳದಲ್ಲಿ ದೃಢವಾಗಿ ನಿಂತಿರುವುದಾದರೂ ಆರೀತಿ ಇರುವುದು ಇಂದ್ರನ ಶಕ್ತಿಯಿಂದಲೇ ಎಂದು ಋಷಿಯು ವರ್ಣಿಸಿರುವನು.

**ಯಃ ಪರ್ವತಾನ್ ಪ್ರಕುಪಿತಾನ್ ಅರಮ್ಣಾತ್**—ಪರ್ವತಗಳು ಕೋಪಗೊಂಡು ಒಂದುಕಡೆ ಸ್ಥಿರವಾಗಿ ನಿಲ್ಲದೆ ಇತ್ತಲಿಂದತ್ತ ತಮ್ಮ ರೆಕ್ಕೆಗಳ ಸಹಾಯದಿಂದ ಸಂಚರಿಸುವುದನ್ನು ಇಂದ್ರನು ತಡೆದು ಅವುಗಳ ರೆಕ್ಕೆಗಳನ್ನು ಕತ್ತರಿಸಿ ಆ ಪರ್ವತಗಳನ್ನು ಸ್ಥಿರವಾಗಿ ಒಂದೆಡೆಯೇ ನೆಲಸಿರುವಂತೆ ನಿಯಮಕ್ಕೊಳಪಡಿಸಿದನು ಎಂದು ಭಾಷ್ಯಕಾರರು ಅರ್ಥವಿವರಣೆಮಾಡಿರುವರು. ಪೂರ್ವದಲ್ಲಿ ಪರ್ವತಗಳಿಗೆ ರೆಕ್ಕೆಗಳಿದ್ದವೆಂದೂ ಅವು ಹಾರಾಡುತ್ತಾ ಗ್ರಾಮ, ನಗರ ಮುಂತಾದವುಗಳಮೇಲೆ ಕುಳಿತು ಅವುಗಳನ್ನು ನಾಶಮಾಡುತ್ತಿದ್ದುದರಿಂದ ಆ ಪರ್ವತಗಳ ರೆಕ್ಕೆಗಳನ್ನು ಇಂದ್ರನು ತನ್ನ ವಜ್ರಾಯುಧದಿಂದ ಕತ್ತರಿಸಿದನೆಂದೂ ಪುರಾಣಾದಿಗಳಲ್ಲಿ ಹೇಳಿದೆ. ಅದನ್ನೇ ಇಲ್ಲಿ ಭಾಷ್ಯಕಾರರು ವಿವರಿಸಿದಾರೆ. ಆದರೆ ಪರ್ವತಗಳಿಗೆ ರೆಕ್ಕೆಗಳಿರುವ ವಿಷಯವು ಋಗ್ವೇದದಲ್ಲಿ ಎಲ್ಲಿಯೂ ಪ್ರಸ್ತಾಪಿಸಲ್ಪಟ್ಟಂತೆ

ಕಾಣಬರುವುದಿಲ್ಲ. ಆದ್ದರಿಂದ ಈ ವಾಕ್ಯಕ್ಕೆ ಭಾಷ್ಯಕಾರರು ಹೇಳಿರುವ ಈ ವಿಧವಾದ ಅರ್ಥವನ್ನು ಸ್ವೀಕಾರ ಮಾಡುವ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಈ ವಾಕ್ಯದಲ್ಲಿ ಪ್ರಕುಪಿತಾನ್ ಪರ್ವತಾನ್—ಕೋಪದಿಂದ ಕೂಡಿದ ಪರ್ವತಗಳನ್ನು ಎಂದು ಹೇಳಿರುವುದರಿಂದ ಇಲ್ಲಿ ಬೆಂಕಿಯನ್ನು ಕಾರುತ್ತಿರುವ ಅಗ್ನಿಪರ್ವತಗಳು (ಜ್ವಾಲಾಮುಖಿಗಳು) ಉಕ್ತವಾಗಿರಬಹುದೆಂದು ಕೆಲವರು ಅಭಿಪ್ರಾಯಪಡುವರು. ಅಥವಾ ಪರ್ವತಶಬ್ದಕ್ಕೆ ಮೇಘವೆಂಬ ಅರ್ಥವಿರುವುದರಿಂದ (ನಿ. ೧-೧೧) ಕೋಪದಿಂದ ಗರ್ಜನೆಮಾಡುತ್ತಿರುವ (ಗುಡುಗುತ್ತಿರುವ) ಮೇಘಗಳನ್ನು ಇಂದ್ರನು ತನ್ನ ವಜ್ರಾಯುಧದಿಂದ ( ಮಿಂಚಿನಿಂದ ) ಹೊಡೆದು ಶಮನಮಾಡಿದನೆಂದು ಋಷಿಯ ಅಭಿಮತವಾಗಿರಬಹುದೆಂದೂ ಕೆಲವರ ಅಭಿಪ್ರಾಯವು.

**ಯಃ ಅಂತರಿಕ್ಷಂ ವಿಮಮೇ ವರೀಯಃ**—ಇಂದ್ರನು ವಿಸ್ತಾರವಾದ ಅಂತರಿಕ್ಷವನ್ನು ನಿರ್ಮಿಸಿದನು ಅಥವಾ ಅಂತರಿಕ್ಷವನ್ನು ಅತ್ಯಂತ ವಿಸ್ತಾರವಾಗಿರುವಂತೆ ಮಾಡಿದನು ಎಂದಭಿಪ್ರಾಯವು.

**ಯಃ ದ್ಯಾಂ ಅಸ್ತಭ್ನಾತ್**—ಇಂದ್ರನು ಸ್ವರ್ಗವನ್ನು (ಕೆಳಕ್ಕೆ ಬೀಳದಂತೆ) ಸ್ತಂಭಿಸಿದನು (ತಡೆಗಟ್ಟಿದನು) ಸ್ವರ್ಗವು ಅಂತರಿಕ್ಷದಲ್ಲಿ ಬಹಳ ಮೇಲೆ ಇರುವುದೆಂದು ಪ್ರಸಿದ್ಧಿ ಇರುವುದರಿಂದ ಹಾಗೆ ಇರುವ ಸ್ವರ್ಗವು ಯಾವ ಆಧಾರವೂ (ಸ್ತಂಭಾದಿಗಳ ಆಶ್ರಯವಿಲ್ಲದೆ) ಇಲ್ಲದೆ ನಿಂತಿರುವಂತೆಯೂ ಮತ್ತು ಅದು ಕೆಳಕ್ಕೆ ಭೂಮಿಯ ಮೇಲೆ ಬೀಳದಂತೆ ತಡೆಗಟ್ಟಿದನೆಂದೂ ಇಲ್ಲಿ ವರ್ಣಿಸಿದೆ. ಸಾಧಾರಣವಾಗಿ ಲೋಕದಲ್ಲಿ ಗೃಹಾದಿಗಳನ್ನು ನಿರ್ಮಿಸುವಾಗ ಮೇಲಿನ ಆಚ್ಛಾದನೆಯು ಅಥವಾ ಮಹಡಿ ಮುಂತಾದ ಭಾಗವು ಕೆಳಗೆ ಬೀಳದಂತೆ ಸ್ಥಿರವಾಗಿರಲು ಕಂಭಗಳನ್ನು ಇಟ್ಟು ಅದರ ಮೇಲೆ ಭಾರವು ನಿಲ್ಲುವಂತೆ ಮಾಡುವುದು ಪ್ರಸಿದ್ಧವಾಗಿದೆ. ಆದರೆ ಇಲ್ಲಿ ಅಂತರಿಕ್ಷದಲ್ಲಿ ಯಾವ ಆಧಾರವೂ ( ಕಂಭಗಳೂ) ಇಲ್ಲದೆ ಸ್ವರ್ಗವು ಕೆಳಕ್ಕೆ ಬೀಳದಂತೆ ಎಂದರೆ ಸ್ಥಿರವಾಗಿ ನಿಲ್ಲುವಂತೆ ಮಾಡಿರುವ ಇಂದ್ರನ ಮಹಿಮೆಯು ಸ್ತುತ್ಯವಾದುದು ಎಂದು ಋಷಿಯು ವರ್ಣಿಸಿರುವನು.

ಈ ಋಕ್ಕಿನ ಪ್ರತಿಪಾದದಲ್ಲಿಯೂ ಯಃ ಎಂಬ ಶಬ್ದದ (ಯಚ್ಛಬ್ದದ) ಪ್ರಯೋಗವೂ ಕೊನೆಯ ಪಾದದಲ್ಲಿ ಸಃ ಎಂಬ ಪದದ (ತಚ್ಛಬ್ದದ) ಪ್ರಯೋಗವೂ, ಯಾವ ಪುರುಷನು ಇಂತಹ ಅಸಾಧಾರಣವಾದ ಕಾರ್ಯವನ್ನು ನಿರ್ವಹಿಸಿರುವನೋ ಅಂತಹ ಪುರುಷನೇ ಇಂದ್ರನು ಎಂಬ ಅಭಿಪ್ರಾಯವನ್ನು ಒತ್ತಿ ಹೇಳುವುದಾಗಿದೆ.

---

ಸಂಹಿತಾಪಾಠಃ

**ಯೋ ಹತ್ವಾಹಿಮರಿಣಾತ್ಸಪ್ತ ಸಿಂಧೂನ್ಯೋ ಗಾ ಉದಾಜದಪಧಾ ವಲಸ್ಯ।**

**ಯೋ ಅಶ್ಮನೋರಂತರಗ್ನಿಂ ಜಜಾನ ಸಂವೃಕ್ಸಮತ್ಸು ಸ ಜನಾಸ ಇಂದ್ರಃ ॥**

ಪದಪಾಠಃ

**ಯಃ । ಹತ್ವಾ । ಅಹಿಂ । ಅರಿಣಾತ್ । ಸಪ್ತ । ಸಿಂಧೂನ್ । ಯಃ । ಗಾಃ । ಉತ್ऽಆಜತ್ । ಅಪऽಧಾ । ವಲಸ್ಯ ।**

ಯಃ । ಅಶ್ಮನೋಃ । ಅಂತಃ । ಅಗ್ನಿಂ । ಜಜಾನ । ಸಂಽವೃಕ್ । ಸಮತ್ಽಸು । ಸಃ । ಜನಾಸಃ ।
ಇಂದ್ರಃ ॥ ೩ ॥

ಸಾಯಣಭಾಷ್ಯಂ

ಯೋಽಹಿಂ ಮೇಘಂ ಹತ್ವಾ ಮೇಘಹನನಂ ಕೃತ್ವಾ ಸಪ್ತ ಸರ್ಪಣಶೀಲಾಃ ಸಿಂಧೂನ್ ಸ್ಯಂದನಶೀಲಾ ಅಪೋಽರಿಣಾತ್ । ಪ್ರೈರಯತ್ । ಯದ್ವಾ ಸಪ್ತ ಗಂಗಾಯಮುನಾದ್ಯಾ ಮುಖ್ಯಾ ನದೀರರಿಣಾತ್ ॥ ರೀಙ್ ಸ್ರವಣೇ ಕ್ರ್ಯಾದಿಃ ॥ ಯಶ್ಚ ವಲಸ್ಯ ವಲನಾಮಕಸ್ಯಾಸುರಸ್ಯಾಪಧಾ ತತ್ಕರ್ತೃಕಾನ್ನಿರೋಧಾನ್ನಿರುದ್ಧಾ ಗಾ ಉದಾಜತ್ । ನಿರಗಮಯತ್ ॥ ಅಪಧಾ । ಅಪಪೂರ್ವಾದ್ದಧಾತೇರಾತಶ್ಚೋಪಸರ್ಗೇ । ಪಾ. ೩-೩-೧೦೬ । ಇತಿ ಭಾವೇಽಙ್ಪ್ರತ್ಯಯಃ । ಸುಪಾಂ ಸುಲುಗಿತಿ ಪಂಚಮ್ಯಾ ಆಕಾರಃ ॥ ಯಶ್ಚಾಶ್ಮನೋಃ । ಅಶ್ನುತೇ ವ್ಯಾಪ್ನೋತ್ಯಂತರಿಕ್ಷಮಿತ್ಯಶ್ಮಾ ಮೇಘಃ ॥ ಅತ್ಯಂತಮೃದುರೂಪಯೋರ್ಮೇಘಯೋರಂತರ್ಮಧ್ಯೇ ವೈದ್ಯುತಮಗ್ನಿಂ ಜಜಾನ । ಉತ್ಪಾದಯಾಮಾಸ । ಯಶ್ಚ ಸಮತ್ಸು । ಸಂಭಕ್ಷಯಂತಿ ಯೋದ್ಧ್ರೂಣಾಮಾಯೂಂಷೀತಿ ಸಮದಃ ಸಂಗ್ರಾಮಾಃ । ತೇಷು ಸಂವೃಕ್ ಭವತಿ ॥ ವೃಣಕ್ತೇರ್ಹಿಂಸಾರ್ಥಸ್ಯ ಕ್ವಿಪಿ ರೂಪಂ ॥ ಸ ಇಂದ್ರೋ ನಾಹಮಿತಿ ॥

ಪ್ರತಿಪದಾರ್ಥ

ಜನಾಸಃ—ಎಲೈ ಜನರೇ । ಯಃ—ಯಾವನು । ಅಹಿಂ—ಮೇಘವನ್ನು । ಹತ್ವಾ—ಹನನಮಾಡಿ । ಸಪ್ತ—ಸಪ್ತಸಂಖ್ಯಾಕವೂ । ಸಿಂಧೂನ್—ಪ್ರವಹಿಸತಕ್ಕವೂ ಆದ ಉದಕಗಳನ್ನು (ಗಂಗಾದಿ ನದಿಗಳನ್ನು) । ಅರಿಣಾತ್—ಬಿಡಿಸಿ ಪ್ರವಹಿಸುವಂತೆ ಮಾಡಿದನೋ । ಯಃ—ಯಾವನು । ವಲಸ್ಯ—ವಲನೆಂಬ ಅಸುರನ । ಅಪಧಾ—ತಡೆಯಲ್ಲಿ ಸಿಕ್ಕಿದ । ಗಾಃ—ಗೋವುಗಳನ್ನು । ಉದಾಜತ್—ಬಿಡಿಸಿದನೋ । ಯಃ—ಯಾವನು । ಅಶ್ಮನೋಃ—ಮೇಘಗಳ । ಅಂತಃ—ಮಧ್ಯಪ್ರದೇಶದಲ್ಲಿ । ಅಗ್ನಿಂ—ವಿದ್ಯುದ್ರೂಪದ ಅಗ್ನಿಯನ್ನು । ಜಜಾನ—ಸೃಷ್ಟಿಸಿದನೋ (ಮತ್ತು) । ಸಮತ್ಸು—ಸಂಗ್ರಾಮಗಳಲ್ಲಿ । ಸಂವೃಕ್—ಅಪ್ರತಿಹತನಾಗಿರುತ್ತಾನೆಯೋ । ಸಃ—ಅವನೇ । ಇಂದ್ರಃ—ಇಂದ್ರನು.

ಭಾವಾರ್ಥ

ಎಲೈ ಜನರೇ, ಯಾವನು ಮೇಘವನ್ನು ಹನನಮಾಡಿ ಸಪ್ತಸಂಖ್ಯಾಕವೂ ಪ್ರವಹಿಸತಕ್ಕವೂ ಆದ ಗಂಗಾದಿ ನದಿಗಳನ್ನು ಪ್ರವಹಿಸುವಂತೆ ಮಾಡಿದನೋ, ಯಾವನು ವಲನೆಂಬ ಅಸುರನ ತಡೆಗೆ ಸಿಕ್ಕಿದ ಗೋವುಗಳನ್ನು ಬಿಡಿಸಿದನೋ, ಯಾವನು ಮೇಘಗಳ ಮಧ್ಯಪ್ರದೇಶದಲ್ಲಿ ವಿದ್ಯುದ್ರೂಪದ ಅಗ್ನಿಯನ್ನು ಸೃಷ್ಟಿಸಿದನೋ ಮತ್ತು ಯಾವನು ಸಂಗ್ರಾಮಗಳಲ್ಲಿ ಅಪ್ರತಿಹತನಾಗಿರುತ್ತಾನೆಯೋ, ಅವನೇ ಇಂದ್ರನು.

English Translation

He, who having destroyed Ahi, set free the seven rivers; who recovered the cows detained by Vala; who generated fire in the clouds: who is invincible in battle: he, men, is Indra.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿಯೂ --ಇಂದ್ರನು ವೃತ್ರಾಸುರನನ್ನು ಅಥವಾ ಮೇಘವನ್ನು ಹಿಂಸಿಸಿ ವೃಷ್ಟಿಯನ್ನು ಸುರಿಸಿ ನೀರು ಹರಿಯುವಂತೆ ಮಾಡಿದನು; ವಲನು ಬಚ್ಚಿಟ್ಟಿದ್ದ ಗೋವುಗಳನ್ನು ಬಿಡಿಸಿದನು; ಅಂತರಿಕ್ಷದಲ್ಲಿರುವ ಮೇಘಗಳ ಮಧ್ಯದಲ್ಲಿ ವಿದ್ಯುದ್ರೂಪವಾದ ಅಗ್ನಿಯನ್ನು ಉತ್ಪಾದನೆ (ಸೃಷ್ಟಿ) ಮಾಡಿದನು; ಯುದ್ಧದಲ್ಲಿ ಇಂದ್ರನು ಶತ್ರುಗಳಿಂದ ಅಜೇಯನಾಗಿರುವನು; ಎಂಬ ಇಂದ್ರನ ನಾಲ್ಕು ಸಾಹಸಕೃತ್ಯಗಳ ವರ್ಣನೆ ಇದೆ.

**ಯೋ ಹತ್ವಾ ಅಹಿಂ ಅರಿಣಾತ್ ಸಪ್ತ ಸಿಂಧೂನ್—ಯೋऽಹಿಂ ಮೇಘಂ ಹತ್ವಾ ಮೇಘ ಹನನಂ ಕೃತ್ವಾ ಸಪ್ತ ಸರ್ಪಣಶೀಲಾಃ ಸಿಂಧೂನ್ ಸ್ಯಂದನಶೀಲಾ ಅಪೋऽರಿಣಾತ್ । ಪ್ರೈರಯೇತ್ । ಯದ್ವಾ ಸಪ್ತ ಗಂಗಾಯಮುನಾದ್ಯಾ ಮುಖ್ಯಾ ನದೀರರಿಣಾತ್ ।** ಎಂದರೆ ಇಂದ್ರನು ಮೇಘವನ್ನು ಹಿಂಸಿಸಿ (ವಜ್ರಾಯುಧದಿಂದ ಹೊಡೆದು) ತಡೆದಿದ್ದ ವೃಷ್ಟಿ (ಮಳೆ) ಯನ್ನು ಬೀಳುವಂತೆ ಮಾಡಿ ಬಿದ್ದ ನೀರು ಪ್ರವಾಹರೂಪ ದಲ್ಲಿ ಅಥವಾ ಗಂಗಾದಿಸಪ್ತನದಿಗಳ ರೂಪದಲ್ಲಿ ಹರಿಯುವಂತೆ ಮಾಡಿದನು ಎಂದರ್ಥವು.

**ಅಹಿಂ**—ಅಹಿಂ ಎಂಬ ಶಬ್ದವು ಮೇಘನಾಮಗಳಲ್ಲಿಯೂ (ನಿ. ೨-೨೧) ಉದಕನಾಮಗಳಲ್ಲಿಯೂ (ನಿ. ೨-೨೪) ಪಠಿತವಾಗಿದೆ. ಇದಲ್ಲದೆ ಅಹಿಶಬ್ದಕ್ಕೆ ಯಾಸ್ಕರು **ಅಹಿರಯನಾತ್**—(ಅಂತರಿಕ್ಷದಲ್ಲಿ) ಚಲಿಸುವುದ ರಿಂದ ಮೇಘಕ್ಕೆ ಅಹಿಯೆಂದು ಹೆಸರು ಎಂದು ನಿರ್ವಚನವನ್ನು ಹೇಳಿದ್ದಾರೆ. (ನಿ. ೨-೨೪)

(೧) ಇದಲ್ಲದೆ **ಇಣ್-ಗತೌ** (ಅದಾದಿ, ಪರಸ್ಮೈಪದಿ) ಎಂಬ ಧಾತುವಿನಿಂದ ನಿಷ್ಪನ್ನವಾದ ಅಹಿಶಬ್ದಕ್ಕೆ **ಏತ್ಯಂತರಿಕ್ಷೇ । ಅಯತೇರೇವ**—ಅಂತರಿಕ್ಷದಲ್ಲಿ ಚಲಿಸುವುದರಿಂದ ಅಹಿ ಎಂದರೆ ಮೇಘವು;

(೨) ಅಥವಾ **ಅಹಿ-ಗತೌ** (ಭ್ವಾದಿ, ಆತ್ಮನೇಪದಿ) ಎಂಬ ಧಾತುವಿನಿಂದ ಅಹಿಶಬ್ದವು ನಿಷ್ಪನ್ನವಾದರೆ ಆಗಲೂ ಅಂತರಿಕ್ಷದಲ್ಲಿ ಸಂಚರಿಸುವುದರಿಂದ ಅಹಿಶಬ್ದಕ್ಕೆ ಮೇಘವೆಂದೇ ಅರ್ಥವು;

(೩) **ಅಹ-ವ್ಯಾಪ್ತೌ** (ಸ್ವಾದಿ, ಪರಸ್ಮೈಪದಿ) ವ್ಯಾಪಿಸು ಎಂಬರ್ಥವುಳ್ಳ ಅಹ ಎಂಬ ಧಾತುವಿನಿಂದ ನಿಷ್ಪನ್ನವಾದರೆ—**ಅಹ್ನೋತಿ ವ್ಯಾಪ್ನೋತಿ ಆಕಾಶಂ ದಿಗಂತರಾಣಿ ವಾ**—ಎಂದರೆ ಆಕಾಶದಲ್ಲಿ ಅಥವಾ ನಾನಾ ದಿಕ್ಕುಗಳಲ್ಲಿ ವ್ಯಾಪಿಸಿರುವುದರಿಂದ ಅಹಿ ಎಂದರೆ ಮೇಘವು;

(೪) ಅಥವಾ **ಆಙ್‌ಪೂರ್ವಾದ್ಧಂತೇಃ ಹಿಂಸಾರ್ಥಾತ್ ಗತ್ಯರ್ಥಾದ್ವಾ ಆ ಸಮಂತಾತ್ ಹಂತಿ ಭಿನತ್ತಿ ಉಷ್ಣಮಾಭಿಮುಖ್ಯೇನ । ಹಂತಿ ಗಚ್ಛತ್ಯಂತರಿಕ್ಷಂ**—ಎಂದರೆ **ಹನ ಹಿಂಸಾಗತ್ಯೋಃ** ಎಂಬ ಧಾತುವಿನಿಂದ ಆಙ್ ಉಪಸರ್ಗಪೂರ್ವಕವಾಗಿ ನಿಷ್ಪನ್ನವಾಗುವುದಾದರೆ ಹಿಂಸಾರ್ಥದಲ್ಲಿ–ಶೀತಲವಾದ ನೀರಿನ ಸಂಯೋಗದಿಂದ ಸುತ್ತಲೂ ಇರುವ ಉಷ್ಣವನ್ನು ನಾಶಮಾಡುವುದರಿಂದ ಅಹಿಶಬ್ದಕ್ಕೆ ಮೇಘವೆಂದು ಅರ್ಥವು. ಅಥವಾ ಹನಧಾತುವಿಗೆ ಗತ್ಯರ್ಥವನ್ನು ಹೇಳುವುದಾದರೆ ಆಗ ಅಂತರಿಕ್ಷದಲ್ಲಿ ಸಂಚರಿಸುವ ಸ್ವಭಾವವುಳ್ಳದ್ದಾದ್ದರಿಂದ ಅಹಿಯೆಂದರೆ ಮೇಘವು;

(೫) ಅಥವಾ ಹನಧಾತುವಿಗೆ ಹಿಂಸಾರ್ಥದಲ್ಲಿ ಇನ್ನೊಂದು ಅರ್ಥವೂ ಸಾಧ್ಯವಾಗುವುದು. ಹೇಗೆಂದರೆ **ಹಿಃ ಹಂತಾ, ನ ಹಂತಾ ಅಹಂತಾ । ಅಹಿಃ ಅಹಿಂಸಕಃ ಇತ್ಯರ್ಥಃ । ಸರ್ವದಾ ಲೋಕಸ್ಯ ವರ್ಷಪ್ರದತ್ವಾತ್ ।** ಹಿಃ ಎಂದರೆ ಹಿಂಸೆಮಾಡುವುದು, ಅಹಿಃ ಎಂದರೆ ಹಿಂಸೆಮಾಡದಿರುವುದು ಮೇಘವು; ಏಕೆಂದರೆ ಮೇಘವು ಲೋಕದ ಜನರಿಗೆ ಹಿತವನ್ನುಂಟುಮಾಡುವುದಕ್ಕಾಗಿ ಮಳೆಯನ್ನು

ಸುರಿಸುವುದರಿಂದ ಅಹಿಂಸಕವಾಗಿರುವುದು. ಆದ್ದರಿಂದ ಅಹಿ ಎಂದರೆ ಮೇಘವು ಎಂದರ್ಥವು. ಈ ಅರ್ಥದ ಸಮರ್ಥನೆಗಾಗಿ ಶುಕ್ಲಯಜುರ್ವೇದದ—**ಸೋಽಗ್ನೀಷೋಮಾವಭಿ ಸಂ ಬಭೂವ ಸರ್ವಾಂ ವಿದ್ಯಾಂ ಸರ್ವಂ ಯಶಃ ಸರ್ವಮನ್ನಾದ್ಯಂ ಸರ್ವಾಂ ಶ್ರಿಯಂ ಸ ಯತ್ಸರ್ವಮೇ-ತತ್ಸಮಭವತ್ ತಸ್ಮಾದಹಿಃ** । ಎಂದು ವಾಜಸನೇಯಸಂಹಿತಾವಾಕ್ಯವಿರುವುದು. ಪ್ರಕೃತಋಕ್ಕಿನಲ್ಲಿ ಅಹಿ ಎಂದರೆ ಮೇಘವೆಂದೇ ಅರ್ಥವು.

**ಸಪ್ತಸಿಂಧೂನ್**—ಈ ಶಬ್ದಗಳಿಗೆ ಸಾಯಣರು ಎರಡು ವಿಧವಾದ ಅರ್ಥಗಳನ್ನು ಹೇಳಿರುವರು; **ಸಪ್ತ ಸರ್ಪಣಶೀಲಾಃ ಸಿಂಧೂನ್ ಸ್ಯಂದನಶೀಲಾಃ ಅಪೋಽರಿಣಾತ್ ಪ್ರೈರಯತ್** ಸಪ್ತಶಬ್ದಕ್ಕೆ ಒತ್ತರಿಸಿ ಸರಿಯುವ ಸ್ವಭಾವವುಳ್ಳದ್ದೂ ಸಿಂಧೂನ್ ಎಂಬ ಶಬ್ದಕ್ಕೆ ಹರಿಯುವ ಸ್ವಭಾವವುಳ್ಳದ್ದೂ ಆದ ವೃಷ್ಟ್ಯುದಕಗಳನ್ನು ಪ್ರೇರಿಸಿದನು ಎಂದರೆ ಮೇಘವನ್ನು ಮಳೆಸುರಿಯುವಂತೆ ಪ್ರೇರಿಸಿದನು ಎಂದು ಒಂದು ವಿಧವಾದ ಅರ್ಥವು; ಅಥವಾ **ಸಪ್ತ ಗಂಗಾಯಮುನಾದ್ಯಾ ಮುಖ್ಯಾ ನದೀರರಿಣಾತ್** । ಮೇಘವನ್ನು ವೃಷ್ಟಿಯನ್ನು ಸುರಿಯುವಂತೆ ಪ್ರೇರಿಸಿ ಆ ಉದಕಗಳು ಗಂಗಾ ಯಮುನಾ ಮೊದಲಾದ ಏಳು ಮುಖ್ಯ ನದಿಗಳಲ್ಲಿ ಪ್ರವಹಿಸುವಂತೆ ಮಾಡಿದನು ಎಂದು ಇನ್ನೊಂದು ವಿಧವಾದ ಅರ್ಥವು.

**ಯೋ ಗಾ ಉದಾಜದಪಧಾ ವಲಸ್ಯ**—ವಲನೆಂಬ ಅಸುರನ ವಿಷಯವಾಗಿಯೂ ಅವನು ಬಚ್ಚಿಟ್ಟದ್ದ ಗೋವುಗಳ ವಿಷಯವಾಗಿಯೂ ನಾವು ಇದೇ ಭಾಗದ 634-637 ನೇ ಪೇಜುಗಳಲ್ಲಿ ವಿಸ್ತಾರವಾಗಿ ವಿವರಿಸಿದೇವೆ. ಈ ವಲನೆಂಬ ಅಸುರನು ದೇವತೆಗಳ ಗೋವುಗಳನ್ನು ಗುಹೆಯಲ್ಲಿ ತಡೆದು ಇಟ್ಟದ್ದುದನ್ನು ಇಂದ್ರನು ಬಿಡಿಸಿದನು ಎಂದು ಇಲ್ಲಿಯೂ ಉಕ್ತವಾಗಿದೆ.

**ಯಃ ಅಶ್ಮನೋಃ ಅಂತಃ ಅಗ್ನಿಂ ಜಜಾನ—ಅಶೂ ವ್ಯಾಪ್ತೌ** (ಸ್ವಾದಿ, ಆತ್ಮನೇಪದಿ) ಎಂಬ ಧಾತುವಿನಿಂದ ನಿಷ್ಪನ್ನವಾದ ಅಶ್ಮನ್ ಶಬ್ದಕ್ಕೆ **ಅಶ್ನುತೇ ವ್ಯಾಪ್ನೋತ್ಯಂತರಿಕ್ಷಮಿತ್ಯಶ್ಮಾ ಮೇಘಃ** । ಅಂತರಿಕ್ಷದಲ್ಲಿ ವ್ಯಾಪಿಸಿ ಇರುವುದರಿಂದ **ಅಶ್ಮನೋಃ** ಎಂದರೆ ಮೇಘಗಳ ಎಂದರ್ಥವು. **ಅಶ್ಮಾ** ಎಂಬ ಶಬ್ದವು ಮೇನಾಮುಗಳಲ್ಲಿಯೂ ಪಠಿತವಾಗಿರುವುದು (ನಿ. ೨-೨೧) **ಅತ್ಯಂತ ಮೃದುರೂಪಯೋರ್ಮೇಘಯೋರಂತರ್ಮಧ್ಯೇ ವೈದ್ಯುತಮಗ್ನಿಂ ಜಜಾನ ಉತ್ಪಾದಯಾಮಾಸ**- ಅತ್ಯಂತಮೃದುವಾಗಿರುವ (ಮೆತ್ತಗಿರುವ) ಜಲರಾಶಿಯಾದ ಮೇಘಗಳ ಮಧ್ಯದಲ್ಲಿ ಇಂದ್ರನು ವೈದ್ಯುತಾಗ್ನಿಯನ್ನು (ಮಿಂಚನ್ನು) ಉತ್ಪತ್ತಿಮಾಡಿದನು. ಬಹಳ ಘಟ್ಟಿಯಾಗಿರುವ ಕಲ್ಲು ಮೊದಲಾದ ಎರಡು ವಸ್ತುಗಳ ಘರ್ಷಣೆಯಿಂದ ಅಗ್ನಿಯನ್ನು ಉತ್ಪತ್ತಿಮಾಡುವುದು ಬಹುಸುಲಭ ಮತ್ತು ಆರೀತಿ ಮಾಡುವುದು ಲೋಕದಲ್ಲಿ ಪ್ರಸಿದ್ಧವಾಗಿರುವ ವಿಷಯ. ಆದರೆ ಬಹಳವಾಗ ಹತ್ತಿಯಂತೆ ಮೃದುವಾಗಿರುವ ಎರಡು ಮೇಘಗಳ ಮಧ್ಯೆ ವೈದ್ಯುತಾಗ್ನಿಯನ್ನು ಉತ್ಪಾದನೆಮಾಡುವುದು ಸಾಧಾರಣಮನುಷ್ಯರಿಂದ ಅಥವಾ ದೇವತೆಗಳಿಂದ ಸಾಧ್ಯವಿಲ್ಲ. ಮಹಾಮಹಿಮನಾದ ಇಂದ್ರನಿಂದ ಮಾತ್ರವೇ ಸಾಧ್ಯವೆಂಬ ವಿಷಯವನ್ನು ಋಷಿಯು ವರ್ಣಿಸಿ ಇಂದ್ರನ ಸಾಮರ್ಥ್ಯಾತಿಶಯವನ್ನು ಸ್ತುತಿಸಿದ್ದಾನೆ. ಇಲ್ಲಿ ಅಶ್ಮನೋಃ ಎರಡು ಮೇಘಗಳ ಮಧ್ಯದಲ್ಲಿ ಎಂದು ದ್ವಿವಚನಪದಪ್ರಯೋಗವು ಗಮನಾರ್ಹವಾಗಿದೆ. ಏಕೆಂದರೆ ಬೇರೆಬೇರೆ ವಿಧವಾದ ವಿದ್ಯುತ್ಪ್ರವಾಹದಿಂದ ಸಂಯೋಜಿತವಾದ ಎರಡು ಮೇಘಗಳ ಘರ್ಷಣೆಯಿಂದ ವಿದ್ಯುಚ್ಛಕ್ತಿಯು ಉತ್ಪತ್ತಿಯಾಗುವುದೆಂದು ಆಧುನಿಕ ವಿಜ್ಞಾನಿಗಳ ಅಭಿಪ್ರಾಯವಾದೆ. (Even the modern scientists agree that clouds charged defferenty by positive and negetive electricity coming together cause lightning).

ಸಂವೃಕ್ ಸಮತ್ಸು— ಈ ವಾಕ್ಯದಲ್ಲಿ ಯಃ ಎಂಬ ಶಬ್ದವನ್ನೂ ಭವತಿ ಎಂಬ ಕ್ರಿಯಾಪದವನ್ನೂ ಅಧ್ಯಾಹಾರಮಾಡಿಕೊಳ್ಳಬೇಕು. ಆರೀತಿ ಮಾಡಿದರೆ—ಯಃ ಸಮತ್ಸು ಸಂವೃಕ್ ಭವತಿ—ಯಾವ ಇಂದ್ರನು ಯುದ್ಧಗಳಲ್ಲಿ ಶತ್ರುಗಳನ್ನು ಹಿಂಸಿಸುವನೋ ಎಂದರೆ ಸಂಹಾರವನಾಡುವನೋ ಆ ಇಂದ್ರನೆಂದು ವಾಕ್ಯಾರ್ಥವು. ಸಂವೃಕ್। ವೃಣಕ್ತೇರ್ಹಿಂಸಾರ್ಥಸ್ಯ ಕ್ವಿಪಿ ರೂಪಂ—ಹಿಂಸಾರ್ಥವನ್ನು ಬೋಧಿಸುವ ವೃಣಕ್ತಿಧಾತುವಿನಿಂದ ಸಂ ಎಂಬ ಉಪಸರ್ಗಪೂರ್ವಕವಾಗಿ ನಿಷ್ಪನ್ನವಾದ ಸಂವೃಕ್ ಎಂಬ ಶಬ್ದಕ್ಕೆ (ಶತ್ರುಗಳನ್ನು) ಹಿಂಸಿಸುವವನು ಎಂದರ್ಥವು ಮತ್ತು ಸಮತ್ಸು। ಸಂಭಕ್ಷಯಂತಿ ಯೋದ್ಧೄಣಾಮಾಯೂಂಷೀತಿ ಸಮದಃ ಸಂಗ್ರಾಮಾಃ ತೇಷು— ಯುದ್ಧಮಾಡುವ ಭಟರ ಆಯುಸ್ಸನ್ನು ಭಕ್ಷಿಸುವುದರಿಂದ (ನಾಶಮಾಡುವುದರಿಂದ) ಯುದ್ಧಗಳಿಗೆ ಸಮದಃ ಎಂದು ಹೆಸರು. ಅಂತಹ, ಭಟರು ಮೃತರಾಗುವ ಯುದ್ಧಗಳಲ್ಲಿ ಇಂದ್ರನು ಶತ್ರುಗಳನ್ನು ಹಿಂಸಿಸಿ ಸಂಹಾರಮಾಡುವವನು ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು.

ಸಂಹಿತಾಪಾಠಃ

ಯೇನೇಮಾ ವಿಶ್ವಾ ಚ್ಯವನಾ ಕೃತಾನಿ ಯೋ ದಾಸಂ ವರ್ಣಮಧರಂ ಗುಹಾಕಃ ।
ಶ್ವಘ್ನೀವ ಯೋ ಜಿಗೀವಾಂ ಲಕ್ಷಮಾದದರ್ಯಃ ಪುಷ್ಟಾನಿ ಸ ಜನಾಸ ಇಂದ್ರಃ ॥ ೪ ॥

ಪದಪಾಠಃ

ಯೇನ । ಇಮಾ । ವಿಶ್ವಾ । ಚ್ಯವನಾ । ಕೃತಾನಿ । ಯಃ । ದಾಸಂ । ವರ್ಣಂ । ಅಧರಂ । ಗುಹಾ । ಅಕರಿತ್ಯಕಃ ।
ಶ್ವಘ್ನೀऽಇವ । ಯಃ । ಜಿಗೀವಾನ್ । ಲಕ್ಷಂ । ಆದತ್ । ಅರ್ಯಃ । ಪುಷ್ಟಾನಿ । ಸಃ । ಜನಾಸಃ । ಇಂದ್ರಃ ॥

ಸಾಯಣಭಾಷ್ಯಂ

ಯೇನೇಂದ್ರೇಣೇಮೇಮಾನಿ ವಿಶ್ವಾ ಚ್ಯವನಾ ನಶ್ವರಾಣಿ ಭುವನಾನಿ ಕೃತಾನಿ । ಸ್ಥಿರೀಕೃತಾನಿ । ಯಶ್ಚ ದಾಸಂ ವರ್ಣಂ ಶೂದ್ರಾದಿಕಂ । ಯದ್ವಾ ದಾಸಮುಪಕ್ಷಪಯಿತಾರಮಧರಂ ನಿಕೃಷ್ಟಮಸುರಂ ಗುಹಾ ಗುಹಾಯಾಂ ಗೂಢಸ್ಥಾನೇ ನರಕೇ ವಾಕಃ । ಅಕಾರ್ಷೀತ್ ॥ ಕರೋತೇರ್ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕಿ ರೂಪಂ ॥ ಲಕ್ಷಂ ಲಕ್ಷ್ಯಂ ಜಿಗೀವಾನ್ ॥ ಜಿ ಜಯೇ । ಕ್ವಸೌ ಸನ್‌ಲಿಟೋರ್ಜೇರಿತ್ಯಭ್ಯಾಸಾದುತ್ತರಸ್ಯ ಕುತ್ವಂ । ದೀರ್ಘಶ್ಛಾಂದಸಃ ॥ ಜಿತವಾನ್ ಯೋऽರ್ಯೋऽರೇಃ ॥ ಷಷ್ಠ್ಯೇಕವಚನೇ ಛಾಂದಸೋ ಯಣಾದೇಶಃ ॥ ಶತ್ರೋಃ ಸಂಬಂಧೀನಿ ಪುಷ್ಟಾನಿ ಸಮೃದ್ಧಾನ್ಯಾದತ್ ಆದತ್ತೇ। ತತ್ರ ದೃಷ್ಟಾಂತಃ । ಶ್ವಘ್ನೀವ । ಶ್ವಭಿರ್ಮೃಗಾನ್ ಹಂತೀತಿ ಶ್ವಘ್ನೀ ವ್ಯಾಧಃ । ಯಥಾ ವ್ಯಾಧೋ ಜಿಘೃಕ್ಷಂಸ್ತಂ ಮೃಗಂ ಪರಿಗೃಹ್ಣಾತಿ ತದ್ವತ್ ॥

ಪ್ರತಿಪದಾರ್ಥ

**ಜನಾಸಃ**—ಎಲೈ ಜನರೇ । **ಯೇನ**—ಯಾವ ಇಂದ್ರನಿಂದ । **ಚ್ಯವನಾ**—ನಶ್ವರವಾದ । **ಇಮಾ ವಿಶ್ವಾ**—ಈ ಲೋಕಗಳೆಲ್ಲವೂ । **ಕೃತಾನಿ**—ನಿರ್ಮಿತವಾದವೋ (ಅಥವಾ ಸ್ಥಿರವಾಗಿರಿಸಲ್ಪಟ್ಟವೋ) । **ಯಃ**—ಯಾವನು । **ದಾಸಂ**—ನಾಶಕನಾದ । **ವರ್ಣಂ**—ಶೂದ್ರಾದಿಯನ್ನೂ । **ಅಧರಂ**—ನಿಕೃಷ್ಟನಾದ ಅಸುರನನ್ನೂ । **ಗುಹಾ**—ನರಕರೂಪವಾದ ಗುಹೆಯಲ್ಲಿ । **ಅಕಃ**—ಇರುವಂತೆ ಮಾಡಿದನೋ (ಮತ್ತು) । **ಲಕ್ಷಂ** ಗುರಿಯಿಟ್ಟ ಶತ್ರುಗಳನ್ನು । **ಜಿಗೀವಾನ್**—ಜಯಿಸಿದನೋ । **ಯಃ**—ಯಾರು । **ಅರ್ಯಃ**—ಶತ್ರುವಿನ । **ಪುಷ್ಟಾನಿ**—ಸಮೃದ್ಧವಾದ ಸಂಪತ್ತುಗಳನ್ನು । **ಶ್ವಘ್ನೀವ**—ಬೇಡನು ಮೃಗವನ್ನು ಸ್ವಾಧೀನಪಡಿಸಿಕೊಳ್ಳುವಂತೆ । **ಆದತ್**—ತನ್ನ ಸ್ವಾಧೀನಕ್ಕೆ ತೆಗೆದುಕೊಂಡನೋ । **ಸಃ**—ಅವನೇ । **ಇಂದ್ರಃ**—ಇಂದ್ರನು.

ಭಾವಾರ್ಥ

ಎಲೈ ಜನರೇ, ಯಾವ ಇಂದ್ರನಿಂದ ನಶ್ವರವಾದ ಈ ಲೋಕವೆಲ್ಲವೂ ಸ್ಥಿರವಾಗಿರುವಂತೆ ನಿರ್ಮಿತವಾದವೋ, ಯಾವನು ನಾಶಕನಾದವನೂ ನಿಕೃಷ್ಟನಾದವನೂ ಆದ ಅಸುರನನ್ನು ನರಕರೂಪವಾದ ಗುಹೆಯಲ್ಲಿ ಇರುವಂತೆ ಮಾಡಿದನೋ ಮತ್ತು ತಾನು ಗುರಿಯಿಟ್ಟ ಶತ್ರುವನ್ನು ಜಯಿಸಿದನೋ, ಮತ್ತು ಬೇಡನು ಮೃಗವನ್ನು ಸ್ವಾಧೀನಪಡಿಸಿಕೊಳ್ಳುವಂತೆ ಯಾರು ಶತ್ರುವಿನ ಸಮೃದ್ಧವಾದ ಸಂಪತ್ತುಗಳನ್ನೂ ತನ್ನಧೀನವಾದುದನ್ನಾಗಿ ಮಾಡಿಕೊಂಡನೋ ಅವನೇ ಇಂದ್ರನು.

## English Translation

He, by whom all these perishable (regions) have been made; who consigned the base servile tribe to the cavern; who seizes triumphant the cherished (treasures) of the enemy, as a hunter (strikes) his prey; he, men, is Indra.

ವಿಶೇಷವಿಷಯಗಳು

ಈ ಋಕ್ಕಿನಲ್ಲಿಯೂ ಇಂದ್ರನ ನಾಲ್ಕುವಿಧವಾದ ಸಾಹಸಕೃತ್ಯಗಳ ವರ್ಣನೆ ಇದೆ—

**ಯೇನ ಇಮಾ ವಿಶ್ವಾ ಚ್ಯವನಾ ಕೃತಾನಿ**—ನಶ್ವರಗಳಾದ ಈ ಸಮಸ್ತಲೋಕಗಳು ಇಂದ್ರನಿಂದ ಸ್ಥಿರವಾಗಿರುವಂತೆ ಎಂದರೆ ಶಾಶ್ವತವಾಗಿರುವಂತೆ ಮಾಡಲ್ಪಟ್ಟವು. ಎಂದರೆ ಈ ಲೋಕಗಳು ನಶ್ವರಗಳಾದ್ದರಿಂದ ಪೂರ್ವದಲ್ಲಿ ಇರಲಿಲ್ಲ. ಅವುಗಳನ್ನು ಇಂದ್ರನು ಸೃಷ್ಟಿಮಾಡಿದನು ಅಥವಾ ಅವು ಯಾವಾಗಲೂ ಸ್ಥಿರವಾಗಿರುವಂತೆ ಅಥವಾ ಶಾಶ್ವತವಾಗಿರುವಂತೆ ಮಾಡಿದನು ಎಂದು ಮುಖ್ಯಾಭಿಪ್ರಾಯವು.

**ಯಃ ದಾಸಂ ವರ್ಣಂ ಅಧರಂ ಗುಹಾ ಅಕಃ**—**ಯಶ್ಚ ದಾಸಂ ವರ್ಣಂ ಶೂದ್ರಾದಿಕಂ ಯದ್ವಾ ದಾಸಮುಪಕ್ಷಪಯಿತಾರಮಧರಂ ನಿಕೃಷ್ಟಮಸುರಂ ಗುಹಾ ಗುಹಾಯಾಂ ಗೂಢಸ್ಥಾನೇ ನರಕೇ ವಾಕಃ ಅಕಾರ್ಷೀತ್** । ಇಂದ್ರನು, ಬ್ರಾಹ್ಮಣಾದಿ ವರ್ಣಗಳನ್ನು ದಾಸನಂತೆ ಸೇವೆಮಾಡುತ್ತಿರುವ ಶೂದ್ರಾದಿವರ್ಣದ ಜನರನ್ನು ಅಥವಾ ಆರ್ಯಜನರಿಗೆ ಹಿಂಸೆಯನ್ನುಂಟುಮಾಡುವ ಅತಿನಿಕೃಷ್ಟರಾದ ದಸ್ಯುಜನರನ್ನು ಗುಹೆಯಲ್ಲಿ ಎಂದರೆ

ಗೂಢಸ್ಥಾನವಾದ ನರಕಾದಿಗಳಲ್ಲಿ ಇರುವಂತೆ ಮಾಡಿದನು ಎಂದು ಭಾಷ್ಯಕಾರರ ವಿವರಣೆಯು. ಇಲ್ಲಿ ಒಂದು ಸಂಶಯವು ತಲೆದೋರುವುದು. ಭಾಷ್ಯಕಾರರು ದಾಸಂ ವರ್ಣಂ ಎಂಬ ಪದಗಳಿಗೆ ಶೂದ್ರಾದಿಕಂ—ಶೂದ್ರಾದಿ ಜನರೆಂದು ಅರ್ಥಮಾಡಿರುವುದು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಏಕೆಂದರೆ ಶೂದ್ರರೂ ಸಹ ಬ್ರಾಹ್ಮಣಾದಿ ಚತುರ್ವರ್ಣದವರಲ್ಲಿ ಸೇರಿರುವರು. ಎಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಚಾತುರ್ವರ್ಣ್ಯದ ಜನರಲ್ಲಿ ಶೂದ್ರರಿಗೆ ಒಂದು (ಕೊನೆಯದಾದರೂ) ಸ್ಥಾನವು ಇದೆ. ಅವರೂ ಸಹ ಚಾತುರ್ವರ್ಣ್ಯದವರ ನೀತಿನಿಯಮಗಳಿಗೆ ಒಳಪಟ್ಟು ಶ್ರೇಯಸ್ಸನ್ನು ಪಡೆಯಬಹುದಾಗಿದೆ. ಹೀಗಿರುವಾಗ ಅವರು ಕನಿಷ್ಠವರ್ಣದವರೆಂಬ ಮಾತ್ರದಿಂದ ಅವರಲ್ಲಿ ದೋಷವಿಲ್ಲದಿದ್ದರೂ ಅವರನ್ನು ನರಕಾದಿ ಘೋರ ಸ್ಥಾನಗಳಲ್ಲಿ ಹಾಕುವುದು ದೇವತೆಗಳಿಗಾಗಲಿ, ಇಂದ್ರನಿಗಾಗಲಿ ನ್ಯಾಯವೆನಿಸುವುದಿಲ್ಲ. ಆದುದರಿಂದ ಇಲ್ಲಿ ದಾಸಂ ವರ್ಣಂ ಎಂಬ ಶಬ್ದಗಳಿಗೆ ಶೂದ್ರಾದಿಕಂ ಎಂದು ಅರ್ಥ ಹೇಳುವುದು ಸರಿಯಾಗಿರುವಂತೆ ಕಾಣುವುದಿಲ್ಲ. ಆದರೆ ನಾವು ಹಿಂದೆ ದಾಸ, ದಸ್ಯು ಎಂಬ ಶಬ್ದಗಳಿಗೆ ಅರ್ಥವನ್ನು ಹೇಳಿರುವಂತೆ ಆರ್ಯಜನರಲ್ಲದ ಮತ್ತು ಯಜ್ಞಯಾಗಾದಿಗಳನ್ನು ಮಾಡದ ಮತ್ತು ದೇವತೆಗಳನ್ನು ಸ್ತುತಿಸುವ ಆರ್ಯಜನರಿಗೆ ತೊಂದರೆಯನ್ನು ಕೊಡುವ ಅಸುರರು ಅಥವಾ ಈ ದೇಶದ ಪೂರ್ವ ನಿವಾಸಿಗಳಾದ ದಸ್ಯು ಜನರೆಂದು (ದುಷ್ಟಜನರೆಂದು) ಹೇಳುವುದಾದರೆ ಅರ್ಥವು ಸರಿಯಾಗಿ ಹೊಂದಬಹುದು. ಮತ್ತು ಈ ವಾಕ್ಯದಲ್ಲಿ ಗುಹಾ ಎಂಬ ಶಬ್ದಕ್ಕೆ ನರಕವೆಂದು ಅರ್ಥಮಾಡುವುದಕ್ಕಿಂತ ದುರ್ಗಮವಾದ ಪರ್ವತಗುಹೆಗಳೆಂದು ಅರ್ಥಮಾಡಬಹುದು. ಆರ್ಯರಿಗೂ, ದಸ್ಯುಜನರಿಗೂ ಆಗಾಗ ಯುದ್ಧವು ನಡೆಯುತ್ತಿರುವುದರಿಂದ ಇಂದ್ರನು ಆರ್ಯರಿಗೆ ಶತ್ರುಗಳಾದ ಈ ದಸ್ಯುಜನರನ್ನು ಯುದ್ಧದಲ್ಲಿ ಸೋಲಿಸಿ, ಅನೇಕರನ್ನು ಸಂಹರಿಸಿ, ಅಳಿದುಳಿದವರನ್ನು ಹೊಡೆದೋಡಿಸಲು, ಅವರು ದಿಕ್ಕೆಟ್ಟು ಓಡಿಹೋಗಿ ಪರ್ವತಗಳಲ್ಲಿಯೂ, ಗುಹೆಗಳಲ್ಲಿಯೂ ಅವಿತುಕೊಳ್ಳುವಂತೆ ಇಂದ್ರನು ಮಾಡಿದನು ಎಂದು ಹೇಳುವುದು ಸಮಂಜಸವಾಗಿದೆ. ಈಗಲೂ ಭಿಲ್ಲರು, ಗೊಂಡರು ಮೊದಲಾದ ಪೂರ್ವನಿವಾಸಿಗಳು ಗುಡ್ಡಗಳಲ್ಲಿಯೂ, ಪರ್ವತಪ್ರದೇಶಗಳಲ್ಲಿಯೂ ಅನಾಗರಿಕರಾಗಿ ಕಾಡುಜನಗಳಂತೆ ವಾಸಿಸುತ್ತಿರುವುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಅನೇಕ ಕಡೆ ಇಂದ್ರನು ಅಸುರರ ಅಥವಾ ದಸ್ಯುಜನರ ಪಟ್ಟಣಗಳನ್ನೂ, ದುರ್ಗಗಳನ್ನೂ ನಾಶಮಾಡಿದನೆಂಬ ವರ್ಣನೆಗಳು ಬೇಕಾದಷ್ಟಿವೆ. ಈ ಸಂದರ್ಭದಲ್ಲಿ ಇಂದ್ರನಿಗೆ ಪುರಂದರ–ಶತ್ರುಗಳ ಪಟ್ಟಣಗಳನ್ನು ನಾಶಮಾಡುವವನು ಎಂಬ ಅನ್ವರ್ಥನಾಮವೂ ಇದೆ. ಇವುಗಳನ್ನೆಲ್ಲಾ ವಿಮರ್ಶೆಮಾಡಿದರೆ ದಾಸಂ ವರ್ಣಂ ಎಂದರೆ ದಸ್ಯುಜನರು ಅಥವಾ ಅಸುರರೆಂದೂ, ಗುಹಾ ಎಂದರೆ ದುರ್ಗಮವಾದ ಪರ್ವತಗಳೆಂದೂ ಅರ್ಥಮಾಡುವುದೇ ಸಮಂಜಸವಾಗಿರುವುದು.

**ಶ್ವಘ್ನೀವ ಯಃ ಜಿಗೀವಾನ್ ಲಕ್ಷಂ ಆದತ್ ಅರ್ಯಃ ಪುಷ್ಟಾನಿ**—ಈ ವಾಕ್ಯದಲ್ಲಿರುವ ಶ್ವಘ್ನೀವ ಎಂಬ ಶಬ್ದಕ್ಕೆಸಾಯಣರು–**ಶ್ವಘ್ನೀವ ಶ್ವಭಿರ್ಮೃಗಾನ್ ಹಂತೀತಿ ಶ್ವಘ್ನೀ ವ್ಯಾಧಃ।** ಶ್ವಘ್ನಿ ಎಂದರೆ ಮೃಗಗಳನ್ನು ಕೊಲ್ಲುವ ವ್ಯಾಧನೆಂದು ಅರ್ಥಮಾಡಿ, ಅಂತಹ ವ್ಯಾಧನು ತನ್ನ ಲಕ್ಷ್ಯವಾದ ಮೃಗವನ್ನು ಕೊಲ್ಲುವಂತೆ ಇಂದ್ರನು ಶತ್ರುಗಳನ್ನು ಗೆದ್ದು ಅವರ ಸಮೃದ್ಧವಾದ ಧನಾದಿದ್ರವ್ಯಗಳನ್ನು ತೆಗೆದುಕೊಂಡನು ಎಂದು ಅರ್ಥವಿವರಣೆಮಾಡಿದಾರೆ. ಆದರೆ ಯಾಸ್ಕರು ಶ್ವಘ್ನಿ ಶಬ್ದಕ್ಕೆ **ಶ್ವಘ್ನೀ ಕಿತವೋ ಭವತಿ ಸ್ವಂ ಹಂತಿ ಸ್ವಂ ಪುನರಾಶ್ರಿತಂ ಭವತಿ** ಎಂದು ನಿರ್ವಚನವನ್ನು ಹೇಳಿದ್ದಾರೆ. (ನಿ. ೫–೨೨) ಎಂದರೆ ಶ್ವಘ್ನಿಶಬ್ದಕ್ಕೆ ಕಿತವ ಎಂದು ಅರ್ಥವು. ಕಿತವಶಬ್ದಕ್ಕೆ ಮೋಸಗಾರ, ವಂಚಕ, ಅನೃತವಾದಿ, ಜೂಜಾಡುವವನು ಇತ್ಯಾದ್ಯರ್ಥಗಳಿರುವವು. ಪ್ರಕೃತವಾಕ್ಯದಲ್ಲಿ ಮೇಲೆ ಹೇಳಿದ ಯಾವ ಅರ್ಥವನ್ನಾದರೂ ಉಪಯೋಗಿಸಬಹುದು. ಎಂದರೆ ಜೂಜುಗಾರನು ತನ್ನ ಎದುರಾಳಿಯನ್ನು ಸೋಲಿಸಿ

ಅವನಲ್ಲಿರುವ ದ್ರವ್ಯಾದಿಗಳನ್ನು ದೋಚಿಕೊಳ್ಳುವಂತೆ ಇಂದ್ರನು ಶತ್ರುಗಳನ್ನು ಸೋಲಿಸಿ ಅವರ ಧನಾದಿಗಳನ್ನು ಆಕ್ರಮಿಸಿ ಸೂರೆಗೊಂಡನು ಎಂಬ ಅರ್ಥವನ್ನೂ ಹೇಳಬಹುದು.

---

ಸಂಹಿತಾಪಾಠಃ

ಯಂ ಸ್ಮಾ ಪೃಚ್ಛಂತಿ ಕುಹ ಸೇತಿ ಘೋರಮುತೇಮಾಹುರ್ನೈಷೋ ಅಸ್ತೀತ್ಯೇನಂ ।
ಸೋ ಅರ್ಯಃ ಪುಷ್ಟೀರ್ವಿಜ ಇವಾ ಮಿನಾತಿ ಶ್ರದಸ್ಮೈ ಧತ್ತ ಸ ಜನಾಸ ಇಂದ್ರಃ ॥ ೫ ॥

ಪದಪಾಠಃ

ಯಂ । ಸ್ಮ । ಪೃಚ್ಛಂತಿ । ಕುಹ । ಸಃ । ಇತಿ । ಘೋರಂ । ಉತ । ಈಂ । ಆಹುಃ । ನ । ಏಷಃ । ಅಸ್ತಿ । ಇತಿ । ಏನಂ ।

ಸಃ । ಅರ್ಯಃ । ಪುಷ್ಟೀಃ । ವಿಜಃಽಇವ । ಆ । ಮಿನಾತಿ । ಶ್ರತ್ । ಅಸ್ಮೈ । ಧತ್ತ । ಸಃ । ಜನಾಸಃ । ಇಂದ್ರಃ ॥ ೫ ॥

ಸಾಯಣಭಾಷ್ಯಂ

ಅಪಶ್ಯಂತೋ ಜನಾ ಘೋರಂ ಶತ್ರೂಣಾಂ ಘಾತಕಂ ಯಂ ಪೃಚ್ಛಂತಿ ಸ್ಮ ಕುಹ ಸೇತಿ । ಸ ಇಂದ್ರಃ ಕುತ್ರ ವರ್ತತ ಇತಿ ॥ ಸೇತಿ। ಸೋಽಚಿ ಲೋಪೇ ಚೇತ್ಪಾದಪೂರಣಮಿತಿ ಸೋರ್ಲೋಪೇ ಗುಣಃ॥ ನ ಕ್ವಚಿದಸೌ ತಿಷ್ಠತೀತಿ ಮನ್ಯಮಾನಾ ಜನಾ ಏನಮಿಂದ್ರಮಾಹುಃ ಏಷ ಇಂದ್ರೋ ನಾಸ್ತೀತಿ । ತಥಾ ಚ ಮಂತ್ರೈರ್ನೇಂದ್ರೋ ಅಸ್ತೀತಿ ನೇಮ ಉ ತ್ವ ಆಹ । ೮-೧೦೦-೩ । ಇತಿ । ಈಮಿತಿ ಪೂರಣಃ । ಸ ಇಂದ್ರೋ ವಿಜ ಇವ । ಇವಶಬ್ದ ಏವಾರ್ಥೇ । ಉದ್ವೇಜಕ ಏವ ಸನ್ ಅರ್ಯೋಽರೇಃ ಸಂಬಂಧೀನಿ ಪುಷ್ಟೀಃ ಪೋಷಕಾಣಿ ಗವಾಶ್ವಾದೀನಿ ಧನಾನ್ಯಾಮಿನಾತಿ । ಸರ್ವತೋ ಹಿನಸ್ತಿ ॥ ಮೀಞ್ ಹಿಂಸಾಯಾಂ। ಮೀನಾತೇರ್ನಿಗಮ ಇತಿ ಹ್ರಸ್ವಃ ॥ ತಸ್ಮಾತ್ ಶ್ರದಸ್ಮಾ ಇಂದ್ರಾಯ ಧತ್ತ । ಸ ಇಂದ್ರೋಽಸ್ತೀತಿ ವಿಶ್ವಾಸಮತ್ರ ಕುರುತ । ಯದ್ಯಪ್ಯಸೌ ವಿಶೇಷತೋಽಸ್ಮಾಭಿರ್ನ ದೃಶ್ಯತೇ ತಥಾಪಿ ಅಸ್ತೀತಿ ವಿಶ್ವಾಸಂ ಕುರುತ । ಏವಂ ನಿರ್ಧಾರಣಮಹಿಮೋಪೇತಃ ಸ ಇಂದ್ರೋ ನಾಹಮಿತಿ ॥

### ಪ್ರತಿಪದಾರ್ಥ

**ಸಃ**—ಆ ಇಂದ್ರನಾದರೋ । **ಕುಹ ಸ್ಮ ಇತಿ**—ಎಲ್ಲಿರುವನು ಎಂದು । **ಘೋರಂ**—ಶತ್ರುವಿಗೆ ಭಯಂಕರನಾದ । **ಯಂ**—ಯಾವನನ್ನು (ಯಾವನ ವಿಷಯದಲ್ಲಿ) । **ಪೃಚ್ಛಂತಿ**—ಕೇಳುತ್ತಾರೆಯೋ । **ಏನಂ**—ಅಂತಹ ಇಂದ್ರನ ವಿಷಯದಲ್ಲಿ । **ಏಷಃ**—ಅವನು । **ನ ಅಸ್ತೀತಿ**—ಒಂದೇ ಕಡೆಯಲ್ಲಿರುವುದಿಲ್ಲ ಎಂದು । **ಆಹುಃ**—(ತಿಳಿದವರು) ಹೇಳುತ್ತಾರೆ । **ಸಃ**—ಅದೇ ಇಂದ್ರನು । **ವಿಜಇವ**—ಉದ್ವೇಜಕನಾಗಿ । **ಅರ್ಯಃ**—ಶತ್ರುವಿಗೆ ಸೇರಿದವೂ । **ಪುಷ್ಟೀಃ**—ಪೋಷಕಗಳೂ ಆದ ಗವಾಶ್ವಾದಿಗಳನ್ನು । **ಆ ಮಿನಾತಿ**—ಸುತ್ತಲೂ ಹಿಂಸಿಸುತ್ತಾನೆ । **ಜನಾಸಃ**—ಎಲೈ ಜನರೇ । **ಸಃ**—ಇಂತಹ ಮಹದ್ಗುಣವುಳ್ಳವನೇ । **ಇಂದ್ರಃ**—ಇಂದ್ರನು । **ಅಸ್ಮೈ**—ಈ ಇಂದ್ರನ ವಿಷಯದಲ್ಲಿ । **ಶ್ರದ್ಧತ್ತ**—ಶ್ರದ್ಧೆಯನ್ನಿಡಿ.

### ಭಾವಾರ್ಥ

ಆ ಇಂದ್ರನು ಎಲ್ಲಿರುವನು ಎಂದು ಶತ್ರುವಿಗೆ ಭಯಂಕರನಾದ ಯಾವನ ವಿಷಯದಲ್ಲಿ ಪ್ರಶ್ನಿಸುತ್ತಾರೆಯೋ, ಅಂತಹ ಇಂದ್ರನ ವಿಷಯದಲ್ಲಿ ಅವನು ಒಂದೇಕಡೆಯಲ್ಲಿರುವುದಿಲ್ಲವೆಂದು ತಿಳದವರು ಹೇಳುತ್ತಾರೆ. ಅದೇ ಇಂದ್ರನು ಉದ್ವೇಜಕನಾಗಿ ಶತ್ರುವಿಗೆ ಸೇರಿದವೂ ಅವನಿಗೆ ಪೋಷಕಗಳೂ ಆದ ಗವಾಶ್ವಾದಿಗಳನ್ನು ಸುತ್ತಲೂ ಹಿಂಸಿಸುತ್ತಾನೆ. ಎಲೈ ಜನರೇ, ಇಂತಹ ಮಹಾತ್ಮನಾದ ಇಂದ್ರನಲ್ಲಿ ಶ್ರದ್ಧೆಯನ್ನಿಡಿ.

### English Translation

He, whom, terrible, they ask for, (saying), Where is he? or, verily, they say of him, he is not (in any one place); but who, inflicting (chastisement), destroys the cherished (treasures) of the enemy: in him have faith: for he, men, is Indra.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಒಂದು ವಿಶೇಷಾರ್ಥವು ಸೂಚಿತವಾಗಿದೆ. ಇಂದ್ರನು ಅಗ್ನ್ಯಾದಿದೇವತೆಗಳಂತೆ ಜನರ ಕಣ್ಣಿಗೆ ಕಾಣಿಸದಿರುವುದರಿಂದ—ಆ ಭಯಂಕರನೂ, ಪರಾಕ್ರಮಶಾಲಿಯೂ ಆದ ಇಂದ್ರನೆಂಬುವನು ಎಲ್ಲಿರುವನು ? ಇಂದ್ರನೆಂಬುವನೇ ಇಲ್ಲ ಎಂದು ಹೇಳುವರಾದರೂ ಇಂದ್ರನು ಮಾಡುವ ಅದ್ಭುತ ಕೃತ್ಯಗಳೂ, ಶತ್ರುಹನನವೂ ನಮಗೆ ಪ್ರತ್ಯಕ್ಷಗೋಚರವಾಗಿರುವುದರಿಂದ ಇಂದ್ರನೆಂಬ ದೇವತೆಯು ಇದ್ದೇ ಇರುವನು ಎಂಬ ವಿಷಯದಲ್ಲಿ ದೃಢವಾದ ನಂಬಿಕೆಯನ್ನಿಡಿ ಎಂದು ಋಷಿಯು ವರ್ಣಿಸಿರುವನು.

**ಯಂ ಸ್ಮ ಪೃಚ್ಛಂತಿ ಕುಹ ಸಃ ಇತಿ ಘೋರಂ**—ಶತ್ರುಗಳ ಘಾತಕನಾದ ಯಾವ ಇಂದ್ರನುಂಟೋ ಅವನು ಎಲ್ಲಿರುವನು ಎಂದು ಜನರು ಕೇಳುವರು ಅಗ್ನಿ, ಸೂರ್ಯ ಮೊದಲಾದ ದೇವತೆಗಳು ನಮಗೆ ಪ್ರತ್ಯಕ್ಷವಾಗಿ ಕಾಣಿಸುವರು. ಅವರು ಇರುವ ವಿಷಯದಲ್ಲಿ ನಮಗೆ ಸಂಶಯವುಂಟಾಗಲು ಕಾರಣವಿಲ್ಲ. ಆದರೆ ಇಂದ್ರನೆಂಬ ಒಬ್ಬ ಮಹಾಮಹಿಮಾನ್ವಿತನಾದ ದೇವತೆಯು ಇರುವನೆಂದು ಹೇಳುವರಷ್ಟೆ. ಆ ಇಂದ್ರನು ನಮ್ಮ ಕಣ್ಣಿಗೆ ಕಾಣಿಸುವುದಿಲ್ಲ ಆದ್ದರಿಂದ ಅವನೆಲ್ಲಿರುವನು ಎಂದು ಅನೇಕರು ಪ್ರಶ್ನೆಮಾಡುವರು. ಮತ್ತು,

ಉತ ಈಂ ಆಹುಃ ನ ಏಷಃ ಅಸ್ತಿ ಇತಿ ಏನಂ—ಇದಲ್ಲದೆ ಈ ಇಂದ್ರನೆಂಬುವನು ಇಲ್ಲವೇ ಇಲ್ಲ ಎಂದೂ ಕೆಲವರು ಹೇಳುವರು. ಕಣ್ಣಿಗೆ ಕಾಣಿಸುವ ವಸ್ತುವಾದರೆ ಅದನ್ನು ನೋಡಿ ಇದೆ ಎಂದು ಅನೇಕರು ಹೇಳುವರು ಎಂದು ಋಷಿಯು ಸಾಧಾರಣ ಜನರು ಆಡುವ ಮಾತನ್ನು ಇಲ್ಲಿ ವರ್ಣಿಸಿರುವನು. ಯಾರೇ ಆಗಲಿ ಕಣ್ಣಿಗೆ ಕಾಣಿಸದ ವಸ್ತುವು ಇದೆಯೆಂದು ಸರಿಯಾದ ಆಧಾರಗಳಿಲ್ಲದೆ ನಂಬುವುದಕ್ಕಾಗುವುದಿಲ್ಲ. ಇದು ಲೋಕಸ್ವಭಾವವು ಮತ್ತು ಕಾರಣಸಹಿತವಾದುದು. ಏಕೆಂದರೆ—

ಅನೃತಂ ವೈ ವಾಚಾ ವದತಿ । ಅನೃತಂ ಮನಸಾ ಧ್ಯಾಯತಿ । ಚಕ್ಷುರ್ವೈ ಸತ್ಯಂ। ಅದ್ರಾಗಿತ್ಯಾಹ। ಅದರ್ಶಮಿತಿ । ತತ್ಸತ್ಯಂ ॥

(ತೈ. ಬ್ರಾ. ೧-೪-೧, ೨)

ಬಾಯಿಮಾತಿನಿಂದ ಸುಳ್ಳನ್ನು ಹೇಳಬಹುದು. ಮನಸ್ಸಿನಲ್ಲಿಯೂ ಸುಳ್ಳನ್ನು ಯೋಚಿಸಬಹುದು. ಆದರೆ ಕಣ್ಣಿನಿಂದ ನೋಡುವುದೆಲ್ಲ ಸತ್ಯವೇ. ನಾನು ಈ ವಸ್ತುವನ್ನು ನೋಡಿದೆನು ಎಂದು ಹೇಳುವಾಗ ನೋಡಿದ ವಸ್ತುವು ಇರುವುದು ಸತ್ಯವೇ ಸರಿ ಎಂದು ಶ್ರುತಿವಾಕ್ಯವಿರುವುದರಿಂದ ಕಣ್ಣಿಗೆ ಕಾಣಿಸದ ಇಂದ್ರನು ಇರುವನೆಂದು ಹೇಗೆ ನಂಬುವುದು ? ಕಣ್ಣಿಗೆ ಕಾಣಿಸದಿದ್ದಮೇಲೆ ಆ ಇಂದ್ರನೆಂಬುವನು ಇಲ್ಲವೇ ಇಲ್ಲ ಎಂದು ಜನರು ವಾದಿಸುವರು. ಈ ವಿಷಯದಲ್ಲಿ ಸಾಯಣರು—

ನೇಂದ್ರೋ ಅಸ್ತೀತಿ ನೇಮ ಉತ್ವ ಆಹ ಕ ಈಂ ದದರ್ಶ ಕಮಭಿ ಷ್ಟವಾಮ

(ಋ. ಸಂ ೮-೧೦೦-೩)

ಅಯಮಸ್ಮಿ ಜರಿತಃ ಪಶ್ಯ ಮೇಹ ವಿಶ್ವಾ ಜಾತಾನ್ಯಭ್ಯಸ್ಮಿ ಮಹ್ನಾ ।

(ಋ. ಸಂ. ೮-೧೦೦-೪)

ಎಂಬ ಇದೇ ಅರ್ಥವುಳ್ಳ ಋಕ್ಕನ್ನು ಉದಾಹರಿಸಿದ್ದಾರೆ. ಈ ಋಕ್ಕಿನಲ್ಲಿ—ನೇಮ ಎಂಬುವನು ಹೀಗೆ ಹೇಳುವನು— " ಇಂದ್ರನೇ ಇಲ್ಲ. ಅವನನ್ನು ನೋಡಿರುವವರು ಯಾರು ? ನಾವು ಯಾರನ್ನು ಸ್ತೋತ್ರಮಾಡೋಣ ? " ಎಂದು ಪ್ರಶ್ನೆಮಾಡಲು ಅದಕ್ಕೆ ಇಂದ್ರನು ಮುಂದಿನ ಋಕ್ಕಿನಲ್ಲಿ—" ಎಲೈ ಸ್ತೋತೃಕರ್ತನೇ, ಇಗೋ ನೋಡು. ನಾನು (ಇಂದ್ರನು) ಇಲ್ಲಿಯೇ ಇರುವೆನು. ನನ್ನ ಮಹಾಬಲಪರಾಕ್ರಮದಿಂದ ಸಮಸ್ತ ಪ್ರಾಣಿಗಳನ್ನೂ ಪರಾಭವಗೊಳಿಸು ವೆನು " ಎಂದು ಪ್ರತ್ಯುತ್ತರವಾಗಿ ಹೇಳಿದಾನೆ.

ಪ್ರಕೃತ ಋಕ್ಕಿನಲ್ಲಿಯೂ ಸಹ ಇಂದ್ರನಿಲ್ಲವೆಂದು ವಾದಿಸುವವರ ಸಂಶಯವನ್ನು ಪರಿಹಾರಮಾಡುವುದಕ್ಕಾಗಿ ಗೃತ್ಸಮದಋಷಿಯು ಈ ಋಕ್ಕಿನ ಉತ್ತರಾರ್ಧವನ್ನು ಪಠಿಸಿ ಸಂಶಯನಿವಾರಣೆಮಾಡುವನು.

ಸಃ ಅರ್ಯಃ ಪುಷ್ಟೀಃ ವಿಜಃಇವ ಆ ಮಿನಾತಿ ಶ್ರತ್ ಅಸ್ಮೈ ಧತ್ತ—ಈಮಿತಿ ಪೂರಣಃ । ಸ ಇಂದ್ರೋ ವಿಜಇವ । ಇವಶಬ್ದ ಏವಾರ್ಥೇ । ಉದ್ವೇಜಕ ಏವ ಸನ್ ಅರ್ಯೋಽರೇಃ ಸಂಬಂಧೀನಿ ಪುಷ್ಟೀಃ ಪೋಷಕಾಣಿ ಗವಾಶ್ವಾದೀನಿ ಧನಾನ್ಯಾಮಿನಾತಿ । ಸರ್ವತೋ ಹಿನಸ್ತಿ । ತಸ್ಮಾತ್ ಶ್ರದಸ್ಮಾ ಇಂದ್ರಾಯ ಧತ್ತ । ಸ ಇಂದ್ರೋಽಸ್ತೀತಿ ವಿಶ್ವಾಸಮತ್ರ ಕುರುತ । ಯದ್ಯಪ್ಯಸೌ ವಿಶೇಷತೋಽಸ್ಮಾಭಿರ್ನ ದೃಶ್ಯತೇ ತಥಾಪಿ ಅಸ್ತೀತಿ ವಿಶ್ವಾಸಂ ಕುರುತ ॥ ಈ ವಾಕ್ಯದಲ್ಲಿ ಈಂ ಎಂಬ ಶಬ್ದವು ಪಾದಪೂರಣಾರ್ಥ

ವಾಗಿಯೂ ವಿಜಇವ ಎಂಬಲ್ಲಿ ಇವ ಶಬ್ದವು ಏವಾರ್ಥದಲ್ಲಿಯೂ ಉಪಯೋಗಿಸಲ್ಪಟ್ಟಿರುವುದು. ಆದುದರಿಂದ ಈ ವಾಕ್ಯಕ್ಕೆ—ಇಂದ್ರನು ಶತ್ರುಗಳನ್ನು ಸದೆಬಡಿದು ಅವರಲ್ಲಿರುವ ಧನಾದಿವಸ್ತುಗಳನ್ನೂ, ಗವಾಶ್ವಾದಿಗಳನ್ನೂ ಆಕ್ರಮಿಸಿ ಸೂರೆಗೊಳ್ಳುವನು. ಆದ್ದರಿಂದ ಎಲೈ ಮನುಷ್ಯರೇ, ಇಂದ್ರನಲ್ಲಿ ಶ್ರದ್ಧೆಯನ್ನು (ನಂಬಿಕೆಯನ್ನು) ಇಡಿ ಎಂದರೆ ಇಂದ್ರನು ಇರುವನೆಂಬ ವಿಷಯದಲ್ಲಿ ವಿಶ್ವಾಸವಿಡಿ. ಏಕೆಂದರೆ, ಇಂದ್ರನು ನಮ್ಮ ಕಣ್ಣಿಗೆ ಕಾಣಿಸದಿದ್ದರೂ ಅವನು ಮಾಡುವ ಸಾಹಸಕೃತ್ಯಗಳು ನಮ್ಮ ದೃಷ್ಟಿಗೆ ಗೋಚರವಾಗುವುದರಿಂದ ಇರುವನೆಂಬ ವಿಷಯದಲ್ಲಿ ವಿಶ್ವಾಸವನ್ನು (ನಂಬಿಕೆಯನ್ನು) ಇಡಿ ಎಂದು ಋಷಿಯು ಜನರನ್ನು ನಿರ್ದೇಶಿಸಿ ಹೇಳಿರುವನು.

---

ಸಂಹಿತಾಪಾಠಃ

ಯೋ ರಧ್ರಸ್ಯ ಚೋದಿತಾ ಯಃ ಕೃಶಸ್ಯ ಯೋ ಬ್ರಹ್ಮಣೋ ನಾಧಮಾನಸ್ಯ ಕೀರೇಃ ।

ಯುಕ್ತಗ್ರಾವ್ಣೋ ಯೋಽವಿತಾ ಸುಶಿಪ್ರಃ ಸುತಸೋಮಸ್ಯ ಸ ಜನಾಸ ಇಂದ್ರಃ ॥ ೬ ॥

ಪದಪಾಠಃ

ಯಃ । ರಧ್ರಸ್ಯ । ಚೋದಿತಾ । ಯಃ । ಕೃಶಸ್ಯ । ಯಃ । ಬ್ರಹ್ಮಣಃ । ನಾಧಮಾನಸ್ಯ । ಕೀರೇಃ ।

ಯುಕ್ತಽಗ್ರಾವ್ಣಃ । ಯಃ । ಅವಿತಾ । ಸುಽಶಿಪ್ರಃ । ಸುತಽಸೋಮಸ್ಯ । ಸಃ । ಜನಾಸಃ । ಇಂದ್ರಃ ॥

ಸಾಯಣಭಾಷ್ಯಂ

ಯೋ ರಧ್ರಸ್ಯ ॥ ರಧಹಿಂಸಾಸಂರಾದ್ಧ್ಯೋಃ ॥ ಸಮೃದ್ಧಸ್ಯ ಚೋದಿತಾ ಧನಾನಾಂ ಪ್ರೇರಯಿತಾ ಭವತಿ । ಯಶ್ಚ ಕೃಶಸ್ಯ ಚ ದರಿದ್ರಸ್ಯ ಚ ಯಶ್ಚ ನಾಧಮಾನಸ್ಯ ॥ ನಾಧೃ ಣಾಧೃ ಯಾಚ್ಞೋಪತಾಪೈಶ್ವರ್ಯಾಶೀಃಷು ॥ ಯಾಚಮಾನಸ್ಯ ಕೀರೇಃ ॥ ಕರೋತೇಃ ಕೀರ್ತಯತೇರ್ವಾ॥ ಸ್ತೋತುರ್ಬ್ರಹ್ಮಣೋ ಬ್ರಾಹ್ಮಣಸ್ಯ ಚ ಧನಾನಾಂ ಪ್ರೇರಯಿತಾ । ಯಶ್ಚ ಸುಶಿಪ್ರಃ ಶೋಭನಹನುಃ ಸುಶೀರ್ಷಕೋ ವಾ ಸನ್ ಯುಕ್ತಗ್ರಾವ್ಣೋಽಭಿಷವಾರ್ಥಮುದ್ಯತಗ್ರಾವ್ಣಃ ಸುತಸೋಮಸ್ಯಾಭಿಷುತಸೋಮಸ್ಯ ಯಜಮಾನಸ್ಯಾವಿತಾ ರಕ್ಷಿತಾ ಭವತಿ ಸ ಏವೇಂದ್ರೋ ನಾಹಮಿತಿ । ಬ್ರಹ್ಮಶಬ್ದಸ್ಯ ತ್ವನ್ನಪರತ್ವೇ ಹ್ಯಾದ್ಯುದಾತ್ತತಾ ಸ್ಯಾತ್ ಯಥಾ ಬ್ರಹ್ಮವನ್ವಾನೋ ಅಜರಂ ಸುವೀರಂ । ೩-೮-೨ । ಇತಿ । ಅಯಂ ತ್ವಂತೋದಾತ್ತಃ ಪಠ್ಯತೆ ಇತಿ ನಾನ್ನಪರಃ ॥

### ಪ್ರತಿಪದಾರ್ಥ

**ಜನಾಸಃ**—ಎಲೈ ಜನರೇ । **ಯಃ**—ಯಾವನು । **ರಧ್ರಸ್ಯ**—ಧನಿಕನಾದವನಿಗೂ । **ಚೋದಿತಾ**—(ಧನವನ್ನು) ಒದಗಿಸುವನೋ । **ಯಃ**—ಯಾರು । **ಕೃಶಸ್ಯ**—ದರಿದ್ರನಿಗೂ (ಒದಗಿಸುವನೋ) । **ಯಃ**—ಯಾರು **ನಾಧಮಾನಸ್ಯ**—ಯಾಚಿಸತಕ್ಕವನಿಗೂ । **ಕೀರೇಃ**—ಸ್ತುತಿಕಾರನಾದ । **ಬ್ರಹ್ಮಣಃ**—ಋತ್ವಿಕ್ಕಿಗೂ ಧನವನ್ನು (ಒದಗಿಸುವನೋ) । **ಯಃ**—ಯಾರು । **ಸುಶಿಪ್ರಃ**—ಶ್ರೇಷ್ಠವಾದ ಕೆನ್ನೆಯುಳ್ಳವನಾಗಿ । **ಯುಕ್ತಗ್ರಾವ್ಣಃ**—ಸೋಮರಸವನ್ನು ಹಿಂಡುವ ಕಲ್ಲನ್ನು ಕೈಯಲ್ಲಿ ಹಿಡಿದಿರುವವನೂ । **ಸುತಸೋಮಸ್ಯ**—ಸೋಮರಸವನ್ನು ಹಿಂಡಿರುವವನೂ ಆದ ಯಜಮಾನನ । **ಅವಿತಾ**—ರಕ್ಷಕನಾಗಿರುತ್ತಾನೆಯೋ । **ಸಃ**—ಅವನೇ । **ಇಂದ್ರಃ**—ಇಂದ್ರನು.

### ಭಾವಾರ್ಥ

ಎಲೈ ಜನರೇ, ಯಾವನು ಧನಿಕನಿಗೂ, ದರಿದ್ರನಿಗೂ, ಅವನನ್ನು ಯಾಚಿಸುವವನಿಗೂ ಸ್ತುತಿಕಾರನಾದ ಋತ್ವಿಕ್ಕಿಗೂ ಏಕಪ್ರಕಾರವಾಗಿ ಧನವನ್ನು ಒದಗಿಸುತ್ತಾನೆಯೋ, ಯಾರು ಶ್ರೇಷ್ಠವಾದ ಕೆನ್ನೆಯುಳ್ಳವನಾಗಿರುವನೋ ಮತ್ತು ರಸವನ್ನು ಹಿಂಡುವ ಕಲ್ಲನ್ನು ಕೈಯಲ್ಲಿ ಹಿಡಿದಿರುವವನೂ, ಸೋಮರಸವನ್ನು ಹಿಂಡಿರುವವನೂ ಆದ ಯಜಮಾನನ ರಕ್ಷಕನಾಗಿರುತ್ತಾನೆಯೋ ಅವನೇ ಇಂದ್ರನು.

### English Translation

He, who is the encourager of the rich, and of the poor, and of the priest, who recites his praise, and is a suppliant; who, of goodly features, is the protector of him, who, with ready stones, expresses the Soma juice; he, men, is Indra.

### ವಿಶೇಷವಿಷಯಗಳು

**ಯೋ ರಧ್ರಸ್ಯ ಚೋದಿತಾ**—ರಧ ಹಿಂಸಾಸಂರಾದ್ಧ್ಯೋಃ । **ಸಮೃದ್ಧಸ್ಯ ಚೋದಿತಾ** । ರಧ ಧಾತುವಿಗೆ ಹಿಂಸೆ ಮತ್ತು ಸಮೃದ್ಧಿ ಎಂಬ ಎರಡು ಅರ್ಥಗಳಲ್ಲಿ ಪ್ರಯೋಗವಿರುವುದರಿಂದ ಇಲ್ಲಿ ಸಮೃದ್ಧಿ ಎಂಬ ಅರ್ಥವನ್ನು ಸ್ವೀಕರಿಸಿ, ರಧ್ರಸ್ಯ ಎಂಬ ಶಬ್ದಕ್ಕೆ ಧನಾದಿಗಳಿಂದ ಸಮೃದ್ಧಿಯಾಗಿರತಕ್ಕ ಪುರುಷನ ಎಂದು ಅರ್ಥಮಾಡಿರುವರು. ಆದುದರಿಂದ ಇಲ್ಲಿ **ರಧ್ರಸ್ಯ ಚೋದಿತಾ** ಎಂದರೆ ಮೊದಲೇ ಧನಾದಿಗಳಿಂದ ಸಹಿತನಾಗಿ ಅನುಕೂಲವಾಗಿರುವ ಪುರುಷನಿಗೆ ಧನಾದಿದ್ರವ್ಯಪ್ರೇರಕನಾದವನು ಎಂದರೆ ಧನಾದಿಗಳನ್ನು ಕೊಡುವವನು ಎಂದಭಿಪ್ರಾಯವು.

**ಯಃ ಕೃಶಸ್ಯಯಃ ಬ್ರಹ್ಮಣಃ ನಾಧಮಾನಸ್ಯ ಕೀರೇಃ ಬ್ರಹ್ಮಣಃ**-ಮೇಲೆ ಹೇಳಿದಂತೆ ಇಂದ್ರನು ಐಶ್ವರ್ಯವಂತನಿಗೆ ಮಾತ್ರ ಧನಾದಿಗಳನ್ನು ಕೊಟ್ಟುಸಹಾಯಮಾಡುತ್ತಾನೆ, ಇತರರನ್ನುಉಪೇಕ್ಷಿಸುತ್ತಾನೆ ಎಂದಲ್ಲ. ಎಲ್ಲರನ್ನೂ ಒಂದೇ ವಿಧವಾಗಿ ನೋಡುವನು ಎಂದು ಈ ವಾಕ್ಯದಲ್ಲಿ ಹೇಳಿದೆ ಅದರಂತೆ **ಕೃಶಸ್ಯ**—ಸರಿಯಾದ ಅನ್ನಾದ್ಯಾಹಾರಗಳಿಲ್ಲದೆ ಅಥವಾ ದ್ರವ್ಯಾಭಾವದಿಂದ ಪುಷ್ಟಿಯಿಲ್ಲದೆ ಇರುವ ದರಿದ್ರನಿಗೂ, **ನಾಧಮಾನಸ್ಯ**-ಯಾಚನೆಮಾಡುವವನಿಗೂ ಎಂದರೆ ನಿರ್ಗತಿಕನಾಗಿ ಭಿಕ್ಷಾವೃತ್ತಿಯಿಂದ ಜೀವಿಸುವವನಿಗೂ, **ಕೀರೇಃ ಬ್ರಹ್ಮಣಃ**-ಸ್ತೋತ್ರಮಾಡುವ ಬ್ರಾಹ್ಮಣನಿಗೂ ಅಥವಾ ಬ್ರಹ್ಮನೆಂಬ ಋತ್ವಿಜನಿಗೂ, ಇವರೆಲ್ಲರಿಗೂ ಇಂದ್ರನು ಪಕ್ಷಪಾತವಿಲ್ಲದೆ ಒಂದೇ ಸಮನಾಗಿ

ಧನಾದಿಗಳನ್ನು ಕೊಡುವವನೆಂದಭಿಪ್ರಾಯವು. ಯಾಸ್ಕರು ನಾಧಮಾನಾಃ ಎಂಬ ಶಬ್ದಕ್ಕೆ ಯಾಚಮಾನಾಃ ಎಂದು ನಿರ್ವಚನವನ್ನು ಹೇಳಿರುವರು (ನಿ. ೪-೨) ಮತ್ತು ಕೀರಿ ಶಬ್ದವನ್ನು :ಸ್ತೋತೃನಾಮಗಳಲ್ಲಿ ಪಠಿಸಿರುವರು. (ನಿ. ೩-೧೯).

**ಯುಕ್ತಗ್ರಾವ್ಣೋ ಯೋಽವಿತಾ ಸುಶಿಪ್ರಃ ಸುತಸೋಮಸ್ಯ**—ಯಶ್ಚ ಸುಶಿಪ್ರಃ ಶೋಭನಹನುಃ ಸುಶೀರ್ಷಕೋ ವಾ ಸನ್ ಯುಕ್ತಗ್ರಾವ್ಣೋಽಭಿಷವಾರ್ಥಮುದ್ಯತಗ್ರಾವ್ಣಃ ಸುತಸೋಮಸ್ಯಾಭಿಷುತಸೋಮಸ್ಯ ಯಜಮಾನಸ್ಯಾವಿತಾ ರಕ್ಷಿತಾ ಭವತಿ—ಇಲ್ಲಿ ಗ್ರಾವ್ಣಃ ಎಂಬುದು ಗ್ರಾವನ್ ಶಬ್ದದ ಷಷ್ಠ್ಯೇಕವಚನವು. ಯಾಸ್ಕರು ಗ್ರಾವಾಣಃ ಎಂಬ ಶಬ್ದಕ್ಕೆ ಗ್ರಾವಾಣೋ ಹಂತೇರ್ವಾ ಗೃಹ್ಣಾತೇರ್ವಾ (ನಿ. ೯-೮) ಎಂದು ನಿರ್ವಚನವನ್ನು ಹೇಳಿರುವರು. ಎಂದರೆ, ಇದು (ಕಲ್ಲು) ಸೋಮಲತೆಯನ್ನು ಹಿಂಸಿಸಿ ಎಂದರೆ ಜಜ್ಜುವುದಕ್ಕಾಗಿ ಕೈಯಲ್ಲಿ (ಗೃಹ್ಣಾತೇರ್ವಾ) ತೆಗೆದುಕೊಳ್ಳುವುದರಿಂದ ಇದಕ್ಕೆ ಗ್ರಾವಾಣಃ ಎಂದು ಹೆಸರು. ಅಥವಾ ಗೃಣಾತೇರ್ವಾ—ಸ್ತೂಯಂತೇರ್ವಾ, ಸ್ತುತಿಸಲ್ಪಡುವುದರಿಂದ ಇದಕ್ಕೆ ಗ್ರಾವಾಣಃ ಎಂದು ಹೆಸರು ಎಂದು ಅರ್ಥವಿವರಣೆಮಾಡಿರುವರು. ಇಲ್ಲಿ ಯುಕ್ತಗ್ರಾವ್ಣಃ ಎಂದರೆ ಸೋಮಲತೆಗಳನ್ನು ಜಜ್ಜಿ ರಸವನ್ನು ಹಿಂಡುವುದಕ್ಕಾಗಿ ಆ ಕಾರ್ಯಕ್ಕೆ ಬೇಕಾದ ಗ್ರಾವಾಣಃ ಎಂಬ ಕಲ್ಲುಗಳನ್ನು ಹಿಡಿದು ಸಿದ್ಧವಾಗಿ ನಿಂತಿರುವ ಎಂದರ್ಥವು.

**ಸುಶಿಪ್ರಃ**—ಉತ್ತಮವಾದ ಕೆನ್ನೆಗಳುಳ್ಳವನು ಅಥವಾ ಶಿರಸ್ಸುಳ್ಳವನು ಎಂದರೆ ಸುಂದರಾಕೃತಿಯುಳ್ಳ ಇಂದ್ರನೆಂದರ್ಥವು.

**ಸುತಸೋಮಸ್ಯ**--ಇಂದ್ರನಿಗೆ ಅರ್ಪಿಸುವುದಕ್ಕಾಗಿ ಸೋಮರಸವನ್ನು ಹಿಂಡಿ ಸಿದ್ಧಪಡಿಸಿಟ್ಟುಕೊಂಡು ಕಾದಿರುವ ಯಜಮಾನನ ಎಂದಭಿಪ್ರಾಯವು.

ಇಂದ್ರನು, ಸೋಮರಸವನ್ನು ಸಿದ್ಧಪಡಿಸುವುದಕ್ಕಾಗಿ ಸಾಧನಭೂತವಾದ ಗ್ರಾವಾ ಎಂಬ ಸೋಮಲತೆಗಳನ್ನು ಜಜ್ಜುವ ಕಲ್ಲುಗಳನ್ನು ಕೈಗಳಲ್ಲಿ ಹಿಡಿದುಕೊಂಡು ಮತ್ತು ಹಿಂಡಿದ ಸೋಮರಸವನ್ನು ಇಂದ್ರನಿಗೆ ಅರ್ಪಿಸುವುದಕ್ಕಾಗಿ ಸಿದ್ಧಪಡಿಸಿಟ್ಟುಕೊಂಡು ಕಾದಿರುವ ಯಜಮಾನನ್ನು ಕಾಪಾಡುವನು ಎಂದು ವಾಕ್ಯಾರ್ಥವು.

---

### ಸಂಹಿತಾಪಾಠಃ

**ಯಸ್ಯಾಶ್ವಾಸಃ ಪ್ರದಿಶಿ ಯಸ್ಯ ಗಾವೋ ಯಸ್ಯ ಗ್ರಾಮಾ ಯಸ್ಯ ವಿಶ್ವೇ ರಥಾಸಃ ।**
**ಯಃ ಸೂರ್ಯಂ ಯ ಉಷಸಂ ಜಜಾನ ಯೋ ಅಪಾಂ ನೇತಾ ಸ ಜನಾಸ ಇಂದ್ರಃ ॥ ೭ ॥**

### ಪದಪಾಠಃ

ಯಸ್ಯ । ಅಶ್ವಾಸಃ । ಪ್ರದಿಶಿ । ಯಸ್ಯ । ಗಾವಃ । ಯಸ್ಯ । ಗ್ರಾಮಾಃ । ಯಸ್ಯ । ವಿಶ್ವೇ । ರಥಾಸಃ । ಯಃ । ಸೂರ್ಯಂ । ಯಃ । ಉಷಸಂ । ಜಜಾನ । ಯಃ । ಅಪಾಂ । ನೇತಾ । ಸಃ । ಜನಾಸಃ । ಇಂದ್ರಃ ॥ ೭ ॥

### ಸಾಯಣಭಾಷ್ಯಂ

**ಯಸ್ಯ ಸರ್ವಾಂತರ್ಯಾಮಿತಯಾ ವರ್ತಮಾನಸ್ಯ ಪ್ರದಿಶಿ ಪ್ರದೇಶನೇಽನುಶಾಸನೇಽಶ್ವಾಸೋಽಶ್ವಾ ವರ್ತಂತೇ । ಯಸ್ಯಾನುಶಾಸನೇ ಗಾವಃ । ಯಸ್ಯಾನುಶಾಸನೇ ಗ್ರಾಮಾಃ । ಗ್ರಸಂತೇಽತ್ರೇತಿ ಗ್ರಾಮಾ ಜನಪದಾಃ । ಯಸ್ಯಾಜ್ಞಾಯಾಂ ವಿಶ್ವೇ ಸರ್ವೇ ರಥಾಸೋ ರಥಾ ವರ್ತಂತೇ । ಯಶ್ಚ ವೃತ್ರಂ ಹತ್ವಾ ಸೂರ್ಯಂ ಜಜಾನ । ಜನಯಾಮಾಸ । ಯಶ್ಚೋಷಸಂ । ತಥಾ ಮಂತ್ರಃ ಜಜಾನ ಸೂರ್ಯಮುಷಸಂ ಸುದಂಸಾಃ । ೩-೩೨-೮ । ಇತಿ । ಯಶ್ಚ ಮೇಘಭೇದನದ್ವಾರಾಪಾಂ ನೇತಾ ಪ್ರೇರಕಃ ಸ ಇಂದ್ರ ಇತ್ಯಾದಿ ಪ್ರಸಿದ್ಧಂ ॥**

### ಪ್ರತಿಪದಾರ್ಥ

**ಜನಾಸಃ**—ಎಲೈ ಜನರೇ । **ಯಸ್ಯ**—ಯಾವ ಸರ್ವಾಂತರ್ಯಾಮಿಯಾದವನ । **ಪ್ರದಿಶಿ**—ಅನುಶಾಸನದಲ್ಲಿ। **ಅಶ್ವಾಸಃ**—ಅಶ್ವಗಳಿರುತ್ತವೆಯೋ । **ಯಸ್ಯ**- ಯಾವನ ಆಜ್ಞಾವರ್ತಿಯಾಗಿ । **ಗಾವಃ**—ಗೋವುಗಳಿರುವುವೋ । **ಯಸ್ಯ**—ಯಾವನ ನಿಯಮನದಲ್ಲಿ । **ಗ್ರಾಮಾಃ** - ಗ್ರಾಮುಗಳಿರುವುವೋ । **ಯಸ್ಯ**—ಯಾವನ ನಿಯಮನದಲ್ಲಿ । **ವಿಶ್ವೇ ರಥಾಸಃ**—ಸಕಲ ರಥಗಳೂ ಇವೆಯೋ (ಮತ್ತು) । **ಯಃ**—ಯಾವನು (ವೃತ್ರಾಸುರನನ್ನು ಕೊಂದು) । **ಸೂರ್ಯಂ**—ಸೂರ್ಯನನ್ನು । **ಜಜಾನ**—ಸೃಷ್ಟಿಸಿದನೋ (ಮತ್ತು) । **ಯಃ**—ಯಾವನು । **ಉಷಸಂ**—ಉಷಸ್ಸನ್ನು ಸೃಷ್ಟಿಸಿದನೋ । **ಯಃ**—ಯಾರು (ಮೇಘವನ್ನು ಭೇದಿಸಿ) । **ಅಪಾಂ**—ಉದಕಗಳಿಗೆ । **ನೇತಾ**—ಪ್ರೇರಕನಾಗಿದ್ದಾನೆಯೋ । **ಸಃ** - ಅವನೇ । **ಇಂದ್ರಃ**—ಇಂದ್ರನು

### ಭಾವಾರ್ಥ

ಎಲೈ ಜನರೇ, ಯಾವ ಸರ್ವಾಂತರ್ಯಾಮಿಯಾದವನ ಅನುಶಾಸನದಲ್ಲಿ ಅಶ್ವಗಳೂ, ಗೋವುಗಳೂ, ಗ್ರಾಮುಗಳೂ ಮತ್ತು ಸಕಲ ರಥಗಳೂ ಇವೆಯೋ, ಯಾವನು ವೃತ್ರನನ್ನು ಸಂಹರಿಸಿ ಸೂರ್ಯನನ್ನೂ ಉಷಸ್ಸನ್ನೂ ಸೃಷ್ಟಿಸಿದನೋ, ಯಾರು ಮೇಘವನ್ನು ಭೇದಿಸಿ ಉದಕಗಳಿಗೆ ಪ್ರೇರಕನಾಗಿದ್ದಾನೆಯೋ ಅವನೇ ಇಂದ್ರನು,

### English Translation

He, under whose control are horses and cattle, and villages, and all chariots: he who gave birth to the sun and to the dawn: and who is the leader of the waters: he, men, is Indra.

### ವಿಶೇಷವಿಷಯಗಳು

**ಪ್ರದಿಶಿ—ಪ್ರದೇಶನೇ ಅನುಶಾಸನೇ** । ನಿಯಮನದಲ್ಲಿ, ಆಜ್ಞೆಗೆ ಒಳಗಾಗಿ (Under his control) ಇಂದ್ರನ ಆಜ್ಞೆಗೆ ಅಥವಾ ಅಧೀನಕ್ಕೆ ಒಳಪಟ್ಟು ಎಂದರ್ಥವು.

**ಗ್ರಾಮಾಃ—ಗ್ರಸಂತೇಽತ್ರೇತಿ ಗ್ರಾಮಾ ಜನಪದಾಃ** । ಸಾಯಣರು ಗ್ರಾಮಃ ಎಂಬ ಶಬ್ದಕ್ಕೆ ಜನಪದ ಅಥವಾ ಜನಾಂಗಗಳು ಎಂದರೆ ಒಂದು ರಾಷ್ಟ್ರದ ಜನರು ಎಂದು ಅರ್ಥವಿವರಣೆಮಾಡಿರುವರು- ಜನರು ವಾಸಿಸುವ ಗ್ರಾಮ, ನಗರ ಮೊದಲಾದ ವಾಸಸ್ಥಾನಗಳು ಎಂದೂ ಹೇಳಬಹುದು.

**ಅಶ್ವಾಸಃ ಗಾವಃ ಗ್ರಾಮಾಃ ರಥಾಸಃ**--ಅಶ್ವಗಳು, ಗೋವುಗಳು, ಗ್ರಾಮಗಳು ಮತ್ತು ರಥಗಳು ಎಂಬ ನಾಲ್ಕುವಿಧಗಳು ಮಾತ್ರ ಇಂದ್ರನ ಅಧೀನಕ್ಕೆ ಒಳಪಟ್ಟಿರುವವು, ಇತರ ವಸ್ತುಗಳಲ್ಲ ಎಂದು ತಿಳಿಯಬಾರದು. ಲೋಕದಲ್ಲಿರುವ ವಸ್ತುಗಳೆಲ್ಲವನ್ನೂ ಒಂದೊಂದಾಗಿ ಹೇಳುವುದು ಸಾಧ್ಯವಲ್ಲದ್ದರಿಂದ ಕೆಲವನ್ನು ಮಾತ್ರ ಇಲ್ಲಿ ಹೇಳಿದೆ ಅದರಂತೆ ಲೋಕದಲ್ಲಿರುವ ಸಮಸ್ತ ಪ್ರಾಣಿಗಳೂ ವಸ್ತುಗಳೂ ಇಂದ್ರನ ಆಜ್ಞೆಗೆ ಒಳಪಟ್ಟಿರುವವೆಂದು ತಿಳಿಯಬೇಕು.

**ರಥಾಸಃ**—ರಥ ಶಬ್ದಕ್ಕೆ ಯಾಸ್ಕರು ತಮ್ಮ ನಿರುಕ್ತದಲ್ಲಿ—**ರಥೋ ರಂಹತೇರ್ಗತಿಕರ್ಮಣಃ । ಸ್ಥಿರತೇರ್ವಾ ಸ್ಯಾದ್ವಿಪರೀತಸ್ಯ । ರಮಮಾಣೋಽಸ್ಮಿಂಸ್ತಿಷ್ಠತೀತಿ ವಾ ರಪತೇರ್ವಾ ರಸತೇರ್ವಾ** (ನಿ. ೯-೧೧) ಎಂದು ನಿರ್ವಚನವನ್ನು ಹೇಳಿರುವರು- ಎಂದರೆ ಗತಿಕರ್ಮವನ್ನು ಸೂಚಿಸುವ ರಂಹ್ ಧಾತುವಿನಿಂದಾಗಲಿ, ಸ್ಥಿರವಾಗಿರು ಎಂಬರ್ಥವುಳ್ಳ ಸ್ಥಿರತಿ ಧಾತುವಿನಿಂದಾಗಲಿ (ಇಲ್ಲಿ ಸ್ಥಿರತಿ ಧಾತುವಿನ ಮೊದಲ ಎರಡು ಅಕ್ಷರಗಳನ್ನು ಹಿಂದುಮುಂದು ಮಾಡಿಕೊಳ್ಳಬೇಕು) ರಥಶಬ್ದವು ನಿಷ್ಪನ್ನವಾಗಬಹುದು. ಈ ರಥವು ಯಾವಾಗಲೂ ಹೋಗುತ್ತಿರು (ಸಂಚರಿಸುತ್ತಿರು) ವುದರಿಂದ ಇದಕ್ಕೆ ರಥವೆಂದು ಹೆಸರು. ಅಥವಾ ಇದರಲ್ಲಿ ಕುಳಿತುಕೊಳ್ಳುವ ಯೋಧನು ಸ್ಥಿರವಾಗಿರುವನು- ಎಂದರೆ, ಅಶ್ವಾದಿವಾಹನಗಳ ಮೇಲೆ ಕುಳಿತುಕೊಂಡಾಗ ಶರೀರವು ಅಲುಗಾಡುವಂತೆ ರಥದಲ್ಲಿ ಕುಳಿತಾಗ ಅಲುಗಾಡದೆ ಸ್ಥಿರವಾಗಿ ಕುಳಿತುಕೊಳ್ಳಲು ಸಾಧ್ಯವಾಗುವುದರಿಂದ ಇದಕ್ಕೆ ರಥವೆಂದು ಹೆಸರು. ಅಥವಾ ಈ ರಥದಲ್ಲಿ ಕುಳಿತು ವಿಹರಿಸುವುದರಿಂದ ಇದಕ್ಕೆ ರಥವೆಂದು ಹೆಸರು ಎಂದು ಅವಯವಾರ್ಥಗಳನ್ನು ವಿವರಿಸಿರುವರು.

**ಯಃ ಸೂರ್ಯಂ ಯಃ ಉಷಸಂ ಜಜಾನ**—ಇಂದ್ರನು ಸೂರ್ಯನನ್ನೂ ಉಷೋದೇವತೆಯನ್ನೂ ಉತ್ಪಾದನೆಮಾಡಿದನು. ಈ ವಿಷಯದಲ್ಲಿ—

> **ಇಂದ್ರಸ್ಯ ಕರ್ಮ ಸುಕೃತಾ ಪುರೂಣಿ ವ್ರತಾನಿ ದೇವಾ ನ ಮಿನಂತಿ ವಿಶ್ವೇ ।**
> **ದಾಧಾರ ಯಃ ಪೃಥಿವೀಂ ದ್ಯಾಮುತೇಮಾಂ ಜಜಾನ ಸೂರ್ಯಮುಷಸಂ ಸುದಂಸಾಃ ॥**
>
> (ಋ. ಸಂ. ೩-೩೨-೮)

ಎಂಬ ಋಕ್ಕಿನಲ್ಲಿ ಶ್ರೇಷ್ಠಕರ್ಮಕರ್ತನಾದ ಇಂದ್ರನು ಪೃಥಿವಿಯನ್ನೂ, ಸ್ವರ್ಗವನ್ನೂ ಧರಿಸಿರುವನು ಮತ್ತು ಸೂರ್ಯನನ್ನೂ, ಉಷಸ್ಸನ್ನೂ ಸೃಷ್ಟಿಸಿದನು ಎಂದು ಹೇಳಿದೆ.

**ಯಃ ಅಪಾಂ ನೇತಾ**-ಯಶ್ಚ ಮೇಘಭೇದನದ್ವಾರಾಪಾಂ ನೇತಾ ಪ್ರೇರಕಃ । ಇಂದ್ರನು ಅಂತರಿಕ್ಷದಲ್ಲಿ ವೃತ್ರನಿಂದ ತಡೆಯಲ್ಪಟ್ಟಿರುವ ಮೇಘಗಳನ್ನು ಪ್ರಹರಿಸಿ ಉದಕವನ್ನು ಸುರಿಸುವಂತೆ ಮಾಡುವುದರಿಂದ ಇಂದ್ರನು ಉದಕಗಳಿಗೆ ಪ್ರೇರಕನೆಂದು ಹೇಳಲ್ಪಡುವನು ಎಂದರೆ ಇಂದ್ರನ ಪ್ರೇರಣೆಯಿಂದಲೇ ಮೇಘಗಳು ವೃಷ್ಟಿಯನ್ನು ಸುರಿಸುವವು. ಆ ವೃಷ್ಟಿಯಿಂದ ಉದಕವು ಭೂಮಿಗೆ ಬಂದು ಸೇರುವುದು ಎಂದಭಿಪ್ರಾಯವು.

---

**ಸಂಹಿತಾಪಾಠಃ**

ಯಂ ಕ್ರಂದಸೀ ಸಂಯತೀ ವಿಹ್ವಯೇತೇ ಪರೇಽವರ ಉಭಯಾ ಅಮಿತ್ರಾಃ ।
ಸಮಾನಂ ಚಿದ್ರಥಮಾತಸ್ಥಿವಾಂಸಾ ನಾನಾ ಹವೇತೇ ಸ ಜನಾಸ ಇಂದ್ರಃ ॥ ೮ ॥

ಪದಪಾಠಃ

ಯಂ । ಕ್ರಂದಸೀ ಇತಿ । ಸಂಯತೀ ಇತಿ ಸಂऽಯತೀ । ವಿಹ್ವಯೇತೇ ಇತಿ ವಿऽಹ್ವಯೇತೇ । ಪರೇ ।
ಅವರೇ । ಉಭಯಾಃ । ಅಮಿತ್ರಾಃ ।

ಸಮಾನಂ । ಚಿತ್ । ರಥಂ । ಆತಸ್ಥಿऽವಾಂಸಾ । ನಾನಾ । ಹವೇತೇ ಇತಿ । ಸಃ । ಜನಾಸಃ । ಇಂದ್ರಃ ॥ ೮ ॥

ಸಾಯಣಭಾಷ್ಯಂ

ಯಂ ಕ್ರಂದಸೀ ರೋದಸೀ ಶಬ್ದಂ ಕುರ್ವಾಣೇ ಮಾನುಷೀ ದೇವೀ ಚ ದ್ವೇ ಸೇನೇ ವಾ ಸಂಯತೀ ಪರಸ್ಪರಂ ಸಂಗಚ್ಛಂತ್ಯೌಯಮಿಂದ್ರಂ ವಿಹ್ವಯೇತೇ। ಸ್ವರಕ್ಷಾರ್ಥಂ ವಿವಿಧಮಾಹ್ವಯತಃ। ಪರ ಉತ್ಕೃಷ್ಟಾ ಅವರೇಽಧಮಾಶ್ಚೋಭಯಾ ಉಭಯವಿಧಾ ಉಭಯೇವಾಹ್ವಯಂತಿ । ಸಮಾನಮಿಂದ್ರರಥಸದೃಶಂ ರಥಮಾತಸ್ಥಿವಾಂಸಾ ಆಸ್ಥಿತೌ ದ್ವೌ ರಥಿನೌ ತಮೇವೇಂದ್ರಂ ನಾನಾ ಪೃಥಕ್ ಪೃಥಕ್ ಹವೇತೇ । ಆಹ್ವಯೇತೇ । ಯದ್ವಾ ಸಮಾನಮೇಕರಥಮಾರೂಢಾವಿಂದ್ರಾಗ್ನೀ ಹವೇತೇ । ಯಜ್ಞಾರ್ಥಂ ಯಜಮಾನೈಃ ಪೃಥಗಾಹೂಯೇತೇ । ತಯೋರನ್ಯತರಃ ಸ ಇಂದ್ರೋ ನಾಹಮಿತಿ ॥

ಪ್ರತಿಪದಾರ್ಥ

**ಜನಾಸಃ**—ಎಲೈ ಜನರೇ । **ಯಂ**—ಯಾವನನ್ನು । **ಕ್ರಂದಸೀ**—ದ್ಯಾವಾಪೃಥಿವಿಗಳೆರಡೂ ಅಥವಾ ಶಬ್ದವನ್ನು ಮಾಡತಕ್ಕ ದೇವಸೇನೆಯೂ ಮತ್ತು ಮಾನವಸೇನೆಯೂ ಸಹ । **ಸಂಯತೀ**—ಒಟ್ಟಿಗೆ ಸೇರಿಕೊಂಡು । **ವಿಹ್ವಯೇತೇ**—ರಕ್ಷಣಾರ್ಥವಾಗಿ ಕರೆಯುತ್ತವೆಯೋ । **ಪರೇ**—ಉತ್ಕೃಷ್ಟರಾದವರೂ । **ಅವರೇ** – ಅಧಮರಾದವರೂ । **ಉಭಯಾಃ**—ಈ ಉಭಯವಿಧದವರೂ ಆದ । **ಅಮಿತ್ರಾಃ**—ಶತ್ರುಗಳೂ ಸಹ ಕರೆಯುತ್ತಾರೆಯೋ । **ಸಮಾನಂ ಚಿತ್**—ಇಂದ್ರರಥಕ್ಕೆ ಸದೃಶವಾದ । **ರಥಂ**—ರಥವನ್ನು । **ಆತಸ್ಥಿವಾಂಸಾ**—ಹತ್ತಿ ಕುಳಿತಿರುವ ಎರಡು ರಥಿಕರೂ । **ನಾನಾ ಹವೇತೇ**—ಬೇರೆ ಬೇರೆಯಾಗಿ ಕರೆಯುತ್ತಾರೆಯೋ । **ಸಃ**—ಅವನೇ । ಇಂದ್ರಃ—ಇಂದ್ರನು.

ಭಾವಾರ್ಥ

ಎಲೈ ಜನರೇ, ದೇವಸೇನೆಯೂ ಮಾನವಸೇನೆಯೂ ಒಟ್ಟಿಗೆ ಶಬ್ದಮಾಡಿಕೊಂಡು ಯಾವನನ್ನು ರಕ್ಷಣಾರ್ಥವಾಗಿ ಕರೆಯುತ್ತವೆಯೋ ಮತ್ತು ಉತ್ಕೃಷ್ಟರೂ ಅಧಮರೂ ಆದ ಶತ್ರುಗಳೂ ಸಹ ಕರೆಯುತ್ತಾರೆಯೋ, ಮತ್ತು ಇಂದ್ರರಥಕ್ಕೆ ಸದೃಶವಾದ ರಥವನ್ನು ಹತ್ತಿಕುಳಿತಿರುವ ಮತ್ತು ಇಬ್ಬರು ರಥಿಕರೂ (ರಕ್ಷಣಾರ್ಥವಾಗಿ) ಯಾರನ್ನು ಬೇರೆ ಬೇರೆಯಾಗಿ ಕರೆಯುತ್ತಾರೆಯೋ, ಅವನೇ ಇಂದ್ರನು.

## English Translation

Whom (two hosts), calling and mutually encountering, call upon; whom both adversaries, high and low, (appeal to); whom two (charioteers), standing in the same car, severally invoke; he, men, is Indra.

## ವಿಶೇಷವಿಷಯಗಳು

ಈ ಋಕ್ಕಿನ ಅರ್ಥವು ಸ್ವಲ್ಪ ತೊಡಕಾಗಿರುವುದು. ಅಥವಾ ಸಾಯಣರು ವಿವರಿಸಿರುವ ಅರ್ಥವು ಅಷ್ಟು ಸಮಂಜಸವಾಗಿಲ್ಲ. ಸಾಯಣರು ವಿವರಿಸಿರುವಂತೆ—ಎಲೈ ಜನರೇ, ದೇವಸೇನೆಯೂ, ಮಾನವಸೇನೆಯೂ ಒಟ್ಟಿಗೆ ಶಬ್ದ ಮಾಡಿಕೊಂಡು ಯಾವನನ್ನು ರಕ್ಷಣಾರ್ಥವಾಗಿ ಕರೆಯುತ್ತವೆಯೋ, ಮತ್ತು ಉತ್ಕೃಷ್ಟರೂ, ಅಧಮರೂ ಆದ ಶತ್ರುಗಳೂ ಸಹ ಕರೆಯುತ್ತಾರೆಯೋ, ಮತ್ತು ಇಂದ್ರರಥಕ್ಕೆ ಸದೃಶವಾದ ರಥವನ್ನು ಹತ್ತಿಕುಳಿತಿರುವ ಇಬ್ಬರು ರಥಿಕರೂ ರಕ್ಷಣಾರ್ಥವಾಗಿ ಯಾವನನ್ನು ಬೇರೆ ಬೇರೆ ಕರೆಯುತ್ತಾರೆಯೋ ಅವನೇ ಇಂದ್ರನು ಎಂದು ಈ ಋಕ್ಕಿನ ಮುಖ್ಯಾರ್ಥವು. ಇದಕ್ಕೆ ಬೇರೆ ವಿಧವಾದ ಅರ್ಥವೂ ಸಾಧ್ಯವಾಗುವುದು. ಹೇಗೆಂದರೆ—ಎರಡು ಸೇನೆಗಳು ಯುದ್ಧರಂಗದಲ್ಲಿ ಒಟ್ಟಿಗೆ ಸೇರಿ ಯುದ್ಧಮಾಡುತ್ತಿರುವಾಗ ರಕ್ಷಣಾರ್ಥವಾಗಿ ಎರಡು ಸೇನೆಗಳೂ ಇಂದ್ರನನ್ನೇ ಕರೆಯುವವು. ಎಂದರೆ ಇಂದ್ರನು ಒಬ್ಬನ ಅಥವಾ ಒಂದು ಸೇನೆಯ ಪಕ್ಷಪಾತಿಯಲ್ಲ. ಎರಡು ಶತ್ರುಗಳ ಸೇನೆಗಳಲ್ಲಿ ಒಂದು ಉತ್ಕೃಷ್ಟ ಅಥವಾ ಹೆಚ್ಚು ಸಂಖ್ಯೆ ಅಥವಾ ಬಲವುಳ್ಳದ್ದಾಗಿರಬಹುದು. ಇನ್ನೊಂದು ಕನಿಷ್ಠ ಅಥವಾ ಅಲ್ಪಬಲವುಳ್ಳದ್ದಾಗಿರಬಹುದು. ಆದರೂ ಎರಡು ಸೇನೆಗಳವರೂ ಇಂದ್ರನು ತಮಗೇ ರಕ್ಷಕನಾಗಬೇಕೆಂದು ಕರೆಯುವುದರಿಂದ ಇಂದ್ರನು ಇಬ್ಬರಿಗೂ ಬೇಕಾದವನೆಂದೂ ಯಾರ ಒಬ್ಬರ ಪಕ್ಷಪಾತಿಯಲ್ಲವೆಂದೂ ಸ್ಪಷ್ಟವಾಗಿ ವ್ಯಕ್ತವಾಗುವುದು. ಎರಡು ಸೇನೆಗಳವರು ಒಬ್ಬರಿಗೊಬ್ಬರು ವಿರೋಧಿಗಳಾಗಿದ್ದರೂ ಇಬ್ಬರಿಗೂ ಇಂದ್ರನು ಬೇಕಾದವನು. ಆದ್ದರಿಂದ ಇಬ್ಬರೂ ಇವನನ್ನು ಕರೆಯುವರು ಎಂದು ಋಷಿಯ ಆಶಯವಿರಬಹುದು. ಮತ್ತು ಋಕ್ಕಿನ ಉತ್ತರಾರ್ಧದಲ್ಲಿಯೂ ಸಹ ರಥದಲ್ಲಿ ಕುಳಿತು ಯುದ್ಧಮಾಡುತ್ತಿರುವ ಇಬ್ಬರು ಯೋಧರು ತಮ್ಮಿಬ್ಬರಲ್ಲಿಯೂ ಸಮಾನಪ್ರೀತಿಯುಳ್ಳ ಇಂದ್ರನನ್ನೇ ಕರೆಯುವರು. ಎಂದು ಹೇಳಿದೆ. ಇಲ್ಲಿ ಭಾಷ್ಯಕಾರರು **ಸಮಾನಂ ಚಿತ್** ಎಂಬ ಶಬ್ದಗಳಿಗೆ ಇಂದ್ರಸದೃಶಂ **ರಥಮಾತಸ್ಥಿವಾಂಸಾ** ಇಂದ್ರನ ರಥಕ್ಕೆ ಸಮಾನವಾದ ರಥವಲ್ಲಿ ಕುಳಿತಿರುವ ಎಂದರ್ಥಮಾಡಿರುವರು- ಆದರೆ **ಸಮಾನಂ ಚಿತ್** ಎಂಬ ಶಬ್ದಗಳಿಗೆ ಸಮಾನಪ್ರೀತಿಯುಕ್ತನಾದ ಇಂದ್ರನನ್ನೇ ಎಂದು ಅರ್ಥಮಾಡಬಹುದು. ಹಾಗೆ ಮಾಡುವುದೇ ಸರಿ ಎಂದು ತೋರುವುದು.

ಸಾಯಣರು ಮಾಡಿರುವ ಈ ಋಕ್ಕಿನ ಅರ್ಥವಿವರಣೆಯಲ್ಲಿ ಕೆಲವು ಲೋಪಗಳು ಕಂಡು ಬರುವವು. **ಕ್ರಂದಸೀ ಸಂಯತೀ** ಎಂಬ ಶಬ್ದಗಳಿಗೆ **ರೋದಸೀ ಶಬ್ದಂ ಕುರ್ವಾಣೇ** ದ್ಯಾವಾಪೃಥಿವಿಗಳು ಶಬ್ದಮಾಡುತ್ತಾ ರಕ್ಷಣೆಗಾಗಿ ಇಂದ್ರನನ್ನು ಕರೆಯುವವು ಎಂದು ಹೇಳುವುದಾದರೆ ದ್ಯಾವಾಪೃಥಿವಿಗಳಿಗೆ ಪರಸ್ಪರದ್ವೇಷವಿದೆಯೇ ? ಹಾಗಿದ್ದರೆ ಶಬ್ದಮಾಡುತ್ತಾ ಯುದ್ಧದಲ್ಲಿ ತೊಡಗಿ ರಕ್ಷಣಾರ್ಥವಾಗಿ ಇಂದ್ರನ ಸಹಾಯವನ್ನು ಅಪೇಕ್ಷಿಸಿದವೇ ? ಇತ್ಯಾದಿ ಸಂಶಯಗಳು ಉದ್ಭವಿಸುವವು. ಆದುದರಿಂದ ಈ ವಿಧವಾದ ಅರ್ಥವಿವರಣೆಯು ಸರಿಹೋಗುವುದಿಲ್ಲ. ಅಥವಾ ಭಾಷ್ಯಕಾರರು ಹೇಳಿರುವ ಇನ್ನೊಂದು ಅರ್ಥದ ಪ್ರಕಾರ **ಮಾನುಷೀ ದೇವೀ ಚ ದ್ವೇ ಸೇನೇ ವಾ** ಎಂದರೆ ಮನುಷ್ಯಸೇನೆ ಮತ್ತು ದೇವಸೇನೆ ಎಂಬೆರಡು ಸೇನೆಗಳು. ಈ ಅರ್ಥದಲ್ಲಿಯೂ ಸಹ ಮನುಷ್ಯರಿಗೂ ದೇವತೆಗಳಿಗೂ ದ್ವೇಷವೆಲ್ಲಿ ಬಂತು ? ಒಂದುವೇಳೆ ಮನುಷ್ಯರೆಂದರೆ ಅಸುರರೆಂದರ್ಥಮಾಡಿದಲ್ಲಿ ದೇವಾಸುರರು ಪರಸ್ಪರ ವಿರೋಧಿಗಳೆಂಬುದು ಪ್ರಸಿದ್ಧವು ಅವರು ಯುದ್ಧಮಾಡುವುದೂ ಸಹಜವು. ಆದರೆ ಅಸುರರು ಇಂದ್ರನ ವಿರೋಧಿಗಳಾದ್ದರಿಂದ ಇಂದ್ರನ ಸಹಾಯ ಅಥವಾ ರಕ್ಷಣೆಯನ್ನು ಬಯಸುವವರಲ್ಲ. ಆದ್ದರಿಂದ ಈ ಅರ್ಥವೂ ಸರಿಯಾಗಿ ಹೊಂದುವುದಿಲ್ಲ. ಇವಲ್ಲದೆ ಈ ಋಕ್ಕಿನಲ್ಲಿ ಸಾಯಣರು ಹೇಳಿರುವಂತೆ ರೋದಸೀ (ದ್ಯಾವಾಪೃಥಿವಿಗಳು) ಎಂಬ ಶಬ್ದವನ್ನು ಅಧ್ಯಾಹಾರಮಾಡಿಕೊಳ್ಳುವ ಅವಶ್ಯಕತೆಯೇ ಇಲ್ಲ. ಏಕೆಂದರೆ **ಉಭಯಾಃ ಅಮಿತ್ರಾಃ**—ಪರಸ್ಪರ ವಿರೋಧಿಗಳಾದ ಎರಡು ಶತ್ರುಸಂಗಡಗಳು,

ಎಂದು ಋಕ್ಕಿನಲ್ಲಿಯೇ ಸ್ಪಷ್ಟವಾಗಿ ಹೇಳಿದೆ, ಪರೇ ಅವರೇ ಎಂಬ ಶಬ್ದಗಳಿಗೆ ಒಂದು ದೊಡ್ಡಸೇನೆಯೆಂದೂ ಇನ್ನೊಂದು ಸಣ್ಣಸೇನೆಯೆಂದೂ ಅರ್ಥಮಾಡಬಹುದು. ಸಮಾನಂ ಎಂಬ ಶಬ್ದಕ್ಕೆ ರಥ ಎಂಬರ್ಥವನ್ನು ಹೇಳುವುದೂ ಸರಿಯಾಗಿಲ್ಲ. ಇಂದ್ರನನ್ನು ಎಂದೇ ಅರ್ಥಮಾಡಬೇಕು. ಹೀಗೆ ಮಾಡಿದಲ್ಲಿ ಋಕ್ಕಿನ ಅರ್ಥವು ಸ್ಪಷ್ಟವಾಗುವುದು. ಯಾವ ವಿಧವಾದ ತೊಡಕೂ ಇರುವುದಿಲ್ಲ. ಆದ್ದರಿಂದ ಈ ಋಕ್ಕಿಗೆ—

ಎಲೈ ಜನರೇ, ಎರಡು ಶತ್ರುಪಂಗಡಗಳು ಯುದ್ಧಾರ್ಥವಾಗಿ ಒಟ್ಟಿಗೆ ಸೇರಿದಾಗ ಯಾವನನ್ನು ರಕ್ಷಣೆಗಾಗಿ ಕರೆಯುವರೋ ಮತ್ತು ಯುದ್ಧಾಭಿಲಾಷಿಗಳಾಗಿ ರಥದಲ್ಲಿ ಪರಸ್ಪರ ಅಭಿಮುಖವಾಗಿ ಕುಳಿತಿರುವ ಇಬ್ಬರು ಯೋಧರು ಬೇರೆ ಬೇರೆಯಾಗಿ ಇಂದ್ರನನ್ನೇ ರಕ್ಷಣೆಗಾಗಿ ಕರೆಯುತ್ತಾರೆಯೋ ಅವನೇ ಇಂದ್ರನು ಎಂದು ಮುಖ್ಯಾರ್ಥವನ್ನು ಹೇಳಬಹುದು.

---

ಸಂಹಿತಾಪಾಠಃ

**ಯಸ್ಮಾನ್ನ ಋತೇ ವಿಜಯಂತೇ ಜನಾಸೋ ಯಂ ಯುಧ್ಯಮಾನಾ ಅವಸೇ ಹವಂತೇ ।**
**ಯೋ ವಿಶ್ವಸ್ಯ ಪ್ರತಿಮಾನಂ ಬಭೂವ ಯೋ ಅಚ್ಯುತಚ್ಯುತ್ಸ ಜನಾಸ ಇಂದ್ರಃ ॥**

ಪದಪಾಠಃ

ಯಸ್ಮಾತ್ । ನ । ಋತೇ । ವಿ‿ಜಯಂತೇ । ಜನಾಸಃ । ಯಂ । ಯುಧ್ಯಮಾನಾಃ । ಅವಸೇ । ಹವಂತೇ ।
ಯಃ । ವಿಶ್ವಸ್ಯ । ಪ್ರತಿ‿ಮಾನಂ । ಬಭೂವ । ಯಃ । ಅಚ್ಯುತ‿ಚ್ಯುತ್ । ಸಃ । ಜನಾಸಃ । ಇಂದ್ರಃ ॥೯॥

ಸಾಯಣಭಾಷ್ಯಂ

ಯಸ್ಮಾದೃತೇ ಜನಾಸೋ ಜನಾ ನ ವಿಜಯಂತೇ । ವಿಜಯಂ ನ ಪ್ರಾಪ್ನುವಂತಿ । ಅತೋ ಯುಧ್ಯಮಾನಾ ಯುದ್ಧಂ ಕುರ್ವಾಣಾ ಜನಾ ಅವಸೇ ಸ್ವರಕ್ಷಣಾಯ ಯಮಿಂದ್ರಂ ಹವಂತೇ । ಆಹ್ವಯಂತಿ । ಯಶ್ಚ ವಿಶ್ವಸ್ಯ ಸರ್ವಸ್ಯ ಜಗತಃ ಪ್ರತಿಮಾನಂ ಪ್ರತಿನಿಧಿರ್ಬಭೂವ । ಯಶ್ಚಾಚ್ಯುತಚ್ಯುತ್ ಅಚ್ಯುತಾನಾಂ ಕ್ಷಯರಹಿತಾನಾಂ ಪರ್ವತಾದೀನಾಂ ಚ್ಯಾವಯಿತಾ ಸ ಇಂದ್ರ ಇತ್ಯಾದಿ ಪ್ರಸಿದ್ಧಂ ॥

ಪ್ರತಿಪದಾರ್ಥ

ಜನಾಸಃ—ಎಲೈ ಜನರೇ । ಯಸ್ಮಾತ್ ಋತೇ—ಯಾವನನ್ನು ಬಿಟ್ಟು । ಜನಾಸಃ—ಜನರು। ನ ವಿಜಯಂತೇ ಜಯವನ್ನು ಪಡೆಯಲಾರರೋ (ಆದುದರಿಂದಲೇ) । ಯಂ—ಯಾವನನ್ನು । ಯುಧ್ಯಮಾನಾಃ—ಯುದ್ಧದಲ್ಲಿ ನಿರತರಾಗಿರುವವರು । ಅವಸೇ—ರಕ್ಷಣಾರ್ಥವಾಗಿ । ಹವಂತೇ—ಕರೆಯುತ್ತಾರೆಯೋ । ಯಃ—

ಯಾರು । ವಿಶ್ವಸ್ಯ—ಸಕಲ ಜಗತ್ತಿನ । ಪ್ರತಿಮಾನಂ—ಪ್ರತಿನಿಧಿಯಾಗಿ । ಬಭೂವ—ಆಗಿರುವನೋ (ಮತ್ತು) । ಯಃ—ಯಾರು । ಅಚ್ಯುತಚ್ಯುತ್—ಅಚಲಿತವಾದ ಪರ್ವತಾದಿಗಳನ್ನು ಚಲಿಸುವಂತೆ ಮಾಡಿದನೋ । ಸಃ—ಅವನೇ । ಇಂದ್ರಃ—ಇಂದ್ರನು.

### ಭಾವಾರ್ಥ

ಎಲೈ ಜನರೇ, ಯಾವನನ್ನು ಬಿಟ್ಟು ಜನರು ಜಯವನ್ನು ಪಡೆಯಲಾರರೋ, ಆದುದರಿಂದಲೇ ಯುದ್ಧದಲ್ಲಿ ನಿರತರಾಗಿರುವವರು ರಕ್ಷಣಾರ್ಥವಾಗಿ ಯಾರನ್ನು ಕರೆಯುತ್ತಾರೆಯೋ, ಯಾವನು ಸಕಲಜಗತ್ತಿನ ಪ್ರತಿನಿಧಿಯಾಗಿರುವನೋ ಮತ್ತು ಯಾವನು ಅಚಲಿತವಾದ ಪರ್ವತಾದಿಗಳನ್ನು ಚಲಿಸುವಂತೆ ಮಾಡಿದನೋ ಅವನೇ ಇಂದನು.

### English Translation

Without whom men do not conquer; whom, when engaged in conflict, they invoke for succour; he, who is the prototype of the universe and the caster down of the unyielding; he, men, is Indra.

### ವಿಶೇಷವಿಷಯಗಳು

**ಅಚ್ಯುತಚ್ಯುತ್—ಅಚ್ಯುತಾನಾಂ ಕ್ಷಯರಹಿತಾನಾಂ ಪರ್ವತಾದೀನಾಂ ಚ್ಯಾವಯಿತಾ** । ನಾಶವಿಲ್ಲದಿರುವ ಅಥವಾ ಚಲಿಸದಿರುವ ಪರ್ವತಾದಿಗಳನ್ನು ಚಲಿಸುವಂತೆ ಮಾಡುವ ಸಾಮರ್ಥ್ಯವುಳ್ಳವನು ಎಂದು ಭಾಷ್ಯಕಾರರ ವಿವರಣೆಯು. ಈ ಶಬ್ದಕ್ಕೆ ಸರಿಯಾದ ಅರ್ಥವೇನೆಂಬುದು ಸ್ಪಷ್ಟವಾಗಿಲ್ಲ. ಸಾಧಾರಣಜನರಿಂದ ಸಾಧ್ಯವಿಲ್ಲದ ಕೆಲಸವನ್ನು ಇಂದ್ರನು ಮಾಡುವನು ಎಂದು ವರ್ಣಿಸುವುದೇ ಋಷಿಯ ಆಶಯವಾಗಿದೆ. ಆದ್ದರಿಂದ ಎಂದಿಗೂ ನಾಶವಿಲ್ಲದಿರುವ ವಸ್ತುವೆಂದು ಯಾವುದು ಪರಿಗಣಿಸಲ್ಪಟ್ಟದಿಯೋ ಅದನ್ನೂ ಸಹ ಇಂದ್ರನು ತನ್ನ ಅಸಾಧಾರಣವಾದ ಶಕ್ತಿಯಿಂದ ನಾಶಮಾಡಲು ಸಮರ್ಥನು ಎಂದು ಮುಖ್ಯಾಭಿಪ್ರಾಯವು.

---

### ಸಂಹಿತಾಪಾಠಃ

ಯಃ ಶಶ್ವತೋ ಮಹ್ಯೇನೋ ದಧಾನಾನಮನ್ಯಮಾನಾಞ್ಛರ್ವಾ ಜಘಾನ ।
ಯಃ ಶರ್ಧತೇ ನಾನುದದಾತಿ ಶೃಧ್ಯಾಂ ಯೋ ದಸ್ಯೋರ್ಹಂತಾ ಸ ಜನಾಸ
ಇಂದ್ರಃ ॥ ೧೦ ॥

### ಪದಪಾಠಃ

ಯಃ । ಶಶ್ವತಃ । ಮಹಿ । ಏನಃ । ದಧಾನಾನ್ । ಅಮನ್ಯಮಾನಾನ್ । ಶರ್ವಾ । ಜಘಾನ ।

ಯಃ । ಶರ್ಧತೇ । ನ । ಅನುಽದದಾತಿ । ಶೃಧ್ಯಾಂ । ಯಃ । ದಸ್ಯೋಃ । ಹಂತಾ । ಸಃ । ಜನಾಸಃ । ಇಂದ್ರಃ ॥ ೧೦ ॥

ಸಾಯಣಭಾಷ್ಯಂ

ಯೋ ಮಹಿ ಮಹದೇನಃ ಪಾಪಂ ದಧಾನಾನ್ ಶಶ್ವತೋ ಬಹೂನಮನ್ಯಮಾನಾನ್ ಆತ್ಮಾನ-ಮಜಾನತ ಇಂದ್ರಮಪೂಜಯತೋ ವಾ ಜನಾನ್ ಶರ್ವಾ । ಶೃಣಾತಿ ಶತ್ರೂನನೇನೇತಿ ಶರುರ್ವಜ್ರಃ । ತೇನಾಯುಧೇನ ಜಘಾನ ॥ ಹಂತೇರ್ಲಿಟಿ ರೂಪಂ ॥ ಯಶ್ಚ ಶರ್ಧತೇ ಉತ್ಸಾಹಂ ಕುರ್ವತೇಽನಾತ್ಮ-ಜ್ಞಾಯ ಜನಾಯ ಶೃಧ್ಯಾಮುತ್ಸಾಹನೀಯಂ ಕರ್ಮ ನಾನುದದಾತಿ । ನ ಪ್ರಯಚ್ಛತಿ ॥ ಅನುಪೂರ್ವಾತ್ ಡುದಾಞ್ ದಾನೇ ಜೌಹೋತ್ಯಾದಿಕಃ । ಅಭ್ಯಸ್ತಾನಾಮಾದಿರಿತಿ ತಿಙಃ ಚೋದಾತ್ತತ್ವಮಿತೀತಿ ಗತೇರ್ನಿ-ಘಾತಃ ॥ ಯಶ್ಚ ದಸ್ಯೋರುಪಕ್ಷಪಯಿತುಃ ಶತ್ರೋರ್ಹಂತಾ ಘಾತಕಃ ಸ ಇಂದ್ರ ಇತ್ಯಾದಿ ಪೂರ್ವವತ್ ॥

ಪ್ರತಿಪದಾರ್ಥ

ಜನಾಸಃ—ಎಲೈ ಜನರೇ । ಯಃ—ಯಾವನು । ಮಹಿ—ಮಹತ್ತಾದ । ಏನಃ—ಪಾಪವನ್ನು । ಧಧಾ-ನಾನ್—ಹೊತ್ತಿರುವವರೂ । ಶಶ್ವತಃ—ಬಹು ಸಂಖ್ಯಾಕರೂ । ಅಮನ್ಯಮಾನಾನ್—ಅಹಂಕಾರದಿಂದ ಕೂಡಿದ ವರೂ ಆದ ಜನರನ್ನು । ಶರ್ವಾ—ವಜ್ರಾಯುಧದಿಂದ । ಜಘಾನ—ಕೊಂದನೋ । ಯಃ—ಯಾವನು । ಶರ್ಧತೇ—ಅನಾತ್ಮಜ್ಞನಿಗೆ । ಶೃಧ್ಯಾಂ—ಉತ್ಸಾಹಕಾರಕವಾದ ಸಹಾಯವನ್ನು। ನ ಅನುದದಾತಿ—ಕೊಡುವುದಿ ಲ್ಲವೋ । ಯಃ—ಯಾವನು । ದಸ್ಯೋಃ—ಕ್ಷಯಕಾರಕನಾದ ಶತ್ರುವಿನ । ಹಂತಾ—ನಾಶಕನಾಗಿರುವನೋ । ಸಃ—ಅವನೇ । ಇಂದ್ರಃ—ಇಂದ್ರನು.

ಭಾವಾರ್ಥ

ಎಲೈ ಜನರೇ, ಯಾವನು ಮಹತ್ತಾದ ಪಾಪವನ್ನು ಹೊತ್ತಿರುವವರೂ, ಬಹುಸಂಖ್ಯಾಕರೂ, ಅಹಂಕಾರದಿಂದ ಕೂಡಿದವರೂ ಆದ ಜನರನ್ನು ವಜ್ರಾಯುಧದಿಂದ ಕೊಂದನೋ, ಯಾವನು ಅನಾತ್ಮಜ್ಞನಿಗೆ ಉತ್ಸಾಹಕಾರಕವಾದ ಸಹಾಯವನ್ನು ಕೊಡುವುದಿಲ್ಲವೋ, ಯಾವನು ಕ್ಷಯಕಾರಕನಾದ ಶತ್ರುವಿನ ನಾಶಕನಾಗಿರುವನೋ, ಅವನೇ ಇಂದ್ರನು.

English Translation

He, who with the thunderbolt has destroyed many committing great sin, and offering (him) no homage : who grants not success to the confident ; who is the slayer of the Dasyu ; he, men, is Indra.

ವಿಶೇಷವಿಷಯಗಳು

ಶಶ್ವತಃ—ಶಶ್ವತ್ ಎಂಬ ಶಬ್ದವು ಉರು, ತುವಿ ಮೊದಲಾದ ಹನ್ನೆರಡು ಬಹುನಾಮಗಳಲ್ಲಿ ಪಠಿತವಾಗಿರು ವುದರಿಂದ (ನಿ. ೩-೧೩) ಶಶ್ವತಃ ಎಂದರೆ ಅನೇಕವಾದ, ಬಹಳವಾದ ಎಂದರ್ಥವು.

**ಏನಃ—ಏನ ಏತೇಃ** । (ನಿ. ೧೧-೨೪) **ತದಪ್ಯೇವಮೇವಾವಶ್ಯಮೇವೈತಿ** । ಇದು (ಪಾಪವು) ಕರ್ತೃವನ್ನು ತಪ್ಪದೆ ಅನುಸರಿಸಿಕೊಂಡು ಬರುವುದರಿಂದ ಏನಃ ಎಂದರೆ ಪಾಪವು.

**ಅಮನ್ಯಮಾನಾನ್—ಆತ್ಮಾನಮಜಾನತ ಇಂದ್ರಮಪೂಜಯತೋ ವಾ ಜನಾನ್**-ಮನ್ಯಮಾನಾನ್ ಎಂದರೆ ತಿಳಿದಿರುವವರು ಅಮನ್ಯಮಾನಾನ್ ಎಂದರೆ ತಿಳಿಯದಿರುವವರು. ಎಂದರೆ ನಿಜಸ್ಥಿತಿಯನ್ನು ಅಥವಾ ನಿಜವಸ್ತುವಾದ ಆತ್ಮನನ್ನು (ಬ್ರಹ್ಮವಸ್ತುವನ್ನು) ತಿಳಿಯದಿರುವವರು ಅಥವಾ ಇಂದ್ರನ ಗುಣಾದಿಗಳನ್ನು ತಿಳಿಯದೆ ಅಥವಾ ಅವನನ್ನು ಪೂಜಿಸದೆ ಇರುವವರನ್ನು ಎಂದರ್ಥವು.

**ಶರ್ವಾ—ಶೄ ಹಿಂಸಾಯಾಂ** ಎಂಬ ಧಾತುವಿನಿಂದ ನಿಷ್ಪನ್ನವಾದ ಶರು ಶಬ್ದಕ್ಕೆ ಹಿಂಸೆಮಾಡುವುದು ಅಥವಾ ಹಿಂಸಾಸಾಧನವಾದ ವಜ್ರಾದ್ಯಾಯುಧವು ಎಂದರ್ಥವು.

**ಯಃ ಶಶ್ವತಃ ಮಹಿ ಏನಃ ದಧಾನಾನ್ ಅಮನ್ಯಮಾನಾನ್ ಶರ್ವಾ ಜಘಾನ**—ಮಹಾಪಾಪವನ್ನು ಮಾಡಿರುವವರೂ, ಯಥಾರ್ಥಜ್ಞಾನರಹಿತರಾಗಿ ಇಂದ್ರನನ್ನು ಆರಾಧಿಸದಿರತಕ್ಕವರೂ ಆದ ಅನೇಕ ಜನರನ್ನು ಇಂದ್ರನು ತನ್ನ ವಜ್ರಾಯುಧದಿಂದ ಪ್ರಹರಿಸಿದನು ಎಂದರೆ ಪಾಪಕರ್ಮಗಳಲ್ಲಿಯೇ ಆಸಕ್ತರಾಗಿ ಯಾಗಾದಿಗಳನ್ನು ಮಾಡದೆ ಇಂದ್ರನನ್ನೂ ಪೂಜಿಸದೆ ಇರುವ ದುಷ್ಟರಾದ ಅನೇಕ ಅಸುರರನ್ನು ಇಂದ್ರನು ಸಂಹರಿಸಿದನೆಂದು ಮುಖ್ಯಾಭಿಪ್ರಾಯವು.

**ಯಃ ಶರ್ಧತೇ ನ ಅನುದದಾತಿ ಶೃಧ್ಯಾಂ**—ಶರ್ಧಃ ಎಂಬ ಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ಇಲ್ಲಿ ಭಾಷ್ಯಕಾರರು ಈ ವಾಕ್ಯಕ್ಕೆ **ಶರ್ಧತೆ ಉತ್ಸಾಹಂ ಕುರ್ವತೇನಾತ್ಮಜ್ಞಾಯ ಜನಾಯ ಶೃಧ್ಯಾಮುತ್ಸಾಹನೀಯಂ ಕರ್ಮ ನಾನುದದಾತಿ ನ ಪ್ರಯಚ್ಛತಿ**—ಎಂದರೆ ಉತ್ಸಾಹಯುಕ್ತನಾದ ಆತ್ಮಜ್ಞನಲ್ಲದ ಪುರುಷನಿಗೆ ಇಂದ್ರನು ಉತ್ಸಾಹವನ್ನು ಉಂಟುಮಾಡುವುದಿಲ್ಲವೆಂದು ವಿವರಿಸಿದಾರೆ. ಎಂದರೆ ಬಲದಿಂದ ಗರ್ವಯುಕ್ತನಾದವನಿಗೆ ಇಂದ್ರನು ಯಾವ ವಿಧವಾದ ಸಹಾಯವನ್ನೂ ಅಥವಾ ಪ್ರೋತ್ಸಾಹವನ್ನೂ ಮಾಡುವುದಿಲ್ಲ ಎಂದು ಮುಖ್ಯಾಭಿಪ್ರಾಯವು. ಈ ವಾಕ್ಯಕ್ಕೆ ಈ ವಿಧವಾದ ಅರ್ಥವು ಸರಿಯಾಗಿರುವಂತೆ ಕಾಣುವುದಿಲ್ಲ. ಋಷಿಯ ಆಶಯವೇನೆಂಬುದು ಸ್ಪಷ್ಟವಾಗಿ ತಿಳಿಯುವಂತಿಲ್ಲ.

**ಯಃ ದಸ್ಯೋಃ ಹಂತಾ**—ಆರ್ಯರ ಶತ್ರುವಾದ ದಸ್ಯುಜನರನ್ನು ಸಂಹರಿಸತಕ್ಕವನು. ದಸ್ಯುವನ್ನು ಹನನಮಾಡುವುದು ಇಂದ್ರನಿಗೆ ಒಂದು ವಿಶೇಷವಾದ ಗುಣವೆಂದು ಪರಿಗಣಿಸಲ್ಪಟ್ಟಿದೆ. ಇಂದ್ರನನ್ನು ಸ್ತುತಿಸುವಾಗ ದಸ್ಯುಗಳ ಸಂಹಾರಕನೆಂದು ವರ್ಣಿಸುವುದು ರೂಢಿಯಾಗಿದೆ.

---

**ಸಂಹಿತಾಪಾಠಃ**

ಯಃ ಶಂಬರಂ ಪರ್ವತೇಷು ಕ್ಷಿಯಂತಂ ಚತ್ವಾರಿಂಶ್ಯಾಂ ಶರದ್ಯನ್ವವಿಂದತ್ ।
ಓಜಾಯಮಾನಂ ಯೋ ಅಹಿಂ ಜಘಾನ ದಾನುಂ ಶಯಾನಂ ಸ ಜನಾಸ
ಇಂದ್ರಃ ॥ ೧೧ ॥

ಪದಪಾಠಃ

ಯಃ । ಶಂಬರಂ । ಪರ್ವತೇಷು । ಕ್ಷಿಯಂತಂ । ಚತ್ವಾರಿಂಶ್ಯಾಂ । ಶರದಿ । ಅನ್ವಽಅವಿಂದತ್ ।
ಓಜಾಯಮಾನಂ । ಯಃ । ಅಹಿಂ । ಜಘಾನ । ದಾನುಂ ಶಯಾನಂ । ಸಃ । ಜನಾಸಃ । ಇಂದ್ರಃ । ॥೧೧॥

ಸಾಯಣಭಾಷ್ಯಂ

ಯಃ ಪರ್ವತೇಷು ಕ್ಷಿಯಂತಮಿಂದ್ರಭಿಯಾ ಬಹೂನ್ ಸಂವತ್ಸರಾನ್ಪ್ರಚ್ಛನ್ನೋ ಭೂತ್ವಾ ಪರ್ವತಗುಹಾಸು ನಿವಸಂತಂ ಶಂಬರಮೇತನ್ನಾಮಕಂ ಮಾಯಾವಿನಮಸುರಂ ಚತ್ವಾರಿಂಶ್ಯಾಂ ಶರದಿ ಚತ್ವಾರಿಂಶೇ ಸಂವತ್ಸರೇಽನ್ವವಿಂದತ್ । ಅನ್ವಿಷ್ಯಾಲಭತ । ಲಬ್ಧ್ವಾ ಚ ಯ ಓಜಾಯಮಾನಂ ॥ ಕರ್ತುಃ ಕ್ಯಙ್ ಸಲೋಪಶ್ಚ ಓಜಸೋಽಪ್ಸರಸೋ ನಿತ್ಯಂ । ಪಾ. ೩-೧-೧೧-೨ । ಇತಿ ಸಕಾರಲೋಪಃ ॥ ಬಲಮಾಚರಂತಮಹಿಮಾಹಂತಾರಂ ದಾನುಂ ದಾನವಂ ಶಯಾನಂ ಶಂಬರಮಸುರಂ ಜಘಾನ ಹತವಾನ್ ಸ ಇಂದ್ರೋ ನಾಹಮಿತಿ ॥

ಪ್ರತಿಪದಾರ್ಥ

**ಜನಾಸಃ**—ಎಲೈ ಜನರೇ । **ಯಃ**—ಯಾವನು । **ಪರ್ವತೇಷು** – ಪರ್ವತಗಳಲ್ಲಿ । **ಕ್ಷಿಯಂತಂ**—ತಲೆಮರೆಸಿಕೊಂಡು ವಾಸಿಸುತ್ತಿದ್ದ । **ಶಂಬರಂ**—ಶಂಬರನೆಂಬ ಅಸುರನನ್ನು । **ಚತ್ವಾರಿಂಶ್ಯಾಂ ಶರದಿ**— ನಲವತ್ತನೆಯ ಸಂವತ್ಸರದಲ್ಲಿ । **ಅನ್ವವಿಂದತ್**—ಹುಡುಕಿ ಕಂಡುಹಿಡಿದನೋ । **ಯಃ**—ಯಾವನು । **ಓಜಾಯಮಾನಂ**—ಬಲವನ್ನು ಆಶ್ರಯಿಸಿದವನೂ । **ಅಹಿಂ**—ಹಂತಕನೂ । **ದಾನುಂ**—ದಾನುವಿನ ಪುತ್ರನೂ । **ಶಯಾನಂ**– ಪರ್ವತದಲ್ಲಿ ಮಲಗಿದ್ದವನೂ ಆದ ಶಂಬರನನ್ನು । **ಜಘಾನ**—ಕೊಂದನೋ । **ಸಃ**—ಅವನೇ । **ಇಂದ್ರಃ**—ಇಂದ್ರನು.

ಭಾವಾರ್ಥ

ಎಲೈ ಜನರೇ, ಪರ್ವತಗಳಲ್ಲಿ ತಲೆಮರೆಸಿಕೊಂಡು ನಲವತ್ತು ವರ್ಷಗಳಕಾಲ ವಾಸಿಸುತ್ತಿದ್ದ ಶಂಬರನೆಂಬ ಅಸುರನನ್ನು ಹುಡುಕಿ ಯಾವನು ಕೊನೆಗೆ ಕಂಡುಹಿಡಿದನೋ, ಬಲಶಾಲಿಯಾಗಿಯೂ, ಹಂತಕನಾಗಿಯೂ ಇದ್ದ ದಾನವನನ್ನು ಯಾವನು ಕೊಂದನೋ ಅವನೇ ಇಂದ್ರನು.

English Translation

He, who discovered Shambara dwelling in the mountains for forty years; who slew Ahi, growing in strength, and the sleeping son of Danu; he, men, is Indra.

ವಿಶೇಷವಿಷಯಗಳು

**ಶಂಬರಂ**—ಶಂಬರ ಶಬ್ದವು ಮೇಘನಾಮಗಳಲ್ಲಿಯೂ (ನಿ. ೨-೨೧) ಉದಕನಾಮಗಳಲ್ಲಿಯೂ (ನಿ. ೨-೨೪) ಪಠಿತವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಶಂಬರನೆಂದರೆ ಶಂಬರ ಎಂಬ ಹೆಸರಿನ ಅಸುರನು ಎಂದರ್ಥವು.

ಈ ಶಂಬರನು ಇಂದ್ರನ ಶತ್ರುವು. ಇವನ ಹೆಸರೂ ಇವನ ವಿಷಯವೂ ಋ. ಸಂ- ೧-೫೧-೬, ೧-೫೪-೪, ೧-೫೯-೬, ೧-೧೦೧-೨, ೧-೧೦೩-೮, ೧-೧೧೨-೧೪, ೧-೧೩೦-೭, ೨-೧೨-೧೧, ೨-೧೪-೬, ೨-೧೯-೬, ೪-೨೬-೩, ೪-೩೦-೧೪, ೬-೧೮-೮, ೬-೨೬-೫, ೬-೩೧-೪, ೬-೩೧-೧, ೬-೪೭-೨, ೬-೪೭-೨೧, ೭-೧೮-೨೦, ೭-೯೯-೫ ಈ ಋಕ್ಕುಗಳಲ್ಲಿ ಉಕ್ತವಾಗಿರುವುದು. ಋ. ಸಂ. ೬-೨೬-೫ ರಲ್ಲಿ ಇವನು ಕುಲಿಕಾರ ಎಂಬುವನ ಮಗನಾದ ದಾಸನೆಂದು ಹೇಳಿದೆ. ಸಾಧಾರಣವಾಗಿ ಇವನ ಹೆಸರು ಶುಷ್ಣ, ಪಿಪ್ರು, ವರ್ಚಿನ್ ಎಂಬುವರೊಡನೆ ಸೇರಿ ಪಠಿತವಾಗಿರುವುದು ಇವನ ಕೋಟೆಗಳು (ದುರ್ಗಗಳು) ೯೦, ೯೯, ೧೦೦ ಇದ್ದವೆಂದು ಋ. ಸಂ. ೧-೧೩೦-೭, ೨-೧೯-೬, ೨-೧೪-೬ ನೆಯ ಋಕ್ಕುಗಳಲ್ಲಿ ಹೇಳಿವೆ. ಋ. ಸಂ. ೨-೨೪-೨ ರಲ್ಲಿ ಇವನ ದುರ್ಗಗಳನ್ನು ಸೂಚಿಸುವುದಕ್ಕೆ ಶಂಬರಾಣಿ ಎಂಬ ಶಬ್ದವನ್ನೇ ಉಪಯೋಗಿಸಲಾಗಿದೆ. ಇವನು ದಿವೋದಾಸ ಅತಿಥಿಗ್ವನೆಂಬುವನ ಮುಖ್ಯಶತ್ರುವೆಂದೂ ಇವನನ್ನು ಅತಿಥಿಗ್ವನು ಇಂದ್ರನ ಸಹಾಯದಿಂದ ಗೆದ್ದನೆಂದೂ ಋ ಸಂ ೧-೫೧-೬, ೧-೧೩೦-೭, ೨-೧೯-೬, ೪-೨೬-೩ ಇತ್ಯಾದಿ ಋಕ್ಕುಗಳಲ್ಲಿ ಹೇಳಿದೆ.

ಈ ಶಂಬರನ ವಿಷಯದಲ್ಲಿ ಕೆಲವು ಪಾಶ್ಚಾತ್ಯರು ಬೇರೆ ವಿಧವಾದ ಅಭಿಪ್ರಾಯವನ್ನು ವ್ಯಕ್ತಪಡಿಸುವರು. ಇವನು ನಿಜವಾಗಿ ಜೀವಂತನಾದ ವ್ಯಕ್ತಿಯೇ ಅಥವಾ ಹೆಸರು ಮಾತ್ರದಿಂದ ಪ್ರಸಿದ್ಧನಾದವನೇ ಎಂಬ ಸಂಶಯವು ಉಂಟಾಗುವುದು ಎಂದು ಕೆಲವರ ಅಭಿಪ್ರಾಯವು. Hillebrandt ಎಂಬ ಪಂಡಿತನು ಇವನು ನಿಜವಾದ ವ್ಯಕ್ತಿಯೆಂದೂ, ದಿವೋದಾಸನೆಂಬುವನ ಮುಖ್ಯ ಶತ್ರುವಾಗಿದ್ದನೆಂದೂ ಭಾವಿಸುವನು. ಇವನು ಈ ದೇಶದ ಪೂರ್ವನಿವಾಸಿಗಳಲ್ಲಿ ಒಬ್ಬ ಹೆಸರಾದ ಮುಖಂಡನೆಂದೂ, ಇವನು ಬೆಟ್ಟಗುಡ್ಡಗಳಲ್ಲಿ ವಾಸಮಾಡುತ್ತಾ ಆರ್ಯರಿಗೆ ತೊಂದರೆಕೊಡುತ್ತಿದ್ದನೆಂದೂ ಕೆಲವರ ಅಭಿಪ್ರಾಯವಿರುವುದು.

**ಓಜಾಯಮಾನಂ—ಬಲಮಾಚರಂತಂ** । ಓಜಸ್ಸಿನಿಂದ ಅಥವಾ ಬಲದಿಂದ ಯುಕ್ತನಾದವನು, ಬಹಳ ಬಲವುಳ್ಳವನು ಎಂದರ್ಥವು.

**ಅಹಿಂ—ಆಹಂತಾರಂ । ಹನ ಹಿಂಸಾಗತ್ಯೋಃ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಹಂತಕನಾದ ಎಂದು ಅರ್ಥವನ್ನು ವಿವರಿಸಿದ್ದಾರೆ.

**ದಾನುಂ—ದಾನವಂ । ದನೋಃ ಪುತ್ರಂ** । ರಾಕ್ಷಸಮಾತೆಯಾದ ದನುವಿನ ಪುತ್ರನು ಎಂದರ್ಥವು. ದಾನುರ್ದಾದನೀ ವೃತ್ರಮಾತಾ ಎಂದು ಭಾಷ್ಯಕಾರರು ಋ. ಸಂ. ೧-೩೨-೯ ನೆಯ ಋಕ್ಕಿನ ಭಾಷ್ಯದಲ್ಲಿ ಹೇಳಿದ್ದಾರೆ.

**ಶರದಿ**—ಶರತ್ಕಾಲದಲ್ಲಿ ಎಂದರೆ ಸಂವತ್ಸರದಲ್ಲಿ. ಶೄ ಹಿಂಸಾಯಾಂ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ **ಶೀರ್ಯಂತೇ ಅಸ್ಯಾಂ ಓಷಧಯಃ ಇತಿ ಶರತ್ ಸಂವತ್ಸರಃ**—ಓಷಧಿಗಳು, ಎಲೆಗಳು ಮೊದಲಾದವುಗಳು ಈ ಕಾಲದಲ್ಲಿ ಒಣಗಿ ಕೆಳಕ್ಕೆ ಉದುರುತ್ತವೆ. ಆದುದರಿಂದ ಅಂತಹ ಕಾಲಕ್ಕೆ ಶರತ್ ಅಥವಾ ಶರದೃತುವೆಂದು ಹೆಸರು. ಒಂದು ಸಂವತ್ಸರದಲ್ಲಿ ಶರತ್ಕಾಲವು ಒಂದಾವರ್ತಿ ಮಾತ್ರ ಬರುವುದರಿಂದ ಶರಚ್ಛಬ್ದವನ್ನೇ ಸಂವತ್ಸರವೆಂಬರ್ಥದಲ್ಲಿ ಪ್ರಯೋಗಿಸುವುದು ವೇದಗಳಲ್ಲಿ ರೂಢಿಯು.

**ತಚ್ಚಕ್ಷುರ್ದೇವಹಿತಂ ಶುಕ್ರಮುಚ್ಚರತ್ ।**
**ಪಶ್ಯೇಮ ಶರದಃ ಶತಂ ಜೀವೇಮ ಶರದಃ ಶತಂ ॥**

(ಋ. ಸಂ. ೭-೬೬-೧೬)

ದೀರ್ಘಾಯುರಸ್ಯಾ ಯಃ ಪತಿರ್ಜೀವಾತಿ ಶರದಃ ಶತಂ ।

(ಋ. ಸಂ. ೧೦-೮೫-೩೯)

ಇತ್ಯಾದಿ ಋಕ್ಕುಗಳಲ್ಲಿ ಶರಚ್ಛಬ್ದವು ಸಂವತ್ಸರಾರ್ಥದಲ್ಲಿ ಉಪಯೋಗಿಸಲ್ಪಟ್ಟದೆ.

ಯಃ ಶಂಬರಂ ಪರ್ವತೇಷು ಕ್ಷಿಯಂತಂ ಚತ್ವಾರಿಂಶ್ಯಾಂ ಶರದಿ ಅನ್ವವಿಂದತ್—ನಲವತ್ತು ವರ್ಷಗಳ ಪರ್ಯಂತರ ಯಾರಿಗೂ ಸಿಕ್ಕದಂತೆ ಪರ್ವತಗಳಲ್ಲಿ ಅವಿತುಕೊಂಡಿದ್ದ ಶಂಬರಾಸುರನನ್ನು ಇಂದ್ರನು ಹುಡುಕಿ ಸಂಹಾರಮಾಡಿದನು. ಇದು ಇಂದ್ರನ ಸಾಹಸವನ್ನು ವರ್ಣಿಸುವುದಾಗಿದೆ

---

ಸಂಹಿತಾಪಾಠಃ

ಯಃ ಸಪ್ತರಶ್ಮಿರ್ವೃಷಭಸ್ತುವಿಷ್ಮಾನವಾಸೃಜತ್ಸರ್ತವೇ ಸಪ್ತ ಸಿಂಧೂನ್ ।
ಯೋ ರೌಹಿಣಮಸ್ಫುರದ್ವಜ್ರಬಾಹುರ್ದ್ಯಾಮಾರೋಹಂತಂ ಸ ಜನಾಸ ಇಂದ್ರಃ ॥ ೧೨ ॥

ಪದಪಾಠಃ

ಯಃ । ಸಪ್ತಽರಶ್ಮಿಃ । ವೃಷಭಃ । ತುವಿಷ್ಮಾನ್ । ಅವಽಅಸೃಜತ್ । ಸರ್ತವೇ । ಸಪ್ತ । ಸಿಂಧೂನ್ ।
ಯಃ । ರೌಹಿಣಂ । ಅಸ್ಫುರತ್ । ವಜ್ರಽಬಾಹುಃ । ದ್ಯಾಂ । ಆಽರೋಹಂತಂ । ಸಃ । ಜನಾಸಃ । ಇಂದ್ರಃ ॥ ೧೨ ॥

ಸಾಯಣಭಾಷ್ಯಂ

ಯಃ ಸಪ್ತರಶ್ಮಿಃ ಸಪ್ತಸಂಖ್ಯಾಕಾಃ ಪರ್ಜನ್ಯಾ ರಶ್ಮಯೋ ಯಸ್ಯ । ತೇ ಚ ರಶ್ಮಯೋ ವರಾಹವಃ ಸ್ವತಪಸೋ ವಿದ್ಯುನ್ಮಹಸೋ ಧೂಪಯಃ ಶ್ವಾಪಯೋ ಗೃಹಮೇಧಾಶ್ಚೇತೀತಿ ಯೇ ಚೇಮೇಽಶಿಮಿವಿದ್ವಿಷಃ ಪರ್ಜನ್ಯಾಃ ಸಪ್ತ ಪೃಥಿವೀಮಭಿವರ್ಷಂತಿ ವೃಷ್ಟಿಭಿಃ । ತೈ ಆ. ೧-೯-೪,೫ । ಇತಿ ತೈತ್ತಿರೀಯಾರಣ್ಯಕೇ ಹ್ಯಾಮ್ನಾತಾಃ । ವೃಷಭೋ ವರ್ಷಕಸ್ತುವಿಷ್ಮಾನ್ ವೃದ್ಧಿಮಾನ್ಬಲವಾನ್ವಾ ಸಪ್ತ ಸರ್ಪಣಸ್ವಭಾವಾನ್ಸಿಂಧೂನಪಃ ಸರ್ತವೇ ಸರಣಾಯಾವಾಸೃಜತ್ । ಅವಸೃಷ್ಟವಾನ್ । ಯದ್ವಾ ಗಂಗಾದ್ಯಾಃ ಸಪ್ತ ಮುಖ್ಯಾ ನದೀರಸೃಜತ್ । ಯಶ್ಚ ವಜ್ರಬಾಹುಃ ಸನ್ ದ್ಯಾಂ ದಿವಮಾರೋಹಂತಂ ರೌಹಿಣಮಸುರಮಸ್ಫುರತ್ । ಜಘಾನ ॥ ಸ್ಫುರ ಸ್ಫುರಣೇ ತುದಾದಿಃ ॥

ಪ್ರತಿಪದಾರ್ಥ

ಜನಾಸಃ—ಎಲೈ ಜನರೇ । ಯಃ—ಯಾರು । ಸಪ್ತರಶ್ಮಿಃ—ಸಪ್ತಸಂಖ್ಯಾತವಾದ ರಶ್ಮಿಯುಳ್ಳವನೂ । ವೃಷಭಃ—ವೃಷ್ಟಿಯನ್ನು ಸುರಿಸುವವನೂ । ತುವಿಷ್ಮಾನ್—ಬಲಶಾಲಿಯೂ ಆಗಿ । ಸಪ್ತ ಸಿಂಧೂನ್—ಸಪ

ಸಂಖ್ಯಾಕವಾದ ನದಿಗಳನ್ನು ಅಥವಾ ಸ್ರವಿಸತಕ್ಕ ಉದಕಗಳನ್ನು । **ಸರ್ತವೇ**—ಪ್ರವಹಿಸುವುದಕ್ಕೋಸ್ಕರವಾಗಿ । **ಅವಾಸೃಜತ್**—(ಅಹಿಯಿಂದ) ಬಿಡಿಸಿದನೋ । **ಯಃ**—ಯಾರು । **ವಜ್ರಬಾಹುಃ**—ವಜ್ರಾಯುಧವನ್ನು ಕೈಯಲ್ಲಿ ಹಿಡಿದವನಾಗಿ । **ದ್ಯಾಂ**—ದ್ಯುಲೋಕವನ್ನು । **ಆರೋಹಂತಂ**—ಹತ್ತುತ್ತಿದ್ದ । **ರೌಹಿಣಂ**—ರೌಹಿಣನೆಂಬ ಅಸುರನನ್ನು । **ಅಸ್ಫುರತ್**—ಕೊಂದನೋ । **ಸಃ**—ಅವನೇ । **ಇಂದ್ರಃ**—ಇಂದ್ರನು.

ಭಾವಾರ್ಥ

ಎಲೈ ಜನರೇ, ಯಾರು ಸಪ್ತಸಂಖ್ಯಾಕವಾದ ರಶ್ಮಿಯುಳ್ಳವನೂ, ವೃಷ್ಟಿಯನ್ನು ಸುರಿಸುವವನೂ, ಬಲಶಾಲಿಯೂ ಆಗಿ ಗಂಗಾದಿ ಸಪ್ತನದಿಗಳನ್ನು ಪ್ರವಹಿಸುವುದಕ್ಕಾಗಿ ಅಹಿಯಿಂದ ಬಿಡಿಸಿದನೋ, ಯಾರು ವಜ್ರಾಯುಧವನ್ನು ಕೈಯಲ್ಲಿ ಹಿಡಿದವನಾಗಿ ದ್ಯುಲೋಕವನ್ನು ಹತ್ತುತ್ತಿದ್ದ ರೌಹಿಣನೆಂಬ ಅಸುರನನ್ನು ಕೊಂದನೋ ಅವನೇ ಇಂದ್ರನು.

## English Translation

He, the seven-rayed, the showerer, the powerful, who let loose the seven rivers to flow; who, armed with the thunderbolt, crushed Rauhina when scaling heaven; he, men, is Indra.

ವಿಶೇಷವಿಷಯಗಳು

**ಸಪ್ತರಶ್ಮಿಃ**—**ಸಪ್ತಸಂಖ್ಯಾಕಾಃ ಪರ್ಜನ್ಯಾ ರಶ್ಮಯೋ ಯಸ್ಯ । ತೇ ಚ ರಶ್ಮಯೋ-ವರಾಹವಃ ಸ್ವತಪಸಃ । ವಿದ್ಯುನ್ಮಹಸೋ ಧೂಪಯಃ । ಶ್ವಾಪಯೋ ಗೃಹಮೇಧಾಶ್ಚೇತ್ಯೇತೇ । ಯೇ ಚೇಮೇಽಶಿಮಿವಿದ್ವಿಷಃ । ಪರ್ಜನ್ಯಾಃ ಸಪ್ತ ಪೃಥಿವೀಮಭಿವರ್ಷಂತಿ। ವೃಷ್ಟಿಭಿರಿತಿ**—(ತೈ. ಆ- ೧-೯-೪ ರಿಂದ ೫) ಇಂದ್ರನು ವೃಷ್ಟಿಯನ್ನು ಸುರಿಸುವಾಗ ಎಂದರೆ ಮೇಘಗಳನ್ನು ಹಿಂಸಿಸಿ ವೃಷ್ಟಿಯನ್ನು ಸುರಿಸುವಂತೆ ಮಾಡುವಾಗ ಆ ಮೇಘಗಳು ಏಳು ವಿಧವಾದ ರಶ್ಮಿಗಳಿಂದ ಅಥವಾ ಪರ್ಜನ್ಯದೇವತೆಗಳಿಂದ ಸಹಿತವಾಗಿ ವೃಷ್ಟಿಯನ್ನು ಸುರಿಸುವವು ಎಂದು ಅರ್ಥವನ್ನು ಹೇಳಿ ಅದರ ಸಮರ್ಥನೆಗಾಗಿ ತೈತ್ತಿರೀಯಾರಣ್ಯಕದ ವಾಕ್ಯವನ್ನು ಉದಾಹರಿಸಿರುವರು. ಉದಾಹರಣೆಯಲ್ಲಿರುವ ಪರ್ಜನ್ಯಾಃ ಸಪ್ತ ಎಂಬ ಶಬ್ದಗಳಿಗೆ ಅರ್ಥವನ್ನು ವಿವರಿಸುವಾಗ ಏಳು ವಿಧವಾದ ವಾಯುಗಣಗಳಿಂದ ಸಹಿತವಾದ ಪರ್ಜನ್ಯಗಳು (ಮೇಘಗಳು) ವೃಷ್ಟಿಯನ್ನು ಸುರಿಸುವವು ಎಂದು ಹೇಳಿದೆ. ಆ ಏಳು ವಿಧವಾದ ಪರ್ಜನ್ಯಗಳು ಯಾವವೆಂದರೆ—

(೧) **ವರಾಹವಃ**—**ವರಂ ಶ್ರೇಷ್ಠಂ ವರ್ಷಮಾಹ್ವಯತೀತಿ ವರಾಹಃ (ಹುಃ) ತೇ ಚ ಬಹವೋ ವರಾಹವಃ** । ಉತ್ತಮವಾದ ವೃಷ್ಟಿಯನ್ನು ಸುರಿಸುವುದರಿಂದ ಆ ವಾಯುಗಣಕ್ಕೆ ವರಾಹವೆಂದು ಹೆಸರು. ಅಂತಹ ವಾಯುಗಣದಿಂದ ಸಹಿತವಾದ ಮೇಘಗಳಿಗೆ **ವರಾಹವಃ** ಎಂದು ಹೆಸರು.

(೨) **ಸ್ವತಪಸಃ**—**ಯೇ ವಾಯವಃ ಸ್ವತಪಸಃ ಸ್ವಯಮೇವ ತಪಂತಿ ನ ತು ತಾಪಾರ್ಥಮಗ್ನಿಮಾದಿತ್ಯಂ ವಾಪೇಕ್ಷಂತೇ. ಸ್ವತಪಸಃ** । ಉಷ್ಣ (ಶಾಖ) ಕ್ಕಾಗಿ ಅಗ್ನಿ ಅಥವಾ ಆದಿತ್ಯರನ್ನು ಅಪೇಕ್ಷಿಸದೆ ತನ್ನ ಸ್ವಂತ ಸಾಮರ್ಥ್ಯದಿಂದ ದಹಿಸುವ ಸ್ವಭಾವವುಳ್ಳ ವಾಯುಗಣದಿಂದ ಸಹಿತವಾದ ಮೇಘಗಳಿಗೆ **ಸ್ವತಪಸಃ** ಎಂದು ಹೆಸರು.

(೩) **ವಿದ್ಯುನ್ಮಹಸಃ—ವಿದ್ಯುತ್ಸಮಾನಂ ಮಹಸ್ತೇಜೋ ಯೇಷಾಂ ತೇ ವಿದ್ಯುನ್ಮಹಸಃ**—ವಿದ್ಯುತ್ತಿಗೆ (ಮಿಂಚಿಗೆ) ಸಮಾನವಾದ ಮಹಾತೇಜಸ್ಸಿನಿಂದ ಅಥವಾ ವಿದ್ಯುತ್ತಿನಿಂದ ಬೆಳಗುತ್ತಿರುವ ವಾಯುಗಣಸಹಿತವಾದ ಮೇಘಗಳಿಗೆ ವಿದ್ಯುನ್ಮಹಸಃ ಎಂದು ಹೆಸರು.

(೪) **ಧೂಪಯಃ— ಗುಗ್ಗುಲದಶಾಂಗಾದಿದ್ರವ್ಯಾಂತರೈರನಪೇಕ್ಷೇಣ ಸ್ವಶರೀರಗತಸುಗಂಧೇನೈವ ಸರ್ವಾನ್ಪದಾರ್ಥಾನ್ಧೂಪಯಂತೋ ವಾಸಿತಾನ್ ಕುರ್ವಂತೋ ವರ್ತಂತೇ** । ಗುಗ್ಗುಲ, ದಶಾಂಗ ಮೊದಲಾದ ಸುವಾಸನಾ ದ್ರವ್ಯಗಳ ಅಪೇಕ್ಷೆಯಿಲ್ಲದೆ ತನ್ನ ಸ್ವಾಭಾವಿಕವಾದ ಸುಗಂಧದಿಂದ ಕೂಡಿರುವ ವಾಯುಗಣಸಹಿತವಾದ ಮೇಘಗಳಿಗೆ **ಧೂಪಯಃ** ಎಂದು ಹೆಸರು.

(೫) **ಶ್ವಾಪಯಃ—ಶು ಶಬ್ದ ಆಶುಶಬ್ದಪರ್ಯಾಯಸ್ತತಃ ಶೀಘ್ರವ್ಯಾಪಿನ ಇತ್ಯುಕ್ತಂ ಭವತಿ** । ಶೀಘ್ರವಾಗಿ ಎಲ್ಲೆಡೆಗಳಲ್ಲಿಯೂ ವ್ಯಾಪಿಸುವ ಸ್ವಭಾವವುಳ್ಳ ವಾಯುಗಣಸಹಿತವಾದ ಮೇಘಗಳಿಗೆ **ಶ್ವಾಪಯಃ** ಎಂದು ಹೆಸರು.

(೬) **ಗೃಹಮೇಧಾಃ—ಗೃಹೇಷು ಮೇಧಾರ್ಹಾ ಗೃಹಮೇಧಾಃ** । ಗೃಹಾದಿಗಳಲ್ಲಿ ಪೂಜಿಸಲ್ಪಡುವ ವಾಯುದೇವತಾಸಹಿತವಾದ ಮೇಘಗಳಿಗೆ ಗೃಹಮೇಧಾಃ ಎಂದು ಹೆಸರು.

(೭) **ಅಶಿಮಿವಿದ್ವಿಷಃ—ಶಿಮಿಃ ಕರ್ಮ ಕೃಷ್ಯಾದಿಕಂ ತಸ್ಯ ವಿಘಾತಕಾಃ ಶಿಮಿವದ್ವಿಷಃ ತದ್ವಿಪರೀತಾ ಅಶಿಮಿವಿದ್ವಿಷಃ ಕೃಷ್ಯಾದ್ಯನುಕೂಲಪ್ರವೃತ್ತಯೋ ವಾಯವ ಇತ್ಯರ್ಥಃ** । ವ್ಯವಸಾಯ ಮೊದಲಾದ ಕೃಷಿಕರ್ಮಗಳಿಗೆ ಅನುಕೂಲವಾಗುವಂತೆ ಆಯಾಕಾಲಗಳಲ್ಲಿ ವೃಷ್ಟಿಯನ್ನು ಸುರಿಸುವುದಕ್ಕೆ ಸಹಾಯಕಗಳಾದ ವಾಯುಗಣದಿಂದ ಕೂಡಿದ ಮೇಘಗಳಿಗೆ **ಅಶಿಮಿವಿದ್ವಿಷಃ** ಎಂದು ಹೆಸರು.

ಪರ್ಜನ್ಯ ಅಥವಾ ಮೇಘಗಳಲ್ಲಿ ಮೇಲೆ ಹೇಳಿದ ಏಳು ವಿಧಗಳಿರುವುದೆಂದು ಹೇಳಿರುವುದರಿಂದ ಇಲ್ಲಿ ಸಪ್ತರಶ್ಮಿಃ ಎಂದರೆ ಇಂದ್ರನು ಏಳು ವಿಧವಾದ ಮೇಘಗಳಿಂದ ವೃಷ್ಟಿಯನ್ನು ಸುರಿಸುವನು ಎಂದಭಿಪ್ರಾಯವು.

**ಯಃ ಅವಾಸೃಜತ್ ಸರ್ತವೇ ಸಪ್ತ ಸಿಂಧೂನ್**—ಇಂದ್ರನು ಸಪ್ತವಿಧಮೇಘಗಳಿಂದ ವೃಷ್ಟಿಯನ್ನು ಸುರಿಸಿ ಆ ವೃಷ್ಟ್ಯುದಕಗಳು ಭೂಮಿಯಲ್ಲಿ ಬಿದ್ದನಂತರ ಗಂಗಾ, ಯಮುನಾ ಮೊದಲಾದ ಏಳು ಮುಖ್ಯನದಿಗಳನ್ನು ಪ್ರವಾಹರೂಪದಿಂದ ಹರಿಯುವಂತೆ ಮಾಡಿದನು ಇಲ್ಲಿ ಸಪ್ತ ಸಿಂಧೂನ್ ಎಂದು ಹೇಳಿರುವುದು ಏಳೇ ನದಿಗಳೆಂದು ತಿಳಿಯಬೇಕಾಗಿಲ್ಲ. ಅವು ಮುಖ್ಯವಾದ ನದಿಗಳು ಮಾತ್ರ. ಭೂಮಿಯಮೇಲೆ ಬಿದ್ದ ನೀರನ್ನು ನದಿಗಳಲ್ಲಿಯೂ ಇತರ ಪ್ರದೇಶಗಳಲ್ಲಿಯೂ ಹರಿಯುವಂತೆ ಮಾಡಿದನು ಎಂದು ಮುಖ್ಯಾಭಿಪ್ರಾಯವು.

**ಯಃ ರೌಹಿಣಂ ಅಸ್ಫುರತ್ ವಜ್ರಬಾಹುಃ ದ್ಯಾಂ ಆರೋಹಂತಂ**—ಇಂದ್ರನು ಸ್ವರ್ಗವನ್ನು ಏರುತ್ತಿರುವ ರೌಹಿಣನೆಂಬ ಅಸುರನನ್ನು ವಜ್ರಾಯುಧದಿಂದ ಕೊಂದನು ಎಂದು ಹೇಳಿದೆ. ಇದೇ ವಿಷಯವನ್ನು—

**ಅಹನ್ನಹಿಮಭಿನದ್ರೌಹಿಣಂ ವ್ಯಹನ್ವ್ಯಂಸಂ ಮಘವಾ ಶಚೀಭಿಃ ।**

(ಋ. ಸಂ. ೧-೧೦೩-೨)

ಎಂಬ ಋಕ್ಕಿನಲ್ಲಿಯೂ ಹೇಳಿದೆ. ಋಗ್ವೇದದಲ್ಲಿ ರೌಹಿಣನೆಂಬ ಅಸುರನ ಹೆಸರು ಈ ಎರಡು ಸ್ಥಳಗಳಲ್ಲಿ ಮಾತ್ರ ಉಕ್ತವಾಗಿದೆ. ಬೇರೆ ಎಲ್ಲಿಯೂ ಇರುವುದಿಲ್ಲ. ಆದ್ದರಿಂದ ಈ ರೌಹಿಣನ ವಿಷಯವಾಗಿ ಹೆಚ್ಚಾಗಿ ಏನನ್ನೂ ಹೇಳಲು ಸಾಧ್ಯವಿಲ್ಲ. ಇದಲ್ಲದೆ ರೌಹಿಣ ಶಬ್ದವು ಮೇಘನಾಮಗಳಲ್ಲಿಯೂ ಪಠಿತವಾಗಿರುವುದರಿಂದ (ನಿ- ೨-೨೧) ಇಂದ್ರನು ಮೇಘವನ್ನು ವಜ್ರಾಯುಧದಿಂದ ಪ್ರಹರಿಸಿ ವೃಷ್ಟಿಯನ್ನುಂಟುಮಾಡಿದನು ಎಂದೂ ಅರ್ಥವನ್ನು ಹೇಳಬಹುದು. ಇದರಂತೆ ಶಂಬರ ಎಂಬ ಶಬ್ದವು ಸಹ ಮೇಘನಾಮಗಳಲ್ಲಿ ಪಠಿತವಾಗಿರುವುದರಿಂದ ಶಂಬರನ ವಧವೆಂದರೆ ಮೇಘ ಹನನವೆಂದೂ ಸಹ ಇನ್ನೊಂದು ವಿಧವಾದ ಅರ್ಥವನ್ನು ಆಯಾ ಸಂದರ್ಭದಲ್ಲಿ ಹೇಳಬಹುದು.

---

ಸಂಹಿತಾಪಾಠಃ

ದ್ಯಾವಾ ಚಿದಸ್ಮೈ ಪೃಥಿವೀ ನಮೇತೇ ಶುಷ್ಮಾಚ್ಚಿದಸ್ಯ ಪರ್ವತಾ ಭಯಂತೇ ।
ಯಃ ಸೋಮಪಾ ನಿಚಿತೋ ವಜ್ರಬಾಹುರ್ಯೋ ವಜ್ರಹಸ್ತಃ ಸ ಜನಾಸ ಇಂದ್ರಃ

ಪದಪಾಠಃ

ದ್ಯಾವಾ । ಚಿತ್ । ಅಸ್ಮೈ । ಪೃಥಿವೀ ಇತಿ । ನಮೇತೇ ಇತಿ । ಶುಷ್ಮಾತ್ । ಚಿತ್ । ಅಸ್ಯ । ಪರ್ವತಾಃ । ಭಯಂತೇ ।

ಯಃ । ಸೋಮ್ಽಪಾಃ । ನಿಽಚಿತಃ । ವಜ್ರಽಬಾಹುಃ । ಯಃ । ವಜ್ರಽಹಸ್ತಃ । ಸಃ । ಜನಾಸಃ । ಇಂದ್ರಃ ॥ ೧೩ ॥

ಸಾಯಣಭಾಷ್ಯಂ

ಅಸ್ಮಾ ಇಂದ್ರಾಯ ದ್ಯಾವಾ ಪೃಥಿವೀ ॥ ಇತರೇತರಾಪೇಕ್ಷಯಾ ದ್ವಿವಚನಂ ಪ್ರ ಮಿತ್ರಯೋ-ರ್ವರುಣಯೋಃ । ೭-೬೬-೧ । ಇತಿವತ್ ॥ ನಮೇತೇ । ಸ್ವಯಮೇವ ಪ್ರಹ್ವೀಭವತಃ ॥ ಣಮು ಪ್ರಹ್ವತ್ವೇ। ಕರ್ಮಕರ್ತರಿ ನ ದುಹಸ್ನುನಮಾಂ ಯಕ್‌ಚಿಣಾವಿತಿ ಯಕಃ ಪ್ರತಿಷೇಧಃ ॥ ಚಿದಪಿ ಚ ಅಸ್ಯೇಂದ್ರಸ್ಯ ಶುಷ್ಮಾದ್ಬಲಾತ್ಪರ್ವತಾ ಭಯಂತೇ । ಬಿಭ್ಯತಿ । ಯಃ ಸೋಮಪಾಃ ಸೋಮಸ್ಯ ಪಾತಾ ನಿಚಿತಃ ಸರ್ವೈಃ । ಯದ್ವಾ ಅನ್ಯೇಭ್ಯೋಽಪಿ ದೇವೇಭ್ಯೋ ದೃಢಾಂಗಃ । ವಜ್ರಬಾಹುರ್ವಜ್ರಸದೃಶಬಾಹುಃ । ಯಶ್ಚ ವಜ್ರ-ಹಸ್ತೋ ವಜ್ರಯುಕ್ತಃ ಸ ಇಂದ್ರ ಇತ್ಯಾದಿ ಪ್ರಸಿದ್ಧಂ ॥

ಪ್ರತಿಪದಾರ್ಥ

ಜನಾಸಃ—ಎಲೈ ಜನರೇ । ಅಸ್ಮೈ—ಈ ಇಂದ್ರನಿಗೆ ।ದ್ಯಾವಾಪೃಥಿವೀ—ದ್ಯಾವಾಪೃಥಿವಿಗಳೆರಡೂ । ನಮೇತೇ—ವಿನಯದಿಂದ ನಮಸ್ಕರಿಸುವುವು । ಚಿತ್—ಮತ್ತು । ಅಸ್ಯ—ಈ ಇಂದ್ರನ । ಶುಷ್ಮಾತ್ ಚಿತ್—ಬಲದಿಂದಲೇ । ಪರ್ವತಾಃ—ಪರ್ವತಗಳು । ಭಯಂತೇ—ಭಯಪಡುತ್ತವೆ । ಯಃ—ಯಾರು । ಸೋಮಪಾಃ

ಸೋಮರಸವನ್ನು ಪಾನಮಾಡುವವನಾಗಿಯೂ । ನಿಚಿತಃ—ದೃಢಕಾಯನಾಗಿಯೂ । ವಜ್ರಬಾಹುಃ—ವಜ್ರಾಯುಧಕ್ಕೆ ಸಮಾನವಾದ ಬಾಹುಗಳುಳ್ಳವನಾಗಿಯೂ ಇರುವನೋ । ಯಃ—ಯಾರು । ವಜ್ರಹಸ್ತಃ—ಕೈಯಲ್ಲಿ ವಜ್ರಾಯುಧವನ್ನು ಹಿಡಿದಿರುವನೋ। ಸಃ—ಅವನೇ ।ಇಂದ್ರಃ—ಇಂದ್ರನು.

### ಭಾವಾರ್ಥ

ಈ ಇಂದ್ರನಿಗೆ ದ್ಯಾವಾಪೃಥಿವಿಗಳೆರಡೂ ವಿನಯದಿಂದ ನಮಸ್ಕರಿಸುವುವು. ಮತ್ತು ಈ ಇಂದ್ರನ ಬಲದಿಂದಲೇ ಪರ್ವತಗಳು ಭಯಪಡುತ್ತವೆ. ಯಾವನು ಸೋಮರಸವನ್ನು ಪಾನಮಾಡುವವನಾಗಿಯೂ, ದೃಢಕಾಯನಾಗಿಯೂ, ವಜ್ರಾಯುಧಕ್ಕೆ ಸಮಾನವಾದ ಬಾಹುಗಳುಳ್ಳವನಾಗಿಯೂ ಇರುವನೋ, ಯಾವನು ಕೈಯಲ್ಲಿ ವಜ್ರಾಯುಧದನ್ನು ಹಿಡಿದಿರುವನೋ ಅವನೇ ಇಂದ್ರನು.

### English Translation

He, to whom heaven and earth bow down; he, at whose might the mountains are appalled; he, who is the drinker of the Soma juice, the firm (of frame), the adamant-armed, the wielder of the thunderbolt; he, men, is Indra.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಇಂದ್ರನ ಮಹಾಶಕ್ತಿಸಾಮರ್ಥ್ಯಗಳು ಉಕ್ತವಾಗಿವೆ. ದ್ಯಾವಾಪೃಥಿವಿಗಳೂ ಇಂದ್ರನನ್ನು ನಮಸ್ಕರಿಸುತ್ತವೆ. ಪರ್ವತಗಳು (ಅಥವಾ ಮೇಘಗಳು) ಇಂದ್ರನ ಬಲವನ್ನು ಕಂಡು ಭಯಪಡುತ್ತವೆ ಎಂದು ಋಷಿಯು ಇಂದ್ರನ ಸಾಮರ್ಥ್ಯಾತಿಶಯವನ್ನು ವರ್ಣಿಸಿದ್ದಾನೆ.

**ಪರ್ವತಾಃ**—ಪರ್ವತಗಳು ಅಥವಾ ಮೇಘಗಳು, ಪರ್ವತಶಬ್ದವು ಮೇಘನಾಮಗಳಲ್ಲಿ ಪಠಿತವಾಗಿರುವುದರಿಂದ ಇಲ್ಲಿ ಮೇಘಗಳೆಂದೂ ಪರ್ವತಗಳೆಂದೂ ಎರಡು ವಿಧವಾದ ಅರ್ಥಗಳನ್ನು ಹೇಳಬಹುದು.

**ಸೋಮಪಾಃ**—ಇಂದ್ರನ ಸೋಮಪಾನದ ವಿಷಯವನ್ನು ನಾವು ಹಿಂದೆಯೇ ವಿಸ್ತಾರವಾಗಿ ವಿವರಿಸಿದ್ದೇವೆ. ಸೋಮಪಾನಮಾಡುವ ದೇವತೆಗಳಲ್ಲೆಲ್ಲಾ ಇಂದ್ರನೇ ಶ್ರೇಷ್ಠನೆಂದೂ, ಇಂದ್ರನಿಗೆ ಸೋಮಪಾನದಲ್ಲಿ ಬಹಳ ಆಸಕ್ತಿಯಿರುವುದೆಂದೂ ಬಹಳವಾಗಿ ಹೇಳಿದೆ. ಸೋಮಪಾನಕ್ಕಾಗಿ ಎಲ್ಲಾ ದೇವತೆಗಳಿಗಿಂತಲೂ ಇಂದ್ರನೇ ಹೆಚ್ಚಾಗಿ ಕರೆಯಲ್ಪಟ್ಟಿದ್ದಾನೆ.

**ವಜ್ರಬಾಹುಃ ವಜ್ರಹಸ್ತಃ**—ಈ ಎರಡು ಶಬ್ದಗಳಿಗೂ ಒಂದೇ ಅರ್ಥವಿರುವುದು. ಒಂದೇ ವಾಕ್ಯದಲ್ಲಿ ಈರೀತಿ ಇರುವುದರಿಂದ ಭಾಷ್ಯಕಾರರು **ವಜ್ರಬಾಹುಃ** ಎಂಬ ಶಬ್ದಕ್ಕೆ ವಜ್ರಸದೃಶವಾದ ಎಂದರೆ ವಜ್ರದಂತೆ ಘಟ್ಟಿಯಾದ ಬಾಹುಗಳುಳ್ಳವನೆಂದೂ (ಅಧಿಕಬಾಹುಬಲವುಳ್ಳವನೆಂದೂ), **ವಜ್ರಹಸ್ತಃ** ಎಂಬ ಶಬ್ದಕ್ಕೆ ಕೈಯಲ್ಲಿ ವಜ್ರಾಯುಧವನ್ನು ಧರಿಸಿರುವವನೆಂದೂ ಅರ್ಥವಿವರಣೆಮಾಡಿದ್ದಾರೆ.

---

ಸಂಹಿತಾಪಾಠಃ

ಯಃ ಸುನ್ವಂತಮವತಿ ಯಃ ಪಚಂತಂ ಯಃ ಶಂಸಂತಂ ಯಃ ಶಶಮಾನಮೂತೀ।
ಯಸ್ಯ ಬ್ರಹ್ಮ ವರ್ಧನಂ ಯಸ್ಯ ಸೋಮೋ ಯಸ್ಯೇದಂ ರಾಧಃ ಸ ಜನಾಸ ಇಂದ್ರಃ

ಪದಪಾಠಃ

ಯಃ । ಸುನ್ವಂತಂ । ಅವತಿ । ಯಃ । ಪಚಂತಂ । ಯಃ । ಶಂಸಂತಂ । ಯಃ । ಶಶಮಾನಂ । ಊತೀ ।
ಯಸ್ಯ । ಬ್ರಹ್ಮ । ವರ್ಧನಂ । ಯಸ್ಯ । ಸೋಮಃ । ಯಸ್ಯ । ಇದಂ । ರಾಧಃ । ಸಃ । ಜನಾಸಃ । ಇಂದ್ರಃ
॥ ೧೪ ॥

ಸಾಯಣಭಾಷ್ಯಂ

ಯಃ ಸುನ್ವಂತಂ ಸೋಮಾಭಿಷವಂ ಕುರ್ವಂತಂ ಯಜಮಾನಮವತಿ । ರಕ್ಷತಿ । ಯಶ್ಚ ಪುರೋ-ಡಾಶಾದೀನಿ ಹವೀಂಷಿ ಪಚಂತಂ । ಯಶ್ಚೋತೀ ಊತಯೇ॥ ಸುಪಾಂ ಸುಲುಗಿತಿ ಚತುರ್ಥ್ಯಾಃ ಪೂರ್ವ-ಸವರ್ಣದೀರ್ಘಃ ॥ ಸ್ವರಕ್ಷಾಯೈ ಶಸ್ತ್ರಾಣಿ ಶಂಸಂತಂ ಯಶ್ಚ ಶಶಮಾನಮವತಿ । ಸ್ತೋತ್ರಂ ಕುರ್ವಾಣಂ ರಕ್ಷತಿ । ಬ್ರಹ್ಮ ಪರಿವೃಢಂ ಸ್ತೋತ್ರಂ ಯಸ್ಯ ವರ್ಧನಂ ವೃದ್ಧಿಕರಂ ಭವತಿ । ತಥಾ ಯಸ್ಯ ಸೋಮೋ ವೃದ್ಧಿಹೇತುರ್ಭವತಿ । ಯಸ್ಯ ಚೇದಮಸ್ಮದೀಯಂ ರಾಧಃ ಪುರೋಡಾಶಾದಿಲಕ್ಷಣಮನ್ನಂ ವೃದ್ಧಿಕರಂ ಭವತಿ । ಸ ಇಂದ್ರ ಇತ್ಯಾದಿ ಪ್ರಸಿದ್ಧಂ ॥

ಪ್ರತಿಪದಾರ್ಥ

ಜನಾಸಃ—ಎಲೈ ಜನರೇ । ಯಃ—ಯಾರು । ಸುನ್ವಂತಂ—ಸೋಮರಸವನ್ನು ಹಿಂಡುವ ಯಜಮಾನನನ್ನು । ಅವತಿ—ರಕ್ಷಿಸುತ್ತಾನೆಯೋ । ಯಃ—ಯಾರು । ಪಚಂತಂ—ಪುರೋಡಾಶಾದಿಗಳನ್ನು ಪಕ್ವಮಾಡುವವನನ್ನು ರಕ್ಷಿಸುವನೋ । ಯಃ—ಯಾರು । ಊತೀ ರಕ್ಷಣಾರ್ಥವಾಗಿ । ಶಂಸಂತಂ—ಪ್ರಾರ್ಥಿಸುವವನನ್ನು ರಕ್ಷಿಸುವನೋ । ಯಃ—ಯಾರು । ಶಶಮಾನಂ—ಸ್ತುತಿಮಾಡುವವನನ್ನು ರಕ್ಷಿಸುವನೋ (ಮತ್ತು)। ಯಸ್ಯ—ಯಾರಿಗೆ । ಬ್ರಹ್ಮ—ಸ್ತುತಿಯು । ವರ್ಧನಂ—ವೃದ್ಧಿಕಾಂಕವಾಗಿದೆಯೋ । ಯಸ್ಯ—ಯಾರಿಗೆ ।। ಸೋಮಃ—ಸೋಮರಸದ ಪಾನವು ವೃದ್ಧಿಕಾರಕವೋ । ಯಸ್ಯ—ಯಾರಿಗೆ । ಇದಂ—ನಮ್ಮಿಂದ ದತ್ತವಾದ । ರಾಧಃ—ಪುರೋಡಾಶಾದ್ಯನ್ನವು ವೃದ್ಧಿಕಾರಕವಾಗಿದೆಯೋ । ಸಃ—ಅವನೇ । ಇಂದ್ರಃ—ಇಂದ್ರನು.

ಭಾವಾರ್ಥ

ಎಲೈ ಜನರೇ, ಯಾರು ಸೋಮರಸವನ್ನು ಹಿಂಡುವ ಯಜಮಾನನನ್ನು ರಕ್ಷಿಸುತ್ತಾನೆಯೋ, ಯಾರು ಪುರೋಡಾಶಾದಿಗಳನ್ನು ಪಕ್ವಮಾಡುವವನನ್ನು ರಕ್ಷಿಸುವನೋ, ಯಾರು ರಕ್ಷಣಾರ್ಥವಾಗಿ ಯಾಚಿಸುವವರನ್ನು ರಕ್ಷಿಸುವನೋ, ಯಾರು ಸ್ತುತಿಕರ್ತನನ್ನು ರಕ್ಷಿಸುವನೋ, ಮತ್ತು ಯಾರಿಗೆ ಸ್ತೋತ್ರವೂ, ಸೋಮರಸವೂ, ಪುರೋಡಾಶಾದ್ಯನ್ನಗಳೂ ವೃದ್ಧಿಕಾರಕವೂ ಆಗಿವೆಯೋ ಅವನೇ ಇಂದ್ರನು.

## English Translation

He, who protects (the worshipper) offering the libation, or preparing (the mixed curds and butter), repeating his praise and soliciting his assistance; he, of whom the sacred prayer, the (offered) Soma juice, the (presented sacrificial) food, augment (the vigour); he, men, is Indra.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಯಜಮಾನ ಮತ್ತು ಋತ್ವಿಗ್ಜನರು ಮಾಡುವ ಮತ್ತು ಅರ್ಪಿಸುವ ಹವಿರಾದಿಗಳಿಂಡ ಇಂದ್ರನು ಪ್ರೀತನಾಗುವನೆಂಬ ವಿಷಯವನ್ನು ಹೇಳಲಾಗಿದೆ.

**ಯಃ ಸುನ್ವಂತಂ ಅವತಿ—ಸೋಮಾಭಿಷವಂ ಕುರ್ವಂತಂ ಯಜಮಾನಮವಃ** । ಇಂದ್ರನಿಗೆ ಸೋಮಪಾನವು ಪ್ರೀತಿದಾಯಕವಾದ್ದರಿಂದ ಯಜ್ಞದಲ್ಲಿ ಇಂದ್ರನಿಗೆ ಅರ್ಪಿಸುವುದಕ್ಕಾಗಿ ಸೋಮರಸವನ್ನು ಹಿಂಡಿ ಸಿದ್ಧಪಡಿಸುವ ಯಜಮಾನನನ್ನು ಇಂದ್ರನು ರಕ್ಷಿಸುತ್ತಾನೆ.

**ಯಃ ಪಚಂತಂ ಯಃ ಶಂಸಂತಂ ಯಃ ಶಶಮಾನ ಊತೀ ಪುರೋಡಾಶಾದಿಹವೀಂಷಿ ಪಚಂತಂ, ಊತಯೇ ಸ್ವರಕ್ಷಾಯೈ ಶಸ್ತ್ರಾಣಿ ಶಂಸಂತಂ ಸ್ತೋತ್ರಂ ಕುರ್ವಾಣಂ ರಕ್ಷತಿ** । ಇಂದ್ರನು ಯಜ್ಞಮಾಡುವ ಯಜಮಾನನನ್ನು ಮಾತ್ರ ರಕ್ಷಿಸುತ್ತಾನೆಂದು ತಿಳಿಯಬಾರದು. ಯಜ್ಞದಲ್ಲಿ ಇಂದ್ರನಿಗೆ ಅರ್ಪಿಸುವುದಕ್ಕಾಗಿ ಹವಿರಾದಿಗಳನ್ನು ಅಗ್ನಿಯಲ್ಲಿ ಪಚನಮಾಡುವ (ಬೇಯಿಸುವ) ಋತ್ವಿಜನನ್ನೂ, ಇಂದ್ರನ ಪ್ರೀತ್ಯರ್ಥವಾಗಿ ಶಸ್ತ್ರಮಂತ್ರಗಳನ್ನು ಪಠಿಸುವ ಹೋತೃ ಎಂಬ ಋತ್ವಿಜನನ್ನು, ತನ್ನ ರಕ್ಷಣೆಗಾಗಿ ಇಂದ್ರನನ್ನೂ ಪ್ರಾರ್ಥಿಸುವ ಇತರ ಋತ್ವಿಜ ಮೊದಲಾದವರನ್ನೂ ರಕ್ಷಿಸಿ ಸಲಹುವನೆಂದಭಿಪ್ರಾಯವು.

**ಯಸ್ಯ ಬ್ರಹ್ಮ ವರ್ಧನಂ ಯಸ್ಯ ಸೋಮಃ ಯಸ್ಯ ಇದಂ ರಾಧಃ**—ಈ ವಾಕ್ಯದಲ್ಲಿ ಮೇಲೆಹೇಳಿದ ಅರ್ಥವನ್ನೇ ಪ್ರಕಾರಾಂತರವಾಗಿ ಹೇಳಿದೆ. ಇಂದ್ರನು ಯಜಮಾನನನ್ನು ಋತ್ವಿಗ್ಜನರನ್ನು ಕಾಪಾಡುವನು ಎಂದು ಹೇಳಿದೆಯಷ್ಟೆ. ಏಕೆಂದರೆ ಇಂದ್ರನಿಗೆ ಋತ್ವಿಗ್ಜನರು ಅಥವಾ ಯಜಮಾನರು ಮಾಡುವ ಸ್ತೋತ್ರವು ವೃದ್ಧಿಕರವಾಗಿರುವುದು ಎಂದರೆ ಪ್ರೀತಿದಾಯಕವಾಗಿರುವುದು. ಅದರಂತೆ ಅವರು ಅರ್ಪಿಸುವ ಸೋಮರಸವೂ, ಹವಿರಾದಿಗಳೂ ಇಂದ್ರನಿಗೆ ವೃದ್ಧಿಕಾರಕಗಳಾಗಿರುವವು. ಆದುದರಿಂದಲೇ ಇಂದ್ರನು ತನ್ನನ್ನು ಸ್ತೋತ್ರಮಾಡುವ ಯಜಮಾನರಾದಿಜನರನ್ನು ರಕ್ಷಿಸುವನೆಂಬ ಋಷಿಯು ವಿವರಿಸಿರುವನು.

---

### ಸಂಹಿತಾಪಾಠಃ

ಯಃ ಸುನ್ವತೇ ಪಚತೇ ದುಧ್ರ ಆ ಚಿದ್ವಾಜಂ ದರ್ದರ್ಷಿ ಸ ಕಿಲಾಸಿ ಸತ್ಯಃ ।
ವಯಂ ತ ಇಂದ್ರ ವಿಶ್ವಹ ಪ್ರಿಯಾಸಃ ಸುವೀರಾಸೋ ವಿದಥಮಾ ವದೇಮ ॥೧೫॥

ಪದಪಾಠಃ

ಯಃ । ಸುನ್ವತೇ । ಪಚತೇ । ದುಧ್ರಃ । ಆ । ಚಿತ್ । ವಾಜಂ । ದರ್ದರ್ಷಿ । ಸಃ । ಕಿಲ । ಅಸಿ । ಸತ್ಯಃ ।

ವಯಂ । ತೇ । ಇಂದ್ರ । ವಿಶ್ವಹ । ಪ್ರಿಯಾಸಃ । ಸುಽವೀರಾಸಃ । ವಿದಥಂ । ಆ । ವದೇಮ ॥ ೧೫ ॥

ಸಾಯಣಭಾಷ್ಯಂ

ಇದಾನೀಮೃಷಿಃ ಸಾಕ್ಷಾತ್ಕೃತಮಿಂದ್ರಂ ಪ್ರತಿ ಪ್ರಬ್ರೂತೇ । ಹೇ ಇಂದ್ರ ಯೋ ದುಧ್ರೋ ದುರ್ಧರಃ ಸನ್ ಸುನ್ವತೇ ಸೋಮಾಭಿಷವಂ ಕುರ್ವತೇ ಪುರೋಡಾಶಾದಿಹವೀಂಷಿ ಪಚತೇ ಯಜಮಾನಾಯ ವಾಜಮನ್ನಂ ಬಲಂ ವಾದರ್ದರ್ಷಿ । ಭೃಶಂ ಪ್ರಾಪಯಸಿ ಸ ತಾದೃಶಸ್ತ್ವಂ ಸತ್ಯೋ ಯಥಾರ್ಥಭೂತೋಽಸಿ । ನ ಪುನರ್ನಾಸ್ತೀತಿ ಬುದ್ಧಿಯೋಗ್ಯೋಽಸಿ । ಕಿಲೇತಿ ಪ್ರಸಿದ್ಧೌ । ತೇ ತವ ಪ್ರಿಯಾಸಃ ಸುವೀರಾಸಃ ಕಲ್ಯಾಣಪುತ್ರಪೌತ್ರಾಃ ಸಂತೋ ವಯಂ ವಿಶ್ವಹ ಸರ್ವೇಷ್ವಹಃಸು ವಿದಥಂ ಸ್ತೋತ್ರಮಾವದೇಮ । ಬ್ರೂಯಾಮ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಯಃ—ಯಾರು । ದುಧ್ರಃ—ಅಪ್ರತಿಹತನಾಗಿ । ಸುನ್ವತೇ—ಸೋಮರಸವನ್ನು ಹಿಂಡುವವನೂ । ಪಚತೇ—ಪುರೋಡಾಶಾದಿಗಳನ್ನು ಪಕ್ವಮಾಡುವವನೂ ಆದ ಯಜಮಾನನಿಗೆ। ವಾಜಂ-ಅನ್ನವನ್ನೂ ಬಲವನ್ನೂ । ಆ ದರ್ದರ್ಷಿ—ಪ್ರಭೂತವಾಗಿ ಕೊಡುವನೋ । ಸಃ—ಅಂತಹ ನೀನು । ಸತ್ಯಃ—ಸತ್ಯಾತ್ಮಕನಾಗಿ । ಅಸಿ ಕಿಲ— ಆಗಿದ್ದೀಯಲ್ಲವೇ । ತೇ—ನಿನಗೆ । ಪ್ರಿಯಾಸಃ—ಪ್ರಿಯರಾದವರೂ । ಸುವೀರಾಸಃ—(ನಿನ್ನ ಅನುಗ್ರಹದಿಂದ) ಕಲ್ಯಾಣಾತ್ಮಕರಾದ ಪುತ್ರಪೌತ್ರಾದಿಗಳಿಂದ ಕೂಡಿದವರೂ ಆದ । ವಯಂ—ನಾವು । ವಿಶ್ವಹ—ಸಕಲ ದಿನಗಳಲ್ಲಿಯೂ । ವಿದಥಂ—ಸ್ತೋತ್ರವನ್ನು । ಆ ವದೇಮ—ಪಠಿಸುತ್ತೇವೆ.

ಭಾವಾರ್ಥ

ಎಲೈ ಇಂದ್ರನೇ, ಅಪ್ರತಿಹತನಾದ ಯಾವನು ಸೋಮರಸವನ್ನು ಹಿಂಡುವವನೂ, ಪುರೋಡಾಶಾದಿಗಳನ್ನು ಪಕ್ವಮಾಡುವವನೂ ಆದ ಯಜಮಾನನಿಗೆ ಅನ್ನವನ್ನೂ ಬಲವನ್ನೂ ಪ್ರಭೂತವಾಗಿ ಕೊಡುವನೋ ಅಂತಹ ನೀನು ಸತ್ಯಾತ್ಮಕನಾಗಿ ಆಗಿದ್ದೀಯಲ್ಲವೇ ? ನಿನಗೆ ಪ್ರಿಯರಾದವರೂ, ನಿನ್ನ ಅನುಗ್ರಹದಿಂದ ಕಲ್ಯಾಣಾತ್ಮಕರಾದ ಪುತ್ರಪೌತ್ರಾದಿಗಳಿಂದ ಕೂಡಿದವರೂ ಆದ ನಾವು ಸಕಲದಿನಗಳಲ್ಲಿಯೂ ಸ್ತೋತ್ರವನ್ನು ಪಠಿಸುತ್ತೇವೆ.

## English Translation

Indra, you are difficult of approach; you, verily, are a true (benefactor), who bestow (abundant) food upon him who offers the libation, who prepares (the mixed curds and butter): may we, enjoying your favour, blessed with progeny, daily repeat (your praise) at the sacrifice.

### ವಿಶೇಷವಿಷಯಗಳು

ಈ ಸೂಕ್ತದ ಉಪಸಂಹಾರರೂಪವಾದ ಈ ಋಕ್ಕಿನಲ್ಲಿ ಋಷಿಯು ಇಂದ್ರನನ್ನೇ ಪ್ರತ್ಯಕ್ಷವಾಗಿ ಸಂಬೋಧಿಸಿ, ಅನ್ನ, ವೀರರಾದ ಪುತ್ರಪೌತ್ರರು ಮೊದಲಾದ ಇಷ್ಟವಸ್ತುಗಳನ್ನು ಕೊಡಬೇಕೆಂಬ ಪ್ರಾರ್ಥನೆಯನ್ನು ಮಾಡಿದ್ದಾನೆ.

ಮಂತ್ರಗಳಲ್ಲಿ, ಅವುಗಳಲ್ಲಿರುವ ಅರ್ಥಾನುಸಾರವಾಗಿ ಅನೇಕವಿಧವೆಂದು ಯಾಸ್ಕರು ಹೇಳಿರುವರು. ಅದನ್ನು ಇಲ್ಲಿ ಸೂಕ್ಷ್ಮವಾಗಿ ಹೇಳುವುದು ಅವಶ್ಯಕವಾಗಿರುವುದು—

> ತದ್ಯಾನಿ ನಾಮಾನಿ ಪ್ರಾಧಾನ್ಯಸ್ತುತೀನಾಂ ದೇವತಾನಾಂ ತದ್ದೈವತಮಿತ್ಯಾಚಕ್ಷತೇ । ಯತ್ಕಾಮ ಋಷಿಯ ಸ್ಯಾಂ ದೇವತಾಯಾಮಾರ್ಥಪತ್ಯಮಿಚ್ಛನ್ಸ್ತುತಿಂ ಪ್ರಯುಂಕ್ತೇ ತದ್ದೈವತಃ ಸ ಮಂತ್ರೋ ಭವತಿ । ತಾಸ್ತ್ರಿವಿಧಾ ಋಚಃ ಪರೋಕ್ಷಕೃತಾಃ ಪ್ರತ್ಯಕ್ಷಕೃತಾ ಆಧ್ಯಾತ್ಮಿಕಾಶ್ಚ । ತತ್ರ ಪರೋಕ್ಷಕೃತಾಃ ಸರ್ವಾಭಿರ್ನಾಮವಿಭಕ್ತಿಭಿರ್ಯುಜ್ಯಂತೇ ಪ್ರಥಮಪುರುಷೈಶ್ಚಾಖ್ಯಾತಸ್ಯ। ಅಥ ಪ್ರತ್ಯಕ್ಷಕೃತಾ ಮಧ್ಯಮಪುರುಷೋಪಯೋಗಾಸ್ತ್ವಮಿತಿ ಚೈತೇನ ಸರ್ವನಾಮ್ನಾ । ಅಥಾಧ್ಯಾತ್ಮಿಕ್ಯ ಉತ್ತಮಪುರುಷಯೋಗಾ ಅಹಮಿತಿ ಚೈತೇನ ಸರ್ವನಾಮ್ನಾ । ಪರೋಕ್ಷ-ಕೃತಾಃ ಪ್ರತ್ಯಕ್ಷಕೃತಾಶ್ಚ ಮಂತ್ರಾ ಭೂಯಿಷ್ಠಾ ಅಲ್ಪಶ ಆಧ್ಯಾತ್ಮಿಕಾಃ ॥
>
> (ನಿರುಕ್ತ. ದೈವತಕಾಂಡ ೭-೧ ರಿಂದ ೩)

ಎಂದರೆ ಮಂತ್ರಗಳಲ್ಲಿ ದೈವತಮಂತ್ರ, ಸ್ತುತಿಮಂತ್ರ, ಆಶೀರ್ಮಂತ್ರ, ಶಪಥ, ಅಭಿಶಾಪ, ಕಶ್ಚಿದ್ಭಾವ, ಪರಿದೇವನಾ, ನಿಂದಾ, ಪ್ರಶಂಸಾ ಎಂದು ಅರ್ಥಾನುಸಾರವಾಗಿ ಅನೇಕ ವಿಧವಾಗಿರುವುದು. ದೈವತಮಂತ್ರವೆಂದರೆ—ದೇವತೆಗಳ ಮಹಿಮೆಯನ್ನು ವರ್ಣಿಸುವ ಮಂತ್ರ, ಸ್ತುತಿಯೆಂದರೆ—ಸ್ತೋತ್ರ ಅಥವಾ ಪ್ರಾರ್ಥನೆಗಳನ್ನೊಳಗೊಂಡಿರುವ ಮಂತ್ರ, ಆಶೀಃ ಎಂದರೆ—ಆಶೀರ್ವಾದ, ಒಳ್ಳೆಯದನ್ನು ಹಾರೈಸುವ ಮಂತ್ರ, ಶಪಥ ಎಂದರೆ—ಪ್ರತಿಜ್ಞೆ, ಅಭಿಶಾಪ ಎಂದರೆ–ಕೆಟ್ಟ ಹಾರೈಕೆ, ಕಶ್ಚಿದ್ಭಾವ ಎಂದರೆ—ಒಂದು ವಿಷಯ ಅಥವಾ ತತ್ತ್ವದ ವಿವರಣೆ, ಪರಿದೇವನಾ ಎಂದರೆ ವ್ಯಸನ, ನಿಂದಾ ಎಂದರೆ—ನಿಂದೆಯು, ದೂಷಿಸುವುದು, ಪ್ರಶಂಸಾ ಎಂದರೆ—ಹೊಗಳುವಿಕೆಯು ದಾನಸ್ತುತಿ ಇತ್ಯಾದಿ.

ಮೇಲೆ ಹೇಳಿದ ಅನೇಕವಿಧ ಮಂತ್ರಗಳಲ್ಲಿ ದೈವತವೆಂಬ ಋಕ್ಕುಗಳು ಪರೋಕ್ಷಕೃತ, ಪ್ರತ್ಯಕ್ಷಕೃತ, ಆಧ್ಯಾತ್ಮಿಕ ಎಂದು ಮೂರು ವಿಧವಾಗಿರುವುವು. ಪರೋಕ್ಷಕೃತವೆಂದರೆ–ಸ್ತುತಿಸಲ್ಪಡುವ ದೇವತೆಯು ಎದುರಿಗಿಲ್ಲದಿರುವುದರಿಂದ ಸ್ತುತಿಸುವಾಗ ಆ ದೇವತೆಯ ವಿಷಯದಲ್ಲಿ ಪ್ರಥಮಪುರುಷನಾಮಪದಗಳನ್ನೂ ಕ್ರಿಯಾ ಪದಗಳನ್ನೂ (Third person both in subject and predicate) ಉಪಯೋಗಿಸಿರುವ ಮಂತ್ರಗಳು; ಪ್ರತ್ಯಕ್ಷಕೃತವೆಂದರೆ, ಸ್ತುತಿಸಲ್ಪಡುವ ದೇವತೆಯು ಪ್ರತ್ಯಕ್ಷವಾಗಿ ಎದುರಿಗೆ ಇದ್ದಂತೆ ಭಾವಿಸಿ ಅದನ್ನು, ನೀನು, ನಿನ್ನ ಮೊದಲಾದ ಮಧ್ಯಮ ಪುರುಷ ಶಬ್ದಗಳಿಂದ (Second person) ಸಂಬೋಧನೆಮಾಡಿ ಸ್ತುತಿಸುವ ಋಕ್ಕುಗಳು; ಆಧ್ಯಾತ್ಮಿಕವೆಂದರೆ, ಉತ್ತಮಪುರುಷ ಪ್ರಯೋಗವನ್ನು (First person) ಮಾಡಿ ಸ್ತುತಿಸಿರುವ ಮಂತ್ರಗಳು. ಈ ಮೂರುವಿಧ ಮಂತ್ರಗಳಲ್ಲಿ, ಪರೋಕ್ಷಕೃತ ಮತ್ತು ಪ್ರತ್ಯಕ್ಷಕೃತವೆಂಬ ಎರಡುವಿಧ ಮಂತ್ರಗಳೇ ಹೆಚ್ಚಾಗಿರುವವು. ಆಧ್ಯಾತ್ಮಿಕ ಮಂತ್ರಗಳು ಕೇವಲ ಸ್ವಲ್ಪವಾಗಿರುವುವು. ಪ್ರಕೃತ ಸೂಕ್ತದಲ್ಲಿ ಮೊದಲಿನ ೧೪ ಋಕ್ಕುಗಳು ಪರೋಕ್ಷಕೃತಮಂತ್ರಗಳು. ಕೊನೆಯದಾದ ೧೫ ನೆಯ ಋಕ್ಕು ಪ್ರತ್ಯಕ್ಷಕೃತವು.

---

# ಹದಿಮೂರನೆಯ ಸೂಕ್ತವು.

ಸಾಯಣಭಾಷ್ಯಂ

**ಋತುರ್ಜನಿತ್ರೀತಿ ತ್ರಯೋದಶರ್ಚಂ ದ್ವಿತೀಯಂ ಸೂಕ್ತಂ ಗಾರ್ತ್ಸಮದಂ । ಋತುಃ ಸಪ್ತೋ- ನಾಂತ್ಯಾ ತ್ರಿಷ್ಟುಬಿತ್ಯನುಕ್ರಮಣಿಕಾ । ಅಸ್ಮಭ್ಯಂ ತದ್ವಸೋ ಇತಿ ತ್ರಯೋದಶೀ ತ್ರಿಷ್ಟುಪ್ । ಶಿಷ್ಟಾಸ್ತ್ರಿ- ಷ್ಟುಬಂತಪರಿಭಾಷಯಾ ಜಗತ್ಯಃ । ಇಂದ್ರೋ ದೇವತಾ ॥ ಉಕ್ಥ್ಯೇ ತೃತೀಯಸವನೇಽಚ್ಛಾವಾಕಶಸ್ತ್ರೇಽಸ ಸೂಕ್ತಸ್ಯ ವಿನಿಯೋಗಃ । ಸೂತ್ರಿತಂ ಚ । ಋತುರ್ಜನಿತ್ರೀ ನೂ ಮರ್ತೋ ಭವಾ ಮಿತ್ರಃ । ಆ. ೬-೧ । ಇತಿ ॥ ದಶರಾತ್ರೇ ಷಷ್ಠೇಽಹನ್ಯಪಿ ತೃತೀಯಸವನೇಽಚ್ಛಾವಾಕಶಸ್ತ್ರ ಏತತ್ಸೂಕ್ತಂ । ಋತುರ್ಜನಿತ್ರೀತಿ ನಿತ್ಯಾನ್ಯೈಕಾಹಿಕಾನಿ । ಆ. ೮-೪ । ಇತಿ ಸೂತ್ರಿತಂ ॥**

ಅನುವಾದವು—**ಋತುರ್ಜನಿತ್ರೀ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹದಿಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು- ಅನುಕ್ರಮಣಿಕೆಯಲ್ಲಿ—**ಋತುಃ ಸಪ್ತೋನಾಂತ್ಯಾ ತ್ರಿಷ್ಟುಪ್** ಎಂದು ಹೇಳಿರುವುದರಿಂದ ಕೊನೆಯ ಋಕ್ಕಾದ **ಅಸ್ಮಭ್ಯಂ ತದ್ವಸೋ** ಎಂಬ ಹದಿಮೂರನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು- ಉಳಿದ ಹನ್ನೆರಡು ಋಕ್ಕುಗಳೂ ಜಗತೀ ಛಂದಸ್ಕವು ; ಇಂದ್ರನು ದೇವತೆಯು ಉಕ್ಥ್ಯಯಾಗದಲ್ಲಿ ತೃತೀಯಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಋತುರ್ಜನಿತ್ರೀ ನೂ ಮರ್ತೋ ಭವಾ ಮಿತ್ರಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೬-೧); ಮತ್ತು ದಶರಾತ್ರವೆಂಬ ಯಾಗದ ಆರನೆಯ ದಿವಸದಲ್ಲಿ ತೃತೀಯಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ಈ ಸೂಕ್ತ ವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ **ಋತುರ್ಜನಿತ್ರೀತಿ ನಿತ್ಯಾನ್ಯೈಕಾಹಿಕಾನಿ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೪).

॥ ಓಂ ॥

## ಸೂಕ್ತ—೧೩

॥ ಮಂಡಲ—೨ ॥ ಅನುವಾಕ—೨ ॥ ಸೂಕ್ತ—೧೩ ॥

॥ ಅಷ್ಟಕ— ೨ ॥ ಅಧ್ಯಾಯ— ೬ ॥ ವರ್ಗ—೧೦, ೧೧, ೧೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ–೧೩ ॥

ಋಷಿಃ—ಗೃತ್ಸಮದಃ ॥

ದೇವತಾ—ಇಂದ್ರಃ ॥

ಛಂದಃ—೧–೧೨. ಜಗತೀ । ೧೩. ತ್ರಿಷ್ಟುಪ್ ।

---

ಸಂಹಿತಾಪಾಠಃ

ಋತುರ್ಜನಿತ್ರೀ ತಸ್ಯಾ ಅಪಸ್ಪರಿ ಮುಕ್ಷೂ ಜಾತ ಆವಿಶದ್ಯಾಸು ವರ್ಧತೇ ।
ತದಾಹನಾ ಅಭವತ್ಪಿಪ್ಯುಷೀ ಪಯೋಽಂಶೋಃ ಪೀಯೂಷಂ ಪ್ರಥಮಂ ತದುಕ್ಥ್ಯಂ

ಪದಪಾಠಃ

ಋತುಃ । ಜನಿತ್ರೀ । ತಸ್ಯಾಃ । ಅಪಃ । ಪರಿ । ಮಕ್ಷು । ಜಾತಃ । ಆ । ಅವಿಶತ್ । ಯಾಸು । ವರ್ಧತೇ ।
ತತ್ । ಆಹನಾಃ । ಅಭವತ್ । ಪಿಪ್ಯುಷೀ । ಪಯಃ । ಅಂಶೋಃ । ಪೀಯೂಷಂ । ಪ್ರಥಮಂ । ತತ್ ।
ಉಕ್ಥ್ಯಂ ॥ ೧ ॥

ಸಾಯಣಭಾಷ್ಯಂ

ಋತುರ್ವರ್ಷಾಖ್ಯಃ ಕಾಲೋ ಜನಿತ್ರೀ ಸೋಮಸ್ಯ ಜನಯಿತ್ರೀ ಜನನೀ ಭವತಿ । ತಸ್ಯಾಃ ಪರಿ ತಸ್ಯಾ ಜನನ್ಯಾಃ ಸಕಾಶಾಜ್ಜಾತಃ ಸೋಮೋಽಪ ಉದಕಾನಿ ಮಕ್ಷು ಶೀಘ್ರಮಾವಿಶತ್ । ಯಾಸ್ವಪ್ಸು ಸೋಮೋ ವರ್ಧತೇ ತಾ ಆವಿಶದಿತ್ಯನ್ವಯಃ । ತಸ್ಮಾದಪ್ಸು ಪ್ರವಿಷ್ಟತ್ವಾತ್ ಸೋಮ ಆಹನಾ ಆಹಂತೃಭ್ಯೋಽಭಿಷೋತೃಭ್ಯೋ ಭವತಿ । ಆಹನಾ ಇತಿ ಸಕಾರಾಂತಮಿದಂ ಪದಂ । ತಥಾ ಚ ಮಂತ್ರವರ್ಣಃ । ಯೇ ತೇ ಮದಾ ಆಹನಸೋ ವಿಹಾಯಸಃ । ೯-೭೫-೫ । ಇತಿ । ಯಾ ಚಾಂಶುರೂಪಾ ಸೋಮಲತಾ ಪಯಃ ಸಾರಭೂತಂ ಪಿಪ್ಯುಷೀ ವರ್ಧಯಂತ್ಯಭವತ್ ॥ ಪ್ಯಾಯತೇರ್ಲಿಟಿ ಕ್ವಸೌ ಲಿಡ್ಯಙೋಶ್ಚೇತಿ ಪೀಭಾವಃ । ವಸೋಃ ಸಂಪ್ರಸಾರಣಂ । ಉಗಿತಶ್ಚೇತಿ ಙೀಪ್ ॥ ಅಂಶೋಸ್ತಸ್ಯಾಃ ಸೋಮಲತಾಯಾಃ ಪೀಯೂಷಂ ರಸಭೂತಂ ಪಯ ಉಕ್ಥ್ಯಂ ಪ್ರಶಸ್ಯಂ ಹವಿರಿಂದ್ರಸ್ಯ ಭವತಿ ॥

### ಪ್ರತಿಪದಾರ್ಥ

**ಋತುಃ**—ವರ್ಷರ್ತುವು । **ಜನಿತ್ರೀ**—ಸೋಮಕ್ಕೆ ಜನನಿಯಾಗಿದೆ (ಉತ್ಪಾದಕವಾದ ಕಾಲವಾಗಿದೆ । **ತಸ್ಯಾಃ ಪರಿ**—ಆ ಜನನಿಯಿಂದ । **ಜಾತಃ**—ಉತ್ಪನ್ನವಾದ ಸೋಮವು । **ಯಾಸು**—ಯಾವ ಉದಕಗಳಲ್ಲಿ । **ವರ್ಧತೇ**—ಬೆಳೆಯುತ್ತದೆಯೋ । **ಅಪಃ**—ಅಂತಹ ಉದಕಗಳನ್ನು । **ಮಕ್ಷು**—ಶೀಘ್ರವಾಗಿ । **ಆ ವಿಶತ್**—ಪ್ರವೇಶಿಸುತ್ತದೆ, ಮತ್ತು । **ತತ್**—ಅದು । **ಆಹನಾಃ**—ಹಿಂಡಲು ಯೋಗ್ಯವಾಗುತ್ತದೆ (ಅದೇ ಸೋಮಲತೆಯು ) **ಪಯಃ**—ಸಾರಭೂತವಾಗಿಯೂ । **ಪಿಪ್ಯುಷೀ**—ವೃದ್ಧಿಯನ್ನು ಹೊಂದುವುದಾಗಿಯೂ । **ಅಭವತ್**—ಆಗುತ್ತದೆ । **ಅಂಶೋಃ**—ಅದೇ ಸೋಮಲತೆಯ । **ಪೀಯೂಷಂ**—ಸಾರಭೂತವಾದುದೂ । **ಪ್ರಥಮಂ**—ಮುಖ್ಯವಾದುದೂ ಆದ । **ತತ್**—ಆ ರಸವು । **ಉಕ್ಥ್ಯಂ**—ಪ್ರಶಂಸಾರ್ಹವಾಗುತ್ತದೆ.

### ಭಾವಾರ್ಥ

ವರ್ಷಾಖ್ಯವಾದ ಋತುವು ಸೋಮಕ್ಕೆ ಜನನಿಯಾಗಿದೆ. ಆ ಜನನಿಯಿಂದ ಉತ್ಪನ್ನವಾದ ಸೋಮವು ಯಾವ ಉದಕಗಳಲ್ಲಿ ಬೆಳೆಯುತ್ತದೆಯೋ, ಅಂತಹ ಉದಕಗಳನ್ನು ಶೀಘ್ರವಾಗಿ ಪ್ರವೇಶಿಸುತ್ತದೆ. ಮತ್ತು ಸಾರಭೂತವೂ ವೃದ್ಧಿಯನ್ನು ಹೊಂದುವುದಾಗಿಯೂ ಆಗಿ ಹಿಂಡಲು ಯೋಗ್ಯವಾಗುತ್ತದೆ. ಅದೇ ಸೋಮಲತೆಯ ಸಾರಭೂತವಾದುದೂ, ಮುಖ್ಯವಾದುದೂ ಆದ ರಸವು ಸ್ತುತ್ಯರ್ಹವಾಗಿರುತ್ತದೆ.

### English Translation

The season (of the rains) is the parent (of the Soma plant), which, as soon as born of her, enters into the waters in which it grows; thence it is fit for expression, as concentrating (the essence of the) water; and the juice of the Soma is especially to be praised (as the libation proper for Indra).

### ವಿಶೇಷವಿಷಯಗಳು

**ಋತುರ್ಜನಿತ್ರೀ**—ವರ್ಷಋತುವು ಎಂದರೆ ಮಳೆಗಾಲವು ಸೋಮಕ್ಕೆ ಜನನಿಯಾಗಿದೆ. ಎಂದರೆ ಮಳೆಗಾಲದಲ್ಲಿ ಇತರ ಸಸ್ಯಾದಿಗಳು ಬೆಳೆಯುವಂತೆ ಸೋಮಲತೆಯೂ ಮಳೆಯ ನೀರಿನಿಂದ ಚೆನ್ನಾಗಿ ಬೆಳೆದು ಅಭಿವೃದ್ಧಿ ಹೊಂದುವುದು. ಆದುದರಿಂದ ವರ್ಷಋತುವು ಸೋಮಕ್ಕೆ ಜನನಿಯಾಗಿದೆ ಎಂದು ಋಷಿಯು ವರ್ಣಿಸಿರುವನು. ಈ ಋಕ್ಕಿನಲ್ಲಿ ಸೋಮಲತೆಯನ್ನು ಸೂಚಿಸುವ ಶಬ್ದವಿಲ್ಲದಿದ್ದರೂ ಸೋಮರಸಕ್ಕೆ ಸಂಬಂಧಪಟ್ಟ ವಿವರಣೆಗೆ ಸಹಾಯಕವಾದ **ಆಹನಾಃ ಪಯಃ ಅಂಶೋಃ** ಎಂಬ ಶಬ್ದಗಳಿರುವುದರಿಂದಲೂ, ಋಕ್ಕಿನಲ್ಲಿಯೂ ಸಹ ಸೋಮಾಭಿಷವವನ್ನೇ ಹೇಳಿರುವುದರಿಂದಲೂ ಇಲ್ಲಿ **ಋತುಃ ಸೋಮಸ್ಯ ಜನಿತ್ರೀ** ಎಂದು ವಾಕ್ಯವನ್ನು ಪೂರ್ಣಮಾಡುವುದಕ್ಕಾಗಿ **ಸೋಮಸ್ಯ** ಎಂಬ ಶಬ್ದವನ್ನು ಅಧ್ಯಾಹಾರಮಾಡಿಕೊಳ್ಳಬೇಕು.

**ತಸ್ಯಾಃ ಅಪಃ ಪರಿ ಮಕ್ಷು ಜಾತಃ ಆ ಅವಿಶತ್ ಯಾಸು ವರ್ಧತೇ**—ಆ ವರ್ಷಾಕಾಲದಲ್ಲಿ ಬೆಳೆಯುವ ಸೋಮಲತೆಯು ನೀರಿನ ಆಸರೆಯಿಂದಲೇ ಬೆಳೆಯುವುದರಿಂದ ನೀರನ್ನು ಪ್ರವೇಶಿಸಿತು ಎಂದರೆ ಲತೆಯೊಳಗೆ ರಸವು (ನೀರು) ತುಂಬಿಕೊಂಡು ಪುಷ್ಟವಾಗಿ ಬೆಳೆಯಿತು ಎಂದಭಿಪ್ರಾಯವು. ಯಾವ ಲತೆಯೇ ಆಗಲಿ ಮಳೆಗಾಲದಲ್ಲಿ

ನೀರಿನ ಸಹಾಯದಿಂದ ಚೆನ್ನಾಗಿ ಬೆಳೆಯುವುದಲ್ಲದೆ ಹಸಿಯಾಗಿಯೂ, ಹಸುರಾಗಿಯೂ ರಸವತ್ತಾಗಿಯೂ ಆಗುವುದು. ಸೋಮಲತೆಯೂ ಸಹ ಮಳೆಗಾಲದಲ್ಲಿ ಚೆನ್ನಾಗಿ ಬೆಳೆದು ರಸದಿಂದ ತುಂಬಿಕೊಂಡಿರುವುದು. ಲತೆಯು ರಸಯುಕ್ತ ವಾಗಿರುವುದನ್ನೇ ಋಷಿಯು-ನೀರಿನಲ್ಲಿ ಬೆಳೆದು ನೀರನ್ನೇ ಪ್ರವೇಶಿಸಿತು ಎಂದು ಪ್ರಕಾರಾಂತರವಾಗಿ ವರ್ಣಿಸಿರುವನು.

**ತತ್ ಆಹನಾಃ ತಸ್ಮಾದಪ್ಸು ಪ್ರವಿಷ್ಟತ್ವಾತ್ ಸೋಮ ಆಹನಾ ಆಹಂತವ್ಯೋಽಭಿಷೋತವ್ಯೋ ಭವತಿ । ಆಹನಾ ಇತಿ ಸಕಾರಾಂತಮಿದಂ ಪದಂ । ತಥಾ ಚ ಮಂತ್ರವರ್ಣಾಃ । ಯೋ ತೇ ಮದಾ ಆಹನಸೋ ವಿಹಾಯಸಃ ।** (ಋ. ಸಂ. ೯-೭೫-೫)—ಸೋಮಲತೆಯಲ್ಲಿ ನೀರು (ರಸ) ತುಂಬಿಕೊಂಡಿರುವುದರಿಂದ ಅದನ್ನು ಹೊರಡಿಸುವುದಕ್ಕಾಗಿ ಅದನ್ನು ಹನನಮಾಡಬೇಕು ಎಂದರೆ ಕಲ್ಲುಗಳಿಂದ ಚೆನ್ನಾಗಿ ಕುಟ್ಟ ಜಜ್ಜಬೇಕು. ಹಾಗೆ ಜಜ್ಜಿದರೆ ಲತೆಯಿಂದ ರಸವು ಹೊರಹೊರಡುವುದು. ಹೀಗೆ ಮಾಡುವುದಕ್ಕೆ ಆಹನಾಃ ಅಥವಾ ಅಭಿಷವಣ ವೆಂದು ಹೆಸರು. ಆಹನಾಃ ಎಂಬುದು ಸಕಾರಾಂತ ಶಬ್ದವು. ಪ್ರಥಮೈಕವಚನವು ಎಂದು ಭಾಷ್ಯಕಾರರು ಹೇಳಿದ್ದಾರೆ. ಈ ವಿಷಯದಲ್ಲಿ—

**ಯೋ ತೇ ಮದಾ ಆಹನಸೋ ವಿಹಾಯಸಸ್ತೇಭಿರಿಂದ್ರಂ ಚೋದಯ ದಾತವೇ ಮಘಂ ।**

(ಋ. ಸಂ. ೯-೭೫-೫)

ಎಂಬ ಋಕ್ಕನ್ನು ಉದಾಹರಿಸಿ ಅದರಲ್ಲಿರುವ ಆಹನಸಃ ಎಂಬ ಶಬ್ದವು ಸಕಾರಾಂತ ಶಬ್ದವಾಗಿ ಪ್ರಥಮಾಬಹುವಚನಾಂತ ಶಬ್ದವಾಗಿರುವುದನ್ನು ತೋರಿಸಿದ್ದಾರೆ.

**ಅಭವತ್ ಪಿಪ್ಯುಷೀ ಪಯಃ ಅಂಶೋಃ ಪೀಯೂಷಂ ಪ್ರಥಮಂ ತತ್ ಉಕ್ಥ್ಯಂ--ಯಾ ಚಾಂಶುರೂಪಾ ಸೋಮಲತಾ ಪಯಃ ಸಾರಭೂತಂ ಪಿಪ್ಯುಷೀ ವರ್ಧಯಂತ್ಯಭವತ್ । ಅಂಶೋಸ್ತಸ್ಯಾಃ ಸೋಮಲತಾಯಾಃ ಪೀಯೂಷಂ ರಸಭೂತಂ ಪಯ ಉಕ್ಥ್ಯಂ ಪ್ರಶಸ್ಯಂ ಹವಿರಿಂದ್ರಸ್ಯ ಭವತಿ**—ಅಂಶು ಶಬ್ದಕ್ಕೆ ಯಾಸ್ಕರು—

**ಅಂಶುಃ ಶಮಷ್ಟಮಾತ್ರೋ ಭವತಿ । ಅನನಾಯ ಶಂ ಭವತೀತಿ ವಾ ।**

(ನಿ. ೨-೫)

ಯಜಮಾನನಿಂದ (ಯಜಮಾನನಲ್ಲಿ) ಈ ಸೋಮರಸವು ವ್ಯಾಪಿಸಲ್ಪಡುವುದರಿಂದ ಎಂದರೆ ಯಜಮಾನನು ಸೋಮ ಪಾನಮಾಡುವುದರಿಂದ ನಮಗೆ ಯಾವ ದುಃಖವೂ ಅಥವಾ ಚಿಂತೆಯೂ ಇಲ್ಲವೆಂದು ಸುಖಿಯಾಗಿರುವನು. ಸೋಮವು ಯಜಮಾನನನ್ನು ವ್ಯಾಪಿಸಿ ಸುಖವನ್ನುಂಟುಮಾಡುವುದರಿಂದ ಸೋಮಕ್ಕೆ ಅಂಶುವೆಂದು ಹೆಸರು, ಅಥವಾ ಸಮಸ್ತ ಪ್ರಾಣಿಗಳ ಜೀವನದಲ್ಲಿಯೂ (ಸೋಮಪಾನಮಾಡಿದಾಗ) ಸುಖವನ್ನುಂಟುಮಾಡುವುದರಿಂದ ಇದಕ್ಕೆ ಅಂಶುವೆಂದು ಹೆಸರು, ಅಥವಾ ಸೋಮಪಾನ ಮಾಡಿದವರಿಗೆ ಸುಖವನ್ನುಂಟುಮಾಡುವುದರಿಂದ ಸೋಮಕ್ಕೆ ಅಂಶುವೆಂದು ಹೆಸರು ಎಂದು ನಿರ್ವಚನವನ್ನು ಹೇಳಿದ್ದಾರೆ. ಇಂತಹ ರಸವಿಶಿಷ್ಟವಾದ ಸೋಮಲತೆಯಿಂದ ಅದರ ಸಾರಭೂತವಾದ ರಸವು ಅಥವಾ ಸೋಮರಸವು (ಹಿಂಡುವುದರಿಂದ) ಅಭಿವೃದ್ಧಿಯಾಗುವುದು. ಎಂದರೆ ಹಸಿಯಾಗಿಯೂ, ಹಸುರಾಗಿಯೂ, ರಸದಿಂದ ಪರಿಪೂರ್ಣವಾಗಿರುವುದೂ ಆದ ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜಿ ರಸವನ್ನು ಹಿಂಡುವುದರಿಂದ ಸೋಮರಸವು ಬಹಳವಾಗಿ ಅಭಿವೃದ್ಧಿಯಾಗುವುದು ಎಂದರೆ ಸಂಗ್ರಹವಾಗುವುದು. ಈರೀತಿ ಸಿದ್ಧಪಡಿಸಲ್ಪಟ್ಟ ಸೋಮರಸವು ಇಂದ್ರನಿಗೆ ಪ್ರಶಸ್ಯವಾದ ಅಥವಾ ಶ್ರೇಷ್ಠವಾದ ಅಥವಾ ಪಾನಾರ್ಹವಾದ ಹವಿಸ್ಸಾಗುವುದು (ಆಹಾರ ವಾಗುವುದು) ಎಂದು ಮುಖ್ಯಾಭಿಪ್ರಾಯವು.

---

ಸಂಹಿತಾಪಾಠಃ

ಸಧ್ರೀಮಾ ಯಂತಿ ಪರಿ ಬಿಭ್ರತೀಃ ಪಯೋ ವಿಶ್ವಪ್ಸ್ನ್ಯಾಯ ಪ್ರ ಭರಂತ ಭೋಜನಂ ।
ಸಮಾನೋ ಅಧ್ವಾ ಪ್ರವತಾಮನುಷ್ಯದೇ ಯಸ್ತಾಕೃಣೋಃ ಪ್ರಥಮಂ ಸಾಸ್ಯುಕ್ಥ್ಯಃ ॥ ೨ ॥

ಪದಪಾಠಃ

ಸಧ್ರೀ । ಈಂ । ಆ । ಯಂತಿ । ಪರಿ । ಬಿಭ್ರತೀಃ । ಪಯಃ । ವಿಶ್ವऽಪ್ಸ್ನ್ಯಾಯ । ಪ್ರ । ಭರಂತ । ಭೋಜನಂ ।
ಸಮಾನಃ । ಅಧ್ವಾ । ಪ್ರವತಾಂ । ಅನುऽಸ್ಯದೇ । ಯಃ । ತಾ । ಅಕೃಣೋಃ । ಪ್ರಥಮಂ । ಸಃ । ಅಸಿ । ಉಕ್ಥ್ಯಃ ॥ ೨ ॥

ಸಾಯಣಭಾಷ್ಯಂ

ಸಧ್ರೀ । ಅಂಚತೇರ್ಲುಕ್ ಛಾಂದಸಃ । ಸಹಸ್ಯ ಸಧ್ರಿರಿತಿ ಸಧ್ರ್ಯಾದೇಶೋऽಂತೋದಾತ್ತತ್ವೇನ ನಿಪಾತಿತಃ। ಸಧ್ರೀಚೀನಾಃ ಪಯ ಉದಕಂ ಪರಿ ಪರಿತೋ ಬಿಭ್ರತೀರ್ಬಿಭ್ರಾಣಾ ಈಮೇತಾ ನದ್ಯ ಆಯಂತಿ। ಸರ್ವತೋ ಗಚ್ಛಂತಿ । ತಾ ನದ್ಯೋ ವಿಶ್ವಪ್ಸ್ನ್ಯಾಯ ವಿಶ್ವಾಸಾಮಪಾಮಾಶ್ರಯಭೂತಾಯ ಸಮುದ್ರಾಯ ಭೋಜನಂ ॥ ಭುಜ್ಯತ ಇತಿ ಭೋಜನಂ ಪಯಃ ॥ ಪ್ರಭರಂತ । ಪ್ರಕರ್ಷೇಣ ಸಂಪಾದಯಂತಿ । ಕುತ ಏತತ್ ತದಾಹ । ಪ್ರವತಾಂ ಪ್ರವಣವತಾಂ ನಿಮ್ನಗಾನಾಂ ಪಯಸಾಮನುಷ್ಯದೇ ॥ ಕೃತ್ಯಾರ್ಥೇ ತವ್ಯೆ-ಕೇನ್ಕೇನ್ಯತ್ವನ ಇತಿ ಕೇನ್ಪ್ರತ್ಯಯಃ ॥ ಅನುಷ್ಯಂದನೀಯೋऽಧ್ವಾ ಮಾರ್ಗಃ ಸಮಾನ ಏಕೋ ಹಿ । ಯಸ್ತ್ವ ತಾನಿ ಸೋಮೋತ್ಪಾದನನದೀಪ್ರವರ್ತನಾದೀನಿ ಕರ್ಮಾಣಿ ಪ್ರಥಮಂ ಪೂರ್ವಮಕೃಣೋಃ । ಅಕರೋಃ । ಸ ತಾದೃಙ್ಮಹಿನೋಪೇತಸ್ತ್ವಮುಕ್ಥ್ಯೋऽಸಿ । ಸರ್ವೈಃ ಪ್ರಶಸ್ಯೋ ಭವಸಿ ॥

ಪ್ರತಿಪದಾರ್ಥ

ಸಧ್ರೀ—ಒಟ್ಟಿಗೆ ಸೇರಿಕೊಂಡು ಹರಿಯುವುವೂ । ಪಯಃ—ಉದಕವನ್ನು । ಪರಿ—ಸುತ್ತಲೂ ! ಬಿಭ್ರತೀಃ—ಧರಿಸಿರುವುವೂ ಆದ । ಈಂ—ಈ ನದಿಗಳು । ಆ ಯಂತಿ—ಪ್ರಸರಿಸಿ ಹರಿಯುತ್ತವೆ (ಮತ್ತು) । ವಿಶ್ವಪ್ಸ್ನ್ಯಾಯ—ಸಕಲವಾದ ಉದಕಗಳಿಗೂ ಆಶ್ರಯಭೂತವಾದ ಸಮುದ್ರಕ್ಕೆ । ಭೋಜನಂ—ಉದಕವನ್ನು । ಪ್ರಭರಂತ—ಪೂರ್ಣವಾಗಿ ತುಂಬುತ್ತವೆ । ಪ್ರವತಾಂ—ನಿಮ್ನಪ್ರದೇಶಕ್ಕೆ ಹರಿಯುವ ಉದಕಗಳಿಗೆ । ಅನುಷ್ಯದೇ—ಪ್ರವಹಿಸುವುದಕ್ಕೋಸ್ಕರವಾಗಿರುವ । ಅಧ್ವಾ—ಮಾರ್ಗವು । ಸಮಾನಃ—ಒಂದೇ ರೂಪವುಳ್ಳದ್ದಾಗಿದೆ । ಯಃ—ಯಾರು । ತಾ—ಅಂತಹ

ಪ್ರವಾಹಾನುಕೂಲವಾದ ಕರ್ಮಗಳನ್ನು । **ಪ್ರಥಮಂ—**ಮೊದಲು । **ಅಕೃಣೋಃ—**ಮಾಡಿದನೋ । **ಸಃ—**ಅಂತಹ ಇಂದ್ರನಾದ ನೀನು । **ಉಕ್ಥ್ಯಃ ಅಸಿ—** (ಎಲ್ಲರಿಂದಲೂ) ಸ್ತುತ್ಯರ್ಹನಾಗಿದ್ದೀಯೆ ।

## ಭಾವಾರ್ಥ

ಒಟ್ಟಿಗೆ ಸೇರಿಕೊಂಡು ಹರಿಯುವುವೂ, ಪೂರ್ಣವಾಗಿ ಉದಕವನ್ನುಹೊಂದಿರುವುವೂ ಆದ ನದಿಗಳು ಪ್ರಸರಿಸಿ ಹರಿಯುತ್ತವೆ. ಮತ್ತು ಸಕಲವಾದ ಉದಕಗಳಿಗೂ ಆಶ್ರಯಭೂತವಾದ ಸಮುದ್ರಕ್ಕೆ ಉದಕವನ್ನು ಪೂರ್ಣವಾಗಿ ತುಂಬುತ್ತವೆ. ನಿಮ್ನಪ್ರದೇಶಕ್ಕೆ ಹರಿಯುವ ಉದಕಗಳಿಗೆ ಪ್ರವಹಿಸುವುದಕ್ಕೋಸ್ಕರವಾಗಿರುವ ಮಾರ್ಗವು ಒಂದೇ ರೂಪವುಳ್ಳದ್ದಾಗಿದೆ. ಯಾರು ಅಂತಹ ಪ್ರವಾಹಾನುಕೂಲವಾದ ಕರ್ಮಗಳನ್ನು ಮೊದಲು ಮಾಡಿದನೋ ಅಂತಹ ಇಂದ್ರನಾದ ನೀನು ಸ್ತುತ್ಯರ್ಹನಾಗಿದ್ದೀಯೆ.

## English Translation

The aggregated (streams) come, bearing everywhere the water, and conveying it as sustenance for the asylum of all rivers, (the ocean); the same path is (assigned) to all the descending (currents) to follow; and as he, who has (assigned) them (their course), you, (Indra), are especially to be praised.

## ವಿಶೇಷವಿಷಯಗಳು

**ಸಧ್ರೀ ಈಂ ಆ ಯಂತಿ ಪರಿ ಬಿಭ್ರತೀಃ ಪಯಃ—**ವರ್ಷಾಕಾಲದಲ್ಲಿ ಪ್ರವಹಿಸುವ ನದಿಗಳು ವೃಷ್ಟಿಯಿಂದ ಭೂಮಿಯಮೇಲೆ ಎಲ್ಲೆಲ್ಲಿಯೂ ಬೀಳುವ ನೀರನ್ನು ತಮ್ಮ ಅಗಲವಾದ ಪಾತ್ರಗಳಲ್ಲಿ ತುಂಬಿಕೊಂಡು ಹರಿಯುತ್ತವೆ. ಎಂದರೆ.ಭೂಮಿಯ ಮೇಲೆ ಬೀಳುವ ಮಳೆಯ ನೀರೆಲ್ಲಾ ನದಿಗಳಿಗೇ ಬಂದು ಸೇರುತ್ತವೆ. ಈರೀತಿ ಸುತ್ತಲೂ ಎಂದರೆ ತಮ್ಮ ಎಡಬಲಗಳಿಂದ ಹರಿದು ಬಂದು ಸೇರುವ ನೀರುಗಳನ್ನು, ಧರಿಸಿ ಎಂದರೆ (ನದೀ) ಪಾತ್ರಗಳಲ್ಲಿ ತುಂಬಿಕೊಂಡು ನದಿಗಳು ಪ್ರವಹಿಸುತ್ತವೆ.

**ವಿಶ್ವಪ್ಸ್ನ್ಯಾಯ ಪ್ರ ಭರಂತ ಭೋಜನಂ—ತಾ ನದ್ಯೋ ವಿಶ್ವಪ್ಸ್ನ್ಯಾಯ ವಿಶ್ವಾಸಾಮಪಾಮಾ-ಶ್ರಯಭೂತಾಯ ಸಮುದ್ರಾಯ ಭೋಜನಂ ಪ್ರ ಭರಂತ ಪ್ರಕರ್ಷೇಣ ಸಂಪಾದಯಂತಿ—**ಈ ರೀತಿ ಪ್ರವಹಿಸುವ ನದಿಗಳು ಎಲ್ಲಿಗೆ ಹೋಗುತ್ತವೆ ಎಂದರೆ ಇವೆಲ್ಲವೂ, ಸಮಸ್ತ ಉದಕಗಳಿಗೂ ಆಶ್ರಯಭೂತವಾದ ಸಮುದ್ರಕ್ಕೆ ನೀರನ್ನು ಒದಗಿಸಿ ತುಂಬುವುದಕ್ಕಾಗಿ ಹರಿಯುತ್ತವೆ.

**ವಿಶ್ವಪ್ಸ್ನ್ಯಾಯ—ವಿಶ್ವಾಸಾಮಪಾಮಾಶ್ರಯಭೂತಾಯ ಸಮುದ್ರಾಯ** । ಸಮಸ್ತ ಉದಕರಾಶಿಗೂ ಆಶ್ರಯವಾದ ಸಮುದ್ರವೆಂದರ್ಥವು. ಅಂತರಿಕ್ಷದಿಂದ ವೃಷ್ಟಿರೂಪದಲ್ಲಿ ಬೀಳುವ ನೀರೂ, ನದಿಯಲ್ಲಿ ಪ್ರವಹಿಸುವ ನೀರೂ (ಸಿಹಿಯಾಗಿರುವುದರಿಂದ) ಬೇರೆಯಾದ್ದರಿಂದ ಈ ನೀರು ಸಮುದ್ರವನ್ನಾಶ್ರಯಿಸಿರುವುದಿಲ್ಲ ಎಂದು ಹೇಳುವುದಾದರೆ, ಹಾಗಲ್ಲ. ಮಳೆಯ ನೀರೂ, ನದಿಯ ನೀರೂ ಒಂದಾನೊಂದು ಕಾಲದಲ್ಲಿ ಸಮುದ್ರದ ನೀರೇ ಆಗಿದ್ದಿತು. ಹೇಗೆಂದರೆ—ಸೂರ್ಯನ ತೀಕ್ಷ್ಣವಾದ ಕಿರಣಗಳಿಂದ ಸಮುದ್ರದ ನೀರು ಕಾದು ವಾಯುವಿನ ಮೂಲಕ ಆವಿಯ ರೂಪದಲ್ಲಿ ಆಕರ್ಷಿಸಲ್ಪಟ್ಟು ಅಂತರಿಕ್ಷದಲ್ಲಿ ಮೇಘರೂಪವಾಗಿ ಪರಿವರ್ತಿತವಾಗುವವು. ಆ ಮೇಘಗಳಿಂದ ವೃಷ್ಟಿ

(ಮಳೆ) ಯುಂಟಾಗಿ ಆ ನೀರು ಭೂಮಿಯಮೇಲೆ ಬಿದ್ದು ಹರಿಯುತ್ತಾ ಯಾವುದಾದರೊಂದು ನದಿಯನ್ನು ಸೇರುವುದು. ಆ ನದಿಯು ನಿಮ್ನಪ್ರದೇಶದಲ್ಲಿ ಹರಿಯುತ್ತಾ ಉಪನದಿಯಾಗಿದ್ದರೆ ದೊಡ್ಡನದಿಯನ್ನು ಸೇರಿಯಾಗಲಿ, ಅಥವಾ ದೊಡ್ಡನದಿಯಾಗಿದ್ದರೆ ತಾನೇ ಪ್ರವಹಿಸುತ್ತಾ ಕೊನೆಗೆ ಸಮುದ್ರವನ್ನು ಸೇರುವುದು. ಎಲ್ಲಾ ನದಿಗಳ ಅಂತಿಮಸ್ಥಾನವೂ ಸಮುದ್ರವೇ ಆಗಿರುವುದು. ಆದುದರಿಂದ ಸಮುದ್ರವೇ ಭೂಮಿಯಮೇಲೆ ಅಥವಾ ಅಂತರಿಕ್ಷದಲ್ಲಿ (ಮೇಘರೂಪದಲ್ಲಿ) ಇರುವ ಸಮಸ್ತ ಜಲರಾಶಿಗೂ ಆಶ್ರಯಸ್ಥಾನವೆಂದು ಹೇಳಲ್ಪಡುವುದು.

**ಭೋಜನಂ—ಭುಜ್ಯತ ಇತಿ ಭೋಜನಂ ಪಯಃ ।** ತಿನ್ನಲ್ಪಡುವ, ಆಹಾರ ರೂಪವಾದ ವಸ್ತುವಿಗೆ ಭೋಜನವೆಂದು ಹೆಸರು. ಇಲ್ಲಿ ಸಮುದ್ರಕ್ಕೆ ಬೇಕಾದ ವಸ್ತುವೆಂದರೆ ಉದಕವು. ಪ್ರಾಣಿಗಳಿಗೆ ಅಥವಾ ಮನುಷ್ಯರಿಗೆ ಭೋಜನದಿಂದ ಉದರವು ಹೇಗೆ ಭರ್ತಿಯಾಗುವುದೋ ಹಾಗೆ ಸಮುದ್ರವು ನೀರಿನಿಂದ ಭರ್ತಿಯಾಗುವುದು. ಸಮುದ್ರಕ್ಕೆ ನೀರೇ ಭೋಜನವು ಎಂದರೆ ನದಿಗಳು ತಂದು ತುಂಬುವ ಉದಕಗಳು ಸಮುದ್ರಕ್ಕೆ ಭೋಜನರೂಪದಲ್ಲಿರುವವು ಎಂದರೆ ಭರ್ತಿಮಾಡುವುದಕ್ಕಾಗಿ ತಂದು ತುಂಬಿದ ಉದಕಗಳು ಎಂದಭಿಪ್ರಾಯವು. ಇಲ್ಲಿ ಋಷಿಯು ಉಪಯೋಗಿಸಿರುವ ವಿಶ್ವಸ್ಯಾಃ ಪ್ರ ಭರಂತ ಭೋಜನಂ ಎಂಬವಾಕ್ಯವು ಅರ್ಥಗರ್ಭಿತವಾದ ಶಬ್ದಗಳಿಂದಲೂ, ಭಾವಗರ್ಭಿತವಾದ ಉಪಮಾನದಿಂದ ಕೂಡಿರುವ ಅಭಿಪ್ರಾಯದಿಂದಲೂ ಕೂಡಿ. ಋಷಿಯ ಶ್ರೇಷ್ಠವಾದ ರಚನಾ ಕೌಶಲ್ಯವನ್ನು ಕವಿತ್ವನೈಪುಣ್ಯವನ್ನೂ ಪ್ರದರ್ಶಿಸುವುದಾಗಿದೆ.

**ಸಮಾನಃ ಅಧ್ವಾ ಪ್ರವತಾಂ ಅನುಸ್ಯದೇ ಯಃ ತಾ ಅಕೃಣೋಃ ಪ್ರಥಮಂ ಸಃ ಅಸಿ ಉಕ್ಥ್ಯಃ—** ಹರಿಯುವ ನೀರಿನ ಅಥವಾ ನದಿಗಳಮಾರ್ಗವು ಸಮಾನವಾಗಿಯೇ ಇದೆ ಎಂದರೆ ನದಿಗಳೆಲ್ಲಾ ನಿಮ್ನಪ್ರದೇಶಗಳಲ್ಲಿ ಎಂದರೆ ತಗ್ಗಾಗಿರುವ ಪ್ರದೇಶದಲ್ಲಿಯೇ ಹರಿಯುವುದರಿಂದ ಅಂತಹ ತಗ್ಗಾದ ಮಾರ್ಗವೇ ನದಿಗಳು ಸಮುದ್ರಕ್ಕೆ ಹೋಗಿ ಸೇರುವ ಮಾರ್ಗಗಳಾಗಿರುವವು. ಇಂತಹ ಮಾರ್ಗವನ್ನು ಮೊದಲು ಯಾರು ಸೃಷ್ಟಿಮಾಡಿದರೋ (ನಿರ್ಮಿಸಿದರೋ) ಅಂತಹ ಇಂದ್ರನಾದ ನೀನು ಸ್ತುತ್ಯರ್ಹನಾಗಿದ್ದೀಯೆ ಎಂದು ಮುಖ್ಯಾಭಿಪ್ರಾಯವು. ಮೇಘಗಳಿಂದ ವೃಷ್ಟಿಯನ್ನು ಸುರಿಸಿ ಆ ವೃಷ್ಟ್ಯುದಕಗಳು ಭೂಮಿಯಮೇಲೆ ಬಿದ್ದು ಅವು ನದಿಯಾಗಿ ಹರಿದು ಸಮುದ್ರಕ್ಕೆ ಹೋಗುವ ಮಾರ್ಗವನ್ನು ಇಂದ್ರನೇ ನಿರ್ಮಿಸಿರುವನೆಂದೂ ಇಂದ್ರನ ಇಂತಹ ಅಗಾಧವಾದ ಕಾರ್ಯವು ಪ್ರಶಂಸನೀಯವೆಂದೂ ಋಷಿಯು ವರ್ಣಿಸಿರುವನು.

---

ಸಂಹಿತಾಪಾಠಃ

**ಅನ್ವೇಕೋ ವದತಿ ಯದ್ದದಾತಿ ತದ್ರೂಪಾ ಮಿನನ್ತದಪಾ ಏಕ ಈಯತೇ।**

**ವಿಶ್ವಾ ಏಕಸ್ಯ ವಿನುದಸ್ತಿತಿಕ್ಷತೇ ಯಸ್ತಾಕೃಣೋಃ ಪ್ರಥಮಂ ಸಾಸ್ಯುಕ್ಥ್ಯಃ॥**

ಪದಪಾಠಃ

ಅನು । ಏಕಃ । ವದತಿ । ಯತ್ । ದದಾತಿ । ತತ್ । ರೂಪಾ । ಮಿನನ್ । ತತ್ಽಅಪಾಃ । ಏಕಃ । ಈಯತೇ ।

ವಿಶ್ವಾಃ । ಏಕಸ್ಯ । ವಿಽನುದಃ । ತಿತಿಕ್ಷತೇ । ಯಃ । ತಾ । ಅಕೃಣೋಃ । ಪ್ರಥಮಂ । ಸಃ । ಅಸಿ ।
ಉಕ್ಥ್ಯಃ ॥ ೩ ॥

ಸಾಯಣಭಾಷ್ಯಂ

ಯಜಮಾನೋ ಯದ್ಧವಿರ್ದೇವೇಭ್ಯೋ ದದಾತಿ ತದೇಕೋ ಹೋತಾನುವದತಿ । ಯಾಜ್ಯಾ-ಪುರೋನುವಾಕ್ಯಾಭ್ಯಾಂ ದೇವತಾಃ ಸ್ಮಾರಯತಿ । ಏಕೋಽಧ್ವರ್ಯುರ್ರೂಪಾ ಪಶ್ವಾದೀನಾಂ ರೂಪಾಣಿ ಮಿನನ್ ಹಿಂಸನ್ ತದಪಾಸ್ತದ್ವಿಶಸನಾಖ್ಯಮಪಃ ಕರ್ಮ ಯಸ್ಯ ತಾದೃಶಃ ಸನ್ ಈಯತೇ । ದೇವಯು-ಜನೇ ಸರ್ವತ್ರ ಗಚ್ಛತಿ । ಏಕಸ್ಯಾಧ್ವರ್ಯೋರ್ವಿಶ್ವಾ ವಿನುದಃ ಸರ್ವಾಣಿ ತತ್ಕರ್ತೃಕಾಣಿ ವಿಕ್ಷೇಪಣರೂಪಾಣಿ ಕರ್ಮವೈಗುಣ್ಯಾನಿ ತಿತಿಕ್ಷತೇ । ತದ್ಯೋಗ್ಯಪ್ರಾಯಶ್ಚಿತ್ತಕರಣೇನ ಬ್ರಹ್ಮಾ ಸಹತೇ ॥ ಗುಪ್ತಿಜ್ಞಿದ್ಭ್ಯಃ ಸನ್ ಕ್ಷಮಾಯಾಮಿಷ್ಯತೇ ॥ ತಾನಿ ಹವಿಷ್ಪ್ರದಾನಾದೀನಿ ಕರ್ಮಾಣಿ ಯಸ್ತ್ವಮಕೃಣೋಃ । ಅಕಾರಯಃ ಸಃ ತ್ವಮುಕ್ಥ್ಯೋಽಸಿ ॥

ಪ್ರತಿಪದಾರ್ಥ

(ಯಜಮಾನಃ—ಯಜ್ಞಕರ್ತನು) । ಯತ್— (ದೇವತೆಗಳನ್ನುದ್ದೇಶಿಸಿ) ಯಾವ ಹವಿಸ್ಸನ್ನು । ದದಾತಿ-ಅರ್ಪಿಸುತ್ತಾನೆಯೋ । ತತ್—ಅದನ್ನು । ಏಕಃ—ಋತ್ವಿಕ್ಕುಗಳಲ್ಲಿ ಒಬ್ಬನಾದ ಹೋತೃವು । ಅನುವದತಿ—(ದೇವತೆಗಳಿಗೆ) ಯಾಜ್ಯಾಪುರೋನುವಾಕ್ಯಗಳಿಂದ ತಿಳಿಸುತ್ತಾನೆ । ಏಕಃ—ಇನ್ನೊಬ್ಬನಾದ ಅಧ್ವರ್ಯುವು । ರೂಪಾ—ಪಶ್ವಾದಿಗಳ ಅಂಗಗಳನ್ನು । ಮಿನನ್—ಹಿಂಸಿಸುತ್ತಾ ( ಕೊಲ್ಲುತ್ತಾ ) । ತದಪಾಃ—ಯಜ್ಞಾಹುತಿಗಾಗಿ ಪಶುವಿನ ಅಂಗಗಳನ್ನು ಕತ್ತರಿಸುವ ಕಾರ್ಯಗಳಲ್ಲಿ ನಿರತನಾಗಿ । ಈಯತೇ—ಓಡಾಡುತ್ತಾನೆ । ಏಕಸ್ಯ—ಅಧ್ವರ್ಯುವಿನ । ವಿಶ್ವಾಃ ವಿನುದಃ—ಸಮಸ್ತವಾದ ಕರ್ಮವೈಗುಣ್ಯವನ್ನೂ । ತಿತಿಕ್ಷತೇ— (ಬ್ರಹ್ಮರೂಪಿಯಾದ ಋತ್ವಿಕ್ಕು ) ಪ್ರಾಯಶ್ಚಿತ್ತಾದಿಗಳಿಂದ ಸರಿಪಡಿಸುತ್ತಾನೆ. । ಯಃ—ಯಾವ ನೀನು । ತಾ ಅಕೃಣೋಃ—ಈ ಸಕಲ ಕರ್ಮಗಳನ್ನೂ ಮಾಡಿಸಿ ಅವುಗಳನ್ನು ಸೇವಿಸಿದ್ದೀಯೋ । ಸಃ—ಅಂತಹ ನೀನು । ಪ್ರಥಮಂ—ಬಹುಮುಖ್ಯವಾಗಿ । ಉಕ್ಥ್ಯಃ ಅಸಿ—ಪ್ರಶಸ್ಯನಾಗಿದ್ದೀಯೆ.

ಭಾವಾರ್ಥ

ಯಜ್ಞಕರ್ತನು ದೇವತೆಗಳನ್ನುದ್ದೇಶಿಸಿ ಅರ್ಪಿಸುವ ಹವಿಸ್ಸನ್ನು ಋತ್ವಿಕ್ಕುಗಳಲ್ಲಿ ಒಬ್ಬನಾದ ಹೋತೃವು ದೇವತೆಗಳಿಗೆ ಯಾಜ್ಯಾಪುರೋನುವಾಕ್ಯಗಳಿಂದ ತಿಳಿಸುತ್ತಾನೆ. ಇನ್ನೊಬ್ಬನಾದ ಅಧ್ವರ್ಯುವು ಪಶ್ವಾದಿಗಳ ಛೇದನಾದಿ ಕಾರ್ಯಗಳಲ್ಲಿ ನಿರತನಾಗಿರುತ್ತಾನೆ. ಇವರ ಸಮಸ್ತವಾದ ಕರ್ಮವೈಗುಣ್ಯವನ್ನೂ ಸಹ ಬ್ರಹ್ಮರೂಪಿಯಾದ ಋತ್ವಿಕ್ಕು ಪ್ರಾಯಶ್ಚಿತ್ತಾದಿಗಳಿಂದ ಸರಿಪಡಿಸುತ್ತಾನೆ. ಯಾವ ನೀನು ಈ ಸಕಲಕರ್ಮಗಳನ್ನೂ ಮಾಡಿಸಿ ಅವುಗಳನ್ನು ಸೇವಿಸಿದ್ದೀಯೋ ಅಂತಹ ನೀನು ಬಹುಮುಖ್ಯವಾಗಿ ಪ್ರಶಸ್ಯನಾಗಿದ್ದೀಯೆ.

English Translation

One (priest) announces (the offering) that he, (the institutor of the rite) presents; another performs the act that apportions the limbs (of the victim);

a third corrects all the deficiencies of either, and as he, who has enjoyed these (functions), you, (Indra), are especially to be praised.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಯಜಮಾನ, ಹೋತೃ, ಅಧ್ವರ್ಯು ಮುಂತಾದ ಋತ್ವಿಜರು ಯಜ್ಞದಲ್ಲಿ ಮಾಡುವ ಕರ್ಮಗಳನ್ನು, ಇಂದ್ರನು ಅವರವರಿಂದ ಮಾಡಿಸಿ ತಾನು ಪ್ರೀತನಾಗುತ್ತಾನೆಂದು ಇಂದ್ರನ ಗುಣವರ್ಣನೆಮಾಡಿದೆ.

**ಅನು ಏಕಃ ವದತಿ ಯತ್ ದದಾತಿ—ಯಜಮಾನೋ ಯದ್ಧವಿರ್ದೇವೇಭ್ಯೋ ದದಾತಿ ತದೇಕೋ ಹೋತಾನುವದತಿ । ಯಾಜ್ಯಾಪುರೋನುವಾಕ್ಯಾಭ್ಯಾಂ ದೇವತಾಃ ಸ್ಮಾರಯತಿ ।** ಯಜ್ಞದಲ್ಲಿ ಯಜ್ಞಮಾಡುವ ಯಜಮಾನನು ದೇವತೆಗಳಿಗೆ ಹವಿಸ್ಸು, ಆಜ್ಯಾಹುತಿ ಮೊದಲಾದವುಗಳನ್ನು ಅಗ್ನಿಯಲ್ಲಿ ಸಮರ್ಪಿಸುವಾಗ ಆಯಾ ಕಾಲಕ್ಕೂ ಆಯಾಕರ್ಮಗಳಿಗೂ ಅನುಗುಣವಾಗಿ ದೇವತಾಪರವಾದ ಮಂತ್ರಗಳನ್ನು ಪಠಿಸಿಯೇ ಮಾಡಬೇಕು. ಇಂತಹ ಮಂತ್ರಗಳನ್ನು ಋತ್ವಿಗ್ಜನರಲ್ಲಿ ಒಬ್ಬನಾದ ಹೋತೃವು ಪಠಿಸುವನು. ಮೊದಲು ಯಜಮಾನನು ಯಾವ ದೇವತೆಯನ್ನು ಉದ್ದೇಶಿಸಿ ಹವಿಸ್ಸನ್ನು ಅರ್ಪಿಸುವನೋ ಆ ದೇವತೆಯ ಗುಣಗಾನರೂಪವಾದ **ನಿವಿದ್** ಎಂಬ ಮಂತ್ರಗಳನ್ನು ಹೋತೃವು ಪಠಿಸುವನು. ಅನಂತರ ಆ ದೇವತೆಯ ಸ್ತುತಿ ಅಥವಾ ಆಹ್ವಾನ ರೂಪವಾದ **ಪುರೋನುವಾಕ್ಯಾ** ಎಂಬ ಮಂತ್ರವನ್ನು ಪಠಿಸಿ ಯಜ್ಞಭೂಮಿಗೆ ಬರಬೇಕೆಂದು ದೇವತೆಯನ್ನು ಆಹ್ವಾನಮಾಡುವನು. ದೇವತೆಯ ಆಹ್ವಾನಾನಂತರ ಆ ದೇವತೆಗೆ ಹವಿಸ್ಸನ್ನು ಅಗ್ನಿಯಲ್ಲಿ ಹೋಮಮಾಡುವಾಗ ಆ ದೇವತೆಯು ಹವಿಸ್ಸನ್ನು ಸ್ವೀಕರಿಸಬೇಕೆಂದು ಅರ್ಥವಿರುವ **ಯಾಜ್ಯಾ** ಎಂಬ ಋಕ್ಕನ್ನು ಹೋತೃವು ಪಠಿಸುವನು. ಪ್ರತಿಯೊಂದು ದೇವತೆಯ ವಿಷಯದಲ್ಲಿಯೂ ಹವಿಸ್ಸನ್ನು ಅರ್ಪಿಸುವಾಗ ಇದೇ ಕ್ರಮವು ಅನುಸರಿಸಲ್ಪಡುವುದು. ಆದುದರಿಂದ ಇಲ್ಲಿ **ಯದ್ದದಾತಿ** ಎಂಬ ಶಬ್ದಗಳಿಂದ ಯಜಮಾನನು ಯಾವ ಹವಿಸ್ಸನ್ನರ್ಪಿಸುವನೋ ಎಂದೂ **ಅನ್ವೇಕೋ ವದತಿ**—ಅದಕ್ಕೆ ಅನುಗುಣವಾಗಿ ಎಂದರೆ ಅದೇ ಅರ್ಥವನ್ನೊಳಗೊಂಡ ಮಂತ್ರಗಳನ್ನು ಒಬ್ಬನು (ಎಂದರೆ ಋತ್ವಿಜರಲ್ಲಿ ಒಬ್ಬನಾದ ಹೋತೃವು) ಪಠಿಸುವನು ಎಂದೂ ಮುಖ್ಯಾಭಿಪ್ರಾಯವು.

**(ಅನು ಏಕಃ ಯತ್ ದದಾತಿ) ತದ್ರೂಪಾ ಮಿನನ್ ತದಪಾ ಏಕ ಈಯತೇ—ಏಕೋಽಧ್ವರ್ಯೂ ರೂಪಾ ಪಶ್ವಾದೀನಾಂ ರೂಪಾಣಿ ಮಿನನ್ ಹಿಂಸನ್ ತದಪಾಸ್ತದ್ವಿಶಸನಾಖ್ಯಮಪಃ ಕರ್ಮ ಯಸ್ಯ ತಾದೃಶಃ ಸನ್ ಈಯತೇ ದೇವಯಜನೇ ಸರ್ವತ್ರ ಗಚ್ಛತಿ ।** ಹೋತೃವು ಆಯಾಕಾಲಕ್ಕೆ ಅಥವಾ ಆಯಾ ಕರ್ಮಕ್ಕೆ ತಕ್ಕಂತೆ ಮಂತ್ರವನ್ನು ಪಠಿಸಿದ ಮೇಲೆ ಅಧ್ವರ್ಯುವೆಂಬ ಋತ್ವಿಜನು ಪಶುಹನನಕಾರ್ಯದಲ್ಲಿ ಉದ್ಯುಕ್ತನಾಗಿ ಯಜ್ಞಾಹುತಿಗಳಲ್ಲಿ ಬೇರೆಬೇರೆಯಾಗಿ ಹೋಮಮಾಡುವುದಕ್ಕಾಗಿ ಪಶುವಿನ ಅವಯವಗಳನ್ನು ವಿಧ್ಯನುಸಾರವಾಗಿ ಕತ್ತರಿಸುವುದೇ ಮೊದಲಾದ ಕಾರ್ಯಗಳನ್ನು ಮಾಡುತ್ತಾ ಯಜ್ಞಭೂಮಿಯಲ್ಲಿ ಇತ್ತಲಿಂದತ್ತ ಓಡಾಡುತ್ತಲಿರುವನು ಎಂದು ಭಾಷ್ಯಕಾರರು ಅರ್ಥವಿವರಣೆಮಾಡಿದ್ದಾರೆ. ಇಲ್ಲಿ ಒಂದು ಸಂಶಯವು ತಲೆದೋರುವುದು. ಈ ವಾಕ್ಯದಲ್ಲಿ ಅಧ್ವರ್ಯುವೆಂಬ ಶಬ್ದಪ್ರಯೋಗವಿಲ್ಲ. ಮತ್ತು **ತದ್ರೂಪಾ ಮಿನನ್ತದಪಾಃ** ಎಂಬ ಶಬ್ದಗಳಿಗೆ ಪಶುರೂಪವನ್ನು ಹಿಂಸಿಸಿ (ಎಂದರೆ ಕೊಂದು) ಅದಕ್ಕೆ ಸಂಬಂಧಪಟ್ಟ ಅವಯವಗಳನ್ನು ಕತ್ತರಿಸುವುದೇ ಮೊದಲಾದ ಕಾರ್ಯಗಳು ಎಂದರ್ಥವಾಗುವುದು. ಯಜ್ಞದಲ್ಲಿ ಪಶುವನ್ನು ಕೊಲ್ಲುವುದಾಗಲಿ, ಅದರ ಅಂಗಾಂಗಗಳನ್ನು ಕತ್ತರಿಸುವುದಾಗಲಿ ಅಧ್ವರ್ಯುವೆಂಬ ಋತ್ವಿಜನ ಕೆಲಸವಲ್ಲ. ಈ ಕೆಲಸಮಾಡಲು ಶಮಿತಾ ಎಂಬುವನು ಇರುವನು. ಪ್ರಕೃತ

ಋಕ್ಕಿನಲ್ಲಿ ಅಧ್ವರ್ಯುಶಬ್ದವಿಲ್ಲದಿರುವುದರಿಂದಲೂ ಪಶುವನ್ನು ಕೊಲ್ಲುವವನು ಶಮಿತಾ ಎಂಬುವನಾದ್ದರಿಂದಲೂ ಇಲ್ಲಿ ಏಕಃ ಎಂಬ ಶಬ್ದಕ್ಕೆ ಶಮಿತಾ ಎಂಬುವನೇ ನಿರ್ದಿಷ್ಟನಾಗಿರಬಹುದು. ಅಥವಾ ಅಧ್ವರ್ಯುವು ಕೆಲವು ಸಂದರ್ಭಗಳಲ್ಲಿ ಇತರ ಋತ್ವಿಜರ ಕಾರ್ಯಗಳನ್ನು ಮಾಡುವುದು ಅಸಂಭವವಲ್ಲವಾದ್ದರಿಂದ ಅಧ್ವರ್ಯುವೇ ಇಲ್ಲಿ ಸೂಚಿತವಾಗಿದ್ದರೂ ಇರಬಹುದು. ಅಂತೂ ಈ ವಾಕ್ಯದಲ್ಲಿರುವ ಏಕಃ ಎಂಬ ಶಬ್ದದ ಅರ್ಥವು ಸಂಶಯವಿಶಿಷ್ಟವಾಗಿಯೇ ಇದೆ.

**ತದ್ರೂಪಾ ಮಿನನ್ ತದಪಾಃ**—ಇಲ್ಲಿ ತದ್ರೂಪಾ ಎಂಬ ಶಬ್ದಗಳಿಗೆ ಪಶ್ವಾದಿಗಳ ರೂಪ (ಶರೀರ) ವೆಂದೂ, ತದಪಃ ಎಂದರೆ ತದ್ವಿಶಸನಾಖ್ಯಮಪಃ-ಅದನ್ನು ಕತ್ತರಿಸುವ ಕರ್ಮವೆಂದೂ ಸಾಯಣರು ಅರ್ಥವಿವರಣೆ ಮಾಡಿದ್ದಾರೆ. ಅಪಃ ಎಂಬ ಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿದೆ (ನಿ. ೩-೧). ಈ ವಾಕ್ಯದಲ್ಲಿ ಪಶುಶಬ್ದವಿಲ್ಲದಿದ್ದರೂ ಮಿನನ್ ಹಿಂಸಿಸುತ್ತಾ ಎಂಬ ಶಬ್ದಪ್ರಯೋಗವಿರುವುದರಿಂದ ತದ್ರೂಪಾ ಎಂದರೆ ಪಶುರೂಪವೆಂದು ಅರ್ಥಮಾಡುವುದರಲ್ಲಿ ಬಾಧಕವೇನೂ ಇಲ್ಲ.

**ವಿಶ್ವಾಃ ಏಕಸ್ಯ ವಿನುದಃ ತಿತಿಕ್ಷತೇ**—ಏಕಸ್ಯಾಧ್ವರ್ಯೋರ್ವಿಶ್ವಾ ವಿನುದಃ ಸರ್ವಾಣಿ ತತ್ಕರ್ತೃಕಾಣಿ ವಿಕ್ಷೇಪಣರೂಪಾಣಿ ಕರ್ಮವೈಗುಣ್ಯಾನಿ ತಿತಿಕ್ಷತೇ । ತದ್ಯೋಗ್ಯಪ್ರಾಯಶ್ಚಿತ್ತಕರಣೇನ ಬ್ರಹ್ಮಾ ಸಹತೇ—ಯಜ್ಞದಲ್ಲಿ ಪ್ರಮಾದವಶದಿಂದ ನಾನಾಕರ್ಮಗಳಲ್ಲಿ ನ್ಯೂನತೆ ಅಥವಾ ವ್ಯತ್ಯಾಸ ಉಂಟಾದಾಗ ಬ್ರಹ್ಮನೆಂಬ ಋತ್ವಿಜನು ಅವುಗಳನ್ನು ಪ್ರಾಯಶ್ಚಿತ್ತಾದಿಗಳಿಂದ ಸರಿಪಡಿಸುವನು. ಬ್ರಹ್ಮನ ಕೆಲಸವೇ ಅದು. ಇಲ್ಲಿ (ಎಂದರೆ ಯಜ್ಞದಲ್ಲಿ) ಅಧ್ವರ್ಯುವು ನಾನಾಕೆಲಸಗಳನ್ನು ಮಾಡಬೇಕಾಗಿರುವುದರಿಂದ ಅನೇಕ ಪ್ರಮಾದಗಳು ಉಂಟಾಗುವುದು ಅಸಂಭವವಲ್ಲ. ಅಂತಹ ಕಾರ್ಯಗಳನ್ನೂ ಇತರ ಋತ್ವಿಕ್ಕುಗಳು ಮಾಡುವ ಕಾರ್ಯಗಳಲ್ಲಿ ಸಂಭವಿಸುವ ನ್ಯೂನತೆಗಳನ್ನೂ ಬ್ರಹ್ಮನೆಂಬ ಋತ್ವಿಜನು ಸರಿಪಡಿಸುವನು ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು

**ಯಃ ತಾ ಅಕೃಣೋಃ ಪ್ರಥಮಂ ಸಃ ಅಸಿ ಉಕ್ಥ್ಯಃ**—ಮೇಲೆ ಹೇಳಿದ ಮೂರುಜನ ಋತ್ವಿಜರು ಮಾಡುವ ಕಾರ್ಯಗಳನ್ನು ಇಂದ್ರನಾದ ನೀನು ನಿನ್ನ ಪ್ರೇರಣೆಯಿಂದ ನೆರವೇರಿಸುವೆ. ಆದ್ದರಿಂದ ಇಂತಹ ಗುಣವಿಶಿಷ್ಟವಾದ ನೀನು ಸ್ತುತ್ಯರ್ಹನು ಎಂದು ಇಂದ್ರನನ್ನು ಸ್ತುತಿಸಲಾಗಿದೆ.

---

**ಸಂಹಿತಾಪಾಠಃ**

ಪ್ರಜಾಭ್ಯಃ ಪುಷ್ಟಿಂ ವಿಭಜಂತ ಆಸತೇ ರಯಿಮಿವ ಪೃಷ್ಠಂ ಪ್ರಭವಂತಮಾಯತೇ ।
ಅಸಿನ್ವನ್ದಂಷ್ಟ್ರೈಃ ಪಿತುರತ್ತಿ ಭೋಜನಂ ಯಸ್ತಾಕೃಣೋಃ ಪ್ರಥಮಂ ಸಾಸ್ಯುಕ್ಥ್ಯಃ ॥ ೪ ॥

ಪದಪಾಠಃ

ಪ್ರಽಜಾಭ್ಯಃ । ಪುಷ್ಟಿಂ । ವಿಽಭಜಂತಃ । ಆಸತೇ । ರಯಿಂಽಇವ । ಪೃಷ್ಠಂ । ಪ್ರಽಭವಂತಂ ಆಽಯತೇ ।
ಅಸಿನ್ವನ್ । ದಂಷ್ಟ್ರೈಃ । ಪಿತುಃ । ಅತ್ತಿ । ಭೋಜನಂ । ಯಃ । ತಾ । ಅಕೃಣೋಃ । ಪ್ರಥಮಂ । ಸಃ ।
ಅಸಿ । ಉಕ್ಥ್ಯಃ ॥ ೪ ॥

ಸಾಯಣಭಾಷ್ಯಂ

ಹೇ ಇಂದ್ರ ಪುಷ್ಟಿಂ ತ್ವಯಾ ದತ್ತಂ ಪೋಷಕಂ ಧನಂ ಸ್ವಕೀಯಾಭ್ಯಃ ಪ್ರಜಾಭ್ಯೋ ವಿಭಜಂ-ತೋಽಸ್ಯೈತಾವದಸ್ಯೈತಾವದಿತಿ ವಿಭಾಗಂ ಕುರ್ವಂತೋ ಗೃಹಮೇಧಿನ ಆಸತೇ । ಸ್ವಸ್ವಗೃಹೇಷು ನಿವ-ಸಂತಿ । ತತ್ರ ದೃಷ್ಟಾಂತಃ । ಆಯತೇ ಗೃಹಂ ಪ್ರತ್ಯಾಗಚ್ಛತೇಽತಿಥಯೇ ಪೃಷ್ಠಂ ಧಾರಕಂ ಪ್ರಭವಂತಂ ಬಹುಭರಣಸಮರ್ಥಂ ರಯಿಂ ಧನಂ ಯಥಾ ವಿಭಜ್ಯ ಪ್ರಯಚ್ಛಂತಿ ತದ್ವತ್ । ಅಸಿನ್ವನ್ ಸೇತುಬಂಧಾ-ದಿಕಂ ಕರ್ಮ ಕುರ್ವನ್ ಲೋಕಃ ಪಿತುಃ ಪಾಲಯಿತ್ರ್ಯಾ ದಿವಃ ಸಕಾಶಾದಾಗತಂ ಭೋಜನಮುದಕಂ ತತ್ಕಾರ್ಯಾ ಓಷಧೀರ್ದಂಷ್ಟ್ರೈರ್ದಂತೈರತ್ತಿ । ಭಕ್ಷಯತಿ । ಯದ್ವಾ ಅಸಿನ್ವನ್ ಅವ್ಯಾಪ್ರಿಯಮಾ-ಣೋಽಗ್ನಿಃ ಪಿತುಃ ಪಾಲಕಸ್ಯ ಯಜಮಾನಸ್ಯ ಸಂಬಂಧಿ ಭೋಜನಂ ಹವಿರ್ಲಕ್ಷಣಮನ್ನಂ ದಂಷ್ಟ್ರೈ-ರ್ದಂತರೂಪೈರ್ಜ್ವಾಲೈರತ್ತಿ । ಯಸ್ತಾ ಕೃಣೋರಿತ್ಯಾದಿ ಸಿದ್ಧಂ ॥

ಪ್ರತಿಪದಾರ್ಥ

ಆಯತೇ—ಗೃಹಕ್ಕೆ ಬರತಕ್ಕ ಅತಿಥಿಗೆ । ಪೃಷ್ಠಂ—ಪರ್ಯಾಪ್ತವಾದುದೂ । ಪ್ರಭವಂತಂ—ಬಹುಜನರನ್ನು ಭರಿಸಲು ಯೋಗ್ಯವಾದುದೂ ಆದ । ರಯಿಂ—ಧನವನ್ನು ಹಂಚಿಕೊಡುವಂತೆ । ಪುಷ್ಟಿಂ—ಪೋಷಕವಾದುದೂ ( ನಿನ್ನಿಂದ ಕೊಡಲ್ಪಟ್ಟುದೂ ಆದ ಧನವನ್ನು ) । ಪ್ರಜಾಭ್ಯಃ—ಪುತ್ರಾದಿಪ್ರಜೆಗಳಿಗೆ । ವಿಭಜಂತಃ—ವಿಭಾಗ ಮಾಡಿ ಕೊಡತಕ್ಕ ಯಜಮಾನರು । ಆಸತೇ—ತಮ್ಮ ತಮ್ಮ ಗೃಹಗಳಲ್ಲಿ ಸುಖವಾಗಿ ವಾಸಮಾಡುತ್ತಾರೆ । ಅಸಿನ್ವನ್—ಸೇತುಬಂಧಾದಿ ಕಾರ್ಯಗಳನ್ನು ಮಾಡುತ್ತಾ । ಪಿತುಃ—ಪಾಲಕವಾದ ದೇವಲೋಕದಿಂದ ದತ್ತವಾದ । ಭೋಜನಂ—ಉದಕವನ್ನೂ ಅದರಿಂದ ಸೃಷ್ಟವಾದ ಅನ್ನವನ್ನೂ । ದಂಷ್ಟ್ರೈಃ—ದಂತಗಳ ಸಹಾಯದಿಂದ । ಅತ್ತಿ— (ಲೋಕವು) ಭಕ್ಷಿಸುತ್ತದೆ. । ಯಃ—ಯಾವ ನೀನು । ತಾ ಅಕೃಣೋಃ— ಈ ಸಕಲಕರ್ಮಗಳನ್ನೂ ಮಾಡಿಸಿದ್ದೀಯೋ । ಸಃ—ಅಂತಹ ನೀನು । ಪ್ರಥಮಂ—ಬಹುಮುಖ್ಯವಾಗಿ । ಉಕ್ಥ್ಯಃ ಅಸಿ—ಪ್ರಶಸ್ಯನಾಗಿದ್ದೀಯೆ.

ಭಾವಾರ್ಥ

ಗೃಹಕ್ಕೆ ಬರತಕ್ಕ ಅತಿಥಿಗೆ ಪರ್ಯಾಪ್ತವಾದುದೂ, ಬಹುಜನರನ್ನು ಭರಿಸಲು ಯೋಗ್ಯವಾದುದೂ ಆದ ಧನವನ್ನು ಹಂಚಿಕೊಡುವಂತೆ ಪೋಷಕವಾದುದೂ, ನಿನ್ನಿಂದ ಕೊಡಲ್ಪಟ್ಟುದೂ ಆದ ಧನವನ್ನು ಪುತ್ರಾದಿಪ್ರಜೆಗಳಿಗೆ ವಿಭಾಗಮಾಡಿಕೊಡತಕ್ಕ ಯಜಮಾನರು ತಮ್ಮ ತಮ್ಮ ಗೃಹಗಳಲ್ಲಿ ಸುಖವಾಗಿ ವಾಸಮಾಡುತ್ತಾರೆ. ಸೇತುಬಂಧಾದಿ

ಕಾರ್ಯಗಳನ್ನು ನಿರ್ವಹಿಸುತ್ತಾ, ಪಾಲಕವಾದ ದೇವಲೋಕದಿಂದ ದತ್ತವಾದ ಉದಕವನ್ನೂ ಅದರಿಂದ ಸೃಷ್ಟವಾದ ಅನ್ನವನ್ನೂ ದಂತಗಳ ಸಹಾಯದಿಂದ ಲೋಕವು ಭಕ್ಷಿಸುತ್ತದೆ. ಯಾವ ನೀನು ಈ ಸಕಲಕರ್ಮಗಳನ್ನೂ ಮಾಡಿಸಿದ್ದೀಯೋ ಅಂತಹ ನೀನು ಬಹುಮುಖ್ಯವಾಗಿ ಪ್ರಶಸ್ಯನಾಗಿದ್ದೀಯೆ.

### English Translation

Distributing nourishment to their progeny, they, (the householders), abide (in their dwellings), as if offering ample and sustaining wealth to a guest: constructing (useful works, a man) eats with his teeth the food (given him) by (his) protector, and as he, who has enjoined these (things to be done), you, (Indra), are especially to be praised.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಋಷಿಯು ಯಾವ ವಿಷಯವನ್ನು ವರ್ಣಿಸಿರುವನೆಂಬುದು ಸ್ಪಷ್ಟವಾಗಿಲ್ಲ. ಭಾಷ್ಯಕಾರರು ಒಂದು ವಿಧವಾದ ಅರ್ಥವನ್ನು ಹೊಂದಿಸಿ ಹೇಳಿರುವರು. ಆದರೆ ಕೆಲವು ಶಬ್ದಗಳ ಅರ್ಥವು ಸ್ಪಷ್ಟವಾಗಿಲ್ಲವಾದ್ದರಿಂದ ಋಷಿಯ ಆಶಯವು ಹೀಗೆಯೇ ಇರುವುದೆಂದು ಹೇಳುವುದಕ್ಕಾಗುವುದಿಲ್ಲ.

**ಪ್ರಜಾಭ್ಯಃ ಪುಷ್ಟಿಂ ವಿಭಜಂತಃ ಆಸತೇ**— ಹೇ ಇಂದ್ರ ತ್ವಯಾ ದತ್ತಂ ಪೋಷಕಂ ಧನಂ ಸ್ವಕೀಯಾಭ್ಯಃ ಪ್ರಜಾಭ್ಯೋ ವಿಭಜಂತೋಽಸ್ಯೈತಾವದಸ್ಯೈತಾವದಿತಿ ವಿಭಾಗಂ ಕುರ್ವಂತೋ ಗೃಹಮೇಧಿನ ಆಸತೇ । ಎಲೈ ಇಂದ್ರನೇ, ನೀನು ಕೊಟ್ಟ ಧನವನ್ನು ಮನೆಯ ಯಜಮಾನರು ತಮ್ಮ ತಮ್ಮ ಆಶ್ರಯದಲ್ಲಿರುವವರಿಗೆ—'ಇದು ನಿನಗೆ, ಅದು ಅವನಿಗೆ' ಎಂದು ಎಲ್ಲರಿಗೂ ಹಂಚಿ ತಮ್ಮ ತಮ್ಮ ಮನೆಗಳಲ್ಲಿ ಸುಖವಾಗಿ ವಾಸ ಮಾಡುತ್ತಾರೆ. ಇಲ್ಲಿ ಧನವೆಂದರೆ ದ್ರವ್ಯ, ಅಥವಾ ಅನ್ನಾದ್ಯಾಹಾರ, ಮುಂತಾದ ವಸ್ತುಗಳಾಗಬಹುದು. ಏಕೆಂದರೆ ಪುಷ್ಟಿಂ ಎಂಬ ಶಬ್ದವು ದೇಹಕ್ಕೆ ಪುಷ್ಟಿಯನ್ನುಂಟುಮಾಡುವ ಅನ್ನಾದ್ಯಾಹಾರವೆಂಬರ್ಥವನ್ನು ಸೂಚಿಸುವುದು. ಇಂದ್ರದತ್ತವಾದ ಆ ವಸ್ತುಗಳನ್ನು ಯಜಮಾನರು ತಾವು ಮಾತ್ರ ಅನುಭವಿಸದೆ ತಮಗೆ ಸಂಬಂಧಪಟ್ಟ ಪತ್ನೀಪುತ್ರಭೃತ್ಯಾದಿಗಳಿಗೂ, ತಮ್ಮ ಆಶ್ರಯದಲ್ಲಿರುವ ಇತರ ಜನರಿಗೂ ಅವರವರ ಅವಶ್ಯಕತೆಗೆ ತಕ್ಕಂತೆ ವಿಭಾಗಮಾಡಿಕೊಟ್ಟು ತಾವೂ ಅದರಲ್ಲಿ ಸ್ವಲ್ಪಭಾಗವನ್ನು ಅನುಭವಿಸುತ್ತಾ ತಮ್ಮ ತಮ್ಮ ಮನೆಗಳಲ್ಲಿ ಸುಖದಿಂದಿರುವರು ಎಂದು ಮುಖ್ಯಾಭಿಪ್ರಾಯವು.

**ರಯಿಮಿವ ಪೃಕ್ಷಂ ಪ್ರಭವಂತಂ ಆಯತೇ**— ಮೇಲೆ ಹೇಳಿದ ವಾಕ್ಯದಲ್ಲಿ ಯಜಮಾನರು ಧನವನ್ನು ಹಂಚುವ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಇಲ್ಲಿ ಹೇಳಲಾಗಿದೆ— **ಆಯತೇ ಗೃಹಂ ಪ್ರತ್ಯಾಗಚ್ಛತೇಽತಿಥಯೇ ಪೃಕ್ಷಂ ಧಾರಕಂ ಪ್ರಭವಂತಂ ಬಹುಭರಣಸಮರ್ಥಂ ರಯಿಂ ಧನಂ ಯಥಾ ವಿಭಜ್ಯ ಪ್ರಯಚ್ಛಂತಿ ತದ್ವತ್** । ಮನೆಯ ಯಜಮಾನರು ತಮ್ಮ ಮನೆಗೆ ಬಂದ ಅತಿಥಿ ಅಥವಾ ಅಭ್ಯಾಗತನಿಗೆ ಯಥಾವಿಧಿಯಾಗಿ ಸತ್ಕಾರಮಾಡಿ ಅವನಿಗೆ ಬೇಕಾದ ಆಹಾರವನ್ನೂ ಧನವನ್ನೂ ಧರ್ಮಬುದ್ಧಿಯಿಂದ ಯಾವರೀತಿ ಕೊಡುತ್ತಾರೆಯೋ ಅದರಂತೆ ತಮ್ಮ ಆಶ್ರಯಕರ್ತರಿಗೆ ಇಂದ್ರನು ಕೊಟ್ಟ ಧನವನ್ನು ವಿಭಾಗಿಸಿಕೊಡುವರು ಎಂದು ದೃಷ್ಟಾಂತವನ್ನು ಹೇಳಿದೆ. ಈ ದೃಷ್ಟಾಂತವು ಅಷ್ಟೇನೂ ಅರ್ಥವತ್ತಾಗಿಲ್ಲ.

**ಅಸಿನ್ವನ್ ದಂಷ್ಟ್ರೈಃ ಪಿತುಃ ಅತ್ತಿ ಭೋಜನಂ**— ಈ ವಾಕ್ಯಕ್ಕೆ ಭಾಷ್ಯಕಾರರು ವಿವರಿಸಿರುವ ಅರ್ಥವು ಸಂದರ್ಭೋಚಿತವಾಗಿಲ್ಲ ಮತ್ತು ಯಾಸ್ಕರ ವಿವರಣೆಗೆ ವಿರೋಧವಾಗಿದೆ. **ಅಸಿನ್ವನ್ ಸೇತುಬಂಧಾದಿಕಂ ಕರ್ಮ ಕುರ್ವನ್ ಲೋಕಃ ಪಿತುಃ ಪಾಲಯಿತ್ರ್ಯಾ ದಿವಃ ಸಕಾಶಾದಾಗತಂ ಭೋಜನಮುದಕಂ ತತ್ಕಾರ್ಯೌ ಓಷಧೀರ್ದಂಷ್ಟ್ರೈರತ್ತಿ ಭಕ್ಷಯತಿ । ಯದ್ವಾ ಅಸಿನ್ವನ್ ಅವ್ಯಾಪ್ರಿಯಮಾಣೋಽಗ್ನಿಃ ಪಿತುಃ ಪಾಲಕಸ್ಯ ಯಜಮಾನಸ್ಯ ಸಂಬಂಧಿ ಭೋಜನಂ ಹವಿರ್ಲಕ್ಷಣಮನ್ನಂ ದಂಷ್ಟ್ರೈರ್ದಂತರೂಪೈರ್ಜ್ವಾಲೈರತ್ತಿ ।** ಎಂದರೆ ಲೋಕವು ಅಥವಾ ಲೋಕದ ಜನವು ಸೇತುವೆಗಳನ್ನು ಕಟ್ಟುವುದೇ ಮೊದಲಾದ ಕಾರ್ಯಗಳನ್ನು ಮಾಡುತ್ತಾ ಪಾಲಕ ವಾದ ಅಂತರಿಕ್ಷ (ಸ್ವರ್ಗ) ದಿಂದ ಬೀಳುವ ವೃಷ್ಟಿರೂಪವಾದ ಉದಕವೆಂಬ ಭೋಜನವನ್ನು ಅಥವಾ ಆ ಉದಕದಿಂದ ಉತ್ಪನ್ನವಾಗುವ ಓಷಧಿ (ವನಸ್ಪತಿ, ಸಸ್ಯ ಇವುಗಳಿಂದ ಉತ್ಪನ್ನವಾಗುವ ಧಾನ್ಯರೂಪವಾದ) ರೂಪವಾದ ಭೋಜನ ವನ್ನು ತಮ್ಮ ಹಲ್ಲುಗಳಿಂದ ಅಗಿದು ಭಕ್ಷಿಸುವುದು, ಅಥವಾ ಯಜಮಾನನ ವಿಷಯದಲ್ಲಿ ಪ್ರೀತಿಯಿಂದಿರುವ ಅಗ್ನಿಯು, ಯಜಮಾನನು ತನ್ನಲ್ಲಿ ಅರ್ಪಿಸುವ ಹವೀರೂಪವಾದ ಅನ್ನವನ್ನು ಹಲ್ಲುಗಳಿಗೆ ಸದೃಶವಾದ ತನ್ನ ಜ್ವಾಲೆಗಳಿಂದ ಭಕ್ಷಿಸುವನು ಎಂದು ಎರಡು ವಿಧವಾದ ಅರ್ಥವನ್ನು ಹೇಳಿರುವರು

ಈ ವಾಕ್ಯಾರ್ಥಗಳ ವಿಚಾರದಲ್ಲಿ ಸ್ವಲ್ಪ ವಿಮರ್ಶೆಯು ಅವಶ್ಯಕವು. ಇಲ್ಲಿ ಅಸಿನ್ವನ್ ಎಂಬ ಶಬ್ದಕ್ಕೆ ಭಾಷ್ಯಕಾರರು—**ಸೇತುಬಂಧಾದಿಕಂ ಕರ್ಮ ಕುರ್ವನ್**—ಸೇತುವೆ ಕಟ್ಟುವುದೇ ಮೊದಲಾದ ಕೆಲಸಗಳನ್ನು ಮಾಡುತ್ತಾ ಎಂದು ಹೇಳಿರುವ ಅರ್ಥವಿವರಣೆಯು ಈ ವಾಕ್ಯದಲ್ಲಿ ಸೂಚಿತವಾಗಿರುವ ಅರ್ಥಕ್ಕೆ ಸಹಾಯಕವಾಗಿಲ್ಲ. ಲೋಕದ ಜನರು ವೃಷ್ಟ್ಯುದಕವನ್ನು ಅಥವಾ ಅದರಿಂದ ಉತ್ಪತ್ತಿಯಾಗುವ ಆಹಾರವನ್ನು ಭಕ್ಷಿಸುವವರಾದರೂ ಸೇತುವೆಗಳನ್ನು ಕಟ್ಟುವ ವಿಷಯಕ್ಕೂ ಆಹಾರವನ್ನು ಭಕ್ಷಿಸುವುದಕ್ಕೂ ಯಾವ ಸಂಬಂಧವೂ ಇರುವುದಿಲ್ಲ. ಆದ್ದರಿಂದ ಅಸಿನ್ವನ್ ಶಬ್ದಕ್ಕೆ ಸೇತುಬಂಧನಾದಿಕರ್ಮವೆಂಬ ಅರ್ಥವನ್ನು ನಿರಾಕರಿಸಿ ಯಾಸ್ಕರು ಇದೇ ಶಬ್ದಪ್ರಯೋಗವಿರುವ–

**ಅಪಶ್ಯಮಸ್ಯ ಮಹತೋ ಮಹಿತ್ವಮಮರ್ತ್ಯಸ್ಯ ಮರ್ತ್ಯಾಸು ವಿಕ್ಷು ।**
**ನಾನಾ ಹನೂ ವಿಭೃತೇ ಸಂ ಭರೇತೇ ಅಸಿನ್ವತೀ ಬಪ್ಸತೀ ಭೂರ್ಯತ್ತಃ ॥**

(ಋ. ಸಂ. ೧೦–೭೯–೧)

ಎಂಬ ಋಕ್ಕನ್ನುದಾಹರಿಸಿ ಅದರಲ್ಲಿರುವ **ಅಸಿನ್ವತೀ** ಎಂಬ ಶಬ್ದಕ್ಕೆ **ಅಸಿನ್ವತೀ ಅಸಂಖಾದಂತ್ಯೌ** । (ನಿ. ೬–೪) ಎಂದು ನಿರ್ವಚನವನ್ನು ಹೇಳಿದ್ದಾರೆ. **ಅಸಂಖಾದಂತ್ಯೌ** ಎಂದರೆ **ಅಸಂಚೂರ್ಣಯಂತ್ಯಾವಿವ ಭಕ್ಷಯಂತ್ಯೌ** ಚೆನ್ನಾಗಿ ಅಗಿಯದೆ ತಿನ್ನುವುದು ಎಂದು ದುರ್ಗಾಚಾರ್ಯರು ವ್ಯಾಖ್ಯಾನದಲ್ಲಿ ವಿವರಿಸಿದ್ದಾರೆ. ಪ್ರಕೃತ ಋಕ್ಕಿನಲ್ಲಿ **ಅಸಿನ್ವನ್** ಎಂಬ ಶಬ್ದಕ್ಕೂ ಇದೇ ಅರ್ಥವನ್ನು ಹೇಳುವುದಾದರೆ—**ಅಸಿನ್ವನ್ ದಂಷ್ಟ್ರೈಃ ಪಿತುಃ ಅತ್ತಿ ಭೋಜನಂ** ಎಂಬ ವಾಕ್ಯಕ್ಕೆ ಪಾಲಕವಾದ ಅಂತರಿಕ್ಷದಿಂದ ಲಭಿಸುವ ವೃಷ್ಟ್ಯುದಕ ಅಥವಾ ಅದರಿಂದುಂಟಾಗುವ ಆಹಾರವನ್ನು ಹಲ್ಲುಗಳಿಂದ ಚೆನ್ನಾಗಿ ಅಗಿಯದೆ (ಹಸಿದಿರುವುದರಿಂದ) ಆತುರವಾಗಿ ಲೋಕಜನವು ಭಕ್ಷಿಸುವುದು ಎಂದರ್ಥವಾಗುವುದು. ಈ ಅರ್ಥವೇ ಸಮಂಜಸವಾಗಿರುವಂತೆ ತೋರುವುದು. ಸಾಯಣರೂ ಸಹ ಮೇಲೆ ಉದಾ ಹರಣೆಗಾಗಿ ಕೊಟ್ಟಿರುವ ಋಕ್ಕಿನ ಭಾಷ್ಯದಲ್ಲಿ ಅಸಿನ್ವತೀ ಎಂಬ ಶಬ್ದಕ್ಕೆ ಯಾಸ್ಕರ ನಿರ್ವಚನವನ್ನನುಸರಿಸಿ **ಅಸಂಖಾದಂತ್ಯೌ** ಎಂಬ ಅರ್ಥವನ್ನೇ ಹೇಳಿರುವರು. ಇಲ್ಲಿ ಮಾತ್ರ ಅಸಿನ್ವನ್ ಶಬ್ದಕ್ಕೆ ಅನವಶ್ಯಕವಾದ ಅಥವಾ ಅಸ್ಪಷ್ಟವಾದ ಅರ್ಥವನ್ನು ಏತಕ್ಕೆ ಹೇಳಿದರೋ ತಿಳಿಯದಾಗಿದೆ. ಅಗ್ನಿಪರವಾದ ಅರ್ಥದಲ್ಲಿಯೂ ಸಹ ಯಾಸ್ಕರ

ವಿವರಣೆಯೇ ಸರಿಯಾಗಿ ಹೊಂದುವುದು. ಏಕೆಂದರೆ ಉದಾಹರಣೆಯ ಋಕ್ಕಿನಲ್ಲಿ ಈ ಶಬ್ದವು ಅಗ್ನಿಪರವಾಗಿಯೇ ಪ್ರಯುಕ್ತವಾಗಿದೆ. ಮತ್ತು—

ಗುಹಾ ಶಿರೋ ನಿಹಿತಮೃಧಗಕ್ಷೀ ಅಸಿನ್ವನ್ನತ್ತಿ ಜಿಹ್ವಯಾ ವನಾನಿ ।

(ಋ. ಸಂ. ೧೦-೭೯-೨)

ಎಂಬ ಋಕ್ಕಿನಲ್ಲಿಯೂ ಅಸಿನ್ವನ್ ಎಂಬ ಶಬ್ದಕ್ಕೆ ಅಸಿನ್ವನ್ ದಂತ್ಯೈರಸಂಖಾದಜಿಹ್ವಯಾ ಎಂದೇ ಭಾಷ್ಯಕಾರರು ಅರ್ಥವಿವರಣೆಮಾಡಿದ್ದಾರೆ. ಇಲ್ಲಿಯೂ ಅರ್ಥವು ಅಗ್ನಿಪರವಾಗಿಯೇ ಇದೆ ಅಗ್ನಿಯು ಹವಿಸ್ಸನ್ನಾಗಲಿ, ವನಗಳನ್ನಾಗಲಿ ದಹಿಸುವಾಗ ಹಲ್ಲಿನಿಂದ (ಜ್ವಾಲೆಗಳಿಂದ) ನಿಧಾನವಾಗಿ ಅಗಿಯದೆ ಬೇಗನೆ ವ್ಯಾಪಿಸಿ ಭಕ್ಷಿಸುವನು ಎಂದರೆ ದಹಿಸುವನು ಎಂಬ ಅರ್ಥದಲ್ಲಿಯೇ ಅಸಿನ್ವನ್ ಎಂಬ ಶಬ್ದಪ್ರಯೋಗವಿರುವಂತೆ ಕಾಣುವುದು. ಆದ್ದರಿಂದ ಭಾಷ್ಯಕಾರರು ಪ್ರಕೃತಋಕ್ಕಿನಲ್ಲಿ ಹೇಳಿರುವ ಅಗ್ನಿಪರವಾದ ಅರ್ಥವೇ ಋಷಿಯ ಆಶಯವಾಗಿರಬಹುದು. ಇದಲ್ಲದೆ ಅಸಿನ್ವನ್ ಎಂಬ ಶಬ್ದಪ್ರಯೋಗವು ಋ. ಸಂ. ೭-೩೯-೬, ೮-೪೫-೩೮ ಎಂಬ ಋಕ್ಕುಗಳಲ್ಲಿದ್ದರೂ ಅಲ್ಲಿ ಆ ಶಬ್ದಗಳಿಗೆ ಅಸು-ಕ್ಷೇಪಣೇ ಎಂಬರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾದ ಶಬ್ದವೆಂದು ಭಾವಿಸಿ ಅದರಂತೆ ಭಾಷ್ಯಕಾರರು ಅರ್ಥವಿವರಣೆಮಾಡಿರುವರು.

---

ಸಂಹಿತಾಪಾಠಃ

ಅಥಾಕೃಣೋಃ ಪೃಥಿವೀಂ ಸಂದೃಶೇ ದಿವೇ ಯೋ ಧೌತೀನಾಮಹಿಹನ್ನಾ-
ರಿಣಕ್ಪಥಃ ।
ತಂ ತ್ವಾ ಸ್ತೋಮೇಭಿರುದಭಿರ್ನ ವಾಜಿನಂ ದೇವಂ ದೇವಾ ಅಜನನ್ತ್ಸಾ-
ಸ್ಯುಕ್ಥ್ಯಃ ॥ ೫ ॥

ಪದಪಾಠಃ

ಅಥ । ಅಕೃಣೋಃ । ಪೃಥಿವೀಂ । ಸಂಽದೃಶೇ । ದಿವೇ । ಯಃ । ಧೌತೀನಾಂ । ಅಹಿಽಹನ್ । ಅರಿಣಕ್ । ಪಥಃ ।
ತಂ । ತ್ವಾ । ಸ್ತೋಮೇಭಿಃ । ಉದಽಭಿಃ । ನ । ವಾಜಿನಂ । ದೇವಂ । ದೇವಾಃ । ಅಜನನ್ । ಸಃ । ಅಸಿ । ಉಕ್ಥ್ಯಃ ॥ ೫ ॥

### ಸಾಯಣಭಾಷ್ಯಂ

ಹೇ ಇಂದ್ರ ಅಥ ಅಪಿ ಚ ತ್ವಂ ದಿವೇ ದ್ಯೋತಮಾನಾಯ ಸೂರ್ಯಾಯ ಪೃಥಿವೀಂ ಚಲಿತಾಂ ಸತೀಂ ದೃಢೀಕೃತ್ಯ ಸಂದೃಶೇ ಸಂದರ್ಶನೀಯಾಮಕೃಣೋಃ । ಅಕರೋಃ ॥ ದೃಶೇ ವಿಖ್ಯೇ ಚೇತಿ ಕೇನ್ಪ್ರತ್ಯಯಾಂತತ್ವೇನ ನಿಪಾತಿತಃ ॥ ಯಶ್ಚ ತ್ವಂ ಧೌತೀನಾಂ ಚಲಂತೀನಾಂ ನದೀನಾಂ ಪಥೋ ಮಾರ್ಗಾನರಿಣಕ್ । ಅರೇಚಯಃ । ಗಂತುಂ ಯೋಗ್ಯಾನಕರೋರಿತ್ಯರ್ಥಃ ॥ ರುಚಿರ್ ವಿರೇಚನೇ । ಲಙಃ ಸಿಪ್ । ತಸ್ಯ ಹಲ್ಙ್ಯಾದಿನಾ ಲೋಪಃ ॥ ಅಹಿಹನ್ ಅಹೇರ್ವೃತ್ರಸ್ಯ ಮೇಘಸ್ಯ ವಾ ಹಂತರ್ಹೇ ಇಂದ್ರ ದೇವಾಃ ಸ್ತೋತಾರಸ್ತಂ ತಾದೃಶಂ ದೇವಂ ತ್ವಾಂ ಸ್ತೋಮೇಭಿಃ ಸ್ತೋತ್ರೈರಜನನ್ । ತತ್ರ ದೃಷ್ಟಾಂತಃ । ಉದಭಿರ್ನ ವಾಜಿನಂ । ಯಥಾ ವಾಜಿನಮಶ್ವಮುದಭಿರುದಕೈರ್ವರ್ಧಯಂತಿ ತದ್ವತ್ ॥ ಪದ್ದನ್ನೋಮಾಸಿತ್ಯಾದಿನೋದಕಸ್ಯೋದನ್ಭಾವಃ ॥ ಶೇಷಂ ಸಿದ್ಧಂ ॥

### ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । ಅಥ—ಮೇಲೆ ಹೇಳಿದ ಅಸಾಧಾರಣವಾದ ಕರ್ಮಗಳಲ್ಲದೆ । ದಿವೇ—ಪ್ರಕಾಶಮಾನನಾದ ಸೂರ್ಯನಿಗೆ । ಪೃಥಿವೀಂ—ಪೃಥಿವಿಯನ್ನು । ಸಂದೃಶೇ—ದರ್ಶನಕ್ಕೆ ಯೋಗ್ಯವಾಗಿ । ಅಕೃಣೋಃ—ಮಾಡಿದೆ. । ಯಃ—ಯಾವ ನೀನು । ಧೌತೀನಾಂ—ಪ್ರವಹಿಸುವ ನದಿಗಳ । ಪಥಃ—ಮಾರ್ಗಗಳನ್ನು । ಅರಿಣಕ್—ರಚಿಸಿದೆಯೋ । ಅಹಿಹನ್—ವೃತ್ರಹಂತಕನಾದ ಎಲೈ ಇಂದ್ರನೇ । ದೇವಂ ತಂ ತ್ವಾ—ದೇವಕಾತ್ಮನಾದ ಅಂತಹ ನಿನ್ನನ್ನು । ದೇವಾಃ—ಸ್ತೋತೃಗಳು । ವಾಜಿನಂ—ಅಶ್ವವನ್ನು । ಉದಭಿರ್ನ—ಉದಕದಿಂದ ಪುಷ್ಟವಾಗಿ ಮಾಡುವಂತೆ । ಸ್ತೋಮೇಭಿಃ—ಸ್ತೋತ್ರಗಳಿಂದ । ಅಜನನ್-ಅಭಿವೃದ್ಧಿಯಾಗುವಂತೆ ಮಾಡಿದರು । ಸಃ—ಅಂತಹ ನೀನು । ಉಕ್ಥ್ಯಃ ಅಸಿ—ಪ್ರಶಸ್ಯನಾಗಿದ್ದೀಯೆ.

### ಭಾವಾರ್ಥ

ಎಲೈ ಇಂದ್ರನೇ, ಮೇಲೆ ವರ್ಣಿತವಾಗಿರುವ ಅಸಾಧಾರಣವಾದ ಕರ್ಮಗಳಲ್ಲದೆ, ನೀನು ಪ್ರಕಾಶಮಾನನಾದ ಸೂರ್ಯನಿಗೆ ಪೃಥ್ವಿಯನ್ನು ದರ್ಶನಕ್ಕೆ ಯೋಗ್ಯವಾಗುವಂತೆ ಮಾಡಿದೆ. ಯಾವ ನೀನು ಪ್ರವಹಿಸುವ ನದಿಗಳ ಮಾರ್ಗಗಳನ್ನು ರಚಿಸಿದೆಯೋ, ಎಲೈ ವೃತ್ರಹಂತಕನಾದ ಇಂದ್ರನೇ, ದೇವತಾತ್ಮನಾದ ಅಂತಹ ನಿನ್ನನ್ನು ಅಶ್ವವನ್ನು ಉದಕದಿಂದ ಪುಷ್ಟವಾಗಿ ಮಾಡುವಂತೆ ಸ್ತೋತೃಗಳು ಸ್ತೋತ್ರಗಳಿಂದ ಪ್ರವೃದ್ಧನಾಗುವಂತೆ ಮಾಡಿದರು. ಅಂತಹ ನೀನು ಪ್ರಶಸ್ಯನಾಗಿದ್ದೀಯೆ.

### English Translation

Inasmuch as you have rendered earth visible to heaven, and set open the path of the rivers by slaying Ahi ; therefore the gods have rendered you divine by praises, as (men) invigorate a horse by water ; (and) you are, (Indra), to be praised.

## ವಿಶೇಷವಿಷಯಗಳು

**ಅಥ ಅಕೃಣೋಃ ಪೃಥಿವೀಂ ಸಂದೃಶೇ ದಿವೇ—ಹೇ ಇಂದ್ರ ಅಥ ಅಪಿ ಚ ತ್ವಂ ದಿವೇ ದ್ಯೋತಮಾನಾಯ ಸೂರ್ಯಾಯ ಪೃಥಿವೀಂ ಚಲಿತಾಂ ಸತೀಂ ದೃಢೀಕೃತ್ಯ ಸಂದೃಶೇ ಸಂದರ್ಶನೀಯಾಮಕೃಣೋಃ**—ಎಲೈ ಇಂದ್ರನೇ, ಅಲುಗಾಡುತ್ತಿದ್ದ ಈ ಭೂಮಿಯನ್ನು ಚಲಿಸದೆ ದೃಢವಾಗಿರುವಂತೆ ಮಾಡಿ ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿರುವ ಸೂರ್ಯನಿಗೆ ಕಾಣಿಸುವಂತೆ ಮಾಡಿದೆ ಎಂದು ಭಾಷ್ಯಕಾರರ ಅರ್ಥವು. ಅಥವಾ ಭೂಮಿಗೂ ಸೂರ್ಯನಿಗೂ ಮಧ್ಯದಲ್ಲಿ ಅಂತರಿಕ್ಷದಲ್ಲಿ ವ್ಯಾಪಿಸಿರುವ ವೃತ್ರನನ್ನು ಅಥವಾ ಮೇಘಗಳನ್ನು ವಜ್ರಾಯುಧದಿಂದ ಪ್ರಹರಿಸಿ ನೀರನ್ನು ಭೂಮಿಯಮೇಲೆ ವೃಷ್ಟಿರೂಪವಾಗಿ ಬೀಳುವಂತೆಮಾಡಿ ಅಂತರಿಕ್ಷದಲ್ಲಿ ಸೂರ್ಯನು ಕಾಣಿಸದಂತೆ ಆವರಿಸಿದ್ದ ಮೇಘಗಳನ್ನು ನಾಶಮಾಡಿ ಭೂಮಿಯು ಸೂರ್ಯನಿಗೆ ಗೋಚರವಾಗುವಂತೆ ಮಾಡಿದೆ ಎಂದು ಇನ್ನೊಂದು ವಿಧವಾದ ಅರ್ಥವನ್ನೂ ಹೇಳಬಹುದು. ಅಂತರಿಕ್ಷದಲ್ಲಿ ಮೋಡವು ಕವಿದು ಕತ್ತಲೆಯಾಗಿರುವಾಗ ಸೂರ್ಯನು ಕಾಣಿಸುವುದಿಲ್ಲ. ಸೂರ್ಯನಿಗೂ ಭೂಮಿಯು ಕಾಣಿಸುವುದಿಲ್ಲ. ಅಂತಹ ಸಂದರ್ಭದಲ್ಲಿ ಮೇಘಗಳನ್ನು ಹಿಂಸಿಸಿ ವೃಷ್ಟಿಯನ್ನುಂಟುಮಾಡಿ ಆ ಮೂಲಕ ಮೇಘಗಳನ್ನು ನಾಶಮಾಡುವುದರಿಂದ ಅಂತರಿಕ್ಷವು ಯಾವ ಆವರಣವೂ ಇಲ್ಲದೆ ಸ್ವಚ್ಛವಾಗುವುದರಿಂದ ಸೂರ್ಯನಿಗೆ ಭೂಮಿಯು ಚೆನ್ನಾಗಿ ಗೋಚರವಾಗುವುದೆಂದು ಮುಖ್ಯಾಭಿಪ್ರಾಯವು.

**ಯಃ ಧೌತೀನಾಂ ಅಹಿಹನ್ ಅರಿಣಕ್ ಪಥಃ—ಯಶ್ಚ ತ್ವಂ ಧೌತೀನಾಂ ಚಲಂತೀನಾಂ ನದೀನಾಂ ಪಥೋ ಮಾರ್ಗಾನರಿಣಕ್ । ಅರೇಚಯಃ । ಗಂತುಂ ಯೋಗ್ಯಾನಕರೋರಿತ್ಯರ್ಥಃ ।** ಎಲೈ ಇಂದ್ರನೇ, ನೀನು ಅಂತರಿಕ್ಷದಲ್ಲಿ ವೃಷ್ಟಿಯನ್ನು ತಡೆಗಟ್ಟಿದ್ದ ವೃತ್ರಾಸುರನನ್ನು ಅಥವಾ ಮೇಘಗಳನ್ನು ಸಂಹರಿಸಿ ವೃಷ್ಟಿಯನ್ನು ಭೂಮಿಗೆ ಬೀಳುವಂತೆಮಾಡಿ ಆ ವೃಷ್ಟ್ಯುದಕಗಳು (ಮಳೆಯ ನೀರು) ಸಮುದ್ರಕ್ಕೆ ಹೋಗಿ ಸೇರುವ ಮಾರ್ಗವನ್ನು ರಚಿಸಿದೆ. ಭೂಮಿಯಮೇಲೆ ಬೀಳುವ ಮಳೆಯ ನೀರೆಲ್ಲಾ ನದಿಗೆ ಸೇರುವುದು. ನದಿಯು ತನ್ನದೇ ಆದ ಎಂದರೆ ಒಂದು ನಿರ್ದಿಷ್ಟವಾದ ಪಾತ್ರದಲ್ಲಿ ಹರಿದು ಸಮುದ್ರಕ್ಕೆ ಹೋಗಿ ಸೇರುವುದು. ಸಾಧಾರಣವಾಗಿ ನದಿಯ ನೀರು ಸಮುದ್ರದವರೆಗೂ ಒಂದು ನಿರ್ದಿಷ್ಟವಾದ (ಅಥವಾ ಬರು ಬರುತ್ತಾ ತಗ್ಗಾದ) ದಾರಿಯಲ್ಲಿ ಹರಿಯುವುದರಿಂದಲೂ ಆ ಮಾರ್ಗವು ಯಾವಾಗಲೂ ವ್ಯತ್ಯಾಸವಾಗದೆ ಒಂದೇವಿಧವಾಗಿರುವುದರಿಂದಲೂ, ನದಿಯು ಹರಿಯುವ ಆ ನಿರ್ದಿಷ್ಟ ಮಾರ್ಗವನ್ನು ಇಂದ್ರನು ನಿರ್ಮಿಸಿದನು ಎಂದು ಮುಖ್ಯಾಭಿಪ್ರಾಯವು.

**ಅಹಿಹನ್—ಅಹೇರ್ವೃತ್ರಸ್ಯ ಮೇಘಸ್ಯ ವಾ ಹಂತಃ-** ವೃತ್ರಾಸುರ ಅಥವಾ ಮೇಘ. ಇವರನ್ನು ಸಂಹಾರಮಾಡುವವನಾದ್ದರಿಂದ ಇಂದ್ರನನ್ನು ಅಹಿಹನ್ ಎಂಬ ಶಬ್ದದಿಂದ ಸಬೋಧಿಸಿದೆ.

**ತಂ ತ್ವಾ ಸ್ತೋಮೇಭಿಃ ಉದಭಿಃ ನ ವಾಜಿನಂ ದೇವಂ ದೇವಾ ಅಜನನ್**—ಎಲೈ ಇಂದ್ರನೇ, ಮೇಲೆ ಹೇಳಿದ ಸಾಹಸಕಾರ್ಯಗಳನ್ನು ಮಾಡಿದ ನಿನ್ನನ್ನು ದೇವತೆಗಳು ಕುದುರೆಯನ್ನು ಉದಕಗಳಿಂದ ವೃದ್ಧಿಪಡಿಸುವಂತೆ ಸ್ತೋತ್ರಾದಿಗಳಿಂದ ನಿನ್ನ ಗುಣಗಾನಮಾಡಿ ಗುಣವಿಶಿಷ್ಟನನ್ನಾಗಿ ಮಾಡುವರು ಎಂಬು ಭಾಷ್ಯಕಾರರ ವಿವರಣೆಯು. ಈ ವಾಕ್ಯದ ಅರ್ಥವು ಸ್ಪಷ್ಟವಾಗಿಲ್ಲ. ದೇವತೆಗಳು ನಿನ್ನನ್ನು(ಇಂದ್ರನನ್ನು)ಸ್ತೋತ್ರಗಳಿಂದ ಸ್ತುತಿಸುವರು. ಸ್ತೋತ್ರಗಳಿಂದ ಇಂದ್ರನ ಸಾಮರ್ಥ್ಯವು ವೃದ್ಧಿಯಾಗುವುದು ಎಂದುಮುಖ್ಯಾಭಿಪ್ರಾಯವು. ಸ್ತೋತ್ರಮಾಡಿದರೆ ದೇವತೆಗಳ ಸಾಮರ್ಥ್ಯವು

ಅತಿಶಯವಾಗಿ ಹೆಚ್ಚುವುದು ಅಥವಾ ಬೆಳಗುವುದು ಎಂದು ಋಷಿಗಳು ಹೇಳುವುದು ರೂಢಿಯು. **ತ್ವಾಂ ವರ್ಧಂತು ನೋ ಗಿರಃ**- ನಮ್ಮ ಸ್ತುತಿರೂಪವಾದ ವಾಕ್ಯಗಳು ಅಥವಾ ಸ್ತೋತ್ರಗಳು ನಿನ್ನನ್ನು (ಇಂದ್ರನನ್ನು) ವೃದ್ಧಿಪಡಿಸಲಿ (ಹೊಗಳಲಿ) ಎಂಬ ಅರ್ಥವುಳ್ಳ ಅನೇಕ ವಾಕ್ಯಗಳು ಅಲ್ಲಲ್ಲಿ ಕಂಡುಬರುವವು. ಈ ವಾಕ್ಯದ ಅರ್ಥವನ್ನು ವಿಶದಪಡಿಸುವುದಕ್ಕಾಗಿ ಹೇಳಿರುವ **ಉದಭಿಃ ನ ವಾಜಿನಂ** ಎಂಬ ದೃಷ್ಟಾಂತವು ಅರ್ಥಾನುಸಾರವಾಗಿಲ್ಲ ಉದಕಗಳಿಂದ ಕುದುರೆಯನ್ನು ವೃದ್ಧಿಗೊಳಿಸುವಂತೆ ಎಂಬ ವಾಕ್ಯಕ್ಕೆ ಸರಿಯಾದ ಅರ್ಥವೇನೆಂಬುದು ಗೊತ್ತಾಗುವುದಿಲ್ಲ. ಪ್ರಾಯಶಃ ಬಹಳದೂರ ನಡೆದು ಬಳಲಿರುವ ಕುದುರೆಗೆ ನೀರನ್ನು ಕುಡಿಸುವುದರಿಂದ ಅದರ ಆಯಾಸವು ಪರಿಹಾರವಾಗಿ ಅದರ ಮುಂಚಿನ ಶಕ್ತಿಯು ಉಂಟಾಗುವಂತೆ ಅಥವಾ ಧೂಳು ಮುಂತಾದ ಕೊಳೆಯಿಂದ ಮಲಿನವಾಗಿ ಕಾಣಿಸುತ್ತಿದ್ದ ಕುದುರೆಯನ್ನು ನೀರಿನಿಂದ ತೊಳೆದು ಚೆನ್ನಾಗಿ ಕಾಣಿಸುವಹಾಗೆ ಮಾಡುವಂತೆ ಎಂದು ಅರ್ಥವಿವರಣೆ ಮಾಡಬಹುದು. ಆದರೆ ಈ ಅರ್ಥಗಳು ಈ ಸಂದರ್ಭಕ್ಕೆ ಸರಿಯಾಗಿ ಹೊಂದಿಕೊಳ್ಳುವುದಿಲ್ಲ.

---

ಸಂಹಿತಾಪಾಠಃ

ಯೋ ಭೋಜನಂ ಚ ದಯಸೇ ಚ ವರ್ಧನಮಾರ್ದ್ರಾದಾ ಶುಷ್ಕಂ ಮಧುಮದ್ದುದೋಹಿಥ ।

ಸಃ ಶೇವಧಿಂ ನಿ ದಧಿಷೇ ವಿವಸ್ವತಿ ವಿಶ್ವಸ್ಯೈಕ ಈಶಿಷೇ ಸಾಸ್ಯುಕ್ಥ್ಯಃ ॥ ೬ ॥

ಪದಪಾಠಃ

ಯಃ । ಭೋಜನಂ । ಚ । ದಯಸೇ । ಚ । ವರ್ಧನಂ । ಆರ್ದ್ರಾತ್ । ಆ । ಶುಷ್ಕಂ । ಮಧುಽಮತ್ । ದುದೋಹಿಥ ।

ಸಃ । ಶೇವಽಧಿಂ । ನಿ । ದಧಿಷೇ । ವಿವಸ್ವತಿ । ವಿಶ್ವಸ್ಯ । ಏಕಃ । ಈಶಿಷೇ । ಸಃ । ಅಸಿ । ಉಕ್ಥ್ಯಃ ॥ ೬ ॥

ಸಾಯಣಭಾಷ್ಯಂ

ಹೇ ಇಂದ್ರ ಯಸ್ತ್ವಂ ಭೋಜನಂ । ಭುಜ್ಯತ ಇತಿ ಭೋಜನಮನ್ನಾದಿ । ಚ ದಯಸೇ । ಯಜಮಾನೇಭ್ಯಃ ಪ್ರಯಚ್ಛಸಿ ॥ ದಯ ದಾನಗತಿರಕ್ಷಣಹಿಂಸಾಗ್ರಹಣೇಷು ಆತ್ಮನೇಪದೀ ॥ ಕಿಂಚ ವರ್ಧನಂ ವೃದ್ಧಿಕರಂ ಧನಂ ಬಲಂ ವಾ ದಯಸೇ । ತಥಾದ್ರ್ರಾತ್ಕಾಂಡಾತ್ ಶುಷ್ಕಮನಾರ್ದ್ರಂ ವ್ರೀಹ್ಯಾದಿಕಂ ಮಧುಮತ್ ಮಧುರರಸೋಪೇತಂ ದುದೋಹಿಥ । ದುಗ್ಧವಾನಸಿ ॥ ದುಹೇರ್ಲಿಟಿ ಕ್ರಾದಿನಿಯಮಾದಿಡಾಗಮಃ ॥ ಸ ತಾದೃಶಸ್ತ್ವಂ ವಿವಸ್ವತಿ ತೇ ಪರಿಚರಣಂ ಕುರ್ವಾಣೇ ಯಜಮಾನೇ ಶೇವಧಿಂ ಧನಸದನಂ ನಿದಧಿಷೇ । ನಿದಧಾಸಿ । ಕಿಂ ಬಹುನಾ । ವಿಶ್ವಸ್ಯ ಸರ್ವಸ್ಯ ಜಗತ ಏಕೋಽದ್ವಿತೀಯ ಏವ ಸನ್ ಈಶಿಷೇ । ಸ್ವಾಮೀ ಭವಸಿ ॥ ಈಶ ಐಶ್ವರ್ಯೇ । ಈಶಃ ಸ ಇತೀಡಾಗಮಃ ॥ ಸ ಇತ್ಯಾದಿ ಸಿದ್ಧಂ ॥

### ಪ್ರತಿಪದಾರ್ಥ

(**ಇಂದ್ರ**—ಎಲೈ ಇಂದ್ರನೇ) | **ಯಃ**—ಯಾವ ನೀನು | **ಭೋಜನಂ**—ಅನ್ನಾದಿಗಳನ್ನು | **ದಯಸೇ**—(ಯಜಮಾನಾದಿಗಳಿಗೆ) ಕೊಡುತ್ತೀಯೋ, | **ಚ**—ಮತ್ತು | **ವರ್ಧನಂ ಚ**—ವೃದ್ಧಿಕಾರಕಗಳಾದ ಧನವನ್ನೂ ಬಲವನ್ನೂ ಸಹ ಕೊಡುತ್ತೀಯೋ (ಹಾಗೆಯೇ) | **ಆರ್ದ್ರಾತ್** – ಹಸಿಯಾದ ಕಾಂಡದಿಂದ | **ಶುಷ್ಕಂ**—ಒಣಗಿದ ಧಾನ್ಯಾದಿಗಳನ್ನು | **ಮಧುಮತ್**—ಮಧುರವಾದ ರಸದಿಂದ ಕೂಡಿರುವಂತೆ | **ದುದೋಹಿಥ**—ಕರೆದಿರುವೆಯೋ | **ಸಃ**—ಅಂತಹ ನೀನು | **ವಿವಸ್ವತಿ**—ನಿನಗೆ ಉಪಚಾರವನ್ನು ಅರ್ಪಿಸುವ ಯಜಮಾನನಲ್ಲಿ | **ಶೇವಧಿಂ**—ಧನದ ನಿಕ್ಷೇಪವನ್ನು | **ನಿ ದಧಿಷೇ**—ಇಡುತ್ತೀಯೆ. (ಮತ್ತು) | **ವಿಶ್ವಸ್ಯ**—ಸಕಲ ಜಗತ್ತಿಗೂ | **ಏಕಃ**—ಅದ್ವಿತೀಯನಾದ| **ಈಶಿಷೇ**— ಪ್ರಭುವಾಗಿದ್ದೀಯೆ | **ಸಃ**—ಅಂತಹ ನೀನು| **ಉಕ್ಥ್ಯಃ ಅಸಿ**—ಪ್ರಶಸ್ಯನಾಗಿದ್ದೀಯೆ |

### ಭಾವಾರ್ಥ

ಎಲೈ ಇಂದ್ರನೇ, ಯಾವ ನೀನು ಯಜಮಾನಾದಿಗಳಿಗೆ ಅನ್ನಾದಿಗಳನ್ನೂ, ವೃದ್ಧಿಕಾರಕಗಳಾದ ಧನವನ್ನೂ ಬಲವನ್ನೂ ಸಹ ಕೊಡುತ್ತೀಯೋ ಹಾಗೆಯೇ ಹಸಿಯಾದ ಕಾಂಡದಿಂದ ಒಣಗಿದ ಧಾನ್ಯಗಳನ್ನು ಮಧುರವಾದ ರಸದಿಂದ ಕೂಡಿರುವಂತೆ ಕರೆದಿರುವೆಯೋ ಅಂತಹ ನೀನು ನಿನಗೆ ಉಪಚಾರವನ್ನು ಅರ್ಪಿಸುವ ಯಜಮಾನನಲ್ಲಿ ಧನದ ನಿಕ್ಷೇಪವನ್ನು ಇಡುತ್ತೀಯೆ. ನಿನು ಸಕಲಜಗತ್ತಿಗೂ ಅದ್ವಿತೀಯನಾದ ಪ್ರಭುವಾಗಿದ್ದೀಯೆ ಅಂತಹ ಶ್ರೇಷ್ಠನಾದ ನೀನು ಪ್ರಶಸ್ಯನಾಗಿದ್ದೀಯೆ.

### English Translation

(You are he) who bestow both food and increase, and milk the dry nutritious (grain) from out the humid stalk : he, who gives wealth to the worshipper, and are sole sovereign of the Universe; you are he, (Indra), who is to be praised.

### ವಿಶೇಷವಿಷಯಗಳು

**ಯೋ ಭೋಜನಂ ಚ ದಯಸೇ ಚ ವರ್ಧನಂ**—**ಭುಜ್ಯತ ಇತಿ ಭೋಜನಮನ್ನಾದಿ | ಯಸ್ತ್ವಂ ಭೋಜನಂ, ವರ್ಧನಂ ವೃದ್ಧಿಕರಂ ಧನಂ ಬಲಂ ವಾ ಯಜಮಾನೇಭ್ಯಃ ಪ್ರಯಚ್ಛಸಿ |** ಇಂದ್ರನಾದ ನೀನು ಯಜ್ಞಮಾಡುವ ಯಜಮಾನರಿಗೆ ಅಥವಾ ಸ್ತೋತ್ರಮಾಡುವ ಋತ್ವಿಜರಿಗೆ ಅನ್ನಾದ್ಯಾಹಾರವನ್ನೂ ವೃದ್ಧಿಯಾಗುವ ಧನ ಅಥವಾ ಬಲವನ್ನೂ ಕೊಡುತ್ತೀಯೆ ಎಂದಭಿಪ್ರಾಯವು.

**ಆರ್ದ್ರಾತ್ ಆ ಶುಷ್ಕಂ ಮಧುಮತ್ ದುದೋಹಿಥ**—**ತಥಾರ್ದ್ರಾತ್ಕಾಂಡಾತ್ ಶುಷ್ಕಮನಾರ್ದ್ರಂ ವ್ರೀಹ್ಯಾದಿಕಂ ಮಧುಮತ್ ಮಧುರರಸೋಪೇತಂ ದುದೋಹಿಥ ದುಗ್ಧವಾನಸಿ |** ಹಸಿಯಾದ ಕಾಂಡದಿಂದ ಚೆನ್ನಾಗಿ ಒಣಗಿರುವುದೂ ರುಚಿಕರವೂ ಆದ ವ್ರೀಹ್ಯಾದಿಧಾನ್ಯಗಳನ್ನೂ ಒದಗಿಸಿಕೊಡುವೆ ಎಂದು ಸಾಯಣರ ವಿವರಣೆಯು. ಈ ವಾಕ್ಯದಲ್ಲಿ ಧಾನ್ಯವನ್ನು ಸೂಚಿಸುವ ಪದಪ್ರಯೋಗವಿಲ್ಲ. ಆದರೂ ಭಾಷ್ಯಕಾರರು ಆ ಪದವನ್ನು ಅಧ್ಯಾಹಾರಮಾಡಿ ಅರ್ಥವಿವರಣೆ ಮಾಡಿರುವರು. ಅಥವಾ ಹಸಿಯಾದ ಸೋಮಲತೆಯಿಂದ ಮಧುರವಾದ ಸೋಮ

ರಸವನ್ನು ಉತ್ಪನ್ನಮಾಡುತ್ತೀಯೆ ಎಂದು ಋಷಿಯ ಆಶಯವಿರಬಹುದೇ ಎಂದರೆ ಆಗ ಶುಷ್ಕಂ ಎಂಬ ಶಬ್ದಕ್ಕೆ ಅರ್ಥ ವಿಲ್ಲದೆ ಹೋಗುವುದು. ಅಂತೂ ಈ ವಾಕ್ಯದ ಅರ್ಥವು ಸ್ಪಷ್ಟವಾಗಿಲ್ಲ.

ಶೇವಧಿಂ—ಶೇವಂ ಎಂಬ ಶಬ್ದವು ಸುಖನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೩) ಭಾಷ್ಯಕಾರರು ಶೇವಧಿಂ ಎಂಬ ಶಬ್ದಕ್ಕೆ ಧನಸದನಂ ನಿಧಿಯನ್ನು ಎಂದರೆ ಅಪಾರವಾದ ದ್ರವ್ಯರಾಶಿಯನ್ನು ಎಂದರ್ಥಮಾಡಿದ್ದಾರೆ. ಧನದಿಂದ ಸುಖವು ಲಭಿಸುವುದರಿಂದ ಈ ಅರ್ಥವನ್ನೂ ಹೇಳಬಹುದು.

ವಿಶ್ವಸ್ಯ ಏಕ ಈಶಿಷೇ—ಸರ್ವಸ್ಯ ಜಗತ ಏಕೋಽದ್ವಿತೀಯ ಏವ ಸನ್ ಈಶಿಷೇ ಸ್ವಾಮೀ ಭವಸಿ। ಸಮಸ್ತಪ್ರಪಂಚಕ್ಕೂ ನೀನೊಬ್ಬನೇ ಪ್ರಭುವಾಗಿದ್ದೀಯೆ. ನಿನಗೆ ಸಮಾನನಾದವನು ಬೇರೊಬ್ಬನಿಲ್ಲ. ಎಲ್ಲಕ್ಕೂ ನೀನೇ ಸ್ವಾಮಿಯು ಎಂದು ಇಂದ್ರನ ಮಹತ್ತ್ವವನ್ನು ವರ್ಣಿಸಿದೆ.

---

ಸಂಹಿತಾಪಾಠಃ

ಯಃ ಪುಷ್ಪಿಣೀಶ್ಚ ಪ್ರಸ್ವಶ್ಚ ಧರ್ಮಣಾಧಿ ದಾನೇ ವ್ಯವನೀರಧಾರಯಃ ।
ಯಶ್ಚಾಸಮಾ ಅಜನೋ ದಿದ್ಯುತೋ ದಿವ ಉರುರೂರ್ವಾँ ಅಭಿತಃ ಸಾಸ್ಯುಕ್ಥ್ಯಃ ॥

ಪದಪಾಠಃ

ಯಃ । ಪುಷ್ಪಿಣೀಃ । ಚ । ಪ್ರಽಸ್ವಃ । ಚ । ಧರ್ಮಣಾ । ಅಧಿ । ದಾನೇ । ವಿ । ಅವನೀಃ । ಅಧಾರಯಃ ।
ಯಃ । ಚ । ಅಸಮಾಃ । ಅಜನಃ । ದಿದ್ಯುತಃ । ದಿವಃ । ಉರುಃ । ಊರ್ವಾನ್ । ಅಭಿತಃ । ಸಃ । ಅಸಿ । ಉಕ್ಥ್ಯಃ ॥ ೭ ॥

ಸಾಯಣಭಾಷ್ಯಂ

ಹೇ ಇಂದ್ರ ಯಸ್ತ್ವಂ ಪುಷ್ಪಿಣೀಃ ಪುಷ್ಪವತೀಶ್ಚ ಪ್ರಸ್ವಃ ಪ್ರಸೂತಾಃ ಪ್ರಸೂಯಮಾನಾ ವಾವನೀರವಿತ್ರೀರೋಷಧೀರ್ದಾನೇಽಧಿ ॥ ಉಪಲೂಯಂತೇ ಸಸ್ಯಾನ್ಯತ್ರೇತಿ ದಾನಂ ಕ್ಷೇತ್ರಂ । ಅಧಿಕರಣೇ ಲ್ಯುಟ್ ॥ ತಸ್ಮಿನ್ ಕ್ಷೇತ್ರೇ ಧರ್ಮಣಾ ಸಕಲಲಕ್ಷಣೇನ ಕರ್ಮಣಾ ವ್ಯಧಾರಯಃ । ನ್ಯದಧಾಃ । ಯಶ್ಚ ತ್ವಂ ದಿವೋ ದ್ಯೋತಮಾನಸ್ಯ ಸೂರ್ಯಸ್ಯಾಸಮಾ ವಿಷಮಾ ನಾನಾಪ್ರಕಾರಾ ದಿದ್ಯುತೋ ದೀಪ್ತೀರಜನಃ । ಅಜನಯಃ । ಯದ್ವಾ ದಿವೋ ನಕ್ಷತ್ರಾಣಿ ॥ ಜನೇರ್ಲಙಿ ವ್ಯತ್ಯಯೇನ ಶಪ್ ॥ ಯಶ್ಚೋರುರ್ಮಹಾಂಸ್ತ್ವಮಭಿತಃ ಸರ್ವತ ಊರ್ವಾನ್ ಮಹತಃ ಪ್ರಾಣಿನಿಕಾಯಾನ್ ಪರ್ವತಾನ್ವಾಜನಯಃ ಶಿಷ್ಟಂ ಸ್ಪಷ್ಟಂ ॥

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । ಯಃ—ಯಾವ ನೀನು । ಪುಷ್ಪಿಣೀಃ—ಪುಷ್ಪಗಳಿಂದ ಕೂಡಿದವೂ । ಚ—ಮತ್ತು । ಪ್ರಸ್ವಃ—ಫಲಗಳನ್ನು ಕೊಡತಕ್ಕದ್ದೂ ಆದ । ಅವನೀಃ—ಓಷಧಿಗಳನ್ನು । ದಾನೇ ಅಧಿ—ಕ್ಷೇತ್ರದಲ್ಲಿ ।

**ಧರ್ಮಣಾ**—ಸಕಲಲಕ್ಷಣೋಪೇತವಾದ ಕರ್ಮದಿಂದ । **ವಿ ಅಧಾರಯಃ**—ಸ್ಥಾಪಿಸಿರುವೆಯೋ । **ಚ**—ಅಲ್ಲದೇ । **ಯಃ**—ಯಾವ ನೀನು । **ದಿವಃ**—ಪ್ರಕಾಶಮಾನನಾದ ಸೂರ್ಯನ । **ಅಸಮಾಃ**—ನಾನಾಪ್ರಕಾರಗಳಾದ । **ದಿದ್ಯುತಃ**—ಕಾಂತಿಗಳನ್ನು । **ಅಜನಃ**—ಸೃಷ್ಟಿಸಿದೆಯೋ (ಮತ್ತು) । **ಉರುಃ**—ಮಹತ್ತಾದ ದೇಹವುಳ್ಳವನಾಗಿ । **ಅಭಿತಃ**—ಸುತ್ತಲೂ । **ಊರ್ವಾನ್**—ಮಹತ್ತಾದ ಪ್ರಾಣಿಸಮೂಹಗಳನ್ನೂ ಸೃಷ್ಟಿಸಿದೆಯೋ । **ಸಃ**—ಅಂತಹ ನೀನು । **ಉಕ್ಥ್ಯಃ ಅಸಿ**—ಪ್ರಶಸ್ಯನಾಗಿದ್ದೀಯೆ.

ಭಾವಾರ್ಥ

ಎಲೈ ಇಂದ್ರನೇ, ಯಾವ ನೀನು ಪುಷ್ಪಗಳಿಂದ ಕೂಡಿದವೂ, ಫಲಗಳನ್ನು ಕೊಡತಕ್ಕವೂ ಆದ ಓಷಧಿಗಳನ್ನು ಸಕಲಲಕ್ಷಣೋಪೇತವಾದ ಕರ್ಮದಿಂದ ಕ್ಷೇತ್ರದಲ್ಲಿ ಸ್ಥಾಪಿಸಿರುವೆಯೋ, ಅಲ್ಲದೇ, ಯಾವ ನೀನು ಪ್ರಕಾಶಮಾನನಾದ ಸೂರ್ಯನ ನಾನಾಪ್ರಕಾರಗಳಾದ ಕಾಂತಿಗಳನ್ನು (ಹಾಗೆಯೇ ನಕ್ಷತ್ರಗಳನ್ನೂ) ಸೃಷ್ಟಿಸಿದೆಯೋ ಮತ್ತು ಮಹತ್ತಾದ ದೇಹವುಳ್ಳವನಾಗಿ ಮಹತ್ತಾದ ಪ್ರಾಣಿಸಮೂಹಗಳನ್ನೂ ಸೃಷ್ಟಿಸಿದೆಯೋ ಅಂತಹ ನೀನು ಪ್ರಶಸ್ಯನಾಗಿದ್ದೀಯೆ.

English Translation

You have caused, by culture, the flowering and fruitful (plants) to spread over the field; you have generated the varions luminaries of heaven; and who, of vast bulk, comprehend vast (bodies); yon are he who is to be praised.

ವಿಶೇಷವಿಷಯಗಳು.

**ಯಃ ಪುಷ್ಪಿಣೀಃ ಚ ಪ್ರಸ್ವಃ ಚ ಧರ್ಮಣಾ ಅಧಿ ದಾನೇ ವಿ ಅವನೀಃ ಅಧಾರಯಃ—ಪುಷ್ಪವತೀಶ್ಚ ಪ್ರಸೂಯಮಾನಾ ಅವನೀರವಿತ್ರೀರೋಷಧೀರ್ದಾನೇ ಕ್ಷೇತ್ರೇ ಸಕಲಲಕ್ಷಣೇನ ಕರ್ಮಣಾ ನ್ಯದಧಾಃ** । ಈ ವಾಕ್ಯದಲ್ಲಿ ಭಾಷ್ಯಕಾರರು ದಾನ ಶಬ್ದಕ್ಕೆ ಕ್ಷೇತ್ರವೆಂದೂ (ಭೂಮಿ, ಹೊಲ) **ಅವನೀಃ** ಎಂದರೆ ಓಷಧಿಗಳೆಂದೂ (ವ್ರೀಹ್ಯಾದಿ ಸಸ್ಯಗಳು) **ಧರ್ಮಣಾ** ಎಂಬ ಶಬ್ದಕ್ಕೆ ಸಕಲಲಕ್ಷಣಯುಕ್ತವಾದ ಕರ್ಮದಿಂದ ಎಂದೂ ಅರ್ಥಮಾಡಿರುವರು. ಈ ಅರ್ಥಗಳನ್ನು ಸ್ವೀಕರಿಸುವುದಾದರೆ ಈ ವಾಕ್ಯಕ್ಕೆ—ಎಲೈ ಇಂದ್ರನೇ, ನೀನು ಹೊಲ ಗದ್ದೆ ಮೊದಲಾದ ಕ್ಷೇತ್ರಗಳಲ್ಲಿ ಬೆಳೆಯುವ ಸಸ್ಯಾದಿಗಳು ಯಾವ ಯಾವ ಕಾಲಗಳಲ್ಲಿ ಯಾವ ಯಾವ ರೀತಿ ಬೆಳೆದು ವೃದ್ಧಿಯಾಗಬೇಕೋ ಎಂದರೆ ಮೊದಲು ಹೂವು ಬಿಟ್ಟು ಅನಂತರ ಫಲಯುಕ್ತವಾಗಿ ಆಗುವ ಹಾಗೆ ಸ್ವಾಭಾವಿಕವಾದ ವಿಶ್ವನಿಯಮಗಳನ್ನು ಉಂಟುಮಾಡಿರುವೆ. ಎಂದರೆ ನಿನ್ನ ನಿಯಮನಕ್ಕೆ ಒಳಪಟ್ಟು ಸಸ್ಯಾದಿಗಳೂ, ವೃಕ್ಷಲತಾದಿಗಳೂ ಆಯಾ ಕಾಲಕ್ಕೆತಕ್ಕಂತೆ ಹೂವು ಬಿಡುವುದು, ಫಲಿಸುವುದು ಮೊದಲಾದ ಕಾರ್ಯಗಳನ್ನು ತಪ್ಪದೆ ನಡೆಸುತ್ತಾ ಬರುವುವು ಎಂದು ಮುಖ್ಯಾಭಿಪ್ರಾಯವು

**ಯಃ ಚ ಅಸಮಾಃ ಅಜನಃ ದಿದ್ಯುತಃ ದಿವಃ ಉರುಃ ಊರ್ವಾನ್ ಅಭಿತಃ**—ಈ ವಾಕ್ಯದಲ್ಲಿಯೂ ಸಹ ಕೆಲವು ಶಬ್ದಗಳಿಗೆ ಊಹೆಮಾಡಿ ಅರ್ಥವನ್ನು ಹೇಳಬೇಕಾಗಿರುವುದು. ಸೂರ್ಯನ ನಾನಾಪ್ರಕಾರವಾದ ಕಾಂತಿ

ಗಳನ್ನೂ ಎಂದರೆ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ಕಂಡು ಬರುವ ಪ್ರಕಾಶವ್ಯತ್ಯಾಸಗಳನ್ನೂ, ಎಲ್ಲೆಲ್ಲಿಯೂ ಕಂಡುಬರುವ ದೊಡ್ಡ ದೊಡ್ಡ ವೃಕ್ಷಗಳು, ಪ್ರಾಣಿಗಳು, ಪರ್ವತಗಳು, ನದಿಗಳು ಮೊದಲಾದುವುಗಳನ್ನೂ ಸೃಷ್ಟಿಮಾಡಿದ್ದೀಯೆ ಎಂದು ಇಂದ್ರನನ್ನು ಸಂಬೋಧಿಸಿ ವರ್ಣಿಸಲಾಗಿದೆ.

---

ಸಂಹಿತಾಪಾಠಃ

ಯೋ ನಾರ್ಮರಂ ಸಹವಸುಂ ನಿಹಂತವೇ ಪೃಕ್ಷಾಯ ಚ ದಾಸವೇಶಾಯ ಚಾವಹಃ ।
ಊರ್ಜಯಂತ್ಯಾ ಅಪರಿವಿಷ್ಟಮಾಸ್ಯಮುತೈವಾದ್ಯ ಪುರುಕೃತ್ಸಾಸ್ಯುಕ್ಥ್ಯಃ ॥ ೮ ॥

ಪದಪಾಠಃ

ಯಃ । ನಾರ್ಮರಂ । ಸಹಽವಸುಂ । ನಿಽಹಂತವೇ । ಪೃಕ್ಷಾಯ । ಚ । ದಾಸಽವೇಶಾಯ । ಚ । ಆವಹಃ । ಊರ್ಜಯಂತ್ಯಾಃ । ಅಪರಿಽವಿಷ್ಟಂ । ಆಸ್ಯಂ । ಉತ । ಏವ । ಅದ್ಯ । ಪುರುಽಕೃತ್ । ಸಃ । ಅಸಿ । ಉಕ್ಥ್ಯಃ ॥ ೮ ॥

ಸಾಯಣಭಾಷ್ಯಂ

ಪುರುಕೃತ್ ಪುರೂಣಾಂ ಕರ್ಮಣಾಂ ಕರ್ತಾ ಹೇ ಇಂದ್ರ ಯಸ್ತ್ವಂ ನಾರ್ಮರಂ । ನ್ಯನ್ ಮನುಷ್ಯಾನ್ಮಾರಯತೀತಿ ನೃಮರಃ ಕಶ್ಚಿದಸುರಃ । ತಸ್ಯಾಪತ್ಯಂ ನಾರ್ಮರಃ । ತಂ ಸಹವಸುಂ । ವಸುನಾ ಸಹ ವರ್ತತ ಇತಿ ಸಹವಸುಃ । ಅಸುರನಾಮೈತತ್ । ಏತನ್ನಾಮಕಮಸುರಂ ನಿಹಂತವೇ ॥ ಹಂತೇಸ್ತುಮರ್ಥೇ ತವೇನ್ಪ್ರತ್ಯಯಃ । ತಾದೌ ಚ ನಿತೀತಿ ಗತೇಃ ಪ್ರಕೃತಿಸ್ವರತ್ವಂ ॥ ನಿಹಂತುಂ ಊರ್ಜಯಂತ್ಯಾ ಬಲವತ್ಯಾ ವಜ್ರಧಾರಾಯಾ ಅಪರಿವಿಷ್ಟಂ ಮಲಾದಿಭಿರವ್ಯಾಪ್ತಮಾಸ್ಯಮುದ್ಯೈವಾವಹಃ । ತಮಸುರಂ ಪ್ರಾಪಯಃ । ಯದ್ವಾ ಊರ್ಜಯಂತ್ಯಾಃ ಪಿಶಾಚಿಕಾಯಾ ಆಸ್ಯಂ ಪ್ರಾಪಯಃ । ಕಿಮರ್ಥಂ । ಪೃಕ್ಷಾಯ । ತವ ಹವಿರ್ಲಕ್ಷಣಾನ್ನಲಾಭಾಯ । ದಾಸವೇಶಾಯ ದಾಸಾನಾಂ ದಸ್ಯೂನಾಂ ವೇಶಾಯ ವಿನಾಶಾಯ ಚ । ಯದ್ವಾ ಅಸ್ಮಾಕಮನ್ನಲಾಭಾಯ ದಸ್ಯುವಿನಾಶಾಯ ಚ ॥

ಪ್ರತಿಪದಾರ್ಥ

ಪುರುಕೃತ್—ಅಸಾಧಾರಣವೂ, ಅನೇಕವೂ ಆದ ಕರ್ಮಗಳನ್ನು ಮಾಡಿರುವ ಎಲೈ ಇಂದ್ರನೇ । ಯಃ—ಯಾವ ನೀನು । ಪೃಕ್ಷಾಯ—ಹವಿಸ್ಸಿನ ರೂಪದ ಅನ್ನದ ಲಾಭಕ್ಕಾಗಿಯೂ । ದಾಸವೇಶಾಯ ಚ—ದಸ್ಯುಗಳ ನಾಶಕ್ಕಾಗಿಯೂ ಸಹ । ನಾರ್ಮರಂ—ನೃಮರನ ಪುತ್ರನೂ । ಸಹವಸುಂ—ಸಹವಸುವೆಂಬ ಹೆಸರುಳ್ಳವನೂ ಆದ

ಅಸುರಪುತ್ರನನ್ನು । ನಿಹಂತವೇ—ಕೊಲ್ಲುವುದಕ್ಕಾಗಿ । ಊರ್ಜಯಂತ್ಯಾಃ—ಬಲಶಾಲಿಯಾದ ವಜ್ರಧಾರಾ ರೂಪಿಯಾವದ್ದೂ । ಅಪರಿವಿಷ್ಟಂ—ಮಲರಹಿತವಾದದ್ದೂ ಆದ । ಆಸ್ಯಂ—ಮುಖವನ್ನು । ಅದ್ಯ ಏವ—ಒಡನೆಯೇ । ಅವಹಃ—ವಹಿಸಿದೆಯೋ । ಸಃ—ಅಂತಹ ನೀನು । ಉಕ್ಥ್ಯಃ—ಸ್ತೋತ್ರಾರ್ಹನು । ಅಸಿ—ಆಗಿದ್ದೀಯೆ.

ಭಾವಾರ್ಥ

ಅಸಾಧಾರಣವಾದ ಅನೇಕ ಕರ್ಮಗಳನ್ನು ಮಾಡಿರುವ ಎಲೈ ಇಂದ್ರನೇ, ಯಾವ ನೀನು ಅನ್ನದ ಲಾಭಕ್ಕಾಗಿಯೂ, ದಸ್ಯುಗಳ ನಾಶಕ್ಕಾಗಿಯೂ ನೃಮರಪುತ್ರನಾದ ಸಹವಸುವನ್ನು ಕೊಲ್ಲಲು ವಜ್ರದ ಧಾರಾರೂಪಿಯಾದದ್ದೂ, ಮಲರಹಿತವಾದದ್ದೂ ಆದ ಮುಖವನ್ನು ಒಡನೆಯೇ ವಹಿಸಿದೆಯೋ ಅಂತಹ ನೀನು ಸ್ತೋತ್ರಾರ್ಹನಾಗಿದ್ದೀಯೆ.

English Translation

You, who are (famed for) many exploits, put on to-day an unclouded countenance, (as prepared) to slay Sahavasu, the son of Nrimara, with the sharpened (edge of the thunderbolt), in defence of the (sacrificial) food, and for the destruction of the Dasyus; you are he who is to be praised.

ವಿಶೇಷವಿಷಯಗಳು

**ನಾರ್ಮರಂ—ನೄನ್ ಮನುಷ್ಯಾನ್ ಮಾರಯತೀತಿ ನೃಮರಃ ಕಶ್ಚಿದಸುರಃ**—ಒಬ್ಬ ಅಸುರನ ಹೆಸರು. ಮನುಷ್ಯರನ್ನು ಕೊಲ್ಲುವವನಾದ್ದರಿಂದ ಇವನನ್ನು ನೃಮರ ಎಂಬ ಹೆಸರಿನಿಂದಲೇ ಕರೆಯುವ ರೂಢಿಯು. ಈ ನೃಮರನ ಮಗನಿಗೆ ನಾರ್ಮರನೆಂದು ಹೇಳುವರು. ಈ ಶಬ್ದವು ಋಗ್ವೇದದಲ್ಲಿ ಪ್ರಕೃತಋಕ್ಕಿನಲ್ಲಿ ಮಾತ್ರ ಇರುವುದು. ಮತ್ತೆಲ್ಲಿಯೂ ಇರುವುದಿಲ್ಲವಾದ್ದರಿಂದ ಇವನ ವಿಷಯವಾಗಿ ಹೆಚ್ಚಾಗಿ ಏನನ್ನೂ ಹೇಳಲು ಸಾಧ್ಯವಿಲ್ಲ. Ludwig ಎಂಬ ಪಂಡಿತನು—ಈ ಋಕ್ಕಿನಲ್ಲಿರುವ **ಊರ್ಜಯಂತೀ** ಎಂಬ ಶಬ್ದಕ್ಕೆ ಬಲವಾದ ಕೋಟೆಯೆಂದೂ ಆ ಕೋಟೆ ಅಥವಾ ದುರ್ಗಕ್ಕೆ ನಾರ್ಮರನೆಂಬುವನು ಅಧಿಪತಿಯಾದ ರಾಜನೆಂದೂ ಅಭಿಪ್ರಾಯಪಡುವನು. ಆದರೆ ಈ ಅಭಿಪ್ರಾಯಕ್ಕೆ ತಕ್ಕ ಸಮರ್ಥನೆ ಇಲ್ಲ

**ಸಹವಸುಂ**—ನೃಮರ ಎಂಬ ಹೆಸರಿನ ಅಸುರನ ಪುತ್ರನು. ಇವನ ವಿಷಯವೂ ಹೆಚ್ಚಾಗಿ ತಿಳಿಯದು. ಭಾಷ್ಯಕಾರರು ಈ ಶಬ್ದದ ಅವಯವಾರ್ಥವನ್ನು ಹೇಳಿ **ವಸುನಾ ಸಹ ವರ್ತತ ಇತಿ ಸಹವಸುಃ**—ಬಹಳ ಧನಯುಕ್ತನಾದ ಸಹವಸುವೆಂಬ ಅಸುರನು ಎಂದು ಅರ್ಥವಿವರಣೆಮಾಡಿದಾರೆ.

**ದಾಸವೇಶಾಯ—ದಾಸಾನಾಂ ದಸ್ಯೂನಾಂ ವೇಶಾಯ ವಿನಾಶಾಯ** । ದುಷ್ಟರಾದ ದಸ್ಯುಜನರನ್ನು ನಾಶಮಾಡುವುದಕ್ಕಾಗಿ.

**ಪೃಕ್ಷಾಯ**—ಪೃಕ್ಷಶಬ್ದವು ಅನ್ನನಾಮುಗಳಲ್ಲಿ ಪಠಿತವಾಗಿದೆ. (ನಿ. ೩-೯) **ತವ ಹವಿರ್ಲಕ್ಷಣಾನ್ನಲಾಭಾಯ ಅಥವಾ ಅಸ್ಮಾಕಮನ್ನಲಾಭಾಯ** । ನಿನಗೆ ನಾವು ಅರ್ಪಿಸುವ ಹವಿರ್ಲಕ್ಷಣಾನ್ನಪ್ರಾಪ್ತಿಗಾಗಿ ಅಥವಾ ನಮಗೆ ನೀನು ಕೊಡುವ ಅನ್ನಕ್ಕಾಗಿ ಎಂದು ಎರಡು ವಿಧವಾದ ಅರ್ಥವನ್ನು ಹೇಳಿರುವರು.

ಊರ್ಜಯೆಂತ್ಯಾಃ ಅಪರಿವಿಷ್ಟಂ ಆಸ್ಯಂ ಉತೆ ಏವ ಅದ್ಯ—ಈ ವಾಕ್ಯದಲ್ಲಿರುವ ಅಪರಿವಿಷ್ಟಂ ಎಂಬ ಶಬ್ದಕ್ಕೆ ಮಲಾದಿಭಿರವ್ಯಾಪ್ತಂ—ಕೊಳಕಿಲ್ಲದ, ಶುಭ್ರವಾದ ಎಂದು ಅರ್ಥವನ್ನು ಹೇಳಿರುವರು. ಈ ವಾಕ್ಯದ ಸರಿಯಾದ ಅರ್ಥವೇನು ? ಋಷಿಯ ಅಭಿಪ್ರಾಯವೇನು ಎಂಬುವುದು ಸ್ಪಷ್ಟವಾಗಿಲ್ಲ. ಪ್ರಾಯಶಃ ಇಂದ್ರನು ನೃಮರಪುತ್ರನಾದ ಸಹವಸುವೆಂಬ ಅಸುರನನ್ನು ಸಂಹಾರಮಾಡಲು ತೇಜೋಯುಕ್ತವೂ, ಶಕ್ತಿಯುತವೂ ಆದ ರೂಪವನ್ನು (ಆಕಾರವನ್ನು) ಧರಿಸಿ ಆ ಅಸುರನನ್ನು ಸಂಹಾರಮಾಡಿದನು ಎಂದಭಿಪ್ರಾಯವಿರ ಬಹುದು.

---

ಸಂಹಿತಾಪಾಠಃ

ಶತಂ ವಾ ಯಸ್ಯ ದಶ ಸಾಕಮಾದ್ಯ ಏಕಸ್ಯ ಶ್ರುಷ್ಟೌ ಯದ್ಧ ಚೋದಮಾವಿಥ ।
ಅರಜ್ಜೌ ದಸ್ಯೂನ್ತ್ಸಮುನಬ್ದಭೀತಯೇ ಸುಪ್ರಾವ್ಯೋ ಅಭವಃ ಸಾಸ್ಯುಕ್ಥ್ಯಃ ॥೯॥

ಪದಪಾಠಃ

ಶತಂ । ವಾ । ಯಸ್ಯ । ದಶ । ಸಾಕಂ । ಆ । ಅದ್ಯಃ । ಏಕಸ್ಯ । ಶ್ರುಷ್ಟೌ । ಯತ್ । ಹ । ಚೋದಂ । ಆವಿಥ ।

ಅರಜ್ಜೌ । ದಸ್ಯೂನ್ । ಸಂ । ಉನಪ್ । ದಭೀತಯೇ । ಸುಪ್ರಽಅವ್ಯಃ । ಅಭವಃ । ಸಃ । ಅಸಿ । ಉಕ್ಥ್ಯಃ ॥ ೯ ॥

ಸಾಯಣಭಾಷ್ಯಂ

ಹೇ ಇಂದ್ರ ಏಕಸ್ಯೈಕಾಕಿನಃ ಶ್ರೇಷ್ಠಸ್ಯ ವಾ ಯಸ್ಯ ತೇ ಶ್ರುಷ್ಟೌ ಸುಖನಿಮಿತ್ತೇ ಸೆದರ್ಥಂ ಶತಂ ದಶ ದಶ ಶತಾನಿ ಹರಯೋ ವಾಹನಾರ್ಥಂ ಭವಂತಿ । ತಥಾ ಚ ಮಂತ್ರವರ್ಣಃ । ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ । ೬-೪೭-೧೮ । ಇತಿ । ಅಪಿ ಚ ಯಶ್ಚ ಆ ಅದ್ಯಃ ಸರ್ವೇಷಾಂ ಸರ್ವತ ಉಪಜೀವ್ಯಃ। ನ ತಸ್ಯೇಶೇ ಯಂ ನಾದ್ಯಾದ್ಯದ್ವೈನಂ ನಾದ್ಯುರಿತಿ ಹಿ ಶ್ರುತಿಃ । ಯದ್ಧ ಯಶ್ಚ ತ್ವಂ ಚೋದಂ ಸ್ತೋತ್ರಾಣಾಂ ಪ್ರೇರಕಂ ಯಜಮಾನಮಾವಿಥ । ರಕ್ಷಿತವಾನಸಿ । ಕಿಂಚ ಯಸ್ತ್ವಮರಜ್ಜೌ ರಜ್ಜುವರ್ಜಿತೇ ಬಂಧನಾಗಾರೇ ದಸ್ಯೂನುಪಕ್ಷಪಯಿತ್ವಾನ್ ದಭೀತಯೇ । ದಭೀತಿ-ರ್ನಾಮ ಕಶ್ಚಿದೃಷಿಃ । ತದರ್ಥಂ ಸಮುನಪ್ । ಹಿಂಸಿತವಾನಸಿ ॥ ಉಭತೇರ್ಹಿಂಸಾಕರ್ಮಣೋ ಲಙಿ ವ್ಯತ್ಯಯೇನ ಶ್ನಮ್ । ಹಲ್ಙ್ಯಾದಿನಾ ಸಿಪೋ ಲೋಪಃ । ಅಡಭಾವಶ್ಛಾಂದಸಃ ॥ ಕಿಂಚ ಸುಪ್ರಾವ್ಯಃ ಸುಖೇನ ಸರ್ವೈರುಪಸರ್ಪಣೀಯೋಽಭವಃ । ಶಿಷ್ಟಂ ಸಿದ್ಧಂ ॥

ಪ್ರತಿಪದಾರ್ಥ

**(ಇಂದ್ರ**—ಎಲೈ ಇಂದ್ರನೇ) **ಏಕಸ್ಯ**—ಶ್ರೇಷ್ಠನಾದ । **ಯಸ್ಯ**—ಯಾವ ನಿನ್ನ । **ಶ್ರುಷ್ಟೌ**—ಸುಖಾರ್ಥವಾಗಿ । **ಶತಂ ದಶ**—ಹತ್ತುನೂರು (ಸಾವಿರಸಂಖ್ಯಾಕವಾದ) ಅಶ್ವಗಳು ಸಿದ್ಧವಾಗಿವೆಯೋ (ಯಾವ ನೀನು) । **ಸಾಕಂ**—ಒಟ್ಟಿಗೆ । **ಆ ಅದ್ಯಃ**—ಎಲ್ಲರಿಗೂ ಅನ್ನವನ್ನು ಒದಗಿಸುವವನಾಗಿದ್ದೀಯೋ । **ಯದ್ಧ**—ಯಾವ ನೀನು । **ಚೋದಂ**—ಸ್ತೋತೃಗಳಿಗೆ ಪ್ರೇರಕನಾದ ಯಜಮಾನನನ್ನು । **ಆವಿಥ**—ರಕ್ಷಿಸಿದ್ದೀಯೋ । (**ಯಃ**—ಯಾವ ನೀನು) **ದಭೀತಯೇ**—ದಭೀತಿಋಷಿಗೆ ಸಹಾಯವನ್ನುಮಾಡಲು । **ದಸ್ಯೂನ್**—ಹಿಂಸಕರಾದ ಅಸುರರನ್ನು । **ಅರಜ್ಜೌ**—ರಜ್ಜುರಹಿತವಾದ ಬಂಧನಾಗಾರದಲ್ಲಿ । **ಸಮುನಪ್**—ಇರಿಸಿ ಹಿಂಸಿಸಿದೆಯೋ । (ಮತ್ತು) **ಸುಪ್ರಾವ್ಯಃ**—ಎಲ್ಲರಿಂದಲೂ ಸುಖವಾಗಿ ಸಮೀಪಿಸಲ್ಪಡುವವನಾಗಿ । **ಅಭವಃ**—ಆಗಿದ್ದೀಯೋ । **ಸಃ**—ಅಂತಹ ನೀನು । **ಉಕ್ಥ್ಯಃ ಅಸಿ**—ಪ್ರಶಸ್ಯನಾಗಿದ್ದೀಯೆ.

ಭಾವಾರ್ಥ

ಎಲೈ ಇಂದ್ರನೇ, ಶ್ರೇಷ್ಠನಾದ ಯಾವ ನಿನ್ನ ಸುಖಾರ್ಥವಾಗಿ ಸಾವಿರ ಅಶ್ವಗಳು ಸಿದ್ಧವಾಗಿವೆಯೋ, ಯಾವ ನೀನು ಎಲ್ಲರಿಗೂ ಅನ್ನವನ್ನು ಒದಗಿಸುತ್ತಾ ಸ್ತೋತೃಗಳಿಗೆ ಪ್ರೇರಕನಾದ ಯಜಮಾನನನ್ನು ರಕ್ಷಿಸಿದ್ದೀಯೋ, ಮತ್ತು ಯಾವ ನೀನು ದಭೀತಿ ಋಷಿಗೆ ಸಹಾಯವನ್ನು ಮಾಡಲು ಹಿಂಸಕರಾದ ಅಸುರರನ್ನು ರಜ್ಜುರಹಿತವಾದ ಬಂಧನಾಗಾರದಲ್ಲಿರಿಸಿ ಹಿಂಸಿಸಿದೆಯೋ ಆದುದರಿಂದಲೇ ಎಲ್ಲರಿಂದಲೂ ಸುಖವಾಗಿ ಸಮೀಪಿಸಲ್ಪಡುವವನಾಗಿ ಆಗಿದ್ದೀಯೋ ಅಂತಹ ನೀನು ಅತ್ಯಂತ ಪ್ರಶಸ್ಯನಾಗಿದ್ದೀಯೆ.

English Translation

You, for whose sole pleasure a thousand (steeds are ready); by whom all are to be fed; and who protect the institutor (of the sacrifice); who, for the sake of Dabhiti, have cast the Dasyus into unfettered (captivity), and who are to be approached (by all); you are he who is to be praised.

ವಿಶೇಷವಿಷಯಗಳು

**ಶತಂ ವಾ ಯಸ್ಯ ದಶ ಸಾಕಂ ಆ ಅದ್ಯಃ ಏಕಸ್ಯ ಶ್ರುಷ್ಟೌ**—ಇಲ್ಲಿ ಏಕಸ್ಯ ಎಂಬ ಶಬ್ದಕ್ಕೆ **ಏಕಾಕಿನಃ ಶ್ರೇಷ್ಠಸ್ಯ ವಾ**—ಒಬ್ಬನಾದ ನಿನಗೆ, ನಿನಗೊಬ್ಬನಿಗೆ ಅಥವಾ ಶ್ರೇಷ್ಠನಾದ ನಿನಗೆ ಎಂದರ್ಥವು; ಎಲೈ ಇಂದ್ರನೇ, ಶ್ರೇಷ್ಠನಾದ ನಿನಗೆ ಅಥವಾ ನಿನಗೊಬ್ಬನಿಗೆ ಹತ್ತುನೂರು ಎಂದರೆ ಸಾವಿರ ಕುದುರೆಗಳು ವಾಹನಾರ್ಥವಾಗಿ ಸಿದ್ಧವಾಗಿವೆ. ಇದೇ ಅಭಿಪ್ರಾಯವು—

**ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ ।**
(ಋ. ಸಂ. ೬-೪೭-೧೮)

ಎಂಬ ಋಕ್ಕಿನಲ್ಲಿಯೂ ವ್ಯಕ್ತವಾಗಿದೆ. ಇಂದ್ರನು ಅಸುರರೊಡನೆ ಯುದ್ಧಮಾಡುವಾಗ ಅನೇಕ ಮಾಯಾರೂಪಗಳನ್ನು ಧರಿಸಿ ಸಾವಿರಾರು ಕುದುರೆಗಳನ್ನು ವಾಹನಾರ್ಥವಾಗಿ ಉಪಯೋಗಿಸುವನು ಎಂದು ಹೇಳಿದೆ. ಇಲ್ಲಿ

ಸಾವಿರವೆಂದರೆ ಒಂದು ಸಹಸ್ರ ಅಥವಾ ಅನೇಕ ಎಂದು ಅರ್ಥವಾಗಬಹುದು. ಒಬ್ಬ ಇಂದ್ರನಿಗೇ ಅನೇಕವಾದ ಇಷ್ಟು ಕುದುರೆಗಳು ಸಿದ್ಧವಾಗಿದೆ ಎಂದು ಋಷಿಯು ಇಂದ್ರನ ವೈಶಿಷ್ಟ್ಯವನ್ನು ವರ್ಣಿಸಿದಾನೆ.

**ಶ್ರುಷ್ಟೌ—ಶ್ರುಷ್ಟೀ ಎಂಬ ಶಬ್ದಕ್ಕೆ—ಶ್ರುಷ್ಟೀತಿ ಕ್ಷಿಪ್ರನಾಮ ಆಶು ಅಷ್ಟೀತಿ ।** ಶ್ರುಷ್ಟೀ ಎಂದರೆ ಬೇಗನೆ ಅಥವಾ ಬೇಗನೆ ವ್ಯಾಪಿಸಿರುವುದು ಎಂದು ಯಾಸ್ಕರು ಅರ್ಥವಿವರಣೆಮಾಡಿದ್ದಾರೆ. (ನಿ. ೬-೧೩) ಆದರೆ ಇಲ್ಲಿ ಭಾಷ್ಯಕಾರರು ಶ್ರುಷ್ಟೌ ಎಂಬ ಶಬ್ದಕ್ಕೆ ಸುಖನಿಮಿತ್ತೇ-ಸುಖಾರ್ಥವಾಗಿ ಎಂದರ್ಥಹೇಳಿದ್ದಾರೆ.

**ಯಶ್ಚ ಆ ಅದ್ಯಃ—ಸರ್ವೇಷಾಂ ಸರ್ವತ ಉಪಜೀವ್ಯಃ ।** ಎಲ್ಲರೂ ಇಂದ್ರನನ್ನೇ ಆಶ್ರಯಿಸಿ ಜೀವಿಸುವರು ಎಂದರೆ, ಇಂದ್ರನೇ ಎಲ್ಲರಿಗೂ ಎಲ್ಲಕಡೆಯಲ್ಲಿಯೂ ಆಹಾರಾದಿಗಳನ್ನು ಒದಗಿಸುವನು ಎಂದಭಿಪ್ರಾಯವು.

**ಯತ್ ಹ ಚೋದಂ ಆವಿಥ—ಯಶ್ಚ ತ್ವಂ ಚೋದಂ ಸ್ತೋತ್ರಾಣಾಂ ಪ್ರೇರಕಂ ಯಜಮಾನಂ** ರಕ್ಷಿತವಾನಸಿ । ಸ್ತೋತ್ರಗಳಿಗೆ ಪ್ರೇರಕನಾದ ಎಂದರೆ ಇಂದ್ರನನ್ನು ಸ್ತೋತ್ರಮಾಡುವಂತೆ ಋತ್ವಿಗ್ಜನರನ್ನು ಪ್ರೇರಿಸುವ ಯಜಮಾನನನ್ನು ರಕ್ಷಿಸುತ್ತೀಯೆ ಎಂದಭಿಪ್ರಾಯವು.

**ಅರಜ್ಜೌ ದಸ್ಯೂನ್ ಸಂ ಉನಪ್ ದಭೀತಯೇ—**ಎಲೈ ಇಂದ್ರನೇ, ನೀನು ದಭೀತಿ ಎಂಬ ಋಷಿಯನ್ನು ರಕ್ಷಿಸುವುದಕ್ಕಾಗಿ ರಜ್ಜು ಎಂದರೆ ಹಗ್ಗಗಳಿಲ್ಲದಿರುವ ಕಾರಾಗೃಹದಲ್ಲಿ ದಸ್ಯುಜನರನ್ನು ಬಂಧಿಸಿ ಹಿಂಸಿಸಿದೆ ಎಂದು ಋಷಿಯು ವರ್ಣಿಸಿರುವನು. ದಭೀತಿ ಎಂಬ ಋಷಿಯನ್ನು ದಸ್ಯುಜನರು ಹಿಂಸೆಪಡಿಸುತ್ತಿರಲು ಅವನ ಪ್ರಾರ್ಥನೆಯಂತೆ ಇಂದ್ರನು ಆ ದಸ್ಯುಜನರೊಡನೆ ಯುದ್ಧಮಾಡಿ ಅವರನ್ನು ಹಗ್ಗಗಳಿಂದ ಕಟ್ಟದ ಹಾಗೆಯೇ ಬಂಧನಾಗಾರದಲ್ಲಿ ಹಾಕಿ ಅವರನ್ನು ನಾನಾವಿಧವಾದ ಹಿಂಸೆಗಳಿಗೆ ಗುರಿಮಾಡಿದನು ಎಂದಭಿಪ್ರಾಯವು. ಕೆಲವು ಕಡೆ ಅಶ್ವಿನೀದೇವತೆಗಳು ದಭೀತಿ ಎಂಬ ಋಷಿಯನ್ನು ರಕ್ಷಿಸಿದರೆಂದೂ, ಇನ್ನು ಕೆಲವು ಕಡೆ ಇಂದ್ರನು ದಭೀತಿಯನ್ನು ರಕ್ಷಿಸಿದನೆಂದೂ ಹೇಳಿದೆ.

**ಯಾಭಿಃ ಕುತ್ಸಮಾರ್ಜುನೇಯಂ ಶತಕ್ರತೂ ಪ್ರ ತುರ್ವೀತಿಂ ಪ್ರ ಚ ದಭೀತಿಮಾವತಂ ।**
(ಋ. ಸಂ. ೧-೧೧೨-೨೩)

ಎಂಬ ಋಕ್ಕಿನಲ್ಲಿ ಅಶ್ವಿನೀ ದೇವತೆಗಳು ದಭೀತಿಯನ್ನು ರಕ್ಷಿಸಿದರೆಂದು ಹೇಳಿದೆ. ಈ ದಭೀತಿಯು ಯೋಧನೆಂದು ಕೆಲವು ಕಡೆಯೂ, ಋಷಿಯೆಂದು ಕೆಲವು ಕಡೆಯೂ ಹೇಳಿದೆ—

**ಇಂದ್ರೋ ಧುನಿಂ ಚ ಚುಮುರಿಂ ಚ ದಂಭಯಚ್ಛ್ರದ್ಧಾಮನಸ್ಯಾ ಶೃಣುತೇ ದಭೀತಯೇ ।**
(ಋ. ಸಂ. ೧೦-೧೧೩-೯)

**ಸ್ವಪ್ನೇನಾಭ್ಯುಪ್ಯಾ ಚುಮುರಿಂ ಧುನಿಂ ಚ ಜಘಂಥ ದಸ್ಯುಂ ಪ್ರ ದಭೀತಿಮಾವಃ ।**
(ಋ. ಸಂ. ೨-೧೫-೯)

ಎಂಬ ಋಕ್ಕುಗಳಲ್ಲಿ ದಭೀತಿಯನ್ನು ರಾಜರ್ಷಿಯೆಂದೂ ಅವನಿಗಾಗಿ ಇಂದ್ರನು ಚುಮುರಿ ಧುನಿಗಳೆಂಬ ಅಸುರರನ್ನು ಜಯಿಸಿದುದಾಗಿಯೂ ಹೇಳಿದೆ. ಅವನು ಇಂದ್ರನಿಗೆ ಸೋಮರಸವನ್ನು ಹಿಂಡಿ ಅರ್ಪಿಸಿ ಇಂದ್ರನ ಅನುಗ್ರಹವನ್ನು ಪಡೆದನೆಂದು ಗೊತ್ತಾಗುತ್ತದೆ.

ಅಸ್ವಾಪಯದ್ದಭೀತಯೇ ಸಹಸ್ರಾ ತ್ರಿಂಶತಂ ಹಥೈಃ । ದಾಸಾನಾಮಿಂದ್ರೋ ಮಾಯಯಾ ॥
(ಋ. ಸಂ ೪-೩೦-೨೧)

ಎಂಬ ಋಕ್ಕಿನಲ್ಲಿ ಇಂದ್ರನು ತನ್ನ ಮಾಯೆಯಿಂದ ದಭೀತಿಗಾಗಿ ಮೂವತ್ತುಸಹಸ್ರ ದಾಸಜನರನ್ನು ನಿದ್ರಾವಶರನ್ನಾಗಿ ಮಾಡಿದನೆಂದು ಹೇಳಿದೆ.

---

ಸಂಹಿತಾಪಾಠಃ

ವಿಶ್ವೇದನು ರೋಧನಾ ಅಸ್ಯ ಪೌಂಸ್ಯಂ ದದುರಸ್ಮೈ ದಧಿರೇ ಕೃತ್ನವೇ ಧನಂ ।
ಷಳಸ್ತಭ್ನಾ ವಿಷ್ಟಿರಃ ಪಂಚ ಸಂದೃಶಃ ಪರಿ ಪರೋ ಅಭವಃ ಸಾಸ್ಯುಕ್ಥ್ಯಃ ॥ ೧೦ ॥

ಪದಪಾಠಃ

ವಿಶ್ವಾ । ಇತ್ । ಅನು । ರೋಧನಾಃ । ಅಸ್ಯ । ಪೌಂಸ್ಯಂ । ದದುಃ । ಅಸ್ಮೈ । ದಧಿರೇ । ಕೃತ್ನವೇ । ಧನಂ ।
ಷಟ್ । ಅಸ್ತಭ್ನಾಃ । ವಿಽಸ್ತಿರಃ । ಪಂಚ । ಸಂಽದೃಶಃ । ಪರಿ । ಪರಃ । ಅಭವಃ । ಸಃ । ಅಸಿ । ಉಕ್ಥ್ಯಃ ॥

ಸಾಯಣಭಾಷ್ಯಂ

ವಿಶ್ವೇತ್ ॥ ಸುಪಾಂ ಸುಲುಗಿತಿ ಜಸ ಆಕಾರಃ ॥ ಸರ್ವಾ ಏವ ರೋಧನಾ ರೋಧಸ್ವತ್ಯೋ ನದ್ಯೋಽಸ್ಯೇಂದ್ರಸ್ಯ ಪೌಂಸ್ಯಂ । ಪುಂಸೋ ಭಾವಃ ಪೌಂಸ್ಯಂ । ವೀರ್ಯಮಿತಿ ಯಾವತ್ । ಅನು ತದ್ವೀರ್ಯಮನು ವರ್ತಂತೇ । ಅಸ್ಮಾ ಇಂದ್ರಾಯ ದದುಃ । ಹವಿರ್ಲಕ್ಷಣಮನ್ನಂ ಯಜಮಾನಾಃ ಪ್ರಯಚ್ಛಂತಿ । ಕಿಂಚ ಕೃತ್ನವೇ ಕರ್ಮಣಾಂ ಕರ್ತ್ರೆ ಇಂದ್ರಾಯ ಧನಂ ದಧಿರೇ । ಸರ್ವೇ ಜನಾ ಧಾರಯಂತಿ । ತಥಾ ಚ ಮಂತ್ರಃ । ಇಂದ್ರಾಯ ದ್ಯಾವ ಓಷಧೀರುತಾಪೋ ರಯಿಂ ರಕ್ಷಂತಿ ಜೀರಯೋ ವನಾನಿ । ೩-೫೧-೫ । ಇತಿ । ವಿಷ್ಟಿರೋ ವಿಸ್ತೀರ್ಣಾಃ ಷಟ್ ಷಟ್ಸಂಖ್ಯಾಕಾ ಉರ್ವೀಃ । ತಾಶ್ಚ ದ್ಯೌಶ್ಚ ಪೃಥಿವೀ ಚಾಹಶ್ಚ ರಾತ್ರಿಶ್ಚಾಪಶ್ಚೌಷಧಯ ಇತ್ಯೇವಂರೂಪಾಃ । ತಾ ಅಸ್ತಭ್ನಾಃ । ನಿಯಮಿತವಾನಸಿ । ಸಂದೃಶಃ । ಸಮ್ಯಕ್ ಪಶ್ಯಂತೀತಿ ಸಂದೃಶೋ ಜನಾಃ । ಪಂಚ ಸಂದೃಶಃ ಪಂಚ ಜನಾನ್ ಪರಿ ಸರ್ವತಃ ಪರಃ ಪಾರಯಿತಾ ಪಾಲಯಿತಾ ವಾಭವಃ । ಭವಸಿ । ಗತಮನ್ಯತ್ ॥

ಪ್ರತಿಪದಾರ್ಥ

ವಿಶ್ವಾ ಇತ್—ಸಮಸ್ತವಾದ । ರೋಧನಾಃ—ನದಿಗಳೂ । ಅಸ್ಯ—ಇಂದ್ರರೂಪಿಯಾದ ನಿನ್ನ । ಪೌಂಸ್ಯಂ—ವೀರ್ಯಕರ್ಮವನ್ನು । ಅನು—ಅನುಸರಿಸಿ (ಅದರ ಫಲವಾಗಿ) ಹರಿಯುತ್ತವೆ । ಅಸ್ಮೈ—ಅಂತಹ ಇಂದ್ರನಾದ ನಿನಗೆ । ದದುಃ—(ಯಜಮಾನರು ಹವಿಸ್ಸನ್ನು) ಅರ್ಪಿಸುತ್ತಾರೆ । ಕೃತ್ನವೇ—ಶ್ರೇಷ್ಠವಾದ ಇಂದ್ರನಾದ ನಿನಗೆ । ದದುಃ—(ಯಜಮಾನರು ಹವಿಸ್ಸನ್ನು) ಅರ್ಪಿಸುತ್ತಾರೆ । ಕೃತ್ನವೇ—ಶ್ರೇಷ್ಠವಾದ ಕರ್ಮಕರ್ತನಾದ ನಿನಗೆ । ಧನಂ—ಧನವನ್ನು । ದಧಿರೇ—(ಎಲ್ಲರೂ) ಅರ್ಪಿಸುತ್ತಾರೆ । ವಿಷ್ಟಿರಃ—ವಿಸ್ತಾರ

ವಾಗಿ ವ್ಯಾಪಿಸಿರುವ ನೀನು । **ಷಟ್**—ಪೃಥಿವ್ಯಾದಿ ಷಟ್ಸಂಖ್ಯಾಕವಾದ ನಿನ್ನ ಸೃಷ್ಟಿಗಳನ್ನು । **ಅಸ್ತ್ರಭ್ನಾಃ**—ನಿಯಮನದಲ್ಲಿಟ್ಟದ್ದೀಯೆ । **ಪಂಚ ಸಂದೃಶಃ**—ಪಂಚಜನರನ್ನೂ । **ಪರಿ**—ಸರ್ವತ್ರ । **ಪರಃ**—ಪಾಲಿಸುವವನಾಗಿ । **ಅಭವಃ**—ಆಗಿದ್ದೀಯೆ । **ಸಃ**—ಅಂತಹ ನೀನು । **ಉಕ್ಥ್ಯಃ ಅಸಿ**—ಪ್ರಶಸ್ಯನಾಗಿದ್ದೀಯೆ.

### ಭಾವಾರ್ಥ

ಎಲೈ ಇಂದ್ರನೇ, ಸಮಸ್ತವಾದ ನದಿಗಳೂ ಇಂದ್ರರೂಪಿಯಾದ ನಿನ್ನ ವೀರ್ಯಕರ್ಮವನ್ನನುಸರಿಸಿ ಅದರ ಫಲವಾಗಿ ಹರಿಯುತ್ತವೆ. ನಿನಗೆ ಯಜಮಾನರು ಹವಿಸ್ಸನ್ನರ್ಪಿಸುತ್ತಾರೆ. ಶ್ರೇಷ್ಠವಾದ ಕರ್ಮಕರ್ತೃವಾದ ನಿನಗೆ ಧನವನ್ನೂ ಅರ್ಪಿಸುತ್ತಾರೆ. ವಿಸ್ತಾರವಾಗಿ ವ್ಯಾಪಿಸಿರುವ ನೀನು ಪೃಥಿವ್ಯಾದಿ ಷಟ್‌ಸಂಖ್ಯಾಕವಾದ ನಿನ್ನ ಸೃಷ್ಟಿಗಳನ್ನು ನಿಯಮನದಲ್ಲಿಟ್ಟದ್ದೀಯೆ. ಮತ್ತು ಪಂಚಜನರನ್ನು ಸರ್ವತ್ರ ಪಾಲಿಸುತ್ತಿದ್ದೀಯೆ. ಅಂತಹ ನೀನು ಅತ್ಯಂತ ಪ್ರಶಸ್ಯನಾಗಿದ್ದೀಯೆ.

### English Translation

You are he, from whose manhood all the rivers (have proceeded); to whom (the pious) have given (offerings); to whom, doer of mighty deeds, they have presented wealth: you are he, who have regulated the six expansive (objects), and are the protector of the five (races), that look up to you: you are he who is to be praised.

### ವಿಶೇಷವಿಷಯಗಳು

**ವಿಶ್ವಾ ಇತ್ ಅನು ರೋಧನಾಃ ಅಸ್ಯ ಪೌಂಸ್ಯಂ**—ಇಲ್ಲಿ ರೋಧನಾಃ ಎಂದರೆ ರೋಧಸ್ವತ್ಯೋ ನದ್ಯಃ—ತಮ್ಮ ತಮ್ಮ ಪಾತ್ರಗಳಲ್ಲಿ ಎಂದರೆ ಎರಡು ದಡಗಳ ಮಧ್ಯದಲ್ಲಿ ಹರಿಯುವ ನದಿಗಳು. **ಪೌಂಸ್ಯಂ** ಎಂದರೆ **ಪುಂಸೋ ಭಾವಃ** ಪುರುಷರಿಗೆ ಸಹಜವಾಗಿರಬೇಕಾದ ವೀರ್ಯವು ಅಥವಾ ಸಾಮರ್ಥ್ಯಾತಿಶಯವು. ಸಮಸ್ತ ನದಿಗಳೂ ಸಹ ಇಂದ್ರನ ವೀರ್ಯವನ್ನೇ ಎಂದರೆ ಅತಿಶಯವಾದ ಸಾಮರ್ಥ್ಯಾತಿಶಯವನ್ನೇ ಅನುಸರಿಸಿ ಹರಿಯುತ್ತವೆ. ಎಂದರೆ ನದಿಗಳು ತಮ್ಮ ತಮ್ಮ ಪಾತ್ರಗಳಲ್ಲಿ ಹರಿಯುವುದು ಇಂದ್ರನ ಸಾಮರ್ಥ್ಯದಿಂದಲೇ ಎಂದಭಿಪ್ರಾಯವು.

**ದದುಃ ಅಸ್ಮೈ**—**ಹವಿರ್ಲಕ್ಷಣಮನ್ನಂ ಇಂದ್ರಾಯ ಯಜಮಾನಾಃ ಪ್ರಯಚ್ಛಂತಿ** । ಯಜ್ಞದಲ್ಲಿ ಯಜಮಾನರು ಹವೀರೂಪವಾದ ಅನ್ನವನ್ನು ಇಂದ್ರನನ್ನುದ್ದೇಶಿಸಿ ಸಮರ್ಪಿಸುವರು.

**ದಧಿರೇ ಕೃತ್ನವೇ ಧನಂ**—**ಕೃತ್ನವೇ ಕರ್ಮಣಾಂ ಕರ್ತ್ರೇ ಇಂದ್ರಾಯ ಧನಂ ದಧಿರೇ । ಸರ್ವೇ ಜನಾ ಧಾರಯಂತಿ** । ಇಲ್ಲಿ **ಕೃತ್ನವೇ** ಎಂಬ ಶಬ್ದಕ್ಕೆ **ಕರ್ಮಣಾಂ ಕರ್ತ್ರೇ ಇಂದ್ರಾಯ** ಎಂದರೆ ಸಾಹಸಕಾರ್ಯಗಳನ್ನು ಮಾಡುವ ಇಂದ್ರನಿಗಾಗಿ ಎಂದರ್ಥವು. **ಸುರೂಪಕೃತ್ನುಂ** ಎಂಬ ಶಬ್ದಕ್ಕೆ (ಋ ಸಂ. ೧-೪-೧) ಭಾಷ್ಯಕಾರರು **ಶೋಭನರೂಪೋಪೇತಸ್ಯ ಕರ್ಮಣಃ ಕರ್ತಾರಮಿಂದ್ರಂ** ಎಂದು ಇಲ್ಲಿ ಹೇಳಿರುವಂತೆಯೇ ಕೃತ್ನುಶಬ್ದದ ಅರ್ಥವಿವರಣೆಮಾಡಿದ್ದಾರೆ. ಆದುದರಿಂದ **ಈ** ವಾಕ್ಯಕ್ಕೆ ಜನರು ಅಥವಾ ಯಜಮಾನ, ಋತ್ವಿಜರು ವೃತ್ರವಧವೇ ಮೊದಲಾದ ಅನೇಕ ಸಾಹಸಕಾರ್ಯಗಳನ್ನು ಮಾಡುವ ಇಂದ್ರನಿಗೋಸ್ಕರ ಧನವನ್ನು ಎಂದರೆ ಯಜ್ಞದಲ್ಲಿ ಹವಿಸ್ಸಿನ ಅಥವಾ ಸೋಮರೂಪದಲ್ಲಿರುವ ಧನವನ್ನು ಅರ್ಪಿಸುವರು ಎಂದಭಿಪ್ರಾಯವು ಈ ವಿಷಯದಲ್ಲಿ—

ಇಂದ್ರಾಯ ದ್ಯಾವ ಓಷಧೀರುತಾಪೋ ರಯಿಂ ರಕ್ಷಂತಿ ಜೀರಯೋ ವನಾನಿ ।

(ಋ. ಸಂ ೩-೫೧-೫)

ಎಂಬ ಋಕ್ಕನ್ನು ಭಾಷ್ಯಕಾರರು ಉದಾಹರಿಸಿ ದ್ಯುಲೋಕ, ಓಷಧಿವನಸ್ಪತಿಗಳು, ಉದಕಗಳು, ಮನುಷ್ಯರು, ವೃಕ್ಷಗಳು ಇವೆಲ್ಲವೂ ಇಂದ್ರನಿಗೆ ತಮ್ಮ ತಮ್ಮಲ್ಲಿರುವ ಧನವನ್ನು (ಧನರೂಪದಲ್ಲಿರುವ ಪದಾರ್ಥಗಳನ್ನು) ಅರ್ಪಿಸುವುದಕ್ಕಾಗಿ ರಕ್ಷಿಸಿಟ್ಟುಕೊಂಡಿರುವವು ಎಂದು ಹೇಳಿರುವ ಅರ್ಥವನ್ನು ವಿವರಿಸಿದ್ದಾರೆ.

**ಷಟ್ ಅಸ್ತಭ್ನಾಃ ವಿಸ್ತಿರಃ—ವಿಷ್ಟಿರೋ ವಿಸ್ತೀರ್ಣಾಃ ಷಟ್ ಷಟ್ಸಂಖ್ಯಾಕಾ ಉರ್ವೀಃ । ತಾಶ್ಚ ದ್ಯೌಶ್ಚ ಪೃಥಿವೀ ಚಾಹಶ್ಚ ರಾತ್ರಿಶ್ಚಾಪಶ್ಚೌಷಧಯ ಇತ್ಯೇವಂರೂಪಾಃ । ತಾ ಅಸ್ತಭ್ನಾಃ ನಿಯಮಿತ-ವಾನಸಿ ।** ವಿಸ್ತಾರವಾದ ಆರುವಿಧ ಪ್ರದೇಶಗಳು ನಿನ್ನ ಅಧೀನಕ್ಕೊಳಪಟ್ಟವೆ. ಸ್ವರ್ಗ, ಪೃಥಿವೀ, ಹಗಲು, ರಾತ್ರಿ, ನೀರು, ಓಷಧಿವನಸ್ಪತಿಗಳು ಈ ಆರು ವಿಧಗಳೂ ಬಹುವಿಸ್ತಾರವಾಗಿರುವವು ಎಂದರೆ ಅವುಗಳ ವ್ಯಾಪ್ತಿಯು ಬಹಳ ವಾಗಿರುವುದು. ಆದರೂ ಅವುಗಳಿಗೆಲ್ಲಾ ಇಂದ್ರನೇ ನಿಯಾಮಕನು ಎಂದಭಿಪ್ರಾಯವು.

**ಪಂಚ ಸಂದೃಶಃ ಪರಿ ಪರಃ ಅಭವಃ**—ಈ ವಾಕ್ಯದಲ್ಲಿರುವ **ಸಂದೃಶಃ** ಎಂಬ ಶಬ್ದಕ್ಕೆ ಭಾಷ್ಯಕಾರರು—**ಸಮ್ಯಕ್ ಪಶ್ಯಂತೀತಿ ಸಂದೃಶೋ ಜನಾಃ** ಚೆನ್ನಾಗಿ ನೋಡಲು (ಅಥವಾ ತಿಳಿದುಕೊಳ್ಳಲು) ಸಮರ್ಥರಾದ್ದರಿಂದ **ಸಂದೃಶ** ಎಂದರೆ ಜನರೆಂದು ಅರ್ಥಮಾಡಿ **ಪಂಚಸಂದೃಶಃ** ಎಂದರೆ ಪಂಚಜನರೆಂದು ಹೇಳಿರುವರು. ಪಂಚಜನ ರೆಂದರೆ ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಾಕ್ಷಸರು ಎಂದು ಐದುವಿಧ ಜನರೆಂದು ಕೆಲವರು ಹೇಳು ವರು; ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ನಿಷಾದ ಎಂಬ ಬೇಡರಜಾತಿಗೆ ಸೇರಿದ ಜನರೂ ಸೇರಿ ಐದುವಿಧ ಜನ ರೆಂದು ಉಪಮನ್ಯು ಮುಂತಾದವರ ಮತವು. ಇದನ್ನೇ ಸಾಯಣರು ಅನುಮೋದಿಸಿರುವರು. ನಿಷಾದರೆಂದರೆ ಪ್ರಾಣಿ ಗಳನ್ನು ಕೊಲ್ಲುವವರು ಅಥವಾ ಇವರಲ್ಲಿ ಪಾಪವು ತುಂಬಿರುವುದರಿಂದ ಇವರಿಗೆ ನಿಷಾದರೆಂದು ನಿರುಕ್ತಕಾರರು ಹೇಳುವರು. ಇದಲ್ಲದೆ ಆ ಕಾಲದಲ್ಲಿ ಐದು ಮುಖ್ಯವಾದ ಪಂಗಡಗಳು (tribes) ಅಥವಾ ಜನಪದಗಳು ಇದ್ದಿರ ಬಹುದು. ಈ ಪಂಚಜನರ ವಿಸ್ತಾರವಾದ ವಿವರಣೆಯನ್ನೂ, ಈ ವಿಷಯದಲ್ಲಿ ಯಾಸ್ಕರ ನಿರ್ವಚನವನ್ನೂ ನಾವು ಋ. ಸಂ. ಭಾಗ ೨-೨೯೬, ೮-೨೨೭, ೯-೩೨೧, ೧೩-೪೦೭ ಗಳಲ್ಲಿ ಬರೆದಿದ್ದೇವೆ. ಇಂತಹ ಪಂಚಜನರನ್ನು ಇಂದ್ರ ನಾದ ನೀನು ಕಷ್ಟದಿಂದ ಪಾರುಮಾಡುವೆ ಅಥವಾ ರಕ್ಷಿಸುವೆ ಎಂದು ಮುಖ್ಯಾಭಿಪ್ರಾಯವು.

---

ಸಂಹಿತಾಪಾಠಃ

## ಸುಪ್ರವಾಚನಂ ತವ ವೀರ ವೀರ್ಯಂ೧ ಯದೇಕೇನ ಕ್ರತುನಾ ವಿಂದಸೇ ವಸು ।
## ಜಾತೂಷ್ಠಿರಸ್ಯ ಪ್ರ ವಯಃ ಸಹಸ್ವತೋ ಯಾ ಚಕರ್ಥ ಸೇಂದ್ರ ವಿಶ್ವಾಸ್ಯುಕ್ಥ್ಯಃ ॥

ಪದಪಾಠಃ

ಸುಽಪ್ರವಾಚನಂ । ತವ । ವೀರ । ವೀರ್ಯಂ । ಯತ್ । ಏಕೇನ । ಕ್ರತುನಾ । ವಿಂದಸೇ । ವಸು ।

ಜಾತೂಽಸ್ಥಿರಸ್ಯ । ಪ್ರ । ವಯಃ । ಸಹಸ್ವತಃ । ಯಾ । ಚಕರ್ಥ । ಸಃ । ಇಂದ್ರ । ವಿಶ್ವಾ । ಅಸಿ । ಉಕ್ಥ್ಯಃ ॥

ಸಾಯಣಭಾಷ್ಯಂ

ವೀರ ಬಲವನ್ ಹೇ ಇಂದ್ರ ತವ ವೀರ್ಯಂ ಸಾಮರ್ಥ್ಯಂ ಸುಪ್ರವಾಚನಂ । ಸುಷ್ಠು ಪ್ರವಚನೀಯಂ । ಸರ್ವೈಃ ಶ್ಲಾಘನೀಯಮಿತ್ಯರ್ಥಃ । ಕಿಂ ತತ್ । ಏಕೇನ ಕ್ರತುನಾ ಕರ್ಮಣಾ ವಸು ವಿಂದಸೇ । ಶತ್ರೂಣಾಂ ಧನಂ ಲಭಸೇ ॥ ವಿದ್ಲೃ ಲಾಭೇ । ತುದಾದಿಃ ಸ್ವರಿತೇತ್ ॥ ಯದ್ವಾ ತದೀಯಂ ಧನಂ ಸ್ತೋತೃಭ್ಯಃ ಪ್ರಾಪಯಸೀತಿ ಯತ್ ತತ್ಪ್ರಶಸ್ಯಮಿತ್ಯರ್ಥಃ । ಸಹಸ್ವತೋ ಬಲವತೋ ಜಾತೂಷ್ಠಿರಸ್ಯ । ಏತನ್ನಾಮಕಃ ಕಶ್ಚಿತ್ । ತಸ್ಯ ವಯೋಽನ್ನಂ ಪ್ರಾದಾಃ । ಯದ್ವಾ ಜಾತೂಷ್ಠಿರಸ್ಯ । ಜಾತು ಕದಾಚಿತ್ ಸರ್ವದಾ ಸ್ಥಿರಸ್ಯ ಸಹಸ್ವತೋ ಬಲವತೋ ಯಜ್ಞಾದೇಃ ಕರ್ಮಣಃ ಸಂಬಂಧಿ ವಯೋ ಹವಿರ್ಲಕ್ಷಣಮನ್ನಂ ಪ್ರ ವಿಂದಸ ಇತಿ ಸಮನ್ವಯಃ । ಯಾ ಯಾನೀಮಾನ್ಯನ್ಯಾನಿ ವಿಶ್ವಾ ಸರ್ವಾಣಿ ಕರ್ಮಾಣಿ ಚಕರ್ಥ ಕೃತವಾನಸಿ । ಸ ತಾದೃಶಸ್ತ್ವಮುಕ್ಥ್ಯಃ । ಸರ್ವೈಃ ಪ್ರಶಂಸನೀಯೋ ಭವಸಿ ॥

ಪ್ರತಿಪದಾರ್ಥ

ವೀರ—ಬಲಶಾಲಿಯಾದ ಎಲೈ ಇಂದ್ರನೇ । ಯತ್—ಯಾವ ಕಾರಣದಿಂದ । ಏಕೇನ ಕ್ರತುನಾ—ಅದ್ವಿತೀಯವಾದ ಕರ್ಮದಿಂದ । ವಸು—(ಶತ್ರುವಿನ) ಧನವನ್ನು । ವಿಂದಸೇ—ಪಡೆಯುತ್ತೀಯೋ, (ಮತ್ತು) । ಸಹಸ್ವತಃ—ಬಲಶಾಲಿಯಾದುದೂ । ಜಾತೂಷ್ಠಿರಸ್ಯ—ಸರ್ವದಾ ಸ್ಥಿರವಾಗಿರತಕ್ಕದ್ದೂ ಆದ । ವಯಃ—ಹವಿಸ್ಸಿನ ರೂಪವ ಅನ್ನವನ್ನು । ಪ್ರ—ಭಕ್ಷಿಸುತ್ತೀಯೋ (ಆದ್ದರಿಂದ) । ತವ—ನಿನ್ನ । ವೀರ್ಯಂ—ಸಾಮರ್ಥ್ಯವು । ಸುಪ್ರವಾಚನಂ—ಎಲ್ಲರಿಂದಲೂ ಶ್ಲಾಘಿಸಲ್ಪಡುವುದಾಗಿದೆ । ಇಂದ್ರ—ಎಲೈ ಇಂದ್ರನೇ । ಯಾ ವಿಶ್ವಾ—ಯಾವ ಈ ಸಮಸ್ತ ಕರ್ಮಗಳನ್ನೂ । ಚಕರ್ಥ—ಮಾಡಿದ್ದೀಯೋ । ಸಃ—ಅಂತಹ ನೀನು । ಉಕ್ಥ್ಯಃ ಅಸಿ—ಸ್ತುತ್ಯರ್ಹನಾಗಿದ್ದೀಯೆ.

ಭಾವಾರ್ಥ

ಬಲಶಾಲಿಯಾದ ಎಲೈ ಇಂದ್ರನೇ, ನೀನು ನಿನ್ನ ಅದ್ವಿತೀಯವಾದ ಕರ್ಮದಿಂದ ಶತ್ರುವಿನ ಧನವನ್ನು ಪಡೆಯುವುದರಿಂದಲೂ, ವೀರ್ಯವತ್ತಾದುದೂ, ಸರ್ವದಾ ಸ್ಥಿರವಾಗಿರತಕ್ಕದ್ದೂ ಆದ ಹವಿಸ್ಸನ್ನು ಭಕ್ಷಿಸುವುದರಿಂದಲೂ ನಿನ್ನ ಸಾಮರ್ಥ್ಯವು ಎಲ್ಲರಿಂದಲೂ ಶ್ಲಾಘಿಸಲ್ಪಡುವುದಾಗಿದೆ. ಎಲೈ ಇಂದ್ರನೇ, ಯಾವ ನೀನು ಈ ಸಮಸ್ತ ಕರ್ಮಗಳನ್ನೂ ಮಾಡಿದ್ದೀಯೋ, ಅಂತಹ ನೀನು ಸ್ತುತ್ಯರ್ಹನಾಗಿದ್ದೀಯೆ.

## English Translation

Your heroism, hero, is to be glorified, by which, with a single effort, you have acquired wealth; (wherewith) the (sacrificial) food of (every) solemn and constant (ceremony is provided); for all (the acts) you have performed, you Indra, are he who is to be praised.

ವಿಶೇಷವಿಷಯಗಳು

ಸುಪ್ರವಾಚನಂ ತವ ವೀರ ವೀರ್ಯಂ—ಹೇ ಬಲವನ್ನಿಂದ್ರ ತವ ವೀರ್ಯಂ ಸಾಮರ್ಥ್ಯಂ ಸುಷ್ಠು ಪ್ರವಚನೀಯಂ ಸರ್ವೈಃ ಶ್ಲಾಘನೀಯಮಿತ್ಯರ್ಥಃ । ಎಲೈ ಪರಾಕ್ರಮಶಾಲಿಯಾದ ಇಂದ್ರನೇ, ನಿನ್ನ

ಸಾಮರ್ಥ್ಯಾತಿಶಯವು ಎಲ್ಲರಿಂದಲೂ ಕೊಂಡಾಡಲ್ಪಡುವುದು. ಇಲ್ಲಿ ವೀರ್ಯವೆಂದರೆ ಇಂದ್ರನ ವಿಶೇಷವಾದ ಸಾಮರ್ಥ್ಯವು ಅಥವಾ ಸಾಹಸಕೃತ್ಯವು. ಆ ಸಾಹಸಕೃತ್ಯವು ಯಾವುದೆಂಬುದನ್ನು ಮುಂದಿನ ವಾಕ್ಯದಲ್ಲಿ ವಿವರಿಸಿದೆ.

**ಯತ್ ಏಕೇನ ಕ್ರತುನಾ ವಿಂದಸೇ ವಸು—ಏಕೇನ ಕರ್ಮಣಾ ಶತ್ರೂಣಾಂ ಧನಂ ಲಭಸೇ। ಯದ್ವಾ ತದೀಯಂ ಧನಂ ಸ್ತೋತೃಭ್ಯಃ ಪ್ರಾಪಯಸೀತಿ ಯತ್ ತತ್ಪ್ರಶಸ್ಯಮಿತ್ಯರ್ಥಃ।** ಕ್ರತುಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧) ಕ್ರತುನಾ ಎಂದರೆ ಕೆಲಸದಿಂದ ಅಥವಾ ಸಾಹಸಕಾರ್ಯದಿಂದ ಎಂದರ್ಥವು. ಶತ್ರುಗಳನ್ನು ಸೋಲಿಸುವುದೇ ಆ ಸಾಹಸಕಾರ್ಯವು. ಅಂತಹ ಶತ್ರುಪರಾಭವರೂಪವಾದ ಒಂದು ಕಾರ್ಯದಿಂದಲೇ ನೀನು ಧನವನ್ನು ಸಂಪಾದಿಸುವೆ ಅಥವಾ ಆ ಧನವನ್ನು ನಿನ್ನನ್ನು ಸ್ತೋತ್ರಮಾಡುವ ನಮಗೆ ತಂದುಕೊಡುವೆ. ಈರೀತಿ ಶತ್ರುವನ್ನು ಪರಾಭವಗೊಳಿಸಿ ನಮಗೆ ಧನವನ್ನು ತಂದುಕೊಡುವ ಯಾವ ಕಾರ್ಯವುಂಟೋ ಅದು ಸರ್ವರಿಂದಲೂ ಶ್ಲಾಘಿಸಲ್ಪಡುವುದು ಎಂದು ಹಿಂದಿನ ವಾಕ್ಯದೊಡನೆ ಸಂಬಂಧವು

**ಜಾತೂಷ್ಠಿರಸ್ಯ ಪ್ರ ವಯಃ ಸಹಸ್ವತಃ ಪ್ರ (ವಿಂದಸೇ)—ಸಹಸ್ವತೋ ಬಲವತೋ ಜಾತೂಷ್ಠಿರಸ್ಯ ಏತನ್ನಾಮಕಃ ಕಶ್ಚಿತ್ ತಸ್ಯ ವಯೋಽನ್ನಂ ಪ್ರಾದಾಃ।** ಸಹಸ್ ಶಬ್ದವು ಬಲನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೯) ಸಹಸ್ವತಃ ಎಂದರೆ ಬಲವುಳ್ಳ ಎಂದರ್ಥವು. ಎಲೈ ಇಂದ್ರನೇ, ನೀನು ಬಲವುಳ್ಳ ಜಾತೂಷ್ಠಿರನೆಂಬುವನಿಗೆ ಅನ್ನವನ್ನು ಒದಗಿಸಿ ಕೊಟ್ಟು ಸಹಾಯಮಾಡಿದೆ. ಇದೂ ನಿನ್ನ ಸಾಹಸಕೃತ್ಯಗಳಲ್ಲಿ ಒಂದು. ಜಾತೂಷ್ಠಿರನೆಂಬುವನ ಹೆಸರು ಋಗ್ವೇದದಲ್ಲಿ ಈ ಋಕ್ಕಿನಲ್ಲಿ ಮಾತ್ರ ಪಠಿತವಾಗಿದೆ. ಇನ್ನೆಲ್ಲಿಯೂ ಇಲ್ಲ. ಆದುದರಿಂದ ಇವನು ಯಾರು ? ಇವನ ವಿಷಯವೇನು ? ಏತಕ್ಕಾಗಿ ಇಂದ್ರನು ಇವನಿಗೆ ಅನ್ನವನ್ನು ಕೊಟ್ಟು ಸಹಾಯಮಾಡಿದನು? ಇತ್ಯಾದಿ ವಿವರಗಳನ್ನು ತಿಳಿಸಲು ಸಾಧ್ಯವಿಲ್ಲ. ಪ್ರಾಯಶಃ ಈ ಜಾತೂಷ್ಠಿರನೆಂಬುವನು ಅನ್ನಾದ್ಯಾಹಾರಗಳಿಲ್ಲದೆ ಕಷ್ಟಪಡುತ್ತಿದ್ದಾಗ ಅವನ ಪ್ರಾರ್ಥನೆಯಂತೆ ಇಂದ್ರನು ಅವನಿಗೆ ಅನ್ನವನ್ನು ಒದಗಿಸಿ ಕೊಟ್ಟಿರಬಹುದು. ಅದನ್ನೇ ಇಲ್ಲಿ ಹೇಳಲಾಗಿದೆ. ಅಥವಾ **ಜಾತೂಷ್ಠಿರಸ್ಯ। ಜಾತು ಕದಾಚಿತ್ ಸರ್ವದಾ ಸ್ಥಿರಸ್ಯ ಸಹಸ್ವತೋ ಬಲವತೋ ಯಜ್ಞಾದೇಃ ಕರ್ಮಣಃ ಸಂಬಂಧಿ ವಯೋ ಹವಿರ್ಲಕ್ಷಣಮನ್ನಂ ಪ್ರ ವಿಂದಸ ಇತಿ ಸಮನ್ವಯಃ।** ಅಥವಾ ಈ ವಾಕ್ಯಕ್ಕೆ ಇನ್ನೊಂದು ವಿಧವಾದ ಅರ್ಥವನ್ನೂ ಹೇಳಬಹುದೆಂದು ಭಾಷ್ಯಕಾರರು ಹೇಳಿದಾರೆ—ಜಾತೂಷ್ಠಿರಸ್ಯ ಎಂಬ ಶಬ್ದಕ್ಕೆ ಯಾವಾಗಲೂ ಜನರಿಂದ ಆಚರಿಸಲ್ಪಡುವುದರಿಂದ ಸ್ಥಿರವಾದ ಯಜ್ಞವೆಂದು ಅರ್ಥ ಮಾಡಬಹುದು. **ಸಹಸ್ವತಃ** ಎಂಬ ಶಬ್ದಕ್ಕೆ ಬಲವಾದ ಎಂದರೆ ಮಹತ್ತ್ವದಿಂದ ಕೂಡಿದ, ಅಥವಾ ಅಧಿಕ ಫಲವನ್ನು ಕೊಡುವ ಎಂದು ಅರ್ಥವನ್ನು ಹೇಳಬಹುದು. ಆದ್ದರಿಂದ ಎಲೈ ಇಂದ್ರನೇ, ಯಾವಾಗಲೂ ಜನರು ಮಾಡುವ ಅಧಿಕಫಲಪ್ರದವಾದ ಯಜ್ಞಾದಿಕರ್ಮಗಳಲ್ಲಿ ಹವಿರೂಪವಾದ ಅನ್ನವನ್ನು ಹೊಂದುವೆ ಎಂದು ಇನ್ನೊಂದು ವಿಧವಾದ ಅರ್ಥವನ್ನೂ ಹೇಳಿದಾರೆ. ಆದರೆ **ಸಹಸ್ವತಃ** ಎಂಬ ಶಬ್ದಕ್ಕೆ ಬಲವುಳ್ಳ ಅಥವಾ ಪರಾಕ್ರಮಶಾಲಿಯಾದ ಎಂಬರ್ಥವೇ ಸರಿಯಾಗಿ ಹೊಂದುವುದರಿಂದ ಜಾತೂಷ್ಠಿರಸ್ಯ ಎಂಬ ಶಬ್ದಕ್ಕೆ ಆ ಹೆಸರಿನ ಒಬ್ಬ ಪುರುಷನು ಎಂದು ಹೇಳುವ ಅರ್ಥವೇ ಸಮಂಜಸವಾಗಿರುವುದು.

**ಯಾ ಚಕರ್ಥ ಸಃ ಇಂದ್ರ ವಿಶ್ವಾ ಅಸಿ ಉಕ್ಥ್ಯಃ**—ಎಲೈ ಇಂದ್ರನೇ, ಮೇಲೆ ಹೇಳಿದ ಈ ವಿಧವಾದ ಯಾವ ಸಾಹಸಕರ್ಮಗಳನ್ನು ನೀನು ಮಾಡಿರುವೆಯೋ ಆ ಕಾರಣದಿಂದ ನೀನು ಪ್ರಶಸ್ಯನಾಗಿದ್ದೀಯೆ ಎಂದರೆ ಜನರು ನೀನು ಮಾಡಿದ ಸಾಹಸಕಾರ್ಯಗಳಿಗಾಗಿ ನಿನ್ನನ್ನು ಶ್ಲಾಘಿಸುವರು ಎಂದು ಮುಖ್ಯಾಭಿಪ್ರಾಯವು.

---

ಸಂಹಿತಾಪಾಠಃ

ಅರಮಯಃ ಸರಪಸಸ್ತರಾಯ ಕಂ ತುರ್ವೀತಯೇ ಚ ವಯ್ಯಾಯ ಚ ಸ್ರುತಿಂ ।
ನೀಚಾ ಸಂತಮುದನಯಃ ಪರಾವೃಜಂ ಪ್ರಾಂಧಂ ಶ್ರೋಣಂ ಶ್ರವಯನ್ತ್ಸಾ-
ಸ್ಯುಕ್ಥ್ಯಃ ॥ ೧೨ ॥

ಪದಪಾಠಃ

ಅರಮಯಃ । ಸರಽಅಪಸಃ । ತರಾಯ । ಕಂ । ತುರ್ವೀತಯೇ । ಚ । ವಯ್ಯಾಯ । ಚ । ಸ್ರುತಿಂ ।
ನೀಚಾ । ಸಂತಂ । ಉತ್ । ಅನಯಃ । ಪರಾಽವೃಜಂ । ಪ್ರ । ಅಂಧಂ । ಶ್ರೋಣಂ । ಶ್ರವಯನ್ । ಸಃ ।
ಅಸಿ । ಉಕ್ಥ್ಯಃ ॥ ೧೨ ॥

ಸಾಯಣಭಾಷ್ಯಂ

ಹೇ ಇಂದ್ರ ಸರಪಸಃ । ಸರಣಮಪಃ ಕರ್ಮ ಯಾಸಾಂ ತಾಃ ಸರಪಸಃ ॥ ಶಂಕಧ್ವಾದಿತ್ವಾತ್ಪರ-ರೂಪತ್ವಂ ॥ ತಾ ಅಪಃ ಕಂ ಸುಖೇನ ತರಾಯ ತರಣಾಯಾರಮಯಃ । ಅಕ್ರೀಡಯಃ । ಕಿಂಚ ತುರ್ವೀ-ತಯೇ । ತುರ್ವೀತಿರ್ನಾಮ ಕಶ್ಚಿದ್ರಾಜರ್ಷಿಃ । ತಸ್ಮೈ ವಯ್ಯಾಯ ಚ । ವಯ್ಯೋ ನಾಮ ಕಶ್ಚಿತ್ ತಸ್ಮೈ । ತಾಭ್ಯಾಂ ಸ್ರುತಿಂ ಸರಣಂ ಪ್ರತ್ಯರಮಯಃ । ತೌ ಹಿ ಜಲಪೂರ್ಣಾಂ ಮಹಾನದೀಂ ದೃಷ್ಟ್ವಾ ತರೀತು-ಮಸಮರ್ಥಾವಾಸ್ತಾಂ । ತೌ ಚ ತ್ವಯಾ ತಾರಿತೌ । ಪರಾವೃಜಂ । ಪರಿತಃ ಪಾಪಾನಿ ವೃಣಕ್ತಿ ದಹತೀತಿ ಪರಾವೃಕ್ ಕಶ್ಚಿದೃಷಿಃ । ತಮಪ್ಸು ಮಗ್ನಂ ತಥಾ ನೀಚಾ ನೀಚೆಂ ಸಂತಮುದನಯಃ । ಆಪದ್ಭ್ಯ ಊರ್ಧ್ವಂ ನೀತವಾನಸಿ । ಕಿಂಚ ಅಂಧಂ ಸಂತಂ ಶ್ರೋಣಂ ಪಂಗುಂ ಸಂತಂ ಚಕ್ಷುರ್ದಾನಾದಪಂಗು-ಕರಣಾಚ್ಚೋದನಯಃ । ಕಿಂ ಕುರ್ವನ್ । ಪ್ರಕರ್ಷೇಣ ಶ್ರವಯನ್ । ಆತ್ಮಾನಂ ಕೀರ್ತಿಮಂತಂ ಕುರ್ವನ್ । ಉದನಯ ಇತಿ ಸಮನ್ವಯಃ । ಸ ಇತ್ಯಾದಿ ಸಿದ್ಧಂ ॥

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । ತುರ್ವೀತಯೇ—ತುರ್ವೀತಿಯೆಂಬ ರಾಜರ್ಷಿಗೂ । ವಯ್ಯಾಯ ಚ—ವಯ್ಯನೆಂಬುವನಿಗೂ । ಸರಪಸಃ—ಪ್ರವಹಿಸುವ ನದಿಗಳನ್ನು । ಕಂ—ಸುಖವಾಗಿ । ತರಾಯ—ದಾಟುವುದಕ್ಕಾಗಿ । ಸ್ರುತಿಂ—ಮಾರ್ಗವನ್ನು । ಅರಮಯಃ—ನಿರ್ಮಿಸಿದೆ । ಪ್ರ ಶ್ರವಯನ್—ನಿನ್ನ ಕೀರ್ತಿಯನ್ನು ಪ್ರಕಾಶಗೊಳಿಸುತ್ತಾ । ನೀಚಾ—ಅಧೋಭಾಗದಲ್ಲಿ । ಸಂತಂ—ಬಿದ್ದವನೂ । ಅಂಧಂ—ಕುರುಡನಾದವನೂ । ಶ್ರೋಣಂ—ಕುಂಟನಾದವನೂ ಆದ । ಪರಾವೃಜಂ—ಪರಾವೃಕ್ಕೆಂಬುವನನ್ನು । ಉದನಯಃ—ಆಪತ್ತಿನಿಂದ ರಕ್ಷಿಸಿ ಮೇಲಕ್ಕೆತ್ತಿದೆ । ಸಃ—ಅಂತಹ ನೀನು । ಉಕ್ಥ್ಯಃ—ಸ್ತುತ್ಯರ್ಹನಾಗಿ । ಅಸಿ—ಆಗಿದ್ದೀಯೆ.

### ಭಾವಾರ್ಥ

ಎಲೈ ಇಂದ್ರನೇ, ತುರ್ವೀತಿಯೆಂಬ ರಾಜರ್ಷಿಗೂ, ವಯ್ಯನೆಂಬುವನಿಗೂ ಪ್ರವಹಿಸುವ ನದಿಗಳನ್ನು ಸುಖವಾಗಿ ದಾಟುವುದಕ್ಕಾಗಿ ಮಾರ್ಗವನ್ನು ನಿರ್ಮಿಸಿದೆ. ನಿನ್ನ ಕೀರ್ತಿಯನ್ನು ಪ್ರಕಾಶಗೊಳಿಸುತ್ತಾ, ಅಧೋಭಾಗ ದಲ್ಲಿ ಬಿದ್ದವನೂ, ಕುರುಡನಾದವನೂ, ಕುಂಟನಾದವನೂ ಆದ ಪರಾವೃಕ್ಕೆಂಬುವನನ್ನು ಆಪತ್ತಿನಿಂದ ರಕ್ಷಿಸಿ ಮೇಲಕ್ಕೆತ್ತಿದೆ. ಅಂತಹ ನೀನು ಸ್ತುತ್ಯರ್ಹನಾಗಿದ್ದೀಯೆ.

### English Translation

You have provided a passage for the easy crossing of the flowing waters for Turviti and for Vayya : rendering (yourself) renowned, you have uplifted the blind and lame Paravrij from the lowliness (of affliction) ; you are he who is to be praised.

### ವಿಶೇಷವಿಷಯಗಳು

**ಅರಮಯಃ—ಅಕ್ರೀಡಯಃ** । ರಮು ಕ್ರೀಡಾಯಾಂ ಎಂಬ ಧಾತುವಿಗೆ ರಮಿಸು, ಕ್ರೀಡಿಸು ಎಂಬರ್ಥ ವಿದ್ದರೂ ಇಲ್ಲಿ ಕ್ರೀಡಾರ್ಥವಾಗಿ ನಿರ್ಮಿಸಿದೆ ಎಂದು ಅರ್ಥವನ್ನು ಹೇಳಬಹುದು.

**ಸರಪಸಃ**—ಈ ಶಬ್ದವನ್ನು ಪದಪಾಠಕಾರರು **ಸರSಅಪಸಃ** ಎಂದು ಪದವಿಚ್ಛೇದಮಾಡಿದ್ದಾರೆ ಎಂದರೆ **ಸರ + ಅಪಸಃ** ಎಂಬ ಎರಡು ಪದಗಳು ಸೇರಿ **ಸರಾಪಸಃ** ಎಂದಿರಬೇಕು. ಛಂದಸ್ಸಿನ ಅನುಕೂಲಕ್ಕಾಗಿ ರಕಾರವು ಹ್ರಸ್ವವಾಗಿ **ಸರಪಸಃ** ಎಂದಾಗಿದೆ. ಸಾಯಣರು ಈ ಶಬ್ದಕ್ಕೆ **ಸರಣಮಪಃ ಕರ್ಮ ಯಾಸಾಂ ತಾಃ ಸರಪಸಃ**— ಎಂದರೆ ಸರಿಯುವ ಅಥವಾ ಹರಿಯುವ ಕರ್ಮವುಳ್ಳ, ಪ್ರವಹಿಸುವ ಸ್ವಭಾವವುಳ್ಳ ನದಿಗಳು ಎಂದರ್ಥವು.

**(ಹೇ ಇಂದ್ರ) ತುರ್ವೀತಯೇ ಚ ವಯ್ಯಾಯ ಚ ಸರಪಸಃ ಕಂ ತರಾಯ ಸ್ರುತಿಂ ಅರಮಯಃ- ಸರಪಸಃ ಪ್ರವಹಣಶೀಲಾಃ ಅಪಃ ಕಂ ಸುಖೇನ ತರಾಯ ತುರ್ವೀತಯೇ ತುರ್ವೀತಿರ್ನಾಮ ಕಶ್ಚಿದ್ರಾ- ಜರ್ಷಿಃ । ತಸ್ಮೈ ವಯ್ಯಾಯ ಚ । ವಯ್ಯೋ ನಾಮ ಕಶ್ಚಿತ್ ತಸ್ಮೈ ತಾಭ್ಯಾಂ ಸ್ರುತಿಂ ಸರಣಂ ಪ್ರತ್ಯರಮಯಃ । ತೌ ಹಿ ಜಲಪೂರ್ಣಾಂ ಮಹಾನದೀಂ ದೃಷ್ಟ್ವಾ ತರೀತುಮಸಮರ್ಥಾವಾಸ್ತಾಂ । ತೌ ಚ ತ್ವಯಾ ತಾರಿತೌ ॥** ಎಲೈ ಇಂದ್ರನೇ, ಪ್ರವಾಹಪೂರ್ಣವಾಗಿ ಹರಿಯುತ್ತಿರುವ ನದಿಯನ್ನು ಸುಖವಾಗಿ ದಾಟುವುದಕ್ಕಾಗಿ ತುರ್ವೀತಿ ಮತ್ತು ವಯ್ಯ ಎಂಬುವರಿಗೆ ಮಾರ್ಗವನ್ನು ಕಲ್ಪಿಸಿದೆ ಎಂದು ವಾಕ್ಯಾಭಿಪ್ರಾಯವು. ತುರ್ವೀತಿ ಎಂಬುವನು ಒಬ್ಬ ರಾಜರ್ಷಿಯು ; ವಯ್ಯ ಎಂಬುವನು ಒಬ್ಬ ಪುರುಷನು ಇವರಿಬ್ಬರೂ ಪ್ರವಾಹದಿಂದ ತುಂಬಿ ಹರಿಯುತ್ತಿರುವ ನದಿಯನ್ನು ದಾಟಲಾರದೆ ಪೇಚಾಡುತ್ತಿರುವಾಗ ನೀನು ಅವರನ್ನು ದಾಟಿಸಿದೆ ಎಂದು ಭಾಷ್ಯಕಾರರ ಅರ್ಥವಿವರಣೆಯು.

**ತುರ್ವೀತಯೇ, ವಯ್ಯಾಯ**—ತುರ್ವೀತಿ ಮತ್ತು ವಯ್ಯ ಎಂಬುವರ ವಿಷಯವನ್ನು ವಿವರಿಸುವುದು ಇಲ್ಲಿ ಅವಶ್ಯಕವಾಗಿದೆ. ಪ್ರಕೃತಋಕ್ಕಿನಲ್ಲಿ ಭಾಷ್ಯಕಾರರು ತುರ್ವೀತಿ ಎಂಬುವನು ಒಬ್ಬ ರಾಜರ್ಷಿಯೆಂದೂ, ವಯ್ಯನೆಂಬು

ವನು ಒಬ್ಬ ಪುರುಷನೆಂದೂ ಹೇಳಿರುವರು. ಆದರೆ ಋ. ಸಂ. ೧-೫೪-೬ ನೇ ಋಕ್ಕಿನಲ್ಲಿ ವಯ್ಯನ ಮತ್ತು ತುರ್ವೀತಿಯ ವಿಷಯವಾಗಿ ಭಾಷ್ಯಕಾರರು **ವಯ್ಯಕುಲಜಂ ತುರ್ವೀತಿನಾಮಾನಂ ರಾಜಾನಂ**—ವಯ್ಯ ಕುಲೋತ್ಪನ್ನನಾದ ತುರ್ವೀತಿ ಎಂಬ ರಾಜನನ್ನು ಎಂದು ಹೇಳಿರುವರು. ಕೆಲವರು ವಯ್ಯನ ಮಗನೇ ತುರ್ವೀತಿ ಎಂದು ಹೇಳುವರು. ಈ ವಯ್ಯನನ್ನೂ, ಕರ್ಕಂಧುವೆಂಬುವನನ್ನೂ ಅಶ್ವಿನೀದೇವತೆಗಳೂ ರಕ್ಷಿಸಿದರೆಂದು,

**ಯಾಭಿಃ ಕರ್ಕಂಧುಂ ವಯ್ಯಂ ಚ ಜಿನ್ವಥಸ್ತಾಭಿರೂ ಷು ಊತಿಭಿರಶ್ವಿನಾ ಗತಂ ।**

(ಋ. ಸಂ. ೧-೧೧೨-೬)

ಎಂಬ ಋಕ್ಕಿನಲ್ಲಿ ಹೇಳಿದೆ. ಇವರ ವಿಷಯವಾಗಿ ಸ್ಕಂದಸ್ವಾಮಿ ಎಂಬುವರು ತಮ್ಮ ಋಗ್ವೇದಭಾಷ್ಯದಲ್ಲಿ—

**ಕರ್ಕಂಧುಃ ವಯ್ಯಶ್ಚ ರಾಜರ್ಷೀ ಅತಿಕ್ಲಾಂತೌ ತಪಸ್ತಪ್ಯಮಾನೌ ಯದೃಚ್ಛಯಾ ಪರ್ಯಟಂ-ತಾವಶ್ವಿನೌ ದದೃಶತುಃ । ದೃಷ್ಟ್ವಾ ಚ ತಾವಮೃತೇನಾಪ್ಯಾಯಯಾಂಚಕ್ರತುರಿತಿ ತದೇತದಿ-ಹೋಚ್ಯತೇ ॥**

ರಾಜರ್ಷಿಗಳಾದ ಕರ್ಕಂಧು ಮತ್ತು ವಯ್ಯ ಎಂಬುವರಿಬ್ಬರೂ ಸಹ ಅತ್ಯಂತ ಕ್ಲೇಶಕರವಾದ ತಪಸ್ಸನ್ನು ಆಚರಿಸುತ್ತಾ ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಅವರನ್ನು ಅಶ್ವಿನೀದೇವತೆಗಳು ಆಕಸ್ಮಿಕವಾಗಿ ನೋಡಿದರು. ಅನಂತರ ಅವರಿಗೆ ಅಮೃತದಾನದಿಂದ ತೃಪ್ತಿಯನ್ನುಂಟುಮಾಡಿದರು ಎಂದು ಹೇಳಿದೆ. ಮತ್ತು—

**ಈಶಾನಕೃದ್ದಾಶುಷೇ ದಶಸ್ಯನ್ತುರ್ವೀತಯೇ ಗಾಧಂ ತುರ್ವಣಿಃ ಕಃ ।**

(ಋ. ಸಂ. ೧-೬೧-೧೧)

ಎಂಬ ಋಕ್ಕಿನಲ್ಲಿ ನದೀಪ್ರವಾಹಗಳನ್ನು ದಾಟಲು ಇಂದ್ರನು ತುರ್ವೀತಿಗೆ ಸಹಾಯಮಾಡಿದ ವಿಷಯವನ್ನು ಹೇಳಿದೆ.

**ತ್ವಮಾವಿಥ ನರ್ಯಂ ತುರ್ವಶಂ ಯದುಂ ತ್ವಂ ತುರ್ವೀತಿಂ ವಯ್ಯಂ ಶತಕ್ರತೋ ।**

(ಋ. ಸಂ. ೧-೫೪-೬)

ಎಂಬ ಋಕ್ಕಿನಲ್ಲಿ ತುರ್ವೀತಿ ಮತ್ತು ವಯ್ಯ ಎಂಬುವರನ್ನು ಇಂದ್ರನು ರಕ್ಷಿಸಿದನೆಂದು ಹೇಳಿದೆ.

**ತ್ವಂ ಮಹೀಮವನಿಂ ವಿಶ್ವಧೇನಾಂ ತುರ್ವೀತಯೇ ವಯ್ಯಾಯ ಕ್ಷರಂತೀಂ ।**

(ಋ. ಸಂ. ೪-೧೯-೬)

ಎಂಬ ಋಕ್ಕಿನಲ್ಲಿಯೂ ಸಹ ಇಂದ್ರನು ತುರ್ವೀತಿ ಮತ್ತು ವಯ್ಯ ಎಂಬುವರನ್ನು ಹರಿಯುತ್ತಿರುವ ನದಿಯನ್ನು ದಾಟಿಸಿದನೆಂದು ಹೇಳಿದೆ. ಇದಲ್ಲದೆ ತುರ್ವೀತಿಯ ವಿಷಯವು ಋ. ಸಂ. ೧-೩೬-೧೮ ; ೧-೧೧೨-೨೩ ; ಎಂಬ ಋಕ್ಕುಗಳಲ್ಲಿಯೂ, ವಯ್ಯನ ವಿಷಯವು ಋ. ಸಂ. ೨-೩-೬ : ೯-೬೮-೮ ; ಎಂಬ ಋಕ್ಕುಗಳಲ್ಲಿಯೂ ಪ್ರಸ್ತಾಪಿಸಲ್ಪಟ್ಟಿದೆ. ತುರ್ವೀತಿ ಎಂಬುವನು ತುರ್ವಶರು ಮತ್ತು ಯದುಗಳು ಎಂಬ ಪಂಗಡದ ಜನರಿಗೆ (Tribes) ರಾಜನಾಗಿದ್ದನೆಂದು Ludwig ಎಂಬ ಪಂಡಿತನ ಅಭಿಪ್ರಾಯವಾಗಿದೆ. ಆದರೆ ಇದಕ್ಕೆ ಯಾವ ಸಮರ್ಥನೆಯೂ ಇಲ್ಲ. ತುರ್ವೀತಿಯು ತುರ್ವಶರ ಪಂಗಡಕ್ಕೆ ಸೇರಿದವನೆಂದು ಮಾತ್ರ ಹೇಳಬಹುದು.

**ನೀಚಾ ಸಂತಂ ಉತ್ ಅನಯಃ ಪರಾವೃಜಂ ಪ್ರ ಅಂಧಂ ಶ್ರೋಣಂ ಶ್ರವಯನ್**—ಪರಿತಃ ಪಾಪಾನಿ ವೃಣಕ್ತಿ ದಹತೀತಿ ಪರಾವೃಕ್ ಕಶ್ಚಿದೃಷಿಃ । ತಮುಪ್ಸು ಮಗ್ನಂ ತಥಾ ನೀಚಾ ನೀಚಂ ಸಂತ-

**ಮುದನಯಃ । ಆಪಥ್ಭ್ಯ ಊರ್ಧ್ವಂ ನೀತವಾನಸಿ । ಕಿಂಚ ಅಂಧಂ ಸಂತಂ ಶ್ರೋಣಂ ಪಂಗುಂ ಸಂತಂ ಚಕ್ಷುರ್ದಾನಾದಪಂಗುಕರಣಾಚ್ಚೋದನಯಃ । ಕಿಂ ಕುರ್ವನ್ ಆತ್ಮಾನಂ ಕೀರ್ತಿಮಂತಂ ಕುರ್ವನ್ ॥**

**ಪರಾವೃಕ್** ಎಂಬುವನು ಒಬ್ಬ ಮಹಾಋಷಿಯು. ಅವನು ತನ್ನ ಪ್ರಭಾವದಿಂದ ಸುತ್ತಲೂ ಪಾಪಗಳು ಆವರಿಸದಂತೆ ಅವುಗಳನ್ನು ದಹಿಸುವ ಸಾಮರ್ಥ್ಯವುಳ್ಳವನಾದ್ದರಿಂದ ಅವನಿಗೆ **ಪರಾವೃಕ್** ಎಂದು ಹೆಸರು. ಇವನು ಕುಂಟನಾಗಿಯೂ, ಕುರುಡನಾಗಿ ಕಣ್ಣು ಕಾಣಿಸದೆ ಅಧೋಭಾಗದಲ್ಲಿ (ಅಥವಾ ಹಳ್ಳದಲ್ಲಿ) ಬಿದ್ದಿದ್ದನು. ಇವನು ಇಂದ್ರನನ್ನು ಸ್ತುತಿಸಲು ಇಂದ್ರನು ಇವನ ಸ್ತೋತ್ರಕ್ಕೆ ಮೆಚ್ಚಿ ಇವನನ್ನು ಮೇಲಕ್ಕೆ ಎತ್ತಿ ರಕ್ಷಿಸಿದನು ಎಂಬ ವಿಷಯವನ್ನು ಋಷಿಯು ಇಲ್ಲಿ ವರ್ಣಿಸಿದಾನೆ. ಈ ಋಷಿಯ ವಿಷಯವು—

**ಯಾಭಿಃ ಶಚೀಭಿರ್ವೃಷಣಾ ಪರಾವೃಜಂ ಪ್ರಾಂಧಂ ಶ್ರೋಣಂ ಚಕ್ಷಸ ಏತವೇ ಕೃಥಃ ।**

(ಋ. ಸಂ. ೧-೧೧೨-೮)

ಎಂಬ ಋಕ್ಕಿನಲ್ಲಿ ಅಶ್ವಿನೀದೇವತೆಗಳು ಪ್ರಕೃತಋಕ್ಕಿನಲ್ಲಿರುವಂತೆಯೇ ಕುರುಡನೂ, ಕುಂಟನೂ ಆದ ಪರಾವೃಜನಿಗೆ ಕಾಲನ್ನೂ, ಕಣ್ಣನ್ನೂ ಕೊಟ್ಟು ರಕ್ಷಿಸಿದರೆಂದು ಹೇಳಿದೆ.

**ಸ ವಿದ್ವಾँ ಅಪಗೋಹಂ ಕನೀನಾಮಾವಿರ್ಭವನ್ನುದತಿಷ್ಠತ್ ಪರಾವೃಕ್ ।**
**ಪ್ರತಿ ಶ್ರೋಣಃ ಸ್ಥಾದ್ವ್ಯನಗಚಷ್ಟ ಸೋಮಸ್ಯ ತಾ ಮದ ಇಂದ್ರಶ್ಚಕಾರ ॥**

(ಋ. ಸಂ. ೨-೧೫-೭)

ಎಂಬ ಋಕ್ಕಿನಲ್ಲಿ ಇಂದ್ರನು ಸೋಮಪಾನಮಾಡಿ ಹರ್ಷಗೊಂಡಿದ್ದರಿಂದ ಪರಾವೃಕ್ ಎಂಬ ಕುಂಟನೂ, ಕುರುಡನೂ ಆದ ಋಷಿಗೆ ಕಣ್ಣುಗಳೂ, ಕಾಲುಗಳೂ ಬಂದವೆಂದು ಹೇಳಿದೆ.

**ಸರತ್ಪದಾ ನ ದಕ್ಷಿಣಾ ಪರಾವೃಙ್ನ ತಾ ನು ಮೇ ಪೃಶನ್ಯೋ ಜಗೃಭ್ರೇ ।**

(ಋ. ಸಂ. ೧೦-೬೧-೮)

ಎಂಬ ಋಕ್ಕಿನಲ್ಲಿ **ಪರಾವೃಕ್** ಎಂಬ ಶಬ್ದವಿದ್ದರೂ ಈ ಶಬ್ದಕ್ಕೆ ಸಾಯಣರು ಪರಾವರ್ಜಯಿತಾ ಸನ್ ಎಂದು ಅರ್ಥಮಾಡಿದಾರೆ. ಆಂಗ್ಲಪಂಡಿತರಲ್ಲಿ ಕೆಲವರು ಈ ಋಕ್ಕಿನಲ್ಲಿರುವ ಪರಾವೃಕ್ ಶಬ್ದಕ್ಕೆ ಮೇಲೆ ಹೇಳಿದ ಋಷಿಯೆಂದೂ ಅವನು ದಕ್ಷಿಣ ದಿಕ್ಕಿಗೆ ಹೋಗುತ್ತಿರುವ ವಿಷಯವು ಇಲ್ಲಿ ಪ್ರಸ್ತಾಪಿಸಲ್ಪಟ್ಟಿದೆಯೆಂದೂ ಅಭಿಪ್ರಾಯಪಡುವರು—

**ಪರಾವೃಜ್** is a term found in four passages of the Rigveda, in all of which it refers to a person in a forlorn condition while one of them also speaks of him as going South. Sayanas' view that the world is a proper name is most unlikely, while Grassmann's explanation of it as cripple is still less probable. Roth's interpretation of it as exile seems clearly right in the passage which refers to the ಪರಾವೃಜ್ as going south. Zimmer accepts Roth's view for this passage, but in the others sees a reference to the child of a maiden exposed by her and in danger of being eaten by insects (ವಮ್ರಿ). This view is supported by the fact that ಪರಾವೃಕ್ತ seems to have the same sense and is accepted by Oldenberg,

(Vedic Index of Names & Subjects by Macdonell and Keith. P. 492–493)

ಇವರ ಅಭಿಪ್ರಾಯವನ್ನು ಪೂರ್ವಾಪರಸಂಗತಿಗಳೊಡನೆ ವಿಮರ್ಶೆಮಾಡಿದರೆ ಇವರಿಗೆ ಋ. ಸಂ. ೧೦-೬೧-೮ ನೆಯ ಋಕ್ಕಿನ ಅರ್ಥವು ಸರಿಯಾಗಿ ತಿಳಿಯಲಿಲ್ಲವೆಂದು ಹೇಳಬೇಕಾಗುವುದು. ಈ ಋಕ್ಕಿನಲ್ಲಿರುವ ಪರಾವೃಜ್ ಎಂಬ ಶಬ್ದವು ಮೇಲೆ ಹೇಳಿದ ಪ್ರಸಕ್ತವಾದ ಋಷಿಯ ಹೆಸರನ್ನೇ ತಿಳಿಸುವುದೆಂದೂ ಅವನು ದಕ್ಷಿಣ ದಿಕ್ಕಿಗೆ ಹೋಗುತ್ತಿರುವನೆಂದೂ ತಪ್ಪಾದ ಅರ್ಥವನ್ನು ಮಾಡಿಕೊಂಡು ಸಂಶಯವನ್ನು ವ್ಯಕ್ತಪಡಿಸುತ್ತಿರುವರು. ಪರಾವೃಕ್ ಎಂಬ ಶಬ್ದವು ಒಬ್ಬ ಋಷಿಯ ಹೆಸರನ್ನು ಸೂಚಿಸುವುದೆಂಬ ಸಾಯಣರ ವಿವರಣೆಯೇ ಸರಿಯಾಗಿಲ್ಲವೆಂಬ ಇವರ ಅಭಿಪ್ರಾಯವೂ ಸಾಧುವಾದುದಲ್ಲ.

---

ಸಂಹಿತಾಪಾಠಃ

ಅಸ್ಮಭ್ಯಂ ತದ್ವಸೋ ದಾನಾಯ ರಾಧಃ ಸಮರ್ಥಯಸ್ವ ಬಹು ತೇ ವಸವ್ಯಂ ।
ಇಂದ್ರ ಯಚ್ಚಿತ್ರಂ ಶ್ರವಸ್ಯಾ ಅನು ದ್ಯೂನ್ಬೃಹದ್ವದೇಮ ವಿದಥೇ ಸುವೀರಾಃ ॥

ಪದಪಾಠಃ

ಅಸ್ಮಭ್ಯಂ । ತತ್ । ವಸೋ ಇತಿ । ದಾನಾಯ । ರಾಧಃ । ಸಂ । ಅರ್ಥಯಸ್ವ । ಬಹು । ತೇ । ವಸವ್ಯಂ ।
ಇಂದ್ರ । ಯತ್ । ಚಿತ್ರಂ । ಶ್ರವಸ್ಯಾಃ । ಅನು । ದ್ಯೂನ್ । ಬೃಹತ್ । ವದೇಮ । ವಿದಥೇ । ಸುಽವೀರಾಃ ॥ ೧೩ ॥

ಸಾಯಣಭಾಷ್ಯಂ

ವಸೋ ಸರ್ವಸ್ಯ ವಾಸಕ ವಸುಮನ್ವಾ ಹೇ ಇಂದ್ರ ಸ್ತೋತೃಭ್ಯೋಽಸ್ಮಭ್ಯಂ ತದ್ರಾಧೋ ಧನಂ ದಾನಾಯ । ಉಪಲಕ್ಷಣಮೇತತ್ । ಭೋಗಾಯ ಚ ಸಮರ್ಥಯಸ್ವ । ದೇಹಿ । ಅಸ್ಮಾನ್ ಸಂಗಮಯೇತ್ಯರ್ಥಃ ॥ ಅರ್ಥ ಯಾಚನೇ ಚುರಾದಿರದಂತ ಆತ್ಮನೇಪದೀ ॥ ತೇ ತವ ತದ್ಬಹು ಪ್ರಭೂತಂ ವಸವ್ಯಂ ॥ ವಸ್ವೇವ ವಸವ್ಯಂ । ವಸ್ವಾದಿತ್ವಾತ್ ಸ್ವಾರ್ಥಿಕೋ ಯತ್ ॥ ತಾದೃಶಂ ಪ್ರಭೂತಂ ಧನಮಸ್ತಿ ಖಲು । ಚಿತ್ರಂ ಚಾಯನೀಯಂ ಯದ್ಧನಮನು ದ್ಯೂನ್ ಅನ್ವಹಂ ॥ ಕಾಲಾಧ್ವನೋರಿತಿ ದ್ವಿತೀಯಾ ॥ ಶ್ರವಸ್ಯಾಃ । ಭೋಗ್ಯಮಿಚ್ಛೇಃ ॥ ಅಂತರ್ಣೀತಣ್ಯರ್ಥತ್ವಾದಕರ್ಮಕತ್ವಂ । ಯಥಾ ರೋದಿತೀತಿ । ಸತ್ವನ್ಯಃ । ದ್ವೇ ಹ್ಯತ್ರ ಕರ್ಮಣೀ ಉದ್ದೇಶ್ಯಕರ್ಮ ಚ ವಿಧೇಯಕರ್ಮಾಂತರ್ಭೂತಂ । ಉದ್ದೇಶ್ಯಕರ್ಮಣಾ ಸಕರ್ಮಕೋ ಭವಿಷ್ಯತಿ । ಯಥಾ ಮಾಣವಕಂ ಪುತ್ರೀಯತೀತಿ ಭಾಷ್ಯ ಉದಾಹೃತಂ । ಪಾ. ೩-೧-೮-೨ । ಶ್ರವಃಶಬ್ದಾಚ್ಛಂದಸಿ ಪರೇಚ್ಛಾಯಾಂ ಕ್ಯಚ್ । ತದಂತಸ್ಯ ಲೇಟ್ಯಡಾಗಮೇ ರೂಪಂ ॥ ಸುವೀರಾಃ ಕಲ್ಯಾಣಪುತ್ರಪೌತ್ರಾಃ ಸಂತೋ ವಯಂ ವಿದಥೇಽಸ್ಮಿನ್ಯಜ್ಞೇ ಬೃಹತ್ ಪ್ರಭೂತಂ ಶಸ್ತ್ರಾದಿಕಂ ವಾಕ್ಯಂ ವದೇಮ ॥

ಪ್ರತಿಪದಾರ್ಥ

**ವಸೋ**—ಧನವಂತನಾದ । **ಇಂದ್ರ**—ಎಲೈ ಇಂದ್ರನೇ । **ಚಿತ್ರಂ**-ನಾನಾವಿಧವಾದುದೂ ಮತ್ತು ರಮ್ಯವಾದುದೂ ಆದ । **ಯತ್**—ಯಾವ ಧನವನ್ನು । **ಅನು ದ್ಯೂನ್**—ಪ್ರತಿ ದಿನವೂ । **ಶ್ರವಸ್ಯಾಃ**—ಅನುಭವಿಸಲಿಚ್ಛಿಸುತ್ತೀವೆಯೋ ಅಥವಾ ನಾವು ಭೋಗಿಸಬೇಕೆಂದು ನೀನು ಇಚ್ಛಿಸುತ್ತೀಯೋ । **ತೇ**—ನಿನ್ನ ಸಂಬಂಧವಾದುದೂ, **ಬಹು**—ಪ್ರಭೂತವಾದುದೂ । **ವಸವ್ಯಂ**—ಸಂಪದ್ಯುಕ್ತವಾದುದೂ ಆದ । **ತತ್ ರಾಧಃ**—ಆ ಧನವನ್ನು । **ಅಸ್ಮಭ್ಯಂ**—ನಮಗೆ । **ದಾನಾಯ**—ದಾನಕ್ಕೂ ಮತ್ತು ಉಪಭೋಗಕ್ಕೂ ಸಹ । **ಸಮರ್ಥಯಸ್ವ**—ಪೂರ್ಣವಾಗಿ ಕೊಡು । **ಸುವೀರಾಃ**—ಶ್ರೇಷ್ಠವಾದ ಪುತ್ರರಿಂದೊಡಗೂಡಿದ ನಾವು । **ವಿದಥೇ**—ಈ ಯಜ್ಞದಲ್ಲಿ । **ಬೃಹತ್**—ಪ್ರಭೂತವಾದ ಶಸ್ತ್ರಾದಿ ಮಂತ್ರಗಳನ್ನು । **ವದೇಮ**—ಪಠಿಸುವೆವು.

ಭಾವಾರ್ಥ

ಧನವಂತನಾದ ಎಲೈ ಇಂದ್ರನೇ, ನಾವು ಪ್ರತಿದಿನವೂ ಉಪಭೋಗಿಸಬೇಕೆಂದಿಚ್ಛಿಸುವುದೂ, ನಿನ್ನಲ್ಲಿ ಪ್ರಭೂತವಾಗಿಯೂ ಸಂಪದ್ಯುಕ್ತವಾಗಿಯೂ ಇರುವುದೂ ಆದ ಧನವನ್ನು ದಾನಕ್ಕೂ ಉಪಭೋಗಕ್ಕೂ ಸಹ ಪೂರ್ಣವಾಗಿ ಕೊಡು. ಶ್ರೇಷ್ಠವಾದ ಪುತ್ರರಿಂದೊಡಗೂಡಿದ ನಾವು ಈ ಯಜ್ಞದಲ್ಲಿ ಪ್ರಭೂತವಾದ ಶಸ್ತ್ರಾದಿಮಂತ್ರಗಳನ್ನು ಪಠಿಸುವೆವು.

English Translation

Possessor of riches, exert your ability to bestow wealth upon us; for yours is great affluence: may you, Indra, be disposed to grant us exceeding abundance day by day, so that, blessed with worthy descendants, we may glorify you at (our) sacrifice.

ವಿಶೇಷವಿಷಯಗಳು

ಇದುವರೆಗೂ ನಾನಾವಿಧವಾಗಿ ಇಂದ್ರನ ಸಾಹಸಕೃತ್ಯಗಳ ಗುಣವರ್ಣನೆಮಾಡಿ ಈಗ ಸೂಕ್ತದ ಕೊನೆಯದಾದ ಈ ಋಕ್ಕಿನಲ್ಲಿ ಉಪಸಂಹಾರರೂಪವಾಗಿ ಇಂದ್ರನನ್ನು ಸ್ತುತಿಸಿ ಧನಾದಿಗಳನ್ನು ಕೊಡಬೇಕೆಂದು ಪ್ರಾರ್ಥಿಸಲಾಗಿದೆ.

**ವಸೋ—ಸರ್ವಸ್ಯ ವಾಸಕ ವಸುಮನ್ವಾ ಹೇ ಇಂದ್ರ** । ಸರ್ವರಿಗೂ ವಾಸಸ್ಥಾನವನ್ನು ಒದಗಿಸಿ ಕೊಡುವ ಅಥವಾ ಧನವಂತನಾದ ಎಲೈ ಇಂದ್ರನೇ ಎಂದು ಈ ಶಬ್ದಕ್ಕೆ ಎರಡುವಿಧವಾದ ಅರ್ಥವನ್ನೂ ಹೇಳಿರುವರು.

**ಅಸ್ಮಭ್ಯಂ ದಾನಾಯ ರಾಧಃ ಸಮರ್ಥಯಸ್ವ**—ಇತರರಿಗೆ ಕೊಡುವುದಕ್ಕೂ ಮತ್ತು ನಾವು ಉಪಭೋಗಿಸುವುದಕ್ಕೂ ಸಹ ಧನವನ್ನು ನಮಗೆ ಕೊಡು ಎಂದಭಿಪ್ರಾಯವು.

**ಬಹು ತೇ ವಸವ್ಯಂ**—ಎಂಬ ಈ ವಾಕ್ಯದಿಂದ ಇಂದ್ರನಲ್ಲಿ ಬಹಳವಾಗಿ ಧನಾದಿಗಳಿರುವುದೆಂದೂ ಆದ್ದರಿಂದ ತನ್ನನ್ನು ಸ್ತೋತ್ರಮಾಡುವವರಿಗೆ ಧನಾದಿಗಳನ್ನು ಕೊಡಲು ಇಂದ್ರನು ಸಮರ್ಥನಾಗಿರುವನೆಂದೂ ಅರ್ಥವು ಸೂಚಿತವಾಗುವುದು.

ಇಂದ್ರ ಯತ್ ಚಿತ್ರಂ ಶ್ರವಸ್ಯಾಃ ಅನು ದ್ಯೂನ್—ಎಲೈ ಇಂದ್ರನೇ, ಧನವನ್ನಪೇಕ್ಷಿಸುವ ನಮಗೆ ಪ್ರತಿ ದಿನವೂ ನಾನಾವಿಧವಾದ ಧನಾದಿದ್ರವ್ಯಗಳನ್ನು ಕೊಡಬೇಕೆಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ.

ಬೃಹತ್ ವದೇಮ ವಿದಥೇ ಸುವೀರಾಃ—ಸುವೀರಾಃ ಕಲ್ಯಾಣಪುತ್ರಪೌತ್ರಾಃ ಸಂತೋ ವಯಂ ವಿದಥೇಽಸ್ಮಿನ್ಯಜ್ಞೇ ಬೃಹತ್ ಪ್ರಭೂತಂ ಶಸ್ತ್ರಾದಿಕಂ ವಾಕ್ಯಂ ವದೇಮ ‖ ಶ್ರೇಷ್ಠರಾದ ಪುತ್ರಪೌತ್ರಾದಿ ಗಳಿಂದಲೂ ಪರಾಕ್ರಮಿಗಳಾದ ಭೃತ್ಯವರ್ಗದವರಿಂದಲೂ ಸಹಿತರಾದ ನಾವು ಇಂದ್ರನಾದ ನಿನ್ನ ಪ್ರೀತ್ಯರ್ಥವಾಗಿ ಈ ಯಜ್ಞದಲ್ಲಿ ಶಸ್ತ್ರಾದಿಮಂತ್ರಗಳನ್ನು ಬಹಳವಾಗಿ ಪಠಿಸುವೆವು ಎಂದು ಹಿಂದಿನ ಸೂಕ್ತಗಳಲ್ಲಿ ಹೇಳಿರುವಂತೆ ಈ ಸೂಕ್ತದ ಕೊನೆಯಲ್ಲಿಯೂ ಋಷಿಯು ಆಶಂಸನೆಮಾಡಿರುವನು.

---

## ಹದಿನಾಲ್ಕನೆಯ ಸೂಕ್ತವು.

---

### ಸಾಯಣಭಾಷ್ಯಂ

ಅಧ್ವರ್ಯವೋ ಭರತೇತಿ ದ್ವಾದಶರ್ಚಂ ತೃತೀಯಂ ಸೂಕ್ತಂ ಗಾರ್ತ್ಸಮದಂ ತ್ರೈಷ್ಟುಭ-ಮೈಂದ್ರಂ । ಅಧ್ವರ್ಯವೋ ದ್ವಾದಶೇತ್ಯನುಕ್ರಾಂತಂ ‖ ಸೂಕ್ತವಿನಿಯೋಗೋ ಲೈಂಗಿಕಃ । ಅತಿರಾತ್ರೇ ಪ್ರಥಮೇ ಪರ್ಯಾಯೇ ಹೋತುಃ ಶಸ್ತ್ರಯಾಜ್ಯಾಧ್ವರ್ಯವ ಇತ್ಯೇಷಾ । ಅಧ್ವರ್ಯವೋ ಭರತೇಂದ್ರಾಯ ಸೋಮಮಿತಿ ಯಾಜ್ಯಾ । ಆ- ೬-೪ । ಇತಿ ಸೂತ್ರಿತಂ ‖

ಅನುವಾದವು—ಅಧ್ವರ್ಯವೋ ಭರತ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು ; ಇಂದ್ರನು ದೇವ ತೆಯು; ತ್ರಿಷ್ಟುಪ್ ಛಂದಸ್ಸು ಅನುಕ್ರಮಣಿಕೆಯಲ್ಲಿ ಅಧ್ವರ್ಯವೋ ದ್ವಾದಶ ಎಂದು ಮುಂತಾಗಿ ಹೇಳಿರುವುದು. ಈ ಸೂಕ್ತದ ವಿನಿಯೋಗವು ಲೈಂಗಿಕವು. ಅತಿರಾತ್ರವೆಂಬ ಯಾಗದಲ್ಲಿ ಪ್ರಥಮ ಪರ್ಯಾಯದಲ್ಲಿ ಹೋತೃವು ಅಧ್ವ-ರ್ಯವೋ ಭರತೆ ಎಂಬ ಈ ಸೂಕ್ತದ ಮೊದಲನೆಯ ಋಕ್ಕನ್ನು ಶಸ್ತ್ರಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—ಅಧ್ವರ್ಯವೋ ಭರತೇಂದ್ರಾಯ ಸೋಮಮಿತಿ ಯಾಜ್ಯಾ ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೬-೪).

---

॥ ಓಂ ॥

## ಸೂಕ್ತ—೧೪

॥ ಮಂಡಲ—೨ ॥ ಅನುವಾಕ—೨ ॥ ಸೂಕ್ತ—೧೪ ॥

॥ ಅಷ್ಟಕ—೨ ॥ ಅಧ್ಯಾಯ—೬ ॥ ವರ್ಗ—೧೩, ೧೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ॥

ಋಷಿಃ—ಗೃತ್ಸಮದಃ ॥

ದೇವತಾ—ಇಂದ್ರಃ ।

ಛಂದಃ—ತ್ರಿಷ್ಟುಪ್ ।

ಸಂಹಿತಾಪಾಠಃ

ಅಧ್ವರ್ಯವೋ ಭರತೇಂದ್ರಾಯ ಸೋಮಮಾಮತ್ರೇಭಿಃ ಸಿಂಚತಾ ಮದ್ಯಮಂಧಃ ।

ಕಾಮೀ ಹಿ ವೀರಃ ಸದಮಸ್ಯ ಪೀತಿಂ ಜುಹೋತ ವೃಷ್ಣೇ ತದಿದೇಷ ವಷ್ಟಿ ॥

ಪದಪಾಠಃ

ಅಧ್ವರ್ಯವಃ । ಭರತ । ಇಂದ್ರಾಯ । ಸೋಮಂ । ಆ । ಅಮತ್ರೇಭಿಃ । ಸಿಂಚತ । ಮದ್ಯಂ । ಅಂಧಃ ।

ಕಾಮೀ । ಹಿ । ವೀರಃ । ಸದಂ । ಅಸ್ಯ । ಪೀತಿಂ । ಜುಹೋತ । ವೃಷ್ಣೇ । ತತ್ । ಇತ್ । ಏಷಃ । ವಷ್ಟಿ ॥ ॥ ೧ ॥

ಸಾಯಣಭಾಷ್ಯಂ

ಗೃತ್ಸಮದೋ ಬ್ರೂತೇ । ಅಧ್ವರ್ಯವಃ ಅಧ್ವರಸ್ಯ ನೇತಾರಃ । ಅಧ್ವರಂ ಯಜಮಾನಾಯೇಚ್ಛಂತಃ ॥ ಕವ್ಯಧ್ವರಪೃತನಸ್ಯರ್ಚಿ ಲೋಪಃ ಇತ್ಯಕಾರಲೋಪಃ । ಅತ್ರ ಯಾಸ್ಕಃ । ಅಧ್ವರ್ಯುರಧ್ವರಯುರಧ್ವರಂ ಯುನಕ್ತ್ಯಧ್ವರಸ್ಯ ನೇತಾಧ್ವರಂ ಕಾಮಯತ ಇತಿ । ನಿ. ೧-೮ ॥ ಹೇ ಅಧ್ವರ್ಯವಃ ಇಂದ್ರಾಯ ದೇವಾಯ ಸೋಮಂ ಹವಿರ್ಧಾನಾದುತ್ತರವೇದಿಂ ಪ್ರತಿ 'ಭರತ । ಹರತ ॥ ಆಮಂತ್ರಿತಸ್ಯಾವಿದ್ಯಮಾನತ್ವಾದನಿಘಾತಃ ॥ ಹೃತ್ವಾಮತ್ರೇಭಿಃ । ಅಮಾ ಸಹಾದಂತ್ಯತ್ರ ಹೋತ್ರಾದಯ ಇತ್ಯಮತ್ರಾಣಿ ಚಮಸಾಃ । ತೈರ್ಮದ್ಯಂ ಮದಕರಮಂಧಃ ಸೋಮಲಕ್ಷಣಮನ್ನಮಾಸಿಂಚತ । ಅಗ್ನೌ ಪ್ರಕ್ಷಿಪತ । ಅತ್ರ ಯಾಸ್ಕಃ । ಆ ಸಿಂಚತಾಮತ್ರೈರ್ಮದನೀಯಮಂಧೋಽಮತ್ರಂ ಪಾತ್ರಮಮಾ ಅಸ್ಮಿನ್ನದಂತಿ । ನಿ. ೫-೧ । ಇತಿ । ವೀರಃ ಸ ಇಂದ್ರೋಽಸ್ಯ ಸೋಮಸ್ಯ ಪೀತಿಂ ಪಾನಂ ಪ್ರತಿ ಸದಂ ಸದೈವ ಕಾಮೀ ಹಿ । ಕಾಮಯಮಾನೋ ಹಿ । ತಸ್ಮಾದ್ವೃಷ್ಣೇ ವರ್ಷಿತ್ರ ಇಂದ್ರಾಯ ಸೋಮಂ ಜುಹೋತ । ಜುಹುತ ॥ ಹು ದಾನಾದನಯೋಃ । ಲೋಟಿ ತಪ್ತನಪ್ತನಥನಾಶ್ಚೇತಿ ತಬಾದೇಶಃ ॥ ಏಷ ಇಂದ್ರಸ್ತದಿತ್ ತದೇವ ಸೋಮದ್ರವ್ಯಂ ವಷ್ಟಿ । ಕಾಮಯತೇ ॥

ಪ್ರತಿಪದಾರ್ಥ

**ಅಧ್ವರ್ಯವಃ**—ಎಲೈ ಅಧ್ವರ್ಯುಗಳೇ | **ಇಂದ್ರಾಯ**—ಇಂದ್ರನನ್ನುದ್ದೇಶಿಸಿ | **ಸೋಮಂ**—ಸೋಮರಸವನ್ನು | **ಭರತ**—ತೆಗೆದುಕೊಂಡು ಬನ್ನಿ | **ಅಮತ್ರೇಭಿಃ**—ಚಮಸಪಾತ್ರೆಗಳಿಂದ | **ಮದ್ಯಂ**—ಮದಕರವಾದ | **ಅಂಧಃ**—ಸೋಮರೂಪವಾದ ಅನ್ನವನ್ನು | **ಆ ಸಿಂಚತ**—(ಅಗ್ನಿಯ) ಸುತ್ತಲೂ ಪ್ರೋಕ್ಷಣರೂಪದಲ್ಲಿ ಅರ್ಪಿಸಿ | **ವೀರಃ**—ಪರಾಕ್ರಮಿಯಾದ ಇಂದ್ರನು | **ಅಸ್ಯ**—ಈ ಸೋಮರಸದ | **ಪೀತಿಂ**—ಪಾನವನ್ನು | **ಸದಂ**—ಸರ್ವದಾ | **ಕಾಮೀ ಹಿ**—ಇಚ್ಛಿಸುತ್ತಾನಲ್ಲವೇ (ಆದುದರಿಂದ) | **ವೃಷ್ಣೇ**—ಇಷ್ಟಾರ್ಥಪ್ರದನಾದ ಇಂದ್ರನಿಗೆ | **ಜುಹೋತ**—ಸೋಮವನ್ನರ್ಪಿಸಿ ಹೋಮಮಾಡಿ | **ಏಷಃ**—ಇಂದ್ರನು| **ತದಿತ್**—ಅದೇ ಸೋಮವನ್ನು| **ವಷ್ಟಿ**—ಇಚ್ಛಿಸುತ್ತಾನೆ.

ಭಾವಾರ್ಥ

ಎಲೈ ಅಧ್ವರ್ಯುಗಳೇ, ಇಂದ್ರನನ್ನುದ್ದೇಶಿಸಿ ಸೋಮರಸವನ್ನು ತೆಗೆದುಕೊಂಡು ಬನ್ನಿ. ಚಮಸಪಾತ್ರೆಗಳಿಂದ ಮದಕರವಾದ ಸೋಮರೂಪವಾದ ಅನ್ನವನ್ನು ಅಗ್ನಿಯ ಸುತ್ತಲೂ ಪ್ರೋಕ್ಷಣರೂಪದಲ್ಲರ್ಪಿಸಿ. ಪರಾಕ್ರಮಿಯಾದ ಇಂದ್ರನು ಈ ಸೋಮರಸದ ಪಾನವನ್ನು ಸರ್ವದಾ ಇಚ್ಛಿಸುತ್ತಾನೆ. ಆದುದರಿಂದ ಇಷ್ಟಾರ್ಥಪ್ರದನಾದ ಇಂದ್ರನಿಗೆ ಈ ಸೋಮವನ್ನರ್ಪಿಸಿ ಹೋಮಮಾಡಿ.

English Translation

Priests, bring the Soma libation for Indra; sprinkle with ladles the exhilarating beverage: he, the hero, is ever desirous of the draught: offer the libation to the showerer (of benefits), for, verily, he desires it.

ವಿಶೇಷವಿಷಯಗಳು

ಈ ಸೂಕ್ತವು **ಅಧ್ವರ್ಯವೋ ಭರತೇಂದ್ರಾಯ ಸೋಮಂ**—ಎಂಬ ವಾಕ್ಯದಿಂದ ಪ್ರಾರಂಭವಾಗುವುದು; ಎಲೈ ಅಧ್ವರ್ಯುನಾಮಕ ಋತ್ವಿಜರೇ, ಇಂದ್ರನಿಗಾಗಿ ಸೋಮರಸವನ್ನು ತೆಗೆದುಕೊಂಡು ಬನ್ನಿ ಎಂದು ಈ ವಾಕ್ಯದ ಅರ್ಥವು. ಈ ಸೂಕ್ತದ ಪ್ರತಿ ಋಕ್ಕೂ (ಕೊನೆಯ ಋಕ್ಕನ್ನು ಬಿಟ್ಟು) ಅಧ್ವರ್ಯವಃ ಎಂಬ ಶಬ್ದದಿಂದಲೇ ಪ್ರಾರಂಭವಾಗಿದೆ. ಪ್ರತಿಋಕ್ಕಿನಲ್ಲಿಯೂ ಇಂದ್ರನ ಒಂದೆರಡು ಸಾಹಸಕಾರ್ಯಗಳೂ ಮತ್ತು ಇಂದ್ರನ ಸೋಮಪಾನವಿಚಾರವೂ ಹೇಳಲ್ಪಟ್ಟಿರುವುದಲ್ಲದೆ ಮೇಲೆ ಹೇಳಿದ **ಅಧ್ವರ್ಯವೋ ಭರತೇಂದ್ರಾಯ ಸೋಮಂ** ಎಂಬ ವಾಕ್ಯ ಅಥವಾ ಆ ವಾಕ್ಯದ ಅರ್ಥವನ್ನೊಳಗೊಂಡ ಬೇರೆ ವಾಕ್ಯವೂ ಇದ್ದೇ ಇರುವುದು

**ಅಧ್ವರ್ಯವಃ**—ಅಧ್ವರಸ್ಯ ನೇತಾರಃ | ಅಧ್ವರಂ ಯಜಮಾನಾಯೇಚ್ಛಂತಃ | ಅಧ್ವರವೆಂದರೆ ಯಜ್ಞವು. ಅದರಲ್ಲಿ ಮುಂದಾಳಾಗಿ ಎಂದರೆ ಮುಖ್ಯ ಪಾತ್ರವನ್ನು ವಹಿಸಿ ಯಜ್ಞದ ನಾನಾ ಕಾರ್ಯಗಳನ್ನು ನೆರವೇರಿಸುವ ಋತ್ವಿಜನಿಗೆ ಅಧ್ವರ್ಯುವೆಂದು ಹೆಸರು. ಅಥವಾ ಯಜಮಾನನಿಗಾಗಿ ಯಜ್ಞಮಾಡಲು ಇಚ್ಛಿಸುವವನು ಎಂದರೆ ಯಜ್ಞದಲ್ಲಿ ನೆರವೇರಿಸಬೇಕಾದ ಅನೇಕ ಕಾರ್ಯಕಲಾಪಗಳನ್ನು ಯಜಮಾನನ ಪ್ರತಿನಿಧಿಯಂತೆ ತಾನೇ ನಿಂತು ಮಾಡುವ ಋತ್ವಿಜನಿಗೆ ಅಧ್ವರ್ಯುವೆಂದು ಹೆಸರು. ಯಜ್ಞದಲ್ಲಿ ಅನೇಕ ಮಂದಿ ಋತ್ವಿಕ್ಕುಗಳಿದ್ದರೂ ಅವರಲ್ಲಿ ಮಂತ್ರಪಠನಕಾರ್ಯದಲ್ಲಿ ಹೋತೃವೂ, ಇತರ ಸಮಸ್ತ ಕಾರ್ಯಕಲಾಪಗಳಲ್ಲಿ ಅಧ್ವರ್ಯುವೂ ಮುಖ್ಯ

ಪಾತ್ರವನ್ನು ವಹಿಸುವರು. ಆದುದರಿಂದ ಯಜ್ಞದಲ್ಲಿ ನಡೆಯುವ ಸಮಸ್ತ ಕಾರ್ಯಕಲಾಪಗಳಿಗೂ ಅಧ್ವರ್ಯುವೇ ವಿಶೇಷವಾಗಿ ಗಮನಕೊಡಬೇಕಾಗಿದೆ. ಆದುದರಿಂದಲೇ ಇಲ್ಲಿ ಇಂದ್ರನ ಸೋಮಪಾನಾರ್ಥವಾಗಿ ಸೋಮರಸವನ್ನು ಸಿದ್ಧಮಾಡಿ ತಂದಿಡಬೇಕೆಂದು ಅಧ್ವರ್ಯುಗಳೆಂಬ ಋತ್ವಿಜರನ್ನೇ ಸಂಬೋಧಿಸಲಾಗಿದೆ. ಅಧ್ವರ್ಯುಶಬ್ದದ ನಿರ್ವಚನವಿಚಾರದಲ್ಲಿ ಯಾಸ್ಕರು—

> **ಅಧ್ವರ್ಯುರಧ್ವರಯುರಧ್ವರಂ ಯುನಕ್ತ್ಯಧ್ವರಸ್ಯ ನೇತಾಧ್ವರಂ ಕಾಮಯತ ಇತಿ ವಾ । ಅಪಿ ವಾಧೀಯಾನೇ ಯುರುಪಬಂಧಃ । ಅಧ್ವರ ಇತಿ ಯಜ್ಞನಾಮ । ಧ್ವರತಿರ್ಹಿಂಸಾಕರ್ಮಾ ತತ್ಪ್ರತಿಷೇಧಃ ।**
>
> (ನಿ. ೧-೮)

ಎಂದು ಹೇಳಿದ್ದಾರೆ. ಅಧ್ವರ್ಯುಶಬ್ದಕ್ಕೆ ಯಜ್ಞದ ಸ್ವರೂಪವನ್ನುಂಟುಮಾಡುವವನು ಎಂದರ್ಥವಾಗುವುದು. ಹೇಗೆಂದರೆ, ಅಧ್ವರ್ಯು ಎಂಬ ಪದದಲ್ಲಿ ರಕಾರದ ಮುಂದೆ ಇದ್ದ ಅಕಾರವು ವೇದವ್ಯಾಕರಣಸಾಸ್ತ್ರಾನುಸಾರವಾಗಿ ಲೋಪವನ್ನು ಹೊಂದಿರುವುದು. ಅದನ್ನು ಪುನಃ ಸೇರಿಸಿಕೊಂಡರೆ **ಅಧ್ವರಯುಃ** ಎಂದಾಗುವುದು. ಇದಕ್ಕೆ ಯಾಸ್ಕರು **ಅಧ್ವರಂ ಯುನಕ್ತೀತಿ ಅಧ್ವರಯುಃ**—ಯಾಗವನ್ನು ಸೇರಿಸುವವನು ಎಂದು ನಿರ್ವಚನಮಾಡಿರುವರು. **ಅಧ್ವರಸ್ಯ ನೇತಾ**—ಎಂದರೆ ಯಾಗವನ್ನು ನಡೆಸುವವನು ಎಂದು ತಾತ್ಪರ್ಯವು. ಅಥವಾ **ಅಧ್ವರಂ ಕಾಮಯತೇ ಕರ್ತುಮಿತ್ಯಧ್ವರ್ಯುಃ**—ಅಥವಾ ಯಜ್ಞವನ್ನು (ಯಜಮಾನನಿಗಾಗಿ) ಮಾಡಲು ಅಪೇಕ್ಷಿಸುವುದರಿಂದ ಈ ಋತ್ವಿಜನಿಗೆ ಅಧ್ವರ್ಯುವೆಂದು ಹೆಸರು. ಅಥವಾ **ಅಪಿ ವಾಧೀಯಾನೇ ಯುರುಪಬಂಧಃ**—ಅಥವಾ ಯು ಎಂಬುದನ್ನು ಉಪಸರ್ಗವೆಂದು ಪರಿಗಣಿಸಿದರೆ ಅಧ್ವರ ಅಥವಾ ಯಜ್ಞವನ್ನು (ಯಜ್ಞಕ್ಕೆ ಸಂಬಂಧಪಟ್ಟ ವಿಷಯ ಗಳನ್ನು ತಿಳಿಸುವ ಯಜುರ್ವೇದವನ್ನು) ಅಧ್ಯಯನಮಾಡಿದ ಬ್ರಾಹ್ಮಣ (ಋತ್ವಿಕ್ಕು) ಎಂದಾಗುವುದು. ಇಲ್ಲಿ ಧ್ವರತಿ ಧಾತುವಿಗೆ ಹಿಂಸೆಮಾಡು ಎಂಬರ್ಥವಿರುವುದರಿಂದ ಧ್ವರವೆಂದರೆ ಹಿಂಸೆಯು. ಅಧ್ವರವೆಂದರೆ ಧ್ವರವಿಲ್ಲದಿರುವ ಅಥವಾ ಹಿಂಸೆಯಿಲ್ಲದಿರುವ ಕರ್ಮ ಅಥವಾ ಯಜ್ಞವೆಂದು ಅಧ್ವರಶಬ್ದಕ್ಕೆ ಅರ್ಥವಿವರಣೆಮಾಡಿರುವರು. ಆದುದರಿಂದ ಅಧ್ವರಯು ಅಥವಾ ಅಧ್ವರ್ಯುಶಬ್ದಕ್ಕೆ (ಹಿಂಸಾಕರ್ಮವಲ್ಲದ) ಯಜ್ಞಕರ್ಮವನ್ನು ನೆರವೇರಿಸುವ ಋತ್ವಿಜನು ಎಂದು ಮುಖ್ಯಾಭಿಪ್ರಾಯವು.

**ಅಧ್ವರ್ಯವಃ ಭರತ ಇಂದ್ರಾಯ ಸೋಮಂ—ಹೇ ಅಧ್ವರ್ಯವಃ ಇಂದ್ರಾಯ ದೇವಾಯ ಸೋಮಂ ಹವಿರ್ಧಾನಾದುತ್ತರವೇದಿಂ ಪ್ರತಿ ಭರತ ।** ಎಲೈ ಅಧ್ವರ್ಯುನಾಮಕ ಋತ್ವಿಜರೇ, ಹವಿರ್ಧಾನ ಪ್ರದೇಶದಲ್ಲಿರುವ ಸೋಮರಸವನ್ನು ಇಂದ್ರನಿಗೆ ಅರ್ಪಿಸುವುದಕ್ಕಾಗಿ ಉತ್ತರವೇದಿಗೆ ತೆಗೆದುಕೊಂಡು ಬನ್ನಿ ಎಂದು ಗೃತ್ಸಮದಋಷಿಯು (ಅಥವಾ ಯಜಮಾನನು) ಅಧ್ವರ್ಯುಗಳನ್ನು ಸಂಬೋಧಿಸಿ ಹೇಳಿರುವನು.

**ಅಂಧಃ**—ಅಂಧಃ ಎಂಬ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ಇದಲ್ಲದೆ ಈ ಶಬ್ದಕ್ಕೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

> **ಅಂಧ ಇತ್ಯನ್ನನಾಮಾಧ್ಯಾನೀಯಂ ಭವತಿ । ತಮೋಽಪ್ಯಂಧ ಉಚ್ಯತೇ ನಾಸ್ಮಿನ್ ಧ್ಯಾನಂ ಭವತಿ । ನ ದರ್ಶನಮಂಧನ್ತಮ ಇತ್ಯಭಿಭಾಷಂತೇ । ಅಯಮಪೀತರೋಽನ್ಧ ಏತಸ್ಮಾದೇವ । ಪಶ್ಯದಕ್ಷಣ್ವಾನ್ನ ವಿಚೇತದಂಧಃ ಇತ್ಯಪಿ ನಿಗಮೋ ಭವತಿ ॥**
>
> (ನಿ ೫-೧)

ಎಂದರೆ, ಅಂಧಃ ಶಬ್ದಕ್ಕೆ ಅನ್ನವೆಂದು ಹೆಸರು. ಏತಕ್ಕೆಂದರೆ ಅನ್ನವು ಎಲ್ಲರಿಗೂ ಬೇಕಾಗಿರುವುದರಿಂದ ಅದು ಎಲ್ಲರಿಂದಲೂ ಪ್ರಾರ್ಥಿಸಲ್ಪಡುವುದು (ಅಪೇಕ್ಷಿಸಲ್ಪಡುವುದು) ಆದುದರಿಂದ ಅಂಧಃ ಎಂದರೆ ಅನ್ನವು. ಅಂಧಃ ಎಂದರೆ ತಮಸ್ಸಿಗೂ (ಕತ್ತಲೆಗೂ) ಹೆಸರು. ಏತಕ್ಕೆಂದರೆ ಕತ್ತಲೆಯಲ್ಲಿ ಏನೂ ಕಾಣಿಸದಿರುವುದರಿಂದ ಯಾವುದನ್ನೂ ಮಾಡಲಾಗುವುದಿಲ್ಲ. ಲೋಕವ್ಯವಹಾರದಲ್ಲಿಯೂ ಕೂಡ ಜನರು ಕಣ್ಣಿಗೆ ಕಾಣಿಸದಿರುವಂತೆ ಕತ್ತಲೆ ಕವಿದಿರುವಾಗ ಅಂಧಂತಮವೆಂದು ಹೇಳುವರು. ಈ ವಿಷಯದಲ್ಲಿ **ಪಶ್ಯ ದಕ್ಷಣ್ವಾನ್ನ ವಿಚೇತದಂಧಃ** (ಋ. ಸಂ ೧-೧೬೪-೧೬) ಎಂದು ವೇದವಾಕ್ಯದ ಉದಾಹರಣೆಯೂ ಇರುವುದು ಎಂದು ಹೇಳಿದಾರೆ.

**ಆ ಅಮತ್ರೇಭಿಃ ಸಿಂಚತ ಮದ್ಯಂ ಅಂಧಃ—ಹೃತ್ವಾಮತ್ರೇಭಿಃ । ಅಮಾ ಸಹಾದಂತ್ಯೈತ್ರ ಹೋತ್ರಾದಯ ಇತ್ಯಮತ್ರಾಣಿ ಚಮಸಾಃ । ತೈರ್ಮದ್ಯಂ ಮದಕರಮಂಧಃ ಸೋಮಲಕ್ಷಣಮನ್ನಮಾಸಿಂಚತ । ಅಗ್ನೌ ಪ್ರಕ್ಷಿಪತ ।** ಹಿಂದಿನ ವಾಕ್ಯದಲ್ಲಿ ಇಂದ್ರನಿಗೆ ಅರ್ಪಿಸುವುದಕ್ಕಾಗಿ ಸೋಮವನ್ನು ಉತ್ತರವೇದಿಯ ಬಳಿಗೆ ತಂದಿರಿಸಬೇಕೆಂದು ಅಧ್ವರ್ಯುಗಳಿಗೆ ನಿರ್ದೇಶಿಸಲಾಗಿದೆಯಷ್ಟೆ. ಆರೀತಿ ತಂದ ಸೋಮವನ್ನು ಅಥವಾ ಸೋಮರೂಪದ ಅನ್ನವನ್ನು ಚಮಸ (ಮರದ ಸೌಟು) ಗಳಿಂದ ಇಂದ್ರನನ್ನುದ್ದೇಶಿಸಿ ಅಗ್ನಿಯಲ್ಲಿ ಹೋಮಮಾಡಿರಿ ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು. ಅಮತ್ರಶಬ್ದಕ್ಕೆ ಭಾಷ್ಯಕಾರರು—**ಅಮಾ ಸಹಾದಂತ್ಯೈತ್ರ ಹೋತ್ರಾದಯ ಇತ್ಯಮತ್ರಾಣಿ ಚಮಸಾಃ ।** ಎಂದರೆ ಯಜ್ಞದಲ್ಲಿ ಸೋಮಪಾನಮಾಡುವಾಗ ಹೋತೃ ಮೊದಲಾದ ಋತ್ವಿಜರು ಒಟ್ಟಿಗೆ ಎಂದರೆ ಎಲ್ಲರೂ ಒಂದೇ ಪಾತ್ರೆಯಿಂದ ಭಕ್ಷಿಸುವುದರಿಂದ ಅಥವಾ ಪಾನಮಾಡುವುದರಿಂದ ಅ ತಹ ಪಾತ್ರೆಗೆ ಚಮಸವೆಂದು ಹೆಸರು ಎಂದು ಹೇಳಿದ್ದಾರೆ. ಚಮಸವೆಂಬುದು ಮರದಿಂದ ಮಾಡಲ್ಪಟ್ಟು ಹಿಡಿಯಿಂದ ಕೂಡಿ ಸೌಟಿನ ಆಕಾರದಲ್ಲಿರುವುದು. ಈ ಚಮಸದಿಂದಲೇ ಎಲ್ಲಾ ಋತ್ವಿಜರೂ ಸೋಮಪಾನಮಾಡುವರು. ಪ್ರತಿಯೊಬ್ಬರೂ ಬೇರೆಬೇರೆ ಪಾತ್ರೆಗಳನ್ನು ಉಪಯೋಗಿಸುವುದಿಲ್ಲ. ಎಲ್ಲರಿಗೂ ಒಂದೇ ಪಾತ್ರೆಯು. ಯಾಸ್ಕರು **ಅಮತ್ರೇಭಿಃ** ಎಂಬ ಶಬ್ದಕ್ಕೆ ಇದೇ ಋಕ್ಕನ್ನು ಉದಾಹರಣೆಯಾಗಿ ತೆಗೆದುಕೊಂಡು—

**ಅಮತ್ರೇಭಿಃ ಸಿಂಚತಾ ಮದ್ಯಮಂಧಃ । ಆಸಿಂಚತಾಮತ್ರೈರ್ಮದನೀಯಮಂಧಃ । ಅಮತ್ರಂ ಪಾತ್ರಮಮಾ ಅಸ್ಮಿನ್ನದಂತ್ಯಮಾ ಪುನರನಿರ್ಮಿತಂ ಭವತಿ ಪಾತ್ರಂ ಪಾನಾತ್ ।**

(ನಿ. ೧-೫)

ಎಂದು ನಿರ್ವಚನವನ್ನು ಹೇಳಿದ್ದಾರೆ. ಎಂದರೆ, ಅಮತ್ರವೆಂದರೆ ಪಾತ್ರೆಯು. ಏಕೆಂದರೆ., ಇದರಿಂದ (ಅನ್ನ ಅಥವಾ ಸೋಮವನ್ನು) ಸ್ವಲ್ಪಸ್ವಲ್ಪವಾಗಿ ತೆಗೆದುಕೊಂಡು ಭಕ್ಷಿಸುವುದರಿಂದ ಇಂತಹ ಸೌಟನಂತಿರುವ ಪಾತ್ರೆಗೆ ಅಮತ್ರವೆಂದು ಹೆಸರು. ಅಮಾ ಎಂದರೆ ಪರಿಮಾಣರಹಿತವಾದದ್ದು. ಒಂದು ದೊಡ್ಡ ಪಾತ್ರೆಯಲ್ಲಿ ಸೋಮರಸವನ್ನು ಅಧಿಕವಾಗಿ (ಪರಿಮಾಣ ಅಥವಾ ಅಳತೆ ಮುಂತಾದದ್ದಿಲ್ಲದೆ) ತುಂಬಿರುವಾಗ ಅದನ್ನು ಕುಡಿಯಬೇಕಾದರೆ ಅಮತ್ರ ಅಥವಾ ಚಮಸವೆಂಬ ಮರದ ಸೌಟನಿಂದ ಸ್ವಲ್ಪಸ್ವಲ್ಪವಾಗಿ ತುಂಬಿಕೊಂಡು ಪಾನಮಾಡುವರು. (Like drinking tea or coffee by means of spoons) ಇಂತಹಪಾತ್ರೆಗೆ ಅಮತ್ರ ಅಥವಾ ಚಮಸವೆಂದು ಹೆಸರು. ಇಂತಹ ಚಮಸಗಳಿಂದ ಮದಕರವಾದ ಎಂದರೆ ಹರ್ಷವನ್ನುಂಟುಮಾಡುವ ಸೋಮರೂಪವಾದ ಅನ್ನವನ್ನು ತುಂಬಿಕೊಂಡು (ಇಂದ್ರನನ್ನುದ್ದೇಶಿಸಿ ಅಗ್ನಿಯಲ್ಲಿ) ಹಾಕಿರಿ ಎಂದು ವಾಕ್ಯಾಭಿಪ್ರಾಯವು. ಇಂದ್ರನು ಪ್ರತ್ಯಕ್ಷದೇವತೆಯಲ್ಲವಾದ್ದರಿಂದ ಅವನಿಗೆ ಸಮರ್ಪಿಸುವ ಹವಿರಾದಿಗಳೆಲ್ಲವೂ ಅವನನ್ನುದ್ದೇಶಿಸಿ ಮಂತ್ರಪೂರ್ವಕವಾಗಿ

ಅಗ್ನಿಯಲ್ಲೇ ಹೋಮಮಾಡಬೇಕಾಗಿರುವುದರಿಂದ ಆ ಸಿಂಚತ ಎಂದರೆ ವಷಟ್ಕಾರಪೂರ್ವಕವಾಗಿ ಅಗ್ನಿಯಲ್ಲೇ ಹೋಮಮಾಡಿ ಎಂಬ ಅರ್ಥವು ಬೋಧ್ಯವಾಗುವುದು. ಇದಲ್ಲದೆ ಈ ಋಕ್ಕಿನ ಉತ್ತರಾರ್ಧದಲ್ಲಿ ಜುಹೋತ— ಅಗ್ನಿಯಲ್ಲಿ ಹೋಮಮಾಡಿ ಎಂಬ ಶಬ್ದಪ್ರಯೋಗವೇ ಇರುವುದು. ಈ ವಾಕ್ಯದಲ್ಲಿ ಮದ್ಯಂ ಅಂಧಃ ಎಂಬ ಎರಡು ಶಬ್ದಗಳೂ ಇರುವುದರಿಂದ ಮದಕರವಾದ ಸೋಮರಸರೂಪದ ಹವಿಸ್ಸೆಂದಾಗಲಿ (ಅನ್ನ) ಅಥವಾ ಮದಕರವಾದ ಸೋಮರಸ ಮತ್ತು ಹವೀರೂಪವಾದ ಅನ್ನ ಎಂಬ ಎರಡು ವಿಧವಾದ ದ್ರವ್ಯಗಳು ಎಂದಾಗಲಿ ಅರ್ಥವಾಗ ಬಹುದು. ಆದರೆ ಈ ಸೂಕ್ತದ ಎಲ್ಲಾ ಋಕ್ಕುಗಳಲ್ಲಿಯೂ ಇಂದ್ರನ ಪಾನಾರ್ಥವಾಗಿ ಸೋಮರಸದ ವಿಷಯ ಮಾತ್ರವೇ ಪ್ರಸ್ತಾಪಿಸಲ್ಪಟ್ಟಿರುವುದರಿಂದ ಮದ್ಯಮಂಧಃ ಎಂಬ ಶಬ್ದಗಳಿಗೆ ಸೋಮರೂಪದಲ್ಲಿರುವ ಹವಿಸ್ಸನ್ನು ಎಂದರೆ ಸೋಮವನ್ನು ಎಂದರ್ಥಮಾಡುವುದೇ ಸಮಂಜಸವಾಗಿರುವುದು.

**ಕಾಮೀ ಹಿ ವೀರಃ ಸದಂ ಅಸ್ಯ ಪೀತಿಂ—ವೀರಃ ಸ ಇಂದ್ರೋಽಸ್ಯ ಸೋಮಸ್ಯ ಪೀತಿಂ ಪಾನಂ ಪ್ರತಿ ಸದಂ ಸದೈವ ಕಾಮೀ ಹಿ ಕಾಮಯಮಾನೋ ಹಿ** | ಪರಾಕ್ರಮಿಯಾದ ಇಂದ್ರನು ಸೋಮಪಾನವನ್ನು ಅಪೇಕ್ಷಿಸು ವವನಲ್ಲವೇ ಎಂದು ಮುಖ್ಯಾಭಿಪ್ರಾಯವು. ಎಲ್ಲಾ ದೇವತೆಗಳಿಗಿಂತಲೂ ಇಂದ್ರನಿಗೆ ಸೋಮಪಾನದಲ್ಲಿ ಆಸಕ್ತಿಯು ಹೆಚ್ಚು. ಆದುದರಿಂದ ಎಲ್ಲಾ ಋಷಿಗಳೂ ತಾವು ಮಾಡುವ ಯಜ್ಞಗಳಲ್ಲಿ ಇಂದ್ರನು ಬಂದು ತಾವು ಅರ್ಪಿಸುವ ಸೋಮವನ್ನು ಪಾನಮಾಡಬೇಕೆಂದು ಪ್ರಾರ್ಥಿಸಿದಾರೆ.

**ಜುಹೋತ ವೃಷ್ಣೇ ತತ್ ಇತ್ ಏಷಃ ವಷ್ಟಿ—ತಸ್ಮಾದ್ವೃಷ್ಣೇ ವರ್ಷಿತ್ರ ಇಂದ್ರಾಯ ಸೋಮಂ ಜುಹೋತ | ಏಷ ಇಂದ್ರಸ್ತದಿತ್ ತದೇವ ಸೋಮದ್ರವ್ಯಂ ವಷ್ಟಿ ಕಾಮಯತೇ** | ಆದುದರಿಂದ ವೃಷ್ಟಿಪ್ರದ ನಾದ ಅಥವಾ ಕಾಮಾರ್ಥಪ್ರದನಾದ ಇಂದ್ರನನ್ನುದ್ದೇಶಿಸಿ ಸೋಮರಸವನ್ನು ಅಗ್ನಿಯಲ್ಲಿ ಹೋಮಮಾಡಿರಿ. ಏಕೆಂದರೆ ಇದನ್ನೇ (ಎಂದರೆ ಸೋಮಪಾನವನ್ನೇ ಈ ಇಂದ್ರನು ಅಪೇಕ್ಷಿಸುತ್ತಾನೆ.) ಈ ಋಕ್ಕಿನ ಎರಡನೆಯ ಮತ್ತು ನಾಲ್ಕನೆಯ ಪಾದಗಳಲ್ಲಿ ಹೇಳಿರುವ ವಿಷಯವು ಒಂದೇ ಆದರೂ ಅರ್ಥವನ್ನು ಸ್ಪಷ್ಟವಾಗಿ ವಿವರಿಸುವುದಕ್ಕಾಗಿ ಬೇರೆ ಬೇರೆ ಶಬ್ದಗಳಿಂದಲೂ, ಬೇರೆಬೇರೆ ವಾಕ್ಯಗಳಿಂದಲೂ ಅಭಿಪ್ರಾಯವನ್ನು ಋಷಿಯು ವ್ಯಕ್ತಪಡಿಸಿರುವನು.

ಈ ಋಕ್ಕಿಗೆ ನಿರುಕ್ತವ್ಯಾಖ್ಯಾಕಾರವಾದ ದುರ್ಗಾಚಾರ್ಯರು ಬರೆದಿರುವ ಭಾಷ್ಯವು ಕೆಲವು ಸ್ಪಷ್ಟವಾದ ವಿವರಣೆಗಳಿಂದ ಕೂಡಿರುವುದರಿಂದ ಅದನ್ನು ಇಲ್ಲಿ ಕೊಟ್ಟಿದೆ—

**ಗೃತ್ಸಮದಸ್ಯೇಯಮಾರ್ಷಂ | ರಾತ್ರಿಪರ್ಯಾಯೇ ಶಸ್ಯತೇ | ಹೋತುಃ ಶಸ್ತ್ರೇ ವಿನಿಯುಕ್ತಾ | ಅಸ್ಯೈವ ಚ ಶಸ್ತ್ರಸ್ಯ ಯಾಜ್ಯೇಷಾ || ಹೇ ಅಧ್ವರ್ಯವಃ ಭರತ ಪ್ರಾಪಯತೇಮಂ ಸೋಮಂ | ಏತಸ್ಮಾದ್ಧವಿರ್ಧಾನಾದುತ್ತರವೇದಿಂ ಇಂದ್ರಾಯ ಇಂದ್ರಾರ್ಥಂ | ಅಥವಾ ಭರತ ಧಾರಯತಾ- ಗ್ನೇರುಪರಿ | ತತಶ್ಚೈನಂ ಆಮತ್ರೇಭಿಃ ಅಮತ್ರೈಃ ಪಾತ್ರೈಃ ಏಭಿಃ ಸೋಮಚಮಸೈಃ ವಷಟ್ಕಾರೇ ಪ್ರಾಪ್ತೇ ಆಸಿಂಚತ ತಸ್ಮಿನ್ನಗ್ನೌ | ಮದ್ಯಂ ಮದನೀಯಂ ಏತತ್ಸೋಮಾಖ್ಯಂ ಅಂಧಃ | ತಸ್ಮಾತ್ ಪುನರೇವಂ ಬ್ರವೀಮಿ | ಇತಃ ಯಸ್ಮಾತ್ ಕಾಮೀ ಹಿ ವೀರಃ ಕಾಮಯತ ಏವ ವೀರಃ ಇಂದ್ರಃ ಅಸ್ಯ ಸೋಮಸ್ಯ ಸದಂ ಸದೈವ ನಿತ್ಯಕಾಲಮೇವ ಪೀತಿಂ ಪಾನಮಿ- ತ್ಯರ್ಥಃ | ತಸ್ಮಾತ್ ಕಾರಣಾತ್ ಜುಹೋತ ತಸ್ಮೈ ವೃಷ್ಣೇ ವರ್ಷಿತ್ರೇ ಇಂದ್ರಾಯ ಏತಂ ಸೋಮಂ | ಕಿಮೇತಮೇವ ಕೇವಲಂ ಸೋಮಮೇಷ ಕಾಮಯತೇ ? ನೇತ್ಯುಚ್ಯತೇ |**

ತದಿದೇಷ ವಷ್ಟಿ ತತ್ತತ್ಸೋಮಪ್ರದಾನಮೇಷ ಇಂದ್ರೋ ವಷ್ಟಿ ಕಾಮಯತ ಇತ್ಯರ್ಥಃ। ನ ಕೇವಲಂ ರಾತ್ರಿಪರ್ಯಾಯೇಷ್ವಿತ್ಯರ್ಥಃ । ತಸ್ಮಾದಾಸಿಂಚತ ಇಮಂ ಸೋಮಂ ಮಾ ವಿಲಂಬಧ್ವಮಿತ್ಯಭಿಪ್ರಾಯಃ । ಏವಮತ್ರ ದಾನಸಂಬಂಧಾತ್ ಅಂಧಃ ಶಬ್ದೋಽನ್ನಾರ್ಥ ಉಪಪದ್ಯತೇ । ಪಠಿತಮಪಿ ಚಾನ್ನನಾಮಸು । ಅನೇಕಾರ್ಥತ್ವಾತ್ ತು ಸಂದಿಹ್ಯತೇ ಇತ್ಯೇಷ ನಿಗಮ ಉಪಾತ್ತಃ ॥ (ನಿ ೫-೧. ದು. ವ್ಯಾ.)

ಎಂದರೆ ಈ ಋಕ್ಕು ಗೃತ್ಸಮದಋಷಿದೃಷ್ಟವಾದುದು. ಅತಿರಾತ್ರವೆಂಬ ಯಾಗದಲ್ಲಿ ರಾತ್ರಿಪರ್ಯಾಯದಲ್ಲಿ ಹೋತೃವು ಪಠಿಸುವ ಶಸ್ತ್ರಮಂತ್ರಗಳಿಗಾಗಿಯೂ ಮತ್ತು ಶಸ್ತ್ರಮಂತ್ರದ ಯಾಜ್ಯಾಮಂತ್ರವನ್ನಾಗಿಯೂ ಈ ಋಕ್ಕನ್ನು ಪಠಿಸಬೇಕೆಂದು ಇದರ ವಿನಿಯೋಗವಿರುವುದು. ಎಲೈ ಅಧ್ವರ್ಯುನಾಮಕಋತ್ವಿಜರೇ, ಈ ಸೋಮವನ್ನು ಇಂದ್ರನ ಪಾನಾರ್ಥವಾಗಿ ಹವಿರ್ಧಾನಪ್ರದೇಶದಿಂದ ಉತ್ತರವೇದಿಯ ಬಳಿಗೆ ತೆಗೆದುಕೊಂಡುಹೋಗಿ. ಅನಂತರ ಚಮಸಪಾತ್ರೆಗಳಿಂದ ಮದಕಾರಕವಾದ ಈ ಸೋಮರಸರೂಪವಾದ ಅನ್ನವನ್ನು ತುಂಬಿಕೊಂಡು ಅಗ್ನಿಯಲ್ಲಿ ಹೋಮ ಮಾಡಿ. ಏಕೆಂದರೆ ಪರಾಕ್ರಮಶಾಲಿಯಾದ ಈ ಇಂದ್ರನು ಸರ್ವಕಾಲದಲ್ಲಿಯೂ ಸೋಮಪಾನದಲ್ಲಿ ಆಸಕ್ತನಾಗಿರುವನು. ಆದುದರಿಂದ ಸರ್ವಕಾಮಫಲಪ್ರದನಾದ ಇಂದ್ರನನ್ನುದ್ದೇಶಿಸಿ ಅಗ್ನಿಯಲ್ಲಿ, ಸೋಮವನ್ನು ಹೋಮಮಾಡಿ. ಅದನ್ನೇ ಇಂದ್ರನು ಅಪೇಕ್ಷಿಸುತ್ತಾನೆ. ರಾತ್ರಿಕಾಲಮಾತ್ರವಲ್ಲ, ಸದಾಕಾಲದಲ್ಲಿಯೂ ಇಂದ್ರನು ಸೋಮಪಾನವನ್ನಪೇಕ್ಷಿಸುತ್ತಾನೆ. ಆದುದರಿಂದ ವಿಳಂಬಮಾಡದೆ ಸೋಮವನ್ನು ಹೋಮಮಾಡಿರಿ. ಅಂಧಶ್ಶಬ್ದಕ್ಕೆ ಅನ್ನವೆಂಬ ಅರ್ಥವೂ ಇರುವುದರಿಂದ ಪ್ರಕೃತ ಋಕ್ಕಿನಲ್ಲಿ ಅಂಧಃ ಶಬ್ದಕ್ಕೆ ಅನ್ನವೆಂಬ ಅರ್ಥವೇ ಇರುವುದೆಂಬುದನ್ನು ಸೂಚಿಸುವುದಕ್ಕಾಗಿ ನಿರುಕ್ತಕಾರರು **ಆಮತ್ರೇಭಿಃ ಸಿಂಚತಾ ಮದ್ಯಮಂಧಃ** ಎಂದು ನಿಗಮ (ವೇದ) ವಾಕ್ಯವನ್ನು ಉದಾಹರಣೆಯಾಗಿ ಕೊಟ್ಟಿರುವರು ಎಂದು ಮೇಲಿನ ಭಾಷ್ಯದ ಮುಖ್ಯಾಭಿಪ್ರಾಯವು.

---

**ಸಂಹಿತಾಪಾಠಃ**

## ಅಧ್ವರ್ಯವೋ ಯೋ ಅಪೋ ವವ್ರಿವಾಂಸಂ ವೃತ್ರಂ ಜಘಾನಾಶನ್ಯೇವ ವೃಕ್ಷಂ ।

## ತಸ್ಮಾ ಏತಂ ಭರತ ತದ್ವಶಾಯಁ ಏಷ ಇಂದ್ರೋ ಅರ್ಹತಿ ಪೀತಿಮಸ್ಯ ॥

**ಪದಪಾಠಃ**

ಅಧ್ವರ್ಯವಃ । ಯಃ । ಅಪಃ । ವವ್ರಿಽವಾಂಸಂ । ವೃತ್ರಂ । ಜಘಾನ । ಅಶನ್ಯಾಽಇವ । ವೃಕ್ಷಂ ।

ತಸ್ಮೈ । ಏತಂ । ಭರತ । ತತ್ಽವಶಾಯ । ಏಷಃ । ಇಂದ್ರಃ । ಅರ್ಹತಿ । ಪೀತಿಂ । ಅಸ್ಯ ॥ ೨ ॥

ಸಾಯಣಭಾಷ್ಯಂ

**ಹೇ ಅಧ್ವರ್ಯವಃ ಯ ಇಂದ್ರೋಽಪ ಉದಕಾನಿ ವವ್ರಿವಾಂಸಮಾವೃತ್ಯ ಸ್ಥಿತಂ ವೃತ್ರಂ । ವೃಣೋತ್ಯಾಕಾಶಮಿತಿ ವೃತ್ರೋ ಮೇಘಃ । ತಂ ಮೇಘಂ ವಜ್ರೇಣ ಜಘಾನ । ಹತವಾನ್ । ಅಶನ್ಯೇವ । ಯಥಾಶನ್ಯಾ ವೈದ್ಯುತಾಗ್ನಿನಾ ವೃಕ್ಷಂ ದಹತಿ ತದ್ವತ್ । ತಸ್ಮೈ ತದ್ವಶಾಯ ಸೋಮಕಾಮಾಯ ತಸ್ಮಾ ಇಂದ್ರಾಯೈತಂ ಸೋಮಂ ಭರತ । ಉತ್ತರವೇದಿಂ ಪ್ರತಿ ಹರತ । ಏಷ ಇಂದ್ರೋಽಸ್ಯ ಸೋಮಸ್ಯ ಪೀತಿಂ ಪಾನಮರ್ಹತಿ ॥**

ಪ್ರತಿಪದಾರ್ಥ

**ಅಧ್ವರ್ಯವಃ**—ಎಲೈ ಅಧ್ವರ್ಯುಗಳೇ । **ಯಃ**—ಯಾವ ಇಂದ್ರನು । **ಅಶನ್ಯಾ**—ವೈದ್ಯುತಾಗ್ನಿಯಿಂದ । **ವೃಕ್ಷಂ ಇವ**—ಮರವನ್ನು ಸೀಳಿ ಸುಡುವಂತೆ । **ಅಪಃ**—ಉದಕಗಳನ್ನು । **ವವ್ರಿವಾಂಸಂ**—ಆವರಿಸಿ ನಿಂತಿದ್ದ । **ವೃತ್ರಂ**-ವೃತ್ರಾಸುರನನ್ನು ಅಥವಾ ಮೇಘವನ್ನು। **ಜಘಾನ**--ವಜ್ರಾಯುಧದಿಂದ ಸೀಳಿದನೋ। **ತಸ್ಮೈ**—ಅಂತಹ । **ತದ್ವಶಾಯ**—ಸೋಮಾಪೇಕ್ಷಿಯಾದ ಇಂದ್ರನಿಗೆ ಅರ್ಪಿಸುವುದಕ್ಕಾಗಿ । **ಏತಂ**—ಈ ಸೋಮವನ್ನು । **ಭರತ**—(ಉತ್ತರವೇದಿಗೆ) ತೆಗೆದುಕೊಂಡು ಬನ್ನಿ । **ಏಷಃ ಇಂದ್ರಃ**—ಈ ಇಂದ್ರನು । **ಅಸ್ಯ**—ಈ ಸೋಮರಸದ । **ಪೀತಿಂ**—ಪಾನವನ್ನು ಪಡೆಯಲು । **ಅರ್ಹತಿ**—ಅರ್ಹನಾಗಿರುತ್ತಾನೆ.

ಭಾವಾರ್ಥ

ಎಲೈ ಅಧ್ವರ್ಯುಗಳೇ, ಯಾವ ಇಂದ್ರನು ವೈದ್ಯುತಾಗ್ನಿಯಿಂದ ಮರವನ್ನು ಸೀಳಿ ಸುಡುವಂತೆ ಉದಕಗಳನ್ನು ಆವರಿಸಿ ನಿಂತಿದ್ದ ವೃತ್ರನನ್ನು ತನ್ನ ವಜ್ರಾಯುಧದಿಂದ ಸೀಳಿದನೋ ಅಂತಹ ಸೋಮಾಪೇಕ್ಷಿಯಾದ ಇಂದ್ರನಿಗೆ ಅರ್ಪಿಸುವುದಕ್ಕಾಗಿ ಈ ಸೋಮವನ್ನು ಉತ್ತರವೇದಿಗೆ ತೆಗೆದುಕೊಂಡು ಬನ್ನಿ. ಈ ಇಂದ್ರನು ಸೋಮರಸದ ಪಾನಕ್ಕೆ ಅರ್ಹನಾಗಿದ್ದಾನೆ.

English Translation

**Priests, offer the libation to him who slew the rain-arresting Vritra, as (he strikes down) a tree with (his) thunderbolt ; to him who desires it : and Indra is worthy of (the beverage).**

ವಿಶೇಷವಿಷಯಗಳು.

**ಯಃ ಅಪಃ ವವ್ರಿವಾಂಸಂ ವೃತ್ರಂ ಜಘಾನ ಅಶನ್ಯೇವ ವೃಕ್ಷಂ**—ಯಾವ ಇಂದ್ರನು ಅಂತರಿಕ್ಷದಲ್ಲಿ ನೀರನ್ನು ಸುತ್ತುವರಿದು ವೃಷ್ಟಿಯು ಬೀಳದಂತೆ ತಡೆದಿದ್ದ ವೃತ್ರಾಸುರನನ್ನು ಅಥವಾ ಮೇಘವನ್ನು, ವೈದ್ಯುತಾಗ್ನಿಯು (ಸಿಡಿಲು) ವೃಕ್ಷವನ್ನು ದಹಿಸುವಂತೆ ಪ್ರಹರಿಸಿದನೋ ಅಂತಹ ಇಂದ್ರನಿಗಾಗಿ ಸೋಮವನ್ನರ್ಪಿಸಿರಿ ಎಂದು ವಾಕ್ಯದ ಮುಖ್ಯಾಭಿಪ್ರಾಯವು ಇಲ್ಲಿ ನೀರನ್ನು ಕೆಳಗೆ ಎಂದರೆ ಭೂಮಿಯಮೇಲೆ ಬೀಳದಂತೆ ತಡೆದಿರುವುದು ಮೇಘವಾದರೂ ಆಗಬಹುದು ಅಥವಾ ವೃತ್ರನಾದರೂ ಆಗಬಹುದು.

**ವೃತ್ರಂ**—ವೃತ್ರ ಶಬ್ದವು ಮೇಘನಾಮುಗಳಲ್ಲಿ ಪಠಿತವಾಗಿದೆ. (ನಿ ೨-೨೧) ಯಾಸ್ಕರು ವೃತ್ರಶಬ್ದ ವಿವರಣೆಯನ್ನು ಮಾಡುತ್ತಾ—

> **ತತ್ಕೋ ವೃತ್ರಃ । ಮೇಘ ಇತಿ ನೈರುಕ್ತಾಃ । ತ್ವಾಷ್ಟ್ರೋಽಸುರ ಇತ್ಯೈತಿಹಾಸಿಕಾಃ । ಅಪಾಂ ಚ ಜ್ಯೋತಿಷಶ್ಚ ಮಿಶ್ರೀಭಾವಕರ್ಮಣೋ ವರ್ಷಕರ್ಮ ಜಾಯತೇ । ತತ್ರೋಪಮಾರ್ಥೇನ ಯುದ್ಧವರ್ಣಾ ಭವಂತಿ ।**
>
> (ನಿ. ೨-೧೬)

ಎಂದು ನಿರ್ವಚನವನ್ನು ಹೇಳಿದ್ದಾರೆ. ಎಂದರೆ—ವೃತ್ರನೆಂದರೆ ಯಾರು ? ಎಂದು ಪ್ರಶ್ನೆಮಾಡಿ ಅದಕ್ಕುತ್ತರವಾಗಿ, ಮೇಘನೆಂದು ನಿರುಕ್ತಕಾರರು ಹೇಳುವರು, ತ್ವಷ್ಟೃ ಪ್ರಜಾಪತಿಯ ಪುತ್ರನಾದ ವೃತ್ರಾಸುರನೆಂದು ಇತಿಹಾಸಕರ್ತರು ಹೇಳುವರು ಎಂದು ಅಭಿಪ್ರಾಯ ಭೇದವನ್ನು ಸೂಚಿಸಿ—ಸೂರ್ಯರಶ್ಮಿ ಮತ್ತು ಸಮುದ್ರೋದಕ ಇವುಗಳ ಮಿಶ್ರಣದಿಂದ ಎಂದರೆ ಸೂರ್ಯರಶ್ಮಿಯು ಸಮುದ್ರದ ಮೇಲೆ ಬಿದ್ದು ಅದರ ಕಾರ್ಯರೂಪವಾಗಿ ವೃಷ್ಟಿಕರ್ಮವು ಉಂಟಾಗುವುದು. ಈ ವೃಷ್ಟಿಯನ್ನೇ (ಸಿಡಿಲು, ಮಿಂಚು, ಗುಡುಗು ಇವುಗಳಿಂದ ಕೂಡಿದ ಭಾರಿ ಮಳೆ) ಯುದ್ಧಕ್ಕೆ ಹೋಲಿಸಿ ವರ್ಣನೆ ಮಾಡಿರುವರು ಎಂದರೆ ಅಂತರಿಕ್ಷದಲ್ಲಿ ಮೇಘಗಳು ಅಥವಾ ವೃತ್ರಾಸುರನು ಭೂಮಿಯಮೇಲೆ ಮಳೆಯು ಬೀಳದಂತೆ ತಡೆದಿರುವಾಗ ಅವುಗಳನ್ನು ಇಂದ್ರನು ತನ್ನ ವಜ್ರಾಯುಧದಿಂದ (ಮಿಂಚು) ಪ್ರಹರಿಸಿ ವೃಷ್ಟಿಯು ಬೀಳುವಂತೆ ಮಾಡುವನು. ಇಂದ್ರನಿಗೂ ವೃತ್ರಾಸುರನಿಗೂ ನಡೆದ ಯುದ್ಧವೆಂದರೆ ಇದೇ ವರ್ಣನೆಯು ಎಂದು ತಮ್ಮ ಅಭಿಪ್ರಾಯವನ್ನು ಹೇಳಿರುವರು.

ಭಾಷ್ಯಕಾರರು— **ವೃಣೋತ್ಯಾಕಾಶಮಿತಿ ವೃತ್ರೋ ಮೇಘಃ । ವೃಣೋತೇರಾಚ್ಛಾದನಾರ್ಥಾತ್** (**ಸ್ವಾದಿ ಪರಸ್ಮೈಪದಿ**) । ಎಂದರೆ ಆಕಾಶದಲ್ಲಿ ಆವರಿಸಿಕೊಂಡು ಇರುವುದರಿಂದ ವೃತ್ರನೆಂದರೆ ಮೇಘವು ಎಂದು ಅರ್ಥವಿವರಣೆಮಾಡಿರುವರು. ಇದಲ್ಲದೆ **ಆಚ್ಛಾದಯತಿ ಹ್ಯಸೌ ಕೃತ್ಸ್ನಂ ನಭಃ**—ಅಂತರಿಕ್ಷಪ್ರದೇಶವೆಲ್ಲವನ್ನೂ ಮುಚ್ಚಿ ಕತ್ತಲೆ ಕವಿಯುವಂತೆ ಮಾಡುವುದರಿಂದ ವೃತ್ರವೆಂದರೆ ಮೇಘವು, ಅಥವಾ **ಗಚ್ಛತ್ಯಸೌ ಕೃತ್ಸ್ನಂ ನಭಃ** ಆಕಾಶದಲ್ಲಿ ಸಂಚರಿಸುವುದರಿಂದ ವೃತ್ರವೆಂದರೆ ಮೇಘವು, ಅಥವಾ **ವರ್ಧತೇರ್ವಾ ವೃದ್ಧ್ಯರ್ಥಾತ್** (**ಭೂ. ಆ-**) **ಬಾಹುಲಕಾತ್ ತ್ರನ್, ಧಕಾರಸ್ಯ ತಕಾರೋ ವ್ಯತ್ಯಯೇನ, ವರ್ಧತೇ ಹಿ ವರ್ಷಾಸು ಮೇಘಃ**—ಎಂದರೆ ವರ್ಷಾಕಾಲದಲ್ಲಿ (ಮಳೆಗಾಲದಲ್ಲಿ) ವೃದ್ಧಿಯಾಗುವುದರಿಂದ ವೃತ್ರವೆಂದರೆ ಮೇಘವು. ಈ ಅರ್ಥದಲ್ಲಿ ವೃಧ್ ಧಾತುವಿನಿಂದ ವೃತ್ರ ಶಬ್ದವು ನಿಷ್ಪನ್ನವಾಗಿದೆಯೆಂದೂ ಧಕಾರಕ್ಕೆ ಬದಲಾಗಿ ತಕಾರವು ವ್ಯತ್ಯಾಸದಿಂದ ಉಂಟಾಗಿದೆಯೆಂದೂ ಭಾವಿಸಬೇಕು. ಈ ವಿಧವಾದ ಅರ್ಥಗಳಿಗೆ ವೇದಗಳಲ್ಲಿಯೇ ಸಮರ್ಥನೆ ಇರುವುದು ಹೇಗೆಂದರೆ—

> **(೧) ಯದಿಮಾಁಲ್ಲೋಕಾನವೃಣೋತ್ತದ್ವೃತ್ರಸ್ಯ ವೃತ್ರತ್ವಂ ಸ ಇಷುಮಾತ್ರಮಿಷುಮಾತ್ರಂ ವಿಷ್ವಙ್ ಅವರ್ಧತ ।** (ತೈ. ಸಂ. )
>
> **(೨) ಅಸ್ಮಾ ಇದು ಪ್ರ ಭರಾ ತೂತುಜಾನೋ ವೃತ್ರಾಯ ವಜ್ರಮೀಶಾನಃ ಕಿಯೇಧಾಃ ।**
>
> (ಋ. ಸಂ. ೧-೬೧-೧೨)
>
> **(೩) ಶ್ರತ್ತೇ ದಧಾಮಿ ಪ್ರಥಮಾಯ ಮನ್ಯವೇಽಹನ್ಯದ್ವೃತ್ರಂ ನರ್ಯಂ ವಿವೇರಪಃ ।**
>
> (ಋ. ಸಂ. ೧೦-೧೪೭-೧)

ಇತ್ಯಾದಿ ಅನೇಕ ಉದಾಹರಣೆಗಳಿವೆ.

ಅಶನ್ಯೇವ ವೃಕ್ಷಂ—ಯಥಾ ಅಶನ್ಯಾ ವೈದ್ಯುತಾಗ್ನಿನಾ ವೃಕ್ಷಂ ದಹತಿ ತದ್ವತ್ । ಮಳೆಯು ಸುರಿಯುತ್ತಿರುವಾಗ ವೈದ್ಯುತಾಗ್ನಿ ಎಂದು ಹೇಳಲ್ಪಡುವ ಸಿಡಿಲು ಎತ್ತರವಾಗಿ ಬೆಳೆದಿರುವ ವೃಕ್ಷಕ್ಕೆ ಬಡಿದು ಅದು ಸುಟ್ಟು ಹೋಗುವಂತೆ ಎಂದು ಉಪಮಾರ್ಥವನ್ನು ಇಂದ್ರನು ವೃತ್ರಸಂಹಾರ ಮಾಡುವಾಗ ಉಪಯೋಗಿಸುವ ವಜ್ರಾಯುಧಕ್ಕೆ ಹೋಲಿಸಿದೆ.

---

ಸಂಹಿತಾಪಾಠಃ

ಅಧ್ವರ್ಯವೋ ಯೋ ದೃಭೀಕಂ ಜಘಾನ ಯೋ ಗಾ ಉದಾಜದಪ ಹಿ ವಲಂ ವಃ ।

ತಸ್ಮಾ ಏತಮಂತರಿಕ್ಷೇ ನ ವಾತಮಿಂದ್ರಂ ಸೋಮೈರೋರ್ಣುತ ಜೂರ್ನ ವಸ್ತ್ರೈಃ ॥ ೩ ॥

ಪದಪಾಠಃ

ಅಧ್ವರ್ಯವಃ । ಯಃ । ದೃಭೀಕಂ । ಜಘಾನ । ಯಃ । ಗಾಃ । ಉತ್ऽಆಜತ್ । ಅಪ । ಹಿ । ವಲಂ ಃ ವರಿತಿ ವಃ ।

ತಸ್ಮೈ । ಏತಂ । ಅಂತರಿಕ್ಷೇ । ನ । ವಾತಂ । ಇಂದ್ರಂ । ಸೋಮೈಃ । ಆ । ಊರ್ಣುತ । ಜೂಃ । ನ । ವಸ್ತ್ರೈಃ ॥ ೩ ॥

ಸಾಯಣಭಾಷ್ಯಂ

ಹೇ ಅಧ್ವರ್ಯವಃ ಯ ಇಂದ್ರೋ ದೃಭೀಕಂ । ಸರ್ವಾನ್ವಿದಾರಯತಿ ಭಿಯಂ ಕರೋತೀತಿ ದೃಭೀಕೋ ನಾಮಾಸುರಃ । ತಮಸುರಂ ಜಘಾನ । ಯಶ್ಚ ಬಲಾಸುರೇಣ । ನಿರುದ್ಧಾ ಗಾ ಉದಾಜತ್ । ನಿರಗಮಯತ್ । ತತಶ್ಚ ತಮೇವ ಬಲಮಸುರಂ ಅಪವಃ । ಅಪಾವೃಣೋತ್ । ಹಿಂಸಿತವಾನಿತ್ಯರ್ಥಃ ॥ ವೃಣೋತೇರ್ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ । ಹಲ್ಙ್ಯಾದಿನಾ ತಿಪೋ ಲೋಪಃ ॥ ತಸ್ಮಾ ಇಂದ್ರಾಯೈತಂ ಸೋಮಮಂತರಿಕ್ಷೇ ವಾತಂ ನ ವಾತಮಿವ ಧಾರಾಭಿರ್ವ್ಯಾಪ್ತಂ ಕುರುತ । ತದೇವಾಹ ಸೋಮೈರಿಂದ್ರಮಾ ಊರ್ಣುತ । ಸರ್ವತ ಆಚ್ಛಾದಯತ ॥ ಊರ್ಣುಞ್ ಆಚ್ಛಾದನೇ । ಆದಾದಿಕಃ । ಲೋಟಿ ರೂಪಂ ॥ ತತ್ರ ದೃಷ್ಟಾಂತಃ । ಜೂರ್ನ ಜೀರ್ಣೋ ಯಥಾ ವಸ್ತ್ರೈರಂಗಮಾಚ್ಛಾದಯತಿ ತದ್ವತ್॥

ಪ್ರತಿಪದಾರ್ಥ

ಅಧ್ವರ್ಯವಃ—ಎಲೈ ಅಧ್ವರ್ಯುಗಳೇ । ಯಃ—ಯಾವ ಇಂದ್ರನು । ದೃಭೀಕಂ—ದೃಭೀಕನೆಂಬ ಅಸುರನನ್ನು । ಜಘಾನ—ಕೊಂದನೋ (ಮತ್ತು) । ವಲಂ—ವಲನೆಂಬ ಅಸುರನನ್ನು । ಅಪ ವಃ—ಹಿಂಸಿಸಿದನೋ ।

ಯಃ—ಯಾರು । ಗಾಃ—(ಆ ವಲಾಸುರನಿಂದ ತಡೆಯಲ್ಪಟ್ಟ) ಗೋವುಗಳನ್ನು । ಉದಾಜತ್—ಬಿಡಿಸಿದನೋ । ತಸ್ಮೈ—ಆ ಇಂದ್ರನಿಗೆ । ಏತಂ—ಈ ಸೋಮವನ್ನು । ಅಂತರಿಕ್ಷೇ—ಅಂತರಿಕ್ಷದಲ್ಲಿ । ವಾತಂ ನ—ವಾಯುವನ್ನು ಜಲಧಾರೆಗಳಿಂದ ಆಚ್ಛಾದಿಸುವಂತೆ ತುಂಬಿರಿ । ಜೂಃ—ವೃದ್ಧನು । ವಸ್ತ್ರೈಃ ನ—ವಸ್ತ್ರಗಳಿಂದ ಆಚ್ಛಾದಿತನಾಗುವಂತೆ । ಇಂದ್ರಂ—ಇಂದ್ರನನ್ನು । ಸೋಮೈಃ—ಸೋಮರಸಗಳಿಂದ । ಆ ಊರ್ಣುತ—ಪೂರ್ಣವಾಗಿ ಆಚ್ಛಾದನೆಮಾಡಿ (ತುಂಬಿರಿ).

### ಭಾವಾರ್ಥ

ಎಲೈ ಅಧ್ವರ್ಯುಗಳೇ, ಯಾವ ಇಂದ್ರನು ದೃಭೀಕನೆಂಬ ಅಸುರನನ್ನು ಕೊಂದನೋ ಮತ್ತು ಯಾರು ವಲನೆಂಬ ಅಸುರನನ್ನು ಹಿಂಸಿಸಿ ಅವನಿಂದ ಹಿಡಿಯಲ್ಪಟ್ಟ ಗೋವುಗಳನ್ನು ಬಿಡಿಸಿದನೋ ಆ ಇಂದ್ರನನ್ನು ಅಂತರಿಕ್ಷದಲ್ಲಿ ವಾಯುವನ್ನು ಜಲಧಾರೆಗಳಿಂದ ತುಂಬುವಂತೆಯೂ, ವೃದ್ಧನನ್ನು ವಸ್ತ್ರಗಳಿಂದ ಆಚ್ಛಾದಿತನಾಗುವಂತೆ ಮಾಡುವಂತೆಯೂ ಸಹ ಸೋಮರಸಗಳಿಂದ ಪೂರ್ಣವಾಗಿ ಆಚ್ಛಾದನೆಯನ್ನು ಮಾಡಿರಿ (ತುಂಬಿರಿ).

### English Translation

Priests, offer this libation, which, like the wind in the firmament, (is the cause of rain); to him who slew Dribhika, destroyed Vala, and liberated the cows; heap Indra with Soma juice, as an old man (is covered) with garments.

### ವಿಶೇಷವಿಷಯಗಳು

**ಯಃ ದೃಭೀಕಂ ಜಘಾನ—ಸರ್ವಾನ್ ವಿದಾರಯತಿ ಭಿಯಂ ಕರೋತೀತಿ ದೃಭೀಕೋ ನಾಮಾಸುರಃ । ತಮಸುರಂ ಜಘಾನ ।** ದೃಭೀಕನೆಂಬ ಒಬ್ಬ ಅಸುರನು ಎಲ್ಲರನ್ನೂ ಶೀಳಿ ಕೊಲ್ಲುತ್ತಾ ಭಯವನ್ನುಂಟುಮಾಡುತ್ತಿದ್ದನು. ಆದ್ದರಿಂದ ಅವನಿಗೆ ದೃಭೀಕನೆಂಬ ಹೆಸರು ಬಂದಿತು. ಆ ಅಸುರನನ್ನು ಇಂದ್ರನು ಸಂಹಾರಮಾಡಿದನು ಎಂದು ಇಲ್ಲಿ ಹೇಳಿದೆ. ಈ ದೃಭೀಕನ ಹೆಸರು ಋಗ್ವೇದದಲ್ಲಿ ಈ ಋಕ್ಕಿನಲ್ಲಿ ಮಾತ್ರವಿರುವುದು. ಇನ್ನೆಲ್ಲಿಯೂ ಇಲ್ಲ. ಆದ್ದರಿಂದ ಇವನ ವಿಷಯವನ್ನು ಹೆಚ್ಚಾಗಿ ಹೇಳಲು ಸಾಧ್ಯವಿಲ್ಲ.

**ಯಃ ಗಾಃ ಉದಾಜತ್ ಅಪ ಹಿ ವಲಂ ವಃ**—ದೇವತೆಗಳ ಗೋವುಗಳನ್ನು ಕದ್ದು ಬಚ್ಚಿಟ್ಟಿದ್ದ ವಲನೆಂಬ ಅಸುರನನ್ನು ಹಿಂಸಿಸಿ ಆ ಗೋವುಗಳನ್ನು ಬಂಧನದಿಂದ ಇಂದ್ರನು ಬಿಡಿಸಿದನೆಂದು ಇಲ್ಲಿ ವರ್ಣಿಸಿದೆ. ವಲನ ವಿಷಯವನ್ನು ನಾವು ಋ. ಸಂ. ೭-೪೬೫, ೫-೨೩೨, ೬೮೨; ೧೪-೬೩೪ ಮುಂತಾದ ಸ್ಥಳಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ.

**ತಸ್ಮೈ ಏತಂ ಅಂತರಿಕ್ಷೇ ವಾತಂ ನ ಸೋಮೈಃ ಊರ್ಣುತ ಜೂರ್ನ ವಸ್ತ್ರೈಃ—ತಸ್ಮಾ ಇಂದ್ರಾಯೈತಂ ಸೋಮಮಂತರಿಕ್ಷೇ ವಾತಮಿವ ಧಾರಾಭಿರ್ವ್ಯಾಪ್ತಂ ಕುರುತ । ಸರ್ವತ ಆಚ್ಛಾದಯತ । ತತ್ರ ದೃಷ್ಟಾಂತಃ । ಜೂರ್ನ ಜೀರ್ಣೋ ಯಥಾ ವಸ್ತ್ರೈರಂಗಮಾಚ್ಛಾದಯತಿ ತದ್ವತ್ ।** ಆ ಇಂದ್ರನಿಗೆ ಎಂದರೆ ಮೇಲೆ ವಿವರಿಸಿದ ಗುಣಗಳಿಂದ ಸಹಿತನಾದ ಇಂದ್ರನಿಗೆ ಸೋಮರಸವನ್ನು ಚೆನ್ನಾಗಿ ತುಂಬಿ, ಚೆನ್ನಾಗಿ ವ್ಯಾಪ್ತವಾಗುವಂತೆ ಮಾಡಿ ಎಂದರೆ ಇಂದ್ರನು ಸೋಮರಸವನ್ನು ಅಧಿಕವಾಗಿ ಪಾನಮಾಡಲಿ. ಇಲ್ಲಿ ಎರಡು ದೃಷ್ಟಾಂತಗಳನ್ನು

ಹೇಳಿದೆ. ಅಂತರಿಕ್ಷದಲ್ಲಿ ಗಾಳಿಯು ವೃಷ್ಟ್ಯುದಕವನ್ನು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸುವಂತೆ ಮಾಡುವುದು. ಅದರಂತೆ ನೀವು ಇಂದ್ರನಿಗೆ ಯಥೇಚ್ಛವಾಗಿ ಸೋಮರಸವನ್ನು ತುಂಬಿರಿ ಎಂದಭಿಪ್ರಾಯವು. ಮತ್ತು ವಯಸ್ಸಾದ ವೃದ್ಧನು ಚಳಿಯನ್ನು ತಡೆಯಲಾರದೆ ತನ್ನ ಶರೀರವನ್ನು ಸಂಪೂರ್ಣವಾಗಿ ವಸ್ತ್ರಗಳಿಂದ ಮುಚ್ಚಿಕೊಳ್ಳುವಂತೆ ಇಂದ್ರನನ್ನು (ಅಥವಾ ಇಂದ್ರನ ಉದರವನ್ನು) ಸೋಮರಸಗಳಿಂದ ವ್ಯಾಪಿಸುವಂತೆ (ಮುಚ್ಚುವಂತೆ) ಮಾಡಿರಿ ಎಂದು ಉಪಮಾನಾರ್ಥವನ್ನು ಹೇಳಿದೆ.

---

ಸಂಹಿತಾಪಾಠಃ

ಅಧ್ವರ್ಯವೋ ಯ ಉರಣಂ ಜಘಾನ ನವ ಚಖ್ವಾಂಸಂ ನವತಿಂ ಚ ಬಾಹೂನ್ ।
ಯೋ ಅರ್ಬುದಮವ ನೀಚಾ ಬಬಾಧೇ ತಮಿಂದ್ರಂ ಸೋಮಸ್ಯ ಭೃಥೇ ಹಿನೋತ ॥ ೪ ॥

ಪದಪಾಠಃ

ಅಧ್ವರ್ಯವಃ । ಯಃ । ಉರಣಂ । ಜಘಾನ । ನವ । ಚಖ್ವಾಂಸಂ । ನವತಿಂ । ಚ । ಬಾಹೂನ್ ।
ಯಃ । ಅರ್ಬುದಂ । ಅವ । ನೀಚಾ । ಬಬಾಧೇ । ತಂ । ಇಂದ್ರಂ । ಸೋಮಸ್ಯ । ಭೃಥೇ । ಹಿನೋತ ॥೪॥

ಸಾಯಣಭಾಷ್ಯಂ

ಹೇ ಅಧ್ವರ್ಯವಃ ಯ ಇಂದ್ರೋ ನವ ನವತಿಂ ಚ ಏಕೋನಶತಂ ಬಾಹೂನ್ ಚಖ್ವಾಂಸಂ ॥ ಚಷ್ಟೇರಿದಂ ರೂಪಂ । ಯದ್ವಾ ಖನತೇಃ ಕ್ವಸೌ ರೂಪಂ । ನಿಲೋಪಃ । ಛಾಂದಸಂ ರೂಪಂ ॥ ಸರ್ವಸ್ಯ ದರ್ಶಯಂತಂ । ಯದ್ವಾ ಆತ್ಮನೋ ದೇಹೇ ನಿಖಾತವಂತಮುರಣಮೇತನ್ನಾಮಕಮಸುರಂ ಜಘಾನ । ಯಶ್ಚಾರ್ಬುದಮೇತನ್ನಾಮಕಮಸುರಂ ಚ ನೀಚಾಧೋಮುಖಂ ಕೃತ್ವಾವಬಬಾಧೇ । ತಮೇನಮಿಂದ್ರಂ ಸೋಮಸ್ಯ ಭೃಥೇ ಸೋಮಂ ಬಿಭ್ರತಿ ಪಾತ್ರೇ ಹಿನೋತ । ವರ್ಧಯತ । ಯದ್ವಾ ಸೋಮಸ್ಯ ಭೃಥೇ ಭರಣೇ ಸಂಪಾದನೇ ಸತಿ ಹಿನೋತ । ಸ್ತೋತ್ರೈಃ ಪ್ರೀಣಯತ ॥ ಹಿ ಗತಿವೃದ್ಧ್ಯೋಃ । ಸ್ವಾದಿಃ ॥

ಪ್ರತಿಪದಾರ್ಥ

ಅಧ್ವರ್ಯವಃ—ಎಲೈ ಅಧ್ವರ್ಯುಗಳೇ । ಯಃ—ಯಾವ ಇಂದ್ರನು । ನವ ನವತಿಂ ಚ—ತೊಂಭತ್ತೊಂಭತ್ತು ಸಂಖ್ಯೆಯುಳ್ಳ । ಬಾಹೂನ್—ಬಾಹುಗಳನ್ನು । ಚಖ್ವಾಂಸಂ—ಪ್ರಕಟಿಸುತ್ತಿದ್ದ (ಅಥವಾ ದೇಹದಲ್ಲಿ ಹೊಂದಿದ್ದ)।

**ಉರಣಂ**— ಉರಣನೆಂಬ ಅಸುರನನ್ನು । **ಜಘಾನ**— ಕೊಂದನೋ । **ಯಃ**— ಯಾರು । **ಅರ್ಬುದಂ**— ಅರ್ಬುದ ನೆಂಬ ಅಸುರನನ್ನು । **ನೀಚಾ** – ಅಧೋಮುಖನನ್ನಾಗಿ ಮಾಡಿ । **ಅವ ಬಬಾಧೇ**— ಹಿಂಸಿಸಿ ನಾಶಪಡಿಸಿದನೋ । **ತಂ**— ಅಂತಹ । **ಇಂದ್ರಂ**— ಇಂದ್ರನನ್ನು । **ಸೋಮಸ್ಯ**— ಸೋಮರಸದ । **ಭೃಥೇ**— ಪಾತ್ರೆಯಲ್ಲಿ (ಪೂರ್ಣವಾದ ಪಾತ್ರೆಯಿಂದ ಸೋಮವನ್ನರ್ಪಿಸಿ) ! **ಹಿನೋತ**— ವೃದ್ಧಿಪಡಿಸಿ.

ಭಾವಾರ್ಥ

ಎಲೈ ಅಧ್ವರ್ಯುಗಳೇ, ಯಾವ ಇಂದ್ರನು ತನ್ನ ತೊಂಭತ್ತೊಂಭತ್ತು ಬಾಹುಗಳನ್ನೂ ನೀಡಿ ಪ್ರಕಟಸುತ್ತಿದ್ದ ಉರಣನೆಂಬ ಅಸುರನನ್ನು ಕೊಂದನೋ, ಯಾರು ಅರ್ಬುದನೆಂಬ ಅಸುರನನ್ನು ಅಧೋಮುಖನನ್ನಾಗಿ ಮಾಡಿ ಹಿಂಸಿಸಿ ನಾಶಪಡಿಸಿದನೋ ಅಂತಹ ಇಂದ್ರನಿಗೆ ಪೂರ್ಣವಾದ ಪಾತ್ರೆಯಿಂದ ಸೋಮವನ್ನರ್ಪಿಸಿ ಅವನನ್ನು ವೃದ್ಧಿಪಡಿಸಿ.

English Translation

Priests, propitiate, by the offering of the Soma, that Indra, who slew Urana, displaying nine and ninety arms; and hurled Arbuda down headlong.

ವಿಶೇಷವಿಷಯಗಳು

**ಯ ಉರಣಂ ಜಘಾನ ನವ ಚಖ್ವಾಂಸಂ ನವತಿಂ ಚ ಬಾಹೂನ್**— ಈ ವಾಕ್ಯಕ್ಕೆ ಸಾಯಣರು ಎರಡು ವಿಧವಾಗಿ ಅರ್ಥಮಾಡಿರುವರು. **ಇಂದ್ರೋ ನವ ನವತಿಂ ಚ ಏಕೋನಶತಂ ಬಾಹೂನ್ ಚಖ್ವಾಂಸಂ ಸರ್ವಸ್ಯ ದರ್ಶಯಂತಂ ಉರಣಮೇತನ್ನಾಮಕಸುರಂ ಜಘಾನ**— ಎಂದರೆ ಇಂದ್ರನು ಸರ್ವರಿಗೂ ಕಾಣುವಂತೆ ತೊಂಭತ್ತೊಂಭತ್ತು ಬಾಹುಗಳನ್ನು ಪ್ರದರ್ಶಿಸಿ (ಧರಿಸಿ) ಉರಣನೆಂಬ ಅಸುರನನ್ನು ಕೊಂದನು ಎಂದು ಒಂದು ವಿಧವಾದ ಅರ್ಥವು. **ಯದ್ವಾ ಆತ್ಮನೋ ದೇಹೇ ಚಖ್ವಾಂಸಂ ನಿಖಾತವಂತಮುರಣಮೇತನ್ನಾಮಕಮಸುರಂ ಜಘಾನ**— ಅಥವಾ ತನ್ನ ತೊಂಭತ್ತೊಂಭತ್ತು ಬಾಹುಗಳಿಂದ ಕೂಡಿ ಇಂದ್ರನ ಮೇಲೆ ಬಿದ್ದು ಘಾಸಿಪಡಿಸುತ್ತಿರುವ ಉರಣನೆಂಬ ಅಸುರನನ್ನು ಇಂದ್ರನು ಕೊಂದನು ಎಂದು ಇನ್ನೊಂದು ವಿಧವಾದ ಅರ್ಥವು. ಇಲ್ಲಿ ತೊಂಭತ್ತೊಂಭತ್ತು ಬಾಹುಗಳು ಇಂದ್ರನಿಗಾದರೂ ಇರಬಹುದು ಅಥವಾ ಉರಣನೆಂಬ ಅಸುರನಿಗಾದರೂ ಇರಬಹುದು. ತೊಂಭತ್ತೊಂಭತ್ತೆಂದರೆ ಅಷ್ಟೇ ಸಂಖ್ಯೆಯೆಂದು ಅರ್ಥಮಾಡಬೇಕಾಗಿಲ್ಲ. ಅನೇಕವಾದ ಎಂದೂ ಅರ್ಥ ಮಾಡಬಹುದು. ಅನೇಕ ಬಾಹುಗಳುಳ್ಳ ಉರಣನೆಂಬ ಅಸುರನನ್ನು ಇಂದ್ರನು ಕೊಂದನು ಎಂದಭಿಪ್ರಾಯವು. ಉರಣನೆಂಬ ಹೆಸರು ಈ ಋಕ್ಕಿನಲ್ಲಿ ಮಾತ್ರವಿದ್ದು ಇನ್ನೆಲ್ಲಿಯೂ ಇಲ್ಲದಿರುವುದರಿಂದ ಇವನ ವಿಷಯವಾಗಿ ಏನನ್ನೂ ಹೇಳಲು ಸಾಧ್ಯವಿಲ್ಲ.

**ಯಃ ಅರ್ಬುದಮವ ನೀಚಾ ಬಬಾಧೇ**— ಇಂದ್ರನು ಅರ್ಬುದನೆಂಬ ಅಸುರನನ್ನು ಅಧೋಮುಖನನ್ನಾಗಿ ಮಾಡಿ ಹಿಂಸಿಸಿ ಕೊಂದನು ಎಂದು ಇಲ್ಲಿ ಹೇಳಿದೆ. ಅರ್ಬುದನೆಂಬ ಅಸುರನ ವಿಷಯವನ್ನು ನಾವು ಋ. ಸಂ ಭಾಗ ೫ ಪುಟ ೧೭೫ ಮತ್ತು ಇದೇ ಭಾಗದ ೬೩೩-೬೩೪ ನೇ ಪುಟಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ.

**ತಮಿಂದ್ರಂ ಸೋಮಸ್ಯ ಭೃಥೇ ಹಿನೋತ**— **ತಮೇನಮಿಂದ್ರಂ ಸೋಮಸ್ಯ ಭೃಥೇ ಸೋಮಂ ಬಿಭ್ರತಿ ಪಾತ್ರೇ ಹಿನೋತ ವರ್ಧಯತ** । ಅಂತಹ ಇಂದ್ರನಿಗೆ ಪಾತ್ರೆಯಲ್ಲಿ ಪೂರ್ಣವಾಗಿ ತುಂಬಿದ ಸೋಮವನ್ನು

ರ್ಪಿಸಿ ವೃದ್ಧಿಪಡಿಸಿ ಎಂದು ಒಂದು ಅರ್ಥವೂ, ಯದ್ವಾ ಸೋಮಸ್ಯ ಭೃಥೇ ಭರಣೇ ಸಂಪಾದನೇ ಸತಿ ಹಿನೋತ ಸ್ತೋತ್ರೈಃ ಪ್ರೀಣಯತ ಅಥವಾ ಪಾತ್ರೆಯು ಸೋಮರಸದಿಂದ ಭರ್ತಿಯಾದಮೇಲೆ ಇಂದ್ರನನ್ನು ಸೋಮರಸ ಪಾನಮಾಡುವುದಕ್ಕಾಗಿ ಸ್ತೋತ್ರಗಳಿಂದ ಸಂತೋಷಪಡಿಸಿರಿ ಎಂದು ಇನ್ನೊಂದು ವಿಧ ಅರ್ಥವೂ ಸಾಧ್ಯವೆಂದು ಭಾಷ್ಯಕಾರರು ಹೇಳಿರುವರು.

---

ಸಂಹಿತಾಪಾಠಃ

ಅಧ್ವರ್ಯವೋ ಯಃ ಸ್ವಶ್ನಂ ಜಘಾನ ಯಃ ಶುಷ್ಣಮಶುಷಂ ಯೋ ವ್ಯಂಸಂ ।
ಯಃ ಪಿಪ್ರುಂ ನಮುಚಿಂ ಯೋ ರುಧಿಕ್ರಾಂ ತಸ್ಮಾ ಇಂದ್ರಾಯಾಂಧಸೋ ಜುಹೋತ ॥ ೫ ॥

ಪದಪಾಠಃ

ಅಧ್ವರ್ಯವಃ । ಯಃ । ಸು । ಅಶ್ನಂ । ಜಘಾನ । ಯಃ । ಶುಷ್ಣಂ । ಅಶುಷಂ । ಯಃ । ವಿऽಅಂಸಂ ।
ಯಃ । ಪಿಪ್ರುಂ । ನಮುಚಿಂ । ಯಃ । ರುಧಿಽಕ್ರಾಂ । ತಸ್ಮೈ । ಇಂದ್ರಾಯ । ಅಂಧಸಃ । ಜುಹೋತ ॥೫॥

ಸಾಯಣಭಾಷ್ಯಂ

ಹೇ ಅಧ್ವರ್ಯವಃ ಯ ಇಂದ್ರೋಽಶ್ನಂ । ಅಶ್ನಾತಿ ಭಕ್ಷಯತಿ ಪ್ರಾಣಿಜಾತಮಿತಿ । ಯದಾ ಅಶ್ನುತೇ ಸ್ವತೇಜಸಾ ಸರ್ವಂ ವ್ಯಾಪ್ನೋತೀತ್ಯಶ್ನಃ ಕಶ್ಚಿದಸುರಃ । ತಮಸುರಂ ಸು ಸುಷ್ಠು ಜಘಾನ ಅಶುಷಂ ಕೇನಾಪ್ಯಶೋಷಣೀಯಂ ಶುಷ್ಣಮಸುರಂ ಯಶ್ಚ ತಮಸುರಂ ವ್ಯಂಸಮಂಸಹೀನಂ ಕೃತ್ವಾ ಜಘಾನ । ಯಶ್ಚ ಪಿಪ್ರುಂ ತೇಜಸಾ ಜಗದ್ವ್ಯಾಪ್ಯ ವರ್ತಮಾನಮೇತನ್ನಾಮಕಮಸುರಂ ನಮುಚಿಮಸುರಂ ಜಘಾನ ಯಶ್ಚ । ತೈತ್ತಿರೀಯಕೇ ನಮುಚಿಮಸುರಂ ನಾಲಭತೇತಿ ಪ್ರಕೃತ್ಯ ಫೇನೇನ ಶಿರ ಉದವರ್ತಯದಿತ್ಯಂತೇನ ವಾಕ್ಯಸಂದರ್ಭೇಣ ನಮುಚಿವಧಃ ಪ್ರಪಂಚಿತಃ । ತಥಾ ಮಂತ್ರಶ್ಚ । ಅಪಾಂ ಫೇನೇನ ನಮುಚೇಃ ಶಿರ ಇಂದ್ರೋದವರ್ತಯಃ । ೮-೧೪-೧೩ । ಇತಿ । ರುಧಿಕ್ರಾಮೇತನ್ನಾಮಕಮಸುರಂ ಯಶ್ಚ ಜಘಾನ । ತಸ್ಮಾ ಇಂದ್ರಾಯಾಂಧಸೋ ಹವಿರ್ಲಕ್ಷಣಾನ್ಯನ್ನಾನಿ ಜುಹೋತ । ಜುಹುತ ॥

ಪ್ರತಿಪದಾರ್ಥ

ಅಧ್ವರ್ಯವಃ—ಎಲೈ ಅಧ್ವರ್ಯುಗಳೇ । ಯಃ—ಯಾವ ಇಂದ್ರನು । ಅಶ್ನಂ—ಅಶ್ನನೆಂಬ ಅಸುರನನ್ನು । ಸು ಜಘಾನ—ಪೂರ್ಣವಾಗಿ ನಾಶಮಾಡಿದನೋ । ಯಃ—ಯಾರು । ಅಶುಷಂ—(ಇತರರಾರಿಂದಲೂ) ಸೋಲಿಸಲು ಅಸಾಧ್ಯನಾದ । ಶುಷ್ಣಂ—ಶುಷ್ಣನೆಂಬ ಅಸುರನನ್ನು । ವ್ಯಂಸಂ—ತೋಳನ್ನು ಕತ್ತರಿಸಿ (ಕೊಂದನೋ) ।

**ಯಃ**—ಯಾರು | **ಪಿಪ್ರುಂ**—ಪಿಪ್ರುವೆಂಬ ಅಸುರನನ್ನೂ | **ನಮುಚಿಂ**—ನಮುಚಿಯನ್ನೂ ಕೊಂದನೋ | **ಯಃ**—ಯಾರು | **ರುಧಿಕ್ರಾಂ**—ರುಧಿಕ್ರನೆಂಬ ಅಸರುನನ್ನೂ | **ಜಘಾನ**—ಕೊಂದನೋ | **ತಸ್ಮೈ ಇಂದ್ರಾಯ**—ಆ ಇಂದ್ರನಿಗೆ | **ಅಂಧಸಃ**—ಹವಿಸ್ಸಿನ ರೂಪದ ಅನ್ನಗಳನ್ನು | **ಜುಹೋತ**—ಅರ್ಪಿಸಿ ಹೋಮಮಾಡಿ.

ಭಾವಾರ್ಥ

ಎಲೈ ಅಧ್ವರ್ಯುಗಳೇ, ಯಾವ ಇಂದ್ರನು ಅಶ್ನನೆಂಬ ಅಸುರನನ್ನು ಪೂರ್ಣವಾಗಿ ನಾಶಮಾಡಿದನೋ ಇತರರಿಂದ ಶೋಷಿಸಲು ಅಸಾಧ್ಯನಾದ ಶುಷ್ಣನೆಂಬ ಅಸುರನನ್ನು ತೋಳುಕತ್ತರಿಸಿ ಯಾರು ಕೊಂದರೋ, ಯಾರು ಪಿಪ್ರುವನ್ನೂ, ನಮುಚಿಯನ್ನೂ ರುಧಿಕ್ರನೆಂಬ ಅಸುರರನ್ನೂ ಕೊಂದನೋ ಆ ಇಂದ್ರನಿಗೆ ಹವಿಸ್ಸಿನ ರೂಪದ ಅನ್ನಗಳನ್ನು ಅರ್ಪಿಸಿ ಹೋಮಮಾಡಿ.

English Translation

Priests, offer the Soma libation to that Indra, who slew Ashna, the, unabsorbable Sushna, and the mutilated (Vritra); who destroyed Pipru Namuchi and Rudhikra

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಅಶ್ನ, ಶುಷ್ಣ, ಪಿಪ್ರು, ನಮುಚಿ, ರುಧಿಕ್ರ ಎಂಬ ಹೆಸರಿನ ಅಸುರರನ್ನು ಇಂದ್ರನು ಸಂಹರಿಸಿದ ನೆಂದು ಹೇಳಿದೆ.

**ಯಃ ಸು ಅಶ್ನಂ ಜಘಾನ**—**ಅಶ್ನಾತಿ ಭಕ್ಷಯತಿ ಪ್ರಾಣಿಜಾತಮಿತಿ | ಯದ್ವಾ ಅಶ್ನುತೇ ಸ್ವತೇಜಸಾ ಸರ್ವಂ ವ್ಯಾಪ್ನೋತೀತ್ಯಶ್ನಃ | ಕಶ್ಚಿದಸುರಃ | ತಮಸುರಂ ಸುಷ್ಠು ಇಂದ್ರೋ ಜಘಾನ |** ಸರ್ವಪ್ರಾಣಿಗಳನ್ನೂ ಭಕ್ಷಿಸುವವನಾದ್ದರಿಂದ ಈ ಅಸುರನಿಗೆ ಅಶ್ನನೆಂದು ಹೆಸರು. ಅಥವಾ ತನ್ನ ತೇಜಸ್ಸಿನಿಂದ (ಸಾಮರ್ಥ್ಯದಿಂದ) ಸರ್ವವನ್ನೂ ವ್ಯಾಪಿಸುವವನಾದ್ದರಿಂದ ಇವನಿಗೆ ಅಶ್ನನೆಂದೂ ಹೇಳಬಹುದು. ಈ ಅಶ್ನನೆಂಬ ಅಸುರನನ್ನು ಇಂದ್ರನು ಚೆನ್ನಾಗಿ ಪ್ರಹರಿಸಿ ಸಂಹರಿಸಿದನೆಂದು ಇಲ್ಲಿ ಹೇಳಿದೆ. ಆ ಅಶ್ನಾಸುರನ ಹೆಸರು ಇನ್ನೆಲ್ಲಿಯೂ ಇಲ್ಲವಾದ್ದರಿಂದ ಇವನ ವಿಷಯವು ಹೆಚ್ಚಾಗಿ ತಿಳಿದಿಲ್ಲ.

**ಯಃ ಶುಷ್ಣಂ ಅಶುಷಂ ಯೋ ವ್ಯಂಸಂ**—**ಅಶುಷಂ ಕೇನಾಪ್ಯಶೋಷಣೀಯಂ ಶುಷ್ಣಮಸುರಂ ಯಶ್ಚ ತಮಸುರಂ ವ್ಯಂಸಮಂಸಹೀನಂ ಕೃತ್ವಾ ಜಘಾನ**—ಶೋಷಣೆಮಾಡಲು ಸಾಧ್ಯವಿಲ್ಲದ ಶುಷ್ಣಾಸುರನನ್ನು ಇಂದ್ರನು ಮೊದಲು ಅವನ ತೋಳುಗಳನ್ನು ಕತ್ತರಿಸಿ ಅನಂತರ ಕೊಂದನು ಎಂದು ಹೇಳಿದೆ. ಅಥವಾ ಇಲ್ಲಿ **ಯಃ** ಎಂಬ ಶಬ್ದವು ಎರಡಾವರ್ತಿ ಪಠಿತವಾಗಿರುವುದರಿಂದ **ಯಃ ಶುಷ್ಣಂ ಅಶುಷಂ ಜಘಾನ, ಯಃ ವ್ಯಂಸಂ ಜಘಾನ** ಎಂದು ಎರಡು ಪ್ರತ್ಯೇಕ ವಾಕ್ಯಗಳಿರುವುವೆಂದು ಪರಿಗಣಿಸಬಹುದು. ಹಾಗೆ ಮಾಡುವ ಸಂದರ್ಭದಲ್ಲಿ ಮೊದಲನೆಯ ವಾಕ್ಯಕ್ಕೆ—ಇಂದ್ರನು ಶುಷ್ಣಾಸುರನನ್ನು ಕೊಂದನೆಂದೂ, ಎರಡನೆಯ ವಾಕ್ಯಕ್ಕೆ ವೃತ್ರಾಸುರನನ್ನು ಛಿದ್ರ ಛಿದ್ರವಾಗಿ ಕತ್ತರಿಸಿ ಕೊಂದನೆಂದೂ ಅರ್ಥವನ್ನು ಹೇಳಬಹುದು. ಈ ಋಕ್ಕಿನಲ್ಲಿ ಹೇಳಿರುವ ಶುಷ್ಣ, ಪಿಪ್ರು ಎಂಬ ಅಸುರನನ್ನು ಇಂದ್ರನು ಕೊಂದ ವಿಚಾರವು--

**ಯೋ ವ್ಯಂಸಂ ಜಾಹೃಷಾಣೇನ ಮನ್ಯುನಾ ಯಃ ಶಂಬರಂ ಯೋ ಅಹನ್ಪಿಪ್ರುಮವ್ರತಂ ।**
**ಇಂದ್ರೋ ಯಃ ಶುಷ್ಣಮಶುಷಂ ನ್ಯಾವೃಣಙ್ಮರುತ್ವಂತಂ ಸಖ್ಯಾಯ ಹವಾಮಹೇ ॥**

(ಋ ಸಂ. ೧-೧೦೧-೨)

ಎಂಬ ಋಕ್ಕಿನಲ್ಲಿಯೂ ಹೇಳಿರುವುದು. ಇಲ್ಲಿಯೂ **ಅಶುಷಂ ಶುಷ್ಣಂ** ಕೊಲ್ಲಲು ಸಾಧ್ಯವಿಲ್ಲದ ಶುಷ್ಣನನ್ನು ಎಂದರೆ ಇಂದ್ರನಲ್ಲದೆ ಬೇರೊಬ್ಬರಿಂದ ಕೊಲ್ಲಲು ಸಾಧ್ಯವಿಲ್ಲದ ಶುಷ್ಣಾಸುರನನ್ನು ಇಂದ್ರನು ಕೊಂದನೆಂದು ಹೇಳಿದೆ. ಈ ಶುಷ್ಣನೆಂಬ ಅಸುರನು ಭೂಮಿಯ ಮೇಲಿರುವ ಸಮಸ್ತ ಉದಕವನ್ನು ಹೀರಿ ಅನಾವೃಷ್ಟಿಯನ್ನುಂಟುಮಾಡುವ ಅಸುರನು. ಇವನು ಅತ್ಯಂತ ಬಲಶಾಲಿಯಾದವನು. ವೃತ್ರನನ್ನು ಬಿಟ್ಟರೆ ಇವನೇ ಅತ್ಯಂತ ಅಪಾಯಕರನಾದ ಶತ್ರುವು. ಇವನು ಇಂದ್ರನಿಂದ ಹತವಾದ ಮೇಲೆ ಪೃಥ್ವಿಯು ಸಸ್ಯಸಮೃದ್ಧಿಯುಳ್ಳದ್ದಾಗಿಯೂ ಫಲಭರಿತವಾಗಿಯೂ ಆಯಿತು.

ಈ ಶುಷ್ಣನ ಹೆಸರು ಋಗ್ವೇದದಲ್ಲಿ ಸುಮಾರು ೪೦ ಸಲ ಪಠಿತವಾಗಿದೆ. ಇವನು ಕುತ್ಸನ ಮುಖ್ಯವಾದ ಶತ್ರುವು. ಈ ಕುತ್ಸನಿಗೋಸ್ಕರ ಅಥವಾ ಕುತ್ಸನ ಜತೆಯಲ್ಲಿ ಇಂದ್ರನು ಶುಷ್ಣನನ್ನು ನಿರ್ಮೂಲಮಾಡುತ್ತಾನೆಂದು ಹೇಳಿದೆ. (ಋ ಸಂ. ೪-೧೬-೧೨, ೫-೨೯-೯ ಇತ್ಯಾದಿ). ಅವನಿಗೆ ಕೊಂಬುಗಳಿವೆಯೆಂದೂ (೧-೩೩-೧೨) ಮೊಟ್ಟೆಗಳಿವೆಯೆಂದೂ (೮-೪೦-೧೦, ೧೧) ಬುಸುಗುಟ್ಟುತ್ತಾನೆಂದೂ (೧-೫೪-೫) ವರ್ಣನೆಗಳಿರುವುದರಿಂದ ಇವನು ಸರ್ಪಾಕೃತಿಯ ಅಸುರನೆಂದು ಹೇಳಬಹುದು. ಅವನಿಗೆ ಚಲವಾದ ಕೋಟೆಗಳಿವೆ (೧-೫೧-೧೧; ೪-೩೦-೧೩) ಇವು ಚಲಿಸುವ ಕೋಟೆಗಳು (೮-೧-೨೮). ಇಂದ್ರನು ಶುಷ್ಣನ ಕೋಟೆಗಳನ್ನು ನಾಶಮಾಡಿ ನೀರುಗಳನ್ನು ಬಿಡುಗಡೆ ಮಾಡುತ್ತಾನೆ (೧-೫೧-೧೧). ಶುಷ್ಣನ ವಂಶವನ್ನು ನಿರ್ಮೂಲಮಾಡಿ ಸ್ವರ್ಗೀಯೋದಕವನ್ನು (ಸ್ವರ್ವತೀಃ) ಗಳಿಸುತ್ತಾನೆ (೮-೪೦-೧೦). ಶುಷ್ಣನಿಗೆ ಕುಯವ (ಕೆಟ್ಟಧಾನ್ಯವನ್ನುಂಟುಮಾಡುವವನು) ಎಂಬ ವಿಶೇಷಣವು ನಾಲ್ಕುಸಲ ಉಪಯೋಗಿಸಲ್ಪಟ್ಟಿದೆ. ಋ. ಸಂ. ೧-೧೦೩-೮, ೧-೧೦೪-೩ ನೇ ಋಕ್ಕುಗಳಲ್ಲಿ ಶುಷ್ಣನ ಹೆಸರಿಗೆ ಬದಲಾಗಿ ಕುಯವ ಎಂಬ ಶಬ್ದಪ್ರಯೋಗವೇ ಇದೆ. ಇಂದ್ರಶುಷ್ಣರ ಯುದ್ಧದ ಪರಿಣಾಮವು ಜಲವಿಮೋಚನೆಮಾತ್ರವಲ್ಲ, ಗೋವುಗಳ ಅಥವಾ ಸೂರ್ಯನ ಪ್ರಾಪ್ತಿಯೂ ಆಗಬಹುದು (೮-೮೫-೧೭) ಇತ್ಯಾದಿ ವರ್ಣನೆಗಳಿವೆ. ಶುಷ್ಣನು ಅಮೃತವನ್ನು ತನ್ನಲ್ಲಿ ಇಟ್ಟುಕೊಂಡಿರುವ ದಾನವನು ಎಂದು ಕಾಠಕದಲ್ಲಿ ಹೇಳಿದೆ. ಮೇಲೆ ಹೇಳಿದ ವಾಕ್ಯಗಳಿಂದ ಶುಷ್ಣನು ಅನಾವೃಷ್ಟಿಕಾರಕನೆನ್ನಬಹುದು. ಇವನ ವಿಷಯವನ್ನು ನಾವು ಋ. ಸಂ. ಭಾಗ ೫-೬೯೩, ೬-೭೨, ೮-೨೭೫, ೧೦-೫೫೦, ೧೩-೩೮೦ ಇತ್ಯಾದಿಗಳಲ್ಲಿ ಪ್ರಸ್ತಾಪಿಸಿದ್ದೇವೆ.

ಪಿಪ್ರುಂ—ಪಿಪ್ರುವೆಂಬ ಅಸುರನು ಇಂದ್ರನಿಂದ ಅನೇಕಾವರ್ತಿ ಸೋಲಿಸಲ್ಪಟ್ಟಿರುವುದಾಗಿ ಅನೇಕ ಋಕ್ಕುಗಳಲ್ಲಿ ಹೇಳಿದೆ. ದಿವೋದಾಸ ಮತ್ತು ಅತಿಥಿಗ್ವನಿಗಾಗಿ ಶಂಬರನೊಡನೆ ಯುದ್ಧಮಾಡಿದಂತೆಯೇ, ಇಂದ್ರನು ಋಜಿಶ್ವನಿಗಾಗಿ ಪಿಪ್ರುವಿನೊಡನೆ ಯುದ್ಧಮಾಡಿದನು. ಪಿಪ್ರುವಿನ ವಿಷಯವು ಋ. ಸಂ. ೧-೧೦೧-೧, ೨ ; ೪-೧೬-೧೩, ೫-೨೯-೧೧, ೬-೨೦-೭, ೮-೪೯-೧೦, ೧೦-೯೯-೧೧, ೧೦-೧೩೮-೩, ೧-೧೦೩-೮, ೬-೧೮-೮, ಇತ್ಯಾದಿ ಋಕ್ಕುಗಳಲ್ಲಿ ವರ್ಣಿತವಾಗಿದೆ.

**ವಿ ಪಿಪ್ರೋರಹಿಮಾಯಸ್ಯ ದೃಳ್ಹಾಃ ಪುರೋ ವಜ್ರಿಞ್ಛವಸಾ ನ ದರ್ದಃ ।**

(ಋ ಸಂ. ೬-೨೦-೭)

ಎಂಬ ಋಕ್ಕಿನಲ್ಲಿ ಪಿಪ್ರುವಿನ ದೃಢವಾದ ಪ್ರಾಕಾರಾದಿಗಳನ್ನು (ಕೋಟೆಗಳನ್ನು) ಇಂದ್ರನು ನಾಶಮಾಡಿದನೆಂದು ಹೇಳಿದೆ.

ಯಃ ಸೃಬಿಂದಮನರ್ಶನಿಂ ಪಿಪ್ರುಂ ದಾಸಮಹೀಶುವಂ ।

(ಋ. ಸಂ. ೮-೩೨-೨)

ಎಂಬ ಋಕ್ಕಿನಲ್ಲಿ ಪಿಪ್ರುವು ದಾಸಜನರ ಗುಂಪಿಗೆ ಸೇರಿದವನೆಂದೂ ಹೇಳಿದೆ. ಪಿಪ್ರುವು ಅಸುರನೇ ಅಥವಾ ವ್ರತಹೀನನಾದ ದಸ್ಯುಜನರ ಗುಂಪಿಗೆ ಸೇರಿದ ಮಾನವನೇ ಎಂದು ಕೆಲವರು ಶಂಕಿಸುವರು.

It is uncertain whether he was a demon, according to Roth's view, which is favoured by the use of the word ಅಸುರ or a human foe. as Ludwing, Oldenberg, Hillebrandt believe. The name may mean resister from the root ಪೃ.

(Vedic Index of Names and Subjects· p. 532)

ಈ ಪಿಪ್ರುವು ಇಂದ್ರನ ಆಶ್ರಿತನಾದ ಋಜಿಶ್ವನ ಶತ್ರುವು. ಈ ಋಜಿಶ್ವನು ಇಂದ್ರನಿಗೆ ಸೋಮರಸವನ್ನರ್ಪಿಸಿ ಪಿಪ್ರುವಿನ ಮೇಲೆ ಯುದ್ಧಮಾಡುವಾಗ ಇಂದ್ರನ ಸಹಾಯವನ್ನು ಪಡೆಯುತ್ತಾನೆ (ಋ. ಸಂ. ೫-೨೯-೧೧, ೧೦-೯೯-೧೧) ಇಂದ್ರನು ಋಜಿಶ್ವನಿಂದ ಕೂಡಿ ಅಥವಾ ಅವನಿಗೋಸ್ಕರ ಪಿಪ್ರುವನ್ನುಸೋಲಿಸಿದನು (೧-೧೦೧-೧, ೨; ೧೦-೧೩೮-೩, ೪-೧೬-೧೩, ೬-೨೦-೭). ಅಹಿಯ ಮಾಯೆಗಳಿಂದ ಯುಕ್ತವಾದ ಪಿಪ್ರುವಿನ ಅಧೀನದಲ್ಲಿ ಅನೇಕ ಕೋಟೆಗಳಿವೆ. ಇಂದ್ರನು ಅವುಗಳನ್ನು ಭೇದಿಸುತ್ತಾನೆ (೧-೫೧-೫, ೬-೨೦-೭). ದಾಸನಾದ ಪಿಪ್ರುವನ್ನು ಮತ್ತು ಕೆಲವರನ್ನು ಇಂದ್ರನು ವಧಿಸಿ ಉದಕಗಳನ್ನು ಹೊರಡಿಸಿದನು. (೮-೩೨-೨). ಋಜಿಶ್ವನೊಡನೆ ಇದ್ದ ಇಂದ್ರನು ಮಾಯಿಯಾದ ಪಿಪ್ರು ಎಂಬ ಅಸುರನ ಬಲವಾದ ಕೋಟೆಗಳನ್ನು ಧ್ವಂಸಮಾಡಿದನು. (೧೦-೧೩೮-೩). ಕಾಡುಮೃಗರೂಪದಿಂದಿದ್ದ ಪಿಪ್ರುವನ್ನು ಇಂದ್ರನು ಋಜಿಶ್ವನಿಗೆ ಒಪ್ಪಿಸಿದನು. ಮತ್ತು ಐವತ್ತುಸಾವಿರ ಕಪ್ಪುಜನರನ್ನು ಸೋಲಿಸಿ, ದುರ್ಗಗಳನ್ನು ಭೇದಿಸಿದನು. (೪-೧೬-೩). ಋಜಿಶ್ವನೊಡನೆ ಸೇರಿಕೊಂಡು, ಇಂದ್ರನು ಕಪ್ಪುಜನರ ಸಂತತಿಯನ್ನೇ ನಾಶಮಾಡಿದನು (೧-೧೦೧-೧) ಇತ್ಯಾದಿ ಅನೇಕ ವರ್ಣನೆಗಳು ಪಿಪ್ರುವಿನ ವಿಷಯವಾಗಿ ಅಲ್ಲಲ್ಲಿ ಉಕ್ತವಾಗಿವೆ.

**ನಮುಚಿಂ**— ಇಂದ್ರೇಣ ಸಹ ಯುದ್ಧಂ ನ ಮುಂಚತೀತಿ ನಮುಚಿಃ ತಂ । ಇಂದ್ರನೊಡನೆ ಯುದ್ಧ ಮಾಡುವುದನ್ನು ಬಿಡುವವನನಲ್ಲವಾದ್ದರಿಂದ ಇವನಿಗೆ ನಮುಚಿಯೆಂದು ಹೆಸರು. ನಮುಚಿಯೆಂಬುವನು ಒಬ್ಬ ಅಸುರನು. ಇವನು ಮಹಾಬಲವುಳ್ಳವನಾದ್ದರಿಂದ ಇವನೊಡನೆ ಯುದ್ಧಮಾಡಿ ಇವನನ್ನು ಜಯಿಸುವುದು ಇಂದ್ರನಿಗೆ ಬಹಳ ಕಷ್ಟವಾಯಿತು ಈ ಅಸುರನ ವಿಷಯವನ್ನು ನಾವು ಋ. ಸಂ. ಭಾಗ ೫-೬೫, ೧೫-೫೦ ರಲ್ಲಿ ಬರೆದಿದ್ದೇವೆ. ಆದರೆ ಇಂದ್ರನು ನಮುಚಿಯನ್ನು ಸಂಹಾರಮಾಡಿದ ವಿಷಯವು ತೈತ್ತಿರೀಯ ಬ್ರಾಹ್ಮಣದಲ್ಲಿ ಹೇಳಿರುವುದೆಂದು ಭಾಷ್ಯಕಾರರು ಸೂಚಿಸಿರುವುದರಿಂದ ಅದನ್ನು ಇಲ್ಲಿ ವಿವರಿಸಿದ್ದೇವೆ—

ಇಂದ್ರೋ ವೃತ್ರಗ್ಂ ಹತ್ವಾ । ಅಸುರಾನ್ ಪರಾಭಾವ್ಯ । ನಮುಚಿಮಾಸುರಂ ನಾಲಭತ । ತಗ್ಂ ಶಚ್ಯಾಗೃಹ್ಣಾತ್। ತೌ ಸಮಲಭೇತಾಂ। ಸೋऽಸ್ಮಾದಭಿಶುನತರೋऽಭವತ್। ಸೋऽಬ್ರವೀತ್। ಸಂಧಾಗ್ಂ ಸಂದಧಾವಹೈ । ಅಥ ತ್ವಾವಸ್ರಕ್ಷ್ಯಾಮಿ । ನ ಮಾ ಶುಷ್ಕೇಣ ನಾರ್ದ್ರೇಣ ಹನಃ । ನ ದಿವಾ ನ ನಕ್ತಮಿತಿ । ಸ ಏತಮಪಾಂ ಫೇನಮಸಿಂಚತ್ । ನ ವಾ ಏಷ ಶುಷ್ಕೋ ನಾರ್ದ್ರೋ

ವ್ಯುಷ್ಟಾಸೀತ್ । ಅನುದಿತಃ ಸೂರ್ಯಃ । ನ ವಾ ಏತದ್ದಿವಾ ನ ನಕ್ತಂ । ತಸ್ಯೈತಸ್ಮಿನ್ಲೋಕೇ। ಅಪಾಂ ಫೇನೇನ ಶಿರ ಉದವರ್ತಯತ್ । ತದೇನಮನ್ವವರ್ತತೆ । ಮಿತ್ರದ್ರುಗಿತಿ । ಸ ಏತಾನಪಾಮಾರ್ಗಾನಜನಯತ್ । ತಾನಜುಹೋತ್ । ತೈರ್ವೈ ಸ ರಕ್ಷಾಗ್‌ಸ್ಯಪಾಹತ । ಯದಪಾಮಾರ್ಗಹೋಮೋ ಭವತಿ । ರಕ್ಷಸಾಮುಪಹತ್ಯೈ ॥

(ತೈ. ಬ್ರಾ ೧-೭-೧-೫, ೬, ೭)

ಇಂದ್ರನು ವೃತ್ರಾಸುರನನ್ನು ಸಂಹಾರಮಾಡಿದ ಮೇಲೆ ಇನ್ನೂ ಇತರ ರಾಕ್ಷಸರನ್ನೂ ಸಂಹಾರಮಾಡಿದನು. ಆದರೆ ನಮುಚಿಯೆಂಬ ಅಸುರನನ್ನು ಜಯಿಸಲಾಗಲಿಲ್ಲ. ಇವನು ಮಹಾಬಲಶಾಲಿಯಾಗಿದ್ದನು. ಯಾವವಿಧವಾದ ಆಯುಧಗಳಿಗೂ ಜಗ್ಗಲಿಲ್ಲ ಆದುದರಿಂದ ಇಂದ್ರನು ಅವನನ್ನು ತನ್ನ ಶರೀರಬಲದಿಂದಲೇ ಗೆಲ್ಲಬೇಕೆಂದು ಬಯಸಿ ಅವನೊಡನೆ ಮಲ್ಲಯುದ್ಧವನ್ನು ಪ್ರಾರಂಭಿಸಿದನು. ಆದರೂ ಯುದ್ಧ ಮಾಡಿದಂತೆಲ್ಲ ನಮುಚಿಯ ಬಲವೇ ವೃದ್ಧಿಯಾಗುತ್ತಿತ್ತು. ಇಂದ್ರನು ಅವನ ಹಿಡತದಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಆಗ ಇಂದ್ರನು ತನ್ನನ್ನು ಬಿಡಬೇಕೆಂದು ನಮುಚಿಯನ್ನು ಕೇಳಲು ಆಗ ಆ ಅಸುರನು ಇಂದ್ರನನ್ನು ಕುರಿತು–ಎಲೈ ಇಂದ್ರನೇ, ನಿನ್ನನ್ನು ಬಿಡಬೇಕಾದರೆ ನಾನು ಹೇಳಿದಂತೆ ಕೇಳಬೇಕು. ಈಗ ನಾವು ಒಬ್ಬರಿಗೊಬ್ಬರು ಸಂಧಿಯನ್ನು ಮಾಡಿಕೊಳ್ಳೋಣ. ನೀನು ಮತ್ತೆ ನನ್ನೊಡನೆ ಯಾವುದಾದರೂ ತಂತ್ರದಿಂದ ಯುದ್ಧಮಾಡಿ ನನ್ನನ್ನು ಕೊಲ್ಲಬೇಕೆಂದು ಇಚ್ಛಿಸಬಹುದು. ಅಂತಹ ಸಂದರ್ಭದಲ್ಲಿ ನೀನು ನನ್ನನ್ನು ಕೊಲ್ಲಬೇಕೆಂದು ಉಪಯೋಗಿಸುವ ಆಯುಧವು ಹಸಿಯಾಗಿರಕೂಡದು, ಒಣಗಿರಲೂಕೂಡದು; ಹಗಲಿನಲ್ಲಿ ನನ್ನನ್ನು ಕೊಲ್ಲಕೂಡದು, ರಾತ್ರಿಯಲ್ಲಿಯೂ ಕೊಲ್ಲಕೂಡದು. ಈ ನಿಯಮಗಳಿಗೆ ನೀನು ಒಪ್ಪುವಿಯಾದರೆ ನಿನ್ನನ್ನು ಬಿಡುವೆನು ಎಂದು ಹೇಳಿದನು ಇಂದ್ರನು ಹಾಗೆಯೇ ಆಗಲೆಂದೊಪ್ಪಿ ಅವನ ಹಿಡಿತದಿಂದ ಬಿಡಿಸಿಕೊಂಡು ಇವನನ್ನು ಹೇಗೆ ಜಯಿಸಬೇಕೆಂದು ಆಲೋಚಿಸತೊಡಗಿದನು. ಕೆಲವುಕಾಲದ ಮೇಲೆ ಅವನಿಗೆ ಒಂದು ಉಪಾಯವು ಹೊಳೆಯಿತು. ತನ್ನ ಎದುರಿಗೆ ಇದ್ದ ಸಮುದ್ರದ ನೊರೆಯು ಅವನ ದೃಷ್ಟಿಗೆ ಬಿದ್ದಿತು. ಈ ನೊರೆಯು ಹಸಿಯೂ ಅಲ್ಲ ಒಣಗಿದುದೂ ಅಲ್ಲ. ಆದುದರಿಂದ ಇವನ್ನೇ ಆಯುಧವನ್ನಾಗಿ ಮಾಡಿಕೊಂಡು ನಮುಚಿಯನ್ನು ಸಂಹರಿಸುವೆನು. ರಾತ್ರಿಯು ಕಳೆದು ಉಷಃಕಾಲವು ಪ್ರಾರಂಭವಾಗಿ ಸೂರ್ಯನು ಉದಯಿಸುವುದಕ್ಕೆ ಮೊದಲು ಚೆನ್ನಾಗಿ ಬೆಳಕಾಗಿರುವುದು. ಆ ಕಾಲವು ಕತ್ತಲೆಯಲ್ಲದ್ದರಿಂದ ರಾತ್ರಿಯೂ ಅಲ್ಲ, ಸೂರ್ಯನು ಉದಯಿಸಿರುವುದಿಲ್ಲವಾದ್ದರಿಂದ ಹಗಲೂ ಅಲ್ಲ. ಇಂತಹ ಕಾಲದಲ್ಲಿ ಯುದ್ಧಮಾಡಿ ನೀರಿನ ನೊರೆಯಿಂದ ನಿರ್ಮಿತವಾದ ಆಯುಧದಿಂದ ಅವನನ್ನು ಕೊಂದರೆ ನಾನು ಆಡಿದ ಮಾತಿಗೆ ತಪ್ಪಿದಂತಾಗುವುದಿಲ್ಲ ಎಂದು ನಿಶ್ಚಯಿಸಿ ಅದರಂತೆ ನಮುಚಿಯೊಡನೆ ಯುದ್ಧಮಾಡಿ ಆ ನೊರೆಯಿಂದ ಅವನ ಶಿರಸ್ಸನ್ನು ಕತ್ತರಿಸಿದನು ಆದರೂ ಆ ಅಸುರನು ಮೃತನಾಗದೆ ಇಂದ್ರನನ್ನು ಕೊಲ್ಲುವುದಕ್ಕಾಗಿ ಅವನನ್ನು ಅಟ್ಟಿಸಿಕೊಂಡು ಬಂದನು. ಎಲೋ ಮಿತ್ರದ್ರೋಹಿಯಾದ ಇಂದ್ರನೇ ! ನಿಲ್ಲು, ನಿಲ್ಲು, ನೀನು ನನ್ನನ್ನು ಕೊಲ್ಲುವುದಿಲ್ಲವೆಂದು ಮಾತುಕೊಟ್ಟು ಈಗ ಇಂತಹ ಮಿತ್ರದ್ರೋಹಕರವಾದ ಕೆಲಸವನ್ನು ಮಾಡಿರುತ್ತೀಯೆ. ನಿನ್ನನ್ನು ಈಗ ಕೊಲ್ಲದೆ ಬಿಡುವುದಿಲ್ಲ ಎಂದನು. ಆಗ ಇಂದ್ರನು ಹೆದರಿ ಅಪಾಮಾರ್ಗವೆಂಬ ವೃಕ್ಷವಿಶೇಷವನ್ನು ಸೃಷ್ಟಿಸಿ ಅದರ ಸಮಿತ್ತುಗಳಿಂದ ವೀರ್ಯವೃದ್ಧಿಗಾಗಿ ಅಗ್ನಿಯಲ್ಲಿ ಹೋಮಮಾಡಿದನು. ಅದರಿಂದ ಇಂದ್ರನ ಬಲವು ಅಧಿಕವಾಗಿ ಆ ನಮುಚಿಯನ್ನು ಸಂಹಾರಮಾಡಿದನು. ಆದುದರಿಂದ ರಾಕ್ಷಸರ ಬಾಧೆಯಿಂದ ಪಾರಾಗಬೇಕೆಂದು ಬಯಸುವವರು ಅಪಾಮಾರ್ಗಸಮಿತ್ತುಗಳಿಂದ ಹೋಮ ಮಾಡಬೇಕು ಎಂದಿರುವುದು. ಈ ನಮುಚಿಯನ್ನು ಇಂದ್ರನು ಸಂಹಾರಮಾಡಿದ

ವಿಷಯವು ಈ ಋಕ್ಕಿನಲ್ಲಲ್ಲದೆ ಋಗ್ವೇದದಲ್ಲಿ—

ನಮ್ಯಾ ಯದಿಂದ್ರ ಸಖ್ಯಾ ಪರಾವತಿ ನಿಬರ್ಹಯೋ ನಮುಚಿಂ ನಾಮ ಮಾಯಿನಂ ।

(ಋ. ಸಂ. ೧-೫೩-೭)

ಅತ್ರಾ ದಾಸಸ್ಯ ನಮುಚೇಃ ಶಿರೋ ಯದವರ್ತಯೋ ಮನವೇ ಗಾತುಮಿಚ್ಛನ್ ।

(ಋ ಸಂ. ೫-೩೦-೭)

ಯುಜಂ ಹಿ ಮಾಮಕೃಥಾ ಆದಿದಿಂದ್ರ ಶಿರೋ ದಾಸಸ್ಯ ನಮುಚೇರ್ಮಥಾಯನ್ ।

(ಋ. ಸಂ. ೫-೩೦-೮)

ಪ್ರ ಶ್ಯೇನೋ ನ ಮದಿರಮಂಶುಮಸ್ಮೈ ಶಿರೋ ದಾಸಸ್ಯ ನಮುಚೇರ್ಮಥಾಯನ್ ।

(ಋ. ಸಂ. ೬-೨೦-೬)

ನಿವೇಶನೇ ಶತತಮಾವಿವೇಷೀರಹಞ್ಚ ವೃತ್ರಂ ನಮುಚಿಮುತಾಹನ್ ।

(ಋ. ಸಂ. ೭-೧೯-೫)

ಅಪಾಂ ಫೇನೇನ ನಮುಚೇಃ ಶಿರ ಇಂದ್ರೋದವರ್ತಯಃ ।

(ಋ. ಸಂ. ೮-೧೪-೧೩)

ತ್ವಂ ಜಘಂಥ ನಮುಚಿಂ ಮಖಸ್ಯುಂ ದಾಸಂ ಕೃಣ್ವಾನ ಋಷಯೇ ವಿಮಾಯಂ ।

(ಋ. ಸಂ. ೧೦-೭೩-೭)

ಯುವಂ ಸುರಾಮಮಶ್ವಿನಾ ನಮುಚಾವಾಸುರೇ ಸಚಾ ।

(ಋ. ಸಂ. ೧೦-೧೩೧-೪)

ಎಂಬ ಋಕ್ಕುಗಳಲ್ಲಿ ಹೇಳಿರುವುದು. ಮತ್ತೆಲ್ಲಿಯೂ ಇಲ್ಲ.

ಯಃ ರುಧಿಕ್ರಾಂ ತಸ್ಮೈ ಇಂದ್ರಾಯ ಅಂಧಸಃ ಜುಹೋತ—ರುಧಿಕ್ರಾಮೇತನ್ನಾಮಕಮಸುರಂ ಯಶ್ಚ ಜಘಾನ । ತಸ್ಮಾ ಇಂದ್ರಾಯಾಂಧಸೋ ಹವಿರ್ಲಕ್ಷಣಾನ್ಯನ್ನಾನಿ ಜುಹೋತ । ಜುಹುತ । ಎಲೈ ಅಧ್ವರ್ಯುಗಳೇ, ಯಾವ ಇಂದ್ರನು ರುಧಿಕ್ರನೆಂಬ ಹೆಸರಿನ ಅಸುರನನ್ನು ಸಂಹಾರಮಾಡಿದನೋ ಅಂತಹ ಇಂದ್ರನಿಗೆ (ಇಂದ್ರನನ್ನುದ್ದೇಶಿಸಿ ಅಗ್ನಿಯಲ್ಲಿ) ಹವಿರ್ಲಕ್ಷಣಾನ್ನವನ್ನು ಹೋಮಮಾಡಿ. ರುಧಿಕ್ರನೆಂಬ ಅಸುರನ ಹೆಸರು ಋಗ್ವೇದದಲ್ಲಿ ಇನ್ನೆಲ್ಲಿಯೂ ಉಕ್ತವಾಗಿಲ್ಲವಾದ್ದರಿಂದ ಇವನ ವಿಷಯದಲ್ಲಿ ಹೆಚ್ಚಾಗಿ ಏನನ್ನೂ ಹೇಳುವಂತಿಲ್ಲ

---

ಸಂಹಿತಾಪಾಠಃ

ಅಧ್ವರ್ಯವೋ ಯಃ ಶತಂ ಶಂಬರಸ್ಯ ಪುರೋ ಬಿಭೇದಾಶ್ಮನೇವ ಪೂರ್ವೀಃ।

ಯೋ ವರ್ಚಿನಃ ಶತಮಿಂದ್ರಃ ಸಹಸ್ರಮಪಾವಪದ್ಭರತಾ ಸೋಮಮಸ್ಮೈ ॥

ಪದಪಾಠಃ

ಅಧ್ವರ್ಯವಃ । ಯಃ । ಶತಂ । ಶಂಬರಸ್ಯ । ಪುರಃ । ಬಿಭೇದ । ಅಶ್ಮನಾಽಇವ । ಪೂರ್ವೀಃ ।

ಯಃ । ವರ್ಚಿನಃ । ಶತಂ । ಇಂದ್ರಃ । ಸಹಸ್ರಂ । ಅಪಽಅವಪತ್ । ಭರತ । ಸೋಮಂ । ಅಸ್ಮೈ ॥ ೬ ॥

ಸಾಯಣಭಾಷ್ಯಂ

ಹೇ ಅಧ್ವರ್ಯವಃ ಯ ಇಂದ್ರಃ ಶಂಬರಸ್ಯ ಮಾಯಾವಿನೋಽಸುರಸ್ಯ ಪೂರ್ವೀಃ ಪುರಾತನೀಃ ಶತಂ ಪುರಃ ಪುರೀರಶ್ಮನೇವ ಅಶ್ಮಸದೃಶೇನ ವಜ್ರೇಣ ಬಿಭೇದ । ಯಶ್ಚೇಂದ್ರೋ ವರ್ಚಿನಃ ॥ ವರ್ಚ ದೀಪ್ತೌ । ಗಮೇರಿನಿಃ । ಉ. ೪-೬ । ಇತಿ ವಿಧೀಯಮಾನ ಇನಿರ್ಬಹುಲವಚನಾದಸ್ಮಾದ್ಭವತಿ ॥ ಯೆದ್ವಾ ನಾಮ್ನೈತತ್ । ತಸ್ಯಾಸುರಸ್ಯ ಶತಂ ಸಹಸ್ರಮೇತತ್ಸಂಖ್ಯಾಕಾನಪರಿಮಿತಾನ್ವೀರಾನ್ ಪುತ್ರಾನಪಾವಪತ್ । ಯುಗಪದೇವ ಭೂಮ್ಯಾಮಪಾತಯತ್ । ತಥಾ ಚ ಮಂತ್ರವರ್ಣಃ । ಶತಂ ವರ್ಚಿನಃ ಸಹಸ್ರಂ ಚ ಸಾಕಂ ಹಥೋ ಅಪ್ರತ್ಯಸುರಸ್ಯ ವೀರಾನ್ । ೭-೯೯-೫ । ಇತಿ । ಅಸ್ಮಾ ಇಂದ್ರಾಯ ಸೋಮಂ ಭರತ ॥

ಪ್ರತಿಪದಾರ್ಥ

ಅಧ್ವರ್ಯವಃ—ಎಲೈ ಅಧ್ವರ್ಯುಗಳೇ । ಯಃ—ಯಾವ ಇಂದ್ರನು । ಶಂಬರಸ್ಯ—ಮಾಯಾವಿಯಾದ ಶಂಬರಾಸುರನ । ಪೂರ್ವೀಃ—ಅತ್ಯಂತ ಪ್ರಾಚೀನಗಳಾದವೂ । ಶತಂ—ಶತಸಂಖ್ಯಾತವಾದವೂ ಆದ । ಪುರಃ—ಪಟ್ಟಣಗಳನ್ನು । ಅಶ್ಮನೇವ—ಅತ್ಯಂತ ಕಠಿಣವಾದ ವಜ್ರಾಯುಧದಿಂದ । ಬಿಭೇದ—ಸೀಳಿಹಾಕಿದನೋ । ಯಃ ಇಂದ್ರಃ—ಯಾವ ಇಂದ್ರನು । ವರ್ಚಿನಃ—ವರ್ಚಿಯೆಂಬ ಅಸುರನ । ಶತಂ ಸಹಸ್ರಂ—ಅಪರಿಮಿತವಾದ ವೀರಪುತ್ರಾದಿಗಳನ್ನು । ಅಪಾವಪತ್—ಒಟ್ಟಿಗೆ ಬೀಳಿಸಿ ನಾಶಮಾಡಿದನೋ । ಅಸ್ಮೈ—ಅಂತಹ ಇಂದ್ರನಿಗೆ ಸೋಮಂ—ಸೋಮವನ್ನು । ಭರತ—ತೆಗೆದುಕೊಂಡು ಬಂದು ಅರ್ಪಿಸಿ.

ಭಾವಾರ್ಥ

ಎಲೈ ಅಧ್ವರ್ಯುಗಳೇ, ಯಾವ ಇಂದ್ರನು ಮಾಯಾವಿಯಾದ ಶಂಬರಾಸುರನ ಅತ್ಯಂತ ಪ್ರಾಚೀನಗಳಾದವೂ ಶತಸಂಖ್ಯಾತವಾದವೂ ಆದ ಪಟ್ಟಣಗಳನ್ನು ಅತ್ಯಂತ ಕಠಿಣವಾದ ವಜ್ರಾಯುಧದಿಂದ ಸೀಳಿಹಾಕಿದನೋ, ಯಾವ ಇಂದ್ರನು ವರ್ಚಿಯೆಂಬ ಅಸುರನ ಒಂದುಲಕ್ಷ ಅಪರಿಮಿತವಾದ ವೀರಪುತ್ರಾದಿಗಳನ್ನು ಒಟ್ಟಿಗೆ ಬೀಳಿಸಿ ನಾಶಮಾಡಿದನೋ ಅಂತಹ ಇಂದ್ರನಿಗೆ ಸೋಮವನ್ನು ತೆಗೆದುಕೊಂಡು ಬಂದು ಅರ್ಪಿಸಿ.

## English Translation

Priests, present the Soma libation to him, who, with the adamantine (thunderbolt), demolished the hundred ancient cities of Shambara, and cast down the hundred thousand (descendants) of Varchin.

## ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಇಂದ್ರನು ಶಂಬರನೆಂಬ ಅಸುರನ ನೂರು ಪಟ್ಟಣಗಳನ್ನು ನಾಶಮಾಡಿದ ವಿಷಯವೂ, ವರ್ಚಿನ್ ಎಂಬ ಅಸುರನ ಸಾವಿರದನೂರು ಮಂದಿ ವೀರರನ್ನು ಕೊಂದ ವಿಷಯವೂ ಉಕ್ತವಾಗಿದೆ.

**ಯಃ ಶತಂ ಶಂಜರಸ್ಯ ಪುರಃ ಬಿಭೇದ ಅಶ್ಮನೇನ ಪೂರ್ವೀಃ—ಯಃ ಇಂದ್ರಃ ಶಂಬರಸ್ಯ ಮಾಯಾ ವಿನೋಽಸುರಸ್ಯ ಪೂರ್ವೀಃ ಪುರಾತನೀಃ ಶತಂ ಪುರಃ ಪುರೀರಶ್ಮನೇವ ಅಶ್ಮಸದೃಶೇನ ವಜ್ರೇಣ ಬಿಭೇದ ।** ಇಂದ್ರನು ಶಂಬರನೆಂಬ ಅಸುರನ ಪುರಾತನವಾದ ನೂರು ನಗರಗಳನ್ನು ಕಲ್ಲಿನಂತೆ ಕಠಿಣವಾದ ತನ್ನ ವಜ್ರಾಯುಧ ದಿಂದ ಭೇದಿಸಿದನು (ನಾಶಮಾಡಿದನು) ಎಂದು ಈ ವಾಕ್ಯದ ಅರ್ಥವು. ಇಲ್ಲಿ ಶತಂ ಎಂಬ ಶಬ್ದಕ್ಕೆ ಬಹಳವಾದ, ಅನೇಕ ಎಂದು ಅರ್ಥಮಾಡಬಹುದು. ಏಕೆಂದರೆ—

**ಇಂದ್ರಾವಿಷ್ಣೂ ದೃಂಹಿತಾಃ ಶಂಬರಸ್ಯ ನವ ಪುರೋ ನವತಿಂ ಚ ಶ್ನಥಿಷ್ಟಂ ।**

(ಋ. ಸಂ. ೭-೯೯-೫)

ಎಂಬ ಋಕ್ಕಿನಲ್ಲಿ ಇಂದ್ರನು ವಿಷ್ಣುವಿನೊಡಗೂಡಿ ಶಂಬರನ ತೊಂಭತ್ತೊಂಭತ್ತು ಪಟ್ಟಣಗಳನ್ನು ನಾಶಮಾಡಿದನೆಂದು ಹೇಳಿದೆ. ಆದ್ದರಿಂದ ಇಲ್ಲಿಯೂ **ನವ ನವತಿಂ** ಎಂಬ ಶಬ್ದಗಳಿಗೆ ಅನೇಕ ಎಂಬರ್ಥವನ್ನು ಹೇಳಬಹುದು. ಇದರಂತೆ ಶಂಬರನ ಪಟ್ಟಣಗಳನ್ನು ಇಂದ್ರನು ನಾಶಮಾಡಿದ ವಿಷಯದಲ್ಲಿ—

**ಭಿನತ್ಪುರೋ ನವತಿಮಿಂದ್ರ ಪೂರವೇ ದಿವೋದಾಸಾಯ ಮಹಿ ದಾಶುಷೇ ನೃತೋ ವಜ್ರೇಣ ದಾಶುಷೇ ನೃತೋ ।**

**ಅತಿಥಿಗ್ವಾಯ ಶಂಬರಂ ಗಿರೇರುಗ್ರೋ ಅವಾಭರತ್ ।**

(ಋ. ಸಂ. ೧-೧೩೦-೭)

ಎಂಬ ಋಕ್ಕಿನಲ್ಲಿ ಇಂದ್ರನು ಶಂಬರನ ತೊಂಭತ್ತು ಪಟ್ಟಣಗಳನ್ನು ಭೇದಿಸಿದನೆಂದು ಹೇಳಿದೆ.

**ದಿವೋದಾಸಾಯ ನವತಿಂ ಚ ನವೇಂದ್ರಃ ಪುರೋ ವ್ಯೈರಚ್ಛಂಬರಸ್ಯ ।**

(ಋ. ಸಂ. ೨-೧೯-೬)

ಎಂಬಲ್ಲಿ ಇಂದ್ರನು ದಿವೋದಾಸನಿಗಾಗಿ ಶಂಬರನ ತೊಂಭತ್ತೊಂಭತ್ತು ಪಟ್ಟಣಗಳನ್ನು ನಾಶಮಾಡಿದನೆಂದು ಹೇಳಿದೆ.

ಈ ಶಂಬರನೆಂಬುವನು ಇಂದ್ರನ ಮುಖ್ಯಶತ್ರುಗಳಲ್ಲೊಬ್ಬನು. ಇವನ ಹೆಸರೂ ಇವನ ವಿಷಯವೂ ಋ ಸಂ. ೧-೫೧-೬, ೧-೫೪-೪, ೧-೫೯-೬, ೧-೧೦೧-೨, ೧- .೦೩-೮, ೧-೧೧೨-೧೪, ೧-೧೩೦-೭, ೨-೧೨-೧೧, ೨-೧೪-೬, ೨-೧೯-೬, ೪-೨೬-೩, ೪-೩೦-೧೪, ೬-೧೮-೮, ೬-೨೬-೫, ೬-೩೧-೪, ೬-೩೧-೧, ೬-೪೭-೨, ೬-೪೭-೨೧, ೭-೧೮-೨೦, ೭-೯೯-೫ ಎಂಬ ಋಕ್ಕುಗಳಲ್ಲಿ ಉಕ್ತವಾಗಿದೆ. ಸಾಧಾರಣವಾಗಿ ಇವನ ಹೆಸರು ಶುಷ್ಣ, ಪಿಪ್ರು, ವರ್ಚಿನ್ ಎಂಬುವರೊಡನೆ ಸೇರಿ ಪಠಿತವಾಗಿರುವುದು. ಇವನ ಪಟ್ಟಣಗಳು ೯೦, ೯೯, ೧೦೦ ಇದ್ದವೆಂದು ಹೇಳಿದೆ. ಇವನು ದಿವೋದಾಸ ಅತಿಥಿಗ್ವನೆಂಬುವನ ಮುಖ್ಯಶತ್ರುವೆಂದೂ, ಇವನನ್ನು ಅತಿಥಿಗ್ವನು ಇಂದ್ರನ ಸಹಾಯದಿಂದ ಗೆದ್ದನೆಂದೂ ೧-೫೧-೬, ೧-೧೩೦- ೭, ೨-೧೯-೬, ೪-೨೬-೩ ಇತ್ಯಾದಿ ಋಕ್ಕುಗಳಲ್ಲಿ ಹೇಳಿದೆ. ಇವನು ಈ ದೇಶದ ಪೂರ್ವನಿವಾಸಿಗಳಲ್ಲಿ ಒಬ್ಬ ಮುಖಂಡನೆಂದೂ ಇವನು ಬೆಟ್ಟಗುಡ್ಡಗಳಲ್ಲಿ ವಾಸಮಾಡುತ್ತಾ ಆರ್ಯರಿಗೆ ತೊಂದರೆ

ಕೊಡುತ್ತಿದ್ದನೆಂದೂ ತಿಳಿಯಬರುವುದು. ಇವನ ವಿಷಯವನ್ನು ನಾವು ಋ. ಸಂ. ಭಾಗ ೫-೯೭೪, ೫-೬೯೪, ೮-೨೭೪, ೧೦-೫೫೦ ಇತ್ಯಾದಿ ಸ್ಥಳಗಳಲ್ಲಿ ವಿವರಿಸಿದ್ದೇವೆ.

**ಯಃ ವರ್ಚಿನಃ ಶತಂ ಇಂದ್ರಃ ಸಹಸ್ರಂ ಅಪಾವಪತ್**—ಇಂದ್ರನು ವರ್ಚಿನ್ ಎಂಬ ಅಸುರನ ಒಂದು ಲಕ್ಷಮಂದಿ (ಅವನ ಪುತ್ರಪೌತ್ರಾದಿಗಳಿಂದ ಸಹಿತರಾದ) ವೀರರನ್ನು ಭೂಮಿಯಲ್ಲಿ ಕೆಡವಿ ಕೊಂದನು. ಇಲ್ಲಿ ಭಾಷ್ಯಕಾರರು ವರ್ಚಿನಃ ಎಂಬ ಶಬ್ದಕ್ಕೆ (ವರ್ಚ-ದೀಪ್ತೌ) ಪ್ರಕಾಶಮಾನರಾದ ಎಂದರೆ ಪರಾಕ್ರಮಶಾಲಿಗಳಾದ ವೀರರನ್ನು ಎಂದೂ, ಅಥವಾ ವರ್ಚಿನ್ ಎಂಬ ಅಸುರನ ಎಂದೂ ಎರಡು ವಿಧವಾದ ಅರ್ಥವನ್ನು ಮಾಡಿರುವರು. ಇವುಗಳಲ್ಲಿ ವರ್ಚಿನ್ ಶಬ್ದಕ್ಕೆ ಆ ಹೆಸರಿನ ಅಸುರನೆಂದು ಅರ್ಥಮಾಡುವುದೇ ಸಮಂಜಸವಾಗಿರುವುದು. ಏಕೆಂದರೆ—

**ಶತಂ ವರ್ಚಿನಃ ಸಹಸ್ರಂ ಚ ಸಾಕಂ ಹಥೋ ಅಪ್ರತ್ಯಸುರಸ್ಯ ವೀರಾನ್ ।**

(ಋ. ಸಂ. ೭-೯೯-೫)

**ಉತ ದಾಸಸ್ಯ ವರ್ಚಿನಃ ಸಹಸ್ರಾಣಿ ಶತಾವಧೀಃ ।**

(ಋ. ಸಂ. ೪-೩೦- ೫)

ಎಂಬ ಋಕ್ಕುಗಳಲ್ಲಿ ವರ್ಚಿನ್ ಎಂಬ ಅಸುರನ ಒಂದು ಲಕ್ಷ ವೀರರನ್ನು ಕೊಂದ ವಿಷಯವು ಉಕ್ತವಾಗಿದೆ. ಇಲ್ಲಿ **ಶತಂ ಸಹಸ್ರಂ ಚ** ಎಂಬ ಶಬ್ದಗಳಿಗೆ ಒಂದುನೂರು ಸಹಸ್ರ ಎಂದರೆ ಒಂದುಲಕ್ಷ ಅಥವಾ ಒಂದುಸಾವಿರದನೂರು ಎಂದು ಎರಡು ವಿಧವಾಗಿಯೂ ಅರ್ಥಮಾಡಬಹುದು. ಒಟ್ಟನಲ್ಲಿ ಅನೇಕಮಂದಿ ವೀರರನ್ನು ಎಂದಭಿಪ್ರಾಯವು. ಮತ್ತು—

**ಅಹನ್ ದಾಸಾ ವೃಷಭೋ ವಸ್ನಯಂತೋದವ್ರಜೇ ವರ್ಚಿನಂ ಶಂಬರಂ ಚ ।**

(ಋ. ಸಂ. ೬-೪೭-೨೧)

ಎಂಬ ಋಕ್ಕಿನಲ್ಲಿ ವರ್ಚಿನ್ ಮತ್ತು ಶಂಬರ ಎಂಬ ಅಸುರರನ್ನು ಸಂಹರಿಸಿದ ವಿಷಯವು ಪ್ರಸ್ತಾಪಿಸಲ್ಪಟ್ಟಿದೆ.

---

**ಸಂಹಿತಾಪಾಠಃ**

## ಅಧ್ವರ್ಯವೋ ಯಃ ಶತಮಾ ಸಹಸ್ರಂ ಭೂಮ್ಯಾ ಉಪಸ್ಥೇಽವಪಜ್ಜಘನ್ವಾನ್ ।
## ಕುತ್ಸಸ್ಯಾಯೋರತಿಥಿಗ್ವಸ್ಯ ವೀರಾನ್ನ್ಯವೃಣಗ್ಭರತಾ ಸೋಮಮಸ್ಮೈ ॥ ೭ ।

**ಪದಪಾಠಃ**

**ಅಧ್ವರ್ಯವಃ । ಯಃ । ಶತಂ । ಆ । ಸಹಸ್ರಂ । ಭೂಮ್ಯಾಃ । ಉಪಽಸ್ಥೇ । ಅವಪತ್ । ಜಘನ್ವಾನ್ । ಕುತ್ಸಸ್ಯ । ಆಯೋಃ । ಅತಿಥಿಽಗ್ವಸ್ಯ । ವೀರಾನ್ । ನಿ । ಅವೃಣಕ್ । ಭರತ । ಸೋಮಂ । ಅಸ್ಮೈ ॥ ೭ ॥**

## ಸಾಯಣಭಾಷ್ಯಂ

ಹೇ ಅಧ್ವರ್ಯವೋ ಜಘನ್ವಾನ್ ಪೂರ್ವಂ ಶತ್ರೂನ್ ಹತವಾನ್ ಯ ಇಂದ್ರಃ ಶತಂ ಸಹಸ್ರಮ-ಸುರಾನ್ ಭೂಮ್ಯಾ ಉಪಸ್ಥ ಉತ್ಸಂಗೇऽವಪತ್ । ಏಕೈಕೇನ ಪ್ರಕಾರೇಣಾಪಾತಯತ್ । ಕಿಂಚ ಯಃ ಕುತ್ಸಸ್ಯೈತನ್ನಾಮಕಸ್ಯ ರಾಜರ್ಷೇಃ । ಆಯೋಃ ಪೌರೂರವಸಸ್ಯ ರಾಜರ್ಷೇಃ । ಅತಿಥಿಗ್ವಸ್ಯ ದಿವೋ-ದಾಸಸ್ಯ । ಏತೇಷಾಂ ತ್ರಯಾಣಾಂ ವೀರಾನಭಿಗಂತ್ಯಾನ್ಪ್ರತಿದ್ವಂದ್ವಿನಃ ಶುಷ್ಣಾದೀನಸುರಾನ್ ನ್ಯವೃಣಕ್ । ವೃಣಕ್ತಿರ್ಹಿಂಸಾಕರ್ಮಾ । ಅವಧೀತ್ । ತಥಾ ಚ ಮಂತ್ರವರ್ಣಃ । ತ್ವಂ ಕುತ್ಸಂ ಶುಷ್ಣಹತ್ಯೇಷ್ವಾ-ವಿಥಾರಂಧಯೋऽತಿಥಿಗ್ವಾಯ ಶಂಬರಂ । ೧.೫೧-೬ । ಇತಿ । ತಾದೃಶಾಯೇಂದ್ರಾಯ ಸೋಮಂ ಭರತ ॥

## ಪ್ರತಿಪದಾರ್ಥ

ಅಧ್ವರ್ಯವಃ—ಎಲೈ ಅಧ್ವರ್ಯುಗಳೇ । ಯಃ—ಯಾವ ಇಂದ್ರನು । ಶತಂ ಸಹಸ್ರಂ—ಸಹಸ್ರಾರು (ಅಪರಿಮಿತವಾದ) ಸಂಖ್ಯಾಕರಾದ ಅಸುರರನ್ನು । ಜಘನ್ವಾನ್—ಕೊಂದು । ಭೂಮ್ಯಾಃ—ಪೃಥಿವಿಯ । ಉಪಸ್ಥೇ—ಉತ್ಸಂಗದ ಮೇಲೆ । ಅವಪತ್—ಒಬ್ಬೊಬ್ಬನಾಗಿ ಬೀಳಿಸಿದನೋ (ಅಲ್ಲದೇ) । ಕುತ್ಸಸ್ಯ—ಕುತ್ಸಋಷಿಗೂ । ಆಯೋಃ—ಆಯುವಿಗೂ । ಅತಿಥಿಗ್ವಸ್ಯ—ಅತಿಥಿಗ್ವನೆಂಬ ಋಷಿಗೂ । ವೀರಾನ್—ವಿರೋಧಿಗಳಾಗಿದ್ದು ಹಿಂಸಿಸುತ್ತಿದ್ದ ಶುಷ್ಣನೇ ಮುಂತಾದ ಅಸುರರನ್ನೆಲ್ಲಾ । ನ್ಯವೃಣಕ್— ನಾಶಮಾಡಿದನೋ । ಅಸ್ಮೈ—ಅಂತಹ ಇಂದ್ರನಿಗೆ । ಸೋಮಂ—ಸೋಮವನ್ನು । ಭರತ—ತೆಗೆದುಕೊಂಡು ಬಂದು ಅರ್ಪಿಸಿ.

## ಭಾವಾರ್ಥ

ಎಲೈ ಅಧ್ವರ್ಯುಗಳೇ, ಯಾವ ಇಂದ್ರನು ಸಹಸ್ರಾರು ಅಸುರರನ್ನು ಕೊಂದು ಪೃಥಿವಿಯ ಉತ್ಸಂಗದ ಮೇಲೆ ಒಬ್ಬೊಬ್ಬನನ್ನಾಗಿ ಬೀಳಿಸಿದನೋ, ಅಲ್ಲದೇ, ಕುತ್ಸಋಷಿಗೂ, ಆಯುವಿಗೂ, ಅತಿಥಿಗ್ವನಿಗೂ ವಿರೋಧಿಗಳಾಗಿ ಹಿಂಸಿಸುತ್ತಿದ್ದ ಶುಷ್ಣನೇ ಮುಂತಾದ ಅಸುರರನ್ನೆಲ್ಲಾ ನಾಶಮಾಡಿದನೋ ಅಂತಹ ಇಂದ್ರನಿಗೆ ಸೋಮರಸವನ್ನು ತಂದು ಅರ್ಪಿಸಿ.

## English Translation

Priests, presented the Soma libation to him, who, slaying hundreds and thousands (of Asuras). cast them down upon the lap of the earth ; who destroyed the assailants of Kutsa, Ayu, and Atithigwa.

## ವಿಶೇಷವಿಷಯಗಳು

ಕುತ್ಸಸ್ಯ ಆಯೋಃ ಅತಿಥಿಗ್ವಸ್ಯ—ಈ ಮೂರು ಜನರಿಗೆ ಸಹಾಯ ಮಾಡುವುದಕ್ಕಾಗಿ ಇವರಿಗೆ ಶತ್ರುಗಳಾದ ಅನೇಕ ವೀರರನ್ನು ಇಂದ್ರನು ಕೆಳಕ್ಕೆ ಬೀಳಿಸಿಕೊಂದಿರುವುದಾಗಿ ಹೇಳಿದೆ. ಇವರ ವಿಷಯವು—

ತ್ವಮಸ್ಮೈ ಕುತ್ಸಮತಿಥಿಗ್ವಮಾಯುಂ ಮಹೇ ರಾಜ್ಞೇ ಯೂನೇ ಅರಂಧನಾಯಃ ।

(ಋ. ಸಂ. ೧-೫೩-೧೦)

ತ್ವಂ ಕುತ್ಸಂ ಶುಷ್ಣಹತ್ಯೇಷ್ವಾವಿಥಾರಂಧಯೋಽತಿಥಿಗ್ವಾಯ ಶಂಬರಂ ।

(ಋ ಸಂ. ೧-೫೧-೬)

ಇತ್ಯಾದಿ ಋಕ್ಕುಗಳಲ್ಲಿ ಹೇಳಿರುವುದು. ಕುತ್ಸ ಮತ್ತು ಆಯುವಿನ ವಿಚಾರವು, ಋ. ಸಂ. ಭಾಗ ೧೩–೩೩೫ ರಲ್ಲಿಯೂ ಕುತ್ಸನ ವಿಷಯವು, ಋ. ಸಂ. ೫–೬೬೪, ೮–೬೬೪, ೮೨೧ ; ೧೩-೩೩೫, ೩೪೦ ನೆಯ ಪುಟಗಳಲ್ಲಿಯೂ ಅತಿಥಿಗ್ವನ ವಿಷಯವು ಋ. ಸಂ. ೫-೧೭೪ ರಲ್ಲಿಯೂ ಹೇಳಲ್ಪಟ್ಟಿರುವುದು.

---

ಸಂಹಿತಾಪಾಠಃ

ಅಧ್ವರ್ಯವೋ ಯನ್ನರಃ ಕಾಮಯಾಧ್ವೇ ಶ್ರುಷ್ಟೀ ವಹಂತೋ ನಶಥಾ ತದಿಂದ್ರೇ ।

ಗಭಸ್ತಿಪೂತಂ ಭರತ ಶ್ರುತಾಯೇಂದ್ರಾಯ ಸೋಮಂ ಯಜ್ಯವೋ ಜುಹೋತ ॥ ೮ ॥

ಪದಪಾಠಃ

ಅಧ್ವರ್ಯವಃ । ಯತ್ । ನರಃ । ಕಮಯಾಧ್ವೇ । ಶ್ರುಷ್ಟೀ । ವಹಂತಃ । ನಶಥ । ತತ್ । ಇಂದ್ರೇ ।

ಗಭಸ್ತಿಽಪೂತಂ । ಭರತ । ಶ್ರುತಾಯ । ಇಂದ್ರಾಯ । ಸೋಮಂ । ಯಜ್ಯವಃ । ಜುಹೋತ ॥ ೮ ॥

ಸಾಯಣಭಾಷ್ಯಂ

ನರಃ ಕರ್ಮಣಾಂ ನೇತಾರೋ ಹೇ ಅಧ್ವರ್ಯವಃ ಯದಭಿಲಷಿತಮರ್ಥಂ ಕಾಮಯಾಧ್ವೇ ॥ ಕಾಮಯತೇರ್ಲೇಟ್ಯಡಾಗಮಃ ॥ ಶ್ರುಷ್ಟೀ ಕ್ಷಿಪ್ರಮಿಂದ್ರೇ ಸೋಮಂ ವಹಂತಃ ಪ್ರಾಪಯಂತೋ ಯೂಯಂ ತದಭಿಲಷಿತಂ ಫಲಂ ನಶಥ । ಪ್ರಾಪ್ನುತ । ಶ್ರುತಾಯ ಲೋಕೇ ಪ್ರಸಿದ್ಧಾಯೇಂದ್ರಾಯ ಗಭಸ್ತಿಪೂತಂ ಹಸ್ತಾಭ್ಯಾಂ ಮಂಜನದೋಹನಾದಿಭಿಃ ಶೋಧಿತಂ ಸೋಮಂ ಭರತ । ಉತ್ತರವೇದಿಂ ಪ್ರತಿ ಹರತ । ತತೋ ಯಜ್ಯವೋ ಯಾಗಂ ಕುರ್ವಾಣಾ ಹೇ ಅಧ್ವರ್ಯವ ಆಹೃತಂ ಸೋಮಮಿಂದ್ರಾಯ ಜುಹೋತ । ಜುಹುತ । ಅಗ್ನೌ ಪ್ರಕ್ಷಿಪತ ॥

ಪ್ರತಿಪದಾರ್ಥ

ನರಃ—ಕರ್ಮಕ್ಕೆ ನೇತೃಗಳಾದ । ಅಧ್ವರ್ಯವಃ—ಎಲೈ ಅಧ್ವರ್ಯುಗಳೇ । ಯತ್—ಯಾವ ಇಷ್ಟಾರ್ಥಗಳನ್ನು । ಕಾಮಯಾಧ್ವೇ—ನೆರವೇರಬೇಕೆಂದು ಅಪೇಕ್ಷಿಸುತ್ತೀರೋ । ತತ್—ಅದನ್ನೆಲ್ಲಾ । ಇಂದ್ರೇ—ಇಂದ್ರನಿಗಾಗಿ । ಶ್ರುಷ್ಟೀ—ಕ್ಷಿಪ್ರವಾಗಿ । ವಹಂತಃ—ಸೋಮರಸವನ್ನು ವಹಿಸಿ ತರುವುದರಮೂಲಕ । ನಶಥ—ಪಡೆಯಿರಿ ।

**ಶ್ರುತಾಯ**—ಲೋಕದಲ್ಲೆಲ್ಲಾ ಪ್ರಸಿದ್ಧನಾದ | **ಇಂದ್ರಾಯ**—ಇಂದ್ರನಿಗೆ | **ಗಭಸ್ತಿಪೂತಂ**—ಎರಡು ಹಸ್ತಗಳಿಂದಲೂ ಮಾರ್ಜನ ಮತ್ತು ದೋಹನಾದಿಗಳಿಂದ ಶೋಧಿತವಾದ | **ಸೋಮಂ**—ಸೋಮವನ್ನು | **ಭರತ**—ತೆಗೆದುಕೊಂಡು ಬನ್ನಿ | **ಯಜ್ಯವಃ**—ಯಜ್ಞಕರ್ತರಾದ ಎಲೈ ಅಧ್ವರ್ಯುಗಳೇ | **ಜುಹೋತ**—( ಆ ರಸವನ್ನು) ಅಗ್ನಿಯಲ್ಲಿ ಅರ್ಪಿಸಿ.

### ಭಾವಾರ್ಥ

ಕರ್ಮಕ್ಕೆ ನೇತೃಗಳಾದ ಎಲೈ ಅಧ್ವರುಗಳೇ, ಯಾವ ನಿಮ್ಮ ಇಷ್ಟಾರ್ಥಗಳು ನೆರವೇರಬೇಕೆಂದು ನೀವು ಅಪೇಕ್ಷಿಸುತ್ತೀರೋ ಅದನ್ನೆಲ್ಲಾ ಇಂದ್ರನಿಗೆ ಕ್ಷಿಪ್ರವಾಗಿ ಸೋಮರಸವನ್ನು ಅರ್ಪಿಸುವುದರ ಮೂಲಕ ಪಡೆಯಿರಿ. ಯಜ್ಞಕರ್ತರಾದ ಅಧ್ವರುಗಳೇ, ಲೋಕದಲ್ಲೆಲ್ಲಾ ಪ್ರಸಿದ್ಧನಾದ ಇಂದ್ರನಿಗೆ ಮಾರ್ಜನ ಮತ್ತು ದೋಹನಾದಿಗಳಿಂದ ಎರಡು ಹಸ್ತಗಳಿಂದಲೂ ಶೋಧಿತವಾದ ಸೋಮವನ್ನು ತಂದು ಅರ್ಪಿಸಿರಿ.

### English Translation

Priests, leaders (of the ceremony), may you, quickly bringing the offering to Indra, receive that (recompense) which you may desire: solemnizing the sacrifice, offer the Soma libation, purified by expressing, to the renowned Indra.

### ವಿಶೇಷವಿಷಯಗಳು

**ನರಃ—ಕರ್ಮಣಾಂ ನೇತಾರಃ** | ಯಜ್ಞಾದಿ ಕರ್ಮಗಳಲ್ಲಿ ಮುಖ್ಯ ಭಾಗವಹಿಸಿ ಆ ಕರ್ಮಗಳನ್ನು ಯಶಸ್ವಿಯಾಗಿ ನೆರವೇರಿಸುವವರಾದ್ದರಿಂದ ನರಃ ಎಂಬ ಶಬ್ದವು ಇಲ್ಲಿ ಅಧ್ವರ್ಯವಃ ಎಂಬ ಶಬ್ದಕ್ಕೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ.

**ಶ್ರುಷ್ಟೀ—ಶ್ರುಷ್ಟೀತಿ ಕ್ಷಿಪ್ರನಾಮ—ಆಶು ಅಷ್ಟೀತಿ** | (ನಿ. ೬-೧೩) ಜಾಗ್ರತೆಯಾಗಿ ವ್ಯಾಪಿಸು ಎಂಬರ್ಥವನ್ನು ಸೂಚಿಸುವುದರಿಂದ ಶ್ರುಷ್ಟೀ ಎಂದರೆ ಬೇಗನೆ ಎಂದರ್ಥವು

**ಶ್ರುಷ್ಟೀ ವಹಂತಃ ನಶಥ ತತ್ ಇಂದ್ರೇ**—ಇಲ್ಲಿ ನಶಥ ಎಂಬ ಶಬ್ದದ ಅಂತ್ಯಾಕ್ಷರವು ಸಂಹಿತಾಪಾಠದಲ್ಲಿ ಛಂದಸ್ಸಿನ ಅನುಕೂಲಕ್ಕಾಗಿ ದೀರ್ಘವಾಗಿರುವುದು. ಇಂದ್ರನಲ್ಲಿ ಎಂದರೆ ಇಂದ್ರನಿಗಾಗಿ ಸೋಮರಸವನ್ನು ವಹಿಸಿ ಅರ್ಪಿಸುವ ನೀವು (ಅಧ್ವರ್ಯುಗಳು) ಆ ಕರ್ಮಕ್ಕೆ ತಕ್ಕ ಪ್ರತಿಫಲವನ್ನು ಹೊಂದುವಿರಿ ಎಂದು ಮುಖ್ಯಾಭಿಪ್ರಾಯವು.

**ಗಭಸ್ತಿಪೂತಂ ಭರತ ಶ್ರುತಾಯ ಇಂದ್ರಾಯ ಸೋಮಂ—ಲೋಕೇ ಪ್ರಸಿದ್ಧಾಯೇಂದ್ರಾಯ ಗಭಸ್ತಿಪೂತಂ ಹಸ್ತಾಭ್ಯಾಂ ಮಂಜನದೋಹನಾದಿಭಿಃ ಶೋಧಿತಂ ಸೋಮಂ ಭರತ | ಉತ್ತರವೇದಿಂ ಪ್ರತಿ ಹರತ** | ಅನೇಕಸಾಹಸ ಕೃತ್ಯಗಳನ್ನು ಮಾಡಿ ಪ್ರಸಿದ್ಧನಾದ ಇಂದ್ರನಿಗೆ ಕೈಗಳಿಂದ ಶೋಧಿಸಿ ಪಾನಾರ್ಥವಾಗಿ ಸಿದ್ಧಪಡಿಸಲ್ಪಟ್ಟ ಸೋಮರಸವನ್ನು ಉತ್ತರವೇದಿಯ ಬಳಿಗೆ ತೆಗೆದುಕೊಂಡು ಬನ್ನಿ ಎಂದಭಿಪ್ರಾಯವು. ಗಭಸ್ತಿಶಬ್ದವು ರಶ್ಮಿನಾಮಗಳಲ್ಲಿಯೂ (ನಿ. ೨-೧೫) ಬಾಹುನಾಮಗಳಲ್ಲಿಯೂ (ನಿ. ೩-೪) ಪಠಿತವಾಗಿದೆ. ಇಲ್ಲಿ ಬಾಹು (ಕೈಗಳು) ಎಂಬ ಅರ್ಥವನ್ನು ಸ್ವೀಕರಿಸಬೇಕು.

ಸೋಮಲತೆಗಳನ್ನು ಜಜ್ಜುವಾಗ ಸಾಧಾರಣವಾಗಿ ಅವುಗಳನ್ನು ಚರ್ಮಗಳ ಮೇಲೆ ಇಡುವುದು ರೂಢಿಯು. ಈ ಚರ್ಮಕ್ಕೆ **ತ್ವಕ್** ಎಂದು ಹೆಸರು. ಇದಕ್ಕಾಗಿ ಗೋಚರ್ಮವನ್ನು ಉಪಯೋಗಿಸುತ್ತಿದ್ದರು (ಋ ಸಂ. ೧೦-೯೪-೯, ೧೦-೧೧೬-೪) ಸೋಮವನ್ನು ಶೇಖರಿಸಿ ಇಡುವ ಪಾತ್ರೆಗಳಿಗೆ **ಕೋಶ** (ಋ. ಸಂ. ೭-೧೦೧-೪, ೮-೨೦-೮) **ಸಧಸ್ಥ** (ಋ. ಸಂ. ೩-೬೨-೧೫, ೯-೧-೨, ೯-೧೭-೮) **ದ್ರು** (ಋ. ಸಂ ೯-೧-೨, ೯-೬೫-೬, ೯-೯೮-೨) **ವನ** (ಋ. ಸಂ. ೨-೧೪-೯, ೯-೬೬-೯) **ದ್ರೋಣ** (ಋ. ಸಂ ೯-೧೫-೭, ೯-೩೩-೨) ಇತ್ಯಾದಿ ಹೆಸರುಗಳಿವೆ. **ಸ್ರುವ** ಎಂದರೆ ಸೌಟು ladle (ಋ. ಸಂ ೧-೧೧೬-೨೪) ; ಸೋಮರಸವನ್ನು ಸೋಸುವ ಬಟ್ಟೆ ಅಥವಾ ಜಾಲರಿಗೆ **ಪವಿತ್ರ**ವೆಂದು ಹೆಸರು. ಕೆಲವು ಸಂದರ್ಭಗಳಲ್ಲಿ ಬೆರಳಿನ ಸಂದಿಗಳಿಂದಲೂ ಸೋಮವನ್ನು ಸೋಸುತ್ತಿದ್ದರು.

**ಮೃಜಂತಿ ತ್ವಾ ಸಮುಗ್ರುವೋಽವ್ಯೇ ಜೀರಾವಧಿ ಷ್ವಣಿ । ರೇಭೋ ಯದಜ್ಯಸೇ ವನೇ ।**

(ಋ. ಸಂ ೯-೬೬-೯)

ಇತ್ಯಾದಿ ಋಕ್ಕುಗಳಲ್ಲಿ ಸೋಮಲತೆಯನ್ನು ನೀರಿನಲ್ಲಿ ನೆನೆಯಿಸಿ ಜಜ್ಜಿ ಹಿಂಡಿ ತೆಗೆದ ರಸವನ್ನು ಕೈಬೆರಳುಗಳಿಂದ ಶೋಧಿಸುವರೆಂದು ಹೇಳಿದೆ. ಆ ವಿಷಯವನ್ನೇ ಇಲ್ಲಿ ಗಭಸ್ತಿಪೂತಂ ಎಂಬ ಶಬ್ದದಿಂದ ವಿವರಿಸಲಾಗಿದೆ.

ಸೋಮಲತೆಯನ್ನು ಜಜ್ಜಿ ಸೋಮರಸವನ್ನು ಸಿದ್ಧಪಡಿಸುವ ಕ್ರಮವನ್ನು ಋಗ್ವೇದದಲ್ಲಿ ವಿಸ್ತಾರವಾಗಿ ಎಲ್ಲಿಯೂ ಹೇಳಿಲ್ಲ. ಅಲ್ಲಲ್ಲಿ ಹೇಳಿರುವ ಕೆಲವು ವಾಕ್ಯಗಳಿಂದ ಆ ಕ್ರಮವನ್ನು ಊಹಿಸಬಹುದಾಗಿದೆ. ಸೋಮಲತೆಗಳನ್ನು ಜಜ್ಜುವ ಕಲ್ಲುಗಳಿಗೆ **ಗ್ರಾವಾ, ಅದ್ರಿ** ಎಂಬ ಹೆಸರುಗಳಿವೆ. ಕೆಲವು ಸಂದರ್ಭಗಳಲ್ಲಿ ಅಧಿಷವಣ ಎಂಬ ಹೆಸರಿನಿಂದ ಪ್ರಸಿದ್ಧವಾದ ಮರದ ಹಲಗೆಗಳನ್ನು ಉಪಯೋಗಿಸುವುದೂ ಉಂಟು. ಲತೆಯು ಹೊಸದಾಗಿದ್ದರೆ ರಸವು ಹೆಚ್ಚಾಗಿ ಬರುವುದು. ಇಲ್ಲದಿದ್ದರೆ ಎಂದರೆ ಕುಯಿದು ತಂದು ಕೆಲವು ದಿನಗಳಾಗಿದ್ದರೆ, ಅವುಗಳನ್ನು ನೀರಿನಲ್ಲಿ ನೆನೆ ಹಾಕಿದ್ದು ಅನಂತರ ಅವುಗಳನ್ನು ಚರ್ಮದಮೇಲೆ ತಂದಿರಿಸುವರು. ಬಳಿಕ ಕಲ್ಲುಗಳಿಂದ ಜಜ್ಜಿ ರಸವನ್ನು ತೆಗೆಯುವರು. ಹೀಗೆ ತೆಗೆದ ರಸದಲ್ಲಿ ಲತೆಯ ಸಿಪ್ಪೆಗಳು, ಚೂರುಗಳು ಮೊದಲಾದುವುಗಳು ಮಿಶ್ರಿತವಾಗಿರುವುದರಿಂದ ಆ ರಸವನ್ನು ಕೈಗಳ ಬೆರಳಸಂದಿಗಳಿಂದಾಗಲಿ, ಪವಿತ್ರವೆಂಬ ಜಾಲರಿ ಅಥವಾ ಬಟ್ಟೆಯಿಂದಾಗಲಿ, ಕುರಿಯ ತುಪ್ಪಟದಿಂದಾಗಲಿ ಶೋಧಿಸುವರು. ಈ ರೀತಿ ಶೋಧಿಸಿದ ರಸವು ಕಶ್ಮಲಗಳಿಲ್ಲದೆ ಶುಭ್ರವಾಗಿರುವುದು. ಇದಕ್ಕೆ ಶುಕ್ರ, ಶುಚಿ ಎಂದು ಹೆಸರುಗಳಿವೆ. ನೋಡುವುದಕ್ಕೆ ಈ ರಸವು ಮಾಸಲುಗೆಂಪು ಅಥವಾ ಹಳದಿ ಮಿಶ್ರವಾದ ಕೆಂಪು ಬಣ್ಣವುಳ್ಳದ್ದಾಗಿರುವುದು. ಇಂದ್ರನಿಗೂ, ವಾಯುವಿಗೂ ಶುದ್ಧವಾದ ಎಂದರೆ ಆಶಿರದ್ರವ್ಯಗಳ ಬೆರಕೆಯಿಲ್ಲದ ಸೋಮರಸವನ್ನೇ ಅರ್ಪಿಸುವುದು ರೂಢಿಯು. ಇತರ ದೇವತೆಗಳಿಗೆ, ಹಾಲು, ಮೊಸರು, ಧಾನ್ಯದಹಿಟ್ಟು ಇವುಗಳನ್ನು ಬೆರಸಿ ಉಪಯೋಗಿಸುವುದುಂಟು. ಇವುಗಳನ್ನು ಮಿಶ್ರಮಾಡಿದ ಸೋಮರಸಕ್ಕೆ ಕ್ರಮವಾಗಿ **ಗವಾಶಿರ, ದಧ್ಯಾಶಿರ, ಯವಾಶಿರ** ಎಂಬ ಹೆಸರುಗಳಿವೆ.

———

ಸಂಹಿತಾಪಾಠಃ

ಅಧ್ವರ್ಯವಃ ಕರ್ತನಾ ಶ್ರುಷ್ಟಿಮಸ್ಮೈ ವನೇ ನಿಪೂತಂ ವನ ಉನ್ನಯಧ್ವಂ।
ಜುಷಾಣೋ ಹಸ್ತ್ಯಮಭಿ ವಾವಶೇ ವ ಇಂದ್ರಾಯ ಸೋಮಂ ಮದಿರಂ
ಜುಹೋತ ॥ ೯ ॥

ಪದಪಾಠಃ

ಅಧ್ವರ್ಯವಃ । ಕರ್ತನ । ಶ್ರುಷ್ಟಿಂ । ಅಸ್ಮೈ । ವನೇ । ನಿऽಪೂತಂ । ವನೇ । ಉತ್ । ನಯಧ್ವಂ ।
ಜುಷಾಣಃ । ಹಸ್ತ್ಯಂ । ಅಭಿ । ವಾವಶೇ । ವಃ । ಇಂದ್ರಾಯ । ಸೋಮಂ । ಮದಿರಂ । ಜುಹೋತ ॥೯ ॥

ಸಾಯಣಭಾಷ್ಯಂ

ಹೇ ಅಧ್ವರ್ಯವಃ ಅಸ್ಮಾ ಇಂದ್ರಾಯ ಸೋಮಂ ಶ್ರುಷ್ಟಿಂ ಸುಖಕರಂ ಕರ್ತನ । ಕುರುತ ॥ ಕರೋತೇರ್ಲೋಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ತಪ್ತನಪ್ತನಥನಾಶ್ಚೇತಿ ತನಬಾದೇಶಃ । ಆಮಂತ್ರಿತಸ್ಯಾವಿದ್ಯಮಾನತ್ವಾನ್ನ ನಿಘಾತಃ ॥ ಕಿಂಚ ವನೇ ಸಂಭಜನೀಯೇ ವನ ಉದಕೇ ನಿಪೂತಮಾಪ್ಯಾಯನೇನ ಶೋಧಿತಂ ಸೋಮಮುನ್ನಯಧ್ವಂ । ಊರ್ಧ್ವಂ ನಯತ । ಯದ್ವಾ ವನೇ ತದ್ವಿಕಾರೇ ಚಮಸೇ ನಿಪೂತಂ ದಶಾಪವಿತ್ರೇಣ ಶೋಧಿತಂ ಸೋಮಂ ವನೇ ಚಮಸ ಉನ್ನಯಧ್ವಂ । ಜುಷಾಣಃ ಪ್ರೀಯಮಾಣಃ ಸ ಇಂದ್ರೋ ವೋ ಯುಷ್ಮಾಕಂ ಹಸ್ತ್ಯಂ ಹಸ್ತಾಭ್ಯಾಮಭಿಷುತಂ ಸೋಮಮಭಿವಾವಶೇ ಕಾಮಯತೇ ॥ ವಶ ಕಾಂತೌ । ಯಙ್-ಲುಗಂತಸ್ಯ ಲಟಿ ವ್ಯತ್ಯಯೇನಾತ್ಮನೇಪದಂ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ ॥ ಮದಿರಂ ಮದಕರಮಿಮಂ ಸೋಮಮಿಂದ್ರಾಯ ಜುಹೋತ । ಇಂದ್ರೋದ್ದೇಶೇನಾಗ್ನೌ ಪ್ರಕ್ಷಿಪತ ॥

ಪ್ರತಿಪದಾರ್ಥ

ಅಧ್ವರ್ಯವಃ—ಎಲೈ ಅಧ್ವರ್ಯುಗಳೇ । ಅಸ್ಮೈ—ಈ ಇಂದ್ರನನ್ನುದ್ದೇಶಿಸಿ (ಇಂದ್ರನಿಗಾಗಿ) । ಶ್ರುಷ್ಟಿಂ—ಸುಖಕರವಾದ ಸೋಮವನ್ನು । ಕರ್ತನ—ಸಿದ್ಧಪಡಿಸಿ । ವನೇ—ಉದಕದಲ್ಲಿ ನೆನೆಯಿಸಿ ಜಜ್ಜಿದ । ನಿಪೂತಂ—ಶೋಧಿತವಾದ ಸೋಮವನ್ನು । ವನೇ—ಚಮಸಪಾತ್ರೆಯಲ್ಲಿ । ಉನ್ನಯಧ್ವಂ—ಅರ್ಪಣೆಗಾಗಿ ಎತ್ತಿ ತಂದಿರಿಸಿ । ಜುಷಾಣಃ—ಹರ್ಷಿತನಾದ ಇಂದ್ರನು । ವಃ—ನಿಮ್ಮ । ಹಸ್ತ್ಯಂ—ಹಸ್ತಗಳಿಂದ ಹಿಂಡಲ್ಪಟ್ಟ ಸೋಮವನ್ನು । ಅಭಿ ವಾವಶೇ—ಇಚ್ಛಿಸುತ್ತಾನೆ । ಮದಿರಂ—ಮದಕರವಾದ । ಸೋಮಂ—ಸೋಮವನ್ನು । ಇಂದ್ರಾಯ—ಇಂದ್ರನನ್ನುದ್ದೇಶಿಸಿ । ಜುಹೋತ—(ಅಗ್ನಿಯಲ್ಲಿ) ಅರ್ಪಿಸಿ.

ಭಾವಾರ್ಥ

ಎಲೈ ಅಧ್ವರ್ಯುಗಳೇ, ಈ ಇಂದ್ರನನ್ನುದ್ದೇಶಿಸಿ ಸುಖಕರವಾದ ಸೋಮವನ್ನು ಸಿದ್ಧಪಡಿಸಿ. ಚಮಸಪಾತ್ರೆಯಲ್ಲಿ ಉದಕದೊಂದಿಗೆ ಶೋಭಿತವಾದ ಸೋಮವನ್ನು ಅರ್ಪಣೆಗಾಗಿ ಎತ್ತಿ. ಹರ್ಷಿತನಾದ ಇಂದ್ರನು ನಿಮ್ಮ ಹಸ್ತ

ಗಳಿಂದ ಹಿಂಡಲ್ಪಟ್ಟ ಸೋಮವನ್ನು ಇಚ್ಛಿಸುತ್ತಾನೆ- ಮದಕರವಾದ ಸೋಮವನ್ನು ಇಂದ್ರನನ್ನು ಉದ್ದೇಶಿಸಿ ಅಗ್ನಿಯಲ್ಲಿ ಅರ್ಪಿಸಿ.

## English Translation

Priests, offer to him the prompt (libation); lift it up, purified with water, in the ladle: well pleased, he desires it from your hand; present the exhilarating Soma juice to Indra.

## ವಿಶೇಷವಿಷಯಗಳು

**ಅಧ್ವರ್ಯವಃ ಕರ್ತನ ಶ್ರುಷ್ಟಿಂ ಅಸ್ಮೈ**—ಎಲೈ ಅಧ್ವರ್ಯುಗಳೇ, ಈ ಇಂದ್ರನಿಗಾಗಿ ಸುಖಕರವಾದ ಸೋಮರಸವನ್ನು ಸಿದ್ಧಪಡಿಸಿರಿ. ಇಲ್ಲಿ **ಶ್ರುಷ್ಟಿಂ** ಎಂಬ ಶಬ್ದಕ್ಕೆ ಭಾಷ್ಯಕಾರರು ಸುಖಕರಂ ಎಂದರ್ಥವಿವರಣೆ ಮಾಡಿರುವರು. ಯಾಸ್ಕರು ಶ್ರುಷ್ಟಿಂ ಎಂಬ ಶಬ್ದಕ್ಕೆ ಬೇಗನೆ ಎಂಬರ್ಥವನ್ನು ಹೇಳಿರುವರು (ನಿ ೬-೧೩).

**ವನೇ ನಿಪೂತಂ ವನ ಉತ್ ನಯಧ್ವಂ—ವನೇ ಸಂಭಜನೀಯೇ ವನ ಉದಕೇ ನಿಪೂತಮಾಪ್ಯಾಯನೇನ ಶೋಧಿತಂ ಸೋಮಮುನ್ನಯಧ್ವಂ । ಊರ್ಧ್ವಂ ನಯತ । ಯದ್ವಾ ವನೇ ತದ್ವಿಕಾರೇ ಚಮಸೇ ನಿಪೂತಂ ದಶಾಪವಿತ್ರೇಣ ಶೋಧಿತಂ ಸೋಮಂ ವನೇ ಚಮಸ ಉನ್ನಯಧ್ವಂ ।** ಇಲ್ಲಿ ವನೇ ಎಂಬ ಶಬ್ದವು ಎರಡಾವರ್ತಿ ಪಠಿತವಾಗಿರುವುದು. ವನಂ ಶಬ್ದವು ಉದಕನಾಮಗಳಲ್ಲಿ ಪಠಿತವಾಗಿರುವುದರಿಂದ (೧-೧೨) ವನೇ ಎಂದರೆ ಉದಕದಲ್ಲಿ, ನೀರಿನಲ್ಲಿ ಎಂದರ್ಥವು. ಮತ್ತು ಸಿದ್ಧಪಡಿಸಿದ ಸೋಮರಸವನ್ನು ಸಂಗ್ರಹಿಸಿ ಇಡುವ ದೊಡ್ಡ ಮರದ ಪಾತ್ರೆಗೆ ವನ ಎಂದೂ ಹೆಸರು. ಅಥವಾ ಮರದಿಂದ (ಉದುಂಬರ ವೃಕ್ಷದಿಂದ) ಮಾಡಿದ ಚಮಸಪಾತ್ರೆಗೂ ವನವೆಂದು ಹೆಸರು. ಆದುದರಿಂದ ಈ ವಾಕ್ಯದಲ್ಲಿ ಮೊದಲನೆಯ ವನೇ ಎಂಬ ಶಬ್ದಕ್ಕೆ ನೀರೆಂದೂ, ಎರಡನೆಯ ವನೇ ಎಂಬ ಶಬ್ದಕ್ಕೆ ಮರದಿಂದ ಮಾಡಿದ ಚಮಸಪಾತ್ರೆ ಎಂದೂ ಅರ್ಥಮಾಡಿದಲ್ಲಿ—ಸೋಮಲತೆಗಳನ್ನು ನೀರಿನಲ್ಲಿ ನೆನೆಯಿಸಿ ಶುದ್ಧಮಾಡಿ ಬಳಿಕ ಜಜ್ಜಿ, ಹಿಂಡಿ, ಶೋಧಿಸಿ ಚಮಸವೆಂಬ ಮರದಪಾತ್ರೆಯಲ್ಲಿ ಹಾಕಿದ ಸೋಮರಸವನ್ನು ಇಂದ್ರನಿಗೆ ಅರ್ಪಿಸುವುದಕ್ಕಾಗಿ ಉತ್ತರವೇದಿಯ ಬಳಿಗೆ ತೆಗೆದುಕೊಂಡು ಬನ್ನಿ ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು ಸೂಚಿತವಾಗುವುದು.

**ಜುಷಾಣಃ ಹಸ್ತ್ಯಂ ಅಭಿ ವಾವಶೇ ವಃ—ಜುಷಾಣಃ ಪ್ರೀಯಮಾಣಃ ಸ ಇಂದ್ರೋ ವೋ ಯುಷ್ಮಾಕಂ ಹಸ್ತ್ಯಂ ಹಸ್ತಾಭ್ಯಾಮಭಿಷುತಂ ಸೋಮಮಭಿವಾವಶೇ ಕಾಮಯತೇ ।** ಇಲ್ಲಿ ಹಸ್ತ್ಯಂ ಎಂದರೆ ಕೈಗಳಿಂದ ಸೋಮಲತೆಗಳನ್ನು ಜಜ್ಜಿ ಹಿಂಡಿ, ಶೋಧಿಸಿ ಸಿದ್ಧಪಡಿಸಿದ ಸೋಮರಸವೆಂದರ್ಥವು. ಎಲೈ ಅಧ್ವರ್ಯುಗಳೇ, ಪ್ರೀತನಾದ ಇಂದ್ರನು ನಿಮ್ಮ ಕೈಗಳಿಂದ ಶೋಧಿಸಿ ಸಿದ್ಧಪಡಿಸಿದ ಸೋಮರಸವನ್ನು ಅಪೇಕ್ಷಿಸುತ್ತಾನೆ. ಆದ್ದರಿಂದ ಮದಕರವಾದ ಸೋಮರಸವನ್ನು ಇಂದ್ರನನ್ನುದ್ದೇಶಿಸಿ ಅಗ್ನಿಯಲ್ಲಿ ಹೋಮಮಾಡಿ ಎಂದು ಮುಖ್ಯಾಭಿಪ್ರಾಯವು.

ಸಂಹಿತಾಪಾಠಃ

ಅಧ್ವರ್ಯವಃ ಪಯಸೋಧರ್ಯಥಾ ಗೋಃ ಸೋಮೇಭಿರೀಂ ಪೃಣತಾ ಭೋಜಮಿಂದ್ರಂ ।

ವೇದಾಹಮಸ್ಯ ನಿಭೃತಂ ಮ ಏತದ್ದಿತ್ಸಂತಂ ಭೂಯೋ ಯಜತಶ್ಚಿಕೇತ ॥

ಪದಪಾಠಃ

ಅಧ್ವರ್ಯವಃ । ಪಯಸಾ । ಊಧಃ । ಯಥಾ । ಗೋಃ । ಸೋಮೇಭಿಃ । ಈಂ । ಪೃಣತ । ಭೋಜಂ । ಇಂದ್ರಂ ।

ವೇದ । ಅಹಂ । ಅಸ್ಯ । ನಿऽಭೃತಂ । ಮೇ । ಏತತ್ । ದಿತ್ಸಂತಂ । ಭೂಯಃ । ಯಜತಃ । ಚಿಕೇತ ॥೧೦॥

ಸಾಯಣಭಾಷ್ಯಂ

ಹೇ ಅಧ್ವರ್ಯವಃ ಯಥಾ ಗೋರೂಧಃ ಪಯಸಾ ಪೂರ್ಣಂ ತದ್ವದೀಮೇನಂ ಭೋಜಂ ಫಲಸ್ಯ ದಾತಾರಂ ರಕ್ಷಿತಾರಂ ಚೇಂದ್ರಂ ಸೋಮೇಭಿಃ ಸೋಮ್ಯೈಃ ಪೃಣುತ । ಪೂರಯತ । ಮೇ ಮದೀಯಸ್ಯ ಸೋಮಸ್ಯ ನಿಭೃತಂ ಗೂಢಂ ಸುಖಸಾಧನಸ್ವಭಾವಮಹಮೇವ ವೇದ । ಜಾನಾಮಿ । ಇತಿ ಪೂರ್ವಂ ನ ಪರಸ್ಮೈ ಕಥಿತಂ । ತಥಾಪಿ ಯುಷ್ಮಭ್ಯಂ ಬ್ರವೀಮೀತ್ಯೇವಂ । ದಿತ್ಸಂತಂ ಸೋಮಂ ದಾತುಮಿಚ್ಛಂತಂ ಯಜಮಾನಂ ಯಜತೋ ಯಷ್ಟವ್ಯ ಇಂದ್ರೋ ಭೂಯೋऽತಿಶಯೇನ ಚಿಕೇತ ॥ ದಿತ್ಸಂತಂ । ಡುದಾಞ್ ದಾನೇ । ಇಚ್ಛಾಯಾಂ ಸನ್ । ಸನಿ ಮೀಮಾಘ್ವಿತ್ಯಾಕಾರಸ್ಯ ಇಸಾದೇಶಃ । ಅತ್ರ ಲೋಪೋऽಭ್ಯಾಸಸ್ಯೇತ್ಯಭ್ಯಾಸಲೋಪಃ । ಸಃ ಸ್ಯಾರ್ಧಧಾತುಕೇ ಇತಿ ಸಕಾರಸ್ಯ ತತ್ವಂ ॥

ಪ್ರತಿಪದಾರ್ಥ

ಅಧ್ವರ್ಯವಃ—ಎಲೈ ಅಧ್ವರ್ಯುಗಳೇ । ಯಥಾ—ಯಾವ ರೀತಿಯಲ್ಲಿ । ಗೋಃ—ಗೋವಿನ । ಊಧಃ—ಕೆಚ್ಚಲು । ಪಯಸಾ—ಕ್ಷೀರದಿಂದ ತುಂಬಿರುವುದೋ ಅದರಂತೆ । ಭೋಜಂ—ಫಲದಾತನಾದ ಮತ್ತು ಸಂರಕ್ಷಕನಾದ । ಈಂ ಇಂದ್ರಂ—ಈ ಇಂದ್ರನನ್ನು । ಸೋಮೇಭಿಃ—ಸೋಮರಸಗಳಿಂದ । ಪೃಣತ—ತುಂಬಿರಿ । ಮೇ—ನನಗೆ ಪ್ರಿಯವಾದ । ಅಸ್ಯ—ಈ ಸೋಮದ । ಏತತ್ ನಿಭೃತಂ—ಗೂಢವಾದ ಈ ಸುಖದ ಸ್ವರೂಪವನ್ನು । ಅಹಂ—ನಾನು (ಮಾತ್ರ) । ವೇದ—ತಿಳಿಯುತ್ತೇನೆ (ಎಂದು ಹೇಳುತ್ತಾ) । ಯಜತಃ—ಯಜ್ಞಾರ್ಹನಾದ ಇಂದ್ರನು । ದಿತ್ಸಂತಂ—ಸೋಮವನ್ನು ಅರ್ಪಿಸತಕ್ಕ ಯಜಮಾನನ್ನು । ಭೂಯಃ—ಅತಿಶಯವಾಗಿ । ಚಿಕೇತ—ತಿಳಿಯುತ್ತಾನೆ (ಪ್ರಶಂಸೆಮಾಡುತ್ತಾನೆ).

ಭಾವಾರ್ಥ

ಎಲೈ ಅಧ್ವರ್ಯುಗಳೇ, ಯಾವ ರೀತಿಯಲ್ಲಿ ಗೋವಿನ ಕೆಚ್ಚಲು ಕ್ಷೀರದಿಂದ ತುಂಬಿರುವುದೋ ಅದರಂತೆ ಫಲದಾತನಾದ ಈ ಇಂದ್ರನನ್ನು ಸೋಮರಸಗಳಿಂದ ತುಂಬಿರಿ. "ನನಗೆ ಪ್ರಿಯ:ವಾದ ಈ ಸೋಮದ ಗೂಢವಾದ ಸುಖದ ಸ್ವರೂಪವನ್ನು ನಾನು ಮಾತ್ರ ತಿಳಿಯಬಲ್ಲೆನು" ಎಂದು ಹೇಳುತ್ತಾ ಯಜ್ಞಾರ್ಹನಾದ ಇಂದ್ರನು ಸೋಮ ವನ್ನು ಅರ್ಪಿಸತಕ್ಕ ಯಜಮಾನನ್ನು ಅತಿಶಯವಾಗಿ ತಿಳಿಯುತ್ತಾನೆ. (ಮೆಚ್ಚುತ್ತಾನೆ)

## English Translation

Priests, fill the bountiful Indra with libations, as the udder of a cow is filled with milk ; so shall the adorable (Indra) fully comprehend (the liberality) of him who desires to present the gift, and shall say (to him), I acknowledge the secret (virtue) of this my (draught).

ವಿಶೇಷವಿಷಯಗಳು.

**ಅಧ್ವರ್ಯವಃ ಪಯಸಾ ಊಧಃ ಯಥಾ ಗೋಃ ಸೋಮೇಭಿಃ ಈಂ ಪೃಣತ ಭೋಜಂ ಇಂದ್ರಂ-ಹೇ ಅಧ್ವರ್ಯವಃ ಯಥಾ ಗೋರೂಧಃ ಪಯಸಾ ಪೂರ್ಣಂ ತದ್ವದೀಮೇನಂ ಭೋಜಂ ಫಲಸ್ಯ ದಾತಾರಂ ರಕ್ಷಿತಾರಂ ಚೇಂದ್ರಂ ಸೋಮೇಭಿಃ ಸೋಮ್ಯೈಃ ಪೃಣತ ಪೂರಯತ ।** ಎಲೈ ಅಧ್ವರ್ಯುನಾಮಕಋತ್ವಿಜರೇ, ಗೋವಿನ ಕೆಚ್ಚಲಿನಲ್ಲಿ ಯಾವರೀತಿ ಹಾಲು ತುಂಬಿರುವುದೋ ಅದರಂತೆ ನಮಗೆ ಫಲಪ್ರದವಾದ ಮತ್ತು ರಕ್ಷಕನಾದ ಇಂದ್ರನನ್ನು ಸೋಮರಸಗಳಿಂದ ಚೆನ್ನಾಗಿ ತುಂಬಿರಿ. ಗೋವಿನ ಕೆಚ್ಚಲಿನಲ್ಲಿ ಹಾಲು ತುಂಬಿಕೊಂಡು ದಪ್ಪನಾಗಿ ಕಂಡುಬರುವುದು. ಅದರಂತೆ ಇಂದ್ರನ ಉದರವನ್ನು ಸೋಮರಸಗಳಿಂದ ತುಂಬಿ ದಪ್ಪನಾಗಿ ಕಾಣುವಂತೆ ಮಾಡಿರಿ ಎಂದರೆ ಅತಿಶಯವಾಗಿ (ಅತ್ಯಧಿಕವಾಗಿ) ಸೋಮರಸವನ್ನು ಇಂದ್ರನಿಗೆ ಅರ್ಪಿಸಿರಿ ಎಂದು ಮುಖ್ಯಾಭಿಪ್ರಾಯವು. ಗೋವಿನ ಕೆಚ್ಚಲಿನಲ್ಲಿ ಹಾಲು ಹೇಗೆ ತುಂಬಿರುವುದೋ ಇಂದ್ರನ ಉದರದಲ್ಲಿಯೂ ಆರೀತಿ ಸೋಮರಸವನ್ನು ತುಂಬಿರಿ ಎಂದು ಋಷಿಯು ಅಧ್ವರ್ಯುಗಳನ್ನು ಸಂಬೋಧಿಸಿ ನಿರ್ದೇಶಿಸಿರುವನು.

**ವೇದ ಅಹಂ ಅಸ್ಯ ನಿಭೃತಂ ಮೇ—ಮೇ ಮದೀಯಸ್ಯ ಸೋಮಸ್ಯ ನಿಭೃತಂ ಗೂಢಂ ಸುಖಸಾಧನಸ್ವಭಾವಮಹಮೇವ ವೇದ । ಜನಾಮಿ । ಇತಿ ಪೂರ್ವಂ ನ ಪರಸ್ಮೈ ಕಥಿತಂ ತಥಾಪಿ ಯುಷ್ಮಭ್ಯಂ ಬ್ರವೀಮಿ ।** ಸೋಮರಸಪಾನದಿಂದ ತೃಪ್ತನಾದ ಇಂದ್ರನು ಈ ವಾಕ್ಯವನ್ನು ಹೇಳಿರುವನು—ನಾನು ಪಾನಮಾಡಿದ ಈ ಸೋಮರಸದ ಸುಖಾನುಭವವನ್ನು ಪಾನಮಾಡಿದ ನಾನು ಮಾತ್ರ ಬಲ್ಲೆನು. ಇತರರಿಂದ ತಿಳಿಯಲು ಸಾಧ್ಯವಿಲ್ಲ ಈ ವಿಷಯವನ್ನು ನಾನು ಇದುವರೆಗೆ ಯಾರಿಗೂ ಹೇಳಿರಲಿಲ್ಲ. ಈಗ ನಿಮಗೆ ಹೇಳುವೆನು ಎಂದು ಇಂದ್ರನು ಯಜಮಾನ ಋತ್ವಿಜರನ್ನುದ್ದೇಶಿಸಿ ಹೇಳಿರುವನು.

**ಏತತ್ ದಿತ್ಸಂತಂ ಭೂಯಃ ಯಜತಃ ಚಿಕೇತ**—ಈರೀತಿ ಯಥೇಚ್ಛವಾಗಿ ಯಜಮಾನನು ಸೋಮವನ್ನು ಅರ್ಪಿಸುವುದನ್ನು ಇಂದ್ರನು ತಿಳಿಯುವನು ಎಂದರೆ ಯಜಮಾನನು ಅಧಿಕವಾಗಿ ಸೋಮರಸವನ್ನು ಅರ್ಪಿಸುವುದನ್ನು ಇಂದ್ರನು ಬಹಳವಾಗಿ ಮೆಚ್ಚುವನು (ಎಂದರೆ ಪ್ರಶಂಸೆಮಾಡುವನು).

### ಸಂಹಿತಾಪಾಠಃ

ಅಧ್ವರ್ಯವೋ ಯೋ ದಿವ್ಯಸ್ಯ ವಸ್ವೋ ಯಃ ಪಾರ್ಥಿವಸ್ಯಕ್ಷಮ್ಯಸ್ಯ ರಾಜಾ।
ತಮೂರ್ದರಂ ನ ಪೃಣತಾ ಯವೇನೇಂದ್ರಂ ಸೋಮೇಭಿಸ್ತದಪೋ ವೋ
ಅಸ್ತು ॥ ೧೧ ॥

### ಪದಪಾಠಃ

ಅಧ್ವರ್ಯವಃ । ಯಃ । ದಿವ್ಯಸ್ಯ । ವಸ್ವಃ । ಯಃ । ಪಾರ್ಥಿವಸ್ಯ । ಕ್ಷಮ್ಯಸ್ಯ । ರಾಜಾ ।
ತಂ । ಊರ್ದರಂ। ನ। ಪೃಣತ । ಯವೇನ। ಇಂದ್ರಂ ।ಸೋಮೇಭಿಃ । ತತ್ । ಅಪಃ । ವಃ । ಅಸ್ತು ॥೧೧॥

### ಸಾಯಣಭಾಷ್ಯಂ

ಹೇ ಅಧ್ವರ್ಯವಃ ಯ ಇಂದ್ರೋ ದಿವ್ಯಸ್ಯ ದ್ಯುಲೋಕಾರ್ಹಸ್ಯ ವಸ್ವೋ ವಸುನೋ ರಾಜಾ ಭವತಿ । ಯಶ್ಚ ಪಾರ್ಥಿವಸ್ಯ । ಪೃಥಿವೀಶಬ್ದೇನ ವಿಸ್ತೀರ್ಣಮಂತರಿಕ್ಷಮುಚ್ಯತೇ । ತತ್ರತ್ಯಂ ಧನಂ ಪಾರ್ಥಿವಂ । ತಸ್ಯ ರಾಜಾ । ಯಶ್ಚ ಕ್ಷಮ್ಯಸ್ಯ । ಕ್ಷಮಾ ಭೂಮಿಃ । ತತ್ರತ್ಯಂ ಧನಂ ಕ್ಷಮ್ಯಂ । ತಸ್ಯ ಚ ರಾಜಾ ಭವತಿ । ತಮೇವಂವಿಧಮಿಂದ್ರಂ ಸೋಮೇಭಿಃ ಸೋಮ್ಯೈಃ ಪೃಣುತೆ । ಪೂರಯತ । ತತ್ರ ದೃಷ್ಟಾಂತಃ । ಊರ್ದರಂ ನ । ಊರ್ಧ್ವಂ ದೀರ್ಣಮೂರ್ದರಂ ಕುಸೂಲಂ। ಯಥಾ ಯವೇನ ತತ್ಪೂರ್ಣಂ ತದ್ವದಿಂದ್ರಂ ಪೂರಯತೇತಿ । ತಾದೃಶಂ ಸೋಮಾದಿನೇಂದ್ರೋದರಪೂರಣಲಕ್ಷಣಮಪಃ ಕರ್ಮ ವೋ ಯುಷ್ಮಾಕಮಸ್ತು ॥

### ಪ್ರತಿಪದಾರ್ಥ

ಅಧ್ವರ್ಯವಃ—ಎಲೈ ಅಧ್ವರ್ಯುಗಳೇ । ಯಃ—ಯಾವ ಇಂದ್ರನು । ದಿವ್ಯಸ್ಯ—ದ್ಯುಲೋಕಕ್ಕೆ ಸೇರಿದ । ವಸ್ವಃ—ಸಕಲವಾದ ಧನಕ್ಕೂ । ರಾಜಾ—ಪ್ರಭುವಾಗಿದ್ದಾನೆಯೋ (ಹಾಗೆಯೇ) । ಯಃ—ಯಾರು । ಪಾರ್ಥಿವಸ್ಯ—ವಿಸ್ತೃತವಾದ ಅಂತರಿಕ್ಷದ ಧನಕ್ಕೂ । ಕ್ಷಮ್ಯಸ್ಯ—ಪಾರ್ಥಿವವಾದ ಧನಕ್ಕೂ ಸ್ವಾಮಿಯಾಗಿರುವನೋ ತಂ—ಅಂತಹ । ಇಂದ್ರಂ—ಇಂದ್ರನನ್ನು । ಯವೇನ—ಯವಧಾನ್ಯದಿಂದ । ಊರ್ದರಂ ನ—ಕಣಜವನ್ನು ತುಂಬುವಂತೆ । ಸೋಮೇಭಿಃ—ಸೋಮದ ರಸಗಳಿಂದ । ಪೃಣತ—ತುಂಬಿರಿ । ತತ್ ಅಪಃ—ಇಂತಹ ಕರ್ಮವು । ವಃ—ನಿಮ್ಮ (ಕ್ಷೇಮಕ್ಕಾಗಿ) । ಅಸ್ತು—ಆಗಿರಲಿ.

### ಭಾವಾರ್ಥ

ಎಲೈ ಅಧ್ವರ್ಯುಗಳೇ, ಯಾವ ಇಂದ್ರನು ದ್ಯುಲೋಕಕ್ಕೆ ಸೇರಿದ ಸಕಲಧನಕ್ಕೂ ಹಾಗೆಯೇ ಅಂತರಿಕ್ಷಕ್ಕೂ ಪೃಥಿವಿಗೂ ಸಂಬಂಧಿಸಿದ ಸಕಲವಾದ ಸಂಪತ್ತಿಗೂ ಪ್ರಭುವಾಗಿದ್ದಾನೆಯೋ ಅಂತಹ ಇಂದ್ರನನ್ನು ಯವಧಾನ್ಯದಿಂದ ಕಣಜವನ್ನು ತುಂಬುವಂತೆ ಸೋಮದ ರಸಗಳಿಂದ ತುಂಬಿರಿ. ಇಂತಹ ಕರ್ಮವು ನಿಮಗೆ ಕ್ಷೇಮವನ್ನುಂಟು ಮಾಡಲಿ.

### English Translation

Priests, fill with libations, as a granary (is filled) with barley, Indra, who is lord of the riches of heaven, of mid-heaven, of earth ; and may such (pious) act be for your (good).

### ವಿಶೇಷವಿಷಯಗಳು

ಯಃ ದಿವ್ಯಸ್ಯ ವಸ್ವಃ ಪಾರ್ಥಿವಸ್ಯ ಕ್ಷಮ್ಯಸ್ಯ (ವಸ್ವಃ) ರಾಜಾ ಯ ಇಂದ್ರೋ ದ್ಯುಲೋಕಾರ್ಹಸ್ಯ ವಸ್ವೋ ವಸುನೋ ರಾಜಾ ಭವತಿ। ಯಶ್ಚ ಪಾರ್ಥಿವಸ್ಯ ಪೃಥಿವೀಶಬ್ದೇನ ವಿಸ್ತೀರ್ಣಮಂತರಿಕ್ಷಮುಚ್ಯತೇ । ತತ್ರತ್ಯಧನಂ ಪಾರ್ಥಿವಂ । ತಸ್ಯ ರಾಜಾ । ಯಶ್ಚ ಕ್ಷಮ್ಯಸ್ಯ ಕ್ಷಮಾ ಭೂಮಿಃ ತತ್ರತ್ಯಂ ಧನಂ ಕ್ಷಮ್ಯಂ । ತಸ್ಯ ಚ ರಾಜಾ ಭವತಿ । ಇಲ್ಲಿ ಪೃಥಿವೀ ಶಬ್ದವು ಅಂತರಿಕ್ಷನಾಮಗಳಲ್ಲಿ (ನಿ. ೨-೧೦) ಪಠಿತವಾಗಿರುವುದು ಆದುದ ರಿಂದ ಸ್ವರ್ಗಲೋಕದಲ್ಲಿರುವುದೂ, ಅಂತರಿಕ್ಷದಲ್ಲಿರುವುದೂ, ಪೃಥಿವಿಯಲ್ಲಿರುವುದೂ ಆದ ಸಮಸ್ತ ಧನಗಳಿಗೂ ಇಂದ್ರನು ರಾಜ (ಸ್ವಾಮಿ) ಯೆಂದು ಋಷಿಯು ವರ್ಣಿಸಿರುವನು.

ತಂ ಊರ್ದರಂ ನ ಪೃಣತ ಯವೇನ ಇಂದ್ರಂ ಸೋಮೇಭಿಃ—ಭೂಮ್ಯಂತರಿಕ್ಷಸ್ವರ್ಗಗಳಲ್ಲಿರುವ ಸಮಸ್ತ ಧನಾದಿಗಳಿಗೂ ಒಡೆಯನಾದ ಇಂದ್ರನನ್ನು (ಎಂದರೆ ಇಂದ್ರನ ಉದರವನ್ನು) ಕಣಜವನ್ನು ಯವಧಾನ್ಯ ದಿಂದ ತುಂಬುವಂತೆ ಸೋಮರಸಗಳಿಂದ ತುಂಬಿರಿ. ಹಿಂದಿನ ಋಕ್ಕಿನಲ್ಲಿ ಇಂದ್ರನ ಉದರವನ್ನು ಹಾಲಿನಿಂದ ತುಂಬಿದ ಹಸುವಿನ ಕೆಚ್ಚಲಿಗೆ ಹೋಲಿಸಿ ಈ ಋಕ್ಕಿನಲ್ಲಿ ಯವಧಾನ್ಯದಿಂದ ತುಂಬಿದ ಕಣಜಕ್ಕೆ ಹೋಲಿಸಿದೆ. ಇಲ್ಲಿ ಊರ್ದರ ಶಬ್ದಕ್ಕೆ ಯಾಸ್ಕರು—

> ಊರ್ದರಂ ಕೃದರಮಿತ್ಯಾವಪನಸ್ಯ । ಊರ್ದರಮುದ್ದೀರ್ಣಂ ಭವಂತಿ ಊರ್ಜೇ ದೀರ್ಣಂ ವಾ । ತಮೂರ್ದರಂ ನ ಪೃಣತಾ ಯವೇನ ಇತ್ಯಪಿ ನಿಗಮೋ ಭವತಿ। ತಮೂರ್ದರಮಿವ ಪೂರಯತಿ ಯವೇನ । ಕೃದರಂ ಕೃತದರಂ ಭವತಿ ॥
>
> (ನಿ ೩-೨೦)

ಎಂದು ನಿರ್ವಚನವನ್ನು ಹೇಳಿದ್ದಾರೆ. ಊರ್ದರಶಬ್ದವು ಊರ್ದರಂ ಕೃದರಂ ಎಂದು ಇಪ್ಪತ್ತಾರು ದ್ವಿಶನಾಮ ಗಳಲ್ಲಿ ಉಕ್ತವಾಗಿದೆ. (ನಿ. ೩-೨೦) ದ್ವಿಶನಾಮಗಳೆಂದರೆ ಒಂದೇ ಅರ್ಥವುಳ್ಳ, ಸಮಾನಾರ್ಥವುಳ್ಳ ಎರಡು ಶಬ್ದಗಳು ಎಂದರೆ ಊರ್ದರಂ ಕೃದರಂ ಎಂಬ ಎರಡು ಶಬ್ದಗಳೂ ಸಮಾನಾರ್ಥವುಳ್ಳವು ಎಂದಭಿಪ್ರಾಯವು. ಕೃದರ ಶಬ್ದವು ಗೃಹನಾಮಗಳಲ್ಲಿ ಪಠಿತವಾಗಿವೆ (ನಿ. ೩-೧೩). ಊರ್ದರ, ಮತ್ತು ಕೃದರ ಎಂಬ ಎರಡು ಶಬ್ದಗಳು ಆವಪನಕ್ಕೆ (ಧಾನ್ಯವನ್ನು ಶೇಖರಿಸಿಡುವ ಗೃಹಕ್ಕೆ) ಹೆಸರುಗಳು. ಅಥವಾ ಮೇಲಿನವರೆಗೆ ತುಂಬುವುದರಿಂದ ಅಥವಾ ಅನ್ನ (ಆಹಾರ) ಕ್ಕಾಗಿ ಶೇಖರಿಸಿಡುವುದರಿಂದ ಊರ್ದರವೆಂದು ಕಣಜಕ್ಕೆ ಹೆಸರು ಎಂದು ವಿವರಿಸಿ ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ಕೊಟ್ಟಿರುವರು. ಈ ಊರ್ದರ ಶಬ್ದವು ಋಗ್ವೇದದಲ್ಲಿ ಈ ಋಕ್ಕಿನಲ್ಲಿ ಮಾತ್ರ ಪಠಿತವಾಗಿರು ವುದು. ಇನ್ನೆಲ್ಲಿಯೂ ಇದರ ಪ್ರಯೋಗವಿಲ್ಲ.

This word occurs once in the Rigved a (ಋ. ಸಂ. ೨-೧೪-೧೧) when reference is made to filling Indra with Soma as one fills an ಊರ್ದರ with grain (ಯವ). Sayana renders it "granary" but Roth and Zimmer Seem more correct in simply making it a measure for holding grain or garner,

(Vedic Index of names and subjects. p. 106)

ಎಂದು ಕೆಲವು ಆಂಗ್ಲಪಂಡಿತರ ಅಭಿಪ್ರಾಯವು. ಆದರೆ ಸಾಯಣರ ಅರ್ಥವಿವರಣೆಯು ಯಾಸ್ಕರ ಮತವನ್ನನುಸರಿಸಿ ಇರುವುದರಿಂದ ಅದೇ ಗ್ರಾಹ್ಯವು.

---

ಸಂಹಿತಾಪಾಠಃ

ಅಸ್ಮಭ್ಯಂ ತದ್ವಸೋ ದಾನಾಯ ರಾಧಃ ಸಮರ್ಥಯಸ್ವ ಬಹು ತೇ ವಸವ್ಯಂ ।
ಇಂದ್ರ ಯಚ್ಚಿತ್ರಂ ಶ್ರವಸ್ಯಾ ಅನು ದ್ಯೂನ್ಬೃಹದ್ವದೇಮ ವಿದಥೇ ಸುವೀರಾಃ ॥

ಪದಪಾಠಃ

ಅಸ್ಮಭ್ಯಂ । ತತ್ । ವಸೋ ಇತಿ । ದಾನಾಯ । ರಾಧಃ । ಸಂ । ಅರ್ಥಯಸ್ವ । ಬಹು । ತೇ । ವಸವ್ಯಂ ।
ಇಂದ್ರ । ಯತ್ । ಚಿತ್ರಂ । ಶ್ರವಸ್ಯಾಃ । ಅನು । ದ್ಯೂನ್ । ಬೃಹತ್ । ವದೇಮ । ವಿದಥೇ । ಸುವೀರಾಃ ॥ ೧೨ ॥

ಸಾಯಣಭಾಷ್ಯಂ

ವಸೋ ಸರ್ವಸ್ಯ ವಾಸಕ ವಸುಮನ್ವಾ ಹೇ ಇಂದ್ರ ಸ್ತೋತೃಭ್ಯೋಽಸ್ಮಭ್ಯಂ ತದ್ರಾಧೋ ಧನಂ ದಾನಾಯ । ಉಪಲಕ್ಷಣಮೇತತ್ । ಭೋಗಾಯ ಚ ಸಮರ್ಥಯಸ್ವ । ದೇಹಿ । ಅಸ್ಮಾನ್ ಸಂಗಮಯೇತ್ಯರ್ಥಃ ॥ ಅರ್ಥ ಯಾಚನೇ ಚುರಾದಿರದಂತ ಆತ್ಮನೇಪದೀ ॥ ತೇ ತವ ತದ್ಬಹು ಪ್ರಭೂತಂ ವಸವ್ಯಂ ॥ ವಸ್ವೇವ ವಸವ್ಯಂ । ವಸ್ವಾದಿತ್ವಾತ್ ಸ್ವಾರ್ಥಿಕೋ ಯತ್ ॥ ತಾದೃಶಂ ಪ್ರಭೂತಂ ಧನಮಸ್ತಿ ಖಲು । ಚಿತ್ರಂ ಚಾಯನೀಯಂ ಯದ್ಧನಮನು ದ್ಯೂನ್ ಅನ್ವಹಂ ॥ ಕಾಲಾಧ್ವನೋರಿತಿ ದ್ವಿತೀಯಾ ॥ ಶ್ರವಸ್ಯಾಃ । ಭೋಗ್ಯಮಿಚ್ಛೇಃ ॥ ಅಂತರ್ಣೀತಣ್ಯರ್ಥತ್ವಾದಕರ್ಮಕತ್ವಂ । ಯಥಾ ರೋದಿತೀತಿ । ಸ ತ್ವನ್ಯಃ । ದ್ವೇ ಹ್ಯತ್ರ ಕರ್ಮಣೀ ಉದ್ದೇಶ್ಯಕರ್ಮ ಚ ವಿಧೇಯಕರ್ಮಾಂತರ್ಭೂತಂ । ಉದ್ದೇಶ್ಯಕರ್ಮಣಾ ಸಕರ್ಮಕೋ ಭವಿಷ್ಯತಿ । ಯಥಾ ಮಾಣವಕಂ ಪುತ್ರೀಯತೀತಿ ಭಾಷ್ಯ ಉದಾಹೃತಂ । ಪಾ. ೩-೧-೮-೨ । ಶ್ರವಃಶಬ್ದಾಚ್ಛಂದಸಿ ಪರೇಚ್ಛಾಯಾಂ ಕ್ಯಚ್ । ತದಂತಸ್ಯ ಲೇಟ್ಯಡಾಗಮೇ ರೂಪಂ ॥ ಸುವೀರಾಃ ಕಲ್ಯಾಣಪುತ್ರಪೌತ್ರಾಃ ಸಂತೋ ವಯಂ ವಿದಥೇಽಸ್ಮಿನ್ಯಜ್ಞೇ ಬೃಹತ್ ಪ್ರಭೂತಂ ಶಸ್ತ್ರಾದಿಕಂ ವಾಕ್ಯಂ ವದೇಮ ॥

### ಪ್ರತಿಪದಾರ್ಥ

**ವಸೋ**—ಧನವಂತನಾದ । **ಇಂದ್ರ**—ಎಲೈ ಇಂದ್ರನೇ । **ಚಿತ್ರಂ**—ನಾನಾವಿಧವಾದುದೂ ಮತ್ತು ರಮ್ಯವಾದುದೂ ಆದ । **ಯತ್**—ಯಾವ ಧನವನ್ನು । **ಅನು ದ್ಯೂನ್**—ಪ್ರತಿ ದಿನವೂ । **ಶ್ರವಸ್ಯಾಃ**—ಅನುಭವಿಸಲಿಚ್ಛಿಸುತ್ತೀವೆಯೋ ಅಥವಾ ನಾವು ಭೋಗಿಸಬೇಕೆಂದು ನೀನು ಇಚ್ಛಿಸುತ್ತೀಯೋ । **ತೇ**—ನಿನ್ನ ಸಂಬಂಧವಾದುದೂ, **ಬಹು**—ಪ್ರಭೂತವಾದುದೂ । **ವಸವ್ಯಂ**—ಸಂಪದ್ಯುಕ್ತವಾದುದೂ ಆದ । **ತತ್ ರಾಧಃ**—ಆ ಧನವನ್ನು । **ಅಸ್ಮಭ್ಯಂ**—ನಮಗೆ । **ದಾನಾಯ**—ದಾನಕ್ಕೂ ಮತ್ತು ಉಪಭೋಗಕ್ಕೂ ಸಹ । **ಸಮರ್ಥಯಸ್ವ**—ಪೂರ್ಣವಾಗಿ ಕೊಡು । **ಸುವೀರಾಃ**—ಶ್ರೇಷ್ಠವಾದ ಪುತ್ರರಿಂದೊಡಗೂಡಿದ ನಾವು । **ವಿದಥೇ**—ಈ ಯಜ್ಞದಲ್ಲಿ । **ಬೃಹತ್**—ಪ್ರಭೂತವಾದ ಶಸ್ತ್ರಾದಿ ಮಂತ್ರಗಳನ್ನು । **ವದೇಮ**—ಪಠಿಸುವೆವು.

### ಭಾವಾರ್ಥ

ಧನವಂತನಾದ ಎಲೈ ಇಂದ್ರನೇ, ನಾವು ಪ್ರತಿ ದಿನವೂ ಉಪಭೋಗಿಸಬೇಕೆಂದಿಚ್ಛಿಸುವುದೂ, ನಿನ್ನಲ್ಲಿ ಪ್ರಭೂತವಾಗಿಯೂ ಸಂಪದ್ಯುಕ್ತವಾಗಿಯೂ ಇರುವುದೂ ಆದ ಧನವನ್ನು ದಾನಕ್ಕೂ ಉಪಭೋಗಕ್ಕೂ ಸಹ ಪೂರ್ಣವಾಗಿ ಕೊಡು, ಶ್ರೇಷ್ಠರಾದ ಪುತ್ರರಿಂದೊಡಗೂಡಿದ ನಾವು ಈ ಯಜ್ಞದಲ್ಲಿ ಪ್ರಭೂತವಾದ ಶಸ್ತ್ರಾದಿಮಂತ್ರಗಳನ್ನು ಪಠಿಸುವೆವು.

### English Translation

Possessor of riches, exert your ability to bestow wealth upon us; for yours is great affluence: may you, Indra, be disposed to grant us exceeding abundance day by day, so that, blessed with worthy descendants, we may glorify you at (our) sacrifibe.

### ವಿಶೇಷವಿಷಯಗಳು

ಇದುವರೆಗೂ ನಾನಾವಿಧವಾಗಿ ಇಂದ್ರನ ಸಾಹಸಕೃತ್ಯಗಳ ಗುಣವರ್ಣನೆಮಾಡಿ ಈಗ ಸೂಕ್ತದ ಕೊನೆಯದಾದ ಈ ಋಕ್ಕಿನಲ್ಲಿ ಉಪಸಂಹಾರರೂಪವಾಗಿ ಇಂದ್ರನನ್ನು ಸ್ತುತಿಸಿ ಧನಾದಿಗಳನ್ನು ಕೊಡಬೇಕೆಂದು ಪ್ರಾರ್ಥಿಸಲಾಗಿದೆ.

**ವಸೋ—ಸರ್ವಸ್ಯ ವಾಸಕ ವಸುಮನ್ವಾ ಹೇ ಇಂದ್ರ** । ಸರ್ವರಿಗೂ ವಾಸಸ್ಥಾನವನ್ನು ಒದಗಿಸಿ ಕೊಡುವ ಅಥವಾ ಧನವಂತನಾದ ಎಲೈ ಇಂದ್ರನೇ, ಎಂದು ಈ ಶಬ್ದಕ್ಕೆ ಎರಡುವಿಧವಾದ ಅರ್ಥವನ್ನೂ ಹೇಳಿರುವರು

**ಅಸ್ಮಭ್ಯಂ ದಾನಾಯ ರಾಧಃ ಸಮರ್ಥಯಸ್ವ**—ಇತರರಿಗೆ ಕೊಡುವುದಕ್ಕೂ ಮತ್ತು ನಾವು ಉಪಭೋಗಿಸುವುದಕ್ಕೂ ಸಹ ಧನವನ್ನು ನಮಗೆ ಕೊಡು ಎಂದಭಿಪ್ರಾಯವು.

**ಬಹು ತೇ ವಸವ್ಯಂ**—ಎಂಬ ಈ ವಾಕ್ಯದಿಂದ ಇಂದ್ರನಲ್ಲಿ ಬಹಳವಾಗಿ ಧನಾದಿಗಳಿರುವುದೆಂದೂ ಆದ್ದರಿಂದ ತನ್ನನ್ನು ಸ್ತೋತ್ರಮಾಡುವವರಿಗೆ ಧನಾದಿಗಳನ್ನು ಕೊಡಲು ಇಂದ್ರನು ಸಮರ್ಥನಾಗಿರುವನೆಂದೂ ಅರ್ಥವು ಸೂಚಿತವಾಗುವುದು.

ಇಂದ್ರ ಯತ್ ಚಿತ್ರಂ ಶ್ರವಸ್ಯಾಃ ಅನು ದ್ಯೂನ್—ಎಲೈ ಇಂದ್ರನೇ, ಧನವನ್ನಪೇಕ್ಷಿಸುವ ನಮಗೆ ಪ್ರತಿ ದಿನವೂ ನಾನಾವಿಧವಾದ ಧನಾದಿದ್ರವ್ಯಗಳನ್ನು ಕೊಡಬೇಕೆಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ

ಬೃಹತ್ ವದೇಮ ವಿದಥೇ ಸುವೀರಾಃ—ಸುವೀರಾಃ ಕಲ್ಯಾಣಪುತ್ರಪೌತ್ರಾಃ ಸಂತೋ ವಯಂ ವಿದಥೇಽಸ್ಮಿನ್ಯಜ್ಞೇ ಬೃಹತ್ ಪ್ರಭೂತಂ ಶಸ್ತ್ರಾದಿಕಂ ವಾಕ್ಯಂ ವದೇಮ ॥ ಶ್ರೇಷ್ಠರಾದ ಪುತ್ರಪೌತ್ರಾದಿ ಗಳಿಂದಲೂ ಪರಾಕ್ರಮಿಗಳಾದ ಭೃತ್ಯವರ್ಗದವರಿಂದಲೂ ಸಹಿತರಾದ ನಾವು ಇಂದ್ರನಾದ ನಿನ್ನ ಪ್ರೀತ್ಯರ್ಥವಾಗಿ ಈ ಯಜ್ಞದಲ್ಲಿ ಶಸ್ತ್ರಾದಿಮಂತ್ರಗಳನ್ನು ಬಹಳವಾಗಿ ಪಠಿಸುವೆವು ಎಂದು ಹಿಂದಿನ ಸೂಕ್ತಗಳಲ್ಲಿ ಹೇಳಿರುವಂತೆ ಈ ಸೂಕ್ತದ ಕೊನೆಯಲ್ಲಿಯೂ ಋಷಿಯು ಆಶಂಸನೆಮಾಡಿರುವನು.

---

## ಹದಿನೈದನೆಯ ಸೂಕ್ತವು.

---

ಪ್ರ ಘಾ ನ್ವಸ್ಯೇತಿ ದಶರ್ಚಂ ಚತುರ್ಥಂ ಸೂಕ್ತಂ ಗಾರ್ತ್ಸಮದಂ ತ್ರೈಷ್ಟುಭಮೈಂದ್ರಂ । ಅತ್ರಾ- ನುಕ್ರಮಣಿಕಾ ಪ್ರ ಘ ದಶೇತಿ ॥ ದಶರಾತ್ರೇ ಷಷ್ಠೇಽಹನಿ ನಿಷ್ಕೇವಲ್ಯೇ ತ್ರೀಣಿ ಸೂಕ್ತಾನಿ । ತತ್ರೇದಂ ದ್ವಿತೀಯಂ । ಷಷ್ಠಸ್ಯೇತಿ ಖಂಡೇ ಸೂತ್ರಿತಂ । ಐಂದ್ರ ಯಾಹ್ಯುಪ ನಃ ಪ್ರ ಘಾ ನ್ವಸ್ಯಾಭೂರೇಕ ಇತಿ ನಿಷ್ಕೇವಲ್ಯಂ । ಆ. ೯-೧ । ಇತಿ ॥ ತ್ರ್ಯೇಕಕಮಾಮಕೇ ನಿಷ್ಕೇವಲ್ಯೇ ಪ್ರ ಘಾ ನ್ವಸ್ಯೇತ್ಯೇಷಾ ಸೂಕ್ತಮು- ಖೀಯಾ । ಉಶನಃಸ್ತೋಮೇ ಸೂತ್ರಿತಂ । ತ್ರ್ಯರ್ಯಮಾ ಮನುಷೋ ದೇವತಾತಾ ಪ್ರ ಘಾ ನ್ವಸ್ಯ ಮಹತೋ ಮಹಾನಿ । ಆ. ೯-೫ । ಇತಿ ॥

ಅನುವಾದವು—ಪ್ರ ಘಾ ನ್ವಸ್ಯ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು ; ಇಂದ್ರನು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಪ್ರ ಘ ದಶ ಎಂದು ಮೊದಲಾಗಿ ಹೇಳಿರುವುದು. ದಶರಾತ್ರವೆಂಬ ಯಾಗದ ಆರನೆಯ ದಿವಸದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ ಮೂರು ಸೂಕ್ತಗಳನ್ನು ಪಠಿಸುವರು. ಅವುಗಳಲ್ಲಿ ಈ ಸೂಕ್ತವು ಎರಡನೆಯದು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ ಷಷ್ಠಸ್ಯ ಎಂಬ ಖಂಡದ—ಐಂದ್ರ ಯಾಹ್ಯುಪ ನಃ ಪ್ರ ಘಾ ನ್ವಸ್ಯಾಭೂರೇಕ ಇತಿ ನಿಷ್ಕೇವಲ್ಯಂ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೧) ತ್ರ್ಯೇಕಕಮಾಮಕವೆಂಬ ಯಾಗದಲ್ಲಿ ಪಠಿಸುವ ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿಯೂ ಸಹ ಈ ಸೂಕ್ತದ ಮೊದಲ ನೆಯ ಋಕ್ಕಾದ ಪ್ರ ಘಾ ನ್ವಸ್ಯ ಎಂಬ ಒಂದು ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ತ್ರ್ಯರ್ಯ ಮಾ ಮನುಷೋ ದೇವತಾ ಪ್ರ ಘಾ ನ್ವಸ್ಯ ಮಹತೋ ಮಹಾನಿ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೯-೫).

---

॥ ಓಂ ॥

## ಸೂಕ್ತ—೧೫

॥ ಮಂಡಲ—೨ ॥ ಅನುವಾಕ—೨ ॥ ಸೂಕ್ತ—೧೫ ॥

॥ ಅಷ್ಟಕ— ೨ ॥ ಅಧ್ಯಾಯ—೬ ॥ ವರ್ಗ—೧೫, ೧೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ–೧೦ ॥

ಋಷಿಃ—ಗೃತ್ಸಮದಃ ॥

ದೇವತಾ—ಇಂದ್ರಃ ।

ಛಂದಃ—ತ್ರಿಷ್ಟುಪ್ ।

---

ಸಂಹಿತಾಪಾಠಃ

ಪ್ರ ಘಾ ನ್ವಸ್ಯ ಮಹತೋ ಮಹಾನಿ ಸತ್ಯಾ ಸತ್ಯಸ್ಯ ಕರಣಾನಿ ವೋಚಂ ।

ತ್ರಿಕದ್ರುಕೇಷ್ವಪಿಬತ್ಸುತಸ್ಯಾಸ್ಯ ಮದೇ ಅಹಿಮಿಂದ್ರೋ ಜಘಾನ ॥ ೧ ॥

ಪದಪಾಠಃ

ಪ್ರ । ಘ । ನು । ಅಸ್ಯ । ಮಹತಃ । ಮಹಾನಿ । ಸತ್ಯಾ । ಸತ್ಯಸ್ಯ । ಕರಣಾನಿ । ವೋಚಂ ।

ತ್ರಿಽಕದ್ರುಕೇಷು । ಅಪಿಬತ್ । ಸುತಸ್ಯ । ಅಸ್ಯ । ಮದೇ । ಅಹಿಂ । ಇಂದ್ರಃ । ಜಘಾನ ॥

ಸಾಯಣಭಾಷ್ಯಂ

ಗೃತ್ಸಮದೋ ಬ್ರೂತೇ । ಮಹತೋ ಬಲವತಃ ಸತ್ಯಸ್ಯ ಸತ್ಯಸಂಕಲ್ಪಸ್ಯಾಸ್ಯೇಂದ್ರಸ್ಯ ಸತ್ಯಾನಿ ಯಥಾರ್ಥಾನಿ ಮಹಾನಿ ಮಹಾಂತಿ ಕರಣಾನ್ಯಸ್ಮಿನ್ ಸೂಕ್ತೇ ವಕ್ಷ್ಯಮಾಣಾನಿ ಕರ್ಮಾಣಿ ನು ಅದ್ಯ ಪ್ರ ವೋಚಂ । ಪ್ರಕರ್ಷೇಣ ಬ್ರವೀಮಿ ॥ ವಚ ಪರಿಭಾಷಣೇ । ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಲುಙಃ ಅಸ್ಯತಿವಕ್ತಿಖ್ಯಾತಿಭ್ಯೋಽಙ್ । ವಚ ಉಮ್ ॥ ಘೇತಿ ಪ್ರಸಿದ್ಧೌ । ಕಾನಿ ತಾನಿ ಉಚ್ಯಂತೇ । ತ್ರಿಕದ್ರುಕೇಷು ಜ್ಯೋತಿರ್ಗೌರಾಯುರಿತ್ಯೇವಂರೂಪೇಷ್ವಾಭಿಪ್ಲವಿಕೇಷ್ವಹಃಸು ಸುತಸ್ಯಾಭಿಷುತಂ ಸೋಮಮಿಂದ್ರೋಽಪಿಬತ್ । ತತಃ ಪೀತಸ್ಯಾಸ್ಯ ಸೋಮಸ್ಯ ಮದೇ ಹರ್ಷೇ ಸಂಜಾತೇ ಸತೀಂದ್ರೋಽಹಿಂ ವೃತ್ರಮಸುರಂ ಜಘಾನ । ಹತವಾನ್ ॥

ಪ್ರತಿಪದಾರ್ಥ

ಮಹತಃ—ಪ್ರಭಾವದಿಂದ ಕೂಡಿದವನೂ । ಸತ್ಯಸ್ಯ—ಸತ್ಯಾತ್ಮಕನೂ ಆದ । ಅಸ್ಯ—ಇಂದ್ರನ । ಸತ್ಯಾ—ಯಥಾರ್ಥವಾದುದೂ । ಮಹಾನಿ—ಮಹದ್ಗುಣಗಳಿಂದ ಕೂಡಿದುದೂ ಆದ । ಕರಣಾನಿ—ಕರ್ಮಗಳ

ವೈಶಿಷ್ಟ್ಯವನ್ನು । **ನು**—ಈಗ । **ಪ್ರ ವೋಚಂ**—ಅತಿಶಯವಾದ ರೀತಿಯಲ್ಲಿ ಪ್ರಕಟಿಸಿ ಹೇಳುತ್ತೇನೆ । **ಘ**—ಅದೇನೆಂದರೆ । **ತ್ರಿಕದ್ರುಕೇಷು**—ತ್ರಿಕದ್ರುಕದ ಅಹಸ್ಸುಗಳಲ್ಲಿ । **ಸುತಸ್ಯ**—ಹಿಂಡಲ್ಪಟ್ಟ ಸೋಮರಸವನ್ನು । **ಅಪಿಬತ್**—(ಇಂದ್ರನು) ಪಾನಮಾಡಿದನು । **ಅಸ್ಯ**—ಈ ಸೋಮರಸದ ಪಾನದಿಂದ । **ಮದೇ**—ಹರ್ಷವುಂಟಾದಾಗ । **ಇಂದ್ರಃ**—ಇಂದ್ರನು । **ಅಹಿಂ**—ವೃತ್ರಾಸುರನನ್ನು । **ಜಘಾನ**—ಕೊಂದನು.

### ಭಾವಾರ್ಥ

ಪ್ರಭಾವದಿಂದ ಕೂಡಿದವನೂ, ಸತ್ಯಾತ್ಮಕನೂ ಆದ ಇಂದ್ರನ ಯಥಾರ್ಥವಾದುದೂ, ಮಹದ್ಗುಣಗಳಿಂದ ಕೂಡಿದುದೂ ಆದ ಕರ್ಮಗಳ ವೈಶಿಷ್ಟ್ಯವನ್ನು ಈಗ ಅತಿಶಯವಾದ ರೀತಿಯಲ್ಲಿ ಪ್ರಕಟಿಸಿ ಹೇಳುತ್ತೇನೆ ಅದೇನೆಂದರೆ, ತ್ರಿಕದ್ರುಕದ ಅಹಸ್ಸುಗಳಲ್ಲಿ ಹಿಂಡಲ್ಪಟ್ಟ ಸೋಮರಸವನ್ನು ಇಂದ್ರನು ಪಾನಮಾಡಿದನು. ಈ ಸೋಮರಸದ ಪಾನದಿಂದ ಹರ್ಷವುಂಟಾದಾಗ ಇಂದ್ರನು ವೃತ್ರಾಸುರನನ್ನು ಕೊಂದನು.

### English Translation

Verily, I proclaim the great and authentic deeds of the mighty and true (Indra); of him who drank the effused juices at the Trikadruka rites, and in his exhilaration slew Ahi.

### ವಿಶೇಷವಿಷಯಗಳು

ಈ ಸೂಕ್ತದಲ್ಲಿ ಇಂದ್ರನು ಸೋಮಪಾನಮಾಡಿ ಅದರಿಂದುಂಟಾದ ಹರ್ಷದಿಂದ ನಾನಾಸಾಹಸಕೃತ್ಯಗಳನ್ನು ಮಾಡಿರುವುದು ವರ್ಣಿತವಾಗಿದೆ. ಪ್ರತಿಯೊಂದು ಋಕ್ಕಿನಲ್ಲಿಯೂ ಇಂದ್ರನ ಒಂದೆರಡು ಸಾಹಸಕಾರ್ಯಗಳನ್ನು ವರ್ಣಿಸಿ ಇಂತಹ ಕಾರ್ಯವನ್ನು ಇಂದ್ರನು ಸೋಮಪಾನಮಾಡಿದ ಹರ್ಷಭರದಲ್ಲಿ ಮಾಡಿದನೆಂದು **ಸೋಮಸ್ಯ ತಾ ಮದ ಇಂದ್ರಶ್ಚಕಾರ** ಎಂಬ ವಾಕ್ಯದಿಂದ ವಿವರಿಸಲಾಗಿದೆ. ಈ ವಾಕ್ಯವು ಪ್ರತಿ ಋಕ್ಕಿನ ಕೊನೆಯಲ್ಲಿ ಪಲ್ಲವಿಯಂತೆ ಪಠಿತವಾಗಿದೆ.

**ಘ**—ಘ ಎಂಬ ಶಬ್ದವು ಪ್ರಸಿದ್ಧಾರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾ ಪಾಠದಲ್ಲಿ ಅಕಾರವು ದೀರ್ಘವಾಗಿದೆ.

**ಪ್ರ ಘ ನು ಅಸ್ಯ ಮಹತಃ ಮಹಾನಿ ಸತ್ಯಾ ಸತ್ಯಸ್ಯ ಕರಣಾನಿ ವೋಚಂ-ಬಲವತಃ ಸತ್ಯಸಂಕಲ್ಪಸ್ಯೇಂದ್ರಸ್ಯ ಯಥಾರ್ಥಾನಿ ವಕ್ಷ್ಯಮಾಣಾನಿ ಮಹಾಂತಿ ಕರ್ಮಾಣಿ ಅದ್ಯ ಪ್ರಕರ್ಷೇಣ ಬ್ರವೀಮಿ** । ಮಹಾಬಲಪರಾಕ್ರಮಗಳಿಂದ ಸಹಿತನಾದ ಇಂದ್ರನ ಯಥಾರ್ಥವೂ ಮಹತ್ತ್ವಪೂರಿತವೂ ಆದ ನಾನಾಸಾಹಸಕಾರ್ಯಗಳನ್ನು ಈಗ ಚೆನ್ನಾಗಿ ವರ್ಣಿಸಿ ಹೇಳುವೆನು ಎಂದು ಋಷಿಯು ಈ ಸೂಕ್ತದ ಪ್ರಾರಂಭದ ಈ ವಾಕ್ಯದಲ್ಲಿ ಹೇಳಿ ಅದರಂತೆ ಪ್ರತಿ ಋಕ್ಕಿನಲ್ಲಿಯೂ ಇಂದ್ರನ ಕೆಲವು ಗುಣಗಳ ಅಥವಾ ಕರ್ಮಗಳ ವರ್ಣನೆಯನ್ನು ಮಾಡಿ ಇಂತಹ ಕರ್ಮವನ್ನು ಇಂದ್ರನು ಸೋಮಪಾನಮಾಡಿದ ಹರ್ಷದ ಭರದಲ್ಲಿ ಮಾಡಿದನೆಂದು ಋಷಿಯು ವರ್ಣಿಸಿದ್ದಾನೆ.

**ತ್ರಿಕದ್ರುಕೇಷು ಅಪಿಬತ್ ಸುತಸ್ಯ ಅಸ್ಯ ಮದೇ ಅಹಿಂ ಇಂದ್ರಃ ಜಘಾನ**—ಅಭಿಪ್ಲವವೆಂಬ ಯಾಗದ ಜ್ಯೋತಿಃ ಗೌಃ ಆಯುಃ ಎಂದು ಹೇಳಲ್ಪಡುವ ಮೊದಲ ಮೂರು ದಿವಸಗಳಲ್ಲಿ ಹಿಂಡಿ ಸಿದ್ಧಪಡಿಸಲ್ಪಟ್ಟ ಸೋಮರಸ

ವನ್ನು ಇಂದ್ರನು ಪಾನಮಾಡಿ ಅದರ ಮದದಿಂದ (ಹರ್ಷದಿಂದ) ವೃತ್ರಾಸುರನನ್ನು ಸಂಹಾರಮಾಡಿದನು ಎಂದು ಇಂದ್ರನ ಮುಖ್ಯಸಾಹಸಕಾರ್ಯವಾದ ವೃತ್ರಾಸುರನ ವಧೆಯು ಪ್ರಾರಂಭದಲ್ಲಿ ವರ್ಣಿತವಾಗಿದೆ. ಅಹಿ ಶಬ್ದದ ನಾನಾರ್ಥಗಳನ್ನು ನಾವು ಹಿಂದೆಯೇ ವಿಸ್ತಾರವಾಗಿ ವಿವರಿಸಿದ್ದೇವೆ.

---

ಸಂಹಿತಾಪಾಠ

ಅವಂಶೇ ದ್ಯಾಮಸ್ತಭಾಯದ್ಬೃಹಂತಮಾ ರೋದಸೀ ಅಪೃಣದಂತರಿಕ್ಷಂ ।
ಸ ಧಾರಯತ್ಪೃಥಿವೀಂ ಪಪ್ರಥಚ್ಚ ಸೋಮಸ್ಯ ತಾ ಮದ ಇಂದ್ರಶ್ಚಕಾರ ॥

ಪದಪಾಠಃ

ಅವಂಶೇ । ದ್ಯಾಂ । ಅಸ್ತಭಾಯತ್ । ಬೃಹಂತಂ । ಆ । ರೋದಸೀ ಇತಿ । ಅಪೃಣತ್ । ಅಂತರಿಕ್ಷಂ ।
ಸಃ । ಧಾರಯತ್ । ಪೃಥಿವೀಂ । ಪಪ್ರಥತ್ । ಚ । ಸೋಮಸ್ಯ । ತಾ । ಮದೇ । ಇಂದ್ರಃ । ಚಕಾರ ॥೨॥

ಸಾಯಣಭಾಷ್ಯಂ

ಅವಂಶ ಆಕಾಶೇ ದ್ಯಾಂ ದ್ಯೋತಮಾನಂ ಸೂರ್ಯಂ ದ್ಯುಲೋಕಂ ವಾಸ್ತಭಾಯತ್ । ಇಂದ್ರೋಽಸ್ತಭ್ನಾತ್ । ಅನವಲಂಬನಸ್ಯ ತಸ್ಯಾವಸ್ಥಾಪನಮಕರೋದಿತ್ಯರ್ಥಃ ॥ ಸ್ತಂಭು ಇತಿ ಸೌತ್ರೋ ಧಾತುಃ ಕ್ರ್ಯಾದಿಃ । ಲಙಿ ವ್ಯತ್ಯಯೋ ಬಹುಲಮಿತ್ಯಹಾವಪಿ ಶಾಯಜಾದೇಶಃ ॥ ಬೃಹಂತಂ ಮಹದಂತರಿಕ್ಷಂ ರೋದಸೀ ದ್ಯಾವಾಪೃಥಿವ್ಯೌ ಚಾಪೃಣತ್ । ಸ್ವತೇಜಸಾ ಪೂರಿತವಾನ್ । ಕಿಂಚ ಸ ಇಂದ್ರಃ ಪೃಥಿವೀಂ ವಿಸ್ತೀರ್ಣಾಂ ಭೂಮಿಂ ಧಾರಯತ್ । ಅಧಾರಯತ್ । ತಥಾ ಪಪ್ರಥಚ್ಚ । ಏನಾಂ ಭೂಮಿಮಪ್ರಥಯತ್ ॥ ಪ್ರಥ ಪ್ರಖ್ಯಾನೇ । ಣ್ಯಂತಸ್ಯ ಲುಙಿ ಚಙಿ ರೂಪಂ । ಚಙ್ಯನ್ಯತರಸ್ಯಾಮಿತಿ ಮಧ್ಯೋದಾತ್ತತ್ವಂ ॥ ಸೋಮಸ್ಯ ಮದೇ ಹರ್ಷೇ ಸಂಜಾತೇ ಸತಿ ತಾನೀಮಾನಿ ಕರ್ಮಾಣೀಂದ್ರಶ್ಚಕಾರ ॥

ಪ್ರತಿಪದಾರ್ಥ

ಅವಂಶೇ—ಆಧಾರರಹಿತವಾದ ಆಕಾಶದಲ್ಲಿ । ದ್ಯಾಂ—ದ್ಯುಲೋಕವನ್ನು ಅಥವಾ ಪ್ರಕಾಶಮಾನನಾದ ಸೂರ್ಯನನ್ನು । ಅಸ್ತಭಾಯತ್—ಸ್ಥಾಪಿಸಿದನು । ಬೃಹಂತಂ—ಮಹತ್ತಾದ । ಅಂತರಿಕ್ಷಂ—ಅಂತರಿಕ್ಷವನ್ನೂ । ರೋದಸೀ—ದ್ಯಾವಾಪೃಥಿವಿಗಳನ್ನೂ । ಆಪೃಣತ್—(ತನ್ನ ತೇಜಸ್ಸಿನಿಂದ) ತುಂಬಿದನು । ಸಃ—ಆ ಇಂದ್ರನು । ಪೃಥಿವೀಂ—ವಿಸ್ತೃತವಾದ ಪೃಥ್ವಿಯನ್ನು । ಧಾರಯತ್—ಧರಿಸಿದನು । ಪಪ್ರಥಚ್ಚ—ವಿಶ್ವದಲ್ಲಿ ಪ್ರಸಿದ್ಧವಾಗುವಂತೆ ಅದನ್ನು ಪ್ರಕಟಿಸಿದನು । ಸೋಮಸ್ಯ—ಸೋಮರಸದ ಪಾನದಿಂದ । ಮದೇ—ಹರ್ಷವುಂಟಾದಾಗ । ತಾ—ಈ ಮಹತ್ಕಾರ್ಯಗಳನ್ನು । ಇಂದ್ರಃ—ಇಂದ್ರನು । ಚಕಾರ—ಮಾಡಿದನು ।

### ಭಾವಾರ್ಥ

ಇಂದ್ರನು ಆಧಾರರಹಿತವಾದ ಆಕಾಶದಲ್ಲಿ ದ್ಯುಲೋಕವನ್ನೂ ಪ್ರಕಾಶಮಾನನಾದ ಸೂರ್ಯನನ್ನೂ ಸ್ಥಾಪಿಸಿದನು. ಮಹತ್ತಾದ ಅಂತರಿಕ್ಷವನ್ನೂ ದ್ಯಾವಾಪೃಥಿವಿಗಳನ್ನೂ ತನ್ನ ತೇಜಸ್ಸಿನಿಂದ ತುಂಬಿದನು. ಆ ಇಂದ್ರನು ವಿಸ್ತೃತವಾದ ಪೃಥ್ವಿಯನ್ನು ಧರಿಸಿ ಅದು ಪ್ರಖ್ಯಾತವಾಗುವಂತೆ ಮಾಡಿದನು. ಸೋಮರಸದ ಪಾನದಿಂದ ಹರ್ಷವುಂಟಾದಾಗ ಇಂದ್ರನು ಈ ಮಹತ್ಕಾರ್ಯಗಳನ್ನು ಮಾಡಿದನು.

### English Translation

Who fixed the heaven in unsupported (space), and filled the spacious firmament, and heaven, and earth, (with light): he it is who has upheld and has made the earth renowned: in the exhilaration of the Soma, Indra has done these (deeds).

### ವಿಶೇಷವಿಷಯಗಳು

**ಅವಂಶೇ—ಆಕಾಶೇ ।** ಆಕಾಶದಲ್ಲಿ ಅಥವಾ ಅಂತರಿಕ್ಷದಲ್ಲಿ ಎಂದು ಭಾಷ್ಯಕಾರರ ವಿವರಣೆಯು. ಅವಂಶ ಶಬ್ದವು ಋಗ್ವೇದದಲ್ಲಿ ಈ ಋಕ್ಕಿನಲ್ಲಿಯೂ ಋ. ಸಂ. ೭-೫೮-೧ ನೆಯ ಋಕ್ಕಿನಲ್ಲಿಯೂ ಪಠಿತವಾಗಿರುವುದು. ಇನ್ನೆಲ್ಲಿಯೂ ಇಲ್ಲ.

**ದ್ಯಾಂ—ದ್ಯೋತಮಾನಂ ಸೂರ್ಯಂ ದ್ಯುಲೋಕಂ ವಾ ।** ಪ್ರಕಾಶಮಾನನಾದ ಸೂರ್ಯನನ್ನು ಅಥವಾ ದ್ಯುಲೋಕವನ್ನು (ಸ್ವರ್ಗವನ್ನು) ಎಂದು ಎರಡುವಿಧ ಅರ್ಥಗಳಲ್ಲಿ ಯಾವುದನ್ನಾದರೂ ಹೇಳಬಹುದು. ಮತ್ತು **ದ್ಯುರಿತ್ಯಹ್ನೋ ನಾಮಧೇಯಂ** ಎಂದು ದ್ಯುಶಬ್ದಕ್ಕೆ ಅಹಸ್ಸೆಂದು ಹೆಸರು ಎಂದು ನಿರ್ವಚನವಿರುವುದು. (ನಿ. ೧-೭). ದ್ಯೌಃ ಎಂಬ ಶಬ್ದವು ಅಹರ್ನಾಮಗಳಲ್ಲಿ (ನಿ. ೨-೨೧) ಪಠಿತವಾಗಿದೆ. ಮತ್ತು **ದ್ಯೌರಾದಿತ್ಯೋ ಭವತಿ** ಎಂದೂ ನಿರ್ವಚನವಿರುವುದು. ಇಲ್ಲಿ ಈ ಶಬ್ದಕ್ಕೆ ಭಾಷ್ಯಕಾರರು ಹೇಳಿರುವಂತೆ ಸೂರ್ಯ ಅಥವಾ ಸ್ವರ್ಗ ಲೋಕವೆಂಬ ಅರ್ಥವನ್ನು ಹೇಳಬಹುದು.

ಈ ಋಕ್ಕಿನಲ್ಲಿ ಇಂದ್ರನು ಆಲಂಬನ ಅಥವಾ ಆಧಾರರಹಿತವಾದ ಆಕಾಶದಲ್ಲಿ ಸೂರ್ಯನನ್ನು ಸ್ಥಾಪಿಸಿರುವುದು, ಅಂತರಿಕ್ಷ ಮತ್ತು ದ್ಯಾವಾಪೃಥಿವಿಗಳಲ್ಲಿ ತನ್ನ ಅಪಾರವಾದ ತೇಜಸ್ಸನ್ನು ತುಂಬಿರುವುದು, ಭೂಮಿಯು ಚಲಿಸದಂತೆ ದೃಢವಾಗಿ ನಿಲ್ಲಿಸಿರುವುದು ಎಂಬ ಸಾಹಸಕೃತ್ಯಗಳನ್ನು ಮಾಡಿರುವನು ಎಂದೂ ಈ ಕಾರ್ಯಗಳನ್ನೆಲ್ಲಾ ಸೋಮಪಾನಜನಿತ ಹರ್ಷದಿಂದಲೇ ಮಾಡಿರುವನೆಂದೂ ಹೇಳಲಾಗಿದೆ.

ಸಂಹಿತಾಪಾಠಃ

ಸದ್ಮೇವ ಪ್ರಾಚೋ ವಿ ಮಿಮಾಯ ಮಾನೈರ್ವಜ್ರೇಣ ಖಾನ್ಯತೃಣನ್ನದೀ-
ನಾಂ ।
ವೃಥಾಸೃಜತ್ಪಥಿಭಿರ್ದೀರ್ಘಯಾಥೈಃ ಸೋಮಸ್ಯ ತಾ ಮದ ಇಂದ್ರಶ್ಚಕಾರ ॥

ಪದಪಾಠಃ

ಸದ್ಮಽಇವ । ಪ್ರಾಚಃ । ವಿ । ಮಿಮಾಯ । ಮಾನೈಃ । ವಜ್ರೇಣ । ಖಾನಿ । ಅತೃಣತ್ । ನದೀನಾಂ ।
ವೃಥಾ । ಅಸೃಜತ್ । ಪಥಿಽಭಿಃ । ದೀರ್ಘಽಯಾಥೈಃ । ಸೋಮಸ್ಯ । ತಾ । ಮದೇ । ಇಂದ್ರಃ । ಚಕಾರ ॥
॥ ೩ ॥

ಸಾಯಣಭಾಷ್ಯಂ

ಸದ್ಮೇವ ಯಥಾ ಯಜ್ಞಗೃಹಾನ್ಮಾನೈಃ ಷಟ್ತ್ರಿಂಶತ್ಪ್ರಕ್ರಮಪ್ರಾಚೀತ್ಯೇವಂರೂಪೈಃ ಪರಿಮಾಣೈ ಪ್ರಾಕ್ಪ್ರವಣಾನ್ ಕುರ್ವಂತಿ ತದ್ವತ್ ಸಿಂಧೂನ್ ಲೋಕಾನ್ವಾನ್ಪಜೂನ್ವಾ ಮಾನೈಃ ಪರಿಮಾಣೈಃ ಪ್ರಾಚಃ ಪ್ರಾಙ್ಮುಖಾನ್ವಿಮಿಮಾಯ । ಇಂದ್ರೋ ವಿಶೇಷೇಣ ನಿರ್ಮಿತವಾನ್ । ತಥಾ ನದೀನಾಂ ಖಾನಿ ನಿರ್ಗಮನ-ದ್ವಾರಾಣಿ ವಜ್ರೇಣ ಚಾತೃಣತ್ । ಅಖನತ್ । ತೃದಿ ಹಿಂಸಾನಾದರಯೋಃ । ರುಧಾದಿ । ಲಙ್ ॥ ತಥಾ ಚ ಮಂತ್ರಃ । ಇಂದ್ರೋ ಅಸ್ಮಾ ಅರದದ್ವಜ್ರಬಾಹುಃ । ೩-೩೩-೬ । ಇತಿ । ತಥಾ ದೀರ್ಘಯಾಥೈರ್ಬಹು-ಕಾಲಂ ಗಂತವ್ಯೈಃ ಪಥಿಭಿರ್ಮಾರ್ಗೈರ್ವೃಥಾಸೃಜತ್। ಅನಾಯಾಸೇನ ತಾ ನದೀಃ ಸೃಷ್ಟವಾನ್। ಸೋಮ-ಸ್ಯೇತಿ ಸಿದ್ಧಾರ್ಥ ಇತಿ ॥

ಪ್ರತಿಪದಾರ್ಥ

ಸದ್ಮ ಇವ—ಯಜ್ಞಗೃಹವನ್ನು । ಮಾನೈಃ—ಅಳೆಯುವ ಸಾಧನಗಳಿಂದ ಅಳೆದು ನಿರ್ಮಿಸುವಂತೆ। ಪ್ರಾಚಃ—ಪ್ರಾಙ್ಮುಖವಾದ ದಿಕ್ಕುಗಳನ್ನು । ವಿ ಮಿಮಾಯ—ವಿಶೇಷರೀತಿಯಲ್ಲಿ ಅಳೆದು ನಿರ್ಮಿಸಿದನು । ನದೀನಾಂ—ನದಿಗಳಿಗೆ । ಖಾನಿ—ಪ್ರವಹಿಸುವ ದ್ವಾರಗಳನ್ನು । ವಜ್ರೇಣ—ವಜ್ರಾಯುಧದಿಂದ । ಅತೃಣತ್—ತೋಡಿದನು (ಮತ್ತು) । ದೀರ್ಘಯಾಥೈಃ—ಬಹುಕಾಲ ಪ್ರವಹಿಸತಕ್ಕ । ಪಥಿಭಿಃ—ಮಾರ್ಗಗಳಿಂದ । ವೃಥಾ—ಅನಾಯಾಸವಾಗಿ (ತಡೆಯಿಲ್ಲದೆ) । ಅಸೃಜತ್—ಪ್ರವಹಿಸುವಂತೆ ಸೃಷ್ಟಿಸಿದನು । ಸೋಮಸ್ಯ—ಸೋಮರಸದ ಪಾನದಿಂದ । ಮದೇ—ಹರ್ಷವುಂಟಾದಾಗ । ತಾ—ಈ ಮಹತ್ಕಾರ್ಯಗಳನ್ನು । ಇಂದ್ರಃ—ಇಂದ್ರನು । ಚಕಾರ—ಮಾಡಿದನು ।

ಭಾವಾರ್ಥ

ಅಳೆಯುವ ಸಾಧನಗಳಿಂದ ಯಜ್ಞಗೃಹವನ್ನು ಅಳೆದು ನಿರ್ಮಿಸುವಂತೆ ಇಂದ್ರನು ಪ್ರಾಙ್ಮುಖವಾದ ದಿಕ್ಕುಗಳನ್ನು ವಿಶೇಷರೀತಿಯಲ್ಲಿ ಅಳೆದು ನಿರ್ಮಿಸಿದನು. ನದಿಗಳಿಗೆ ಪ್ರವಹಿಸುವ ದ್ವಾರಗಳನ್ನು ವಿಶೇಷರೀತಿಯಲ್ಲಿ

ತೋಡಿದನು ಮತ್ತು ಬಹುಕಾಲ ಪ್ರವಹಿಸುವ ಮಾರ್ಗಳಿಂದ ತಡೆಯಿಲ್ಲದೆ ಪ್ರವಹಿಸುವಂತೆ ಅವುಗಳನ್ನು ಸೃಷ್ಟಿಸಿದನು. ಸೋಮರಸದ ಪಾನದಿಂದ ಹರ್ಷವುಂಟಾದಾಗ ಇಂದ್ರನು ಈ ಮಹತ್ಕಾರ್ಯಗಳನ್ನು ಮಾಡಿದನು.

## English Translation

(He it is) who has measured the eastern (quarters) with measures like a chamber; who has dug with the thunderbolt the beds of the rivers, and has easily sent them forth by long-continued ' paths: in the exhilaration of the Soma, Indra has done these (deeds).

## ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಇಂದ್ರನ ಮೂರು ಸಾಹಸಕಾರ್ಯಗಳನ್ನು ವರ್ಣಿಸಿದೆ. **ಸದ್ಮೇವ ಪ್ರಾಚೋ ವಿ ಮಿಮಾಯ ಮಾನೈಃ**—ಯಜ್ಞಗೃಹಗಳನ್ನು ಯಾವ ಯಾವ ಅಳತೆಗಳಿಂದ ಕಟ್ಟಬೇಕೋ ಅದರಂತೆ ಪೂರ್ವಾದಿ ದಿಕ್ಕುಗಳನ್ನು ಇಂದ್ರನು ನಿರ್ಮಿಸಿದನು. ಇಲ್ಲಿ ಸದ್ಮ ಎಂದರೆ ಯಜ್ಞಗೃಹವೆಂದಾದರೂ ಆಗಬಹುದು ಅಥವಾ ವಾಸ ಮಾಡುವ ಸಾಮಾನ್ಯಗೃಹವಾದರೂ ಆಗಬಹುದು. ಆದರೆ ಸಾಮಾನ್ಯಗೃಹಕ್ಕೆ ಇಷ್ಟೇ ಅಳತೆ ಇರಬೇಕೆಂಬ ನಿಯಮ ವಿಲ್ಲ. ಯಜ್ಞಗೃಹವನ್ನು ನಿರ್ಮಾಣಮಾಡುವಾಗ ಮಾತ್ರ ಅದಕ್ಕೆ ಸಂಬಂಧಪಟ್ಟ ವಿಧಿನಿಯಮಗಳನ್ನನುಸರಿಸಿಯೇ ಕಟ್ಟಬೇಕು. ಆದ್ದರಿಂದ ಈ ವಾಕ್ಯದಲ್ಲಿರುವ **ಮಾನೈಃ**—ಅಳತೆಗಳಿಂದ ಎಂಬ ಶಬ್ದಪ್ರಯೋಗದಿಂದ ಸದ್ಮಶಬ್ದಕ್ಕೆ ಯಜ್ಞಗೃಹವೆಂಬ ಅರ್ಥವೇ ಬೋಧ್ಯವಾಗುವುದು.

**ವಜ್ರೇಣ ಖಾನಿ ಅತೃಣತ್ ನದೀನಾಂ**—ಯಾವ ಕೆಲಸಮಾಡಬೇಕಾದರೂ ಇಂದ್ರನಿಗೆ ವಜ್ರಾಯುಧವೇ ಮುಖ್ಯವಾದ ಸಾಧನವಾಗಿರುವುದರಿಂದ ಇಲ್ಲಿ ಇಂದ್ರನು ವಜ್ರಾಯುಧದಿಂದ ನದಿಗಳು ಪ್ರವಹಿಸುವ ಮಾರ್ಗ ಅಥವಾ ನದೀಪಾತ್ರಗಳನ್ನು ತೋಡಿದನು ಎಂದು ವರ್ಣಿಸಿದೆ. ಈ ವಿಷಯದಲ್ಲಿ ಇದೇ ಅರ್ಥವನ್ನು ಸೂಚಿಸುವ—

**ಇಂದ್ರೋ ಅಸ್ಮಾँ ಅರದದ್ವಜ್ರಬಾಹುರಪಾಹನ್ವೃತ್ರಂ ಪರಿಧಿಂ ನದೀನಾಂ ।**

(ಋ. ಸಂ. ೩-೩೩-೬)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು.

**ವೃಥಾ ಅಸೃಜತ್ ಪಥಿಭಿಃ ದೀರ್ಘಯಾಥೈಃ**—ಮೇಲೆ ಹೇಳಿದ ನದೀ ಪಾತ್ರಗಳನ್ನು ಇಂದ್ರನು ಅನಾಯಾಸವಾಗಿ ಎಂದರೆ ಯಾವ ವಿಧವಾದ ಶ್ರಮವೂ ಇಲ್ಲದೆ ಬಹಳಕಾಲ ಅಥವಾ ಬಹಳದೂರವಾಗಿರುವ ಮಾರ್ಗಗಳಿಂದ ಹರಿಯುವ ನದಿಗಳನ್ನು ಸೃಷ್ಟಿಸಿದನು. ಇಲ್ಲಿ ವೃಥಾ ಎಂಬ ಶಬ್ದಕ್ಕೆ ಅನಾಯಾಸವಾಗಿ ಎಂದರ್ಥವು. ನಾವು ಯಾವುದಾದರೂ ಒಂದು ಕೆಲಸವನ್ನು ಮಾಡಬೇಕಾದರೆ ಎಷ್ಟೋ ಶ್ರಮಪಡಬೇಕಾಗುವುದು. ಆದರೆ ಇಂದ್ರನು ಅನೇಕ ಯೋಜನ ವಿಸ್ತೀರ್ಣವಾದ ಸಮಸ್ತನದಿಗಳ ಪಾತ್ರವನ್ನು ಏನೊಂದೂ ಶ್ರಮವಿಲ್ಲದೆ ಸೃಷ್ಟಿಮಾಡಿದನು ಎಂದಭಿಪ್ರಾಯವು. **ದೀರ್ಘಯಾಥೈಃ**—ಎಂಬ ಶಬ್ದಕ್ಕೆ ಬಹಳಕಾಲದವರೆಗೂ ಹರಿಯುವ ಅಥವಾ ಬಹಳ ದೂರದವರೆಗೂ

ಹರಿಯುವ ಎಂದು ಎರಡುವಿಧ ಅರ್ಥಗಳನ್ನು ಹೇಳಬಹುದು. ಪಥಿಭಿಃ—ಎಂದರೆ ಮಾರ್ಗಗಳಿಂದ ಅಥವಾ ನದೀ ಪಾತ್ರಗಳಿಂದ ಎಂದಭಿಪ್ರಾಯವು. ಈ ವಾಕ್ಯದಲ್ಲಿ ನದೀಃ—ನದಿಗಳನ್ನು ಎಂಬ ಶಬ್ದವನ್ನು ಅಧ್ಯಾಹಾರಮಾಡಿ ಕೊಳ್ಳಬೇಕು.

---

ಸಂಹಿತಾಪಾಠಃ

ಸ ಪ್ರವೋಳ್ಹೄನ್ಪರಿಗತ್ಯಾ ದಭೀತೇರ್ವಿಶ್ವಮಧಾಗಾಯುಧಮಿದ್ಧೇ ಅಗ್ನೌ।

ಸಂ ಗೋಭಿರಶ್ವೈರಸೃಜದ್ರಥೇಭಿಃ ಸೋಮಸ್ಯ ತಾ ಮದ ಇಂದ್ರಶ್ಚಕಾರ ॥

ಪದಪಾಠಃ

ಸಃ। ಪ್ರವೋಳ್ಹೄನ್। ಪರಿಗತ್ಯ। ದಭೀತೇಃ। ವಿಶ್ವಂ। ಅಧಾಕ್। ಆಯುಧಂ। ಇದ್ಧೇ। ಅಗ್ನೌ।

ಸಂ। ಗೋಭಿಃ। ಅಶ್ವೈಃ। ಅಸೃಜತ್। ರಥೇಭಿಃ। ಸೋಮಸ್ಯ। ತಾ। ಮದೇ। ಇಂದ್ರಃ। ಚಕಾರ ॥೪॥

ಸಾಯಣಭಾಷ್ಯಂ

ಪ್ರಾಕ್ಕಿಲ ಚುಮುರಿಧುನಿಪ್ರಭೃತಯೋಽಸುರಾ ದಭೀತೇಃ ಪುರಂ ಸಂರುಧ್ಯ ಪರಿಗೃಹ್ಯ ತೆಸ್ಮಾತ್ಪು-ರಾನ್ನಿರಗುರಿತಿ ಕಥಾ। ಸ ಇಂದ್ರೋ ದಭೀತೇಃ। ದಭೀತಿರ್ನಾಮ ಕಶ್ಚಿದ್ರಾಜರ್ಷಿಃ। ತಸ್ಯ ಪ್ರವೋಳ್ಹೄನ್ ಪ್ರವೋಢ್ರೄನ್ ॥ ಸಹಿವಹೋರೋದವರ್ಣಸ್ಯೇತ್ಯೋತ್ವಂ ॥ ಪ್ರಕರ್ಷೇಣ ತಂ ದಭೀತಿಂ ವಹತಸ್ತಾನಸು-ರಾನ್ ಮಧ್ಯೇ ಮಾರ್ಗಂ ಪರಿಗತ್ಯ ತೇಷಾಂ ವಿಶ್ವಂ ಸರ್ವಮಾಯುಧಮಿದ್ಧೇಽಗ್ನೌ ದೀಪ್ಯಮಾನೇ ವಹ್ನಾವಧಾಕ್। ಅಧಾಕ್ಷೀತ್ ॥ ದಹೇರ್ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ ॥ ಪಶ್ಚಾತ್ತಂ ದಭೀತಿಂ ಗೋಭಿರಶ್ವೈ ರಥೇಭೀ ರಥೈಶ್ಚ ಸಮಸೃಜತ್। ಸಂಯೋಜಿತವಾನ್। ಸೋಮಸ್ಯಾದಿ ಸಿದ್ಧ-ಮಿತಿ ॥

ಪ್ರತಿಪದಾರ್ಥ

ಸಃ—ಇಂದ್ರನು। ದಭೀತೇಃ—ದಭೀತಿಯೆಂಬ ರಾಜರ್ಷಿಯನ್ನು। ಪ್ರವೋಳ್ಹೄನ್—ಹೊತ್ತು ಕೊಂಡು ಹೋಗುತಿದ್ದ ಅಸುರರನ್ನು। ಪರಿಗತ್ಯ—ಎದುರಿಸಿ। ವಿಶ್ವಂ—ಅವರ ಸಮಸ್ತವಾದ। ಆಯುಧಂ—ಆಯುಧಗಳನ್ನೂ। ಇದ್ಧೇ—ಪ್ರಜ್ವಲಿತವಾದ। ಅಗ್ನೌ—ಅಗ್ನಿಯಲ್ಲಿ। ಅಧಾಕ್—ದಹಿಸಿದನು। ಗೋಭಿಃ—(ಆ ಅಸುರರ) ಗೋವುಗಳಿಂದಲೂ। ಅಶ್ವೈಃ—ಅಶ್ವಗಳಿಂದಲೂ। ರಥೇಭಿಃ—ರಥಗಳಿಂದಲೂ। ಸಮಸೃಜತ್—ದಭೀತಿಯನ್ನು ಸಂಯೋಜಿಸಿದನು। ಸೋಮಸ್ಯ—ಸೋಮರಸದ ಪಾನದಿಂದ। ಮದೇ—ಹರ್ಷವುಂಟಾದಾಗ। ತಾ—ಈ ಮಹತ್ಕಾರ್ಯಗಳನ್ನು। ಇಂದ್ರಃ—ಇಂದ್ರನು। ಚಕಾರ—ಮಾಡಿದನು।

ಭಾವಾರ್ಥ

ಇಂದ್ರನು ದಭೀತಿಯೆಂಬ ರಾಜರ್ಷಿಯನ್ನು ಹೊತ್ತುಕೊಂಡು ಹೋಗುತ್ತಿದ್ದ ಅಸುರರನ್ನು ಎದುರಿಸಿ ಅವರ ಸಮಸ್ತವಾದ ಆಯುಧಗಳನ್ನೂ ಪ್ರಜ್ವಲಿತವಾದ ಅಗ್ನಿಯಲ್ಲಿ ದಹಿಸಿದನು. ಆ ಅಸುರರ ಗೋವುಗಳನ್ನೂ, ಅಶ್ವಗಳನ್ನೂ ರಥಗಳನ್ನೂ ದಭೀತಿಗೆ ಸೇರಿಸಿಕೊಟ್ಟನು. ಸೋಮರಸದ ಪಾನದಿಂದ ಹರ್ಷವುಂಟಾದಾಗ ಇಂದ್ರನು ಈ ಮಹತ್ಕಾರ್ಯಗಳನ್ನು ನೆರವೇರಿಸಿದನು.

English Translation

Encountering the (Asuras), carrying off Dabhiti, he burnt all their weapons in a kindled fire, and enriched (the prince) with their cattle, their horses, and their chariots : in the exhilaration of the Soma, Indraa has done these (deeds).

ವಿಶೇಷವಿಷಯಗಳು.

ಈ ಋಕ್ಕಿನಲ್ಲಿ ಇಂದ್ರನು ದಭೀತಿಯೆಂಬ ರಾಜರ್ಷಿಯನ್ನು ರಕ್ಷಿಸಿದ ವಿಷಯವು ವರ್ಣಿತವಾಗಿದೆ. ಋ. ಸಂ. ೧-೧೧೨-೨೩ ನೆಯ ಋಕ್ಕಿನಲ್ಲಿ ಅಶ್ವಿನೀದೇವತೆಗಳು ದಭೀತಿಯನ್ನು ರಕ್ಷಿಸಿದರೆಂಬ ವಿಷಯವು ಉಕ್ತವಾಗಿದೆ. ಆದರೆ ಇತರ ಕಡೆಗಳಲ್ಲೆಲ್ಲಾ ದಭೀತಿಯನ್ನು ಇಂದ್ರನೇ ರಕ್ಷಿಸಿದನೆಂದಿರುವುದರಿಂದ ಈ ಸಾಹಸಕಾರ್ಯವು ಇಂದ್ರನಿಗೆ ಸಲ್ಲತಕ್ಕದ್ದು ನ್ಯಾಯವಾಗಿದೆ. ಇದೇ ಭಾಗದ 707 ನೇ ಪುಟದಲ್ಲಿ ದಭೀತಿಯ ವಿಷಯವನ್ನು ಪ್ರಸ್ತಾಪಮಾಡಿದ್ದೇವೆ.

ಭಾಷ್ಯಕಾರರು—ಪೂರ್ವದಲ್ಲಿ ಚುಮುರಿ, ಧುನಿ ಎಂಬ ಇಬ್ಬರು ಅಸುರರು ದಭೀತಿಯೆಂಬ ರಾಜರ್ಷಿಯ ನಗರವನ್ನು ಮುತ್ತಿ ಅವನನ್ನು ಅಪಹರಿಸಿಕೊಂಡು ಓಡಿಹೋಗುತ್ತಿರುವಾಗ ಇಂದ್ರನು ಆ ಅಸುರರನ್ನು ಕೊಂದು ದಭೀತಿಯನ್ನು ರಕ್ಷಿಸಿದನೆಂಬ ಇತಿಹಾಸವಿದೆ. ಅದನ್ನೇ ಈ ಋಕ್ಕಿನಲ್ಲಿ ವರ್ಣಿಸಲಾಗಿದೆ ಎಂದು ಹೇಳಿರುವರು.

ಇಂದ್ರೋ ಧುನಿಂ ಚ ಚುಮುರಿಂ ಚ ದಂಭಯಞ್ಛ್ರದ್ಧಾಮನಸ್ಯಾ ಶೃಣುತೇ ದಭೀತಯೇ ।
(ಋ. ಸಂ. ೧೦-೧೧೩-೯)

ಸ್ವಪ್ನೇನಾಭ್ಯುಪ್ಯಾ ಚುಮುರಿಂ ಧುನಿಂ ಚ ಜಘಂಥ ದಸ್ಯುಂ ಪ್ರ ದಭೀತಿಮಾವಃ ।
(ಋ ಸಂ. ೨-೧೫-೯)

ತ್ವಂ ನಿ ದಸ್ಯುಂ ಚುಮುರಿಂ ಧುನಿಂ ಚಾಸ್ವಾಪಯೋ ದಭೀತಯೇ ಸುಹಂತು ।
(ಋ ಸಂ. ೭-೧೯-೪)

ಎಂಬ ಋಕ್ಕುಗಳಲ್ಲಿ ಇಂದ್ರನು ಚುಮುರಿ, ಧುನಿ ಎಂಬ ಅಸುರರನ್ನು ನಿದ್ರಾಪರವಶರನ್ನಾಗಿ ಎಂದರೆ ಮೂರ್ಛೆಹೋಗುವಂತೆಮಾಡಿ ದಭೀತಿಯನ್ನು ಬಿಡಿಸಿ ಕಾಪಾಡಿದನೆಂದು ಹೇಳಿದೆ.

ತವ ಹ ತ್ಯದಿಂದ್ರ ವಿಶ್ವಮಾಜೌ ಸಸ್ತೋ ಧುನೀಚುಮುರೀ ಯಾ ಹ ಸಿಷ್ವಪ್ ।
ದೀದಯದಿತ್ತುಭ್ಯಂ ಸೋಮೇಭಿಃ ಸುನ್ವನ್ ದಭೀತಿರಿಧ್ಮಭೃತಿಃ ಪಕ್ಥ್ಯರ್ಕೈಃ ॥
(ಋ. ಸಂ. ೬-೨೦-೧೩)

ತ್ವಂ ಶ್ರದ್ಧಾಭಿರ್ಮಂದಸಾನಃ ಸೋಮೈರ್ದಭೀತಯೇ ಚುಮುರಿಮಿಂದ್ರ ಸಿಷ್ವಪ್ ।
(ಋ. ಸಂ. ೬-೨೬-೬)

ಎಂಬ ಋಕ್ಕುಗಳಲ್ಲಿ ಇಂದ್ರನು—ದಭೀತಿಯು ಸಿದ್ಧಪಡಿಸಿದ ಸೋಮರಸವನ್ನು ಪಾನಮಾಡಿ ಅದರಿಂದ ಹರ್ಷಗೊಂಡು ಚಮುರಿ, ಧುನಿ ಎಂಬ ಅಸುರರನ್ನು ಯುದ್ಧದಲ್ಲಿ ನಿದ್ರಾಪರವಶರನ್ನಾಗಿ ಮಾಡಿ ಅವರಿಂದ ಹಿಂಸಿಸಲ್ಪಟ್ಟ ದಭೀತಿ ಎಂಬ ರಾಜರ್ಷಿಯನ್ನು ರಕ್ಷಿಸಿದನೆಂದು ಹೇಳಿದೆ.

ಅಸ್ವಾಪಯದ್ದಭೀತಯೇ ಸಹಸ್ರಾ ತ್ರಿಂಶತಂ ಹಥೈಃ । ದಾಸಾನಾಮಿಂದ್ರೋ ಮಾಯಯಾ ।
(ಋ. ಸಂ. ೪-೩೦-೨೧)

ಎಂಬ ಋಕ್ಕಿನಲ್ಲಿ ಇಂದ್ರನು ದಭೀತಿಯನ್ನು ರಕ್ಷಿಸುವುದಕ್ಕಾಗಿ ತನ್ನ ಮಾಯಾಸಾಮರ್ಥ್ಯದಿಂದ ಇವನಿಗೆ ಶತ್ರುಗಳಾದ ೩೦೦೦೦ ಮೂವತ್ತುಸಾವಿರ ದಸ್ಯುಜನರನ್ನು ನಿದ್ರಾಪರವಶರನ್ನಾಗಿ ಮಾಡಿದನು ಎಂದಿದೆ. ಈ ಮೂವತ್ತುಸಾವಿರ ದಸ್ಯುಜನರು ಚಮುರಿ ಮತ್ತು ಧುನಿ ಎಂಬ ಅಸುರರ ಸೈನಿಕರಿರಬಹುದು. ಮತ್ತು ಅವರು ದಭೀತಿಯೊಡನೆ ಮಾಡಿದ ಯುದ್ಧದಲ್ಲಿ ಇಂದ್ರನು ಶತ್ರುಸೈನಿಕರನ್ನು ಮೋಹಗೊಳಿಸಿ ದಭೀತಿಯನ್ನು ರಕ್ಷಿಸಿದನೆಂಬ ಮುಖ್ಯಾಭಿಪ್ರಾಯವು. ಇಂದ್ರನು ದಭೀತಿಯನ್ನು ರಕ್ಷಿಸಿದನೆಂದು ಹೇಳುವ ಸಂದರ್ಭದಲ್ಲೆಲ್ಲಾ ಶತ್ರುಸೈನಿಕರನ್ನು ಅಥವಾ ಇವನ ಮುಖ್ಯ ಶತ್ರುಗಳಾದ ಧುನಿ, ಚುಮುರಿ ಎಂಬ ಅಸುರರನ್ನು ತನ್ನ ಮಾಯೆಯಿಂದ ನಿದ್ರಾಪರವಶರನ್ನಾಗಿ ಮಾಡಿದನೆಂದು ಹೇಳಿರುವುದು ಈ ವಿಷಯದಲ್ಲಿ ಒಂದು ವೈಶಿಷ್ಟ್ಯವೆಂದು ಹೇಳಬೇಕು.

ಮತ್ತು ದಭೀತಿಯ ಸಂರಕ್ಷಣೆಯ ವಿಷಯವಾಗಿ ಈ ಸಂಬಂಧವಾದ ಇತರ ವರ್ಣನೆಗಳಲ್ಲಿಲ್ಲದ ಒಂದೆರಡು ವಿಷಯಗಳು ಈ ಋಕ್ಕಿನಲ್ಲಿ ಉಕ್ತವಾಗಿದೆ. ದಭೀತಿಯನ್ನು (ಅವನ ಪಟ್ಟಣದಿಂದ) ಶತ್ರುಗಳು ಅಪಹರಿಸಿಕೊಂಡು ಹೋದ ವಿಷಯವೂ, ಅವರ ಆಯುಧಗಳನ್ನು ಉರಿಯುತ್ತಿರುವ ಅಗ್ನಿಯಲ್ಲಿ ಹಾಕಿ ನಾಶಮಾಡಿದ ವಿಷಯವೂ, ಶತ್ರುಗಳಿಗೆ ಸೇರಿದ ಗೋವುಗಳು, ಅಶ್ವಗಳು, ರಥಗಳು ಮೊದಲಾದವುಗಳನ್ನು ಇಂದ್ರನು ದಭೀತಿಯ ವಶವಾಗುವಂತೆ ಮಾಡಿದನೆಂಬ ವಿಷಯವೂ ಸಹ ಈ ಋಕ್ಕಿನಲ್ಲಿ ಮಾತ್ರವಿರುವುದು. ಇತರ ಋಕ್ಕುಗಳಲ್ಲಿ ವರ್ಣಿಸಿರುವ ದಭೀತಿ ಸಂರಕ್ಷಣೆಯಲ್ಲಿ ಇದರ ವರ್ಣನೆ ಇಲ್ಲ. ಆದರೆ ದಭೀತಿಯ ಶತ್ರುಗಳನ್ನು ನಿದ್ರಾಪರವಶರನ್ನಾಗಿ ಮಾಡಿದ ವಿಷಯವು ಹೇಳಿರುವುದು. ಪ್ರಾಯಶಃ ನಿದ್ರಾಪರವಶರನ್ನಾಗಿ ಮಾಡಿದನೆಂದು ಹೇಳಿರುವುದು ಮೋಹಪರವಶರನ್ನಾಗಿ ಅಥವಾ ಮೂರ್ಛೆಗೊಂಡವರನ್ನಾಗಿ ಮಾಡಿದನೆಂಬ ಅರ್ಥದಲ್ಲಿ ಪ್ರಯುಕ್ತವಾಗಿರಬಹುದು.

---

ಸಂಹಿತಾಪಾಠಃ

ಸ ಈಂ ಮಹೀಂ ಧುನಿಮೇತೋರರಮ್ಣಾತ್ಸೋ ಅಸ್ನಾತೄನಪಾರಯತ್ಸ್ವಸ್ತಿ।

ತ ಉತ್ಸ್ನಾಯ ರಯಿಮಭಿ ಪ್ರ ತಸ್ಥುಃ ಸೋಮಸ್ಯ ತಾ ಮದ ಇಂದ್ರಶ್ಚಕಾರ ॥ ೫ ॥

ಪದಪಾಠಃ

ಸಃ । ಈಂ । ಮಹೀಂ । ಧುನಿಂ । ಏತೋಃ । ಅರಮ್ಣಾತ್ । ಸಃ । ಅಸ್ನಾತೄನ್ । ಅಪಾರಯತ್ । ಸ್ವಸ್ತಿ ।
ತೇ । ಉತ್ಽಸ್ನಾಯ । ರಯಿಂ । ಅಭಿ । ಪ್ರ । ತಸ್ಥುಃ । ಸೋಮಸ್ಯ । ತಾ । ಮದೇ । ಇಂದ್ರಃ । ಚಕಾರ ॥

ಸಾಯಣಭಾಷ್ಯಂ

ಅತಿಮೂರ್ತಿನಾಮ್ನ್ಯೇಕಾಹೇ ಮರುತ್ವತೀಯೇ ಸೂಕ್ತಮುಖೀಯಾ । ಅತಿಮೂರ್ತಿನೇತಿ ಖಂಡೇ ಸೂತ್ರಿತಂ । ಸ ಈಂ ಮಹೀಂ ಧುನಿಮೇತೋರರಮ್ಣಾತ್ । ಆ. ೯-೮ । ಇತಿ ॥

ಸ ಇಂದ್ರ ಈಮೇನಾಂ ಮಹೀಂ ಮಹತೀಂ ಧುನಿಂ । ಧುನೋತಿ ಸ್ತೋತೄಣಾಂ ಪಾಪಾನೀತಿ ಧುನಿಃ ಪರುಷ್ಣೀ ನದೀ । ತಾಮೇತೋಃ ॥ ಈಶ್ವರಪದಾಸಂನಿಧಾನೇಽಪಿ ತೋಸುನ್ಪ್ರತ್ಯಯಃ । ಪಾ. ೩-೪-೧೩ ॥ ಋಷೀಣಾಂ ಗಮನಾರ್ಥಮರಮ್ಣಾತ್ ಉಪಾಶಮಯತ್ । ಮಹಾಜಲಾಂ ನದೀಮಲ್ಪೋದಕಾಮಕರೋದಿತ್ಯರ್ಥಃ। ತತಃ ಸ ಇಂದ್ರೋಽಸ್ನಾತೄನ್ ಸ್ನಾತುಮಶಕ್ತಾನ್। ತರಣಾಸಮರ್ಥಾನೃಷೀನ್ ಸ್ವಸ್ತಿ ಕ್ಷೇಮೇಣಾಪಾರಯತ್ । ತೇ ಮಹರ್ಷಯ ಉತ್ಸ್ನಾಯ ತಾಂ ನದೀಮುತ್ತೀರ್ಯ ಯಂ ರಯಿಮಪೇಕ್ಷ್ಯ ಗಚ್ಛಂತಿ ತಂ ರಯಿಮಭಿಲಕ್ಷ್ಯ ಪ್ರತಸ್ಥುಃ । ಪ್ರತಸ್ಥಿರೇ । ಶಿಷ್ಟಂ ಸಿದ್ಧಂ ॥

ಪ್ರತಿಪದಾರ್ಥ

ಸಃ—ಇಂದ್ರನು । ಮಹೀಂ—ಮಹತ್ತಾದುದೂ । ಈಂ ಧುನಿಂ—ಪಾಪನಾಶಕವಾದುದೂ ಆದ ಈ ನದಿಯನ್ನು । ಏತೋಃ—(ಋಷಿಗಳ) ಸಂಚಾರಾರ್ಥವಾಗಿ । ಅರಮ್ಣಾತ್—(ನೀರನ್ನು ಕಡಿಮೆಮಾಡಿ) ಉಪಶಮನಮಾಡಿದನು । ಸಃ—ಅದೇ ಇಂದ್ರನು । ಅಸ್ನಾತೄನ್—ದಾಟಲು ಸಾಮರ್ಥ್ಯವಿಲ್ಲದ ಋಷಿಗಳನ್ನು । ಸ್ವಸ್ತಿ—ಕ್ಷೇಮದಿಂದ । ಅಪಾರಯತ್—ದಾಟಿಸಿದನು । ತೇ—ಆ ಮಹರ್ಷಿಗಳು । ಉತ್ಸ್ನಾಯ—ನದಿಯನ್ನು ದಾಟಿ । ರಯಿಂ—ತಾವು ಉದ್ದೇಶಿಸಿದ ಧನಾಭಿಮುಖವಾಗಿ । ಪ್ರ ತಸ್ಥುಃ—ಹೊರಟರು । ಸೋಮಸ್ಯ—ಸೋಮರಸದ ಪಾನದಿಂದ । ಮದೇ—ಹರ್ಷವುಂಟಾದಾಗ । ತಾ—ಈ ಮಹತ್ಕಾರ್ಯಗಳನ್ನು । ಇಂದ್ರಃ—ಇಂದ್ರನು। ಚಕಾರ—ಮಾಡಿದನು.

ಭಾವಾರ್ಥ

ಇಂದ್ರನು ಮಹತ್ತಾದುದೂ, ಪಾಪನಾಶಕವಾದುದೂ ಆದ ಈ ನದಿಯನ್ನು ಋಷಿಗಳ ಸಂಚಾರಾರ್ಥವಾಗಿ ಉಪಶಮನಮಾಡಿದನು. ಅದೇ ಇಂದ್ರನು ದಾಟಲು ಸಾಮರ್ಥ್ಯವಿಲ್ಲದ ಋಷಿಗಳನ್ನು ಕ್ಷೇಮದಿಂದ ದಾಟಿಸಿದನು. ಆ ಮಹರ್ಷಿಗಳು ನದಿಯನ್ನು ದಾಟಿ ತಾವು ಉದ್ದೇಶಿಸಿದ ಧನಾಭಿಮುಖವಾಗಿ ಹೊರಟರು. ಸೋಮರಸದ ಪಾನದಿಂದ ಹರ್ಷವುಂಟಾದಾಗ ಈ ಮಹತ್ಕಾರ್ಯಗಳನ್ನು ಇಂದ್ರನು ಮಾಡಿದನು.

## English Translation

He tranquillized this great river, (so that it) might be crossed ; he conveyed across it in safety (the sages) who had been unable to pass over it.

and who, having crossed, procceded to realize the wealth they sought : in the exhilaration of the Soma, Indra has done these (deeds).

## ವಿಶೇಷವಿಷಯಗಳು

**ಅತಿಮೂರ್ತಿ**—ಎಂಬ ಹೆಸರಿನ ಒಂದು ದಿನದ ಯಾಗದಲ್ಲಿ ಮರುತ್ವತೀಯಶಸ್ತ್ರಮಂತ್ರಗಳಿಗೆ ಪ್ರಾರಂಭದಲ್ಲಿ **ಸ ಈಂ ಮಹೀಂ** ಎಂಬ ಈ ಋಕ್ಕನ್ನು ಸೂಕ್ತದ ಮೊದಲನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನಶೌತ್ರ ಸೂತ್ರದ **ಅತಿಮೂರ್ತಿನಾ** ಎಂಬ ಖಂಡದ **ಸ ಈಂ ಮಹೀಂ ಧುನಿಮೇತೋರರಮ್ಣಾತ್** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೯-೮).

**ಧುನಿಂ**—ಧುನಯಃ ಎಂಬ ಶಬ್ದವು ನದೀನಾಮಗಳಲ್ಲಿ ಪಠಿತವಾಗಿದೆ (ನಿ. ೨-೨೪). ಈ ಶಬ್ದಕ್ಕೆ ಭಾಷ್ಯ ಕಾರರು—**ಧುನೋತಿ ಸ್ತೋತೃಣಾಂ ಪಾಪಾನೀತಿ ಧುನಿಃ ಪರುಷ್ಣೀ ನದೀ** ಎಂದರೆ ಸ್ತೋತ್ರಮಾಡುವವರ ಪಾಪಗಳನ್ನು ನಾಶಮಾಡುವುದರಿಂದ ಧುನಿಃ ಎಂದರೆ ನದಿಯು. ಇಲ್ಲಿ ಪರುಷ್ಣೀ ಎಂಬ ನದಿಯು ಎಂದು ಅರ್ಥವಿವರಣೆ ಮಾಡಿದ್ದಾರೆ. ನಿರುಕ್ತದಲ್ಲಿ ನಿರುಕ್ತವ್ಯಾಖ್ಯಾಕಾರರು—**ಧುನಯಃ । ಧೂಞ್ ಕಂಪನೇ ಭೌವಾದಿಃ । ಧುನ್ವಂತಿ ಕಂಪಯಂತಿ ತೀರವೃಕ್ಷಾದೀನಿ, ಕಂಪಂತೇ ವಾ ಸ್ವಯಂ ಗಮನಶೀಲತ್ವಾತ್ ।** ಎಂದರೆ ಧುನಿಶಬ್ದವು ಧೂಞ್ ಕಂಪನೇ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ತೀರದಲ್ಲಿರುವ ವೃಕ್ಷಾದಿಗಳನ್ನು ಕಂಪಿಸುವಂತೆ ಮಾಡುವುದರಿಂದ ಅಥವಾ ಹರಿಯುವಾಗ ತಾನೇ (ಉದಕವೇ) ಗಮನಸ್ವಭಾವವುಳ್ಳದ್ದರಿಂದ ನದಿಗಳಿಗೆ ಧುನಯಃ ಎಂದು ಹೆಸರು ಎಂದು ವ್ಯಾಖ್ಯಾನಮಾಡಿದ್ದಾರೆ.

**ಸಃ ಈಂ ಮಹೀಂ ಧುನಿಂ ಏತೋಃ ಅರಮ್ಣಾತ್—ಮಹಾಜಲಾಂ ನದೀಮಲ್ಪೋದಕಾಮಕರೋದಿ-ತ್ಯರ್ಥಃ ।** ಈ ಇಂದ್ರನು ದೊಡ್ಡದಾದ ಎಂದರೆ ಬಹಳ ಉದಕಗಳಿಂದ ತುಂಬಿ ಆಳವಾಗಿಯೂ ವಿಸ್ತಾರ ಪಾತ್ರವುಳ್ಳದ್ದಾಗಿಯೂ ಪ್ರವಹಿಸುತ್ತಿರುವ ನದಿಯನ್ನು ಅದರ ನೀರನ್ನು ಅಲ್ಪಪ್ರಮಾಣವುಳ್ಳದ್ದನ್ನಾಗಿ ಮಾಡುವುದರಿಂದ ಜನರಿಗೆ ದಾಟಲು ಸಾಧ್ಯವಾಗುವಂತೆ ಮಾಡಿದನು ಎಂದು ಮುಖ್ಯಾಭಿಪ್ರಾಯವು. ಹಿಂದಿನ ಕಾಲದಲ್ಲಿ ಆಳವಾಗಿಯೂ ವಿಸ್ತಾರವಾಗಿಯೂ ಹರಿಯುತ್ತಿರುವ ದೊಡ್ಡ ನದಿಗಳನ್ನು ದಾಟುವುದು ಸಾಮಾನ್ಯಜನರಿಗೆ ಸಾಧ್ಯವಾಗುತ್ತಿರಲಿಲ್ಲ. ಸಿಂಧೂ, ಗಂಗಾ, ಮುಂತಾದ ಬಹೂದಕವುಳ್ಳ ಮತ್ತು ವಿಸ್ತಾರವಾದ ಪಾತ್ರವುಳ್ಳ ನದಿಗಳನ್ನು ದಾಟುವುದು ಒಂದು ದೊಡ್ಡ ಸಮಸ್ಯೆಯಾಗಿತ್ತು. ದೊಡ್ಡ ದೊಡ್ಡ ದೋಣಿಗಳಿರಲಿಲ್ಲ. ಸಣ್ಣ ದೋಣಿ ಅಥವಾ ಹರಿಗೋಲು ಮುಂತಾದ ಇತರ ಸಾಧನಗಳಿಂದ ದಾಟುವುದು ಅಪಾಯಕರವಾಗಿತ್ತು. ಸೇತುವೆಗಳ ಹೆಸರೇ ಇರಲಿಲ್ಲ. ಇಂತಹ ಕಾಲದಲ್ಲಿ ನದಿಗಳನ್ನು ದಾಟುವುದು ಅಥವಾ ದಾಟಿಸುವುದು ಒಂದು ಮಹತ್ತಾದ ಸಾಹಸಕಾರ್ಯವೆಂದು ಪರಿಗಣಿಸಲ್ಪಡುತ್ತಿತ್ತು. ಆದ್ದರಿಂದಲೇ ಇಂದ್ರನು ನದಿಯ ನೀರನ್ನೇ ಕಡಿಮೆಮಾಡಿ ದಾಟಲು ಸಾಧ್ಯವಾಗುವಂತೆ ಮಾಡಿದನು ಎಂದು ವರ್ಣಿಸಿ ಇದನ್ನು ಇಂದ್ರನ ಸಾಹಸಕಾರ್ಯಗಳಲ್ಲಿ ಒಂದೆಂದು ಹೇಳಿರುವನು.

**ಸಃ ಅಸ್ನಾತೄನ್ ಅಪಾರಯತ್ ಸ್ವಸ್ತಿ—ತರಣಾಸಮರ್ಥಾನ್ ಋಷೀನ್ ಕ್ಷೇಮೇಣಾಪಾರಯತ್** ದೊಡ್ಡ ನದಿಗಳನ್ನು ದಾಟಲು ಸಾಮರ್ಥ್ಯವಿಲ್ಲದೆ ತೊಂದರೆಪಡುತ್ತಿದ್ದ ಋಷಿಗಳನ್ನು ಕ್ಷೇಮವಾಗಿ ಇಂದ್ರನು ದಾಟಿಸಿದನು. ಈ ವಾಕ್ಯದಲ್ಲಿ **ಅಸ್ನಾತೄನ್** ಎಂಬ ಶಬ್ದಕ್ಕೆ ದಾಟಲಸಮರ್ಥರಾದ ಎಂದು ಮಾತ್ರ ಅರ್ಥವಿರುವುದರಿಂದ

ಋಷಿಗಳನ್ನು ಮಾತ್ರ ಇಂದ್ರನು ದಾಟಿಸಿದನೆಂದು ಹೇಳಬೇಕಾಗಿಲ್ಲ. ಇಂದ್ರನನ್ನು ಸ್ತೋತ್ರಮಾಡುವ ರಾಜರನ್ನಾಗಲಿ ರಾಜರಕಡೆಯ ವೀರರನ್ನಾಗಲಿ, ಇತರ ಜನರನ್ನಾಗಲಿ ದಾಟಿಸಿದನೆಂದು ಹೇಳಬಹುದು. ಇದಲ್ಲದೆ, ಮುಂದಿನ—

ತೇ ಉತ್ಸ್ನಾಯ ರಯಿಂ ಅಭಿ ಪ್ರ ತಸ್ಥುಃ—ಅವರು ನದಿಯನ್ನು ದಾಟಿ ಧನವನ್ನು ಸಂಪಾದಿಸುವುದಕ್ಕಾಗಿ ಮುಂದಕ್ಕೆ ಹೊರಟುಹೋದರು ಎಂಬ ವಾಕ್ಯವಿರುವುದರಿಂದ (ಎಂದರೆ ಈ ವಾಕ್ಯದಲ್ಲಿ ರಯಿಂ—ಧನಲಾಭಕ್ಕಾಗಿ ಎಂಬ ಶಬ್ದಪ್ರಯೋಗವಿರುವುದರಿಂದ) ಧನಲಾಭಕ್ಕಾಗಿ ನದಿಯನ್ನು ದಾಟಿ ಇತರ ದೇಶಗಳಿಗೆ ಹೋಗುವವರು, ರಾಜರು, ರಾಜರ ಸೈನಿಕರು, ಧನಾರ್ಥಿಗಳಾದ ವಣಿಗ್ಜನರು, ಇತರ ಸಾಮಾನ್ಯಜನರು ಮೊದಲಾದವರಲ್ಲಿ ಯಾರಾದರೂ ಆಗಬಹುದು. ಋಷಿಗಳಿಗೆ ಮಾತ್ರವೇ ಅನ್ವಯಿಸುವುದೆಂದು ಹೇಳುವುದಕ್ಕಾಗುವುದಿಲ್ಲ. ಋಷಿಗಳಿಗೆ ಧನೇಚ್ಛೆ ಇದ್ದರೂ ಅದಕ್ಕಾಗಿ ಅವರು ದೇಶಸಂಚಾರಾದಿಗಳನ್ನು ಮಾಡಬೇಕಾಗಿಲ್ಲ. ಇಂದ್ರನನ್ನು ಪ್ರಾರ್ಥಿಸುವುದರಿಂದಲೇ ಅದನ್ನು ಅವರು ಪಡೆಯಬಹುದು.

---

ಸಂಹಿತಾಪಾಠಃ

ಸೋದಂಚಂ ಸಿಂಧುಮರಿಣಾನ್ಮಹಿತ್ವಾ ವಜ್ರೇಣಾನ ಉಷಸಃ ಸಂ ಪಿಪೇಷ ।

ಅಜವಸೋ ಜವಿನೀಭಿರ್ವಿವೃಶ್ಚನ್ತ್ಸೋಮಸ್ಯ ತಾ ಮದ ಇಂದ್ರಶ್ಚಕಾರ ॥೬॥

ಪದಪಾಠಃ

ಸಃ । ಉದಂಚಂ । ಸಿಂಧುಂ । ಅರಿಣಾತ್ । ಮಹಿಃತ್ವಾ । ವಜ್ರೇಣ । ಅನಃ । ಉಷಸಃ । ಸಂ । ಪಿಪೇಷ ।

ಅಜವಸಃ । ಜವಿನೀಭಿಃ । ವಿಃವೃಶ್ಚನ್ । ಸೋಮಸ್ಯ । ತಾ । ಮದೇ । ಇಂದ್ರಃ । ಚಕಾರ ॥ ೬ ॥

ಸಾಯಣಭಾಷ್ಯಂ

ಸ ಇಂದ್ರಃ ಸಿಂಧುಂ ಪ್ರಾಂಚಂ ಸಂತಂ ಮಹಿತ್ವಾ ಸ್ವಕೀಯೇನ ಮಹಿಮ್ನೋದಂಚಮರಿಣಾತ್ । ಉದಙ್ಮುಖಮಕರೋತ್ ॥ ಸಿಂಧುಶಬ್ದಶ್ಛಂದಸಿ ಪುಲ್ಲಿಂಗಃ ॥ ಉಷಸ ಉಷೋದೇವ್ಯಾ ಅನಃ ಶಕಟಂ ವಜ್ರೇಣ ಸಂಪಿಪೇಷ । ಚೂರ್ಣೀಚಕಾರ । ಏತಚ್ಚ ದಿವಶ್ಚಿದ್ಘಾ ದುಹಿತರಂ । ೪-೩೦-೯ । ಇತ್ಯತ್ರ ಸ್ಪಷ್ಟಂ ವಕ್ಷ್ಯತೇ । ಕಿಂ ಕುರ್ವನ್ । ಅಜವಸೋ ಜವಹೀನಾ ದುರ್ಬಲಾಃ ಸೇನಾಃ ಜವಿನೀಭಿರ್ಜವಯುಕ್ತಾಭಿಃ ಸೇನಾಭಿರ್ವಿವೃಶ್ಚನ್ । ವಿಶೇಷೇಣ ಛಿಂದನ್ । ಪಿಪೇಷೇತಿ ಸಮನ್ವಯಃ । ಓವ್ರಶ್ಚೂ ಛೇದನೇ । ಶತರಿ ಗ್ರಹಿಜ್ಯಾದಿನಾ ಸಂಪ್ರಸಾರಣಂ । ಶಿಷ್ಟಂ ಸ್ಪಷ್ಟಂ ॥

ಪ್ರತಿಪದಾರ್ಥ

**ಸಃ**—ಇಂದ್ರನು । **ಸಿಂಧುಂ** - (ಪೂರ್ವಾಭಿಮುಖವಾಗಿ ಹರಿಯುತ್ತಿದ್ದ) ನದಿಯನ್ನು । **ಮಹಿತ್ವಾ**—ತನ್ನ ಮಹಿಮೆಯಿಂದ । **ಉದಂಚಂ**—ಉತ್ತರಾಭಿಮುಖವಾಗಿ ಹರಿಯುವಂತೆ । **ಅರಿಣಾತ್**—ಮಾಡಿದನು । **ಉಷಸಃ**—ಉಷೋದೇವಿಯ । **ಅಜವಸಃ**—ದುರ್ಬಲವಾದ ಸೇನೆಗಳನ್ನು । **ಜವಿನೀಭಿಃ**—ವೇಗಯುಕ್ತವಾದ ತನ್ನ ಸೇನೆಗಳಿಂದ । **ವಿವೃಶ್ಚನ್**—ಪೂರ್ಣವಾಗಿ ಚದುರಿಸಿ ಧ್ವಂಸಮಾಡುತ್ತಾ । **ಅನಃ**—ಅವಳ ಶಕಟವನ್ನು । **ವಜ್ರೇಣ**—ತನ್ನ ವಜ್ರಾಯುಧದಿಂದ। **ಸಂ ಪಿಪೇಷ**—ಪುಡಿಮಾಡಿದನು । **ಸೋಮಸ್ಯ**—ಸೋಮರಸದ ಪಾನದಿಂದ **ಮದೇ**—ಹರ್ಷವುಂಟಾದಾಗ । **ತಾ**—ಈ ಮಹತ್ಕಾರ್ಯಗಳನ್ನು । **ಇಂದ್ರಃ**—ಇಂದ್ರನು । **ಚಕಾರ**—ಮಾಡಿದನು.

ಭಾವಾರ್ಥ

ಇಂದ್ರನು ಪೂರ್ವಾಭಿಮುಖವಾಗಿ ಹರಿಯುತ್ತಿದ್ದ ನದಿಯನ್ನು ತನ್ನ ಮಹಿಮೆಯಿಂದ ಉತ್ತರಾಭಿಮುಖವಾಗಿ ಹರಿಯುವಂತೆ ಮಾಡಿದನು. ಉಷೋದೇವಿಯು ದುರ್ಬಲವಾದ ಸೇನೆಗಳನ್ನು ವೇಗಯುಕ್ತವಾದ ತನ್ನ ಸೇನೆಗಳಿಂದ ಪೂರ್ಣವಾಗಿ ಚದುರಿಸಿ ಧ್ವಂಸಮಾಡುತ್ತಾ ಅವಳ ಶಕಟವನ್ನು ತನ್ನ ವಜ್ರಾಯುಧದಿಂದ ಪುಡಿಮಾಡಿದನು. ಸೋಮರಸದ ಪಾನದಿಂದ ಹರ್ಷವುಂಟಾದಾಗ ಈ ಮಹತ್ಕಾರ್ಯಗಳನ್ನು ಇಂದ್ರನು ಮಾಡಿದನು.

English Translation

By his great power he turned the Sindhu towards the north; with his thunderbolt he ground to pieces the waggon of the dawn, scattering the tardy enemy with his swift forces, in the exhilaration of the Soma, Indra has done these (deeds).

ವಿಶೇಷವಿಷಯಗಳು

**ಸಃ ಉದಂಚಂ ಸಿಂಧುಂ ಅರಿಣಾತ್ ಮಹಿತ್ವಾ—ಸ ಇಂದ್ರಃ ಸಿಂಧುಂ ಪ್ರಾಂಚಂ ಸಂತಂ ಮಹಿತ್ವಾ ಸ್ವಕೀಯೇನ ಮಹಿಮ್ನೋದಂಚಮರಿಣಾತ್ ಉದಙ್ಮುಖಮಕರೋತ್** । ಇಂದ್ರನು ಪೂರ್ವದಿಕ್ಕಿಗೆ ಹರಿಯುತ್ತಿದ್ದ ನದಿಯನ್ನು ತನ್ನ ಮಹಿಮೆಯಿಂದ ಉತ್ತರದಿಕ್ಕಿಗೆ ತಿರುಗಿಸಿ ಹರಿಯುವಂತೆ ಮಾಡಿದನು ಎಂದು ಇಲ್ಲಿ ಹೇಳಿದೆ. ಇಲ್ಲಿ ಸಿಂಧುಂ ಎಂದರೆ ಸಾಮಾನ್ಯವಾಗಿ ಹೇಳಬಹುದಾದ ಯಾವುದಾದರೂ ಒಂದು ನದಿಯೋ ಅಥವಾ ಸಿಂಧು ಎಂಬ ಪ್ರಸಿದ್ಧವಾದ ನದಿಯೋ ಎಂಬುವುದು ಸ್ಪಷ್ಟವಾಗಿಲ್ಲ. ಸಿಂಧು ನದಿಯು ಪೂರ್ವದಿಕ್ಕಿಗಾಗಲಿ, ಉತ್ತರದಿಕ್ಕಿಗಾಗಲಿ ಹರಿಯುವುದಿಲ್ಲವಾದ್ದರಿಂದ ಬೇರೆ ಯಾವುದಾದರೂ ಒಂದು ನದಿಯೋ ನಿರ್ದೇಶಿಸಲ್ಪಟ್ಟಿರಬೇಕು. ಅದು ಯಾವ ನದಿ ಎಂದು ಹೇಳುವುದು ಸಾಧ್ಯವಿಲ್ಲ. ಇದೇ ವಿಷಯವು ಋ. ಸಂ. ೪-೩೦-೧೧ ರಲ್ಲಿ ಸೂಚಿತವಾಗಿರುವುದರಿಂದ ಪ್ರಾಯಶಃ ಅಲ್ಲಿ ಹೇಳಿರುವಂತೆ ವಿಪಾಶಿ ಎಂಬ ನದಿ ಇರಬಹುದು. ಅಥವಾ ಋ. ಸಂ. ೪-೩೦-೧೨ ರಲ್ಲಿ ಸಿಂಧು ನದಿಯ ಪ್ರಸ್ತಾಪವಿರುವುದರಿಂದ ಸಿಂಧು ನದಿಯಾಗಿದ್ದರೂ ಇರಬಹುದು.

**ವಜ್ರೇಣ ಅನಃ ಉಷಸಃ ಸಂಪಿಪೇಷ**—ಇಂದ್ರನು ತನ್ನ ವಜ್ರಾಯುಧದಿಂದ ಉಷೋದೇವತೆಯ ಶಕಟವನ್ನು ಅಥವಾ ರಥವನ್ನು ಚೂರ್ಣಮಾಡಿದನು ಎಂದರೆ ಪುಡಿಪುಡಿಮಾಡಿದನು. ಈ ವಿಷಯವು—

ದಿವಶ್ಚಿದ್ಘಾ ದುಹಿತರಂ ಮಹಾನ್ಮಹೀಯಮಾನಾಂ । ಉಷಾಸಮಿಂದ್ರ ಸಂ ಪಿಣಕ್ ॥
ಅಪೋಷಾ ಅನಸಃ ಸರತ್ಸಂಪಿಷ್ಟಾದಹ ಬಿಭ್ಯುಷೀ । ನಿ ಯತ್ಸೀಂ ಶಿಶ್ನಥದ್ವೃಷಾ ॥
ಏತದಸ್ಯಾ ಅನಃ ಶಯೇ ಸುಸಂಪಿಷ್ಟಂ ವಿಪಾಶ್ಯಾ । ಸಸಾರ ಸೀಂ ಪರಾವತಃ ॥
ಉತ ಸಿಂಧುಂ ವಿಬಾಲ್ಯಂ ವಿತಸ್ಥಾನಾಮಧಿ ಕ್ಷಮಿ । ಪರಿ ಷ್ಠಾ ಇಂದ್ರ ಮಾಯಯಾ ॥

(ಋ. ಸಂ. ೪-೩೦-೯ ರಿಂದ ೧೨)

ಎಂಬ ಋಕ್ಕುಗಳಲ್ಲಿ ಹೇಳಲ್ಪಟಿರುವುದು-ಎಲೈ ಇಂದ್ರನೇ, ನೀನು ಮಹಾಮಹಿಮೆಯುಳ್ಳವನು. ಸ್ವರ್ಗದ ಪುತ್ರಿಯೂ ಪೂಜ್ಯಳೂ ಆದ ಉಷೋದೇವತೆಯ (ರಥವನ್ನು)ನ್ನು ನೀನು (ಧ್ವಂಸಮಾಡಿ) ಪುಡಿಪುಡಿಮಾಡಿದೆಯಲ್ಲವೇ? ಎಲೈ ಇಷ್ಟಾರ್ಥಪ್ರದನಾದ ಇಂದ್ರನೇ, ನೀನು ಉಷೋದೇವತೆಯ ರಥವನ್ನು ಪುಡಿಪುಡಿಮಾಡಿದಾಗ ಉಷೋದೇವತೆಯು ಬಹಳವಾಗಿ ಹೆದರಿ ಚೂರ್ಣವಾದ ಆ ರಥದಿಂದ ದೂರ ಸರಿದಳು. ಇಂದ್ರನು ಪುಡಿಪುಡಿಮಾಡಿದ ಉಷೋ ದೇವತೆಯ ರಥವು ವಿಪಾಶಿ ಎಂಬ ನದಿಯತೀರದಲ್ಲಿ ಬಿದ್ದಿತ್ತು. ರಥವು ಮುರಿದು ಬಿದ್ದಿದ್ದರಿಂದ ಉಷೋದೇವತೆಯು ಆ ಪ್ರದೇಶ ದಿಂದ ದೂರ ಸರಿದಳು. ಎಲೈ ಇಂದ್ರನೇ, ಪೂರ್ಣಜಲದಿಂದ ತುಂಬಿ ಹರಿಯುತ್ತಿದ್ದ ನದಿ (ಸಿಂಧುನದಿ) ಯನ್ನು ನೀನು ನಿನ್ನ ಮಾಯಶಕ್ತಿಯಿಂದ ಎದುರಿಸಿದೆ-ಎಂದು ಈ ಋಕ್ಕುಗಳ ಮುಖ್ಯಾಭಿಪ್ರಾಯವು. ಆದರೆ ಇಂದ್ರನು ಉಷೋ ದೇವತೆಯ ರಥವನ್ನು ಏತಕ್ಕೆ ಪುಡಿಪುಡಿಮಾಡಿ ನಾಶಮಾಡಿದನೆಂಬ ವಿಷಯವು ಸ್ಪಷ್ಟವಾಗಿಲ್ಲ. ಪ್ರಾಯಃ ಇಂದ್ರನ ಸಾಮರ್ಥ್ಯದಿಂದ ಸೂರ್ಯನು ಉದಯಿಸಿದ ಕೂಡಲೆ ಉಷೋದೇವತೆಯು (ಉಷಃಕಾಲವು) ಕಣ್ಮರೆಯಾಗುವುದರಿಂದ ಆ ವಿಷಯವನ್ನು ಈರೀತಿ ವರ್ಣಿಸಿರಬಹುದು. ಏಕೆಂದರೆ

ಇಂದ್ರಸ್ಯ ವಜ್ರಾದಬಿಬೇದಭಿಶ್ನಥಃ ಪ್ರಾಕ್ರಾಮಚ್ಛುಂಧ್ಯೂರಜಹಾದುಷಾ ಅನಃ ।

(ಋ. ಸಂ.೧೦-೧೩೮-೫)

ಎಂಬ ಋಕ್ಕಿನಲ್ಲಿ ಇದೇ ಅಭಿಪ್ರಾಯವು ಸೂಚಿತವಾಗಿರುವುದು

---

ಸಂಹಿತಾಪಾಠಃ

ಸ ವಿದ್ವಾँ ಅಪಗೋಹಂ ಕನೀನಾಮಾವಿರ್ಭವನ್ನುದತಿಷ್ಠತ್ಪರಾವೃಕ್ ।
ಪ್ರತಿ ಶ್ರೋಣಃ ಸ್ಥಾದ್ವ್ಯ೧ನಗಚಷ್ಟ ಸೋಮಸ್ಯ ತಾ ಮದ ಇಂದ್ರಶ್ಚಕಾರ ॥

ಪದಪಾಠ

ಸಃ । ವಿದ್ವಾನ್ । ಅಪ್ಽಗೋಹಂ । ಕನೀನಾಂ । ಆವಿಃ । ಭವನ್ । ಉತ್ । ಅತಿಷ್ಠತ್ । ಪರಾಽವೃಕ್ ।
ಪ್ರತಿ । ಶ್ರೋಣಃ । ಸ್ಥಾತ್ । ವಿ । ಅನಕ್ । ಅಚಷ್ಟ । ಸೋಮಸ್ಯ । ತಾ । ಮದೇ । ಇಂದ್ರಃ । ಚಕಾರ ॥

॥ ೭ ॥

ಸಾಯಣಭಾಷ್ಯಂ

ಪುರಾ ಕಿಲ ಕನ್ಯಕಾಶ್ಚಕ್ಷುರ್ಹೀನಂ ಪಾದಹೀನಂ ಪರಾವೃಜಂ ಜಿಘೃಕ್ಷುಮೃಷಿಂ ದೃಷ್ಟ್ವಾಭಿದು-ದ್ರುವುಃ । ತತಃ ಸ ಋಷಿರಿಂದ್ರಂ ಸ್ತುತ್ವಾ ಚಕ್ಷುಃ ಪಾದಂ ಚ ಲೇಭೇ । ತದೇತದಾಹ । ಕನೀನಾಂ ಕನ್ಯ-ಕಾನಾಮುಪಗೋಹಮುಪಗೋಹನಂ ತಿರೋಭಾವಂ ವಿದ್ವಾನ್ ಪರಾವೃಗೃಷಿರಾವಿರ್ಭವನ್ ಸರ್ವೇಷಾಂ ಪ್ರತ್ಯಕ್ಷೋ ಭವನ್ ಉದತಿಷ್ಠತ್ । ಶ್ರೋಣಃ ಪೂರ್ವಂ ಪಂಗುರಿದಾನೀಮಿಂದ್ರಸ್ಯ ಪ್ರಸಾದಾದ್ವಿಭಗ್ನ-ಜಾನುಸ್ತಾಃ ಕನ್ಯಾಃ ಪ್ರತಿ ಸ್ಥಾತ್ । ಪೂರ್ವಮಂಧೋಽಧುನಾ ಚಕ್ಷುರ್ಲಾಭಾದ್ವ್ಯಚಷ್ಟ । ತಾಃ ಕನ್ಯಕಾ ವಿಶೇಷೇಣ ಪಶ್ಯತಿ ಸ್ಮ । ತಾನೀಮಾನಿ ಕರ್ಮಾಣಿ ಸ ಇಂದ್ರಶ್ಚಕಾರ ॥

ಪ್ರತಿಪದಾರ್ಥ

**ಕನೀನಾಂ**—ಕನ್ಯೆಯರ । **ಅಪಗೋಹಂ**—ತಿರೋಭಾವವನ್ನು । **ವಿದ್ವಾನ್**—ತಿಳಿದ । **ಸಃ ಪರಾವೃಕ್**—ಪರಾವೃಕ್ಕೆಂಬ ಋಷಿಯು । **ಆವಿರ್ಭವನ್**—ಎಲ್ಲರಿಗೂ ಗೋಚರನಾಗಿ । **ಉದತಿಷ್ಠತ್**—ಎದ್ದುನಿಂತನು । **ಶ್ರೋಣಃ**—ಹಿಂದೆ ಕುಂಟನಾಗಿದ್ದು ಇಂದ್ರನ ಅನುಗ್ರಹದಿಂದ ಕಾಲನ್ನು ಸರಿಯಾಗಿ ಪಡೆದು । **ಪ್ರತಿ ಸ್ಥಾತ್**—ಆ ಕನ್ಯೆಯರನ್ನು ಅಟ್ಟಿಸಿಕೊಂಡು ಹೋಗಿ ಹಿಡಿದನು । **ಅನಕ್**—ಹಿಂದೆ ಅಂಧನಾಗಿದ್ದು ಈಗ ಕಣ್ಣನ್ನುಹೊಂದಿ **ವ್ಯಚಷ್ಟ**—ಅವರನ್ನೆಲ್ಲಾ ನೋಡಿದನು । **ಸೋಮಸ್ಯ**—ಸೋಮರಸದ ಪಾನದಿಂದ । **ಮದೇ**—ಹರ್ಷವುಂಟಾದಾಗ । **ತಾ** ಈ ಮಹತ್ಕಾರ್ಯಗಳನ್ನು । **ಇಂದ್ರಃ**—ಇಂದ್ರನು । **ಚಕಾರ**—ಮಾಡಿದನು

ಭಾವಾರ್ಥ

ತನ್ನನ್ನು ಅಪಹಾಸ್ಯ ಮಾಡುತ್ತಿದ್ದ ಕನ್ಯೆಯರ ತಿರೋಭಾವವನ್ನು ತಿಳಿದ ಪರಾವೃಕ್ಕೆಂಬ ಋಷಿಯು ಎಲ್ಲರಿಗೂ ಗೋಚರನಾಗಿ ಎದ್ದು ನಿಂತನು. ಹಿಂದೆ ಕುಂಟನಾಗಿದ್ದು ಇಂದ್ರನ ಅನುಗ್ರಹದಿಂದ ಕಾಲನ್ನು ಸರಿಯಾಗಿ ಪಡೆದು ಆ ಕನ್ಯೆಯರನ್ನು ಅಟ್ಟಿಸಿಕೊಂಡು ಹೋಗಿ ಹಿಡಿದನು. ಹಿಂದೆ ಅಂಧನಾಗಿದ್ದು ಅನಂತರ ಕಣ್ಣನ್ನು ಹೊಂದಿ ಅವರನ್ನೆಲ್ಲಾ ನೋಡಿದನು. ಸೋಮರಸದ ಪಾನದಿಂದ ಹರ್ಷವುಂಟಾದಾಗ ಈ ಮಹತ್ಕಾರ್ಯಗಳನ್ನು ಇಂದ್ರನು ಮಾಡಿದನು.

English Translation

Conscious of the disappearance of the damsels, the (Rishi) Paravrij, becoming manifest, stood up; the lame man overtook (them), the blind man beheld (them): in the exhilaration of the Soma, Indra has done these (deeds).

ವಿಶೇಷವಿಷಯಗಳು

**ಪರಾವೃಕ್**—ಇವನು ಒಬ್ಬ ಋಷಿಯು. ಇವನು ಕುಂಟನೂ ಕುರುಡನೂ ಆಗಿದ್ದನು. ಇಂದ್ರನ ಅನುಗ್ರಹದಿಂದ ಕಾಲುಗಳನ್ನೂ, ಕಣ್ಣನ್ನೂ ಪಡೆದನೆಂದು ಅನೇಕ ಕಡೆ ಹೇಳಿದೆ. ಇವನ ವಿಷಯವನ್ನು ನಾವು ಇದೇ ಭಾಗದ 715-717 ನೇ ಪೇಜುಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ.

ಸಃ ವಿದ್ವಾನ್ ಅಪಗೋಹಂ ಕನೀನಾಂ ಆವಿಃ ಭವನ್ ಉದತಿಷ್ಠತ್ ಪರಾವೃಕ್—ಪೂರ್ವದಲ್ಲಿ ಬಹಳ ಬುದ್ಧಿವಂತನಾದ ಪರಾವೃಕ್ ಎಂಬ ಋಷಿ ಇದ್ದನು. ಅವನಿಗೆ ಕಾಲುಗಳಿಲ್ಲದೆ ಕುಂಟನಾಗಿದ್ದನು. ಕಣ್ಣುಗಳೂ ಕಾಣಿಸುತ್ತಿರಲಿಲ್ಲ. ಆದ್ದರಿಂದ ಕುರುಡನಾಗಿದ್ದನು. ಇದನ್ನು ನೋಡಿ ಕೆಲವು ಕನ್ಯೆಯರು (ಹುಡುಗಿಯರು) ಕುಚೇಷ್ಟೆಯಿಂದ ಅವನ ಸಮೀಪಕ್ಕೆ ಬಂದು ಅವನಿಗೆ ನಾನಾವಿಧವಾಗಿ ತೊಂದರೆಕೊಡುತ್ತಾ ಅಪಹಾಸ್ಯಮಾಡುತ್ತಿದ್ದರು. ಅವನು ಪ್ರತಿಭಟಿಸಿದನೆಂದರೆ ದೂರ ಓಡಿಹೋಗುತ್ತಿದ್ದರು. ಕುಂಟನಾದ ಈ ಋಷಿಗೆ ಅವರನ್ನು ಹಿಡಿಯಲು ಶಕ್ತಿಯಿರಲಿಲ್ಲ. ಆದ್ದರಿಂದ ಇವನು ಇಂದ್ರನನ್ನು ಸ್ತೋತ್ರಮಾಡಲು ಇಂದ್ರನು ಇವನ ಪ್ರಾರ್ಥನೆಯಿಂದ ಸಂತುಷ್ಟನಾಗಿ ಇವನಿಗೆ ಕಾಲುಗಳನ್ನೂ, ಕಣ್ಣುಗಳನ್ನೂ ಕೊಟ್ಟನು. ಅದರಿಂದ ಇವನು ಎಲ್ಲರಂತೆ ನಡೆಯಲೂ ನೋಡಲೂ ಶಕ್ತನಾದನು. ಅದನ್ನೇ ಈ ಋಕ್ಕಿನಲ್ಲಿ ವಿವರಿಸಲಾಗಿದೆ. ಆ ಕನ್ಯೆಯರು ನೋಡುತ್ತಿರುವಂತೆಯೇ ಅವರ ಎದುರಿಗೆ ಈ ಋಷಿಯು ಪ್ರತ್ಯಕ್ಷನಾಗಿ ಎದ್ದು ನಿಂತನು. ಇದುವರೆಗೆ ಇವನಿಗೆ ಆ ಕನ್ಯೆಯರು ಕಾಣಿಸುತ್ತಿರಲಿಲ್ಲ ಈಗ ಕಾಣಿಸುವಂತಾಯಿತು. ಇದುವರೆಗೆ ನಡೆಯಲು ಶಕ್ತಿ ಇರಲಿಲ್ಲ. ಈಗ ಕಾಲುಗಳು ಬಂದದ್ದರಿಂದ ಅವರೆದುರಿಗೆ ಎಲ್ಲರಂತೆ ಎದ್ದು ನಿಂತನು ಅಥವಾ ಅವರನ್ನು ಅಟ್ಟಿಸಿಕೊಂಡು ಹೋಗಿ ಹಿಡಿದನು ಎಂದು ಮುಖ್ಯಾಭಿಪ್ರಾಯವು.

ಪ್ರತಿ ಶ್ರೋಣಃ ಸ್ಥಾತ್—ಪೂರ್ವಂ ಪಂಗುರಿದಾನೀಮಿಂದ್ರಸ್ಯ ಪ್ರಸಾದಾದ್ವಿಭಗ್ನಜಾನುಸ್ತಾಃ ಕನ್ಯಾಃ ಪ್ರತಿ ಸ್ಥಾತ್ । ಹಿಂದೆ ಕಾಲಿಲ್ಲದೆ ಕುಂಟನಾಗಿದ್ದನು. ಈಗ ಇಂದ್ರನ ಅನುಗ್ರಹದಿಂದ ಕಾಲುಗಳು ಬಂದದ್ದರಿಂದ ಆ ಕನ್ಯೆಯರ ಎದುರಿಗೆ ಎದ್ದು ನಿಂತನು.

ವಿ ಅನಕ್ ಅಚಷ್ಟ—ಪೂರ್ವಮಂಧೋಽಧುನಾ ಚಕ್ಷುರ್ಲಾಭಾದ್ವ್ಯಚಷ್ಟ । ತಾಃ ಕನ್ಯಾಃ ವಿಶೇಷೇಣ ಪಶ್ಯತಿ ಸ್ಮ । ಹಿಂದೆ ಕುರುಡನಾಗಿದ್ದುದರಿಂದ ಅವನಿಗೆ ಏನೂ ಕಾಣಿಸುತ್ತಿರಲಿಲ್ಲ. ಈಗ ಕಣ್ಣುಗಳ ಬಂದದ್ದರಿಂದ ತನ್ನ ಎದುರಿಗೆ ಇರುವ ಆ ಕನ್ನಿಕೆಯರನ್ನು ಚೆನ್ನಾಗಿ ನೋಡಿದನು ಎಂದು ಮುಖ್ಯಾಭಿಪ್ರಾಯವು.

---

ಸಂಹಿತಾಪಾಠಃ

ಭಿನದ್ವಲಮಂಗಿರೋಭಿರ್ಗೃಣಾನೋ ವಿ ಪರ್ವತಸ್ಯ ದೃಂಹಿತಾನ್ಯೈರತ್ ।
ರಿಣಗ್ರೋಧಾಂಸಿ ಕೃತ್ರಿಮಾಣ್ಯೇಷಾಂ ಸೋಮಸ್ಯ ತಾ ಮದ ಇಂದ್ರಶ್ಚಕಾರ॥

ಪದಪಾಠಃ

ಭಿನತ್ । ವಲಂ । ಅಂಗಿರಃಽಭಿಃ । ಗೃಣಾನಃ । ವಿ । ಪರ್ವತಸ್ಯ । ದೃಂಹಿತಾನಿ । ಐರತ್ ।
ರಿಣಕ್ । ರೋಧಾಂಸಿ । ಕೃತ್ರಿಮಾಣಿ । ಏಷಾಂ । ಸೋಮಸ್ಯ । ತಾ । ಮದೇ । ಇಂದ್ರಃ । ಚಕಾರ ॥ ೮ ॥

ಸಾಯಣಭಾಷ್ಯಂ

ಅಂಗಿರೋಭಿರ್ಗೃಣಾನಃ ಸ್ತೂಯಮಾನಃ ಸ ಇಂದ್ರೋ ವಲಂ ವಲನಾಮಕಮಸುರಂ ಭಿನತ್ । ಅಭಿನತ್ । ತಥಾ ಗವಾಂ ನಿರೋಧಕಸ್ಯ ಪರ್ವತಸ್ಯ ದೃಂಹಿತಾನಿ ಶಿಲಾಭಿರ್ದೃಢೀಕೃತಾನಿ ದ್ವಾರಾಣಿ

ವ್ಯೈರತ್ । ಉದ್ಘಾಟಿತವಾನ್ । ತದೇವಾಹ । ಏಷಾಂ ಪರ್ವತಾನಾಂ ಕೃತ್ರಿಮಾಣಿ ಕ್ರಿಯಯಾ ನಿರ್ವೃತ್ತಾನಿ ರೋಧಾಂಸಿ ನಿರುದ್ಧಾನಿ ದ್ವಾರಾಣಿ ರಿಣಕ್ । ಉದಘಾಟಯತ್ । ಗತಮನ್ಯತ್ ॥

ಪ್ರತಿಪದಾರ್ಥ

**ಅಂಗಿರೋಭಿಃ**—ಅಂಗಿರಸ್ಸೆಂಬ ಋಷಿಗಳಿಂದ । **ಗೃಣಾನಃ**—ಸ್ತುತಿಸಲ್ಪಟ್ಟ ಇಂದ್ರನು । **ವಲಂ**—ವಲನೆಂಬ ಅಸುರನನ್ನು । **ಭಿನತ್**—ಸೀಳಿಹಾಕಿದನು । **ಪರ್ವತಸ್ಯ**—ಪರ್ವತದ । **ದೃಂಹಿತಾನಿ**—ಶಿಲೆಗಳಿಂದ ದೃಢವಾಗಿ ಮಾಡಲ್ಪಟ್ಟ ದ್ವಾರಗಳನ್ನು । **ವಿ ಐರತ್**—ತೆರೆಯುವಂತೆ ಮಾಡಿದನು । **ಏಷಾಂ**—ಈ ಪರ್ವತಗಳ । **ಕೃತ್ರಿಮಾಣಿ**--ಕೃತ್ರಿಮಕರವಾದವೂ । **ರೋಧಾಂಸಿ**—ನಿರೋಧಕಗಳೂ ಆದ ದ್ವಾರಗಳನ್ನು । **ರಿಣಕ್**—ಸೀಳಿಹಾಕಿ ಅವನ್ನು ಬಿಡಿಸಿದನು । **ಸೋಮಸ್ಯ**—ಸೋಮರಸದ ಪಾನದಿಂದ । **ಮದೇ**—ಹರ್ಷವುಂಟಾದಾಗ । **ಇಂದ್ರಃ**—ಇಂದ್ರನು । **ತಾ**—ಈ ಮಹತ್ಕಾರ್ಯಗಳನ್ನು । **ಚಕಾರ**—ಮಾಡಿದನು.

ಭಾವಾರ್ಥ

ಅಂಗಿರಸ್ಸೆಂಬ ಋಷಿಗಳಿಂದ ಸ್ತುತನಾದ ಇಂದ್ರನು ವಲನೆಂಬ ಅಸುರನನ್ನು ಸೀಳಿಹಾಕಿದನು. ಪರ್ವತದ ಶಿಲೆಗಳಿಂದ ದೃಢವಾಗಿ ಮಾಡಲ್ಪಟ್ಟ ದ್ವಾರಗಳನ್ನು ತೆರೆಯುವಂತೆ ಮಾಡಿದನು. ಮತ್ತು ಈ ಪರ್ವತಗಳ ಕೃತ್ರಿಮಕರವೂ, ನಿರೋಧಕಗಳೂ ಆದ ದ್ವಾರಗಳನ್ನು ಸೀಳಿಹಾಕಿ ಅವನ್ನು ಬಿಡಿಸಿದನು. ಸೋಮರಸದ ಪಾನದಿಂದ ಹರ್ಷವುಂಟಾದಾಗ ಇಂದ್ರನು ಈ ಮಹತ್ಕಾರ್ಯಗಳನ್ನು ಮಾಡಿದನು.

English Translation

Praised by the Angirasas, he destroyed Vala : he forced open the firm shut (doors) of the mountain ; he broke down their artificial defences : in the exhilaration of the Soma, Indra has done these (deeds)-

ವಿಶೇಷವಿಷಯಗಳು

**ವಲಂ**—ವಲನೆಂಬ ಅಸುರನ ವಿಷಯವಾಗಿ ನಾವು ಇದೇ ಭಾಗದ 634-635 ನೇ ಪೇಜುಗಳಲ್ಲಿ ಬರೆದಿರುವುದನ್ನು ನೋಡಿ.

---

ಸಂಹಿತಾಪಾಠಃ

ಸ್ವಪ್ನೇನಾಭ್ಯುಪ್ಯಾ ಚುಮುರಿಂ ಧುನಿಂ ಚ ಜಘಂಥ ದಸ್ಯುಂ ಪ್ರ ದಭೀತಿಮಾವಃ ।
ರಂಭೀ ಚಿದತ್ರ ವಿವಿದೇ ಹಿರಣ್ಯಂ ಸೋಮಸ್ಯ ತಾ ಮದ ಇಂದ್ರಶ್ಚಕಾರ ॥

ಪದಪಾಠಃ

ಸ್ವಪ್ನೇನ | ಅಭಿಽಉಪ್ಯ | ಚುಮುರಿಂ | ಧುನಿಂ | ಚ | ಜಘಂಥ | ದಸ್ಯುಂ | ಪ್ರ | ದಭೀತಿಂ | ಆವಃ |

ರಂಭೀ | ಚಿತ್ | ಅತ್ರ | ವಿವಿದೇ | ಹಿರಣ್ಯಂ | ಸೋಮಸ್ಯ | ತಾ | ಮದೇ | ಇಂದ್ರಃ | ಚಕಾರ || ೯ ||

ಸಾಯಣಭಾಷ್ಯಂ

ಅತಿಮೂರ್ತಿನಾಮ್ನ್ಯೇಕಾಹೇ ನಿಷ್ಕೇವಲ್ಯೇ ಸೂಕ್ತಮುಖೀಯಾ ಸ್ವಪ್ನೇನೇತ್ಯೇಷಾ | ಸೂತ್ರಿತಂ | ಸ್ವಪ್ನೇನಾಭ್ಯುಪ್ಯಾ ಚುಮುರಿಂ ಧುನಿಂ ಚೇತಿ ಸೂಕ್ತಮುಖೀಯಾ | ಆ ೯-೮ | ಇತಿ ||

ಸ ತ್ವಂ ದಸ್ಯುಂ ಸರ್ವಸ್ಯೋಪಕ್ಷಪಯಿತಾರಂ ಚುಮುರಿಂ ಧುನಿಂ ಚ ಏತನ್ನಾಮಾನಾವಸುರೌ ಸ್ವಪ್ನೇನ ದೀರ್ಘನಿದ್ರಯಾಭ್ಯುಪ್ಯ ಸಂಯೋಜ್ಯ ಜಘಂಥ | ಹತವಾನಸಿ | ತತಸ್ತಾಭ್ಯಾಂ ಯುಧ್ಯಮಾನಂ ದಭೀತಿಂ ರಾಜರ್ಷಿಂ ಪ್ರಾವಃ | ರಕ್ಷಿತವಾನಸಿ | ತಥಾ ಚ ಮಂತ್ರವರ್ಣಃ | ತ್ವಂ ನಿ ದಸ್ಯುಂ ಚುಮುರಿಂ ಧುನಿಂ ಚಾಸ್ವಾಪಯೋ ದಭೀತಯೇ ಸುಹಂತು | ೭-೧೯-೪ | ಇತಿ || ಆವಃ | ಅವತೇ ರಕ್ಷಣಾರ್ಥಸ್ಯ ಲಙಃ ಸಿಪಿ ರೂಪಂ || ರಂಭೀ ಚಿತ್ ವೇತ್ರಧಾರೀ ಚಾಸ್ಯ ದೌವಾರಿಕೋऽತ್ರಾಸ್ಮಿನ್ಯುದ್ಧೇ ತಯೋರಸುರಯೋರ್ಹಿರಣ್ಯಂ ಧನಂ ವಿವಿದೇ | ಲೇಭೇ || ವಿದ್ಲೃ ಲಾಭೇ ಸ್ವರಿತೇತ್ | ತಾನೀಮಾನಿ ಕರ್ಮಾಣಿ ಸೋಮಸ್ಯ ಮದೇ ಸತಿ ಚಕಾರೇತಿ ||

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) | ದಸ್ಯುಂ—ಹಿಂಸಕನಾದ | ಚುಮುರಿಂ—ಚುಮುರಿಯೆಂಬ ಅಸುರನನ್ನೂ | ಧುನಿಂ ಚ—ಧುನಿಯೆಂಬ ಅಸುರನನ್ನೂ | ಸ್ವಪ್ನೇನ—ದೀರ್ಘವಾದ ನಿದ್ರೆಯೊಡನೆ | ಅಭ್ಯುಪ್ಯ ಸೇರಿಸಿ | ಜಘಂಥ—ಕೊಂದಿದ್ದೀಯೆ | ದಭೀತಿಂ—ದಭೀತಿಯೆಂಬ ರಾಜರ್ಷಿಯನ್ನು | ಪ್ರ ಆವಃ—ಪೂರ್ಣವಾಗಿ ರಕ್ಷಿಸಿದ್ದೀಯೆ | ರಂಭೀ ಚಿತ್—(ದಭೀತಿಯ) ವೇತ್ರಧಾರಿಯಾದ ಕಂಚುಕಿಯು | ಅತ್ರ—ಈ ಯುದ್ಧದಲ್ಲಿ | ಹಿರಣ್ಯಂ—(ಅಸುರರ) ಧನವನ್ನು | ವಿವಿದೇ—ಪಡೆದನು | ಸೋಮಸ್ಯ—ಸೋಮರಸದ ಪಾನದಿಂದ | ಮದೇ—ಹರ್ಷವುಂಟಾದಾಗ | ಇಂದ್ರಃ—ಇಂದ್ರನು | ತಾ—ಈ ಮಹತ್ಕಾರ್ಯಗಳನ್ನು | ಚಕಾರ—ಮಾಡಿದನು.

ಭಾವಾರ್ಥ

ಎಲೈ ಇಂದ್ರನೇ, ಹಿಂಸಕನಾದ ಚುಮುರಿಯೆಂಬ ಅಸುರನನ್ನೂ ಧುನಿಯೆಂಬ ಅಸುರನನ್ನೂ ದೀರ್ಘವಾದ ನಿದ್ರೆಯೊಡನೆ ಸೇರಿಸಿ ಕೊಂದಿದ್ದೀಯೆ. ದಭೀತಿಯೆಂಬ ರಾಜರ್ಷಿಯನ್ನು ಪೂರ್ಣವಾಗಿ ರಕ್ಷಿಸಿದ್ದೀಯೆ. ದಭೀತಿಯ ವೇತ್ರಧಾರಿಯಾದ ಕಂಚುಕಿಯು ಈ ಯುದ್ಧದಲ್ಲಿ ಅಸುರರ ಧನವನ್ನು ಪಡೆದನು. ಸೋಮರಸದ ಪಾನದಿಂದ ಹರ್ಷವುಂಟಾದಾಗ ಇಂದ್ರನು ಈ ಮಹತ್ಕಾರ್ಯಗಳನ್ನು ಮಾಡಿದನು.

## English Translation

You have slain the Dasyus, Chumuri and Dhuni, having cast them into (profound) sleep : you have protected Dabhiti, whilst his chamberlain

gained in that (contest) the gold (of the Asuras); in the exhilaration of the Soma, Indra has done these (deeds).

ವಿಶೇಷವಿಷಯಗಳು

**ಸ್ವಪ್ನೇನ ಅಭ್ಯುಪ್ಯ ಚುಮುರಿಂ ಧುನಿಂ ಚ ಜಘಂಥ ದಸ್ಯುಂ**—ಎಲೈ ಇಂದ್ರನೇ, ದಭೀತಿಯೆಂಬ ರಾಜರ್ಷಿಯನ್ನು ಕಾಪಾಡುವುದಕ್ಕಾಗಿ ಚುಮುರಿ, ಧುನಿ ಎಂಬ ಅಸುರರನ್ನೂ ಅವರ ಸೈನಿಕರನ್ನೂ ಯುದ್ಧರಂಗದಲ್ಲಿ ನಿದ್ರಾಪರವಶರನ್ನಾಗಿ (ಮೂರ್ಛೆಗೊಂಡವರನ್ನಾಗಿ) ಮಾಡಿದೆ ಎಂದು ಇಂದ್ರನನ್ನು ಸ್ತುತಿಸಲಾಗಿದೆ. ಈ ವಿಷಯವನ್ನು ನಾವು 10 ನೇ ಭಾಗದ 551-552 ನೇ ಪುಟಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ.

**ರಂಭೀ ಚಿತ್—ವೇತ್ರಧಾರೀ ಚಾಸ್ಯ ದೌವಾರಿಕೋಽತ್ರಾಸ್ಮಿನ್ಯುದ್ಧೇ ತಯೋರಸುರಯೋರ್ಹಿರಣ್ಯಂ ಧನಂ ವಿವಿದೇ ಲೇಭೇ ।** ಇಲ್ಲಿ ರಂಭೀ ಎಂಬ ಶಬ್ದಕ್ಕೆ ಸಾಯಣರು ವೇತ್ರಧಾರೀ—ಕೈಯಲ್ಲಿ ಬೆತ್ತವನ್ನು ಹಿಡಿದ ದಭೀತಿಯ ಸೇವಕನು ಅಥವಾ ದ್ವಾರಪಾಲಕನು ಎಂದರ್ಥಮಾಡಿದ್ದಾರೆ. ಯುದ್ಧದಲ್ಲಿ ಇಂದ್ರನಿಂದ ಚುಮುರಿ ಮತ್ತು ಧುನಿ ಎಂಬ ಅಸುರರು ಪರಾಜಿತರಾದ ಮೇಲೆ ದಭೀತಿಯ ಸೇವಕನು ಅವರ ಧನಾದಿಗಳನ್ನು ದಭೀತಿಯ ಪರವಾಗಿ ವಶಪಡಿಸಿಕೊಂಡನೆಂದು ಮುಖ್ಯಾಭಿಪ್ರಾಯವು

ಸಂಹಿತಾಪಾಠಃ

ನೂನಂ ಸಾ ತೇ ಪ್ರತಿ ವರಂ ಜರಿತ್ರೇ ದುಹೀಯದಿಂದ್ರ ದಕ್ಷಿಣಾ ಮಘೋನೀ ।
ಶಿಕ್ಷಾ ಸ್ತೋತೃಭ್ಯೋ ಮಾತಿ ಧಗ್ಭಗೋ ನೋ ಬೃಹದ್ವದೇಮ ವಿದಥೇ ಸುವೀರಾಃ ॥ ೧೦ ॥

ಪದಪಾಠಃ

ನೂನಂ । ಸಾ । ತೇ । ಪ್ರತಿ । ವರಂ । ಜರಿತ್ರೇ । ದುಹೀಯತ್ । ಇಂದ್ರ । ದಕ್ಷಿಣಾ । ಮಘೋನೀ ।
ಶಿಕ್ಷ । ಸ್ತೋತೃಽಭ್ಯಃ । ಮಾ । ಅತಿ । ಧಕ್ । ಭಗಃ । ನಃ । ಬೃಹತ್ । ವದೇಮ । ವಿದಥೇ । ಸುಽವೀರಾಃ ॥

ಸಾಯಣಭಾಷ್ಯಂ

ಅಹರ್ಗಣೇಷು ಮಾಧ್ಯಂದಿನಸವನೇಷು ತಾಯಮಾನರೂಪೇಷ್ವಚ್ಛಾವಾಕಸ್ಯಾಹರಹಃ ಶಸ್ಯಸಂಜ್ಞಕಮಭಿತಷ್ಠೇವೇತಿ ಸೂಕ್ತಂ । ನೂನಂ ಸಾ ತ ಇತ್ಯೇಷಾ ತಸ್ಯಾಂತೇ ಶಂಸನೀಯಾ । ಸೂತ್ರಿತಂ ಚ । ನೂನಂ ಸಾ ತ ಇತ್ಯಂತಮುತ್ತಮಂ । ಆ. ೭-೪ । ಇತಿ ॥

ಹೇ ಇಂದ್ರ ಯಾ ದಕ್ಷಿಣಾ ದಕ್ಷಮುತ್ಸಾಹನಂ ಕರೋತೀತಿ ದಕ್ಷಿಣಾ ಸ್ತೋತೃಭ್ಯೋ ದೇಯಾ ತೇ ತ್ವತ್ಸಂಬಂಧಿನೀ ಮಘೋನೀ ಧನವತೀ ಜರಿತ್ರೇ ಸ್ತೋತ್ರೇ ವರಂ ಶ್ರೇಷ್ಠಮಭಿಮತಮರ್ಥಂ ನೂನಂ ಪ್ರತಿದುಹೀಯತ್ | ಇದಾನೀಂ ಪ್ರತಿದೋಗ್ಧಿ | ಸಂಪಾದಯತೀತ್ಯರ್ಥಃ | ತಾದೃಶೀಂ ದಕ್ಷಿಣಾಂ ಸ್ತೋತೃ-ಭ್ಯೋಽಸ್ಮಭ್ಯಂ ಶಿಕ್ಷ | ಪ್ರಯಚ್ಛ | ಕಿಂಚ ಭಗೋ ಭಜನೀಯಸ್ತ್ವಂ ಮಾತಿ ಧಕ್ || ದಹೇರ್ದಾನಾರ್ಥಸ್ಯ ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ || ನೋಽಸ್ಮಾನತಿಕ್ರಮ್ಯಾನ್ಯೇಭ್ಯೋ ದಕ್ಷಿಣಾಂ ಮಾ ದಾಃ | ಪ್ರಥಮಮಸ್ಮಭ್ಯಂ ದತ್ವಾ ಪಶ್ಚಾದನ್ಯೇಭ್ಯೋ ದೀಯತಾಮಿತ್ಯರ್ಥಃ| ಯದ್ವಾ ನೋಽಸ್ಮಾಕಂ ಕಾಮಾನ್ ಮಾ ಧಕ್ | ಮಾ ಧಾಕ್ಷೀಃ | ಅಪೇಕ್ಷಿತಫಲದಾನೇನ ಪೂರಯೇತ್ಯರ್ಥಃ | ಸುವೀರಾಃ ಶೋಭನಪುತ್ರ-ಪೌತ್ರಾಃ ಸಂತೋ ವಯಂ ವಿದಥೇಽಸ್ಮಿನ್ಯಜ್ಞೇ ಬೃಹತ್ ಪ್ರಭೂತಂ ಸ್ತೋತ್ರಂ ವದೇಮ | ತ್ವಾಮುದ್ದಿಶ್ಯ ಬ್ರವಾಮ || ಅತ್ರ ಸಾ ತೇ ಪ್ರತಿದುಗ್ಧಾಮಿತಿ ಪ್ರಕೃತ್ಯ ವೀರೋ ವೀರಯತ್ಯಮಿತ್ರಾನ್ ವೇತೇರ್ವಾ ಸ್ಯಾದ್ಗತಿಕರ್ಮಣೋ ವೀರಯತೇರ್ವೇತ್ಯಂತಂ ನಿರುಕ್ತಮನುಸಂಧೇಯಂ | ನಿ. ೧-೭ ||

### ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ | ತೇ—ನಿನ್ನಿಂದ ದತ್ತವಾಗತಕ್ಕದ್ದೂ | ಮಘೋನೀ—ಪ್ರಭೂತವಾದ ಸಂಪತ್ತುಳ್ಳದ್ದೂ ಆದ | ಸಾ ದಕ್ಷಿಣಾ—ಆ ದಕ್ಷಿಣೆಯು | ಜರಿತ್ರೇ ಸ್ತುತಿಕರ್ತನಾದ ಯಜಮಾನನಿಗೆ | ನೂನಂ-ಖಂಡಿತವಾಗಿಯೂ | ವರಂ—ಶ್ರೇಷ್ಠವಾಗಿ | ಪ್ರತಿ ದುಹೀಯತ್—ಇಷ್ಟಾರ್ಥವನ್ನು ಪೂರೈಸುತ್ತದೆ (ಅಂತಹ ದಕ್ಷಿಣೆಯನ್ನು) | ಸ್ತೋತೃಭ್ಯಃ—ಸ್ತುತಿಕರ್ತರಾದ ನಮಗೂ ಸಹ | ಶಿಕ್ಷ—ಕೊಡು | ಭಗಃ—ಪೂಜ್ಯನಾದ ನೀನು| ನಃ—ನಮ್ಮನ್ನು | ಮಾತಿ ಧಕ್—ತಿರಸ್ಕರಿಸಬೇಡ | ಸುವೀರಾಃ—ಶ್ರೇಷ್ಠರಾದ ವೀರಪುತ್ರರಿಂದೊಡಗೂಡಿದ ನಾವು | ವಿದಥೇ—ಈ ಯಜ್ಞದಲ್ಲಿ | ಬೃಹತ್—ಪ್ರಭೂತವಾದ ಸ್ತೋತ್ರವನ್ನು | ವದೇಮ—ಪಠಿಸುತ್ತೇವೆ.

### ಭಾವಾರ್ಥ

ಎಲೈ ಇಂದ್ರನೇ, ನಿನ್ನಿಂದ ದತ್ತವಾಗತಕ್ಕದ್ದೂ, ಪ್ರಭೂತವಾದ ಸಂಪತ್ತುಳ್ಳದ್ದೂ ಆದ ಆ ದಕ್ಷಿಣೆಯು ಸ್ತುತಿಕರ್ತನಾದ ಯಜಮಾನನಿಗೆ ಖಂಡಿತವಾಗಿಯೂ ಇಷ್ಟಾರ್ಥವನ್ನು ಶ್ರೇಷ್ಠವಾದ ರೀತಿಯಲ್ಲಿ ಪೂರೈಸುತ್ತದೆ. ಅಂತಹ ದಕ್ಷಿಣೆಯನ್ನು ಸ್ತುತಿಕರ್ತರಾದ ನಮಗೂ ಕೊಡು. ಪೂಜ್ಯನಾಧ ನೀನು ನಮ್ಮನ್ನು ತಿರಸ್ಕರಿಸಬೇಡ. ಶ್ರೇಷ್ಠ ರಾದ ಪುತ್ರರಿಂದೊಡಗೂಡಿದ ನಾವು ಈ ಯಜ್ಞದಲ್ಲಿ ಪ್ರಭೂತವಾದ ಸ್ತೋತ್ರವನ್ನು ಪಠಿಸುತ್ತೇವೆ

### English Translation

That opulent donation which proceeds, Indra, from you, assuredly bestows upon him who praises you the boon (that he desires) : grant it to (us) your adorers : do not you, who are the object of adoration, disregard our prayers ; so that, blessed with worthy descendants, we may glorify you at this sacrifice.

ವಿಶೇಷವಿಷಯಗಳು

ಈ ಋಕ್ಕು ಹಿಂದೆ ಋ. ಸಂ. ೨–೧೧–೨೧ ರಲ್ಲಿ ಪಠಿತವಾಗಿರುವುದರಿಂದ ಇದರ ವಿಶೇಷವಿಷಯಗಳನ್ನು ಅಲ್ಲಿ ಎಂದರೆ ಇದೇ ಭಾಗದ 628–640 ನೇ ಪುಟಗಳಲ್ಲಿ ವಿಸ್ತಾರವಾಗಿ ಬರೆದಿದ್ದೇವೆ. ಅದನ್ನು ನೋಡಿ ತಿಳಿದುಕೊಳ್ಳಬಹುದು.

## ಹದಿನಾರನೆಯ ಸೂಕ್ತವು.

**ಪ್ರ ವಃ ಸತಾಮಿತಿ ನವರ್ಚಂ ಪಂಚಮಂ ಸೂಕ್ತಂ ಗಾರ್ತ್ಸಮದಮೈಂದ್ರಂ । ಅತ್ರಾನುಕ್ರಮಣಿಕಾ। ಪ್ರ ವೋ ನವಾಂತ್ಯಾ ತ್ರಿಷ್ಟುಬಿತಿ । ನವಮೀ ತ್ರಿಷ್ಟುಪ್ ಶಿಷ್ಟಾಸ್ತ್ರಿಷ್ಟುಬಂತಪರಿಭಾಷಯಾ ಜಗತ್ಯಃ। ತೃತೀಯೇ ಪರ್ಯಾಯೇಽಚ್ಛಾವಾಕಶಸ್ತ್ರೇ ಪ್ರ ವಃ ಸತಾಮಿತಿ ಸೂಕ್ತಂ । ಅತಿರಾತ್ರ ಇತಿ ಖಂಡೇ ಸೂತ್ರಿತಂ । ಪ್ರ ವಃ ಸತಾಂ ಪ್ರೋ ದ್ರೋಣೇ ಹರಯಃ ಕರ್ಮಾಗ್ಮನ್ನಿತಿ ಯಾಜ್ಯಾ । ಆ- ೬–೪ । ಇತಿ ॥**

ಅನುವಾದವು— **ಪ್ರ ವಃ ಸತಾಂ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ಇಂದ್ರನು ದೇವತೆಯು; ಅನುಕ್ರಮಣಿಕೆಯಲ್ಲಿ **ಪ್ರ ವೋ ನವಾಂತ್ಯಾ ತ್ರಿಷ್ಟುಪ್** ಎಂದು ಹೇಳಿರುವುದರಿಂದ ಈ ಸೂಕ್ತದ ಕೊನೆಯ ಋಕ್ಕು ಎಂದರೆ ಒಂಭತ್ತನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ಜಗತೀಛಂದಸ್ಕವು. ಅತಿರಾತ್ರವೆಂಬ ಯಾಗದಲ್ಲಿ ತೃತೀಯ ಪರ್ಯಾಯದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಿಗಾಗಿ **ಪ್ರ ವಃ ಸತಾಂ** ಎಂಬ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ ಅತಿರಾತ್ರ ಎಂಬ ಖಂಡದ— **ಪ್ರ ವಃ ಸತಾಂ ಪ್ರೋ ದ್ರೋಣೇ ಹರಯಃ ಕರ್ಮಾಗ್ಮನ್ನಿತಿ ಯಾಜ್ಯಾ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೬–೪).

॥ ಓಂ ॥

### ಸೂಕ್ತ—೧೬

॥ ಮಂಡಲ—೨ ॥ ಅನುವಾಕ—೨ ॥ ಸೂಕ್ತ—೧೬ ॥

॥ ಅಷ್ಟಕ—೨ ॥ ಅಧ್ಯಾಯ—೬ ॥ ವರ್ಗ—೧೭, ೧೮॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

ಋಷಿಃ— ಗೃತ್ಸಮದಃ ॥

ದೇವತಾ— ಇಂದ್ರಃ ॥

ಛಂದಃ— ೧-೮. ಜಗತೀ । ೯. ತ್ರಿಷ್ಟುಪ್ ॥

ಸಂಹಿತಾಪಾಠಃ

ಪ್ರ ವಃ ಸತಾಂ ಜ್ಯೇಷ್ಠತಮಾಯ ಸುಷ್ಟುತಿಮುಗ್ನಾವಿವ ಸಮಿಧಾನೇ ಹವಿರ್ಭರೇ ।

ಇಂದ್ರಮಜುರ್ಯಂ ಜರಯಂತಮುಕ್ಷಿತಂ ಸನಾದ್ಯುವಾನಮವಸೇ ಹವಾಮಹೇ ॥ ೧ ॥

ಪದಪಾಠಃ

ಪ್ರ । ವಃ । ಸತಾಂ । ಜ್ಯೇಷ್ಠಽತಮಾಯ । ಸುಽಸ್ತುತಿಂ । ಅಗ್ನೌಽಇವ । ಸಂಽಇಧಾನೇ । ಹವಿಃ । ಭರೇ ।

ಇಂದ್ರಂ । ಅಜುರ್ಯಂ । ಜರಯಂತಂ । ಉಕ್ಷಿತಂ । ಸನಾತ್ । ಯುವಾನಂ । ಅವಸೇ । ಹವಾಮಹೇ ॥

ಸಾಯಣಭಾಷ್ಯಂ

ಗೃತ್ಸಮದೋ ಬ್ರೂತೇ । ಹೇ ಯಜಮಾನಾ ವೋ ಯುಷ್ಮದರ್ಥಂ ಸತಾಂ ಮಹತಾಂ ದೇವಾನಾಂ ಜ್ಯೇಷ್ಠತಮಾತಿಶಯೇನ ಶ್ರೇಷ್ಠಾಯೇಂದ್ರಾಯ ತದರ್ಥಂ। ಅಗ್ನಾವಿವ ಸಮಿಧಾನೇ।ಇವಶಬ್ದ ಏವಾರ್ಥಃ। ದೀಪ್ಯಮಾನ ಏವಾಗ್ನೌ ಹವಿಃ ಪ್ರಭರೇ । ಸಂಪಾದಯಾಮಿ । ತತಃ ಪರಂ ಸುಷ್ಟುತಿಂ ಶೋಭನಾಂ ಸ್ತುತಿಂ ಕರೋಮಿ ॥ ಭರ ಇತಿ ಭೃಞ್ ಭರಣೇ ಞಿತ್ತ್ವಾದುಭಯಪದೀ ! ಲಿಟಿ ರೂಪಂ ॥ ಅಜುರ್ಯಮಜರಣೀಯಂ ಜರಯಂತಂ ಸರ್ವಮನ್ಯಜ್ಜರಯಂತಮುಕ್ಷಿತಂ ಸೋಮೇನ ಸಿಕ್ತಂ ಸನಾತ್ಸನಾತನಂ ಯುವಾನಂ ನಿತ್ಯತರುಣಂ ತಾದೃಶಮಿಂದ್ರಮವಸೇಽಸ್ಮಾಕಂ ರಕ್ಷಣಾಯ ತಸ್ಯ ತರ್ಪಣಾಯ ವಾ ಹವಾಮಹೇ। ಆಹ್ವಯಾಮಃ ॥

ಪ್ರತಿಪದಾರ್ಥ

(ಎಲೈ ಯಜಮಾನರೇ) **ವಃ**—ನಿಮ್ಮ ಪರವಾಗಿ । **ಸತಾಂ**—ಮಹಾತ್ಮರಾದ ದೇವತೆಗಳಲ್ಲಿ । **ಜ್ಯೇಷ್ಠತಮಾಯ**—ಅತ್ಯಂತ ಶ್ರೇಷ್ಠನಾದ ಇಂದ್ರನನ್ನುದ್ದೇಶಿಸಿ । **ಸಮಿಧಾನೇ**—ಪ್ರಜ್ವಲಿತವಾದ । **ಅಗ್ನಾವಿವ**—ಅಗ್ನಿಯಲ್ಲಿಯೇ । **ಹವಿಃ**—ಹವಿಸ್ಸನ್ನು । **ಪ್ರ ಭರೇ**—ಅರ್ಪಿಸುತ್ತೇನೆ । **ಸುಷ್ಟುತಿಂ**—ಶ್ರೇಷ್ಠವಾದ ಸ್ತುತಿಯನ್ನೂ ಅರ್ಪಿಸುತ್ತೇನೆ । **ಅಜುರ್ಯಂ**—ಸ್ವಯಂ ಕ್ಷಯರಹಿತನೂ (ಅದರೆ) । **ಜರಯಂತಂ**—ಎಲ್ಲರನ್ನೂ ಕ್ಷಯಿಸುವಂತೆ ಮಾಡುವವನೂ । **ಉಕ್ಷಿತಂ**—ಸೋಮರಸದಿಂದ ಸಿಕ್ತನಾದವನೂ (ಸೋಮಪಾನಮಾಡುವವನೂ) । **ಸನಾತ್**—ಪುರಾತನನೂ । **ಯುವಾನಂ**—ನಿತ್ಯತರುಣನೂ ಆದ । **ಇಂದ್ರಂ**—ಇಂದ್ರನನ್ನು । **ಅವಸೇ**—ರಕ್ಷಣಾರ್ಥವಾಗಿ । **ಹವಾಮಹೇ**—ಕರೆಯುತ್ತೇವೆ.

ಭಾವಾರ್ಥ

ಎಲೈ ಯಜಮಾನರೇ, ಮಹಾತ್ಮರಾದ ದೇವತೆಗಳಲ್ಲಿ ಅತ್ಯಂತ ಶ್ರೇಷ್ಠನಾದ ಇಂದ್ರನನ್ನುದ್ದೇಸಿಸಿ ಪ್ರಜ್ವಲಿತವಾದ ಅಗ್ನಿಯಲ್ಲಿ ನಿಮಗಾಗಿ ಹವಿಸ್ಸನ್ನರ್ಪಿಸುತ್ತೇನೆ ಅದರಂತೆಯೇ ಸ್ತುತಿಯನ್ನೂ ಪಠಿಸುತ್ತೇನೆ. ಕ್ಷಯರಹಿತನೂ, ಇತರರನ್ನು ಕ್ಷಯಿಸುವಂತೆ ಮಾಡುವವನೂ ಸೋಮರಸದಿಂದ ಸಿಕ್ತನಾದವನೂ, ಪುರಾತನನೂ, ನಿತ್ಯತರುಣನೂ ಆದ ಇಂದ್ರನನ್ನು ರಕ್ಷಣಾರ್ಥವಾಗಿ ಕರೆಯುತ್ತೇವೆ.

## English Translation

I bear the libation for you to the best of the holy (gods, to be poured) on the kindled fire, (and I offer to him fitting praise): we invoke for (our) protection the ever-youthful Indra, the undecaying, the causer of decay, sprinkled (with the Soma libation).

ವಿಶೇಷವಿಷಯಗಳು.

**ವಃ ಸತಾಂ ಜ್ಯೇಷ್ಠತಮಾಯ ಅಗ್ನಾವಿವ ಸಮಿಧಾನೇ ಹವಿಃ ಪ್ರ ಭರೇ**— **ಹೇ ಯಜಮಾನಾ ಯುಷ್ಮದರ್ಥಂ ಮಹತಾಂ ದೇವಾನಾಂ ಶ್ರೇಷ್ಠಾಯೇಂದ್ರಾಯ ದೀಪ್ಯಮಾನ ಏವಾಗ್ನೌ ಹವಿಃ ಸಂಪಾದಯಾಮಿ** । ಎಲೈ ಯಜಮಾನರೇ, ನಿಮಗಾಗಿ ದೇವತೆಗಳಲ್ಲೆಲ್ಲಾ ಶ್ರೇಷ್ಠನಾದ ಇಂದ್ರನನ್ನುದ್ದೇಶಿಸಿ ಪ್ರಜ್ವಲಿತವಾದ ಅಗ್ನಿಯಲ್ಲಿ ಹವಿಸ್ಸನ್ನು ಹೋಮಮಾಡುತ್ತೇನೆ ಎಂದು ಗೃತ್ಸಮದಋಷಿಯು ಹೇಳಿರುವನು. ಇಂದ್ರನು ದೇವತೆಗಳಲ್ಲೆಲ್ಲಾ ಶ್ರೇಷ್ಠನೆಂಬ ವಿಚಾರದಲ್ಲಿ—

> **ಅಯಗ್ಂ ರಾಜಾ ಜಗತಶ್ಚರ್ಷಣೀನಾಂ । ಸ ಏವ ವೀರಃ ಸ ಉ ವೀರ್ಯಾವಾನ್ । ಸ ಏಕರಾಜೋ ಜಗತಃ ಪರಸ್ಪಾಃ । ............ ಅಥೈಕರಾಜೋ ಅಭವಜ್ಜನಾನಾಂ............ ಇಂದ್ರೋ ದೇವಾನಾಮಭವತ್ಪುರೋಗಾಃ ॥**
>
> (ತೈ. ಬ್ರಾ. ೨-೮-೩-೨೧-೨೨)
>
> **ಇಂದ್ರೋ ವಾ ಅಕಾಮಯತ । ಜ್ಯೈಷ್ಠ್ಯಂ ದೇವಾನಾಮಭಿಜಯೇಯಮಿತಿ ॥**
>
> (ತೈ. ಬ್ರಾ. ೩-೧-೫-೨)

ಇತ್ಯಾದಿ ವಾಕ್ಯಗಳಲ್ಲಿ ಇಂದ್ರನು ದೇವತೆಗಳಿಗೆ ಶ್ರೇಷ್ಠನೆಂಬ ವಿಷಯವು ಉಕ್ತವಾಗಿದೆ.

**ಅಜುರ್ಯಂ ಜರಯಂತಂ— ಅಜರಣೀಯಂ ಸರ್ವಮನ್ಯಜ್ಜರಯಂತಂ** । ಇಂದ್ರನು ತಾನು ಮಾತ್ರ ಕ್ಷಯರಹಿತನು, ವಾರ್ಧಕ್ಯಾದಿವಯೋವಿಕಾರಗಳಿಲ್ಲದವನು ಆದರೆ ಇತರ ಪ್ರಾಣಿಗಳ ಆಯುಸ್ಸನ್ನು ಕ್ಷೀಣಿಸುವಂತೆ ಮಾಡುವವನು. ಎಂದರೆ ಇಂದ್ರನು ಇತರ ಪ್ರಾಣಿಗಳಂತೆ ಕಾಲಾಧೀನನಲ್ಲದವನು, ಅವನು ಯಾವಾಗಲೂ ಒಂದೇ ವಿಧವಾಗಿ ಇರುವವನು, ನಿತ್ಯತರುಣನು ಎಂದು ಮುಖ್ಯಾಭಿಪ್ರಾಯವು. ಈ ಅಭಿಪ್ರಾಯವು ಈ ವಾಕ್ಯದಲ್ಲಿರುವ **ಸನಾತ್** ಸನಾತನಂ ಯಾವಾಗಲೂ ಇರುವವನು ಮತ್ತು **ಯುವಾನಂ**-**ನಿತ್ಯತರುಣಂ** ಯಾವಾಗಲೂ ಯೌವನಾವಸ್ಥೆಯಲ್ಲಿರುವವನು ಎಂಬ ಶಬ್ದಗಳ ಪ್ರಯೋಗವು ಸ್ಪಷ್ಟಪಡಿಸುವುದು.

---

ಸಂಹಿತಾಪಾಠಃ

ಯಸ್ಮಾದಿಂದ್ರಾದ್ಬೃಹತಃ ಕಿಂ ಚನೇಮೃತೇ ವಿಶ್ವಾನ್ಯಸ್ಮಿನ್ತ್ಸಂಭೃತಾಧಿ ವೀರ್ಯಾ ।
ಜಠರೇ ಸೋಮಂ ತನ್ವೀ೩ ಸಹೋ ಮಹೋ ಹಸ್ತೇ ವಜ್ರಂ ಭರತಿ ಶೀರ್ಷಣಿ
ಕ್ರತುಂ ॥ ೨ ॥

ಪದಪಾಠಃ

ಯಸ್ಮಾ॑ತ್ । ಇಂದ್ರಾ॑ತ್ । ಬೃ॒ಹ॒ತಃ । ಕಿಂ । ಚ॒ನ । ಈ॒ಂ । ಋ॒ತೇ । ವಿಶ್ವಾ॑ನಿ । ಅ॒ಸ್ಮಿ॒ನ್ । ಸಂ॒ಭೃ॑ತಾ ।
ಅಧಿ॑ । ವೀ॒ರ್ಯಾ॑ ।

ಜ॒ಠರೇ॑ । ಸೋಮ॑ಂ । ತ॒ನ್ವಿ॑ । ಸಹಃ॑ । ಮಹಃ॑ । ಹಸ್ತೇ॑ । ವಜ್ರ॑ಂ । ಭರ॑ತಿ । ಶೀ॒ರ್ಷಣಿ॑ । ಕ್ರತು॑ಂ ॥ ೨ ॥

ಸಾಯಣಭಾಷ್ಯಂ

ಬೃಹತೋ ಮಹತೋ ಯಸ್ಮಾದಿಂದ್ರಾದೃತೇ ಕಿಮಪೀಮಿದಂ ಜಗಚ್ಚನ । ನಾಸ್ತೀತ್ಯರ್ಥಃ ॥ ಚೇತಿ ನೇತಿ ನಿಪಾತದ್ವಯಸಮುದಾಯಶ್ಚನೇತಿ । ಚೇತಿ ಚಿದಿತ್ಯರ್ಥೇ ನೇತಿ ನಿಷೇಧಾರ್ಥೇ । ಐಕಪದ್ಯಂ ತು ಸಾಂಪ್ರದಾಯಿಕಂ ॥ ಉಕ್ತಾರ್ಥೇ ಮಂತ್ರಃ । ನೇಂದ್ರಾದೃತೇ ಪವತೇ ಧಾಮ ಕಿಂ ಚನೇತಿ । ಯದ್ವಾ ಇಂದ್ರಾದೃತ ಈಮಿದಂ ಜಗತ್ ಕಿಂ । ನ ಕ್ಷುದ್ರಮತ್ಯಲ್ಪಮಿತ್ಯರ್ಥಃ । ಕುತ ಏತತ್ ತದೇವೋಚ್ಯತೇ । ಅಸ್ಮಿನ್ನಿಂದ್ರೇ ವಿಶ್ವಾನಿ ಸರ್ವಾಣಿ ವೀರ್ಯಾಣಿ ಸಾಮರ್ಥ್ಯಾನ್ಯಧಿ ಸಂಭೃತಾ । ಅಧಿಕಂ ಸಂಭೃತಾನ್ಯಾಸತೇ । ಯಶ್ಚೇಂದ್ರೋ ಜಠರೇ ಸ್ವೋದರೇ ಸೋಮಮಭಿಷುತಂ ಸೋಮರಸಂ ಭರತಿ ಬಿಭರ್ತಿ । ಕಿಂಚ ತನ್ವಿ ತನ್ವಾಂ ಸ್ವಕೀಯೇ ಸರ್ವಸ್ಮಿನ್ ಶರೀರೇ ಸಹೋ ಬಲಂ ಮಹಸ್ತೇಜಶ್ಚ ಬಿಭರ್ತಿ । ಹಸ್ತೇ ವಜ್ರಮಾಯುಧಂ ಬಿಭರ್ತಿ । ಶೀರ್ಷಣಿ ಶಿರಸಿ ಕ್ರತುಂ ವಿಜ್ಞಾನಂ ಭರತಿ । ಬಿಭರ್ತಿ ॥ ಯದ್ವೃತ್ತಯೋಗಾದನಿಘಾತಃ । ವಾಕ್ಯಭೇದಾದ್ವಾ ನಿಘಾತಾಭಾವಃ । ಶೀರ್ಷಣಿ ಶೀರ್ಷನ್ ಛಂದಸೀತಿ ॥

ಪ್ರತಿಪದಾರ್ಥ

ಬೃಹತಃ—ಮಹತ್ಸ್ವರೂಪವುಳ್ಳ । ಯಸ್ಮಾತ್ ಇಂದ್ರಾತ್ ಋತೇ—ಯಾವ ಇಂದ್ರನಿಲ್ಲದಿದ್ದರೆ । ಈಂ—ಈ ಜಗತ್ತು । ಕಿಂಚನ—ಇರುತ್ತಲೇ ಇರಲಿಲ್ಲವೋ । ಅಸ್ಮಿನ್—ಆ ಇಂದ್ರನಲ್ಲಿ । ವಿಶ್ವಾನಿ ವೀರ್ಯಾ—ಸಕಲ ಸಾಮರ್ಥ್ಯಗಳೂ । ಅಧಿ ಸಂಭೃತಾ—ಶೇಖರಿತವಾಗಿವೆ । ಜಠರೇ—ಉದರದಲ್ಲಿ । ಸೋಮಂ—ಸೋಮ ರಸವನ್ನು । ಭರತಿ—(ಇಂದ್ರನು) ತುಂಬಿಕೊಂಡಿದ್ದಾನೆ । ತನ್ವಿ—ತನ್ನ ಶರೀರದಲ್ಲಿ । ಸಹಃ—ಬಲವನ್ನೂ । ಮಹಃ—ತೇಜಸ್ಸನ್ನೂ (ಧರಿಸಿದ್ದಾನೆ) । ಹಸ್ತೇ—ಕೈಯಲ್ಲಿ । ವಜ್ರಂ—ವಜ್ರಾಯುಧವನ್ನು (ಹಿಡಿದಿದ್ದಾನೆ) । ಶೀರ್ಷಣಿ—ಶಿರಸ್ಸಿನಲ್ಲಿ । ಕ್ರತುಂ—ವಿಜ್ಞಾನವನ್ನೂ ಪಡೆದಿದ್ದಾನೆ.

ಭಾವಾರ್ಥ

ಮಹತ್ಸ್ವರೂಪವುಳ್ಳ ಯಾವ ಇಂದ್ರನಿಲ್ಲದಿದ್ದರೆ ಈ ಜಗತ್ತು ಇರುತ್ತಲೇ ಇರಲಿಲ್ಲವೋ, ಆ ಇಂದ್ರನಲ್ಲಿ ಸಕಲಸಾಮರ್ಥ್ಯಗಳೂ ಶೇಖರಿತವಾಗಿವೆ. ಇಂದ್ರನು ಉದರದಲ್ಲಿ ಸೋಮರಸವನ್ನು ತುಂಬಿಕೊಂಡಿದ್ದಾನೆ. ತನ್ನ ಶರೀರದಲ್ಲಿ ಬಲವನ್ನೂ ತೇಜಸ್ಸನ್ನೂ ಧರಿಸಿದ್ದಾನೆ. ಕೈಯಲ್ಲಿ ವಜ್ರಾಯುಧವನ್ನು ಹಿಡಿದಿದ್ದಾನೆ. ಶಿರಸ್ಸಿನಲ್ಲಿ ವಿಜ್ಞಾನವನ್ನು ಪಡೆದಿದ್ದಾನೆ.

## English Translation

For without that mighty Indra, this (world) were nothing: in him all powers whatever are aggregated: he receives the Soma juice into his stomach, and in his body (exhibits) strength and energy: he bears the thunderbolt in his hand, and wisdom in his head.

### ವಿಶೇಷವಿಷಯಗಳು

**ಯಸ್ಮಾತ್ ಬೃಹತಃ ಇಂದ್ರಾತ್ ಋತೇ ಕಿಂ ಈಂ ಚನ**— ಈ ಮಹಾಮಹಿಮನಾದ ಇಂದ್ರನನ್ನು ಬಿಟ್ಟರೆ ಎಂದರೆ ಇಂದ್ರನಿಲ್ಲದಿದ್ದರೆ ಈ ಜಗತ್ತೇ ಇರುತ್ತಿರಲಿಲ್ಲ ಅಥವಾ ಯಾವುದೂ ಇರುತ್ತಿರಲಿಲ್ಲ. ಅಥವಾ ಇಂದ್ರನ ಮಹಾಮಹಿಮೆಯ ಮುಂದೆ ಈ ಅಲ್ಪವಾದ ಜಗತ್ತು ಎಷ್ಟರದು ? ಎಂದು ಎರಡು ವಿಧವಾದ ಅರ್ಥಗಳನ್ನು ಹೇಳಿರುವರು. ಎಂದರೆ ಇಂದ್ರನಿಂದಲೇ ಈ ಜಗತ್ತು ನಿರ್ಮಿತವಾಗಿದೆ. ಇಂದ್ರನೇ ಈ ಜಗತ್ತಿಗೆ ಕಾರಣನು ಎಂದು ಮುಖ್ಯಾಭಿಪ್ರಾಯವು. ಏಕೆಂದರೆ—

**ವಿಶ್ವಾನಿ ಅಸ್ಮಿನ್ ಸಂಭೃತಾ ಅಧಿ ವೀರ್ಯಾ**— **ಅಸ್ಮಿನ್ನಿಂದ್ರೇ ಸರ್ವಾಣಿ ಸಾಮರ್ಥ್ಯಾನ್ಯಧಿ ಅಧಿಕಂ ಸಂಭೃತಾನ್ಯಾಸತೇ** । ಈ ಇಂದ್ರನಲ್ಲಿಯೇ ಸಮಸ್ತ ಶಕ್ತಿಸಾಮರ್ಥ್ಯಗಳೂ ಕೇಂದ್ರೀಕೃತವಾಗಿವೆ. ಇಂದ್ರನಲ್ಲಿ ಎಲ್ಲ ಶಕ್ತಿಗಳೂ ಬಹಳವಾಗಿ ತುಂಬಿರುವುದರಿಂದ ಇಂದ್ರನಿಲ್ಲದೆ ಜಗತ್ತಾಗಲಿ, ಇತರ ವಸ್ತುಗಳಾಗಲಿ ಇರಲು ಅವಕಾಶವಿಲ್ಲ. ಈ ವಿಷಯದಲ್ಲಿ— **ಇಂದ್ರಾದೃತೇ ಪವತೇ ಧಾಮ ಕಿಂ ಚನ** । (ಋ. ಸಂ. ೯-೬೯-೬) ಎಂಬ ಶ್ರುತಿ ವಾಕ್ಯವನ್ನು ಉದಾಹರಿಸಿರುವರು. ಎಲ್ಲವೂ ಇಂದ್ರನ ಮಹಿಮೆಯಿಂದಲೇ ಎಂದರೆ ಶಕ್ತಿಸಾಮರ್ಥ್ಯಗಳಿಂದಲೇ ನಡೆಯುತ್ತಿರುವುದು ಎಂದು ಮುಖ್ಯಾಭಿಪ್ರಾಯವು.

ಈ ಋಕ್ಕಿನ ಉತ್ತರಾರ್ಧದಲ್ಲಿ ಇಂದ್ರನ ಸ್ವರೂಪವನ್ನು ವರ್ಣಿಸಲಾಗಿದೆ. ಇಂದ್ರನು ತನ್ನ ಉದರದಲ್ಲಿ ಸೋಮರಸವನ್ನು ತುಂಬಿಕೊಂಡಿದ್ದಾನೆ, ತನ್ನ ಶರೀರದಲ್ಲಿ ಬಲವನ್ನೂ, ತೇಜಸ್ಸನ್ನೂ ಧರಿಸಿದ್ದಾನೆ, ಕೈಯಲ್ಲಿ ವಜ್ರಾಯುಧವನ್ನು ಹಿಡಿದಿದ್ದಾನೆ, ಶಿರಸ್ಸಿನಲ್ಲಿ (ಎಂದರೆ ಮೆದುಳಿನಲ್ಲಿ) ವಿಜ್ಞಾನವನ್ನು ಧರಿಸಿದ್ದಾನೆ. ಎಂದರೆ ಇಂದ್ರನ ಪ್ರಜ್ಞೆಯು ಅಧಿಕವಾದುದು. ಈರೀತಿ ಇರುವ ಇಂದ್ರನ ಶಕ್ತಿಸಾಮರ್ಥ್ಯಗಳು ಅತಿಶಯವಾದವು ಎಂದು ಮುಖ್ಯಾಭಿಪ್ರಾಯವು.

**ಚನ**— ಈ ಶಬ್ದವು **ಚ** ಮತ್ತು **ನ** ಎಂಬ ಎರಡು ನಿಪಾತಗಳಿಂದ ಕೂಡಿದೆ. **ಚ** ಎಂದರೆ **ಚಿತ್** ಎಂದೂ **ನ** ಎಂದರೆ ನಿಷೇಧಾರ್ಥವೂ ಸೂಚಿತವಾಗುವುದು. ಆದ್ದರಿಂದ **ಚನ** ಎಂಬ ಶಬ್ದಕ್ಕೆ ಇಲ್ಲವೇ ಇಲ್ಲ ಎಂದರ್ಥವು.

---

**ಸಂಹಿತಾಪಾಠಃ**

ನ ಕ್ಷೋಣೀಭ್ಯಾಂ ಪರಿಭ್ವೇ ತ ಇಂದ್ರಿಯಂ ನ ಸಮುದ್ರೈಃ ಪರ್ವತೈರಿಂದ್ರ ತೇ ರಥಃ ।

ನ ತೇ ವಜ್ರಮನ್ವಶ್ನೋತಿ ಕಶ್ಚನ ಯದಾಶುಭಿಃ ಪತಸಿ ಯೋಜನಾ ಪುರು ॥

ಪದಪಾಠಃ

ನ । ಕ್ಷೋಣೀಭ್ಯಾಂ । ಪರಿಽಭ್ವೇ । ತೇ । ಇಂದ್ರಿಯಂ । ನ । ಸಮುದ್ರೈಃ । ಪರ್ವತೈಃ । ಇಂದ್ರ । ತೇ ರಥಃ ।

ನ । ತೇ । ವಜ್ರಂ । ಅನು । ಅಶ್ನೋತಿ । ಕಃ । ಚನ । ಯತ್ । ಆಶುಽಭಿಃ । ಪತಸಿ । ಯೋಜನಾ । ಪುರು ॥ ೩ ॥

ಸಾಯಣಭಾಷ್ಯಂ

ಹೇ ಇಂದ್ರ ತೇ ತವೇಂದ್ರಿಯಂ ಬಲಂ ಕ್ಷೋಣೀಭ್ಯಾಂ ದ್ಯಾವಾಪೃಥಿವೀಭ್ಯಾಂ ನ ಪರಿಭ್ವೇ । ನ ಪರಿಭವನೀಯಂ ॥ ಕೃತ್ಯಾರ್ಥೇ ತವೈಕೇನ್ಕೇನ್ಯತ್ವನ ಇತಿ ಕೇನ್ಪ್ರತ್ಯಯಃ । ಉದಾತ್ತಸ್ವರಿತಯೋರಿತಿ ಸ್ವರಿತತ್ವಂ ॥ ಕಿಂಚ ತೇ ರಥಃ ಸಮುದ್ರೈಃ ಪರ್ವತೈಶ್ಚ ನ ಪರಿಭವನೀಯಃ । ತೇ ವಜ್ರಮಾಯುಧಂ ಕಶ್ಚನ ಪುಮಾನ್ ನಾನ್ವಶ್ನೋತಿ । ನ ವ್ಯಾಪ್ನೋತಿ ಪರಿಭವಿತುಂ ॥ ಅಶೂ ವ್ಯಾಪ್ತೌ । ವ್ಯತ್ಯಯೇನ ಪಸ್ಮೈಪದಂ ॥ ಯದ್ಯದಾಸುರವಧಾರ್ಥಂ ದಿಗ್ವಿಜಯಕಾಲೇ ಪುರು ಪುರೂಣಿ ಬಹೂನಿ ಯೋಜನಾ ಯೋ-ಜನಾನಿ ಪತಸಿ । ಗಚ್ಛಸಿ । ತದಾ ತವ ಬಲಾದಿ ನ ಪರಿಭವನೀಯಮಿತಿ ಸಮನ್ವಯಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ಇಂದ್ರಿಯಂ—ಬಲವನ್ನು । ಕ್ಷೋಣೀಭ್ಯಾಂ—ದ್ಯಾವಾಪೃಥಿವಿಗಳಿಂದಲೂ । ನ ಪರಿಭ್ವೇ—ಮೀರಿಸಲಾಗುವುದಿಲ್ಲ । ತೇ—ನಿನ್ನ । ರಥಃ—ರಥವು । ಸಮುದ್ರೈಃ—ಸಮುದ್ರಗಳಿಂದಲೂ । ಪರ್ವತೈಃ—ಪರ್ವತಗಳಿಂದಲೂ । ನ—ತಡೆಯಲು ಸಾಧ್ಯವಾಗುವುದಿಲ್ಲ । ಯತ್—ಯಾವಾಗ (ದಿಗ್ವಿಜಯಾರ್ಥವಾಗಿ) । ಆಶುಭಿಃ—ನಿನ್ನ ವೇಗವಾದ ಅಶ್ವಗಳೊಡನೆ । ಪುರು—ಬಹಳವಾದ । ಯೋಜನಾ—ಯೋಜನಗಳನ್ನು । ಪತಸಿ—ದಾಟಿಹೋಗುತ್ತೀಯೋ (ಆಗ) । ತೇ—ನಿನ್ನ । ವಜ್ರಂ—ವಜ್ರಾಯುಧವನ್ನು । ಕಶ್ಚನ—ಯಾವ ಅಸುರನೂ ಅಥವಾ ಮಾನವಶತ್ರುವೂ । ನ ಅನ್ವಶ್ನೋತಿ—ಪ್ರತಿಭಟಿಸಲು ಶಕ್ತನಾಗುವುದಿಲ್ಲ

ಭಾವಾರ್ಥ

ಎಲೈ ಇಂದ್ರನೇ, ನಿನ್ನ ಬಲವನ್ನು ದ್ಯಾವಾಪೃಥಿವಿಗಳಿಂದಲೂ ಸಹ ಮೀರಿಸಲಾಗುವುದಿಲ್ಲ. ನಿನ್ನ ರಥವನ್ನು ಸಮುದ್ರಗಳಿಂದಲೂ ಪರ್ವತಗಳಿಂದಲೂ ತಡೆಯಲು ಸಾಧ್ಯವಿಲ್ಲ. ನೀನು ನಿನ್ನವೇಗವಾದ ಅಶ್ವಗಳೊಡನೆ ದಿಗ್ವಿಜಯಕ್ಕಾಗಿ ಹೊರಟು ಅನೇಕ ಯೋಜನಗಳನ್ನೂ ದಾಟಿಹೋಗುತ್ತಿರುವಾಗ ನಿನ್ನ ವಜ್ರಾಯುಧವನ್ನು ಪ್ರತಿಭಟಿಸಲ ಯಾವ ಅಸುರನೂ ಅಥವಾ ಮಾನವ ಶತ್ರುವಾಗಲಿ ಶಕ್ತನಾಗುವುದಿಲ್ಲ.

## English Translation

Thy might, Indra, is not to be overcome by (that of) heaven and earth ; nor is you chariot (to be stopped) by oceans or by mountains : no one can escape from your thunderbolt, when yon traverse many leagues with rapid (horses).

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಇಂದ್ರನ ಅಸಾಧಾರಣವಾದ ಶಕ್ತಿಸಾಮರ್ಥ್ಯಗಳ ವರ್ಣನೆ ಇದೆ. ಅದನ್ನು ಋಷಿಯು ವಿಶದವಾಗಿ ವಿವರಿಸಿದ್ದಾನೆ.

**ನ ಕ್ಷೋಣೀಭ್ಯಾಂ ಪರಿಭ್ವೇ ತ ಇಂದ್ರಿಯಂ— ಹೇ ಇಂದ್ರ ತವ ಬಲಂ ದ್ಯಾವಾಪೃಥಿವೀಭ್ಯಾಂ ನ ಪರಿಭವನೀಯಂ** । ಎಲೈ ಇಂದ್ರನೇ, ನಿನ್ನ ಬಲವು ದ್ಯಾವಾಪೃಥಿವಿಗಳಿಂದಲೂ (ಭೂಮಿ ಸ್ವರ್ಗಗಳಿಂದಲೂ) ಮೀರಿಸಲ್ಪಡುವದಿಲ್ಲ. ಎಂದರೆ ದ್ಯಾವಾಪೃಥಿವಿಗಳಿಗಿರುವ ಬಲಕ್ಕಿಂತಲೂ ನಿನ್ನ ಬಲವು ಅತ್ಯಧಿಕವಾದುದು ಎಂದಭಿಪ್ರಾಯವು **ಕ್ಷೋಣಿಃ** ಎಂಬ ಶಬ್ದವು ಪೃಥಿವೀನಾಮಗಳಲ್ಲಿ ಪಠಿತವಾಗಿದೆ. (ನಿ. ೨-೫) ಆದರೆ ಈ ವಾಕ್ಯದಲ್ಲಿ **ಕ್ಷೋಣೀಭ್ಯಾಂ** ಎಂದು ದ್ವಿವಚನ ಪ್ರಯೋಗವಿರುವುದರಿಂದ ಈ ಶಬ್ದಕ್ಕೆ ದ್ಯಾವಾಪೃಥಿವಿಗಳೆಂದು ಭಾಷ್ಯಕಾರರು ಅರ್ಥವಿವರಣೆಮಾಡಿದ್ದಾರೆ. **ಟುಕ್ಷು ರುಕ್ಷು ಶಬ್ದೇ** (ಅದಾದಿ ಪರಸ್ಮೈಪದಿ) ಎಂಬ ಧಾತುವಿನಿಂದ ಕ್ಷೋಣಿ ಶಬ್ದವು ನಿಷ್ಪನ್ನವಾಗಿದೆ. **ಕ್ಷೂಯತೇ ಶಬ್ದ್ಯತೇ, ಸ್ತೂಯತೇ ಸ್ತೋತೃಭಿಃ । ಕ್ಷುವಂತ್ಯಸ್ಯಾಂ ಭೂತಾನೀತಿ ವಾ । ಕ್ಷೋಣೀತಿ ಈಕಾರಾಂತಂ ಕೇಚಿತ್ ಪಠಂತಿ** । ಸ್ತೋತೃಗಳಿಂದ ಸ್ತುತಿಸಲ್ಪಡುವುದರಿಂದ ಅಥವಾ ಈ ಭೂಮಿಯಲ್ಲಿ ಪ್ರಾಣಿಗಳು ಶಬ್ದಮಾಡುವುದರಿಂದ ಪೃಥಿವಿಗೆ ಕ್ಷೋಣಿ ಎಂದು ಹೆಸರು. ಈ ಶಬ್ದವು ಕ್ಷೋಣಿಃ ಎಂದು ಇಕಾರಾಂತವಾಗಿಯೂ ಕ್ಷೋಣೀ ಎಂದು ಈಕಾರಾಂತವಾಗಿಯೂ ಪಠಿಸಲ್ಪಡುವುದು. ಪ್ರಕೃತ ಋಕ್ಕಿನಲ್ಲಿ ಈಕಾರಾಂತ ಶಬ್ದ ಪ್ರಯೋಗವಿದೆ.

**ಇಂದ್ರಿಯಂ— ಬಲಂ** । ಬಲವೆಂದು ಸಾಯಣರ ವಿವರಣೆಯು. ಇಂದ್ರಿಯಶಬ್ದವು ಧನನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯). ಆದರೆ ಇಲ್ಲಿ ಭಾಷ್ಯಕಾರರು ಬಲವೆಂಬ ಅರ್ಥವನ್ನು ಹೇಳಿದ್ದಾರೆ ಇಂದ್ರಿಯ ಶಬ್ದಕ್ಕೆ—

**ಇಂದ್ರಿಯಮಿಂದ್ರಲಿಂಗಮಿಂದ್ರದೃಷ್ಟಮಿಂದ್ರಸೃಷ್ಟಮಿಂದ್ರಜುಷ್ಟಮಿಂದ್ರದತ್ತಮಿತಿ ವಾ ।**

ಎಂದು ಸೂತ್ರವಾಕ್ಯವಿದೆ. (೫-೩-೯೩) ಈ ಶಬ್ದವು ಇದಿ ಪರಮೈಶ್ವರ್ಯೇ (ಭೂ.ಪ) ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ- **ಇಂದ್ರಸ್ಯ ಲಿಂಗಂ । ಧನೇನ ಹಿ ಐಶ್ವರ್ಯಯುಕ್ತ ಇತಿ ವ್ಯಜ್ಯತೇ** । ಐಶ್ವರ್ಯದಿಂದ ಸಹಿತವಾದದ್ದು ಎಂದರೆ ಇಂದ್ರಿಯಕ್ಕೆ ಧನವೆಂದು ಹೆಸರು, **ಯದ್ವಾ ಇಂದ್ರೇಣ ದೃಷ್ಟಂ ಇಂದ್ರಿಯಂ** । ಇಂದ್ರನಿಂದ ನೋಡಲ್ಪಟ್ಟ ವಸ್ತುವಿಗೆ ಇಂದ್ರಿಯವೆಂದು ಹೆಸರು, **ಯದ್ವಾ ಇಂದ್ರ ಆತ್ಮಾ ತತ್ಕೃತೇನ ಶುಭಾಶುಭೇನ ಕರ್ಮಣಾ ಸೃಷ್ಟಂ** । ಇಂದ್ರ ಎಂದರೆ ಆತ್ಮವು. ಆತ್ಮ ಅಥವಾ ತನ್ನಿಂದ ಮಾಡಲ್ಪಟ್ಟ ಶುಭಾಶುಭ ಕರ್ಮರೂಪ ಫಲಕ್ಕೆ ಇಂದ್ರಿಯವೆಂದು ಹೆಸರು. **ಇಂದ್ರಜುಷ್ಟಂ ವಾ ಆತ್ಮನಾ ಸೇವಿತಂ ತದ್ದ್ವಾರೇಣ ಭೋಗೋತ್ಪತ್ತೇಃ** । ಆತ್ಮನಿಂದ ಸೇವಿತವಾದದ್ದು ಎಂದರೆ ತಾನು ಮಾಡಿದ ಕರ್ಮಗಳಿಂದ ಉಂಟಾದ ಭೋಗಾದಿಸಾಧನಗಳು. ಇದಕ್ಕೆ ಇಂದ್ರಿಯವೆಂದು ಹೆಸರು, **ಇಂದ್ರದತ್ತಂ ವಾ ಇಂದ್ರೇಣ ಪೂರ್ವಕರ್ಮಣಾ ವಾ ಅಸ್ತ್ಯುಪದತ್ತಂ** । ಇಂದ್ರನಿಂದ

ಅಥವಾ ತನ್ನ ಪೂರ್ವಕರ್ಮದಿಂದ ಪ್ರಾಪ್ತವಾದುದಕ್ಕೆ ಇಂದ್ರಿಯವೆಂದು ಹೆಸರು ಎಂದು ಇಂದ್ರಿಯ ಶಬ್ದಕ್ಕೆ ನಾನಾರ್ಥಗಳಿವೆ. ಆಧುನಿಕ ಸಂಸ್ಕೃತದಲ್ಲಿ ಇಂದ್ರಿಯ ಶಬ್ದಕ್ಕೆ ದೇಹಶಕ್ತಿ (ಇಂದ್ರಿಯ ಅಥವಾ ಶರೀರದ ಅವಯವಗಳಿಂದ ಉಂಟಾದ ಶಕ್ತಿ) ಎಂಬ ಅರ್ಥವು ಸೂಚಿತವಾಗುವುದು. **ಓಜೋ ಬಲಮಿಂದ್ರಿಯಂ ವೀರ್ಯಂ** ಎಂದು ನಿಗಮ ವಾಕ್ಯವಿರುವುದು.

**ಇಂದ್ರ ತೇ ರಥಃ ಸಮುದ್ರೈಃ ಪರ್ವತೈಃ ನ (ಪರಿಭ್ವೇ)**—ಸಾಧಾರಣವಾಗಿ ಮನುಷ್ಯರು ಉಪಯೋಗಿಸುವ ರಥಗಳು ಸುಗಮವಾದ ಮಾರ್ಗಗಳಲ್ಲಿ ಮಾತ್ರ ಸಂಚರಿಸುವುವು. ದಾರಿಯಲ್ಲಿ ನದಿಗಳು, ಜಲಾಶಯಗಳು, ಪರ್ವತಗಳು ಮೊದಲಾದ ಅಡಚಣೆಗಳಿದ್ದರೆ ಅವನ್ನು ದಾಟಲಾರದೆ ನಿಂತು ಹೋಗುವುವು. ಆದರೆ ಇಂದ್ರನ ರಥಕ್ಕೆ ಸಮುದ್ರವಾಗಲಿ, ಪರ್ವತಗಳಾಗಲಿ ತಡೆಯನ್ನುಂಟುಮಾಡಲಾರವು. ಅದಕ್ಕೆ ಅಪ್ರತಿಹತವಾದ ಸಂಚಾರಶಕ್ತಿ ಇರುವುದು. ಯಾವ ವಿಧವಾದ ವಿಘ್ನಬಂದರೂ ಅದನ್ನು ನಿವಾರಿಸಿ ಮುಂದೆ ಸಾಗಬಲ್ಲುದು. ಇದೇ ಇಂದ್ರನ ರಥದ ವೈಶಿಷ್ಟ್ಯವು ಎಂದು ಋಷಿಯು ರಥದ ಮಹತ್ತ್ವವನ್ನು ವರ್ಣಿಸಿದ್ದಾನೆ,

**ತೇ ವಜ್ರಂ ನ ಕಶ್ಚನ ಅನು ಅಶ್ನೋತಿ**—ಎಲೈ ಇಂದ್ರನೇ, ನಿನ್ನ ರಥಕ್ಕೆ ಇರುವ ಸಾಮರ್ಥ್ಯದಂತೆಯೇ ನಿನ್ನ ವಜ್ರಾಯುಧಕ್ಕೂ ಅಸಾಧಾರಣವಾದ ಶಕ್ತಿಯಿರುವುದು. ಈ ವಜ್ರಾಯುಧದ ಪ್ರಹಾರವನ್ನು ಎದುರಿಸಲು ಯಾವ ಪುರುಷನಿಗೂ ಸಾಧ್ಯವಿಲ್ಲ ಎಂದು ಮುಖ್ಯಾಭಿಪ್ರಾಯವು.

**ಯತ್ ಆಶುಭಿಃ ಪತಸಿ ಯೋಜನಾ ಪುರು—ಯದ್ಯದಾಸುರವಧಾರ್ಥಂ ದಿಗ್ವಿಜಯಕಾಲೇ ಬಹೂನಿ ಯೋಜನಾನಿ ಗಚ್ಛಸಿ ತದಾ ತವ ಬಲಾದಿ ನ ಪರಿಭವನೀಯಮಿತಿ ಸಮನ್ವಯಃ** । ಎಲೈ ಇಂದ್ರನೇ, ಮೇಲೆ ಹೇಳಿದ ಕಾರ್ಯಗಳೆಲ್ಲವೂ ನೀನು ಅಸುರವಧಾರ್ಥವಾಗಿ ಅನೇಕ ಯೋಜನದೂರ ನಿನ್ನ ಕುದುರೆಗಳೊಡನೆ ಹೋಗುವಾಗ ಉಂಟಾಗುವುವು. ಎಂದರೆ ನೀನು ದಿಗ್ವಿಜಯಾರ್ಥವಾಗಿ ನಿನ್ನ ಪ್ರಸಿದ್ಧವಾದ ಹರೀ ಎಂಬ ಅಶ್ವಗಳೊಡನೆ ಅನೇಕ ಯೋಜನಗಳವರೆಗೆ ಪ್ರಯಾಣಮಾಡುವಾಗ ನಿನ್ನ ರಥಕ್ಕೆ ಸಮುದ್ರಗಳಾಗಲಿ, ಪರ್ವತಗಳಾಗಲಿ ಯಾವುದೂ ಅಡಚಣೆಯನ್ನುಂಟುಮಾಡುವುದಿಲ್ಲ. ನಿನ್ನ ರಥವು ಎಲ್ಲವನ್ನೂ ಅತಿಕ್ರಮಿಸಿ ಹೋಗುವುದು, ನಿನ್ನ ಬಲವು ದ್ಯಾವಾಪೃಥಿವಿಗಳಿಗಿಂತಲೂ ಅತ್ಯಧಿಕವಾದುದು, ನಿನ್ನ ವಜ್ರಾಯುಧಕ್ಕೆ ಯಾರೂ ಎದುರಿಲ್ಲ ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

---

**ಸಂಹಿತಾಪಾಠಃ**

**ವಿಶ್ವೇ ಹ್ಯಸ್ಮೈ ಯಜತಾಯ ಧೃಷ್ಣವೇ ಕ್ರತುಂ ಭರಂತಿ ವೃಷಭಾಯ**
**ಸಶ್ಚತೇ ।**
**ವೃಷಾ ಯಜಸ್ವ ಹವಿಷಾ ವಿದುಷ್ಟರಃ ಪಿಬೇಂದ್ರ ಸೋಮಂ ವೃಷಭೇಣ**
**ಭಾನುನಾ ॥ ೪ ॥**

ಪದಪಾಠಃ

ವಿಶ್ವೇ । ಹಿ । ಅಸ್ಮೈ । ಯಜತಾಯ । ಧೃಷ್ಣವೇ । ಕ್ರತುಂ । ಭರಂತಿ । ವೃಷಭಾಯ । ಸಶ್ಚತೇ ।

ವೃಷಾ । ಯಜಸ್ವ । ಹವಿಷಾ । ವಿದುಃऽತರಃ । ಪಿಬ । ಇಂದ್ರ । ಸೋಮಂ । ವೃಷಭೇಣ । ಭಾನುನಾ ॥

ಸಾಯಣಭಾಷ್ಯಂ

ಹೇ ಯಜಮಾನ ವಿಶ್ವೇ ಸರ್ವೇ ಜನಾ ಯಜತಾಯ ಸರ್ವೈರ್ಯಜನೀಯಾಯ ಧೃಷ್ಣವೇ ಶತ್ರೂಣಾಂ ಧರ್ಷಣಶೀಲಾಯ ವೃಷಭಾಯ ಕಾಮಾನಾಂ ವರ್ಷಿತ್ರೇ ಸಶ್ಚತೇ ಸಜ್ಜಮಾನಾಯ ಸ್ತುತ್ಯಾದಿ-ಕರ್ಮವತ್ಸು ಸ್ತೋತೃಷು ಏತಾದೃಶಾಯೇಂದ್ರಾಯ ಕ್ರತುಂ ಯಜ್ಞಾದಿಲಕ್ಷಣಂ ಕರ್ಮ ಭರಂತಿ ಹಿ । ಹರಂತಿ ಖಲು । ಪ್ರಣಯಂತೀತ್ಯರ್ಥಃ ॥ ಭರಂತಿ । ಹಿಯೋಗಾದನಿಘಾತಃ ॥ ಯಸ್ಮಾದೇವಂ ತಸ್ಮಾ-ದ್ವೃಷಾ ಸೋಮರಸಸೇಚನಸಮರ್ಥೋ ವಿದುಷ್ಟರಃ ॥ ವಿದ್ವಚ್ಛಬ್ದಾತ್ತರಪಿ ಛಾಂದಸಂ ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಸಂಹಿತಾಯಾಂ ಷತ್ವಂ ॥ ವಿದ್ವತ್ತರಸ್ತ್ವಂ ಹವಿಷಾ ತಮಿಂದ್ರಂ ಯಜಸ್ವ । ಇದಾನೀಮಿಂದ್ರಂ ಸಂಬೋಧ್ಯಾಹ । ಹೇ ಇಂದ್ರ ವೃಷಭೇಣ ಕಾಮಾನಾಂ ವರ್ಷಕೇಣ ಭಾನುನಾ ದೀಪ್ಯ-ಮಾನೇನಾಗ್ನಿನಾ ಸಹ ಸೋಮಂ ಪಿಬ ॥

ಪ್ರತಿಪದಾರ್ಥ

(ಎಲೈ ಯಜಮಾನನೇ) ವಿಶ್ವೇ—ಸಕಲಜನರೂ । ಯಜತಾಯ—ಯಜ್ಞಾರ್ಹನೂ । ಧೃಷ್ಣವೇ—ಶತ್ರುನಾಶಕನೂ । ವೃಷಭಾಯ—ಇಷ್ಟಾರ್ಥಪ್ರದನೂ । ಸಶ್ಚತೇ—ಸ್ತುತ್ಯಾದಿಗಳಿಂದ ಸಂಯುಕ್ತನೂ ಆದ । ಅಸ್ಮೈ—ಇಂದ್ರನನ್ನುದ್ದೇಶಿಸಿ । ಕ್ರತುಂ—ಯಾಗಾದಿಕರ್ಮಗಳನ್ನು । ಭರಂತಿ ಹಿ—ಖಂಡಿತವಾಗಿಯೂ ನೆರವೇರಿಸುತ್ತಾರೆ (ಆದುದರಿಂದ) ।। ವೃಷಾ—ಸೋಮರಸವನ್ನು ಅರ್ಪಿಸಲು ಸಮರ್ಥನೂ । ವಿದುಷ್ಟರಃ—ಪ್ರಾಜ್ಞನೂ ಆದ ನೀನೂ ಸಹ । ಹವಿಷಾ—ಹವಿಸ್ಸುಗಳಿಂದ । ಯಜಸ್ವ—(ಇಂದ್ರನನ್ನು) ಪೂಜಿಸು । ಇಂದ್ರ—ಎಲೈ ಇಂದ್ರನೆ । ವೃಷಭೇಣ—ಇಷ್ಟಾರ್ಥಗಳನ್ನು ಸುರಿಸತಕ್ಕ । ಭಾನುನಾ—ಪ್ರಕಾಶಮಾನನಾದ ಅಗ್ನಿಯೊಡನೆ । ಸೋಮಂ—ಸೋಮರಸವನ್ನು । ಪಿಬ—ಕುಡಿ

ಭಾವಾರ್ಥ

ಎಲೈ ಯಜ್ಞಕರ್ತನೇ, ಯಜ್ಞಾರ್ಹನೂ, ಶತ್ರುನಾಶಕನೂ, ಇಷ್ಟಾರ್ಥಪ್ರದನೂ ಸ್ತುತ್ಯಾದಿಗಳಿಂದ ಸಂಯುಕ್ತನೂ ಆದ ಇಂದ್ರನನ್ನುದ್ದೇಶಿಸಿ ಸಕಲರೂ ಯಾಗಾದಿ ಕರ್ಮಗಳನ್ನು ನೆರವೇರಿಸುತ್ತಾರೆ. ಆದುದರಿಂದ ನೀನೂ ಸಹ ಹವಿಸ್ಸುಗಳಿಂದ ಇಂದ್ರನನ್ನು ಪೂಜಿಸು ಎಲೈ ಇಂದ್ರನೇ, ಇಷ್ಟಾರ್ಥಗಳನ್ನು ಸುರಿಸತಕ್ಕ ಪ್ರಕಾಶಮಾನನಾದ ಅಗ್ನಿಯೊಡನೆ ಸೋಮುಸವನ್ನು ಕುಡಿ.

## English Translation

All men offer worship to that adorable, powerful, and munificent (Indra), who is associated (with praise): therefore, (do you), who are liberal and most wise, worship him with oblations; and drink, Indra, the Soma, together with Agni, the showerer (of benefits).

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಎರಡು ಮುಖ್ಯವಾಕ್ಯಗಳಿವೆ. ಮೊದಲನೆಯ ವಾಕ್ಯದಲ್ಲಿ ಯಜ್ಞಕರ್ತನನ್ನು ಸಂಬೋಧಿಸಿ ಇಂದ್ರನಿಗೆ ಹವಿಸ್ಸನ್ನರ್ಪಿಸಬೇಕೆಂದೂ, ಎರಡನೆಯ ವಾಕ್ಯದಲ್ಲಿ ಇಂದ್ರನನ್ನು ಸಂಬೋಧಿಸಿ ಯಜಮಾನನಿಂದ ಅರ್ಪಿತವಾದ ಸೋಮರಸವನ್ನು ಅಗ್ನಿಯಿಂದ ಸಹಿತನಾಗಿ ಪಾನಮಾಡಬೇಕೆಂದೂ ಪ್ರಾರ್ಥಿಸಲಾಗಿದೆ.

ಈ ಋಕ್ಕಿನಲ್ಲಿಯೂ ಮುಂದಿನ ಕೆಲವು ಋಕ್ಕುಗಳಲ್ಲಿಯೂ **ವೃಷಭಾಯ**, **ವೃಷಾ**, **ವೃಷಭೇಣ** ಇತ್ಯಾದಿ ಶಬ್ದಗಳಪ್ರಯೋಗವಿದೆ. ಈ ಶಬ್ದಗಳು **ವೃಷು-ಸೇಚನೇ** (ಭ್ವಾದಿ ಪರಸ್ಮೈಪದಿ) ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಸೇಚನಸಮರ್ಥನಾದ ಎಂದರೆ ಮಳೆಯು ಯಾವರೀತಿ ಉದಕವನ್ನು ಯಥೇಚ್ಛವಾಗಿ ಸುರಿಸುವುದೋ ಅದರಂತೆ ಇಷ್ಟಾರ್ಥಮುಂತಾದವುಗಳನ್ನು ಸುರಿಸುವ ಎಂದು ಸಾಮಾನ್ಯಾರ್ಥವನ್ನು ಹೇಳಬಹುದು. ಆಯಾ ಸಂದರ್ಭಾನುಸಾರವಾಗಿ ಅರ್ಥಹೊಂದುವಂತೆಯೂ, ಧಾತ್ವರ್ಥಕ್ಕೆವಿರೋಧವಿಲ್ಲದಂತೆಯೂ ಅರ್ಥಮಾಡಬೇಕು. ಹೇಗೆಂದರೆ ಈ ಋಕ್ಕಿನಲ್ಲಿರುವ **ವೃಷಭಾಯ** ಎಂಬ ಶಬ್ದವು ಇಂದ್ರನಿಗೆ ವಿಶೇಷಣವಾಗಿರುವುದರಿಂದ **ಕಾಮಾನಾಂ ವರ್ಷಿತ್ರೇ** ಇಷ್ಟಾರ್ಥಗಳನ್ನು ಸುರಿಸತಕ್ಕ (ಎಂದರೆ ವಿಶೇಷವಾಗಿ ಕೊಡತಕ್ಕ) ಎಂದರ್ಥವನ್ನೂ, **ವೃಷಾ** ಎಂಬ ಶಬ್ದವು ಯಜ್ಞಮಾಡುವ ಯಜಮಾನನಿಗೆ ವಿಶೇಷಣವಾಗಿರುವುದರಿಂದ ಸೋಮರಸವನ್ನು ಸೇಚನೆಮಾಡುವ ಎಂದರೆ ಸೋಮರಸವನ್ನು ಹಿಂಡಿ ಸಿದ್ಧಪಡಿಸುವ ಯಜಮಾನನು ಎಂಬರ್ಥವನ್ನೂ, **ವೃಷಭೇಣ** ಎಂಬ ಶಬ್ದವು ಭಾನುನಾ ಎಂಬ ಶಬ್ದಕ್ಕೆ ವಿಶೇಷಣವಾಗಿರುವುದರಿಂದ ಹಿಂದೆ ಹೇಳಿದಂತೆ ಇಷ್ಟಾರ್ಥಗಳನ್ನು ಸುರಿಸುವ ಅಗ್ನಿಯಿಂದ ಎಂಬರ್ಥವನ್ನೂ ಆಯಾ ಸಂದರ್ಭಕ್ಕೆ ಸರಿಯಾಗಿ ಹೊಂದುವಂತೆ ವಿವರಿಸಲಾಗಿದೆ.

**ವಿದುಷ್ಟರಃ-ವಿದ್ವತ್ತರಃ। ವಿದುಷಾಂ ಶ್ರೇಷ್ಠತಮಃ ।** ಪ್ರಾಜ್ಞರಾದವರಲ್ಲಿ ಶ್ರೇಷ್ಠನಾದವನು ಎಂದರೆ ಎಲ್ಲವನ್ನೂ ತಿಳಿದವನು, ವಿವೇಕಿಯು ಎಂದಭಿಪ್ರಾಯವು

**ಭಾನುನಾ—ಭಾ ದೀಪ್ತೌ** (ಅದಾದಿ. ಪರಸ್ಮೈಪದಿ) ಎಂಬ ಧಾತುವಿನಿಂದ ನಿಷ್ಪನ್ನವಾದ ಭಾನುಶಬ್ದವು ಅಹರ್ನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೧)ಆದರೆ ಭಾನುಶಬ್ದಕ್ಕೆ ಪ್ರಕಾಶಮಾನವಾದ ಎಂಬರ್ಥವಿರುವುದರಿಂದ, ಪ್ರಕಾಶಮಾನವಾದ ಸೂರ್ಯ, ಅಥವಾ ಅಗ್ನಿ ಎಂಬ ಎರಡುವಿಧ ಅರ್ಥಗಳನ್ನು ಹೇಳಬಹುದು. ಇಲ್ಲಿ ಇಂದ್ರನಿಗೆ ಅಗ್ನಿಯ ಸಾಹಚರ್ಯವೇ ಹೆಚ್ಚಾಗಿರುವುದರಿಂದ ಭಾನುನಾ ಎಂದರೆ ಅಗ್ನಿಯಿಂದ ಸಹಿತನಾಗಿ ಎಂಬರ್ಥವು ಸಮಂಜಸವಾಗಿರುವುದು

---

ಸಂಹಿತಾಪಾಠಃ

ವೃಷ್ಣಃ ಕೋಶಃ ಪವತೇ ಮಧ್ವ ಊರ್ಮಿರ್ವೃಷಭಾನ್ನಾಯ ವೃಷಭಾಯ
ಪಾತವೇ ।
ವೃಷಣಾಧ್ವರ್ಯೂ ವೃಷಭಾಸೋ ಅದ್ರಯೋ ವೃಷಣಂ ಸೋಮಂ ವೃಷ-
ಭಾಯ ಸುಷ್ವತಿ ॥ ೫ ॥

ಪದಪಾಠಃ

ವೃಷ್ಣಃ । ಕೋಶಃ । ಪವತೇ । ಮಧ್ವಃ । ಊರ್ಮಿಃ । ವೃಷಭಽಅನ್ನಾಯ । ವೃಷಭಾಯ । ಪಾತವೇ ।
ವೃಷಣಾ । ಅಧ್ವರ್ಯೂ ಇತಿ । ವೃಷಭಾಸಃ । ಅದ್ರಯಃ । ವೃಷಣಂ । ಸೋಮಂ । ವೃಷಭಾಯ। ಸುಸ್ವತಿ॥

ಸಾಯಣಭಾಷ್ಯಂ

ಹೇ ಇಂದ್ರ ವೃಷ್ಣಃ ಫಲಸ್ಯ ವರ್ಷಿತುರ್ಮಧ್ವೋ ಮದಕರಸ್ಯ ಸೋಮಸ್ಯ ಕೋಶೋ ರಸ ಊರ್ಮಿರನುಷ್ಠಾತ್ರೃಣಾಂ ಪಾತ್ರೃಣಾಂ ಚ ಪ್ರೇರಕಃ ಸನ್ ಪವತೇ । ಗಚ್ಛತಿ ॥ ಪವ ಗತೌ । ಅನುದಾತ್ತೇತ್ ॥ ಕಿಮರ್ಥಂ । ವೃಷಭಾನ್ನಾಯ । ಬಲವರ್ಧಕಾನ್ಯನ್ನಾನಿ ಯಸ್ಯ ಸ ತಥೋಕ್ತಃ । ತಾದೃಶಾಯ ವೃಷಭಾಯ ಕಾಮಾನಾಂ ವರ್ಷಿತ್ರೇ ಇಂದ್ರಾಯ ಪಾತವೇ । ಪಾನಾರ್ಥಂ ಪವತ ಇತಿ ಸಮನ್ವಯಃ । ಕಿಂಚ ವೃಷಣಾ ಸೋಮರಸಸೇಚನಸಮರ್ಥಾವಧ್ವರ್ಯೂ ಅಧ್ವರ್ಯುಪ್ರತಿಪ್ರಸ್ಥಾತಾರೌ ವೃಷಭಾಸೋ ವರ್ಷಕಾ ಅದ್ರಯೋಽಭಿಷವಗ್ರಾವಾಣಶ್ಚ ವೃಷಣಂ ಸ್ವರ್ಗಾದಿಫಲಸ್ಯ ಸೇಕ್ತಾರಂ ಸೋಮಂ ವೃಷಭಾಯ ದೇವಾನಾಂ ಶ್ರೇಷ್ಠಾಯ ತುಭ್ಯಂ ಸುಷ್ವತಿ । ಸುನ್ವಂತಿ ॥ ಸುನೋತೇರ್ಲಟಿ ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ಅದಭ್ಯಸ್ತಾದಿತಿ ಝೋಽದಾದೇಶಃ ॥

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । ವೃಷ್ಣಃ—ಫಲಪ್ರದವಾದದ್ದೂ । ಮಧ್ವಃ—ಮಾದಕವಾದದ್ದೂ ಆದ ಸೋಮದ । ಕೋಶಃ--ರಸವು । ಊರ್ಮಿಃ—ಅನುಷ್ಠಾತೃಗಳಿಗೂ ಮತ್ತು ಪಾನಮಾಡತಕ್ಕವರಿಗೂ ಉತ್ತೇಜಕವಾಗಿದ್ದುಕೊಂಡು । ವೃಷಭಾನ್ನಾಯ—ಶಕ್ತಿವರ್ಧಕವಾದ ಅನ್ನವುಳ್ಳವನೂ । ವೃಷಭಾಯ—ಇಷ್ಟಾರ್ಥವನ್ನು ಸುರಿಸುವವನೂ ಆದ ನಿನ್ನ । ಪಾತವೇ—ಪಾನಾರ್ಥವಾಗಿ । ಪವತೇ—ಸರಿಯುತ್ತದೆ । ವೃಷಣಾ—ಸೋಮರಸವನ್ನು ಹಿಂಡಲು ಸಮರ್ಥರಾದ । ಅಧ್ವರ್ಯೂ—ಅಧ್ವರ್ಯು ಮತ್ತು ಪ್ರತಿಪ್ರಸ್ಥಾತೃ ಈ ಇಬ್ಬರೂ । ವೃಷಭಾಸಃ—ರಸವನ್ನು ಹಿಂಡಲು ಸಾಧನವಾದ । ಅದ್ರಯಃ—ಅಭಿಷವಗ್ರಾವಗಳೂ (ಹಿಂಡುವ ಕಲ್ಲುಗಳೂ) । ವೃಷಣಂ—ಸ್ವರ್ಗಾದಿಫಲವನ್ನು ಕೊಡತಕ್ಕ । ಸೋಮಂ—ಸೋಮರಸವನ್ನು । ವೃಷಭಾಯ—ದೇವತೆಗಳೆಲ್ಲೆಲ್ಲಾ ಶ್ರೇಷ್ಠನಾದ ನಿನಗಾಗಿ । ಸುಷ್ವತಿ—ಹಿಂಡುತ್ತಾರೆ.

ಭಾವಾರ್ಥ

ಎಲೈ ಇಂದ್ರನೇ, ಫಲಪ್ರದವಾದದ್ದೂ, ಮಾದಕವಾದದ್ದೂ ಆದ ಸೋಮದ ರಸವು ಅನುಷ್ಠಾತೃಗಳಿಗೂ ಪಾನಮಾಡತಕ್ಕವರಿಗೂ ಉತ್ತೇಜಕವಾಗಿದ್ದುಕೊಂಡು ಶಕ್ತಿವರ್ಧಕವಾದ ಅನ್ನವುಳ್ಳವನೂ, ಇಷ್ಟಾರ್ಥವನ್ನು ಸುರಿಸುವವನೂ ಆದ ನಿನ್ನ ಪಾನಾರ್ಥವಾಗಿ ಸರಿಯುತ್ತದೆ- ಸೋಮರಸವನ್ನು ಹಿಂಡಲು ಸಮರ್ಥರಾದ ಅಧ್ವರ್ಯು ಮತ್ತು ಪ್ರತಿಪ್ರಸ್ಥಾತೃ ಈ ಇಬ್ಬರೂ ಮತ್ತು ರಸವನ್ನು ಹಿಂಡಲು ಸಾಧನವಾದ ಅಭಿಷವಗ್ರಾವಗಳೂ (ಕಲ್ಲುಗಳೂ) ಸಹ ಸ್ವರ್ಗಾದಿಫಲವನ್ನು ಕೊಡತಕ್ಕ ಸೋಮರಸವನ್ನು ದೇವತೆಗಳಲ್ಲೆಲ್ಲಾ ಶ್ರೇಷ್ಠನಾದ ನಿನಗಾಗಿ ಹಿಂಡುತ್ತಾರೆ.

## English Translation

The juice of the gratifying and exhilarating (Soma), the exciter (of) those who drink it, flows to the showerer (of benefits), the dispenser of food, for his beverage : the two priests, the sprinklers of the oblation ; and the stones (that express the juice), offer to the best (of the deities), the Soma, the shedder (of blessings).

ವಿಶೇಷವಿಷಯಗಳು

**(ಹೇ ಇಂದ್ರ) ವೃಷ್ಣಃ ಮಧ್ವಃ ಕೋಶಃ ಊರ್ಮಿಃ (ಸನ್) ವೃಷಭಾನ್ನಾಯ ವೃಷಭಾಯ ಪಾತವೇ ಪವತೇ—ಹೇ ಇಂದ್ರ ಫಲಸ್ಯ ವರ್ಷಿತುರ್ಮದಕರಸ್ಯ ಸೋಮಸ್ಯ ರಸಃ ಅನುಷ್ಠಾತ್ರೂಣಾಂ ಪಾತ್ರೂಣಾಂ ಪ್ರೇರಕಃಸನ್ ಪಾನಾಯ ಗಚ್ಛತಿ ।** ಎಲೈ ಇಂದ್ರನೇ, ಫಲಪ್ರದವಾದ ಮತ್ತು ಹರ್ಷಪ್ರದವಾದ ಈ ಸೋಮರಸವು ಯಜ್ಞಾನುಷ್ಠಾತೃಗಳಿಗೂ, ಪಾನಾಭಿಲಾಷಿಗಳಿಗೂ ಪ್ರೇರಣೆಯನ್ನು ಎಂದರೆ ಉತ್ಸಾಹವನ್ನುಂಟುಮಾಡುತ್ತಾ ನಿನ್ನ (ಇಂದ್ರನ) ಪಾನಾರ್ಥವಾಗಿ ಪ್ರವಿಸುತ್ತದೆ. ಸೋಮಲತೆಯನ್ನು ಕಲ್ಲುಗಳಿಂದ ಜಜ್ಜಿ ಹಿಂಡುವಾಗ ಅದರಿಂದ ಹೊರಡುವ ರಸವು ಸ್ವಲ್ಪ ಸ್ವಲ್ಪವಾಗಿ ಸ್ರವಿಸುತ್ತಾ ಅದ್ರಿಯ (ಕಲ್ಲಿನ) ತಳಭಾಗದಲ್ಲಿ ಒಟ್ಟಾಗಿ ಸೇರುವುದು. ಸೋಮಲತೆಯನ್ನು ಜಜ್ಜಿ ಹಿಂಡುವವರಿಗೂ ಪಾನಮಾಡುವವರಿಗೂ ಈ ರಸವು ಹರ್ಷವನ್ನುಂಟುಮಾಡುವುದು. ಇಂತಹ ರಸವು ಇಂದ್ರನ ಪಾನಾರ್ಥವಾಗಿ ಸಿದ್ಧಪಡಿಸಲ್ಪಡುವುದೆಂದು ಋಷಿಯು ವರ್ಣನೆಮಾಡಿರುವನು. ಈ ವಾಕ್ಯದಲ್ಲಿರುವ ಕೋಶಃ ಎಂಬ ಶಬ್ದವು ಸೋಮರಸವನ್ನು ಸಂಗ್ರಹಿಸಿ ಇಡುವ ದೊಡ್ಡ ಪಾತ್ರೆಯನ್ನು ಸೂಚಿಸುವುದು. ಇದು ಮರದಿಂದ ಅಥವಾ ಚರ್ಮದಿಂದ ಮಾಡಲ್ಪಟ್ಟಿರುವುದು. ಸೋಮರಸವನ್ನು ಹಿಂಡಿ ಶೋಧಿಸಿ ಇದರಲ್ಲಿ ತುಂಬುವರು. ಆದರೆ ಪ್ರಕೃತ ಋಕ್ಕಿನಲ್ಲಿ ಸೋಮರಸವನ್ನು ಸೂಚಿಸುವುದಕ್ಕಾಗಿ ಅದನ್ನು ತುಂಬಿರುವ ಕೋಶಃ ಎಂಬ ಶಬ್ದವನ್ನೇ ಉಪಯೋಗಿಸಲಾಗಿದೆ. **ಪವತೇ । ಪವ ಗತೌ ।** ಹೋಗುತ್ತದೆ ಎಂದರೆ ಜಜ್ಜಿದ ಲತೆಯಿಂದ ಹೊರಡುವ ಸೋಮರಸವು ಹರಿದು ಹೋಗುತ್ತದೆ ಎಂದಭಿಪ್ರಾಯವು, **ವೃಷಭಾನ್ನಾಯ—ಬಲವರ್ಷಕಾಣ್ಯನ್ನಾನಿ ಯಸ್ಯ ಸಃ ತಾದೃಶಾಯ ।** ಶಕ್ತಿವರ್ಧಕವಾದ ಅನ್ನವುಳ್ಳ ಅಥವಾ ಅನ್ನವನ್ನು ಕೊಡುವ ಇಂದ್ರನ ಪಾನಾರ್ಥವಾಗಿ ಎಂದಭಿಪ್ರಾಯವು.

**ವೃಷಣಾ ಅಧ್ವರ್ಯೂ ವೃಷಭಾಸಃ ಅದ್ರಯಃ ವೃಷಣಂ ಸೋಮಂ ವೃಷಭಾಯ ಸುಸ್ವತಿ— ಸೋಮರಸಸೇಚನಸಮರ್ಥಾವಧ್ವರ್ಯುಪ್ರತಿಪ್ರಸ್ಥಾತಾರೌ ವರ್ಷಕಾ ಅಭಿಷವಣಗ್ರಾವಾಣಶ್ಚ ಸ್ವರ್ಗಾದಿ-**

ಫಲಸ್ಯ ಸೇಕ್ತಾರಂ ಸೋಮಂ ದೇವಾನಾಂ ಶ್ರೇಷ್ಠಾಯ ತುಭ್ಯಂ ಸುನ್ವಂತಿ । ಸೋಮರಸವನ್ನು ಹಿಂಡುವುದರಲ್ಲಿ ಸಮರ್ಥರಾದ ಅಥವಾ ಕುಶಲರಾದ ಅಧ್ವರ್ಯು ಮತ್ತು ಪ್ರತಿಪ್ರಸ್ಥಾತೃಗಳೆಂಬ ಋತ್ವಿಜರೂ ಮತ್ತು ಸೋಮರಸವನ್ನು ಹಿಂಡುವುದರಲ್ಲಿ ಸಹಾಯಕವಾದ ಕಲ್ಲುಗಳೂ ಸಹ ಇಷ್ಟಾರ್ಥಪ್ರದವಾದ ಸೋಮರಸವನ್ನು ಇಂದ್ರನಿಗಾಗಿ ಹಿಂಡಿ ಸಿದ್ಧಪಡಿಸುತ್ತಾರೆ ಎಂದಭಿಪ್ರಾಯವು. ಇಲ್ಲಿ ಅಧ್ವರ್ಯೂ ಎಂದು ದ್ವಿವಚನ ಪ್ರಯೋಗವಿರುವುದರಿಂದ ಅಧ್ವರ್ಯು ಮತ್ತು ಅವನ ಸಹಾಯಕನಾದ ಪ್ರತಿಪ್ರಸ್ಥಾತೃ ಎಂಬ ಇಬ್ಬರು ಋತ್ವಿಜರನ್ನು ನಿರ್ದೇಶಿಸಿದೆ ಎಂದು ತಿಳಿಯಬೇಕು. ಮತ್ತು ಸೋಮರಸವನ್ನು ಇಂದ್ರನಿಗಾಗಿ ಹಿಂಡಿ ಸಿದ್ಧಪಡಿಸುವಾಗ ಅದನ್ನು ಹಿಂಡಬಲ್ಲ ಅಧ್ವರ್ಯು ಮತ್ತು ಪ್ರತಿಪ್ರಸ್ಥಾತೃ ಎಂಬ ಋತ್ವಿಕ್ಕುಗಳಿಗೆ ಸೋಮಾಭಿಷವಣಕಾರ್ಯದಲ್ಲಿ ಉಪಯೋಗಿಸುವ ಅದ್ರಯಃ ಅಥವಾ ಗ್ರಾವಾಣಃ ಎಂಬ ಕಲ್ಲುಗಳೂ ಸಹ ಸಹಾಯಕವಾಗಿರುವವು. ಇವುಗಳ ಸಹಾಯದಿಂದ ಋತ್ವಿಜರು ಸೋಮರಸವನ್ನು ಹಿಂಡಿ ಇಂದ್ರನಿಗಾಗಿ ಸಿದ್ಧಪಡಿಸುವರು ಎಂದು ಮುಖ್ಯಾಭಿಪ್ರಾಯವು.

---

ಸಂಹಿತಾಪಾಠಃ

ವೃಷಾ ತೇ ವಜ್ರ ಉತ ತೇ ವೃಷಾ ರಥೋ ವೃಷಣಾ ಹರೀ ವೃಷಭಾಣ್ಯಾಯುಧಾ ।
ವೃಷ್ಣೋ ಮದಸ್ಯ ವೃಷಭ ತ್ವಮೀಶಿಷ ಇಂದ್ರ ಸೋಮಸ್ಯ ವೃಷಭಸ್ಯ ತೃಪ್ಣುಹಿ ॥ ೬ ॥

ಪದಪಾಠಃ

ವೃಷಾ । ತೇ । ವಜ್ರಃ । ಉತ । ತೇ । ವೃಷಾ । ರಥಃ । ವೃಷಣಾ । ಹರೀ ಇತಿ । ವೃಷಭಾಣಿ । ಆಯುಧಾ ।
ವೃಷ್ಣಃ । ಮದಸ್ಯ । ವೃಷಭ । ತ್ವಂ । ಈಶಿಷೇ । ಇಂದ್ರ । ಸೋಮಸ್ಯ । ವೃಷಭಸ್ಯ । ತೃಪ್ಣುಹಿ ॥ ೬ ॥

ಸಾಯಣಭಾಷ್ಯಂ

ವೃಷಭ ಕಾಮಾನಾಂ ವರ್ಷಕ ಹೇ ಇಂದ್ರ ತೇ ತವ ವಜ್ರೋ ವೃಷಾ ಕಾಮವರ್ಷಕಃ । ತಥಾ ತೇ ರಥೋಽಪಿ ವೃಷಾ । ತೇ ಹರೀ ಏತನ್ನಾಮಕಾವಶ್ವೌ ವೃಷಣಾ ವರ್ಷಕೌ । ತವಾಯುಧಾ ವಜ್ರವ್ಯತಿರಿಕ್ತಾನ್ಯಾಯುಧಾನ್ಯಪಿ ವೃಷಭಾಣಿ । ವೃಷ್ಣೋ ವರ್ಷಕಸ್ಯ ಮದಸ್ಯ ಮದಕರಸ್ಯ ಸೋಮಸ್ಯ ತ್ವಮೇವೇಶಿಷೇ । ಸ್ವಾಮೀ ಭವಸಿ । ಹೇ ಇಂದ್ರ ವೃಷಭಸ್ಯ ವರ್ಷಕೇಣ ಸೋಮಸ್ಯ ಸೋಮೇನ ತೃಪ್ಣುಹಿ । ತೃಪ್ತೋ ಭವ॥ ತೃಪ ಪ್ರೀಣನೇ ಸ್ವಾದಿಃ । ಕ್ಷುಭ್ನಾದಿಷು । ಪಾ. ೮-೪-೩೯ । ಶ್ನಮನತೃಪ್ನೋತೀತಿ ಪಠಿತಂ । ತಥಾಪಿ ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದತ್ರ ಣತ್ವಪ್ರತಿಷೇಧೋ ನ ಭವತಿ ॥

## ಪ್ರತಿಪದಾರ್ಥ

ವೃಷಭ—ಇಷ್ಟಾರ್ಥಪ್ರದನಾದ ಎಲೈ ಇಂದ್ರನೇ । ತೇ—ನಿನ್ನ । ವಜ್ರಃ—ವಜ್ರಾಯುಧವು । ವೃಷಾ—ಕಾಮವರ್ಷಕವಾದದ್ದು । ಉತ—ಮತ್ತು । ತೇ—ನಿನ್ನ । ರಥಃ—ರಥವೂ ಸಹ । ವೃಷಾ—ಕಾಮವರ್ಷಕವಾದದ್ದು । ಹರೀ—ಹರಿಯೆಂಬ ನಿನ್ನ ಅಶ್ವಗಳೂ । ವೃಷಣಾ—ಫಲವರ್ಷಣಕ್ಕೆ ಸಮರ್ಥವಾಗಿವೆ । ಆಯುಧಾ—ಇತರ ಆಯುಧಗಳೂ । ವೃಷಭಾಣಿ—ಸಮರ್ಥವಾದವಾಗಿವೆ । ವೃಷ್ಣಃ—ವರ್ಷಕವಾದದ್ದೂ । ಮದಸ್ಯ—ಮದಕರವಾದದ್ದೂ ಆದ ಸೋಮಕ್ಕೆ । ತ್ವಂ—ನೀನೇ । ಈಶಿಷೇ—ಪ್ರಭುವಾಗಿದ್ದೀಯೆ । ಇಂದ್ರ—ಇಂದ್ರನೇ । ವೃಷಭಸ್ಯ—ಸೇಚನಸಾಮರ್ಥ್ಯವುಳ್ಳ । ಸೋಮಸ್ಯ—ಸೋಮದ ಪಾನದಿಂದ । ತೃಪ್ಣುಹಿ—ತೃಪ್ತನಾಗು.

## ಭಾವಾರ್ಥ

ಇಷ್ಟಾರ್ಥಪ್ರದನಾದ ಎಲೈ ಇಂದ್ರನೇ, ನಿನ್ನ ವಜ್ರಾಯುಧವು ಕಾಮವರ್ಷಕವಾದದ್ದು. ಮತ್ತು ನಿನ್ನ ರಥವೂ ಸಹ ಕಾಮವರ್ಷಕವಾದದ್ದು. ಹರಿಯೆಂಬ ನಿನ್ನ ಅಶ್ವಗಳೂ ಫಲವರ್ಷಣಕ್ಕೆ ಸಮರ್ಥವಾಗಿವೆ. ಅದರಂತೆಯೇ ಇತರ ಆಯುಧಗಳೂ ಶಕ್ತಿಯುತವಾಗಿವೆ. ವರ್ಷಕವಾದದ್ದೂ, ಮದಕರವಾದದ್ದೂ ಆದ ಸೋಮಕ್ಕೆ ನೀನೇ ಪ್ರಭುವಾಗಿದ್ದೀಯೆ. ಎಲೈ ಇಂದ್ರನೇ, ಸೇಚನಸಾಮರ್ಥ್ಯವುಳ್ಳ ಸೋಮದ ಪಾನದಿಂದ ತೃಪ್ತನಾಗು.

## English Translation

Your thunderbolt, Indra, is the rainer (of bounties): your chariot, the showerer (of blessings); your two horses, the shedders (of desires); your weapons, the diffusers (of wishes); you reign, showerer (of benefits), over the inebriating beverage, the sprinkler (of delight): satiate yourself, Indra, with the good-diffusing Soma.

## ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಇಂದ್ರನ ವಜ್ರಾಯುಧವೂ, ರಥವೂ, ಹರೀ ಎಂಬ ಇಂದ್ರನ ಎರಡು ಕುದುರೆಗಳೂ, ಇಂದ್ರನ (ವಜ್ರಾಯುಧವಲ್ಲದ) ಇತರ ಆಯುಧಗಳೂ ಸಹ ಸ್ತೋತ್ರಮಾಡುವವರಿಗೆ ಇಷ್ಟಾರ್ಥಫಲಪ್ರದವಾದವುಗಳು ಎಂದು ಋಷಿಯು ವರ್ಣಿಸಿ, ಇಂತಹ ಇಂದ್ರನಾದ ನೀನು ಸರ್ವಫಲಪ್ರದವಾದ ಸೋಮರಸಕ್ಕೂ ಪ್ರಭುವಾಗಿದ್ದೀಯೆ. ಆದುದರಿಂದ ನಾವು ಹಿಂಡಿ ಸಿದ್ಧಪಡಿಸಿರುವ ಉತ್ತಮವಾದ ಈ ಸೋಮರಸವನ್ನು ಪಾನಮಾಡಿ ತೃಪ್ತನಾಗು ಎಂದು ಋಷಿಯು ಇಂದ್ರನನ್ನು ಪ್ರಾರ್ಥಿಸಿರುವನು.

ಸಂಹಿತಾಪಾಠಃ

ಪ್ರ ತೇ ನಾವಂ ನ ಸಮನೇ ವಚಸ್ಯುವಂ ಬ್ರಹ್ಮಣಾ ಯಾಮಿ ಸವನೇಷು
ದಾಧೃಷಿಃ ।
ಕುವಿನ್ನೋ ಅಸ್ಯ ವಚಸೋ ನಿಬೋಧಿಷದಿಂದ್ರಮುತ್ಸಂ ನ ವಸುನಃ ಸಿಚಾ-
ಮಹೇ ॥ ೭ ॥

ಪದಪಾಠಃ

ಪ್ರ । ತೇ । ನಾವಂ । ನ । ಸಮನೇ । ವಚಸ್ಯುವಂ । ಬ್ರಹ್ಮಣಾ । ಯಾಮಿ । ಸವನೇಷು । ದಧೃಷಿಃ ।

ಕುವಿತ್ । ನಃ । ಅಸ್ಯ । ವಚಸಃ । ನಿಽಬೋಧಿಷತ್ । ಇಂದ್ರಂ । ಉತ್ಸಂ । ನ । ವಸುನಃ । ಸಿಚಾಮಹೇ ॥

ಸಾಯಣಭಾಷ್ಯಂ

ದಾಧೃಷಿಸ್ತ್ವತ್ಪ್ರಸಾದಾಚ್ಛತ್ರೂಣಾಂ ಧರ್ಷಕೋಽಹಂ ಸಮನೇ ಸಂಗ್ರಾಮೇ ವಚಸ್ಯುವಂ॥ ಅಮಿ ತನ್ವಾದಿತ್ವಾದುವಜಾದೇಶಃ ॥ ಸ್ತೋತ್ರಮಿಚ್ಛಂತಂ ನಾವಂ ನ ನಾವಮಿವಾಪದ್ಭ್ಯಸ್ತಾರಕಂ ತೇ ತ್ವಾಂ ಸವನೇಷು ತ್ರಿಷು ಬ್ರಹ್ಮಣಾ ಸ್ತೋತ್ರೇಣ ಪ್ರಯಾಮಿ । ಪ್ರಾಪ್ನೋಮಿ । ಕಿಂಚ ಅಸ್ಯ ವಚಸಃ । ಸ್ತುತಿಲಕ್ಷಣಮೇತದ್ವಾಕ್ಯಂ । ಕುವಿದ್ಬಹು ನಿಬೋಧಿಷತ್ । ಇಂದ್ರೋ ನಿತರಾಂ ಬುಧ್ಯತಾಂ ॥ ಬುಧ ಅವಗಮನೇ । ಲೇಟಿ ಸಿಬ್ಬಹುಲಮಿತಿ ಸಿಪ್ । ಕುವಿದ್ಯೋಗಾದನಿಘಾತಃ ॥ ತಿಙಃ ಚೋದಾತ್ತವತೀತಿ ಗತೇರ್ನಿಘಾತಃ ॥ ವಯಂ ಚೋತ್ಸಂ ನ ಜಲಸ್ಯ ನಿಧಾನಭೂತಂ ಕೂಪಮಿವ ವಸುನೋ ನಿಧಾನಭೂತ-ಮಿಂದ್ರಂ ಸಿಚಾಮಹೇ । ಸೋಮೇನ ಸಿಂಚಾಮಃ ॥ ಸಿಚಿರ್ ಕ್ಷರಣೇ ಸ್ವರಿತೇತ್ । ಆಗಮಾನುಶಾಸನಸ್ಯಾ-ನಿತ್ಯತ್ವಾನ್ನುಮಭಾವಃ ॥

ಪ್ರತಿಪದಾರ್ಥ

ದಾಧೃಷಿಃ—(ನಿನ್ನ ಅನುಗ್ರಹದಿಂದ) ಶತ್ರುಧರ್ಷಕನಾದ ನಾನು । ಸಮನೇ—ಸಂಗ್ರಾಮದಲ್ಲಿ । ವಚ-ಸ್ಯುವಂ—ಸ್ತೋತ್ರವನ್ನು ಇಚ್ಛಿಸುವವನೂ । ನಾವಂ ನ—ದೋಣಿಯಂತೆ ಆಪತ್ತಿನಿಂದ ದಾಟಿಸುವವನೂ ಆದ । ತೇ ನಿನ್ನನ್ನು । ಬ್ರಹ್ಮಣಾ—ಸ್ತೋತ್ರದಿಂದ । ಸವನೇಷು—ಮೂರು ಸವನಕಾಲಗಳಲ್ಲಿಯೂ ಸಹ । ಪ್ರ ಯಾಮಿ—ಸಮೀಪಿಸುತ್ತೇನೆ । ನಃ—ನಮ್ಮ । ಅಸ್ಯ ವಚಸಃ—ಸ್ತುತಿರೂಪವಾದ ಈ ವಾಕ್ಯವನ್ನು । ಕುವಿತ್—ಪದೇಪದೇ । ನಿಬೋಧಿಷತ್—(ಇಂದ್ರನು) ಗಮನಿಸಿ ತಿಳಿಯಲಿ । ಉತ್ಸಂ ನ—ಜಲಾಶ್ರಯವಾದ ಕೂಪದಂತೆ । ವಸುನಃ—ಧನಕ್ಕೆ ನಿಧಾನಭೂತವಾದ । ಇಂದ್ರಃ—ಇಂದ್ರನನ್ನು । ಸಿಚಾಮಹೇ—ಸೋಮಾರ್ಪಣೆಯಿಂದ ಪೂಜಿ ಸುತ್ತೇವೆ.

### ಭಾವಾರ್ಥ

ಎಲೈ ಇಂದ್ರನೇ, ನಿನ್ನ ಅನುಗ್ರಹದಿಂದ ಶತ್ರುಧರ್ಷಕನಾದ ನಾನು ಸಂಗ್ರಾಮದಲ್ಲಿ ಸ್ತೋತ್ರವನ್ನು ಇಚ್ಛಿಸುವವನೂ, ದೋಣಿಯಂತೆ ಆಪತ್ತಿನಿಂದ ದಾಟಿಸುವವನೂ ಆದ ನಿನ್ನನ್ನು ಸವನತ್ರಯದಲ್ಲಿಯೂ ಸ್ತುತಿಯ ಮೂಲಕ ಸಮೀಪಿಸುತ್ತೇನೆ. ನಮ್ಮ ಸ್ತುತಿರೂಪವಾದ ಈ ವಾಕ್ಯವನ್ನು ಪದೇಪದೇ ಇಂದ್ರನು ಗಮನಿಸಿ ತಿಳಿಯಲಿ. ಜಲಾಶ್ರಯವಾದ ಕೂಪದಂತೆ ಧನಕ್ಕೆ ನಿಧಾನಭೂತವಾದ ಇಂದ್ರನನ್ನು ಸೋಮಾರ್ಪಣೆಯಿಂದ ಪೂಜಿಸುತ್ತೇವೆ.

### English Translation

Victorious in battle, (through) your (favour) I approach you, who are gratified by praise, in sacred rites with prayer, as a boat (to bear me over misfortune): may Indra listen attentively to these our words: we pour out libations to Indra, (who is a receptacle) of treasure, as a well (is of water).

### ವಿಶೇಷವಿಷಯಗಳು

**ಸಮನೇ—ಸಮನಂ** ಎಂಬ ಶಬ್ದವು ಸಂಗ್ರಾಮನಾಮಗಳಲ್ಲಿ ಪಠಿತವಾಗಿದೆ. (ನಿ. ೨-೯) ಮತ್ತು ಯಾಸ್ಕರು—**ಸಮನಂ ಸಮನನಾದ್ವಾ ಸಂಮಾನನಾದ್ವಾ** । ಎಂದೂ ನಿರ್ವಚನವನ್ನು ಹೇಳಿದ್ದಾರೆ. ಈ ವಿಷಯದಲ್ಲಿ—

**ಅಭಿ ಪ್ರವಂತ ಸಮನೇವ ಯೋಷಾಃ ಕಲ್ಯಾಣ್ಯಃಸ್ಮಯಮಾನಾಸೋ ಅಗ್ನಿಂ** ।

(ಋ. ಸಂ. ೪-೫೮-೮)

ಎಂಬ ಋಕ್ಕನ್ನುದಾಹರಿಸಿ-**ಸಮನಸಃ ಸಮಾನಮನಸಃ । ಏಕಸ್ಮಿನ್ ಭರ್ತರಿ ಯಾಸಾಂ ಮನಾಂಸಿ ವರ್ತಂತೇ ತಾಃ ಸಮನಸಃ** । ಒಂದೇ ವಿಧವಾದ ಮನಸ್ಸುಳ್ಳವರು. ಒಬ್ಬನೇ ಆದ ಪತಿಯಲ್ಲಿ ಅವನ ಅನೇಕಪತ್ನಿಯರು ಒಂದೇ ವಿಧವಾದ ಮನಸ್ಸನ್ನು ಎಂದರೆ ಪ್ರೀತಿವಿಶ್ವಾಸಗಳನ್ನು ಇಟ್ಟಿರುವರು. ಅಂತಹ ಪತ್ನಿಯರಿಗೆ ಸಮನಸಃ ಸಮಾನವಾದ ಮನಸ್ಸುಳ್ಳವರು ಎಂದು ಸಮನ ಶಬ್ದಕ್ಕೆ ಇನ್ನೊಂದು ವಿಧವಾದ ಅರ್ಥವನ್ನು ಹೇಳಿರುವರು. ಪ್ರಕೃತ ಋಕ್ಕಿನಲ್ಲಿ ಸಮನ ಶಬ್ದಕ್ಕೆ ಸಂಗ್ರಾಮ ಎಂದರೆ ಯುದ್ಧವೆಂದರ್ಥವು.

**ನಾವಂ ನ**—ನಾವೆಯಿಂದ ಎಂದರೆ ದೋಣಿಯಿಂದ ನದಿಯನ್ನು ದಾಟುವಂತೆ ಆಪತ್ತುಗಳನ್ನು ದಾಟಿಸುವ ಎಂದಭಿಪ್ರಾಯವು.

**ಕುವಿತ್**—ಇದು ನಿಪಾತವು (ಅವ್ಯಯವು) ಈ ಶಬ್ದವು ಬಹುನಾಮಗಳಲ್ಲಿ (ನಿ. ೩-೧೩) ಪಠಿತವಾಗಿರುವುದರಿಂದ ಕುವಿಕ್ ಎಂದರೆ ಬಹಳವಾಗಿ ಅನೇಕಾವರ್ತಿ ಎಂದರ್ಥವು.

**ಉತ್ಸಂ—ಕೂಪಂ** । ಉತ್ಸಶಬ್ದವು ಕೂಪನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೯) ಉತ್ಸವೆಂದರೆ ಭಾವಿಯು. ಇದಲ್ಲದೆ ಉತ್ಸಶಬ್ದಕ್ಕೆ ಮೇಘವೆಂದೂ ಅರ್ಥವಾಗುವುದು. ಈ ವಿಷಯದಲ್ಲಿ ಯಾಸ್ಕರು **ಉತ್ಸ ಉತ್ಸರಣಾದ್ವೋತ್ಸದನಾದ್ವೋತ್ಸ್ಯಂದನಾದ್ವೋನತ್ತೇರ್ವಾ** ಎಂದು ನಿರ್ವಚನವನ್ನು ಹೇಳಿರುವರು (ನಿ. ೧೦-೧೦) ಇದಕ್ಕೆ ವ್ಯಾಖ್ಯಾಕಾರರಾದ ದುರ್ಗಾಚಾರ್ಯರು—

ಉತ್ಸಃ ಮೇಘಃ । ಸ ಕಸ್ಮಾತ್ । ಉತ್ಸದನಾದ್ವಾ ಉತ್ಪೂರ್ವಸ್ಯ ಸದೇಃ ಊರ್ಧ್ವಮಸೌ ಸನ್ನ ಇತ್ಯುತ್ಸಃ ॥ ಉತ್ಸ್ಯಂದನಾದ್ವಾ ಉತ್ಪೂರ್ವಸ್ಯ ವಾ ಸ್ಯಂದತೇಃ ಉಪರ್ಯೇಸಾವವಸ್ಥಿತಃ ಸ್ಯಂದತೀತ್ಯುತ್ಸಃ ॥ ಉನತ್ತೇರ್ವಾ ಉಂದೀ ಕ್ಲೇದನೇ ಇತ್ಯಸ್ಯ ಕ್ಲೇದಯತ್ಯಸೌ ॥

ಎಂದು ಅರ್ಥವಿವರಣೆಮಾಡಿದ್ದಾರೆ. ಎಂದರೆ—

(೧) ಉತ್ ಎಂಬ ಉಪಸರ್ಗಪೂರ್ವಕವಾದ ಸೃ-ಸರಿ ಎಂಬ ಧಾತುವಿನಿಂದ ನಿಷ್ಪನ್ನವಾದ ಉತ್ಸಶಬ್ದಕ್ಕೆ ಮೇಲೆ ಎಂದರೆ ಅಂತರಿಕ್ಷದಲ್ಲಿ ಸಂಚರಿಸುವುದರಿಂದ ಉತ್ಸವೆಂದರೆ ಮೇಘವು,

(೨) ಅಥವಾ ಉತ್ ಎಂಬ ಉಪಸರ್ಗಪೂರ್ವಕವಾದ ಸದ್ ಧಾತುವಿನಿಂದ ಉತ್ಸಶಬ್ದವು ನಿಷ್ಪನ್ನವಾಗುವುದಾದರೆ ಆಗ ಅಂತರಿಕ್ಷದಲ್ಲಿ ಇರುವುದರಿಂದ ಉತ್ಸಶಬ್ದಕ್ಕೆ ಮೇಘವೆಂದರ್ಥವು,

(೩) ಅಥವಾ ಉತ್ ಎಂಬ ಉಪಸರ್ಗಸಹಿತವಾದ ಸ್ಯಂದತಿ ಧಾತುವಿನಿಂದ ಉತ್ಸಶಬ್ದವು ನಿಷ್ಪನ್ನವಾಗುವುದಾದರೆ ಆಗ ಮೇಲೆ (ಅಂತರಿಕ್ಷದಲ್ಲಿ) ಸ್ಥಿರವಾಗಿ ನಿಂತಿರುವುದರಿಂದ ಉತ್ಸವೆಂದರೆ ಮೇಘವು.

(೪) ಅಥವಾ ಉಂದೀ-ಕ್ಲೇದನೇ, ನೆನಯಿಸು ಎಂಬ ಧಾತುವಿನಿಂದ ಉತ್ಸಶಬ್ದವು ಉತ್ಪನ್ನವಾಗುವುದಾದರೆ ಅಂತರಿಕ್ಷದಲ್ಲಿ ನೆನೆಯಿಸುವ ಸ್ವಭಾವವುಳ್ಳ ಜಲದಿಂದ ಸಹಿತವಾಗಿರುವುದರಿಂದ ಉತ್ಸಶಬ್ದಕ್ಕೆ ಮೇಘವೆಂದರ್ಥವು.

ಎಂದು ಉತ್ಸಶಬ್ದಕ್ಕೆ ನಾಲ್ಕುವಿಧವಾದ ನಿರ್ವಚನವನ್ನು ಹೇಳಿರುವರು. ಪ್ರಕೃತ ಋಕ್ಕಿನಲ್ಲಿ ಉತ್ಸವೆಂದರೆ ಭಾವಿಯು. ಈ ಅರ್ಥದಲ್ಲಿ ಈ ಶಬ್ದವು ಉತ್‌ಪೂರ್ವಕವಾದ ಸೃಧಾತುವಿನಿಂದ ನಿಷ್ಪನ್ನವಾಗಿ ಇದರಲ್ಲಿ ಜಲವು ತಳದಿಂದ ಉಕ್ಕಿ ಮೇಲಕ್ಕೆ ಬರುವುದರಿಂದ ಉತ್ಸವೆಂದರೆ ಭಾವಿಯೆಂದರ್ಥವನ್ನು ಕೊಡುವುದು.

---

ಸಂಹಿತಾಪಾಠಃ

ಪುರಾ ಸಂಬಾಧಾದಭ್ಯಾ ವವೃತ್ಸ್ವ ನೋ ಧೇನುರ್ನ ವತ್ಸಂ ಯವಸಸ್ಯ ಪಿಪ್ಯುಷೀ ।

ಸಕೃತ್ಸು ತೇ ಸುಮತಿಭಿಃ ಶತಕ್ರತೋ ಸಂ ಪತ್ನೀಭಿರ್ನ ವೃಷಣೋ ನಸೀಮಹಿ ॥ ೮ ॥

ಪದಪಾಠಃ

ಪುರಾ । ಸಂಽಬಾಧಾತ್ । ಅಭಿ । ಆ । ವವೃತ್ಸ್ವ । ನಃ । ಧೇನುಃ । ನ । ವತ್ಸಂ । ಯವಸಸ್ಯ । ಪಿಪ್ಯುಷೀ । ಸಕೃತ್ । ಸು । ತೇ । ಸುಮತಿಽಭಿಃ । ಶತಕ್ರತೋ ಇತಿ ಶತಽಕ್ರತೋ । ಸಂ । ಪತ್ನೀಭಿಃ । ನ । ವೃಷಣಃ । ನಸೀಮಹಿ ॥ ೮ ॥

ಸಾಯಣಭಾಷ್ಯಂ

ಹೇ ಇಂದ್ರ ಸಂಬಾಧಾತ್ ಶತ್ರುಜನ್ಯಾತ್ಸಂಬಾಧಾತ್ ಪುರಾ ನೋಽಸ್ಮಾನಭ್ಯಾವವೃತ್ಸ್ವ । ಆವರ್ತಯ । ಯಥಾ ಸಂಬಾಧೋಽಸ್ಮಾನ್ ನ ಸ್ಪೃಶತಿ ತಥಾ ಕುರ್ವಿತ್ಯರ್ಥಃ । ತತ್ರ ದೃಷ್ಟಾಂತಃ । ಧೇನುರ್ನ ವತ್ಸಂ । ಯಥಾ ಯವಸಸ್ಯ ಘಾಸೇನ ಪಿಪ್ಯುಷ್ಯಾಪ್ಯಾಯಿತಾ ಧೇನುರ್ವತ್ಸಂ ಕ್ಷುದ್ಬಾಧಾತ್ಪರಾವರ್ತಯತಿ ತದ್ವತ್ । ಹೇ ಶತಕ್ರತೋ ವಯಂ ಸುಮತಿಭಿಸ್ತ್ವದ್ವಿಷಯೈಃ ಶೋಭನೈಃ ಸ್ತೋತ್ರೈಃ ಸಕೃತ್ ಸಕೃದಪಿ ಸು ನಸೀಮಹಿ । ಸುಷ್ಠು ವ್ಯಾಪ್ನುಯಾಮಹಿ । ತತ್ರ ದೃಷ್ಟಾಂತಃ । ವೃಷಣೋ ನ । ಸೇಕ್ತಾರೋ ಯುವಾನೋ ಯಥಾ ಪತ್ನೀಭಿರ್ವ್ಯಾಪ್ಯಂತೇ ತದ್ವತ್ ॥

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । ಯವಸಸ್ಯ—ತೃಣದ ಭಕ್ಷಣದಿಂದ । ಪಿಪ್ಯುಷೀ—ತೃಪ್ತವಾದ । ಧೇನುಃ—ಹಸುವು । ವತ್ಸಂ ನ—ತನ್ನ ವತ್ಸವನ್ನು ಹಸಿವಿನ ಬಾಧೆಯಿಂದ ರಕ್ಷಿಸುವಂತೆ । ಸಂಬಾಧಾತ್—ಶತ್ರುಜನ್ಯವಾದ ಬಾಧೆಯಿಂದ । ಪುರಾ—ನಮಗೆ ಅದು ಸಂಭವಿಸುವುದಕ್ಕೆ ಮೊದಲೇ । ನಃ—ನಮ್ಮನ್ನು । ಅಭ್ಯಾ ವವೃತ್ಸ್ವ—ಹಿಂತಿರುಗಿಸಿ ರಕ್ಷಿಸು । ಶತಕ್ರತೋ—ಎಲೈ ಇಂದ್ರನೇ । (ವಯಂ—ನಾವು) । ಸುಮತಿಭಿಃ—ನಿನ್ನನ್ನು ಸ್ತುತಿಸತಕ್ಕ ಶ್ರೇಷ್ಠವಾದ ಸ್ತೋತ್ರಗಳಿಂದ । ವೃಷಣಃ—ಸೇಚನಸಾಮರ್ಥ್ಯವುಳ್ಳ ಪುರುಷರು । ಪತ್ನೀಭಿಃ ನ—ಪತ್ನಿಯರಿಂದ ಆಲಿಂಗಿಸಿ ಕೊಳ್ಳಲ್ಪಡುವಂತೆ । ಸಕೃತ್—ಕೆಲವು ಸಲವಾದರೂ । ತೇ ಸಂ ನಸೀಮಹಿ—ಅತಿಶಯವಾಗಿ ನಿನ್ನ ಸಾನ್ನಿಧ್ಯಸುಖವನ್ನನುಭವಿಸುತ್ತೇವೆ.

ಭಾವಾರ್ಥ

ಎಲೈ ಇಂದ್ರನೇ, ತೃಣದ ಭಕ್ಷಣದಿಂದ ತೃಪ್ತವಾದ ಧೇನುವು ತನ್ನ ವತ್ಸವನ್ನು ಹಸಿವಿನ ಬಾಧೆಯಿಂದ ರಕ್ಷಿಸುವಂತೆ ಶತ್ರುಜನ್ಯವಾದ ಬಾಧೆಯಿಂದ ನಮಗೆ ಅದು ಸಮೀಪಿಸುವುದಕ್ಕೆ ಮೊದಲೇ ನಮ್ಮನ್ನು ರಕ್ಷಿಸು. ಎಲೈ ಇಂದ್ರನೇ, ನಿನ್ನನ್ನು ಸ್ತುತಿಸತಕ್ಕ ಶ್ರೇಷ್ಠವಾದ ಸ್ತೋತ್ರಗಳಿಂದ ಸೇಚನಸಾಮರ್ಥ್ಯವುಳ್ಳ ಪುರುಷರು ಪತ್ನಿಯರಿಂದ ಆಲಿಂಗಿಸಿಕೊಳ್ಳಲ್ಪಡುವಂತೆ ಕೆಲವು ಸಲವಾದರೂ ಸಹ ಅತಿಶಯವಾಗಿ ನಿನ್ನ ಸಾನ್ನಿಧ್ಯಸುಖವನ್ನನ್ನುಭವಿಸುತ್ತೇವೆ.

English Translation

Conduct us beforehand away from evil, as a cow grazing in a meadow leads her calf (out of peril) : may we, Shatakratu, envelop you, if but once, with acceptable praises, as youthful husbands (are embraced) by their wives.

ವಿಶೇಷವಿಷಯಗಳು

(ಹೇ ಇಂದ್ರ) ಪುರಾ ಸಂಬಾಧಾತ್ ನಃ ಅಭಿ ಆ ವವೃತ್ಸ್ವ—ಶತ್ರುಜನ್ಯಸಂಬಾಧಾತ್ ಪುರಾ ಅಸ್ಮಾನಾವರ್ತಯ । ಯಥಾ ಸಂಬಾಧೋಽಸ್ಮಾನ್ ನ ಸ್ಪೃಶತಿ ತಥಾ ಕುರ್ವಿತ್ಯರ್ಥಃ । ಎಲೈ ಇಂದ್ರನೇ, ಶತ್ರುಗಳ ಬಾಧೆಯು ನಮ್ಮ ಸಮೀಪಕ್ಕೆ ಬಂದು ನಮಗೆ ತೊಂದರೆಯನ್ನುಂಟುಮಾಡುವುದಕ್ಕೆ ಮೊದಲೇ ನಮ್ಮನ್ನು ರಕ್ಷಿಸು.

ಶತ್ರುಗಳ ಬಾಧೆಯು ನಮ್ಮನ್ನು ಆವರಿಸಿ ನಾವು ಕಷ್ಟಪಡುತ್ತಿರುವಾಗ ಅದನ್ನು ಪರಿಹರಿಸುವುದಕ್ಕಿಂತ ಶತ್ರುಬಾಧೆಯು ಬರದಂತೆ ಮೊದಲೇ ಅದನ್ನು ತಡೆದು ನಮ್ಮ ಸಮೀಪಕ್ಕೆ ಬರದಂತೆ ಮಾಡಿ ನಮ್ಮನ್ನು ಕಾಪಾಡಬೇಕೆಂಡು ಪ್ರಾರ್ಥಿಸಿದೆ. ಈ ವಿಷಯದಲ್ಲಿ ಒಂದು ದೃಷ್ಟಾಂತವೂ ಉಕ್ತವಾಗಿದೆ—

**ಧೇನುಃ ನ ವತ್ಸಂ ಯವಸಸ್ಯ ಪಿಪ್ಯುಷೀ—ಯಥಾ ಯವಸಸ್ಯ ಘಾಸೇನ ಪಿಪ್ಯುಷ್ಯಾಪಾಯಿತಾ ಧೇನುರ್ವತ್ಸಂ ಕ್ಷುದ್ಬಾಧಾತ್ಪರಾವರ್ತಯತಿ ತದ್ವತ್** । ಹಸುವು ಪುಷ್ಟಿಯಾದ ಹುಲ್ಲನ್ನು ಚೆನ್ನಾಗಿ ಮೇದು ಅದರಿಂದ ತೃಪ್ತವಾಗಿ ತನ್ನ ಕರುವಿಗೆ ಹಾಲನ್ನು ಕೊಟ್ಟು ಯಾವರೀತಿ ರಕ್ಷಿಸುವುದೋ ಅದರಂತೆ ಇಂದ್ರನಾದ ನೀನು ನಮ್ಮ ಸ್ತೋತ್ರಗಳಿಂದ ತೃಪ್ತನಾಗಿ ನಮ್ಮನ್ನು ಶತ್ರುಬಾಧೆಯಿಂದ ರಕ್ಷಿಸಬೇಕೆಂದು ಪ್ರಾರ್ಥನೆಮಾಡಲಾಗಿದೆ.

**ಸಕೃತ್ ಸು ತೇ ಸುಮತಿಭಿಃ ಶತಕ್ರತೋ**—ಎಲೈ ಇಂದ್ರನೇ, ಉತ್ತಮವಾದ ಸ್ತೋತ್ರಗಳಿಂದ ನಾವು ನಿನ್ನನ್ನು ಒಂದುಸಲವಾದರೂ ಚೆನ್ನಾಗಿ ಸ್ತುತಿಸುವಂತೆ ಅನುಗ್ರಹಿಸು ಎಂದಭಿಪ್ರಾಯವು. ಈ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಹೇಳಿದೆ—

**ಸಂ ಪತ್ನೀಭಿಃ ನ ವೃಷಣಃ**—ಸೇಚನಸಮರ್ಥನಾದ । ಎಂದರೆ ವೀರ್ಯಪುಷ್ಟಿಯುಳ್ಳ ಯುವಕನು ತನ್ನ ಪತ್ನಿಯರಿಂದ ಯಾವರೀತಿ ಆಲಿಂಗನಾದಿಗಳಿಂದ ಸೇವಿಸಲ್ಪಡುವನೋ ಅದರಂತೆ ನಾವೂ ಸಹ ಸ್ತೋತ್ರಾದಿಗಳಿಂದ ನಿನ್ನನ್ನು (ಇಂದ್ರನನ್ನು) ಭಜಿಸುವೆವು ಎಂದಭಿಪ್ರಾಯವು.

**ಸುಮತಿಭಿಃ**—ಸುಮತಿಶಬ್ದದ ಅರ್ಥವಿವರಣೆ ಮತ್ತು ನಿರ್ವಚನಾದಿಗಳು ಋ. ಸಂ. ಭಾಗ ೬-೪೧೩, ೧೩-೧೯೩. ರಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ.

**ಶತಕ್ರತೋ**—ಶತಕ್ರತುಶಬ್ದವು ಸಾಧಾರಣವಾಗಿ ಇಂದ್ರನಿಗೆ ವಿಶೇಷಣವಾಗಿಯೇ, ಇಂದ್ರನೆಂಬ ಅರ್ಥ ದಲ್ಲಿಯೇ ಉಪಯೋಗಿಸಲ್ಪಡುವುದು ರೂಢಿಯಾಗಿದೆ. ಪುರಾಣಾದಿಗಳಲ್ಲಿ ಕ್ರತುಶಬ್ದಕ್ಕೆ ಯಜ್ಞವೆಂದು ಅರ್ಥಮಾಡಿ ಶತಕ್ರತುವೆಂದರೆ ನೂರು ಯಜ್ಞಗಳನ್ನು ಮಾಡಿದವನು ಎಂದರೆ ಇಂದ್ರನೆಂದು ಅರ್ಥವಿವರಣೆಮಾಡಿದೆ. ಎಂದರೆ ನೂರು ಯಜ್ಞಗಳನ್ನು ಮಾಡಿದ ಮಹಾಪುರುಷನು ಮಾತ್ರವೇ ಇಂದ್ರಪದವಿಗೆ ಅರ್ಹನೆಂದೂ ಆದುದರಿಂದ ಈಗಿರುವ ಇಂದ್ರನು ಹಿಂದೆ ನೂರು ಯಜ್ಞಗಳನ್ನು ಮಾಡಿ ಅದರ ಫಲವಾಗಿ ಇಂದ್ರಪದವಿಯನ್ನು ಪಡೆದು ಅದನ್ನು ಅನುಭವಿಸು ತ್ತಿರುವನೆಂದೂ ಇತಿಹಾಸವು ಅಲ್ಲಲ್ಲಿ ವರ್ಣಿತವಾಗಿದೆ. ಆದರೆ ಋಗ್ವೇದದಲ್ಲಿ ಆ ವಿಧವಾದ ಅರ್ಥವಿವರಣೆಗೆ ಅವಕಾಶ ವಿರುವಂತೆ ಕಾಣುವುದಿಲ್ಲ. ಕ್ರತುಶಬ್ದಕ್ಕೆ—ಕರ್ಮ, ಕಾರ್ಯ ಎಂದು ಯಾಸ್ಕರ ವಚನವಿರುವುದರಿಂದ ಶತಕ್ರತು ವೆಂದರೆ ನೂರು ಅಥವಾ ಅನೇಕ ಸಾಹಸಕಾರ್ಯಗಳನ್ನು ಮಾಡಿದವನೆಂಬ ಅರ್ಥವು ಬೋಧ್ಯವಾಗುವುದು. ಇಂದ್ರನು ವೃತ್ರವಧಾದಿ ಅನೇಕ ಸಾಹಸಕಾರ್ಯಗಳನ್ನು ಮಾಡಿರುವುದರಿಂದ ಶತಕ್ರತು ಶಬ್ದವು. (ಅನೇಕ ಸಾಹಸಕೃತ್ಯಗಳನ್ನು ಮಾಡಿದವನೆಂಬರ್ಥದಲ್ಲಿ) ಇಂದ್ರನ ಪರವಾಗಿಯೇ ಉಪಯೋಗಿಸಲ್ಪಡುವುದು ರೂಢಿಯಾಗಿದೆ.

ಸಂಹಿತಾಪಾಠಃ

ನೂನಂ ಸಾ ತೇ ಪ್ರತಿ ವರಂ ಜರಿತ್ರೇ ದುಹೀಯದಿಂದ್ರ ದಕ್ಷಿಣಾ ಮಘೋನೀ ।
ಶಿಕ್ಷಾ ಸ್ತೋತೃಭ್ಯೋ ಮಾತಿ ಧಗ್ಭಗೋ ನೋ ಬೃಹದ್ವದೇಮ ವಿದಥೇ ಸುವೀರಾಃ ॥ ೯ ॥

ಪದಪಾಠಃ

ನೂನಂ । ಸಾ । ತೇ । ಪ್ರತಿ । ವರಂ । ಜರಿತ್ರೇ । ದುಹೀಯತ್ । ಇಂದ್ರ । ದಕ್ಷಿಣಾ । ಮಘೋನೀ ।
ಶಿಕ್ಷ । ಸ್ತೋತೃಽಭ್ಯಃ । ಮಾ । ಅತಿ । ಧಕ್ । ಭಗಃ । ನಃ । ಬೃಹತ್ । ವದೇಮ । ವಿದಥೇ । ಸುಽವೀರಾಃ ॥

ಸಾಯಣಭಾಷ್ಯಂ

ಅಹರ್ಗಣೇಷು ಮಾಧ್ಯಂದಿನಸವನೇಷು ತಾಯಮಾನರೂಪೇಷ್ವಚ್ಛಾವಾಕಸ್ಯಾಹರಹಃ ಶಸ್ಯ-ಸಂಜ್ಞಕಮಭಿತಷ್ಟೇವೇತಿ ಸೂಕ್ತಂ । ನೂನಂ ಸಾ ತ ಇತ್ಯೇಷಾ ತಸ್ಯಾಂತೇ ಶಂಸನೀಯಾ । ಸೂತ್ರಿತಂ ಚ । ನೂನಂ ಸಾ ತ ಇತ್ಯಂತಮುತ್ತಮಂ । ಆ. ೭-೪ । ಇತಿ ॥

ಹೇ ಇಂದ್ರ ಯಾ ದಕ್ಷಿಣಾ ದಕ್ಷಮುತ್ಸಾಹನಂ ಕರೋತೀತಿ ದಕ್ಷಿಣಾ ಸ್ತೋತೃಭ್ಯೋ ದೇಯಾ ತೇ ತ್ವತ್ಸಂಬಂಧಿನೀ ಮಘೋನೀ ಧನವತೀ ಜರಿತ್ರೇ ಸ್ತೋತ್ರೇ ವರಂ ಶ್ರೇಷ್ಠಮಭಿಮತಮರ್ಥಂ ನೂನಂ ಪ್ರತಿದುಹೀಯತ್ । ಇದಾನೀಂ ಪ್ರತಿದೋಗ್ಧಿ । ಸಂಪಾದಯತೀತ್ಯರ್ಥಃ । ತಾದೃಶೀಂ ದಕ್ಷಿಣಾಂ ಸ್ತೋತೃ-ಭ್ಯೋಽಸ್ಮಭ್ಯಂ ಶಿಕ್ಷ । ಪ್ರಯಚ್ಛ । ಕಿಂಚ ಭಗೋ ಭಜನೀಯಸ್ತ್ವಂ ಮಾತಿ ಧಕ್ ॥ ದಹೇರ್ದಾನಾರ್ಥಸ್ಯ ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ ॥ ನೋಽಸ್ಮಾನತಿಕ್ರಮ್ಯಾನ್ಯೇಭ್ಯೋ ದಕ್ಷಿಣಾಂ ಮಾ ದಾಃ । ಪ್ರಥಮಮಸ್ಮಭ್ಯಂ ದತ್ವಾ ಪಶ್ಚಾದನ್ಯೇಭ್ಯೋ ದೀಯತಾಮಿತ್ಯರ್ಥಃ। ಯದ್ವಾ ನೋಽಸ್ಮಾಕಂ ಕಾಮಾನ್ ಮಾ ಧಕ್ । ಮಾ ಧಾಕ್ಷೀಃ । ಅಪೇಕ್ಷಿತಫಲದಾನೇನ ಪೂರಯೇತ್ಯರ್ಥಃ । ಸುವೀರಾಃ ಶೋಭನಪುತ್ರ-ಪೌತ್ರಾಃ ಸಂತೋ ವಯಂ ವಿದಥೇಽಸ್ಮಿನ್ಯಜ್ಞೇ ಬೃಹತ್ ಪ್ರಭೂತಂ ಸ್ತೋತ್ರಂ ವದೇಮ । ತ್ವಾಮುದ್ದಿಶ್ಯ ಬ್ರವಾಮ ॥ ಅತ್ರ ಸಾ ತೇ ಪ್ರತಿದುಗ್ಧಾಮಿತಿ ಪ್ರಕೃತ್ಯ ವೀರೋ ವೀರಯತ್ಯಮಿತ್ರಾನ್ ವೇತೇರ್ವಾ ಸ್ಯಾದ್ಗತಿಕರ್ಮಣೋ ವೀರಯತೇರ್ವೇತ್ಯಂತಂ ನಿರುಕ್ತಮನುಸಂಧೇಯಂ । ನಿ. ೧-೭ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ತೇ—ನಿನ್ನಿಂದ ದತ್ತವಾಗತಕ್ಕದ್ದೂ । ಮಘೋನೀ—ಪ್ರಭೂತವಾದ ಸಂಪತ್ತುಳ್ಳದ್ದೂ ಆದ । ಸಾ ದಕ್ಷಿಣಾ—ಆ ದಕ್ಷಿಣೆಯು । ಜರಿತ್ರೇ—ಸ್ತುತಿಕರ್ತನಾದ ಯಜಮಾನನಿಗೆ । ನೂನಂ-

ಖಂಡಿತವಾಗಿಯೂ । **ವರಂ**—ಶ್ರೇಷ್ಠವಾಗಿ । **ಪ್ರತಿ ದುಹೀಯತ್**—ಇಷ್ಟಾರ್ಥವನ್ನು ಪೂರೈಸುತ್ತದೆ (ಅಂತಹ ದಕ್ಷಿಣೆಯನ್ನು) । **ಸ್ತೋತೃಭ್ಯಃ**—ಸ್ತುತಿಕರ್ತರಾದ ನಮಗೂ ಸಹ । **ಶಿಕ್ಷ**—ಕೊಡು । **ಭಗಃ**—ಪೂಜ್ಯನಾದ ನೀನು। **ನಃ**—ನಮ್ಮನ್ನು । **ಮಾತಿ ಧಕ್**—ತಿರಸ್ಕರಿಸಬೇಡ । **ಸುವೀರಾಃ**—ಶ್ರೇಷ್ಠರಾದ ವೀರಪುತ್ರರಿಂದೊಡಗೂಡಿದ ನಾವು । **ವಿದಥೇ**—ಈ ಯಜ್ಞದಲ್ಲಿ । **ಬೃಹತ್**—ಪ್ರಭೂತವಾದ ಸ್ತೋತ್ರವನ್ನು । **ವದೇಮ**—ಪಠಿಸುತ್ತೇವೆ.

### ಭಾವಾರ್ಥ

ಎಲೈ ಇಂದ್ರನೇ, ನಿನ್ನಿಂದ ದತ್ತವಾಗತಕ್ಕದ್ದೂ, ಪ್ರಭೂತನಾದ ಸಂಪತ್ತುಳ್ಳದ್ದೂ ಆದ ಆ ದಕ್ಷಿಣೆಯು ಸ್ತುತಿಕರ್ತನಾದ ಯಜಮಾನನಿಗೆ ಖಂಡಿತವಾಗಿಯೂ ಇಷ್ಟಾರ್ಥವನ್ನು ಶ್ರೇಷ್ಠವಾದ ರೀತಿಯಲ್ಲಿ ಪೂರೈಸುತ್ತದೆ. ಅಂತಹ ದಕ್ಷಿಣೆಯನ್ನು ಸ್ತುತಿಕರ್ತರಾದ ನಮಗೂ ಕೊಡು. ಪೂಜ್ಯನಾದ ನೀನು ನಮ್ಮನ್ನು ತಿರಸ್ಕರಿಸಬೇಡ. ಶ್ರೇಷ್ಠರಾದ ಪುತ್ರರಿಂದೊಡಗೂಡಿದ ನಾವು ಈ ಯಜ್ಞದಲ್ಲಿ ಪ್ರಭೂತವಾದ ಸ್ತೋತ್ರವನ್ನು ಪಠಿಸುತ್ತೇವೆ.

### English Translation

That opulent donation which proceeds, Indra, from you, assuredly bestows upon him who praises you the boon (that he desires) : grant it to (us) your adorers : do not you, who are the object of adoration, disregard our prayers ; so that, blessed with worthy descendants, we may glorify you at this sacrifice.

### ವಿಶೇಷವಿಷಯಗಳು

ಈ ಋಕ್ಕು ಹಿಂದೆ ಋ. ಸಂ. ೨-೧೧-೨೧ ರಲ್ಲಿ ಪಠಿತವಾಗಿರುವುದರಿಂದ ಇದರ ವಿಶೇಷವಿಷಯಗಳನ್ನು ಅಲ್ಲಿ ಎಂದರೆ ಇದೇ ಭಾಗದ 638-640 ನೇ ಪುಟದಲ್ಲಿ ವಿಸ್ತಾರವಾಗಿ ಬರೆದಿರುವುದನ್ನು ನೋಡಿ ತಿಳಿದುಕೊಳ್ಳಬಹುದು.

---

## ಹದಿನೇಳನೆಯ ಸೂಕ್ತವು.

---

### ಸಾಯಣಭಾಷ್ಯಂ

ತದಸ್ಮಾ ಇತಿ ನವರ್ಚಂ ಷಷ್ಠಂ ಸೂಕ್ತಂ ಗಾರ್ತ್ಸಮದಮೈಂದ್ರಂ । ಅತ್ರಾನುಕ್ರಮಣಿಕಾ । ತದಸ್ಮೈ ದ್ವಿತ್ರಿಷ್ಟುಬಂತಮಿತಿ । ಅಂತ್ಯೇ ದ್ವೇ ತ್ರಿಷ್ಟುಭೌ ಶಿಷ್ಟಾಃ ಸಪ್ತ ಜಗತ್ಯಃ ॥ ಅತಿರಾತ್ರೇ ದ್ವಿತೀಯೇ ಪರ್ಯಾಯೇಽಚ್ಛಾವಾಕಶಸ್ತ್ರೇ ತದಸ್ಮಾ ಇತಿ ಸೂಕ್ತಂ । ಅತಿರಾತ್ರೇ ಪರ್ಯಾಯಾಣಾಮಿತಿ ಖಂಡೇ ಸೂತ್ರಿತಂ । ತದಸ್ಮೈ ನವ್ಯಮಸ್ಯ ಪಿಬ ಯಸ್ಯ ಜಜ್ಞಾನ ಇಂದ್ರೇತಿ ಯಾಜ್ಯಾ । ಆ. ೬-೪ । ಇತಿ ॥

ಅನುವಾದವು—ತದಸ್ಮಾ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ಇಂದ್ರನು ದೇವತೆಯು; ಅನುಕ್ರಮಣಿಕೆಯಲ್ಲಿ ತದಸ್ಮೈ ದ್ವಿತ್ರಿಷ್ಟುಬಂತಂ ಎಂದು ಹೇಳಿರುವುದರಿಂದ ಈ ಸೂಕ್ತದ ಕೊನೆಯ ಎರಡು ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು; ಉಳಿದ ಏಳು ಋಕ್ಕುಗಳೂ ಜಗತೀಛಂದಸ್ಕವು. ಅತಿರಾತ್ರವೆಂಬ ಯಾಗದಲ್ಲಿ ದ್ವಿತೀಯಪರ್ಯಾಯದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳ ಪಠನೆಗಾಗಿ ತದಸ್ಮೈ ಎಂಬ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ ಅತಿರಾತ್ರೇ ಪರ್ಯಾಯಾಣಾಂ ಎಂಬ ಖಂಡದ ತದಸ್ಮೈತ ನವ್ಯಮಸ್ಯ ಪಿಬ ಯಸ್ಯ ಜಜ್ಞಾನ ಇಂದ್ರೇತಿ ಯಾಜ್ಯಾ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೬-೪).

---

॥ ಓಂ ॥

## ಸೂಕ್ತ—೧೭

॥ ಮಂಡಲ—೨ ॥ ಅನುವಾಕ—೨ ॥ ಸೂಕ್ತ—೧೭ ॥

॥ ಅಷ್ಟಕ—೨ ॥ ಅಧ್ಯಾಯ—೬ ॥ ವರ್ಗ—೧೯, ೨೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

ಋಷಿಃ—ಗೃತ್ಸಮದಃ ॥

ದೇವತಾ—ಇಂದ್ರಃ ।

ಛಂದಃ—ತ್ರಿಷ್ಟುಪ್ ।

ಛಂದಃ—೧-೭, ಜಗತೀ । ೮-೯, ತ್ರಿಷ್ಟುಪ್ .

---

ಸಂಹಿತಾಪಾಠಃ

ತದ॑ಸ್ಮೈ॒ ನವ್ಯ॑ಮಂಗಿರ॒ಸ್ವದ॑ರ್ಚತ॒ ಶುಷ್ಮಾ॒ ಯದ॑ಸ್ಯ ಪ್ರ॒ತ್ನಥೋ॒ದೀರ॑ತೇ ।

ವಿಶ್ವಾ॒ ಯದ್ಗೋ॒ತ್ರಾ ಸಹ॑ಸಾ॒ ಪರೀ॑ವೃತಾ॒ ಮದೇ॒ ಸೋಮ॑ಸ್ಯ ದೃಂಹಿ॒ತಾ-

ನ್ಯೈರ॑ಯತ್ ॥ ೧ ॥

ಪದಪಾಠಃ

ತತ್ । ಅ॒ಸ್ಮೈ॒ । ನವ್ಯ॑ಂ । ಅ॒ಂಗಿ॒ರ॒ಸ್ವತ್ । ಅ॒ರ್ಚ॒ತ॒ । ಶುಷ್ಮಾ॑ಃ । ಯತ್ । ಅ॒ಸ್ಯ॒ । ಪ್ರ॒ತ್ನಽಥಾ॑ । ಉತ್ಽ-ಈರ॑ತೇ ।

ವಿಶ್ವಾ॑ । ಯತ್ । ಗೋ॒ತ್ರಾ । ಸಹ॑ಸಾ । ಪರಿ॑ಽವೃತಾ । ಮದೇ॑ । ಸೋಮ॑ಸ್ಯ । ದೃಂಹಿ॒ತಾನಿ॑ । ಐರ॑ಯತ್ ॥

ಸಾಯಣಭಾಷ್ಯಂ

ಗೃತ್ಸಮದೋ ಬ್ರೂತೇ । ಹೇ ಸ್ತೋತಾರಃ ನವ್ಯಂ ನವತರಮನ್ಯೈರಪ್ರದೃಷ್ಟಪೂರ್ವಂ ತತ್ತಾದೃಶಂ ಸ್ತೋತ್ರಮಂಗಿರಸ್ವದಂಗಿರಸ ಇವಾಸ್ಮಾ ಇಂದ್ರಾಯಾರ್ಚತ । ಬ್ರೂತ । ಯದ್ಯಸ್ಮಾಜ್ಜಾತಮಾತ್ರ-ಸ್ಯಾಸ್ಯೇಂದ್ರಸ್ಯ ಶುಷ್ಮಾಃ ಶತ್ರೂಣಾಂ ಶೋಷಕಾಣಿ ತೇಜಾಂಸಿ ಪ್ರತ್ನಥಾ ॥ ಪ್ರತ್ನಪೂರ್ವವಿಶ್ವೇಮಾತ್ಥಾಲ್ ಛಂದಸೀತೀವಾರ್ಥೇ ಥಾಲ್‌ಪ್ರತ್ಯಯಃ ॥ ಪ್ರತ್ನಾನಿ ಪುರಾತನಾನೀವೋದೀರತೇ ! ಉದ್ಗಚ್ಛಂತಿ ॥ ಈರ ಗತೌ ಅನುದಾತ್ತೇತ್ । ತಿಙಃ ಚೋದಾತ್ತವತೀತಿ ಗತೇರ್ನಿಘಾತಃ ॥ ಯದ್ಯಸ್ಮಾಚ್ಚ ವಿಶ್ವಾ ಸರ್ವಾನ್ ಗೋತ್ರಾ ಮೇಘಾನ್ । ಗಾ ಉದಕಾನಿ ತ್ರಾಯಂತೇ ರಕ್ಷಂತೀತಿ ಗೋತ್ರಾ ಮೇಘಾಃ । ಪರೀವೃತಾ ವೃತ್ರೇಣಾಕ್ರಾಂತಾನ್ ॥ ಸರ್ವತ್ರ ಸುಪೋ ಡಾದೇಶಃ ॥ ತಾನ್ ದೃಂಹಿತಾನಿ ತೇನ ದೃಢೀಕೃತಾನ್ ಮೇಘಾನ್ ಸೋಮಸ್ಯ ಮದೇ ಹರ್ಷೇ ಸಂಜಾತೇ ಸತಿ ಸಹಸಾ ಬಲೇನೈರಯತ್ । ಉದಘಾಟಯತ್ । ಮೇಘಭೇದನೇನಾಪಃ ಪ್ರೇರಯಾಮಾಸೇತ್ಯರ್ಥಃ । ಯದ್ವಾ ವಿಶ್ವಾ ಸರ್ವಾಣಿ ಪರೀವೃತಾ ಬಲಾಸುರೇ-ಣಾಕ್ರಾಂತಾನಿ ದೃಂಹಿತಾನಿ ಪರ್ವತಬಿಲೇ ನಿರುದ್ಧಾನಿ ಗೋತ್ರಾ ॥ ಇನಿತ್ರಕಟ್ಯಚಶ್ಚೇತಿ ಸಮೂಹಾರ್ಥೇ ತ್ರಪ್ರತ್ಯಯಃ ॥ ಗವಾಂ ವೃಂದಾನಿ ಸಹಸೈರಯತ್ । ತಸ್ಮಾದ್ಬಿಲಾನ್ನಿರಗಮಯತ್ । ತಸ್ಮಾದರ್ಚತೇತಿ ಸಮನ್ವಯಃ ॥ ಐರಯತ್ । ಈರ ಗತೌ । ಣ್ಯಂತಸ್ಯ ಲಙಿ ರೂಪಂ । ಯದ್ವೃತ್ತಯೋಗಾದನಿಘಾತಃ ॥

ಪ್ರತಿಪದಾರ್ಥ

(ಎಲೈ ಸ್ತೋತೃಗಳೇ) ಯತ್—ಯಾವ ಮಹಿಮೆಯಿಂದ (ಉತ್ಪನ್ನನಾದಾಗಲೇ) । ಅಸ್ಯ—ಈ ಇಂದ್ರನ । ಶುಷ್ಮಾಃ—ಶತ್ರುನಾಶಕವಾದ ತೇಜಸ್ಸುಗಳು । ಪ್ರತ್ನಥಾ—ಅತ್ಯಂತ ಪುರಾತನಗಳಾಗಿರುವಂತೆ । ಉದೀರತೇ—ಪ್ರಸರಿಸಿ ಹರಡುತ್ತವೆಯೋ (ಮತ್ತು) । ಯತ್—ಯಾವ ಮಹಿಮೆಯಿಂದ । ಪರೀವೃತಾ—(ವೃತ್ರನಿಂದ) ಆವೃತವಾದವೂ । ದೃಂಹಿತಾನಿ—ದೃಢೀಕೃತವಾದವೂ ಆದ । ವಿಶ್ವಾ ಗೋತ್ರಾ—ಸಮಸ್ತ ಮೇಘಗಳನ್ನೂ । ಸೋಮಸ್ಯ ಮದೇ—ಸೋಮರಸದ ಪಾನದಿಂದ ಹರ್ಷಿತನಾದಾಗ । ಸಹಸಾ—ಸ್ವಬಲದಿಂದ । ಐರಯತ್—ಬಿಡಿಸಿ ವಿಭಾಗಮಾಡಿದನೋ ಅಂತಹ ಮಹಿಮೆಯುಳ್ಳ । ಅಸ್ಮೈ—ಇಂದ್ರನಿಗೆ । ನವ್ಯಂ—ನೂತನವಾದುದೂ । ತತ್—ಶ್ರೇಷ್ಠವಾದುದೂ ಆದ ಸ್ತುತಿಯನ್ನು । ಅಂಗಿರಸ್ವತ್—(ಹಿಂದೆ) ಅಂಗಿರಾ ಋಷಿಗಳು ಅರ್ಪಿಸಿದಂತೆ । ಅರ್ಚತ—ಪಠಿಸಿ ಪೂಜಿಸಿರಿ.

ಭಾವಾರ್ಥ

ಎಲೈ ಸ್ತೋತೃಗಳೇ, ಯಾವ ಮಹಿಮೆಯಿಂದ ಉತ್ಪನ್ನನಾದಾಗಲೇ, ಇಂದ್ರನ ಶತ್ರುನಾಶಕವಾದ ತೇಜಸ್ಸುಗಳು ಅತ್ಯಂತ ಪುರಾತನಗಳಾಗಿರುವಂತೆ ಪ್ರಸರಿಸಿ ಹರಡುತ್ತವೆಯೋ ಮತ್ತು ಯಾವ ಮಹಿಮೆಯಿಂದ ವೃತ್ರನಿಂದ ಆವೃತವಾದವೂ ದೃಢೀಕೃತವಾದವೂ ಆದ ಸಮಸ್ತ ಮೇಘಗಳನ್ನೂ ಸೋಮರಸದ ಪಾನದಿಂದ ಹರ್ಷಿತನಾದಾಗ ಸ್ವಬಲದಿಂದ ಬಿಡಿಸಿ ವಿಭಾಗಮಾಡಿದನೊ ಅಂತಹ ಮಹಿಮೆಯುಳ್ಳ ಇಂದ್ರನಿಗೆ ನೂತನವಾದುದೂ ಶ್ರೇಷ್ಠವಾದುದೂ ಆದ ಸ್ತುತಿಯನ್ನು ಹಿಂದೆ ಅಂಗಿರಾಋಷಿಗಳು ಅರ್ಪಿಸಿದಂತೆ ಅರ್ಪಿಸಿ ಪೂಜಿಸಿರಿ.

## English Translation

Address, worshippers, after the manner of Angiras, a new (hymn) to that Indra, whose withering (energies) were devaloped of old; who, in the exhilaration of the Soma, forced open the obstructed and solid clouds.

### ವಿಶೇಷವಿಷಯಗಳು.

ತತ್ ಅಸ್ಮೈ ನವ್ಯಂ ಅಂಗಿರಸ್ವತ್ ಅರ್ಚತ—ಗೃತ್ಸಮದ ಋಷಿಯು ಸ್ತೋತ್ರಮಾಡುವವರನ್ನುದ್ದೇಶಿಸಿ ಎಲೈ ಸ್ತೋತೃಗಳೇ, ಹಿಂದೆ ಅಂಗಿರಾಋಷಿಗಳು ಸ್ತೋತ್ರಮಾಡಿದಂತೆ ಇಂದ್ರನಿಗೆ ಹೊಸದಾದ ಸ್ತೋತ್ರಗಳನ್ನು ಅರ್ಪಿಸಿ ಪಠಿಸಿರಿ ಎಂದು ಹೇಳಿರುವನು. ಇಲ್ಲಿ ನವ್ಯಂ ಎಂದರೆ ಹಿಂದೆ ಇತರ ಋಷಿಗಳಿಂದ ದೃಷ್ಟವಾಗದೆ ಈಗತಾನೇ ಹೊಸದಾಗಿ ನಮ್ಮಿಂದ ದೃಷ್ಟವಾದ ಅಥವಾ ರಚಿತವಾದ ಸ್ತೋತ್ರವೆಂದರ್ಥವು. ಅಂಗಿರಸ್ವತ್ ಎಂಬ ಶಬ್ದಕ್ಕೆ ಅಂಗಿರಾ ಋಷಿಗಳಂತೆ ಎಂದರ್ಥವು. ಹಿಂದೆ ಅಂಗಿರಾಋಷಿಗಳು ಇಂದ್ರಾದಿ ದೇವತೆಗಳನ್ನು ಸ್ತೋತ್ರಮಾಡುವುದರಲ್ಲಿಯೂ, ಯಜ್ಞಾದಿಕರ್ಮಗಳನ್ನು ನೆರವೇರಿಸುವುದರಲ್ಲಿಯೂ ಪ್ರಖ್ಯಾತರಾಗಿದ್ದರು. ಆದುದರಿಂದ ಇತರ ಋಷಿಗಳು ಯಾವುದಾದರೂ ವಿಷಯಗಳನ್ನು ಪ್ರಶಸ್ತವೆಂದು ವರ್ಣಿಸುವಾಗ ಅಂಗಿರಾಋಷಿಗಳು ಮಾಡಿದಂತೆ ಎಂದು ವರ್ಣಿಸುವುದು ಋಗ್ವೇದದಲ್ಲಿ ರೂಢಿಯಲ್ಲಿದೆ. ಉದಾಹರಣೆಗಾಗಿ—

ಮನುಷ್ವದಗ್ನೇ ಅಂಗಿರಸ್ವದಂಗಿರೋ ಯಯಾತಿವತ್ಸದನೇ ಪೂರ್ವವಚ್ಛುಚೇ ।

(ಋ. ಸಂ. ೧-೩೧-೧೭)

ಅಂಗಿರಸ್ವನ್ಮಹಿವ್ರತ ಪ್ರಸ್ಕಣ್ವಸ್ಯ ಶ್ರುಧೀ ಹವಂ ।

(ಋ. ಸಂ. ೧-೪೫-೩)

ಪ್ರ ಮನ್ಮಹೇ ಶವಸಾನಾಯ ಶೂಷಮಾಂಗೂಷಂ ಗಿರ್ವಣಸೇ ಅಂಗಿರಸ್ವತ್ ।

(ಋ. ಸಂ. ೧-೬೨-೧)

ತಮು ತ್ವಾ ವಾಜಸಾತಮಮಂಗಿರಸ್ವದ್ಧವಾಮಹೇ ।

(ಋ. ಸಂ. ೧-೭೮-೩)

ತಮಂಗಿರಸ್ವನ್ನಮಸಾ ಸಪರ್ಯನ್ನವ್ಯಂ ಕೃಣೋಮಿ ಸನ್ಯಸೇ ಪುರಾಜಾಂ ।

(ಋ. ಸಂ. ೩-೩೧-೧೯)

ಅಚಿತ್ರಂ ಚಿದ್ಧಿ ಜಿನ್ವಥಾ ವೃಧನ್ತ ಇತ್ಥಾ ನಕ್ಷಂತೋ ನರೋ ಅಂಗಿರಸ್ವತ್ ।

(ಋ ಸಂ. ೬-೪೯-೧೧)

ಏವೇಂದ್ರಾಗ್ನಿಭ್ಯಾಂ ಪಿತೃವನ್ನವೀಯೋ ಮಾಂಧಾತೃವದಂಗಿರಸ್ವದವಾಚಿ ।

(ಋ. ಸಂ. ೮-೪೦-೧೨)

ಉತ ತ್ವಾ ಭೃಗುವಚ್ಛುಚೇ ಮನುಷ್ವದಗ್ನ ಆಹುತ । ಅಂಗಿರಸ್ವದ್ಧವಾಮಹೇ ।

(ಋ. ಸಂ. ೮-೪೩-೧೩)

ಈ ಋಕ್ಕುಗಳಲ್ಲಿ ಅಂಗಿರಸ್ವತ್-ಅಂಗಿರಾಋಷಿಗಳು ಮಾಡಿದಂತೆ ಎಂದು ಅಂಗಿರಾಋಷಿಗಳ ಉಪಮಾನವನ್ನು ಕೊಟ್ಟಿದೆ. ಇದಲ್ಲದೆ ಮೇಲಿನ ಕೆಲವು ಋಕ್ಕುಗಳಲ್ಲಿ ಮನು, ಯಯಾತಿ, ಪಿತೃಗಳು, ಮಾಂಧಾತಾ, ಭೃಗು ಎಂಬ

ಪ್ರಸಿದ್ಧಪುರುಷರ ಉಪಮಾನವೂ ಉಕ್ತವಾಗಿದೆ. ಇವರು ಮಾಡಿದ ಸ್ತೋತ್ರಾದಿಗಳೂ, ಕರ್ಮಗಳೂ ಬಹಳ ಪ್ರಸಿದ್ಧವಾದವುಗಳೆಂದು ಪರಿಗಣಿಸಲ್ಪಟ್ಟಿರುವುದರಿಂದ ಇವರುಗಳು ಮಾಡಿದ ಕರ್ಮಗಳ ಹೋಲಿಕೆಯನ್ನು ಋಷಿಗಳು ಅಲ್ಲಲ್ಲಿ ವಿವರಿಸಿದ್ದಾರೆ.

**ಶುಷ್ಮಾ ಯತ್ ಅಸ್ಯ ಪ್ರತ್ನಥಾ ಉದೀರತೇ—ಯದ್ಯಸ್ಮಾಜ್ಜಾತಮಾತ್ರಸ್ಯಾಸ್ಯೇಂದ್ರಸ್ಯ ಶುಷ್ಮಾಃ ಶತ್ರೂಣಾಂ ಶೋಷಕಾಣಿ ತೇಜಾಂಸಿ ಪ್ರತ್ನಥಾ ಪುರಾತನಾನೀವೋದೀರತೇ ಉದ್ಗಚ್ಛಂತಿ ।** ಇಂದ್ರನನ್ನು ಹೊಸದಾದ ಸ್ತುತಿಯಿಂದ ಸ್ತೋತ್ರಮಾಡುವಾಗ ಇಂದ್ರನ ಮಹಿಮೆಯ ವೈಶಿಷ್ಟ್ಯವೇನು ಎಂಬುದನ್ನು ಈ ವಾಕ್ಯದಿಂದಲೂ ಮುಂದಿನ ವಾಕ್ಯದಿಂದಲೂ ಋಷಿಯು ವರ್ಣಿಸಿರುವನು. ಈ ಇಂದ್ರನು ಹುಟ್ಟಿದ ಕೂಡಲೆ ಇವನ ಬಲಪರಾಕ್ರಮಗಳು ಶತ್ರುಗಳನ್ನು ಶೋಷಣಮಾಡುವಷ್ಟು (ಧ್ವಂಸಮಾಡುವಷ್ಟು) ಅಧಿಕವಾಗಿದ್ದವು. ಎಂದರೆ ಸಾಮಾನ್ಯ ಮನುಷ್ಯರಂತೆ ಹುಟ್ಟುವಾಗ ಅಲ್ಪಶಕ್ತಿಯಿಂದ ಕೂಡಿ ಬೆಳೆದು ಅಭಿವೃದ್ಧಿಯಾದಾಗ ಅಧಿಕವಾದ ಶಕ್ತಿಸಾಮರ್ಥ್ಯಗಳನ್ನು ಗಳಿಸುವುದು ಲೋಕದಲ್ಲಿ ಪ್ರಸಿದ್ಧವು. ಆದರೆ ಇಂದ್ರನ ವಿಷಯವು ಹಾಗಲ್ಲ ಇವನು ಹುಟ್ಟಿದ ಕೂಡಲೇ ಅತ್ಯಧಿಕವಾದ ಶಕ್ತಿಸಾಮರ್ಥ್ಯಗಳಿಂದ ಪೂರ್ಣನಾಗಿಯೇ ಇದ್ದನು. ಆದುದರಿಂದ ಇಂದ್ರನ ಬಲಪರಾಕ್ರಮಗಳು ಬಹಳ ಪುರಾತನವಾದವುಗಳೆಂದು ಕೊಂಡಾಡಲ್ಪಡುತ್ತವೆ ಎಂದಭಿಪ್ರಾಯವು.

**ಶುಷ್ಮಾಃ**—ಶುಷ್ಮ ಶಬ್ದವು ಬಲನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಇದಲ್ಲದೆ **ಶುಷ್ಮಮಿತಿ ಬಲನಾಮ ಶೋಷಯತೀತಿ ಸತಃ ।** (ನಿ. ೨-೨೪) ಎಂದು ನಿರ್ವಚನವೂ ಇರುವುದು. ಎಂದರೆ-ಶುಷ್ಮವೆಂದರೆ ಬಲವು. ಶೋಷಣೆಮಾಡುವುದರಿಂದ ಶುಷ್ಮಶಬ್ದಕ್ಕೆ ಬಲವೆಂದರ್ಥವು.

**ಪ್ರತ್ನಥಾ**—ಪ್ರತ್ನ ಶಬ್ದವು ಪುರಾಣನಾಮಗಳಲ್ಲಿ ಉಕ್ತವಾಗಿದೆ. (ನಿ. ೩-೨೦).

**ಯತ್ ಪರೀವೃತಾ ದೃಂಹಿತಾನಿ ವಿಶ್ವಾ ಗೋತ್ರಾ ಸೋಮಸ್ಯ ಮದೇ ಸಹಸಾ ಐರಯತ್—ಯದ್ಯಸ್ಮಾಚ್ಚ ಸರ್ವಾನ್ ಮೇಘಾನ್ ವೃತ್ರೇಣಾಕ್ರಾಂತಾನ್ ತೇನ ದೃಢೀಕೃತಾನ್ ಸೋಮಸ್ಯ ಮದೇ ಹರ್ಷೇ ಸಂಜಾತೇ ಸತಿ ಬಲೇನೈರಯತ್ ಉದಘಾಟಯತ್ ಮೇಘಭೇದನೇನಾಪಃ ಪ್ರೇರಯಾಮಾಸೇತ್ಯರ್ಥಃ ।** ಇಂದ್ರನ ಮಹಿಮೆಯು ಈ ವಾಕ್ಯದಲ್ಲಿ ವರ್ಣಿತವಾಗಿದೆ. ಇಂದ್ರನು ಸೋಮಪಾನಮಾಡಿದ ಹರ್ಷದ ಭರದಲ್ಲಿದ್ದಾಗ ಸಮಸ್ತ ಮೇಘಗಳನ್ನೂ ಆಕ್ರಮಿಸಿ ಅವುಗಳನ್ನು ದೃಢವಾಗಿರುವಂತೆ ಮಾಡಿ ವೃಷ್ಟ್ಯುದಕವು ಬೀಳದಂತೆ ತಡೆದಿದ್ದ ವೃತ್ರಾಸುರನನ್ನು ಸೋಮಪಾನಜನಿತಬಲದಿಂದ ಪ್ರಹರಿಸಿ ಉದಕವನ್ನು ಅವನ ಹಿಡಿತದಿಂದ ಬಿಡಿಸಿದನು ಎಂದಭಿಪ್ರಾಯವು. ಈ ವಾಕ್ಯಕ್ಕೆ ಭಾಷ್ಯಕಾರರು ಇನ್ನೊಂದು ವಿಧವಾದ ಅರ್ಥವನ್ನು ಹೇಳಿರುವರು—**ಯದ್ವಾ ವಿಶ್ವಾ ಸರ್ವಾಣಿ ಪರೀವೃತಾ ವಲಾಸುರೇಣಾಕ್ರಾಂತಾನಿ ದೃಂಹಿತಾನಿ ಪರ್ವತಬಿಲೇ ನಿರುದ್ಧಾನಿ ಗೋತ್ರಾ ಗವಾಂ ವೃಂದಾನಿ ಸಹಸೈರಯತ್ । ತಸ್ಮಾದ್ಬಿಲಾನ್ನಿರಗಮಯತ್ ।** ಅಥವಾ ವಲನೆಂಬ ಅಸುರನು ದೇವತೆಗಳ ಸಮಸ್ತ ಗೋವುಗಳನ್ನು ಸುತ್ತುಗಟ್ಟಿ ಅವುಗಳನ್ನು ಅಪಹರಿಸಿ ಪರ್ವತಬಿಲಗಳಲ್ಲಿ (ಗುಹೆಗಳಲ್ಲಿ) ನಿರ್ಬಂಧವಾಗಿ ಬಚ್ಚಿಟ್ಟಿರುವುದನ್ನು ಬಿಡಿಸಿ ಪರ್ವತಬಿಲದಿಂದ ಈಚೆಗೆ ಹೊರಡಿಸಿದನು ಎಂದು ಅರ್ಥವು.

**ಗೋತ್ರಾ**—ಗೋತ್ರಶಬ್ದವು ಮೇಘನಾಮಗಳಲ್ಲಿ ಪಠಿತವಾಗಿದೆ. (೧-೧೦). **ಗಾ ಉದಕಾನಿ ತ್ರಾಯಂತೇ ರಕ್ಷಂತೀತಿ ಗೋತ್ರಾ ಮೇಘಾಃ ।** ಉದಕಗಳನ್ನು ತಮ್ಮಲ್ಲಿ ಶೇಖರಿಸಿಟ್ಟುಕೊಂಡು ರಕ್ಷಿಸುವುದರಿಂದ ಗೋತ್ರವೆಂದರೆ ಮೇಘವೆಂದರ್ಥವು ಎಂದು ಭಾಷ್ಯಕಾರರ ವಿವರಣೆಯು. ಇದಲ್ಲದೆ **ಗುಜ್–ಅವ್ಯಕ್ತೇ ಶಬ್ದೇ । ಮೇಘೋ**

ಗರ್ಜನಲಕ್ಷಣಮವ್ಯಕ್ತಾಕ್ಷರಂ ಶಬ್ದಂ ಕರೋತಿ, ಗೂಯತೇ ಶಬ್ದ್ಯತೇ ವಾ । ಗೋತ್ರಶಬ್ದವು ಅಸ್ಪಷ್ಟವಾದ ಶಬ್ದವನ್ನು ಮಾಡು ಎಂಬರ್ಥವುಳ್ಳ ಗುಜ್ ಎಂಬ ಧಾತುವಿನಿಂದ ನಿಷ್ಪನ್ನವಾಗಬಹುದು. ಆಗ ಸ್ಪಷ್ಟಾಕ್ಷರರಹಿತ ವಾದ ಮೇಘಗರ್ಜನೆಯನ್ನು ಮಾಡುವುದರಿಂದ ಮೇಘಕ್ಕೆ ಗೋತ್ರವೆಂದು ಹೆಸರು ಎಂದು ಇನ್ನೊಂದು ವಿಧವಾದ ಅರ್ಥವು. ಅಥವಾ ಗಾಂ ಪಶುಜಾತಿಂ ತ್ರಾಯತೇ ವಾ ವೃಷ್ಟ್ಯಾ ಪಾನೀಯಪ್ರದಾನಾತ್—ಗೋವುಗಳೇ ಮೊದಲಾದ ಪಶುಜಾತಿಯ ಪ್ರಾಣಿಗಳಿಗೆ ಪಾನಾರ್ಥವಾಗಿ ವೃಷ್ಟ್ಯುದಕವನ್ನು ಕೊಟ್ಟು ಕಾಪಾಡುವುದರಿಂದ ಮೇಘಕ್ಕೆ ಗೋತ್ರವೆಂದು ಹೇಳಬಹುದು ಎಂದು ಮತ್ತೊಂದು ವಿಧವಾದ ಅರ್ಥವಿವರಣೆಯು. ಇವೆಲ್ಲವೂ ಮೇಘಪರವಾದ ಅರ್ಥಗಳು. ಗೋವುಗಳೆಂಬ ಅರ್ಥದಲ್ಲಿ ಗೋತ್ರಶಬ್ದಕ್ಕೆ—ಗೋತ್ರಾ । ಇನಿತ್ರಕಟ್ಯ ಚಶ್ಚೇತಿ ಸಮೂಹಾರ್ಥೇ ತ್ರಪ್ರತ್ಯಯಃ । ಗವಾಂ ವೃಂದಾನಿ । ಇಲ್ಲಿ ತ್ರಪ್ರತ್ಯಯವು ಸಮೂಹವಾಚಕವಾಗಿರುವುದರಿಂದ ಗೋತ್ರವೆಂದರೆ ಗೋವುಗಳ ಸಮೂಹವೆಂದರ್ಥವು. ಪ್ರಕೃತಋಕ್ಕಿನಲ್ಲಿ ಈ ಎರಡು ವಿಧವಾದ ಅರ್ಥಗಳಿಗೂ ಅವಕಾಶವಿರುವುದು.

ಸಹಸಾ—ಸಹಃ ಎಂಬ ಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪), ಬಲನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಪ್ರಕೃತವಾಕ್ಯದಲ್ಲಿ ಸಹಸಾ ಎಂದರೆ ಬಲದಿಂದ ಎಂದರ್ಥವು.

---

ಸಂಹಿತಾಪಾಠಃ

ಸ ಭೂತು ಯೋ ಹ ಪ್ರಥಮಾಯ ಧಾಯಸ ಓಜೋ ಮಿಮಾನೋ ಮಹಿ-
ಮಾನಮಾತಿರತ್ ।
ಶೂರೋ ಯೋ ಯುತ್ಸು ತನ್ವಂ ಪರಿವ್ಯತ ಶೀರ್ಷಣಿ ದ್ಯಾಂ ಮಹಿನಾ
ಪ್ರತ್ಯಮುಞ್ಚತ ॥ ೨ ॥

ಪದಪಾಠಃ

ಸಃ । ಭೂತು । ಯಃ । ಹ । ಪ್ರಥಮಾಯ । ಧಾಯಸೇ । ಓಜಃ । ಮಿಮಾನಃ । ಮಹಿಮಾನಂ । ಆ । ಅತಿರತ್ ।
ಶೂರಃ । ಯಃ । ಯುತ್ಽಸು । ತನ್ವಂ । ಪರಿಽವ್ಯತ । ಶೀರ್ಷಣಿ । ದ್ಯಾಂ । ಮಹಿನಾ । ಪ್ರತಿ । ಅಮುಞ್ಚತ ॥

ಸಾಯಣಭಾಷ್ಯಂ

ಸ ಇಂದ್ರೋ ಭೂತು । ಭವತು । ವರ್ಧತಾಮಿತ್ಯರ್ಥಃ । ಯ ಇಂದ್ರ ಓಜಸ್ತೇಜೋ ಬಲಂ ಮಿಮಾನಃ ಕುರ್ವಾಣಃ ಸನ್ ಪ್ರಥಮಾಯ ಪ್ರಾಥಮಿಕಾಯ ಧಾಯಸೇ ॥ ಧೇಟ್ ಪಾನೇ ॥ ಸೋಮ-

ಪಾನಾಯ ಮಹಿಮಾನಮಾತಿರತ್ । ಅವರ್ಧಯೇತ್ ॥ ತಿರತೇರ್ವ್ಯತ್ಯಯೇನ ಶಃ । ಯದ್ಯೋಗಾದ-ನಿಘಾತಃ ॥ ಶೂರಃ ಶತ್ರೂಣಾಂ ಶಾತಯಿತಾ ಯ ಇಂದ್ರೋ ಯುತ್ಸು ಯುದ್ಧೇಷು ತನ್ವಂ ಸ್ವಕೀಯಂ ಶರೀರಂ ಪರಿವ್ಯತ । ಕರ್ಮಣಾ ಪರಿವೀತಮಕರೋತ್ । ಸ ಇಂದ್ರೋ ಮಹಿನಾ ಸ್ವಕೀಯೇನ ಮಹಿಮ್ನಾ ಶೀರ್ಷಣಿ ಸ್ವಶಿರಸಿ ದ್ಯಾಂ ಪ್ರತ್ಯಮುಂಚತೆ । ಅಧಾರಯತ್ ॥

ಪ್ರತಿಪದಾರ್ಥ

ಯಃ—ಯಾವ ಇಂದ್ರನು । ಓಜಃ—ತನ್ನ ತೇಜೋಯುತವಾದ ಬಲವನ್ನು । ಮಿಮಾನಃ—ಸೃಷ್ಟಿಸುತ್ತಾ (ಬೆಳಿಸುತ್ತಾ) । ಪ್ರಥಮಾಯ—ಮೊದಲನೆಯ ಸಲದ । ಧಾಯಸೇ—ಸೋಮರಸದ ಪಾನಕ್ಕಾಗಿ । ಮಹಿಮಾನಂ—ತನ್ನ ಮಹಿಮೆಯನ್ನು । ಆತಿರತ್‌ಹ—ಬೆಳಿಸಿಕೊಂಡನೋ । ಶೂರಃ—ಶತ್ರುನಾಶಕನಾದ । ಯಃ—ಯಾವ ಇಂದ್ರನು । ಯುತ್ಸು—ಯುದ್ಧಗಳಲ್ಲಿ । ತನ್ವಂ—ತನ್ನ ಶರೀರವನ್ನು । ಪರಿವ್ಯತ—ಸಾಹಸಕರ್ಮಗಳಿಂದ ರಕ್ಷಿಸಿಕೊಂಡನೋ (ಮತ್ತು) । ಮಹಿನಾ—ತನ್ನ ಮಹಿಮೆಯಿಂದ । ಶೀರ್ಷಣಿ—ತನ್ನ ಶಿರಸ್ಸಿನ ಮೇಲೆ । ದ್ಯಾಂ—ದ್ಯುಲೋಕವನ್ನು । ಪ್ರತ್ಯಮುಂಚತ—ಎತ್ತಿ ಹಿಡಿದನೋ । ಸಃ—ಆ ಇಂದ್ರನು । ಭೂತು—ವೃದ್ಧಿಯನ್ನು ಹೊಂದಲಿ.

ಭಾವಾರ್ಥ

ಯಾವ ಇಂದ್ರನು ತನ್ನ ತೇಜೋಯುತವಾದ ಬಲವನ್ನು ಸೃಷ್ಟಿಸುತ್ತಾ ಮೊದಲನೆಯ ಸಲದ ಸೋಮರಸದ ಪಾನಕ್ಕಾಗಿ ತನ್ನ ಮಹಿಮೆಯನ್ನು ಬೆಳಿಸಿಕೊಂಡನೋ; ಶತ್ರುನಾಶಕನಾದ ಯಾವ ಇಂದ್ರನು ಯುದ್ಧಗಳಲ್ಲಿ ತನ್ನ ಶರೀರವನ್ನು ಕವಚಾದಿಗಳಿಂದ ಮುಚ್ಚಿಕೊಂಡು ರಕ್ಷಿಸಿಕೊಂಡನೋ ಮತ್ತು ಯಾವನು ತನ್ನ ಮಹಿಮೆಯಿಂದ ತನ್ನ ಶಿರಸ್ಸಿನ ಮೇಲೆ ದ್ಯುಲೋಕವನ್ನು ಎತ್ತಿ ಹಿಡಿದನೋ ಆ ಇಂದ್ರನು ವೃದ್ಧಿಯನ್ನು ಹೊಂದಲಿ.

## English Translation

May that (Indra) be (exalted), who, manifesting his energy, exerted his might for the first drinking of the Soma : a hero, who in combats protected his own person, and by his greatness sustained the heaven upon his head.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಇಂದ್ರನ ಮೂರು ಮಹಿಮೆಗಳು ವರ್ಣಿತಗಳಾಗಿವೆ. ಇಂದ್ರನು ಯಜ್ಞಾದಿಗಳಲ್ಲಿ ಮೊಟ್ಟ ಮೊದಲು ತನಗಾಗಿ ಅರ್ಪಿತವಾಗುವ ಸೋಮರಸಪಾನಕ್ಕಾಗಿ ಸಿದ್ಧನಾಗಿ ತನ್ನಬಲವನ್ನೂ ಮಹಿಮೆಯನ್ನೂ ವೃದ್ಧಿ ಪಡಿಸಿಕೊಂಡನು ಎಂದರೆ ಪ್ರಕಟಣೆಗೊಳಿಸಿದನು. ಎರಡನೆಯದಾಗಿ—ಇಂದ್ರನು ಶತ್ರುಗಳೊಡನೆ ಮಾಡುವ ಯುದ್ಧ ದಲ್ಲಿ ತನ್ನ ಪರಾಕ್ರಮವನ್ನು ಪ್ರದರ್ಶಿಸಿ ಶತ್ರುಗಳಿಂದ ತನಗೆ ಅಪಾಯವಾಗದಂತೆ ತನ್ನ ಶರೀರ ರಕ್ಷಣೆಯನ್ನು ಮಾಡಿ ಕೊಂಡನು, ಮೂರನೆಯದಾಗಿ—ಇಂದ್ರನು ತನ್ನ ಮಹಿಮೆಯಿಂದ ಸ್ವರ್ಗಲೋಕವನ್ನು ತನ್ನ ಶಿರಸ್ಸಿನ ಮೇಲೆ ಬಹಳ ಎತ್ತರದಲ್ಲಿರುವಂತೆ ಎತ್ತಿ ಹಿಡಿದನು. ಇಂತಹ ಗುಣವಿಶಿಷ್ಟನಾದ ಇಂದ್ರನು ವೃದ್ಧಿಯನ್ನೈದಲಿ ಎಂದರೆ ನಾವು ಮಾಡುವ ಸ್ತೋತ್ರಾದಿಗಳಿಂದ ಸಂತೋಷಪಡಲಿ ಎಂದು ಮುಖ್ಯಾಭಿಪ್ರಾಯವು-

### ಸಂಹಿತಾಪಾಠಃ

ಅಧಾಕೃಣೋಃ ಪ್ರಥಮಂ ವೀರ್ಯಂ ಮಹದ್ಯದಸ್ಯಾಗ್ರೇ ಬ್ರಹ್ಮಣಾ ಶುಷ್ಮ-
ಮೈರಯಃ ।
ರಥೇಷ್ಠೇನ ಹರ್ಯಶ್ವೇನ ವಿಚ್ಯುತಾಃ ಪ್ರ ಜೀರಯಃ ಸಿಸ್ರತೇ ಸಧ್ರ್ಯಕ್
ಪೃಥಕ್ ॥ ೩ ॥

### ಪದಪಾಠಃ

ಅಧ । ಅಕೃಣೋಃ । ಪ್ರಥಮಂ । ವೀರ್ಯಂ । ಮಹತ್ । ಯತ್ । ಅಸ್ಯ । ಅಗ್ರೇ । ಬ್ರಹ್ಮಣಾ । ಶುಷ್ಮಂ ।
ಐರಯಃ ।
ರಥೇऽಸ್ಥೇನ । ಹರಿऽಅಶ್ವೇನ । ವಿऽಚ್ಯುತಾಃ । ಪ್ರ । ಜೀರಯಃ । ಸಿಸ್ರತೇ । ಸಧ್ರ್ಯಕ್ । ಪೃಥಕ್ ॥ ೩ ॥

### ಸಾಯಣಭಾಷ್ಯಂ

ಅಧ ಅಪಿ ಚ ಹೇ ಇಂದ್ರ ತ್ವಂ ಪ್ರಥಮಂ ಮುಖ್ಯಂ ತದ್ವೀರ್ಯಂ ಸಾಮರ್ಥ್ಯಮ-ಕೃಣೋಃ । ಅಕರೋಃ । ಕಿಂ ತತ್ । ಬ್ರಹ್ಮಣಾ ಸ್ತೋತ್ರೇಣ ಸ್ತುತಿಸಾಧನಭೂತೇನ ವೇದವಾಕ್ಯೇನಾಸ್ಯ ವೀರ್ಯಸ್ಯ ಸ್ತೋತುರ್ಜನಸ್ಯಾಗ್ರೇ ಪುರತೋ ಯಚ್ಛುಷ್ಮಂ ಶತ್ರೂಣಾಂ ಶೋಷಕಂ ಬಲಮೈರಯಃ । ಉದಗಮಯಃ । ಜೀರಯೋ ಜರಯಿತಾರೋ ಬಾಧಕಾ ಅಸುರಾ ರಥೇಷ್ಠೇನ ರಥಸ್ಥಿತೇನ ಹರ್ಯಶ್ವೇನ ತ್ವಯಾ ವಿಚ್ಯುತಾಃ ಸ್ವಸ್ಥಾನಾಚ್ಚ್ಯಾವಿತಾಃ ಸಂತಃ ಸಧ್ರ್ಯಕ್ ಸಧ್ರೀಚೀನಾಃ ಪರಸ್ಪರಂ ಸಂಗತಾಃ ಪೃಥಕ್ ಭೀತ್ಯಾ ವಿಯುಕ್ತಾಃ ಸಂತಃ ಪ್ರಸಿಸ್ರತೇ । ಪ್ರಕರ್ಷೇಣ ಧಾವಂತಿ ॥ ಸೃ ಗತೌ । ಜುಹೋತ್ಯಾದಿಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ ॥ ಸಧ್ರ್ಯಗಿತಿ ಸಹಸ್ಯ ಸಧ್ರಿರಿತಿ ಸಧ್ರ್ಯಾದೇಶಃ । ಅದ್ರಿಸಧ್ರ್ಯೋ-ರಂತೋದಾತ್ತತ್ವೇನ ನಿಪಾತನಾದುದಾತ್ತಸ್ವರಿತಯೋರಿತಿ ಯಣಃ ಸ್ವರಿತತ್ವಂ ॥

### ಪ್ರತಿಪದಾರ್ಥ

(ಇಂದ್ರ—ಇಂದ್ರನೇ) । ಅಧ—ಮೇಲೆ ವರ್ಣಿತವಾದುದಲ್ಲದೇ । ಬ್ರಹ್ಮಣಾ—ಸ್ತೋತ್ರದಿಂದ (ಸ್ತುತನಾಗಿ) । ಅಸ್ಯ—ಈ ಸ್ತೋತೃವಿನ । ಅಗ್ರೇ—ಮುಂಭಾಗದಲ್ಲಿ । ಯತ್—ಯಾವ । ಶುಷ್ಮಂ—ಶತ್ರುನಾಶಕವಾದ ಬಲವನ್ನು । ಐರಯಃ—ಪ್ರಕಟಿಸಿದೆಯೋ ಅಂತಹ । ಪ್ರಥಮಂ—ಬಹುಮುಖ್ಯವಾದುದೂ । ಮಹತ್—ಮಹತ್ತಾದುದೂ ಆದ । ವೀರ್ಯಂ—ಆ ಸಾಮರ್ಥ್ಯವನ್ನು । ಅಕೃಣೋಃ—ನೀನು ನಿರ್ಮಿಸಿದೆ । ಜೀರಯಃ—ಬಾಧಕರಾದ ಅಸುರರು । ರಥೇಷ್ಠೇನ—ರಥದಲ್ಲಿ ಕುಳಿತಿರುವವನೂ । ಹರ್ಯಶ್ವೇನ—ಅಶ್ವಗಳಿಂದ ವಹಿಸಲ್ಪಟ್ಟವನೂ ಆದ

ನಿನ್ನಿಂದ । ವಿಚ್ಯುತಾಃ—ಅವರ ಸ್ಥಾನದಿಂದ ಕದಲಿಸಲ್ಪಟ್ಟವರಾಗಿ । ಸಧ್ರ್ಯಕ್—ಒಟ್ಟಿಗೆ ಸೇರಿಕೊಂಡು । ಪೃಥಕ್—(ಅನಂತರ) ಭಯದಿಂದ ಬೇರೆಯಾಗಿ । ಪ್ರ ಸಿಸ್ರತೇ—ಓಡುತ್ತಾರೆ

### ಭಾವಾರ್ಥ

ಎಲೈ ಇಂದ್ರನೇ, ಯಜ್ಞಕರ್ತರ ಸ್ತೋತ್ರದಿಂದ ಸ್ತುತನಾಗಿ ಅವರ ಮುಂದುಗಡೆ ಯಾವ ಶತ್ರುನಾಶಕವಾದ ಬಲವನ್ನು ಪ್ರಕಟಿಸಿದೆಯೋ ಅದು ಬಹು ಮುಖ್ಯವಾದುದೂ ಮಹತ್ತಾದುದೂ ಆದ ಸಾಮರ್ಥ್ಯವಾಗಿದೆ. ಅದನ್ನು ನೀನು ಪ್ರಕಟಿಸಿದೊಡನೆಯೇ, ಬಾಧಕರಾದ ಅಸುರರು ರಥದಲ್ಲಿ ಕುಳಿತಿರುವವನೂ, ಅಶ್ವಗಳಿಂದ ವಹಿಸಲ್ಪಟ್ಟವನೂ ಆದ ನಿನ್ನಿಂದ ಅವರ ಸ್ಥಾನದಿಂದ ಕದಲಿಸಲ್ಪಟ್ಟವರಾಗಿ ಒಟ್ಟಿಗೆ ಸೇರಿಕೊಂಡು ಅನಂತರ ಭೀತಿಯಿಂದ ಬೇರೆ ಬೇರೆಯಾಗಿ ಓಡುತ್ತಾರೆ.

### English Translation

Verily, Indra, you have displayed ( your first great prowess, when, (propitiated) by the prayer (of the worshipper), you have put forth your withering (vigour) in his presence : and when the congregated enemies (of the gods), hurled down by you in your chariot, drawn by your horses, fled, scattered.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಇಂದ್ರನ ಪರಾಕ್ರಮವು ಮತ್ತೊಂದು ವಿಧವಾಗಿ ವರ್ಣಿತವಾಗಿದೆ. ಶತ್ರುಗಳೊಡನೆ ಇಂದ್ರನು ಯುದ್ಧಮಾಡುವಾಗ ಇಂದ್ರನ ಸಾಮರ್ಥ್ಯಾತಿಶಯಗಳನ್ನು ಕಂಡು ಅಸುರರು ಭೀತರಾಗಿ ಓಡಿಹೋದರು ಎಂಬ ವಿಷಯವು ಇಲ್ಲಿ ವರ್ಣಿತವಾಗಿದೆ.

**ಹೇ ಇಂದ್ರ ತ್ವಂ ಅಥ ಪ್ರಥಮಂ ಮಹತ್ ವೀರ್ಯಂ ಅಕೃಣೋಃ**–ಎಲೈ ಇಂದ್ರನೇ, ನೀನು ಮುಖ್ಯವಾದ ನಿನ್ನ ಬಲವನ್ನು (ಪೌರುಷವನ್ನು) ಪ್ರಕಟಮಾಡಿರುವೆ. ಆ ನಿನ್ನ ಪೌರುಷವು ಯಾವುದೆಂದರೆ ಅದನ್ನು ಮುಂದಿನ ವಾಕ್ಯದಲ್ಲಿ ವಿವರಿಸಲಾಗಿದೆ.

**ಯತ್ ಅಸ್ಯ ಅಗ್ರೇ ಬ್ರಹ್ಮಣಾ ಶುಷ್ಮಂ ಐರಯಃ**—**ಬ್ರಹ್ಮಣಾ ಸ್ತೋತ್ರೇಣ ಸ್ತುತಿಸಾಧನಭೂತೇನ ವೇದವಾಕ್ಯೇನಾಸ್ಯ ವೀರ್ಯಸ್ಯ ಸ್ತೋತುರ್ಜನಸ್ಯಾಗ್ರೇ ಪುರತೋ ಯಚ್ಛುಷ್ಮಂ ಶೋಷಕಂ ಬಲಮೈರಯಃ ಉದಗಮಯಃ** । ನಿನ್ನನ್ನು ವೇದವಾಕ್ಯಗಳಿಂದ ಸ್ತೋತ್ರಮಾಡುತ್ತಿರುವ ಜನರ ಮುಂದೆ ಎಂದರೆ ಸ್ತೋತ್ರ ಮಾಡುತ್ತಿರುವವರು ನೋಡುತ್ತಿರುವಂತೆಯೇ ನೀನು ಶತ್ರುಶೋಷಕವಾದ ನಿನ್ನ ಬಲವನ್ನು ಪ್ರದರ್ಶಿಸಿರುವೆ. ಶತ್ರು ಪರಾಭವ ವಿಷಯದಲ್ಲಿ ನೀನು ತೋರಿಸಿದ ಬಲಪರಾಕ್ರಮಗಳನ್ನು ನಿನ್ನನ್ನು ಸ್ತೋತ್ರಮಾಡುವವರು ಚೆನ್ನಾಗಿ ನೋಡಿದರೆಂದಭಿಪ್ರಾಯವು.

**ರಥೇಷ್ಠೇನ ಹರ್ಯಶ್ವೇನ ವಿಚ್ಯುತಾಃ ಪ್ರ ಜೀರಯಃ ಸಿಸ್ರತೇ ಸಧ್ರ್ಯಕ್ ಪೃಥಕ್**—**ಜೀರಯೋ ಜರಯಿತಾರೋ ಬಾಧಕಾ ಅಸುರಾ ರಥಸ್ಥಿತೇನ ಹರ್ಯಶ್ವೇನ ತ್ವಯಾ ಸ್ವಸ್ಥಾನಾಚ್ಚ್ಯಾವಿತಾಃ ಸಂತಃ**

ಪರಸ್ಪರಂ ಸಂಗತಾಃ ಭೀತ್ಯಾ ವಿಯುಕ್ತಾಃ ಸಂತಃ ಪ್ರಕರ್ಷೇಣ ಧಾವಂತಿ। ನಿಂದೆಮಾಡುವ ಸ್ವಭಾವವುಳ್ಳ ಮತ್ತು ತೊಂದರೆಯನ್ನುಂಟುಮಾಡುವ ಅಸುರರು ಹರೀ ಎಂಬ ನಿನ್ನ ಅಶ್ವಗಳಿಂದ ಸಂಯೋಜಿತವಾದ ರಥದಲ್ಲಿ ಕುಳಿತಿರುವ ನಿನ್ನಿಂದ (ಇಂದ್ರನಿಂದ) ಯುದ್ಧರಂಗದಲ್ಲಿ ತಮ್ಮ ತಮ್ಮ ಸ್ಥಾನಗಳಿಂದ ಭ್ರಷ್ಟರಾಗಿ ಎಲ್ಲರೂ ಒಟ್ಟಾಗಿ ಸೇರಿ ನಿನಗೆ ಹೆದರಿ ನಾನಾ ದಿಕ್ಕುಗಳಿಗೆ ಓಡಿಹೋದರು. ಎಂದರೆ ಯುದ್ಧದಲ್ಲಿ ನೀನು ನಿನ್ನ ಹರೀ ಎಂಬ ಅಶ್ವಗಳನ್ನು ಹೂಡಿ ಸಿದ್ಧಪಡಿಸಿರುವ ರಥದಲ್ಲಿ ಕುಳಿತು ಯುದ್ಧಮಾಡುತ್ತಿರುವಾಗ, ನಿನ್ನನ್ನು ಎದುರಿಸಲು ಬಂದ ಶತ್ರುಗಳಾದ ಅಸುರರು ನಿನ್ನ ಬಲಪರಾಕ್ರಮಗಳಿಗೆ ಹೆದರಿ ಯುದ್ಧಮಾಡಲಾರದೆ ತಮ್ಮ ತಮ್ಮ ಸ್ಥಾನಗಳನ್ನು ತ್ಯಜಿಸಿ ದಿಕ್ಕಾಪಾಲಾಗಿ ಎಲ್ಲರೂ ಓಡಿಹೋದರು. ಈರೀತಿ ಶತ್ರುಗಳನ್ನು ಓಡಿಸಿ ನಿನ್ನ ಬಲವನ್ನು ಸ್ತೋತೃಗಳ ಮುಂದೆ ಪ್ರದರ್ಶಿಸಿದೆ ಎಂದು ಇಂದ್ರನನ್ನು ಸ್ತುತಿಸಲಾಗಿದೆ.

---

### ಸಂಹಿತಾಪಾಠಃ

ಅಧಾ ಯೋ ವಿಶ್ವಾ ಭುವನಾಭಿ ಮಜ್ಮನೇಶಾನಕೃತ್ಪ್ರವಯಾ ಅಭ್ಯ-
ವರ್ಧತ ।
ಆದ್ರೋದಸೀ ಜ್ಯೋತಿಷಾ ವಹ್ನಿರಾತನೋತ್ಸೀವ್ಯನ್ತಮಾಂಸಿ ದುಧಿತಾ ಸಮ-
ವ್ಯಯತ್ ॥ ೪ ॥

### ಪದಪಾಠಃ

ಅಧ । ಯಃ । ವಿಶ್ವಾ । ಭುವನಾ । ಅಭಿ । ಮಜ್ಮನಾ । ಈಶಾನಽಕೃತ್ । ಪ್ರಽವಯಾಃ । ಅಭಿ । ಅವರ್ಧತ।
ಆತ್ । ರೋದಸೀ ಇತಿ । ಜ್ಯೋತಿಷಾ । ವಹ್ನಿಃ । ಆ । ಅತನೋತ್ । ಸೀವ್ಯನ್ । ತಮಾಂಸಿ । ದುಧಿತಾ । ಸಂ । ಅವ್ಯಯತ್ ॥

### ಸಾಯಣಭಾಷ್ಯಂ

ಅಧ ಅಪಿ ಚ ಪ್ರವಯಾಃ ಪ್ರವೃದ್ಧಾನ್ನಃ ಪುರಾತನೋ ವಾ ಯ ಇಂದ್ರೋ ವಿಶ್ವಾ ಭುವನಾ ಸರ್ವಾನ್ ಲೋಕಾನ್ ಮಜ್ಮನಾ ಬಲೇನಾಭಿಭೂಯೇಶಾನಕೃತ್ ಆತ್ಮಾನಂ ಸರ್ವಸ್ಯಾಧಿಪತಿಂ ಕುರ್ವನ್। ಯದ್ವಾ ಅಗ್ನ್ಯಾದೀನ್ದೇವಾನ್ ತತ್ತಲ್ಲೋಕಾಧಿಪತೀನ್ಕುರ್ವನ್ ಅಭ್ಯವರ್ಧತ । ಸರ್ವತಃ ಪ್ರವೃದ್ಧೋಽಭವತ್ । ಆದನಂತರಂ ವಹ್ನಿರ್ಜಗತಾಂ ವೋಢಾ ಸ ಇಂದ್ರೋ ಜ್ಯೋತಿಷಾ ಸ್ವೀಯೇನ ತೇಜಸಾ ರೋದಸೀ ದ್ಯಾವಾಪೃಥಿವ್ಯಾವಾತನೋತ್ । ವ್ಯಾಪ್ನೋತ್ । ಕಿಂಚ ತಮಾಂಸಿ ತಮೋರೂಪಾಣಿ ರಕ್ಷಾಂಸಿ ದುಧಿತಾ ದುಃಸ್ಥಿತಾನಿ ದುರ್ಗತಾನಿ ಸೀವ್ಯನ್ ವಿಸ್ತಾರಯನ್ ಸಮವ್ಯಯತ್ । ಆವೃಣೋತ್ । ಜಗದ್ವ್ಯಾಪ್ಯ ವರ್ತತ ಇತ್ಯರ್ಥಃ ॥

### ಪ್ರತಿಪದಾರ್ಥ

**ಅಥ**—ಇಲ್ಲದೇ । **ಪ್ರವಯಾಃ**—ಪುರಾತನನಾದ ಅಥವಾ ಪ್ರಭೂತವಾದ ಅನ್ನವುಳ್ಳ । **ಯಃ**—ಯಾವ ಅದೇ ಇಂದ್ರನು । **ವಿಶ್ವಾ ಭುವನಾ ಅಭಿ**—ಸಮಸ್ತಲೋಕಗಳನ್ನೂ । **ಮಜ್ಮನಾ**—ತನ್ನ ಶಕ್ತಿಯಿಂದ (ಜಯಿಸಿ) । **ಈಶಾನಕೃತ್**—ಜಗತ್ತಿಗೆಲ್ಲಾ ತನ್ನನ್ನೇ ಪ್ರಭುವನ್ನಾಗಿ ಮಾಡಿಕೊಂಡು । **ಅಭ್ಯವರ್ಧತ**—ಪೂರ್ಣವಾಗಿ ಬೆಳೆದನೋ । **ಆತ್**—ಅನಂತರವೇ । **ವಹ್ನಿಃ**—ಜಗತ್ತನ್ನೆಲ್ಲಾ ವಹಿಸತಕ್ಕ ಆ ಇಂದ್ರನು । **ಜ್ಯೋತಿಷಾ**—ತನ್ನ ತೇಜಸ್ಸಿನಿಂದ । **ರೋದಸೀ**—ದ್ಯಾವಾಪೃಥಿವಿಗಳನ್ನು । **ಅತನೋತ್**—ವ್ಯಾಪಿಸಿದನು (ಮತ್ತು) । **ದುಧಿತಾ**—ದುರ್ಗತವಾದ (ದುಷ್ಟವಾದ) । **ತಮಾಂಸಿ**—ತಮೋರೂಪವಾದ ರಕ್ಷಸ್ಸುಗಳನ್ನು । **ಸೀವ್ಯನ್**—ಚದುರಿಸುತ್ತಾ । **ಸಮವ್ಯಯನ್**—ಜಗತ್ತನ್ನೆಲ್ಲಾ ವ್ಯಾಪಿಸಿದನು

### ಭಾವಾರ್ಥ

ಪುರಾತನನಾದ ಯಾವ ಅದೇ ಇಂದ್ರನು ಸಮಸ್ತ ಲೋಕಗಳನ್ನೂ ತನ್ನ ಶಕ್ತಿಯಿಂದ ಜಯಿಸಿ ಜಗತ್ತಿಗೆಲ್ಲಾ ತನ್ನನ್ನೇ ಪ್ರಭುವನ್ನಾಗಿ ಮಾಡಿಕೊಂಡು ಪೂರ್ಣವಾಗಿ ಬೆಳೆದನೋ. ಅನಂತರವೇ ಜಗತ್ತನ್ನೆಲ್ಲಾ ವಹಿಸತಕ್ಕ ಆ ಇಂದ್ರನು ತನ್ನ ತೇಜಸ್ಸಿನಿಂದ ದ್ಯಾವಾಪೃಥಿವಿಗಳನ್ನು ವ್ಯಾಪಿಸಿದನು. ಮತ್ತು ದುಷ್ಟವಾದ ತಮಸ್ಸುಗಳನ್ನು ಚದುರಿಸುತ್ತಾ ಜಗತ್ತನ್ನೆಲ್ಲಾ ವ್ಯಾಪಿಸಿದನು.

### English Translation

He indeed, the ancient Indra, making himself by his might sovereign over all worlds, became supreme over (all): and thenceforth sustaining heaven and earth, he overspread them with effulgence, and, scattering the malignant glooms, he pervaded (all things)·

### ವಿಶೇಷವಿಷಯಗಳು

**ಅಥ ಯಃ ಪ್ರವಯಾಃ ವಿಶ್ವಾ ಭುವನಾ ಮಜ್ಮನಾ ಅಭಿ ಈಶಾನಕೃತ್ ಅಭಿ ಅವರ್ಧತ**—**ಅಪಿ ಚ ಪ್ರವೃದ್ಧಾನ್ನಃ ಪುರಾತನೋ ವಾ ಯ ಇಂದ್ರೋ ಸರ್ವಾನ್ ಲೋಕಾನ್ ಬಲೇನಾಭಿಭೂಯಾತ್ಮಾನಂ ಸರ್ವಸ್ಯಾಧಿಪತಿಂ ಕುರ್ವನ್ ಅವರ್ಧತ** । ಮತ್ತು ವಿಶೇಷವಾಗಿ ಅನ್ನವುಳ್ಳ ಅಥವಾ ಪುರಾತನನಾದ ಈ ಇಂದ್ರನು ತನ್ನ ಸ್ವಸಾಮರ್ಥ್ಯದಿಂದ ಸಮಸ್ತಲೋಕಗಳನ್ನೂ ಜಯಿಸಿ ತಾನೇ ಸಮಸ್ತಕ್ಕೂ ಅಧಿಪತಿಯಾಗಿರುವಂತೆ ಮಾಡಿಕೊಂಡು ಬೆಳಗುತ್ತಿದ್ದನು. ಅಥವಾ—**ಯದ್ವಾ ಅಗ್ನ್ಯಾದೀನ್ ದೇವಾನ್ ತತ್ತಲ್ಲೋಕಾಧಿಪತೀನ್ ಕುರ್ವನ್ ಅಭ್ಯವರ್ಧತ ಸರ್ವತಃ ಪ್ರವೃದ್ಧೋಽಭವತ್** ; ಅಥವಾ ತನ್ನ ಸಾಮರ್ಥ್ಯದಿಂದ ಅಗ್ನ್ಯಾದಿ ದೇವತೆಗಳನ್ನು ಆಯಾ ಲೋಕಗಳಿಗೆ (ಭೂಮ್ಯಂತರಿಕ್ಷ ಸ್ವರ್ಗಾದಿಲೋಕಗಳಿಗೆ) ಅಧಿಪತಿಗಳನ್ನಾಗಿಮಾಡಿ ಅವರೆಲ್ಲರಿಗೂ ತಾನೇ ಪ್ರಭುವಾಗಿ ಬೆಳಗುತ್ತಿದ್ದನೆಂದು ಇನ್ನೊಂದು ವಿಧವಾದ ಅರ್ಥವನ್ನೂ ವಿವರಿಸಿದ್ದಾರೆ.

**ಮಜ್ಮನಾ**—ಮಜ್ಮನಾ ಎಂಬ ಶಬ್ದವು ಇಪ್ಪತ್ತೆಂಟು ಬಲನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯). ಈ ಶಬ್ದವು **ಟುಮಸ್ಜೀ ಶುದ್ಧೌ** (ತುದಾದಿ. ಪರ) ಎಂಬ ಧಾತುವಿನಿಂದ ನಿಷ್ಪನ್ನವಾಗಿ **ಮಜ್ಜಯತಿ ಶತ್ರೂನ್**—

ಶತ್ರುಗಳನ್ನು ಮುಳುಗಿಸುವುದು ಎಂದರೆ ನಾಶಮಾಡುವುದರಿಂದ ಬಲವೆಂಬ ಅರ್ಥದಲ್ಲಿ ಉಪಯೋಗಿಸಲ್ಪಡುವುದು. ಈ ಶಬ್ದವು ತೃತೀಯೈಕವಚನವಾಗಿದ್ದರೂ ಇತರ ವಿಭಕ್ತ್ಯರ್ಥಗಳಲ್ಲಿ ಇದರ ಪ್ರಯೋಗವಿರುವುದು.

**ಪ್ರವಯಾಃ**— ಈ ಶಬ್ದವು ಪುರಾಣನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೨೦) **ಪ್ರಗತಂ ವಯೋ-ಯಸ್ಯ**—ಬಹಳ ವಯಸ್ಸು ಕಳೆದಿರುವ ಎಂದರೆ ಪುರಾತನವಾದ, ಹಳೆಯದಾದ ಎಂಬರ್ಥದಲ್ಲಿ ಈ ಶಬ್ದದ ಪ್ರಯೋಗ ವಿರುವುದು. ಇದಲ್ಲದೆ ಈ ಶಬ್ದಕ್ಕೆ ಪ್ರ, ವಯಃ ಎಂದು ಪದಚ್ಛೇದಮಾಡಿದರೆ, ವಯಃ ಶಬ್ದಕ್ಕೆ ಅನ್ನವೆಂದು ಅರ್ಥ ವಿರುವುದರಿಂದ (ನಿ. ೨-೯) ಪ್ರಕರ್ಷವಾಗಿ ಎಂದರೆ ಬಹಳವಾಗಿ ಅನ್ನಸಂಪತ್ತುಳ್ಳವನೆಂದು ಅರ್ಥವು ಬೋಧ್ಯವಾಗು ವುದು. ಈ ಎರಡು ವಿಧವಾದ ಅರ್ಥಗಳನ್ನೂ ಭಾಷ್ಯಕಾರರು ಇಲ್ಲಿ ವಿವರಿಸಿದ್ದಾರೆ.

**ಆತ್ ರೋದಸೀ ಜ್ಯೋತಿಷಾ ವಹ್ನಿಃ ಆ ಅತನೋತ್**—**ಅದನಂತರಂ ವಹ್ನಿರ್ಜಗತಾಂ ವೋಢಾ ಸ ಇಂದ್ರೋ ಜ್ಯೋತಿಷಾ ಸ್ವೀಯೇನ ತೇಜಸಾ ರೋದಸೀ ದ್ಯಾವಾಪೃಥಿವ್ಯಾವಾತನೋತ್ ವ್ಯಾಪ್ನೋತ್ ।** ಅನಂತರ ಜಗತ್ತನ್ನು ಧರಿಸಿರುವ ಆ ಇಂದ್ರನು ತನ್ನ ಸ್ವಸಾಮರ್ಥ್ಯದಿಂದ ದ್ಯಾವಾಪೃಥಿವಿಗಳನ್ನೂ ಎಂದರೆ ಭೂಮಿ ಯನ್ನೂ ಸ್ವರ್ಗವನ್ನೂ ಎಲ್ಲೆಡೆಯಲ್ಲಿಯೂ ವ್ಯಾಪಿಸಿರುವನು ಎಂದರೆ ಇಂದ್ರನ ಸಾಮರ್ಥ್ಯವು ಭೂಮ್ಯಂತರಿಕ್ಷಸ್ವರ್ಗ ಗಳಲ್ಲಿ ಎಲ್ಲೆಲ್ಲಿಯೂ ಬೆಳಗುತ್ತಿರುವುದು ಎಂದಭಿಪ್ರಾಯವು.

**ಆತ್**—**ಅಥ ।** ಅನಂತರವೆಂದರ್ಥವು. (ನಿ. ೪-೧೧), ರೋದಸೀ ಎಂಬ ಶಬ್ದವು ದ್ಯಾವಾಪೃಥಿವೀನಾಮ ಗಳಲ್ಲಿ ಪಠಿತವಾಗಿದೆ. (ನಿ. ೩-೨೨), **ವಹ್ನಿಃ**— **ವಹ ಪ್ರಾಪಣೇ** (ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ವಹಿಸುವುದು, ಧರಿಸುವುದು, ಒಯ್ಯುವುದು ಎಂದು ಅರ್ಥವಾಗುವುದರಿಂದ ವಹ್ನಿ ಶಬ್ದವು ರಥವನ್ನು ವಹಿಸುವುದು ಎಂಬರ್ಥದಲ್ಲಿ ಅಶ್ವಪರವಾಗಿಯೂ, ಹವಿಸ್ಸನ್ನು ವಹಿಸುವ ಎಂಬರ್ಥದಲ್ಲಿ ಅಗ್ನಿಪರವಾಗಿಯೂ, ಜಗತ್ತನ್ನು ಧರಿಸಿ ಪೋಷಿಸುವ ಎಂಬರ್ಥದಲ್ಲಿ ಇಂದ್ರಾದಿ ದೇವತೆಗಳಪರವಾಗಿಯೂ ಉಪಯೋಗಿಸಲ್ಪಡುವುದು. ಪ್ರಕೃತ ಋಕ್ಕಿನಲ್ಲಿ ಜಗತ್ತನ್ನು ಧರಿಸಿರುವ ಇಂದ್ರನೆಂಬರ್ಥದಲ್ಲಿ ಪ್ರಯುಕ್ತವಾಗಿದೆ.

**ತಮಾಂಸಿ ದುಧಿತಾ ಸೀವ್ಯನ್ ಸಂ ಅವ್ಯಯತ್**—**ಕಿಂಚ ತಮಾಂಸಿ ತನೋರೂಪಾಣಿ ರಕ್ಷಾಂಸಿ ದುಧಿತಾ ದುಃಸ್ಥಿತಾನಿ ದುರ್ಗತಾನಿ ಸೀವ್ಯನ್ ವಿಸ್ತಾರಯನ್ ಸಮವ್ಯಯತ್ ಆವೃಣೋತ್ । ಜಗದ್ವ್ಯಾಪ್ಯ ವರ್ತತ ಇತ್ಯರ್ಥ ।** ಮತ್ತು ಈ ಇಂದ್ರನು ತಮೋರೂಪದಿಂದಿರುವ ಎಂದರೆ ಕತ್ತಲೆಯಿಂದಕೂಡಿದ ರಾತ್ರಿಯಲ್ಲಿ ಸಂಚರಿಸುವ ಸ್ವಭಾವವುಳ್ಳ ರಾಕ್ಷಸರನ್ನು ದುಃಸ್ಥಿತಿಗೆ ಅಥವಾ ದುರ್ಗತಿಗೆ ಇಳಿಯುವಂತೆ ಮಾಡುತ್ತಾ ಎಂದರೆ ರಾಕ್ಷ ಸಾದಿಗಳನ್ನು ನಾಶಮಾಡುತ್ತಾ ಜಗತ್ತನ್ನೆಲ್ಲಾ ವ್ಯಾಪಿಸಿ ಇರುವನು ಎಂದು ಇಂದ್ರನ ಶಕ್ತಿಸಾಮರ್ಥ್ಯಗಳನ್ನೂ ವರ್ಣಿಸಿದೆ.

---

**ಸಂಹಿತಾಪಾಠಃ**

ಸ ಪ್ರಾಚೀನಾನ್ಪರ್ವತಾನ್ದೃಂಹದೋಜಸಾಧರಾಚೀನಮಕೃಣೋದಪಾ-ಮಪಃ ।

ಅಧಾರಯತ್ಪೃಥಿವೀಂ ವಿಶ್ವಧಾಯಸಮಸ್ತಭ್ನಾನ್ಮಾಯಯಾ ದ್ಯಾಮವ-
ಸ್ರಸಃ ॥ ೫ ॥

ಪದಪಾಠಃ

ಸಃ । ಪ್ರಾಚೀನಾನ್ । ಪರ್ವತಾನ್ । ದೃಂಹತ್ । ಓಜಸಾ । ಅಧರಾಚೀನಂ । ಅಕೃಣೋತ್ । ಅಪಾಂ ।
ಅಪಃ ।

ಅಧಾರಯತ್ । ಪೃಥಿವೀಂ । ವಿಶ್ವऽಧಾಯಸಂ । ಅಸ್ತಭ್ನಾತ್ । ಮಾಯಯಾ । ದ್ಯಾಂ । ಅವऽಸ್ರಸಃ ॥

ಸಾಯಣಭಾಷ್ಯಂ

ಸ ಇಂದ್ರಃ ಪ್ರಾಚೀನಾನ್ ಇತಸ್ತತಃ ಪ್ರಕರ್ಷೇಣಾಂಚತೋ ಗಚ್ಛತಃ ಸಪಕ್ಷಾನ್ ಪರ್ವತಾನ್ ಓಜಸಾ ಬಲೇನ ದೃಂಹತ್ । ಪಕ್ಷಚ್ಛೇದಂ ಕೃತ್ವಾ ಭೂಮೌ ದೃಢೀಚಕಾರ । ಅಚಲಾನಕರೋದಿತ್ಯರ್ಥಃ । ಅಪಾಂ ಮೇಘಸ್ಥಿತಾನಾಮುದಕಾನಾಮಪಃ ಸ್ಯಂದನಲಕ್ಷಣಂ ಕರ್ಮಾಧರಾಚೀನಂ । ಅಧಃಪ್ರದೇಶ-ಮಂಚತಿ ಗಚ್ಛತೀತ್ಯಧರಾಚೀನಂ । ತಾದೃಶಮಕೃಣೋತ್ । ಮೇಘಭೇದನಂ ಕೃತ್ವಾಪೋ ಭೂಮಾವ-ಪಾತಯದಿತ್ಯರ್ಥಃ । ಕಿಂಚ ವಿಶ್ವಧಾಯಸಂ ವಿಶ್ವಸ್ಯ ಧಾತ್ರೀಂ ಪೃಥಿವೀಂ ಬಲೇನಾಧಾರಯತ್ । ಮಾಯಯಾ ಪ್ರಜ್ಞಯೋಪಾಯೇನ ದ್ಯಾಂ ದ್ಯುಲೋಕಮವಸ್ರಸಃ ॥ ಸ್ರಂಸು ಗತೌ । ಸಂಪದಾದಿಲಕ್ಷ-ಣೋ ಭಾವೇ ಕ್ವಿಪ್ ॥ ಅವಪತನಾದಸ್ತಭ್ನಾತ್ ॥

ಪ್ರತಿಪದಾರ್ಥ

ಸಃ—ಇಂದ್ರನು । ಪ್ರಾಚೀನಾನ್—ಇಷ್ಟಬಂದಂತೆ ಚಲಿಸುತ್ತಿದ್ದ । ಪರ್ವತಾನ್—ಪರ್ವತಗಳನ್ನು । ಓಜಸಾ—ತನ್ನ ಬಲದಿಂದ । ದೃಂಹತ್—ಚಲಿಸದೇ ಭೂಮಿಯ ಮೇಲೆಯೇ ಸ್ಥಿರವಾಗಿ ನೆಲೆಸುವಂತೆ ಮಾಡಿದನು । ಅಪಾಂ—ಉದಕಗಳ । ಅಪಃ—ಪ್ರವಾಹಕರ್ಮವನ್ನು । ಅಧರಾಚೀನಂ—ಅಧೋಮುಖವಾಗಿರುವಂತೆ । ಅಕೃಣೋತ್—ಮಾಡಿದನು । ವಿಶ್ವಧಾಯಸಂ—ವಿಶ್ವಧಾರಕಳಾದ । ಪೃಥಿವೀಂ—ಪೃಥಿವಿಯನ್ನು । ಅಧಾರಯತ್—ತಾನು ಧರಿಸಿದನು । ಮಾಯಯಾ—ತನ್ನ ಪ್ರಜ್ಞಾಶಕ್ತಿಯಿಂದ । ದ್ಯಾಂ—ದ್ಯುಲೋಕವನ್ನು । ಅವಸ್ರಸಃ—ಕೆಳಕ್ಕೆ ಬೀಳುವುದರಿಂದ (ತಪ್ಪಿಸಿ) । ಅಸ್ತಭ್ನಾತ್—ತಡೆದು ನಿಲ್ಲಿಸಿದನು

ಭಾವಾರ್ಥ

ಇಂದ್ರನು ಇಷ್ಟಬಂದಂತೆ ಚಲಿಸುತ್ತಿದ್ದ ಪರ್ವತಗಳನ್ನು ತನ್ನ ಬಲದಿಂದ ಚಲಿಸದೇ ಭೂಮಿಯಮೇಲೆಯೇ ಸ್ಥಿರವಾಗಿ ನೆಲೆಸುವಂತೆ ಮಾಡಿದನು. ಉದಕಗಳ ಪ್ರವಾಹಕರ್ಮವನ್ನು ಅಧೋಮುಖವಾಗಿರುವಂತೆ ಮಾಡಿದನು. ವಿಶ್ವಧಾರಕಳಾದ ಪೃಥಿವಿಯನ್ನು ತಾನು ಧರಿಸಿದನು. ತನ್ನ ಪ್ರಜ್ಞಾಶಕ್ತಿಯಿಂದ ದ್ಯುಲೋಕವನ್ನು ಕೆಳಕ್ಕೆ ಬೀಳುವುದರಿಂದ ತಪ್ಪಿಸಿ ತಡೆದು ನಿಲ್ಲಿಸಿದನು.

## English Translation

By his strength he fixed the wandering mountains; he directed the downward course of the waters; he upheld the earth the nurse (of all creatures); and by his craft he stayed the heaven from falling.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಇಂದ್ರನ ನಾಲ್ಕು ಸಾಹಸಕೃತ್ಯಗಳು ವರ್ಣಿತವಾಗಿವೆ. ಅವುಗಳನ್ನು ಒಂದೊಂದಾಗಿ ವಿವರಿಸಲಾಗುವುದು.

**ಸಃ ಪ್ರಾಚೀನಾನ್ ಪರ್ವತಾನ್ ಓಜಸಾ ದೃಂಹತ್—ಸ ಇಂದ್ರಃ ಪ್ರಾಚೀನಾನ್ ಇತಸ್ತತಃ ಪ್ರಕರ್ಷೇಣಾಂಚತೋ ಗಚ್ಛತಃ ಸಪಕ್ಷಾನ್ ಪರ್ವತಾನ್ ಓಜಸಾ ಬಲೇನ ದೃಂಹತ್ । ಪಕ್ಷಚ್ಛೇದಂ ಕೃತ್ವಾ ಭೂಮೌ ದೃಢೀಚಕಾರ । ಅಚಲಾನಕರೋದಿತ್ಯರ್ಥಃ ।** ಆ ಇಂದ್ರನು ರೆಕ್ಕೆಗಳ ಸಹಾಯದಿಂದ ಇತ್ತಲಿಂದತ್ತ ಸಂಚರಿಸುತ್ತಿದ್ದ ಪರ್ವತಗಳನ್ನು ತನ್ನ ಬಲದಿಂದ ಅವುಗಳ ಪಕ್ಷಚ್ಛೇದನಮಾಡಿ ಭೂಮಿಯಲ್ಲಿ ಚಲಿಸದೆ ಒಂದೇ ಸ್ಥಳದಲ್ಲಿ ಯಾವಾಗಲೂ ಸ್ಥಿರವಾಗಿ ಇರುವಂತೆ ಮಾಡಿದನು ಎಂದು ಭಾಷ್ಯಕಾರರು ಅರ್ಥವಿವರಣೆಮಾಡಿರುವರು. ಇಲ್ಲಿ ಒಂದು ಸಂಶಯವು ತಲೆದೋರುವುದು. ಭಾಷ್ಯಕಾರರು ಮಾಡಿರುವ ಅರ್ಥವಿವರಣೆಯು ಪುರಾಣಾದಿಗಳಲ್ಲಿ ಹೇಳಿರುವ ಉಪಾಖ್ಯಾನಗಳನ್ನು ಅನುಸರಿಸಿ ಹೇಳಲಾಗಿದೆ. ಪೂರ್ವದಲ್ಲಿ ಪರ್ವತಗಳಿಗೆ ರೆಕ್ಕೆಗಳಿದ್ದವೆಂದೂ, ಆ ರೆಕ್ಕೆಗಳ ಸಹಾಯದಿಂದ ಪರ್ವತಗಳು ಹಾರಾಡುತ್ತಾ ಗ್ರಾಮಗಳಮೇಲೆ ಕುಳಿತು ಅವುಗಳನ್ನೂ ಜನರನ್ನೂ ನಾಶಮಾಡುತ್ತಿದ್ದುದರಿಂದ ಇಂದ್ರನು ತನ್ನ ವಜ್ರಾಯುಧದಿಂದ ಆ ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿ ಪರ್ವತಗಳು ಚಲಿಸದೆ ಒಂದೇ ಸ್ಥಳದಲ್ಲಿರುವಂತೆ ಮಾಡಿದನು ಎಂಬ ಉಪಾಖ್ಯಾನವು ಪುರಾಣಾದಿಗಳಲ್ಲಿ ಹೇಳಿದೆ. ಆದರೆ ಈ ಉಪಾಖ್ಯಾನಕ್ಕೆ ವೇದಗಳಲ್ಲಿ, ಅದರಲ್ಲಿಯೂ ಋಗ್ವೇದದಲ್ಲಿ ಸಮರ್ಥನೆಯು ಎಲ್ಲಿಯೂ ಕಂಡು ಬರುವುದಿಲ್ಲ. ಆದುದರಿಂದ ಈ ವಾಕ್ಯಕ್ಕೆ ಸಾಯಣರು ಮಾಡಿರುವ ಅರ್ಥವಿವರಣೆಯನ್ನು ಸ್ವೀಕರಿಸುವುದು ಅಷ್ಟು ಸಮಂಜಸವೆನಿಸುವುದಿಲ್ಲ.

**ಪ್ರಾಚೀನಾನ್—ಇತಸ್ತತಃ ಪ್ರಕರ್ಷೇಣಾಂಚತೋ ಗಚ್ಛತಃ ।** ಇತ್ತಲಿಂದತ್ತ ಸಂಚರಿಸುವ ಎಂದು ಭಾಷ್ಯಕಾರರ ವಿವರಣೆಯು. ನಾವು ಮೇಲೆ ಹೇಳಿದಂತೆ ಪರ್ವತಗಳ ಪಕ್ಷಚ್ಛೇದನ ಕಾರ್ಯವನ್ನು ಸ್ವೀಕರಿಸದಿದ್ದ ಪಕ್ಷದಲ್ಲಿ ಪ್ರಾಚೀನ ಶಬ್ದಕ್ಕೆ ಪುರಾತನವೆಂಬ ಅರ್ಥವನ್ನು ಹೇಳಬಹುದು.

**ಅಧರಾಚೀನಂ ಅಕೃಣೋತ್ ಅಸ್ಯಾಂ ಅಪಃ—ಮೇಘಸ್ಥಿತಾನಾಮುದಕಾನಾಮಪಃ ಸ್ಯಂದನಲಕ್ಷಣಂ ಕರ್ಮಾಧರಾಚೀನಂ । ಅಧಃಪ್ರದೇಶಮಂಚತಿ ಗಚ್ಛತೀತ್ಯಧರಾಚೀನಂ । ತಾದೃಶಮಕರೋತ್ । ಮೇಘಭೇದನಂ ಕೃತ್ವಾ ಭೂಮಾವಪಾತಯದಿತ್ಯರ್ಥಃ ।** ಮೇಘದಲ್ಲಿರುವ ಉದಕಗಳನ್ನು ಅಧೋಮುಖವಾಗಿ ಬೀಳುವಂತೆ ಮಾಡಿದನು. ಎಂದರೆ ವೃಷ್ಟಿರೂಪವಾಗಿ ಉದಕವನ್ನು ಬೀಳದಂತೆ ತಡೆದಿದ್ದ ಮೇಘಗಳನ್ನು ಇಂದ್ರನು ತನ್ನ ವಜ್ರಾಯುಧದಿಂದ ಭೇದಿಸಿ ಭೂಮಿಯಮೇಲೆ ಎಂದರೆ ಅಂತರಿಕ್ಷದಿಂದ ಕೆಳಮುಖವಾಗಿ ಭೂಮಿಯಮೇಲೆ ನೀರು ಬಿದ್ದು ಹರಿಯುವಂತೆ ಮಾಡಿದನು ಎಂದಭಿಪ್ರಾಯವು.

**ಅಧಾರಯತ್ ಪೃಥಿವೀಂ ವಿಶ್ವಧಾಯಸಂ**—ಕಿಂಚ ವಿಶ್ವಸ್ಯ ಧಾತ್ರೀಂ ಪೃಥಿವೀಂ ಬಲೇನಾ-ಧಾರಯತ್ । ಸಮಸ್ತಜನರನ್ನೂ ಪ್ರಾಣಿಗಳನ್ನೂ ಧರಿಸಿ ಪೋಷಿಸುವ ಪೃಥಿವಿಯನ್ನು ಇಂದ್ರನು ತನ್ನ ಸಾಮರ್ಥ್ಯ ದಿಂದ ಧರಿಸಿದನು ಎಂದರೆ ದೃಢವಾಗಿರುವಂತೆ ಮಾಡಿದನು.

**ಅಸ್ತಭ್ನಾತ್ ಮಾಯಯಾ ದ್ಯಾಂ ಅವಸ್ರಸಃ**—ಪ್ರಜ್ಞಯೋಪಾಯೇನ ದ್ಯುಲೋಕಮವಸ್ರಸಃ । ಅವಪತನಾದಸ್ತಭ್ನಾತ್ । ಇಂದ್ರನು ತನ್ನ ಪ್ರಜ್ಞಾಶಕ್ತಿಯಿಂದ ಅಥವಾ ಉಪಾಯದಿಂದ ದ್ಯುಲೋಕವನ್ನು ಕೆಳಗೆ ಬೀಳದಂತೆ ಅಂತರಿಕ್ಷದಲ್ಲಿ ತಡೆದು ನಿಲ್ಲಿಸಿದನು. ಭೂಮಿಯ ಮೇಲಲ್ಲದೆ ಅಂತರಿಕ್ಷದಲ್ಲಿ ಯಾವ ವಸ್ತುವನ್ನು ಇಟ್ಟು ನಿಲ್ಲಿಸಬೇಕಾದರೂ ಅದಕ್ಕೆ ಮುಖ್ಯವಾಗಿ ಯಾವುದಾದರೂ ಒಂದು ಆಧಾರವಿದ್ದೇ ಇರಬೇಕು. ಗೃಹಾದಿಗಳ ಆಚ್ಛಾದನೆಯು ಸ್ತಂಭಗಳ ಆಧಾರದಿಂದ ನಿಂತಿರುವಂತೆ ಅಂತರಿಕ್ಷದಲ್ಲಿರುವ ವಸ್ತುವಿಗೆ ಆಧಾರವಿದ್ದೇ ಇರಬೇಕು. ಆಧಾರ ರಹಿತವಾಗಿ ಏನನ್ನು ನಿಲ್ಲಿಸಲಾಗುವುದಿಲ್ಲ. ಆದರೆ ಇಂದ್ರನು ಸ್ವರ್ಗಲೋಕವನ್ನು ಅಂತರಿಕ್ಷದಲ್ಲಿ ಬಹಳ ಮೇಲೆ ಸ್ಥಾಪಿಸಿ ಅದು ಯಾವ ಆಧಾರವೂ ಇಲ್ಲದೆ ದೃಢವಾಗಿ ನಿಲ್ಲುವಂತೆಯೂ, ಕೆಳಕ್ಕೆ ಬೀಳದಂತೆಯೂ ಮಾಡಿದನು. ಈ ರೀತಿ ಮಾಡಿರುವುದು ಇಂದ್ರನ ಮಹಿಮೆಯನ್ನು ಪ್ರಕಟಿಸುವುದು ಎಂದು ಮುಖ್ಯಾಭಿಪ್ರಾಯವು

---

ಸಂಹಿತಾಪಾಠಃ

ಸಾಸ್ಮಾ ಅರಂ ಬಾಹುಭ್ಯಾಂ ಯಂ ಪಿತಾಕೃಣೋದ್ವಿಶ್ವಸ್ಮಾದಾ ಜನುಷೋ ವೇದಸಸ್ಪರಿ ।

ಯೇನಾ ಪೃಥಿವ್ಯಾಂ ನಿ ಕ್ರಿವಿಂ ಶಯಧ್ಯೈ ವಜ್ರೇಣ ಹತ್ವ್ಯವೃಣಕ್ತು-ವಿಷ್ವಣಿಃ ॥ ೬ ॥

ಪದಪಾಠಃ

ಸಃ । ಅಸ್ಮೈ । ಅರಂ । ಬಾಹುಽಭ್ಯಾಂ । ಯಂ । ಪಿತಾ । ಅಕೃಣೋತ್ । ವಿಶ್ವಸ್ಮಾತ್ । ಆ । ಜನುಷಃ । ವೇದಸಃ । ಪರಿ ।

ಯೇನ । ಪೃಥಿವ್ಯಾಂ । ನಿ । ಕ್ರಿವಿಂ । ಶಯಧ್ಯೈ । ವಜ್ರೇಣ । ಹತ್ವೀ । ಅವೃಣಕ್ । ತುವಿಽಸ್ವನಿಃ ॥ ೬ ॥

ಸಾಯಣಭಾಷ್ಯಂ

ಸ ತಾದೃಶ ಇಂದ್ರೋಽಸ್ಮೈ ಜಗತೇಽರಮಲಂ ಪರ್ಯಾಪ್ತೋ ಬಭೂವ । ರಕ್ಷಕತ್ವೇನ ಸ್ವಾಮೀ ಬಭೂವೇತ್ಯರ್ಥಃ । ಪಿತಾ ಸರ್ವಸ್ಯ ಪಾಲಕಃ ಪ್ರಜಾಪತಿರ್ವಿಶ್ವಸ್ಮಾತ್ಸರ್ವಸ್ಮಾಜ್ಜನುಷೋ ಜನಾತ್ ಪರಿ

ತತೋಽಪ್ಯುತ್ಕೃಷ್ಟಾದ್ವೇದಸೋ ಜ್ಞಾನಾತ್ ತದ್ವಿಶಿಷ್ಟಂ ಬಾಹುಭ್ಯಾಂ ಸ್ವಕೀಯಾಭ್ಯಾಂ ಬಾಹುಭ್ಯಾಂ ಯಮಾಕೃಣೋತ್ । ತುವಿಷ್ವಣಿರ್ಬಹುಕೀರ್ತಿರ್ಮಹಾಸ್ವನೋ ವಾ ಸ ಇಂದ್ರೋ ಯೇನ ಜ್ಞಾನೇನ ಕ್ರಿವಿಮೇತನ್ನಾಮಾನಮಸುರಂ ವಜ್ರೇಣ ಹತ್ವೀ ॥ ಸ್ನಾತ್ವ್ಯಾದಯಶ್ಚೇತಿ ತ್ವೀ ॥ ಹತ್ವಾ ತಾಡಯಿತ್ವಾ ಪೃಥಿವ್ಯಾಂ ಭೂಮೌ ಶಯಧ್ಯೈ ಶಯನಾಯ ದೀರ್ಘನಿದ್ರಾಯೈ ನ್ಯವೃಣಕ್ ॥ ವೃಣಕ್ತಿರ್ಹಿಂಸಾಕರ್ಮಾ ॥ ನ್ಯವಧೀತ್ ॥

ಪ್ರತಿಪದಾರ್ಥ

ಪಿತಾ—ಪಾಲಕನಾದ ಇಂದ್ರನು । ವಿಶ್ವಸ್ಮಾಜ್ಜನುಷಃ—ಸಕಲವಾದ ಮಾನವಪ್ರಜೆಗಳಿಗಿಂತಲೂ । ಪರಿ—ಉತ್ಕೃಷ್ಟವಾದ । ವೇದಸಃ—ಜ್ಞಾನದಿಂದ ಕೂಡಿ । ಬಾಹುಭ್ಯಾಂ—ತನ್ನ ಬಾಹುಗಳಿಂದ । ಯಂ—ಯಾವ ಜಗತ್ತನ್ನು । ಆ ಅಕೃಣೋತ್—ನಿರ್ಮಿಸಿದನೋ (ಮತ್ತು) । ತುವಿಷ್ವಣಿಃ—ಅಧಿಕವಾಗಿ ಶಬ್ದಮಾಡುತ್ತಾ । ಯೇನ—ಯಾವ ತನ್ನ ಜ್ಞಾನದಿಂದ । ಕ್ರಿವಿಂ—ಕ್ರಿವಿಯೆಂಬ ಅಸುರನನ್ನು । ವಜ್ರೇಣ—ವಜ್ರಾಯುಧದಿಂದ । ಹತ್ವೀ—ಹೊಡೆದು । ಪೃಥಿವ್ಯಾಂ—ನೆಲದ ಮೇಲೆ । ಶಯಧ್ಯೈ—ಸತ್ತುಬಿದ್ದು ಮಲಗುವಂತೆ । ನಿ ಅವೃಣಕ್—ಮಾಡಿದನೋ । ಸಃ—ಆ ಇಂದ್ರನು । ಅಸ್ಮೈ—ಈ ಜಗದ್ರಕ್ಷಣೆಗೆ । ಅಲಂ—ಪೂರ್ಣವಾಗಿ ಶಕ್ತನಾಗಿದ್ದಾನೆ.

ಭಾವಾರ್ಥ

ಪಾಲಕನಾದ ಇಂದ್ರನು ಉತ್ಕೃಷ್ಟವಾದ ಜ್ಞಾನದಿಂದ ಕೂಡಿ ತನ್ನ ಬಾಹುಗಳಿಂದ ಯಾವ ಜಗತ್ತನ್ನು ನಿರ್ಮಿಸಿದನೋ ಮತ್ತು ಅಧಿಕವಾಗಿ ಶಬ್ದಮಾಡುತ್ತಾ ಯಾವ ತನ್ನ ಜ್ಞಾನದಿಂದ ಕ್ರಿವಿಯೆಂಬ ಅಸುರನನ್ನು ವಜ್ರಾಯುಧದಿಂದ ಹೊಡೆದು ನೆಲದ ಮೇಲೆ ಸತ್ತುಬಿದ್ದು ಮಲಗುವಂತೆ ಮಾಡಿದನೋ ಆ ಇಂದ್ರನು ಜಗದ್ರಕ್ಷಣೆಗೆ ಪೂರ್ಣವಾಗಿ ಶಕ್ತನಾಗಿದ್ದಾನೆ.

English Translation

Sufficient was he for (the protection of) this (world), which he, its defender, fabricated with his two arms for the sake of all mankind, over whom he was supreme by his wisdom; whereby, (also), he, the loud-shouting, having struck Krivi with the thunderbolt, consigned him to (eternal) slumber on the earth.

ವಿಶೇಷವಿಷಯಗಳು

ಸಃ ಅಸ್ಮೈ ಅರಂ (ಬಭೂವ)—ಸ ತಾದೃಶ ಇಂದ್ರಃ ಅಸ್ಮೈ ಜಗತೇ ಅರಮಲಂ ಪರ್ಯಾಪ್ತೋ ಬಭೂವ । ರಕ್ಷಕತ್ವೇನ ಸ್ವಾಮೀ ಬಭೂವೇತ್ಯರ್ಥಃ । ಅಂತಹ ಇಂದ್ರನು ಜಗತ್ತಿನ ರಕ್ಷಣೆಗಾಗಿ ಎಂದರೆ ಜಗತ್ತನ್ನು ಕಾಪಾಡಲು ಪೂರ್ಣವಾಗಿ ಶಕ್ತನಾಗಿದ್ದಾನೆ. ಅದು ಹೇಗೆಂದರೆ—

ಪಿತಾ ವಿಶ್ವಸ್ಮಾತ್ ಜನುಷಃ ಪರಿ ವೇದಸಃ ಬಾಹುಭ್ಯಾಂ ಯಂ ಆ ಅಕೃಣೋತ್—ಸರ್ವಸ್ಯ ಪಾಲಕಃ ಪ್ರಜಾಪತಿಃ ಸ ಇಂದ್ರಃ ಸರ್ವಸ್ಮಾಜ್ಜನಾತ್ ತತೋಽಪ್ಯುತ್ಕೃಷ್ಟಾತ್ ಜ್ಞಾನಾತ್ ಸ್ವಕೀಯಾಭ್ಯಾಂ ಬಾಹುಭ್ಯಾಂ ಯಂ ಆಕೃಣೋತ್ । ಇಂದ್ರನು ಸಮಸ್ತಕ್ಕೂ ಪಾಲಕನಾಗಿಯೂ ಪ್ರಜಾಪತಿರೂಪದಿಂದ ಸಮಸ್ತ

ಜನರಿಗಿಂತಲೂ ಜ್ಞಾನದಲ್ಲಿ ಶ್ರೇಷ್ಠನಾಗಿಯೂ ಇದ್ದುಕೊಂಡು ಯಾವ ಜಗತ್ತನ್ನು ತನ್ನ ಬಾಹುಗಳಿಂದ ಸೃಷ್ಟಿಮಾಡಿದನೋ ಅಂತಹ ಜಗತ್ತನ್ನು ರಕ್ಷಿಸಲು ಶಕ್ತನಾಗಿದ್ದಾನೆ. ಇಂದ್ರನು ಜ್ಞಾನದಲ್ಲಿ ಎಲ್ಲರಿಗಿಂತಲೂ ಶ್ರೇಷ್ಠನು. ಎಲ್ಲರಿಗೂ ತಂದೆಯಂತೆ ಪಾಲಕನಾಗಿರುವನು. ಇಂತಹ ಇಂದ್ರನು ತನ್ನ ಬಾಹುಗಳಿಂದ ಎಂದರೆ ಸ್ವಸಾಮರ್ಥ್ಯದಿಂದ ಈ ಜಗತ್ತನ್ನು ಸೃಷ್ಟಿಸಿದನು. ಅಷ್ಟೇ ಅಲ್ಲ. ಸೃಷ್ಟಿಸಿದ ಈ ಜಗತ್ತನ್ನು ಕಾಪಾಡಲೂ ಸಹ ತಾನೇ ಸಮರ್ಥನು ಎಂದು ಮುಖ್ಯಾಭಿಪ್ರಾಯವು-

**ತುವಿಷ್ಮಣಿಃ ಯೇನ ಕ್ರಿವಿಂ ವಜ್ರೇಣ ಹತ್ವೀ ಪೃಥಿವ್ಯಾಂ ಶಯಧ್ಯೈ ನಿ ಅವೃಣಕ್**—ಇದಲ್ಲದೆ ಬಹುಕೀರ್ತಿಯುಳ್ಳ ಅಥವಾ ಅಧಿಕವಾಗಿ ವೀರಗರ್ಜನೆಯನ್ನು ಮಾಡುತ್ತಿರುವ ಇಂದ್ರನು ತನ್ನ ಅತಿಶಯವಾದ ಜ್ಞಾನದಿಂದ ಅಥವಾ ಸಾಮರ್ಥ್ಯದಿಂದ ಕ್ರಿವಿ ಎಂಬ ಅಸುರನನ್ನು ವಜ್ರಾಯುಧದಿಂದ ಹೊಡೆದುರುಳಿಸಿ ಭೂಮಿಯಮೇಲೆ ಸತ್ತು ಮಲಗುವಂತೆ ಮಾಡಿದನು. ಕ್ರಿವಿ ಎಂಬುವನು ಒಬ್ಬ ಅಸುರನು. ಇವನೂ ಸಹ ವೃತ್ರನಂತೆ ಮೇಘಗಳನ್ನು ಆವರಿಸಿ ವೃಷ್ಟಿಗೆ ತಡೆಯನ್ನುಂಟುಮಾಡುವವನು. ಈ ಅಸುರನನ್ನು ಸಂಹಾರಮಾಡಿದ ವಿಷಯವು ಪ್ರಕೃತ ಋಕ್ಕಿನಲ್ಲಿಯೂ—

**ಅಧ ತ್ವಿಷೀಮಾँ ಅಭ್ಯೋಜಸಾ ಕ್ರಿವಿಂ ಯುಧಾಭವದಾ ರೋದಸೀ ಅಪೃಣದಸ್ಯ ಮಜ್ಮನಾ ಪ್ರ ವಾವೃಧೇ ।**

(ಋ. ಸಂ. ೨-೨೨-೨)

**ಪ್ರ ಯೋ ನನಕ್ಷೇ ಅಭ್ಯೋಜಸಾ ಕ್ರಿವಿಂ ವಧೈಃ ಶುಷ್ಣಂ ನಿಘೋಷಯನ್ ।**

(ಋ. ಸಂ ೮-೫೧-೮)

ಎಂಬ ಋಕ್ಕುಗಳಲ್ಲಿಯೂ ಹೇಳಲ್ಪಟ್ಟಿರುವುದು. ಕ್ರಿವಿ ಶಬ್ದವು ಋ. ಸಂ. ೧-೩೦-೧, ೫-೪೪-೪, ೮-೭೦-೨೪, ೮-೨೨-೧೨, ೮-೮೭-೧, ೯-೯-೬ ಎಂಬ ಋಕ್ಕುಗಳಲ್ಲಿ ಪಠಿತವಾಗಿದ್ದರೂ ಅಲ್ಲಿ ಕ್ರಿವಿ ಶಬ್ದಕ್ಕೆ ಭಾವಿಯೆಂಬರ್ಥದಲ್ಲಿಯೇ ಪ್ರಯೋಗವಿದೆ. ಕ್ರಿವಿ ಶಬ್ದವು ಕೂಪನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೯).

**ಹತ್ವೀ—ಹತ್ವಾ ।** ಸಂಹಾರಮಾಡಿ. ಸ್ನಾತ್ವ್ಯಾದಯಶ್ಚೇತಿ ತ್ವೀ ಎಂಬ ಸೂತ್ರವಾಕ್ಯದಂತೆ ತ್ವೀಪ್ರತ್ಯಯ ಬಂದು ಹತ್ವಾ ಎಂಬ ಶಬ್ದವು ಹತ್ವೀ ಎಂದಾಗಿದೆ ಈ ವಿಧವಾದ ಪ್ರಯೋಗವು ವಿಶೇಷವಾಗಿ ರೂಢಿಯಲ್ಲಿಲ್ಲದಿದ್ದರೂ ಕೆಲವು ಕಡೆ ಮಾತ್ರ ಅಪರೂಪವಾಗಿ ಕಂಡುಬರುವುದು. ಹತ್ವೀ ಎಂಬ ಶಬ್ದವು ಈ ಋಕ್ಕಿನಲ್ಲಿಯೂ ಋ. ಸಂ. ೨-೨೦-೮, ೨-೩೦-೧೦, ೩-೩೪-೯ ಎಂಬ ಋಕ್ಕುಗಳಲ್ಲಿಯೂ ಪಠಿತವಾಗಿದೆ. ಇದರಂತೆ ಭೂತ್ವೀ ಎಂಬ ಶಬ್ದವು ಋ. ಸಂ. ೭-೧೦೪-೧೮, ೧೦-೮೫-೨೯, ೧೦-೧೪೫-೫ ಎಂಬ ಋಕ್ಕುಗಳಲ್ಲಿ ಪಠಿತವಾಗಿದೆ.

---

**ಸಂಹಿತಾಪಾಠಃ**

**ಅಮಾಜೂರಿವ ಪಿತ್ರೋಃ ಸಚಾ ಸತೀ ಸಮಾನಾದಾ ಸದಸಸ್ತ್ವಾಮಿಯೇ ಭಗಂ ।**

ಕೃಧಿ ಪ್ರಕೇತಮುಪ ಮಾಸ್ಯಾ ಭರ ದದ್ಧಿ ಭಾಗಂ ತನ್ವೋ೩ಯೇನ ಮಾಮಹಃ ॥ ೭ ॥

ಪದಪಾಠಃ

ಅಮಾಜೂಃಽಇವ । ಪಿತ್ರೋಃ । ಸಚಾ । ಸತೀ । ಸಮಾನಾತ್ । ಆ । ಸದಸಃ । ತ್ವಾಂ । ಇಯೇ । ಭಗಂ । ಕೃಧಿ । ಪ್ರಽಕೇತಂ । ಉಪ । ಮಾಸಿ । ಆ । ಭರ । ದದ್ಧಿ । ಭಾಗಂ । ತನ್ವಃ । ಯೇನ । ಮಮಹಃ ॥ ೭ ॥

ಸಾಯಣಭಾಷ್ಯಂ

ಹೇ ಇಂದ್ರ ಅಮಾಜೂರ್ಯಾವಜ್ಜೀವಂ ಗೃಹ ಏವ ಜೀರ್ಯಂತೀ ಪಿತ್ರೋಃ ಸಚಾ ಮಾತಾಪಿತೃಭ್ಯಾಂ ಸಹ ಭವಂತೀ ತಯೋಃ ಶುಶ್ರೂಷಣಪರಾ ಪತಿಮಲಭಮಾನಾ ಸತೀ ದುಹಿತಾ ಸಮಾನಾದಾತ್ಮನಃ ಪಿತ್ರೋಶ್ಚ ಸಾಧಾರಣಾತ್ಸದಸೋ ಗೃಹಾತ್ ॥ ಅಧಿಕರಣೇ ಚೋಪಸಂಖ್ಯಾನಮಿತಿ ಪಂಚಮೀ ॥ ಗೃಹ ಉಪಸ್ಥಾಯೈವ ಯಥಾ ಭಾಗಂ ಯಾಚತಿ ತಥಾ ಸ್ತೋತಾಹಂ ಭಗಂ ಭಜನೀಯಂ ಧನಂ ತ್ವಾಮಿಯೇ ॥ ಈ ಗತ್ಯಾದಿಷು । ಲಿಟ್ಯುತ್ತಮ ಇತಿ ವ್ಯತ್ಯಯೇನಾತ್ಮನೇಪದಂ । ಇಯಙಾದೇಶಃ ॥ ತ್ವಾಂ ಯಾಚೇ । ತತ್ರ ದೇಯಂ ಧನಂ ಪ್ರಕೇತಂ ಪ್ರಕರ್ಷೇಣ ಜ್ಞಾತವ್ಯಂ ವಿಶ್ವಜನೀಯಂ ಕೃಧಿ । ಕುರು । ತತ್ರೋಪಮಾಸಿ । ಏತಾವದಿದಂ ಧನಮಿತಿ ಕುರು । ಆಭರ । ತತ್ರ ಧನಂ ಸಂಪಾದಯ । ಭಾಗಂ ಭಜನೀಯಂ ಧನಂ ತನ್ವಃ ಶರೀರಾಯ ಮಹ್ಯಮಿತಿ ಯಾವತ್ ದದ್ಧಿ । ದೇಹಿ । ಯೇನ ಧನೇನ ಮಮಹಃ । ಸ್ತೋತೄನ್ಮಾನ್ಯಾನ್ಪೂಜಯಸಿ ॥

ಪ್ರತಿಪದಾರ್ಥ

ಅಮಾಜೂಃ—ವೃದ್ಧಳಾಗುವವರೆಗೂ । ಪಿತ್ರೋಃ ಸಚಾ—(ಪತಿಯನ್ನು ಹೊಂದದೇ) ತಂದೆತಾಯಿಗಳ ಶುಶ್ರೂಷೆಯನ್ನು ಮಾಡುತ್ತಾ ಅವರ ಜೊತೆಯಲ್ಲಿಯೇ ಇರತಕ್ಕ । ಸತೀ—ಸಾಧ್ವಿಯಾದ ಪುತ್ರಿಯು । ಸಮಾನಾತ್—ತನ್ನ ತಂದೆತಾಯಿಯರಿಗೆ ಸೇರಿದ । ಆ ಸದಸಃ ಇವ—ಗೃಹದಿಂದ ತನ್ನ ಜೀವನಕ್ಕೆ ಬೇಕಾದ ಸ್ವತ್ತನ್ನು ಅಪೇಕ್ಷಿಸುವಂತೆ ಭಗಂ—ಪೂಜ್ಯವಾದ ಧನವನ್ನು । ತ್ವಾಂ—ನಿನ್ನಲ್ಲಿ । ಇಯೇ—ಪ್ರಾರ್ಥಿಸುತ್ತೇನೆ (ಆ ಧನವನ್ನು) । ಪ್ರಕೇತಂ—ಪ್ರಕಾಶಮಾಡಿ ಎಲ್ಲರಿಗೂ ತಿಳಿಯುವಂತೆ । ಕೃಧಿ—ಮಾಡು । ಉಪ ಮಾಸಿ—ಆ ಧನದ ಪರಿಮಾಣವನ್ನೂ ತಿಳಿಸು । ಆ ಭರ—(ನನಗೆ) ತಂದೊದಗಿಸು । ಯೇನ—ಯಾವ ಧನದಿಂದ । ಮಮಹಃ—(ನಿನ್ನ ಸ್ತುತಿಕರ್ತರನ್ನು) ಗೌರವಿಸುತ್ತೀಯೋ ಅಂತಹ । ಭಾಗಂ—ಪೂಜ್ಯವಾದ ಧನವನ್ನು । ತನ್ವಃ—ನನ್ನ ಶರೀರದ ಪೋಷಣೆಗಾಗಿ । ದದ್ಧಿ—ಕೊಡು.

ಭಾವಾರ್ಥಃ

ವೃದ್ಧಳಾಗುವವರೆಗೂ ಪತಿಯನ್ನು ಪಡೆಯದೇ, ತಂದೆತಾಯಿಗಳ ಶುಶ್ರೂಷೆಯನ್ನು ಮಾಡುತ್ತಾ ಅವರ ಜೊತೆಯಲ್ಲಿಯೇ ಇರತಕ್ಕ ಸಾಧ್ವಿಯಾದ ಪುತ್ರಿಯು ತನ್ನ ತಂದೆತಾಯಿಯರ ಗೃಹದಿಂದಲೇ ತನ್ನ ಜೀವನಕ್ಕೆ ಬೇಕಾದ

ಸ್ವತ್ತನ್ನು ಅಪೇಕ್ಷಿಸುವಂತೆ ಪೂಜ್ಯವಾದ ಧನವನ್ನು ನಿನ್ನಲ್ಲಿ ಪ್ರಾರ್ಥಿಸುತ್ತೇನೆ. ನನಗೆ ಕೊಡಬೇಕಾದ ಆ ಧನವನ್ನು ಪ್ರಕಾಶಮಾಡಿ ಎಲ್ಲರಿಗೂ ತಿಳಿಯುವಂತೆ ಮಾಡು. ಆ ಧನದ ಪರಿಮಾಣವನ್ನೂ ತಿಳಿಸು. ಅದನ್ನು ನನಗೆ ತಂದೊದಗಿಸು. ಯಾವ ಧನದಿಂದ ನೀನು ಸ್ತುತಿಕರ್ತರನ್ನು ಗೌರವಿಸುತ್ತೀಯೋ ಅಂತಹ ಪೂಜ್ಯವಾದ ಧನವನ್ನು ನನ್ನ ಶರೀರದ ಪೋಷಣೆಗಾಗಿ ಕೊಡು.

## English Translation

As a virtuous (maiden), growing old in the same dwelling with her parents, (claims from them her support), so come I to you for wealth : make it conspicuous, measure it, bring it (hither), grant (a sufficient) portion for my bodily sustenance, (such as that) wherewith you honour (your worshippers).

## ವಿಶೇಷವಿಷಯಗಳು.

ಈ ಋಕ್ಕಿನ ಅರ್ಥವು ತೊಡಕಾಗಿರುವುದು. ಅರ್ಥವು ಸರಿಯಾಗಿ ಹೊಂದುವುದಕ್ಕಾಗಿ ಕೆಲವು ಶಬ್ದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕಾಗುವುದು. ಮತ್ತು ಒಂದೆರಡು ಶಬ್ದಗಳಿಂದಲೇ ವಾಕ್ಯದ ಅರ್ಥವನ್ನು ಊಹಿಸಿ ನಿಶ್ಚಯಿಸಬೇಕಾಗಿರುವುದು. ಆದುದರಿಂದ ಈ ಋಕ್ಕಿಗೆ ಇಲ್ಲಿ ಹೇಳಿರುವ ಅರ್ಥವು ಋಷಿಯ ಆಶಯಕ್ಕೆ ಅನುಸಾರವಾಗಿರುವುದೆಂದು ಹೇಳುವುದಕ್ಕಾಗುವುದಿಲ್ಲ.

**ಅಮಾಜೂಃ**— ಅಮಾ ಎಂಬ ಶಬ್ದವು ಗೃಹನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) ಅಮಾ ಎಂದರೆ ಗೃಹವು. **ಯಾವಜ್ಜೀವಂ ಗೃಹ ಏವ ಜೀರ್ಯಂತೀ**—ಆಜೀವಪರ್ಯಂತವಾಗಿ ಮನೆಯಲ್ಲಿಯೇ ಇದ್ದು ವೃದ್ಧಳಾಗುವ ಸ್ತ್ರೀ ಎಂದರೆ ಮದುವೆ ಮಾಡಿಕೊಂಡು ಪತಿಯ ಮನೆಗೆ ಹೋಗದೆ ತಂದೆಯ ಮನೆಯಲ್ಲಿಯೇ ಇದ್ದು ಅಲ್ಲಿಯೇ ವೃದ್ಧಳಾಗುವ ಸ್ತ್ರೀ ಎಂದು ಭಾಷ್ಯಕಾರರ ವಿವರಣೆಯು. ಸ್ತ್ರೀಯು ತನ್ನ ಕುರೂಪ ಅಥವಾ ಅಂಗವಿಕಲತೆಯಿಂದಲಾಗಲೀ ಅಥವಾ ಬೇರೆ ಇತರ ಕಾರಣಗಳಿಂದಲಾಗಲೀ ಮದುವೆಯಾಗದೆ ಹಾಗೆಯೇ ಇರಬೇಕಾದ ಸಂದರ್ಭವು ಒದಗಬಹುದು. ಸಚ್ಚರಿತ್ರಳಾದ ಸ್ತ್ರೀಗೆ ಇಂತಹ ಗತಿಯು ಉಂಟಾದರೆ ಅವಳು ತನ್ನ ತಂದೆಯ ಮನೆಯಲ್ಲಿಯೇ ಇದ್ದುಕೊಂಡು ತನ್ನ ಜೀವನವನ್ನು ಸಾಗಿಸುತ್ತಿರುವಳು. ಇಂತಹ ಸ್ತ್ರೀಯು ತಂದೆಯು ಜೀವಂತನಾಗಿರುವವರೆಗೂ ಅವನ ಪೋಷಣೆಯಲ್ಲಿದ್ದು ಅನಂತರ ಜೀವನಕ್ಕಾಗಿ ಇತರ ಪುತ್ರರಂತೆ ತಂದೆಯ ಆಸ್ತಿಯಲ್ಲಿ ತನಗೂ ಒಂದು ಭಾಗವನ್ನು ಅಪೇಕ್ಷಿಸುವಳು. ಈ ಸ್ತ್ರೀಯು ಉಪಮಾನವನ್ನೇ ಇಲ್ಲಿ ಹೇಳಲಾಗಿದೆ.

**ಅಮಾಜೂರಿವ ಪಿತ್ರೋಃ ಸಚಾ ಸತೀ ಸಮಾನಾತ್ ಆ ಸದಸಃ ತ್ವಾಂ ಇಯೇ ಭಗಂ— ಯಾವಜ್ಜೀವಂ ಗೃಹ ಏವ ಜೀರ್ಯಂತೀ ಮಾತಾಪಿತೃಭ್ಯಾಂ ಸಹ ಭವಂತೀ ತಯೋಃ ಶುಶ್ರೂಷಣಾಪರಾ ಪತಿಮಲಭಮಾನಾ ಸತೀ ದುಹಿತಾ ಸಮಾನಾದಾತ್ಮನಃ ಪಿತ್ರೋಶ್ಚ ಸಾಧಾರಣಾತ್ ಗೃಹಾತ್ ಗೃಹ ಉಪಸ್ಥಾಯೈವ ಯಥಾ ಭಾಗಂ ಯಾಚತಿ ತಥಾ ಸ್ತೋತಾಹಂ ಭಜನೀಯಂ ಧನಂ ತ್ವಾಂ ಯಾಚೇ।**
ಕಾರಣಾಂತರದಿಂದ ಪತಿಯು ದೊರೆಯದೆ ಮದುವೆಗೆ ಅವಕಾಶವಿಲ್ಲದೆ ಹಾಗೆಯೇ ಉಳಿದು ಕನ್ಯಾವಸ್ಥೆಯಲ್ಲಿಯೇ ಇದ್ದುಕೊಂಡು ತಂದೆಯ ಮನೆಯಲ್ಲಿ ವಾಸಿಸುತ್ತಾ ಸಚ್ಚರಿತ್ರಳಾಗಿ ತಂದೆತಾಯಿಗಳ ಶುಶ್ರೂಷೆಯನ್ನು ಮಾಡಿಕೊಂಡು ಆಜೀವಪರ್ಯಂತರವೂ ಎಂದರೆ ವೃದ್ಧಳಾಗುವವರೆಗೂ ಇರುವ ಸ್ತ್ರೀಯು ತನ್ನ ಜೀವನಕ್ಕೆ ಬೇರೆ ಅವಕಾಶವಿಲ್ಲದ್ದರಿಂದ

ತಂದೆಯ ಮನೆಯ ಆಸ್ತಿಯಲ್ಲಿಯೇ ಒಂದು ಭಾಗವನ್ನು ಅಪೇಕ್ಷಿಸುವಂತೆ ಇಂದ್ರನಾದ ನಿನ್ನನ್ನು ಸ್ತೋತ್ರಮಾಡುವ್ವ ನಾನು ನಿನ್ನಿಂದ ಸ್ವಲ್ಪಭಾಗ ಧನವನ್ನು ಅಪೇಕ್ಷಿಸುತ್ತೇನೆ. ಅದಕ್ಕಾಗಿ ನಿನ್ನನ್ನು ಪ್ರಾರ್ಥಿಸುತ್ತಾ ನಿನ್ನ ಸಮೀಪಕೆ ಬರುತ್ತೇನೆ ಎಂದು ಮುಖ್ಯಾಭಿಪ್ರಾಯವು.

ಇಂದ್ರನು ತನಗೆ ಕೊಡಬೇಕಾದ ಧನವು ಯಾವ ರೀತಿ ಇರಬೇಕು, ಹೇಗೆ ಕೊಡಬೇಕು ಇತ್ಯಾದಿ ವಿವರಗಳನ್ನು ಋಷಿಯು ಈ ಋಕ್ಕಿನ ಉತ್ತರಾರ್ಧದಲ್ಲಿ ಮೂರುನಾಲ್ಕು ವಾಕ್ಯಗಳಲ್ಲಿ ವಿವರಿಸುವನು.

**ಕೃಧಿ ಪ್ರಕೇತಂ—ತತ್ರ ದೇಯಂ ಧನಂ ಪ್ರಕೇತಂ ಪ್ರಕರ್ಷೇಣ ಜ್ಞಾತವ್ಯಂ ವಿಶ್ವಜನೀಯಂ ಕೃಧಿ ಕುರು ।** ನನಗೆ ಕೊಡಬೇಕಾದ ಎಂದರೆ ನಾನು ಪ್ರಾರ್ಥಿಸಿರುವ ಧನವನ್ನು ಎಲ್ಲರಿಗೂ ತಿಳಿಯುವಂತೆ ಎಂದರೆ ಎಲ್ಲರ ಎದುರಿಗೂ ಕೊಡು. ಈ ವಿಷಯದಲ್ಲಿ ರಹಸ್ಯವೇನೂ ಬೇಕಾಗಿಲ್ಲ.

**ಉಪ ಮಾಸಿ ಆಭರ—ಏತಾವದಿದಂ ಧನಮಿತಿ ಕುರು । ತತ್ರ ಧನಂ ಸಂಪಾದಯ ।** ಧನವನ್ನು ಕೊಡುವಾಗ—ಈ ಧನವು ನಿನ್ನದು. ಇದನ್ನು ನಿನಗಾಗಿ ಕೊಡುವೆನು ಎಂದು ಸ್ಪಷ್ಟವಾಗಿ ನಿರ್ದೇಶಮಾಡಿ ಧನವನ್ನು ನನಗೆ ಕೊಡು ಎಂದಭಿಪ್ರಾಯವು.

**ದದ್ಧಿ ಭಾಗಂ ತನ್ವಃ ಯೇನ ಮಮಹಃ—ಭಾಗಂ ಭಜನೀಯಂ ಧನಂ ತನ್ವಃ ಶರೀರಾಯ ಮಹ್ಯಮಿತಿ ಯಾವತ್ ದದ್ಧಿ ದೇಹಿ । ಯೇನ ಧನೇನ ಸ್ತೋತ್ರ್ಯಾನಿಮಾನ್ಪೂಜಯಸಿ ।** ನಿನ್ನನ್ನು ಸ್ತೋತ್ರಮಾಡುವವರಿಗೆ ನೀನು ಕೊಟ್ಟು ಗೌರವಿಸುವ (ಎಂದರೆ ಸಂತೋಷಪಡಿಸುವ) ಧನದಲ್ಲಿ ನನಗೆ ಕೊಡಬೇಕಾದ ಭಾಗವನ್ನು ನಿರ್ದೇಶಮಾಡಿ, ಇಗೋ, ಈ ಧನವು ನಿನ್ನ ಶರೀರಕ್ಕಾಗಿ ಎಂದರೆ ಶರೀರ ಪೋಷಣೆಗಾಗಿ ಅಥವಾ ನಿನಗಾಗಿ ಎಂದು ಹೇಳಿಕೊಡು ಎಂದಭಿಪ್ರಾಯವು.

---

**ಸಂಹಿತಾಪಾಠಃ**

## ಭೋಜಂ ತ್ವಾಮಿಂದ್ರ ವಯಂ ಹುವೇಮ ದದಿಷ್ಟ್ವಮಿನ್ದ್ರಾಪಾಂಸಿ ವಾಜಾನ್ ।
## ಅವಿಡ್ಢೀನ್ದ್ರ ಚಿತ್ರಯಾ ನ ಊತೀ ಕೃಧಿ ವೃಷನ್ನಿನ್ದ್ರ ವಸ್ಯಸೋ ನಃ ॥೮॥

**ಪದಪಾಠಃ**

**ಭೋಜಂ । ತ್ವಾಂ । ಇನ್ದ್ರ । ವಯಂ । ಹುವೇಮ । ದದಿಃ । ತ್ವಂ । ಇನ್ದ್ರ । ಅಪಾಂಸಿ । ವಾಜಾನ್ ।**

**ಅವಿಡ್ಢಿ । ಇನ್ದ್ರ । ಚಿತ್ರಯಾ । ನಃ । ಊತೀ । ಕೃಧಿ । ವೃಷನ್ । ಇನ್ದ್ರ । ವಸ್ಯಸಃ । ನಃ ॥ ೮ ॥**

### ಸಾಯಣಭಾಷ್ಯಂ

**ಹೇ ಇಂದ್ರ ಭೋಜಂ ಪಾಲಯಿತಾರಂ ಭೋಜಯಿತಾರಂ ವಾ ತ್ವಾಂ ವಯಂ ಹುವೇಮ ॥ ಹ್ವಯತೇರ್ಲಿಜಾ ಬಹುಲಂ ಛಂದಸೀತಿ ಸಂಪ್ರಸಾರಣಂ ॥ ಹೇ ಇಂದ್ರ ತ್ವಮಪಾಂಸಿ ಕರ್ಮಾಣಿ ವಾಜಾನನ್ನಾನಿ ದದಿಃ ॥ ದಾಣ್ ದಾನೇ । ಆದೃಗಮಹನಜನ ಇತಿ ಕಿಪ್ರತ್ಯಯಃ । ಲಿಡ್ವದ್ಭಾವಾದಭ್ಯಾಸಾದಿಕಾರ್ಯಂ । ನ ಲೋಕಾವ್ಯಯನಿಷ್ಠೇತಿ ಷಷ್ಠೀಪ್ರತಿಷೇಧಃ ॥ ದಾತಾ ಖಲು । ಹೇ ಇಂದ್ರ ಚಿತ್ರಯಾ ನಾನಾಪ್ರಕಾರಯೋತೀ ಊತ್ಯಾ ಪಾಲನೇನ ನೋಽಸ್ಮಾನವಿಡ್ಢಿ । ರಕ್ಷ । ವೃಷನ್ ಕಾಮಾನಾಂ ವರ್ಷಕ ಹೇ ಇಂದ್ರ ನೋಽಸ್ಮಾನ್ವಸ್ಯಸೋಽತಿಶಯೇನ ವಸುಮತಃ ಕೃಧಿ । ಕುರು ॥**

### ಪ್ರತಿಪದಾರ್ಥ

**ಇಂದ್ರ**—ಇಂದ್ರನೇ । **ಭೋಜಂ** ಸುಖಾನುಭವವನ್ನು ಕೊಡತಕ್ಕ । **ತ್ವಾಂ**—ನಿನ್ನನ್ನು । **ವಯಂ**—ನಾವು । **ಹುವೇಮ**—ಕರೆಯುತ್ತೇವೆ । **ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ಅಪಾಂಸಿ**—(ನಮ್ಮ) ಕರ್ಮಗಳಿಗೆ ಪ್ರತಿಯಾಗಿ । **ವಾಜಾನ್**—ಅನ್ನಗಳನ್ನು । **ದದಿಃ**—ಕೊಡು । **ಇಂದ್ರ**—ಇಂದ್ರನೇ । **ಚಿತ್ರಯಾ**—ಅನೇಕವಿಧವಾದ । **ಊತೀ**—ರಕ್ಷಣೆಯಿಂದ । **ನಃ**—ನಮ್ಮನ್ನು । **ಅವಿಡ್ಢಿ**—ರಕ್ಷಿಸು । **ವೃಷನ್**—ಇಷ್ಟಾರ್ಥವನ್ನು ಸುರಿಸತಕ್ಕ । **ಇಂದ್ರ**—ಇಂದ್ರನೇ । **ನಃ**—ನಮ್ಮನ್ನು । **ವಸ್ಯಸಃ**—ಧನವಂತರನ್ನಾಗಿ । **ಕೃಧಿ**—ಮಾಡು.

### ಭಾವಾರ್ಥ

ಎಲೈ ಇಂದ್ರನೇ, ಸುಖಾನುಭವವನ್ನು ಕೊಡತಕ್ಕ ನಿನ್ನನ್ನು ನಾವು ಕರೆಯುತ್ತೇವೆ. ನೀನು ನಮ್ಮ ಕರ್ಮಗಳಿಗೆ ಪ್ರತಿಫಲವಾದ ಅನ್ನವನ್ನು ಕೊಡು. ಅನೇಕವಿಧವಾದ ರಕ್ಷಣೆಯಿಂದ ನಮ್ಮನ್ನು ರಕ್ಷಿಸು. ಇಷ್ಟಾರ್ಥಪ್ರದನಾದ ಎಲೈ ಇಂದ್ರನೇ, ನಮ್ಮನ್ನು ಧನವಂತರನ್ನಾಗಿ ಮಾಡು.

### English Translation

We invoke you, Indra, the bestower of enjoyment: you grant food, Indra, (in requital of pious) works; protect us, Indra, with manifold protections; Indra, showerer (of benefits), render as affluent.

### ವಿಶೇಷವಿಷಯಗಳು

ಈ ಋಕ್ಕೂ ಮುಂದಿನ ಋಕ್ಕೂ ಈ ಸೂಕ್ತಕ್ಕೆ ಉಪಸಂಹಾರವಾಗಿರುವುದು. ಇಂದ್ರನು ನಮಗೆ ಅನ್ನಾದ್ಯಾಹಾರಗಳನ್ನೂ ಧನಾದಿಗಳನ್ನು ಕೊಡಬೇಕೆಂದು ಪ್ರಾರ್ಥನೆಮಾಡಲಾಗಿದೆ.

**ಭೋಜಂ ತ್ವಾಂ ಇಂದ್ರ ವಯಂ ಹುವೇಮ**—ಎಲೈ ಇಂದ್ರನೇ, ನಮ್ಮನ್ನು ಪಾಲಿಸತಕ್ಕ ಅಥವಾ ನಮಗೆ ಅನ್ನಾದ್ಯಾಹಾರಗಳನ್ನು ಕೊಟ್ಟು ಕಾಪಾಡುವ ನಿನ್ನನ್ನು ನಾವು ಆಹ್ವಾನಮಾಡುತ್ತೇವೆ.

**ಇಂದ್ರ ತ್ವಂ ಅಪಾಂಸಿ ವಾಜಾನ್ ದದಿಃ**—ಎಲೈ ಇಂದ್ರನೇ, ನಾವು ಮಾಡುವ ಯಜ್ಞಾದಿ ಕರ್ಮಗಳಿಗೆ ಪ್ರತಿಫಲವನ್ನೂ, ಅನ್ನಾದ್ಯಾಹಾರಗಳನ್ನೂ ನೀನು ನಮಗೆ ಕೊಡುವವನಾಗು ಎಂದು ಪ್ರಾರ್ಥಿಸಿದೆ. ಇಲ್ಲಿ ಅಪಃ ಎಂಬ ಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ ಅಪಾಂಸಿ ಎಂದರೆ ನಾವು ಆಚರಿಸುವ ಯಜ್ಞಾದಿಕರ್ಮ

ಗಳೆಂದು ಅರ್ಥವು. ಮತ್ತು ಇಲ್ಲಿ ಅಪಾಂಸಿ ಎಂಬ ಶಬ್ದಮಾತ್ರವಿರುವುದರಿಂದ ಯಜ್ಞಾದಿಕರ್ಮಗಳನ್ನು ಕೊಡು ಎಂದರೆ ಅರ್ಥವು ಸರಿಯಾಗಿ ಹೊಂದುವುದಿಲ್ಲ. ಆದುದರಿಂದ ನಾವು ಮಾಡುವ ಯಜ್ಞಾದಿಕರ್ಮಗಳು ಸರಿಯಾಗಿ ನೆರವೇರುವಂತೆ ಮಾಡಿ ಅವುಗಳಿಗೆ ಅನುರೂಪವಾದ ಪ್ರತಿಫಲಗಳನ್ನು ಕೊಡು ಎಂದು ಅರ್ಥಮಾಡಬೇಕು.

ಅವಿಡ್ಢಿ ಇಂದ್ರ ಚಿತ್ರಯಾ ನಃ ಊತೀ — ಎಲೈ ಇಂದ್ರನೇ, ನೀನು ನಮ್ಮನ್ನು ನಾನಾವಿಧರಕ್ಷಣೆಗಳಿಂದ ಎಂದರೆ ಶತ್ರುಗಳ ಬಾಧೆಯಿಂದ ರಕ್ಷಣೆ, ಕ್ಷುದ್ಬಾಧೆಯುಂಟಾಗದಂತೆ ಆಹಾರಾದಿಗಳನ್ನು ಕೊಡುವುದರಿಂದ ರಕ್ಷಣೆ, ವ್ಯಾಧಿಗಳುಂಟಾಗದಂತೆ ರಕ್ಷಣೆ ಇತ್ಯಾದಿ ನಾನಾವಿಧ ರಕ್ಷಣೋಪಾಯಗಳಿಂದ ನಮ್ಮನ್ನು ರಕ್ಷಿಸು ಎಂದಭಿಪ್ರಾಯವು.

ಕೃಧಿ ವೃಷನ್ ಇಂದ್ರ ವಸ್ಯಸಃ ನಃ—ಎಲೈ ಕಾಮಾರ್ಥಪ್ರದನಾದ ಇಂದ್ರನೇ, ನಮ್ಮನ್ನು ಅತಿಶಯವಾದ ಧನವುಳ್ಳವರನ್ನಾಗಿ ಮಾಡು ಎಂದರೆ ನಮಗೆ ಅಧಿಕವಾದ ಧನವನ್ನು ಕೊಡು ಎಂದು ಪ್ರಾರ್ಥಿಸಲಾಗಿದೆ.

---

ಸಂಹಿತಾಪಾಠಃ

ನೂನಂ ಸಾ ತೇ ಪ್ರತಿ ವರಂ ಜರಿತ್ರೇ ದುಹೀಯದಿಂದ್ರ ದಕ್ಷಿಣಾ ಮಘೋನೀ ।
ಶಿಕ್ಷಾ ಸ್ತೋತೃಭ್ಯೋ ಮಾತಿ ಧಗ್ಭಗೋ ನೋ ಬೃಹದ್ವದೇಮ ವಿದಥೇ ಸುವೀರಾಃ ॥ ೮ ॥

ಪದಪಾಠಃ

ನೂನಂ । ಸಾ । ತೇ । ಪ್ರತಿ । ವರಂ । ಜರಿತ್ರೇ । ದುಹೀಯತ್ । ಇಂದ್ರ । ದಕ್ಷಿಣಾ । ಮಘೋನೀ ।
ಶಿಕ್ಷ । ಸ್ತೋತೃಽಭ್ಯಃ । ಮಾ । ಅತಿ । ಧಕ್ । ಭಗಃ । ನಃ । ಬೃಹತ್ । ವದೇಮ । ವಿದಥೇ । ಸುಽವೀರಾಃ ॥

ಸಾಯಣಭಾಷ್ಯಂ

ಅಹರ್ಗಣೇಷು ಮಾಧ್ಯಂದಿನಸವನೇಷು ತಾಯಮಾನರೂಪೇಷ್ವಚ್ಛಾವಾಕಸ್ಯಾಹರಹಃ ಶಸ್ಯ- ಸಂಜ್ಞಕಮಭಿತಷ್ಟೇವೇತಿ ಸೂಕ್ತಂ । ನೂನಂ ಸಾ ತ ಇತ್ಯೇಷಾ ತಸ್ಯಾಂತೇ ಶಂಸನೀಯಾ । ಸೂತ್ರಿತಂ ಚ । ನೂನಂ ಸಾ ತ ಇತ್ಯಂತಮುತ್ತಮಂ । ಆ. ೭-೪ । ಇತಿ ॥

ಹೇ ಇಂದ್ರ ಯಾ ದಕ್ಷಿಣಾ ದಕ್ಷಮುತ್ಸಾಹನಂ ಕರೋತೀತಿ ದಕ್ಷಿಣಾ ಸ್ತೋತೃಭ್ಯೋ ದೇಯಾ ತೇ ತ್ವತ್ಸಂಬಂಧಿನೀ ಮಘೋನೀ ಧನವತೀ ಜರಿತ್ರೇ ಸ್ತೋತ್ರೇ ವರಂ ಶ್ರೇಷ್ಠಮಭಿಮತಮರ್ಥಂ ನೂನಂ ಪ್ರತಿದುಹೀಯತ್ । ಇದಾನೀಂ ಪ್ರತಿದೋಗ್ಧಿ । ಸಂಪಾದಯತೀತ್ಯರ್ಥಃ । ತಾದೃಶೀಂ ದಕ್ಷಿಣಾಂ ಸ್ತೋತೃ-

ಭ್ಯೋಽಸ್ಮಭ್ಯಂ ಶಿಕ್ಷ । ಪ್ರಯಚ್ಛ । ಕಿಂಚ ಭಗೋ ಭಜನೀಯಸ್ತ್ವಂ ಮಾತಿ ಧಕ್ ॥ ದಹೇರ್ದಾನಾರ್ಥಸ್ಯ ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ ॥ ನೋಽಸ್ಮಾನತಿಕ್ರಮ್ಯಾನ್ಯೇಭ್ಯೋ ದಕ್ಷಿಣಾಂ ಮಾ ದಾಃ । ಪ್ರಥಮಮಸ್ಮಭ್ಯಂ ದತ್ವಾ ಪಶ್ಚಾದನ್ಯೇಭ್ಯೋ ದೀಯತಾಮಿತ್ಯರ್ಥಃ। ಯದ್ವಾ ನೋಽಸ್ಮಾಕಂ ಕಾಮಾನ್ ಮಾ ಧಕ್ । ಮಾ ಧಾಕ್ಷೀಃ । ಅಪೇಕ್ಷಿತಫಲದಾನೇನ ಪೂರಯೇತ್ಯರ್ಥಃ । ಸುವೀರಾಃ ಶೋಭನಪುತ್ರ-ಪೌತ್ರಾಃ ಸಂತೋ ವಯಂ ವಿದಥೇಽಸ್ಮಿನ್ಯಜ್ಞೇ ಬೃಹತ್ ಪ್ರಭೂತಂ ಸ್ತೋತ್ರಂ ವದೇಮ । ತ್ವಾಮುದ್ದಿಶ್ಯ ಬ್ರವಾಮ ॥ ಅತ್ರ ಸಾ ತೇ ಪ್ರತಿದುಗ್ಧಾಮಿತಿ ಪ್ರಕೃತ್ಯ ವೀರೋ ವೀರಯತ್ಯಮಿತ್ರಾನ್ ವೇತೇರ್ವಾ ಸ್ಯಾದ್ಗತಿಕರ್ಮಣೋ ವೀರಯತೇರ್ವೇತ್ಯಂತಂ ನಿರುಕ್ತಮನುಸಂಧೇಯಂ। ನಿ. ೧-೭ ॥

### ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ತೇ—ನಿನ್ನಿಂದ ದತ್ತವಾಗತಕ್ಕದ್ದೂ । ಮಘೋನೀ—ಪ್ರಭೂತವಾದ ಸಂಪತ್ತುಳ್ಳದ್ದೂ ಆದ । ಸಾ ದಕ್ಷಿಣಾ—ಆ ದಕ್ಷಿಣೆಯು । ಜರಿತ್ರೇ—ಸ್ತುತಿಕರ್ತನಾದ ಯಜಮಾನನಿಗೆ । ನೂನಂ-ಖಂಡಿತವಾಗಿಯೂ । ವರಂ—ಶ್ರೇಷ್ಠವಾಗಿ । ಪ್ರತಿ ದುಹೀಯತ್—ಇಷ್ಟಾರ್ಥವನ್ನು ಪೂರೈಸುತ್ತದೆ (ಅಂತಹ ದಕ್ಷಿಣೆಯನ್ನು) । ಸ್ತೋತೃಭ್ಯಃ—ಸ್ತುತಿಕರ್ತರಾದ ನಮಗೂ ಸಹ । ಶಿಕ್ಷ—ಕೊಡು । ಭಗಃ—ಪೂಜ್ಯನಾದ ನೀನು। ನಃ—ನಮ್ಮನ್ನು । ಮಾತಿ ಧಕ್—ತಿರಸ್ಕರಿಸಬೇಡ । ಸುವೀರಾಃ—ಶ್ರೇಷ್ಠರಾದ ವೀರಪುತ್ರರಿಂದೊಡಗೂಡಿದ ನಾವು । ವಿದಥೇ—ಈ ಯಜ್ಞದಲ್ಲಿ । ಬೃಹತ್—ಪ್ರಭೂತವಾದ ಸ್ತೋತ್ರವನ್ನು । ವದೇಮ—ಪಠಿಸುತ್ತೇವೆ.

### ಭಾವಾರ್ಥ

ಎಲೈ ಇಂದ್ರನೇ, ನಿನ್ನಿಂದ ದತ್ತವಾಗತಕ್ಕದ್ದೂ, ಪ್ರಭೂತನಾದ ಸಂಪತ್ತುಳ್ಳದ್ದೂ ಆದ ಆ ದಕ್ಷಿಣೆಯು ಸ್ತುತಿಕರ್ತನಾದ ಯಜಮಾನನಿಗೆ ಖಂಡಿತವಾಗಿಯೂ ಇಷ್ಟಾರ್ಥವನ್ನು ಶ್ರೇಷ್ಠವಾದ ರೀತಿಯಲ್ಲಿ ಪೂರೈಸುತ್ತದೆ. ಅಂತಹ ದಕ್ಷಿಣೆಯನ್ನು ಸ್ತುತಿಕರ್ತರಾದ ನಮಗೂ ಕೊಡು. ಪೂಜ್ಯನಾದ ನೀನು ನಮ್ಮನ್ನು ತಿರಸ್ಕರಿಸಬೇಡ. ಶ್ರೇಷ್ಠರಾದ ಪುತ್ರರಿಂದೊಡಗೂಡಿದ ನಾವು ಈ ಯಜ್ಞದಲ್ಲಿ ಪ್ರಭೂತವಾದ ಸ್ತೋತ್ರವನ್ನು ಪಠಿಸುತ್ತೇವೆ.

### English Translation

That opulent donation which proceeds, Indra, from you, assuredly bestows upon him who praises you the boon (that he desires) : grant it to (us) your adorers : do not you, who are the object of adoration, disregard our prayers; so that, blessed with worthy descendants, we may glorify you at this sacrifice.

### ವಿಶೇಷವಿಷಯಗಳು

ಈ ಋಕ್ಕು ಹಿಂದೆ ಋ. ಸಂ. ೨-೧೧-೨೧ ರಲ್ಲಿ ಪಠಿತವಾಗಿರುವುದರಿಂದ ಇದರ ವಿಶೇಷವಿಷಯಗಳನ್ನು ಅಲ್ಲಿ ಎಂದರೆ ಇದೇ ಭಾಗದ 638-640 ನೇ ಪುಟದಲ್ಲಿ ವಿಸ್ತಾರವಾಗಿ ಬರೆದಿರುವುದನ್ನು ನೋಡಿ ತಿಳಿದುಕೊಳ್ಳಬಹುದು.

# ಹದಿನೆಂಟನೆಯ ಸೂಕ್ತವು.

ಪ್ರಾತಾ ರಥ ಇತಿ ನವರ್ಚಂ ಸಪ್ತಮಂ ಸೂಕ್ತಂ ಗಾರ್ತ್ಸಮದಂ ತ್ರೈಷ್ಟುಭಮೈಂದ್ರಂ । ಪ್ರಾತರಿ-ತ್ಯನುಕ್ರಾಂತಂ । ಲೈಂಗಿಕೋ ವಿನಿಯೋಗಃ ॥

ಅನುವಾದವು—ಪ್ರಾತಾ ರಥ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ ಪ್ರಾತಃ ಎಂದು ಮೊದಲಾಗಿ ಹೇಳಿರುವುದು. ವಿನಿಯೋಗವು ಲೈಂಗಿಕವು.

॥ ಓಂ ॥

## ಸೂಕ್ತ—೧೮

॥ ಮಂಡಲ—೨ ॥ ಅನುವಾಕ—೨ ॥ ಸೂಕ್ತ—೧೮ ॥

॥ ಅಷ್ಟಕ—೨ ॥ ಅಧ್ಯಾಯ—೬ ॥ ವರ್ಗ—೨೧, ೨೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

ಋಷಿಃ—ಗೃತ್ಸಮದಃ ॥

ದೇವತಾ—ಇಂದ್ರಃ ।

ಛಂದಃ—ತ್ರಿಷ್ಟುಪ್ ।

ಸಂಹಿತಾಪಾಠಃ

ಪ್ರಾತಾ ರಥೋ ನವೋ ಯೋಜಿ ಸಸ್ನಿಶ್ಚತುರ್ಯುಗಸ್ತ್ರಿಕಶಃ ಸಪ್ತರಶ್ಮಿಃ ।
ದಶಾರಿತ್ರೋ ಮನುಷ್ಯಃ ಸ್ವರ್ಷಾಃ ಸ ಇಷ್ಟಿಭಿರ್ಮತಿಭೀ ರಂಹ್ಯೋ ಭೂತ್॥

ಪದಪಾಠಃ

ಪ್ರಾತರಿತಿ । ರಥಃ । ನವಃ । ಯೋಜಿ । ಸಸ್ನಿಃ । ಚತುಃಽಯುಗಃ । ತ್ರಿಽಕಶಃ । ಸಪ್ತಽರಶ್ಮಿಃ ।
ದಶಽಅರಿತ್ರಃ । ಮನುಷ್ಯಃ । ಸ್ವಃಽಸಾಃ । ಸಃ । ಇಷ್ಟಿಽಭಿಃ । ಮತಿಽಭಿಃ । ರಂಹ್ಯಃ । ಭೂತ್ ॥ ೧ ॥

## ಸಾಯಣಭಾಷ್ಯಂ

ರಥೋ ರಂಹಣಾದ್ರಥೋ ಯಜ್ಞಃ । ಸ ಚ ನವಃ । ನೂಯತೇ ಸ್ತೂಯತೇಽತ್ರೇತಿ ನವಃ ಸ್ತುತಿ-ಮಾನ್ । ಸಸ್ನಿಃ ॥ ಸ್ನಾ ಶೌಚೇ । ಆದೃಗಮಹನೇತಿ ಕಿನ್ಪ್ರತ್ಯಯಃ ॥ ಶುದ್ಧಃ । ಏವಂವಿಧೋ ಯಜ್ಞಃ ಪ್ರಾತಃ ಪ್ರಾತಃಕಾಲೇ ಯೋಜಿ । ಅಯೋಜ್ಯಸ್ಮಾಭಿಃ । ಚತುರ್ಯುಗಃ । ಯುಜ್ಯಂತ ಇತಿ ಯುಗಾನಿ ಗ್ರಾವಾಣಃ । ಚತ್ವಾರಿ ಯುಗಾನಿ ಯಸ್ಯ ಸ ತಥೋಕ್ತಃ । ಅಧ್ವರ್ಯ್ವಾದ್ಯೃತ್ವಿಗಭಿಪ್ರಾಯಂ ವಾ । ತ್ರಿಕಶಃ । ತಿಸ್ರಃ ಕಶಾ ವಾಚೋ ಮಂದ್ರಮಧ್ಯಮೋತ್ಕೃಷ್ಟರೂಪಾ ಯಸ್ಯ ಸ ತಥೋಕ್ತಃ । ಸವನತ್ರ-ಯಾಭಿಪ್ರಾಯಂ ವಾ । ಸಪ್ತರಶ್ಮಿಃ । ಅಶ್ನುವತೇ ವ್ಯಾಪ್ನುವಂತಿ ಕರ್ಮಾಣೀತಿ ರಶ್ಮಯಶ್ಛಂದಾಂಸಿ । ಸಪ್ತಸಂಖ್ಯಾಕಾನಿ ಗಾಯತ್ರ್ಯಾದೀನಿ ಛಂದಾಂಸಿ ಯಸ್ಯ ಸ ತಥೋಕ್ತಃ । ದಶಾರಿತ್ರಃ । ಅರಿಭ್ಯಃ ಪಾಪೇ-ಭ್ಯಸ್ತ್ರಾಯಂತ ಇತ್ಯರಿತ್ರಾ ಗ್ರಹಾಃ । ದಶಸಂಖ್ಯಾಕಾ ಗ್ರಹಾ ಯಸ್ಯ ಸ ತಾದೃಶಃ । ಚಮಸಾಧ್ವರ್ಯ್ವಭಿ-ಪ್ರಾಯಂ ವಾ । ಮನುಷ್ಯೋ ಮನುಷ್ಯಾಣಾಂ ಹಿತಃ । ಸ್ವರ್ಷಾಃ ಸ್ವರ್ಗಸ್ಯ ದಾತಾ । ಸ ಏವಂವಿಧೋ ಯಜ್ಞ ಇಷ್ಟಿಭಿಃ ಪ್ರಾಯಣೀಯಾತಿಥ್ಯಾದಿಭಿರ್ಮತಿಭಿರ್ಮನನೀಯೈಃ ಸ್ತೋತ್ರೈ ರಂಹ್ಯಃ ಶಬ್ದನೀಯೋ ಭೂತ್ । ಅಭೂತ್ । ಯದ್ವಾ ನವೋಽಭಿನವಃ ಸಸ್ನಿಃ ॥ ಸನೋತೇರ್ದ್ವಿರ್ವಚನಾದಿ ॥ ಕಾಮಾನಾಂ ದಾತಾ ರಥೋ ರಮಂತೇಽಸ್ಮಿನ್ನಿತಿ ರಥಃ ಸ್ಯಂದನಃ ಪ್ರಾತಃಸವನೇ ಚ ಸೋಮಪಾನಾರ್ಥಂ ಯೋಜಿ । ಅಶ್ವೈ-ರಯೋಜಿ । ಕೀದೃಶಃ । ಚತುರ್ಯುಗಃ । ತ್ರಿಕಶಃ । ತಿಸ್ರಃ ಕಶಾ ಯಸ್ಯ ಸ ತಥೋಕ್ತಃ । ಸಪ್ತರಶ್ಮಿಃ ಸಪ್ತರಜ್ಜುಃ । ದಶಾರಿತ್ರೋ ದಶಚಕ್ರಃ । ಮನುಷ್ಯೋ ಮನುಷ್ಯಹಿತಃ ಸ್ವರ್ಷಾಃ ಸ್ವರ್ಗಸ್ಯ ಸಂಗಮಯಿ-ತೇಂದ್ರರಥ ಇಷ್ಟಿಭಿರ್ಯಾಗೈರ್ಮತಿಭಿಃ ಸ್ತೋತ್ರೈಶ್ಚ ವ್ಯಾಪ್ತವ್ಯೋ ಭವತಿ ॥

## ಪ್ರತಿಪದಾರ್ಥ

**ನವಃ**—ಸ್ತುತ್ಯರ್ಹವಾದುದೂ । **ಸಸ್ನಿಃ**—ಶುದ್ಧವಾದುದೂ ಆದ । **ರಥಃ**—ಯಜ್ಞವು । **ಪ್ರಾತಃ**—ಪ್ರಾತಃಕಾಲದಲ್ಲಿಯೇ । **ಯೋಜಿ**—ಸ್ಥಾಪಿತವಾಗಿದೆ । **ಚತುರ್ಯುಗಃ**—ನಾಲ್ಕು ಹಿಂಡುವ ಕಲ್ಲುಗಳುಳ್ಳದ್ದೂ ಅಥವಾ ಅಧ್ವರ್ಯುವೇ ಮೊದಲಾದ ನಾಲ್ಕು ಬಗೆಯ ಋತ್ವಿಕ್ಕುಗಳುಳ್ಳದ್ದೂ । **ತ್ರಿಕಶಃ**—ಮಂದ್ರ, ಮಧ್ಯಮ ಮತ್ತು ಉತ್ಕೃಷ್ಟರೂಪವಾದ ಮೂರು ವಿಧವಾದ ಸ್ತೋತ್ರಗಳುಳ್ಳದ್ದೂ । **ಸಪ್ತರಶ್ಮಿಃ**—ಸಪ್ತಸಂಖ್ಯಾಕವಾದ ಛಂದಸ್ಸುಗಳಿಂದ ಕೂಡಿದುದೂ । **ದಶಾರಿತ್ರಃ**—ದಶಸಂಖ್ಯಾಕವಾದ ಗ್ರಹ (ಪಾತ್ರೆ) ಗಳುಳ್ಳದ್ದೂ । **ಮನುಷ್ಯಃ**—ಮಾನವರಿಗೆ ಹಿತಕಾರಿಯಾದದ್ದೂ । **ಸ್ವರ್ಷಾಃ**—ಸ್ವರ್ಗದಾಯಕವಾದದ್ದೂ ಆದ । **ಸಃ**—ಯಜ್ಞವು । **ಇಷ್ಟಿಭಿಃ**—(ಅದರ ಅಂಗವಾದ) ಇತರ ಯಜ್ಞಕರ್ಮಗಳೊಂದಿಗೂ । **ಮತಿಭಿಃ**—ಧ್ಯಾನಾತ್ಮಕವಾದ ಸ್ತೋತ್ರಗಳಿಂದಲೂ । **ರಂಹ್ಯಃ**—ಶಬ್ದಾತ್ಮಕವಾಗಿ । **ಭೂತ್**—ಆಯಿತು.

## ಭಾವಾರ್ಥ

ಸ್ತುತ್ಯರ್ಹವಾದುದೂ, ಶುದ್ಧವಾದುದೂ ಆದ ಯಜ್ಞವು ಪ್ರಾತಃಕಾಲದಲ್ಲಿಯೇ ಸ್ಥಾಪಿತವಾಗಿದೆ. ಅಧ್ವರ್ಯುವೇ ಮೊದಲಾದ ನಾಲ್ಕು ಬಗೆಯ ಋತ್ವಿಕ್ಕುಗಳುಳ್ಳದ್ದೂ, ಮಂದ್ರ, ಮಧ್ಯಮ ಮತ್ತು ಉತ್ಕೃಷ್ಟರೂಪವಾದ ಮೂರು ಬಗೆಯ ಸ್ತೋತ್ರಗಳುಳ್ಳದ್ದೂ, ಸಪ್ತಸಂಖ್ಯಾಕವಾದ ಛಂದಸ್ಸುಗಳಿಂದ ಕೂಡಿದುದೂ, ದಶಸಂಖ್ಯಾಕವಾದ

ಗ್ರಹಗಳಿಂದ ಕೂಡಿದುದೂ, ಮಾನವರಿಗೆ ಹಿತಕಾರಿಯಾದುದೂ, ಸ್ವರ್ಗದಾಯಕವಾದದ್ದೂ ಆದ ಯಜ್ಞವು ಅದರ ಅಂಗವಾದ ಇತರ ಯಜ್ಞಕರ್ಮಗಳೊಂದಿಗೂ, ಧ್ಯಾನಾತ್ಮಕವಾದ ಸ್ತೋತ್ರಗಳೊಂದಿಗೂ ಕೂಡಿ ಶಬ್ದಾತ್ಮಕವಾಗಿ (ವೇದಘೋಷಪೂರ್ವಕವಾಗಿ) ಆಯಿತು.

## English Translation

A laudable and pure sacrifice has been instituted at dawn; having four pairs (of stones for bruising the Soma; three tones (of prayer): seven metres, and ten vessels; beneficial to man, conferring heaven, and sanctifiable with solemn rites and praises.

## ವಿಶೇಷವಿಷಯಗಳು

ಈ ಋಕ್ಕಿಗೆ ಸಾಯಣರು ಎರಡುವಿಧವಾದ ಅರ್ಥವಿವರಣೆಯನ್ನು ಮಾಡಿದಾರೆ; ಒಂದು ಯಜ್ಞಪರವಾಗಿ. ಮತ್ತೊಂದು ರಥದ ಪರವಾಗಿ. ಆದ್ದರಿಂದ ಈ ಋಕ್ಕಿನಲ್ಲಿರುವ ಕೆಲವು ಶಬ್ದಗಳಿಗೆ ಆಯಾ ಸಂದರ್ಭಕ್ಕೆ ಅನುಸಾರವಾಗಿ ಹೊಂದುವಂತೆ ಅರ್ಥವಿವರಣೆಮಾಡಲಾಗಿದೆ.

ಮೊದಲನೆಯ ಯಜ್ಞಪರವಾದ ಅರ್ಥವಿವರಣೆಯು—**ರಥಃ । ರಂಹಣಾದ್ರಥೋ ಯಜ್ಞಃ । ರಂಹತಿ** ಧಾತುವಿಗೆ ಗತ್ಯರ್ಥವಿರುವುದರಿಂದ ಆ ಧಾತುವಿನಿಂದ ನಿಷ್ಪನ್ನವಾದ ರಥಶಬ್ದಕ್ಕೆ ಸಂಚಾರಸಾಧನವಾದುದರಿಂದ ರಥವೆಂದು ಹೆಸರು. ಗತ್ಯರ್ಥವಾದ ಧಾತುವಿಗೆ ಸಂಭವಿಸು, ಪ್ರಾಪ್ತವಾಗು ಎಂದೂ ಅರ್ಥವಿರುವುದರಿಂದ ಇಲ್ಲಿ ಪ್ರಾತಃಕಾಲದಲ್ಲಿ ನಡೆಯುತ್ತಿರುವ, ಪ್ರಾಪ್ತವಾಗಿರುವ ಕರ್ಮವನ್ನು ರಥಶಬ್ದದಿಂದ ನಿರ್ದೇಶಿಸಿದೆ. ಪ್ರಾತಃಕಾಲವಾದ ಕೂಡಲೇ ಪ್ರಾಪ್ತವಾಗುವ ಎಂದರೆ ಆಚರಿಸಲ್ಪಡುವ ಯಜ್ಞವೆಂಬ ಅರ್ಥವು ಇಲ್ಲಿ ಬೋಧ್ಯವಾಗಿದೆ.

**ನವಃ—ಣು ಸ್ತುತೌ** ಎಂಬ ಧಾತುವಿನಿಂದ ನಿಷ್ಪನ್ನವಾದ ನವಃ ಎಂಬ ಈ ಶಬ್ದಕ್ಕೆ ಸ್ತುತಿಸಲ್ಪಡುವ ಎಂದರೆ ಸ್ತೋತ್ರಾದಿಗಳನ್ನುಳ್ಳ ಎಂದರ್ಥವು. ಈ ಯಜ್ಞದಲ್ಲಿ ಆಯಾ ದೇವತೆಗಳನ್ನು ಉದ್ದೇಶಿಸಿ ಋತ್ವಿಜರು ಸ್ತೋತ್ರಗಳನ್ನು ಪಠಿಸುವರು. ಆದುದರಿಂದ ಸ್ತೋತ್ರಮಾಡಲ್ಪಡುವ ಯಜ್ಞವೆಂದು ನವಶಬ್ದವು ರಥಶಬ್ದಕ್ಕೆ ವಿಶೇಷಣವಾಗಿದೆ.

**ಸಸ್ನಿಃ—ಸ್ನಾ ಶೌಚೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಸಸ್ನಿ ಶಬ್ದಕ್ಕೆ ಪರಿಶುದ್ಧವಾದ ಎಂದರ್ಥವು. ಈ ಶಬ್ದವೂ ರಥ (ಯಜ್ಞ) ಶಬ್ದಕ್ಕೆ ವಿಶೇಷಣವಾಗಿದೆ.

**ಚತುರ್ಯುಗಃ—ಯುಜ್ಯಂತ ಇತಿ ಯುಗಾನಿ ಗ್ರಾವಾಣಃ । ಚತ್ವಾರಿ ಯುಗಾನಿ ಯಸ್ಯ ಸ ತಥೋಕ್ತಃ ।** ಯಜ್ಞಕರ್ಮಗಳಲ್ಲಿ ಎಂದರೆ ಸೋಮಾಭಿಷವಣಕಾರ್ಯದಲ್ಲಿ ಉಪಯೋಗಿಸಲ್ಪಡುವುದರಿಂದ ಆ ಕಲ್ಲುಗಳಿಗೆ (ಗ್ರಾವಾಣಃ) ಯುಗವೆಂದು ಹೆಸರು. ಇಲ್ಲಿ (ಈ ಯಜ್ಞದಲ್ಲಿ) ನಾಲ್ಕು ಕಲ್ಲುಗಳನ್ನು ಉಪಯೋಗಿಸುವುದರಿಂದ (ಸೋಮಲತೆಯನ್ನು ಜಜ್ಜುವುದಕ್ಕಾಗಿ ಅಧ್ವರ್ಯು ಮತ್ತು ಪ್ರತಿಪ್ರಸ್ಥಾತೃವೆಂಬ ಇಬ್ಬರು ಋತ್ವಿಜರಲ್ಲಿ ಪ್ರತಿಯೊಬ್ಬರೂ ಎರಡೆರಡು ಕಲ್ಲುಗಳನ್ನು ಉಪಯೋಗಿಸುವುದರಿಂದ) ಚತುರ್ಯುಗಃ ಎಂಬ ಶಬ್ದವನ್ನು ಯಜ್ಞಕ್ಕೆ ವಿಶೇಷಣವನ್ನಾಗಿ ಉಪಯೋಗಿಸಿದೆ. ಎಂದರೆ ಈ ಯಜ್ಞದಲ್ಲಿ ಸೋಮರಸವನ್ನು ಹಿಂಡುವುದಕ್ಕಾಗಿ ನಾಲ್ಕು ಕಲ್ಲು

ಗಳನ್ನು ಉಪಯೋಗಿಸಲಾಗುವುದೆಂದು ಹೇಳಿದೆ. ಅಥವಾ ಚತುರ್ಯುಗಶಬ್ದಕ್ಕೆ ಹೋತೃ, ಅಧ್ವರ್ಯು, ಉದ್ಗಾತೃ, ಬ್ರಹ್ಮ ಎಂಬ ನಾಲ್ಕುಮಂದಿ ಋತ್ವಿಕ್ಕುಗಳೆಂದೂ ಅರ್ಥಮಾಡಬಹುದು. ಈ ಯಜ್ಞದಲ್ಲಿ ಈ ನಾಲ್ಕು ಮಂದಿ ಋತ್ವಿಕ್ಕುಗಳೂ ಭಾಗವಹಿಸುವರೆಂದಭಿಪ್ರಾಯವು.

**ತ್ರಿಕಶಃ—ತಿಸ್ರಃ ಕಶಾ ವಾಚೋ ಮಂದ್ರಮಧ್ಯಮೋತ್ಕೃಷ್ಟರೂಪಾ ಯಸ್ಯ ಸಃ । ಸವನತ್ರಯಾಭಿಪ್ರಾಯಂ ವಾ ।** ಯಜ್ಞದಲ್ಲಿ ಪಠಿಸುವ ಮಂತ್ರಗಳ ಧ್ವನಿಯು ಮಂದ್ರ, ಮಧ್ಯಮ, ಉತ್ಕೃಷ್ಟ (ಮೆಲ್ಲಗೆ, ಸಾಧಾರಣವಾಗಿ, ಘಟ್ಟಿಯಾಗಿ) ಎಂದು ಮೂರುವಿಧವಾಗಿರುವುದು. ಅಥವಾ ಯಜ್ಞದಲ್ಲಿ ಸೋಮರಸವನ್ನು ಮೂರಾವರ್ತಿ ಹಿಂಡುವುದರಿಂದ ಅದನ್ನು ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನ ಎಂಬ ಸವನತ್ರಯವು ಇಲ್ಲಿ ನಿರ್ದಿಷ್ಟವಾಗಿರುವುದು. ಇದನ್ನು ತ್ರಿಕಶಃ ಎಂಬ ಶಬ್ದದಿಂದ ವಿವರಿಸಿದೆ.

**ಸಪ್ತರಶ್ಮಿಃ—ಅಶ್ನುವತೇ ವ್ಯಾಪ್ನುವಂತಿ ಕರ್ಮಾಣೀತಿ ರಶ್ಮಯಶ್ಛಂದಾಂಸಿ । ಸಪ್ತಸಂಖ್ಯಾಕಾನಿ ಗಾಯತ್ರ್ಯಾದೀನಿ ಛಂದಾಂಸಿ ಯಸ್ಯ ಸ ತಥೋಕ್ತಃ ।** ಯಜ್ಞದಲ್ಲಿ ಪಠಿಸುವ ಮಂತ್ರಗಳು ಆಯಾ ಕರ್ಮಕ್ಕನುಸಾರವಾಗಿ ಅವುಗಳಲ್ಲಿ ವ್ಯಾಪ್ತವಾಗಿರುವುದರಿಂದ ಆ ಮಂತ್ರಗಳಿಗೆ ಅಥವಾ ಛಂದಸ್ಸುಗಳಿಗೆ ರಶ್ಮಿಗಳೆಂದು ಹೆಸರು. ಇಂತಹ ಛಂದಸ್ಸುಗಳಲ್ಲಿ ಗಾಯತ್ರೀ ತ್ರಿಷ್ಟುಪ್, ಜಗತೀ ಮೊದಲಾದ ಮುಖ್ಯವಾದ ಏಳು ಛಂದಸ್ಸುಗಳುಳ್ಳ ಮಂತ್ರಗಳನ್ನು ಯಜ್ಞಗಳಲ್ಲಿ ಪಠಿಸುವರು.

**ದಶಾರಿತ್ರಃ—ಅರಿಭ್ಯಃ ಪಾಪೇಭ್ಯಸ್ತ್ರಾಯಂತ ಇತ್ಯರಿತ್ರಾ ಗ್ರಹಾಃ ।** ಪಾಪಗಳಿಂದ ರಕ್ಷಿಸುವುದರಿಂದ ಅರಿತ್ರವೆಂದರೆ ಗ್ರಹ (ಪಾತ್ರೆ) ಗಳೆಂದು ಹೆಸರು. ಇಲ್ಲಿ ದಶ ಎಂದು ಸಂಖ್ಯಾನಿರ್ದೇಶವಿರುವುದರಿಂದ ದಶಾರಿತ್ರವೆಂದರೆ— **ಸ್ಫ್ಯಶ್ಚ ಕಪಾಲಾನಿ ಚಾಗ್ನಿಹೋತ್ರಹವಣೀ ಚ ಶೂರ್ಪಂ ಚ ಕೃಷ್ಣಾಜಿನಂ ಚ ಶಮ್ಯಾ ಚೋಲೂಖಲಂ ಚ ಮುಸಲಂ ಚ ದೃಷಚ್ಚೋಪಲಾ ಚೈತಾನಿ ವೈ ದಶ ಯಜ್ಞಾಯುಧಾನಿ** (ತೈ. ಸಂ. ೧-೬-೮) ಎಂಬ ಶ್ರುತಿವಾಕ್ಯಪ್ರಕಾರ—ಯಜ್ಞಾಯುಧಗಳು ಅಥವಾ ಯಜ್ಞದಲ್ಲಿ ಉಪಯೋಗಿಸುವ ಮುಖ್ಯ ಸಾಧನಗಳು (ಪಾತ್ರೆಗಳು) ಹತ್ತು ಇರುವವು.

(೧) **ಸ್ಫ್ಯಃ—ಚ್ಛೇದನಾದಿಕೃತ್ ।** ದರ್ಭೆ ಮೊದಲಾದವುಗಳನ್ನು ಕತ್ತರಿಸುವುದಕ್ಕಾಗಿ ಉಪಯೋಗಿಸುವ ಚಾಕು.

(೨) **ಕಪಾಲಾನಿ—ಹವಿರಧಿಶ್ರಯಣಾರ್ಥಾನಿ ।** ಹವಿಸ್ಸನ್ನು ಎಂದರೆ ಪುರೋಡಾಶವೆಂಬ ಹವಿಸ್ಸನ್ನು ಬೆಂಕಿಯಮೇಲಿಟ್ಟು ಬೇಯಿಸುವ ಮಣ್ಣಿನ ತವೆ.

(೩) **ಅಗ್ನಿಹೋತ್ರಹವಣೀ**—ಹವಿಸ್ಸನ್ನು ಹೋಮಮಾಡುವುದಕ್ಕಾಗಿ ಉಪಯೋಗಿಸುವ ಸೌಟನಂತಿರುವ ಮರದ ಪಾತ್ರೆ.

(೪) **ಶೂರ್ಪಂ**—ಧಾನ್ಯವನ್ನು ಕೇರುವುದಕ್ಕಾಗಿ ಉಪಯೋಗಿಸುವ ಮರ.

(೫) **ಕೃಷ್ಣಾಜಿನಂ** - ಧಾನ್ಯವನ್ನು ಕುಟ್ಟುವಾಗ ಒರಳಿನ ಹತ್ತಿರ ಉಪಯೋಗಿಸುವ ಕೃಷ್ಣಾಜಿನವೆಂಬ ಜಿಂಕೆಯ ಚರ್ಮವು.

(೬) **ಶಮ್ಯಾ**—ಯಜ್ಞದಲ್ಲಿ ಪಶುವನ್ನು ಕೊಲ್ಲುವುದಕ್ಕಾಗಿ ಉಪಯೋಗಿಸುವ ಆಯುಧ.

(೭) ಉಲೂಖಲಂ—ಧಾನ್ಯವನ್ನು ಕುಟ್ಟುವುದಕ್ಕೂ, ಸೋಮಲತೆಗಳನ್ನು ಜಜ್ಜುವುದಕ್ಕೂ ಉಪಯೋಗಿಸುವ ಒರಳು.

(೮) ಮುಸಲಂ—ಧಾನ್ಯವನ್ನು ಕುಟ್ಟುವ ಒನಕೆಯು.

(೯) ದೃಷತ್—ಸೋಮರಸಕ್ಕಾಗಿ ಲತೆಗಳನ್ನು ಜಜ್ಜುವಾಗ ಕೆಳಭಾಗದಲ್ಲಿ ಉಪಯೋಗಿಸುವ ಕಲ್ಲು ಅಥವಾ ಕಲ್ಲುಬತ್ತು.

(೧೦) ಉಪಲಾ— ಮೇಲೆ ಹೇಳಿದ ದೃಷತ್ ಎಂಬ ಕಲ್ಲಿನ ಮೇಲೆ ಇಡುವ ವಸ್ತುವನ್ನು (ಸೋಮಲತೆಗಳನ್ನು) ಜಜ್ಜುವುದಕ್ಕಾಗಿ ಉಪಯೋಗಿಸುವ ಗುಂಡುಕಲ್ಲು.

ಈ ಹತ್ತುವಿಧ ಯಜ್ಞಸಾಮಗ್ರಿಗಳನ್ನು ಇಲ್ಲಿ ದಶಾರಿತ್ರವೆಂಬ ಶಬ್ದದಿಂದ ನಿರ್ದೇಶಿಸಲಾಗಿದೆ.

**ಮನುಷ್ಯಃ—ಮನುಷ್ಯಾಣಾಂ ಹಿತಃ** । ಯಜ್ಞವು ಮನುಷ್ಯರಿಗೆ ಹಿತಕರವಾದುದು.

**ಸ್ವರ್ಷಾಃ—ಸ್ವರ್ಗಸ್ಯ ದಾತಾ** । ಯಜ್ಞವು ಸ್ವರ್ಗಫಲವನ್ನು ಕೊಡುವುದು.

**ಸ ಇಷ್ಟಿಭಿಃ ಮತಭಿಃ ರಂಹಃ ಭೂತ್—ಏವಂ ವಿಧೋ ಯಜ್ಞ ಇಷ್ಟಿಭಿಃ ಪ್ರಾಯಣೀಯಾತಿಥ್ಯಾದಿಭಿರ್ಮತಿಭಿರ್ಮನನೀಯೈಃ ಸ್ತೋತ್ರೈಃ ರಂಹ್ಯಃ ಶಬ್ದನೀಯೋಭೂತ್** । ಮೇಲೆ ವಿವರಿಸಿರುವ ಈ ವಿಧವಾದ ಯಜ್ಞವು ಪ್ರಾಯಣೀಯ, ಆತಿಥ್ಯ ಮೊದಲಾದ ಇಷ್ಟಿಗಳಿಂದಲೂ, ಘಟ್ಟಿಯಾಗಿ ಪಠಿಸುತ್ತಿರುವ ಮಂತ್ರರೂಪವಾದ ಸ್ತೋತ್ರಗಳಿಂದ ಕೂಡಿ ಋತ್ವಿಕ್ಕುಗಳು ಮಾಡುತ್ತಿರುವ ವೇದಘೋಷದಿಂದ ನೆರವೇರುತ್ತಿತ್ತು.

ಮುಖ್ಯಾಭಿಪ್ರಾಯವು—ಈದಿನ ಪ್ರಾತಃಕಾಲದಲ್ಲಿ ಯಜ್ಞವು ನೆರವೇರುತ್ತಿದೆ. ಈ ಯಜ್ಞದಲ್ಲಿ ನೂತನವಾಗಿ ರಚಿಸಿದ ಮಂತ್ರಗಳನ್ನು ಋತ್ವಿಜರು ಪಠಿಸುತ್ತಿರುವರು. ಈ ಯಜ್ಞವು ಪರಿಶುದ್ಧವಾದುದು. ಇದರಲ್ಲಿ ಸೋಮರಸವನ್ನು ಹಿಂಡಿ ತೆಗೆಯುವುದಕ್ಕಾಗಿ ನಾಲ್ಕು ಕಲ್ಲುಗಳು ಸಿದ್ಧವಾಗಿವೆ. ಅಥವಾ ಹೋತೃ ಮೊದಲಾದ ನಾಲ್ಕು ಜನ ಋತ್ವಿಜರು ಇದರಲ್ಲಿ ಭಾಗವಹಿಸಲು ಸಿದ್ಧರಾಗಿದಾರೆ. ಈ ಯಜ್ಞದಲ್ಲಿ ಮೂರು ಸವನಗಳೂ, ಏಳು ಛಂದಸ್ಸಿನಿಂದ ಕೂಡಿದ ಮಂತ್ರಗಳೂ, ಹತ್ತುವಿಧ ಯಜ್ಞಾಯುಧಗಳೂ ಇವೆ. ಮನುಷ್ಯರಿಗೆ ಹಿತಕಾರಿಯಾದ ಈ ಯಜ್ಞವು ಯಜ್ಞಕರ್ತರಿಗೆ ಸ್ವರ್ಗಫಲವನ್ನು ಕೊಡುವುದಾಗಿದೆ. ಇಂತಹ ಯಜ್ಞವು ಈದಿನ ಪ್ರಾತಃಕಾಲದಲ್ಲಿ ಋತ್ವಿಜರು ಪಠಿಸುತ್ತಿರುವ ಮಂತ್ರಘೋಷದಿಂದಲೂ, ಯಜ್ಞಾಂಗವಾದ ಅನೇಕ ಕರ್ಮಗಳಿಂದಲೂ ನೆರವೇರಿಸಲ್ಪಡುತ್ತಿದೆ.

ಎರಡನೆಯ ರಥಪರವಾದ ಅರ್ಥವು—ರಥಪರವಾದ ಅರ್ಥದಲ್ಲಿ ಶಬ್ದಗಳಿಗೆ ಬೇರೆಬೇರೆ ಅರ್ಥಗಳಿರುವವು—

**ನವಃ—ಅಭಿನವಃ** । ಹೊಸದಾದ ;

**ಸಸ್ನಿಃ—ಸನೋತೇರ್ದ್ವಿವಚನಾದಿಃ** । **ಕಾಮಾನಾಂ ದಾತಾ** । **ಸಸ್ನಿ** ಶಬ್ದವು ಕೊಡು ಎಂಬರ್ಥವುಳ್ಳ ಸನೋತಿಧಾತುವಿನಿಂದ ನಿಷ್ಪನ್ನವಾಗಬಹುದಾದ್ದರಿಂದ **ಸಸ್ನಿಃ** ಎಂದರೆ ಇಷ್ಟಾರ್ಥಗಳನ್ನು ಕೊಡುವ ಎಂದರ್ಥವು ;

**ರಥಃ**—ರಥಶಬ್ದಕ್ಕೆ ಯಾಸ್ಕರು—

**ರಥೋ ರಂಹತೇರ್ಗತಿಕರ್ಮಣಃ । ಸ್ಥಿರತೇರ್ವಾ ಸ್ಯಾದ್ವಿಪರೀತಸ್ಯ । ರಮಮಾಣೋಽಸ್ಮಿಂಸ್ತಿಷ್ಠತೀತಿ ವಾ, ರಪತೇರ್ವಾ, ರಸತೇರ್ವಾ ।**

(ನಿ. ೯-೧೧)

ಎಂದರೆ—ಗತಿ ಅಥವಾ ವೇಗವೆಂದು ಅರ್ಥವನ್ನು ಕೊಡುವ **ರಂಹ್** ಧಾತುವಿನಿಂದಾಗಲಿ ಅಥವಾ ವರ್ಣವ್ಯತ್ಯಯವಾಗಿ ಸ್ಥಿರ ಎಂಬುದರಿಂದಾಗಲಿ (ಸ್ಥಿರವಾಗಿಲ್ಲದಿರತಕ್ಕದ್ದು) ಇದರಲ್ಲಿ ಕುಳಿತು ಹರ್ಷಪಡು ಎಂಬರ್ಥವನ್ನು ಕೊಡುವ **ರಮ್**

ಧಾತುವಿನಿಂದಾಗಲಿ ಅಥವಾ ಶಬ್ದಮಾಡು ಎಂಬರ್ಥವುಳ್ಳ ರಪ್ ಅಥವಾ ರಸ್ ಧಾತುವಿನಿಂದಾಗಲಿ ರಥಶಬ್ದವು ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರು ವಿವರಿಸಿದಾರೆ.

**ರಥಃ ಯೋಜಿ—ಸ್ಯಂದನಃ ಪ್ರಾತಃಸವನೇ ಸೋಮಪಾನಾರ್ಥಂ ಅಶ್ವೈರಯೋಜಿ** । ಇಂದ್ರನು ಪ್ರಾತಃಸವನಕಾಲದಲ್ಲಿ ಸೋಮಪಾನಾರ್ಥವಾಗಿ ಯಜ್ಞಭೂಮಿಗೆ ಬರುವುದಕ್ಕಾಗಿ ರಥಕ್ಕೆ ಅಶ್ವಗಳನ್ನು ಹೂಡಲಾಗಿದೆ.

**ಚತುರ್ಯುಗಃ**—ಈ ರಥಕ್ಕೆ ಅಶ್ವಗಳನ್ನು ಕಟ್ಟುವ ನಾಲ್ಕು ನೊಗಗಳಿವೆ

**ತ್ರಿಕಶಃ—ತಿಸ್ರಃ ಕಶಾ ಯಸ್ಯ ಸಃ** । ಕುದುರೆಗಳನ್ನು ಪ್ರೇರಿಸುವುದಕ್ಕಾಗಿ ಮೂರು ಚಾವಟಿಗಳಿವೆ.

**ಸಪ್ತರಶ್ಮಿಃ—ಸಪ್ತರಜ್ಜುಃ** । ಕುದುರೆಗಳನ್ನು ಹತೋಟಿಯಲ್ಲಿಡಲು ಏಳು ಲಗಾಮುಗಳಿವೆ.

**ದಶಾರಿತ್ರಃ—ದಶಚಕ್ರಃ** । ಈ ರಥಕ್ಕೆ ಹತ್ತು ಚಕ್ರಗಳಿವೆ.

**ಮನುಷ್ಯಃ—ಮನುಷ್ಯಹಿತಃ** । ಮನುಷ್ಯರಿಗೆ ಹಿತವನ್ನುಂಟುಮಾಡುವ.

**ಸ್ವರ್ಷಾಃ**—ಸ್ವರ್ಗವನ್ನು ಒಯ್ಯುವ ಇಂದ್ರನ ರಥವು.

**ಇಷ್ಟಿಭಿರ್ಮತಿಭಿಃ ರಂಹ್ಯಃ ಭೂತ್—ಇಷ್ಟಿಭಿರ್ಮತಿಭಿಃ ಸ್ತೋತ್ರೈಶ್ಚ ವ್ಯಾಪ್ತವ್ಯೋ ಭವತಿ** । ಇಂತಹ ಇಂದ್ರನ ರಥವು ಈ ಯಜ್ಞದಲ್ಲಿ ನಾವು ಮಾಡುವ ಕರ್ಮಗಳಿಂದಲೂ, ಸ್ತೋತ್ರಗಳಿಂದಲೂ ಸ್ತುತಿಸಲ್ಪಟ್ಟು ಯಜ್ಞಭೂಮಿಗೆ ಬರಲಿ.

ಮುಖ್ಯಾಭಿಪ್ರಾಯವು—ಇಂದ್ರನ ರಥವು ಹೊಸದಾಗಿ ನಿರ್ಮಿತವಾಗಿದೆ. ಅದು ಸ್ತೋತ್ರಮಾಡುವವರಿಗೆ ಇಷ್ಟಾರ್ಥಗಳನ್ನು ಕೊಡುವುದು. ಪ್ರಾತಃಕಾಲದಲ್ಲಿ ಇಂದ್ರನು ಸೋಮಪಾನಾರ್ಥವಾಗಿ ಯಜ್ಞಭೂಮಿಗೆ ಹೋಗುವುದಕ್ಕೋಸ್ಕರ ಕುದುರೆಗಳನ್ನು ಕಟ್ಟಿ ಸಿದ್ಧಪಡಿಸಲಾಗಿದೆ. ಈ ರಥಕ್ಕೆ ನಾಲ್ಕು ನೊಗಗಳಿವೆ. ಇದರಲ್ಲಿ ಕುದುರೆಗಳನ್ನು ಪ್ರೇರಿಸುವುದಕ್ಕೆ ಮೂರು ಚಾವಟಿಗಳನ್ನು ಸಜ್ಜುಗೊಳಿಸಲಾಗಿದೆ ಏಳು ಲಗಾಮುಗಳಿವೆ. ಹತ್ತು ಚಕ್ರಗಳಿವೆ ಮನುಷ್ಯರಿಗೆ ಹಿತವನ್ನುಂಟುಮಾಡುವ ಇಂತಹ ಇಂದ್ರನ ರಥವು ಈದಿನ ಪ್ರಾತಃಕಾಲದಲ್ಲಿ ಸೋಮಪಾನಾರ್ಥವಾಗಿ ಯಜ್ಞಭೂಮಿಗೆ ಬರುವುದಕ್ಕಾಗಿ ಸಜ್ಜುಗೊಳಿಸಲ್ಪಟ್ಟಿದೆ. ಈ ರಥವನ್ನು ನಾವು ಯಜ್ಞಕರ್ಮದಲ್ಲಿ ಮಂತ್ರಗಳಿಂದ ಸ್ತುತಿಸುತ್ತೇವೆ.

---

ಸಂಹಿತಾಪಾಠಃ

ಸಾಸ್ಮಾ ಅರಂ ಪ್ರಥಮಂ ಸ ದ್ವಿತೀಯಮುತೋ ತೃತೀಯಂ ಮನುಷಃ ಸ ಹೋತಾ ।

ಅನ್ಯಸ್ಯಾ ಗರ್ಭಮನ್ಯ ಊ ಜನಂತ ಸೋ ಅನ್ಯೇಭಿಃ ಸಚತೇ ಜೇನ್ಯೋ ವೃಷಾ ॥ ೨ ॥

ಪದಪಾಠಃ

ಸಃ । ಅಸ್ಮೈ । ಅರಂ । ಪ್ರಥಮಂ । ಸಃ । ದ್ವಿತೀಯಂ । ಉತೋ ಇತಿ । ತೃತೀಯಂ । ಮನುಷಃ । ಸಃ । ಹೋತಾ ।

ಅನ್ಯಸ್ಯಾಃ । ಗರ್ಭಂ । ಅನ್ಯೇ । ಊಂ ಇತಿ । ಜನನ್ತ । ಸಃ । ಅನ್ಯೇಭಿಃ । ಸಚತೇ । ಜೇನ್ಯಃ । ವೃಷಾ ॥

ಸಾಯಣಭಾಷ್ಯಂ

ಸ ಯಜ್ಞಃ ಸೋಮೋ ವಾಸ್ಮಾ ಇಂದ್ರಾಯ ಪ್ರಥಮಂ ಪ್ರಾತಃಸವನೇಽರಂ । ಪರ್ಯಾಪ್ತೋಽಭೂತ್ । ಸ ಚ ದ್ವಿತೀಯಂ ಮಾಧ್ಯಂದಿನೇ ಸವನೇ ಪರ್ಯಾಪ್ತೋಽಭೂತ್ । ಉತೋ ಅಪಿ ಚ ಸ ತೃತೀಯಂ ತೃತೀಯೇ ಸವನೇ ಪರ್ಯಾಪ್ತೋಽಭೂತ್ ॥ ಸರ್ವತ್ರ ಕಾಲಾಧ್ವನೋರಿತಿ ದ್ವಿತೀಯಾ ॥ ಸ ಯಜ್ಞಃ ಸೋಮೋ ವಾ ಮನುಷೋ ಮನುಷ್ಯಸ್ಯ ಹೋತಾ ಶುಭಾನಾಂ ವೋಢಾ ಭವತಿ । ಕಿಂಚ ಅನ್ಯೇ ಋತ್ವಿಜೋಽನ್ಯಸ್ಯಾಃ ಪೃಥಿವ್ಯಾ ವೇದಾತ್ಮಿಕಾಯಾ ವಾಚೋ ವಾ ಗರ್ಭಂ ಸಂತಂ ಸೋಮಂ ಯಜ್ಞಂ ವಾ ಜನಂತ । ಅಜನಯಂತ ॥ ಉ ಪ್ರಸಿದ್ಧ್ಯರ್ಥಃ ॥ ವೃಷಾಭಿಮತಫಲವರ್ಷಕೋ ಜೇನ್ಯೋ ಜಯಸಮರ್ಥಃ ಸ ಯಜ್ಞಃ ಸೋಮೋ ವಾನ್ಯೇಭಿರನ್ಯೈರಿಂದ್ರಾದಿಭಿರ್ದೇವೈಃ ಸಚತೇ । ಸಂಗಚ್ಛತೇ ॥ ಸಚ ಸಮವಾಯೇ । ಅನುದಾತ್ತೇತ್ ॥

ಪ್ರತಿಪದಾರ್ಥ

ಸಃ—ಈ ಯಜ್ಞವು (ಅಥವಾ ಸೋಮವು) । ಅಸ್ಮೈ—ಈ ಇಂದ್ರನಿಗೆ । ಪ್ರಥಮಃ—ಪ್ರಾತಃಸವನಕಾಲದಲ್ಲಿ । ಅರಂ—ಪರ್ಯಾಪ್ತವಾಗುತ್ತದೆ । ಸಃ—ಇದೇ । ದ್ವಿತೀಯಂ—ಮಾಧ್ಯಂದಿನ ಸವನದಲ್ಲೂ ಪರ್ಯಾಪ್ತವಾಗುತ್ತದೆ । ಉತೋ—ಮತ್ತು । ತೃತೀಯಂ—ತೃತೀಯಸವನದಲ್ಲೂ (ಪರ್ಯಾಪ್ತವಾಗುತ್ತದೆ) । ಸಃ—ಯಜ್ಞವು (ಅಥವಾ ಸೋಮವು) । ಮನುಷಃ—ಮಾನವನಿಗೆ । ಹೋತಾ—ಶುಭವನ್ನು ವಹಿಸತಕ್ಕದ್ದಾಗಿದೆ । ಅನ್ಯೇ—ಇತರ ಋತ್ವಿಕ್ಕುಗಳು । ಅನ್ಯಸ್ಯಾಃ—ಪೃಥಿವಿಯ ಇತರ ಪ್ರದೇಶಗಳಲ್ಲಿ । ಗರ್ಭಂ—ಗರ್ಭಾತ್ಮಕವಾಗಿರುವ ಸೋಮವನ್ನು (ಅಥವಾ ಯಜ್ಞವನ್ನು) । ಜನಂತ ಉ-—ನಿರ್ಮಿಸಿದ್ದಾರೆಯಲ್ಲವೇ । ವೃಷಾ—ಇಷ್ಟಾರ್ಥವನ್ನು ಕೊಡತಕ್ಕದ್ದೂ । ಜೇನ್ಯಃ—ಜಯಶಾಲಿಯಾದದ್ದೂ ಆದ । ಸಃ—ಯಜ್ಞವು (ಅಥವಾ ಸೋಮವು) । ಅನ್ಯೇಭಿಃ—ಇತರ ದೇವತೆಗಳೊಂದಿಗೆ । ಸಚತೇ—ಸೇರಿಕೊಳ್ಳುತ್ತದೆ.

ಭಾವಾರ್ಥ

ಈ ಯಜ್ಞವು (ಅಥವಾ ಸೋಮವು) ಇಂದ್ರನಿಗೆ ಪ್ರಾತಃಸವನದಲ್ಲೂ, ಮಾಧ್ಯಂದಿನಸವನದಲ್ಲೂ, ಸಾಯಂಸವನದಲ್ಲೂ ಪರ್ಯಾಪ್ತವಾಗಿರುತ್ತದೆ ಇದು ಮಾನವನಿಗೆ ಶುಭವನ್ನು ವಹಿಸತಕ್ಕದ್ದಾಗಿದೆ. ಇತರ ಋತ್ವಿಕ್ಕುಗಳು ವೇದಿರೂಪವಾದ ಪೃಥಿವಿಯ ಇತರ ಪ್ರದೇಶಗಳಲ್ಲಿ ಗರ್ಭಾತ್ಮಕವಾಗಿರುವ ಈ ಯಜ್ಞವನ್ನು (ಅಥವಾ ಸೋಮರಸವನ್ನು) ನಿರ್ಮಿಸಿದ್ದಾರೆ. ಇಷ್ಟಾರ್ಥವನ್ನು ಕೊಡತಕ್ಕದ್ದೂ, ಜಯಶಾಲಿಯಾದದ್ದೂ ಆದ ಇದು ಇತರ ದೇವತೆಗಳೊಂದಿಗೆ ಸೇರಿಕೊಳ್ಳುತ್ತದೆ.

## English Translation

That (sacrifice) is sufficient for him, (Indra), whether (offered) for the first, the second, or the third time: it is the bearer (of good) to man: other (priests) engender the embryo of a different (rite), but this victorious (sacrifice), the showerer (of benefits) combines with other (ceremonies).

### ವಿಶೇಷವಿಷಯಗಳು

**ಸಃ ಅಸ್ಮೈ ಪ್ರಥಮಂ ಅರಂ ಸಃ ದ್ವಿತೀಯಂ (ಅರಂ) ಉತೋ ತೃತೀಯಂ**—ಇಲ್ಲಿ ಸಃ ಎಂಬ ಶಬ್ದಕ್ಕೆ ಸಾಯಣರು ಯಜ್ಞ ಅಥವಾ ಸೋಮವೆಂದು ಎರಡು ವಿಧವಾದ ಅರ್ಥವನ್ನು ಹೇಳಿರುವರು. ಆದರೆ ಈ ವಾಕ್ಯದಲ್ಲಿ ಸವನತ್ರಯಗಳನ್ನು ಸೂಚಿಸುವ **ಪ್ರಥಮಂ, ದ್ವಿತೀಯಂ,** ತೃತೀಯಂ ಎಂಬ ಶಬ್ದಗಳು ಇರುವುದರಿಂದ ಸೋಮವೆಂದು ಅರ್ಥಮಾಡುವುದೇ ಯುಕ್ತವಾಗಿ ಕಾಣುವುದು. ಇಂದ್ರನಿಗಾಗಿ ನಾವು ಸಿದ್ಧಪಡಿಸಿದ ಸೋಮರಸವು ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನಗಳಲ್ಲಿ ಇಂದ್ರನಿಗೆ ಪಾನಮಾಡಲು ಸಾಕಾಗಿ ತೃಪ್ತಿಯನ್ನುಂಟು ಮಾಡಲಿ ಎಂದು ಮುಖ್ಯಾಭಿಪ್ರಾಯವು. ಇಲ್ಲಿ **ಪ್ರಥಮಂ, ದ್ವಿತೀಯಂ, ತೃತೀಯಂ** ಎಂಬ ಶಬ್ದಗಳು ಕಾಲ ವನ್ನು ಸೂಚಿಸುವುದರಿಂದ **ಕಾಲಾಧ್ವನೋರಿತಿ ದ್ವಿತೀಯಾ** ಎಂಬ ವ್ಯಾಕರಣನಿಯಮಪ್ರಕಾರ ದ್ವಿತೀಯಾ ವಿಭಕ್ತ್ಯಂತವಾಗಿರುವುದು.

**ಅನ್ಯೇ ಅನ್ಯಸ್ಯಾಃ ಗರ್ಭಂ ಜನಂತ ಉ ಅನ್ಯೇ ಋತ್ವಿಜೋ ಪೃಥಿವ್ಯಾ ವೇದಾತ್ಮಿಕಾಯಾ ವಾಚೋ ವಾ ಗರ್ಭಂ ಸಂತಂ ಸೋಮಂ ಯಜ್ಞಂ ವಾ ಅಜನಯಂತ । ಉ ಪ್ರಸಿಧ್ಯರ್ಥಃ ।** ಇತರ ಋತ್ವಿಕ್ಕು ಗಳು ಪೃಥಿವಿಯ ಇತರ ಪ್ರದೇಶಗಳಲ್ಲಿ ಅಥವಾ ವೇದವಾಕ್ಯಗಳಲ್ಲಿ ಪ್ರಶಂಸಾರೂಪವಾಗಿ ಅಡಗಿರುವ ಯಜ್ಞವನ್ನು ಅಥವಾ ಸೋಮವನ್ನು ಉತ್ಪತ್ತಿಮಾಡಿದ್ದಾರೆ. ಹಿಂದಿನ ವಾಕ್ಯದಲ್ಲಿ **ಹೋತಾ** ಎಂಬ ಋತ್ವಿಜನನ್ನು ನಿರ್ದೇಶ ಮಾಡಿರುವುದರಿಂದ ಈ ವಾಕ್ಯದಲ್ಲಿರುವ **ಅನ್ಯೇ** ಎಂಬ ಪದಕ್ಕೆ (ಹೋತೃವನ್ನು ಬಿಟ್ಟು) ಇತರ ಋತ್ವಿಜರು ಎಂದು ಅರ್ಥವಿವರಣೆಮಾಡಿದಾರೆ. ಅಧ್ವರ್ಯು ಮೊದಲಾದ ಇತರ ಋತ್ವಿಕ್ಕುಗಳು ಯಜ್ಞವೇದಿಕೆಯಲ್ಲಿ ಯಜ್ಞಕರ್ಮ ಗಳನ್ನು ಉತ್ಪತ್ತಿಮಾಡುತ್ತಾರೆ ಎಂದರೆ ನೆರವೇರಿಸುತ್ತಾರೆ. ಅಥವಾ ವೇದಮಂತ್ರಗಳಲ್ಲಿ ಸ್ತುತಿರೂಪವಾಗಿ ಅಂತರ್ಗತ ವಾಗಿರುವ ಸೋಮವನ್ನು ಉತ್ಪತ್ತಿಮಾಡುತ್ತಾರೆ ಎಂದರೆ ಲತೆಗಳನ್ನು ಜಜ್ಜಿ ಸೋಮರಸವನ್ನು ಸಿದ್ಧಪಡಿಸುತ್ತಾರೆ. ಇದು ಪ್ರಸಿದ್ಧವು ಎಂದು ಮುಖ್ಯಾಭಿಪ್ರಾಯವು.

**ಸಃ ಅನ್ಯೇಭಿಃ ಸಚತೇ ಜೇನ್ಯಃ ವೃಷಾ—ಅಭಿಮತಫಲವರ್ಷಕೋ ಜಯಸಮರ್ಥಃ ಸ ಯಜ್ಞಃ ಸೋಮೋ ವಾ ಅನ್ಯೈರಿಂದ್ರಾದಿಭಿರ್ದೇವೈಃ ಸಂಗಚ್ಛತೇ ।** ಈ ರೀತಿ ಋತ್ವಿಜರಿಂದ ನಿರ್ವಹಿಸಲ್ಪಡುವ ಯಜ್ಞವು ಅಥವಾ ಸಿದ್ಧಪಡಿಸಲ್ಪಡುವ ಸೋಮರಸವು ಇತರ ದೇವತೆಗಳೊಡನೆ ಸೇರಿ ಯಜಮಾನನಿಗೆ ಜಯವನ್ನೂ, ಇಷ್ಟಾರ್ಥ ಗಳನ್ನೂ ಉಂಟುಮಾಡುತ್ತದೆ.

### ಸಂಹಿತಾಪಾಠಃ

ಹರೀ ನು ಕಂ ರಥ ಇನ್ದ್ರಸ್ಯ ಯೋಜಮಾಯೈ ಸೂಕ್ತೇನ ವಚಸಾ ನವೇನ।
ಮೋ ಷು ತ್ವಾಮತ್ರ ಬಹವೋ ಹಿ ವಿಪ್ರಾ ನಿ ರೀರಮನ್ಯಜಮಾನಾಸೋ
ಅನ್ಯೇ ॥ ೩ ॥

### ಪದಪಾಠಃ

ಹರೀ ಇತಿ । ನು । ಕಂ । ರಥೇ । ಇನ್ದ್ರಸ್ಯ । ಯೋಜಂ । ಆಽಯೈ । ಸುಽಉಕ್ತೇನ । ವಚಸಾ । ನವೇನ।
ಮೋ ಇತಿ । ಸು । ತ್ವಾಂ । ಅತ್ರ । ಬಹವಃ । ಹಿ । ವಿಪ್ರಾಃ । ನಿ । ರೀರಮನ್ । ಯಜಮಾನಾಸಃ । ಅನ್ಯೇ॥

### ಸಾಯಣಭಾಷ್ಯಂ

ಇಂದ್ರಸ್ಯ ಸಂಬಂಧಿನಿ ರಥೇ ಹರೀ ಏತನ್ನಾಮಕಾವಶ್ವೌ ನು ಕ್ಷಿಪ್ರಂ ಕಂ ಸುಖೇನಾಯೈ ಗಮನಾಯ ನವೇನಾನ್ಯೈರಕೃತಪೂರ್ವೇಣ ವಚಸಾ ವೇದಾತ್ಮಕೇನ ಸೂಕ್ತೇನ ಸಾಧನೇನ ಯೋಜಂ । ಯುನಜ್ಮಿ ॥ ಯುಜಿರ್ ಯೋಗೇ । ಲುಙಿ ಇರಿತೋ ವೇತಿ ಚ್ಲೇರಙಾದೇಶಃ ॥ ಅತ್ರಾಸ್ಮಿನ್ಯಜ್ಞೇ ಬಹವೋ ವಿಪ್ರಾ ಮೇಧಾವಿನಃ ಸ್ತೋತಾರೋ ಭವಂತಿ ಹಿ । ತಥಾಪ್ಯನ್ಯೇ ಮದ್ವ್ಯತಿರಿಕ್ತಾ ಯಜಮಾನಾಸೋ ಯಜಮಾನಾಸ್ತ್ವಾಂ ಸು ಸುಷ್ಠು ಮೋ ನಿರೀರಮನ್ । ನಿತರಾಂ ಮಾ ರಮಯಂತು । ಅತೋಽಸ್ಮದೀಯಂ ಯಜ್ಞಮಾಗತ್ಯ ಸೋಮಂ ಪಿಬೇತಿ ಭಾವಃ ॥ ರೀರಮನ್ । ರಮತೇರ್ಣ್ಯಂತಸ್ಯ ಲುಙಿ ಚಙಿ ಸನ್ವದ್ಭಾವಾದಭ್ಯಾಸಸ್ಯೇತ್ವದೀರ್ಘೌ । ವಾಕ್ಯಭೇದಾದತ್ರ ಹಿಯೋಗಾಭಾವೇನ ನಿಘಾತಃ ॥

### ಪ್ರತಿಪದಾರ್ಥ

ಇಂದ್ರಸ್ಯ—ಇಂದ್ರಸಂಬಂಧವಾದ । ರಥೇ—ರಥದಲ್ಲಿ । ಹರೀ—ಹರಿಯೆಂಬ ಅಶ್ವಗಳನ್ನು । ನು—ಕ್ಷಿಪ್ರವಾಗಿ । ಕಂ—ಸುಖವಾದ । ಆಯೈ—ಸಂಚಾರಕ್ಕಾಗಿ । ನವೇನ—ನೂತನವಾದುದೂ । ವಚಸಾ—ವೇದಾತ್ಮಕವಾದುದೂ ಆದ । ಸೂಕ್ತೇನ—ಸೂಕ್ತದೊಡನೆ । ಯೋಜಂ—ಸೇರಿಸುತ್ತೇನೆ । ಅತ್ರ—ಈ ಯಜ್ಞದಲ್ಲಿ । ಬಹವಃ—ಬಹಳವಾಗಿ । ವಿಪ್ರಾಃ—ಮೇಧಾವಿಗಳಾದ ಸ್ತೋತೃಗಳು । ಹಿ—ಇದ್ದಾರಲ್ಲವೇ । ಅನ್ಯೇ—ಇತರ । ಯಜಮಾನಾಸಃ—ಯಜ್ಞಕರ್ತರು । ತ್ವಾಂ—ನಿನ್ನನ್ನು । ಸು—ಅತಿಶಯವಾಗಿ । ಮೋ ನು ರೀರಮನ್—ಆಕರ್ಷಿಸದಿರಲಿ.

### ಭಾವಾರ್ಥ

ಇಂದ್ರನ ಸುಖವಾದ ಸಂಚಾರಕ್ಕಾಗಿ ಅವನ ರಥದಲ್ಲಿ ಹರಿಯೆಂಬ ಅಶ್ವಗಳನ್ನು ಕ್ಷಿಪ್ರವಾಗಿಯೂ, ನೂತನವಾದುದೂ, ವೇದಾತ್ಮಕವಾದುದೂ ಆದ ಸೂಕ್ತದೊಡನೆಯೂ ಸೇರಿಸಿ ಕಟ್ಟುತ್ತೇನೆ. ಈ ಯಜ್ಞದಲ್ಲಿ ಮೇಧಾವಿಗಳಾದ ಸ್ತೋತೃಗಳಿದ್ದಾರೆ. ಎಲೈ ಇಂದ್ರನೇ, ಇತರ ಯಜಮಾನರು ನಿನ್ನನ್ನು ಅವರ ಕರ್ಮಗಳಿಂದ ಆಕರ್ಷಿಸದಿರಲಿ.

## English Translation

I harness quickly and easily the horses to the car of Indra for its journey, by new and well-recited prayer : many wise (worshippers) are present here ; let not other institutors of sacred rites tempt you (away).

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ—ಇಂದ್ರನು ಯಜ್ಞಭೂಮಿಗೆ ಬರುವುದಕ್ಕಾಗಿ ಇಂದ್ರನ ರಥಕ್ಕೆ ಹರೀ ಎಂಬ ಇಂದ್ರನ ಎರಡು ಅಶ್ವಗಳನ್ನು ಹೊಸಮಂತ್ರಗಳಿಂದ ಎಂದರೆ ಇದುವರೆಗೆ ಇತರರಿಂದ ಪಠಿತವಾಗದಿರುವ ಮಂತ್ರಗಳಿಂದ ಸ್ತುತಿಸಿ ನಿಯೋಜಿಸುತ್ತೇನೆ ಎಂದು ಋಷಿಯು ವರ್ಣಿಸಿರುವನು. ಇದಲ್ಲದೆ ಈ ಯಜ್ಞದಲ್ಲಿ ಅನೇಕ ಬುದ್ಧಿವಂತರಾದ ಅನೇಕ ಋತ್ವಿಕ್ಕುಗಳಿರುವರು. ಇವರೆಲ್ಲರೂ ನಿನ್ನನ್ನು ಸ್ತುತಿಸಿ ಆಹ್ವಾನಮಾಡುವರು. ಆದುದರಿಂದ ಎಲೈ ಇಂದ್ರನೇ, ನೀನು ಇತರ ಯಜ್ಞಕರ್ತರು ನಿನ್ನನ್ನು ಅತಿಶಯವಾಗಿ ಕರೆದರೂ ಅವರ ಆಹ್ವಾನಗಳಿಗೆ ಗಮನಕೊಡದೆ ನಮ್ಮ ಯಜ್ಞಭೂಮಿಗೆ ಬರಬೇಕೆಂದು ಋಷಿಯು ಇಂದ್ರನನ್ನು ಪ್ರಾರ್ಥಿಸಿರುವನು.

---

### ಸಂಹಿತಾಪಾಠಃ

ಆ ದ್ವಾಭ್ಯಾಂ ಹರಿಭ್ಯಾಮಿನ್ದ್ರ ಯಾಹ್ಯಾ ಚತುರ್ಭಿರಾ ಷಡ್ಭಿರ್ಹೂಯಮಾನಃ ।
ಆಷ್ಟಾಭಿರ್ದಶಭಿಃ ಸೋಮಪೇಯಮಯಂ ಸುತಃ ಸುಮಖ ಮಾ ಮೃಧಸ್ಕಃ ॥ ೪ ॥

### ಪದಪಾಠಃ

ಆ । ದ್ವಾಭ್ಯಾಂ । ಹರಿಽಭ್ಯಾಂ । ಇನ್ದ್ರ । ಯಾಹಿ । ಆ । ಚತುಃಽಭಿಃ । ಆ । ಷಟ್ಽಭಿಃ । ಹೂಯಮಾನಃ ।
ಆ । ಅಷ್ಟಾಭಿಃ । ದಶಽಭಿಃ । ಸೋಮಽಪೇಯಂ । ಅಯಂ । ಸುತಃ । ಸುಽಮಖ । ಮಾ । ಮೃಧಃ । ಕರಿತಿ ಕಃ ॥ ೪ ॥

### ಸಾಯಣಭಾಷ್ಯಂ

ಹೇ ಇಂದ್ರ ಹೋತೃಭಿರಾಹೂಯಮಾನಸ್ತ್ವಂ ದ್ವಾಭ್ಯಾಂ ಹರಿಭ್ಯಾಮಶ್ವಿಭ್ಯಾಮಿಮಂ ಯಜ್ಞಂ ಪ್ರತಿ ಸೋಮಪಾನಾರ್ಥಮಾಯಾಹಿ । ಚತುರ್ಭಿರ್ಹರಿಭಿರಾಯಾಹಿ । ತಥಾ ಷಡ್ಭಿರಾಗಚ್ಛ ಸೋಮ-

ಪೇಯಂ ॥ ಸಾ ಪಾನೇ । ಕರ್ಮಣ್ಯಚೋ ಯತ್ । ಈದ್ಯತೀತೀತ್ವಂ ॥ ಪಾತವ್ಯಂ ಸೋಮಂ ಪ್ರತ್ಯೇಷ್ಟಾ-ಭಿರಶ್ವೈರಾಯಾಹಿ ॥ ಅಷ್ಟನೋ ದೀರ್ಘಾತ್ । ಪಾ. ೬-೧-೧೭೨ । ಇತಿ ವಿಭಕ್ತೇರುದಾತ್ತತ್ವಂ ॥ ದಶಭಿ-ರ್ಹರಿಭಿರಾಗಚ್ಛ । ಸುಮಖ ಸುಯಜ್ಞ ಸುಧನ ವಾ ಹೇ ಇಂದ್ರ ಅಯಂ ಸೋಮಸ್ತ್ವದರ್ಥಮಭಿಷುತಃ । ಅತೋ ಯಜ್ಞಸ್ಯ ಮೃಧೋ ಹಿಂಸಾ ಮಾ ಕಃ । ಮಾ ಕಾರ್ಷೀಃ ॥ ಕರೋತೇರ್ಲುಙಃ ಮಂತ್ರೇ ಘಸೇ-ತ್ಯಾದಿನಾ ಚ್ಲೇರ್ಲುಕ್ । ಗುಣೇ ಕೃತೇ ಹಲ್ಙ್ಯಾದಿನಾ ಸಿಪೋ ಲೋಪಃ ॥ ಯದ್ಯಪೀಂದ್ರಸ್ಯ ದ್ವಾವೇವ ಹರೀ ತಥಾಪಿ ತಯೋರ್ವಿಭೂತಿಭೇದಾನ್ನಾನಾತ್ವಂ । ಅತೋಽಶ್ವಬಹುತ್ವಮವಿರುದ್ಧಂ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಆ ಹೂಯಮಾನಃ—ಆಹೂತನಾದೊಡನೆಯೇ । ದ್ವಾಭ್ಯಾಂ ಹರಿಭ್ಯಾಂ—ಎರಡು ಅಶ್ವಗಳೊಡನೆ । ಆ ಯಾಹಿ—ಯಜ್ಞಾಭಿಮುಖವಾಗಿ ಬಾ । ಚತುರ್ಭಿಃ—ನಾಲ್ಕು ಕುದುರೆಗಳೊಡನೆ । ಆ (ಯಾಹಿ)—ಬಾ । ಷಡ್ಭಿಃ—ಆರು ಕುದುರೆಗಳೊಡನೆ ಬಾ । ಸೋಮಪೇಯಂ—ಸೋಮಪಾನಾರ್ಥವಾಗಿ । ಅಷ್ಟಾಭಿಃ—ಎಂಟು ಅಶ್ವಗಳೊಡನೆಯೂ । ದಶಭಿಃ—ಹತ್ತು ಅಶ್ವಗಳೊಡನೆಯೂ । ಆ (ಯಾಹಿ)—ಬಾ । ಸುಮಖ—ಶ್ರೇಷ್ಠವಾದ ಧನವುಳ್ಳ ಇಂದ್ರನೇ । ಅಯಂ ಸುತಃ—ಈ ಸೋಮರಸವು ಹಿಂಡಲ್ಪಟ್ಟಿದೆ । ಮೃಧಃ—ಹಿಂಸೆಯನ್ನು । ಮಾ ಕಃ—ಉಂಟುಮಾಡಬೇಡ.

ಭಾವಾರ್ಥ

ಎಲೈ ಇಂದ್ರನೇ, ನಮ್ಮಿಂದ ಕರೆಯಲ್ಪಟ್ಟ ಒಡನೆಯೇ, ಎರಡು ಅಶ್ವಗಳೊಡನೆಯೂ, ನಾಲ್ಕು ಅಥವಾ ಆರು ಅಶ್ವಗಳೊಡನೆಯೂ ಯಜ್ಞಾಭಿಮುಖವಾಗಿ ಬಾ. ಸೋಮಪಾನಾರ್ಥವಾಗಿ ಎಂಟು ಅಥವಾ ಹತ್ತು ಅಶ್ವಗಳೊಡನೆ ಬಾ. ಶ್ರೇಷ್ಠವಾದ ಧನವುಳ್ಳ ಎಲೈ ಇಂದ್ರನೇ, ನಿನಗೆ ಪ್ರಿಯವಾದ ಸೋಮರಸವು ಹಿಂಡಲ್ಪಟ್ಟಿದೆ. ಯಜ್ಞಕ್ಕೆ ಹಿಂಸೆಯನ್ನುಂಟುಮಾಡಬೇಡ.

## English Translation

Come, Indra, when invoked, with two horses, or with four, or with six, or with eight, or with ten, to drink the Soma juice: object of worship, the juice is poured out; do no wrong (to the libation).

ವಿಶೇಷವಿಷಯಗಳು

ಈ ಋಕ್ಕಿನಲ್ಲಿಯೂ, ಮುಂದಿನ ಎರಡು ಋಕ್ಕುಗಳಲ್ಲಿಯೂ ಸೋಮಪಾನಕ್ಕಾಗಿ ಇಂದ್ರನು ಯಜ್ಞಭೂಮಿಗೆ ಅಶ್ವಸಹಿತನಾಗಿ ಬರಬೇಕೆಂದು ಪ್ರಾರ್ಥಿಸಲಾಗಿದೆ. ಹೀಗೆ ಪ್ರಾರ್ಥಿಸುವಾಗ ದ್ವಾಭ್ಯಾಂ ಹರಿಭ್ಯಾಂ ಎಂದರೆ ಹರೀ ಎಂಬ ಇಂದ್ರನ ಎರಡು ಅಶ್ವಗಳಿಂದ ಸಹಿತನಾಗಿ ಬರಬೇಕೆಂದು ಆಹ್ವಾನಿಸಿರುವುದು ಸಹಜವಾಗಿದೆ. ಆದರೆ ಇತರ ವಾಕ್ಯಗಳಲ್ಲಿ ಚತುರ್ಭಿಃ ಷಡ್ಭಿಃ ಅಷ್ಟಾಭಿಃ ದಶಭಿಃ ಎಂದರೆ ನಾಲ್ಕು, ಆರು, ಎಂಟು, ಹತ್ತು ಅಶ್ವಗಳಿಂದ ಸಹಿತನಾಗಿ ಬಾ ಎಂದಿರುವುದು ವಿರೋಧವಲ್ಲವೇ ಎಂದರೆ ಯದ್ಯಪೀಂದ್ರಸ್ಯ ದ್ವಾವೇವ ಹರೀ ತಥಾಪಿ ತಯೋ-ರ್ವಿಭೂತಿಭೇದಾನ್ನಾನಾತ್ವಂ । ಅತೋಽಶ್ವಬಹುತ್ವಮವಿರುದ್ಧಂ । ಇಂದ್ರನ ಹರೀ ಎಂಬ ಕುದುರೆಗಳು ಎರಡೇ

ಆದರೂ ಅವು ತಮ್ಮ ಮಹಿಮೆಯಿಂದ ಅನೇಕ ರೂಪಗಳನ್ನು ತಾಳಲು ಸಮರ್ಥವಾಗಿರುವವು. ಆದುದರಿಂದ ಅನೇಕ ಅಶ್ವಗಳೆಂದು ಹೇಳಿರುವುದು ವಿರೋಧಾರ್ಥವನ್ನೇನೂ ಸೂಚಿಸುವುದಿಲ್ಲ ಎಂದು ಭಾಷ್ಯಕಾರರು ವಿವರಿಸಿರುವರು.

---

ಸಂಹಿತಾಪಾಠಃ

ಆ ವಿಂಶತ್ಯಾ ತ್ರಿಂಶತಾ ಯಾಹ್ಯರ್ವಾಙಾ ಚತ್ವಾರಿಂಶತಾ ಹರಿಭಿರ್ಯುಜಾನಃ ।

ಆ ಪಞ್ಚಾಶತಾ ಸುರಥೇಭಿರಿನ್ದ್ರಾ ಷಷ್ಟ್ಯಾ ಸಪ್ತತ್ಯಾ ಸೋಮಪೇಯಂ ॥

ಪದಪಾಠಃ

ಆ । ವಿಂಶತ್ಯಾ । ತ್ರಿಂಶತಾ । ಯಾಹಿ । ಅರ್ವಾಙ್ । ಆ । ಚತ್ವಾರಿಂಶತಾ । ಹರಿಽಭಿಃ । ಯುಜಾನಃ ।

ಆ । ಪಞ್ಚಾಶತಾ । ಸುಽರಥೇಭಿಃ । ಇನ್ದ್ರ । ಆ । ಷಷ್ಟ್ಯಾ । ಸಪ್ತತ್ಯಾ । ಸೋಮಽಪೇಯಂ ॥ ೫ ॥

ಸಾಯಣಭಾಷ್ಯಂ

ಹೇ ಇಂದ್ರ ಸೋಮಪೇಯಂ ಪಾತವ್ಯಂ ಸೋಮಂ ಪ್ರತ್ಯರ್ವಾಙ್ ಅಸ್ಮದಭಿಮುಖಃ ಸನ್ ವಿಂಶತ್ಯಾ ವಿಂಶತಿಸಂಖ್ಯಾಕೈರಶ್ವೈರಾಯಾಹಿ । ತ್ರಿಂಶತಾ ತ್ರಿಂಶತ್ಸಂಖ್ಯಾಕೈರ್ಹರಿಭಿರಾಗಚ್ಛ । ಚತ್ವಾರಿಂಶತಾ ಚತ್ವಾರಿಂಶತ್ಸಂಖ್ಯಾಕೈರ್ಹರಿಭಿರ್ಯುಜಾನೋ ಯುಜ್ಯಮಾನಸ್ತ್ವಂ ಸೋಮಪಾನಂ ಪ್ರತ್ಯಾಯಾಹಿ ಸುರಥೇಭಿಃ ಸುರಂಹಣೈಃ ಸುಗಮನೈಃ ಪಂಚಾಶತಾ ಹರಿಭಿರಾಯಾಹಿ । ತಥಾ ಷಷ್ಟ್ಯಾ ಷಷ್ಟಿಸಂಖ್ಯಾಕೈರ್ಹರಿಭಿಃ ಸಪ್ತತ್ಯಾ ಏತತ್ಸಂಖ್ಯಾಕೈರ್ಹರಿಭಿಃ ಸೋಮಪಾನಂ ಪ್ರತ್ಯಾಗಚ್ಛ ॥

ಪ್ರತಿಪದಾರ್ಥ

ಇಂದ್ರ—ಇಂದ್ರನೇ । ಸೋಮಪೇಯಂ—ಸೋಮಪಾನಾರ್ಥವಾಗಿ । ಅರ್ವಾಙ್—ನಮ್ಮ ಯಜ್ಞಾಭಿಮುಖವಾಗಿ । ವಿಂಶತ್ಯಾ—ಇಪ್ಪತ್ತು ಕುದುರೆಗಳೊಂದಿಗೆ । ಆ ಯಾಹಿ—ಬಾ । ತ್ರಿಂಶತಾ—ಮೂವತ್ತು ಸಂಖ್ಯೆಯುಳ್ಳವೂ । ಚತ್ವರಿಂಶತಾ—ನಲವತ್ತು ಸಂಖ್ಯೆಯುಳ್ಳವೂ ಆದ । ಹರಿಭಿಃ—ಅಶ್ವಗಳೊಡನೆ । ಯುಜಾನಃ—ಸೇರಿಕೊಂಡು । ಆ (ಯಾಹಿ)—ಬಾ । ಸುರಥೇಭಿಃ—ಶ್ರೇಷ್ಠವಾದ ಸಂಚಾರವುಳ್ಳ । ಪಂಚಾಶತಾ—ಐವತ್ತು ಕುದುರೆಗಳೊಂದಿಗೆ । ಆ—ಬಾ (ಹಾಗೆಯೇ) । ಷಷ್ಟ್ಯಾ—ಅರವತ್ತು ಸಂಖ್ಯೆಯುಳ್ಳವೂ । ಸಪ್ತತ್ಯಾ—ಎಪ್ಪತ್ತು ಸಂಖ್ಯೆಯುಳ್ಳವೂ ಆದ ಅಶ್ವಗಳೊಡನೆ ಬಾ.

ಭಾವಾರ್ಥ

ಎಲೈ ಇಂದ್ರನೇ, ಸೋಮಪಾನಾರ್ಥವಾಗಿ, ಇಪ್ಪತ್ತು ಅಥವಾ ಮುವ್ವತ್ತು ಸಂಖ್ಯೆಯುಳ್ಳ ಅಶ್ವಗಳೊಡನೆ ನಮ್ಮ ಯಜ್ಞಾಭಿಮುಖವಾಗಿ ಬಾ. ಶ್ರೇಷ್ಠವಾದ ಗಮನವುಳ್ಳ ನಲವತ್ತು ಅಥವಾ ಐವತ್ತು ಅಥವಾ ಅರವತ್ತು ಅಥವಾ ಎಪ್ಪತ್ತು ಸಂಖ್ಯೆಯುಳ್ಳ ಅಶ್ವಗಳೊಡನೆಯೂ ಬಾ.

## English Translation

Come to our presence, Indra, having harnessed your car with twenty, thirty, or forty horses; or with fifty well-trained steeds; or with sixty or with seventy, Indra, to drink the Soma juice.

## ವಿಶೇಷವಿಷಯಗಳು

ಇಲ್ಲಿ ಇಂದ್ರನ ಅಶ್ವಗಳನ್ನು ವಿಂಶತ್ಯಾ, ತ್ರಿಂಶತಾ, ಚತ್ವಾರಿಂಶತಾ, ಪಂಚಾಶತಾ, ಷಷ್ಟ್ಯಾ, ಸಪ್ತತ್ಯಾ—ಎಂದರೆ ಇಪ್ಪತ್ತು, ಮೂವತ್ತು, ನಲವತ್ತು, ಐವತ್ತು, ಅರವತ್ತು, ಎಪ್ಪತ್ತು ಸಂಖ್ಯಾಕವಾದ ಅಶ್ವಗಳಿಂದು ವರ್ಣನೆ ಮಾಡಿದೆ. ಈ ವಿಷಯದಲ್ಲಿ ಹಿಂದಿನ ಋಕ್ಕಿನಲ್ಲಿ ಹೇಳಿದ ವಿಷಯವನ್ನೇ ಇಲ್ಲಿಯೂ ಸಮನ್ವಯಮಾಡಿಕೊಳ್ಳಬೇಕು.

---

### ಸಂಹಿತಾಪಾಠಃ

ಆಶೀತ್ಯಾ ನವತ್ಯಾ ಯಾಹ್ಯರ್ವಾಙಾ ಶತೇನ ಹರಿಭಿರುಹ್ಯಮಾನಃ ।
ಅಯಂ ಹಿ ತೇ ಶುನಹೋತ್ರೇಷು ಸೋಮ ಇನ್ದ್ರ ತ್ವಾಯಾ ಪರಿಷಿಕ್ತೋ ಮದಾಯ ॥ ೬ ॥

### ಪದಪಾಠಃ

ಆ । ಅಶೀತ್ಯಾ । ನವತ್ಯಾ । ಯಾಹಿ । ಅರ್ವಾಙ್ । ಆ । ಶತೇನ । ಹರಿಽಭಿಃ । ಉಹ್ಯಮಾನಃ ।
ಅಯಂ । ಹಿ । ತೇ । ಶುನಽಹೋತ್ರೇಷು । ಸೋಮಃ । ಇನ್ದ್ರ । ತ್ವಾಽಯಾ । ಪರಿಽಸಿಕ್ತಃ । ಮದಾಯ ॥

### ಸಾಯಣಭಾಷ್ಯಂ

ಅಶೀತ್ಯಾಶೀತಿಸಂಖ್ಯಾಕೈರಶ್ವೈಃ ಸೋಮಪಾನಾರ್ಥಮರ್ವಾಙ್ ಅಸ್ಮದಭಿಮುಖಃ ಸನ್ ಆಯಾಹಿ । ನವತ್ಯಾ ಏತತ್ಸಂಖ್ಯಾಕೈರಶ್ವೈರಾಗಚ್ಛ । ಶತೇನ ಶತಸಂಖ್ಯಾಕೈರ್ಹರಿಭಿರುಹ್ಯಮಾನೋ ಧಾರ್ಯಮಾಣಸ್ತ್ವಮಾಯಾಹಿ । ಹೇ ಇಂದ್ರ ಹಿ ಯಸ್ಮಾತ್ತೇ ಮದಾಯ ಹರ್ಷಾಯ ಶುನಹೋತ್ರೇಷು । ಸುಖೇನ ಹೂಯತೇ ಸೋಮೋ ಯೈರಿತಿ ಶುನಹೋತ್ರಾಃ ಪಾತ್ರವಿಶೇಷಾಃ । ತೇಷ್ವಯಂ ಸೋಮಸ್ತ್ವಾಯಾ ತ್ವೈತ್ಕಾಮನಯಾ ಪರಿಷಿಕ್ತಃ ॥

### ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಅಶೀತ್ಯಾ—ಎಂಭತ್ತು ಸಂಖ್ಯೆಯುಳ್ಳ ಅಶ್ವಗಳೊಡನೆ । ಅರ್ವಾಙ್—ಯಜ್ಞಾಭಿಮುಖವಾಗಿ । ಆ ಯಾಹಿ—ಬಾ । ನವತ್ಯಾ—ತೊಂಬತ್ತು ಸಂಖ್ಯೆಯುಳ್ಳವೂ । ಶತೇನ—ನೂರು

ಸಂಖ್ಯೆಯುಳ್ಳವೂ ಆದ | **ಹರಿಭಿಃ**—ಅಶ್ವಗಳಿಂದ | **ಉಹ್ಯಮಾನಃ**—ವಹಿಸಲ್ಪಟ್ಟವನಾಗಿ | **ಆ (ಯಾಹಿ)**—ಬಾ | **ತೇ**—ನಿನ್ನ | **ಮದಾಯ**—ತೃಪ್ತಿಗಾಗಿ | **ಶುನಹೋತ್ರೇಷು**—'ಶುನಹೋತ್ರ' ವೆಂಬ ಪಾತ್ರೆಗಳಲ್ಲಿ | **ಅಯಂ ಸೋಮಃ**—ಈ ಸೋಮವು | **ತ್ವಾಯಾ**—ನಿನ್ನ ಇಚ್ಛೆಯನ್ನನುಸರಿಸಿ | **ಪರಿಷಿಕ್ತೋ ಹಿ**—ಹಿಂಡಲ್ಪಟ್ಟಿದೆ ಯಲ್ಲವೇ.

ಭಾವಾರ್ಥ

ಎಲೈ ಇಂದ್ರನೇ, ಎಂಭತ್ತು ಸಂಖ್ಯೆಯುಳ್ಳ ಅಶ್ವಗಳೊಡನೆಯೂ ಅಥವಾ ತೊಂಭತ್ತು ಅಥವಾ ನೂರು ಸಂಖ್ಯೆಯುಳ್ಳ ಅಶ್ವಗಳಿಂದ ವಹಿಸಲ್ಪಟ್ಟವನಾಗಿಯೂ ಯಜ್ಞಾಭಿಮುಖವಾಗಿ ಸೋಮಪಾನಕ್ಕೆ ಬಾ. ನಿನ್ನ ತೃಪ್ತಿ ಗಾಗಿ 'ಶುನಹೋತ್ರ' ವೆಂಬ ಪಾತ್ರೆಗಳಲ್ಲಿ ಈ ಸೋಮವು ನಿನ್ನ ಇಚ್ಛೆಯನ್ನನುಸರಿಸಿ ಹಿಂಡಲ್ಪಟ್ಟಿದೆ.

English Translation

Come, Indra, to our presence, conveyed by eighty, ninety, or a hundred horses: this Soma has been poured into the goblet, Indra, for your exhilaration.

ವಿಶೇಷವಿಷಯಗಳು

ಈ ಋಕ್ಕಿನ ಪೂರ್ವಾರ್ಧದಲ್ಲಿಯೂ ಇಂದ್ರನನ್ನು **ಅಶೀತ್ಯಾ, ನವತ್ಯಾ, ಶತೇನ**—ಎಂಭತ್ತು, ತೊಂಭತ್ತು ನೂರು ಸಂಖ್ಯಾಕವಾದ ಅಶ್ವಗಳಿಂದ ಸಹಿತನಾಗಿ ಬರಬೇಕೆಂದು ಪ್ರಾರ್ಥಿಸಿದೆ.

**ಶುನಹೋತ್ರೇಷು—ಸುಖೇನ ಹೂಯತೇ ಸೋಮೋ ಯೈರಿತಿ ಶುನಹೋತ್ರಾಃ ಪಾತ್ರವಿಶೇಷಾಃ|** ಸೋಮರಸವನ್ನು ತುಂಬಿಡುವ ಪಾತ್ರೆಗಳೆಂದು ಶುನಹೋತ್ರಶಬ್ದಕ್ಕೆ ಭಾಷ್ಯಕಾರರು ಅರ್ಥವಿವರಣೆಮಾಡಿದಾರೆ. ಆದರೆ ಗೃತ್ಸಮದ ಋಷಿಯು ಶುನಹೋತ್ರನೆಂಬ ಋಷಿಯ ವಂಶಸ್ಥನಾದುದರಿಂದ ಆ ಋಷಿಯ ವಂಶಸ್ಥರಾದ ನಮ್ಮಲ್ಲಿ ಎಂಬ ಅರ್ಥವು ಸಮಂಜಸವಾಗಿರುವುದು. ಭಾಷ್ಯಕಾರರೂ ಸಹ—

**ತೀವ್ರೋ ವೋ ಮಧುಮಾँ ಅಯಂ ಶುನಹೋತ್ರೇಷು ಮತ್ಸರಃ | ಏತಂ ಪಿಬತ ಕಾಮ್ಯಂ ||**

(ಋ. ಸಂ. ೨-೪೧-೧೪)

**ಶುನಹೋತ್ರೇಷು ಮತ್ಸ್ವ ಪ್ರಜಾಂ ದೇವಿ ದಿದಿಡ್ಢಿ ನಃ |**

(ಋ ಸಂ. ೨-೪೧-೧೭)

ಎಂಬ ಋಕ್ಕುಗಳಲ್ಲಿರುವ **ಶುನಹೋತ್ರೇಷು** ಎಂಬ ಶಬ್ದಕ್ಕೆ ಗೃತ್ಸಮದೇಷ್ವಸ್ಮಾಸು ಶುನಹೋತ್ರವಂಶಸ್ಥರಾದ ಗೃತ್ಸಮದ ಮುಂತಾದವರಲ್ಲಿ ಎಂಬರ್ಥವನ್ನು ಹೇಳಿದಾರೆ. ಗೃತ್ಸಮದನಿಗೂ ಶುನಹೋತ್ರನಿಗೂ ಇರುವ ಸಂಬಂಧ ವನ್ನು ನಾವು ಈ ಮಂಡಲದ ಪ್ರಾರಂಭದಲ್ಲಿ ಎಂದರೆ ಇದೇ ಭಾಗದ 378ನೇ ಪುಟದಲ್ಲಿ ವಿವರಿಸಿದೇವೆ.

ಸಂಹಿತಾಪಾಠಃ

ಮಮ ಬ್ರಹ್ಮೇನ್ದ್ರ ಯಾಹ್ಯಚ್ಛಾ ವಿಶ್ವಾ ಹರೀ ಧುರಿ ಧಿಷ್ವಾ ರಥಸ್ಯ ।
ಪುರುತ್ರಾ ಹಿ ವಿಹವ್ಯೋ ಬಭೂಥಾಸ್ಮಿಞ್ಛೂರ ಸವನೇ ಮಾದಯಸ್ವ ॥ ೭ ॥

ಪದಪಾಠಃ

ಮಮ । ಬ್ರಹ್ಮ । ಇನ್ದ್ರ । ಯಾಹಿ । ಅಚ್ಛ । ವಿಶ್ವಾ । ಹರೀ ಇತಿ । ಧುರಿ । ಧಿಷ್ವ । ರಥಸ್ಯ ।
ಪುರುऽತ್ರಾ । ಹಿ । ವಿऽಹವ್ಯಃ । ಬಭೂಥ । ಅಸ್ಮಿನ್ । ಶೂರ । ಸವನೇ । ಮಾದಯಸ್ವ ॥

ಸಾಯಣಭಾಷ್ಯಂ

ಹೇ ಇಂದ್ರ ಮಮ ಬ್ರಹ್ಮಾಸ್ಮದೀಯಮೇವ ಸ್ತುತಿಮಚ್ಛಾಭಿಲಕ್ಷ್ಯ ಯಾಹಿ । ವಿಶ್ವಾ ವ್ಯಾಪ್ತೌ ಹರೀ ರಥಸ್ಯ ಧುರಿ ಯುಗಪ್ರಾಂತೇ ಧಿಷ್ವ । ಸಂಯೋಜಯ । ಪುರುತ್ರಾ ಪುರುಭಿರ್ಬಹುಭಿರ್ಯಜಮಾನೈಸ್ತ್ವಂ ವಿಹವ್ಯೋ ವಿವಿಧಂ ಹ್ವಾತವ್ಯೋ ಬಭೂಥ । ಬಭೂವಿಥ ॥ ಬಭೂಥಾತತಂಥ ಜಗೃಭ್ಮ ವವರ್ಥೇತಿ ನಿಪಾತನಾದಿಡಭಾವಃ ॥ ಹೇ ಶೂರ ಅಸ್ಮಿನ್ಸವನೇ ಯಜ್ಞೇ ಮಾದಯಸ್ವ । ಸೋಮಪಾನೇನ ಹೃಷ್ಟೋ ಭವ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಮಮ—ನನ್ನಿಂದ ಪಠಿತವಾದ । ಬ್ರಹ್ಮ—ಸ್ತುತಿಯನ್ನು । ಅಚ್ಛ—ಅಭಿಲಕ್ಷಿಸಿ । ಯಾಹಿ—ಬಾ । ವಿಶ್ವಾ—ವ್ಯಾಪಕವಾದ । ಹರೀ—ನಿನ್ನ ಅಶ್ವಗಳನ್ನು । ರಥಸ್ಯ—ರಥದ । ಧುರಿ—ನೊಗದ ಪ್ರದೇಶಕ್ಕೆ । ಧಿಷ್ವ—ಸೇರಿಸು । ಪುರುತ್ರಾ—ಅನೇಕ ಯಜಮಾನರಿಂದ ಅನೇಕ ವಿಧವಾಗಿ । ವಿಹವ್ಯಃ—ವಿಶೇಷವಾದ ರೀತಿಯಲ್ಲಿ ಕರೆಯಲ್ಪಡುವವನಾಗಿ । ಬಭೂಥ—ಆಗಿದ್ದೀಯೆ । ಶೂರ—ಪರಾಕ್ರಮಿಯಾದ ಎಲೈ ಇಂದ್ರನೇ । ಅಸ್ಮಿನ್ ಸವನೇ ಹಿ—ಈ ಯಜ್ಞದಲ್ಲಿಯೇ । ಮಾದಯಸ್ವ—(ಸೋಮರಸದ ಪಾನದಿಂದ) ತೃಪ್ತನಾಗು.

ಭಾವಾರ್ಥ

ಎಲೈ ಇಂದ್ರನೇ, ನನ್ನಿಂದ ಪಠಿತವಾದ ಸ್ತುತಿಯನ್ನು ಲಕ್ಷಿಸಿ ನನ್ನ ಅಭಿಮುಖವಾಗಿಯೇ ಬಾ. ವ್ಯಾಪಕವಾದ ನಿನ್ನ ಅಶ್ವಗಳನ್ನು ರಥದ ನೊಗದ ಪ್ರದೇಶಕ್ಕೆ ಸೇರಿಸು. ಅನೇಕ ಯಜಮಾನರಿಂದ ಅನೇಕ ವಿಧವಾಗಿ ವಿಶೇಷ ರೀತಿಯಲ್ಲಿ ಕರೆಯಲ್ಪಡುವವನಾಗಿದ್ದೀಯೆ. ಪರಾಕ್ರಮಿಯಾದ ಎಲೈ ಇಂದ್ರನೇ, ನಮ್ಮ ಈ ಯಜ್ಞದಲ್ಲಿಯೇ ಸೋಮರಸವನ್ನು ಪಾನಮಾಡಿ ತೃಪ್ತಿಯನ್ನು ಹೊಂದು.

English Translation

Come hither, Indra, (having heard) my prayer : yoke your two universal steeds to the pole of your chariot ; you have been the object of invocation in many ways by many (worshippers), bnt now, hero, be exhilarated in this (our) sacrifice.

## ವಿಶೇಷವಿಷಯಗಳು

ಬ್ರಹ್ಮ—ಬ್ರಹ್ಮಶಬ್ದವು ಅನ್ನನಾಮಗಳಲ್ಲಿಯೂ, ಧನನಾಮುಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಪ್ರಕೃತ ಋಕ್ಕಿನಲ್ಲಿ ಬ್ರಹ್ಮಶಬ್ದಕ್ಕೆ ಸ್ತುತಿಯೆಂದು ಭಾಷ್ಯಕಾರರು ಅರ್ಥಮಾಡಿದಾರೆ.

ಪುರುತ್ರಾ ಹಿ ವಿಹವ್ಯೋ ಬಭೂಥ—ಪುರುಭಿರ್ಬಹುಭಿರ್ಯಜಮಾನೈಸ್ತ್ವಂ ವಿಹವ್ಯೋ ವಿವಿಧಂ ಹ್ವಾತವ್ಯೋ ಬಭೂಥ ಬಭೂವಿಥ । ಯಜ್ಞಮಾಡುವ ಅನೇಕ ಯಜಮಾನರಿಂದ ನಾನಾವಿಧವಾಗಿ ಯಜ್ಞಭೂಮಿಗೆ ಬರಬೇಕೆಂದು ಪ್ರಾರ್ಥಿತನಾಗಿದ್ದೀಯೆ.

ಶೂರ—ಈ ಶಬ್ದಕ್ಕೆ ಯಾಸ್ಕರು—ಶವತೇರ್ಗತಿಕರ್ಮಣಃ (ನಿ. ೪-೧೩) ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ ಸ ಹಿ ಪರಾನಭಿಮುಖೋ ಗಚ್ಛತ್ಯೇವ ನ ಪರ್ಯಾವರ್ತತೇ । ಯುದ್ಧದಲ್ಲಿ ಶತ್ರುವೀರರ ಅಭಿಮುಖವಾಗಿ ನುಗ್ಗಿಹೋಗಿ ಹಿಂದಕ್ಕೆ ಹೆದರಿ ಓಡಿಬರದೆ ಯುದ್ಧಮಾಡುವ ಪರಾಕ್ರಮಿಯಾದ ಪುರುಷನಿಗೆ ಶೂರ ಎಂದು ಹೆಸರು.

---

### ಸಂಹಿತಾಪಾಠ.

ನ ಮ ಇನ್ದ್ರೇಣ ಸಖ್ಯಂ ವಿ ಯೋಷದಸ್ಮಭ್ಯಮಸ್ಯ ದಕ್ಷಿಣಾ ದುಹೀತ ।
ಉಪ ಜ್ಯೇಷ್ಠೇ ವರೂಥೇ ಗಭಸ್ತೌ ಪ್ರಾಯೇಪ್ರಾಯೇ ಜಿಗೀವಾಂಸಃ ಸ್ಯಾಮ

### ಪದಪಾಠಃ

ನ । ಮೇ । ಇನ್ದ್ರೇಣ । ಸಖ್ಯಂ । ವಿ । ಯೋಷತ್ । ಅಸ್ಮಭ್ಯಂ । ಅಸ್ಯ । ದಕ್ಷಿಣಾ । ದುಹೀತ ।
ಉಪ । ಜ್ಯೇಷ್ಠೇ । ವರೂಥೇ । ಗಭಸ್ತೌ । ಪ್ರಾಯೇಽಪ್ರಾಯೇ । ಜಿಗೀವಾಂಸಃ । ಸ್ಯಾಮ ॥ ೮ ॥

### ಸಾಯಣಭಾಷ್ಯಂ

ಇಂದ್ರೇಣ ಸಹ ಮೇ ಮಮ ಸಖ್ಯಂ ಯಷ್ಟವ್ಯಂ ಯಷ್ಟವ್ಯಲಕ್ಷಣಂ ಸಖ್ಯಂ ನ ವಿ ಯೋಷತ್ । ಕದಾಚಿದಪಿ ನ ವಿಯುಜ್ಯತಾಂ ॥ ಯೌತೇರ್ಲೇಟಿ ಸಿಬ್ಬಹುಲಮಿತಿ ಸಿಪ್ । ಅಡಾಗಮಃ ॥ ಅಸ್ಯೇಂದ್ರಸ್ಯ ದಕ್ಷಿಣೇಂದ್ರಕರ್ತೃಕಂ ದಾನಮಸ್ಮಭ್ಯಂ ದುಹೀತ । ಅಭಿಮತಫಲಂ ದುಗ್ಧಾಂ ॥ ದುಹೇರ್ಲಿಙಃ ರೂಪಂ ॥ ಜ್ಯೇಷ್ಠೇಽತಿಶಯೇನ ಪ್ರಶಸ್ಯೇ ವರೂಥ ಆಪದಾಂ ವಾರಕೇ ವರಣೀಯೇ ವಾ ಗಭಸ್ತೌ ಬಾಹಾವುಪ ಸಮೀಪೇ ವರ್ತಿನಃ ಸ್ಯಾಮ । ಇಂದ್ರಸ್ಯ ಹಸ್ತಸ್ಪರ್ಶಯೋಗ್ಯಾ ಭವೇಮೇತ್ಯರ್ಥಃ । ಕಿಂಚ ಪ್ರಾಯೇ ಪ್ರಾಯೇ ಸೋಮಪಾನಾರ್ಥಮಿಂದ್ರಸ್ಯ ಯಜ್ಞಶಾಲಾಯಾಂ ಪ್ರವೇಶೇ ಪ್ರವೇಶೇ ಜಗೀವಾಂಸಃ ಶತ್ರೂಣಾಂ ಜೇತಾರೋ ಭವೇಮ । ಯದ್ವಾ ಪ್ರಾಯೇ ಪ್ರಾಯೇ । ಪ್ರಕರ್ಷೇಣೇಯತೇ ಗಮ್ಯತೇ ಯೋದ್ಧೃಭಿರಿತಿ ಪ್ರಾಯಂ ಯುದ್ಧಂ । ತಸ್ಮಿನ್ಯುದ್ಧೇ ಜಿಗೀವಾಂಸಃ ಶತ್ರೂನ್ ಜಿತವಂತೋ ಭವೇಮ ॥

ಪ್ರತಿಪದಾರ್ಥ

**ಇಂದ್ರೇಣ**—ಇಂದ್ರನೊಂದಿಗೆ । **ಮೇ**—ನನ್ನ । **ಸಖ್ಯಂ**—ಸಖ್ಯವು । **ನ ವಿ ಯೋಷತ್**—(ಯಾವಾಗಲೂ) ಬೇರೆಯಾಗದಿರಲಿ । **ಅಸ್ಯ**—ಈ ಇಂದ್ರನ । **ದಕ್ಷಿಣಾ**—ದಾನವು । **ಅಸ್ಮಭ್ಯಂ**—ನಮಗೆ । **ದುಹೀತ**—ಇಷ್ಟಾರ್ಥವನ್ನು ಕೊಡತಕ್ಕದ್ದಾಗಲಿ । **ಜ್ಯೇಷ್ಠೇ**—ಪ್ರಶಸ್ಯವಾದುದೂ । **ವರೂಥೇ**—(ಆಪತ್ತಿನಿಂದ) ತಪ್ಪಿಸತಕ್ಕದ್ದೂ ಆದ । **ಗಭಸ್ತೌ ಉಪ**—ಬಾಹುವಿನ ರಕ್ಷಣೆಯಲ್ಲಿ । **ಸ್ಯಾಮ**—ನಾವು ಇರುವಂತಾಗಲಿ । **ಪ್ರಾಯೇ-ಪ್ರಾಯೇ**—ಪ್ರತಿಯೊಂದು ಪ್ರವೇಶಕಾಲದಲ್ಲೂ ಸಹ (ಯುದ್ಧಕಾಲದಲ್ಲೂ) । **ಜಿಗೀವಾಂಸಃ**—ಶತ್ರುಗಳನ್ನು ಜಯಿಸುವಂತಾಗಲಿ.

ಭಾವಾರ್ಥ

ಇಂದ್ರನೊಂದಿಗೆ ನನ್ನ ಸಖ್ಯವು ಬೇರೆಯಾಗದಿರಲಿ. ಈ ಇಂದ್ರನ ದಾನವು ನಮಗೆ ಇಷ್ಟಾರ್ಥವನು ಕೊಡತಕ್ಕದ್ದಾಗಲಿ. ಪ್ರಶಸ್ಯವಾದುದೂ, ಆಪತ್ತಿನಿಂದ ತಪ್ಪಿಸತಕ್ಕದ್ದೂ ಆದ ಇಂದ್ರನ ಬಾಹುವಿನ ರಕ್ಷಣೆಯಲ್ಲಿ ನಾವು ಇರುವಂತಾಗಲಿ. ಪ್ರತಿಯೊಂದು ಯುದ್ಧಕಾಲದಲ್ಲೂ ಸಹ ನಾವು ಶತ್ರುಗಳನ್ನು ಜಯಿಸುವಂತಾಗಲಿ.

English Translation

Never may my friendship with Indra be disunited : may his liberality (ever) yield us (our desires); may we be within the excellent defence of (his protecting) arms : may we be victorious in every battle.

ವಿಶೇಷವಿಷಯಗಳು.

**ನ ಮೇ ಇಂದ್ರೇಣ ಸಖ್ಯಂ ವಿ ಯೋಷತ್**—**ಇಂದ್ರೇಣ ಸಹ ಮಮ ಸಖ್ಯಂ ಯಸ್ಸಖ್ಯಲಕ್ಷಣಂ ಸಖ್ಯಂ ನ ಕದಾಚಿದಪಿ ವಿಯುಜ್ಯತಾಂ** । ಇಂದ್ರನೊಡನೆ ನನ್ನ ಸ್ನೇಹವು ಯಾವ ಕಾಲಕ್ಕೂ ಬೇರೆಯಾಗದಿರಲಿ ಎಂದರೆ ಇಂದ್ರನ ಸಖ್ಯವು ನನಗೆ ಯಾವಾಗಲೂ ದೃಢವಾಗಿ ಇರುವಂತಾಗಲಿ ಎಂದಭಿಪ್ರಾಯವು. ಇಲ್ಲಿ ದೇವತೆಯಾದ ಇಂದ್ರನಿಗೂ ಮನುಷ್ಯನಾದ ಯಜಮಾನನಿಗೂ ಸ್ನೇಹವು ಯಾವ ರೀತಿ ಇರುವುದೆಂಬುದನ್ನು ಭಾಷ್ಯಕಾರರು ವಿವರಿಸುತ್ತಾ ಮನುಷ್ಯನಾದ ಯಜಮಾನನು ದೇವತೆಯಾದ ಇಂದ್ರನನ್ನು ಯಜ್ಞಾದಿಕರ್ಮಗಳಿಂದಲೂ, ಸ್ತೋತ್ರಾದಿಗಳಿಂದಲೂ ಆರಾಧಿಸಿ ಅವನ ಅನುಗ್ರಹವನ್ನು ಪಡೆಯುವ ಸಂಬಂಧವೇ ಯಜಮಾನನಿಗೂ ಇಂದ್ರನಿಗೂ ಇರುವ ಸ್ನೇಹವೆಂದು ನಿರ್ಣಯಿಸಿದಾರೆ.

**ಅಸ್ಮಭ್ಯಂ ಅಸ್ಯ ದಕ್ಷಿಣಾ ದುಹೀತ**—**ಅಸ್ಯೇಂದ್ರಸ್ಯ ದಕ್ಷಿಣೇಂದ್ರಕರ್ತೃಕತ್ವಂ ದಾನಮಸ್ಮಭ್ಯಂ ಅಭಿಮತಫಲಂ ದುಗ್ಧಾಂ** । ಇಂದ್ರನು ನಮಗೆ ಕೊಡುವ ದಾನವು ನಮ್ಮ ಇಷ್ಟಾರ್ಥಗಳನ್ನು ಕರೆಯಲಿ ಅಥವಾ ಪೂರಯಿಸಿಕೊಡಲಿ ಎಂಬಭಿಪ್ರಾಯವು. ಇಲ್ಲಿ ದಕ್ಷಿಣಾ ಎಂಬ ಶಬ್ದಕ್ಕೆ ದಾನವೆಂದು ಅರ್ಥಮಾಡಿರುವರು. ಈ ಶಬ್ದದ ನಿರ್ವಚನಾದಿ ವಿಸ್ತಾರವಾದ ವಿವರಣೆಯನ್ನು ನಾವು ಇದೇ ಭಾಗದ 638-640ನೇ ಪುಟಗಳಲ್ಲಿ ಬರೆದಿದೇವೆ.

**ಉಪ ಜ್ಯೇಷ್ಠೇ ವರೂಥೇ ಗಭಸ್ತೌ**—**ಜ್ಯೇಷ್ಠೇಽತಿಶಯೇನ ಪ್ರಶಸ್ತೇ ವರೂಥ ಆಪದಾಂ ವಾರಕೇ ವರಣೀಯೇ ವಾ ಗಭಸ್ತೌ ಬಾಹಾವುಪ ಸಮೀಪೇ ವರ್ತಿನಃ ಸ್ಯಾಮ** । ಇಂದ್ರನ ಬಾಹುವು ಎಂದರೆ ಬಾಹು

ಬಲವು ಅತಿ ಪ್ರಶಸ್ತವಾದುದು. ಇದು ನಮ್ಮನ್ನು ಆಪತ್ತು (ಕಷ್ಟ) ಗಳಿಂದ ಕಾಪಾಡುವುದು ಮತ್ತು ಈ ಬಾಹುವಿನ ರಕ್ಷಣೆಯನ್ನು ಎಲ್ಲರೂ ಅಪೇಕ್ಷಿಸುವರು. ಇಂತಹ ಇಂದ್ರನ ಬಾಹುಬಲದ ರಕ್ಷಣೆಯಲ್ಲಿ ಎಂದರೆ ರಕ್ಷಣೆಯ ಆಶ್ರಯದಲ್ಲಿ ನಾವು ಇರುವಂತಾಗಲಿ ಎಂದು ಋಷಿಯು ಆಶಿಸಿರುವನು. ವರೂಥಶಬ್ದವು ಗೃಹನಾಮಗಳಲ್ಲಿ (ನಿ. ೩-೧೩) ಪಠಿತವಾಗಿದ್ದರೂ ಇಲ್ಲಿ ಆಪತ್ತನ್ನು ನಿವಾರಿಸುವ ಅಥವಾ ಸರ್ವರಿಂದಲೂ ಅಪೇಕ್ಷಣೀಯವಾದ ಎಂಬರ್ಥದಲ್ಲಿ **ಗಭಸ್ತೌ** ಎಂಬ ಶಬ್ದಕ್ಕೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. ಗಭಸ್ತಿಶಬ್ದವು ಬಾಹುನಾಮಗಳಲ್ಲಿಯೂ (ನಿ. ೩-೪) ರಶ್ಮಿನಾಮಗಳಲ್ಲಿಯೂ (ನಿ. ೨-೧೫) ಪಠಿತವಾಗಿದೆ. ಇಲ್ಲಿ ಬಾಹುವೆಂಬ ಅರ್ಥದಲ್ಲಿ ಗಭಸ್ತಿಶಬ್ದದ ಪ್ರಯೋಗವಿದೆ.

**ಪ್ರಾಯೇಪ್ರಾಯೇ ಜಿಗೀವಾಂಸಃ ಸ್ಯಾಮ—ಸೋಮಪಾನಾರ್ಥಮಿಂದ್ರಸ್ಯ ಯಜ್ಞಶಾಲಾಯಾಂ ಪ್ರವೇಶೇ ಪ್ರವೇಶೇ ಜಿಗೀವಾಂಸಃ ಶತ್ರೂಣಾಂ ಜೇತಾರೋ ಭವೇಮ । ಯದ್ವಾ ಪ್ರಾಯೇಪ್ರಾಯೇ ಪ್ರಕರ್ಷೇಣೇಯತೇ ಗಮ್ಯತೇ ಯೋದ್ಧೃಭಿರಿತಿ ಪ್ರಾಯಂ ಯುದ್ಧಂ। ತಸ್ಮಿನ್ಯುದ್ಧೇ ಶತ್ರೂನ್ ಜಿತವಂತೋ ಭವೇಮ ।** ಈ ವಾಕ್ಯಕ್ಕೆ ಸಾಯಣರು ಎರಡು ವಿಧವಾದ ಅರ್ಥವನ್ನು ಹೇಳಿದಾರೆ. ಪ್ರಾಯೇ ಎಂಬ ಶಬ್ದಕ್ಕೆ ಪ್ರವೇಶವೆಂಬ ಅರ್ಥವನ್ನು ಹೇಳಿ ಇಂದ್ರನು ಸೋಮಪಾನಾರ್ಥವಾಗಿ ಯಜ್ಞಶಾಲೆಯನ್ನು ಪ್ರವೇಶಮಾಡುವಾಗ ನಾವು ಶತ್ರುಗಳನ್ನು ಜಯಿಸೋಣ ಎಂದು ಒಂದು ವಿಧವಾದ ಅರ್ಥವು : ಯುದ್ಧದಲ್ಲಿ ಶತ್ರುಗಳನ್ನು ಎದುರಿಸಿ ನುಗ್ಗುವುದರಿಂದ ಪ್ರಾಯಃಶಬ್ದಕ್ಕೆ ಯುದ್ಧವೆಂದು ಅರ್ಥಮಾಡಿ ಪ್ರತಿಯೊಂದು ಯುದ್ಧದಲ್ಲಿಯೂ (ಇಂದ್ರನ ಅನುಗ್ರಹದಿಂದ) ಶತ್ರುಗಳನ್ನು ಗೆದ್ದು ಜಯಶೀಲರಾಗೋಣ ಎಂದು ಇನ್ನೊಂದು ವಿಧವಾದ ಅರ್ಥವು. ಈ ವಾಕ್ಯದಲ್ಲಿ ಜಿಗೀವಾಂಸಃ ಜಯಶೀಲರಾಗೋಣ ಎಂಬ ಶಬ್ದಪ್ರಯೋಗವಿರುವುದರಿಂದ ಪ್ರಾಯೇಪ್ರಾಯೇ ಎಂಬ ಶಬ್ದಕ್ಕೆ ಯುದ್ಧವೆಂದು ಅರ್ಥಮಾಡಿ, ಯುದ್ಧದಲ್ಲಿ ಶತ್ರುಗಳನ್ನು ಸೋಲಿಸಿ ಜಯಶೀಲರಾಗೋಣ ಎಂಬ ಎರಡನೆಯ ಅರ್ಥವೇ ಸಮಂಜಸವಾಗಿರುವುದು. ಪ್ರಾಯೇಪ್ರಾಯೇ ಎಂಬ ಶಬ್ದಕ್ಕೆ ಇಂದ್ರನ ಯಜ್ಞಶಾಲಾಪ್ರವೇಶವೆಂಬ ಅರ್ಥದಲ್ಲಿ ಶತ್ರುಗಳನ್ನು ಜಯಿಸುವ ವಿಷಯವನ್ನು ಹೇಳುವುದು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಯಜ್ಞಶಾಲಾಪ್ರವೇಶಕ್ಕೂ, ಶತ್ರುಜಯಕ್ಕೂ ಯಾವ ಸಂಬಂಧವೂ ಇರುವುದಿಲ್ಲ. ಆದುದರಿಂದ ಎರಡನೆಯ ಅರ್ಥವೇ ಗ್ರಾಹ್ಯವಾದುದು. **ಪ್ರಾಯೇ ಪ್ರಾಯೇ** ಎಂದು ದ್ವಿರುಕ್ತಿಯು ಪ್ರತಿಯೊಂದು ಯುದ್ಧದಲ್ಲಿಯೂ ಎಂಬರ್ಥವನ್ನು ಸೂಚಿಸುವುದು. ಈ ವಿಷಯದಲ್ಲಿ **ಭರೇಭರೇ, ದಿವೇದಿವೇ** ಇತ್ಯಾದಿ ಅನೇಕ ಉದಾಹರಣೆಗಳಿವೆ.

---

ಸಂಹಿತಾಪಾಠಃ

ನೂನಂ ಸಾ ತೇ ಪ್ರತಿ ವರಂ ಜರಿತ್ರೇ ದುಹೀಯದಿಂದ್ರ ದಕ್ಷಿಣಾ ಮಘೋನೀ ।
ಶಿಕ್ಷಾ ಸ್ತೋತೃಭ್ಯೋ ಮಾತಿ ಧಗ್ಭಗೋ ನೋ ಬೃಹದ್ವದೇಮ ವಿದಥೇ ಸುವೀರಾಃ ॥ ೯ ॥

### ಪದಪಾಠಃ

ನೂನಂ । ಸಾ । ತೇ । ಪ್ರತಿ । ವರಂ । ಜರಿತ್ರೇ । ದುಹೀಯತ್ । ಇಂದ್ರ । ದಕ್ಷಿಣಾ । ಮಘೋನೀ ।

ಶಿಕ್ಷ । ಸ್ತೋತೃಽಭ್ಯಃ । ಮಾ । ಅತಿ । ಧಕ್ । ಭಗಃ । ನಃ । ಬೃಹತ್ । ವದೇಮ । ವಿದಥೇ । ಸುಽವೀರಾಃ ॥

### ಸಾಯಣಭಾಷ್ಯಂ

ಅಹರ್ಗಣೇಷು ಮಾಧ್ಯಂದಿನಸವನೇಷು ತಾಯಮಾನರೂಪೇಷ್ವಚ್ಛಾವಾಕಸ್ಯಾಹರಹಃ ಶಸ್ಯ-ಸಂಜ್ಞಕಮಭಿತಷ್ಟೇವೇತಿ ಸೂಕ್ತಂ । ನೂನಂ ಸಾ ತ ಇತ್ಯೇಷಾ ತಸ್ಯಾಂತೇ ಶಂಸನೀಯಾ । ಸೂತ್ರಿತಂ ಚ । ನೂನಂ ಸಾ ತ ಇತ್ಯಂತಮುತ್ತಮಂ । ಆ. ೭-೪ । ಇತಿ ॥

ಹೇ ಇಂದ್ರ ಯಾ ದಕ್ಷಿಣಾ ದಕ್ಷಮುತ್ಸಾಹನಂ ಕರೋತೀತಿ ದಕ್ಷಿಣಾ ಸ್ತೋತೃಭ್ಯೋ ದೇಯಾ ತೇ ತ್ವತ್ಸಂಬಂಧಿನೀ ಮಘೋನೀ ಧನವತೀ ಜರಿತ್ರೇ ಸ್ತೋತ್ರೇ ವರಂ ಶ್ರೇಷ್ಠಮಭಿಮತಮರ್ಥಂ ನೂನಂ ಪ್ರತಿದುಹೀಯತ್ । ಇದಾನೀಂ ಪ್ರತಿದೋಗ್ಧಿ । ಸಂಪಾದಯತೀತ್ಯರ್ಥಃ । ತಾದೃಶೀಂ ದಕ್ಷಿಣಾಂ ಸ್ತೋತೃ-ಭ್ಯೋಽಸ್ಮಭ್ಯಂ ಶಿಕ್ಷ । ಪ್ರಯಚ್ಛ । ಕಿಂಚ ಭಗೋ ಭಜನೀಯಸ್ತ್ವಂ ಮಾತಿ ಧಕ್ ॥ ದಹೇರ್ದಾನಾರ್ಥಸ್ಯ ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ ॥ ನೋಽಸ್ಮಾನತಿಕ್ರಮ್ಯಾನ್ಯೇಭ್ಯೋ ದಕ್ಷಿಣಾಂ ಮಾ ದಾಃ । ಪ್ರಥಮಮಸ್ಮಭ್ಯಂ ದತ್ತ್ವಾ ಪಶ್ಚಾದನ್ಯೇಭ್ಯೋ ದೀಯತಾಮಿತ್ಯರ್ಥಃ। ಯದ್ವಾ ನೋಽಸ್ಮಾಕಂ ಕಾಮಾನ್ ಮಾ ಧಕ್ । ಮಾ ಧಾಕ್ಷೀಃ । ಅಪೇಕ್ಷಿತಫಲದಾನೇನ ಪೂರಯೇತ್ಯರ್ಥಃ । ಸುವೀರಾಃ ಶೋಭನಪುತ್ರ-ಪೌತ್ರಾಃ ಸಂತೋ ವಯಂ ವಿದಥೇಽಸ್ಮಿನ್ಯಜ್ಞೇ ಬೃಹತ್ ಪ್ರಭೂತಂ ಸ್ತೋತ್ರಂ ವದೇಮ । ತ್ವಾಮುದ್ದಿಶ್ಯ ಬ್ರವಾಮ ॥ ಅತ್ರ ಸಾ ತೇ ಪ್ರತಿದುಗ್ಧಾಮಿತಿ ಪ್ರಕೃತ್ಯ ವೀರೋ ವೀರಯತ್ಯಮಿತ್ರಾನ್ ವೇತೇರ್ವಾ ಸ್ಯಾದ್ಗತಿಕರ್ಮಣೋ ವೀರಯತೇರ್ವೇತ್ಯಂತಂ ನಿರುಕ್ತಮನುಸಂಧೇಯಂ । ನಿ. ೧-೭ ॥

### ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ತೇ—ನಿನ್ನಿಂದ ದತ್ತವಾಗತಕ್ಕದ್ದೂ । ಮಘೋನೀ—ಪ್ರಭೂತವಾದ ಸಂಪತ್ತುಳ್ಳದ್ದೂ ಆದ । ಸಾ ದಕ್ಷಿಣಾ—ಆ ದಕ್ಷಿಣೆಯು । ಜರಿತ್ರೇ—ಸ್ತುತಿಕರ್ತನಾದ ಯಜಮಾನನಿಗೆ । ನೂನಂ—ಖಂಡಿತವಾಗಿಯೂ । ವರಂ—ಶ್ರೇಷ್ಠವಾಗಿ । ಪ್ರತಿ ದುಹೀಯತ್—ಇಷ್ಟಾರ್ಥವನ್ನು ಪೂರೈಸುತ್ತದೆ (ಅಂತಹ ದಕ್ಷಿಣೆಯನ್ನು) । ಸ್ತೋತೃಭ್ಯಃ—ಸ್ತುತಿಕರ್ತರಾದ ನಮಗೂ ಸಹ । ಶಿಕ್ಷ—ಕೊಡು । ಭಗಃ—ಪೂಜ್ಯನಾದ ನೀನು। ನಃ—ನಮ್ಮನ್ನು । ಮಾತಿ ಧಕ್—ತಿರಸ್ಕರಿಸಬೇಡ । ಸುವೀರಾಃ—ಶ್ರೇಷ್ಠರಾದ ವೀರಪುತ್ರರಿಂದೊಡಗೂಡಿದ ನಾವು । ವಿದಥೇ—ಈ ಯಜ್ಞದಲ್ಲಿ । ಬೃಹತ್—ಪ್ರಭೂತವಾದ ಸ್ತೋತ್ರವನ್ನು । ವದೇಮ—ಪಠಿಸುತ್ತೇವೆ.

### ಭಾವಾರ್ಥ

ಎಲೈ ಇಂದ್ರನೇ, ನಿನ್ನಿಂದ ದತ್ತವಾಗತಕ್ಕದ್ದೂ, ಪ್ರಭೂತವಾದ ಸಂಪತ್ತುಳ್ಳದ್ದೂ ಆದ ಆ ದಕ್ಷಿಣೆಯು ಸ್ತುತಿಕರ್ತನಾದ ಯಜಮಾನನಿಗೆ ಖಂಡಿತವಾಗಿಯೂ ಇಷ್ಟಾರ್ಥವನ್ನು ಶ್ರೇಷ್ಠವಾದ ರೀತಿಯಲ್ಲಿ ಪೂರೈಸುತ್ತದೆ.

ಅಂತಹ ದಕ್ಷಿಣೆಯನ್ನು ಸ್ತುತಿಕರ್ತರಾದ ನಮಗೂ ಕೊಡು. ಪೂಜ್ಯನಾದ ನೀನು ನಮ್ಮನ್ನು ತಿರಸ್ಕರಿಸಬೇಡ. ಶ್ರೇಷ್ಠರಾದ ಪುತ್ರರಿಂದೊಡಗೂಡಿದ ನಾವು ಈ ಯಜ್ಞದಲ್ಲಿ ಪ್ರಭೂತವಾದ ಸ್ತೋತ್ರವನ್ನು ಪಠಿಸುತ್ತೇವೆ.

### English Translation

That opulent donation which proceeds, Indra, from you, assuredly bestows upon him who praises you the boon (that he desires) : grant it to (us) your adorers : do not you, who are the object of adoration, disregard our prayers ; so that, blessed with worthy descendants, we may glorify you in this sacrifice.

### ವಿಶೇಷವಿಷಯಗಳು

ಈ ಋಕ್ಕು ಹಿಂದೆ ಋ. ಸಂ. ೨-೧೧-೨೧ ರಲ್ಲಿ ಪಠಿತವಾಗಿರುವುದರಿಂದ ಇದರ ವಿಶೇಷವಿಷಯಗಳನ್ನು ಅಲ್ಲಿ ಎಂದರೆ ಇದೇ ಭಾಗದ 638-640 ನೇ ಪುಟದಲ್ಲಿ ವಿಸ್ತಾರವಾಗಿ ಬರೆದಿರುವುದನ್ನು ನೋಡಿ ತಿಳಿದುಕೊಳ್ಳಬಹುದು.

---

## ಹತ್ತೊಂಭತ್ತನೆಯ ಸೂಕ್ತವು.

:o:

**ಅಪಾಯ್ಯಸ್ಯೇತಿ ನವರ್ಚಮಷ್ಟಮಂ ಸೂಕ್ತಂ ಗಾರ್ತ್ಸಮದಂ ತ್ರೈಷ್ಟುಭಮೈಂದ್ರಂ । ಅಪಾಯೀತ್ಯನುಕ್ರಾಂತಂ । ಲೈಂಗಿಕಃ ಸೂಕ್ತವಿನಿಯೋಗಃ । ದ್ವಿತೀಯೇ ಪರ್ಯಾಯೇ ಹೋತೃಶಸ್ತ್ರಯಾಜ್ಯಾಪಾಯೀತ್ಯೇಷಾ । ಆ. ೬-೪ ॥**

ಅನುವಾದವು—**ಅಪಾಯ್ಯಸ್ಯ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಅಪಾಯಿ** ಎಂದು ಮೊದಲಾಗಿ ಹೇಳಿರುವುದು. ಈ ಸೂಕ್ತದ ವಿನಿಯೋಗವು ಲೈಂಗಿಕವು. ಇದಲ್ಲದೆ ಎರಡನೆಯ ಪರ್ಯಾದಲ್ಲಿ ಹೋತೃವು ಶಸ್ತ್ರಮಂತ್ರವನ್ನು ಪಠಿಸುವಾಗ **ಅಪಾಯಿ** ಎಂಬ ಈ ಸೂಕ್ತದ ಮೊದಲನೆಯ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದಲ್ಲಿ ಹೇಳಲ್ಪಟ್ಟಿರುವುದು (ಆ. ೬-೪).

---

॥ ಓಂ ॥

## ಸೂಕ್ತ—೧೯

॥ ಮಂಡಲ—೨ ॥ ಅನುವಾಕ—೨ ॥ ಸೂಕ್ತ—೧೯ ॥

॥ ಅಷ್ಟಕ—೨॥ ಅಧ್ಯಾಯ—೬ ॥ ವರ್ಗ— ೨೩, ೨೪॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

ಋಷಿಃ—ಗೃತ್ಸಮದಃ ।

ದೇವತಾ—ಇಂದ್ರಃ ॥

ಛಂದಃ—ತ್ರಿಷ್ಟುಪ್ ।

---

ಸಂಹಿತಾಪಾಠಃ

**ಅಪಾಯ್ಯಸ್ಯಾಂಧಸೋ ಮದಾಯ ಮನೀಷಿಣಃ ಸುವಾನಸ್ಯ ಪ್ರಯಸಃ ।**

**ಯಸ್ಮಿನ್ನಿಂದ್ರಃ ಪ್ರದಿವಿ ವಾವೃಧಾನ ಓಕೋ ದಧೇ ಬ್ರಹ್ಮಣ್ಯಂತಶ್ಚ ನರಃ ॥**

ಪದಪಾಠಃ

ಅಪಾಯಿ । ಅಸ್ಯ । ಅಂಧಸಃ । ಮದಾಯ । ಮನೀಷಿಣಃ । ಸುವಾನಸ್ಯ । ಪ್ರಯಸಃ ।

ಯಸ್ಮಿನ್ । ಇಂದ್ರಃ । ಪ್ರಽದಿವಿ । ವವೃಧಾನಃ । ಓಕಃ । ದಧೇ । ಬ್ರಹ್ಮಣ್ಯಂತಃ । ಚ । ನರಃ ॥ ೧ ॥

ಸಾಯಣಭಾಷ್ಯಂ

ಸುವಾನಸ್ಯ ಸೋಮಾಭಿಷವಂ ಕುರ್ವಾಣಸ್ಯ ಮನೀಷಿಣಃ ಪ್ರಾಜ್ಞಸ್ಯ ಯಜಮಾನಸ್ಯ ಸಂಬಂಧಿನಃ ಪ್ರಯಸಃ ॥ ಪ್ರೀಞ್ ತರ್ಪಣೇ । ಅಸುನ್ । ಪ್ರೀತಿಕರಸ್ಯಾಸ್ಯ ಸೋಮಲಕ್ಷಣಸ್ಯಾಂಧಸೋ ಮದಾಯಾಪಾಯಿ । ಏತದನ್ನಮಿಂದ್ರೇಣ ಪೀತಮಿತ್ಯರ್ಥಃ ॥ ಯದ್ವಾ ಅಪಾಯೀತಿ ಪಾತೇರ್ವ್ಯತ್ಯಯೋ ಬಹುಲಮಿತಿ ಚಿಣ್ ಕರ್ತರಿ ಭವತಿ । ಛಂದಸಿ ಲುಙ್ಲಙ್ಲಿಟ ಇತಿ ಲೋಡರ್ಥೇ ಲುಙ್ ॥ ಪ್ರೀತಿಕರಸ್ಯಾಂಧಸೋ ಮದಾಯಾಪಾಯಿ ॥ ಶೇಷವಿವಕ್ಷಯಾ ಕರ್ಮಣಿ ಷಷ್ಠೀ ॥ ಇಂದ್ರಃ ಸೋಮಂ ಪಿಬತು । ಪ್ರದಿವಿ ಪುರಾಣೇ ಯಸ್ಮಿನ್ಸೋಮಲಕ್ಷಣೇಽಂಧಸಿ ವಾವೃಧಾನೋ ವರ್ಧಮಾನ ಇಂದ್ರ ಓಕೋ ದಧೇ । ಸೇವ್ಯತಯಾ ನಿವಾಸಂ ಚಕಾರ । ಕಿಂಚ ಬ್ರಹ್ಮಣ್ಯಂತ ಇಂದ್ರಾಯ ಸ್ತೋತ್ರಮಿಚ್ಛಂತೋ ನರಃ ಕರ್ಮಣಾಂ ನೇತಾರ ಋತ್ವಿಜೋ ಯಸ್ಮಿನ್ನಿವಾಸಂ ದಧಿರೇ । ತದೇತದಪಾಯೀತಿ ಪೂರ್ವೇಣಾನ್ವಯಃ ॥

ಪ್ರತಿಪದಾರ್ಥ

**ಪ್ರದಿವಿ**—ಪುರಾತನವಾದ । **ಯಸ್ಮಿನ್**—ಯಾವ ಸೋಮರೂಪವಾದ ಅನ್ನದಲ್ಲಿ । **ವಾವೃಧಾನಃ**—ವೃದ್ಧಿಯನ್ನು ಹೊಂದುವ । **ಇಂದ್ರಃ**—ಇಂದ್ರನು । **ಓಕಃ**—ವಾಸಯೋಗ್ಯವಾದ ನಿವಾಸವನ್ನು । **ದಧೇ**—ರಚಿಸಿಕೊಂಡನೋ (ಮತ್ತು ಯಾವುದರಲ್ಲಿ) । **ಬ್ರಹ್ಮಣ್ಯಂತಃ**—ಸ್ತುತಿಯನ್ನರ್ಪಿಸಲಿಚ್ಛಿಸುವ । **ನರಶ್ಚ**—ಕರ್ಮಕ್ಕೆ ನೇತೃಗಳಾದ ಋತ್ವಿಕ್ಕುಗಳೂ ಕೂಡ (ನಿವಾಸವನ್ನು ಪಡೆದರೋ) ಅಂತಹುದೂ । **ಸುವಾನಸ್ಯ**—ಸೋಮರಸವನ್ನು ಹಿಂಡತಕ್ಕ । **ಮನೀಷಿಣಃ**—ಪ್ರಾಜ್ಞನಾದ ಯಜಮಾನನಿಂದ ಅರ್ಪಿತವಾದುದೂ । **ಪ್ರಯಸಃ**—ಪ್ರೀತಿಕರವಾದುದೂ ಆದ । **ಅಸ್ಯ ಅಂಧಸಃ**—ಸೋಮರೂಪವಾದ ಈ ಅನ್ನವು (ಸೋಮರಸವು) । **ಮದಾಯ**—ಹರ್ಷದ ಲಾಭಕ್ಕಾಗಿ । **ಅಪಾಯಿ**—(ಇಂದ್ರನಿಂದ) ಪಾನಮಾಡಲ್ಪಟ್ಟಿದೆ.

ಭಾವಾರ್ಥ

ಪುರಾತನವಾದ ಯಾವ ಸೋಮರೂಪವಾದ ಅನ್ನದಲ್ಲಿ ವೃದ್ಧಿಯನ್ನು ಹೊಂದುವ ಇಂದ್ರನು ವಾಸಯೋಗ್ಯವಾದ ನಿವಾಸವನ್ನು ರಚಿಸಿಕೊಂಡನೋ ಮತ್ತು ಯಾವುದರಲ್ಲಿ ಇಂದ್ರನಿಗೆ ಸ್ತುತಿಯನ್ನರ್ಪಿಸಲಿಚ್ಛಿಸುವ ಋತ್ವಿಕ್ಕುಗಳೂ ಕೂಡ ನಿವಾಸವನ್ನು ಪಡೆದರೋ ಅಂತಹುದೂ ಮತ್ತು ಸೋಮರಸವನ್ನು ಹಿಂಡುವ ಯಜಮಾನನಿಂದ ಅರ್ಪಿತವಾದುದೂ, ಪ್ರೀತಿಕರವಾದುದೂ ಆದ ಸೋಮರೂಪವಾದ ಈ ಅನ್ನವು (ಸೋಮರಸವು) ಹರ್ಷಾರ್ಥವಾಗಿ ಇಂದ್ರನಿಂದ ಪಾನಮಾಡಲ್ಪಟ್ಟಿದೆ.

English Translation

It has been partaken (by Indra) for his exhilaration, of this agreeable (sacrificial) food, the libation of his devout (worshipper); thriving by which ancient (beverage), he has bestowed a (fitting) dwelling, where the adoring conductors (of the ceremony) abide.

ವಿಶೇಷವಿಷಯಗಳು

**ಅಂಧಸಃ**—ಅಂಧಃ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. (ನಿ. ೨-೭). ಮತ್ತು **ಅಂಧ ಇತ್ಯನ್ನನಾಮಾಧ್ಯಾನೀಯಂ ಭವತಿ** । (ನಿ. ೫-೧) ಇದನ್ನು ಎಲ್ಲರೂ ಪ್ರಾರ್ಥಿಸುವುದರಿಂದ ಅಥವಾ ಅಪೇಕ್ಷಿಸುವುದರಿಂದ ಅಂಧಃ ಎಂದರೆ ಅನ್ನವು. ಈ ಅನ್ನವು ಯಾವುದಾದರೂ ಆಹಾರರೂಪದಲ್ಲಿರಬಹುದು, ಅಥವಾ ಪಾನಾರ್ಹವಾದ ಸೋಮರಸರೂಪದಲ್ಲಿರಬಹುದು. ಇದನ್ನು **ಆಮತ್ರೇಭಿಃ ಸಿಂಚತಾ ಮದ್ಯಮಂಧಃ** ಎಂಬ ನಿಗಮವಾಕ್ಯದಿಂದ ನಿರುಕ್ತಕಾರರು ವಿವರಿಸಿರುವರು. ಮದವನ್ನುಂಟುಮಾಡತಕ್ಕ ಸೋಮರಸವೆಂದಭಿಪ್ರಾಯವು. ಪ್ರಕೃತ ಋಕ್ಕಿನಲ್ಲಿ **ಮದಾಯ**—ಮದ ಅಥವಾ ಹರ್ಷವನ್ನುಂಟುಮಾಡುವ, ಮತ್ತು **ಸುವಾನಸ್ಯ**—ಸೋಮರಸವನ್ನು ಸಿದ್ಧಪಡಿಸುವ ಎಂಬ ಎರಡು ಶಬ್ದಗಳ ಪ್ರಯೋಗವು **ಅಂಧಸಃ** ಎಂಬ ಶಬ್ದಕ್ಕೆ ಸೋಮರಸವೆಂಬ ಅರ್ಥವನ್ನೇ ಸಮರ್ಥಿಸುವುದು. ಅನೇಕ ಕಡೆಗಳಲ್ಲಿ ಸೋಮರಸವನ್ನು ನಿರ್ದೇಶಿಸುವ ಸಂದರ್ಭಗಳಲ್ಲಿ ಅಂಧಃಶಬ್ದದ ಪ್ರಯೋಗವಿರುವುದು.

**ತ್ವಂ ವಿಪ್ರಸ್ತ್ವಂ ಕವಿರ್ಮಧು ಪ್ರ ಜಾತಮಂಧಸಃ** ।

(ಋ. ಸಂ. ೯-೧೮-೨)

ತವ ತ್ಯ ಇಂದೋ ಅಂಧಸೋ ದೇವಾ ಮಧೋರ್ವ್ಯಶ್ನತೇ ।

(ಋ. ಸಂ. ೯-೫೧-೩)

ತರತ್ಸ ಮಂದೀ ಧಾವತಿ ಧಾರಾ ಸುತಸ್ಯಾಂಧಸಃ ।

(ಋ. ಸಂ. ೯-೫೮-೧)

ಅಧಾ ತೇ ಸಖ್ಯೇ ಅಂಧಸೋ ವಿ ವೋ ಮದೇ ರಣನ್ಗಾವೋ ನ ಯವಸೇ ವಿವಕ್ಷಸೇ ।

(ಋ. ಸಂ. ೧೦-೨೫-೧)

ಇತ್ಯಾದಿ ಋಕ್ಕುಗಳಲ್ಲಿರುವ ಅಂಧಸಃ ಎಂಬ ಶಬ್ದವು ಸೋಮರಸವೆಂಬ ಅರ್ಥವನ್ನೇ ಸೂಚಿಸುವುದು.

**ಸುವಾನಸ್ಯ ಮನೀಷಿಣಃ ಪ್ರಯಸಃ ಅಸ್ಯ ಅಂಧಸಃ ಮದಾಯ ಅಪಾಯಿ—ಸೋಮಾಭಿಷವಂ ಕುರ್ವಾಣಸ್ಯ ಪ್ರಾಜ್ಞಸ್ಯ ಯಜಮಾನಸ್ಯ ಸಂಬಂಧಿನಃ ಪ್ರೀತಿಕರಸ್ಯಾಸ್ಯ ಸೋಮಲಕ್ಷಣಸ್ಯಾಂಧಸೋ ಮದಾಯಾಪಾಯಿ । ಏತದನ್ನಮಿಂದ್ರೇಣ ಪೀತಮಿತ್ಯರ್ಥಃ ।** ಯಜ್ಞದಲ್ಲಿ ಪ್ರಾಜ್ಞನಾದವನೂ, ಯಜ್ಞಕರ್ತನೂ ಆದ ಯಜಮಾನನು ಹಿಂಡಿ ಸಿದ್ಧಪಡಿಸಿದ ಹರ್ಷಪ್ರದವಾದ ಸೋಮರಸವನ್ನು ಇಂದ್ರನು ಪಾನಮಾಡಿದನು ಎಂದು ಮುಖ್ಯಾಭಿಪ್ರಾಯವು. ಇಲ್ಲಿ ಅಂಧಸಃ ಎಂದು ಷಷ್ಠೀವಿಭಕ್ತಿಯಿದ್ದರೂ ಈ ಶಬ್ದಕ್ಕೆ ದ್ವಿತೀಯಾವಿಭಕ್ತ್ಯರ್ಥವನ್ನು ಹೇಳಬೇಕೆಂದು ಸಾಯಣರು ಹೇಳಿದಾರೆ ಎಂದರೆ ಸೋಮರೂಪವಾದ ಅನ್ನವನ್ನು; ಅಥವಾ ಸೋಮರೂಪವಾದ ಅನ್ನದ ಸ್ವಲ್ಪಭಾಗವನ್ನು ಎಂಬ ಅರ್ಥವನ್ನು ಬೇಕಾದರೂ ಹೇಳಬಹುದು.

**ಯಸ್ಮಿನ್ ಪ್ರದಿವಿ ವಾವೃಧಾನೋ ಇಂದ್ರ ಓಕೋ ದಧೇ—ಪುರಾಣೇ ಯಸ್ಮಿನ್ ಸೋಮಲಕ್ಷಣೇಽನ್ನಪಿ ವರ್ಧಮಾನ ಇಂದ್ರಃ ಸೇವ್ಯತಯಾ ನಿವಾಸಂ ಚಕಾರ ।** ಈ ವಾಕ್ಯದಲ್ಲಿ ಸೋಮರಸದ ಪ್ರಶಂಸೆಯನ್ನು ಋಷಿಯು ಮಾಡಿರುವನು. ಪುರಾತನವಾದ ಎಂದರೆ ಬಹಳಕಾಲದಿಂದಲೂ ಪ್ರಸಿದ್ಧವಾದ ಈ ಸೋಮರಸದಲ್ಲಿ ಇಂದ್ರನು ನಿವಾಸವನ್ನು ಮಾಡಿದನು, ಎಂದರೆ ಇಂತಹ ಶ್ರೇಷ್ಠವೂ ಪ್ರಸಿದ್ಧವೂ ಆದ ಸೋಮರಸವನ್ನು ಇಂದ್ರನು ಯಥೇಷ್ಟವಾಗಿ ಸೇವಿಸಿದನು ಅಥವಾ ಪಾನಮಾಡಿದನು ಎಂದಭಿಪ್ರಾಯವು.

**ಬ್ರಹ್ಮಂಣ್ಯಂತಃ ನರಃ ಚ (ದಧೇ)—ಕಿಂಚ ಸ್ತೋತ್ರಮಿಚ್ಛಂತೋ ಕರ್ಮಣಾಂ ನೇತಾರ ಋತ್ವಿಜೋ ಯಸ್ಮಿನ್ನಿವಾಸಂ ದಧಿರೇ । ತದೇತದಪಾಯೀತಿ ಪೂರ್ವೇಣಾನ್ವಯಃ ।** ಇದಲ್ಲದೆ ಯಜ್ಞಕರ್ಮದಲ್ಲಿ ಪ್ರವೃತ್ತರಾಗಿ ಅದನ್ನು ನಿರ್ವಹಿಸುತ್ತಿರುವ ಋತ್ವಿಕ್ಕುಗಳೂ ಸಹ ಈ ಯಜ್ಞದಲ್ಲಿ ಹಿಂದೆ ಹೇಳಿದ ಸೋಮರಸವನ್ನು ಪಾನಮಾಡಿದರು. ಇಂತಹ ಸೋಮರಸವೇ ಇಂದ್ರನಿಂದ ಪಾನಮಾಡಲ್ಪಟ್ಟಿತು ಎಂದು ಹಿಂದಿನ ವಾಕ್ಯದೊಡನೆ ಸಮನ್ವಯವು.

---

**ಸಂಹಿತಾಪಾಠಃ**

ಅಸ್ಯ ಮಂದಾನೋ ಮಧ್ವೋ ವಜ್ರಹಸ್ತೋಽಹಿಮಿಂದ್ರೋ ಅರ್ಣೋವೃತಂ ನಿ ವೃಶ್ಚತ್ ।

ಪ್ರ ಯದ್ವಯೋ ನ ಸ್ವಸರಾಣ್ಯಚ್ಛಾ ಪ್ರಯಾಂಸಿ ಚ ನದೀನಾಂ ಚಕ್ರಮಂತ ॥

ಪದಪಾಠಃ

ಅಸ್ಯ । ಮಂದಾನಃ । ಮಧ್ವಃ । ವಜ್ರಽಹಸ್ತಃ । ಅಹಿಂ । ಇನ್ದ್ರಃ । ಅರ್ಣಃಽವೃತಂ । ವಿ । ವೃಶ್ಚತ್ ।

ಪ್ರ । ಯತ್ । ವಯಃ । ನ । ಸ್ವಸರಾಣಿ । ಅಚ್ಛ । ಪ್ರಯಾಂಸಿ । ಚ । ನದೀನಾಂ । ಚಕ್ರಮನ್ತ ॥ ೨ ॥

ಸಾಯಣಭಾಷ್ಯಂ

ಅಸ್ಯ ಮಧ್ವಃ ॥ ತೃತೀಯಾರ್ಥೇ ಷಷ್ಠೀ ॥ ಅನೇನ ಮದಕರೇಣ ಸೋಮೇನ ಮಂದಾನೋ ಹೃಷ್ಯನ್ ವಜ್ರಹಸ್ತೋ ವಜ್ರಯುಕ್ತೋ ಹಸ್ತೋ ಯಸ್ಯ ಸ ಇಂದ್ರೋಽರ್ಣೋವೃತಮುದಕಸ್ಯಾವರಕಮುದಕೇನಾವೃತಂ ವಾಹಿಂ ವೃತ್ರಂ ಮೇಘಂ ವಾ ವಿವೃಶ್ಚತ್ । ವಿಶೇಷೇಣಾಚ್ಛಿನತ್ ॥ ಓವ್ರಶ್ಚೂ ಛೇದನೇ। ತೌದಾದಿಕಃ । ಲಙಿ ಗ್ರಹಿಜ್ಯಾದಿನಾ ಸಂಪ್ರಸಾರಣಂ॥ ಯದ್ಯದಾಹಿಭೇದನೇ ಜಾತೇ ನದೀನಾಂ ಪ್ರಯಾಂಸಿ ಪ್ರೀಣಯಿತೃಣಿ ಜಲಾನ್ಯಚ್ಛ ಸಮುದ್ರಮಭಿಲಕ್ಷ್ಯ ಪ್ರ ಚಕ್ರಮಂತ । ಗಂತುಮುಪಾಕ್ರಮನ್ । ತತ್ರ ದೃಷ್ಟಾಂತಃ । ವಯೋ ನ । ಯಥಾ ಪಕ್ಷಿಣಃ ಸ್ವಸರಾಣಿ । ಸುಷ್ಠ್ವಸ್ಯಂತೇ ಪ್ರಾಪ್ಯಂತ ಇತಿ ಸ್ವರಾಣಿ ಸ್ವಸರಾಣಿ ಕುಲಾಯಾಃ । ತಾನಭಿಲಕ್ಷ್ಯ ಗಚ್ಛಂತಿ ತದ್ವತ್ ॥

ಪ್ರತಿಪದಾರ್ಥ

ಯತ್—ಯಾವಾಗ । ಅಸ್ಯ ಮಧ್ವಃ—ಮದಕರವಾದ ಈ ಸೋಮದ ಪಾನದಿಂದ । ಮಂದಾನಃ—ಹರ್ಷಗೊಂಡವನಾಗಿಯೂ । ವಜ್ರಹಸ್ತಃ—ವಜ್ರಾಯುಧವನ್ನು ಕೈಯಲ್ಲಿ ಹಿಡಿದವನಾಗಿಯೂ । ಇಂದ್ರಃ—ಇಂದ್ರನು । ಅರ್ಣೋವೃತಂ—ಉದಕವನ್ನು ಆವರಿಸಿದ । ಅಹಿಂ—ವೃತ್ರನನ್ನು (ಮೇಘವನ್ನು) । ವಿವೃಶ್ಚತ್—ಸೀಳಿದನೋ (ಆಗ) । ನದೀನಾಂ—ನದಿಗಳ । ಪ್ರಯಾಂಸಿ—ಪ್ರೀತಿಕಾರಕಗಳಾದ ಉದಕಗಳು । ವಯಃ—ಪಕ್ಷಿಗಳು । ಸ್ವ ಸರಾಣಿ ಇವ—ತಮ್ಮ ತಮ್ಮ ಗೂಡುಗಳ ಕಡೆಗೆ ಹಾರಿಹೋಗುವಂತೆ । ಅಚ್ಛ—ಸಮುದ್ರವನ್ನು ಅಭಿಲಕ್ಷಿಸಿ (ಸಮುದ್ರಾಭಿಮುಖವಾಗಿ) । ಪ್ರ ಚಕ್ರಮಂತ—ಪ್ರವಹಿಸಿದವು.

ಭಾವಾರ್ಥ

ಮದಕರವಾದ ಈ ಸೋಮದ ಪಾನದಿಂದ ಹರ್ಷಗೊಂಡವನಾಗಿಯೂ, ವಜ್ರಾಯುಧವನ್ನು ಕೈಯಲ್ಲಿ ಹಿಡಿದವನಾಗಿಯೂ ಆದ ಇಂದ್ರನು ಯಾವಾಗ ಉದಕವನ್ನು ಆವರಿಸಿದ ಮೇಘವನ್ನು ಸೀಳಿದನೋ ಆಗ ನದಿಗಳ ಪ್ರೀತಿಕಾರಕಗಳಾದ ಉದಕಗಳು ಪಕ್ಷಿಗಳು. ತಮ್ಮ ತಮ್ಮ ಗೂಡುಗಳ ಕಡೆಗೆ ಹಾರುವಂತೆ ಸಮುದ್ರಾಭಿಮುಖವಾಗಿ ಪ್ರವಹಿಸಿದವು.

## English Translation

Exhilarated by the Soma juice, Indra, armed with the thunderbolt sevred the rain-confining cloud ; where-upon the currents of the rivers proceedad (towards the ocean), like birds to their own nests.

### ವಿಶೇಷವಿಷಯಗಳು

ಈ ಋಕ್ಕಿನ ಅರ್ಥವು ಸ್ಪಷ್ಟವಾಗಿರುವುದು. ಇಂದ್ರನು ಮದಕರವಾದ ಸೋಮರಸವನ್ನು ಪಾನಮಾಡಿ ಅದರ ಹರ್ಷದಿಂದ ಉತ್ಸಾಹಗೊಂಡು ಕೈಯಲ್ಲಿ ವಜ್ರಾಯುಧವನ್ನು ಹಿಡಿದು ಉದಕಗಳಿಂದ ಆವೃತವಾಗಿದ್ದ ಮೇಘಗಳನ್ನು ತಡೆದಿದ್ದ ವೃತ್ರಾಸುರನನ್ನು ಪ್ರಹಾರಮಾಡಿದನು. ಈರೀತಿ ಮೇಘಭೇದನದಿಂದ ಇದುವರೆಗೂ ತಡೆಯಲ್ಪಟ್ಟಿದ್ದ ಉದಕಗಳು ವೃಷ್ಟಿರೂಪವಾಗಿ ಭೂಮಿಯಮೇಲೆ ಬಿದ್ದು ನದಿಗಳಾಗಿ ಹರಿಯುತ್ತಾ ಸಮುದ್ರಾಭಿಮುಖವಾಗಿ ಪ್ರವಹಿಸಿದವು. ಈ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಇಲ್ಲಿ ಹೇಳಲಾಗಿದೆ. (ಸಾಯಂಕಾಲದಲ್ಲಿ) ಪಕ್ಷಿಗಳು ತಮ್ಮ ಗೂಡುಗಳಿಗೆ ಯಾವ ರೀತಿ ಹೋಗಿ ಸೇರಿಕೊಳ್ಳುವವೋ ಅದರಂತೆ ನದಿಗಳ ಉದಕಗಳು ಸಮುದ್ರಾಭಿಮುಖವಾಗಿ ಹೋಗಿ ಸೇರುವವು. ಇಲ್ಲಿ ನದಿಯ ಉದಕಗಳನ್ನು ಪಕ್ಷಿಗಳಿಗೂ, ಸಮುದ್ರವನ್ನು ಪಕ್ಷಿಗಳ ಗೂಡುಗಳಿಗೂ ಹೋಲಿಸಿದೆ.

---

### ಸಂಹಿತಾಪಾಠಃ

ಸ ಮಾಹಿನ ಇನ್ದ್ರೋ ಅರ್ಣೋ ಅಪಾಂ ಪ್ರೈರಯದಹಿಹಾಚ್ಛಾ ಸಮುದ್ರಂ ।

ಅಜನಯತ್ಸೂರ್ಯಂ ವಿದದ್ಗಾ ಅಕ್ತುನಾಹ್ನಾಂ ವಯುನಾನಿ ಸಾಧತ್ ॥

### ಪದಪಾಠಃ

ಸಃ । ಮಾಹಿನಃ । ಇನ್ದ್ರಃ । ಅರ್ಣಃ । ಅಪಾಂ । ಪ್ರ । ಐರಯತ್ । ಅಹಿಽಹಾ । ಅಚ್ಛ । ಸಮುದ್ರಂ ।

ಅಜನಯತ್ । ಸೂರ್ಯಂ । ವಿದತ್ । ಗಾಃ । ಅಕ್ತುನಾ । ಅಹ್ನಾಂ । ವಯುನಾನಿ । ಸಾಧತ್ ॥ ೩ ॥

### ಸಾಯಣಭಾಷ್ಯಂ

ಮಾಹಿನೋ ಮಹನೀಯಃ ಪೂಜನೀಯೋ ಯದ್ವಾ ಮಹಿನೋಪೇತಃ । ಅಹಿಹಾಹಿಂ ಮೇಘಂ ಹತವಾನಿಂದ್ರಃ ॥ ಬ್ರಹ್ಮಭ್ರೂಣವೃತ್ರೇಷು ಕ್ವಿಪ್ । ಬಹುಲಂ ಛಂದಸೀತಿ ಭೂತಕಾಲೇ ಕ್ವಿಪ್ ॥ ಸ ಇಂದ್ರೋಽಪಾಮರ್ಣಃ ॥ ಋ ಗತೌ ॥ ಸ್ರೋತೋಲಕ್ಷಣಂ ಪ್ರವಾಹಂ ಸಮುದ್ರಾಮಚ್ಛಾಭಿಲಕ್ಷ್ಯ ಪ್ರೈರಯತ್। ಕಿಂಚ ಸ ಇಂದ್ರೋಽಂಗಿರಸಾಂ ಬಿಲಾಂತರ್ವರ್ತಿನಾಮಾವೃತಾನಾಂ ಗವಾಂ ಲಾಭಾಯ ಸೂರ್ಯಮಜನಯತ್ । ತತೋ ಗಾಃ ಪಣಿಭಿರಪಹೃತಾ ಗಾ ವಿದತ್ । ಅಲಭತ॥ ವಿದಿರ್ ಲಾಭೇ । ಲುಜಃ ಇರಿತೋ ವೇತಿ ಚ್ಲೇರವಾದೇಶಃ । ವಾಕ್ಯಭೇದಾದನಿಘಾತಃ ॥ ತಥಾಕ್ತುನಾ ತೇಜಸಾಹ್ನಾಂ ದಿವಸಾನಾಂ ವಯುನಾನಿ ಪ್ರಜ್ಞಾನಾನಿ ಪ್ರಕಾಶಾನ್ ಸಾಧತ್ । ಅಸಾಧಯತ್ ॥

### ಪ್ರತಿಪದಾರ್ಥ

**ಮಾಹಿನಃ**—ಪೂಜ್ಯನಾದವನೂ । **ಅಹಿಹಾ**—ವೃತ್ರಹಂತಕನೂ ಆದ । **ಸ ಇಂದ್ರಃ**—ಅದೇ ಇಂದ್ರನು । **ಅಪಾಂ**—ಉದಕಗಳ । **ಅರ್ಣಃ**—ಪ್ರವಾಹಗಳನ್ನು । **ಸಮುದ್ರಂ ಅಚ್ಛ**—ಸಮುದ್ರಾಭಿಮುಖವಾಗಿ । **ಪ್ರೈರಯತ್**—ಪ್ರವಹಿಸುವಂತೆ ಮಾಡಿದನು । **ಸೂರ್ಯಂ**—ಸೂರ್ಯನನ್ನು । **ಅಜನಯತ್**—ಸೃಷ್ಟಿಸಿದನು । **ಗಾಃ**—(ಪಣಿಗಳಿಂದ ಅಪಹೃತಗಳಾದ) ಗೋವುಗಳನ್ನು । **ವಿದತ್**—ಹಿಂದಕ್ಕೆ ಪಡೆದನು । **ಅಕ್ತುನಾ**—ತೇಜಸ್ಸಿನಿಂದ । **ಅಹ್ನಾಂ**—ದಿವಸಗಳ । **ವಯುನಾನಿ**—ಪ್ರಕಾಶಗಳನ್ನು । **ಸಾಧತ್**—ಸಾಧಿಸಿದನು.

### ಭಾವಾರ್ಥ

ಪೂಜ್ಯನಾದವನೂ, ವೃತ್ರಹಂತಕನಾದವನೂ ಆದ ಇಂದ್ರನು ಉದಕಗಳ ಪ್ರವಾಹಗಳನ್ನು ಸಮುದ್ರಾಭಿಮುಖವಾಗಿ ಪ್ರವಹಿಸುವಂತೆ ಮಾಡಿದನು ಅವನು ಸೂರ್ಯನನ್ನು ಸೃಷ್ಟಿಸಿದನು. ಪಣಿಗಳಿಂದ ಅಪಹೃತಗಳಾದ ಗೋವುಗಳನ್ನು ಹಿಂದಕ್ಕೆ ಪಡೆದನು. ತೇಜಸ್ಸಿನಿಂದ ದಿವಸಗಳ ಪ್ರಕಾಶಗಳನ್ನು ಸಾಧಿಸಿದನು.

### English Translation

The adorable Indra, the slayer of Ahi, sent the current of the waters towards the ocean: he generated the sun: he discovered the cattle: he effected the manifestation of the days by light.

### ವಿಶೇಷವಿಷಯಗಳು

ಈ ಋಕ್ಕಿನ ಪೂರ್ವಾರ್ಧದಲ್ಲಿ ಹಿಂದಿನ ಋಕ್ಕಿನಲ್ಲಿ ಹೇಳಿರುವ ವಿಷಯವನ್ನೇ ಪುನಃ ಹೇಳಿರುವುದು. ಮೇಘಹನನದಿಂದ ವೃಷ್ಟಿಯುಂಟಾಗಿ ಆ ವೃಷ್ಟ್ಯುದಕಗಳು ನದಿಯ ಪ್ರವಾಹರೂಪವಾಗಿ ಸಮುದ್ರಾಭಿಮುಖವಾಗಿ ಹರಿಯುವಂತೆ ಇಂದ್ರನು ಮಾಡಿದನು. ಇದಲ್ಲದೆ ಆ ಇಂದ್ರನು ಸೂರ್ಯನನ್ನು ಸೃಷ್ಟಿಸಿದನು. ಪಣಿಗಳೆಂಬ ಅಸುರರಿಂದ ಅಪಹರಿಸಲ್ಪಟ್ಟಿದ್ದ ಗೋವುಗಳನ್ನು ಹಿಂದಕ್ಕೆ ತಂದನು. ಮತ್ತು ಹಗಲಿನಲ್ಲಿ ತೇಜಸ್ಸುಗಳು ಚೆನ್ನಾಗಿ ಬೆಳಗುವಂತೆ ಮಾಡಿದನು ಎಂದು ಮುಖ್ಯಾಭಿಪ್ರಾಯವು.

**ಮಾಹಿನಃ—ಮಹನೀಯಃ ಪೂಜನೀಯಃ ಯದ್ವಾ ಮಹಿಮೋಪೇತಃ** । ಪೂಜ್ಯನಾದ ಅಥವಾ ಅನೇಕ ಸಾಹಸಕೃತ್ಯಗಳನ್ನು ಮಾಡಿ ಅವುಗಳ ಮಹಿಮೆಯಿಂದ ಪ್ರಸಿದ್ಧನಾದ ಎಂದಭಿಪ್ರಾಯವು.

**ಅರ್ಣಃ—ಅರ್ಣಃ** ಎಂಬ ಶಬ್ದವು ನೂರೊಂದು ಉದಕನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೨೪) ಅರ್ಣವೆಂದರೆ ಉದಕವೆಂದರ್ಥವು.

**ಅಕ್ತುನಾ—ಅಕ್ತುಭೀ. ರಾತ್ರಿಭಿಃ** ಎಂದು ನಿರ್ವಚನವಿರುವುದು. (ನಿ. ೧೨-೨೩). ಅಕ್ತುಶಬ್ದವು **ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು** ಎಂಬ ಧಾತುವಿನಿಂದ ನಿಷ್ಪನ್ನವಾಗಿ ಇಲ್ಲಿ ಕಾಂತಿಯೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ವಯುನಾನಿ**—ವಯುನಶಬ್ದವು ಪ್ರಶಸ್ಯನಾಮಗಳಲ್ಲಿಯೂ ( ನಿ. ೩-೧೩ ) ಪ್ರಜ್ಞಾನಾಮಗಳಲ್ಲಿಯೂ (ನಿ. ೩-೧೩) ಪಠಿತವಾಗಿದೆ.

ಸಂಹಿತಾಪಾಠಃ

ಸೋ ಅಪ್ರತೀನಿ ಮನವೇ ಪುರೂಣೀಂದ್ರೋ ದಾಶದ್ದಾಶುಷೇ ಹಂತಿ ವೃತ್ರಂ।

ಸದ್ಯೋ ಯೋ ನೃಭ್ಯೋ ಅತಸಾಯ್ಯೋ ಭೂತ್ಪಸ್ಪೃಧಾನೇಭ್ಯಃ ಸೂರ್ಯಸ್ಯ ಸಾತೌ ॥ ೪ ॥

ಪದಪಾಠಃ

ಸಃ । ಅಪ್ರತೀನಿ । ಮನವೇ । ಪುರೂಣಿ । ಇಂದ್ರಃ । ದಾಶತ್ । ದಾಶುಷೇ । ಹಂತಿ । ವೃತ್ರಂ ।

ಸದ್ಯಃ । ಯಃ । ನೃಽಭ್ಯಃ । ಅತಸಾಯ್ಯಃ । ಭೂತ್ । ಪಸ್ಪೃಧಾನೇಭ್ಯಃ । ಸೂರ್ಯಸ್ಯ । ಸಾತೌ ॥ ೪ ॥

ಸಾಯಣಭಾಷ್ಯಂ

ಸ ಇಂದ್ರೋ ದಾಶುಷೇ ಹವಿರ್ದತ್ತವತೇ ಮನವೇ ಮನುಷ್ಯಾಯ ಯಜಮಾನಾಯ ಪುರೂಣಿ ಬಹೂನ್ಯಪ್ರತೀನ್ಯುತ್ಕೃಷ್ಟಾನಿ ಧನಾನಿ ದಾಶತ್ । ದದಾತಿ । ಕಿಂಚ ವೃತ್ರಮಸುರಂ ಹಂತಿ । ಕೀದೃಶಃ । ಯ ಇಂದ್ರಃ ಸೂರ್ಯಸ್ಯ ಸಾತೌ । ಸಾತಿಃ ಸಂಭಜನಂ । ಸೂರ್ಯಸಂಭಜನವಿಷಯೇ ಭೂತೇ ಪಸ್ಪೃಧಾನೇಭ್ಯಃ ಅಹಮೇವ ಪ್ರಥಮಂ ಸೂರ್ಯಂ ಪ್ರಾಪ್ನುಯಾಮಹಮೇವ ಪ್ರಥಮಂ ಸೂರ್ಯಂ ಪ್ರಾಪ್ನುಯಾಮಿತಿ ಸ್ಪರ್ಧಮಾನೇಭ್ಯಃ ಸ್ತೋತೃಭ್ಯಃ ಸದ್ಯಸ್ತದಾನೀಮೇವಾತಸಾಯ್ಯಸ್ತತ್ಪ್ರಾಪ್ತಿಹೇತುಭೂತಃ ಸನ್ ಸಮಾಶ್ರಯಣೀಯೋ ಭೂತ್ । ಅಭೂತ್ । ಯದ್ವಾ ಸೂರ್ಯಸ್ಯ ಸಾತೌ ॥ ಷೋಽಂತಕರ್ಮಣಿ । ಅಧಿಕರಣೇ ಕ್ತಿನ್ ॥ ಸೂರ್ಯಸ್ಯ ಸಂಬಂಧಿನಿ ಯುದ್ಧೇ ಪಸ್ಪೃಧಾನೇಭ್ಯಃ ಸೂರ್ಯೇಣ ಸಹ ಸ್ಪರ್ಧಮಾನೇಭ್ಯೋಽತಸಾಯ್ಯೋಽಭೂತ್ ॥

ಪ್ರತಿಪದಾರ್ಥ

ಯಃ—ಯಾವ ಇಂದ್ರನು । **ಸೂರ್ಯಸ್ಯ ಸಾತೌ**—ಸೂರ್ಯನನ್ನು ಪಡೆಯುವ ಸಂದರ್ಭದಲ್ಲಿ । **ಪಸ್ಪೃಧಾನೇಭ್ಯಃ**—ಪರಸ್ಪರ ಸ್ಪರ್ಧೆಯನ್ನು ಬೆಳೆಸಿದ । **ನೃಭ್ಯಃ**—ಯಜ್ಞಕರ್ತರಿಗೆ । **ಸದ್ಯಃ**—ಒಡನೆಯೇ । **ಅತಸಾಯ್ಯಃ**—ಮಧ್ಯಸ್ಥನಾಗಿ ನಿಂತು ನಿರ್ಣಾಯಕನಾಗಿ । **ಭೂತ್**—ಆದನೋ । **ಸಃ ಇಂದ್ರಃ**—ಆ ಇಂದ್ರನು । **ದಾಶುಷೇ**—ಹವಿಸ್ಸನ್ನು ಅರ್ಪಿಸುವವನೂ । **ಮನವೇ**—ಮಾನವನೂ ಆದ ಯಜಮಾನನಿಗೆ । **ಪುರೂಣಿ**—ಬಹಳವಾದುದೂ । **ಅಪ್ರತೀನಿ**—ಉತ್ಕೃಷ್ಟವೂ ಆದ ಧನಗಳನ್ನು । **ದಾಶತ್**—ಕೊಡುತ್ತಾನೆ । **ವೃತ್ರಂ**—ವೃತ್ರಾಸುರನನ್ನು । **ಹಂತಿ**—ಕೊಲ್ಲುತ್ತಾನೆ.

ಭಾವಾರ್ಥ

ಸೂರ್ಯನನ್ನು ಪಡೆಯುವ ಸಂದರ್ಭದಲ್ಲಿ ಪರಸ್ಪರ ಸ್ಪರ್ಧೆಯನ್ನು ಬೆಳೆಸಿದ ಯಜ್ಞಕರ್ತರಿಗೆ ಮಧ್ಯಸ್ಥನಾಗಿ ನಿಂತು ಒಡನೆಯೇ ಯಾರು ನಿರ್ಣಾಯಕನಾದನೋ ಆ ಇಂದ್ರನು ಹವಿಸ್ಸನ್ನು ಅರ್ಪಿಸುವವನೂ, ಮಾನವನೂ ಆದ

ಯಜಮಾನನಿಗೆ ಬಹಳವಾದುದೂ, ಉತ್ಕೃಷ್ಟವಾದುದೂ ಆದ ಧನಗಳನ್ನು ಕೊಡುತ್ತಾನೆ. ಮತ್ತು ವೃತ್ರಾಸುರನನ್ನು ಕೊಲ್ಲುತ್ತಾನೆ.

## English Translation

To the presenter (of the libation) Indra gives many unparalleled gifts: he slays Vritra; he was the arbiter amongst his worshippers when contending for the possession of the Sun.

### ವಿಶೇಷವಿಷಯಗಳು

ಯಃ ಸೂರ್ಯಸ್ಯ ಸಾತೌ ಪಸ್ಪೃಧಾನೇಭ್ಯಃ ನೃಭ್ಯಃ ಸದ್ಯಃ ಅತಸಾಯ್ಯಃ ಭೂತ್—ಸೂರ್ಯಸಂಭಜನವಿಷಯೇ ಭೂತೇ ಪಸ್ಪೃಧಾನೇಭ್ಯಃ ಅಹಮೇವ ಪ್ರಥಮಂ ಸೂರ್ಯಂ ಪ್ರಾಪ್ನುಯಾಮಹಮೇವ ಪ್ರಥಮಂ ಸೂರ್ಯಂ ಪ್ರಾಪ್ನುಯಾಮಿತಿ ಸ್ಪರ್ಧಮಾನೇಭ್ಯಃ ಸ್ತೋತೃಭ್ಯಃ ಸದ್ಯಸ್ತದಾನೀಮೇವಾತಸಾಯ್ಯಸ್ತತ್ಪ್ರಾಪ್ತಿಹೇತುಭೂತಃ ಸನ್ ಸಮಾಶ್ರಯಣೀಯೋ ಭೂತ್ । ಸೂರ್ಯನನ್ನು ಪಡೆಯುವ ವಿಷಯವಾಗಿ ನಾನು ಮೊದಲು ತಾನು ಮೊದಲು ಸೂರ್ಯನನ್ನು ಪಡೆಯುವೆನು ಎಂದು ಸ್ತೋತೃಜನರಲ್ಲಿ ಸ್ಪರ್ಧೆಯು ಉಂಟಾದಾಗ ಇಂದ್ರನು ಮಧ್ಯಸ್ಥನಾಗಿ ನಿಂತು ಅವರ ವಿವಾದವನ್ನು ಪರಿಹರಿಸಿದನು ಎಂದು ಇಲ್ಲಿ ವರ್ಣಿಸಿದೆ. ಸೂರ್ಯನನ್ನು ಪಡೆಯುವುದು ಎಂದರೇನು ಎಂಬ ವಿಷಯವನ್ನು ಇಲ್ಲಿ ಭಾಷ್ಯಕಾರರು ಸ್ಪಷ್ಟವಾಗಿ ವಿವರಿಸಿಲ್ಲ. ಪ್ರಾಯಶಃ ಋ ಸಂ. ೧-೬೧-೧೫ ಮತ್ತು ೧-೧೨೧-೧೩ ನೆಯ ಋಕ್ಕುಗಳಲ್ಲಿ ಹೇಳಿರುವ ವಿಷಯವನ್ನೇ ಇಲ್ಲಿ ಪ್ರಕಾರಾಂತರವಾಗಿ ಹೇಳಿರಬಹುದು. ಮುಂದಿನ ಋಕ್ಕಿನಲ್ಲಿಯೂ ಈ ವಿಷಯದ ಪ್ರಸ್ತಾಪವಿರುವುದರಿಂದ ಇದನ್ನು ಅಲ್ಲಿ ವಿವರಿಸಿದೇವೆ. ಅದನ್ನು ಅಲ್ಲಿ ನೋಡಿ ತಿಳಿದುಕೊಳ್ಳಬಹುದು.

---

### ಸಂಹಿತಾಪಾಠಃ

ಸ ಸುನ್ವತ ಇನ್ದ್ರಃ ಸೂರ್ಯಮಾ ದೇವೋ ರಿಣಙ್ಮರ್ತ್ಯಾಯ ಸ್ತವಾನ್ ।

ಆ ಯದ್ರಯಿಂ ಗುಹದವದ್ಯಮಸ್ಮೈ ಭರದಂಶಂ ನೈತಶೋ ದಶಸ್ಯನ್ ॥೫॥

### ಪದಪಾಠಃ

ಸಃ । ಸುನ್ವತೇ । ಇನ್ದ್ರಃ । ಸೂರ್ಯಂ । ಆ । ದೇವಃ । ರಿಣಕ್ । ಮರ್ತ್ಯಾಯ । ಸ್ತವಾನ್ ।

ಆ । ಯತ್ । ರಯಿಂ । ಗುಹತ್ಽಅವದ್ಯಂ । ಅಸ್ಮೈ । ಭರತ್ । ಅಂಶಂ । ನ । ಏತಶಃ । ದಶಸ್ಯನ್ ॥೫॥

## ಸಾಯಣಭಾಷ್ಯಂ

ಸ್ತವಾನ್ ಏತಶೇನ ಸ್ತೂಯಮಾನೋ ದೇವೋ ದ್ಯೋತಮಾನಃ ಸ ಇಂದ್ರಃ ಸುನ್ವತೇ ಸೋಮಾಭಿಷವಂ ಕುರ್ವತೇ ಮರ್ತ್ಯಾಯ ಮನುಷ್ಯಾಯೈತಶಾಯ ಸೂರ್ಯಮಾರಿಣಕ್ । ಏತಶೇನ ಸ್ಪರ್ಧಮಾನಂ ಸೂರ್ಯಂ ಬಲೇನಾರೇಚಯತ್ । ತಥಾ ಚ ನಿಗಮಃ । ಪ್ರೈತಶಂ ಸೂರ್ಯೇ ಪಸ್ಪೃಧಾನಂ ಸೌವಶ್ವ್ಯೇ ಸುಷ್ವಿಮಾವದಿಂದ್ರ ಇತಿ । ಯದ್ಯಸ್ಮಾದೇತಶಃ ಸೌವಶ್ವ್ಯೋ ರಾಜಾ ದಶಸ್ಯನ್ ಯಜಮಾನೋಽಸ್ಮಾ ಇಂದ್ರಾಯ ಗುಹದವದ್ಯಂ ಪ್ರಚ್ಛನ್ನಾನವದ್ಯಂ ರಯಿಂ ಸೋಮರೂಪಮಭರತ್ । ಸಂಪಾದಯಾಮಾಸ । ತತ್ರ ದೃಷ್ಟಾಂತಃ । ಅಂಶಂ ನ । ಯಥಾ ಪಿತಾಂಶಂ ಭಾಗಂ ಪುತ್ರಾಯ ಭರತಿ ತದ್ವತ್ ॥

## ಪ್ರತಿಪದಾರ್ಥ

**ಯತ್**—ಯಾವ ಕಾರಣದಿಂದ । **ಏತಶಃ** ಏತಶನೆಂಬ ರಾಜನು । **ದಶಸ್ಯನ್**—ಯಜ್ಞಕರ್ತನಾಗಿ । **ಅಸ್ಮೈ**—ಈ ಇಂದ್ರನಿಗೆ । **ಗುಹದವದ್ಯಂ**—ರಹಸ್ಯವಾದುದೂ ಪವಿತ್ರವಾದುದೂ ಆದ । **ರಯಿಂ**—ಸೋಮರೂಪವಾದ ಧನವನ್ನು । **ಅಂಶಂ ನ**—ಪಿತೃವು ತನ್ನ ಐಶ್ವರ್ಯದಲ್ಲಿ ಪುತ್ರನ ಅಂಶವನ್ನು ಭಾಗಮಾಡಿ ಕೊಡುವಂತೆ । **ಆಭರತ್**—ಸಂಪಾದಿಸಿಕೊಟ್ಟನೋ ಆಕಾರಣದಿಂದ । **ಸ್ತವಾನ್**—(ಏತಶನಿಂದ) ಸ್ತುತಿಸಲ್ಪಟ್ಟವನೂ । **ದೇವಃ**—ಪ್ರಕಾಶಮಾನನಾದವನೂ ಆದ । **ಸ ಇಂದ್ರಃ**—ಆ ಇಂದ್ರನು । **ಸುನ್ವತೇ**—ಸೋಮರಸವನ್ನು ಹಿಂಡುವವನೂ । **ಮರ್ತ್ಯಾಯ**—ಮಾನವನೂ ಆದ ಏತಶನಿಗೆ । **ಸೂರ್ಯಂ**—ಸೂರ್ಯನನ್ನು । **ಆ ರಿಣಕ್**—ನಮ್ರವಾಗುವಂತೆ ಮಾಡಿದನು.

## ಭಾವಾರ್ಥ

ಯಾವ ಕಾರಣದಿಂದ ಏತಶನೆಂಬ ರಾಜನು ಯಜ್ಞಕರ್ತನಾಗಿ ಇಂದ್ರನಿಗೆ ರಹಸ್ಯವಾದುದೂ, ಪವಿತ್ರವಾದದೂ ಆದ ಸೋಮರೂಪವಾದ ಧನವನ್ನು ಪಿತೃವು ತನ್ನ ಐಶ್ವರ್ಯದಲ್ಲಿ ಪುತ್ರನ ಅಂಶವನ್ನು ಭಾಗಮಾಡಿ ಕೊಡುವಂತೆ ಸಂಪಾದಿಸಿಕೊಟ್ಟನೋ, ಆ ಕಾರಣದಿಂದ ಏತಶನಿಂದ ಸ್ತುತಿಸಲ್ಪಟ್ಟವನೂ, ಪ್ರಕಾಶಮಾನನೂ ಆದ ಇಂದ್ರನು ಸೋಮರಸವನ್ನು ಹಿಂಡುವವನೂ, ಮಾನವನೂ ಆದ ಏತಶನಿಗೆ ಸೂರ್ಯನನ್ನು ನಮ್ರವಾಗುವಂತೆ ಮಾಡಿದನು.

## English Translation

The divine Indra, when lauded (by Etasha), humbled the Sun (in behalf) of the mortal who offered to him the libation ; for the munificent Etasha presented him with mysterious and inestimable riches : (as a father gives) his portion (to a son).

## ವಿಶೇಷವಿಷಯಗಳು

**ಏತಶಃ**—ಈ ಏತಶನೆಂಬ ಋಷಿಯ ವಿಷಯವಾಗಿ ಭಾಷ್ಯಕಾರರು ಋ. ಸಂ. ೧-೬೧-೧೫ ನೆಯ ಋಕ್ಕಿನ ಭಾಷ್ಯದಲ್ಲಿ ಈರೀತಿ ಬರೆದಿದ್ದಾರೆ—

ಅಸ್ಮಾ ಇದು ತ್ಯದನು ದಾಯ್ಯೇಷಾಮೇಕೋ ಯದ್ವವ್ನೇ ಭೂರೇರೀಶಾನಃ ।
ಪ್ರೈತಶಂ ಸೂರ್ಯೇ ಪಸ್ಪೃಧಾನಂ ಸೌವಶ್ವ್ಯೇ ಸುಷ್ವಿಮಾವದಿಂದ್ರಃ ॥

(ಋ. ಸಂ. ೧–೬೧–೧೫ ಸಾ. ಭಾ )

ಸ್ವಶ್ವೋ ನಾಮ ಕಶ್ಚಿದ್ರಾಜಾ । ಸ ಚ ಪುತ್ರಕಾಮಃ ಸೂರ್ಯಮುಪಾಸಾಂ ಚಕ್ರೇ । ತಸ್ಯ ಚ ಸೂರ್ಯ ಏವ ಪುತ್ರೋ ಬಭೂವ । ತೇನ ಸಹೈತಶನಾಮ್ನೋ ಮಹರ್ಷೇರ್ಯುದ್ಧಂ ಜಾತ-ಮಿತಿ ತದೇತದಿಹೋಚ್ಯತೇ ॥

(ಋ. ಸಂ. ೧–೬೧–೧೫ ಸಾ. ಭಾ.)

ಪೂರ್ವದಲ್ಲಿ ಸ್ವಶ್ವನೆಂಬ ಒಬ್ಬ ರಾಜನಿದ್ದನು. ಅವನಿಗೆ ಮಕ್ಕಳಿರಲಿಲ್ಲ. ತನಗೆ ಮಕ್ಕಳಾಗಬೇಕೆಂದು ಸೂರ್ಯನನ್ನು ಉಪಾಸನೆಮಾಡಿದನು ಆಗ ಸೂರ್ಯನು ತಾನೇ ಅವನ ಮಗನಾಗಿ ಹುಟ್ಟಿದನು. ಅವನಿಗೂ ಏತಶನೆಂಬ ಮಹರ್ಷಿಗೂ ಯುದ್ಧವು ಸಂಭವಿಸಿತು. ಅದನ್ನೇ ಈ ಋಕ್ಕಿನಲ್ಲಿ ಹೇಳಲಾಗಿದೆ ಎಂದು ವಿವರಿಸಿರುವರು. ಮತ್ತು ಸ್ವಶ್ವನೆಂಬ ರಾಜನ ಪುತ್ರ ರೂಪದಿಂದಿದ್ದ ಸೂರ್ಯನಿಗೂ ಈ ಏತಶನೆಂಬ ಋಷಿಗೂ ಘೋರವಾದ ಯುದ್ಧವು ಸಂಭವಿಸಿದಾಗ ಏತಶಋಷಿಯು ಸೋಮರಸವನ್ನು ಸಿದ್ಧಮಾಡಿ ಇಂದ್ರನಿಗೆ ಅರ್ಪಿಸಿದನು. ಅದರಿಂದ ಸಂತುಷ್ಟನಾದ ಇಂದ್ರನು ಏತಶನ ಪಕ್ಷವನ್ನು ವಹಿಸಿ ಯುದ್ಧದಲ್ಲಿ ಅವನಿಗೆ ಸಹಾಯಮಾಡಿದನು ಎಂದು ಈ ಋಕ್ಕಿನಲ್ಲಿ ಹೇಳಿದೆ. ಈ ವಿಷಯವನ್ನೇ ಗೃತ್ಸಮದ ಋಷಿಯು ಹಿಂದಿನ ಋಕ್ಕಿನಲ್ಲಿಯೂ ಈ ಋಕ್ಕಿನಲ್ಲಿಯೂ ಪಸ್ಪೃಧಾನೇಭ್ಯಃ ಸೂರ್ಯಸ್ಯ—ಸೂರ್ಯನೊಡನೆ ಹೋರಾಡುತ್ತಿದ್ದ ಏತಶಋಷಿಗೆ ಇಂದ್ರನು ಸಹಾಯಮಾಡಿದನೆಂದು ವರ್ಣಿಸಿದ್ದಾನೆ. ಇದಲ್ಲದೆ—

ಅಯಂ ಚಕ್ರಮಿಷಣತ್ಸೂರ್ಯಸ್ಯ ನ್ಯೇತಶಂ ರೀರಮತ್ಸಸೃಮಾಣಂ ।

(ಋ. ಸಂ. ೪–೧೭–೧೪)

ಪ್ರೈತಶಂ ಸೂರ್ಯೇ ಪಸ್ಪೃಧಾನಮಿತ್ಯರ್ಧರ್ಚೇ ಋ. ಸಂ. ೧–೬೧–೧೫ । ಪೂರ್ವಂ ಕಾಚಿದಾ-ಖ್ಯಾಯಿಕಾ ಸೂಚಿತಾ । ಅತ್ರಾಪ್ಯಯಂ ಚಕ್ರಮಿತಿ ಪೂರ್ವಾರ್ಧೇ ಸಾ ಸೂಚ್ಯತೇ । ಸ್ವಶ್ವ-ನಾಮಾ ಕಶ್ಚಿದ್ರಾಜಾ । ಸ ಚ ಪುತ್ರಾರ್ಥಂ ಸೂರ್ಯಮುಪಾಸ್ತೇ । ಸ ಚ ಸೂರ್ಯಃ ಪುತ್ರ-ರೂಪೇಣ ಸ್ವಯಮೇವ ತತ್ರೋತ್ಪನ್ನಃ ಸನ್ ಏತಶಾಖ್ಯೇನ ಮಹರ್ಷಿಣಾ ಸಾರ್ಧಂ ಯುದ್ಧಂ ಚಕಾರ । ತದಾನೀಂ ಸ ಋಷಿರ್ಯುದ್ಧೇ ಜಯಾರ್ಥಮಿಂದ್ರಂ ತುಷ್ಟಾವ । ಸ ಇಂದ್ರಸ್ತೇನ ಸ್ತೂಯಮಾನಃ ಸನ್ ಸ್ವಶ್ವಪುತ್ರಸ್ಯ ಸೂರ್ಯಸ್ಯ ಸಂಬಂಧಿನಃ ಸಂಗ್ರಾಮಾದೇನಮುಪಾಲ-ಯದಿತಿ ॥

(ಋ. ಸಂ. ೪-೧೭-೧೪ ಸಾ. ಭಾ.)

ಎಂಬ ಋಕ್ಕಿನ ಭಾಷ್ಯದಲ್ಲಿಯೂ ಸಾಯಣರು ಮೇಲೆ ಹೇಳಿದ ಉಪಾಖ್ಯಾನವನ್ನೇ ಹೇಳಿ ಅರ್ಥವನ್ನೂ ಅದೇರೀತಿ ವಿವರಿಸಿರುವರು. ಈ ವಿಷಯವು—

ಯತ್ರೋತ ಮರ್ತ್ಯಾಯ ಕಮಾರಿಣಾ ಇಂದ್ರ ಸೂರ್ಯಂ । ಪ್ರಾವಃ ಶಚೀಭಿರೇತಶಂ ॥

(ಋ. ಸಂ. ೪-೩೦-೬)

ಯಥಾ ಪ್ರಾವ ಏತಶಂ ಕೃತ್ವ್ಯೇ ಧನೇ ಯಥಾ ವಶಂ ದಶವ್ರಜೇ ।

(ಋ. ಸಂ. ೮-೪೦-೯)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿತವಾಗಿದೆ. ಇದಲ್ಲದೆ ಏತಶ ಇತ್ಯಶ್ವನಾಮ ಎಂದು ಏತಶ ಶಬ್ದಕ್ಕೆ ಅಶ್ವವೆಂಬ ಅರ್ಥವೂ ಇರುವುದು. ಅನೇಕ ಋಕ್ಕುಗಳಲ್ಲಿ ಎತಶ ಶಬ್ದವು ಸೂರ್ಯಾಶ್ವವನ್ನು ಸೂಚಿಸುವುದಕ್ಕೆ ಉಪಯೋಗಿಸಲ್ಪಟ್ಟಿದೆ. ಆದರೆ ನಾವು ಮೇಲೆ ವಿವರಿಸಿದ ಏತಶನೆಂಬ ಋಷಿಯ ವಿಷಯವೇ ಬೇರೆ. ಸೂರ್ಯಾಶ್ವದ ವಿಷಯವೇ ಬೇರೆ. ಈ ಎರಡು ಅರ್ಥಗಳನ್ನು ಒಂದರಕ್ಕೊಂದು ಬೆರಸಿ ಅಪಾರ್ಥಗಳನ್ನು ಕೆಲವು ಆಂಗ್ಲ ಪಂಡಿತರು ಮಾಡಿರುವರು—

Etasa is in several passages of Rigveda, according to Roth the name of a protege whom Indra helped against the Sun-God Surya. But in all these passages Etasa seems merely to designate the horse of the sun.

(Vedic Index of Names and Subjects p. 120).

ಈ ಅಭಿಪ್ರಾಯವು ಶುದ್ಧ ತಪ್ಪೆಂದು ಹೇಳದೆ ವಿಧಿಯಿಲ್ಲ. ಆದರೆ Griffith ಎಂಬ ಇನ್ನೊಬ್ಬ ಆಂಗ್ಲ ಪಂಡಿತನು ಈ ಋಕ್ಕಿನ ಅರ್ಥವನ್ನು ವಿವರಿಸುತ್ತಾ—

The legend says that a certain king who wished for a son worshipped Surya, who to grant his prayer, was born himself as the king's son. Afterwards when some dispute arose between this king's son who was named Surya and the Rishi Etasa, Indra sided with the latter. In I-61-15 a chariot race appears to be referred to, and I have translated the passage accordingly, following sayana in taking Surya to be the name of a man. If, however, as is very possible, Surya is the Sun-God the meaning is that Indra, in order to favour his faithful worshipper Etasa, compelled Surya or the sun to bring back his chariot and horses to the east. that is the return of day on some particular occasion is attibuted to Indra's intervention on behalf of his favourite. This appears to be the meaning of this verse also. See also I—121-13.

ಈ ಪಂಡಿತನ ಅಭಿಪ್ರಾಯವು ಸಾಯಣಭಾಷ್ಯಾನುಸಾರವಾಗಿಯೇ ಇದೆ. ಮತ್ತು ಈ ವಿಷಯಕವಾದ ಇತರ ಋಕ್ಕುಗಳ ಅರ್ಥಕ್ಕೆ ವಿರೋಧವಾಗಿಲ್ಲ.

ಈ ಋಕ್ಕಿನ ಭಾಷ್ಯದಲ್ಲಿ—ಯದ್ವಸ್ಮಾದೇತಶಃ ಸೌವಶ್ವ್ಯೋ ರಾಜಾ ಎಂದರೆ ಸ್ವಶ್ವನೆಂಬ ರಾಜನ ಪುತ್ರನಾದ ಏತಶನೆಂಬ ರಾಜನು ಎಂದು ಭಾಷ್ಯಕಾರರು ವಿವರಿಸಿರುವ ಅರ್ಥವು ಪೂರ್ವಾಪರಸಂದರ್ಭಗಳಿಗೆ ವಿರುದ್ಧವಾಗಿದೆ. ಮೇಲೆ ವಿವರಿಸಿದಂತೆ ಏತಶನೆಂಬುವನು ಒಬ್ಬ ಋಷಿಯು, ಸ್ವಶ್ವ್ಯ ಅಥವಾ ಸೌವಶ್ವ್ಯನೆಂಬುವನು ಸ್ವಶ್ವನೆಂಬ ರಾಜನ ಪುತ್ರನು (ಸೂರ್ಯನು). ಇವರಿಬ್ಬರು ಬೇರೆ ಬೇರೆ ವ್ಯಕ್ತಿಗಳು ಮತ್ತು ಪರಸ್ಪರ ವಿರೋಧಿಗಳು.

---

ಸಂಹಿತಾಪಾಠಃ

ಸ ರನ್ಧಯತ್ಸದಿವಃ ಸಾರಥಯೇ ಶುಷ್ಣಮಶುಷಂ ಕುಯವಂ ಕುತ್ಸಾಯ ।

ದಿವೋದಾಸಾಯ ನವತಿಂ ಚ ನವೇನ್ದ್ರಃ ಪುರೋ ವ್ಯೈರಚ್ಛಂಬರಸ್ಯ ॥ ೬ ॥

ಪದಪಾಠಃ

ಸಃ । ರಂಧಯೆತ್ । ಸ್ವದಿವಃ । ಸಾರಥಯೇ । ಶುಷ್ಣಂ । ಅಶುಷಂ । ಕುಯವಂ । ಕುತ್ಸಾಯ ।

ದಿವಃದಾಸಾಯ । ನವತಿಂ । ಚ । ನವ । ಇನ್ದ್ರಃ । ಪುರಃ । ವಿ । ಐರತ್ । ಶಮ್ಬರಸ್ಯ ॥ ೬ ॥

ಸಾಯಣಭಾಷ್ಯಂ

ಸದಿವೋ ದೀಪ್ತಿಯುಕ್ತಃ ಸ ಇಂದ್ರಃ ಸಾರಥಯೆ ಆತ್ಮನಃ ಸಾರಥ್ಯಂ ಕುರ್ವತೇ ಕುತ್ಸಾಯೆ ರಾಜರ್ಷಯೇ ಶುಷ್ಣಂ । ಶೋಷಯತಿ ಸರ್ವಮಿತಿ ಶುಷ್ಣಃ ಕಶ್ಚಿದಸುರಃ ! ತಮಶುಷಂ ನ ಕೇನಾಪಿ ಶೋಷಣೀಯಂ । ಕುಯವಮೇತನ್ನಾಮಾನಮಸುರಂ ರಂಧಯೆತ್ ॥ ರಧ್ಯತಿರ್ವಶಗಮನೇ ॥ ವಶಮನ-ಯೆತ್ ॥ ಯದ್ವಾ ರಧ ಹಿಂಸಾಸಂರಾದ್ಧ್ಯೋರಿತ್ಯಸ್ಯ ಣ್ಯಂತಸ್ಯ ರಧಿಜಭೋರಚೀತಿ ನುಮ್ ॥ ಅವಧೀತ್। ಕಿಂಚ ಸ ಇಂದ್ರೋ ದಿವೋದಾಸಾಯೈತನ್ನಾಮಕಾಯ ರಾಜ್ಞೇ ಶಂಬರಸ್ಯಾಸುರಸ್ಯ ನವ ನವತಿಂ ಪುರೋ ವ್ಯೈರತ್ । ವಿದಾರಿತವಾನ್ ॥

ಪ್ರತಿಪದಾರ್ಥ

ಸದಿವಃ—ಪ್ರಕಾಶಮಾನನಾದ । ಸಃ-–ಇಂದ್ರನು । ಸಾರಥಯೇ—ತನ್ನ ರಥದ ಸಾರಥಿಯಾದ । ಕುತ್ಸಾಯ—ಕುತ್ಸನೆಂಬ ರಾಜರ್ಷಿಗೆ । ಅಶುಷಂ—(ಅಸುರನಾದ) ಅಶುಷನನ್ನೂ । ಶುಷ್ಣಂ—ಶುಷ್ಣನನ್ನೂ । ಕುಯವಂ—ಕುಯವನನ್ನೂ । ರಂಧಯೆತ್—ಅಧೀನರಾಗುವಂತೆ ಮಾಡಿದನು । ಇಂದ್ರಃ—ಇಂದ್ರನು । ದಿವೋದಾಸಾಯ—ದಿವೋದಾಸನೆಂಬ ರಾಜನಿಗಾಗಿ । ಶಂಬರಸ್ಯ—ಶಂಬರಾಸುರನ । ನವ ನವತಿಂ—ತೊಂಭತ್ತೊಂಭತ್ತು ಸಂಖ್ಯಾಕವಾದ । ಪುರಃ ಚ—ಪಟ್ಟಣಗಳನ್ನೂ ಕೂಡ । ವ್ಯೈರತ್—ಸೀಳಿಹಾಕಿದನು.

ಭಾವಾರ್ಥ

ಪ್ರಕಾಶಮಾನನಾದ ಇಂದ್ರನು ಅಸುರರಾದ ಅಶುಷನನ್ನೂ, ಶುಷ್ಣನನ್ನೂ, ಕುಯವನನ್ನೂ ತನ್ನ ರಥಕ್ಕೆ ಸಾರಥ್ಯವನ್ನು ನಡೆಸುವ ಕುತ್ಸನೆಂಬ ರಾಜರ್ಷಿಗೆ ಅಧೀನರಾಗುವಂತೆ ಮಾಡಿದನು. ಇಂದ್ರನು ದಿವೋದಾಸನೆಂಬ ರಾಜನಿಗಾಗಿ ಶಂಬರಾಸುರನ ತೊಂಭತ್ತೊಂಭತ್ತು ಪಟ್ಟಣಗಳನ್ನೂ ಸೀಳಿಹಾಕಿದನು.

English Translation

The radiant Indra subjected to Kutsa, his charioteer, (the Asuras), Shushna, Asusha, and Kuyava; and, for the sake of Divodasa, demolished the ninety and nine cities of Shambara.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಹಿಂದೆ ಹೇಳಿದ ವಿಷಯಗಳೇ ಎಂದರೆ ಕುತ್ಸನಿಗಾಗಿ ಅಶುಷನೆಂಬ ಅಸುರನನ್ನು ಇಂದ್ರನು ಸಂಹಾರಮಾಡಿದ ವಿಷಯವೂ (ಪುಟ 733) ಶುಷ್ಣ (ಪುಟ 734) ಕುಯುವ (ಪುಟ 73+) ಎಂಬುವರನ್ನು ಇಂದ್ರನು ಸಂಹರಿಸಿದ ವಿಷಯವೂ ದಿವೋದಾಸನಿಗಾಗಿ ಶಂಬರಾಸುರನ ತ್ತೊಂಭತ್ತು ನಗರಗಳನ್ನು ನಾಶಮಾಡಿದ ವಿಷಯವೂ (ಪುಟ 739) ಹಿಂದೆಯೇ ಹೇಳಲಾಗಿದೆ.

ಸಂಹಿತಾಪಾಠಃ

ಏವಾ ತ ಇನ್ದ್ರೋಚಥಮಹೇಮ ಶ್ರವಸ್ಯಾ ನ ತ್ಮನಾ ವಾಜಯನ್ತಃ ।

ಅಶ್ಯಾಮ ತತ್ಸಾಪ್ತಮಾಶುಷಾಣಾ ನನಮೋ ವಧರದೇವಸ್ಯ ಪೀಯೋಃ ॥೭॥

ಪದಪಾಠಃ

ಏವ । ತೇ । ಇನ್ದ್ರ । ಉಚಥಂ । ಅಹೇಮ । ಶ್ರವಸ್ಯಾ । ನ । ತ್ಮನಾ । ವಾಜಯನ್ತಃ ।

ಅಶ್ಯಾಮ । ತತ್ । ಸಾಪ್ತಂ । ಆಶುಷಾಣಾಃ । ನನಮಃ । ವಧಃ । ಅದೇವಸ್ಯ । ಪೀಯೋಃ ॥ ೭ ॥

ಸಾಯಣಭಾಷ್ಯಂ

ಹೇ ಇಂದ್ರ ಶ್ರವಸ್ಯಾ ॥ ಸುಪಾಂ ಸುಲುಗಿತಿ ತೃತೀಯಾಯಾಃ ಪೂರ್ವಸವರ್ಣದೀರ್ಘಃ ॥ ಅನ್ನೇಚ್ಛಯಾ ವಾಜಯಂತಸ್ತ್ವಾಂ ಬಲಿನಂ ಕುರ್ವಂತಃ । ಯದ್ವಾ ಶ್ರವಸ್ಯಾ ಯಶಃಕಾಮನಯಾ ವಾಜಯಂತೋಽನ್ನಮಿಚ್ಛಂತಃ ॥ ಇಚ್ಛಾಯಾಮಪಿ ಣಿಚ್ ದೃಶ್ಯತೇ । ಅಶ್ವಾಯಂತೋ ಗವ್ಯಂತೋ ವಾಜಯಂತ ಇತಿ ಕ್ಯಜಂತತ್ವೇ ಚಿತ್ಪ್ರಾತಿಪದಿಕಸ್ಯಾಂತೋದಾತ್ತತ್ವಂ ಸ್ಯಾತ್ ವಾಜಯಂತಃ ಶತಕ್ರತುಮಿತಿ ಯಥಾ ॥ ತಾದೃಶಾ ವಯಂ ತೇ ತುಭ್ಯಮೇವೋಚಥಂ ಸ್ತೋತ್ರಂ ತ್ಮನಾ ಆತ್ಮನಾ ಸ್ವಯಮೇವ ನಾಹೇಮ । ಇದಾನೀಂ ಪ್ರಾಪಯೇಮ ॥ ಅಹಿ ಗತೌ । ನ ಸಂಪ್ರತ್ಯರ್ಥೇ ॥ ಆಶುಷಾಣಾಃ ॥ ಅಶ್ನೋತೇಃ ಕಾನಚಿ ವ್ಯತ್ಯಯೋ ಬಹುಲಮಿತಿ ಲಿಟ್ಯಪಿ ವಿಕರಣದ್ವಯ ಉಪ್ರತ್ಯಯಃ ಸ ಚ ॥ ತ್ವಾಮಶ್ನುವಾನಾ ವಯಂ ಯದಭಿಲಷಿತಂ ತತ್ಸಾಪ್ತಂ ಸಪ್ತಪುರುಷಸಂಬಂಧಿ ಸಾಪ್ತಪದೀನಂ ಸಖ್ಯಮಶ್ಯಾಮ । ವ್ಯಾಪ್ನುಯಾಮ । ಅದೇವಸ್ಯ ದೇವಾನಿಂದ್ರಾದೀನಜಾನತಃ ಪೀಯೋಃ ॥ ಪೀಯತಿರ್ಹಿಂಸಾಕರ್ಮಾ ॥ ಹಿಂಸಕಸ್ಯಾಸುರಸ್ಯ ವಧಃ ॥ ವಧ್ಯಂತೇ ಶತ್ರವೋಽನೇನೇತಿ ವಧರಾಯುಧಂ ॥ ನನಮಃ । ತದಧೋ ನಮಯ ॥ ನನಮಃ ! ಣಮು ಪ್ರಹ್ವತ್ವೇ । ಣ್ಯಂತಸ್ಯ ಲುಙಿ ಚಙಿ ರೂಪಂ । ಮಿತಾಂ ಹ್ರಸ್ವ ಇತಿ ಹ್ರಸ್ವಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಶ್ರವಸ್ಯಾ—ಅನ್ನೇಚ್ಛೆಯಿಂದ । ವಾಜಯಂತಃ—ನಿನ್ನನ್ನು ಬಲಶಾಲಿಯನ್ನಾಗಿ ಮಾಡುವ ನಾವು । ತೇ ಏವ—ನಿನ್ನನ್ನೇ ಉದ್ದೇಶಿಸಿ । ಉಚಥಂ—ಸ್ತೋತ್ರವನ್ನು । ತ್ಮನಾ—ಆತ್ಮಪ್ರೇರಣೆಯಿಂದಲೇ । ನ—ಈಗ । ಅಹೇಮ—ಅರ್ಪಿಸುತ್ತೇವೆ । ಆಶುಷಾಣಾಃ—(ನಿನ್ನನ್ನೇ) ಆಶ್ರಯಿಸಿದವರಾಗಿ। ತತ್—ಪ್ರಸಿದ್ಧವಾದ । ಸಾಪ್ತಂ—ಸಖ್ಯವನ್ನು । ಅಶ್ಯಾಮ—(ನಾವು) ಹೊಂದುವಂತಾಗಲಿ । ಅದೇವಸ್ಯ—ದೇವತಾಭಕ್ತಿಯಿಲ್ಲದ । ಪೀಯೋಃ—ಹಿಂಸಕನಾದ ಅಸುರನ । ವಧಃ—ವಧಕಾರಿಯಾದ ವಜ್ರಾಯುಧವನ್ನು । ನನಮಃ— ಪ್ರಯೋಗಿಸು

ಭಾವಾರ್ಥ

ಎಲೈ ಇಂದ್ರನೇ, ಅನ್ನೇಚ್ಛೆಯಿಂದ ನಿನ್ನನ್ನು ಬಲಶಾಲಿಯನ್ನಾಗಿ ಮಾಡುವ ನಾವು ನಿನ್ನನ್ನೇ ಉದ್ದೇಶಿಸಿ ನಮ್ಮ ಆತ್ಮಪ್ರೇರಣೆಯಿಂದಲೇ ರಚಿಸಿದ ಸ್ತೋತ್ರವನ್ನು ಈಗ ಅರ್ಪಿಸುತ್ತೇವೆ. ನಿನ್ನನ್ನೇ ಆಶ್ರಯಿಸಿದವರಾಗಿ ಪ್ರಸಿದ್ಧವಾದ ನಿನ್ನ ಸಖ್ಯವನ್ನು ನಾವು ಹೊಂದುವಂತಾಗಲಿ. ದೇವತಾಭಕ್ತಿಯಿಲ್ಲದ ಪೀಯುವೆಂಬ ಅಸುರನ ವಧಾರ್ಥವಾಗಿ ಅವನ ವಧಕಾರಿಯಾದ ವಜ್ರಾಯುಧವನ್ನು ಪ್ರಯೋಗಿಸು.

English Translation

Through desire of food, Indra, we, contributing to your vigour, spontaneously address to you (our) praise ; secure of you, may we rely upon your friendship ; hurl your thunderbolt against the godless Piyu-

ವಿಶೇಷವಿಷಯಗಳು

**ಉಚಥಂ**—**ವಚ ಪರಿಭಾಷಣೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ವಾಕ್ಯಗಳನ್ನು ಉಚ್ಚರಿಸುವುದು ಎಂದರೆ ಸ್ತೋತ್ರಮಾಡುವುದು ಎಂದರ್ಥವು.

**ಶ್ರವಸ್ಯಾ**—ಶ್ರವಃಶಬ್ದವು ಅನ್ನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಶ್ರವಃಶಬ್ದಕ್ಕೆ ಕೀರ್ತಿ, ಪ್ರಶಂಸಾ ಎಂಬರ್ಥದಲ್ಲಿಯೂ ಪ್ರಯೋಗವಿದೆ. (ನಿ. ೯-೧೧) **ಸುಪಾಂ ಸುಲುಗಿತಿ ತೃತೀಯಾಯಾಃ ಪೂರ್ವಸವರ್ಣದೀರ್ಘಃ** ಎಂಬ ವ್ಯಾಕರಣನಿಯಮಾನುಸಾರವಾಗಿ ಶ್ರವಸ್ಯಾ ಎಂಬುದು ತೃತೀಯೈಕವಚನಾಂತಪದವಾಗಿದೆ. ಅನ್ನೇಚ್ಛೆಯಿಂದ ಅಥವಾ ಕೀರ್ತಿಯ ಇಚ್ಛೆಯಿಂದ ಎಂದರ್ಥವು.

**ನ**—ನ ಎಂಬ ನಿಪಾತವು, **ನೇತಿ ಪ್ರತಿಷೇಧಾರ್ಥೀಯೋ ಭಾಷಾಯಾಂ । ಉಭಯಮನ್ವಧ್ಯಾಯಂ। ನ ಸಂಪ್ರತ್ಯರ್ಥೇ ।** ಎಂದು ಹೇಳಿರುವಂತೆ ನ ಎಂಬ ಅವ್ಯಯವು ಸಾಧಾರಣ ಭಾಷೆಯಲ್ಲಿ ನಿಷೇಧಾರ್ಥದಲ್ಲಿಯೂ, ವೇದಗಳಲ್ಲಿ ನಿಷೇಧಾರ್ಥ ಮತ್ತು ಉಪಮಾರ್ಥಗಳಲ್ಲಿಯೂ ಉಪಯೋಗಿಸಲ್ಪಡುವುದು. ಪ್ರಕೃತ ಋಕ್ಕಿನಲ್ಲಿ ನ ಎಂಬ ಶಬ್ದಕ್ಕೆ **ಸಂಪ್ರತಿ** ಎಂದರೆ ಈಗ ಎಂಬ ಅರ್ಥವಿರುವುದು.

**ತ್ಮನಾ**—ಛಂದಸ್ಸಿನಲ್ಲಿ ಆತ್ಮನಾ ಎಂಬ ಶಬ್ದದ ಆಕಾರವು ಲೋಪವಾಗಿ ತ್ಮನಾ ಎಂದು ಮಾತ್ರ ಪ್ರಯೋಗವಿರುವುದು. ಈ ಶಬ್ದಕ್ಕೆ ಆತ್ಮನಾ—ತನ್ನಿಂದ ಎಂಬರ್ಥವೇ ಇರುವುದು.

**ವಾಜಯಂತಃ**—**ವಾಜಯಂತೋಽನ್ನಮಿಚ್ಛಂತಃ** । ವಾಜಃಶಬ್ದವು ಅನ್ನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಆದ್ದರಿಂದ ಅನ್ನವನ್ನು ಅಪೇಕ್ಷಿಸುವ ನಾವು ಎಂದರ್ಥವು.

**ಸಾಪ್ತಂ**—**ಸಪ್ತಪುರುಷಸಂಬಂಧಿ ಸಾಪ್ತಪದೀನಂ ಸಖ್ಯಂ** । ಸ್ನೇಹ, ಮಿತ್ರತ್ವ ಎಂದಭಿಪ್ರಾಯವು.

**ಅದೇವಸ್ಯ**—**ದೇವಾನಿಂದ್ರಾದೀನಜಾನತಃ** । ಇಂದ್ರಾದಿ ದೇವತೆಗಳನ್ನು ಸ್ತೋತ್ರಮಾಡದಿರುವ ಎಂದರೆ ಅಸುರನು ಎಂದರ್ಥವು.

**ಪೀಯೋಃ**—**ಪೀಯತಿರ್ಹಿಂಸಾಕರ್ಮಾ ಹಿಂಸಕಸ್ಯಾಸುರಸ್ಯ** । ಹಿಂಸೆಯನ್ನುಂಟುಮಾಡು ಎಂಬರ್ಥವುಳ್ಳ ಪೀಯತಿಧಾತುವಿನಿಂದ ನಿಷ್ಪನ್ನವಾದ ಪೀಯುಶಬ್ದಕ್ಕೆ ಜನರಿಗೆ ಹಿಂಸೆಯನ್ನುಂಟುಮಾಡುವ ಅಸುರನು

ಎಂದರ್ಥವು ಅಥವಾ ಪೀಯು ಎಂಬ ಅಸುರನು ಎಂದು ಒಬ್ಬ ಅಸುರನ ಹೆಸರೆಂದು ಬೇಕಾದರೂ ಹೇಳಬಹುದು. ಪೀಯೋಃ ಎಂಬ ಶಬ್ದವಿರುವ ಈ ಋಕ್ಕಿನ ಕೊನೆಯ ಪಾದವು—

ಭಿನತ್ಪುರೋ ನ ಭಿದೋ ಅದೇವೀರ್ನನಮೋ ವಧರದೇವಸ್ಯ ಪೀಯೋಃ ।

(ಋ. ಸಂ. ೧-೧೭೪-೮)

ಎಂಬ ಅಗಸ್ತ್ಯಋಷಿದೃಷ್ಟವಾದ ಋಕ್ಕಿನಲ್ಲಿಯೂ ಪಠಿತವಾಗಿರುವುದು. ಇನ್ನೆಲ್ಲಿಯೂ ಈ ಶಬ್ದಪ್ರಯೋಗವಿಲ್ಲದಿರುವುದರಿಂದ ಈ ಅಸುರನ ವಿಷಯವನ್ನು ಹೆಚ್ಚಾಗಿ ಹೇಳಲು ಸಾಧ್ಯವಿಲ್ಲ.

---

ಸಂಹಿತಾಪಾಠಃ

ಏವಾ ತೇ ಗೃತ್ಸಮದಾಃ ಶೂರ ಮನ್ಮಾವಸ್ಯವೋ ನ ವಯುನಾನಿ ತಕ್ಷುಃ ।
ಬ್ರಹ್ಮಣ್ಯನ್ತ ಇನ್ದ್ರ ತೇ ನವೀಯ ಇಷಮೂರ್ಜಂ ಸುಕ್ಷಿತಿಂ ಸುಮ್ನ-
ಮಶ್ಯುಃ ॥ ೮ ॥

ಪದಪಾಠಃ

ಏವ । ತೇ । ಗೃತ್ಸಮದಾಃ । ಶೂರ । ಮನ್ಮ । ಅವಸ್ಯವಃ । ನ । ವಯುನಾನಿ । ತಕ್ಷುಃ ।

ಬ್ರಹ್ಮಣ್ಯನ್ತಃ । ಇನ್ದ್ರ । ತೇ । ನವೀಯಃ । ಇಷಂ । ಊರ್ಜಂ । ಸುಕ್ಷಿತಿಂ । ಸುಮ್ನಂ । ಅಶ್ಯುಃ ॥ ೮ ॥

ಸಾಯಣಭಾಷ್ಯಂ

ಶೂರ ಬಲವನ್ ಹೇ ಇಂದ್ರ ತೇ ತುಭ್ಯಂ ಗೃತ್ಸಮದಾಃ । ಅತ್ರ ಯಾಸ್ಕಃ । ಗೃತ್ಸಮದೋ ಗೃತ್ಸಮದನೋ ಗೃತ್ಸ ಇತಿ ಮೇಧಾವಿನಾಮ ಗೃಣಾತೇಃ ಸ್ತುತಿಕರ್ಮಣಃ । ನಿ. ೯-೫ । ಇತಿ । ತಥಾವಿಧಾ ಮನ್ಮ ಮನನೀಯಂ ಸ್ತೋತ್ರಂ ತೇ ತುಭ್ಯಮೇವ ತಕ್ಷುಃ ತತಕ್ಷುಃ । ಚಕ್ರುಃ । ತತ್ರ ದೃಷ್ಟಾಂತಃ । ಅವಸ್ಯವೋ ನ ॥ ಅವಃ। ಗತ್ಯರ್ಥಾದವತೇರಸುನಿ ರೂಪಮವ ಇತಿ॥ ಅವೋ ಗಮನಮಿಚ್ಛಂತಃ ಪುಮಾಂಸೋ ವಯುನಾನಿ ಮಾರ್ಗಾನ್ ಯಥಾ ಕುರ್ವಂತಿ ತದ್ವತ್ । ಕಿಂಚ ನವೀಯಃ ॥ ಸುಪಾಂ ಸುಲುಗಿತಿ ಷಷ್ಠ್ಯಾ ಲುಕ್ ॥ ನವೀಯಸೋ ನವತರಸ್ಯ ತೇ ತವ ಬ್ರಹ್ಮಣ್ಯಂತಃ ಸ್ತೋತ್ರಂ ಕರ್ತುಮಿಚ್ಛಂತೋ ಗೃತ್ಸಮದಾಃ ಸುಕ್ಷಿತಿಮಿಷಂ ಶೋಭನನಿವಾಸೋಪೇತಮನ್ನಮೂರ್ಜಂ ಬಲಂ ಸುಮ್ನಂ ಸುಖಂ ಚಾಶ್ಯುಃ। ಪ್ರಾಪ್ನುಯುಃ । ಏಕಸ್ಮಿನ್ ಗೃತ್ಸಮದೇ ಬಹುವಚನಂ ಪರೋಕ್ಷನಿರ್ದೇಶಶ್ಚ ॥

ಪ್ರತಿಪದಾರ್ಥ

ಶೂರ—ಬಲಶಾಲಿಯಾದ । ಇಂದ್ರ—ಇಂದ್ರನೇ । ಗೃತ್ಸಮದಾಃ—ಪ್ರಾಜ್ಞರೂ ಹರ್ಷಯುಕ್ತರೂ ಆದ ಗೃತ್ಸಮದರೆಂಬ ಋಷಿ ಮತ್ತು ಅವರ ಸಂಬಂಧಿಗಳು । ಮನ್ಮ—ಮನನೀಯವಾದ ಸ್ತೋತ್ರವನ್ನು । ತೇ ಏವ—

ನಿನಗಾಗಿಯೇ (ನಿನ್ನನ್ನು ಉದ್ದೇಶಿಸಿಯೇ) । **ಅವಸ್ಯವಃ**—ಸಂಚಾರಾರ್ಥಿಗಳಾದವರು । **ವಯುನಾನಿ ನ**—ಮಾರ್ಗಗಳನ್ನು ನಿರ್ಮಿಸುವಂತೆ । **ತಕ್ಷುಃ**—ರಚಿಸಿದ್ದಾರೆ । **ನವೀಯಃ**—ಪೂಜ್ಯನಾದ । **ತೇ**—ನಿನ್ನ । **ಬ್ರಹ್ಮಣ್ಯಂತಃ**—ಸ್ತುತಿಯನ್ನು ಪಠಿಸಲು ಇಚ್ಛಿಸುವ ಗೃತ್ಸಮದ ಋಷಿಗಳು । **ಸುಕ್ಷಿತಿಂ**—ಶ್ರೇಷ್ಠವಾದ ಗೃಹಗಳೊಡಗೂಡಿದ । **ಇಷಂ**—ಅನ್ನವನ್ನೂ । **ಊರ್ಜಂ**—ಬಲವನ್ನೂ । **ಸುಮ್ನಂ**—ಸುಖವನ್ನೂ । **ಅಶ್ಯುಃ**—ಪಡೆಯಲಿ.

ಭಾವಾರ್ಥ।

ಬಲಶಾಲಿಯಾದ ಎಲೈ ಇಂದ್ರನೇ, ಪ್ರಾಜ್ಞರೂ, ಹರ್ಷಯುಕ್ತರೂ ಆದ ಗೃತ್ಸಮದರೆಂಬ ಋಷಿಗಳು ಮನನೀಯವಾದ ಸ್ತೋತ್ರವನ್ನು ಸಂಚಾರಾರ್ಥಿಗಳಾದವರು ಮಾರ್ಗಗಳನ್ನು ನಿರ್ಮಿಸುವಂತೆ ನಿನಗಾಗಿಯೇ ರಚಿಸಿದ್ದಾರೆ. ಪೂಜ್ಯನಾದ ನಿನ್ನ ಸ್ತುತಿಯನ್ನು ಪಠಿಸಲು ಇಚ್ಛಿಸುವ ಈ ಋಷಿಗಳು ಶ್ರೇಷ್ಠವಾದ ಗೃಹಗಳಿಂದ ಕೂಡಿದ ಅನ್ನವನ್ನೂ, ಬಲವನ್ನೂ, ಸುಖವನ್ನೂ ಪಡೆಯಲಿ.

## English Translation

Thus, hero, have the Gritsamadas fabricated praises to you, as they who are desirous of travelling (construct) roads; may those who worship you, adorable Indra, obtain food, strength, habitations, and felicity.

ವಿಶೇಷವಿಷಯಗಳು

**ಗೃತ್ಸಮದಾಃ**—**ಗೃತ್ಸಮದಾಃ** ಎಂದು ಬಹುವಚನಪ್ರಯೋಗವಿರುವುದರಿಂದ ಗೃತ್ಸಮದಋಷಿಯು ಮತ್ತು ಆವನ ಸಂಬಂಧಿಗಳು ಅಥವಾ ವಂಶಸ್ಥರು ಅಥವಾ ಆ ಋಷಿಯ ಪರಿವಾರ ವರ್ಗಕ್ಕೆ ಸೇರಿದವರು ಎಂದರ್ಥವು. ಈ ಶಬ್ದಕ್ಕೆ ಯಾಸ್ಕರು—**ಗೃತ್ಸಮದೋ ಗೃತ್ಸಮದನೋ ಗೃತ್ಸ ಇತಿ ಮೇಧಾವಿ ನಾಮ ಗೃಣಾತೇಃ ಸ್ತುತಿಕರ್ಮಣಃ** (ನಿ. ೫-೯) ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ ಸ್ತುತಿಮಾಡು ಎಂಬರ್ಥವುಳ್ಳ ಗೃಣಾತಿ ಧಾತುವಿನಿಂದ ನಿಷ್ಪನ್ನವಾದ ಗೃತ್ಸ ಎಂಬ ಶಬ್ದಕ್ಕೆ ಮೇಧಾವಿಯಾದ (ಬುದ್ಧಿವಂತನಾದ) ಎಂದರ್ಥವು. ಆದುದರಿಂದ ಗೃತ್ಸಮದಶಬ್ದಕ್ಕೆ ಮೇಧಾವಿಯೂ, ಹರ್ಷದಿಂದಿರುವವನೂ ಆದ ಋಷಿಯೆಂದರ್ಥವು.

**ಅವಸ್ಯವೋ ನ—ವಯುನಾನಿ ತಕ್ಷುಃ ಅವಃ । ಗತ್ಯರ್ಥಾದವತೇರಸುನಿ ರೂಪಮವ ಇತಿ ಅವೋ ಗಮನಮಿಚ್ಛಂತಃ ಪುಮಾಂಸೋ ವಯುನಾನಿ ಮಾರ್ಗಾನ್ ಯಥಾ ಕುರ್ವಂತಿ ತದ್ವತ್ ।** ಅವತಿಧಾತುವಿಗೆ ಗತ್ಯರ್ಥವಿರುವುದರಿಂದ ಆ ಧಾತುವಿನಿಂದ ನಿಷ್ಪನ್ನವಾದ ಅವಃ ಎಂಬ ಶಬ್ದಕ್ಕೆ ಗಮನವೆಂದು ಅರ್ಥವು. ಅವಸ್ಯವಃ ಗಮನವನ್ನು ಇಚ್ಛಿಸುವ ಎಂದರೆ ಪ್ರಯಾಣಮಾಡಲಿಚ್ಛಿಸುವ ಜನರು ಯಾವ ರೀತಿ ತಮಗೆ ಅನುಕೂಲವಾದ ಮಾರ್ಗವನ್ನು ರಚಿಸಿಕೊಳ್ಳುವರೋ ಆದರಂತೆ ಗೃತ್ಸಮದವಂಶಸ್ಥರಾದ ನಾವು ಅನ್ನಾಹಾರಗಳನ್ನು ಅಪೇಕ್ಷಿಸುವವರಾಗಿ ಇಂದ್ರನಿಗೆ ಸ್ತೋತ್ರಾದಿಗಳನ್ನು ರಚಿಸಿಸುವೆವು ಎಂದಭಿಪ್ರಾಯವು.

**ಇಂದ್ರ ತೇ ಬ್ರಹ್ಮಣ್ಯಂತಃ ನವೀಯಃ ಇಷಂ ಊರ್ಜಂ ಸುಕ್ಷಿತಿಂ ಸುಮ್ನಂ ಅಶ್ಯುಃ—ನವೀಯಃ ನವತರಸ್ಯ ತೇ ಬ್ರಹ್ಮಣ್ಯಂತಃ ಸ್ತೋತ್ರಂ ಕರ್ತುಮಿಚ್ಛಂತೋ ಗೃತ್ಸಮದಾ ಸುಕ್ಷಿತಿಮಿಷಂ ಶೋಭನನಿವಾಸೋಪೇತಮನ್ನಮೂರ್ಜಂ ಬಲಂ ಸುಮ್ನಂ ಸುಖಂ ಚಾಶ್ಯುಃ । ಪ್ರಾಪ್ನುಯುಃ ।** ಎಲೈ ಇಂದ್ರನೇ,

ನಿನಗೆ ಹೊಸದಾದ ಸ್ತೋತ್ರವನ್ನು ರಚಿಸಿ ಸ್ತುತಿಸಲು ಇಚ್ಛಿಸುವ ಗೃತ್ಸಮದ ಮತ್ತು ಅವನ ಸಂಬಂಧಿಗಳು (ನಾವು) ಉತ್ತಮವಾದ ವಾಸಸ್ಥಾನವನ್ನೂ (ಗೃಹವನ್ನೂ) ಅನ್ನ, ಬಲ, ಸುಖ ಇವುಗಳನ್ನು ಹೊಂದುವಂತಾಗಲಿ ಎಂದು ಋಷಿಯು ಇಂದ್ರನನ್ನು ಸ್ತುತಿಸಿ ಆಶಿಸಿರುವನು.

---

ಸಂಹಿತಾಪಾಠಃ

ನೂನಂ ಸಾ ತೇ ಪ್ರತಿ ವರಂ ಜರಿತ್ರೇ ದುಹೀಯದಿಂದ್ರ ದಕ್ಷಿಣಾ ಮಘೋನೀ ।
ಶಿಕ್ಷಾ ಸ್ತೋತೃಭ್ಯೋ ಮಾತಿ ಧಗ್ಭಗೋ ನೋ ಬೃಹದ್ವದೇಮ ವಿದಥೇ ಸುವೀರಾಃ ॥ ೯ ॥

ಪದಪಾಠಃ

ನೂನಂ । ಸಾ । ತೇ । ಪ್ರತಿ । ವರಂ । ಜರಿತ್ರೇ । ದುಹೀಯತ್ । ಇಂದ್ರ । ದಕ್ಷಿಣಾ । ಮಘೋನೀ ।
ಶಿಕ್ಷ । ಸ್ತೋತೃಽಭ್ಯಃ । ಮಾ । ಅತಿ । ಧಕ್ । ಭಗಃ । ನಃ । ಬೃಹತ್ । ವದೇಮ । ವಿದಥೇ । ಸುಽವೀರಾಃ ॥

ಸಾಯಣಭಾಷ್ಯಂ

ಅಹರ್ಗಣೇಷು ಮಾಧ್ಯಂದಿನಸವನೇಷು ತಾಯಮಾನರೂಪೇಷ್ವಚ್ಛಾವಾಕಸ್ಯಾಹರಹಃ ಶಸ್ಯ-ಸಂಜ್ಞಕಮಭಿತಷ್ಟೇವೇತಿ ಸೂಕ್ತಂ । ನೂನಂ ಸಾ ತ ಇತ್ಯೇಷಾ ತಸ್ಯಾಂತೇ ಶಂಸನೀಯಾ । ಸೂತ್ರಿತಂ ಚ । ನೂನಂ ಸಾ ತ ಇತ್ಯಂತಮುತ್ತಮಂ । ಆ. ೭-೪ । ಇತಿ ॥

ಹೇ ಇಂದ್ರ ಯಾ ದಕ್ಷಿಣಾ ದಕ್ಷಮುತ್ಸಾಹನಂ ಕರೋತೀತಿ ದಕ್ಷಿಣಾ ಸ್ತೋತೃಭ್ಯೋ ದೇಯಾ ತೇ ತ್ವತ್ಸಂಬಂಧಿನೀ ಮಘೋನೀ ಧನವತೀ ಜರಿತ್ರೇ ಸ್ತೋತ್ರೇ ವರಂ ಶ್ರೇಷ್ಠಮಭಿಮತಮರ್ಥಂ ನೂನಂ ಪ್ರತಿದುಹೀಯತ್ । ಇದಾನೀಂ ಪ್ರತಿದೋಗ್ಧಿ । ಸಂಪಾದಯತೀತ್ಯರ್ಥಃ । ತಾದೃಶೀಂ ದಕ್ಷಿಣಾಂ ಸ್ತೋತೃ-ಭ್ಯೋಽಸ್ಮಭ್ಯಂ ಶಿಕ್ಷ । ಪ್ರಯಚ್ಛ । ಕಿಂಚ ಭಗೋ ಭಜನೀಯಸ್ತ್ವಂ ಮಾತಿ ಧಕ್ ॥ ದಹೇರ್ದಾನಾರ್ಥಸ್ಯ ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ ॥ ನೋಽಸ್ಮಾನತಿಕ್ರಮ್ಯಾನ್ಯೇಭ್ಯೋ ದಕ್ಷಿಣಾಂ ಮಾ ದಾಃ । ಪ್ರಥಮಮಸ್ಮಭ್ಯಂ ದತ್ವಾ ಪಶ್ಚಾದನ್ಯೇಭ್ಯೋ ದೀಯತಾಮಿತ್ಯರ್ಥಃ। ಯದ್ವಾ ನೋಽಸ್ಮಾಕಂ ಕಾಮಾನ್ ಮಾ ಧಕ್ । ಮಾ ಧಾಕ್ಷೀಃ । ಅಪೇಕ್ಷಿತಫಲದಾನೇನ ಪೂರಯೇತ್ಯರ್ಥಃ । ಸುವೀರಾಃ ಶೋಭನಪುತ್ರ-ಪೌತ್ರಾಃ ಸಂತೋ ವಯಂ ವಿದಥೇಽಸ್ಮಿನ್ಯಜ್ಞೇ ಬೃಹತ್ ಪ್ರಭೂತಂ ಸ್ತೋತ್ರಂ ವದೇಮ । ತ್ವಾಮುದ್ದಿಶ್ಯ ಬ್ರವಾಮ ॥ ಅತ್ರ ಸಾ ತೇ ಪ್ರತಿದುಗ್ಧಾಮಿತಿ ಪ್ರಕೃತ್ಯ ವೀರೋ ವೀರಯತ್ಯಮಿತ್ರಾನ್ ವೇತೇರ್ವಾ ಸ್ಯಾದ್ಗತಿಕರ್ಮಣೋ ವೀರಯತೇರ್ವೇತ್ಯಂತಂ ನಿರುಕ್ತಮನುಸಂಧೇಯಂ । ನಿ. ೧-೭ ॥

### ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ತೇ—ನಿನ್ನಿಂದ ದತ್ತವಾಗತಕ್ಕದ್ದೂ । ಮಘೋನೀ—ಪ್ರಭೂತವಾದ ಸಂಪತ್ತುಳ್ಳದ್ದೂ ಆದ । ಸಾ ದಕ್ಷಿಣಾ—ಆ ದಕ್ಷಿಣೆಯು । ಜರಿತ್ರೇ—ಸ್ತುತಿಕರ್ತನಾದ ಯಜಮಾನನಿಗೆ । ನೂನಂ—ಖಂಡಿತವಾಗಿಯೂ । ವರಂ—ಶ್ರೇಷ್ಠವಾಗಿ । ಪ್ರತಿ ದುಹೀಯತ್—ಇಷ್ಟಾರ್ಥವನ್ನು ಪೂರೈಸುತ್ತದೆ (ಅಂತಹ ದಕ್ಷಿಣೆಯನ್ನು) । ಸ್ತೋತೃಭ್ಯಃ—ಸ್ತುತಿಕರ್ತರಾದ ನಮಗೂ ಸಹ । ಶಿಕ್ಷ—ಕೊಡು । ಭಗಃ—ಪೂಜ್ಯನಾದ ನೀನು। ನಃ—ನಮ್ಮನ್ನು । ಮಾತಿ ಧಕ್—ತಿರಸ್ಕರಿಸಬೇಡ । ಸುವೀರಾಃ—ಶ್ರೇಷ್ಠರಾದ ವೀರಪುತ್ರರಿಂದೊಡಗೂಡಿದ ನಾವು । ವಿದಥೇ—ಈ ಯಜ್ಞದಲ್ಲಿ । ಬೃಹತ್—ಪ್ರಭೂತವಾದ ಸ್ತೋತ್ರವನ್ನು । ವದೇಮ—ಪಠಿಸುತ್ತೇವೆ.

### ಭಾವಾರ್ಥ

ಎಲೈ ಇಂದ್ರನೇ, ನಿನ್ನಿಂದ ದತ್ತವಾಗತಕ್ಕದ್ದೂ, ಪ್ರಭೂತವಾದ ಸಂಪತ್ತುಳ್ಳದ್ದೂ ಆದ ಆ ದಕ್ಷಿಣೆಯು ಸ್ತುತಿಕರ್ತನಾದ ಯಜಮಾನನಿಗೆ ಖಂಡಿತವಾಗಿಯೂ ಇಷ್ಟಾರ್ಥವನ್ನು ಶ್ರೇಷ್ಠವಾದ ರೀತಿಯಲ್ಲಿ ಪೂರೈಸುತ್ತದೆ. ಅಂತಹ ದಕ್ಷಿಣೆಯನ್ನು ಸ್ತುತಿಕರ್ತರಾದ ನಮಗೂ ಕೊಡು. ಪೂಜ್ಯನಾದ ನೀನು ನಮ್ಮನ್ನು ತಿರಸ್ಕರಿಸಬೇಡ. ಶ್ರೇಷ್ಠರಾದ ಪುತ್ರರಿಂದೊಡಗೂಡಿದ ನಾವು ಈ ಯಜ್ಞದಲ್ಲಿ ಪ್ರಭೂತವಾದ ಸ್ತೋತ್ರವನ್ನು ಪಠಿಸುತ್ತೇವೆ.

### English Translation

That opulent donation which proceeds, Indra, from you, assuredly bestows upon him who praises you the boon (that he desires): grant it to (us) your adorers: do not you, who are the object of adoration, disregard our prayers; so that, blessed with worthy descendants, we may glorify you in this sacrifice.

### ವಿಶೇಷವಿಷಯಗಳು

ಈ ಋಕ್ಕು ಹಿಂದೆ ಋ. ಸಂ. ೨-೧೧-೨೧ ರಲ್ಲಿ ಪಠಿತವಾಗಿರುವುದರಿಂದ ಇದರ ವಿಶೇಷವಿಷಯಗಳನ್ನು ಅಲ್ಲಿ ಎಂದರೆ ಇದೇ ಭಾಗದ 638-640 ನೇ ಪುಟದಲ್ಲಿ ವಿಸ್ತಾರವಾಗಿ ಬರೆದಿರುವುದನ್ನು ನೋಡಿ ತಿಳಿದುಕೊಳ್ಳಬಹುದು.

---

## ಇಪ್ಪತ್ತನೆಯ ಸೂಕ್ತವು.

---

ವಯಂ ತೇ ವಯ ಇತಿ ನವರ್ಚಂ ನವಮಂ ಸೂಕ್ತಂ ಗಾರ್ತ್ಸಮದಂ ತ್ರೈಷ್ಟುಭಮೈಂದ್ರಂ । ವಯಂ ತ ಇತ್ಯನುಕ್ರಾಂತಂ । ಸೂಕ್ತವಿನಿಯೋಗೋ ಲಿಂಗಾದವಧಾರ್ಯತಾಂ ॥

ಅನುವಾದವು—ವಯಂ ತೇ ವಯ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ ವಯಂ ತ ಎಂದು ಮೊದಲಾಗಿ ಹೇಳಿರುವುದು. ಸೂಕ್ತದ ವಿನಿಯೋಗವು ಆಯಾ ಋಕ್ಕುಗಳ ಅರ್ಥಾನುಸಾರವಾಗಿದೆ.

---

॥ ಓಂ ॥

## ಸೂಕ್ತ—೨೦

॥ ಮಂಡಲ—೨ ॥ ಅನುವಾಕ—೨ ॥ ಸೂಕ್ತ—೨೦ ॥

॥ ಅಷ್ಟಕ—೨ ॥ ಅಧ್ಯಾಯ—೬ ॥ ವರ್ಗ—೨೫, ೨೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

ಋಷಿಃ—ಗೃತ್ಸಮದಃ ॥

ದೇವತಾ—ಇಂದ್ರಃ ।

ಛಂದಃ—ತ್ರಿಷ್ಟುಪ್ ।

---

ಸಂಹಿತಾಪಾಠಃ

ವಯಂ ತೇ ವಯ ಇನ್ದ್ರ ವಿದ್ಧಿ ಷು ಣಃ ಪ್ರ ಭರಾಮಹೇ ವಾಜಯುರ್ನ ರಥಂ ।

ವಿಪನ್ಯವೋ ದೀಧ್ಯತೋ ಮನೀಷಾ ಸುಮ್ನಮಿಯಕ್ಷನ್ತಸ್ತ್ವಾವತೋ ನೄನ್॥

ಪದಪಾಠಃ

ವಯಂ । ತೇ । ವಯಃ । ಇನ್ದ್ರ । ವಿದ್ಧಿ । ಸು । ನಃ । ಪ್ರ । ಭರಾಮಹೇ । ವಾಜಯುಃ । ನ । ರಥಂ ।

ವಿಪನ್ಯವಃ । ದೀಧ್ಯತಃ । ಮನೀಷಾ । ಸುಮ್ನಂ । ಇಯಕ್ಷನ್ತಃ । ತ್ವಾವತಃ । ನೄನ್ ॥ ೧ ॥

ಸಾಯಣಭಾಷ್ಯಂ

ಹೇ ಇಂದ್ರ ತೇ ತುಭ್ಯಂ ವಯಂ ವಯಃ ಸೋಮಲಕ್ಷಣಮನ್ನಂ ಪ್ರಭರಾಮಹೇ । ಪ್ರಕರ್ಷೇಣ ಸಂಪಾದಯಾಮಃ । ತತ್ರ ದೃಷ್ಟಾಂತಃ । ವಾಜಯುರ್ನ । ಯಥಾನ್ನಮಾತ್ಮನ ಇಚ್ಛನ್ ಪುಮಾನ್ ರಥಂ ಶಕಟಂ ಸಂಪಾದಯತಿ ತದ್ವತ್ । ಏವಂ ಹವಿಃಸಂಪಾದಕಾನ್ ನೋಽಸ್ಮಾನ್ ಸು ಸುಷ್ಠು ವಿದ್ಧಿ । ಜಾನೀಹಿ ॥ ವಿದೇರ್ಜ್ಞಾನಾರ್ಥಸ್ಯ ಲೋಟಿ ರೂಪಂ । ವಾಕ್ಯಾದಿತ್ವಾದನಿಘಾತಃ ॥ ಕಿಂ ಕುರ್ವತೋ ವಯಂ । ವಿಪನ್ಯವಃ । ತವ ಸ್ತೋತ್ರಂ ಕುರ್ವಾಣಾಃ । ಮನೀಷಾ ಮನಸ ಇಷಯಾ ಸ್ತುತ್ಯಾ ದೀಧ್ಯತೋ ದೀಪ್ಯಮಾನಾಃ॥ ದೀಧೀಙ್ ದೀಪ್ತಿದೇವನಯೋಃ । ವ್ಯತ್ಯಯೇನ ಶತೃ ॥ ತ್ವಾವತಃ ॥ ಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯ ಉಪಸಂಖ್ಯಾನಮಿತಿ ವತುಪ್ ॥ ತ್ವತ್ಸದೃಶಾನ್ ನೄನ್ ನೇತೄನ್ ಅಗ್ನ್ಯಾದೀನ್ ಸುಮ್ನಂ ಸುಖಮಿಯಕ್ಷಂತಃ । ಯಾಚಮಾನಾಃ । ಯದ್ವಾ ಸುಮ್ನಂ ಸುಖೇನ ನೄನ್ ನೇತೄನ್ ಅಗ್ನ್ಯಾದೀನ್ದೇವಾನಿಯಕ್ಷಂತಃ ॥ ಇಯಕ್ಷತಿರ್ಗತಿಕರ್ಮಾ ॥ ಹವಿಷಾ ತಾನ್ ಪ್ರಾಪ್ನುವಂತೋ ವಯಂ ಭರಾಮಹ ಇತಿ ಸಮನ್ವಯಃ ॥

### ಪ್ರತಿಪದಾರ್ಥ

**ಇಂದ್ರ**—ಇಂದ್ರನೇ । **ವಿಪನ್ಯವಃ**—ನಿನ್ನ ಸ್ತೋತ್ರವನ್ನು ಮಾಡತಕ್ಕವರೂ । **ಮನೀಷಾ** ಸ್ತುತಿಯಿಂದ। **ದೀಧ್ಯತಃ**—ನಿನ್ನನ್ನು ಪ್ರಕಾಶಿಸುವಂತೆ ಮಾಡುವವರೂ । **ತ್ವಾವತಃ**—ನಿನ್ನ ಸದೃಶರಾದವರೂ । **ನೄನ್**—ನೇತೃಗಳೂ ಆದ ಅಗ್ನ್ಯಾದಿಗಳನ್ನು (ಅವರಿಂದ) । **ಸುಮ್ನಂ**—ಸುಖವನ್ನು । **ಇಯಕ್ಷಂತಃ**—ಯಾಚಿಸುವವರೂ ಆದ । **ವಯಂ**—ನಾವು । **ತೇ**—ನಿನಗಾಗಿ । **ವಯಃ**—ಸೋಮರೂಪವಾದ ಅನ್ನವನ್ನು । **ವಾಜಯುಃ**—ಅನ್ನೇಚ್ಛೆಯುಳ್ಳವನು ।**ರಥಂ ನ**—ರಥವನ್ನು ಸಂಪಾದಿಸುವಂತೆ । **ಪ್ರ ಭರಾಮಹೇ**—ಅತಿಶಯವಾಗಿ ಸಂಪಾದಿಸುತ್ತೇವೆ । **ನಃ**—ಇಂತಹ ನಮ್ಮನ್ನು (ನಮ್ಮ ಭಕ್ತಿಯನ್ನು) । **ಸು**—ವಿಶದವಾಗಿ (ಅನುಗ್ರಹ ಬುದ್ಧಿಯಿಂದ) ವಿದ್ಧಿ—ತಿಳಿ (ನೋಡು).

### ಭಾವಾರ್ಥ

ಎಲೈ ಇಂದ್ರನೇ, ನಿನ್ನ ಸ್ತೋತ್ರವನ್ನು ಮಾಡತಕ್ಕವರೂ, ಸ್ತುತಿಯಿಂದ ನಿನ್ನನ್ನು ಪ್ರಕಾಶಿಸುವಂತೆ ಮಾಡತಕ್ಕವರೂ, ನಿನ್ನ ಸದೃಶರಾದ ಅಗ್ನ್ಯಾದಿಗಳನ್ನು ಸುಖವನ್ನು ಯಾಚಿಸುವವರೂ ಆದ ನಾವು ಅನ್ನೇಚ್ಛೆಯುಳ್ಳವರು ರಥವನ್ನು ಸಂಪಾದಿಸುವಂತೆ ನಿನಗಾಗಿ ಸೋಮರೂಪವಾದ ಅನ್ನವನ್ನು ಸಂಪಾದಿಸುತ್ತೇವೆ. ಇಂತಹ ನಮ್ಮ ಭಕ್ತಿಯನ್ನು ವಿಶದವಾಗಿ ತಿಳಿ. ಅನುಗ್ರಹಾತ್ಮಕವಾದ ಬುದ್ಧಿಯಿಂದ ನೋಡು.

### English Translation

We bring to you, Indra, (sacrificial) food, as one desiring food brings his waggon : regard us benevolently, when glorifying you, rendering (you) illustrious by (our) praise, and soliciting such guides as you are to felicity·

### ವಿಶೇಷವಿಷಯಗಳು

**ಇಂದ್ರ ತೇ ವಯಂ ವಯಃ ಪ್ರ ಭರಾಮಹೇ ವಾಜಯುಃ ರಥಂ ನ । ನಃ ಸು ವಿದ್ಧಿ**—**ಹೇ ಇಂದ್ರ ವಯಂ ತುಭ್ಯಂ ಸೋಮಲಕ್ಷಣಮನ್ನಂ ಅನ್ನಮಾತ್ಮನ ಇಚ್ಛನ್ ಪುಮಾನ್ ರಥಂ ಸಂಪಾದಯತಿ ತದ್ವತ್ ಪ್ರಭರಾಮಹೇ ಪ್ರಕರ್ಷೇಣ ಸಂಪಾದಯಾಮಃ । ಏವಂ ಹವಿಃಸಂಪಾದಕಾನ್ ಸುಷ್ಠು ಜಾನಾಹಿ ।** ಎಲೈ ಇಂದ್ರನೇ, ನಾವು ನಿನಗಾಗಿ ಸೋಮರಸರೂಪವಾದ ಅನ್ನವನ್ನು ಭಕ್ತಿಯಿಂದ ಅರ್ಪಿಸುತ್ತೇವೆ. ಆಹಾರವನ್ನು ಅಪೇಕ್ಷಿಸುವ ಪುರುಷನು ಅದನ್ನು ತೆಗೆದುಕೊಂಡು ಹೋಗುವುದಕ್ಕಾಗಿ ರಥವನ್ನು ಸಿದ್ಧಪಡಿಸಿಕೊಳ್ಳುವಂತೆ ನಾವು ನಿನಗೆ ಸೋಮರಸವನ್ನು ಅರ್ಪಿಸುತ್ತೇವೆ. ಇಂತಹ ನಮ್ಮ ವಿಷಯದಲ್ಲಿ ನೀನು ಅನುಗ್ರಹಾತ್ಮಕಬುದ್ಧಿಯುಳ್ಳವನಾಗಿರು ಎಂದು ಮುಖ್ಯಾಭಿಪ್ರಾಯವು. ಈ ವಾಕ್ಯದಲ್ಲಿ ಇಂದ್ರನಿಗೆ ನಾವು ಸೋಮರಸವನ್ನು ಅರ್ಪಿಸುವುದಕ್ಕೂ ಆಹಾರಾರ್ಥವಾಗಿ ರಥವನ್ನು ಸಿದ್ಧಪಡಿಸುವುದಕ್ಕೂ ಹೇಳಿರುವ ಹೋಲಿಕೆಯು ಅಷ್ಟೇನೂ ಸಮಂಜಸವಾಗಿಲ್ಲ. ಇಲ್ಲಿ ಆಹಾರಾರ್ಥವಾಗಿ ರಥವು ಏತಕ್ಕೆ ಬೇಕಾಗುವುದೆಂಬುದು ಸ್ಪಷ್ಟವಾಗಿಲ್ಲ. ರಥವು ಆಹಾರವನ್ನು ತೆಗೆದುಕೊಂಡು ಹೋಗುವುದಕ್ಕಾಗಿ ಬೇಕಾಗುವುದೇ ಅಥವಾ ಆಹಾರಾರ್ಥವಾಗಿ ಅಥವಾ ಧನಾರ್ಥವಾಗಿ ಶತ್ರುಗಳನ್ನು ಯುದ್ಧದಲ್ಲಿ ಸೋಲಿಸುವುದಕ್ಕಾಗಿ ರಥವು ಬೇಕಾಗುವುದೇ ಎಂಬುದು ಸರಿಯಾಗಿ ತಿಳಿಯುವಹಾಗಿಲ್ಲ. **ವಾಜಯುರ್ನ ರಥಂ**

ಎಂಬ ಉಪಮಾನಸೂಚಕವಾಕ್ಯಕ್ಕೆ ಋಷಿಯ ಆಶಯವೇನೆಂಬುದನ್ನು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. ಇದರ ಅರ್ಥವು ಸಂಶಯಾತ್ಮಕವಾಗಿಯೇ ಇದೆ.

**ವಿಪನ್ಯವಃ**—**ವಿಪನ್ಯವಃ** ಎಂಬ ಶಬ್ದವು ಮೇಧಾವಿನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ ೩-೧೫) ಈ ಶಬ್ದಕ್ಕೆ ಬುದ್ಧಿವಂತರೆಂದು ಅರ್ಥವಾಗುವುದು. ಆದರೆ ಭಾಷ್ಯಕಾರರು **ತವ ಸ್ತೋತ್ರಂ ಕುರ್ವಾಣಾಃ**—ನಿನ್ನ ಸ್ತೋತ್ರವನ್ನು ಮಾಡುತ್ತಿರುವ ಎಂಬ ಸಂದರ್ಭೋಚಿತವಾದ ಅರ್ಥವನ್ನು ವಿವರಿಸಿರುವರು.

**ವಯಃ**—ವಯಃ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. (ನಿ. ೨-೭) ಮತ್ತು **ವಾಜಯುಃ** ಎಂಬಲ್ಲಿ ವಾಜಃ ಶಬ್ದವೂ ಅನ್ನನಾಮಗಳಲ್ಲಿ ಪಠಿತವಾಗಿದೆ. ಈ ಶಬ್ದಕ್ಕೆ **ಅನ್ನಮಾತ್ಮನ ಇಚ್ಛನ್**—ತನಗಾಗಿ ಅನ್ನವನ್ನು ಅಪೇಕ್ಷಿಸುವ ಪುರುಷನು ಎಂದು ಭಾಷ್ಯಕಾರರು ಅರ್ಥವಿವರಣೆಮಾಡಿದಾರೆ.

**ಮನೀಷಾ**—ಈ ಶಬ್ದಕ್ಕೆ ಯಾಸ್ಕರು, **ಮನೀಷಯಾ ಮನಸ ಇಷಯಾ ಸ್ತುತ್ಯಾ ಪ್ರಜ್ಞಯಾ ವಾ** (ನಿ ೨-೨೫) ಎಂದರೆ ಮನಃಪೂರ್ವಕವಾಗಿ ಮಾಡುವ ಸ್ತೋತ್ರದಿಂದ ಅಥವಾ ಪ್ರಜ್ಞೆಯಿಂದ ಎಂದು ನಿರ್ವಚನವನ್ನು ಹೇಳಿರುವರು

**ಸುಮ್ನಂ**—ಸುಮ್ನ ಶಬ್ದವು ಸುಖನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೬) ಸುಮ್ನಂ ಎಂದರೆ ಸುಖವನ್ನು ಎಂದರ್ಥವು.

**ಸುಮ್ನಂ ಇಯಕ್ಷಂತಃ**—ಸುಖಂ ಯಾಚಮಾನಾಃ । ಯದ್ವಾ ಸುಮ್ನಂ ಸುಖೇನ ನ್ಯಾನ್ ನೇತ್ರ್ಯಾನ್ ಅಗ್ನ್ಯಾದೀನ್ ದೇವಾನ್ ಇಯಕ್ಷಂತಃ । ಇಯಕ್ಷತಿರ್ಗತಿಕರ್ಮಾ । ಹವಿಷಾ ತಾನ್ ಪ್ರಾಪ್ನುವಂತೋ ವಯಂ ಭರಾಮಹ ಇತಿ **ಸುಮನ್ಸಯಃ** । ಸುಖವನ್ನು ಅಪೇಕ್ಷಿಸುವ ನಾವು; ಅಥವಾ ಇಯಕ್ಷತಿ ಧಾತುವಿಗೆ ಗತ್ಯರ್ಥವೂ ಇರುವುದರಿಂದ ಸುಖವಾಗಿ ಹವಿರಾದಿಗಳ ಸಹಿತ ಅಗ್ನ್ಯಾದಿ ದೇವತೆಗಳ ಸಮೀಪವನ್ನು ಸೇರಲು ಇಚ್ಛಿಸುವ ನಾವು ಎಂದೂ ಅರ್ಥವು.

---

**ಸಂಹಿತಾಪಾಠಃ**

ತ್ವಂ ನ ಇನ್ದ್ರ ತ್ವಾಭಿರೂತೀ ತ್ವಾಯತೋ ಅಭಿಷ್ಟಿಪಾಸಿ ಜನಾನ್ ।
ತ್ವಮಿನೋ ದಾಶುಷೋ ವರೂತೇತ್ಥಾಧೀರಭಿ ಯೋ ನಕ್ಷತಿ ತ್ವಾ ॥ ೨ ॥

**ಪದಪಾಠಃ**

ತ್ವಂ । ನಃ । ಇನ್ದ್ರ । ತ್ವಾಭಿಃ । ಊತೀ । ತ್ವಾಽಯತಃ । ಅಭಿಷ್ಟಿಽಪಾ । ಅಸಿ । ಜನಾನ್ ।
ತ್ವಂ । ಇನಃ । ದಾಶುಷಃ । ವರೂತಾ । ಇತ್ಥಾಽಧೀಃ । ಅಭಿ । ಯಃ । ನಕ್ಷತಿ ತ್ವಾ ॥ ೨ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ತ್ವಾಭಿಸ್ತ್ವದೀಯಾಭಿರೂತೀ ಊತಿಭಿಃ ಪಾಲನಾದಿಭಿರ್ನೋಽಸ್ಮಾನ್ ಪಾಹಿ । ಕಿಂಚ ತ್ವಾಯತಃ ॥ ಸುಪಃ ಆತ್ಮನಃ ಕ್ಯಚ್ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ ॥ ತ್ವೈತ್ಕಾಮಾನ್ ಜನಾನ್ ಅಭಿಷ್ಟಿಪಾ ॥ ಸುಪಾಂ ಸುಲುಗಿತಿ ಸೋರಾಕಾರಃ ॥ ಅಭಿಷ್ಟಯೋಽಭಿಗಂತಾರಃ ಶತ್ರವಃ । ತೇಭ್ಯಃ ಪಾತಾ ರಕ್ಷಕೋಽಸಿ । ಭವಸಿ । ದಾಶುಷೋ ಹವಿರ್ದತ್ತವತೋ ಯಜಮಾನಸ್ಯ ತ್ವಮಿನಃ । ಈಶ್ವರಃ ಖಲು । ವರೂತಾ ॥ ಗ್ರಸಿತಸ್ಕಭಿತಸ್ತಭಿತೇತಿ ನಿಪಾತನಾದೀಕಾರಸ್ಯ ಊಕಾರಃ ॥ ಬಾಧಕಾನಾಂ ನಿವಾರಕೋಽಸಿ । ಕಿಂಚ ತ್ವಂ ತಸ್ಯ ಸ್ತೋತುರಿತ್ಥಾ ಧೀರೇವಂವಿಧೋಪಪದ್ರವೋಪಶಮನರೂಪಕರ್ಮಾಸಿ । ಯಸ್ತ್ವಾ ತ್ವಾಮಭಿನಕ್ಷತಿ ಹವಿಷಾ ಪರಿಚರತಿ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ತ್ವಾಭಿಃ—ನಿನ್ನ । ಊತೀ—ರಕ್ಷಣೆಗಳಿಂದ । ನಃ—ನಮ್ಮನ್ನು (ರಕ್ಷಿಸು) । ತ್ವಾಯತಃ—ನಿನ್ನನ್ನೇ ಆಶ್ರಯಿಸಿರುವ । ಜನಾನ್—ಜನರನ್ನು । ಅಭಿಷ್ಟಿಪಾ—ಶತ್ರುಗಳಿಂದ ರಕ್ಷಿಸುವವನಾಗಿ । ಅಸಿ—ಆಗಿದ್ದೀಯೆ । ದಾಶುಷಃ—ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ । ತ್ವಂ—ನೀನು । ಇನಃ—ಈಶ್ವರನಾಗಿಯೂ । ವರೂತಾ—ಶತ್ರುನಿವಾರಕನಾಗಿಯೂ (ಇದ್ದೀಯೆ) । ಯಃ—ಯಾವ ಯಜಮಾನನು । ತ್ವಾ—ನಿನ್ನನ್ನು । ಅಭಿನಕ್ಷತಿ—ಹವಿಸ್ಸಿನಿಂದ ಪರಿಚರಿಸುವನೋ ಅಂತಹ ಸ್ತೋತೃವಿಗೆ । ಇತ್ಥಾ ಧೀಃ—ಇದೇರೀತಿಯಲ್ಲಿ ಕರ್ಮಗಳಿಂದ ಶತ್ರುಶಮನವನ್ನು ಮಾಡುತ್ತೀಯೆ,

ಭಾವಾರ್ಥ

ಎಲೈ ಇಂದ್ರನೇ, ನೀನು ನಿನ್ನ ರಕ್ಷಣೆಗಳಿಂದ ನಮ್ಮನ್ನು ಪಾಲಿಸು. ನಿನ್ನನ್ನೇ ಆಶ್ರಯಿಸಿರುವ ಜನರನ್ನು ಶತ್ರುಗಳಿಂದ ರಕ್ಷಿಸುವವನಾಗಿದ್ದೀಯೆ. ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ನೀನು ಈಶ್ವರನಾಗಿಯೂ, ಶತ್ರುನಿವಾರಕನಾಗಿಯೂ ಇದ್ದೀಯೆ. ಯಾವ ಯಜಮಾನನು ನಿನ್ನನ್ನು ಹವಿಸ್ಸಿನಿಂದ ಪರಿಚರಿಸುವನೋ ಅಂತಹ ಯಜಮಾನನಿಗೋಸ್ಕರ ಇದೇ ರೀತಿಯ ಕರ್ಮಗಳಿಂದ ಅವನ ಶತ್ರುಶಮನವನ್ನು ಮಾಡುತ್ತೀಯೆ.

English Translation

(Defend us), Indra, with your protections, for you are the defender against enemies of those men who rely upon you : you are the lord of the offerer (of the libation), the repeller (of foes), and with these acts (protect) him who worships you.

ವಿಶೇಷವಿಷಯಗಳು

ತ್ವಾಭಿಃ—ತ್ವದೀಯಾಭಿಃ । ನಿನ್ನ ಅಥವಾ ನಿನ್ನ ಸಂಬಂಧವಾದ.

ಅಭಿಷ್ಟಿಪಾ—ಅಭಿಷ್ಟಯೋಽಭಿಗಂತಾರಃ ಶತ್ರವಃ । ತೇಭ್ಯಃ ಪಾತಾ ರಕ್ಷಕೋಽಸಿ । ಯುದ್ಧದಲ್ಲಿ ಒಬ್ಬರನ್ನೊಬ್ಬರು ಎದುರಿಸುವವರಿಗೆ ಅಭಿಷ್ಟಯಃ—ಶತ್ರುಗಳೆಂದು ಹೆಸರು. ಇಂತಹ ಶತ್ರುಗಳಿಂದ ಕಾಪಾಡುವವನಾದ್ದರಿಂದ ಇಂದ್ರನನ್ನು ಅಭಿಷ್ಟಿಪಾ ಎಂಬ ವಿಶೇಷಣದಿಂದ ಸ್ತುತಿಸಲಾಗಿದೆ.

ಇನಃ—ಈಶ್ವರಃ । ಪ್ರಭುವು, ಸ್ವಾಮಿಯು. ಇನಶಬ್ದವು ಈಶ್ವರನಾಮಗಳಲ್ಲಿ ಪಠಿತವಾಗಿದೆ. (ನಿ. ೨-೧೧) ಮತ್ತು ತತ್ರೇನ ಇತ್ಯೇತತ್ ಸನಿತ ಐಶ್ವರ್ಯೇಣೇತಿ ವಾ ಸನಿತಮನೇನೈಶ್ವರ್ಯಮಿತಿ ವಾ । ಎಂದು ನಿರ್ವಚನವೂ ಇರುವುದು. ಎಂದರೆ ಇನಶಬ್ದಕ್ಕೆ ಐಶ್ವರ್ಯದಿಂದ ಕೂಡಿರುವವನು ಅಥವಾ ಐಶ್ವರ್ಯವನ್ನು ಇತರರಿಗೆ ಪ್ರಾಪ್ತವಾಗುವಂತೆ ಮಾಡುವವನು ಎಂದರ್ಥವು.

ವರೂತಾ—ವೃಞ್ ವರಣೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಬಾಧಕಾನಾಂ ನಿವಾರಕೋಽಸಿ—ಬಾಧೆಪಡಿಸುವವರಿಂದ ತಡೆಗಟ್ಟುವ, ಬಾಧೆಗಳನ್ನು ನಿವಾರಣೆಮಾಡುವ ಎಂದರ್ಥವು.

ಅಭಿ ನಕ್ಷತಿ—ನಕ್ಷತಿ ಶಬ್ದವು ಗತಿಕರ್ಮವನ್ನು ಸೂಚಿಸುವ ಶಬ್ದಗಳಲ್ಲಿಯೂ (ನಿ. ೨-೧೪) ವ್ಯಾಪ್ತಿಕರ್ಮವನ್ನು ಸೂಚಿಸುವ ಕರ್ಮನಾಮಗಳಲ್ಲಿಯೂ (ನಿ. ೨-೧೮) ಪಠಿತವಾಗಿದೆ. ಇಲ್ಲಿ ಅಭಿ ನಕ್ಷತಿ ಎಂದರೆ ಹವಿಷಾ ಪರಿಚರತಿ ಹವಿರಾದಿಗಳಿಂದ ಸೇವಿಸುತ್ತಾನೆಂದರ್ಥವು.

---

ಸಂಹಿತಾಪಾಠಃ

ಸ ನೋ ಯುವೇನ್ದ್ರೋ ಜೋಹೂತ್ರಃ ಸಖಾ ಶಿವೋ ನರಾಮಸ್ತು ಪಾತಾ।
ಯಃ ಶಂಸನ್ತಂ ಯಃ ಶಶಮಾನಮೂತೀ ಪಚನ್ತಂ ಚ ಸ್ತುವನ್ತಂ ಚ ಪ್ರಣೇಷತ್ ॥ ೩ ॥

ಪದಪಾಠಃ

ಸಃ । ನಃ । ಯುವಾ । ಇನ್ದ್ರಃ । ಜೋಹೂತ್ರಃ । ಸಖಾ । ಶಿವಃ । ನರಾಂ । ಅಸ್ತು । ಪಾತಾ ।
ಯಃ । ಶಂಸನ್ತಂ । ಯಃ । ಶಶಮಾನಂ । ಊತೀ । ಪಚನ್ತಂ । ಚ । ಸ್ತುವನ್ತಂ । ಚ । ಪ್ರನೇಷತ್ ॥

ಸಾಯಣಭಾಷ್ಯಂ

ಯುವಾ ತರುಣೋ ಯಷ್ಟ್ರ್ಯಾಣಾಂ ಫಲಸ್ಯ ಶಮಯಿತಾ ವಾ ಜೋಹೂತ್ರಃ ಸ್ತೋತೃಭಿರಾಹ್ವಾತವ್ಯೋ ಹೋತವ್ಯೋ ವಾ ಸಖಾ ಸಖಿಭೂತಃ ಶಿವಃ ಸುಖಕರಃ ಸ ಇಂದ್ರೋ ನರಾಂ ॥ ನೃಶಬ್ದಸ್ಯಾಮಿ ಛಾಂದಸೋ ಗುಣಃ ನರಶಬ್ದಸ್ಯ ವಾಮ್ಯಾಗಮಾನುಶಾಸನಸ್ಯಾನಿತ್ಯತ್ವಾನ್ನುಡಭಾವಃ ॥ ಕರ್ಮನೇತ್ರೃಣಾಮಸ್ಮಾಕಂ ಪಾತಾ ಪಾಲಕೋ ಭವತಿ । ಯಃ ಶಸ್ತ್ರಾಣಿ ಶಂಸಂತಂ ಯಶ್ಚ ಶಶಮಾನಂ ॥ ಶಶ ಪ್ಲುತಗತೌ ॥ ಕ್ರಿಯೋಃ ಕುರ್ವಾಣಂ ಪುರೋಡಾಶಾದಿಕಂ ಹವೀಂಷಿ ಪಚಂತಂ ಸ್ತುವಂತಂ ಸಾಮಭಿಃ ಸ್ತೋತ್ರಂ ಕುರ್ವಾಣಂ । ಸ್ತುತಶಸ್ತ್ರಯೋಃ ಪ್ರಗೀತಾಪ್ರಗೀತಮಂತ್ರಸಾಧ್ಯತ್ವೇನ ಭೇದಸ್ಯ ಪ್ರತಿಪಾದಿತತ್ವಾತ್ ಅತ್ರ

**ಪೃಥಙ್ನಿರ್ದೇಶಃ । ಏವಮುಯಂ ಯಜಮಾನಮೂತೀ ಊತ್ಯಾ ರಕ್ಷಣೇನ ಪ್ರನೇಷತ್ ॥ ನಯತೇರ್ಲೇಟಿ ಸಿಬ್ಬಹುಲಮಿತಿ ಸಿಪ್ । ಅಡಾಗಮಃ । ತಿಙಃ ಚೋದಾತ್ತವತೀತಿ ಗತೇರ್ನಿಘಾತಃ ॥ ಕರ್ಮಣಾಂ ಪಾರಂ ಪ್ರಾಪಯೇತ್ ॥**

ಪ್ರತಿಪದಾರ್ಥ

**ಯಃ**—ಯಾವ ಇಂದ್ರನು । **ಶಂಸಂತಂ**—ಸ್ತುತಿಸುವವನೂ । **ಶಶಮಾನಂ**—ಕರ್ಮನಿರತನೂ। **ಪಚಂತಂ**—ಹವಿಸ್ಸುಗಳನ್ನು ಪಕ್ವಮಾಡುವವನೂ । **ಸ್ತುವಂತಂ**—ಸಾಮಗಳನ್ನು ಪಠಿಸುವವನೂ ಆದ ಯಜಮಾನನನ್ನು । **ಊತೀ**—ತನ್ನ ರಕ್ಷಣೆಗಳಿಂದ । **ಪ್ರನೇಷತ್**—ಕರ್ಮದ ಅಂತವನ್ನು ಮುಟ್ಟಿಸಿ ಕರ್ಮಕ್ಕೆ ಭಾಗಿಯಾಗುವಂತೆ ಮಾಡುವನೋ ಅಂತಹ । **ಯುವಾ**—ತರುಣನೂ । **ಜೋಹೂತ್ರಃ**—ಎಲ್ಲರಿಂದಲೂ ಕರೆಯಲ್ಪಡುವವನೂ । **ಸಖಾ**—ಮಿತ್ರಭೂತನೂ । **ಶಿವಃ**—ಸುಖಕರನೂ ಆದ । **ಸ ಇಂದ್ರಃ**—ಆ ಇಂದ್ರನು । **ನರಾಂ**—ಕರ್ಮಕ್ಕೆ ನೇತೃಗಳಾದ । **ನಃ**—ನಮಗೆ । **ಪಾತಾ**—ರಕ್ಷಕನಾಗಿ । **ಅಸ್ತು**—ಇರಲಿ.

ಭಾವಾರ್ಥ

ಸ್ತುತಿಸುವವನೂ, ಕರ್ಮನಿರತನೂ, ಹವಿಸ್ಸುಗಳನ್ನು ಪಕ್ವಮಾಡುವವನೂ, ಸಾಮಗಳನ್ನು ಪಠಿಸುವವನೂ ಆದ ಯಜಮಾನನನ್ನು ಯಾವ ಇಂದ್ರನು ತನ್ನ ರಕ್ಷಣೆಗಳಿಂದ ಕರ್ಮದ ಅಂತವನ್ನು ಮುಟ್ಟಿಸಿ ಕರ್ಮಕ್ಕೆ ಭಾಗಿಯಾಗುವಂತೆ ಮಾಡುವನೋ ಅಂತಹ ತರುಣನೂ, ಎಲ್ಲರಿಂದಲೂ ಕರೆಯಲ್ಪಡುವವನೂ, ಮಿತ್ರಭೂತನೂ, ಸುಖಕರನೂ ಆದ ಇಂದ್ರನು ಕರ್ಮಕ್ಕೆ ನೇತೃಗಳಾದ ನಮಗೆ ರಕ್ಷಕನಾಗಿರಲಿ.

English Translation

May that young, adorable Indra, ever be the friend, the benefactor, and protector of us, his worshippers; who, with his protection, may conduct (to the object of his worship) him who repeats (to him) prayer and praise, who prepares the oblation, and recites (his) commendations.

ವಿಶೇಷವಿಷಯಗಳು

**ಯುವಾ**—**ತರುಣೋ ಯಷ್ಟ್ರ್ಯಾಣಾಂ ಫಲಸ್ಯ ಶಮಯಿತಾ ವಾ** । ಯುವಾ ಎಂಬ ಶಬ್ದಕ್ಕೆ ತರುಣನು ಅಥವಾ ಯಜ್ಞಾದಿಗಳಿಂದ ತನ್ನನ್ನು ಭಜಿಸುವವರಿಗೆ ಫಲಾದಿಗಳನ್ನು ಕೊಡುವವನು ಎಂದು ಎರಡು ವಿಧ ಅರ್ಥಗಳನ್ನು ಹೇಳಿರುವರು.

**ಜೋಹೂತ್ರಃ**—**ಸ್ತೋತೃಭಿರಾಹ್ವಾತವ್ಯೋ ಹೋತವ್ಯೋ ವಾ** । ಸ್ತೋತ್ರಮಾಡುವವರಿಂದ ಆಹ್ವಾನಿಸಲ್ಪಡುವವನು ಅಥವಾ ಹೋಮಾದಿಗಳಿಂದ ಯಜಿಸಲ್ಪಡುವವನು. ಈ ಶಬ್ದವು ಋಗ್ವೇದದಲ್ಲಿ ಋ. ಸಂ. ೨-೧೦-೧ ೧-೧೯೮-೯ ನೆಯ ಋಕ್ಕುಗಳಲ್ಲಿಯೂ ಪಠಿತವಾಗಿದೆ.

**ನರಾಂ**—**ಕರ್ಮನೇತೃಣಾಮಸ್ಮಾಕಂ** । ಯಜ್ಞಾದಿ ಕರ್ಮಗಳನ್ನು ನೆರವೇರಿಸುತ್ತಿರುವ ನಮಗೆ (ಮನುಷ್ಯರಿಗೆ) ಎಂದಭಿಪ್ರಾಯವು.

ಶಂಸಂತಂ—ಸ್ತುವಂತಂ । ಸ್ತೋತ್ರಮಾಡುತ್ತಿರುವ ; ಇಂದ್ರನ ಗುಣಗಳನ್ನು ಪ್ರಶಂಸೆಮಾಡುತ್ತಿರುವ ಅಥವಾ ಶಸ್ತ್ರಮಂತ್ರಗಳನ್ನು ಪಠಿಸುತ್ತಿರುವ.

ಶಶಮಾನಂ—ಶಶಮಾನಶಬ್ದವು ಅರ್ಚತಿಕರ್ಮಗಳಲ್ಲಿ (ನಿ. ೩-೧೪) ಪಠಿತವಾಗಿದೆ. ಯಜ್ಞಾದಿಗಳಿಂದ ಇಂದ್ರನನ್ನು ಆರಾಧಿಸುವ ಎಂದರ್ಥವು. ಮತ್ತು ಯಾಸ್ಕರು ಈ ಶಬ್ದಕ್ಕೆ—ಶಶಮಾನಃ । ಶಶಮಾನಃ ಶಂಸಮಾನಃ । ಯೋ ವಾಂ ಯಜ್ಞೈಃ ಶಶಮಾನೋ ಹ ದಾಶತಿ (ಋ. ಸಂ. ೧-೧೫೧-೭) ಇತ್ಯಪಿ ನಿಗಮೋ ಭವತಿ (ನಿ. ೬-೮) ಎಂದು ನಿರ್ವಚನವನ್ನು ಹೇಳಿರುವರು. ಗುಣಗಳನ್ನು ಪ್ರಶಂಸೆಮಾಡುವ ಅಥವಾ ಸ್ತುತಿಸುವ ಎಂಬರ್ಥವನ್ನು ಹೇಳಬಹುದಾದರೂ ಈ ಶಬ್ದಕ್ಕೆ ಉದಾಹರಣೆಯಲ್ಲಿರುವಂತೆ ಯಜ್ಞಾದಿ ಕರ್ಮಗಳ ಸಂಬಂಧವಿರುವುದರಿಂದ—ಯಜ್ಞಾದಿಕರ್ಮಗಳಿಂದ ಸ್ತೋತ್ರಮಾಡುತ್ತಿರುವ ಎಂಬರ್ಥವು ಯುಕ್ತವಾಗಿರುವುದು.

---

ಸಂಹಿತಾಪಾಠಃ

ತಮು ಷ್ಟುಷ ಇನ್ದ್ರಂ ತಂ ಗೃಣೀಷೇ ಯಸ್ಮಿನ್ಪುರಾ ವಾವೃಧುಃ ಶಾಶದುಶ್ಚ ।
ಸ ವಸ್ವಃ ಕಾಮಂ ಪೀಪರದಿಯಾನೋ ಬ್ರಹ್ಮಣ್ಯತೋ ನೂತನಸ್ಯಾಯೋಃ ॥

ಪದಪಾಠಃ

ತಂ । ಊಂ ಇತಿ । ಸ್ತುಷೇ । ಇನ್ದ್ರಂ । ತಂ । ಗೃಣೀಷೇ । ಯಸ್ಮಿನ್ । ಪುರಾ । ವವೃಧುಃ । ಶಾಶದುಃ । ಚ ।

ಸಃ । ವಸ್ವಃ । ಕಾಮಂ । ಪೀಪರತ್ । ಇಯಾನಃ । ಬ್ರಹ್ಮಣ್ಯತಃ । ನೂತನಸ್ಯ । ಆಯೋಃ ॥ ೪ ॥

ಸಾಯಣಭಾಷ್ಯಂ

ತಮು ತಮೇವೇಂದ್ರಂ ಸ್ತುಷೇ । ಸ್ತೌಮಿ । ತಥಾ ತಮಿಂದ್ರಂ ಗೃಣೀಷೇ । ಶಂಸಾಮಿ ॥ ಉಭಯತ್ರ ಪುರುಷವ್ಯತ್ಯಯಃ । ಯಸ್ಮಿನ್ನಿಂದ್ರೇ ಪುರಾ ಪೂರ್ವಂ ಸ್ತೋತಾರೋ ವಾವೃಧುಃ । ಪ್ರವೃದ್ಧಾ ಅಭವನ್ । ಶಾಶದುಶ್ಚ । ಶತ್ರೂನ್ ಹಿಂಸಿತವಂತಶ್ಚ ॥ ಶದ್ಲೃ ಶಾತನೇ । ಲಿಟಿ ತುಜಾದೀನಾಮಿತ್ಯಭ್ಯಾಸಸ್ಯ ದೀರ್ಘಃ ॥ ಇಯಾನಃ ಸ್ತೋತೃಭಿರ್ಯಾಚ್ಯಮಾನಃ ಸ ಇಂದ್ರೋ ಬ್ರಹ್ಮಣ್ಯತಃ ಸ್ತೋತ್ರಮಿಚ್ಛತೋ ನೂತನಸ್ಯಾಯೋರ್ಮನುಷ್ಯಸ್ಯ ಯಜಮಾನಸ್ಯ ವಸ್ವೋ ವಸುನಃ ಕಾಮಮಭಿಲಾಷಂ ಪೀಪರತ್ । ಅಭಿಲಷಿತಫಲದಾನೇನ ಪೂರಯತು ॥

ಪ್ರತಿಪದಾರ್ಥ

ಯಸ್ಮಿನ್—ಯಾವ ಇಂದ್ರನ ಆಶ್ರಯದಲ್ಲಿ । ಪುರಾ—ಪೂರ್ವದಲ್ಲಿ । ವಾವೃಧುಃ—(ಸ್ತೋತೃಗಳು) ವೃದ್ಧಿಯನ್ನು ಪಡೆದರೋ । ಚ—ಮತ್ತು । ಶಾಶದುಃ—ಶತ್ರುಗಳನ್ನು ಹಿಂಸಿಸುವಂತಾದರೋ, ಅಂತಹ । ತಮು ಇಂದ್ರಂ—ಅದೇ ಇಂದ್ರನನ್ನೇ । ಸ್ತುಷೇ—ಸ್ತುತಿಸುತ್ತೇನೆ । ತಂ—ಅವನನ್ನೇ । ಗೃಣೀಷೇ—ಪ್ರಶಂಸಿಸುತ್ತೇನೆ ।

**ಇಯಾನಃ**—ಸ್ತೋತೃಗಳಿಂದ ಯಾಚಿಸಲ್ಪಟ್ಟ । **ಸಃ**—ಇಂದ್ರನು । **ಬ್ರಹ್ಮಣ್ಯತಃ**—ಸ್ತುತಿಕರ್ತನೂ । **ನೂತನಸ್ಯ**—ನೂತನನಾದವನೂ ಆದ । **ಆಯೋಃ**—ಮಾನವನ (ಯಜಮಾನನ) । **ವಸ್ವಃ ಕಾಮಂ**—ಧನೇಚ್ಛೆಯನ್ನು । **ಪೀಪರತ್**—ಪೂರೈಸಲಿ.

ಭಾವಾರ್ಥ

ಯಾವ ಇಂದ್ರನ ಆಶ್ರಯದಲ್ಲಿ ಸ್ತೋತೃಗಳು ಪೂರ್ವದಲ್ಲಿ ವೃದ್ಧಿಯನ್ನು ಪಡೆದರೋ ಮತ್ತು ಶತ್ರುಗಳನ್ನು ಹಿಂಸಿಸುವಂತಾದರೋ ಅಂತಹ ಅದೇ ಇಂದ್ರನನ್ನೇ ನಾನು ಸ್ತುತಿಸುತ್ತೇನೆ. ಅವನನ್ನೇ ಪ್ರಶಂಸಿಸುತ್ತೇನೆ. ಸ್ತೋತೃಗಳಿಂದ ಯಾಚಿಸಲ್ಪಟ್ಟ ಇಂದ್ರನು ಸ್ತುತಿಕರ್ತನೂ, ನೂತನನಾದವನೂ ಆದ ಯಜಮಾನನ ಧನೇಚ್ಛೆಯನ್ನು ಪೂರೈಸಲಿ.

## English Translation

I laud that Indra, I glorify him, in whom of old (his worshippers) prospered, and overcame (their enemies): may he, when solicited, gratify the desire of wealth of his present pious adorer.

ವಿಶೇಷವಿಷಯಗಳು

**ಉ—ಅಥಾಪ್ಯುಕಾರ ಏತಸ್ಮಿನ್ನೇವಾರ್ಥೇ** (ನಿ. ೧-೫). ಉಕಾರವು ಏವಾರ್ಥದಲ್ಲಿ (ಅದೇ ಎಂಬರ್ಥದಲ್ಲಿ) ಉಪಯೋಗಿಸಲ್ಪಡುವುದು ಎಂದು ಯಾಸ್ಕರ ನಿರ್ವಚನವಿದೆ.

**ಯಸ್ಮಿನ್ ಪುರಾ ವವೃಧುಃ ಶಾಶದುಃ ಚ—ಯಸ್ಮಿನ್ನಿಂದ್ರೇ ಪೂರ್ವಂ ಸ್ತೋತಾರೋ ಪ್ರವೃದ್ಧಾ ಅಭವನ್ ಶತ್ರೂನ್ ಹಿಂಸಿತವಂತಶ್ಚ** । ಯಜಮಾನರೂ ಸ್ತೋತ್ರಮಾಡುವ ಋತ್ವಿಕ್ಕುಗಳೂ, ಇತರರೂ ಸಹ ಹಿಂದೆ ಅನೇಕಾವರ್ತಿ ಇಂದ್ರನನ್ನು ಸ್ತೋತ್ರಾದಿಗಳಿಂದಲೂ, ಯಜ್ಞಾದಿ ಕರ್ಮಗಳಿಂದಲೂ ಸಂತೋಷಪಡಿಸಿ ಅವನ ಅನುಗ್ರಹದಿಂದ ಧನಾದಿಇಷ್ಟಾರ್ಥಗಳನ್ನು ಪಡೆದು ವೃದ್ಧಿಯನ್ನು ಹೊಂದಿದರು. ಮತ್ತು ಯುದ್ಧಗಳಲ್ಲಿ ಶತ್ರುಗಳನ್ನೂ ಇಂದ್ರನ ಅನುಗ್ರಹದಿಂದಲೇ ಜಯಿಸಿದರು. ಅಂತಹ ಇಂದ್ರನನ್ನು ಸ್ತೋತ್ರಮಾಡುವೆನೆಂದು ಋಷಿಯು ವರ್ಣಿಸಿರುವನು.

**ಸಃ ವಸ್ವಃ ಕಾಮಂ ಪೀಪರತ್—ವಸುನಃ ಕಾಮಮಭಿಲಾಷಂ ಪೂರಯತು** । (ಸ್ತೋತೃಗಳು) ತಮಗೆ ಬೇಕೆಂದು ಅಪೇಕ್ಷಿಸುವ ಧನಾರ್ಥವಾಗಿ ಯಾಚಿಸುವ ಅಭಿಲಾಷೆಯನ್ನು ಇಂದ್ರನು ಪೂರೈಸಲಿ ಎಂದಭಿಪ್ರಾಯವು.

**ಇಯಾನಃ ಬ್ರಹ್ಮಣ್ಯತಃ ನೂತನಸ್ಯ ಆಯೋಃ**—ಆಯುಃ ಶಬ್ದವು ಮನುಷ್ಯನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೭) ಆಯೋಃ ಎಂದರೆ ಮನುಷ್ಯನ ಎಂದರ್ಥವು. **ನೂತನಸ್ಯ**—ಹೊಸದಾದ ಎಂದರೆ ಈಗ (ವರ್ತಮಾನಕಾಲದಲ್ಲಿ) ಇಂದ್ರನನ್ನು ಸ್ತೋತ್ರಮಾಡುತ್ತಿರುವ ಎಂದರ್ಥವು. ತನಗೆ ಧನದ ವಿಷಯದಲ್ಲಿ ಬೇಕಾದ ಇಷ್ಟಾರ್ಥಗಳನ್ನು ಯಾಚಿಸುತ್ತಾ, ಈಗ (ಈ ಯಜ್ಞದಲ್ಲಿ) ಸ್ತೋತ್ರಮಾಡುತ್ತಿರುವ ಮನುಷ್ಯ ಯಜಮಾನನ ಇಷ್ಟಾರ್ಥಗಳನ್ನು ಇಂದ್ರನು ನೆರವೇರಿಸಲಿ ಎಂದು ಮುಖ್ಯಾಭಿಪ್ರಾಯವು.

———— :o: ————

ಸಂಹಿತಾಪಾಠಃ

ಸೋ ಅಙ್ಗಿರಸಾಮುಚಥಾ ಜುಜುಷ್ವಾನ್ಬ್ರಹ್ಮ ತೂತೋದಿನ್ದ್ರೋ ಗಾತುಮಿಷ್ಣನ್ ।

ಮುಷ್ಣನ್ನುಷಸಃ ಸೂರ್ಯೇಣ ಸ್ತವಾನಶ್ನಸ್ಯ ಚಿಚ್ಛಿಶ್ನಥತ್ಪೂರ್ವ್ಯಾಣಿ ॥ ೫ ॥

ಪದಪಾಠಃ

ಸಃ । ಅಙ್ಗಿರಸಾಂ । ಉಚಥಾ । ಜುಜುಷ್ವಾನ್ । ಬ್ರಹ್ಮ । ತೂತೋತ್ । ಇನ್ದ್ರಃ । ಗಾತುಂ । ಇಷ್ಣನ್ ।

ಮುಷ್ಣನ್ । ಉಷಸಃ । ಸೂರ್ಯೇಣ । ಸ್ತವಾನ್ । ಅಶ್ನಸ್ಯ । ಚಿತ್ । ಶಿಶ್ನಥತ್ । ಪೂರ್ವ್ಯಾಣಿ ॥ ೫ ॥

ಸಾಯಣಭಾಷ್ಯಂ

ಅಂಗಿರಸಾಂ ಸಂಬಂಧೀನ್ಯುಚಥೋಕ್ಥಾನಿ ಜುಜುಷ್ವಾನ್ । ಜುಷೀ ಪ್ರೀತಿಸೇವನಯೋರಿತ್ಯಸ್ಯ ಲಿಟಿ ಕ್ವಸೌ ರೂಪಂ ॥ ಸೇವಮಾನಃ ಸ ಇಂದ್ರೋ ಗಾತುಂ ಪಣಿಭಿರುಪದ್ರುತಾನಾಮಂಗಿರಸಾಂ ಮಾರ್ಗ-ಮಿಷ್ಣನ್ ಪ್ರೇರಯನ್ ಬ್ರಹ್ಮ ತೇಷಾಂ ಸ್ತೋತ್ರಂ ಕಾಮಪ್ರದಾನೇನ ತೂತೋತ್ ॥ ತು ವೃದ್ಧಾವಿತ್ಯಸ್ಯ ಲಙಿ ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ ॥ ಅವರ್ಧಯತ್ । ಕಿಂಚ ಸ್ತವಾನ್ ಸ್ತೋತೃಭಿಃ ಸ್ತೂಯ-ಮಾನಃ ಸೂರ್ಯೇಣ ಸ್ವಾತ್ಮಭೂತೇನೋಷಸೋ ಮುಷ್ಣನ್ ಅಪಹರನ್ । ಉದಿತೇ ಹಿ ಸೂರ್ಯ ಉಷಸೋ ವ್ಯಾವರ್ತಂತೇ । ತಾದೃಶಃ ಸ ಇಂದ್ರೋಽಶ್ನಸ್ಯ । ಅಶ್ನುತೇ ಸ್ವತೇಜಸಾ ಸರ್ವಂ ಜಗದಿತ್ಯಶ್ನಃ ಕಶ್ಚಿದಸುರಃ । ತಸ್ಯ ಪೂರ್ವ್ಯಾಣಿ ಪುರಾತನಾನಿ ಪುರಾಣಿ ಬಲಾನಿ ವಾ ಶಿಶ್ನಥತ್ । ಅಶ್ನಥಯತ್ । ಶಿಥಿ-ಲೀಚಕಾರ ॥

ಪ್ರತಿಪದಾರ್ಥ

ಅಂಗಿರಸಾಂ—ಅಂಗಿರಾ ಋಷಿಗಳ । ಉಚಥಾ—ಉಕ್ಥರೂಪವಾದ ಸ್ತೋತ್ರಗಳನ್ನು । ಜುಜುಷ್ವಾನ್—ಸೇವಿಸುತ್ತಾ । ಸಃ ಇಂದ್ರಃ—ಆ ಇಂದ್ರನು । ಗಾತುಂ—(ಗೋವನ್ನು ಹುಡುಕುವ) ಮಾರ್ಗವನ್ನು । ಇಷ್ಣನ್—ಪ್ರೇರಿಸುತ್ತಾ । ಬ್ರಹ್ಮ—ಅವರ ಸ್ತುತಿಯನ್ನು । ತೂತೋತ್—(ಅವರ ಇಷ್ಟಾರ್ಥಪ್ರದನಾಗಿ) ನೆರವೇರಿಸಿದನು । ಸ್ತವಾನ್—ಸ್ತೋತೃಗಳಿಂದ ಸ್ತುತನಾಗಿ । ಸೂರ್ಯೇಣ ಸ್ವಾತ್ಮಭೂತನಾದ ಸೂರ್ಯನಿಂದ । ಉಷಸಃ—ಉಷಸ್ಸಿನ (ಕಾಂತಿಯನ್ನು) । ಮುಷ್ಣನ್—ಅಪಹರಿಸುತ್ತಾ । ಅಶ್ನಸ್ಯ—ಅಶ್ನನೆಂಬ ಅಸುರನ । ಪೂರ್ವ್ಯಾಣಿ—ಪುರಾತನವಾದ ಪಟ್ಟಣಗಳನ್ನು । ಶಿಶ್ನಥತ್—ನಾಶಮಾಡಿದನು

ಭಾವಾರ್ಥ

ಅಂಗಿರಾಋಷಿಗಳ ಉಕ್ಥರೂಪವಾದ ಸ್ತೋತ್ರಗಳನ್ನು ಸೇವಿಸಿ ಇಂದ್ರನು ಪಣಿಗಳಿಂದ ಅಪಹೃತವಾದ ಗೋವುಗಳ ಮಾರ್ಗವನ್ನು ಅವರಿಗೆ ತೋರಿಸುತ್ತಾ ಅವರ ಸ್ತುತಿಯಿಂದ ಪ್ರಾರ್ಥಿಸಿದ ಇಷ್ಟವನ್ನು ನೆರವೇರಿಸಿದನು.

ಸ್ತೋತೃಗಳಿಂದ ಸ್ತುತನಾಗಿ ಸ್ವಾತ್ಮಭೂತನಾದ ಸೂರ್ಯನಿಂದ ಉಷಸ್ಸಿನ ಕಾಂತಿಯನ್ನು ಅಪಹರಿಸುತ್ತಾ ಅಶ್ನನೆಂಬ ಅಸುರನ ಪುರಾತನವಾದ ಪಟ್ಟಣಗಳನ್ನು ನಾಶಮಾಡಿದನು.

## English Translation

Propitiated by the hymns of the Angirasas, Indra granted their prayer, and directed them on the way (to recover their cattle): carrying of the dawns by the (light of the) sun, he, animated by praise, demolished the ancient cities of Ashna.

## ವಿಶೇಷವಿಷಯಗಳು

ಅಂಗಿರಸಾಂ—ಅಂಗಿರಸರ ವಿಸ್ತಾರವಾದ ವಿವರಣೆಯನ್ನು ನಾವು ಋ. ಸಂ. ಭಾಗ ೧ ಪುಟ 641-642 ದಲ್ಲಿಯೂ, ಮತ್ತು 3-520, 5-672, 6-365, 8-187, 10-522 ದಲ್ಲಿಯೂ ಅನೇಕಾವರ್ತಿ ವಿವರಿಸಿದ್ದೇವೆ.

ಅಂಗಿರಸರು ಅಗ್ನಿಯ ಅಥವಾ ಅಂಗಾರದ ಪುತ್ರರೆಂದೂ, ದೇವತೆಗಳ ಪುತ್ರರೆಂದೂ ಋ. ಸಂ. ೧೦-೬೨-೪, ೫ ಇತ್ಯಾದಿ ಋಕ್ಕುಗಳಲ್ಲಿ ಹೇಳಲ್ಪಟ್ಟಿದೆ. ಇವರಲ್ಲಿ ಒಬ್ಬ ಅಂಗಿರಸನು ಮೂಲಪುರುಷನೆಂದೂ ಉಳಿದವರು ಅವನ ಪುತ್ರರೆಂದೂ ಭಾವನೆ. ಈ ಅಂಗಿರಸರು ನಮ್ಮ ಪಿತೃಗಳೆಂದು ಋ. ಸಂ. ೧-೬೨-೨, ೧-೭೧-೨ ಇತ್ಯಾದಿ ಸ್ಥಳಗಳಲ್ಲಿ ಕರೆಯಲ್ಪಟ್ಟಿದ್ದಾರೆ. ಅನೇಕ ಸಂದರ್ಭಗಳಲ್ಲಿ ಇವರು ವಸುಗಳು ರುದ್ರರು ಆದಿತ್ಯರು ಮೊದಲಾದವರೊಡನೆ ಸ್ತುತ ರಾಗಿದ್ದಾರೆ. ಇವರು ವನಗಳಲ್ಲಿ ಅಡಗಿದ್ದ ಅಗ್ನಿಯನ್ನು ಕಂಡುಹಿಡಿದರೆಂದೂ (೫-೧೧-೬) ಯಜ್ಞಸಂಬಂಧವಾದ ಪ್ರಥಮ ನಿಯಮಗಳನ್ನು ರಚಿಸಿದರೆಂದೂ (೧೦-೬೭-೨) ಯಾಗದಿಂದಲೇ ಅಮರತ್ವವನ್ನೂ ಇಂದ್ರನ ಮೈತ್ರಿಯನ್ನು ಗಳಿಸಿದರೆಂದೂ (೧೦-೬೨-೧) ಹೇಳಿದೆ.

ಇಂದ್ರನಿಗೂ ಇವರಿಗೂ ಬಹಳ ಸಮೀಪಸಂಬಂಧವಿದೆ. ಪ್ರಕೃತ ಋಕ್ಕಿನಲ್ಲಿಯೂ ಋ. ಸಂ. ೮-೫೨-೩ ರಲ್ಲಿಯೂ ಇಂದ್ರನು ಇವರಿಗೆ ಗೋವುಗಳನ್ನು ತೋರಿಸಿದನೆಂದು ಹೇಳಿದೆ. ಇವರಿಗೋಸ್ಕರಲೇ ಗೋಶಾಲೆಗಳ ದ್ವಾರ ಗಳನ್ನು ತೆರೆದು (೧-೫೧-೩) ವಲನೆಂಬ ಅಸುರನನ್ನು ಉರುಳಿಸಿ ಗೋವುಗಳನ್ನು ಹೊರಡಿಸಿದನು (೮-೧೪-೮) ಇವರಿಂದ ಸಹಚರಿತನಾಗಿಯೇ ಇಂದ್ರನು ವಲನನ್ನು ಇರಿದು (೨-೧೧-೨೦) ಬಂಧಿತವಾಗಿದ್ದ ಗೋವುಗಳನ್ನು ಹೊರಕ್ಕೆ ಓಡಿಸಿದನು (೬-೧೭-೬). ಅಂಗಿರಸರಿಗೆ ಮುಖಂಡನೆಂದು (ಅಂಗಿರಸ್ತಮ) ಎರಡು ಸಂದರ್ಭಗಳಲ್ಲಿ (೧-೧೦೦-೪, ೧-೧೩೦-೩) ಕರೆಯಲಾಗಿದೆ. ಗೋವಿಮೋಚನಪ್ರಸಂಗದಲ್ಲಿ ಅಂಗಿರಸರ ಗಾನದಿಂದ ಸ್ತುತನಾಗಿ ಇಂದ್ರನು ವಲನನ್ನು ಇರಿದು (೨-೧೫-೮) ಗೋಶಾಲಾದ್ವಾರಗಳನ್ನು ಭೇದಿಸಿದನು (೪-೧೬-೧೮). ವಲನನ್ನು ಕೊಂದು ಅವನ ದುರ್ಗದ್ವಾರಗಳನ್ನು ತೆರೆದನು (೬-೧೮-೫) ಅಂಗಿರಸರ ಗಾನಕ್ಕೆ ವಿಶೇಷವಾದ ವೈಶಿಷ್ಟ್ಯವಿದೆ (೧೦-೭೮-೫, ೧-೧೦೭-೨) ಗೋವುಗಳನ್ನು ಬಿಡುಗಡೆಮಾಡಿದ ಪ್ರಸಂಗದಲ್ಲಿ ಅಂಗಿರಸರ ಪಾತ್ರವು ಇಂದ್ರನ ಪಾತ್ರ ಕ್ಕಿಂತ ಹೆಚ್ಚೆಂದು ಕಾಣುತ್ತದೆ. ಇಂದ್ರನನ್ನು ಜತೆಯಲ್ಲಿ ಇಟ್ಟುಕೊಂಡು ಅಂಗಿರಸರು ಗೋ ಮತ್ತು ಅಶ್ವಶಾಲೆ ಗಳನ್ನು ಬರಿದುಮಾಡಿದರು (೧೦-೬೨-೭). ತಾವು ಆಚರಿಸಿದ ಕರ್ಮಬಲದಿಂದ ಗೋವುಗಳನ್ನು ಹೊರಕ್ಕೆ ಅಟ್ಟಿ ವಲನನ್ನು ಇರಿದು ಕೊಂದರು (೧೦-೬೨-೨). ಸೂರ್ಯನು ಆಕಾಶದಲ್ಲಿ ಏರುವಂತೆ ಮಾಡಿದರು. ಮತ್ತು ಭೂಮಿ

ಯನ್ನು ವಿಸ್ತಾರವಾಗಿ ಹರಡಿದರು (೧೦·೬೨-೩). ತಾವು ಆಚರಿಸಿದ ಯಾಗಬಲದಿಂದ ಬಂಡೆಯನ್ನು ಒಡೆದು ಗೋವುಗಳನ್ನು ಬಂಧನದಿಂದ ಬಿಡಿಸಿ ಅವುಗಳೊಡನೆ ತಾವು ಸಂತೋಷದಿಂದ ಕಿರಿಚಿಕೊಂಡರು (೪-೩-೧೧). ಗಾನ ಮಾಡುತ್ತಾ ಅವರು ಗೋವುಗಳನ್ನು ಕಂಡರು (೧-೬೨-೨). ತಮ್ಮ ಗಾನಗಳಿಂದ ಅವರು ಬಂಡೆಯನ್ನು ಒಡೆದು ಬೆಳಕನ್ನು ಕಂಡರು. ಇಂದ್ರನಿಗೋಸ್ಕರ ಪಣಿಗಳೆಂಬ ಅಸುರರಿಂದ ಅಪಹೃತವಾಗಿದ್ದ ಗೋವುಗಳನ್ನು ಸರಮೆಯೆಂಬ ದೇವಶುನಿಯು ಕಂಡುಹಿಡಿದ ಪ್ರಸಂಗದಲ್ಲಿಯೂ ಅಂಗಿರಸ ಪಾತ್ರವಿದೆ (೧೦-೧೦೮-೮, ೧೦) ಈ ವಿಷಯದಲ್ಲಿ ಸರಮೆಯು ಇಂದ್ರ ಮತ್ತು ಅಂಗಿರಸರಿಗೆ ಸಹಾಯಮಾಡಿತು (೧-೬೨-೩, ೧-೭೨-೮). ಪಣಿಗಳಿಂದ ಅಪಹೃತವಾದ ಗೋವುಗಳ ವಿಮೋಚನಾಕಾರ್ಯದಲ್ಲಿ ಬೃಹಸ್ಪತಿಯ ಪಾತ್ರವೂ ಇದೆ (೧೦-೧೦೮-೬, ೧೧)

ಅಗ್ನಿಯನ್ನೂ ಅನೇಕಸಲ ಅಂಗಿರಸರಲ್ಲಿ ಮುಖಂಡನೆಂದು ಕರೆದಿದೆ (೧-೭೫-೨) ಪಿತೃಗಣದಲ್ಲಿ ಪುರಾತನ ಅಂಗಿರಸನೂ ಒಬ್ಬನು (೧-೧೩೯-೧). ಅನುಕ್ರಮಣಿಕೆಯಲ್ಲಿ—ಅಂಗಿರಸರು ಒಂದು ಪುರೋಹಿತರ ವಂಶದವರೆಂದು ಹೇಳಿದೆ. ಇವರಿಗೆ ಅಥರ್ವಾಂಗಿರಸರು ಎಂದು ಹೆಸರು. ಅಥರ್ವವೇದಕ್ಕೆ ಅಥರ್ವಾಂಗಿರಸ ಎಂದು ಹೆಸರಿದೆ. ಇತ್ಯಾದಿ ಅಂಗಿರಸರ ವಿಷಯಕವಾದ ಅನೇಕ ವಿವರಗಳು ಅಲ್ಲಲ್ಲಿ ವರ್ಣಿತವಾಗಿವೆ.

**ಮುಷ್ಣನ್ ಉಷಸಃ ಸೂರ್ಯೇಣ**—ಸೂರ್ಯನಿಂದ ಉಷಸ್ಸಿನ ಪ್ರಕಾಶವು ಅಪಹರಿಸಲ್ಪಟ್ಟಿತು ಎಂದರೆ ಸೂರ್ಯೋದಯವಾದಕೂಡಲೇ ಸೂರ್ಯನ ಅಧಿಕಪ್ರಕಾಶದಿಂದ ಉಷಃಕಾಲದ ಸಾಮಾನ್ಯ ಪ್ರಕಾಶವು (ಬೆಳಕು) ಕಮ್ಮಿಯಾಯಿತು. ಎಂದರೆ ಉಷಃಕಾಲದ ಬೆಳಕಿಗಿಂತ ಸೂರ್ಯನ ಪ್ರಕಾಶವು ಅತ್ಯಧಿಕವಾದುದು ಎಂದಭಿಪ್ರಾಯವು.

**ಅಶ್ನಸ್ಯ ಪೂರ್ವ್ಯಾಣಿ**—ಅಶ್ನುತೇ ಸ್ವತೇಜಸಾ ಸರ್ವಂ ಜಗದಿತ್ಯಶ್ನಃ ಕಶ್ಚಿದಸುರಃ । ತಸ್ಯ ಪುರಾತನಾನಿ ಪುರಾಣಿ ಬಲಾನಿ ವಾ । ತನ್ನ ಸಾಮರ್ಥ್ಯದಿಂದ ಸರ್ವವನ್ನೂ ಭಕ್ಷಿಸಿ ಧ್ವಂಸಮಾಡುತ್ತಿದ್ದನಾದುದರಿಂದ ಅಶ್ನವೆಂಬ ಹೆಸರಿನಿಂದ ಪ್ರಸಿದ್ಧನಾದ ಒಬ್ಬ ಅಸುರನ ಪುರಾತನವಾದ ಪಟ್ಟಣಗಳನ್ನು ಅಥವಾ ಅವನ ಸೈನಿಕರನ್ನು ಇಂದ್ರನು ನಾಶಮಾಡಿದನೆಂದಭಿಪ್ರಾಯವು.

---

**ಸಂಹಿತಾಪಾಠಃ**

ಸ ಹ ಶ್ರುತ ಇನ್ದ್ರೋ ನಾಮ ದೇವ ಊರ್ಧ್ವೋ ಭುವನ್ಮನುಷೇ ದಸ್ಮ-
तಮಃ । → ತಮಃ ।

ಅವ ಪ್ರಿಯಮರ್ಶಸಾನಸ್ಯ ಸಾಹ್ವಾಞ್ಛಿರೋ ಭರದ್ದಾಸಸ್ಯ ಸ್ವಧಾವಾನ್ ॥

**ಪದಪಾಠಃ**

ಸಃ । ಹ । ಶ್ರುತಃ । ಇನ್ದ್ರಃ । ನಾಮ । ದೇವಃ । ಊರ್ಧ್ವಃ । ಭುವತ್ । ಮನುಷೇ । ದಸ್ಮತಮಃ ।

ಅವ । ಪ್ರಿಯಂ । ಅರ್ಶಸಾನಸ್ಯ । ಸಹ್ವಾನ್ । ಶಿರಃ । ಭರತ್ । ದಾಸಸ್ಯ । ಸ್ವಧಾವಾನ್ ॥ ೬ ॥

ಸಾಯಣಭಾಷ್ಯಂ

ದೇವೋ ದ್ಯೋತಮಾನಃ ಶ್ರುತಃ ಕೀರ್ತಿಮಾನ್ ಅತ ಏವ ದಸ್ಮತಮಃ ಸರ್ವೈರತಿಶಯೇನ ದರ್ಶನೀಯಃ ಸ ಇಂದ್ರೋ ಮನುಷೇ ಮನೋರರ್ಥಮೂರ್ಧ್ವೋ ಭುವತ್ । ಕಾಮಪ್ರದಾನೇ ಪ್ರವೃತ್ತ ಉನ್ಮುಖೋ ಭವತು ॥ ನಾಮ ಪ್ರಸಿದ್ಧೌ । ಹೇತಿ ಪೂರಣಃ ॥ ತದುಚ್ಯತೇ ॥ ಸಾಹ್ವಾನ್ ಶತ್ರೂನಭಿಭವನ್ ಸ್ವಧಾವಾನ್ ಬಲವಾನಿಂದ್ರೋಽರ್ಶಸಾನಸ್ಯ ಲೋಕಂ ಬಾಧಮಾನಸ್ಯ ದಾಸಸ್ಯೈತನ್ನಾಮಕಸ್ಯಾಸುರಸ್ಯ ಪ್ರಿಯಂ ಶಿರೋಽವಭರತ್ । ಅಧಃ ಪಾತಯತು ॥ ಹರತೇರ್ಲೇಟ್ಯಡಾಗಮಃ । ಹೃಗ್ರಹೋರ್ಭಃ ॥

ಪ್ರತಿಪದಾರ್ಥ

ದೇವಃ— ಪ್ರಕಾಶಮಾನನೂ । ಶ್ರುತಃ— ಕೀರ್ತಿಶಾಲಿಯೂ । ದಸ್ಮತಮಃ— ಆಕರ್ಷಕವಾದ ರೂಪವುಳ್ಳವನೂ ಆದ । ಸಃ ಇಂದ್ರಃ ನಾಮ— ಅದೇ ಇಂದ್ರನೇ । ಮನುಷೇ— ಮಾನವನಿಗಾಗಿ । ಊರ್ಧ್ವಃ ಭುವತ್—(ಅವನ ಇಷ್ಟಸಿದ್ಧಿಗಾಗಿ) ಉದ್ಯುಕ್ತನಾಗಿರಲಿ । ಸಾಹ್ವಾನ್—ಶತ್ರುಗಳನ್ನು ಸೋಲಿಸುವವನೂ । ಸ್ವಧಾವಾನ್— ಬಲಶಾಲಿಯೂ ಆದ ಇಂದ್ರನು । ಅರ್ಶಸಾನಸ್ಯ— ಲೋಕವನ್ನು ಹಿಂಸಿಸುವ । ದಾಸಸ್ಯ— ದಾಸನೆಂಬ ಅಸುರನ । ಪ್ರಿಯಂ— ಪ್ರೀತಿಪಾತ್ರವಾದ । ಶಿರಃ— ಶಿರಸ್ಸನ್ನು । ಅವ ಭರತ್ —ಕೆಳಕ್ಕೆ ಬೀಳಿಸಲಿ

ಭಾವಾರ್ಥ

ಪ್ರಕಾಶಮಾನನೂ, ಕೀರ್ತಿಶಾಲಿಯೂ, ಆಕರ್ಷಕವಾದ ರೂಪವುಳ್ಳವನೂ ಆದ ಇಂದ್ರನು ಮಾನವನ ಇಷ್ಟಾರ್ಥವನ್ನು ಪೂರೈಸಲು ಊರ್ಧ್ವಮುಖವಾದ ಹಸ್ತದಿಂದ ಉದ್ಯುಕ್ತನಾಗಿರಲಿ. ಶತ್ರುಗಳನ್ನು ಸೋಲಿಸುವವನೂ, ಬಲಶಾಲಿಯೂ ಆದ ಇಂದ್ರನು ಲೋಕವನ್ನು ಹಿಂಸಿಸುವ ದಾಸನೆಂಬ ಅಸುರನ ಪ್ರಿಯವಾದ ಶಿರಸ್ಸನ್ನು ಕೆಳಕ್ಕೆ ಉರುಳಿಸಲಿ.

## English Translation

May the renowned and graceful Indra, who is verily divine, be present over men : may he, the vigorous conqueror of foes, cast down the precious head of the malignant Dasa.

ವಿಶೇಷವಿಷಯಗಳು

ನಾಮ—ನಾಮನ್ ಶಬ್ದವು ಉದಕನಾಮಗಳಲ್ಲಿ (ನಿ. ೨-೨೪) ಪಠಿತವಾಗಿದೆ. ಮತ್ತು ಪ್ರಹ್ವತ್ವ (ಬಗ್ಗುವುದು) ಎಂಬರ್ಥದಲ್ಲಿಯೂ ಅನೇಕ ಕಡೆ ಇದರ ಪ್ರಯೋಗವಿದೆ. ಇಲ್ಲಿ ಸಾಯಣರು ಪ್ರಸಿದ್ಧಾರ್ಥದಲ್ಲಿ ಪ್ರಯೋಗವಿದೆಯೆಂದು ಹೇಳಿರುವರು.

ದೇವ ಊರ್ಧ್ವೋ ಭುವತ್ ಮನುಷೇ— ಇಂದ್ರೋ ಮನುಷೇ ಮನೋರರ್ಥಮೂರ್ಧ್ವೋ ಭುವತ್। ಕಾಮಪ್ರದಾನೇ ಪ್ರವೃತ್ತ ಉನ್ಮುಖೋ ಭವತು॥ ಇಲ್ಲಿ ಮನುಷೇ ಎಂಬ ಶಬ್ದಕ್ಕೆ ಮಾನವನಿಗೆ ಅಥವಾ ಮನುಷ್ಯನ ಹಿತಾರ್ಥವಾಗಿ ಎಂದು ಅರ್ಥಮಾಡಬಹುದು. ಆ ಇಂದ್ರನು ಮನುಷ್ಯನ ಹಿತಕ್ಕಾಗಿ ಎಂದರೆ ಅವನಿಗೆ ಇಷ್ಟಾರ್ಥಗಳನ್ನು ಕೊಡುವುದಕ್ಕಾಗಿ ಪ್ರವೃತ್ತನಾದನು ಎಂದಭಿಪ್ರಾಯವು.

**ಅರ್ಶಸಾನಸ್ಯ ದಾಸಸ್ಯ ಶಿರಃ ಅವ ಭರತ್**—ಹಿಂಸಕನಾದ ದಾಸನೆಂಬ ಅಸುರನ ಶಿರಸ್ಸನ್ನು ಕತ್ತರಿಸಿ ಕೆಳಕ್ಕೆ ಬೀಳಿಸಿದನು. ಇಲ್ಲಿ ದಾಸಸ್ಯ ಎಂಬ ಶಬ್ದಕ್ಕೆ ದಾಸನೆಂಬ ಅಸುರನೆಂದೂ ಅಥವಾ ದಾಸರೆಂಬ ಈ ದೇಶದ ಪೂರ್ವನಿವಾಸಿಗಳಾದ ಕಪ್ಪುಜನರಲ್ಲಿ ಆರ್ಯರಿಗೆ ವಿಶೇಷವಾಗಿ ತೊಂದರೆಕೊಡುತ್ತಿದ್ದ ಒಬ್ಬ ದಸ್ಯುಜನರ ಮುಖಂಡನೆಂದೂ ಅರ್ಥಮಾಡಬಹುದು. ದಾಸ, ದಸ್ಯು ಎಂಬ ಜನರ ವಿಷಯವನ್ನು ನಾವು ಇದೇ ಭಾಗದ 580, 656 ನೇ ಪುಟದಲ್ಲಿ ಬರೆದಿರುವುದನ್ನು ನೋಡಿ.

**ಸ್ವಧಾವಾನ್**—ಬಲವಾನ್ । ಬಲಶಾಲಿಯಾದ ಇಂದ್ರನು. ಸ್ವಧಾ ಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪) ಅನ್ನನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಬಲನಾಮಗಳಲ್ಲಿ ಪಠಿತವಾಗಿಲ್ಲ. ಆದರೂ ಭಾಷ್ಯಕಾರರು ಸ್ವಧಾ ಶಬ್ದಕ್ಕೆ ಇಲ್ಲಿ ಬಲವೆಂಬ ಅರ್ಥವನ್ನು ಹೇಳಿದ್ದಾರೆ.

---

ಸಂಹಿತಾಪಾಠಃ

ಸ ವೃತ್ರಹೇನ್ದ್ರಃ ಕೃಷ್ಣಯೋನೀಃ ಪುರಂದರೋ ದಾಸೀರೈರಯದ್ವಿ ।

ಅಜನಯನ್ಮನವೇ ಕ್ಷಾಮಪಶ್ಚ ಸತ್ರಾಶಂಸಂ ಯಜಮಾನಸ್ಯ ತೂತೋತ್ ॥

ಪದಪಾಠಃ

ಸಃ । ವೃತ್ರಽಹಾ । ಇನ್ದ್ರಃ । ಕೃಷ್ಣಽಯೋನೀಃ । ಪುರಂಽದರಃ । ದಾಸೀಃ । ಐರಯತ್ । ವಿ ।

ಅಜನಯತ್ । ಮನವೇ । ಕ್ಷಾಂ । ಅಪಃ । ಚ । ಸತ್ರಾ । ಶಂಸಂ । ಯಜಮಾನಸ್ಯ । ತೂತೋತ್ ॥ ೭ ॥

ಸಾಯಣಭಾಷ್ಯಂ

ವೃತ್ರಹಾ ವೃತ್ರಸ್ಯ ಹಂತಾ ಪುರಂದರಃ ಶಂಬರಪುರಾಂ ದಾರಯಿತಾ ಸ ಇಂದ್ರಃ ಕೃಷ್ಣಯೋನೀರ್ನಿಕೃಷ್ಟಜಾತೀರ್ದಾಸೀರುಪಕ್ಷಪಯಿತ್ರೀರಾಸುರೀಃ ಸೇನಾ ವ್ಯೈರಯತ್ । ವ್ಯನುದತ್ । ಕಿಂಚ ಮನವೇ ಮನೋರರ್ಥಂ ಕ್ಷಾಂ ಪೃಥಿವೀಮಪ ಉದಕಾನಿ ಚಾಜನಯತ್ । ಯಜಮಾನಸ್ಯ ಸತ್ರಾ ಮಹಾಂತಂ ಶಂಸಮಭಿಲಾಷಂ ತೂತೋತ್ । ಕಾಮಪ್ರದಾನೇನ ಪೂರಯತು ॥ ತು ವೃದ್ಧಾವಿತಿ ಸೌತ್ರೋ ಧಾತುಃ । ಶಪಃ ಶ್ಲುಃ । ತುಜಾದಿತ್ವಾದ್ದೀರ್ಘಃ॥ ಯದ್ವಾ ಸತ್ರಾ ಮಹತ್ ಶಂಸಂ ಶಂಸನೀಯಂ ಶಸ್ತ್ರಂ ಕಾಮಪ್ರದಾನೇನ ವರ್ಧಯತು । ಯದ್ವಾ ಕೃಷ್ಣಯೋನೀಃ ಕೃಷ್ಣಾಖ್ಯೇನಾಸುರೇಣ ನಿಷಿಕ್ತರೇತಸ್ಕಾ ದಾಸೀರ್ಭಾರ್ಯಾ ವ್ಯೈರಯತ್ । ವ್ಯನುದತ್ । ತಥಾ ಮಂತ್ರಃ । ಯಃ ಕೃಷ್ಣಗರ್ಭಾ ನಿರಹನ್ನೃಜಿಶ್ವನಾ । ೧-೧೦೧-೧ ।ಇತಿ॥

ಪ್ರತಿಪದಾರ್ಥ

ವೃತ್ರಹಾ—ವೃತ್ರಹಂತಕನೂ । ಪುರಂದರಃ—ಶತ್ರುಪಟ್ಟಣಗಳ ನಾಶಕನೂ ಆದ । ಸಃ ಇಂದ್ರಃ—ಇಂದ್ರನು । ಕೃಷ್ಣಯೋನೀಃ—ನಿಕೃಷ್ಟವಾದ ಜಾತಿಗೆ ಸೇರಿದ । ದಾಸೀಃ—ಆಸುರೀ ಸೇನೆಯನ್ನು । ವಿ ಐರ-

**ಯತ್**—ಅಟ್ಟಿಸಿ ದೂರಕ್ಕೆ ಓಡಿಸಿದನು । **ಮನವೇ**—ಮನುವಿಗಾಗಿ । **ಕ್ಷಾಂ**—ಪೃಥಿವಿಯನ್ನೂ । **ಅಪಃ ಚ**—ಉದಕಗಳನ್ನೂ ಕೂಡ । **ಅಜನಯತ್**—ಸೃಷ್ಟಿಸಿದನು । **ಯಜಮಾನಸ್ಯ**—ಯಜ್ಞಕರ್ತನ । **ಸತ್ರಾ**—ಮಹತ್ತಾದ । **ಶಂಸಂ**—ಅಭಿಲಾಷೆಯನ್ನು । **ತೂತೋತ್**—ಪೂರ್ಣಮಾಡಲಿ.

ಭಾವಾರ್ಥ

ವೃತ್ರಹಂತಕನೂ ಶತ್ರುಪಟ್ಟಣಗಳ ನಾಶಕನೂ ಆದ ಇಂದ್ರನು ನಿಕೃಷ್ಟವಾದ ಜಾತಿಗೆ ಸೇರಿದ ಆಸುರೀ ಸೇನೆಯನ್ನು ಅಟ್ಟಿಸಿ ದೂರಕ್ಕೆ ಓಡಿಸಿದನು. ಮನುವಿಗಾಗಿ ಪೃಥಿವಿಯನ್ನೂ, ಉದಕಗಳನ್ನೂ ಸೃಷ್ಟಿಸಿದನು. (ಇಂತಹ ಇಂದ್ರನು) ಯಜ್ಞಕರ್ತನ ಮಹತ್ತಾದ ಅಭಿಲಾಷೆಯನ್ನು ಪೂರ್ಣಮಾಡಲಿ.

## English Translation

Indra, the slayer of Vritra, the destroyer of cities, has scattered the black-sprung servile (hosts): He engendered the earth and the waters for Manu: may he fulfil the entire prayer of the sacrificer.

ವಿಶೇಷವಿಷಯಗಳು

**ಕೃಷ್ಣಯೋನೀಃ ದಾಸೀಃ**—**ಕೃಷ್ಣಯೋನೀರ್ನಿಕೃಷ್ಟಜಾತೀರ್ದಾಸೀರುಪಕ್ಷಪಯಿತ್ರೀರಾಸುರೀಃ ಸೇನಾ ವ್ಯೈರಯತ್ ವ್ಯನುದತ್** । ಈ ದೇಶದ ಪೂರ್ವನಿವಾಸಿಗಳಾದ ಕಪ್ಪುಜನರಿಗೆ ದಾಸರೆಂದು ಕರೆಯುತ್ತಿದ್ದರು. ಅಂತಹ ಕಪ್ಪುಜನರಿಂದ ಉತ್ಪನ್ನರಾದವರಿಗೆ ಕೃಷ್ಣಯೋನಿಗಳೆಂದು ಹೆಸರು. ಇವರು ಯಾವಾಗಲೂ ಆರ್ಯಜನರಿಗೂ ಋಷಿಗಳಿಗೂ ವಿರೋಧಿಗಳಾಗಿ ಅವರ ಯಜ್ಞಯಾಗಾದಿಗಳಿಗೆ ತೊಂದರೆಯನ್ನುಂಟುಮಾಡುತ್ತಿದ್ದರು. ಆರ್ಯರಿಗೂ ಇವರಿಗೂ ಪದೇಪದೇ ಯುದ್ಧವಾಗುತ್ತಿತ್ತು. ಇಂತಹ ಸಂದರ್ಭದಲ್ಲಿ ಇಂದ್ರನು ಆರ್ಯರಿಗೂ ಮತ್ತು ಋಷಿಗಳಿಗೂ ಸಹಾಯಮಾಡುವುದಕ್ಕಾಗಿ ಈ ಕಪ್ಪುಜನರ ಸೇನೆಗಳನ್ನು ಸೋಲಿಸಿ ದೂರಕ್ಕೆ ಓಡಿಸಿದನು ಎಂದು ಇಲ್ಲಿ ಹೇಳಲಾಗಿದೆ. ಅಥವಾ ಕೃಷ್ಣನೆಂಬ ಒಬ್ಬ ಅಸುರನ ಎಂದರೆ ಕಪ್ಪುಜನರ ಮುಖಂಡನಾದ ಒಬ್ಬ ಅಸುರನ ಪತ್ನಿಯರ ಗರ್ಭವನ್ನು ನಾಶಮಾಡಿದನೆಂದೂ ಇನ್ನೊಂದು ವಿಧವಾದ ಅರ್ಥವನ್ನು ಹೇಳಿರುವರು. ಈ ವಿಷಯವು ಹಿಂದೆ—

**ಪ್ರ ಮಂದಿನೇ ಪಿತುಮದರ್ಚತಾ ವಚೋ ಯಃ ಕೃಷ್ಣಗರ್ಭಾ ನಿರಹನ್ನೃಜಿಶ್ವನಾ ।**
**ಅವಸ್ಯವೋ ವೃಷಣಂ ವಜ್ರದಕ್ಷಿಣಂ ಮರುತ್ವಂತಂ ಸಖ್ಯಾಯ ಹವಾಮಹೇ ॥**

(ಋ. ಸಂ ೧-೧೦೧-೧)

ಎಂಬ ಋಕ್ಕಿನಲ್ಲಿಯೂ ಹೇಳಲಾಗಿದೆ. ಈ ವಿಷಯವನ್ನು ನಾವು ಭಾಗ ೮ ಪುಟ 269-270 ರಲ್ಲಿ ವಿವರಿಸಿದ್ದೇವೆ.

**ಸತ್ರಾ**—**ಸತ್ರಾ** ಎಂಬ ಶಬ್ದವು ಸತ್ಯನಾಮಗಳಲ್ಲಿ ಪಠಿತವಾಗಿದೆ (ನಿ ೩-೧೩)- ಇಲ್ಲಿ ಭಾಷ್ಯಕಾರರು **ಮಹತ್**—ದೊಡ್ಡದಾದ ಎಂದು ಅರ್ಥವಿವರಣೆ ಮಾಡಿರುವರು.

**ಮನವೇ ಕ್ಷಾಂ ಅಪಃ ಚ ಅಜನಯತ್**—ಆ ಇಂದ್ರನು ಮನುವಿಗಾಗಿ ಭೂಮಿಯನ್ನೂ, ಉದಕವನ್ನೂ ಸೃಷ್ಟಿಸಿದನು. ಇಲ್ಲಿ ಮನುವಿಗಾಗಿ ಎಂದರೆ ಮನುವಿನ ವಂಶಸ್ಥರಾದ ಮಾನವರಿಗೆ, ಮನುಷ್ಯರಿಗೆ ಎಂದಭಿಪ್ರಾಯವು.

ಸತ್ರಾ ಶಂಸಂ ಯಜಮಾನಸ್ಯ ತೂತೋತ್—ಈ ವಾಕ್ಯಕ್ಕೆ ಸಾಯಣರು ಎರಡುವಿಧವಾದ ಅರ್ಥವನ್ನು ಹೇಳಿರುವರು. ಯಜಮಾನಸ್ಯ ಮಹಾಂತಂ ಅಭಿಲಾಷಂ ಕಾಮಪ್ರದಾನೇನ ಪೂರಯೆತು—ಯಜ್ಞಮಾಡುವ ಯಜಮಾನನ ಮಹತ್ತಾದ ಅಭಿಲಾಷೆಯನ್ನೂ ಇಷ್ಟಾರ್ಥಗಳನ್ನೂ ಕೊಡುವುದರಿಂದ ಇಂದ್ರನು ಪೂರ್ಣಮಾಡಲಿ ಎಂದು ಒಂದು ವಿಧವಾದ ಅರ್ಥವನ್ನೂ, ಯದ್ವಾ ಸತ್ರಾ ಮಹತ್ ಶಂಸಂ ಶಂಸನೀಯಂ ಶಸ್ತ್ರಂ ಕಾಮಪ್ರದಾನೇನ ವರ್ಧಯೇತ್—ಅಥವಾ ಮಹತ್ತಾದ ಶಸ್ತ್ರಮಂತ್ರಗಳನ್ನು ಪಠಿಸಿ, ಸ್ತೋತ್ರಮಾಡುತ್ತಿರುವ ಯಜಮಾನನಿಗೆ ಇಷ್ಟಾರ್ಥಗಳನ್ನು ಕೊಟ್ಟು ಪೂರಯಿಸಲಿ ಎಂದು ಇನ್ನೊಂದು ವಿಧವಾದ ಅರ್ಥವನ್ನು ಹೇಳಿರುವರು.

---

ಸಂಹಿತಾಪಾಠಃ

ತಸ್ಮೈ ತವಸ್ಯಮನು ದಾಯಿ ಸತ್ರೇಂದ್ರಾಯ ದೇವೇಭಿರರ್ಣಸಾತೌ ।
ಪ್ರತಿ ಯದಸ್ಯ ವಜ್ರಂ ಬಾಹ್ವೋರ್ಧುರ್ಹತ್ವೀ ದಸ್ಯೂನ್ಪುರ ಆಯಸೀರ್ನಿ ತಾರೀತ್ ॥ ೮ ॥

ಪದಪಾಠಃ

ತಸ್ಮೈ । ತವಸ್ಯಂ । ಅನು । ದಾಯಿ । ಸತ್ರಾ । ಇಂದ್ರಾಯ । ದೇವೇಭಿಃ । ಅರ್ಣಽಸಾತೌ ।
ಪ್ರತಿ । ಯತ್ । ಅಸ್ಯ । ವಜ್ರಂ । ಬಾಹ್ವೋಃ । ಧುಃ । ಹತ್ವೀ । ದಸ್ಯೂನ್ । ಪುರಃ । ಆಯಸೀಃ । ನಿ । ತಾರೀತ್ ॥ ೮ ॥

ಸಾಯಣಭಾಷ್ಯಂ

ದೇವೇಭಿರ್ದೇವನಶೀಲೈಃ ಸ್ತೋತೃಭಿರರ್ಣಸಾತಾವುದಕಲಾಭೇ ನಿಮಿತ್ತೇ ತಸ್ಮಾ ಇಂದ್ರಾಯ ತವಸ್ಯಂ ತವಸೇ ಬಲಾಯ ಹಿತಂ ಬಲವರ್ಧನಂ ಹವಿಃ ಸತ್ರಾ ಸಂತತಂ ಸರ್ವೇಷ್ವಹಃಸು ಅನು ಅನುಕ್ರಮೇಣ ಸವನತ್ರಯೇ ದಾಯಿ । ಅದಾಯಿ । ಯದ್ವಾ ತವಸ್ಯಂ । ಯದ್ಬಲಂ ಪ್ರವೃದ್ಧಾಯ ದೀಯತೇ ತತ್ತವಸ್ಯಂ । ದೇವೇಭಿರ್ದೇವೈರುದಕಭಜನೇಽನುಕ್ರಮೇಣ ತದ್ಬಲಂ ತಸ್ಮಾ ಇಂದ್ರಾಯಾದಾಯಿ । ತಥಾ ಮಂತ್ರಃ । ಅನು ತೇ ದಾಯಿ ಮಹ ಇಂದ್ರಿಯಾಯೇತಿ । ಯದ್ಯದಾಸ್ಯೇಂದ್ರಸ್ಯ ಬಾಹ್ವೋರ್ವಜ್ರಂ ಪ್ರತಿ ಧುಃ । ಸ್ತೋತಾರೋಽಸುರವಧಸೂಚಕೇನ ಸ್ತೋತ್ರೇಣ ಪ್ರತಿನಿದಧುಃ । ಸ್ತೂಯಮಾನೋ ಹೀಂದ್ರೋ ದಸ್ಯುವಧಾರ್ಥಂ ವಜ್ರಮಾದತ್ತೇ ॥ ದಧುಃ । ದಧಾತೇರ್ಲುಙಿ ಗಾತಿಸ್ಥೇತಿ ಸಿಚೋ ಲುಕ್ । ಆತ ಇತಿ ಝೇರ್ಜುಸ್ ॥ ತತಸ್ತೇನ ವಜ್ರೇಣ ದಸ್ಯೂನಸುರಾನ್ ಹತ್ವೀ ಹತ್ವಾ ತದೀಯಾ ಆಯಸೀರಯೋಮಯೀಃ ಪುರೋ ನಿತಾರೀತ್ । ನಿತರಾಮನಾಶಯೇತ್ ॥

ಪ್ರತಿಪದಾರ್ಥ

**ದೇವೇಭಿಃ**—ದೇವಪೂಜಕರಾದ ಸ್ತೋತೃಗಳಿಂದ । **ಅರ್ಣಸಾತೌ**—ಉದಕದ ಲಾಭಕ್ಕಾಗಿ । **ತಸ್ಮೈ ಇಂದ್ರಾಯ**—ಆ ಇಂದ್ರನನ್ನುದ್ದೇಶಿಸಿ । **ತವಸ್ಯಂ**—ಬಲವರ್ಧಕವಾದ ಹವಿಸ್ಸು । **ಸತ್ರಾ ಅನು**—ಮೂರು ಸವನ ಕಾಲಗಳಲ್ಲಿಯೂ ಕ್ರಮವಾಗಿ । **ದಾಯಿ**—ಅರ್ಪಿಸಲ್ಪಟ್ಟಿತು । **ಯತ್**—ಯಾವಾಗ । **ಅಸ್ಯ**—ಇಂದ್ರನ । **ಬಾಹ್ವೋಃ**—ಬಾಹುಗಳಲ್ಲಿ । **ವಜ್ರಂ**—ವಜ್ರಾಯುಧವು । **ಪ್ರತಿ ಧುಃ**—ಇಡಲ್ಪಟ್ಟಿತೋ ಆಗ (ಇಂದ್ರನು ಆ ವಜ್ರದಿಂದ) **ದಸ್ಯೂನ್**—ಅಸುರರನ್ನು । **ಹತ್ವೀ**—ಕೊಂದು । **ಆಯಸೀಃ**—ಉಕ್ಕಿನಿಂದ ಮಾಡಿದ । **ಪುರಃ**—ಅವರ ಪಟ್ಟಣಗಳನ್ನು । **ನಿ ತಾರೀತ್**—ಪೂರ್ಣವಾಗಿ ನಾಶಮಾಡಿದನು.

ಭಾವಾರ್ಥ

ದೇವಪೂಜಕರಾದ ಸ್ತೋತೃಗಳು ಉದಕದ ಲಾಭಕ್ಕಾಗಿ ಆ ಇಂದ್ರನನ್ನುದ್ದೇಶಿಸಿ ಬಲವರ್ಧಕವಾದ ಹವಿಸ್ಸನ್ನು ಮೂರು ಸವನಕಾಲಗಳಲ್ಲೂ ಅರ್ಪಿಸಿದರು. ಯಾವಾಗ ಅವರು ಇಂದ್ರನ ಬಾಹುಗಳಲ್ಲಿ ವಜ್ರಾಯುಧವನ್ನು ಇಟ್ಟರೋ ಆ ಒಡನೆಯೇ ಅವನು ಆ ವಜ್ರದಿಂದ ಅಸುರರನ್ನು ಕೊಂದು ಉಕ್ಕಿನಿಂದ ಮಾಡಿದ ಅವರ ಪಟ್ಟಣಗಳನ್ನು ಪೂರ್ಣವಾಗಿ ನಾಶಮಾಡಿದನು.

English Translation

Vigour has been perpetually imparted to Indra by his worshippers (with oblations), for the sake of obtaining rain: for which purpose they have placed the thunderbolt in his hands, wherewith, having slain the Dasyus, he has destroyed their iron cities-

ವಿಶೇಷವಿಷಯಗಳು

**ಅರ್ಣಸಾತೌ—ಉದಕಲಾಭೇ ನಿಮಿತ್ತೇ** । ವೃಷ್ಟಿರೂಪವಾದ ಉದಕಪ್ರಾಪ್ತಿಗಾಗಿ ; ಅರ್ಣಶಬ್ದವು ಉದಕನಾಮಗಳಲ್ಲಿ ಪಠಿತವಾಗಿದೆ (ನಿ. ೨-೨೪). **ಋ ಗತೌ** ಎಂಬ ಗತ್ಯರ್ಥಧಾತುವಿನಿಂದ ನಿಷ್ಪನ್ನವಾದ ಅರ್ಣ ಶಬ್ದಕ್ಕೆ—**ಅರ್ಯತೇ ತತ್ಪ್ರಾಣಿಭಿಃ**—ಸಕಲಪ್ರಾಣಿಗಳೂ ಇದನ್ನು (ಉದಕವನ್ನು) ಅಪೇಕ್ಷಿಸುವುದರಿಂದ ಅರ್ಣವೆಂದರೆ ಉದಕವೆಂದೂ, **ಋಚ್ಛತಿ ಗಚ್ಛತಿ ನಿಮ್ನಪ್ರದೇಶಮಿತಿ ವಾ**—ಅಥವಾ ಎತ್ತರ ಪ್ರದೇಶದಿಂದ ತಗ್ಗಾದ ಪ್ರದೇಶಕ್ಕೆ ಹರಿದುಹೋಗುವುದರಿಂದ ಅರ್ಣಕ್ಕೆ ಉದಕವೆಂದೂ, **ಅಥವಾ ಋಣಾತಿ ಗಚ್ಛತಿ ದಿವೋ ಭೂಮಿಂ ವೃಷಮಾಣಂ**—ಎಂದರೆ ಅಂತರಿಕ್ಷದಿಂದ ಭೂಮಿಗೆ ವೃಷ್ಟಿರೂಪದಲ್ಲಿ ಬೀಳುವುದರಿಂದ ಅರ್ಣಕ್ಕೆ ಉದಕವೆಂದೂ ಅವಯವಾರ್ಥಗಳಿರುವವು.

**ತವಸ್ಯಂ—ತವಸೇ ಬಲಾಯ ಹಿತಂ ಬಲವರ್ಧನಂ** । ತವಃಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ (ನಿ. ೩-೯). ತವಸ್ಯಂ ಎಂದರೆ ಬಲವರ್ಧಕವಾದ (ಹವಿಸ್ಸು) ಎಂದರ್ಥವು.

**ಸತ್ರಾ ಅನು—ಸಂತತಂ ಸರ್ವೇಷ್ವಹಸ್ಸುಅನುಕ್ರಮೇಣ ಸವನತ್ರಯೇ** । ಇಲ್ಲಿ ಸತ್ರಾ ಎಂಬ ಶಬ್ದಕ್ಕೆ ಯಾವಾಗಲೂ ಎಂದೂ ಅರ್ಥಮಾಡಿ ಅನು ಎಂದರೆ ಅನುಕ್ರಮವಾಗಿ ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯ ಸವನಗಳೆಂಬ ಮೂರು ಸವನಗಳಲ್ಲಿಯೂ ಎಂಬರ್ಥವನ್ನು ವಿವರಿಸಿದ್ದಾರೆ.

**ತಸ್ಮೈ ಇಂದ್ರಾಯ ದೇವೇಭಿಃ ತವಸ್ಯಂ ಅರ್ಣಸಾತೌ ದಾಯಿ**—ಈ ವಾಕ್ಯಕ್ಕೆ ಭಾಷ್ಯಕಾರರು ಎರಡು ವಿಧವಾದ ಅರ್ಥಗಳನ್ನು ಹೇಳಿರುವರು. **ದೇವೇಭಿರ್ದೇವನಶೀಲೈಃ ಸ್ತೋತೃಭಿಃ ಅರ್ಣಸಾತಾವುದಕಲಾಭೇ ನಿಮಿತ್ತೇ ತಸ್ಮಾ ಇಂದ್ರಾಯ ತವಸ್ಯಂ ತವಸೇ ಬಲಾಯ ಹಿತಂ ಬಲವರ್ಧನಂ ಹವಿಃ ಅದಾಯಿ**—ಪ್ರಕಾಶ ಮಾನರಾದ ಸ್ತೋತೃಜನರಿಂದ ವೃಷ್ಟಿರೂಪವಾದ ಉದಕಪ್ರಾಪ್ತಿಗಾಗಿ ಬಲವರ್ಧಕವಾದ ಹವಿಸ್ಸು ಇಂದ್ರನಿಗೆ ಅರ್ಪಿಸ ಲ್ಪಟ್ಟಿತು ಎಂದು ಒಂದು ವಿಧವಾದ ಅರ್ಥವು ; **ಯದ್ವಾ ತವಸ್ಯಂ ಯದ್ಬಲಂ ಪ್ರವೃದ್ಧಾಯ ದೀಯತೇ ತತ್ತ್ವಸ್ಯಂ । ದೇವೇಭಿರ್ದೇವೈರುದಕಭಜನೇಽನುಕ್ರಮೇಣ ತದ್ಬಲಂ ತಸ್ಮಾ ಇಂದ್ರಾಯೋದಾಯಿ ।** ಅಥವಾ ವೃಷ್ಟಿರೂಪವಾದ ಉದಕಪ್ರಾಪ್ತಿಗಾಗಿ ದೇವತೆಗಳಿಂದ ವೃದ್ಧಿಕಾರಕವಾದ ಬಲವು ಇಂದ್ರನಿಗೆ ಕೊಡಲ್ಪಟ್ಟಿತು ಎಂದರೆ ದೇವತೆಗಳು ಇಂದ್ರನಿಗೆ ಬಲವನ್ನು ಕೊಟ್ಟರು. ಆ ಬಲದಿಂದ ಪ್ರವೃದ್ಧಮಾನನಾದ ಇಂದ್ರನು ವೃತ್ರನನ್ನು ಸಂಹರಿಸಿ ವೃಷ್ಟಿರೂಪವಾದ ಉದಕಗಳನ್ನು ಭೂಮಿಯಮೇಲೆ ಸುರಿಸಿದನು ಎಂದು ಇನ್ನೊಂದು ವಿಧವಾದ ಅರ್ಥವು. ಈ ಅರ್ಥ ಸಮರ್ಥನೆಗಾಗಿ ಭಾಷ್ಯಕಾರರು—

**ಅನು ತೇ ದಾಯಿ ಮಹ ಇಂದ್ರಿಯಾಯ ಸತ್ರಾ ತೇ ವಿಶ್ವಮನು ವೃತ್ರಹತ್ಯೇ ।**
**ಅನು ಕ್ಷತ್ರಮನು ಸಹೋ ಯಜತ್ರೇಂದ್ರ ದೇವೇಭಿರನು ತೇ ನೃಷಹ್ಯೇ ॥**

**(ಋ. ಸಂ. ೬-೨೫-೮)**

ಎಂಬ ಋಕ್ಕನ್ನು ಉದಾಹರಿಸಿರುವರು. ಎಲೈ ಇಂದ್ರನೇ, ವೃತ್ರಹನನಾರ್ಥವಾಗಿ ದೇವತೆಗಳು ನಿನಗೆ ವೃದ್ಧಿಕಾರಕ ವಾದ ಮಹದ್ಬಲವನ್ನು ಕೊಟ್ಟರು ಎಂದು ಮುಖ್ಯಾಭಿಪ್ರಾಯವು.

**ದಸ್ಯೂನ್ ಹತ್ವೀ ಪುರಃ ಆಯಸೀಃ ನಿ ತಾರೀತ್**—ವಜ್ರಧಾರಿಯಾದ ಇಂದ್ರನು ದಸ್ಯುಜನರನ್ನು ಕೊಂದು ಉಕ್ಕಿನಿಂದ ನಿರ್ಮಿತವಾದ ಅವರ ಪಟ್ಟಣಗಳನ್ನು ಪೂರ್ಣವಾಗಿ ನಾಶಮಾಡಿದನು. ಇಲ್ಲಿ ದಸ್ಯುಜನರ ಎಂದರೆ ಅಸುರರಿರಬಹುದು. ಅವರ ಉಕ್ಕಿನ (ಕಬ್ಬಿಣದ) ನಗರಗಳ ವಿಷಯವಾಗಿ ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ ಒಂದು ಕಥೆಯಿದೆ. ಆದರೆ ಆ ಪಟ್ಟಣಗಳನ್ನು ರುದ್ರನು ನಾಶಮಾಡಿದನೆಂದು ಅಲ್ಲಿ ಹೇಳಿದೆ—

**ತೇಷಾಮಸುರಾಣಾಂ ತಿಸ್ರಃಪುರ ಆಸನ್ನಯಸ್ಮಯ್ಯವಮಾಥರಜತಾಥ ಹರಿಣೀ ತಾ ದೇವಾ ಜೇತುಂ ನಾಶಕ್ನುವನ್**

**(ತೈ. ಸಂ. ೬-೨-೩-೧).**

ಅಸುರರಿಗೆ ಮೂರು ಮುಖ್ಯಪಟ್ಟಣಗಳಿದ್ದವು. ಅವು ಕ್ರಮವಾಗಿ ಕಬ್ಬಿಣ, ಬೆಳ್ಳಿ, ಚಿನ್ನ ಇವುಗಳಿಂದ ನಿರ್ಮಿತ ವಾಗಿದ್ದವು. ಅವುಗಳನ್ನು ಜಯಿಸಲು ದೇವತೆಗಳಿಗೆ ಸಾಧ್ಯವಾಗಲಿಲ್ಲ ಎಂದು ಹೇಳಿದೆ. ಆದರೆ ಈ ವಿಷಯವೇ ಬೇರೆ, ಇಂದ್ರನು ನಾಶಮಾಡಿದ ಅಸುರ ನಗರಗಳೇ ಬೇರೆ ಎಂದು ತಿಳಿಯಬೇಕು. ಕವ್ಯುಜನರ ಅಥವಾ ಅಸುರರ ಪಟ್ಟಣಗಳು ಬಹಳ ಬಲವಾದ ಕೋಟೆಗಳಿಂದ ರಕ್ಷಿಸಲ್ಪಡುತ್ತಿದ್ದುದರಿಂದ ಕಬ್ಬಿಣದಿಂದ ನಿರ್ಮಿತವಾದ ಪಟ್ಟಣ ಗಳನ್ನು ಎಂದು ವರ್ಣನೆಯಿರಬಹುದು.

---

ಸಂಹಿತಾಪಾಠಃ

ನೂನಂ ಸಾ ತೇ ಪ್ರತಿ ವರಂ ಜರಿತ್ರೇ ದುಹೀಯದಿಂದ್ರ ದಕ್ಷಿಣಾ ಮಘೋನೀ ।
ಶಿಕ್ಷಾ ಸ್ತೋತೃಭ್ಯೋ ಮಾತಿ ಧಗ್ಭಗೋ ನೋ ಬೃಹದ್ವದೇಮ ವಿದಥೇ ಸುವೀರಾಃ ॥ ೯ ॥

ಪದಪಾಠಃ

ನೂನಂ । ಸಾ । ತೇ । ಪ್ರತಿ । ವರಂ । ಜರಿತ್ರೇ । ದುಹೀಯತ್ । ಇಂದ್ರ । ದಕ್ಷಿಣಾ । ಮಘೋನೀ ।
ಶಿಕ್ಷ । ಸ್ತೋತೃಽಭ್ಯಃ । ಮಾ । ಅತಿ । ಧಕ್ । ಭಗಃ । ನಃ । ಬೃಹತ್ । ವದೇಮ । ವಿದಥೇ। ಸುವೀರಾಃ ॥

ಸಾಯಣಭಾಷ್ಯಂ

ಅಹರ್ಗಣೇಷು ಮಾಧ್ಯಂದಿನಸವನೇಷು ತಾಯಮಾನರೂಪೇಷ್ವಚ್ಛಾವಾಕಸ್ಯಾಹರಹಃ ಶಸ್ಯ-ಸಂಜ್ಞಕಮಭಿತಷ್ಟೇವೇತಿ ಸೂಕ್ತಂ । ನೂನಂ ಸಾ ತ ಇತ್ಯೇಷಾ ತಸ್ಯಾಂತೇ ಶಂಸನೀಯಾ । ಸೂತ್ರಿತಂ ಚ । ನೂನಂ ಸಾ ತ ಇತ್ಯಂತಮುತ್ತಮಂ । ಆ. ೭-೪ । ಇತಿ ॥

ಹೇ ಇಂದ್ರ ಯಾ ದಕ್ಷಿಣಾ ದಕ್ಷಮುತ್ಸಾಹನಂ ಕರೋತೀತಿ ದಕ್ಷಿಣಾ ಸ್ತೋತೃಭ್ಯೋ ದೇಯಾ ತೇ ತ್ವತ್ಸಂಬಂಧಿನೀ ಮಘೋನೀ ಧನವತೀ ಜರಿತ್ರೇ ಸ್ತೋತ್ರೇ ವರಂ ಶ್ರೇಷ್ಠಮಭಿಮತಮರ್ಥಂ ನೂನಂ ಪ್ರತಿದುಹೀಯತ್ । ಇದಾನೀಂ ಪ್ರತಿದೋಗ್ಧಿ । ಸಂಪಾದಯತೀತ್ಯರ್ಥಃ । ತಾದೃಶೀಂ ದಕ್ಷಿಣಾಂ ಸ್ತೋತೃ-ಭ್ಯೋಽಸ್ಮಭ್ಯಂ ಶಿಕ್ಷ । ಪ್ರಯಚ್ಛ । ಕಿಂಚ ಭಗೋ ಭಜನೀಯಸ್ತ್ವಂ ಮಾತಿ ಧಕ್ ॥ ದಹೇರ್ದಾನಾರ್ಥಸ್ಯ ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ ॥ ನೋಽಸ್ಮಾನತಿಕ್ರಮ್ಯಾನ್ಯೇಭ್ಯೋ ದಕ್ಷಿಣಾಂ ಮಾ ದಾಃ । ಪ್ರಥಮಮಸ್ಮಭ್ಯಂ ದತ್ತ್ವಾ ಪಶ್ಚಾದನ್ಯೇಭ್ಯೋ ದೀಯತಾಮಿತ್ಯರ್ಥಃ। ಯದ್ವಾ ನೋಽಸ್ಮಾಕಂ ಕಾಮಾನ್ ಮಾ ಧಕ್ । ಮಾ ಧಾಕ್ಷೀಃ । ಅಪೇಕ್ಷಿತಫಲದಾನೇನ ಪೂರಯೇತ್ಯರ್ಥಃ । ಸುವೀರಾಃ ಶೋಭನಪುತ್ರ-ಪೌತ್ರಾಃ ಸಂತೋ ವಯಂ ವಿದಥೇಽಸ್ಮಿನ್ಯಜ್ಞೇ ಬೃಹತ್ ಪ್ರಭೂತಂ ಸ್ತೋತ್ರಂ ವದೇಮ । ತ್ವಾಮುದ್ದಿಶ್ಯ ಬ್ರವಾಮ ॥ ಅತ್ರ ಸಾ ತೇ ಪ್ರತಿದುಗ್ಧಾಮಿತಿ ಪ್ರಕೃತ್ಯ ವೀರೋ ವೀರಯತ್ಯಮಿತ್ರಾನ್ ವೇತೇರ್ವಾ ಸ್ಯಾದ್ಗತಿಕರ್ಮಣೋ ವೀರಯತೇರ್ವೇತ್ಯಂತಂ ನಿರುಕ್ತಮನುಸಂಧೇಯಂ । ನಿ. ೧-೭ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ತೇ—ನಿನ್ನಿಂದ ದತ್ತವಾಗತಕ್ಕದ್ದೂ । ಮಘೋನೀ—ಪ್ರಭೂತವಾದ ಸಂಪತ್ತುಳ್ಳದ್ದೂ ಆದ । ಸಾ ದಕ್ಷಿಣಾ—ಆ ದಕ್ಷಿಣೆಯು । ಜರಿತ್ರೇ—ಸ್ತುತಿಕರ್ತನಾದ ಯಜಮಾನನಿಗೆ । ನೂನಂ-

ಖಂಡಿತವಾಗಿಯೂ | **ವರಂ**—ಶ್ರೇಷ್ಠವಾಗಿ | **ಪ್ರತಿ ದುಹೀಯತ್**—ಇಷ್ಟಾರ್ಥವನ್ನು ಪೂರೈಸುತ್ತದೆ (ಅಂತಹ ದಕ್ಷಿಣೆಯನ್ನು) | **ಸ್ತೋತೃಭ್ಯಃ**—ಸ್ತುತಿಕರ್ತರಾದ ನಮಗೂ ಸಹ | **ಶಿಕ್ಷ**—ಕೊಡು | **ಭಗಃ**—ಪೂಜ್ಯನಾದ ನೀನು| **ನಃ**—ನಮ್ಮನ್ನು | **ಮಾತಿ ಧಕ್**—ತಿರಸ್ಕರಿಸಬೇಡ | **ಸುವೀರಾಃ**—ಶ್ರೇಷ್ಠರಾದ ವೀರಪುತ್ರರಿಂದೊಡಗೂಡಿದ ನಾವು | **ವಿದಥೇ**—ಈ ಯಜ್ಞದಲ್ಲಿ | **ಬೃಹತ್**—ಪ್ರಭೂತವಾದ ಸ್ತೋತ್ರವನ್ನು | **ವದೇಮ**—ಪಠಿಸುತ್ತೇವೆ.

ಭಾವಾರ್ಥ

ಎಲೈ ಇಂದ್ರನೇ, ನಿನ್ನಿಂದ ದತ್ತವಾಗತಕ್ಕದ್ದೂ, ಪ್ರಭೂತವಾದ ಸಂಪತ್ತುಳ್ಳದ್ದೂ ಆದ ಆ ದಕ್ಷಿಣೆಯು ಸ್ತುತಿಕರ್ತನಾದ ಯಜಮಾನನಿಗೆ ಖಂಡಿತವಾಗಿಯೂ ಇಷ್ಟಾರ್ಥವನ್ನು ಶ್ರೇಷ್ಠವಾದ ರೀತಿಯಲ್ಲಿ ಪೂರೈಸುತ್ತದೆ. ಅಂತಹ ದಕ್ಷಿಣೆಯನ್ನು ಸ್ತುತಿಕರ್ತರಾದ ನಮಗೂ ಕೊಡು. ಪೂಜ್ಯನಾದ ನೀನು ನಮ್ಮನ್ನು ತಿರಸ್ಕರಿಸಬೇಡ. ಶ್ರೇಷ್ಠರಾದ ಪುತ್ರರಿಂದೊಡಗೂಡಿದ ನಾವು ಈ ಯಜ್ಞದಲ್ಲಿ ಪ್ರಭೂತವಾದ ಸ್ತೋತ್ರವನ್ನು ಪಠಿಸುತ್ತೇವೆ.

English Translation

That opulent donation which proceeds, Indra, from you, assuredly bestows upon him who praises you the boon (that he desires): grant it to (us) your adorers: do not you, who are the object of adoration, disregard our prayers; so that, blessed with worthy descendants, we may glorify you in this sacrifice.

ವಿಶೇಷವಿಷಯಗಳು

ಈ ಋಕ್ಕು ಹಿಂದೆ ಋ. ಸಂ. ೨-೧೧-೨೧ ರಲ್ಲಿ ಪಠಿತವಾಗಿರುವುದರಿಂದ ಇದರ ವಿಶೇಷವಿಷಯಗಳನ್ನು ಅಲ್ಲಿ ಎಂದರೆ ಇದೇ ಭಾಗದ 638-640 ನೇ ಪುಟದಲ್ಲಿ ವಿಸ್ತಾರವಾಗಿ ಬರೆದಿರುವುದನ್ನು ನೋಡಿ ತಿಳಿದುಕೊಳ್ಳಬಹುದು.

---

## ಇಪ್ಪತ್ತೊಂದನೆಯ ಸೂಕ್ತವು.

---

ಸಾಯಣಭಾಷ್ಯಂ

**ವಿಶ್ವಜಿತ ಇತಿ ಷಡೃಚಂ ದಶಮಂ ಸೂಕ್ತಂ ಗಾರ್ತ್ಸಮದಮೈಂದ್ರಂ | ಅಂತ್ಯಾ ತ್ರಿಷ್ಟುಪ್ | ಶಿಷ್ಟಾಃ ಪಂಚ ಜಗತ್ಯಃ | ತೃತೀಯೇ ಪರ್ಯಾಯೇ ಹೋತುಃ ಶಸ್ತ್ರ ಏತತ್ಸೂಕ್ತಂ | ಸೂತ್ರಿತಂ ಚ | ವಿಶ್ವಜಿತೇ ತಿಷ್ಠಾ ಹರೀ ರಥ ಆಯುಜ್ಯಮಾನೇತಿ ಯಾಜ್ಯಾ | ಆ. ೬-೪ | ಇತಿ ||**

ಅನುವಾದವು—ವಿಶ್ವಜಿತೇ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ಇಂದ್ರನು ದೇವತೆಯು; ಈ ಸೂಕ್ತದ ಕೊನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು. ಉಳಿದ ಐದು ಋಕ್ಕುಗಳೂ ಜಗತೀ ಛಂದಸ್ಕವು. ಮೂರನೆಯ

ಪರ್ಯಾಯದಲ್ಲಿ ಹೋತೃವು ಪಠಿಸಬೇಕಾದ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—ವಿಶ್ವಜಿತೇ ತಿಷ್ಠಾ ಹರೀ ರಥ ಆಯುಜ್ಯಮಾನೇತಿ ಯಾಜ್ಯಾ ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೬-೪).

---

॥ ಓಂ ॥

## ಸೂಕ್ತ—೨೧

॥ ಮಂಡಲ—೨ ॥ ಅನುವಾಕ—೨ ॥ ಸೂಕ್ತ—೨೧ ॥

॥ ಅಷ್ಟಕ—೨ ॥ ಅಧ್ಯಾಯ—೬ ॥ ವರ್ಗ—೨೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೬ ॥

ಋಷಿಃ—ಗೃತ್ಸಮದಃ ॥

ದೇವತಾ—ಇಂದ್ರಃ ॥

ಛಂದಃ—೧-೫ ಜಗತೀ । ೬. ತ್ರಿಷ್ಟುಪ್ ॥

---

ಸಂಹಿತಾಪಾಠಃ

ವಿಶ್ವಜಿತೇ ಧನಜಿತೇ ಸ್ವರ್ಜಿತೇ ಸತ್ರಾಜಿತೇ ನೃಜಿತ ಉರ್ವರಾಜಿತೇ ।
ಅಶ್ವಜಿತೇ ಗೋಜಿತೇ ಅಬ್ಜಿತೇ ಭರೇಂದ್ರಾಯ ಸೋಮಂ ಯಜತಾಯ ಹರ್ಯತಂ ॥ ೧ ॥

ಪದಪಾಠಃ

ವಿಶ್ವಽಜಿತೇ । ಧನಽಜಿತೇ । ಸ್ವಃಽಜಿತೇ । ಸತ್ರಾಽಜಿತೇ । ನೃಽಜಿತೇ । ಉರ್ವರಾಽಜಿತೇ ।
ಅಶ್ವಽಜಿತೇ । ಗೋಽಜಿತೇ । ಅಪ್ಽಜಿತೇ । ಭರ । ಇಂದ್ರಾಯ । ಸೋಮಂ । ಯಜತಾಯ । ಹರ್ಯತಂ ॥

ಸಾಯಣಭಾಷ್ಯಂ

ಹೇ ಅಧ್ವರ್ಯೋ ಇಂದ್ರಾಯ ಸೋಮಂ ಭರ । ಸಂಪಾದಯ । ಕೀದೃಶಾಯ । ವಿಶ್ವಜಿತೇ । ಸರ್ವಸ್ಯ ಜೇತ್ರೇ । ತದೇವ ಪ್ರಪಂಚಯತಿ । ಧನಜಿತೇ ಶತ್ರುವಿಜಯೇನ ತದೀಯಧನಾನಾಂ ಜೇತ್ರೇ । ಸ್ವರ್ಜಿತೇ ಸ್ವರ್ಗಸ್ಯ ಜೇತ್ರೇಽಧಿಪತಯೇ । ಸತ್ರಾಜಿತೇ ಸತ್ರಾ ಸಂತತಂ ಜಯಶೀಲಾಯ ಮಹತೋ ಜೇತ್ರೇ ವಾ । ನೃಜಿತೇ ನೃಣಾಂ ನಾಯಕಾನಾಂ ಜೇತ್ರೇ । ಉರ್ವರಾಜಿತೇ । ಉರ್ವರಾ ಸರ್ವಸಸ್ಯಾಢ್ಯಾ ಭೂಃ ।

ತೆಸ್ಯಾ ಜೇತ್ರೇ । ಅಶ್ವಜಿತೇ ಗೋಜಿತೇ ಬಲೇನಾಪಹೃತಾನಾಂ ಗವಾಂ ಜೇತ್ರೇ । ಅಬ್ಜಿತೇ ವೃತ್ರೇಣಾ-ಕ್ರಾಂತಾನಾಮಪಾಂ ಜೇತ್ರೇ । ಯಜತಾಯ ಯಜನೀಯಾಯ । ತೆಸ್ಮಾ ಇಂದ್ರಾಯ ಹರ್ಯತಂ। ಹರ್ಯ ಗತಿಕಾಂತ್ಯೋಃ । ಭೃಮೃದೃಶೀತ್ಯಾದಿನಾ ಕರ್ಮಣ್ಯತಚ್ ॥ ಕಮನೀಯಂ ಸ್ಪೃಹಣೀಯಂ ವಾ ಸೋಮಂ ಭರತೇತಿ ಸಮನ್ವಯಃ ।

ಪ್ರತಿಪದಾರ್ಥ

(ಎಲೈ ಅಧ್ವರ್ಯುವೇ) । ವಿಶ್ವಜಿತೇ—ಸಕಲವನ್ನೂ ಜಯಿಸಿ ವಿಶ್ವಕ್ಕೆಲ್ಲಾ ಪ್ರಭುವಾದವನೂ । ಧನಜಿತೇ—ಧನವನ್ನು ಜಯಿಸಿದವನೂ । ಸ್ವರ್ಜಿತೇ—ಸ್ವಗವನ್ನು ಜಯಿಸಿ ಸ್ವಾಮಿಯಾದವನೂ । ಸತ್ರಾಜಿತೇ—ಸರ್ವದಾ ಜಯವನ್ನೇ ಪಡೆಯುವವನೂ । ನೃಜಿತೇ—ಭಕ್ತರಾದ ಮಾನವರ ಹೃದಯವನ್ನೆಲ್ಲಾ ಜಯಿಸಿದವನೂ । ಉರ್ವರಾಜಿತೇ—ಪೃಥ್ವಿಯನ್ನು ಜಯಿಸಿದವನೂ । ಅಶ್ವಜಿತೇ—ಅಶ್ವಗಳನ್ನು ಜಯಿಸಿದವನೂ । ಗೋಜಿತೇ—ಗೋವುಗಳನ್ನು ಜಯಿಸಿದವನೂ । ಅಬ್ಜಿತೇ—(ವೃತ್ರನಿಂದ ಆವೃತವಾದ) ಉದಕವನ್ನು ಜಯಿಸಿದವನೂ । ಯಜತಾಯ—ಪೂಜ್ಯನಾದವನೂ ಆದ । ಇಂದ್ರಾಯ—ಇಂದ್ರನನ್ನುದ್ದೇಶಿಸಿ। ಹರ್ಯತಂ—ಸ್ಪೃಹಣೀಯವಾದ । ಸೋಮಂ—ಸೋಮರಸವನ್ನು । ಭರ—ಸಂಪಾದಿಸು (ಸಿದ್ಧಪಡಿಸು)

ಭಾವಾರ್ಥ

ಎಲೈ ಅಧ್ವರ್ಯುವೇ, ಎಲ್ಲವನ್ನೂ ಜಯಿಸಿ ವಿಶ್ವಕ್ಕೆಲ್ಲಾ ಪ್ರಭುವಾದವನೂ, ಧನವನ್ನೂ ಸ್ವರ್ಗವನ್ನೂ ಜಯಿಸಿ ಅವಕ್ಕೆ ಒಡೆಯನಾದವನೂ, ಸರ್ವದಾ, ಸರ್ವತ್ರಜಯವನ್ನೇ ಪಡೆಯುವವನೂ, ಭಕ್ತರಾದ ಮಾನವರ ಹೃದಯವನ್ನು ಜಯಿಸಿ ಅವರಿಗೆ ಸ್ವಾಮಿಯಾಗಿರುವವನೂ, ಪೃಥ್ವಿಯನ್ನೂ ಅಶ್ವಗಳನ್ನೂ ಗೋವುಗಳನ್ನೂ ಉದಕಗಳನ್ನೂ ಜಯಿಸಿ ಅವಕ್ಕೆಲ್ಲಾ ಪ್ರಭುವಾಗಿರುವವನೂ ಪೂಜ್ಯನೂ ಆದ ಇಂದ್ರನನ್ನುದ್ದೇಶಿಸಿ ಸ್ಪೃಹಣೀಯವಾದ ಸೋಮರಸವನ್ನು ಸಂಪಾದಿಸು.

## English Translation

Bring the desired Soma to the adorable Indra, the lord of all, the lord of wealth, the lord of heaven, the perpetual lord, the lord of man, the lord of earth, the lord of horses, the lord of cattle, the lord of water.

ವಿಶೇಷವಿಷಯಗಳು.

ಈ ಋಕ್ಕಿನಲ್ಲಿ ಇಂದ್ರನ ಸೋಮಪಾನಾರ್ಥವಾಗಿ ಸೋಮರಸವನ್ನು ಸಿದ್ಧಪಡಿಸೆಂದು ಯಜಮಾನನು ಅಧ್ವರ್ಯುವೆಂಬ ಋತ್ವಿಜನನ್ನುದ್ದೇಶಿಸಿ ಹೇಳಿರುವನು. ಇಂದ್ರನ ಗುಣಗಳನ್ನು ವರ್ಣಿಸುವುದಕ್ಕಾಗಿ ವಿಶ್ವಜಿತೇ ಮೊದಲಾದ ಹತ್ತು ವಿಶೇಷಣ ಶಬ್ದಗಳನ್ನು ಉಪಯೋಗಿಸಲಾಗಿದೆ.

ಸ್ವರ್ಜಿತೇ—ಸ್ವಃ ಎಂಬ ಶಬ್ದಕ್ಕೆ ಸ್ವರ್ಗ, ಆದಿತ್ಯ, ಅಂತರಿಕ್ಷ ಮೊದಲಾದ ಅರ್ಥಗಳಿರುವುದರಿಂದ ಅವುಗಳನ್ನು ಜಯಿಸಿದ ಎಂದರ್ಥವು. ಇಲ್ಲಿ ಶಬ್ದಗಳ ಕೊನೆಯಲ್ಲಿರುವ ಜಿತೇ ಎಂಬ ಶಬ್ದಕ್ಕೆ ಜಯಿಸಿದ ಅಥವಾ ಅಧಿಪತಿಯಾದ ಎಂಬ ಅರ್ಥವನ್ನು ಹೇಳಬಹುದು.

**ವಿಶ್ವಜಿತೇ, ಧನಜಿತೇ, ಸತ್ರಾಜಿತೇ** ಎಂಬ ಶಬ್ದಗಳಿಗೆ ಅರ್ಥವು ಸ್ಪಷ್ಟವಾಗಿಯೇ ಇರುವುದರಿಂದ ಇವುಗಳ ವಿವರಣೆಯು ಅನಾವಶ್ಯಕವು.

**ಉರ್ವರಾಜಿತೇ**—ಉರ್ವರಾಶಬ್ದವು ನಿರುಕ್ತದಲ್ಲಿ ಪೃಥ್ವೀನಾಮಗಳಲ್ಲಿ ಪಠಿತವಾಗಿಲ್ಲದಿದ್ದರೂ ಭಾಷ್ಯಕಾರರು—**ಉರ್ವರಾ ಸರ್ವಸಸ್ಯಾಢ್ಯಾ ಭೂಃ** ಎಂದು ಕೋಶವನ್ನು ಉದಹರಿಸಿ ಉರ್ವರಾಶಬ್ದಕ್ಕೆ ಭೂಮಿಯೆಂದು ಅರ್ಥವಿರುವುದರಿಂದ **ಉರ್ವರಾಜಿತೇ**—ಭೂಮಿಯನ್ನು ಜಯಿಸಿದವನು ಎಂದರ್ಥವನ್ನು ವಿವರಿಸಿದ್ದಾರೆ.

**ನೃಜಿತೇ—ನೃಣಾಂ ನಾಯಕಾನಾಂ ಜೇತ್ರೇ ।** ನೃಶಬ್ದಕ್ಕೆ ಮನುಷ್ಯರ ನಾಯಕರು ಅಥವಾ ಮುಖಂಡರು ಅಥವಾ ಸ್ತೋತೃಜನರ ಶತ್ರುಗಳಾದವರು, ದುಷ್ಟಜನರು ಎಂದು ಅರ್ಥಮಾಡಬಹುದು. ಇಂತಹ ಜನರನ್ನು ಯುದ್ಧದಲ್ಲಿ ಜಯಿಸಿದ ಇಂದ್ರನು ಎಂದಭಿಪ್ರಾಯವು.

**ಗೋಜಿತೇ—ವಲೇನಾಪಹೃತಾನಾಂ ಗವಾಂ ಜೇತ್ರೇ ।** ವಲಾಸುರ ಮತ್ತು ಪಣಿನಾಮಕದೈತ್ಯರಿಂದ ಅಪಹೃತಗಳಾದ ಗೋವುಗಳನ್ನು ಗೆದ್ದು ತಂದವನೆಂದಭಿಪ್ರಾಯವು

**ಅಬ್ಜಿತೇ—ವೃತ್ರೇಣಾಕ್ರಾಂತಾನಾಮಪಾಂ ಜೇತ್ರೇ ।** ವೃತ್ರಾಸುರನಿಂದ ಆಕ್ರಮಿಸಲ್ಪಟ್ಟಿದ್ದ ಮೇಘಗಳಲ್ಲಿದ್ದ ಉದಕಗಳನ್ನು ವೃತ್ರಾಸುರವಧದಿಂದ ಗೆದ್ದು ಭೂಮಿಯಮೇಲೆ ವೃಷ್ಟಿಯು ಸುರಿಯುವಂತೆ ಮಾಡಿರುವುದರಿಂದ ಉದಕಗಳನ್ನು ಗೆದ್ದವನೆಂದು ಇಲ್ಲಿ **ಅಬ್ಜಿತೇ** ಎಂಬ ಶಬ್ದದಿಂದ ಇಂದ್ರನನ್ನು ಸ್ತುತಿಸಿದೆ.

**ಯಜತಾಯ—ಯಜನೀಯಾಯ ।** ಇಂದ್ರನು ಪ್ರತ್ಯಕ್ಷದೇವತೆಯಲ್ಲದ್ದರಿಂದ ಅವನಿಗೆ ಸೋಮಾದಿಗಳನ್ನು ಅರ್ಪಿಸಬೇಕಾದರೆ ಯಜ್ಞಾದಿ ಕರ್ಮಗಳಲ್ಲಿ ಸೋಮವನ್ನೂ ಹವಿಸ್ಸನ್ನೂ ಅಗ್ನಿಯಲ್ಲಿಯೇ ಹೋಮಮಾಡಿ ಅರ್ಪಿಸಬೇಕು. ಆದ್ದರಿಂದ ಯಜ್ಞಾದಿಗಳಿಂದ ಆರಾಧಿಸಲ್ಪಡುವ ಎಂಬರ್ಥವುಳ್ಳ **ಯಜತಾಯ** ಎಂಬ ವಿಶೇಷಣ ಪದವು ಉಕ್ತವಾಗಿದೆ.

**ಹರ್ಯತಂ—ಹರ್ಯ ಗತಿಕಾಂತ್ಯೋಃ । ಕಮನೀಯಂ ಸ್ಪೃಹಣೀಯಂ ವಾ ಸೋಮಂ ।** ಅಪೇಕ್ಷಿಸು ಎಂಬರ್ಥವನ್ನು ಕೊಡುವ ಹರ್ಯಧಾತುವಿನಿಂದ ಹರ್ಯತಂ ಎಂಬ ಶಬ್ದವು ನಿಷ್ಪನ್ನವಾಗಿರುವುದರಿಂದ ಹರ್ಯತಂ ಎಂದರೆ ಅಪೇಕ್ಷಣೀಯವಾದ, ಎಲ್ಲರೂ ಬಯಸುವ, ಸೋಮರಸವೆಂದರ್ಥವು.

---

**ಸಂಹಿತಾಪಾಠಃ**

ಅಭಿಭುವೇಽಭಿಭಙ್ಗಾಯ ವನ್ವತೇಽಷಾಢ್ಹಾಯ ಸಹಮಾನಾಯ ವೇಧಸೇ ।

ತುವಿಗ್ರಯೇ ವಹ್ನಯೇ ದುಷ್ಟರೀತವೇ ಸತ್ರಾಸಾಹೇ ನಮ ಇಂದ್ರಾಯ ವೋಚತ ॥ ೨ ॥

ಪದಪಾಠಃ

ಅಭಿಽಭುವೇ । ಅಭಿಽಭಙ್ಗಾಯ । ವನ್ವತೇ । ಅಷಾಳ್ಹಾಯ । ಸಹಮಾನಾಯ । ವೇಧಸೇ ।

ತುವಿಽಗ್ರಯೇ । ವಹ್ನಯೇ । ದುಸ್ತರೀತವೇ । ಸತ್ರಾಽಸಹೇ । ನಮಃ । ಇನ್ದ್ರಾಯ । ವೋಚತ ॥ ೨ ॥

ಸಾಯಣಭಾಷ್ಯಂ

ಅಭಿಭುವೇ ಸರ್ವಸ್ಯಾಭಿಭವಿತ್ರೇಽಭಿಭಂಗಾಯಾಸುರಾಣಾಂ ಭಂಜಕಾಯ ವನ್ವತೇ ॥ ವನ ಷಣ ಸಂಭಕ್ತೌ । ವ್ಯತ್ಯಯೇನ ಉಪ್ರತ್ಯಯಃ ॥ ಶತ್ರೂಣಾಂ ಧನಾನಾಂ ಸಂಭಜಕಾಯ । ಅಷಾಳ್ಹಾಯ ॥ ಸಹೇಃ ಕರ್ಮಣಿ ನಿಷ್ಠಾ । ಉತ್ವಾಭಾವಶ್ಛಾಂದಸಃ ॥ ಶತ್ರುಭಿರನಭಿಭೂತಾಯ । ಸಹಮಾನಾಯ ಸರ್ವಂ-ಸಹಾಯ ವೇಧಸೇ ಸರ್ವಸ್ಯ ವಿಧಾತ್ರೇ । ತುವಿಗ್ರಯೇ ಪೂರ್ಣಗ್ರೀವಾಯ ॥ ಯದ್ವಾ ಗೃ ಶಬ್ದೇ । ಔಣಾದಿಕಃ ಕರ್ಮಣಿ ಕಪ್ರತ್ಯಯಃ ॥ ತುವಿಭಿರ್ಬಹುಭಿಃ ಸ್ತೋತವ್ಯಾಯ । ವಹ್ನಯೇ ಸರ್ವಸ್ಯ ವೋಢ್ರೇ ದುಷ್ಟರೀತವೇಽನ್ಯೈರ್ದುಸ್ತರಾಯ ದುರ್ಹಿಂಸಾಯ । ಸತ್ರಾಸಹೇ ಸರ್ವದಾಭಿಭವಿತ್ರೇ ಮಹತೋಽಭಿ-ಭವಿತ್ರೇ ವಾ ಏವಂವಿಧಾಯೇಂದ್ರಾಯ ನಮೋ ನಮಃಶಬ್ದಪೂರ್ವಕಂ ಸ್ತೋತ್ರಂ ವೋಚತ । ಹೇ ಸ್ತೋತಾರೋ ಯೂಯಂ ಬ್ರೂತ ॥ ಬ್ರೂಞಃ ಲುಙಿ ಬ್ರುವೋ ವಚಿಃ । ಅಸ್ಯತಿವಕ್ತಿಖ್ಯಾತಿಭ್ಯೋಽ-ಙಿತ್ಯಙಾದೇಶಃ । ವಚ ಉಮಿತ್ಯುಮ್ । ಗುಣಃ ॥

ಪ್ರತಿಪದಾರ್ಥ

ಅಭಿಭುವೇ—ಎಲ್ಲವನ್ನೂ ಸೋಲಿಸಿ ತಾನು ಜಯವನ್ನು ಪಡೆಯುವವನೂ । ಅಭಿಭಂಗಾಯ—ಶತ್ರು ನಾಶಕನೂ । ವನ್ವತೇ—(ಶತ್ರುಗಳ) ಧನವನ್ನು ಪಡೆದಿರುವವನೂ । ಅಷಾಳ್ಹಾಯ—ಅಪ್ರತಿಹತನಾದವನೂ । ಸಹಮಾನಾಯ—ಸಕಲವನ್ನೂ ಸಹಿಸುವವನೂ । ವೇಧಸೇ – ಎಲ್ಲವನ್ನೂ ಸೃಷ್ಟಿಸುವವನೂ । ತುವಿಗ್ರಯೇ—ಸರ್ವರಿಂದಲೂ ಸ್ತುತಿಸಲ್ಪಡುವವನೂ । ವಹ್ನಯೇ—ಎಲ್ಲವನ್ನೂ ವಹಿಸುವವನೂ । ದುಷ್ಟರೀತವೇ—ಇತರರಿಂದ ಹಿಂಸಿತನಾಗದಿರುವವನೂ । ಸತ್ರಾಸಹೇ – ಸರ್ವದಾ ಜಯವನ್ನು ಪಡೆಯುವವನೂ ಆದ । ಇಂದ್ರಾಯ—ಇಂದ್ರನನ್ನುದ್ದೇಶಿಸಿ । ನಮಃ—ನಮಸ್ಕಾರಪೂರ್ವಕವಾದ ಸ್ತೋತ್ರವನ್ನು । ವೋಚತ—ಪಠಿಸಿರಿ.

ಭಾವಾರ್ಥ

ಸರ್ವರನ್ನೂ ಸೋಲಿಸಿ ತಾನು ಜಯವನ್ನು ಪಡೆಯುವವನೂ, ಶತ್ರುನಾಶಕನೂ, ಶತ್ರುಗಳ ಧನವನ್ನು ಪಡೆದಿರುವವನೂ, ಅಪ್ರತಿಹತನಾದವನೂ ಸಕಲವನ್ನೂ ಸಹಿಸುವವನೂ, ಎಲ್ಲವನ್ನೂ ಸೃಷ್ಟಿಸುವವನೂ, ಸರ್ವರಿಂದಲೂ ಸ್ತುತಿಸಲ್ಪಡುವವನೂ, ಸರ್ವವನ್ನೂ ವಹಿಸುವವನೂ, ಇತರರಿಂದ ಹಿಂಸಿತನಾಗದಿರುವವನೂ, ಸರ್ವದಾ ಜಯವನ್ನು ಪಡೆಯುವವನೂ ಆದ ಇಂದ್ರನನ್ನುದ್ದೇಶಿಸಿ ನಮಸ್ಕಾರಪೂರ್ವಕವಾದ ಸ್ತೋತ್ರವನ್ನು ಪಠಿಸಿರಿ.

## English Translation

Offer adoration to Indra, the overcomer, the destoyer, the munificent, the invincible, the all-enduring, the creator, the all-adorable: the sustainer, the unassailable, the ever-victorious.

## ವಿಶೇಷವಿಷಯಗಳು

ಈ ಋಕ್ಕಿನಲ್ಲಿಯೂ ಸಹ ಯಜಮಾನನು ಇಂದ್ರನನ್ನು ಸ್ತುತಿಸಿ ಎಂದು ಋತ್ವಿಜರಿಗೆ ಹೇಳಿ ಆ ಇಂದ್ರನ ನಾನಾವಿಧ ಗುಣಗಳ ವರ್ಣನೆಮಾಡಿರುವನು—

**ಅಭಿಭುವೇ—ಸರ್ವಸ್ಯಾಭಿಭವಿತ್ರೇ ।** ಇಂದ್ರನು ಎಲ್ಲರನ್ನೂ ಪರಾಭವಗೊಳಿಸುವನು. ಇವನನ್ನು ಮಾತ್ರ ಗೆಲ್ಲಲು ಯಾರಿಂದಲೂ ಸಾಧ್ಯವಿಲ್ಲ. ಇಂತಹ ಇಂದ್ರನಿಗಾಗಿ ಸ್ತೋತ್ರವನ್ನು ಪಠಿಸಿರಿ ಎಂದು ಯಜಮಾನನ ವಾಕ್ಯವು.

**ಅಭಿಭಂಗಾಯ—ಅಸುರಾಣಾಂ ಭಂಜಕಾಯ ।** ಸ್ತೋತೃಜನರನ್ನು ಉದ್ಧಾರಮಾಡುವುದಕ್ಕಾಗಿ ಅವರ ಶತ್ರುಗಳನ್ನೂ, ಸಜ್ಜನರಿಗೆ ನಾನಾವಿಧ ಹಿಂಸೆಯನ್ನುಂಟುಮಾಡುವ ದುಷ್ಟರಾದ ಅಸುರರನ್ನು ಧ್ವಂಸಮಾಡಿ ನಾಶ ಮಾಡುವವನು ಎಂದಭಿಪ್ರಾಯವು.

**ವನ್ವತೇ—ವನ ಷಣ ಸಂಭಕ್ತೌ । ವ್ಯತ್ಯಯೇನ ಉಪ್ರತ್ಯಯಃ । ಶತ್ರೂಣಾಂ ಧನಾನಾಂ ಸಂಭಜಕಾಯ ।** ಹೊಂದು, ಹೊಂದಿಸು ಎಂಬರ್ಥವುಳ್ಳ ವನಧಾತುವಿನಿಂದ ವನ್ವತೇ ಎಂಬ ಶಬ್ದವು ನಿಷ್ಪನ್ನವಾಗಿರುವುದ ಈ ಶಬ್ದಕ್ಕೆ ಶತ್ರುಗಳನ್ನು ಯುದ್ಧದಲ್ಲಿ ಜಯಿಸಿ ಅವರ ಧನಗಳನ್ನು ಸಂಪಾದಿಸುವ ಅಥವಾ ಆ ಧನಗಳನ್ನು ತನ್ನನ್ನು ಸ್ತೋತ್ರಮಾಡುವ ಜನರಿಗೆ ಸಂಪಾದಿಸಿಕೊಡುವವನು ಎಂದರ್ಥವು.

**ಅಷಾಳ್ಹಾಯ—ಸಹೇಃ ಕರ್ಮಣಿ ನಿಷ್ಠಾ । ಉತ್ವಾಭಾವಶ್ಛಾಂದಸಃ । ಶತ್ರುಭಿರನಭಿಭೂತಾಯ ।** ಶತ್ರುಗಳಿಂದ ಜಯಿಸಲಸಾಧ್ಯನಾದ. ಇಂದ್ರನೊಡನೆ ವಿರೋಧವನ್ನು ಹೊಂದಿದ ಯಾವ ಶತ್ರುವೂ ಇವನನ್ನು ಸೋಲಿಸಲು ಅಸಾಧ್ಯವೆಂದಭಿಪ್ರಾಯವು.

**ಸಹಮಾನಾಯ—ಸರ್ವಂ ಸಹಾಯ ।** ಸಮಸ್ತವನ್ನೂ ಸಹಿಸುವವನು. ಇಂದ್ರನು ಅತ್ಯಂತ ಬಲಶಾಲಿಯಾದುದರಿಂದ ಯುದ್ಧದಲ್ಲಿ ಶತ್ರುಗಳ ಪ್ರಹಾರಾದಿಗಳನ್ನು ಧೈರ್ಯವಾಗಿ ಸಹಿಸುವವನು ಅಥವಾ ದುಷ್ಟಜನರು ಮಾಡುವ ದೂಷಣೆ, ನಿಂದಾ ಮೊದಲಾದವನ್ನು ನಿರ್ಭಯನಾಗಿ ಸಹಿಸುವವನು.

**ವೇಧಸೇ—ವಿಧಾತ್ರೇ ।** ಎಲ್ಲವನ್ನೂ ಸೃಷ್ಟಿಸುವವನು. ಎಂದರೆ ಸೂರ್ಯ, ಅಂತರಿಕ್ಷ, ಸ್ವರ್ಗ, ಭೂಮಿ, ಸಸ್ಯಗಳು ಮೊದಲಾದವುಗಳನ್ನು ಇಂದ್ರನೇ ಸೃಷ್ಟಿಸಿದನೆಂದು ಅನೇಕಕಡೆ ಹೇಳಿದೆ.

**ತುವಿಗ್ರಯೇ—ಪೂರ್ಣಗ್ರೀವಾಯ ।** ತುವಿಶಬ್ದವು ಬಹುನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩) ಉಬ್ಬಿದ ಅಥವಾ ತುಂಬಿದ ಕತ್ತುಳ್ಳವನು ಎಂದರೆ ಪುಷ್ಟವಾದ ನೈಕಟ್ಟುಳ್ಳವನು, ದೃಢಾಂಗನು ಎಂದಭಿಪ್ರಾಯವು. ಅಥವಾ **ಗೄ ಶಬ್ದೇ । ಔಣಾದಿಕಃ ಕರ್ಮಣಿ ಕಪ್ರತ್ಯಯಃ । ತುವಿಭಿಃ ಬಹುಭಿಃ ಸ್ತೋತವ್ಯಾಯ ।** ಗೄ ಎಂಬ ಧಾತುವಿಗೆ ಶಬ್ದಮಾಡು ಎಂಬರ್ಥವಿರುವುದರಿಂದ ಈ ಧಾತುವಿನಿಂದ ಗ್ರೀವಾಯ ಎಂಬ ಶಬ್ದವು ನಿಷ್ಪನ್ನವಾಗುವುದಾದರೆ ತುವಿಗ್ರೀವಾಯ ಎಂಬ ಶಬ್ದಕ್ಕೆ ಅನೇಕ ಜನರಿಂದ ಸ್ತೋತ್ರಮಾಡಲ್ಪಡುವವನು ಎಂಬರ್ಥವನ್ನು ಹೇಳಬಹುದು.

ವಹ್ನಯೇ—ಸರ್ವಸ್ಯ ವೋಢ್ರೇ । ಸರ್ವವನ್ನೂ ವಹಿಸಿರುವವನು, ಸರ್ವಾಧಾರನು. ಎಂದರೆ ದ್ಯಾವಾ ಪೃಥಿವಿಗಳೂ, ಸೂರ್ಯನೂ, ಲೋಕಗಳೂ, ಪ್ರಾಣಿಗಳೂ ಎಲ್ಲವೂ ಇಂದ್ರನ ಆಜ್ಞೆಗೆ ಒಳಪಟ್ಟು ಅವನಿಗೆ ಅಧೀನ ವಾಗಿ ತಮ್ಮ ತಮ್ಮ ಕಾರ್ಯಗಳನ್ನು ನೆರವೇರಿಸುವವು. ಆದ್ದರಿಂದಲೇ ಇಂದ್ರನು ಸರ್ವಾಧಾರಕನೆಂದು ಹೇಳ ಲ್ಪಡುವನು.

ದುಷ್ಟರೀತವೇ—ಅನ್ಯೈರ್ದುಸ್ತರಾಯ ದುರ್ಹಿಂಸಾಯ । ಇತರರಿಂದ ಎಂದರೆ ಶತ್ರುಗಳಿಂದ ಹಿಂಸಿಸ ಲ್ಪಡದವನು. ಇಂದ್ರನು ಬಹಳ ಬಲಶಾಲಿಯೂ ಪರಾಕ್ರಮಿಯೂ ಆದುದರಿಂದ ಇವನ ಶತ್ರುಗಳು ಇವನನ್ನು ಬಾಧೆಪಡಿಸಲು ಅಸಮರ್ಥರಾಗಿರುವರು. ಇವನನ್ನು ಹಿಂಸಿಸಲು ಯಾರಿಂದಲೂ ಸಾಧ್ಯವಿಲ್ಲ ಎಂದಭಿಪ್ರಾಯವು.

ಸತ್ರಾಸಹೇ—ಸರ್ವದಾಭಿಭವಿತ್ರೇ । ಮಹತೋಽಭಿಭವಿತ್ರೇ ವಾ । ಯಾವಾಗಲೂ ಶತ್ರುಗಳನ್ನು ಸೋಲಿಸುವವನು ಅಥವಾ ಶತ್ರುಗಳನ್ನು ಪರಾಭವಗೊಳಿಸುವುದರಲ್ಲಿ ಮಹಾಬಲಪರಾಕ್ರಮವುಳ್ಳವನು.

---

ಸಂಹಿತಾಪಾಠಃ

ಸತ್ರಾಸಾಹೋ ಜನಭಕ್ಷೋ ಜನಂಸಹಶ್ಚ್ಯವನೋ ಯುಧ್ಮೋ ಅನು ಜೋಷಮುಕ್ಷಿತಃ ।
ವೃತಂಚಯಃ ಸಹುರಿರ್ವಿಕ್ಷ್ವಾರಿತ ಇನ್ದ್ರಸ್ಯ ವೋಚಂ ಪ್ರ ಕೃತಾನಿ ವೀರ್ಯಾ ॥ ೩ ॥

ಪದಪಾಠಃ

ಸತ್ರಾಽಸಹಃ । ಜನಽಭಕ್ಷಃ । ಜನಂಽಸಹಃ । ಚ್ಯವನಃ । ಯುಧ್ಮಃ । ಅನು । ಜೋಷಂ । ಉಕ್ಷಿತಃ । ವೃತಂಽಚಯಃ । ಸಹುರಿಃ । ವಿಕ್ಷು । ಆರಿತಃ । ಇನ್ದ್ರಸ್ಯ । ವೋಚಂ । ಪ್ರ । ಕೃತಾನಿ । ವೀರ್ಯಾ ॥

ಸಾಯಣಭಾಷ್ಯಂ

ಸತ್ರಾಸಹೋ ಬಹೂನಾಮಭಿಭವಿತಾ ಜನಭಕ್ಷೋ ಜನಾನಾಂ ಯಜಮಾನಾನಾಂ ಕಾಮಪ್ರದಾನೇನ ಸಂಭಕ್ತಾ ತೈಃ ಸಂಭಜನೀಯ ಇತಿ ವಾ । ಜನಂಸಹೋ ಬಲಿನಾಂ ಜನಾನಾಮಭಿಭವಿತಾ ಚ್ಯವನಃ ಶತ್ರೂಣಾಂ ಚ್ಯಾವಯಿತಾ ಸ್ವಸ್ಥಾನಾತ್ । ಯುಧ್ಮೋ ಯೋದ್ಧಾ ಜೋಷಮನು ಪ್ರೀತಿಮನು ಉಕ್ಷಿತಃ ಸಿಕ್ತಃ ಸೋಮೇನ । ವೃತಂಚಯೋ ವೃತಸ್ಯಾಭೀಪ್ಸಸ್ಯಾಚೇತಾ ಸಂಚೇತಾ ದಾತೇತ್ಯರ್ಥಃ । ಯದ್ವಾ ವರ್ತತೇ ಪುನಃಪುನರಭಿಮುಖಮಾಗಚ್ಛತೀತಿ ವೃತ್ ಶತ್ರುಃ । ತಂ ಚಯತೇ ಹಿನಸ್ತೀತಿ ವೃತಂಚಯಃ ।

ಚಯುತಿರ್ಹಿಂಸಾಕರ್ಮಾ । ತಥಾ ಚ ಬ್ರಾಹ್ಮಣಂ । ಯೋ ವೈ ಭಾಗಿನಂ ಭಾಗಾನ್ನುದತೇ ಚಯತೇ ವೈನಂ ಸ ಯದಿ ವೈನಂ ನ ಚಯತೇಽಥ ಪುತ್ರಮಥ ಪೌತ್ರಂ ಚಯತೇ ತ್ವೇವೈನಂ । ಐ- ಬ್ರಾ. ೨-೭ । ಇತಿ । ಸಹುರಿಃ ॥ ಜಸಿಸಹೋರುರಿನ್ನಿತ್ಯುರಿನ್ಪ್ರತ್ಯಯಃ ॥ ಅಭಿಭವಿತಾ ಶತ್ರೂಣಾಂ ವಿಕ್ಷು ಪ್ರಜಾಸ್ವಾರಿತಃ ಪಾಲಕತ್ವೇನ ಪ್ರಾಪಿತೋ ಭವತಿ । ತಾದೃಶಸ್ಯೇಂದ್ರಸ್ಯ ಕೃತಾನಿ ವೃತ್ರಹನನಾದಿರೂಪಾಣಿ ವೀರ್ಯಾ ಸಾಮರ್ಥ್ಯಾನಿ ಪ್ರವೋಚಂ । ಪ್ರಕರ್ಷೇಣ ವದಾಮಿ ॥

ಪ್ರತಿಪದಾರ್ಥ

(**ಇಂದ್ರಃ**—ಇಂದ್ರನು) । **ಸತ್ರಾಸಹಃ**—ಸರ್ವದಾ ಸರ್ವತ್ರ ಜಯಶಾಲಿಯಾಗಿಯೂ । **ಜನಭಕ್ಷಃ**—(ಯಜಮಾನರಿಗೆ ಇಷ್ಟಾರ್ಥವನ್ನು ಒದಗಿಸಿ) ಅವರಿಂದ ಪೂಜಿಸಲ್ಪಡುವವನೂ ಅಥವಾ ಯಜ್ಞಕರ್ತರಿಗೆ ಉಪಕಾರಕನೂ । **ಜನಂಸಹಃ**–ಬಲಶಾಲಿಗಳನ್ನು ಸೋಲಿಸುವವನೂ । **ಚ್ಯವನಃ**—(ಶತ್ರುಗಳನ್ನು ಅವರ ಸ್ಥಾನದಿಂದ) ಚಲಿಸುವಂತೆ ಮಾಡುವವನೂ । **ಯುಧ್ಮಃ**—ಯೋಧನೂ । **ಜೋಷಂ ಅನು**—ಪ್ರೀತಿಯಿಂದ । **ಉಕ್ಷಿತಃ**—ಸೋಮದಿಂದ ಸಿಕ್ತನೂ । **ವೃತಂಚಯಃ**—ಇಷ್ಟಾರ್ಥಪ್ರದನೂ । **ಸಹುರಿಃ**—ಶುತ್ರುಘಾತಕನೂ । **ವಿಕ್ಷು**—ಪ್ರಜೆಗಳಲ್ಲಿ । **ಆರಿತಃ**—ರಕ್ಷಕನಾಗಿ ಅವರಿಂದ ಆಶ್ರಯಿಸಲ್ಪಡುವವನೂ ಆಗಿದ್ದಾನೆ । **ಇಂದ್ರಸ್ಯ**—ಇಂತಹ ಇಂದ್ರನ । **ವೀರ್ಯಾ**—ಸಾಮರ್ಥ್ಯದಿಂದ ಕೂಡಿದ । **ಕೃತಾನಿ**—ವೃತ್ರಹನನವೇ ಮುಂತಾದ ಕರ್ಮಗಳನ್ನು । **ಪ್ರ ವೋಚಂ**—ಅತಿಶಯವಾಗಿ ಪಠಿಸುತ್ತೇನೆ.

ಭಾವಾರ್ಥ

ಇಂದ್ರನು ಸರ್ವದಾ ಸರ್ವತ್ರ ಜಯಶಾಲಿಯಾಗಿಯೂ, ಯಜಮಾನರಿಗೆ ಇಷ್ಟಾರ್ಥವನ್ನು ಒದಗಿಸಿ ಅವರಿಂದ ಪೂಜಿಸಲ್ಪಡುವವನೂ ಬಲಶಾಲಿಗಳನ್ನು ಸೋಲಿಸುವವನೂ, ಶತ್ರುಗಳನ್ನು ಅವರ ಸ್ಥಾನದಿಂದ ಚಲಿಸುವಂತೆ ಮಾಡುವವನೂ, ಯೋಧನೂ, ಪ್ರೀತಿಯಿಂದ ಅರ್ಪಿಸಿದ ಸೋಮದಿಂದ ತೃಪ್ತನೂ, ಇಷ್ಟಾರ್ಥಪ್ರದನೂ, ಶತ್ರುಘಾತಕನೂ ಪ್ರಜೆಗಳಲ್ಲಿ ರಕ್ಷಕನಾಗಿ ಅವರಿಂದ ಆಶ್ರಯಿಸಲ್ಪಡುವವನೂ ಆಗಿದ್ದಾನೆ. ಇಂತಹ ಮಹದ್ಗುಣಗಳುಳ್ಳ ಇಂದ್ರನು ನೆರವೇರಿಸಿದ ವೀರ್ಯಕರ್ಮಗಳನ್ನು ಅತಿಶಯವಾಗಿ ಪಠಿಸುತ್ತೇನೆ.

English Translation

I proclaim the mighty exploits of that Indra, who is ever victorious: the benefactor of man, the overthrower of (the strong) man, the caster down (of foes), the warrior ; who is gratified by our libations, the granter of desires the subduer of enemies, the refuge of the people.

ವಿಶೇಷವಿಷಯಗಳು

**ಸತ್ರಾಸಾಹಃ**—ಈ ಶಬ್ದದ ಅರ್ಥವನ್ನು ಹಿಂದಿನ ಋಕ್ಕಿನಲ್ಲಿ ವಿವರಿಸಲಾಗಿದೆ. **ಬಹೂನಾಮಭಿಭವಿತಾ**—ಯುದ್ಧಾದಿಗಳಲ್ಲಿ ಅನೇಕ ಶತ್ರುಜನರನ್ನು ಸೋಲಿಸುವವನು ಎಂದರ್ಥವು

**ಜನಭಕ್ಷಃ—ಜನಾನಾಂ ಯಜಮಾನಾನಾಂ ಕಾಮಪ್ರದಾನೇನ ಸಂಭಕ್ತಾಃ ತೈಃ ಸಂಭಜನೀಯ ಇತಿ ವಾ।** ಅನೇಕಜನ ಯಜ್ಞಕರ್ತರಾದ ಯಜಮಾನರಿಗೆ ಇಷ್ಟಾರ್ಥಗಳನ್ನು ಒದಗಿಸಿಕೊಡುವವನು ಅಥವಾ ಅನೇಕ ಯಜಮಾನರಿಂದ ಭಜಿಸಲ್ಪಡುವವನು ಎಂದರೆ ಸೇವಿಸಲ್ಪಡುವವನು.

**ಜನಂಸಹಃ—ಬಲಿನಾಂ ಜನಾನಾಮಭಿಭವಿತಾ।** ಬಲಿಷ್ಠರಾದ ಅನೇಕ (ಶತ್ರು) ಜನರನ್ನು ಯುದ್ಧಾದಿಗಳಲ್ಲಿ ಪರಾಭವಗೊಳಿಸುವವನು.

**ಚ್ಯವನಃ—ಶತ್ರೂಣಾಂ ಚ್ಯಾವಯಿತಾ ಸ್ವಸ್ಥಾನಾತ್।** ಯುದ್ಧದಲ್ಲಿ ಶತ್ರುಗಳು ಇಂದ್ರನ ಪರಾಕ್ರಮವನ್ನು ಸಹಿಸಲಾರದೆ ತಮ್ಮ ಸ್ಥಾನಗಳನ್ನು ಬಿಟ್ಟು ಓಡಿಹೋಗುವುದರಿಂದ ಶತ್ರುಜನರನ್ನು ಸ್ವಸ್ಥಾನದಿಂದ ಓಡಿಸುವವನು ಎಂದು ಹೇಳಲಾಗಿದೆ.

**ಯುಧ್ಮಃ—ಯೋದ್ಧಾ।** ಯುದ್ಧಮಾಡುವವನು. ಯುದ್ಧದಲ್ಲಿ ಶತ್ರುಗಳಿಗೆ ಭಯಪಡದೆ ಅವರಿಗೆ ಎದುರಾಗಿ ನಿಂತು ಅವರೊಡನೆ ಧೈರ್ಯವಾಗಿ ಯುದ್ಧಮಾಡುವವನು.

**ಜೋಷಂ ಅನು ಉಕ್ಷಿತಃ—ಪ್ರೀತಿಮನು ಸಿಕ್ತಃ ಸೋಮೇನ।** ಪ್ರೀತಿಯಿಂದ ಸೋಮಪಾನಮಾಡತಕ್ಕವನು. ಇಂದ್ರನಿಗೆ ಸೋಮಪಾನದಲ್ಲಿ ಅತಿಶಯವಾದ ಪ್ರೀತಿಯಿರುವುದೆಂದಭಿಪ್ರಾಯವು.

**ವೃತಂಚಯಃ—ವೃತಸ್ಯಾಭೀಷ್ಟಸ್ಯಾ ಚೇತಾ ಸಂಚೇತಾ ದಾತೇತ್ಯರ್ಥಃ।** ವೃಙ್ ವರಣೇ ಅಪೇಕ್ಷಿಸು ಎಂಬರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾದ ವೃತಶಬ್ದಕ್ಕೆ ಅಪೇಕ್ಷಿತವಾದುದು, ಇಷ್ಟವಾದುದು ಎಂದರ್ಥವು. ಇಂತಹ ಇಷ್ಟಾರ್ಥಗಳನ್ನು ಇಂದ್ರನು ಕೊಡುವನು ಎಂದಭಿಪ್ರಾಯವು. **ಯದ್ವಾ ವರ್ತತೇ ಪುನಃಪುನರಭಿಮುಖಮಾಗಚ್ಛತೀತಿ ವೃತ್ ಶತ್ರುಃ। ತಂ ಚಯತೇ ಹಿನಸ್ತೀತಿ ವೃತಂಚಯಃ। ಚಯತಿರ್ಹಿಂಸಾಕರ್ಮಾ।** ಅಥವಾ ಈ ಶಬ್ದಕ್ಕೆ ಇನ್ನೊಂದುವಿಧ ಅರ್ಥವನ್ನೂ ಹೇಳಬಹುದು. ಆವರಿಸು, ಮುತ್ತು ಎಂಬರ್ಥವುಳ್ಳ ವೃತ್ ಧಾತುವಿನಿಂದ ವೃತಶಬ್ದವು ನಿಷ್ಪನ್ನವಾದರೆ ಆಗ ಯುದ್ಧದಲ್ಲಿ ಪುನಃಪುನಃ ಯುದ್ಧಮಾಡಲು ಅಭಿಮುಖವಾಗಿ ಬಂದು ಎದುರಿಸುವವನಾದ್ದರಿಂದ ವೃತ್ ಎಂದರೆ ಶತ್ರುವು, ಚಯತಿ ಧಾತುವಿಗೆ ಹಿಂಸಾರ್ಥವಿರುವುದರಿಂದ **ವೃತಂಚಯಃ** ಎಂದರೆ ಯುದ್ಧದಲ್ಲಿ ಶತ್ರುಗಳನ್ನು ಹಿಂಸಿಸಿ ಕೊಲ್ಲುವವನು ಎಂದೂ ಅರ್ಥವನ್ನು ಹೇಳಬಹುದು. ಚಯತಿಧಾತುವಿಗೆ ಹಿಂಸಾರ್ಥವಿರುವ ವಿಷಯದಲ್ಲಿ ಭಾಷ್ಯಕಾರರು—

> **ಯೋ ವೈ ಭಾಗಿನಂ ಭಾಗಾನ್ನುದತೇ ಚಯತೇ ವೈನಂ ಸ ಯದಿ ವೈನಂ ನ ಚಯತೇಽಥ ಪುತ್ರಮಥ ಪೌತ್ರಂ ಚಯತೇ ತ್ವೇವೈನಂ ॥**
>
> (ಐ. ಬ್ರಾ. ೨-೭)

ಎಂಬ ಐತರೇಯಬ್ರಾಹ್ಮಣದ ವಾಕ್ಯವನ್ನು ಉದಾಹರಿಸಿರುವರು.

**ಸಹುರಿಃ ವಿಕ್ಷು ಆರಿತಃ—ಜಸಿಸಹೋರುರಿನ್ನಿತ್ಯುರಿಪ್ರತ್ಯಯಃ। ಅಭಿಭವಿತಾ ಶತ್ರೂಣಾಂ ವಿಕ್ಷು ಪ್ರಜಾಸು ಆರಿತಃ ಪಾಲಕತ್ವೇನ ಪ್ರಾಪಿತೋ ಭವತಿ।** ಶತ್ರುಗಳನ್ನು ಪರಾಭವಗೊಳಿಸುವ ಇಂದ್ರನು ಪ್ರಜೆಗಳನ್ನು ಪಾಲಕನಾಗಿ ರಕ್ಷಿಸುವನು ಎಂದರೆ ಪ್ರಜೆಗಳು ಇಂದ್ರನನ್ನು ಪಾಲಕನೆಂದು ಆಶ್ರಯಿಸುವರು.

ಇಂದ್ರಸ್ಯ ವೋಚಂ ಪ್ರ ಕೃತಾನಿ ವೀರ್ಯಾ—ತಾದೃಶಸ್ಯೇಂದ್ರಸ್ಯ ಕೃತಾನಿ ವೃತ್ರಹನನಾದಿರೂಪಾಣಿ ವೀರ್ಯಾ ಸಾಮರ್ಥ್ಯಾನಿ ಪ್ರ ವೋಚಂ ಪ್ರಕರ್ಷೇಣ ವದಾಮಿ। ಇಂತಹ ಇಂದ್ರನ ಎಂದರೆ ಮೇಲೆ ಹೇಳಿದ ಗುಣಗಳಿಂದ ಸಹಿತನಾದ ಇಂದ್ರನ ವೃತ್ರಹನನವೇ ಮೊದಲಾದ ನಾನಾವಿಧ ಸಾಹಸಕೃತ್ಯಗಳನ್ನು ವರ್ಣಿಸಿ ಹೇಳುವೆನು ಎಂದು ಋಷಿಯು ವಿವರಿಸಿದ್ದಾನೆ.

---

ಸಂಹಿತಾಪಾಠಃ

ಅನಾನುದೋ ವೃಷಭೋ ದೋಧತೋ ವಧೋ ಗಮ್ಭೀರ ಋಷ್ವೋ ಅಸಮುಷ್ಟಕಾವ್ಯಃ।
ರಧ್ರಚೋದಃ ಶ್ನಥನೋ ವೀಳಿತಸ್ಪೃಥುರಿನ್ದ್ರಃ ಸುಯಜ್ಞ ಉಷಸಃ ಸ್ವರ್ಜನತ್ ॥ ೪ ॥

ಪದಪಾಠಃ

ಅನನುಽದಃ। ವೃಷಭಃ। ದೋಧತಃ। ವಧಃ। ಗಮ್ಭೀರಃ। ಋಷ್ವಃ। ಅಸಮುಷ್ಟಽಕಾವ್ಯಃ।
ರಧ್ರಽಚೋದಃ। ಶ್ನಥನಃ। ವೀಳಿತಃ। ಪೃಥುಃ। ಇನ್ದ್ರಃ। ಸುಽಯಜ್ಞಃ। ಉಷಸಃ। ಸ್ವಃ। ಜನತ್ ॥

ಸಾಯಣಭಾಷ್ಯಂ

ಅನಾಮುದಃ। ಅನು ಪಶ್ಚಾದ್ದದಾತೀತ್ಯನುದಃ। ಆತಶ್ಚೋಪಸರ್ಗೆ ಇತಿ ಕರ್ತರಿ ಕಃ। ಸ ನಾಸ್ತಿ ಯಸ್ಯ ಸ ತಥೋಕ್ತಃ। ಪ್ರಭೂತಧನದಾನೇನ ಸಮಾನೋ ನಾಸ್ತೀತ್ಯರ್ಥಃ। ಅತ ಏವ ವೃಷಭಃ ಕಾಮಾನಾಂ ವರ್ಷಿತಾ। ದೋಧತಃ॥ ದುಧಿರ್ಹಿಂಸಾಕರ್ಮಾ॥ ಹಿಂಸಕಸ್ಯಾಸುರಸ್ಯ ವಧೋ ಹಂತಾ ಗಂಭೀರೋ ಮಹತ್ತ್ವೇನ ಗಾಂಭೀರ್ಯೋಪೇತಃ। ಋಷ್ವೋ ಮಹಾನ್ ಯದ್ವಾ ದರ್ಶನೀಯಃ ಸರ್ವೈಃ। ಅಸಮುಷ್ಟಕಾವ್ಯಃ॥ ಅಶೂ ವ್ಯಾಪ್ತೌ। ಕರ್ಮಣಿ ನಿಷ್ಠಾ। ಊದಿತ್ತ್ವಾದ್ವಿಡ್ವಿಕಲ್ಪಃ। ನಞ್ಸಮಾಸಃ॥ ಅನ್ಯೈರವ್ಯಾಪ್ತಕರ್ಮಾ। ರಧ್ರಚೋದಃ॥ ರಧ ಹಿಂಸಾಸಂರಾದ್ಧ್ಯೋಃ॥ ರಧ್ರಾಣಾಂ ಸಮೃದ್ಧಾನಾಂ ಪ್ರೇರಕಃ। ಯದ್ವಾ ಹಿಂಸಕಾನಾಂ ಶತ್ರೂಣಾಂ ಚೋದಕಃ। ಶ್ನಥನಃ ಶತ್ರೂಣಾಂ ಬಲಾಪಹಾರೇಣ ಶಾತಯಿತಾ। ವೀಳಿತೋ ದೃಢಾಂಗಃ ಪೃಥುಃ ಸ್ವತೇಜಸಾ ಜಗದ್ವ್ಯಾಪ್ಯ ವರ್ತಮಾನಃ ಸುಯಜ್ಞಃ ಸುಕರ್ಮಾ। ಏತಾದೃಶ ಇಂದ್ರ ಉಷಸಃ ಸ್ವಃ ಸೂರ್ಯಂ ಜ್ಯೋತಿಃ। ಸ್ವಃ ಸೂರ್ಯ ಇತಿ ಹಿ ಬ್ರಾಹ್ಮಣಂ। ಸೂರ್ಯಂ ಚ ಜನತ್। ಪ್ರಾದುಶ್ಚಕಾರ॥

ಪ್ರತಿಪದಾರ್ಥ

**ಅನಾನುದಃ**—ಇವನಂತೆ ದಾನಮಾಡುವವನು ಇನ್ನೊಬ್ಬನಿಲ್ಲದೇ ಇರುವುದರಿಂದ ಅದ್ವಿತೀಯನಾದ ದಾತನೂ । **ವೃಷಭಃ**—ಇಷ್ಟಾರ್ಥಪ್ರದನೂ । **ದೋಧತಃ**—ಹಿಂಸಕನಾದ ಅಸುರನ । **ವಧಃ**—ಹಂತಕನೂ । **ಗಂಭೀರಃ**—ಗಾಂಭೀರ್ಯಗುಣದಿಂದ ಕೂಡಿದವನೂ । **ಋಷ್ವಃ**—ಎಲ್ಲರಿಗೂ ಗೋಚರನಾಗುವವನೂ । **ಅಸಮಷ್ಟ-ಕಾವ್ಯಃ**—ಇತರರಿಂದ ತಿಳಿಯಲಾಗದ ಗೂಢವಾದ ಕರ್ಮಗಳುಳ್ಳವನೂ । **ರಧ್ರಚೋದಃ**—ಶತ್ರುಹಿಂಸಕನೂ ಅಥವಾ ಸಮೃದ್ಧವಾದ ಧನದ ಪ್ರದಾತನೂ । **ಶ್ನಥನಃ**—ಶತ್ರುವನ್ನು ಕೆಳಕ್ಕೆ ಉರುಳಿಸುವವನೂ । **ವೀಳಿತಃ**—ದೃಢಾಂಗನೂ । **ಪೃಥುಃ**—ವಿಸ್ತೃತವಾದ ತೇಜಸ್ಸಿನಿಂದ ವ್ಯಾಪಿಸಿರುವವನೂ । **ಸುಯಜ್ಞಃ**—ಶ್ರೇಷ್ಠವಾದ ಕರ್ಮ ಕರ್ತನೂ ಆದ । **ಇಂದ್ರಃ**—ಇಂದ್ರನು । **ಉಷಸಃ**—ಉಷಸ್ಸಿನ । **ಸ್ವಃ**—ಸೂರ್ಯಾತ್ಮಕವಾದ ಜ್ಯೋತಿಯನ್ನು । **ಜನತ್**—ಸೃಷ್ಟಿಸಿದನು.

ಭಾವಾರ್ಥ

ಅದ್ವಿತೀಯನಾದ ದಾತನೂ, ಇಷ್ಟಾರ್ಥಪ್ರದನೂ, ಅಸುರನ ಹಂತಕನೂ, ಗಾಂಭೀರ್ಯಗುಣದಿಂದ ಕೂಡಿದವನೂ, ಎಲ್ಲರಿಗೂ ಗೋಚರನಾಗುವವನೂ, ಇತರರಿಗೆ ಅರ್ಥವಾಗದ ಗೂಢವಾದ ಕರ್ಮಗಳುಳ್ಳವನೂ, ಶತ್ರುಹಿಂಸಕನೂ, ಶತ್ರುವನ್ನು ಕೆಳಕ್ಕೆ ಉರುಳಿಸಿ ನಾಶಮಾಡುವವನೂ, ದೃಢಾಂಗನೂ, ವಿಸ್ತೃತವಾದ ತೇಜಸ್ಸಿನಿಂದ ವ್ಯಾಪಿಸಿರುವವನೂ, ಶ್ರೇಷ್ಠವಾದ ಕರ್ಮಕರ್ತನೂ ಆದ ಇಂದ್ರನು ಉಷಸ್ಸಿನ ಸೂರ್ಯಾತ್ಮಕವಾದ ಜ್ಯೋತಿಯನ್ನು ಸೃಷ್ಟಿಸಿದನು.

English Translation

Unequalled in liberality, the showerer (of benefits), the slayer of the malevolent, profound, mighty, (endowed with) impenetrable sagacity, the dispenser of prosperity, the enfeebler (of foes), firm (of frame), vast (in bulk), the performer of pious acts, Indra has given birth to the light of the morning.

ವಿಶೇಷವಿಷಯಗಳು

**ಅನಾನುದಃ—ಅನು ಪಶ್ಚಾದ್ದದಾತೀತ್ಯನುದಃ । ಸ ನಾಸ್ತಿ ಯಸ್ಯ ಸ ತಥೋಕ್ತಃ । ಪ್ರಭೂತ-ಧನದಾನೇನ ಸಮಾನೋ ನಾಸ್ತೀತ್ಯರ್ಥಃ ॥** ಅನುಸರಿಸಿ ಎಂದರೆ ಒಬ್ಬರು ಕೊಟ್ಟಂತೆ ತಾನು ಕೊಡುವವನಿಗೆ ಅನುದಃ ಎಂದು ಹೆಸರು. ಅಂತವನಲ್ಲದ ಎಂದರೆ ಕೊಡುವುದರಲ್ಲಿ ತನಗೆ ಸಮಾನರಿಲ್ಲದವನಿಗೆ ಅನಾನುದಃ ಎಂದು ಹೆಸರು. ಇಂದ್ರನು ಆರೀತಿ ತನ್ನನ್ನು ಆಶ್ರಯಿಸಿದವರಿಗೆ ಯಾರಿಂದಲೂ ಕೊಡಲು ಸಾಧ್ಯವಿಲ್ಲದ ಬಹಳವಾದ ಧನಾದಿಗಳನ್ನೂ ಇಷ್ಟಾರ್ಥಗಳನ್ನೂ ಕೊಡುವವನೆಂದು ಅನಾನುದಃ ಎಂಬ ಶಬ್ದದ ಮುಖ್ಯಾರ್ಥವು.

**ವೃಷಭಃ—ಕಾಮಾನಾಂ ವರ್ಷಿತಾ ।** ವೃಷಭಶಬ್ದದ ಅನೇಕಾರ್ಥಗಳನ್ನು ನಾವು ಹಿಂದೆಯೇ ಎಂದರೆ 6-530, 10-336, 13-219, 252, 436 ಇತ್ಯಾದಿ ಸ್ಥಳಗಳಲ್ಲಿ ವಿವರಿಸಿದ್ದೇವೆ. ವೃಷ್ಟಿಯು ಯಾವರೀತಿ ಉದಕಗಳನ್ನು ಬಹಳವಾಗಿ ಸುರಿಸುವುದೋ ಅದರಂತೆ ಇಂದ್ರನು ತನ್ನ ಸ್ತೋತೃಜನರಿಗೆ ಇಷ್ಟಾರ್ಥಗಳನ್ನು ಸುರಿಸುವನು ಎಂದಭಿಪ್ರಾಯವು.

**ದೋಧತಃ ವಧಃ—ದುಧಿರ್ಹಿಂಸಾಕರ್ಮಾ । ಹಿಂಸಕಸ್ಯಾಸುರಸ್ಯ ವಧೋ ಹಂತಾ ।** ದುಧಿಶಬ್ದಕ್ಕೆ ಹಿಂಸೆಯೆಂದರ್ಥವು. ಆದ್ದರಿಂದ ದೋಧತಃ ಎಂದರೆ ಜನರಿಗೆ ಹಿಂಸೆಯನ್ನುಂಟುಮಾಡುವ ಅಸುರನ ವಧಃ–ಹಂತಕನು, ಅಸುರರನ್ನು ಕೊಲ್ಲುವವನು ಎಂದರ್ಥವು.

**ಗಂಭೀರಃ—ಮಹತ್ತ್ವೇನ ಗಾಂಭೀರ್ಯೋಪೇತಃ ।** ತನ್ನ ಮಹಾಮಹಿಮೆಯಿಂದ ಗಂಭೀರವಾಗಿ ಎಂದರೆ ಗೌರವ ಅಥವಾ ಪೂಜ್ಯತೆಯನ್ನು ಹೊಂದಿರುವವನು.

**ಋಷ್ವಃ—ಮಹಾನ್ ಯದ್ವಾ ದರ್ಶನೀಯಃ ಸರ್ವೈಃ ।** ದೊಡ್ಡವನು ಅಥವಾ ಮನೋಹರನಾದವನು. ಸುಂದರಾಕೃತಿಯುಳ್ಳವನು, ಎಲ್ಲರಿಂದಲೂ ನೋಡಲ್ಪಡುವುದಕ್ಕೆ ಅರ್ಹನು.

**ಅಸಮಷ್ಟಕಾವ್ಯಃ—ಅಶೂ ವ್ಯಾಪ್ತೌ । ಅನ್ಯೈರವ್ಯಾಪ್ತಕರ್ಮಾ ।** ಇತರರಿಂದ ಮಾಡಲಸಾಧ್ಯವಾದ ಮಹಾಕಾರ್ಯಗಳನ್ನು ಮಾಡುವವನು ಅಥವಾ ಇತರರಿಂದ ತಿಳಿಯಲೂ ಸಾಧ್ಯವಾಗದ ಮಹಾಕಾರ್ಯಗಳನ್ನು ಮಾಡುವವನೆಂದರ್ಥವು.

**ರಧ್ರಚೋದಃ—ರಧ ಹಿಂಸಾಸಂರಾದ್ಧ್ಯೋಃ । ರಧ್ರಾಣಾಂ ಸಮೃದ್ಧಾನಾಂ ಪ್ರೇರಕಃ । ಯದ್ವಾ ಹಿಂಸಕಾನಾಂ ಶತ್ರೂಣಾಂ ಚೋದಕಃ ।** ರಧ ಧಾತುವಿಗೆ ಹಿಂಸೆಮಾಡು, ಸಮೃದ್ಧಿಯನ್ನುಂಟುಮಾಡು ಎಂದು ಎರಡರ್ಥಗಳಿರುವುದರಿಂದ ರಧ್ರಶಬ್ದಕ್ಕೆ ಸಮೃದ್ಧಿ ಅಥವಾ ಹಿಂಸೆಮಾಡುವ ಶತ್ರು ಎಂದು ಅರ್ಥವು. ಆದುದರಿಂದ **ರಧ್ರಚೋದಃ** ಎಂಬ ಶಬ್ದಕ್ಕೆ ಧನಾದಿಸಮೃದ್ಧಿಗೆ ಪ್ರೇರಕನು ಎಂದರೆ ಧನಾದಿಸಮೃದ್ಧಿಯನ್ನುಂಟುಮಾಡುವವನು ಅಥವಾ ಶತ್ರುಗಳನ್ನು ಹಿಂಸಿಸುವನು ಎಂದು ಎರಡುವಿಧ ಅರ್ಥಗಳನ್ನು ಹೇಳಬಹುದು.

**ಶ್ನಥನಃ—ಶತ್ರೂಣಾಂ ಬಲಾಪಹಾರೇಣ ಶಾತಯಿತಾ ।** ಶತ್ರುಗಳ ಬಲವನ್ನು ಉಡುಗಿಸಿ (ಕಮ್ಮಿಯಾಗುವಂತೆಮಾಡಿ) ಅಥವಾ ಅಪಹರಿಸಿ ಅವರನ್ನು ಕೆಳಕ್ಕೆ ಬೀಳಿಸುವವನಾದ್ದರಿಂದ ಇಂದ್ರನಿಗೆ **ಶ್ನಥನಃ** ಎಂದು ವಿಶೇಷಣವಿದೆ.

**ವೀಳಿತಃ—ದೃಢಾಂಗಃ ।** ದೃಢವಾದ ಅವಯವಗಳುಳ್ಳವನು, ಮಹಾಬಲಶಾಲಿಯು.

**ಪೃಥುಃ—ಸ್ವತೇಜಸಾ ಜಗದ್ವ್ಯಾಪ್ಯ ವರ್ತಮಾನಃ ।** ತನ್ನ ತೇಜಸ್ಸಿನಿಂದ ಅಥವಾ ಸ್ವಸಾಮರ್ಥ್ಯದಿಂದ ಜಗತ್ತೆಲ್ಲವನ್ನೂ ವ್ಯಾಪಿಸಿ ಇರುವವನು ಎಂದರೆ ಜಗತ್ತೆಲ್ಲವನ್ನೂ ತನ್ನ ಅಧೀನದಲ್ಲಿರಿಸಿಕೊಂಡಿರುವವನು ಎಂದಭಿಪ್ರಾಯವು.

**ಸುಯಜ್ಞಃ—ಸುಕರ್ಮಾ ।** ಉತ್ತಮವಾದ ಕರ್ಮಗಳುಳ್ಳವನು ಎಂದರೆ ಶ್ರೇಷ್ಠವಾದ ಅಥವಾ ಶೋಭನವಾದ ಕಾರ್ಯಗಳನ್ನು ಮಾಡತಕ್ಕವನು. ಯಜ್ಞಶಬ್ದಕ್ಕೆ ಕರ್ಮವೆಂದು ನಿರುಕ್ತವಚನವಿದೆ (ನಿ. ೮-೮).

**ಇಂದ್ರಃ ಉಷಸಃ ಸ್ವಃ ಜನತ್—ಏತಾದೃಶ ಇಂದ್ರ ಉಷಸಃ ಸ್ವಃ ಸೂರ್ಯಂ ಜ್ಯೋತಿಃ । ಸ್ವಃ ಸೂರ್ಯ ಇತಿ ಹಿ ಬ್ರಾಹ್ಮಣಂ ಸೂರ್ಯಂ ಚ ಜನತ್ । ಪ್ರಾದುಶ್ಚಕಾರ ।** ಇಂತಹ ಗುಣವಿಶಿಷ್ಟನಾದ ಇಂದ್ರನು ಉಷಃಕಾಲದ ಕಾಂತಿಯನ್ನು ಅಥವಾ ಉಷಸ್ಸನ್ನೂ, ಸೂರ್ಯನನ್ನೂ ಸಹ ಸೃಷ್ಟಿಸಿದನು. ಸ್ವಃ ಎಂಬ ಶಬ್ದಕ್ಕೆ ಸೂರ್ಯನೆಂದು ಅರ್ಥವಿರುವ ಬ್ರಾಹ್ಮಣ ವಾಕ್ಯವನ್ನು ಭಾಷ್ಯಕಾರರು ಉದಾಹರಿಸಿದ್ದಾರೆ.

———:o:———

ಸಂಹಿತಾಪಾಠಃ

ಯಜ್ಞೇನ ಗಾತುಮಪ್ತುರೋ ವಿವಿದ್ರಿರೇ ಧಿಯೋ ಹಿನ್ವಾನಾ ಉಶಿಜೋ ಮನೀಷಿಣಃ ।

ಅಭಿಸ್ವರಾ ನಿಷದಾ ಗಾ ಅವಸ್ಯವ ಇನ್ದ್ರೇ ಹಿನ್ವಾನಾ ದ್ರವಿಣಾನ್ಯಾಶತ ॥೫॥

ಪದಪಾಠಃ

ಯಜ್ಞೇನ । ಗಾತುಂ । ಅಪ್ಽತುರಃ । ವಿವಿದ್ರಿರೇ । ಧಿಯಃ । ಹಿನ್ವಾನಾಃ । ಉಶಿಜಃ । ಮನೀಷಿಣಃ ।

ಅಭಿಽಸ್ವರಾ । ನಿಽಸದಾ । ಗಾಃ । ಅವಸ್ಯವಃ । ಇನ್ದ್ರೇ । ಹಿನ್ವಾನಾಃ । ದ್ರವಿಣಾನಿ । ಆಶತ ॥ ೫ ॥

ಸಾಯಣಭಾಷ್ಯಂ

ಧಿಯೋ ಹಿನ್ವಾನಾಃ ಸ್ತುತೀರಿಂದ್ರೇ ಪ್ರೇರಯಂತ ಉಶಿಜ ಇಂದ್ರಂ ಕಾಮಯಮಾನಾ ಮನೀಷಿಣೋ ಮೇಧಾವಿನೋಽಂಗಿರಸೋಽಪ್ತುರೋಽಪಾಂ ಪ್ರೇರಕಾದಿಂದ್ರಾದ್ಗಾತುಂ ಗವಾಂ ಮಾರ್ಗಂ ಯಜ್ಞೇನ ತಪಸಾ ವಿವಿದ್ರಿರೇ । ಲೇಭಿರೇ । ತತೋಽವಸ್ಯವೋ ರಕ್ಷಣಮಿಚ್ಛಂತ ಇಂದ್ರೇ ಗಾಃ ಸ್ತುತೀರ್ಹಿನ್ವಾನಾಃ ॥ ಹಿ ಗತಿವೃದ್ಧ್ಯೋಃ ಸ್ವಾದಿಃ ॥ ಪ್ರೇರಯಂತಸ್ತೇಽಂಗಿರಸೋಽಭಿಸ್ವರಾ ಅಭಿತಃ ಸ್ವರಃ ಸ್ವರಣಂ ಶಬ್ದನಂ ಯಸ್ಯ ತೇನ ಸ್ತೋತ್ರೇಣ ನಿಷದೋಪಸದೇನ ಚ ದ್ರವಿಣಾನಿ ಗೋಧನಾನ್ಯಾಶತ । ಪ್ರಾಪ್ನುವನ್ ॥ ಅಶ್ನೋತೇರ್ಲುಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥

ಪ್ರತಿಪದಾರ್ಥ

ಧಿಯಃ—ಸ್ತುತಿಗಳನ್ನು । ಹಿನ್ವಾನಾಃ—ಇಂದ್ರನಲ್ಲಿ ಅರ್ಪಿಸುವವರೂ । ಉಶಿಜಃ—ಇಂದ್ರನ ಸಹಾಯವನ್ನಪೇಕ್ಷಿಸುವವರೂ । ಮನೀಷಿಣಃ—ಮೇಧಾವಿಗಳೂ ಆದ ಅಂಗಿರಸ್ಸುಗಳು । ಅಪ್ತುರಃ—ಉದಕಕ್ಕೆ ನಿದಾನಭೂತನಾದ ಇಂದ್ರನಿಂದ । ಗಾತುಂ—(ಗೋವುಗಳ) ಮಾರ್ಗವನ್ನು । ಯಜ್ಞೇನ—ತಪಸ್ಸಿನ ಮೂಲಕವಾಗಿ । ವಿವಿದ್ರಿರೇ—ಕಂಡುಹಿಡಿದರು । ಅವಸ್ಯವಃ—ರಕ್ಷಣೆಯನ್ನು ಅಪೇಕ್ಷಿಸಿದವರಾಗಿ । ಇಂದ್ರೇ—ಇಂದ್ರನಲ್ಲಿ । ಗಾಃ—ಸ್ತುತಿಗಳನ್ನು । ಹಿನ್ವಾನಾಃ—ಅರ್ಪಿಸುವ ಅಂಗಿರಾ ಋಷಿಗಳು । ಅಭಿಸ್ವರಾ—ಶಬ್ದಾತ್ಮಕವಾದ ಸ್ತೋತ್ರಗಳ ಪಠನದಿಂದಲೂ । ನಿಷದಾ—ಉಪಾಸನೆಗಳಿಂದಲೂ । ದ್ರವಿಣಾನಿ—ಗೋಧನಗಳನ್ನು । ಆಶತ—ಪಡೆದರು.

ಭಾವಾರ್ಥ

ಇಂದ್ರನಲ್ಲಿ ಸ್ತುತಿಗಳನ್ನು ಅರ್ಪಿಸುನವರೂ, ಇಂದ್ರನ ಸಹಾಯವನ್ನಪೇಕ್ಷಿಸುವವರೂ, ಮೇಧಾವಿಗಳೂ ಆದ ಅಂಗಿರಸ್ಸುಗಳು ಉದಕಕ್ಕೆ ನಿದಾನಭೂತನಾದ ಇಂದ್ರನಿಂದ ಗೋವುಗಳ ಮಾರ್ಗವನ್ನು ತಪಸ್ಸಿನ ಮೂಲಕವಾಗಿ

ಕಂಡುಹಿಡಿದರು. ರಕ್ಷಣೆಯನ್ನು ಅಪೇಕ್ಷಿಸಿದವವರಾಗಿ ಇಂದ್ರನಲ್ಲಿ ಸ್ತುತಿಗಳನ್ನು ಅರ್ಪಿಸುವ ಅಂಗಿರಾ ಋಷಿಗಳು ಶಬ್ದಾತ್ಮಕವಾದ ಸ್ತೋತ್ರಗಳ ಪಠನದಿಂದಲೂ, ಉಪಾಸನೆಗಳಿಂದಲೂ ಗೋರೂಪವಾದ ಧನಗಳನ್ನು ಪಡೆದರು.

## English Translation

The wise Usijas, celebrating his praises, have obtained by their sacrifice, from the sender of water, (knowledge) of the path (of their cattle): seeking the aid of Indra, and celebrating his praises, they have acquired, whilst uttering hymns and offering adoration, (valuable) treasures.

## ವಿಶೇಷವಿಷಯಗಳು

**ಧಿಯಃ ಹಿನ್ವಾನಾಃ ಉಶಿಜಃ ಮನೀಷಿಣಃ ಅಪ್ತುರಃ ಗಾತುಂ ಯಜ್ಞೇನ ವಿವಿದ್ರಿರೇ**—ಸ್ತುತಿಯನ್ನು ಇಂದ್ರನಲ್ಲಿ ಅರ್ಪಿಸುವವರೂ ಇಂದ್ರನ ಸಹಾಯವನ್ನು ಅಪೇಕ್ಷಿಸುವವರೂ, ಮೇಧಾವಿಗಳೂ ಆದ ಅಂಗಿರಾಋಷಿಗಳು ತಾವು ಆಚರಿಸಿದ ಯಜ್ಞಕರ್ಮದ ಮಹಿಮೆಯಿಂದ ಅಪಹೃತವಾದ ತಮ್ಮ ಗೋವುಗಳನ್ನು ಹುಡುಕುತ್ತಾ ಇಂದ್ರನ ಸಹಾಯದಿಂದ ಆ ಮಾರ್ಗವನ್ನು ಕಂಡುಹಿಡಿದರು. ಪೂರ್ವದಲ್ಲಿ ವಲನೂ, ಅವನ ಸಹಾಯಕರಾದ ಪಣಿಗಳೂ ಅಂಗಿರಾಋಷಿಗಳ ಗೋವುಗಳನ್ನು ಅಪಹರಿಸಿ ಅವುಗಳನ್ನು ರಹಸ್ಯವಾದ ಪ್ರದೇಶವಲ್ಲಿ ಎಂದರೆ ಪರ್ವತ ಗುಹೆಗಳಲ್ಲಿ ಬಚ್ಚಿಟ್ಟಿದ್ದರು. ಅವುಗಳನ್ನು ಹುಡುಕುವುದಕ್ಕಾಗಿ ಇಂದ್ರನು ದೇವಶುನಿಯಾದ ಸರಮೆಯನ್ನು ಕಳುಹಿಸಿದನು- ಆ ಸರಮೆಯು ಬಹುದೂರ ಪ್ರಯಾಣಮಾಡಿ ರಸಾ ಎಂಬ ಬಹು ಆಳವಾದ ನದಿಯನ್ನು ದಾಟಿ ಪಣಿಗಳು ಇದ್ದ ಪ್ರದೇಶಕ್ಕೆ ಹೋಗಿ ಇಂದ್ರನ ಪರವಾಗಿ ಮಾತನಾಡುತ್ತಾ ಅಪಹೃತಗೋವುಗಳನ್ನು ತಂದೊಪ್ಪಿಸಬೇಕೆಂದು ಹೇಳಲು ಅವರು ಅದರ ಮಾತನ್ನು ತಿರಸ್ಕರಿಸಿದರು. ಈ ಮಧ್ಯೆ ಅಂಗಿರಾಋಷಿಗಳು ತಾವು ಮಾಡಿದ ಯಜ್ಞಗಳ ಮಹಿಮೆಯಿಂದ ಅಪಹೃತಗೋವುಗಳನ್ನು ಬಚ್ಚಿಟ್ಟಿದ್ದ ಪ್ರದೇಶವನ್ನು ಇಂದ್ರನ ಸಹಾಯದಿಂದ ಕಂಡುಹಿಡಿದರು. ಈ ವಿಷಯವು ಹಿಂದೆ ಅನೇಕಾವರ್ತಿ ವಿವರಿಸಲ್ಪಟ್ಟಿದೆ. ಮತ್ತು ಋ. ಸಂ. ೧೦-೧೦೮ ನೆಯ ಸೂಕ್ತದಲ್ಲಿಯೂ ಈ ವಿಷಯದ ವರ್ಣನೆ ಇದೆ. ಪ್ರಕೃತಋಕ್ಕಿನಲ್ಲಿ ಅಂಗಿರಾ ಎಂಬ ಶಬ್ದಪ್ರಯೋಗವಿಲ್ಲದಿದ್ದರೂ ಅಪಹೃತ ಗೋವುಗಳನ್ನು ಕಂಡು ಹಿಡಿದರು ಎಂಬ ವಿಷಯವಿರುವುದರಿಂದ ಅಂಗಿರಾಋಷಿಗಳೇ ಇಲ್ಲಿ ನಿರ್ದಿಷ್ಟರಾಗಿರುವರೆಂದು ತಿಳಿಯಬೇಕು.

**ಅಭಿಸ್ವರಾ ನಿಷದಾ ಅವಸ್ಯವಃ ಇಂದ್ರೇ ಗಾಃ ಹಿನ್ವಾನಾಃ ದ್ರವಿಣಾನಿ ಆಶತ—ತತೋ ಅವಸ್ಯವೋ ರಕ್ಷಣಮಿಚ್ಛಂತ ಇಂದ್ರೇ ಸ್ತುತೀಃ ಹಿನ್ವಾನಾಃ ಪ್ರೇರಯಂತೋಽಙ್ಗಿರಸೋಽಭಿಸ್ವರಾ ಅಭಿತಃ ಸ್ವರಣಂ ಶಬ್ದನಂ ಯಸ್ಯ ತೇನ ಸ್ತೋತ್ರೇಣ ನಿಷದೋಪಸದೇನ ಚ ದ್ರವಿಣಾನಿ ಗೋಧನಾನ್ಯಾಶತ ಪ್ರಾಪ್ನುವನ್ ।** ಗೋವುಗಳು ಇರತಕ್ಕ ಸ್ಥಳವನ್ನು ಕಂಡುಹಿಡಿದನಂತರ ಆ ಅಂಗಿರಾಋಷಿಗಳು ಇಂದ್ರನನ್ನು ಗಾನರೂಪವಾದ ಸ್ತೋತ್ರಗಳಿಂದ ಸ್ತುತಿಸಿ ಗೋರೂಪವಾದ ಧನಗಳನ್ನು ಎಂದರೆ ಕಳೆದುಹೋಗಿದ್ದ ಗೋವುಗಳನ್ನು ಮತ್ತೆ ಹಿಂದಕ್ಕೆ ಪಡೆದರು ಎಂದಭಿಪ್ರಾಯವು.

**ಅಭಿಸ್ವರಾ—ಅಭಿತಃ ಸ್ವರಃ ಸ್ವರಣಂ ಶಬ್ದನಂ ಯಸ್ಯ ತೇನ ಸ್ತೋತ್ರೇಣ**—ಅಭಿಮುಖವಾಗಿ ನಿಂದು ಶಬ್ದಪೂರ್ವಕವಾಗಿ ಮಂತ್ರಗಳನ್ನು ಪಠಿಸುತ್ತಾ ಎಂದರೆ ಸ್ತೋತ್ರಮಾಡುವುದರಿಂದ ಎಂದರ್ಥವು.

**ನಿಷದಾ— ಉಪಸದೇನ ಚ ।** ಹತ್ತಿರ ನಿಂತು ಉಪಾಸನೆಮಾಡುವುದರಿಂದ ಅಥವಾ ಯಜ್ಞಾದಿಕರ್ಮ ಗಳನ್ನು ಆಚರಿಸುವುದರಿಂದ.

**ಗಾಃ ಹಿನ್ವಾನಾಃ— ಸ್ತುತೀಃ ।** ವಾಕ್ಯರೂಪವಾದ ಸ್ತೋತ್ರಗಳು. ಇವುಗಳಿಂದ ಇಂದ್ರನನ್ನು ಪ್ರೇರಿಸುವ ಎಂದರೆ ಸ್ತೋತ್ರಮಾಡುವ ಎಂದರ್ಥವು.

**ಅವಸ್ಯವಃ—** ಅವ ರಕ್ಷಣೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಇಂದ್ರನ ರಕ್ಷಣೆಯನ್ನು ಅಪೇಕ್ಷಿಸುವ ಅಂಗಿರಾಋಷಿಗಳು ಎಂದರ್ಥವು.

**ದ್ರವಿಣಾನಿ—** ದ್ರವಿಣಶಬ್ದವು ಧನನಾಮಗಳಲ್ಲಿ ಪಠಿತವಾಗಿರುವುದರಿಂದ ಧನಗಳು ಎಂದರ್ಥವು. ಇಲ್ಲಿ ಗೋರೂಪವಾದ ಧನಗಳು ಎಂದರೆ ಅಪಹೃತವಾಗಿದ್ದ ಗೋವುಗಳನ್ನು ಎಂದಭಿಪ್ರಾಯವು.

ಬುದ್ಧಿವಂತರೂ ಇಂದ್ರನ ರಕ್ಷಣೆಯನ್ನು ಬಯಸುವವರೂ ಆದ ಅಂಗಿರಾಋಷಿಗಳು ಇಂದ್ರನನ್ನು ಯಜ್ಞ ಯಾಗಾದಿಗಳಿಂದಲೂ, ಸ್ತೋತ್ರಗಳಿಂದಲೂ ಆರಾಧಿಸಿ ಅವನ ಅನುಗ್ರಹದಿಂದ ಪಣಿಗಳು ಅಪಹರಿಸಿದ್ದ ತಮ್ಮ ಗೋವುಗಳಿದ್ದ ಸ್ಥಳವನ್ನು ಕಂಡುಕೊಂಡು ಇಂದ್ರನ ಸಹಾಯದಿಂದಲೇ ಅವುಗಳನ್ನು ಹಿಂದಕ್ಕೆ ಪಡೆದರು ಎಂದು ಮುಖ್ಯಾಭಿಪ್ರಾಯವು.

---

**ಸಂಹಿತಾಪಾಠಃ**

ಇನ್ದ್ರ ಶ್ರೇಷ್ಠಾನಿ ದ್ರವಿಣಾನಿ ಧೇಹಿ ಚಿತ್ತಿಂ ದಕ್ಷಸ್ಯ ಸುಭಗತ್ವಮಸ್ಮೇ ।
ಪೋಷಂ ರಯೀಣಾಮರಿಷ್ಟಿಂ ತನೂನಾಂ ಸ್ವಾದ್ಮಾನಂ ವಾಚಃ ಸುದಿನತ್ವ-
ಮಹ್ನಾಂ ॥ ೬ ॥

**ಪದಪಾಠಃ**

ಇನ್ದ್ರ । ಶ್ರೇಷ್ಠಾನಿ । ದ್ರವಿಣಾನಿ । ಧೇಹಿ । ಚಿತ್ತಿಂ । ದಕ್ಷಸ್ಯ । ಸುಭಗऽತ್ವಂ । ಅಸ್ಮೇ ಇತಿ ।
ಪೋಷಂ । ರಯೀಣಾಂ । ಅರಿಷ್ಟಿಂ । ತನೂನಾಂ । ಸ್ವಾದ್ಮಾನಂ । ವಾಚಃ । ಸುದಿನऽತ್ವಂ । ಅಹ್ನಾಂ ॥ ೬ ॥

**ಸಾಯಣಭಾಷ್ಯಂ**

ಹೇ ಇಂದ್ರ ಶ್ರೇಷ್ಠಾನ್ಯುತ್ತಮಾನಿ ದ್ರವಿಣಾನಿ ಧನಾನ್ಯಸ್ಮಭ್ಯಂ ಧೇಹಿ । ನಿಧೇಹಿ । ದಕ್ಷಸ್ಯ ॥ ದಕ್ಷೇರ್ಭಾವೇ ಘಞ್ ॥ ಕರ್ಮಕರಣಸಾಮರ್ಥ್ಯಸ್ಯ ಚಿತ್ತಿಂ ಖ್ಯಾತಿಂ ಧೇಹಿ । ಅಸ್ಮೇ ಅಸ್ಮಭ್ಯಂ ಸುಭಗತ್ವಂ ಶೋಭನಧನವತ್ತ್ವಂ ಸೌಭಾಗ್ಯಂ ವಾ ನಿಧೇಹಿ । ರಯೀಣಾಂ ತ್ವಯಾ ದತ್ತಾನಾಂ ಧನಾನಾಂ ಪೋಷಂ ಸಮೃದ್ಧಿಂ ಧೇಹಿ । ತನೂನಾಮಂಗಾನಾಂ । ಯದ್ವಾ ತಾಯತ ಏಭಿಃ ಕುಲಮಿತಿ ತನ್ವಃ ಪುತ್ರಾಃ ।

ತನೋತೇಃ ಕರಣ ಉಪ್ರತ್ಯಯಃ ॥ ತೇಷಾಮರಿಷ್ಟಿಮಹಿಂಸಾಂ ಧೇಹಿ । ತಥಾಸ್ಮದೀಯಾಯಾ ವಾಚಃ ಸ್ವಾದ್ಮಾನಂ ಸ್ವಾದುತಾಂ । ಅಹ್ನಾಂ ಸುದಿನತ್ವಂ ಶೋಭನದಿನತ್ವಂ ಚ ಧೇಹಿ । ಯೇಷು ಹೀಂದ್ರಾದಯೋ ದೇವಾ ಇಜ್ಯಂತೇ ತಾನಿ ಸುದಿನಾನಿ । ತೇಷಾಂ ಭಾವಃ ಸುದಿನತ್ವಂ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ಶ್ರೇಷ್ಠಾನಿ**—ಉತ್ತಮವಾದ । **ದ್ರವಿಣಾನಿ**—ಧನಗಳನ್ನು । **ಧೇಹಿ**—ನಮಗೆ ಕೊಡು । **ದಕ್ಷಸ್ಯ**—(ಕರ್ಮಾಚರಣೆಗೆ) ಸಮರ್ಥವಾದ । **ಚಿತ್ತಿಂ**—ಪ್ರಖ್ಯಾತಿಯನ್ನು ಕೊಡು । **ಅಸ್ಮೇ**—ನಮಗೆ । **ಸುಭಗತ್ವಂ**—ಸೌಭಾಗ್ಯವನ್ನೂ (ಕೊಡು) । **ರಯೀಣಾಂ**—(ನಿನ್ನಿಂದ ದತ್ತವಾದ) ಧನಗಳ । **ಪೋಷಂ**—ಸಮೃದ್ಧಿಯನ್ನೂ (ಕೊಡು) । **ತನೂನಾಂ**—ನಮ್ಮ ದೇಹಗಳಿಗೆ (ಅಥವಾ ನಮ್ಮ ತನುಜರಿಗೆ) । **ಅರಿಷ್ಟಿಂ**—ಹಿಂಸೆಯನ್ನು ಉಂಟುಮಾಡಬೇಡ । **ವಾಚಃ**—ಸ್ತುತಿವಾಕ್ಕುಗಳ । **ಸ್ವಾದ್ಮಾನಂ**—ಸ್ವಾದುತೆಯನ್ನೂ । **ಅಹ್ನಾಂ**—ಅಹಸ್ಸುಗಳ । **ಸುದಿನತ್ವಂ**—(ಇಂದ್ರಾದಿಗಳನ್ನು ಪೂಜಿಸುವ) ಸುದಿನತ್ವವನ್ನೂ ಉಂಟುಮಾಡು.

ಭಾವಾರ್ಥ

ಎಲೈ ಇಂದ್ರನೇ, ನಮಗೆ ಉತ್ತಮವಾದ ಧನಗಳನ್ನೂ, ಕರ್ಮಾಚರಣೆಗೆ ಸಮರ್ಥವಾದ ಪ್ರಖ್ಯಾತಿಯನ್ನೂ, ಸೌಭಾಗ್ಯವನ್ನೂ, ಧನಸಮೃದ್ಧಿಯನ್ನೂ ಕೊಡು. ನಮ್ಮ ಶರೀರಗಳಿಗೂ ಪುತ್ರರಿಗೂ ಅಹಿಂಸಾತ್ಮಕವಾದ ಸುಖವನ್ನುಂಟುಮಾಡು. ನಮ್ಮ ಸ್ತುತಿವಾಕ್ಕುಗಳಲ್ಲಿ ಸ್ವಾದುತೆಯನ್ನೂ, ಅಹಸ್ಸುಗಳು ಇಂದ್ರಾದಿಗಳನ್ನು ಪೂಜಿಸುವ ಶ್ರೇಷ್ಠತೆಯನ್ನೂ ಪಡೆಯುವಂತೆ ಮಾಡು.

English Translation

Indra, bestow upon us most excellent treasures, (give us) the reputation of ability (to celebrate sacred rites): grant us prosperity, increase of wealth, security of person, sweetness of speech, and auspiciousness of days.

ವಿಶೇಷವಿಷಯಗಳು

ಸೂಕ್ತದ ಉಪಸಂಹಾರರೂಪವಾದ ಈ ಕೊನೆಯ ಋಕ್ಕಿನಲ್ಲಿ ಋಷಿಯು ಧನಾದಿಗಳೇ ಮೊದಲಾದ ಇಷ್ಟಾರ್ಥಗಳನ್ನು ಕೊಡಬೇಕೆಂದು ಇಂದ್ರನನ್ನು ಪ್ರಾರ್ಥಿಸಿರುವನು.

**ಇಂದ್ರ ಶ್ರೇಷ್ಠಾನಿ ದ್ರವಿಣಾನಿ ಧೇಹಿ**—ದ್ರವಿಣಶಬ್ದವು ಧನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಎಲೈ ಇಂದ್ರನೇ, ನಮಗೆ ಉತ್ತಮವಾದ ಧನಗಳನ್ನು ಕೊಡು ಎಂದರ್ಥವು.

**ಚಿತ್ತಿಂ ದಕ್ಷಸ್ಯ ಸುಭಗತ್ವಂ ಅಸ್ಮೇ (ಧೇಹಿ)**—**ಕರ್ಮಕರಣಸಾಮರ್ಥ್ಯಸ್ಯ ಚಿತ್ತಿಂ ಖ್ಯಾತಿಂ ಧೇಹಿ। ಅಸ್ಮಭ್ಯಂ ಸುಭಗತ್ವಂ ಶೋಭನಧನವತ್ತ್ವಂ ಸೌಭಾಗ್ಯಂ ವಾ ನಿಧೇಹಿ।** ದಕ್ಷಶಬ್ದಕ್ಕೆ ಆದಿತ್ಯ, ಅದಿತಿಯ ಎಂಟು ಜನ ಪುತ್ರರಲ್ಲಿ ದಕ್ಷನೆಂಬ ಹೆಸರಿನವನು, ಸಮರ್ಥವಾದ, ಮೊದಲಾದ ಅನೇಕಾರ್ಥಗಳಿದ್ದರೂ ಇಲ್ಲಿ ದಕ್ಷಶಬ್ದವು ಸಾಮರ್ಥ್ಯವನ್ನು ಸೂಚಿಸುವ ಅರ್ಥದಲ್ಲಿ ಪ್ರಯುಕ್ತವಾಗಿದೆ. ಯಜ್ಞಾದಿಕರ್ಮಗಳಲ್ಲಿಯೂ ಇಂದ್ರನೇ ಮೊದಲಾದ

ದೇವತೆಗಳನ್ನು ಸ್ತೋತ್ರಮಾಡುವ ವಿಷಯದಲ್ಲಿಯೂ ನಮ್ಮ ಸಾಮರ್ಥ್ಯಕ್ಕೆ ಕೀರ್ತಿಯುಂಟಾಗುವಂತೆ ಅನುಗ್ರಹಿಸು. ಎಂದರೆ ಯಜ್ಞಾನುಷ್ಠಾನಾದಿಗಳಲ್ಲಿ ನಮಗಿರುವ ಸಾಮರ್ಥ್ಯವು ಎಲ್ಲರಿಗೂ ತಿಳಿಯುವಂತಾಗಲಿ ಎಂದಭಿಪ್ರಾಯವು. ಅಸ್ಮೇ ಎಂಬ ಶಬ್ದವು ಏಳು ವಿಭಕ್ತ್ಯರ್ಥಗಳಲ್ಲಿಯೂ ಉಪಯೋಗಿಸಲ್ಪಡುವುದು. ಇಲ್ಲಿ ನಮಗೆ ಎಂದು ಪಂಚಮೀ ವಿಭಕ್ತ್ಯರ್ಥವು ಉಕ್ತವಾಗಿರುವುದು. ಸುಭಗತ್ವಂ ಎಂಬ ಶಬ್ದಕ್ಕೆ ಭಾಷ್ಯಕಾರರು ಎರಡುವಿಧ ಅರ್ಥಗಳನ್ನು ಹೇಳಿರುವರು. ಭಗಶಬ್ದವು ಧನನಾಮಗಳಲ್ಲಿ (ನಿ. ೩-೯) ಪಠಿತವಾಗಿರುವುದರಿಂದ ಉತ್ತಮವಾದ ಧನವನ್ನು ಪಡೆಯುವುದು ಎಂದೂ ಅಥವಾ ಸೌಭಾಗ್ಯಂ—ಶ್ರೇಷ್ಠವಾದ ಕಲ್ಯಾಣ ಅಥವಾ ಕ್ಷೇಮ ಎಂದೂ ಎರಡುವಿಧ ಅರ್ಥವನ್ನು ಹೇಳಿದ್ದಾರೆ. ಆದ್ದರಿಂದ ಎಲೈ ಇಂದ್ರನೇ, ನೀನು ನಮಗೆ ಉತ್ತಮವಾದ ಧನಪ್ರಾಪ್ತಿ ಅಥವಾ ಕುಶಲತೆಯುಂದಿರುವಂತೆ ಅನುಗ್ರಹಿಸು ಎಂದು ವಾಕ್ಯಾಭಿಪ್ರಾಯವು

**ಪೋಷಂ ರಯೀಣಾಂ—ತ್ವಯಾ ದತ್ತಾನಾಂ ಧನಾನಾಂ ಪೋಷಂ ಸಮೃದ್ಧಿಂ ದೇಹಿ**—ಎಲೈ ಇಂದ್ರನೇ, ನೀನು ಕೊಟ್ಟ ಧನಾದಿಗಳು ಇನ್ನೂ ಅಭಿವೃದ್ಧಿಯಾಗುವಂತೆ ಮಾಡು ಎಂದು ಪ್ರಾರ್ಥಿಸಲಾಗಿದೆ.

**ಅರಿಷ್ಟಿಂ ತನೂನಾಂ—ತನೂನಾಮಂಗಾನಾಂ ಯದ್ವಾ ತಾಯತೆ ಏಭಿಃ ಕುಲಮಿತಿ ತನ್ವಃ ಪುತ್ರಾಃ। ತನೋತೇಃ ಕರಣ ಉಪ್ರತ್ಯಯಃ। ತೇಷಾಮರಿಷ್ಟಿಮಹಿಂಸಾಂ ಧೇಹಿ।** ತನೂನಾಂ ಎಂದರೆ ಅವಯವಗಳಿಗೆ ಅಥವಾ ಕೈ, ಕಾಲು ಮೊದಲಾದ ದೇಹದ ನಾನಾ ಅಂಗಗಳಿಗೆ ಎಂದು ಒಂದುವಿಧವಾದ ಅರ್ಥವೂ, **ತನು ವಿಸ್ತಾರೇ** ಎಂಬ ಧಾತುವಿನಿಂದ ನಿಷ್ಪನ್ನವಾದ ತನುಶಬ್ದಕ್ಕೆ ವಿಸ್ತಾರಮಾಡುವುದು ಎಂದರ್ಥವಾಗುವುದರಿಂದ ತನೂನಾಂ ಎಂದರೆ ಕುಲವನ್ನು ವಿಸ್ತಾರಮಾಡುವ, ವಂಶವನ್ನು ಅಭಿವೃದ್ಧಿಪಡಿಸುವ ಪುತ್ರರಿಗೆ ಎಂದೂ ಇನ್ನೊಂದು ವಿಧವಾದ ಅರ್ಥವೂ ಆಗುವುದು. ಆದುದರಿಂದ ನಮ್ಮ ಶರೀರದ ಕರಚರಣಾದಿ ನಾನಾ ಅಂಗಗಳಿಗೂ ಅಥವಾ ನಮ್ಮ ಪುತ್ರಾದಿಗಳಿಗೂ ಹಿಂಸೆಯುಂಟಾಗದಂತೆ ಮಾಡು ಎಂದು ವಾಕ್ಯಾಭಿಪ್ರಾಯವು.

**ಸ್ವಾದ್ಮಾನಂ ವಾಚಃ—ಅಸ್ಮದೀಯಾಯಾ ವಾಚಃ ಸ್ವಾದ್ಮಾನಂ ಸ್ವಾದುತಾಂ।** ನಾವು ಮಾತನಾಡುವ ವಾಕ್ಯಗಳಲ್ಲಿ ಅಥವಾ ನಾವು ಇಂದ್ರನಾದ ನಿನ್ನನ್ನು ಉದ್ದೇಶಿಸಿ ಮಾಡುವ ಸ್ತೋತ್ರರೂಪವಾದ ವಾಕ್ಯಗಳಲ್ಲಿ ನಯವಿನಯಾದಿಗಳಿಂದಲೂ ಪ್ರಾರ್ಥನಾದಿಗಳಿಂದಲೂ ಕೂಡಿ ಮೃದುವಾಗಿಯೂ ಶ್ರಾವ್ಯವಾಗಿಯೂ ಇರುವ ಮನೋಹರತ್ವವು (ಮೃದುಮಧುರತ್ವವು) ಇರುವಂತೆ ಅನುಗ್ರಹಿಸು ಎಂದು ಮುಖ್ಯಾಭಿಪ್ರಾಯವು.

**ಸುದಿನತ್ವಂ ಅಹ್ನಾಂ—ಸುದಿನತ್ವಂ ಶೋಭನದಿನತ್ವಂ ಚ ಧೇಹಿ। ಯೇಷು ಹೀಂದ್ರಾದಯೋ ದೇವಾ ಇಜ್ಯಂತೇ ತಾನಿ ಸುದಿನಾನಿ। ತೇಷಾಂ ಭಾವಃ ಸುದಿನತ್ವಂ।** ಇಂದ್ರಾದಿ ದೇವತೆಗಳನ್ನು ಯಜ್ಞಾದಿಗಳಲ್ಲಿ ಸ್ತುತಿಸಿ ಯಜಿಸುವ ದಿನವೇ ಸುದಿನವು ಎಂದರೆ ಒಳ್ಳೆಯ ದಿನವು. ದಿನಗಳಲ್ಲಿ ಇಂತಹ ಸುದಿನಗಳೇ ಹೆಚ್ಚಾಗಿರುವಂತೆ ಮಾಡು ಎಂದರೆ ಅನೇಕ ದಿನಗಳಲ್ಲಿ ಇಂದ್ರಾದಿ ದೇವತೆಗಳನ್ನು ಸ್ತುತಿಸಿ, ಆರಾಧಿಸಿ ನಿನ್ನ ಅನುಗ್ರಹವನ್ನು ಪಡೆಯಲು ಅನುಕೂಲವಾಗುವಂತೆ ಮಾಡು ಎಂದು ಪ್ರಾರ್ಥಿಸಲಾಗಿದೆ.

———

# ಇಪ್ಪತ್ತೆರಡನೆಯ ಸೂಕ್ತವು.

## ಸಾಯಣಭಾಷ್ಯಂ

ತ್ರಿಕದ್ರುಕೇಷ್ವಿತಿ ಚತುರ್ಋಚಮೇಕಾದಶಂ ಸೂಕ್ತಂ ಗಾರ್ತ್ಸಮದಮೈಂದ್ರಂ । ಅತ್ರೇಯ ಮನುಕ್ರಮಣಿಕಾ । ತ್ರಿಕದ್ರುಕೇಷು ಚತುಷ್ಕಮಷ್ಟ್ಯಾದ್ಯತಿಶಾಕ್ವರಮಂತ್ಯಾಷ್ಟಿರ್ವೇತಿ । ಆದ್ಯಾಯಾ ಮಷ್ಟಿಶ್ಛಂದಶ್ಚತುಃಷಷ್ಟ್ಯಕ್ಷರಾ । ಅವಶಿಷ್ಟಾಃ ಷಷ್ಟ್ಯಕ್ಷರಾ ಅತಿಶಕ್ವರ್ಯಃ । ಅಂತ್ಯಾಷ್ಟಿರ್ವಾ ॥ ಷೋಡಶಿಶಸ್ತ್ರೇ ತ್ರಿಕದ್ರುಕೇಷ್ವಿತಿ ತೃಚಃ । ಸೂತ್ರಿತಂ । ತ್ರಿಕದ್ರುಕೇಷು ಮಹಿಷೋ ಯವಾಶಿರಂ ಪ್ರೋ ಷ್ವಸ್ಮೈ ಪುರೋರಥಮಿತಿ ತೃಚಾವಾತಿಛಂದಸೌ । ಆ. ೬-೨ । ಇತಿ ॥ ಅವಿವಾಕ್ಯೇಽಹನಿ ಮರುತ್ವತೀಯೇ ಪ್ರತಿಪತ್ತ್ಯೃಚಸ್ಯ ತ್ರಿಕದ್ರುಕೇಷ್ವಿತಿ ಪ್ರಥಮಾ । ದಶಮೇಽಹನೀತಿ ಖಂಡೇ ಸೂತ್ರಿತಂ। ಆ ತ್ವಾ ರಥಂ ಯಥೋತಯ ಇತ್ಯೇತಸ್ಯಾಃ ಸ್ಥಾನೇ ತ್ರಿಕದ್ರುಕೇಷು ಮಹಿಷೋ ಯವಾಶಿರಮಿತಿ । ಆ. ೮-೧೨ । ಇತಿ ॥ ಆಶ್ವಮೇಧಿಕೇ ಮಧ್ಯಮೇಽಹನಿ ಮರುತ್ವತೀಯ ಆದ್ಯಾ। ತಸ್ಯ ವಿಶೇಷಾನ್ವಕ್ಷ್ಯಾಮ ಇತಿ ಖಂಡೇ ಸೂತ್ರಿತಂ । ತ್ರಿಕದ್ರುಕೇಷು ಮಹಿಷೋ ಯವಾಶಿರಮಿತಿ ಮರುತ್ವತೀಯಸ್ಯ ಪ್ರತಿಪತ್ । ಆ. ೧೦-೧೦ । ಇತಿ ॥ ಮಹಾವ್ರತೇಽಪಿ ಮಾಧ್ಯಂದಿನೇ ಸವನೇ ಬ್ರಾಹ್ಮಣಾಚ್ಛಂಸಿನಃ ಸ್ತೋತ್ರಿಯಸ್ತೃಚಃ । ತ್ರಿಕದ್ರುಕೇಷು ಮಹಿಷೋ ಯವಾಶಿರಮಿತಿ ಸ್ತೋತ್ರಿಯಃ । ಐ. ಆ. ೫-೧ । ಇತಿ ಸೂತ್ರಿತಂ ॥

ಅನುವಾದವು—**ತ್ರಿಕದ್ರುಕೇಷು** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು, ಇಂದ್ರನು ದೇವತೆಯು. ಅನುಕ್ರಮಣಿಕೆಯಲ್ಲಿ ಈರೀತಿ ಹೇಳಿರುವುದು—**ತ್ರಿಕದ್ರುಕೇಷು** ಎಂಬ ನಾಲ್ಕು ಋಕ್ಕುಗಳಿರುವ ಸೂಕ್ತದಲ್ಲಿ ಮೊದಲನೆಯ ಋಕ್ಕು ಅಷ್ಟಿಛಂದಸ್ಕವು. ಈ ಛಂದಸ್ಸಿನಲ್ಲಿ ಅರವತ್ತು ನಾಲ್ಕು ಅಕ್ಷರಗಳಿರುವವು. ಉಳಿದ ಋಕ್ಕುಗಳು ಅತಿಶಕ್ವರೀ ಎಂಬ ಛಂದಸ್ಸಿನವು. ಈ ಛಂದಸ್ಸಿನಲ್ಲಿ ಅರವತ್ತು ಅಕ್ಷರಗಳಿರುವವು. ಕೊನೆಯ ಋಕ್ಕು ಅತಿಶಕ್ವರೀ ಅಥವಾ ಅಷ್ಟಿ ಎಂಬ ಛಂದಸ್ಸಿನದು. ಷೋಡಶಿಶಸ್ತ್ರಮಂತ್ರಗಳಿಗಾಗಿ ತ್ರಿಕದ್ರುಕೇಷು ಎಂದು ಮೊದಲಾಗುವ ಈ ಸೂಕ್ತದ ಮೊದಲನೆಯ ಮೂರು ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ತ್ರಿಕದ್ರುಕೇಷು ಮಹಿಷೋ ಯವಾಶಿರಂ ಪ್ರೋ ಷ್ವಸ್ಮೈ ಪುರೋರಥಮಿತಿ ತೃಚಾವಾತಿಚ್ಛಂದಸೌ** (ಆ. ೬-೨), ಅವಿವಾಕ್ಯವೆಂಬ ಯಾಗದ ದಿನದಲ್ಲಿ ಮರುತ್ವತೀಯ ಶಸ್ತ್ರಮಂತ್ರಗಳಿಗಾಗಿ ಪಠಿಸುವ ತೃಚವೆಂಬ ಮೂರು ಋಕ್ಕುಗಳಲ್ಲಿ ತ್ರಿಕದ್ರುಕೇಷು ಎಂಬ ಈ ಸೂಕ್ತದ ಮೊದಲನೆಯ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ದಶಮೇಽಹನಿ** ಎಂಬ ಖಂಡದ **ಆ ತ್ವಾ ರಥಂ ಯಥೋತಯ ಇತ್ಯೇತಸ್ಯಾಃ ಸ್ಥಾನೇ ತ್ರಿಕದ್ರುಕೇಷು ಮಹಿಷೋ ಯವಾಶಿರಮಿತಿ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೧೨), ಅಶ್ವಮೇಧಯಜ್ಞದ ಮಧ್ಯದ ದಿನದಲ್ಲಿ ಮರುತ್ವತೀಯ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ಮೊದಲನೆಯ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ತಸ್ಯ ವಿಶೇಷಾನ್ವಕ್ಷ್ಯಾಮ** ಎಂಬ ಖಂಡದ **ತ್ರಿಕದ್ರುಕೇಷು ಮಹಿಷೋ ಯವಾಶಿರಮಿತಿ ಮರುತ್ವತೀಯಸ್ಯ ಪ್ರತಿಪತ್** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೧೦-೧೦), ಮಹಾ

ವ್ರತವೆಂಬ ಯಾಗದಲ್ಲಿ ಮಾಧ್ಯಂದಿನಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿ ಎಂಬ ಋತ್ವಿಜನು ಪಠಿಸಬೇಕಾದ ಸ್ತೋತ್ರಿಯ ಸ್ತೃಚಃ ಎಂಬ ಮಂತ್ರಗಳಿಗಾಗಿ ಈ ಸೂಕ್ತದ ಮೊದಲನೆಯ ಮೂರು ಋಕ್ಕುಗಳ ವಿನಿಯೋಗವಿರುವುದೆಂದು ಐತರೇಯ ಆರಣ್ಯಕದ ತ್ರಿಕದ್ರುಕೇಷು ಮಹಿಷೋ ಯವಾಶಿರಮಿತಿ ಸ್ತೋತ್ರಿಯಃ ಎಂಬ ವಾಕ್ಯದಿಂದ ಉಕ್ತವಾಗಿರುವುದು (ಐ. ಆ. ೫-೧).

---

॥ ಓಂ ॥

## ಸೂಕ್ತ—೨೨

॥ ಮಂಡಲ—೨ ॥ ಅನುವಾಕ—೨ ॥ ಸೂಕ್ತ—೨೨ ॥

॥ ಅಷ್ಟಕ— ೨ ॥ ಅಧ್ಯಾಯ— ೬ ॥ ವರ್ಗ—೨೮ ॥

। ಸೂಕ್ತದಲ್ಲಿರುವ ಋಕ್ಸಂಖ್ಯೆ-೪ ।

ಋಷಿಃ—ಗೃತ್ಸಮದಃ ।

ದೇವತಾ—ಇಂದ್ರಃ ।

ಛಂದಃ—೧. ಅಷ್ಟಿಃ । ೨-೩ ಅತಿಶಕ್ವರೀ । ೪. ಅತಿಶಕ್ವರ್ಯಷ್ಟಿರ್ವಾ ।

---

ಸಂಹಿತಾಪಾಠಃ

ತ್ರಿಕದ್ರುಕೇಷು ಮಹಿಷೋ ಯವಾಶಿರಂ ತುವಿಶುಷ್ಮಸ್ತೃಪತ್ಸೋಮಮಪಿ-
ಬದ್ವಿಷ್ಣುನಾ ಸುತಂ ಯಥಾವಶತ್ ।
ಸ ಈಂ ಮಮಾದ ಮಹಿ ಕರ್ಮ ಕರ್ತವೇ ಮಹಾಮುರುಂ ಸೈನಂ ಸಶ್ಚ-
ದ್ದೇವೋ ದೇವಂ ಸತ್ಯಮಿಂದ್ರಂ ಸತ್ಯ ಇಂದುಃ ॥ ೧ ॥

ಪದಪಾಠಃ

ತ್ರಿಽಕದ್ರುಕೇಷು । ಮಹಿಷಃ । ಯವಽಆಶಿರಂ । ತುವಿಽಶುಷ್ಮಃ । ತೃಪತ್ । ಸೋಮಂ । ಅಪಿಬತ್ ।
ವಿಷ್ಣುನಾ । ಸುತಂ । ಯಥಾ । ಅವಶತ್ ।
ಸಃ । ಈಂ । ಮಮಾದ । ಮಹಿ । ಕರ್ಮ । ಕರ್ತವೇ । ಮಹಾಂ । ಉರುಂ । ಸಃ । ಏನಂ । ಸಶ್ಚತ್ ।
ದೇವಃ । ದೇವಂ । ಸತ್ಯಂ । ಇಂದ್ರಂ । ಸತ್ಯಃ । ಇಂದುಃ ॥ ೧ ॥

## ಸಾಯಣಭಾಷ್ಯಂ

ಗೃತ್ಸಮದೋ ಬ್ರೂತೇ । ಮಹಿಷೋ ಮಹಾನ್ ಪೂಜ್ಯಸ್ತುವಿಶುಷ್ಮೋ ಬಹುಬಲಸ್ತೃಪತ್ ॥ ತೃಪ ಪ್ರೀಣನೇ ತುದಾದಿಃ । ಆಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವಃ॥ ತೃಪ್ಯನ್ ಇಂದ್ರಸ್ತ್ರಿಕದ್ರುಕೇಷು ಜ್ಯೋತಿರ್ಗೌರಾಯುರಿತ್ಯೇತನ್ನಾಮಕೇಷ್ವಾಭಿಪ್ಲವಿಕೇಷ್ವಹಃಸು ಸುತಮಭಿಷುತಂ ಯವಾಶಿರಂ ಯವಮಯೈಃ ಸಕ್ತುಭಿರ್ಮಿಶ್ರಿತಂ ॥ ಆಙ್‌ಪೂರ್ವಸ್ಯ ಶ್ರೀಣಾತೇಃ ಕ್ವಿಪಿ ಅಪಸ್ಸ್ಪೃಧೇಥಾಮಿತ್ಯಾದಿನಾ ಶಿರ ಇತ್ಯಾದೇಶಃ ॥ ತಂ ಸೋಮಂ ವಿಷ್ಣುನಾ ಸಹಾಪಿಬತ್ । ಯಥಾವಶತ್ । ಪೂರ್ವಂ ಯಥಾ ತಂ ಸೋಮಮಕಾಮಯತ ತಥಾಪಿಬತ್ ॥ ವಶ ಕಾಂತೌ । ಬಹುಲಂ ಛಂದಸೀತಿ ಶಪೋ ಲುಗಭಾವಃ ॥ ಪೀತಃ ಸ ಸೋಮೋ ಮಹಾಂ ಮಹಾಂತಮುರುಂ ತೇಜಸಾ ವಿಸ್ತೀರ್ಣಮೀಮೇನಮಿಂದ್ರಂ ಮಮಾದ । ಅಮಾದಯತ್ । ಕಿಮರ್ಥಂ । ಮಹಿ ಮಹದ್ವೃತ್ರಹನನಾದಿಲಕ್ಷಣಂ ಕರ್ಮ ಕರ್ತವೇ ಕರ್ತುಂ । ಸತ್ಯ ಇಂದುಃ ಸ್ರವನ್ ದೇವೋ ದೀಪ್ಯಮಾನಃ ಸ ಸೋಮಃ ಸತ್ಯಂ ಯಥಾರ್ಥಭೂತಂ ದೇವಂ ಸೋಮಂ ಕಾಮಯಮಾನಮಿಂದ್ರಂ ಸಶ್ಚತ್ ॥ ಸಶ್ಚತಿರ್ವ್ಯಾಪ್ತಿಕರ್ಮಾ ॥ ವ್ಯಾಪ್ನೋತು ॥

## ಪ್ರತಿಪದಾರ್ಥ

ಮಹಿಷಃ—ಮಹಾತ್ಮನೂ । ತುವಿಶುಷ್ಮಃ—ಅಧಿಕವಾದ ಬಲವುಳ್ಳವನೂ । ತೃಪತ್—ತೃಪ್ತಿಕಾಮನೂ ಆದ ಇಂದ್ರನು । ತ್ರಿಕದ್ರುಕೇಷು—ತ್ರಿಕದ್ರುಕದ ಅಹಸ್ಸುಗಳಲ್ಲಿ । ಸುತಂ—ಅಭಿಷುತವಾದುದೂ । ಯವಾಶಿರಂ—ಯವದಿಂದ ಮಿಶ್ರವಾದದ್ದೂ ಆದ । ಸೋಮಂ—ಸೋಮವನ್ನು । ವಿಷ್ಣುನಾ—ವಿಷ್ಣುವಿನೊಂದಿಗೆ । ಯಥಾ ಅವಶತ್—ಹಿಂದೆ ಇಚ್ಛಿಸಿದ ರೀತಿಯಲ್ಲಿ । ಅಪಿಬತ್—ಪಾನಮಾಡಿದನು । ಸಃ—ಅದೇ ಸೋಮವು । ಮಹಾಂ—ಮಹಾತ್ಮನೂ । ಉರು—ತೇಜಸ್ಸಿನಿಂದ ವಿಸ್ತೃತನಾದವನೂ ಆದ । ಈಂ—ಈ ಇಂದ್ರನನ್ನು । ಮಮಾದ—ತೃಪ್ತಿಗೊಳಿಸಿತು । ಮಹಿಂ—ವೃತ್ರಹನನಾದಿ ಮಹತ್ತಾದ । ಕರ್ಮ—ಕರ್ಮಗಳನ್ನು । ಕರ್ತವೇ—ನೆರವೇರಿಸುವುದಕ್ಕಾಗಿ । ಸತ್ಯಃ—ಸತ್ಯಾತ್ಮಕವಾದುದೂ । ಇಂದುಃ—ಸ್ರವಿಸುವುದೂ । ದೇವಃ—ಪ್ರಕಾಶಮಾನವಾದುದೂ ಆದ । ಸಃ—ಆ ಸೋಮರಸವು । ಸತ್ಯಂ—ಸತ್ಯಾತ್ಮಕನಾದವನೂ । ದೇವಂ—ಸೋಮಕಾಮನಾದವನೂ ಆದ । ಏನಂ ಇಂದ್ರಂ—ಈ ಇಂದ್ರನನ್ನು । ಸಶ್ಚತ್—ಸೇರಿಕೊಂಡು ಅವನ ದೇಹದಲ್ಲಿ ವ್ಯಾಪಿಸಲಿ.

## ಭಾವಾರ್ಥ

ಮಹಾತ್ಮನೂ ಅಧಿಕವಾದ ಬಲವುಳ್ಳವನೂ, ತೃಪ್ತಿಕಾಮನೂ ಆದ ಇಂದ್ರನು ತ್ರಿಕದ್ರುಕದ ಅಹಸ್ಸುಗಳಲ್ಲಿ ಅಭಿಷುತವಾದುದೂ ಯವದಿಂದ ಮಿಶ್ರಿತವಾದದ್ದೂ ಆದ ಸೋಮವನ್ನುಹಿಂದೆ ಇಚ್ಛಿಸಿದ ರೀತಿಯಲ್ಲಿ ವಿಷ್ಣುವಿನೊಂದಿಗೆ ಪಾನಮಾಡಿದನು. ಅದೇ ಸೋಮವು ಮಹಾತ್ಮನೂ ತೇಜಸ್ಸಿನಿಂದ ವಿಸ್ತೃತನಾದವನೂ ಆದ ಇಂದ್ರನನ್ನು ತೃಪ್ತಿಗೊಳಿಸಿತು. ವೃತ್ರಹನನಾದಿ ಮಹತ್ಕಾರ್ಯಗಳನ್ನು ನೆರವೇರಿಸುವುದಕ್ಕಾಗಿ ಸತ್ಯಾತ್ಮಕವಾದುದೂ, ಸ್ರವಿಸುವುದೂ, ಪ್ರಕಾಶಮಾನವಾದುದೂ ಆದ ಸೋಮವು ಸತ್ಯಾತ್ಮಕನಾದವನೂ ಸೋಮಕಾಮನೂ ಆದ ಇಂದ್ರನನ್ನು ಸೇರಿ ಅವನ ದೇಹದಲ್ಲಿ ವ್ಯಾಪಿಸಲಿ.

## English Translation

The adorable and powerful (Indra), partaking of the Soma, mixed with barley, effused at the Trikadruka rites, has drunk with Vishnu as much as he wished: the draught has excited that great and mighty Indra to perform great deeds: May that divine (Soma) pervade the divine (Indra), the true Soma (·pervade) the true Indra·

### ವಿಶೇಷವಿಷಯಗಳು

**ತ್ರಿಕದ್ರುಕೇಷು**—ಅಭಿಪ್ಲವವೆಂಬ ಯಾಗದಲ್ಲಿ ಮೊದಲನೆಯ ಮೂರು ದಿನಗಳಿಗೆ ಕ್ರಮವಾಗಿ **ಜ್ಯೋತಿಃ, ಗೌಃ, ಆಯುಃ** ಎಂದು ಹೆಸರು. ತ್ರಿಕದ್ರುಕೇಷು ಎಂದರೆ ಮೇಲೆ ಹೇಳಿದ ಮೂರು ದಿನಗಳಲ್ಲಿ ಎಂದರ್ಥವು.

**ಯವಾಶಿರಂ**—ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜಿ, ಹಿಂಡಿ, ಸೋಸಿ ಸಿದ್ಧಪಡಿಸಿದ ಸೋಮರಸಕ್ಕೆ ಸೋಮ ಅಥವಾ ತೀವ್ರ ಎಂದು ಹೆಸರು. ಈ ವಿಧವಾದ ಸೋಮರಸವು ಶುದ್ಧವಾದುದು. ಇದಕ್ಕೆ ಏನನ್ನೂ ಬೆರಸಿರುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಆ ಸೋಮರಸಕ್ಕೆ ರುಚಿಯನ್ನುಂಟುಮಾಡುವುದಕ್ಕಾಗಿ ಹಾಲು, ಮೊಸರು ಯವಧಾನ್ಯದ ಹಿಟ್ಟು ಇವುಗಳನ್ನು ಸೇರಿಸಿ ಮಿಶ್ರಮಾಡುವುದುಂಟು. ಹಾಗೆ ಮಿಶ್ರಮಾಡಿದ ಎಂದರೆ ಹಾಲು ಸೇರಿಸಿದ ಸೋಮರಸಕ್ಕೆ **ಗವಾಶಿರ** ಎಂದೂ, ಮೊಸರು ಮಿಶ್ರಮಾಡಿದ ಸೋಮರಸಕ್ಕೆ **ದಧ್ಯಾಶಿರ**ವೆಂದೂ, ಯವಧಾನ್ಯದ (barley) ಹಿಟ್ಟನ್ನು ಮಿಶ್ರಮಾಡಿದ ಸೋಮರಸಕ್ಕೆ **ಯವಾಶಿರ**ವೆಂದೂ ಹೆಸರು. ಇಲ್ಲಿ ಯವಾಶಿರವೆಂಬ ಸೋಮ ರಸವಿಶೇಷವು ಉಕ್ತವಾಗಿರುವುದು. ಸೋಮರಸವನ್ನು ಸಿದ್ಧಪಡಿಸುವ ವಿಷಯವಾಗಿಯೂ ಇದಕ್ಕೆ ಮಿಶ್ರಮಾಡುವ ಆಶಿರದ್ರವ್ಯಗಳ ವಿಷಯವಾಗಿಯೂ ನಾವು ಹಿಂದೆಯೇ ವಿಸ್ತಾರವಾಗಿ ವಿವರಿಸಿದ್ದೇವೆ.

**ಮಹಿಷಃ**—**ಮಹಾನ್, ಪೂಜ್ಯಃ** । ದೊಡ್ಡವನು, ಮಹಿಮೆಯುಳ್ಳವನು, ಪೂಜ್ಯನು. ಮಹಿಷಶಬ್ದವು ಮಹನ್ನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೩) ಮತ್ತು **ಮಹಿಷಾ ಮಹಾಂತ ಇತಿ ವಾ** ಎಂದು ನಿರ್ವಚನವಿರುವುದು (ನಿ. ೭-೨೬), **ಮಹಿ ಮಹತಿ ಸ್ಥಾನೇ ಸೀದನ್ನಾಸ್ತೇ ಇತಿ ಮಹಿಷಃ** । ದೊಡ್ಡ ಅಥವಾ ಪೂಜ್ಯಸ್ಥಾನದಲ್ಲಿ ಇರುವುದರಿಂದ ಪೂಜ್ಯನಿಗೆ ಮಹಿಷಃ ಎಂದು ಹೆಸರು ಎಂದು ಅವಯವಾರ್ಥವು.

**ತುವಿಶುಷ್ಮಃ**—**ಬಹುಬಲಃ** । ಬಹಳವಾದ ಬಲವುಳ್ಳವನು. ತುವಿಶಬ್ದವು ಬಹುನಾಮಗಳಲ್ಲಿಯೂ (ನಿ. ೩-೧೩) ಶುಷ್ಮಶಬ್ದವು ಬಲನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. **ಶುಷ್ಮಮಿತಿ ಬಲನಾಮ** (ನಿ. ೨-೨೪) ಎಂದು ನಿರ್ವಚನವೂ ಇರುವುದು.

**ಅಪಿಬತ್ ವಿಷ್ಣುನಾ ಸುತಂ**—**ತಂ ಸೋಮಂ ವಿಷ್ಣುನಾ ಸಹಾಪಿಬತ್** । ಇಂದ್ರನು ವಿಷ್ಣುವಿನೊಡನೆ ಸೋಮಪಾನಮಾಡಿದನು. ಇಂದ್ರನಿಗೂ ವಿಷ್ಣುವಿಗೂ ಬಹಳ ನಿಕಟವಾದ ಸಾಹಚರ್ಯವಿದೆ. ಋ. ಸಂ. ೬-೬೯ ನೇ ಸೂಕ್ತದಲ್ಲಿ ಭರದ್ವಾಜ ಋಷಿಯು ಇಂದ್ರಾವಿಷ್ಣುಗಳನ್ನು ಒಟ್ಟಿಗೆ ಸ್ತುತಿಸಿ ಅವರು ಮಾಡಿದ ಮಹಾಕಾರ್ಯಗಳನ್ನು ವರ್ಣಿಸಿದ್ದಾನೆ. ಇದಲ್ಲದೆ ಇನ್ನೂ ಅನೇಕಕಡೆ ಇಂದ್ರ ಮತ್ತು ವಿಷ್ಣು ಇವರಿಬ್ಬರೂ ಸೇರಿ ಮಾಡಿದ ಮಹತ್ಕಾರ್ಯಗಳ ವರ್ಣನೆ ಇದೆ—

**ಇಂದ್ರಾವಿಷ್ಣೂ ಪಿಬತಂ ಮಧ್ವೋ ಅಸ್ಯ ಸೋಮಸ್ಯ ದಸ್ರಾ ಜಠರಂ ಪೃಣೇಥಾಂ ।**

(ಋ. ಸಂ. ೬-೬೯ ೭)

ಎಂಬ ಋಕ್ಕಿನಲ್ಲಿ ಇಂದ್ರಾವಿಷ್ಣುಗಳನ್ನು ಸೋಮಪಾನಾರ್ಥವಾಗಿ ಆಹ್ವಾನಿಸಿ—ಈ ರುಚಿಕರವಾದ ಸೋಮರಸವನು ನಿಮ್ಮ ಉದರವು ತುಂಬುವಂತೆ ಪಾನಮಾಡಬೇಕೆಂದು ಪ್ರಾರ್ಥಿಸಿದೆ.

**ಅಹಿಂ ಯದ್ವೃತ್ರಮಪೋ ವವ್ರಿವಾಂಸಂ ಹನ್ನೃಜೀಷಿನ್ ವಿಷ್ಣುನಾ ಸಚಾನಃ ।**

(ಋ. ಸಂ. ೬-೨೦-೨)

ಎಂಬ ಋಕ್ಕಿನಲ್ಲಿ ಇಂದ್ರನು ವಿಷ್ಣುವಿನೊಡನೆ ಕೂಡಿ ವೃತ್ರನನ್ನು ಸಂಹಾರಮಾಡಿದನೆಂದು ಹೇಳಿದೆ.

**ಇಂದ್ರಾವಿಷ್ಣೂ ದೃಂಹಿತಾಃ ಶಂಬರಸ್ಯ ನವ ಪುರೋ ನವತಿಂ ಚ ಶ್ನಥಿಷ್ಟಂ ।**

(ಋ. ಸಂ. ೭-೯೯-೫)

ಎಂಬ ಋಕ್ಕಿನಲ್ಲಿ ಇಂದ್ರಾವಿಷ್ಣುಗಳಿಬ್ಬರೂ ಸೇರಿ ಶಂಬರಾಸುರನ ತೊಂಭತ್ತೊಂಭತ್ತು ಪಟ್ಟಣಗಳನ್ನು ನಾಶಮಾಡಿದ ರೆಂದು ಹೇಳಿದೆ. ಇದಲ್ಲದೆ ಇನ್ನೂ ಅನೇಕ ವಿಚಾರಗಳಲ್ಲಿ ಇಂದ್ರಾವಿಷ್ಣುಗಳಿಗೆ ಇರುವ ಸಖ್ಯವೂ ಸಾಹಚರ್ಯವೂ ಅಲ್ಲಲ್ಲಿ ಉಕ್ತವಾಗಿದೆ.

**ಸಃ ಈಂ ಮಮಾದ ಮಹಿ ಕರ್ಮ ಕರ್ತವೇ ಮಹಾಂ ಉರುಂ—ಪೀತಃ ಸ ಸೋಮೋ ಮಹಾಂತಂ ತೇಜಸಾ ವಿಸ್ತೀರ್ಣಮೇನಮಿಂದ್ರಂ ಮಹದ್ವೃತ್ರಹನನಾದಿಲಕ್ಷಣಂ ಕರ್ಮ ಕರ್ತುಮಮಾದಯೇತ್ ।** ಇಂದ್ರನಿಂದ ಪಾನಮಾಡಲ್ಪಟ್ಟ ಆ ಸೋಮವು ಮಹಾಮಹಿಮನೂ, ತೇಜೋಬಲವಿಶಿಷ್ಟನೂ ಆದ ಇಂದ್ರನಿಗೆ ವೃತ್ರವ ಧಾದಿಕಾರ್ಯಗಳನ್ನು ಮಾಡುವುದಕ್ಕಾಗಿ ಬಹಳ ಹರ್ಷವನ್ನುಂಟುಮಾಡಿತು. ಎಂದರೆ ಇಂದ್ರನು ಸೋಮಪಾನದಿಂದ ಹರ್ಷಗೊಂಡವನಾಗಿ ವೃತ್ರವಧವೇ ಮೊದಲಾದ ಮಹಾಕಾರ್ಯಗಳನ್ನು ಮಾಡಿದನು. ಅಂತಹ ಮಹತ್ಕಾರ್ಯ ಗಳಲ್ಲಿ ಸೋಮಪಾನವು ಇಂದ್ರನಿಗೆ ಬಹಳವಾದ ಹರ್ಷವನ್ನೂ ಪ್ರೋತ್ಸಾಹವನ್ನೂ ಉಂಟುಮಾಡಿತು ಎಂದು ಮುಖ್ಯಾಭಿ ಪ್ರಾಯವು.

**ಸಃ ಏನಂ ಸಶ್ಚತ್ ದೇವಃ ದೇವಂ ಸತ್ಯಂ ಇಂದ್ರಂ ಸತ್ಯಃ ಇಂದುಃ—ದೀಪ್ಯಮಾನಃ ಸೋಮಃ ಸ್ರವನ್ ಯಥಾರ್ಥಭೂತಂ ದೇವಂ ಸೋಮಂ ಕಾಮಯಮಾನಮಿಂದ್ರಂ ವ್ಯಾಪ್ನೋತು ।** ಈ ಕೊನೆಯ ಪಾದವು ಈ ಋಕ್ಕಿನಲ್ಲಿಯೂ ಮುಂದಿನ ಎರಡು ಋಕ್ಕುಗಳಲ್ಲಿಯೂ ಪುನಃ ಪಠಿತವಾಗಿದೆ. ಸೋಮಲತೆಯನ್ನು ಜಜ್ಜುವಾಗ ತೊಟ್ಟುತೊಟ್ಟಾಗಿ ಸ್ರವಿಸುತ್ತಿರುವ ಪ್ರಕಾಶಮಾನವಾದ ಈ ಸೋಮರಸವು ಸತ್ಯಾತ್ಮಕವಾದ ಇಂದ್ರನನ್ನು ಸೇರಿ ಅವನಲ್ಲಿ ವ್ಯಾಪಿಸಲಿ. ಎಂದರೆ ಹೊಸದಾಗಿ ಹಿಂಡಿ ಸಿದ್ಧಪಡಿಸಿರುವ ಈ ಸೋಮರಸವನ್ನು ಇಂದ್ರನು ಯಥೇಷ್ಟ ವಾಗಿ ಪಾನಮಾಡಿ ತೃಪ್ತಿಯನ್ನು ಹೊಂದಲಿ ಎಂದು ಮುಖ್ಯಾಭಿಪ್ರಾಯವು.

**ಇಂದುಃ—ಇಂದುರಿಂಧೇರುನತ್ತೇರ್ವಾ** । (ನಿ. ೧೦-೪೨). ಪ್ರಜ್ವಲಿಸು ಎಂಬರ್ಥವನ್ನು ಕೊಡುವ ಇಂಧ್ ಧಾತುವಿನಿಂದಾಗಲಿ, ತೇವಮಾಡುವಂತೆ ಪ್ರವಹಿಸು ಎಂಬರ್ಥವನ್ನು ಕೊಡುವ ಉದ್ ಧಾತುವಿನಿಂದಾಗಲಿ ಈ ಪದವು ನಿಷ್ಪನ್ನವಾಗಬಹುದೆಂದು ನಿರುಕ್ತಕಾರರು ವಿವರಿಸಿ—

**ಪ್ರ ತದ್ವೋಚೇಯಂ ಭವ್ಯಾಯೇಂದವೇ ಹವ್ಯೋ ನ ಯ ಇಷವಾನ್ಮನ್ಮ ರೇಜತಿ ರಕ್ಷೋಹಾ ಮನ್ಮ ರೇಜತಿ ।**

(ಋ. ಸಂ, ೧-೧೨೯-೬)

ಎಂಬ ಋಕ್ಕನ್ನುದಹರಿಸಿ ಇಂದು ಶಬ್ದದ ಎರಡುವಿಧ ಅರ್ಥಗಳನ್ನು ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸೋಮರಸಕ್ಕೆ ಪ್ರಕಾಶಮಾನವಾದ ಗುಣವನ್ನೂ ಮತ್ತು ದ್ರವರೂಪದಲ್ಲಿ ಪ್ರವಹಿಸಿ ಎಲ್ಲವನ್ನೂ ನೆನೆಸುವಂತೆ ಮಾಡುವ ಗುಣವನ್ನೂ ವಿವರಿಸಿ ಸ್ತುತಿಸಿದೆ.

---

ಸಂಹಿತಾಪಾಠಃ

ಅಧ ತ್ವಿಷೀಮಾँ ಅಭ್ಯೋಜಸಾ ಕ್ರಿವಿಂ ಯುಧಾಭವದಾ ರೋದಸೀ ಅಪೃ-
ಣದಸ್ಯ ಮಜ್ಮನಾ ಪ್ರ ವಾವೃಧೇ ।
ಅಧತ್ತಾನ್ಯಂ ಜಠರೇ ಪ್ರೇಮರಿಚ್ಯತ ಸೈನಂ ಸಶ್ಚದ್ದೇವೋ ದೇವಂ ಸತ್ಯ-
ಮಿನ್ದ್ರಂ ಸತ್ಯ ಇನ್ದುಃ ॥ ೨ ॥

ಪದಪಾಠಃ

ಅಧ । ತ್ವಿಷಿऽಮಾನ್ । ಅಭಿ । ಓಜಸಾ । ಕ್ರಿವಿಂ । ಯುಧಾ । ಅಭವತ್ । ಆ । ರೋದಸೀ ಇತಿ ।
ಅಪೃಣತ್ । ಅಸ್ಯ । ಮಜ್ಮನಾ । ಪ್ರ । ವವೃಧೇ ।
ಅಧತ್ತ । ಅನ್ಯಂ । ಜಠರೇ । ಪ್ರ । ಈಂ । ಅರಿಚ್ಯತ । ಸಃ । ಏನಂ । ಸಶ್ಚತ್ । ದೇವಃ।ದೇವಂ । ಸತ್ಯಂ।
ಇನ್ದ್ರಂ । ಸತ್ಯಃ । ಇನ್ದುಃ ॥ ೨ ॥

ಸಾಯಣಭಾಷ್ಯಂ

ಅಧ ಅಥ ಸೋಮಪಾನಾನಂತರಂ ತ್ವಿಷೀಮಾನ್ ದೀಪ್ತಿಮಾನಿಂದ್ರ ಓಜಸಾ ಬಲೇನ ಕ್ರಿವಿಂ ನಾಮಾಸುರಂ ಯುಧಾ ಯುದ್ಧೇನಾಭ್ಯಭವತ್ । ಅಭಿಭೂತವಾನ್ । ಕಿಂಚ ಸ ಇಂದ್ರೋ ರೋದಸೀ ದ್ಯಾವಾಪೃಥಿವ್ಯಾವಾಪೃಣತ್ । ಸ್ವತೇಜಸಾ ಸಮಂತಾತ್ಪೂರಯಾಮಾಸ । ತಥಾಸ್ಯ ಪೀತಸ್ಯ ಸೋಮಸ್ಯ ಮಜ್ಮನಾ ಬಲೇನ ಪ್ರವಾವೃಧೇ । ಪ್ರಕರ್ಷೇಣ ವರ್ಧತೇ । ಯದ್ವಾ ಅಸ್ಯ ಕ್ರಿವೇರಸುರಸ್ಯ ಮಜ್ಮನಾ ಸಾರೇಣ ರೋದಸೀ ಅಪೂರಯತ್ । ಸ ಇಂದ್ರಃ ಸೋಮಂ ದ್ವೇಧಾ ವಿಭಜ್ಯಾನ್ಯಂ ಭಾಗಂ ಸ್ವಕೀಯೇ ಜಠರೇऽಧತ್ತ । ಈಮೇನಮಪರಂ ಭಾಗಂ ದೇವೇಭ್ಯಃ ಪ್ರಾರಿಚ್ಯತ । ಪ್ರಾರೇಚಯತ್ । ಏತೇನಾರ್ಧಮಿಂದ್ರಾಯ ಅರ್ಧಮನ್ಯೇಭ್ಯೋ ದೇವೇಭ್ಯ ಇತ್ಯುಕ್ತಂ ಭವತಿ । ತಥಾ ತೈತ್ತಿರೀಯಕಂ । ಯತ್ಸರ್ವೇಷಾಮರ್ಧಮಿಂದ್ರಃ ಪ್ರತಿ ತಸ್ಮಾದಿಂದ್ರೋ ದೇವತಾನಾಂ ಭೂಯಿಷ್ಠಭಾಕ್ತಮಃ । ತೈ. ಸಂ. ೫-೪-೮-೩ । ಇತಿ ॥

## ಪ್ರತಿಪದಾರ್ಥ

**ಅಥ**—ಸೋಮಪಾನದ ಅನಂತರ । **ತ್ವಿಷೀಮಾನ್**—ಪ್ರಕಾಶಮಾನನಾದ ಇಂದ್ರನು । **ಓಜಸಾ**—ತನ್ನ ಬಲದಿಂದ । **ಕ್ರಿವಿಂ**—ಕ್ರಿವಿಯೆಂಬ ಅಸುರನನ್ನು । **ಯುಧಾ**—ಯುದ್ಧದಿಂದ । **ಅಭಿ ಅಭವತ್**—ಸೋಲಿಸಿದನು (ಮತ್ತು) । **ರೋದಸೀ**—ದ್ಯಾವಾಪೃಥಿವಿಗಳನ್ನು । **ಆ ಅಪೃಣತ್**—ತನ್ನ ತೇಜಸ್ಸಿನಿಂದ ತುಂಬಿದನು । **ಅಸ್ಯ**—ಪಾನಮಾಡಿದ ಸೋಮರಸದ । **ಮಜ್ಮನಾ**—ಬಲದಿಂದ । **ಪ್ರ ವಾವೃಧೇ**—ವೃದ್ಧಿಯನ್ನು ಹೊಂದಿದನು । **ಸಃ**—ಇಂದ್ರನು (ಸೋಮವನ್ನು ಎರಡುಭಾಗಮಾಡಿ) । **ಅನ್ಯಂ**—ಒಂದು ಭಾಗವನ್ನು । **ಜಠರೇ**—ತನ್ನ ಉದರದಲ್ಲಿ । **ಅಧತ್ತ**—ತುಂಬಿಕೊಂಡನು । **ಈಂ**—ಈ ಇನ್ನೊಂದು ಭಾಗವನ್ನು । **ಪ್ರ ಅರಿಚ್ಯತ**—(ದೇವತೆಗಳಿಗೆ) ವಿಭಾಗಮಾಡಿದನು । **ಸತ್ಯಃ**—ಸತ್ಯಾತ್ಮಕವಾದುದೂ । **ಇಂದುಃ**—ಸ್ರವಿಸುವುದೂ । **ದೇವಃ**—ಪ್ರಕಾಶಮಾನವಾದುದೂ ಆದ । **ಸಃ**—ಸೋಮವು । **ಸತ್ಯಂ**—ಸತ್ಯಾತ್ಮಕನಾದವನೂ । **ದೇವಂ**—ಸೋಮಕಾಮನಾದವನೂ ಆದ । **ಏನಂ ಇಂದ್ರಂ**—ಈ ಇಂದ್ರನನ್ನು । **ಸಶ್ಚತ್**—ಸೇರಿಕೊಂಡು ಅವನ ದೇಹದಲ್ಲಿ ವ್ಯಾಪಿಸಲಿ

## ಭಾವಾರ್ಥ

ಸೋಮಪಾನದ ಅನಂತರ ಪ್ರಕಾಶಮಾನನಾದ ಇಂದ್ರನು ತನ್ನ ಬಲದಿಂದ ಕ್ರಿವಿಯೆಂಬ ಅಸುರನನ್ನು ಯುದ್ಧಮಾಡಿ ಸೋಲಿಸಿದನು. ಮತ್ತು ದ್ಯಾವಾಪೃಥಿವಿಗಳನ್ನು ತನ್ನ ತೇಜಸ್ಸಿನಿಂದ ತುಂಬಿದನು. ಪಾನಮಾಡಿದ ಸೋಮರಸದ ಬಲದಿಂದ ವೃದ್ಧಿಯನ್ನು ಹೊಂದಿದನು. ಇಂದ್ರನು ಸೋಮವನ್ನು ಎರಡು ಭಾಗಮಾಡಿ ಒಂದುಭಾಗವನ್ನು ತನ್ನ ಉದರದಲ್ಲಿ ತುಬಿಕೊಂಡನು. ಇನ್ನೊಂದು ಭಾಗವನ್ನು ದೇವತೆಗಳಿಗೆ ವಿಭಾಗಮಾಡಿದನು. ಸತ್ಯಾತ್ಮಕವಾದುದೂ ಸ್ರವಿಸುವುದೂ, ಪ್ರಕಾಶಮಾನವಾದುದೂ ಆದ ಸೋಮವು ಸತ್ಯಾತ್ಮಕನಾದವನೂ ಸೋಮಕಾಮನಾದವನೂ ಆದ ಇಂದ್ರನನ್ನು ಸೇರಿಕೊಂಡು ಅವನ ದೇಹದಲ್ಲಿ ವ್ಯಾಪಿಸಲಿ.

## English Translation

Thereupon, resplendent, he has overcome Krivi in conflict by his prowess: he has filled heaven and earth (with his lustre), and has been invigorated by the efficacy of the draught: one portion he has taken to himself: the other he has distributed (to the gods): May that divine (Soma) pervade the divine (Indra), the true Soma, the true (Indra).

## ವಿಶೇಷವಿಷಯಗಳು

**ಅಥ ತ್ವಿಷೀಮಾನ್ ಓಜಸಾ ಕ್ರಿವಿಂ ಯುಧಾ ಅಭಿ ಅಭವತ್—ಸೋಮಪಾನಾನಂತರಂ ದೀಪ್ತಿಮಾನಿಂದ್ರಃ ಬಲೇನ ಕ್ರಿವಿನಾಮಾನಮಸುರಂ ಯುದ್ಧೇನಾಭಿಭೂತವಾನ್** । ಹಿಂದಿನ ಋಕ್ಕಿನಲ್ಲಿ ಹೇಳಿದಂತೆ ಸೋಮಪಾನಾನಂತರದಲ್ಲಿ ಇಂದ್ರನು ಸೋಮಪಾನದಿಂದ ಜನಿತವಾದ ಹರ್ಷದಿಂದ ಬಲಗೊಂಡು ಕ್ರಿವಿ ಎಂಬ ಅಸುರನನ್ನು ಯುದ್ಧದಲ್ಲಿ ಸೋಲಿಸಿದನು. ಕ್ರಿವಿ ಎಂಬ ಅಸುರನ ವಿಷಯವನ್ನು ನಾವು ಹಿಂದೆಯೇ ಹೇಳಿದ್ದೇವೆ.

ಆ ರೋದಸೀ ಅಪೃಣತ್ ಅಸ್ಯ ಮಜ್ಮನಾ— ಸ ಇಂದ್ರೋ ಸ್ವತೇಜಸಾ ದ್ಯಾವಾಪೃಥಿವೀ ಸಮಂತಾ-ತ್ಪೂರಯಾಮಾಸ । ತಥಾ ಪೀತಸ್ಯ ಸೋಮಸ್ಯ ಬಲೇನ ಪ್ರಕರ್ಷೇಣ ವರ್ಧತೇ । ಆ ಇಂದ್ರನು ತನ್ನ ತೇಜಸ್ಸಿನಿಂದ ಅಥವಾ ಶಕ್ತಿಸಾಮರ್ಥ್ಯಗಳಿಂದ ದ್ಯಾವಾಪೃಥಿವಿಗಳನ್ನು ತುಂಬಿದನು ಎಂದರೆ ಇಂದ್ರನ ಸಾಮರ್ಥ್ಯಾತಿಶಯಗಳು ಪೃಥಿವ್ಯಂತರಿಕ್ಷಗಳಲ್ಲೆಲ್ಲಾ ವ್ಯಾಪಿಸಿದವು ಎಂದಭಿಪ್ರಾಯವು. ಮತ್ತು ಸೋಮಪಾನದಿಂದ ಉಂಟಾದ ಬಲದಿಂದ ಇಂದ್ರನ ಶಕ್ತಿಯು ಬಹಳವಾಗಿ ವೃದ್ಧಿಯಾಯಿತು. ಅಥವಾ ಅಸ್ಯ ಕ್ರಿವೇರಸುರಸ್ಯ ಮಜ್ಮನಾ ಸಾರೇಣ ರೋದಸೀ ಅಪೂರಯತ್ । ಈ ಕ್ರಿವಿಯೆಂಬ ಅಸುರನನ್ನು ಸಂಹಾರಮಾಡಿ ಅವನ ದೇಹದ ಸಾರದಿಂದ ಭೂಮಿಯನ್ನೆಲ್ಲಾ ತುಂಬಿದನು. ಈ ವಿಷಯದಲ್ಲಿ ಪುರಾಣಾದಿಗಳಲ್ಲಿ ಒಂದು ಇತಿಹಾಸವಿದೆ. ಪೂರ್ವದಲ್ಲಿ ವಿಶ್ವವೆಲ್ಲವೂ ಜಲಾವೃತವಾಗಿ ಭೂಮಿಯೇ ಇಲ್ಲದಂತಾಗಿತ್ತು. ಆಗ ವಿಷ್ಣುವು ಮಧುಕೈಟಭರೆಂಬ ದೈತ್ಯರನ್ನು ಸಂಹಾರಮಾಡಲು ಅವರ ಶರೀರದ ಮೇದಸ್ಸೇ ಈಗಿರುವ ಭೂಮಿಯಾಗಿ ಪರಿವರ್ತಿತವಾಯಿತು. ಆದ್ದರಿಂದಲೇ ಭೂಮಿಗೆ ಮೇದಿನೀ ಎಂದು ಹೆಸರಿದೆ ಎಂಬ ಇತಿಹಾಸವು ಉಕ್ತವಾಗಿದೆ. ಈ ಇತಿಹಾಸಕ್ಕೆ ಇಂದ್ರನು ಕ್ರಿವಿ ಎಂಬ ಅಸುರನನ್ನು ಸಂಹಾರಮಾಡಿ ಅವನ ಸಾರದಿಂದ ಭೂಮಿಯನ್ನು ತುಂಬಿದನು ಎಂಬುವದೇ ಆಧಾರವಾಗಿರಬಹುದು.

ಸಃ ಅನ್ಯಂ ಜಠರೇ ಅಧತ್ತ ಈಂ ಪ್ರ ಅರಿಚ್ಯತ—ಸ ಇಂದ್ರಃ ಸೋಮಂ ದ್ವೇಧಾ ವಿಭಜ್ಯಾನ್ಯಂ ಭಾಗಂ ಸ್ವಕೀಯೇ ಜಠರೇಽಧತ್ತ । ಅಪರಂ ಭಾಗಂ ದೇವೇಭ್ಯಃ ಪ್ರಾರಿಚ್ಯತ ಪ್ರಾರೇಚಯತ್ । ಏತೇನಾ-ರ್ಧಮಿಂದ್ರಾಯ ಅರ್ಧಮನ್ಯೇಭ್ಯೋ ದೇವೇಭ್ಯ ಇತ್ಯುಕ್ತಂ ಭವತಿ । ಪಾನಾರ್ಥವಾಗಿ ಸಿದ್ಧಪಡಿಸಿದ ಸೋಮರಸವನ್ನು ಆ ಇಂದ್ರನು ಎರಡು ಭಾಗಮಾಡಿ ಒಂದನ್ನು ತಾನು ತನ್ನ ಉದರದಲ್ಲಿ ಧರಿಸಿ ಎಂದರೆ ಪಾನಮಾಡಿ ಉಳಿದ ಅರ್ಧಭಾಗವನ್ನು ದೇವತೆಗಳಿಗೆ ಹಂಚಿಕೊಟ್ಟನು. ಈ ವಿಷಯದಲ್ಲಿ ಭಾಷ್ಯಕಾರರು—

ಯತ್ಸರ್ವೇಷಾಮರ್ಧಮಿಂದ್ರಃ ಪ್ರತಿ ತಸ್ಮಾದಿಂದ್ರೋ ದೇವತಾನಾಂ ಭೂಯಿಷ್ಠಭಾಕ್ತಮಃ ॥

(ತೈ. ಸಂ. ೫-೪-೮-೩)

ಎಂಬ ತೈತ್ತಿರೀಯಸಂಹಿತಾವಾಕ್ಯವನ್ನು ವಾಕ್ಯಸಮರ್ಥನೆಗಾಗಿ ಉದಹರಿಸಿರುವರು. ಕೊನೆಯಪಾದದ ಅರ್ಥ ವಿವರಣೆಯನ್ನು ಹಿಂದೆಯೇ ಮಾಡಲಾಗಿದೆ.

---

ಸಂಹಿತಾಪಾಠಃ

ಸಾಕಂ ಜಾತಃ ಕ್ರತುನಾ ಸಾಕಮೋಜಸಾ ವವಕ್ಷಿಥ ಸಾಕಂ ವೃದ್ಧೋ

ವೀರ್ಯೈಃ ಸಾಸಹಿರ್ಮೃಧೋ ವಿಚರ್ಷಣಿಃ ।

ದಾತಾ ರಾಧಃ ಸ್ತುವತೇ ಕಾಮ್ಯಂ ವಸು ಸೈನಂ ಸಶ್ಚದ್ದೇವೋ ದೇವಂ ಸತ್ಯ-

ಮಿಂದ್ರಂ ಸತ್ಯ ಇಂದುಃ ॥ ೩ ॥

ಪದಪಾಠಃ

ಸಾಕಂ । ಜಾತಃ । ಕ್ರತುನಾ । ಸಾಕಂ । ಓಜಸಾ । ವವಕ್ಷಿಥ । ಸಾಕಂ । ವೃದ್ಧಃ । ವೀರ್ಯೈಃ । ಸಸಹಿಃ ।
ಮೃಧಃ । ವಿಽಚರ್ಷಣಿಃ ॥

ದಾತಾ । ರಾಧಃ । ಸ್ತುವತೇ । ಕಾಮ್ಯಂ । ವಸು । ಸಃ । ಏನಂ । ಸಶ್ಚತ್ । ದೇವಃ । ದೇವಂ । ಸತ್ಯಂ ।
ಇನ್ದ್ರಂ । ಸತ್ಯಃ । ಇನ್ದುಃ ॥ ೩ ॥

ಸಾಯಣಭಾಷ್ಯಂ

ಕ್ರತುನಾ ಕರ್ಮಣಾ ಪ್ರಜ್ಞಯಾ ವಾ ಸಾಕಂ ಸಹ ಜಾತಃ ಸಾಕಮೋಜಸಾ ಬಲೇನ ಸಹ ವವಕ್ಷಿಥ । ವಿಶ್ವಂ ವೋಢುಮಿಚ್ಛಸಿ ॥ ವಹೇಃ ಸನಂತಸ್ಯ ಲಿಟಿ ಮಂತ್ರತ್ವಾದಾಮ್ನ ಭವತಿ ॥ ಕಿಂಚ ತ್ವಂ ವೀರ್ಯೈಃ ಶತ್ರುಹನನಾದಿಲಕ್ಷಣೈಃ ಪರಾಕ್ರಮೈಃ ಸಾಕಂ ಸಹ ವೃದ್ಧಃ ಪ್ರವೃದ್ಧೋ ಮೃಧೋ ಹಿಂಸಕಾನ್ ಸಂಗ್ರಾಮಾನ್ವಾ ಸಾಸಹಿಃ ॥ ನ ಲೋಕಾವ್ಯಯೇತಿ ಷಷ್ಠೀಪ್ರತಿಷೇಧಃ ॥ ತೇಷಾಮಭಿಭವಿತಾ । ವಿಚರ್ಷಣಿಃ ಪುಣ್ಯಕೃತೋಽಪುಣ್ಯಕೃತಶ್ಚ ವಿಶೇಷೇಣ ದ್ರಷ್ಟಾ ಸ್ತುವತೇ ಸ್ತೋತ್ರಂ ಕುರ್ವಾಣಾಯ ಯಜಮಾನಾಯ ರಾಧಃ ಸಾಧಕಂ ಕಾಮ್ಯಂ ಪ್ರಾರ್ಥನೀಯಂ ವಸು ಧನಂ ದಾತಾ ಸನ್ ವವಕ್ಷಿಥೇತಿ ಸಮನ್ವಯಃ । ಸ್ವೈನಮಿತಿ ಪರೋಕ್ಷನಿರ್ದೇಶಃ ಸಿದ್ಧಾರ್ಥಶ್ಚ ॥

ಪ್ರತಿಪದಾರ್ಥ

**ಕ್ರತುನಾ ಸಾಕಂ**—ಉತ್ತಮವಾದ ಕರ್ಮದೊಡನೆಯೂ ಅಥವಾ ಪ್ರಜ್ಞೆಯೊಡನೆಯೂ । **ಓಜಸಾ ಸಾಕಂ**—ಬಲದೊಡನೆಯೂ । **ಜಾತಃ**—ಉತ್ಪನ್ನನಾಗಿಯೂ । **ವೀರ್ಯೈಃ ಸಾಕಂ**—ಶತ್ರುಹನನಾದಿ ಪರಾಕ್ರಮಗಳೊಡನೆ ಕೂಡಿ । **ವೃದ್ಧಃ**—ಪ್ರವೃದ್ಧನಾಗಿ । **ಮೃಧಃ**—ಹಿಂಸಕರಾದ ಅಸುರರನ್ನು । **ಸಾಸಹಿಃ**—ಎದುರಿಸಿ ಸೋಲಿಸುವವನಾಗಿಯೂ । **ವಿಚರ್ಷಣಿಃ**—(ಸಜ್ಜನರನ್ನೂ ದುಷ್ಟರನ್ನೂ) ವಿಭಾಗಮಾಡಿ ನೋಡತಕ್ಕವನಾಗಿಯೂ ಆದ ನೀನು । **ಸ್ತುವತೇ**—ಸ್ತೋತ್ರಮಾಡತಕ್ಕ ಯಜಮಾನನಿಗೆ । **ರಾಧಃ**—ಕಾರ್ಯಸಾಧಕವಾದುದೂ । **ಕಾಮ್ಯಂ**—ಪ್ರಾರ್ಥನೀಯವಾದುದೂ ಆದ । **ವಸು**—ಧನವನ್ನು । **ದಾತಾ**—ಕೊಡತಕ್ಕವನಾಗಿ । **ವವಕ್ಷಿಥ**—(ವಿಶ್ವದ ಭಾರವನ್ನು) ವಹಿಸಲು ಇಚ್ಛಿಸಿದೆ । **ಸತ್ಯಃ**—ಸತ್ಯಾತ್ಮಕವಾದುದೂ । **ಇಂದುಃ**—ಸ್ರವಿಸುವುದೂ । **ದೇವಃ**—ಪ್ರಕಾಶಮಾನವಾದುದೂ ಆದ । **ಸಃ**—ಸೋಮವು । **ಸತ್ಯಂ**—ಸತ್ಯಾತ್ಮಕನಾದವನೂ । **ದೇವಂ**—ಸೋಮಕಾಮನಾದವನೂ ಆದ । **ಏನಂ ಇಂದ್ರಂ**—ಆ ಇಂದ್ರನನ್ನು । **ಸಶ್ಚತ್**—ಸೇರಿಕೊಂಡು ಅವನ ದೇಹದಲ್ಲಿ ವ್ಯಾಪಿಸಲಿ.

ಭಾವಾರ್ಥ

ಉತ್ತಮವಾದ ಪ್ರಜ್ಞೆಯೊಡನೆಯೂ, ಬಲದೊಡನೆಯೂ ಉತ್ಪನ್ನನಾಗಿಯೂ ಶತ್ರುಹನನಾದಿಪರಾಕ್ರಮಗಳೊಡನೆ ಕೂಡಿ ಪ್ರವೃದ್ಧನಾಗಿ ಹಿಂಸಕರಾದ ಅಸುರರನ್ನು ಎದುರಿಸಿ ಸೋಲಿಸುವವನಾಗಿಯೂ, ಸದಸಜ್ಜನರನ್ನು ವಿಭಾಗಮಾಡಿ ನೋಡತಕ್ಕವನಾಗಿಯೂ ಇರುವ ನೀನು ಸ್ತೋತ್ರಮಾಡತಕ್ಕ ಯಜಮಾನನಿಗೆ ಕಾರ್ಯಸಾಧಕವಾ

ದುದೂ, ಪ್ರಾರ್ಥನೀಯವಾದುದೂ ಆದ ಧನವನ್ನು ಕೊಡತಕ್ಕವನಾಗಿ ವಿಶ್ವದ ಭಾರವನ್ನು ವಹಿಸಲು ಇಚ್ಛಿಸಿದೆ. ಸತ್ಯಾತ್ಮಕವಾದುದೂ ಪ್ರವಿಸುವುದೂ ಪ್ರಕಾಶಮಾನವಾದುದೂ ಆದ ಸೋಮವು ಸತ್ಯಾತ್ಮಕನಾದವನೂ ಸೋಮಕಾಮನಾದವನೂ ಆದ ಇಂದ್ರನನ್ನು ಸೇರಿಕೊಡು ಅವನ ದೇಹದಲ್ಲಿ ವ್ಯಾಪಿಸಲಿ.

## English Translation

Cognate with (pious) works and with power, you desire to support (the Universe): mighty with heroic (energies), you are the subduer of the malevolent; (you are) the distinguisher (between the doer of good and ill): the giver of the substantial wealth he desires to him who praises you: May the divine (Soma) pervade the divine (Indra), the true Soma, the true (Indra).

### ವಿಶೇಷವಿಷಯಗಳು

**ಸಾಕಂ ಜಾತಃ ಕ್ರತುನಾ— ಕರ್ಮಣಾ ಪ್ರಜ್ಞಯಾ ವಾ ಸ ಜಾತೋಽಸಿ ।** ಎಲೈ ಇಂದ್ರನೇ, ನೀನು ಹುಟ್ಟುವಾಗಲೇ ಯಜ್ಞಾದಿಕರ್ಮಗಳಿಂದ ಭಜನೀಯನಾಗಿಯೂ ಅಥವಾ ಪ್ರಜ್ಞಾವಂತನಾಗಿಯೂ ಉತ್ಪನ್ನನಾಗಿರುವೆ. ಸಾಧಾರಣಮನುಷ್ಯರು ಅಥವಾ ಇತರ ದೇವತೆಗಳು ಹುಟ್ಟಿದ ಕೆಲವು ಕಾಲದಮೇಲೆ ಕಾರ್ಯಗಳನ್ನುಮಾಡಲು ಅಥವಾ ಜ್ಞಾನವಂತರಾಗಲು ಮಾತ್ರ ಸಾಧ್ಯವು. ಆದರೆ ಇಂದ್ರನಾದ ನಿನ್ನ ವಿಷಯವು ಹಾಗಲ್ಲ. ಹುಟ್ಟುವಾಗಲೇ ಸಾಹಸಕಾರ್ಯಗಳನ್ನು ಮಾಡಲು ಶಕ್ತನಾಗಿರುವೆ ಅಥವಾ ಹುಟ್ಟುವಾಗಲೇ ನಿನಗೆ ಸರ್ವತೋಮುಖವಾದ ಜ್ಞಾನವಿರುವುದು ಎಂದಭಿಪ್ರಾಯವು. ಈ ವಿಷಯವು—

> **ಯೋ ಜಾತ ಏವ ಪ್ರಥಮೋ ಮನಸ್ವಾನ್ ದೇವೋ ದೇವಾನ್ ಕ್ರತುನಾ ಪರ್ಯಭೂಷತ್**
> **ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಂ ನೃಮ್ಣಸ್ಯ ಮಹ್ನಾ ಸ ಜನಾಸ ಇಂದ್ರಃ ॥**
>
> (ಋ. ಸಂ. ೨-೧೨-೧)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಲ್ಪಟ್ಟಿರುವುದು.

**ಓಜಸಾ ಸಾಕಂ ವವಕ್ಷಿಥ— ಬಲೇನ ಸಹ ವಿಶ್ವಂ ವೋಢುಮಿಚ್ಛಸಿ ।** ಎಲೈ ಇಂದ್ರನೇ, ನಿನ್ನ ಅಸಾಧಾರಣವಾದ ಬಲದಿಂದಲೇ ನೀನು ವಿಶ್ವವನ್ನೆಲ್ಲಾ ಧರಿಸಿ ಪಾಲಿಸಲು ಸಮರ್ಥನಾಗಿದ್ದೀಯೆ ಎಂದಭಿಪ್ರಾಯವು

**ವೀರ್ಯೈಃ ಸಾಕಂ ವೃದ್ಧಃ ಮೃಧಃ ಸಾಸಹಿಃ— ತ್ವಂ ಶತ್ರುಹನನಾದಿಲಕ್ಷಣೈಃ ಪರಾಕ್ರಮೈಃ ಸಹ ಪ್ರವೃದ್ಧೋ ಹಿಂಸಕಾನ್ ಸಂಗ್ರಾಮಾನ್ವಾ ಸಾಸಹಿಃ ।** ಎಲೈ ಇಂದ್ರನೇ, ನೀನು ನಿನ್ನ ಅತಿಶಯವಾದ ಪರಾಕ್ರಮಗಳಿಂದ ಯುಕ್ತನಾಗಿ ನಿನ್ನ ಸಾಮರ್ಥ್ಯಾತಿಶಯಗಳನ್ನು ವೃದ್ಧಿಪಡಿಸಿಕೊಂಡು ಹಿಂಸಕರಾದ ಶತ್ರುಗಳು ಯುದ್ಧದಲ್ಲಿ ಕೊಡುವ ಬಾಧೆಗಳನ್ನು ಸಹಿಸಿ ಅವರನ್ನು ಪರಾಭವಗೊಳಿಸುತ್ತೀಯೆ ಎಂದು ಮುಖ್ಯಾಭಿಪ್ರಾಯವು.

**ವಿಚರ್ಷಣಿಃ— ಪುಣ್ಯಕೃತೋಽಪುಣ್ಯಕೃತಶ್ಚ ವಿಶೇಷೇಣ ದ್ರಷ್ಟಾ ।** ಇಂದ್ರನು, ಪುಣ್ಯಮಾಡುವವರು ಯಾರು, ಪಾಪಮಾಡುವವರು ಯಾರು ಎಂದು ನೋಡುವವನು ಎಂದರೆ ಪುಣ್ಯಮಾಡುವವರಿಗೆ ಸತ್ಫಲವನ್ನೂ, ಪಾಪಮಾಡುವವರಿಗೆ ಶಿಕ್ಷೆಯನ್ನು ಕೊಡುವವನು ಎಂದರ್ಥವು.

ದಾತಾ ರಾಧಃ ಸ್ತುವತೇ ಕಾಮ್ಯಂ ವಸು—ಸ್ತೋತ್ರಂ ಕುರ್ವಾಣಾಯ ಯಜಮಾನಾಯ ರಾಧಃ ಸಾಧಕಂ ಕಾಮ್ಯಂ ಪ್ರಾರ್ಥನೀಯಂ ವಸು ಧನಂ ದಾತಾ। ಈ ಇಂದ್ರನು ತನ್ನನ್ನು ಸ್ತೋತ್ರಮಾಡುತ್ತಿರುವ ಯಜಮಾನನಿಗೆ ಅವನಿಗೆ ಬೇಕಾದ ಧನಾದಿಗಳನ್ನು ಕೊಡುವವನು ಎಂದು ವಿವರಿಸಿದೆ. ನಾಲ್ಕನೆಯ ಪಾದದ ವಿವರಣೆಯು ಮೊದಲನೆಯ ಋಕ್ಕಿನಲ್ಲಿಯೇ ಹೇಳಿದೆ.

---

ಸಂಹಿತಾಪಾಠಃ

ತವ ತ್ಯನ್ನರ್ಯಂ ನೃತೋಽಪ ಇನ್ದ್ರ ಪ್ರಥಮಂ ಪೂರ್ವ್ಯಂ ದಿವಿ ಪ್ರವಾ-
ಚ್ಯಂ ಕೃತಂ ।

ಯದ್ದೇವಸ್ಯ ಶವಸಾ ಪ್ರಾರಿಣಾ ಅಸುಂ ರಿಣನ್ನಪಃ ।

ಭುವದ್ವಿಶ್ವಮಭ್ಯಾದೇವಮೋಜಸಾ ವಿದಾದೂರ್ಜಂ ಶತಕ್ರತುರ್ವಿದಾದಿಷಂ॥

ಪದಪಾಠಃ

ತವ । ತ್ಯತ್ । ನರ್ಯಂ । ನೃತೋ ಇತಿ । ಅಪಃ । ಇನ್ದ್ರ । ಪ್ರಥಮಂ । ಪೂರ್ವ್ಯಂ । ದಿವಿ । ಪ್ರಽವಾಚ್ಯಂ। ಕೃತಂ ।

ಯತ್ । ದೇವಸ್ಯ । ಶವಸಾ । ಪ್ರ । ಅರಿಣಾಃ । ಅಸುಂ । ರಿಣನ್ । ಅಪಃ ।

ಭುವತ್ । ವಿಶ್ವಂ । ಅಭಿ । ಅದೇವಂ । ಓಜಸಾ । ವಿದಾತ್ । ಊರ್ಜಂ । ಶತಽಕ್ರತುಃ । ವಿದಾತ್ । ಇಷಂ ॥ ೪ ॥

ಸಾಯಣಭಾಷ್ಯಂ

ನೃತೋ ಸರ್ವೇಷಾಂ ನರ್ತಯಿತಃ ಹೇ ಇಂದ್ರ ನರ್ಯಂ ನರಾಣಾಂ ಹಿತಕರಂ ಪ್ರಥಮಂ ಪ್ರತತಂ ॥ ಪ್ರಥಮಂ ಪ್ರತತಮಿತಿ ಯಾಸ್ಕಃ ॥ ಪೂರ್ವ್ಯಂ ಪೂರ್ವಕಾಲಭವಂ ತ್ವಯಾ ಕೃತಂ । ತವ ತ್ಯತ್ ತದಪಃ ಕರ್ಮ ದಿವಿ ಸ್ವರ್ಗಲೋಕೇ ಪ್ರವಾಚ್ಯಂ । ಪ್ರಕರ್ಷೇಣ ವಕ್ತವ್ಯಂ । ಶ್ಲಾಘನೀಯಮಿತ್ಯರ್ಥಃ । ಕಿಂ ತತ್ । ದೇವಸ್ಯ ವಿಜಿಗೀಷೋರಸುರಸ್ಯಾಸುಂ ಪ್ರಾಣಂ ರಿಣನ್ ಹಿಂಸನ್ ತ್ವಮಪಸ್ತೇನ ನಿರುದ್ಧಾನ್ಯುದಕಾನಿ ಪ್ರಾರಿಣಾಃ । ಪ್ರೈರಯಃ। ಇತಿ ಯದೇತತ್ಕರ್ಮ ತತ್ಪ್ರವಾಚ್ಯಮಿತಿ ಸಮನ್ವಯಃ। ಪರೋಕ್ಷನಿರ್ದೇಶೋಽವಶಿಷ್ಟಃ । ಸ ಇಂದ್ರೋ ವಿಶ್ವಂ ವ್ಯಾಪ್ತಮದೇವಂ ತಮೋರೂಪಮಸುರಮೋಜಸಾ ಬಲೇನಾಭಿಭುವತ್ । ಅಭಿಭವತು । ಕಿಂಚ ಶತಕ್ರತುರಿಂದ್ರ ಊರ್ಜಂ ಬಲಂ ವಿದಾತ್ । ಇಷಂ ಹವಿರ್ಲಕ್ಷಣಮನ್ನಂ ಚ ವಿದಾತ್ । ವಿದಿರ್ ಲಾಭೇ ಶವಿಕರಣೇ । ಲೇಟ್ಯಡಾಗಮಃ ॥

### ಪ್ರತಿಪದಾರ್ಥ

**ನೃತೋ**—(ಹರ್ಷದಿಂದ ಸಕಲರನ್ನೂ) ನಲಿಯುವಂತೆ ಮಾಡತಕ್ಕ। **ಇಂದ್ರ**—ಎಲೈ ಇಂದ್ರನೇ। **ಯತ್**—ಯಾವ ನಿನ್ನ ಮಹಿಮೆಯಿಂದ। **ದೇವಸ್ಯ**—ದೇವತೆಗಳನ್ನು ಜಯಿಸಬೇಕೆಂದಿದ್ದ ಅಸುರನ। **ಅಸುಂ**—ಪ್ರಾಣವನ್ನು। **ಶವಸಾ**—ಬಲಾತ್ಕಾರವಾಗಿ। **ರಿಣನ್**—ಹಿಂಸಿಸುತ್ತಾ। **ಅಪಃ**—(ಅವನಿಂದ ತಡೆಯಲ್ಪಟ್ಟ) ಉದಕಗಳನ್ನು। **ಪ್ರಾರಿಣಾಃ**—ಪ್ರವಹಿಸುವಂತೆ ಮಾಡಿದೆಯೋ। **ನರ್ಯಂ**—ನರರಿಗೆ ಹಿತಕರವಾದುದೂ। **ಪ್ರಥಮಂ**—ಉತ್ತಮವಾದುದೂ। **ಪೂರ್ವ್ಯಂ**—ಅತ್ಯಂತ ಪ್ರಾಚೀನವಾದುದೂ। **ತವ ಕೃತಂ**—ನಿನ್ನಿಂದ ನೆರವೇರಿಸಲ್ಪಟ್ಟುದೂ। **ತ್ಯತ್ ಅಪಃ**—ಪ್ರಸಿದ್ಧವಾದುದೂ ಆದ ಆ ಕರ್ಮವು। **ದಿವಿ**—ಸ್ವರ್ಗಲೋಕದಲ್ಲಿ। **ಪ್ರವಾಚ್ಯಂ**—ಅತಿಶಯವಾಗಿ ಹೊಗಳಲ್ಪಡತಕ್ಕದ್ದಾಗಿದೆ। **ಶತಕ್ರತುಃ**—ಅದೇ ಇಂದ್ರನು। **ವಿಶ್ವಂ**—ವಿಶ್ವವನ್ನೆಲ್ಲಾ ವ್ಯಾಪಿಸಿದವನೂ। **ಅದೇವಂ**—ಪ್ರಕಾಶವಿಲ್ಲದೇ ತಮೋರೂಪನಾದವನೂ ಆದ ಅಸುರನನ್ನು। **ಓಜಸಾ**—ಬಲದಿಂದ। **ಅಭಿ ಭುವತ್**—ಸೋಲಿಸಲಿ। **ಊರ್ಜಂ**—ಬಲವನ್ನು। **ವಿದಾತ್**—ಹೊಂದಲಿ। **ಇಷಂ**—ಅನ್ನವನ್ನೂ। **ವಿದಾತ್**—ಹೊಂದಲಿ.

### ಭಾವಾರ್ಥ

ಹರ್ಷದಿಂದ ಸಕಲರನ್ನೂ ನಲಿಯುವಂತೆ ಮಾಡತಕ್ಕ ಎಲೈ ಇಂದ್ರನೇ, ಯಾವ ನಿನ್ನ ಮಹಿಮೆಯಿಂದ ದೇವತೆಗಳನ್ನು ಜಯಿಸಬೇಕೆಂದಿದ್ದ ಅಸುರನ ಪ್ರಾಣವನ್ನು ಬಲಾತ್ಕಾರವಾಗಿ ಹಿಂಸಿಸುತ್ತಾ ಅವನಿಂದ ತಡೆಯಲ್ಪಟ್ಟ ಉದಕಗಳನ್ನು ಪ್ರವಹಿಸುವಂತೆ ಮಾಡಿದೆಯೋ, ನರರಿಗೆ ಹಿತಕರವಾದುದೂ, ಉತ್ತಮವಾದುದೂ, ಅತ್ಯಂತ ಪ್ರಾಚೀನವಾದುದೂ, ನಿನ್ನಿಂದ ನೆರವೇರಿಸಲ್ಪಟ್ಟುದೂ; ಪ್ರಸಿದ್ಧವಾದುದೂ ಆದ ಆ ಕರ್ಮವು ಸ್ವರ್ಗಲೋಕದಲ್ಲಿ ಅತಿಶಯವಾಗಿ ಹೊಗಳಲ್ಪಡತಕ್ಕುದ್ದಾಗಿದೆ. ಅದೇ ಇಂದ್ರನು ವಿಶ್ವವನ್ನೆಲ್ಲಾ ವ್ಯಾಪಿಸಿದವನೂ, ಪ್ರಕಾಶವಿಲ್ಲದೇ ತಮೋರೂಪನಾದವನೂ ಆದ ಅಸುರನನ್ನು ಬಲದಿಂದ ಸೋಲಿಸಲಿ, ಬಲವನ್ನೂ ಅನ್ನವನ್ನೂ ಹೊಂದಲಿ.

### English Translation

Indra, the delighter (of all), the first act performed by you in ancient time was for the good of man, and deserving of renown in heaven, when, arresting by force the breath of the (enemy) of the gods, you sent down the rain : May Indra prevail by his prowess over all that is godless : may Shatakratu obtain vigour ; may he obtain (sacrificial) food.

### ವಿಶೇಷವಿಷಯಗಳು

**ತ್ಯತ್**—**ತೆತ್**। **ತ್ಯತ್** ಎಂಬ ಶಬ್ದಕ್ಕೆ ತಚ್ಛಬ್ದದ ಅರ್ಥವೇ ಇರುವುದು. ಅದು, ಆ, ಅಂತಹ ಎಂಬ ಅರ್ಥಗಳನ್ನು ಹೇಳಬಹುದು.

**ನರ್ಯಂ**—**ನರಾಣಾಂ ಹಿತಕರಂ**। ಮನುಷ್ಯರಿಗೆ ಹಿತಕರವಾದ ಎಂದರ್ಥವು.

**ನೃತೋ—ಸರ್ವೇಷಾಂ ನರ್ತಯಿತಃ** । ಸರ್ವರನ್ನೂ (ಆನಂದದಿಂದ) ನರ್ತನಮಾಡುವಂತೆ ಮಾಡುವವನು ಎಂದು ಸಂಬುದ್ಧ್ಯೇಕವಚನದಲ್ಲಿ ಇಂದ್ರಶಬ್ದಕ್ಕೆ ವಿಶೇಷಣವಾಗಿದೆ. ಆದರೆ ಈ ಶಬ್ದಕ್ಕೆ ಇಲ್ಲಿ ಹೇಳಿರುವ ಅರ್ಥವು ಸಂದರ್ಭೋಚಿತವಾಗಿರುವುದೆಂದು ಹೇಳುವುದಕ್ಕಾಗುವುದಿಲ್ಲ.

**ಅಪಃ—ಕರ್ಮ** । ಅಪಃ ಎಂಬ ಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧) ಅಪಃ ಎಂದರೆ ಕರ್ಮವು, ಕಾರ್ಯವು ಎಂದರ್ಥವು.

**ಪ್ರಥಮಂ**—ಮುಖ್ಯವಾದ । ಈ ಶಬ್ದಕ್ಕೆ ಯಾಸ್ಕರು **ಪ್ರಥಮ** ಇತಿ ಮುಖ್ಯನಾಮ ಪ್ರತಮೋ ಭವತಿ ಎಂದು ನಿರ್ವಚನವನ್ನು ಹೇಳಿರುವರು (ನಿ. ೨-೨೨).

**ದೇವಸ್ಯ—ವಿಜಿಗೀಷೋರಸುರಸ್ಯ** । ಈ ಶಬ್ದಕ್ಕೆ ಭಾಷ್ಯಕಾರರು ಜಯಿಸಬೇಕೆಂದು ಅಪೇಕ್ಷಿಸುತ್ತಿರುವ ಅಸುರನ ಎಂದು ಅರ್ಥವಿವರಣೆ ಮಾಡಿರುವರು.

**ಶವಸಾ**—ಶವಃ ಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪). ಬಲನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಇಲ್ಲಿ ಬಲವೆಂಬರ್ಥದಲ್ಲಿ ಪ್ರಯುಕ್ತವಾಗಿದೆ.

---

## ಇಪ್ಪತ್ತಮೂರನೆಯ ಸೂಕ್ತವು.

:o:

### ಸಾಯಣಭಾಷ್ಯಂ

**ತೃತೀಯೇಽನುವಾಕೇ ದಶ ಸೂಕ್ತಾನಿ । ತತ್ರೇದಮೇಕೋನವಿಂಶತ್ಯೃಚಂ ಗಾರ್ತ್ಸಮದಂ ಪ್ರಥಮಂ ಸೂಕ್ತಂ । ಅತ್ರೇಯಮನುಕ್ರಮಣಿಕಾ । ಗಣಾನಾಮೇಕೋನಾ ಬ್ರಾಹ್ಮಣಸ್ಪತ್ಯಂ ಹ ಬಾರ್ಹಸ್ಪತ್ಯಾಸ್ತು ದೃಷ್ಟಲಿಂಗಾಃ ಪಂಚದಶ್ಯಂತ್ಯೇ ತ್ರಿಷ್ಟುಭಾವಿತಿ । ಪಂಚದಶ್ಯೇಕೋನವಿಂಶೀ ಚ ತ್ರಿಷ್ಟುಭೌ । ಶಿಷ್ಟಾ ಜಗತ್ಯಃ । ಯಾಸು ಬೃಹಸ್ಪತಿಶಬ್ದಃ ಶ್ರೂಯತೇ ತಾ ಬಾರ್ಹಸ್ಪತ್ಯಾಃ । ಶಿಷ್ಟಾ ಬ್ರಾಹ್ಮಣಸ್ಪತ್ಯಾಃ ॥ ಪ್ರವರ್ಗ್ಯೇಽಭಿಷ್ಟವ ಏತತ್ಸೂಕ್ತಂ । ಸ್ಪೃಷ್ಟ್ವೋದಕಮಿತಿ ಖಂಡೇ ಸೂತ್ರಿತಂ । ಗಣಾನಾಂ ತ್ವಾ ಪ್ರಥಶ್ಚ ಯಸ್ಯ । ಆ. ೪-೬ । ಇತಿ ॥**

ಅನುವಾದವು—***ಗಣಾನಾಂ ತ್ವಾ*** ಎಂಬ ಈ ಸೂಕ್ತದಿಂದ ಎರಡನೆಯ ಮಂಡಲದ ಮೂರನೆಯ ಅನುವಾಕವು ಪ್ರಾರಂಭವಾಗುವುದು. ಈ ಮೂರನೆಯ ಅನುವಾಕದಲ್ಲಿ ಹತ್ತು ಸೂಕ್ತಗಳಿರುವವು. ಅವುಗಳಲ್ಲಿ **ಗಣಾನಾಂ ತ್ವಾ** ಎಂಬ ಸೂಕ್ತವು ಮೊದಲನೆಯದು. ಇದರಲ್ಲಿ ಹತ್ತೊಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು. ಅನುಕ್ರಮಣಿಕೆಯಲ್ಲಿ—**ಗಣಾನಾಮೇಕೋನಾ ಬ್ರಾಹ್ಮಣಸ್ಪತ್ಯಂ ಹ ಬಾರ್ಹಸ್ಪತ್ಯಾಸ್ತು ದೃಷ್ಟಲಿಂಗಾಃ ಪಂಚದಶ್ಯಂತ್ಯೇ ತ್ರಿಷ್ಟುಭಾವಿತಿ** ಎಂದು ಹೇಳಿರುವುದು. ಈ ಸೂಕ್ತದ ಹದಿನೈದು ಮತ್ತು ಹತ್ತೊಂಭತ್ತನೆಯ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ಜಗತೀಛಂದಸ್ಕವು. ಬೃಹಸ್ಪತಿಶಬ್ದವಿರುವ ಋಕ್ಕುಗಳು ಬೃಹಸ್ಪತಿದೇವತಾಕವು. ಉಳಿದ ಋಕ್ಕುಗಳು ಬ್ರಹ್ಮಣಸ್ಪತಿದೇವತಾಕವು. ಪ್ರವರ್ಗ್ಯವೆಂಬ ಯಾಗದ ಅಭಿಷ್ಟವದಲ್ಲಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಸ್ಪೃಷ್ಟ್ವೋದಕಂ** ಎಂಬ ಖಂಡದ **ಗಣಾನಾಂ ತ್ವಾ ಪ್ರಥಶ್ಚ ಯಸ್ಯ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೪-೬).

---

॥ ಓಂ ॥

## ಸೂಕ್ತ—೨೩

॥ ಮಂಡಲ—೨ ॥ ಅನುವಾಕ—೩ ॥ ಸೂಕ್ತ—೨೩ ॥

॥ ಅಷ್ಟಕ—೨ ॥ ಅಧ್ಯಾಯ—೬ ॥ ವರ್ಗ—೨೯, ೩೦, ೩೧, ೩೨ ॥

। ಸೂಕ್ತದಲ್ಲಿರುವ ಋಕ್ಸಂಖ್ಯೆ—೧೯ ।

ಋಷಿಃ—ಗೃತ್ಸಮದಃ ॥

ದೇವತಾ—೧, ೫, ೯, ೧೧, ೧೭, ೧೯ ಬ್ರಹ್ಮಣಸ್ಪತಿಃ ।

೨-೪, ೬-೮, ೧೦, ೧೨-೧೬, ೧೮ ಬೃಹಸ್ಪತಿಃ ॥

ಛಂದಃ—೧-೧೪, ೧೬-೧೮, ಜಗತೀ । ೧೫, ೧೯ ತ್ರಿಷ್ಟುಪ್

---

ಸಂಹಿತಾಪಾಠಃ

ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪಮಶ್ರವ-
ಸ್ತಮಂ ।
ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆ ನಃ ಶೃಣ್ವನ್ನೂತಿಭಿಃ ಸೀದ
ಸಾದನಂ ॥ ೧ ॥

ಪದಪಾಠಃ

ಗಣಾನಾಂ । ತ್ವಾ । ಗಣಽಪತಿಂ । ಹವಾಮಹೇ । ಕವಿಂ । ಕವೀನಾಂ । ಉಪಮಶ್ರವಃಽತಮಂ ।

ಜ್ಯೇಷ್ಠಽರಾಜಂ । ಬ್ರಹ್ಮಣಾಂ । ಬ್ರಹ್ಮಣಃ । ಪತೇ । ಆ । ನಃ । ಶೃಣ್ವನ್ । ಊತಿಽಭಿಃ । ಸೀದ । ಸದನಂ ॥

ಸಾಯಣಭಾಷ್ಯಂ

ಹೇ ಬ್ರಹ್ಮಣಸ್ಪತೇ ಬ್ರಹ್ಮಣೋಽನ್ನಸ್ಯ ಪರಿವೃಢಸ್ಯ ಕರ್ಮಣೋ ವಾ ಪತೇ ಪಾಲಯಿತಃ ಗಣಾ-ನಾಂ ದೇವಾದಿಗಣಾನಾಂ ಸಂಬಂಧಿನಂ ಗಣಪತಿಂ ಸ್ವಿಯೋನಾಂ ಪತಿಂ । ಕವೀನಾಂ ಕ್ರಾಂತದರ್ಶಿನಾಂ ಕವಿಂ । ಉಪಮಶ್ರವಸ್ತಮಂ । ಉಪಮೀಯತೇಽನಯೇತ್ಯುಪಮಾ । ಸರ್ವೇಷಾಮನ್ನಾನಾಮುಪ-ಮಾನಂ ಶ್ರವೋಽನ್ನಂ ಯಸ್ಯ ಸ ತಥೋಕ್ತಃ । ಅತಿಶಯೇನೋಪಮಶ್ರವಾ ಉಪಮಶವಸ್ತಮಃ ॥ ಉಪ-ಮಃಮಾಙ್ ಮಾನೇ । ಆತಶ್ಚೋಪಸರ್ಗೇ ಕರಣೇಽಙ್ಪ್ರತ್ಯಯಃ । ಙ್ಯಾಪೋಃ ಸಂಜ್ಞಾಛಂದಸೋರಿತಿ ಹ್ರಸ್ವತ್ವಂ॥ಜ್ಯೇಷ್ಠರಾಜಂ।ಜ್ಯೇಷ್ಠಾಃ ಪ್ರಶಸ್ಯತಮಾಃ।ತೇಷಾಂ ಮಧ್ಯೇ ರಾಜಂತಂ ಬ್ರಹ್ಮಣಾಂ ಮಂತ್ರಾಣಾಂ

ಸ್ವಾಮಿನಂ ತ್ವಾ ತ್ವಾಂ ಹವಾಮಹೇ । ಅಸ್ಮಿನ್ಕರ್ಮಣ್ಯಾಹ್ವಯಾಮಃ । ಕಿಂಚ ನೋಽಸ್ಮಾಕಂ ಸ್ತುತೀಃ ಶೃಣ್ವನ್ ತ್ವಮೂತಿಭಿಃ ಪಾಲನೈರ್ಹೇತುಭೂತೈಃ ಸಾದನಂ । ಸೀದಂತ್ಯಸ್ಮಿನ್ನಿತಿ ಸದನಂ । ಯಜ್ಞಗೃಹಮಾಸೀದ । ಉಪವಿಶ ॥

ಪ್ರತಿಪದಾರ್ಥ

ಬ್ರಹ್ಮಣಸ್ಪತೇ—ಎಲೈ ಬ್ರಹ್ಮಣಸ್ಪತಿಯೇ, (ಪ್ರವೃದ್ಧವಾದ ಕರ್ಮಗಳಿಗೆ ಪ್ರಭುವಾದವನೇ) । ಗಣಾನಾಂ—ದೇವಗಣಗಳಿಗೆ ಸಂಬಂಧಿಸಿದವನೂ । ಗಣಪತಿಂ—ಸ್ವಗಣಕ್ಕೆ ಒಡೆಯನೂ । ಕವೀನಾಂ—ಕ್ರಾಂತದರ್ಶಿಗಳಾದ ಕವಿಗಳಲ್ಲಿ । ಕವಿಂ—ಅತ್ಯುತ್ತಮವಾದ ಕವಿಯಾದವನೂ । ಉಪಮಶ್ರವಸ್ತಮಂ—ಅತ್ಯಂತ ಶ್ರೇಷ್ಠವಾದ ಮತ್ತು ಅಪರಿಮಿತವಾದ ಅನ್ನವುಳ್ಳವನೂ । ಜ್ಯೇಷ್ಠರಾಜಂ—ಶ್ಲಾಘ್ಯರ ನಡುವೆ ಪ್ರಕಾಶಿಸುವವನೂ । ಬ್ರಹ್ಮಣಾಂ—ಮಂತ್ರಗಳಿಗೆ । ಬ್ರಹ್ಮಣಃ ಪತೇ—ಒಡೆಯನೂ ಆದ । ತ್ವಾ—ನಿನ್ನನ್ನು । ಹವಾಮಹೇ—(ಈ ಕರ್ಮನಿಮಿತ್ತವಾಗಿ) ಕರೆಯುತ್ತೇವೆ । ನಃ—ನಮ್ಮ ಸ್ತುತಿಗಳನ್ನು । ಶೃಣ್ವನ್—ಕೇಳುತ್ತಾ । ಊತಿಭಿಃ—ನಿನ್ನ ರಕ್ಷಣೆಗಳೊಡನೆ । ಸಾದನಂ—ಯಜ್ಞಗೃಹಕ್ಕೆ ಬಂದು । ಆ ಸೀದ—ಕುಳಿತುಕೊ.

ಭಾವಾರ್ಥ

ಎಲೈ ಬ್ರಹ್ಮಣಸ್ಪತಿಯೇ, ಪ್ರವೃದ್ಧವಾದ ಕರ್ಮಗಳಿಗೆ ಪ್ರಭುವಾದವನೂ, ದೇವಗಳಿಗೆ ಸಂಬಂಧಿಸಿದವನೂ, ಸ್ವಗಣಕ್ಕೆ ಒಡೆಯನೂ, ಕ್ರಾಂತದರ್ಶಿಗಳಾದ ಕವಿಗಳಲ್ಲಿ ಅತ್ಯುತ್ತಮವಾದ ಕವಿಯಾದವನೂ, ಅಪರಿಮಿತವಾದ ಅನ್ನವುಳ್ಳವನೂ, ಶ್ಲಾಘ್ಯರ ನಡುವೆ ಪ್ರಕಾಶಿಸುವವನೂ, ಮಂತ್ರಗಳಿಗೆ ಒಡೆಯನೂ ಆದ ನಿನ್ನನ್ನು ಈ ಕರ್ಮನಿಮಿತ್ತವಾಗಿ ಕರೆಯುತ್ತೇವೆ. ನಮ್ಮ ಸ್ತುತಿಗಳನ್ನು ಕೇಳುತ್ತಾ ನಿನ್ನ ರಕ್ಷಣೆಗಳೊಡನೆ ಯಜ್ಞಗೃಹಕ್ಕೆ ಬಂದು ಕುಳಿತುಕೊ.

English Translation

We invoke you, Brahmanaspati, chief leader of the (heavenly) bands : a sage of sages : abounding beyond measure in (every kind of) food : best lord of prayer ; hearing our invocations, come with your protections, and sit down in the chamber of sacrifice.

ವಿಶೇಷವಿಷಯಗಳು

ಈ ಸೂಕ್ತದಲ್ಲಿ ಒಟ್ಟು ೧೯ ಋಕ್ಕುಗಳಿವೆ. ಅವುಗಳಲ್ಲಿ ೧, ೫, ೯, ೧೧, ೧೭, ೧೯ ನೆಯ ಋಕ್ಕುಗಳಲ್ಲಿ ಬ್ರಹ್ಮಣಸ್ಪತಿ ಎಂಬ ದೇವತೆಯನ್ನೂ ಉಳಿದ ಋಕ್ಕುಗಳಲ್ಲಿ ಬೃಹಸ್ಪತಿ ಎಂಬ ದೇವತೆಯನ್ನು ಸ್ತುತಿಸಲಾಗಿದೆ. ಈ ದೇವತೆಗಳು ಯಾರು, ಇವರ ಸ್ವರೂಪವೇನು ಎಂಬ ವಿಷಯವನ್ನು ಸೂಕ್ಷ್ಮವಾಗಿ ಪರಿಶೀಲಿಸುವುದು ಅವಶ್ಯಕವು. ಯಾಸ್ಕಮಹರ್ಷಿಯು ತಮ್ಮ ನಿರುಕ್ತದಲ್ಲಿ (ನಿ. ೧೦-೧೪) ಬ್ರಹ್ಮಣಸ್ಪತಿಯ ವಿಚಾರವಾಗಿ ಈರೀತಿ ಹೇಳಿರುವರು—

ಬ್ರಹ್ಮಣಸ್ಪತಿಃ । ಬ್ರಹ್ಮಣಸ್ಪತಿರ್ಬ್ರಹ್ಮಣಃ ಪಾತಾ ವಾ ಪಾಲಯಿತಾ ವಾ ।

ಇಲ್ಲಿ ಬ್ರಹ್ಮಶಬ್ದಕ್ಕೆ ಅನ್ನವೆಂದೂ, ಧನವೆಂದೂ, ಸ್ತೋತ್ರವೆಂದೂ (ನಿ. ೩-೯) ಅರ್ಥವಿರುವುದರಿಂದ ಬ್ರಹ್ಮಣಃ ಪಾತಾ ಎಂದರೆ ಅನ್ನಸ್ಯಪಾತಾ—ಅನ್ನಕ್ಕೆ (ಆಹಾರಕ್ಕೆ) ಸ್ವಾಮಿಯು ಅಥವಾ ಅಧಿಪತಿಯು ಎಂದರ್ಥವು. ಬ್ರಹ್ಮಣಸ್ಪತಿಯು ಹೇಗೆ ಅನ್ನಕ್ಕೆ ಅಧಿಪತಿಯು ಎಂದರೆ ಯಾಸ್ಕರು—

ಅಶ್ಮಾಸ್ಯಮವತಂ ಬ್ರಹ್ಮಣಸ್ಪತಿರ್ಮಧುಧಾರಮಭಿ ಯಮೋಜಸಾತೃಣತ್ ।
ತಮೇವ ವಿಶ್ವೇ ಪಪಿರೇ ಸ್ವರ್ದೃಶೋ ಬಹು ಸಾಕಂ ಸಿಸಿಚುರುತ್ಸಮುದ್ರಿಣಂ ॥
(ಋ. ಸಂ. ೨-೨೪-೪)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟು ಅದಕ್ಕೆ—

ಅಶನವಂತಮಾಸ್ಯಂದನವಂತಮವಾತಿತಂ ಬ್ರಹ್ಮಣಸ್ಪತಿರ್ಮಧುಧಾರಮಭಿಯಮೋಜಸಾ ಬಲೇ-
ನಾಭ್ಯತೃಣತ್ತಮೇವ ಸರ್ವೇ ಪಿಬಂತಿ ರಶ್ಮಯಃ ಸೂರ್ಯದೃಶೋ ಬಹ್ವೇನಂ ಸಹ ಸಿಂಚಂ-
ತ್ಯುತ್ಸಮುದ್ರಿಣಮುದಕವಂತಂ ॥
(ನಿ. ೧೦-೧೩)

ಎಂದು ನಿರ್ವಚನವನ್ನು ಹೇಳಿರುವರು. ಮುಖ್ಯಾಭಿಪ್ರಾಯವೇನೆಂದರೆ, ಈ ಬ್ರಹ್ಮಣಸ್ಪತಿಯು—ಸೂರ್ಯರಶ್ಮಿಗಳ ಸಹಾಯದಿಂದ ಮೇಘಗಳು ಸಮುದ್ರೋದಕವನ್ನು ಪಾನಮಾಡಿ ಆ ಉದಕವನ್ನು ವಿಶೇಷವಾಗಿ ಭೂಮಿಯಮೇಲೆ ಮಳೆಯಾಗಿ ಬೀಳುವಂತೆ ಮಾಡುವುದರಿಂದ ಮಳೆಯಿಂದ ಓಷಧಿವನಸ್ಪತಿಗಳೂ, ಓಷಧಿವನಸ್ಪತಿಗಳಿಂದ ಅನ್ನಾದ್ಯಾಹಾರವೂ ಲಭಿಸುವುದೆಂದೂ, ಆದುದರಿಂದ ಬ್ರಹ್ಮಣಸ್ಪತಿಯು ಅನ್ನಕ್ಕೆ ಪಾಲಕನು ಎಂದೂ ಅರ್ಥವು. ಬ್ರಹ್ಮಶಬ್ದಕ್ಕೆ ಸ್ತೋತ್ರವೆಂದೂ ಧನವೆಂದೂ ಅರ್ಥಮಾಡುವಾಗ ಬ್ರಹ್ಮಣಸ್ಪತಿಯು ಮಂತ್ರಕ್ಕೆ ಅಧಿಪತಿ ಎಂದು ಹೇಳಬೇಕು. ಈ ಅರ್ಥವನ್ನೇ ಮೇಲೆ ಉದಾಹರಿಸಿರುವ ಋಕ್ಕಿಗೆ ವ್ಯಾಖ್ಯಾನಮಾಡುವಾಗ ಹೇಳಿರುವರು.

ಬ್ರಹ್ಮಣಸ್ಪತಿಯ ಮತ್ತು ಬೃಹಸ್ಪತಿಯ ಪರವಾದ ಮಂತ್ರಗಳು ಋಗ್ವೇದದಲ್ಲಿ ವಿಶೇಷವಾಗಿವೆ. ಆ ಮಂತ್ರಗಳಲ್ಲಿ ಬ್ರಹ್ಮಣಸ್ಪತಿಯು ಧನವನ್ನೂ ಅನ್ನವನ್ನೂ ಕೊಡುವವನೆಂದು ಹೇಳಿದೆ. ಈ ಬ್ರಹ್ಮಣಸ್ಪತಿಯು ಪ್ರತ್ಯೇಕ ದೇವತೆಯೇ ಅಥವಾ ಅಗ್ನಿಯ ರೂಪಾಂತರವೇ ಎಂದು ಅನೇಕರು ಸಂಶಯಪಡುವರು. ಏಕೆಂದರೆ ಅಗ್ನಿ ಮೊದಲಾದ ಇತರ ದೇವತೆಗಳೂ ಸಹ ಧನವನ್ನೂ ಅನ್ನವನ್ನೂ ಕೊಡುವವರಾದುದರಿಂದ ಬ್ರಹ್ಮಣಸ್ಪತಿಯು ಅಗ್ನಿಯ ಒಂದು ವಿಶೇಷರೂಪವೆಂದು ಕೆಲವರ ವಾದವು. ಯಾಸ್ಕರು ಈ ವಿಷಯದಲ್ಲಿ ಮೌನವಾಗಿರುವರು. ಎಂದರೆ ಸ್ಪಷ್ಟವಾಗಿ ಏನನ್ನೂ ಹೇಳಿರುವುದಿಲ್ಲ. ಬ್ರಹ್ಮಣಸ್ಪತಿಯ ಪರವಾದ ಋಕ್ಕುಗಳಲ್ಲಿಯೂ ಈ ದೇವತೆಯು ಅಗ್ನಿಯ ರೂಪಾಂತರವೆಂದು ಹೇಳಲು ಸಾಕಾದಷ್ಟು ಆಧಾರಗಳಿಲ್ಲ. ಆದುದರಿಂದ ಬ್ರಹ್ಮಣಸ್ಪತಿಯು ಇಂದ್ರಾಗ್ನಿಗಳಂತೆ ಒಂದು ಪ್ರತ್ಯೇಕವಾದ ಮತ್ತು ಪ್ರಾಮುಖ್ಯವಾದ ದೇವತೆಯೆಂದು ಧಾರಾಳವಾಗಿ ಹೇಳಬಹುದು.

ಯಾಸ್ಕರು ತಮ್ಮ ನಿರುಕ್ತದಲ್ಲಿ ಬೃಹಸ್ಪತಿಶಬ್ದದ ನಿರ್ವಚನವನ್ನು ವಿವರಿಸುತ್ತಾ—
ಬೃಹಸ್ಪತಿಃ ಬೃಹತಃ ಪಾತಾ ವಾ ಪಾಲಯಿತಾ ವಾ ।
(ನಿ. ೧೦-೧೧)

ಎಂದು ಹೇಳಿದ್ದಾರೆ. ಇದಕ್ಕೆ ವ್ಯಾಖ್ಯಾನಕಾರರಾದ ದುರ್ಗಾಚಾರ್ಯರು—ಬೃಹಸ್ಪತಿಃ ಕಸ್ಮಾತ್? "ಬೃಹತಃ ಪಾತಾ ವಾ ಪಾಲಯಿತಾ ವಾ" ಬೃಹತಃ ಮಹತೋಽಸ್ಯ ಜಗತಃ ಉದಕಸ್ಯ ವಾ ಪಾತಾ ರಕ್ಷಿತಾ, ಪಾಲಯಿತಾ ಅಪಿ ರಕ್ಷಿತೈವ ಧಾತ್ವನ್ಯತ್ವಮರ್ಥೈಕತ್ವಂ ॥ ಎಂದರೆ ದೊಡ್ಡದಾದ ಜಗತ್ತಿನ ಅಥವಾ ಉದಕದ ಸಂರಕ್ಷಕನು, ಕಾಪಾಡುವವನು. ಪತಿಶಬ್ದದ ಅರ್ಥವನ್ನು ಸೂಚಿಸುವುದಕ್ಕೆ ಪಾತಾ, ಪಾಲಯಿತಾ ಎಂಬ ಬೇರೆ ಬೇರೆ ಧಾತುಗಳಿಂದ ನಿಷ್ಪನ್ನವಾದ ಶಬ್ದಗಳಿದ್ದರೂ ಅರ್ಥವು ಮಾತ್ರ ಒಂದೇ ಆಗಿರುವುದೆಂದು ಹೇಳಿರುವರು. ಸಾಯಣರು

ಅನೇಕ ಸಂದರ್ಭಗಳಲ್ಲಿ ಬೃಹತಃ ಪಾತಾ ಎಂಬುದನ್ನು ವಿವರಿಸುವಾಗ ಬೃಹತಃ ಎಂಬ ಶಬ್ದಕ್ಕೆ ಬೃಹತಃ ಯಜ್ಞಾಖ್ಯ ಕರ್ಮಣಃ ಅಥವಾ ವೃಷ್ಟ್ಯಾಖ್ಯಕರ್ಮಣಃ। ಎಂದರೆ ಯಜ್ಞರೂಪವಾದ ಕರ್ಮದ ಅಥವಾ ವೃಷ್ಟಿಪ್ರದಾನ ರೂಪವಾದ ಕರ್ಮದ ಎಂದು ಅರ್ಥವನ್ನು ಹೇಳಿರುವರು. ಬೃಹಸ್ಪತಿಯು ದೇವತೆಗಳಿಗೆ ಪುರೋಹಿತನಾಗಿ ಯಜ್ಞಕರ್ಮವನ್ನು ನೆರವೇರಿಸುವುದರಿಂದಲೂ, ಮನುಷ್ಯರಿಗೆ ಅವಶ್ಯಕವಾದ ವೃಷ್ಟಿಯನ್ನುಂಟುಮಾಡುವುದರಿಂದಲೂ ಈ ಎರಡು ವಿಧವಾದ ವಿಶೇಷಣಗಳೂ ಸಹಜವಾಗಿರುವುವು. ಬೃಹಸ್ಪತಿಯ ಪುರೋಹಿತತ್ವವನ್ನೂ ವೃಷ್ಟಿಪ್ರದಾನವನ್ನೂ ವರ್ಣಿಸುವ,

**ಯದ್ದೇವಾಪಿಃ ಶಂತನವೇ ಪುರೋಹಿತೋ ಹೋತ್ರಾಯ ವೃತಃ ಕೃಪಯನ್ನದೀಧೇತ್ ।**
**ದೇವಶ್ರುತಂ ವೃಷ್ಟಿವನಿಂ ರರಾಣೋ ಬೃಹಸ್ಪತಿರ್ವಾಚಮಸ್ಮಾ ಅಯಚ್ಛತ್ ॥**

(ಋ. ಸಂ. ೧೦-೯೮-೭)

ಎಂಬ ಋಕ್ಕನ್ನು ಯಾಸ್ಕರು ಉದಾಹರಣೆಗಾಗಿ ಕೊಟ್ಟಿರುವರು. ಈ ಋಕ್ಕಿನ ನಿರ್ವಚನದಲ್ಲಿ **ಬೃಹಸ್ಪತಿರ್ಬ್ರಹ್ಮಾಸೀತ್ ಸೋಽಸ್ಮೈ ವಾಚಮಯಚ್ಛತ್**—ಎಂದರೆ ಬೃಹಸ್ಪತಿಯು ಶಂತನುವೆಂಬ ರಾಜನು ಮಾಡಿದ ಯಜ್ಞದಲ್ಲಿ ಬ್ರಹ್ಮನೆಂಬ ಪುರೋಹಿತನಾಗಿ ವಾಕ್ಯರೂಪವಾದ ಮಂತ್ರವನ್ನು ಉಪದೇಶಿಸಿದನೆಂದೂ ಆ ಮಂತ್ರದಿಂದ ಯಜಮಾನನು ಸ್ತುತಿಸಲಾಗಿ ವೃಷ್ಟಿ ಉಂಟಾಯಿತೆಂದೂ ವರ್ಣಿತವಾಗಿದೆ. ಇದಲ್ಲದೆ ಯಜುರ್ವೇದಾದಿಗಳಲ್ಲಿ—

**ಬೃಹಸ್ಪತಿರ್ದೇವಾನಾಂ ಪುರೋಹಿತ ಆಸೀಚ್ಛಂಡಾಮರ್ಕಾವಸುರಾಣಾಂ ।**

(ತೈ. ಸಂ. ೬-೪-೧೦-೧)

ಬೃಹಸ್ಪತಿಯು ದೇವತೆಗಳಿಗೆ ಪುರೋಹಿತನಾಗಿದ್ದನು. ಶಂಡಾಮರ್ಕರೆಂಬುವರು ಅಸುರರಿಗೆ ಪುರೋಹಿತರಾಗಿದ್ದರು ಎಂದು ಹೇಳಿದೆ.

**ಬ್ರಹ್ಮ ವೈ ದೇವಾನಾಂ ಬೃಹಸ್ಪತಿರ್ಬ್ರಹ್ಮಣೈವೈನಮಭಿಚರತಿ ।**

(ತೈ. ಸಂ. ೨-೨-೯-೧)

ಬೃಹಸ್ಪತಿಯು ದೇವತೆಗಳು ಮಾಡಿದ ಯಜ್ಞದಲ್ಲಿ ಬ್ರಹ್ಮನೆಂಬ ಋತ್ವಿಜನಾಗಿ ಯಜ್ಞವನ್ನು ನೆರವೇರಿಸಿದನು ಎಂದೂ ಹೇಳಿದೆ.

**ತಸ್ಮೈ ವಿಶಃ ಸ್ವಯಮೇವಾ ನಮಂತೇ ಯಸ್ಮಿನ್ ಬ್ರಹ್ಮಾ ರಾಜನಿ ಪೂರ್ವ ಏತಿ ।**

(ಋ. ಸಂ. ೪-೫೦-೮)

**ಅವಸ್ಯವೇ ಯೋ ವರಿವಃ ಕೃಣೋತಿ ಬ್ರಹ್ಮಣೇ ರಾಜಾ ತಮವಂತಿ ದೇವಾಃ ॥**

(ಋ. ಸಂ. ೪-೫೦-೯)

**ಸೋಮಂ ರಾಜಾನಮವಸೇಽಗ್ನಿಂ ಗೀರ್ಭಿರ್ಹವಾಮಹೇ ।**
**ಆದಿತ್ಯಾನ್ವಿಷ್ಣುಂ ಸೂರ್ಯಂ ಬ್ರಹ್ಮಾಣಂ ಚ ಬೃಹಸ್ಪತಿಂ ॥**

(ಋ. ಸಂ. ೧೦-೧೪೧-೩)

ಇತ್ಯಾದಿ ಋಕ್ಕುಗಳಲ್ಲಿ ಬೃಹಸ್ಪತಿಯು ಬ್ರಹ್ಮನೆಂಬ ಋತ್ವಿಜನು ಎಂದು ವರ್ಣನೆ ಇದೆ.

ಋಗ್ವೇದದಲ್ಲಿ ಬೃಹಸ್ಪತಿಗೆ ಪ್ರಾಮುಖ್ಯವಾದ ಸ್ಥಾನವೇ ಇದೆ. ಹನ್ನೊಂದು ಸೂಕ್ತಗಳಲ್ಲಿ ಸ್ತುತನಾಗಿರುವುದಲ್ಲದೆ ಎರಡು ಸೂಕ್ತಗಳಲ್ಲಿ (ಋ. ಸಂ. ೪-೪೯, ೭-೯೭) ಇಂದ್ರನ ಜತೆಯಲ್ಲಿ ದ್ವಂದ್ವದೇವತೆಯಾಗಿಯೂ

ಸ್ತುತನಾಗಿದಾನೆ. ಬೃಹಸ್ಪತಿಶಬ್ದವು ಋಗ್ವೇದದಲ್ಲಿ ಸುಮಾರು ೧೨೦ ಸಲ ಪಠಿತವಾಗಿದೆ. ಅನೇಕ ಸಂದರ್ಭಗಳಲ್ಲಿ ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿದೇವತೆಗಳು ಒಂದೇ ಮಂತ್ರದಲ್ಲಿ ಪರಸ್ಪರ ವಿನಿಮಯವಾಗಿ ಸ್ತುತರಾಗಿದಾರೆ. ಆದರೂ ಬೃಹಸ್ಪತಿಯೇ ಬೇರೆ ಬ್ರಹ್ಮಣಸ್ಪತಿಯೇ ಬೇರೆ ದೇವತೆಗಳು.

ಕೆಲವು ಪಾಶ್ಚಾತ್ಯಪಂಡಿತರೂ, ಆಧುನಿಕವಿದ್ವಾಂಸರಲ್ಲಿ ಕೆಲವರೂ ಸಹ ಋ. ಸಂ. ೨-೨೩ ನೆಯ ಸೂಕ್ತದಲ್ಲಿ ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿಗಳು ಪರಸ್ಪರ ವಿನಿಮಯವಾಗಿ ಸ್ತುತಿಸಲ್ಪಟ್ಟಿರುವುದರಿಂದ ಇಬ್ಬರೂ ಒಂದೇ ದೇವತೆಯೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು. ಆದರೆ, ಯಾಸ್ಕರು, ಶೌನಕರು, ಸಾಯಣರು ಮೊದಲಾದ ಪುರಾತನ ವೇದಭಾಷ್ಯಕಾರರು ಬೃಹಸ್ಪತಿಯೇ ಬೇರೆ ಬ್ರಹ್ಮಣಸ್ಪತಿಯೇ ಬೇರೆ ಎಂದು ಸ್ಪಷ್ಟವಾಗಿ ಹೇಳಿರುವರು. ಮೇಲೆ ಹೇಳಿದ ಋ. ಸಂ. ೨-೨೩ ನೆಯ ಸೂಕ್ತದಲ್ಲಿರುವ ೧೯, ಋಕ್ಕುಗಳಲ್ಲಿ ೧, ೫, ೯, ೧೧, ೧೭, ೧೯, ಎಂಬ ೬ ಋಕ್ಕುಗಳು ಮಾತ್ರ ಬೃಹಸ್ಪತಿಯನ್ನು ಸ್ತುತಿಸುತ್ತವೆ. ಉಳಿದ ೧೩ ಋಕ್ಕುಗಳು ಬ್ರಹ್ಮಣಸ್ಪತಿಯ ಪರವಾಗಿವೆ. ಯಾಸ್ಕರೂ ಸಹ ಬೃಹಸ್ಪತಿಶಬ್ದಕ್ಕೂ ಬ್ರಹ್ಮಣಸ್ಪತಿಶಬ್ದಕ್ಕೂ ಬೇರೆ ಬೇರೆ ನಿರ್ವಚನವನ್ನು ಹೇಳಿದ್ದಾರೆ. ಆದುದರಿಂದ ಬೃಹಸ್ಪತಿಯೇ ಬೇರೆ ಬ್ರಹ್ಮಣಸ್ಪತಿಯೇ ಬೇರೆ.

ಇತರ ದೇವತೆಗಳಿಗಿಂತ ತೀರಾ ಭಿನ್ನವಾದ ವೈಶಿಷ್ಟ್ಯವು ಬೃಹಸ್ಪತಿಗೆ ಇದೆ. ಇತರ ದೇವತೆಗಳೆಲ್ಲಾ ಪ್ರಕೃತಿ ಅಥವಾ ಪ್ರಕೃತಿಶಕ್ತಿಯ ರೂಪವಿಶೇಷಗಳಾದರೆ ಬೃಹಸ್ಪತಿಯು ಮಾನವನ ನೈತಿಕ ಮತ್ತು ಧಾರ್ಮಿಕ ಜೀವನಕ್ಷೇತ್ರಕ್ಕೆ ಸಂಬಂಧಿಸಿದಂತಿವೆ ಸ್ತುತಿ, ಸ್ತೋತ್ರ ಅಥವಾ ಪ್ರಾರ್ಥನೆಗೆ ರಕ್ಷಕನಾದ ಈ ದೇವತೆಯು ದೇವತೆಗಳ ಮನಸ್ಸಿನ ನಿರ್ಧಾರ, ಸಂಕಲ್ಪ ಅಥವಾ ಶಕ್ತಿಯಮೇಲೆ ತನ್ನ ಪ್ರಭಾವವನ್ನು ಬೀರುವನೆಂಬುದಕ್ಕೆ ಋಗ್ವೇದದಲ್ಲಿ ಅನೇಕ ಉದಾಹರಣೆಗಳಿವೆ. ಋಗ್ವೇದ ೧೦ ನೇ ಮಂಡಲದ ೯೮ ನೆಯ ಸೂಕ್ತದಲ್ಲಿ ದೇವಾಪಿ ಮತ್ತು ಶಂತನು ಎಂಬ ಕುರುವಂಶದ ರಾಜಪುತ್ರರ ವಿಷಯಕವಾದ ಒಂದು ಇತಿಹಾಸವರ್ಣನೆ ಇದೆ. ಅದರಲ್ಲಿ ಬೃಹಸ್ಪತಿಯ ಪಾತ್ರವು ಬಹುಮುಖ್ಯವಾದುದೆಂಬುದನ್ನು ನಿರುಕ್ತಕಾರರು ಈ ರೀತಿ ವರ್ಣಿಸಿದ್ದಾರೆ—

> ಅತ್ರೇತಿಹಾಸಮಾಚಕ್ಷತೇ। ದೇವಾಪಿಶ್ಚಾರ್ಷ್ಟಿಷೇಣಃ ಶಂತನುಶ್ಚ ಕೌರವ್ಯೌ ಭ್ರಾತರೌ ಬಭೂವತುಃ। ಸ ಶಂತನುಃ ಕನೀಯಾನಭಿಷೇಚಯಾಂಚಕ್ರೇ । ದೇವಾಪಿಸ್ತಪಃ ಪ್ರತಿಪೇದೇ । ತತಃ ಶಂತನೋ ರಾಜ್ಞೋ ದ್ವಾದಶ ವರ್ಷಾಣಿ ದೇವೋ ನ ವವರ್ಷ । ತಮೂಚುರ್ಬ್ರಾಹ್ಮಣಾ ಅಧರ್ಮಸ್ತ್ವಯಾ ಚರಿತೋ ಜ್ಯೇಷ್ಠಂ ಭ್ರಾತರಮಂತರಿತ್ಯಾಭಿಷೇಚಿತಂ ತಸ್ಮಾತ್ತೇ ದೇವೋ ನ ವರ್ಷತೀತಿ । ಸ ಶಂತನುರ್ದೇವಾಪಿಂ ಶಿಶಿಕ್ಷ ರಾಜ್ಯೇನ । ತಮುವಾಚ ದೇವಾಪಿಃ ಪುರೋಹಿತಸ್ತೇಽಸಾನಿ ಯಾಜಯಾನಿ ಚ ತ್ವೇತಿ ॥
>
> (ನಿ. ೨-೧೧)

ಪೂರ್ವಕಾಲದಲ್ಲಿ ಕುರುವಂಶದಲ್ಲಿ ಋಷ್ಟಿಷೇಣನೆಂಬ ರಾಜನಿಗೆ ದೇವಾಪಿ, ಶಂತನು ಎಂಬ ಈರ್ವರು ಪುತ್ರರಿದ್ದರು. ಅವರಲ್ಲಿ ದೇವಾಪಿಯೆಂಬುವನು ಹಿರಿಯನು, ಶಂತನು ಕಿರಿಯವನು. ಇವರ ತಂದೆಯಾದ ಋಷ್ಟಿಷೇಣನು ಮೃತನಾದ ಬಳಿಕ ಅವನ ಹಿರಿಯಮಗನಾದ ದೇವಾಪಿ ಎಂಬುವನು ರಾಜನಾಗಬೇಕೆಂದು ಇಚ್ಛಿಸಿದನು. ಆದರೆ ಇವನ ತಮ್ಮನಾದ ಶಂತನುವು ಅದಕ್ಕೆ ಅವಕಾಶಕೊಡದೆ ತಾನೇ ರಾಜ್ಯಕ್ಕೆ ದೊರೆಯಾಗಬೇಕೆಂದು ಬಯಸಿ ಅಣ್ಣನಾದ ದೇವಾಪಿಯನ್ನು ಓಡಿಸಿ ತಾನೇ ರಾಜ್ಯವಾಳಲು ಮೊದಲು ಮಾಡಿದನು ಅಣ್ಣನಾದ ದೇವಾಪಿಯು ವ್ಯಾಕುಲವುಳ್ಳವನಾಗಿ ಕಾಡಿಗೆ ಹೋಗಿ ತಪಸ್ಸನ್ನು ಮಾಡುತ್ತಾ ಕಾಲಕಳೆಯುತ್ತಿದ್ದನು. ಹೀಗಿರಲು ಇವನ ದೇಶದಲ್ಲಿ ೧೨ ವರ್ಷಗಳವರೆಗೆ ಮಳೆಯೇ

ಬರದೆ ಮಹಾಕ್ಷಾಮವು ಪ್ರಾಪ್ತವಾಯಿತು. ಆಗ ರಾಜನಾದ ಶಂತನುವು ಇದಕ್ಕೆ ಏನು ಮಾಡಬೇಕೆಂದು ಆಲೋಚಿಸಿ ಬ್ರಾಹ್ಮಣರ ಸಲಹೆಯನ್ನು ಕೇಳಿದನು. ಆದಕ್ಕೆ ಬ್ರಾಹ್ಮಣರು ರಾಜನನ್ನು ಕುರಿತು—ಧರ್ಮಶಾಸ್ತ್ರಪ್ರಕಾರ ರಾಜನ ಹಿರಿಯ ಮಗನೇ ರಾಜ್ಯಕ್ಕೆ ಅಧಿಕಾರಿಯು. ಆದುದರಿಂದ ರಾಜ್ಯಭಾರವನ್ನು ನಿನ್ನ ಅಣ್ಣನಾದ ದೇವಾಪಿಯೇ ಮಾಡಬೇಕಾಗಿದ್ದಿತು. ಆದರೆ ನೀನು ಅದಕ್ಕವಕಾಶಕೊಡದೆ ಅವನನ್ನು ಓಡಿಸಿ ರಾಜ್ಯವನ್ನು ಆಕ್ರಮಿಸಿರುವೆ. ಹೀಗೆ ನೀನು ಅಧರ್ಮವನ್ನು ಆಚರಿಸುತ್ತಿರುವುದರಿಂದ ವೃಷ್ಟಿದೇವನು ನಿನ್ನ ರಾಜ್ಯದಲ್ಲಿ ಮಳೆಗರೆಯುವುದಿಲ್ಲ ಎಂದು ಹೇಳಿದರು. ಶಂತನುರಾಜನು ತಾನು ಮಾಡಿದ ಅನ್ಯಾಯಕ್ಕೆ ಪಶ್ಚಾತ್ತಾಪಪಟ್ಟು ವನದಲ್ಲಿ ತಪಸ್ಸುಮಾಡುತ್ತಿದ್ದ ತನ್ನ ಅಣ್ಣನಾದ ದೇವಾಪಿಯನ್ನು ಕರೆಸಿ ಅವನಿಗೆ ರಾಜ್ಯವನ್ನು ಒಪ್ಪಿಸಿದನು. ಆದರೆ ದೇವಾಪಿಯು ರಾಜ್ಯವು ತನಗೆ ಬೇಡವೆಂದೂ ತಾನು ವನದಲ್ಲಿ ತಪಸ್ಸನ್ನು ಮಾಡುತ್ತಾ ನಿವೃತ್ತಿಮಾರ್ಗವನ್ನು ಆಶ್ರಯಿಸುವೆನೆಂದೂ ಹೇಳಿ, ರಾಜ್ಯದಲ್ಲಿ ಉಂಟಾಗಿರುವ ಅನಾವೃಷ್ಟಿಪರಿಹಾರಾರ್ಥವಾಗಿ ಶಂತನುವು ಯಜ್ಞಮಾಡಬೇಕೆಂದೂ ಅದರಲ್ಲಿ ತಾನು ಪೌರೋಹಿತ್ಯ ವನ್ನು ವಹಿಸಿ ವೃಷ್ಟಿಯಾಗಲು ಸಹಾಯಮಾಡುವೆನೆಂದೂ ಹೇಳಿದನು. ಅದಕ್ಕೆ ರಾಜನು ಒಪ್ಪಲು ದೇವಾಪಿಯು ಅವನ ಯಜ್ಞದಲ್ಲಿ ಹೋತೃವೆಂಬ ಋತ್ವಿಜನ ಪಾತ್ರವನ್ನು ವಹಿಸಿದನು. ಬೃಹಸ್ಪತಿಯು ಬ್ರಹ್ಮನೆಂಬ ಋತ್ವಿಜ ನಾದನು. ವೃಷ್ಟಿವರ್ಷಕ್ಕಾಗಿ ಮಾಡುತ್ತಿರುವ ಆ ಯಜ್ಞದಲ್ಲಿ ಹೋತೃವಾದ ದೇವಾಪಿಯು ಬ್ರಹ್ಮನಾದ ಬೃಹಸ್ಪ ತಿಯನ್ನು ಕುರಿತು ಎಲೈ ಬೃಹಸ್ಪತಿಯೇ, ನಿನಗೆ ದೇವತೆಗಳ ಮನಸ್ಸಿನ ಮೇಲೆ ಬಹಳವಾದ ಪ್ರಭಾವವಿರುವುದು. ಆದುದರಿಂದ ಅವರನ್ನು ಒಲಿಸಿಕೊಳ್ಳುವ ಮಂತ್ರಗಳನ್ನು ನನಗೆ ತಿಳಿಸಬೇಕು ಎಂದು ಪ್ರಾರ್ಥಿಸಲಾಗಿ ಬೃಹಸ್ಪತಿಯು ಹಾಗೇ ಆಗಲೆಂದು ವೃಷ್ಟಿವರ್ಷಣಕ್ಕೆ ಬೇಕಾದ ದೇವತೆಗಳ ಪ್ರಾರ್ಥನೆಗಳನ್ನೊಳಗೊಂಡ ಮಂತ್ರಗಳನ್ನು ಹೋತೃ ವಾದ ದೇವಾಪಿಗೆ ಹೇಳಿಕೊಟ್ಟನು. ಆ ಮಂತ್ರಗಳಿಂದ ದೇವತೆಗಳನ್ನುದ್ದೇಶಿಸಿ ಹೋಮಮಾಡಲು ಯಥೇಚ್ಛವಾಗಿ ವೃಷ್ಟಿಯಾಯಿತು ಎಂದು ಹೇಳಿದೆ. ಆದುದರಿಂದ ಈ ಸೂಕ್ತಕ್ಕೆ ವೃಷ್ಟಿಕಾಮಸೂಕ್ತವೆಂದೂ ಹೆಸರು. ಈ ವಿಷ ಯವು ಕೆಲವು ವ್ಯತ್ಯಾಸಗಳೊಡನೆ ವಿಷ್ಣುಪುರಾಣ ೪-೨೦-೭, ಮಹಾಭಾರತ ಆದಿಪರ್ವ, ಭಾಗವತಪುರಾಣ ೯-೨೨-೧೪ ರಿಂದ ೧೭, ಇತ್ಯಾದಿ ಪುರಾಣ ಗ್ರಂಥಗಳಲ್ಲಿಯೂ ಉಕ್ತವಾಗಿದೆ.

ಋ. ಸಂ. ೧೦ ನೆಯ ಮಂಡಲದ ೧೦೮ ನೆಯ ಸೂಕ್ತದಲ್ಲಿ ಮತ್ತೊಂದು ಉಪಾಖ್ಯಾನವಿರುವುದು. ಪಣಿ ಗಳೆಂಬ ಅಸುರರು ದೇವತೆಗಳ ಗೋವುಗಳನ್ನು (ಉದಕವಿಶಿಷ್ಟಗಳಾದ ಮೇಘಗಳನ್ನು) ಅಪಹರಿಸಿ ಅಭೇದ್ಯವಾದ ಒಂದು ದುರ್ಗದಲ್ಲಿ ಬಚ್ಚಿಟ್ಟಿದ್ದರು. ಅದನ್ನು ಹುಡುಕುವಂತೆ ಇಂದ್ರನು ದೇವಶುನಿಯಾದ ಸರಮೆಯನ್ನು ಕಳುಹಿಸಿ ದನು. ಆ ಸರಮೆಯು ಪಣಿಗಳಲ್ಲಿ ಬಂದು ಅವರೊಡನೆ ವಾಗ್ವಾದವನ್ನು ಬೆಳೆಸಿ ಅಪಹರಿಸಿದ್ದ ಗೋವುಗಳನ್ನು ಹಿಂದಕ್ಕೆ ಕೊಡುವಂತೆ ಕೇಳಲು ಆ ಪಣಿಗಳು—ಇಂದ್ರನ ಶಕ್ತಿಯೆಷ್ಟರದು ? ತಾವು ಮಹಾವೀರರು ಮತ್ತು ತಮ್ಮ ಆಯುಧಗಳು ತುಂಬಾ ಹರಿತವಾದವು. ಆದ್ದರಿಂದ ತಮ್ಮನ್ನು ಗೆಲ್ಲಲು ದೇವತೆಗಳಿಂದ ಸಾಧ್ಯವಿಲ್ಲವೆಂದೂ, ಗೋವು ಗಳನ್ನು ಇಟ್ಟಿರುವ ಸ್ಥಳವನ್ನು ತಿಳಿಯಲು ದೇವತೆಗಳಿಗೂ ಸಾಧ್ಯವಿಲ್ಲವೆಂದೂ, ಆದುದರಿಂದ ಸರಮೆಯು ದೇವತೆಗಳ ಪಕ್ಷವನ್ನು ಬಿಟ್ಟು ತಮ್ಮ ಗುಂಪಿಗೇ ಸೇರಿದಲ್ಲಿ ಬೇಕಾದ ಐಶ್ವರ್ಯಾದಿಗಳನ್ನು ಕೊಡುವುವೆಂದೂ, ನಾನಾವಿಧವಾಗಿ ಪ್ರೇರಿಸಿದರೂ ಸರಮೆಯು ಅದಕ್ಕೊಪ್ಪದೆ ಅಲ್ಲಿಂದ ಹಿಂತಿರುಗಿ ಆ ವಿಷಯವನ್ನೆಲ್ಲಾ ದೇವತೆಗಳಿಗೆ ತಿಳಿಸಿದಳು. ಆಗ ಬೃಹಸ್ಪತಿಯು ತನ್ನ ಸಾಮರ್ಥ್ಯದಿಂದ ಆ ಗೋವುಗಳನ್ನು ಬಚ್ಚಿಟ್ಟಿದ್ದ ಸ್ಥಳವನ್ನು ಪತ್ತೆಮಾಡಿದನು. ಬಳಿಕ ದೇವತೆಗಳು ಅವರನ್ನು ನಿಗ್ರಹಿಸಿ ಗೋವುಗಳನ್ನು ಹಿಂದಕ್ಕೆ ತಂದರು ಎಂಬ ಉಪಾಖ್ಯಾನವಿದೆ.

ಇಂತಹ ಅನೇಕಸಾಹಸಕಾರ್ಯಗಳಲ್ಲಿ ಬೃಹಸ್ಪತಿಯ ಪಾತ್ರವು ಬಹಳ ಮುಖ್ಯವಾಗಿದೆ. ಅದರಲ್ಲಿಯೂ ಮಾನವರಿಗೆ ವೃಷ್ಟಿಬೇಕಾದಾಗ ಸಹಾಯಮಾಡಲು ಬೃಹಸ್ಪತಿಯ ಸಹಾಯವು ಅತ್ಯವಶ್ಯಕವಾಗಿದೆ. ಈ ವಿಧವಾದ ಪ್ರಾರ್ಥನೆಯೇ ಬೃಹಸ್ಪತಿದೇವತಾಕವಾದ ಸೂಕ್ತಗಳಲ್ಲಿ ವಿಶೇಷವಾಗಿ ಕಂಡುಬರುವುದು.

ಋಗ್ವೇದದಲ್ಲಿ ವರ್ಣಿಸಿರುವಂತೆ ಬೃಹಸ್ಪತಿಯ ಗುಣಗಳು, ಕಾರ್ಯಸಾಧನೆಗಳು ಯಾವರೀತಿ ಇವೆಯೆಂಬು ದನ್ನು ಸೂಕ್ಷ್ಮವಾಗಿ ಪರಿಶೀಲಿಸೋಣ. ಬೃಹಸ್ಪತಿಯು ದ್ಯಾವಾಪೃಥಿವಿಗಳಿಂದ ಜನಿಸಿದವನು ಮತ್ತು ಅವರ ಮಹ ತ್ತ್ವದಿಂದಲೇ ಅವನ ಪೋಷಣೆಯಾಗಿದೆ. (ಋ. ಸಂ. ೭-೯೭-೮) ಆದರೆ ಅವನನ್ನು ತ್ವಷ್ಟೃವು ಉತ್ಪತ್ತಿಮಾಡಿದ ನೆಂದು ಒಂದು ಕಡೆ (೨-೨೩-೧೭) ಹೇಳಿದೆ. ಅವನಿಗೆ ದೇವತೆಗಳ ಜನಕನೆಂದು ಹೆಸರಿದೆ. (೨-೨೬-೩), ಕಮ್ಮಾರನ ಸುತ್ತಿಗೆಯ ಏಟಿನಿಂದ ಅಗ್ನಿಕಣಗಳು ಹಾರುವಂತೆ ದೇವತೆಗಳು ಇವನಿಂದ ಉತ್ಪನ್ನರಾದರು (೧೦-೭೨-೮) ಎಂದೂ ಹೇಳಿದೆ.

ಅವನಿಗೆ ಬ್ರಹ್ಮ (ಬ್ರಹ್ಮ ಎಂಬ ಋತ್ವಿಜ) ನೆಂದು ಹೆಸರಿದೆ. (೧೦-೧೪೧-೩) ಋತ್ವಿಜರೊಡನೆ ಇವನಿಗೆ ಸಂಬಂಧವಿದೆ (೭-೧೦-೪, ೧೦-೧೪-೩). ಅಂಗಿರಸನೆಂತಲೂ ಹೆಸರಿದೆ. (೪-೪೦-೧, ೪-೭೩-೧, ೧೦-೪೭-೬). ಸ್ತುತಿವಾಕ್ಯಗಳನ್ನು ರಚಿಸುವವನು, ಉಚ್ಚರಿಸುವವನು, ಅವುಗಳಿಗೆ ಅಧಿಪತಿ, ಪ್ರೇರಕ (೨-೨೩-೧, ೨, ೧-೪೦-೫ ೧೦-೯೮-೭), ಮಂತ್ರದಿಂದಲೇ ತನ್ನ ಉದ್ದೇಶಗಳನ್ನೆಲ್ಲಾ ಸಾಧಿಸುತ್ತಾನೆ (೨-೨೪-೩), ಯಜ್ಞವೆಂಬ ದೇದೀಪ್ಯ ಮಾನವಾದ ರಥವನ್ನೇರಿಕೊಂಡು ದೇವತೆಗಳ ಮತ್ತು ಸ್ತೋತೃಗಳ ಶತ್ರುಗಳನ್ನು ಜಯಿಸಲು ಹೊರಡುತ್ತಾನೆ. (೨-೨೩-೩), ಇವನು ಶ್ರದ್ಧಾಳುಗಳ ಪೋಷಕ ಮತ್ತು ರಕ್ಷಕನು. ಅವರಿಗೆ ಮಾರ್ಗದರ್ಶಕನಾಗಿದ್ದಾನೆ, ಅವರನ್ನು ವಿಪತ್ತುಗಳಿಂದ ಪಾರುಮಾಡುತ್ತಾನೆ. (೨-೨೩-೪) ಅವರಿಗೆ ಸಂಪದಾದಿಗಳನ್ನು ಅನುಗ್ರಹಿಸುತ್ತಾನೆ (೨-೨೩-೯) ದೇವತೆಗಳಿಗೆಲ್ಲಾ ಪಿತೃವೆನಿಸಿಕೊಂಡಿದ್ದಾನೆ. ದಿವ್ಯವಾದ ಸಮಸ್ತ ಗುಣಗಳಿಂದ ಕೂಡಿದ್ದಾನೆ (೩-೬೨-೪, ೪-೫೦-೬), ವಿಶ್ವರೂಪನು, ಎಲ್ಲರೂ ಅಪೇಕ್ಷಿಸುವ ವಸ್ತುಗಳೆಲ್ಲವೂ ಇವನಲ್ಲಿವೆ (೭-೧೦-೪, ೭-೯೭-೪), ಸುವರ್ಣಮಯವಾದ ಈಟಿಯನ್ನು ಧರಿಸಿದ್ದಾನೆ (೭-೯೭-೭) ಇಂದ್ರನೊಡನೆ ಸೇರಿ ಇವನೂ ಸೈನ್ಯಗಳಿಗೆ ನಾಯಕನಾಗಿದ್ದಾನೆ. (೧೦-೧೦೩-೮) ಆಯುಸ್ಸನ್ನು ವೃದ್ಧಿಮಾಡುವವನು (೧೦-೧೦೦-೫), ಸಸ್ಯಗಳು ಇವನಿಂದ ಉದ್ಭೂತವಾದವು, (೧೦-೯೭-೧೫ ಮತ್ತು ೧೯); ಕಪಿಲವರ್ಣದ ಅಶ್ವಗಳೇ ಅವನ ವಾಹನವೆಂದು ಹೇಳಿದೆ. (ನಿ ೨-೨೮).

ರಾಕ್ಷಸರಿಂದ ಭಾವಿಯಲ್ಲಿ ಎಸೆಯಲ್ಪಟ್ಟು. ಸಹಾಯಕ್ಕಾಗಿ ದೇವತೆಗಳನ್ನು ಕರೆಯುತ್ತಿದ್ದ ತ್ರಿತನ ಆರ್ತ ನಾದವನ್ನು ಕೇಳಿ, ಆ ಅಪಾಯಕರವಾದ ಅವಸ್ಥೆಯಿಂದ ಬೃಹಸ್ಪತಿಯು ಅವನನ್ನು ಬಿಡುಗಡೆಮಾಡಿದನೆಂದೂ (೧-೧೦೫-೧೭), ಇಂದ್ರನೊಡನೆ ಸೇರಿ ಬೃಹಸ್ಪತಿಯು ಅಂಧಕಾರಾವೃತವಾಗಿದ್ದ ಉದಕವನ್ನು ಪುನಃ ಪ್ರವಹಿಸುವಂತೆ ಮಾಡಿದನೆಂದೂ (೨-೨೩-೧೮; ೧-೫೬-೫;) ಹೇಳಿದೆ.

ಮಧುಭರಿತವಾದ ಕೂಪದ ಶಿಲಾದ್ವಾರವನ್ನು ಬೃಹಸ್ಪತಿಯು ತನ್ನ ಸಾಮರ್ಥ್ಯದಿಂದ ಒಡೆದನು. ದೇವತೆ ಗಳು ಆ ಮಧುವನ್ನು ಪಾನಮಾಡಿ ಯಥೇಚ್ಛವಾಗಿ ಮಳೆಗರೆದರು (೨-೨೪-೩, ೪); ಬೃಹಸ್ಪತಿಯು ಬೆಂಕಿಕಾರು ತ್ತಿರುವ ಕಿರಣಗಳಿಂದ ವಲನ ದುರ್ಗಗಳನ್ನು ಭೇದಿಸಿದಾಗ ಗೋಸಮೂಹಗಳು ಗೋಚರವಾದವು ; ಮೊಟ್ಟೆಯನ್ನು ಒಡೆಯುವಂತೆ ಗೋವುಗಳನ್ನು ಹೊರಕ್ಕೆ ಅಟ್ಟಿದನು ; ಶಿಲೆಯಿಂದ ಆವೃತವಾದ (ನೀರು) ಮಧುವನ್ನು ಕಂಡು, ತನ

ಸಿಂಹನಾದದಿಂದಲೇ ಸೀಳಿ ಅದನ್ನು ಹೊರಕ್ಕೆ ಬರಮಾಡಿದನು (೧೦-೬೮-೪ ರಿಂದ ೯) ಬೃಹಸ್ಪತಿಯು ಹಸುಗಳನ್ನು ಬಂಡೆಗಳಿಂದ ಹೊರಕ್ಕೆ ತಂದನು ; ವಲನ ಗೋವುಗಳನ್ನು ಹಿಡಿದು ತನ್ನ ವಶಪಡಿಸಿಕೊಂಡನು (೧೦-೬೮-೫)

ಬೃಹಸ್ಪತಿಯು ದೇವತ್ವವಿಶಿಷ್ಟನು (೨-೨೩-೨) ; ಎಲ್ಲಾ ದೇವತೆಗಳಿಗೂ ಸ್ವಕೀಯನು (೩-೬೨-೪ ; ೪-೫೦-೬) ; ಮತ್ತು ದೇವತೆಗಳಲ್ಲೆಲ್ಲಾ ಹೆಚ್ಚು ದೇವತ್ವವುಳ್ಳವನು : ದೇವತೆಯ ರೂಪದಿಂದ ಎಲ್ಲಾ ದೇವತೆಗಳನ್ನೂ ಎಲ್ಲಾ ಪದಾರ್ಥಗಳನ್ನೂ ತನ್ನಲ್ಲಿ ಸೇರಿಸಿಕೊಳ್ಳುತ್ತಾನೆ. (೨-೨೪-೧೧ ; ೮-೬೧-೮). ಭೂಮಿಯ ಎರಡು ಕೊನೆಗಳನ್ನು ಸಮರ್ಥನಾದ ಇವನು ದೂರವಾಗಿ ಇಟ್ಟಿರುತ್ತಾನೆ. (೪-೫೦-೧) ; ಸೂರ್ಯಚಂದ್ರರು ಒಬ್ಬರಾದ ಮೇಲೊಬ್ಬರೂ ಉದಯಿಸುವುದು ಅವನ ಅನುಕರಣೀಯವಾದ ಕೃತ್ಯವೇ ಆಗಿದೆ. (೧೦-೬೮-೧೦) ತೈತ್ತಿರೀಯ ಸಂಹಿತೆಯಲ್ಲಿ (ಯಜುರ್ವೇದದಲ್ಲಿ) ಬೃಹಸ್ಪತಿಗೂ ಕೆಲವು ನಕ್ಷತ್ರಗಳಿಗೂ ಸಂಬಂಧವು ಉಕ್ತವಾಗಿದೆ ಬೃಹಸ್ಪತಿಯು ಪುಷ್ಯನಕ್ಷತ್ರದ ದೇವತೆ (ತೈ. ಸಂ. ೪-೪-೧೦-೧) ; ಪುರಾಣಾದಿಗಳಲ್ಲಿ ಬೃಹಸ್ಪತಿಯನ್ನು ವಾಚಸ್ಪತಿಯೆಂದೂ, ಬೃಹಸ್ಪತಿ ಗ್ರಹಾಭಿಮಾನಿದೇವತೆಯೆಂದೂ ವರ್ಣಿಸಿದೆ.

ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿ ಎಂಬ ದೇವತೆಗಳು ಅಗ್ನಿಯ ರೂಪಾಂತರಗಳೆಂದು ಕೆಲವು ಪಂಡಿತರು ಅಭಿಪ್ರಾಯಪಟ್ಟಿದ್ದಾರೆ. M. Langlois ಎಂಬ ಪಂಡಿತನು ತನ್ನ ಋಗ್ವೇದ ಭಾಷಾಂತರವೆಂಬ ಗ್ರಂಥದ ಭಾಗ I p. 249, 254, 578, ಗಳಲ್ಲಿ ಈ ಎರಡು ದೇವತೆಗಳೂ ಅಗ್ನಿಯ ರೂಪಾಂತರಗಳೆಂದು ಅನೇಕ ಉದಾಹರಣೆಗಳಿಂದ ಸಮರ್ಥಿಸಿದ್ದಾನೆ. Wilson ಎಂಬ ಪಂಡಿತನೂ ತನ್ನ ಋಗ್ವೇದ ಭಾಷಾಂತರದ ಮೊದಲನೆಯ ಭಾಗದ ಪೀಠಿಕೆಯಲ್ಲಿ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ. Max Muller ಎಂಬ ಪಂಡಿತನೂ ಸಹ-- Brihaspati and Brahmanaspati are both varieties of Agni, the priest and the purohit of the Gods and men and as such he is invoked together with the Maruts &c. ಎಂದರೆ ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿ ಎಂಬೆರಡೂ ಅಗ್ನಿಯ ರೂಪಾಂತರಗಳು. ದೇವತೆಗಳಿಗೂ ಮನುಷ್ಯರಿಗೂ ಋತ್ವಿಜ ಮತ್ತು ಪುರೋಹಿತ ಸ್ಥಾನದಲ್ಲಿರುವವರು ; ಈ ದೃಷ್ಟಿಯಿಂದಲೇ ಮರುದ್ದೇವತೆಗಳೊಡನೆ ಅವರಿಗೆ ಆಹ್ವಾನವಿತ್ತಿರುವುದು ಅನೇಕಕಡೆ ಇದೆ ಎಂದು ಹೇಳಿದ್ದಾನೆ. ಈ ರೀತಿ ಅಗ್ನಿಗೂ ಬೃಹಸ್ಪತಿ ಬ್ರಹ್ಮಣಸ್ಪತಿಗಳಿಗೂ ಇರುವ ತಾದಾತ್ಮ್ಯವನ್ನು ಹೇಳುವ ಒಂದೆರಡು ಉದಾಹರಣೆಗಳನ್ನು ಕೊಡುತ್ತೇವೆ.

ತ್ವಮಗ್ನ ಇಂದ್ರೋ ವೃಷಭಃ ಸತಾಮಸಿ ತ್ವಂ ವಿಷ್ಣುರುರುಗಾಯೋ ನಮಸ್ಯಃ ।
ತ್ವಂ ಬ್ರಹ್ಮಾ ರಯಿವಿದ್ಬ್ರಹ್ಮಣಸ್ಪತೇ ತ್ವಂ ವಿಧರ್ತಃ ಸಚಸೇ ಪುರಂಧ್ಯಾ ॥

(ಋ ಸಂ. ೨-೧-೩)

ಎಲೈ ಅಗ್ನಿಯೇ, ಸಜ್ಜನರಲ್ಲಿ ಅತಿಶ್ರೇಷ್ಠನಾದ ಇಂದ್ರನೇ ನೀನು ; ಪೂಜ್ಯನೂ ಅತಿದೊಡ್ಡದೇಹವುಳ್ಳವನೂ ಆದ ವಿಷ್ಣುವು ನೀನೇ ; ಎಲೈ ಬ್ರಹ್ಮಣಸ್ಪತಿಯೇ, ಧನಾಢ್ಯನಾದ ಬ್ರಹ್ಮನಾಮಕ ಋತ್ವಿಜನೂ ನೀನೇ ಎಂದು ಅಗ್ನಿಯನ್ನು ನಾನಾ ದೇವತೆಗಳ ಸ್ವರೂಪವೆಂದು ವರ್ಣಿಸಿದೆ

ತಂ ಶುಭ್ರಮಗ್ನಿಮವಸೇ ಹವಾಮಹೇ ವೈಶ್ವಾನರಂ ಮಾತರಿಶ್ವಾನಮುಕ್ಥ್ಯಂ ।
ಬೃಹಸ್ಪತಿಂ ಮನುಷೋ ದೇವತಾತಯೇ ವಿಪ್ರಂ ಶ್ರೋತಾರಮತಿಥಿಂ ರಘುಷ್ಯದಂ ॥

(ಋ ಸಂ. ೩-೨೬-೨)

ಶುಭ್ರನೂ, ಮಾನವವರ್ಗಕ್ಕೆ ಮಿತ್ರಭೂತನೂ ಆದ ಅಗ್ನಿಯನ್ನು ನಮ್ಮ ರಕ್ಷಣೆಗೋಸ್ಕರ ಆಹ್ವಾನಿಸುತ್ತೇವೆ, ಮಂತ್ರ ವಾಚ್ಯನಾಗಲು ಯೋಗ್ಯನಾದ ಮಾತರಿಶ್ವನನ್ನೂ, ಜ್ಞಾನಿಯೂ ದೇವತೆಗಳನ್ನುದ್ದೇಶಿಸಿ ಸ್ತುತಿಸುವವನೂ, ಅತಿಥಿ ಸ್ಥಾನೀಯನೂ, ಶೀಘ್ರಗಾಮಿಯೂ ಆದ ಬೃಹಸ್ಪತಿಯನ್ನೂ ಮಾನುಷಸಂಬಂಧವಾದ ಯಜ್ಞಾದಿಕರ್ಮಗಳಿಗೆ ಬರು ವಂತೆ ಆಹ್ವಾನಿಸುತ್ತೇವೆ.

ಸಾಯಣಾಚಾರ್ಯರು ೫-೪೩-೧೨ ನೆಯ ಋಕ್ಕಿಗೆ ವ್ಯಾಖ್ಯಾನ ಬರೆಯುವಾಗ ಬೃಹಸ್ಪತಿಶಬ್ದಕ್ಕೆ—

> ಅಥವಾ ಇಯಮಾಗ್ನೇಯೀ । ಬೃಹತಃ ಪರಿವೃಢಸ್ಯ ಕರ್ಮಣಃ ಸ್ವಾಮೀತಿ ಬೃಹಸ್ಪತಿರಗ್ನಿರು-
> ಚ್ಯತೇ । ತಥಾ ನೀಲವರ್ಣಧೂಮಪೃಷ್ಠತ್ವಸದನಸಾದನಹಿರಣ್ಯವರ್ಣತ್ವಾದಿಲಿಂಗೈರಪ್ಯಗ್ನಿರೇವ
> ಬೃಹಸ್ಪತಿಃ ॥

ಎಂದರೆ—ಅಥವಾ ಈ ಮಂತ್ರವು ಅಗ್ನಿದೇವತಾಪ್ರತಿಪಾದಕವಾದುದು ಎನ್ನಬಹುದು. ಪ್ರಸ್ತುತವಾದ ಯಜ್ಞರೂಪ ಮಹಾಕಾರ್ಯಕ್ಕೆ ಸ್ವಾಮಿಯಾದುದರಿಂದ ಅಗ್ನಿಗೆ ಬೃಹಸ್ಪತಿಯೆಂದು ಹೆಸರು. ಅದರಂತೆ ಕಪ್ಪಾದ ಧೂಮವೇ ಪೃಷ್ಠಭಾಗ. ಯಜ್ಞವೇದಿಯೇ ಸ್ಥಾನ. ಹಿರಣ್ಯವರ್ಣ ಮೊದಲಾದ ಲಕ್ಷಣಗಳಿಂದಲೂ ಬೃಹಸ್ಪತಿಯನ್ನು ಅಗ್ನಿ ಯೆಂದೇ ಹೇಳಬೇಕು ಎಂದು ಹೇಳಿದ್ದಾರೆ.

ಇನ್ನು ಅಗ್ನಿಗೂ ಬೃಹಸ್ಪತಿಬ್ರಹ್ಮಣಸ್ಪತಿಗಳಿಗೂ ಭೇದವನ್ನು ಹೇಳಿರುವ ಉದಾಹರಣೆಗಳನ್ನು ವಿಮರ್ಶೆ ಮಾಡೋಣ.

> ಸೋಷಾಮವಿಂದತ್ಸ ಸ್ವ೧ಃ ಸೋ ಅಗ್ನಿಂ ಸೋ ಅರ್ಕೇಣ ವಿ ಬಬಾಧೇ ತಮಾಂಸಿ ।
> ಬೃಹಸ್ಪತಿರ್ಗೋ ವಪುಷೋ ವಲಸ್ಯ ನಿರ್ಮಜ್ಜಾನಂ ನ ಪರ್ವಣೋ ಜಭಾರ ॥
>
> (ಋ. ಸಂ. ೧೦–೬೮–೯)

ಎಂಬ ಋಕ್ಕಿನಲ್ಲಿ ಬೃಹಸ್ಪತಿಯು—ಉಷಸ್ಸು, ಸ್ವರ್ಗ ಮತ್ತು ಅಗ್ನಿಗಳನ್ನು ಸಂಪಾದಿಸಿದನು ಮತ್ತು ಒಂದು ಮಂತ್ರ ದಿಂದ ಅಂಧಕಾರವನ್ನು ಪರಿಹರಿಸಿದನು ಎಂದು ಬೃಹಸ್ಪತಿ ಮತ್ತು ಅಗ್ನಿಯು ಬೇರೆ ಬೇರೆ ಎಂದು ಹೇಳಿದೆ.

> ಇಂದ್ರಂ ನೋ ಅಗ್ನೇ ವಸುಭಿಃ ಸಜೋಷಾ ರುದ್ರಂ ರುದ್ರೇಭಿರಾ ವಹಾ ಬೃಹಂತಂ ।
> ಆದಿತ್ಯೇಭಿರದಿತಿಂ ವಿಶ್ವಜನ್ಯಾಂ ಬೃಹಸ್ಪತಿಮೃಕ್ವಭಿರ್ವಿಶ್ವವಾರಂ ॥
>
> (ಋ. ಸಂ. ೭-೧೦-೪)

ಎಂಬ ಋಕ್ಕಿನಲ್ಲಿ ವಸುಗಳಿಂದ ಸಹಿತನಾದ ಇಂದ್ರನನ್ನೂ, ಮರುದ್ದೇವತೆಗಳಿಂದ ಸಹಿತನಾದ ರುದ್ರನನ್ನೂ ಆದಿತ್ಯರು (ದೇವತೆ) ಗಳಿಂದ ಸಹಿತಳಾದ ವಿಶ್ವಜನನಿಯಾದ ಅದಿತಿಯನ್ನು ಸ್ತೋತ್ರಮಾಡುತ್ತಿರುವ ಅಂಗಿರಾ ಋಷಿಗಳಿಂದ ಸಹಿತನಾದ ಬೃಹಸ್ಪತಿಯನ್ನೂ ಕರೆತರಬೇಕೆಂದು ಅಗ್ನಿಯನ್ನು ಪ್ರಾರ್ಥಿಸಿದೆ. ಇದಲ್ಲದೆ ಬೃಹಸ್ಪತಿ ಅಥವಾ ಬ್ರಹ್ಮಣ ಸ್ಪತಿಯೇ ಬೇರೆ, ಅಗ್ನಿಯೇ ಬೇರೆ ಎಂದು ಅರ್ಥವನ್ನು ಸೂಚಿಸುವ ಋಕ್ಕುಗಳು—೩-೨೦-೫, ೪-೪೦-೧, ೫-೫೧-೧೨ ೭-೪೧-೧, ೭-೪೪-೧, ೯-೫-೧೧, ೧೦-೩೫-೧೧, ೧೦-೬೫-೧, ೧೦-೧೩೦-೪, ೧೦-೧೪೧-೩, ಮೊದಲಾದ ಮಂತ್ರ ಗಳು ಋಗ್ವೇದದಲ್ಲಿ ಬಹಳವಾಗಿವೆ. ಆದುದರಿಂದ ಅಗ್ನಿಯೇ ಬೇರೆ, ಬೃಹಸ್ಪತಿಯೇ ಬೇರೆ, ಬ್ರಹ್ಮಣಸ್ಪತಿಯೇ ಬೇರೆ ಎಂಬ ಸಿದ್ಧಾಂತವೇ ಋಗ್ವೇದದಲ್ಲಿ ಸಮರ್ಥಿತವಾಗಿದೆ.

ಈ ಋಕ್ಕಿನ ವಿನಿಯೋಗವಿಷಯದಲ್ಲಿ ಒಂದೆರಡು ಮಾತುಗಳನ್ನು ಹೇಳುವುದು ಆವಶ್ಯಕವು. ಈ ಋಕ್ಕಿನಲ್ಲಿ ಗಣಪತಿಶಬ್ದವು ಪಠಿತವಾಗಿರುವುದರಿಂದ ಪುರಾಣಾದಿಗಳಲ್ಲಿ ಹೇಳಿರುವ ಈಶ್ವರಪುತ್ರನಾದ ಗಣಪತಿಯನ್ನು ಪೂಜಿಸುವಾಗ ಈ ಮಂತ್ರವನ್ನು ಪಠಿಸುವುದು ವಾಡಿಕೆಯಾಗಿದೆ. ಎಂದರೆ **ಗಣಾನಾಂ ತ್ವಾ ಗೃತ್ಸಮದೋ ಗಣಪತಿರ್ಜಗತೀ ।** ಗಣಾನಾಂ ತ್ವಾ ಎಂಬ ಮಂತ್ರಕ್ಕೆ ಗೃತ್ಸಮದ ಋಷಿಯು, ಗಣಪತಿಯು ದೇವತೆಯು, ಜಗತೀಛಂದಸ್ಸು ಎಂದು ಹೇಳಿ ಗಣಗತಿಯನ್ನು ಸ್ತುತಿಸುವ ಸಂದರ್ಭಗಳಲ್ಲೆಲ್ಲಾ ಈ ಮಂತ್ರವನ್ನೂ **ಗಣಪತೇ** ಎಂಬ ಶಬ್ದವಿರುವ **ನಿ ಷು ಸೀದ ಗಣಪತೇ ಗಣೇಷು** (ಋ. ಸಂ ೧೮-೧೧೨-೯) ಎಂಬ ಋಕ್ಕನ್ನು ಪಠಿಸುವುದು ಬಳಕೆಯಲ್ಲಿದೆ. ಆದರೆ ಪುರಾಣೋಕ್ತವಾದ ಗಣಪತಿಯೆಂಬ ದೇವತೆಗೂ ಈ ಮಂತ್ರದಲ್ಲಿ ಹೇಳಿರುವ ಬ್ರಹ್ಮಣಸ್ಪತಿ ಎಂಬ ದೇವತೆಗೂ ಯಾವ ಸಂಬಂಧವೂ ಇರುವುದಿಲ್ಲ. ಋಗ್ವೇದದಲ್ಲಿ ಗಣಪತಿ ಎಂಬ ದೇವತೆಯ ಹೆಸರೇ ಇಲ್ಲ. ಗಣಪತಿಶಬ್ದಕ್ಕೆ ದೇವಗಣಗಳಿಗೆ ಅಧಿಪತಿಯಾದ ಎಂಬರ್ಥವಿದ್ದು ಈ ಶಬ್ದವು ಬ್ರಹ್ಮಣಸ್ಪತಿಗೆ ವಿಶೇಷಣವಾಗಿದೆ. ಇದಲ್ಲದೆ ಪುರಾಣೋಕ್ತವಾದ ಇನ್ನೂ ಕೆಲವು ದೇವತೆಗಳ ಹೆಸರುಗಳು ವೇದಗಳಲ್ಲಿ ಇಲ್ಲವಾದ್ದರಿಂದ ಆ ದೇವತೆಗಳ ಹೆಸರು ಮಾತ್ರ ಋಕ್ಕಿನಲ್ಲಿ ಪಠಿತವಾಗಿದ್ದರೆ ಸಾಕು, ಆ ಋಕ್ಕನ್ನು ಆ ದೇವತೆಯ ಪರವಾದ ಮಂತ್ರವೆಂದು ಭಾವಿಸಿ ಆ ಅರ್ಥದಲ್ಲಿ ಉಪಯೋಗಿಸುವರು. ಉದಾಹರಣೆಗೆ ಲಕ್ಷ್ಮೀ ಎಂಬ ದೇವತೆಯು ಋಗ್ವೇದದಲ್ಲಿ ಇಲ್ಲದಿದ್ದರೂ ಲಕ್ಷ್ಮೀಶಬ್ದವಿರುವ **ಸಕ್ತುಮಿವ ತಿತಉನಾ ..........ಲಕ್ಷ್ಮೀರ್ನಿಹಿತಾಧಿ ವಾಚಿ** (ಋ. ಸಂ. ೧೦-೭೧-೨) ಎಂಬ ಋಕ್ಕನ್ನು ಲಕ್ಷ್ಮಿಯನ್ನು ಸ್ತುತಿಸಲು ಉಪಯೋಗಿಸುವರು. ಇದರಂತೆ ನವಗ್ರಹ ದೇವತೆಗಳೂ ಋಗ್ವೇದದಲ್ಲಿ ಉಕ್ತವಾಗಿಲ್ಲ. ಎಂದರೆ ಸೂರ್ಯ, ಚಂದ್ರ, ಬೃಹಸ್ಪತಿ ಎಂಬ ದೇವತೆಗಳನ್ನು ಬಿಟ್ಟು ಉಳಿದ ಅಂಗಾರಕ, ಬುಧ, ಶುಕ್ರ, ಶನೈಶ್ಚರ, ರಾಹು, ಕೇತು ಎಂಬ ಪುರಾಣೋಕ್ತವಾದ ದೇವತೆಗಳ ಹೆಸರು ಸಹ ಋಗ್ವೇದದಲ್ಲಿಲ್ಲ. ಅವರೂ ಯಾವುದಾದರೂ ಒಂದು ಶಬ್ದವು ಸ್ವಲ್ಪಮಟ್ಟಿಗೆ (ಯಾವ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದ್ದರೂ) ಆ ದೇವತೆಯ ಹೆಸರನ್ನು ಹೋಲುವಂತಿದ್ದರೆ ಆ ಋಕ್ಕನ್ನು ಆ ದೇವತೆಯ ಪರವಾಗಿ ಉಪಯೋಗಿಸುವರು. ಉದಾಹರಣೆಗೆ ಕೇತುಶಬ್ದಕ್ಕೆ ಋಗ್ವೇದದಲ್ಲಿ ಕರ್ಮ, ಧ್ವಜ, ಪ್ರಜ್ಞೆ ಎಂಬರ್ಥಮಾತ್ರವಿದ್ದರೂ, **ಕೇತುಂ ಕೃಣ್ವನ್ನ ಕೇತವೇ** (ಋ. ಸಂ. ೧-೬-೩) ಎಂಬ ಋಕ್ಕನ್ನು ಕೇತುಗ್ರಹದ ಆರಾಧನೆಯಲ್ಲಿ ಉಪಯೋಗಿಸುವರು. ಈ ವಿಧವಾದ ಎಂದರೆ ಋಕ್ಕಿನ ಅರ್ಥಕ್ಕೆ ವಿರುದ್ಧವಾದ ಪ್ರಯೋಗವು ಸರಿಯಲ್ಲದಿದ್ದರೂ ಕಾರಣಾಂತರದಿಂದ ಈ ವಿಧವಾದ ಪ್ರಯೋಗವು ಬಳಕೆಯಲ್ಲಿರುವುದು.

**ಗಣಾನಾಂ ತ್ವಾ ಗಣಪತಿಂ ಹವಾಮಹೇ**—ದೇವಾದಿಗಣಾನಾಂ ಸಂಬಂಧಿನಂ ಸ್ವೀಯಾನಾಂ ಪತಿಂ ಬ್ರಹ್ಮಣಸ್ಪತಿಂ ಹವಾಮಹೇ। ದೇವತೆಗಳ ಗುಂಪುಗಳಿಗೆ ಸ್ವಾಮಿಯಾದ ಬ್ರಹ್ಮಣಸ್ಪತಿಯನ್ನು ಆಹ್ವಾನಮಾಡುತ್ತೇವೆ ಎಂದರ್ಥವು. ದೇವತೆಗಳ ಗುಂಪು ಎಂದರೇನು ಎಂದರೆ—ಪಿತೃಗಳು, ಗಂಧರ್ವರು, ಮನುಷ್ಯಗಂಧರ್ವರು, ದೇವಗಂಧರ್ವರು, ಕರ್ಮದೇವತೆಗಳು, ದೇವತೆಗಳು ಇತ್ಯಾದಿ ಅನೇಕ ಭೇದಗಳು ದೇವತೆಗಳಲ್ಲಿ ಇರುವವು ಎಂದು ತೈತ್ತಿರೀಯ ಉಪನಿಷತ್ತಿನಲ್ಲಿ (ತೈ. ಉ. ೨-೮) ಹೇಳಿದೆ. ಇಂತಹ ಸಮಸ್ತ ದೇವಗಣಗಳಿಗೂ ಬ್ರಹ್ಮಣಸ್ಪತಿಯು ಅಧಿಪತಿಯೆಂದು ಇಲ್ಲಿ ವರ್ಣಿಸಿದೆ. ಈ ವಾಕ್ಯದಲ್ಲಿ **ಗಣಾನಾಂ ಗಣಪತಿಂ** ಎಂದು ದ್ವಿರುಕ್ತಿ ಇದೆ. ಈರೀತಿ ದ್ವಿರುಕ್ತಿ ಇರುವುದು ಋಗ್ವೇದದಲ್ಲಿ ಅನೇಕಕಡೆ ಕಂಡುಬರುವುದು. ಈ ವಿಷಯದಲ್ಲಿ **ವಿಶಾಂ ವಿಶ್ಪತಿಂ** (ಋ. ಸಂ. ೭-೧-೮, ೫-೪-೩, ೩-೨-೧೦) **ರಯೀಣಾಂ ರಯಿಪತಿಂ, ಬ್ರಹ್ಮಣಾಂ ಬ್ರಹ್ಮಣಸ್ಪತೇ, ಕವಿಂ ಕವೀನಾಂ** ಇತ್ಯಾದಿ ಅನೇಕ ಉದಾಹರಣೆಗಳನ್ನು ಕೊಡಬಹುದು.

**ಉಪಮಶ್ರವಸ್ತಮಂ— ಉಪಮೀಯತೇಽನಯೇತ್ಯುಪಮಾ । ಸರ್ವೇಷಾಮನ್ನಾನಾಮುಪಮಾನಂ ಶ್ರವೋಽನ್ನಂ ಯಸ್ಯ ಸ ತಥೋಕ್ತಃ । ಅತಿಶಯೇನೋಪಮಶ್ರವಾ ಉಪಮಶ್ರವಸ್ತಮಃ ।** ಶ್ರವಃಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ (ನಿ. ೩-೯) ಉಪಮಾನವನ್ನು ಕೊಡುವುದಕ್ಕೆ ಸಾಧ್ಯವಿಲ್ಲದ ಎಂದರೆ ಮೇರೆಯೇ ಇಲ್ಲದ, ಇಷ್ಟೆಂದು ನಿರ್ದೇಶಿಸಿ ಹೇಳಲು ಸಾಧ್ಯವಿಲ್ಲದ, ಅತ್ಯಧಿಕವಾದ, ನಾನಾವಿಧ ಅನ್ನಗಳುಳ್ಳವನು ಎಂದರೆ ಬಹಳ ವಾದುದೂ ನಾನಾವಿಧವಾದುದೂ ಆದ ಅನ್ನಾದ್ಯಾಹಾರಗಳಿಗೆ ಅಧಿಪತಿಯಾದ ಎಂದು ಶಬ್ದಾರ್ಥವು.

**ಜ್ಯೇಷ್ಠರಾಜಂ— ಜ್ಯೇಷ್ಠಾಃ ಪ್ರಶಸ್ಯತಮಾಃ । ತೇಷಾಂ ಮಧ್ಯೇ ರಾಜಂತಂ ।** ಅತ್ಯಂತ ಶ್ರೇಷ್ಠ ರಾದವರ ಮಧ್ಯದಲ್ಲಿ ಅತಿಶಯವಾಗಿ ಬೆಳಗುತ್ತಿರುವ, ಎಂದರೆ ಶ್ರೇಷ್ಠರಾದವರಲ್ಲಿಯೂ ಅತ್ಯಂತ ಶ್ರೇಷ್ಠನು ಎಂದಭಿ ಪ್ರಾಯವು.

**ಬ್ರಹ್ಮಣಾಂ ಬ್ರಹ್ಮಣಃ ಪತೇ— ಮಂತ್ರಾಣಾಂ ಸ್ವಾಮಿನಂ ತ್ವಾಂ ಹವಾಮಹೇ ।** ಮಂತ್ರಗಳಿಗೆ ಅಥವಾ ಅನ್ನಗಳಿಗೆ ಅಧಿಪತಿಯಾದ ಬ್ರಹ್ಮಣಸ್ಪತಿ ಎಂದರ್ಥವು. ಬ್ರಹ್ಮಣಸ್ಪತಿಶಬ್ದಾರ್ಥವನ್ನು ನಾವು ಈ ಋಕ್ಕಿನ ವಿಶೇಷವಿಷಯಗಳ ಪ್ರಾರಂಭದಲ್ಲಿ ವಿಮರ್ಶೆಮಾಡಿದ್ದೇವೆ.

**ಕವಿಂ ಕವೀನಾಂ— ಕ್ರಾಂತದರ್ಶಿನಂ** ಎಂದು ಸಾಯಣರು ಈ ಪದಕ್ಕೆ ಅರ್ಥವನ್ನು ಹೇಳಿದ್ದಾರೆ. ಮೊದಲನೆಯದಾಗಿ **ಯೇ ವಾ ಅನೂಚಾನಾಸ್ತೇ ಕವಯಃ** ಎಂಬ ಶ್ರುತಿವಾಕ್ಯವನ್ನನುಸರಿಸಿ ವೇದಾಂಗಸಹಿತವಾದ ವೇದಾಧ್ಯಯನವನ್ನು ಮಾಡಿದ ಶಾಸ್ತ್ರಜ್ಞರೆಂದು ಒಂದು ವಿಧವಾಗಿಯೂ, ಎರಡನೆಯದಾಗಿ— **ಕವಿಃ, ಮನೀಷೀ** (ನಿ. ೩-೧೫) ಎಂಬ ನಿರುಕ್ತವಚನವನ್ನನುಸರಿಸಿ ಮೇಧಾವಿಯೆಂದು ಇನ್ನೊಂದು ವಿಧವಾಗಿಯೂ ಅರ್ಥಮಾಡ ಬಹುದು ಎಂದು ತಿಳಿಸಿದ್ದಾರೆ.

**ಮೇಧಾವೀ ಕವಿಃ ಕ್ರಾಂತದರ್ಶನೋ ಭವತಿ ಕವತೇರ್ವಾ ।**

(ನಿ. ೧೨-೧೩)

ಎಂಬದಾಗಿ ನಿರುಕ್ತಕಾರರು ಕವಿಶಬ್ದದ ನಿರ್ವಚನವನ್ನು ಹೇಳಿದ್ದಾರೆ. ಕವಿಶಬ್ದವು ಕ್ರಮ್ ಧಾತುವಿನಿಂದ ನಿಷ್ಪನ್ನ ವಾಗಿ ಕ್ರಾಂತದರ್ಶನವುಳ್ಳವನೆಂದಾಗಬಹುದು, ಅಥವಾ ಕಮ್ ಧಾತುವಿನಿಂದ ನಿಷ್ಪನ್ನವಾಗಿ ಸ್ತುತಿಮಾಡತಕ್ಕ ಸ್ತೋತೃವೆಂದರ್ಥವಾಗಬಹುದು ಎಂದು ನಿರುಕ್ತಕಾರರ ಅಭಿಮತವು. ಕವಿಯ ಸ್ವರೂಪವೇನು ? ಕವಿಯ ಶಕ್ತಿ ಯೇನು ? ಯಾವ ಸ್ವರೂಪ ಮತ್ತು ಶಕ್ತಿಯನ್ನು ತಿಳಿಸಲು ಋಕ್ಸಂಹಿತೆಯಲ್ಲಿ ಕವಿಶಬ್ದದ ಪ್ರಯೋಗವಿದೆ ಎಂಬು ದನ್ನು ತಿಳಿಯಬೇಕಾದುದು ಅವಶ್ಯಕವು.

**ಋಷಿ, ಸುಮೇಧ, ಧೀರ, ರೇಭ** ಎಂಬ ಪದಗಳು ಯಾವ ಸ್ವರೂಪವಿಶೇಷವನ್ನು ತೋರಿಸುವವೋ ಕವಿ ಶಬ್ದವೂ ಅದೇ ಅಂಶವನ್ನು ತಿಳಿಸಲು ಪ್ರಯುಕ್ತವಾಗಿದೆಯೆಂದು ಹೇಳಬಹುದು. ಭೂತಭವಿಷ್ಯದ್ವರ್ತಮಾನಕಾಲಗಳ ವ್ಯವಹಾರಗಳನ್ನೆಲ್ಲಾ ತಿಳಿಯತಕ್ಕ ಅಸಾಧಾರಣವೂ, ಅಲೌಕಿಕವೂ ಆದ ಶಕ್ತಿಯುಳ್ಳವನೇ ಧೀರನು, ಋಷಿಯೂ ಅವನೇ, ಕವಿಯೂ ಅವನೇ, ಈ ಶಕ್ತಿಯುಳ್ಳವನೇ ಸ್ತೋತ್ರರೂಪವಾದ ಕಾವ್ಯದ ಸೃಷ್ಟಿಗೂ ಅರ್ಹನಾಗಿದ್ದಾನೆ. ಆದುದರಿಂದ ಸ್ತುತಿಕಾರನಿಗೂ ಕವಿ, ರೇಭ ಇತ್ಯಾದಿ ಹೆಸರುಗಳಿರುವವು. ಲೌಕಿಕಸಾಹಿತ್ಯಗಳಲ್ಲಿಯೂ, ಲಕ್ಷಣ ಗ್ರಂಥಗಳಲ್ಲಿಯೂ ಕವಿ, ಕಾವ್ಯ ಎಂಬ ಪದಗಳಿಗೆ ಇದೇ ರೀತಿಯ ಅಸಾಧಾರಣವಾದ ಶಕ್ತಿಯನ್ನು ಸೂಚಿಸುವ ಸಂಜ್ಞೆ

ಯಿದ್ದರೂ ಅಲ್ಲಿಯ ನಿರ್ವಚನವು ಇದಕ್ಕಿಂತ ಸ್ವಲ್ಪ ವ್ಯತ್ಯಸ್ತವಾಗಿದೆಯೆಂಬಂಶವನ್ನು ಮುಂದೆ ಸಂದರ್ಭಾನುಸಾರ ವಿವರಿಸಲಾಗುತ್ತದೆ. ಕವಿಯ ನಿಜವಾದ ಸ್ವರೂಪವನ್ನು ತಿಳಿಸಲು ನಿರುಕ್ತಕಾರರು—

ವಿಶ್ವಾ ರೂಪಾಣಿ ಪ್ರತಿ ಮುಂಚತೇ ಕವಿಃ ಪ್ರಾಸಾವೀದ್ಭದ್ರಂ ದ್ವಿಪದೇ ಚತುಷ್ಪದೇ ।
ವಿ ನಾಕಮಖ್ಯತ್ಸವಿತಾ ವರೇಣ್ಯೋಽನು ಪ್ರಯಾಣಮುಷಸೋ ವಿ ರಾಜತಿ ॥

(ಋ. ಸಂ. ೫-೮೧-೨)

ಎಂಬ ಋಕ್ಕನ್ನುದಾಹರಿಸಿ, ಇಲ್ಲಿ ಸವಿತೃವಿಗೆ ವಿಶೇಷಣವಾಗಿರುವ ಕವಿ ಶಬ್ದವು ಯಾವ ಸ್ವರೂಪವನ್ನು ತೋರಿಸುವುದೆಂಬುದನ್ನು ವಿವರಿಸಿದ್ದಾರೆ. ವಿಶ್ವದ ಸಕಲರೂಪಗಳನ್ನೂ ಪ್ರಕಾಶಪಡಿಸುವವನಾದುದರಿಂದ ಸವಿತೃವಿಗೆ ಈ ವಿಶೇಷಣವಿದೆಯೆಂದು ತಿಳಿಯಬರುತ್ತದೆ. ಎಂದರೆ, ಗೂಢವಾಗಿ ಅಡಗಿ ಲೋಕದ ದೃಷ್ಟಿಗೆ ಗೋಚರವಾಗದಿರುವ ಅಂಶಗಳನ್ನು ತನ್ನ ಶಕ್ತಿಯಿಂದ ಪ್ರಕಾಶಿತವಾಗುವಂತೆ ಮಾಡಿ ಲೋಕದ ದೃಷ್ಟಿಗೆ ಬೀಳುವಂತೆ ಮಾಡುವ ಶಕ್ತಿಯುಳ್ಳವನೆಂದರ್ಥವು. ಈ ಅರ್ಥದಲ್ಲಿಯೇ ಸ್ತೋತೃವಾದ ಸ್ತುತಿಕರ್ತನಿಗೂ ಸಹ ಕವಿಯೆಂಬ ಹೆಸರು ಪ್ರಸಿದ್ಧವಾಗಿದೆ. ಈ ಅಭಿಪ್ರಾಯವು—

ಬ್ರಹ್ಮಾ ಕೃಣೋತಿ ವರುಣೋ ಗಾತುವಿದಂ ತಮೀಮಹೇ ।
ವ್ಯೂರ್ಣೋತಿ ಹೃದಾ ಮತಿಂ ನವ್ಯೋ ಜಾಯತಾಮೃತಂ ವಿತ್ತಂ ಮೇ ಅಸ್ಯ ರೋದಸೀ ॥

(ಋ. ಸಂ. ೧-೧೦೫-೧೫)

ಎಂಬ ಋಕ್ಕಿನಲ್ಲಿಯೂ, ಹೀಗೆಯೇ ಇತರ ಋಕ್ಕುಗಳಲ್ಲಿಯೂ ಸೂಚಿತವಾಗಿದೆ. ಉದಾಹೃತವಾದ ಈ ಋಕ್ಕಿನಲ್ಲಿ ವ್ಯೂರ್ಣೋತಿ ಎಂಬ ಪದಕ್ಕೆ ಉಚ್ಛಾರಯತಿ, ಪ್ರಕಾಶಯತಿ ಎಂದು ಸಾಯಣರು ಅರ್ಥಮಾಡಿದ್ದಾರೆ. ಊರ್ಣುಞ್-ಆಚ್ಛಾದನೇ । ಮರೆಮಾಡು, ಹೊದ್ದಿಸು ಎಂಬರ್ಥವುಳ್ಳ ಊರ್ಣು ಧಾತುವು ಊರ್ಣೋತಿ ಎಂದಾಗುತ್ತದೆ. ಇಲ್ಲಿ ವಿ ಎಂಬ ಉಪಸರ್ಗದೊಡನೆ ಸೇರಿ ವಿಗತವಾದ ಆಚ್ಛಾದನೆ ಎಂದರೆ ಮರೆಯನ್ನು ತಪ್ಪಿಸುವುದು ಎಂಬರ್ಥವನ್ನು ಕೊಡುತ್ತದೆ. ಪ್ರಕಾಶಪಡಿಸುವುದೆಂದು ಅಭಿಪ್ರಾಯವು. ಮನಸ್ಸಿನಲ್ಲಿ ಗುಪ್ತವಾಗಿರುವ ಭಾವವನ್ನು ಪ್ರಕಾಶಪಡಿಸುವುದರ ರೂಪದಲ್ಲಿ ಸೃಷ್ಟಿಸಾಮರ್ಥ್ಯವೂ, ಗುಪ್ತವಾಗಿರುವ ಅಂಶವನ್ನು ಪ್ರಕಾಶಪಡಿಸಿ ತೋರಿಸುವ ಶಕ್ತಿಯೂ ಸಹ ಕವಿಯ ಅಥವಾ ಸ್ತುತಿಕರ್ತನ ವಿಶೇಷಗುಣವೆಂದು ಇದರಿಂದ ತಿಳಿಯಬಹುದು. ಆದುದರಿಂದ ಸವಿತೃವಿಗೂ, ಸ್ತುತಿಕರ್ತನಿಗೂ ಇರುವ ಸಮಾನವಾದ ಧರ್ಮವನ್ನು ಕವಿಶಬ್ದವು ಇಬ್ಬರಿಗೂ ತಿಳಿಸುವ ವಿಶೇಷಣವಾಗಿರುತ್ತದೆ. ಇದೇ ಲಕ್ಷಣವನ್ನೂ ಕವಿಕೃತಿಯನ್ನೂ ವಿವರಿಸುತ್ತಾ ಋಕ್ಸಂಹಿತೆಯು—

ಸಮಾನಂ ನೀಳಂ ವೃಷಣೋ ವಸಾನಾಃ ಸಂ ಜಗ್ಮಿರೇ ಮಹಿಷಾ ಅರ್ವತೀಭಿಃ ।
ಋತಸ್ಯ ಪದಂ ಕವಯೋ ನಿ ಪಾಂತಿ ಗುಹಾ ನಾಮಾನಿ ದಧಿರೇ ಪರಾಣಿ ॥

(ಋ. ಸಂ. ೧೦-೫-೨)

ಬೃಹಸ್ಪತೇ ಪ್ರಥಮಂ ವಾಚೋ ಅಗ್ರಂ ಯತ್ಪ್ರೈರತ ನಾಮಧೇಯಂ ದಧಾನಾಃ ।
ಯದೇಷಾಂ ಶ್ರೇಷ್ಠಂ ಯದರಿಪ್ರಮಾಸೀತ್ಪ್ರೇಣಾ ತದೇಷಾಂ ನಿಹಿತಂ ಗುಹಾವಿಃ ॥

(ಋ. ಸಂ. ೧೦-೭೧-೧)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಈ ಭಾವವು ವ್ಯಕ್ತವಾಗಿರುತ್ತದೆ. ಕವಿಗಳು ಋತದ ಮಾರ್ಗವನ್ನು ಪ್ರವೇಶಿಸಿ ಅತ್ಯಂತ ಗೂಢವಾದ ಹೃದಯದಲ್ಲಿ ಅತ್ಯುತ್ತಮವಾದ ರಹಸ್ಯದ ಹೆಸರುಗಳನ್ನು ಧರಿಸಿದ್ದಾರೆ. ಮತ್ತು ಅದನ್ನು ಪ್ರಕಾಶಪಡಿಸಿ ಲೋಕಕ್ಕೆ ತಿಳಿಯುವಂತೆ ಮಾಡುತ್ತಾರೆ ಎಂದು ವರ್ಣಿತವಾಗಿದೆ. ಈ ಕವಿಯ ದರ್ಶನವೂ ಪ್ರಕಾಶನರೂಪದ ಸಾಧನ ದಿಂದಲೇ ಸಾಧ್ಯವು—

ಯಜ್ಞೇನ ವಾಚಃ ಪದವೀಯಮಾಯನ್ತಾಮನ್ವವಿಂದನ್ನೃಷಿಷು ಪ್ರವಿಷ್ಟಾಂ ।
ತಾಮಾಭೃತ್ಯಾ ವ್ಯದಧುಃ ಪುರುತ್ರಾ ತಾಂ ಸಪ್ತ ರೇಭಾ ಅಭಿ ಸಂ ನವಂತೇ ॥

(ಋ. ಸಂ ೧೦-೭೧-೩)

ಅತೀಂದ್ರಿಯಾರ್ಥದರ್ಶಿಗಳಾದ ಋಷಿಗಳಲ್ಲಿ ಸುಪ್ತವಾಗಿದ್ದ ವಾಕ್ಕನ್ನು ಯಜ್ಞರೂಪವಾದ ಸಾಧನದಿಂದ ಕವಿಗಳು ಪಡೆದರು. ಅನಂತರ ಲೋಕದ ಉಪಕಾರಕ್ಕಾಗಿ ಅವರಿಗೂ ಉಪದೇಶವನ್ನು ಮಾಡಿದರು. ವಿಶ್ವತತ್ತ್ವರೂಪವಾದ ಈ ವಾಕ್ಕನ್ನು ಗಾಯತ್ರ್ಯಾದಿ ಛಂದಸ್ಸುಗಳು ಸೇವಿಸುತ್ತವೆ. ಇತ್ಯಾದಿಯಾಗಿ ವಾಕ್ಪ್ರಕಾಶನರೂಪವಾದ ಸೃಷ್ಟಿಗೂ ಯಜ್ಞರೂಪವಾದ ಕರ್ಮಕ್ಕೂ ಕೆಲವುಕಡೆ ತಾದಾತ್ಮ್ಯವನ್ನೂ ಇನ್ನು ಕೆಲವುಕಡೆ ಕಾರ್ಯಕಾರಣರೂಪವಾದ ಸಂಬಂಧವನ್ನು ತಿಳಿಸಿದೆ. ಇದೇ ಭಾವವನ್ನು—

ಅಯುರೇತಜ್ಜ್ಯೋತಿಃ ಪ್ರವಿಶತಿ ಯ ಏತಮನು ವಾ ಬ್ರೂತೇ ಭಕ್ಷಯತಿ ವಾ ತಸ್ಯ ವ್ರತಚ-ರ್ಯಾಯಾ ಸೃಷ್ಟೌ ।

(ಶ. ಬ್ರಾ. ೧೪-೧-೨-೨೬)

ಎಂಬ ಶತಪಥಬ್ರಾಹ್ಮಣ ವಾಕ್ಯದಲ್ಲಿಯೂ ಹೇಳಿದೆ. ಪ್ರಕೃತವಾದ ಋಕ್ಕಿನಲ್ಲಿ ಕವಿಶಬ್ದವು ಅತೀಂದ್ರಿಯವಿಷಯ ಪ್ರಜ್ಞೋಪೇತನೂ, ಸರ್ವಜ್ಞನೂ ಆದ ಬ್ರಹ್ಮಣಸ್ಪತಿಯ ಅಸಾಧಾರಣವಾದ ಗುಣವನ್ನು ತಿಳಿಸುವ ವಿಶೇಷಣವಾಗಿದೆ. ಈ ವಿಶೇಷಣವು ಅನೇಕಕಡೆಗಳಲ್ಲಿ ಉಪಯೋಗಿಸಲ್ಪಟ್ಟಿರುವುದರಿಂದ ಆಯಾ ಸಂದರ್ಭಗಳಿಗನುಗುಣವಾಗಿ ಅರ್ಥ ಮಾಡಬೇಕು.

ಆ ನಃ ಶೃಣ್ವನ್ ಊತಿಭಿಃ ಸೀದ ಸದನಂ—ಅಸ್ಮಾಕಂ ಸ್ತುತೀಃ ಶೃಣ್ವನ್ ಪಾಲನೈರ್ಹೇತು-ಭೂತೈಃ ಯಜ್ಞಗೃಹಂ ಉಪವಿಶ । ಎಲೈ ಬ್ರಹ್ಮಣಸ್ಪತಿಯೇ, ನೀನು ನಮ್ಮ ಸ್ತುತಿಗಳನ್ನು ಕೇಳಿ ನಮ್ಮ ಯಜ್ಞ ಗೃಹಕ್ಕೆ ಬಂದು ಅಲ್ಲಿ ಕುಳಿತುಕೋ ಎಂದು ಋಷಿಯು ಪ್ರಾರ್ಥಿಸಿರುವನು.

---

## ಸಂಹಿತಾಪಾಠಃ

ದೇವಾಶ್ಚಿತ್ತೇ ಅಸುರ್ಯ ಪ್ರಚೇತಸೋ ಬೃಹಸ್ಪತೇ ಯುಜ್ಞಿಯಂ ಭಾಗ-ಮಾನಶುಃ ।
ಉಸ್ರಾ ಇವ ಸೂರ್ಯೋ ಜ್ಯೋತಿಷಾ ಮುಹೋ ವಿಶ್ವೇಷಾಮಿಜ್ಜನಿತಾ ಬ್ರಹ್ಮಣಾಮಸಿ ॥ ೨ ॥

### ಪದಪಾಠಃ

ದೇವಾಃ । ಚಿತ್ । ತೇ । ಅಸುರ್ಯ । ಪ್ರಚೇತಸಃ । ಬೃಹಸ್ಪತೇ । ಯಜ್ಞಿಯಂ । ಭಾಗಂ । ಆನಶುಃ । ಉಸ್ರಾಃಇವ । ಸೂರ್ಯಃ । ಜ್ಯೋತಿಷಾ । ಮಹಃ । ವಿಶ್ವೇಷಾಂ । ಇತ್ । ಜನಿತಾ । ಬ್ರಹ್ಮಣಾಂ । ಅಸಿ ॥

### ಸಾಯಣಭಾಷ್ಯಂ

ಅಸುರ್ಯ ಅಸುರಾಣಾಂ ಹಂತಃ ಹೇ ಬೃಹಸ್ಪತೇ ಪ್ರಚೇತಸಃ ಪ್ರಕೃಷ್ಟಜ್ಞಾನಾಸ್ತೇ ತ್ವದೀಯಾ ದೇವಾಶ್ಚಿತ್ ದೇವಾ ಅಪಿ ಯಜ್ಞಿಯಂ ಯಜ್ಞಾರ್ಹಂ ಭಾಗಮಾನಶುಃ । ಪ್ರಾಪ್ನುವನ್ । ಯದ್ವಾ ಪ್ರಚೇತಸ ಇತಿ ಬೃಹಸ್ಪತೇರ್ವಿಶೇಷಣಂ । ಪ್ರಕೃಷ್ಟಜ್ಞಾನವತಸ್ತೇ ತವ ಸಂಬಂಧಿನೋ ದೇವಾ ಇತಿ ಯೋಜನೀಯಂ । ಯದ್ವಾ ಪ್ರಚೇತಸಃ । ವಿಭಕ್ತಿಪರಿಣಾಮಃ । ಪ್ರಚೇತಸಿ ತ್ವಯಿ ಸತಿ ದೇವಾ ಯಜ್ಞಿಯಂ ಭಾಗಮಾನಶಿರೇ । ಕರ್ಮವಿಘ್ನಕಾರಿಣಾಮಸುರಾಣಾಂ ರಕ್ಷೋಘ್ನಮಂತ್ರೈರಪಾಕರಣಾತ್ । ನ ವೈ ಬ್ರಹ್ಮಣ್ವದ್ರಿಷ್ಯತಿ । ಐ. ಬ್ರಾ- ೧-೧೩ । ಇತಿ ಶ್ರವಣಾತ್ । ಜ್ಯೋತಿಷಾ ತೇಜಸಾ ಮಹೋ ಮಂಹನೀಯಃ ಸೂರ್ಯ ಉಸ್ರಾ ಇವ । ಉಸ್ರಾಃ ಕಿರಣಾಃ ॥ ಸ್ಫಾಯಿತಂಚೀತ್ಯಾದಿನಾ ರಕ್‌ಪ್ರತ್ಯಯಃ ॥ ಯಥಾ ಕಿರಣಾನ್ ಜನಯತಿ ತಥಾ ವಿಶ್ವೇಷಾಂ ಸರ್ವೇಷಾಂ ಬ್ರಹ್ಮಣಾಂ ಮಂತ್ರಾಣಾಂ ಜನಿತಾ ಜನಯಿತೈವಾಸಿ ॥ ಜನಿತಾ ಮಂತ್ರ ಇತಿ ನಿಪಾತನಾಣ್ಣಿಲೋಪಃ ॥

### ಪ್ರತಿಪದಾರ್ಥ

ಅಸುರ್ಯ—ಅಸುರಹಂತಕನಾದ । ಬೃಹಸ್ಪತೇ—ಎಲೈ ಬೃಹಸ್ಪತಿಯೇ । ಪ್ರಚೇತಸಃ—ಪ್ರಕೃಷ್ಟವಾದ ಜ್ಞಾನವುಳ್ಳ । ತೇ—ನಿನ್ನ ಸಂಬಂಧದಿಂದಲೇ (ಮೂಲಕವಾಗಿಯೇ) । ದೇವಾಶ್ಚಿತ್—ದೇವತೆಗಳೂ ಸಹ । ಯಜ್ಞಿಯಂ—ಯಜ್ಞಾರ್ಹವಾದ । ಭಾಗಂ—ಭಾಗವನ್ನು । ಆನಶುಃ—ಪಡೆದರು । ಜ್ಯೋತಿಷಾ—ತೇಜಸ್ಸಿನಿಂದ । ಮಹಃ—ಪೂಜ್ಯನಾದ । ಸೂರ್ಯಃ—ಸೂರ್ಯನು । ಉಸ್ರಾಇವ—ಕಿರಣಗಳನ್ನು ಪ್ರಸರಿಸುವ ಹಾಗೆ ಮಾಡುವಂತೆ (ನೀನೂ ಸಹ) । ವಿಶ್ವೇಷಾಂ—ಸಮಸ್ತವಾದ । ಬ್ರಹ್ಮಣಾಂ ಇತ್—ಮಂತ್ರಗಳಿಗೂ ಸಹ । ಜನಿತಾ—ನಿರ್ಮಾತನಾಗಿ । ಅಸಿ—ಆಗಿದ್ದೀಯೆ.

### ಭಾವಾರ್ಥ

ಅಸುರಹಂತಕನಾದ ಎಲೈ ಬೃಹಸ್ಪತಿಯೇ, ಪ್ರಕೃಷ್ಟವಾದ ಜ್ಞಾನವುಳ್ಳ ನಿನ್ನಸಂಬಂಧದಿಂದಲೇ ದೇವತೆಗಳೂ ಸಹ ಯಜ್ಞಾರ್ಹವಾದ ಭಾಗವನ್ನು ಪಡೆದರು. ತೇಜಸ್ಸಿನಿಂದ ಪೂಜ್ಯನಾದ ಸೂರ್ಯನು ಕಿರಣಗಳನ್ನು ಹೊರಗೆಡಹಿ ಪ್ರದರ್ಶಿಸಿ ಪ್ರಸರಿಸುವಂತೆ ಮಾಡುವ ಹಾಗೆ ನೀನೂ ಸಹ ಸಮಸ್ತವಾದ ಮಂತ್ರಗಳಿಗೂ ನಿರ್ಮಾತನಾಗಿ ಆಗಿದ್ದೀಯೆ.

### English Translation

Brihaspati, destroyer of the Asuras, through you the intelligent gods have obtained the sacrificial portion; in like manner as the adorable sun generates the (solar) rays by his radiance, so are you the generator of all prayers.

## ವಿಶೇಷವಿಷಯಗಳು

**ಅಸುರ್ಯ—ಅಸುರಾಣಾಂ ಹಂತಃ ಹೇ ಬೃಹಸ್ಪತೇ** | ಅಸುರರನ್ನು ಸಂಹರಿಸುವ ಎಲೈ ಬೃಹಸ್ಪತಿಯೇ ಎಂದು ಅಸುರ್ಯಶಬ್ದವು ಬೃಹಸ್ಪತಿಗೆ ವಿಶೇಷಣವಾಗಿದೆ. ಸಾಧಾರಣವಾಗಿ ಬೃಹಸ್ಪತಿಯು ರಕ್ಷೋಘ್ನಮಂತ್ರಗಳ ಉಚ್ಚಾರಣೆಯಿಂದ ಅಸುರರನ್ನು ನಾಶಮಾಡುವನು ಎಂದು ಪ್ರಸಿದ್ಧಿಯು.

**ಪ್ರಚೇತಸಃ**—ಈ ಶಬ್ದಕ್ಕೆ ಭಾಷ್ಯಕಾರರು ಮೂರುವಿಧವಾದ ಅರ್ಥಗಳನ್ನು ಹೇಳಿರುವರು. **ಪ್ರಕೃಷ್ಟ-ಜ್ಞಾನಾಸ್ತೇ ದೇವಾಃ**—ಉತ್ತಮವಾದ ಜ್ಞಾನವುಳ್ಳ ದೇವತೆಗಳು ಎಂದು ಅರ್ಥಮಾಡಿ **ಪ್ರಚೇತಸಃ** ಎಂಬ ಶಬ್ದವು ಪ್ರಥಮಾ ಬಹುವಚನಾಂತಪದವಾಗಿ **ದೇವಾಃ** ಎಂಬ ಶಬ್ದಕ್ಕೆ ವಿಶೇಷಣವಾಗಿದೆ ಎಂದೂ, ಅಥವಾ—**ಯದ್ವಾ ಪ್ರಚೇತಸ ಇತಿ ಬೃಹಸ್ಪತೇರ್ವಿಶೇಷಣಂ | ಪ್ರಕೃಷ್ಟಜ್ಞಾನವತಸ್ತೇ ಸಂಬಂಧಿನೋ ದೇವಾಃ | ಪ್ರಚೇತಸಃ** ಎಂಬ ಶಬ್ದವು ಷಷ್ಠ್ಯೇಕವಚನಾಂತವಾದ ಪದವೆಂದು ಪರಿಗಣಿಸಿದರೆ ಆಗ ಆ ಶಬ್ದವು ತೇ ಎಂಬ ಶಬ್ದಕ್ಕೆ ವಿಶೇಷಣವಾಗಿ ಪ್ರಕೃಷ್ಟಜ್ಞಾನವುಳ್ಳ ಬೃಹಸ್ಪತಿಯಾದ ನಿನ್ನ ಎಂಬರ್ಥವನ್ನು ಸೂಚಿಸುವುದು ಎಂದೂ, ಅಥವಾ—**ಯದ್ವಾ ಪ್ರಚೇತಸಃ ವಿಭಕ್ತಿಪರಿಣಾಮಃ | ಪ್ರಚೇತಸಿ ತ್ವಯಿ ಸತಿ ದೇವಾ ಯಜ್ಞಿಯಂ ಭಾಗಮಾನಶಿರೇ** | ಪ್ರಚೇತಸಃ ಎಂಬ ಷಷ್ಠ್ಯೇಕವಚನವು ಪ್ರಚೇತಸಿ ಎಂಬ ಸಪ್ತಮೀವಿಭಕ್ತ್ಯರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಭಾವಿಸಿದರೆ ಆಗ ಪ್ರಕೃಷ್ಟಜ್ಞಾನವುಳ್ಳ ನಿನ್ನಲ್ಲಿ ಎಂದರೆ ನಿನ್ನ ಸಹಾಯದಿಂದ ದೇವತೆಗಳು ತಮ್ಮ ಯಜ್ಞಭಾಗವನ್ನು ಪಡೆದರು ಎಂಬರ್ಥವು ಸೂಚಿತವಾಗುವುದು.

**ದೇವಾಶ್ಚಿತ್ ಯಜ್ಞಿಯಂ ಭಾಗಮಾನಶುಃ**—ದೇವತೆಗಳು ಬೃಹಸ್ಪತಿಯ ಸಹಾಯದಿಂದ ಯಜ್ಞಾರ್ಹವಾದ ಭಾಗವನ್ನು ಪಡೆದರು ಎಂದಭಿಪ್ರಾಯವು. ಇಲ್ಲಿ ಬೃಹಸ್ಪತಿಯ ಸಹಾಯವೆಂದರೆ—**ಕರ್ಮವಿಘ್ನಕಾರಿಣಾ-ಮಸುರಾಣಾಂ ರಕ್ಷೋಘ್ನಮಂತ್ರೈರಪಾಕರಣಾತ್** | ಯಜ್ಞಾದಿಕರ್ಮಗಳಿಗೆ ವಿಘ್ನವನ್ನುಂಟುಮಾಡುವ ರಾಕ್ಷಸರನ್ನು ರಕ್ಷೋಘ್ನಮಂತ್ರಪಠನಾದಿಗಳಿಂದ ಬೃಹಸ್ಪತಿಯು ಓಡಿಸುವನೆಂದು ಹೇಳಿ ಈ ವಿಷಯಸಮರ್ಥನೆಗಾಗಿ ನ ವೈ ಬ್ರಹ್ಮಣ್ವದ್ರಿಷ್ಯತಿ (ಐ. ಬ್ರಾ. ೧-೧೩) ಎಂಬ ಐತರೇಯ ಬ್ರಾಹ್ಮಣವಾಕ್ಯವನ್ನು ಉದಾಹರಿಸಿದ್ದಾರೆ.

**ಜ್ಯೋತಿಷಾ ಮಹಃಸೂರ್ಯಃ ಉಸ್ರಾ ಇವ ವಿಶ್ವೇಷಾಂ ಬ್ರಹ್ಮಣಾಂ ಇತ್ ಜನಿತಾ ಅಸಿ—ತೇಜಸಾ ಮಂಹನೀಯಃ ಸೂರ್ಯಃ ಯಥಾ ಕಿರಣಾನ್ ಜನಯತಿ ತಥಾ ತ್ವಂ ಸರ್ವೇಷಾಂ ಮಂತ್ರಾಣಾಂ ಜನಯಿ-ತೈವಾಸಿ** | ತೇಜಸ್ಸಿನಿಂದ ಮಹಾಪ್ರಕಾಶವುಳ್ಳವನಾಗಿ ಬೆಳಗುತ್ತಿರುವ ಸೂರ್ಯನು ಯಾವ ಪ್ರಕಾರವಾಗಿ ಅನೇಕ ಕಿರಣಗಳನ್ನು ಉಂಟುಮಾಡುವನೋ ಅದರಂತೆ ಬೃಹಸ್ಪತಿಯಾದ ನೀನು ಸಮಸ್ತಮಂತ್ರಗಳಿಗೂ ಉತ್ಪಾದಕನಾಗಿರುವೆ. ಸೂರ್ಯನ ತೇಜಸ್ಸಿನಿಂದ ಹೊರಹೊರಡುವ ಕಿರಣಗಳು ಅಸಂಖ್ಯಾತವಾಗಿರುವಂತೆ ಬೃಹಸ್ಪತಿಯು ಸಮಸ್ತಮಂತ್ರಗಳಿಗೂ ತಾನೇ ಕರ್ತನಾಗಿರುವನು ಎಂದರೆ ಬೃಹಸ್ಪತಿಯಿಂದಲೇ ಸಮಸ್ತಮಂತ್ರಗಳೂ ಉತ್ಪನ್ನವಾಗುವವು ಎಂದಭಿಪ್ರಾಯವು.

**ಉಸ್ರಾ ಇವ**—ಉಸ್ರಾ ಎಂಬ ಶಬ್ದವು ಗೋನಾಮಗಳಲ್ಲಿ ಪಠಿತವಾಗಿದೆ (ನಿ. ೩-೯) ಮತ್ತು **ಉಸ್ರಿಯೇತಿ ಗೋನಾಮ | ಉಸ್ರಾವಿಣೋಽಸ್ಯಾಂ ಭೋಗಾಃ | ಉಸ್ರೇತಿ ಚ** (ನಿ. ೪-೧೯) ಎಂದು ನಿರ್ವಚನವೂ ಇರುವುದು. ಉಸ್ರಾ ಎಂಬ ಶಬ್ದವು ಗೋನಾಮಗಳಲ್ಲಿ ಪಠಿತವಾಗಿದ್ದರೂ ಇಲ್ಲಿ ಸೂರ್ಯಕಿರಣಗಳೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಗೋಶಬ್ದಕ್ಕೂ ಕಿರಣವೆಂಬ ಅರ್ಥವಿದೆ.

---

ಸಂಹಿತಾಪಾಠಃ

ಆ ವಿಬಾಧ್ಯಾ ಪರಿರಾಪಸ್ತಮಾಂಸಿ ಚ ಜ್ಯೋತಿಷ್ಮಂತಂ ರಥಮೃತಸ್ಯ ತಿಷ್ಠಸಿ।
ಬೃಹಸ್ಪತೇ ಭೀಮಮಮಿತ್ರದಂಭನಂ ರಕ್ಷೋಹಣಂ ಗೋತ್ರಭಿದಂ
ಸ್ವರ್ವಿದಂ ॥ ೩ ॥

ಪದಪಾಠಃ

ಆ । ವಿऽಬಾಧ್ಯ । ಪರಿऽರಪಃ । ತಮಾಂಸಿ । ಚ । ಜ್ಯೋತಿಷ್ಮಂತಂ । ರಥಂ । ಋತಸ್ಯ । ತಿಷ್ಠಸಿ ।
ಬೃಹಸ್ಪತೇ । ಭೀಮಂ । ಅಮಿತ್ರऽದಂಭನಂ । ರಕ್ಷಃऽಹನಂ । ಗೋತ್ರऽಭಿದಂ । ಸ್ವಃऽವಿದಂ ॥ ೩ ॥

ಸಾಯಣಭಾಷ್ಯಂ

ಹೇ ಬೃಹಸ್ಪತೇ ಪರಿರಪಃ । ಪರಿತೋ ರಪಃ ಪಾಪರೂಪಂ ರಕ್ಷಃ ॥ ಯದ್ವಾ ರಪ ಲಪ ವ್ಯಕ್ತಾಯಾಂ ವಾಚಿ । ಕ್ವಿಪ್ ॥ ಪರಿವದತೋ ನಿಂದಕಾನ್ ತಮಾಂಸಿ ಚ ವಿಬಾಧ್ಯ ತೇಜಸಾ ನಿರಾಕೃತ್ಯ ಜ್ಯೋತಿಷ್ಮಂತಂ ಜ್ಯೋತಿಷಾ ತದ್ವಂತಮೃತಸ್ಯ ಯಜ್ಞಸ್ಯ ಪ್ರಾಪಕಂ ಭೀಮಂ ಶತ್ರೂಣಾಂ ಭಯಂಕರಮಮಿತ್ರದಂಭನಂ ಶತ್ರೂಣಾಂ ಹಿಂಸಕಂ । ತದೇವಾಹ ರಕ್ಷೋಹಣಂ ರಕ್ಷಸಾಂ ಹಂತಾರಂ ಗೋತ್ರಭಿದಂ ಮೇಘಾನಾಂ ಭೇತ್ತಾರಂ ಸ್ವರ್ವಿದಂ ಸ್ವರ್ಗಸ್ಯ ಲಂಭಕಂ ರಥಮಾತಿಷ್ಠಸಿ । ಅಧಿತಿಷ್ಠಸಿ ॥

ಪ್ರತಿಪದಾರ್ಥ

**ಬೃಹಸ್ಪತೇ**—ಎಲೈ ಬೃಹಸ್ಪತಿಯೇ । **ಪರಿರಪಃ**—ಪಾಪರೂಪವಾದ ರಕ್ಷಸ್ಸುಗಳನ್ನು ಅಥವಾ ನಿಂದಕರನ್ನೂ । **ತಮಾಂಸಿ ಚ**—ಕಗ್ಗತ್ತಲೆಯನ್ನೂ ಸಹ । **ವಿಬಾಧ್ಯ**—ತೇಜಸ್ಸಿನಿಂದ ದೂರೀಕರಿಸಿ । **ಜ್ಯೋತಿಷ್ಮಂತಂ**—ಕಾಂತಿಯುತವಾದುದೂ । **ಋತಸ್ಯ**—ಯಜ್ಞವನ್ನು ಸೇರಿಸತಕ್ಕದ್ದೂ । **ಭೀಮಂ**—(ಶತ್ರುಗಳಿಗೆ) ಭಯಂಕರವಾದುದೂ । **ಅಮಿತ್ರದಂಭನಂ**—ಶತ್ರುಹಿಂಸಕವಾದುದೂ । **ರಕ್ಷೋಹಣಂ**—ರಾಕ್ಷಸರನ್ನು ನಾಶಮಾಡುವುದೂ । **ಗೋತ್ರಭಿದಂ**—ಮೇಘವನ್ನು ಸೀಳಿ ಬಿಡಿಸುವುದೂ । **ಸ್ವರ್ವಿದಂ**—ಸ್ವರ್ಗವನ್ನು ಸೇರಿಸತಕ್ಕದ್ದೂ ಆದ । **ರಥಂ**—ರಥವನ್ನು । **ಆ ತಿಷ್ಠಸಿ**—ಹತ್ತಿ ಕುಳಿತುಕೊಳ್ಳುತ್ತೀಯೆ.

ಭಾವಾರ್ಥ

ಎಲೈ ಬೃಹಸ್ಪತಿಯೇ, ಪಾಪರೂಪವಾದ ನಿಂದಕರನ್ನೂ ಕಗ್ಗತ್ತಲೆಯನ್ನೂ ಸಹ ನಿನ್ನ ತೇಜಸ್ಸಿನಿಂದ ದೂರೀಕರಿಸಿ, ಕಾಂತಿಯುತವಾದುದೂ, ಯಜ್ಞವನ್ನು ಸೇರಿಸತಕ್ಕದ್ದೂ, ಶತ್ರುಗಳಿಗೆ ಭಯಂಕರವಾದುದೂ, ಶತ್ರುಹಿಂಸಕವಾದುದೂ, ರಾಕ್ಷಸರನ್ನು ನಾಶಮಾಡುವುದೂ, ಮೇಘವನ್ನು ಸೀಳಿ ಬಿಡಿಸುವುದೂ, ಸ್ವರ್ಗವನ್ನು ಸೇರಿಸತಕ್ಕದ್ದೂ ಆದ ರಥವನ್ನು ಹತ್ತಿ ಕುಳಿತುಕೊಳ್ಳುತ್ತೀಯೆ.

## English Translation

Having repelled revilers, and (dispersed) the darkness, you stand, Brihaspati, on the radiant chariot of sacrifice, (which is) formidable (to foes) the humiliator of enemies, the destroyer of evil spirits, the cleaver of the clouds, the attainer of heaven.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಬೃಹಸ್ಪತಿಯ ರಥದ ಗುಣಗಳನ್ನು ವರ್ಣಿಸಿದೆ. ಋಕ್ಕಿನ ಅರ್ಥವೂ ಸ್ಪಷ್ಟವಾಗಿಯೇ ಇದೆ.

**ಪರಿರಪಃ**—ಪರಿತೋ ರಪಃ ಪಾಪರೂಪಂ ರಕ್ಷಃ । ಯದ್ವಾ ರಪ ಲಪ ವ್ಯಕ್ತಾಯಾಂ ವಾಚಿ । ಪರಿವದತೋ ನಿಂದಕಾನ್ । ಈ ಶಬ್ದಕ್ಕೆ ಸಾಯಣರು ಎರಡುವಿಧ ಅರ್ಥಮಾಡಿರುವರು. ರಪಃ ಎಂಬ ಶಬ್ದವು ಪಾಪನಾಮಗಳಲ್ಲಿ ಉಕ್ತವಾಗಿದೆ. ರಪೋ ರಿಪ್ರಮಿತಿ ಪಾಪನಾಮನೀ ಭವತಃ । (ನಿ ೪-೨೧) ಎಂದು ನಿರ್ವಚನವಿದೆ. ಆದ್ದರಿಂದ ಪರಿರಪಃ ಎಂಬ ಶಬ್ದಕ್ಕೆ ಸುತ್ತಲೂ ಇರುವ ಪಾಪರೂಪರಾದ ರಾಕ್ಷಸರನ್ನು ಎಂದು ಒಂದು ವಿಧವಾದ ಅರ್ಥವು; ರಪ ಎಂಬ ಧಾತುವಿಗೆ ಘಟ್ಟಿಯಾಗಿ ಮಾತನಾಡು, ನಿಂದಿಸು ಎಂಬ ಅರ್ಥವಿರುವುದರಿಂದ ಪರಿರಪಃ ಎಂಬ ಶಬ್ದಕ್ಕೆ ಎಲ್ಲೆಲ್ಲಿಯೂ ಅಥವಾ ಎಲ್ಲರನ್ನೂ ನಿಂದಿಸುವವರನ್ನೂ ಅಥವಾ ದೂಷಿಸುವವರನ್ನೂ ಎಂದು ಇನ್ನೊಂದು ವಿಧವಾದ ಅರ್ಥವು.

**ಋತಸ್ಯ**—ಋತ ಶಬ್ದಕ್ಕೆ ಅನೇಕಾರ್ಥವಿದ್ದರೂ ಇಲ್ಲಿ ಯಜ್ಞವೆಂಬ ಅರ್ಥವನ್ನು ಹೇಳಿದೆ. ಋತಶಬ್ದಗಳ ನಾನಾರ್ಥಗಳನ್ನು ಋ. ಸಂ. ಭಾಗ 10 ರಲ್ಲಿ ಪುಟ 143 ಮತ್ತು 673 ರಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ.

**ಗೋತ್ರಭಿದಂ**—ಗೋತ್ರಶಬ್ದವು ಮೇಘನಾಮಗಳಲ್ಲಿ ಪಠಿತವಾಗಿದೆ (ನಿ. ೧-೧೧). ಮೇಘವನ್ನು ಸೀಳುವುದು ಎಂದರ್ಥವು. ಬೃಹಸ್ಪತಿಯ ರಥವು ಅಂತರಿಕ್ಷದಲ್ಲಿ ಸಂಚರಿಸುವಾಗ ಅಲ್ಲಿರುವ ಮೇಘಗಳನ್ನು ಸೀಳಿ ದಾರಿ ಬಿಡಿಸಿಕೊಂಡು ಸಂಚರಿಸುವುದೆಂದಭಿಪ್ರಾಯವು. ಇಂದ್ರನೂ ಮೇಘಗಳನ್ನು ಸೀಳಿ ಉದಕವನ್ನು ಭೂಮಿಯಮೇಲೆ ಬೀಳುವಂತೆ ಮಾಡುವುದರಿಂದ ಗೋತ್ರಭಿದಂ ಎಂಬ ಶಬ್ದವು ಇಂದ್ರನ ಪರವಾಗಿಯೂ ಅನೇಕಕಡೆ ಉಪಯೋಗಿಸಲ್ಪಡುವುದು.

**ಯೋ ಗೋತ್ರಭಿದ್ವಜ್ರಭೃದ್ಯೋ ಹರಿಷ್ಠಾಃ ಸ ಇಂದ್ರ ಚಿತ್ರಾँ ಅಭಿ ತೃಂಧಿ ವಾಜಾನ್ ।**

(ಋ. ಸಂ. ೬-೧೭-೨)

**ಗೋತ್ರಭಿದಂ ಗೋವಿದಂ ವಜ್ರಬಾಹುಂ ಜಯಂತಮಜ್ಮ ಪ್ರಮೃಣಂತಮೋಜಸಾ ।**

(ಋ. ಸಂ. ೧೦-೧೦೩-೬)

ಎಂಬ ಋಕ್ಕುಗಳಲ್ಲಿ ಗೋತ್ರಭಿತ್ ಎಂಬ ಶಬ್ದವು ಮೇಘವನ್ನು (ವಜ್ರಾಯುಧದಿಂದ) ಸೀಳುವವನು ಎಂಬರ್ಥದಲ್ಲಿ ಇಂದ್ರನಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ.

ಸಂಹಿತಾಪಾಠಃ

ಸುನೀತಿಭಿರ್ನಯಸಿ ತ್ರಾಯಸೇ ಜನಂ ಯಸ್ತುಭ್ಯಂ ದಾಶಾನ್ನ ತಮಂಹೋ ಅಶ್ನವತ್ ।

ಬ್ರಹ್ಮದ್ವಿಷಸ್ತಪನೋ ಮನ್ಯುಮೀರಸಿ ಬೃಹಸ್ಪತೇ ಮಹಿ ತತ್ತೇ ಮಹಿತ್ವನಂ॥

ಪದಪಾಠಃ

ಸುನೀತಿಽಭಿಃ । ನಯಸಿ । ತ್ರಾಯಸೇ । ಜನಂ । ಯಃ । ತುಭ್ಯಂ । ದಾಶಾತ್ । ನ । ತಂ । ಅಂಹಃ । ಅಶ್ನವತ್ ।

ಬ್ರಹ್ಮಽದ್ವಿಷಃ । ತಪನಃ । ಮನ್ಯುಽಮೀಃ । ಅಸಿ । ಬೃಹಸ್ಪತೇ । ಮಹಿ । ತತ್ । ತೇ । ಮಹಿಽತ್ವನಂ ॥

ಸಾಯಣಭಾಷ್ಯಂ

ಹೇ ಬೃಹಸ್ಪತೇ ಸುನೀತಿಭಿಃ । ಶೋಭನಂ ನೀತಯೋ ಯೇಷು ತೇ ಸುನೀತಯಃ ಸನ್ಮಾರ್ಗಾಃ । ತೈರ್ಜನಂ ನಯಸಿ । ಅಪೇಕ್ಷಿತಫಲಂ ಪ್ರಾಪಯಸಿ । ತ್ರಾಯಸೇ । ಜನಮಾಪದ್ಭ್ಯೋ ರಕ್ಷಸಿ ಚ । ಯೋ ಯಜಮಾನಸ್ತುಭ್ಯಂ ಹವಿರ್ಲಕ್ಷಣಮನ್ನಂ ದಾಶಾತ್ ಪ್ರಯಚ್ಛೇತ್ ॥ ದಾಶೃ ದಾನೇ । ಲೇಟ್ಯಡಾಗಮಃ ॥ ತಮಂಹಃ ಪಾಪಂ ಪಾಪರೂಪಂ ದಾರಿದ್ರ್ಯಂ ವಾ ನಾಶ್ನವತ್ । ನ ಪ್ರಾಪ್ನುಯಾತ್ ॥ ಅಶ್ನೋತೇರ್ಲೇಟಿ ವ್ಯತ್ಯಯೇನ ಪರಸ್ಮೈಪದಂ । ಅಡಾಗಮಃ ॥ ಬ್ರಹ್ಮದ್ವಿಷೋ ಬ್ರಾಹ್ಮಣಾನಾಂ ಮಂತ್ರಾಣಾಂ ವಾ ದ್ವೇಷ್ಟ್ರೂಸ್ತಪನಸ್ತಾಪಕೋಽಸಿ । ಕಿಂಚ ಮನ್ಯುಮೀರ್ಮನ್ಯೋಃ ಕ್ರೋಧಸ್ಯ ಪರೇಷಾಂ ಜ್ಞಾನಸ್ಯ ವಾ ಹಿಂಸಕೋಽಸಿ ॥ ಮೀಞ್ ಹಿಂಸಾಯಾಂ । ಕ್ವಿಪ್ ॥ ತೇ ತವ ತತ್ತಾದೃಶಂ ಮಹಿ ಮಹತ್ ಪ್ರಭೂತಂ ಮಹಿತ್ವನಂ ಮಾಹಾತ್ಮ್ಯಮಸ್ತಿ ॥

ಪ್ರತಿಪದಾರ್ಥ

ಬೃಹಸ್ಪತೇ—ಎಲೈ ಬೃಹಸ್ಪತಿಯೇ । ಸುನೀತಿಭಿಃ—ಸನ್ಮಾರ್ಗಗಳಿಂದ (ಸದುಪದೇಶಗಳಿಂದ) । ಜನಂ—ಮಾನವರನ್ನು । ನಯಸಿ—ಒಯ್ಯುತ್ತೀಯೆ । ತ್ರಾಯಸೇ—(ಆಪತ್ತಿನಿಂದ) ರಕ್ಷಿಸುತ್ತೀಯೆ । ಯಃ—ಯಾವ ಯಜಮಾನನು । ತುಭ್ಯಂ—ನಿನಗೆ । ದಾಶಾತ್—ಹವಿಸ್ಸಿನರೂಪದ ಅನ್ನವನ್ನು ಅರ್ಪಿಸುವನೋ । ತಂ—ಅವನನ್ನು । ಅಂಹಃ—ಪಾಪವು ಅಥವಾ ದಾರಿದ್ರ್ಯವು । ನ ಅಶ್ನವತ್—ಸಮೀಪಿಸುವುದಿಲ್ಲ (ಅಂಟುವುದಿಲ್ಲ) । ಬ್ರಹ್ಮದ್ವಿಷಃ—ಮಂತ್ರಗಳನ್ನು ದ್ವೇಷಿಸುವವನಿಗೆ । ತಪನಃ—ದಹಿಸುವವನಾಗಿ । ಅಸಿ—ಇದ್ದೀಯೆ । ಮನ್ಯುಮೀಃ—ಕ್ರೋಧವನ್ನು ದಂಡಿಸುತ್ತೀಯೆ । ತತ್—ಇಂತಹುದೇ । ತೇ—ನಿನ್ನ । ಮಹಿ—ಅತ್ಯಧಿಕವಾದ । ಮಹಿತ್ವನಂ—ಮಾಹಾತ್ಮ್ಯವಾಗಿದೆ

### ಭಾವಾರ್ಥ

ಎಲೈ ಬೃಹಸ್ಪತಿಯೇ, ನೀನು ಸದುಪದೇಶಗಳಿಂದ ಮಾನವವರನ್ನು ಸನ್ಮಾರ್ಗಕ್ಕೆ ಒಯ್ಯುತ್ತೀಯೆ. ಅವರನ್ನು ಆಪತ್ತಿನಿಂದ ರಕ್ಷಿಸುತ್ತೀಯೆ. ಯಾವ ಯಜಮಾನನು ನಿನಗೆ ಹವಿಸ್ಸಿನ ರೂಪದ ಅನ್ನವನ್ನು ಅರ್ಪಿಸುವನೋ ಅವನನ್ನು ಪಾಪವು ಅಂಟುವುದಿಲ್ಲ. ನೀನು ಮಂತ್ರದ್ವೇಷಿಯನ್ನು ದಹಿಸುತ್ತೀಯೆ. ಕ್ರೋಧವನ್ನು ದಂಡಿಸುತ್ತೀಯೆ. ಇದೇ ನಿನ್ನ ಅಧಿಕವಾದ ಮಹಿಮೆಯು.

### English Translation

You lead men, Brihaspati, by virtuous instructions; you preserve them (from calamity): sin will never overtake him who presents (offerings) to you: you are the afflicter of him who hates (holy) prayers; you are the punisher of wrath: such is your great mightiness.

### ವಿಶೇಷವಿಷಯಗಳು

ಅಂಹಃ—ಪಾಪಂ ಪಾಪರೂಪಂ ದಾರಿದ್ರ್ಯಂ ವಾ । ಪಾಪ ಅಥವಾ ಪಾಪದ ಫಲವಾದ ದಾರಿದ್ರ್ಯವು ಎಂದರೆ ಬಡತನವು. ಅಂಹತಿಶ್ಚಾಂಹಶ್ಚಾಂಹುಶ್ಚ ಹಂತೇರ್ನಿರೂಢೋಪದಾದ್ವಿಪರೀತಾತ್ ಎಂದು ನಿರ್ವಚನ ವಾಕ್ಯವಿದೆ (ನಿ. ೪-೨೫) ಎಂದರೆ ಅಂಹತಿಃ, ಅಂಹಃ, ಅಂಹುಃ ಎಂಬ ಮೂರು ಶಬ್ದಗಳೂ ಹನ ಹಿಂಸಾಗತ್ಯೋಃ ಎಂಬ ಧಾತುವಿನಿಂದ ನಿಷ್ಪನ್ನವಾಗಿವೆ. ಧಾತುವಿನ ನಾಮುಪದವನ್ನು ಸೂಚಿಸುವ ಅಪ್ರತ್ಯಯವು (ನವ್+ಅ =ನಮ ಎಂಬಂತೆ) ಧಾತುವಿನ ಮುಂದೆ ಸೇರುವುದಕ್ಕೆ ಬದಲಾಗಿ ವ್ಯತ್ಯಸ್ತದಿಂದ ಹಿಂದೆ ಎಂದರೆ ಶಬ್ದದ ಪ್ರಾರಂಭದಲ್ಲಿ ಸೇರಿ ಈ ಶಬ್ದಗಳಾಗಿವೆ. ಈ ಮೂರು ಶಬ್ದಗಳೂ ಪಾಪವೆಂಬ ಅರ್ಥದಲ್ಲಿ ಪ್ರಯುಕ್ತವಾಗಿವೆ.

ನ ತಮಂಹೋ ನ ದುರಿತಂ ದೇವಾಸೋ ಅಷ್ಟ ಮರ್ತ್ಯಂ ।

(ಋ. ಸಂ. ೧೦-೧೨೬-೧)

ಸ ತೂತಾವ ನೈನಮಶ್ನೋತ್ಯಂಹತಿರಗ್ನೇ ಸಖ್ಯೇ ಮಾ ರಿಷಾಮ ವಯಂ ತವ ।

(ಋ. ಸಂ. ೧-೯೪-೨)

ಅ ವೋಽರ್ವಾಚೀ ಸುಮತಿರ್ವವೃತ್ಯಾದಂಹೋಶ್ಚಿದ್ಯಾ ವರಿವೋವಿತ್ತರಾಸತ್ ।

(ಋ. ಸಂ. ೧-೧೦೭-೧)

ಎಂಬ ಋಕ್ಕುಗಳಲ್ಲಿ ಅಂಹಃ, ಅಂಹತಿಃ, ಅಂಹುಃ ಎಂಬ ಶಬ್ದಗಳು ಕ್ರಮವಾಗಿ ಪಾಪವೆಂಬ ಅರ್ಥದಲ್ಲಿ ಪ್ರಯುಕ್ತವಾಗಿವೆ.

ಬ್ರಹ್ಮದ್ವಿಷಃ—ಬ್ರಾಹ್ಮಣಾನಾಂ ಮಂತ್ರಾಣಾಂ ವಾ ದ್ವೇಷ್ಟುಃ । ಬ್ರಾಹ್ಮಣರನ್ನೂ ಅಥವಾ ಮಂತ್ರಗಳನ್ನೂ ದ್ವೇಷಿಸುವವನ ಎಂದರ್ಥವು. ಬ್ರಹ್ಮಶಬ್ದವು ಅನ್ನವೆಂಬರ್ಥದಲ್ಲಿಯೂ ಮಂತ್ರವೆಂಬರ್ಥದಲ್ಲಿಯೂ ಉಪಯೋಗಿಸಲ್ಪಡುವುದು.

ಈ ಋಕ್ಕಿನಲ್ಲಿ ಬೃಹಸ್ಪತಿಯ ಅನೇಕ ವಿಧವಾದ ಮಹಾತ್ಮ್ಯವು ವರ್ಣಿತವಾಗಿದೆ. ಬೃಹಸ್ಪತಿಯು ಜನರಿಗೆ ಸದುಪದೇಶಮಾಡಿ ಅವರು ಯಜ್ಞಾನುಷ್ಠಾನಾದಿ ಸತ್ಕರ್ಮಗಳನ್ನು ಮಾಡುವಂತೆ ಮಾಡಿ ಅವರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುವನು, ಜನರನ್ನು ಆಪತ್ತಿನಿಂದ ಎಂದರೆ ಕಷ್ಟಗಳಿಂದ ರಕ್ಷಿಸಿ ಕಾಪಾಡುವನು, ಬೃಹಸ್ಪತಿಗೆ ಯಜ್ಞಾದಿಗಳಲ್ಲಿ ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ಪಾಪವಾಗಲಿ, ದಾರಿದ್ರ್ಯವಾಗಲಿ ಉಂಟಾಗುವುದಿಲ್ಲ, ಮಂತ್ರಗಳನ್ನೂ ದ್ವೇಷಿಸುವವನನ್ನೂ ಎಂದರೆ ಅಸುರರನ್ನೂ ಅಥವಾ ದುಷ್ಟಜನರನ್ನೂ ಶಿಕ್ಷಿಸುವನು, ಕ್ರೋಧವೆಂಬ ದುರ್ಗುಣವನ್ನು ನಾಶಮಾಡುವನು ಅಥವಾ ಶತ್ರುಗಳ ಬುದ್ಧಿಯನ್ನು ಕೆಡಿಸುವನು, ಈ ವಿಧವಾದ ಗುಣಗಳಿಂದ ಕೂಡಿರುವುದೇ ಬೃಹಸ್ಪತಿಯ ಮಹಿಮೆಯು ಎಂದು ಋಷಿಯು ಈ ಋಕ್ಕಿನಲ್ಲಿ ವರ್ಣಿಸಿರುವನು.

---

ಸಂಹಿತಾಪಾಠಃ

ನ ತಮಂಹೋ ನ ದುರಿತಂ ಕುತಶ್ಚನ ನಾರಾತಯಸ್ತಿತಿರುರ್ನ ದ್ವಯಾವಿನಃ ।

ವಿಶ್ವಾ ಇದಸ್ಮಾದ್ಧ್ವರಸೋ ವಿ ಬಾಧಸೇ ಯಂ ಸುಗೋಪಾ ರಕ್ಷಸಿ ಬ್ರಹ್ಮಣಸ್ಪತೇ ॥ ೫ ॥

ಪದಪಾಠಃ

ನ । ತಂ । ಅಂಹಃ । ನ । ದುಃಽಇತಂ । ಕುತಃ । ಚನ । ನ । ಅರಾತಯಃ । ತಿತಿರುಃ । ನ । ದ್ವಯಾವಿನಃ ।

ವಿಶ್ವಾಃ । ಇತ್ । ಅಸ್ಮಾತ್ । ಧ್ವರಸಃ । ವಿ । ಬಾಧಸೇ । ಯಂ । ಸುಽಗೋಪಾಃ । ರಕ್ಷಸಿ । ಬ್ರಹ್ಮಣಃ । ಪತೇ ॥ ೫ ॥

ಸಾಯಣಭಾಷ್ಯಂ

ಹೇ ಬ್ರಹ್ಮಣಸ್ಪತೇ ಸುಗೋಪಾಃ ಸುಷ್ಠು ಪಾಲಯಿತಾ ತ್ವಂ ಯಂ ಜನಂ ರಕ್ಷಸಿ ಪಾಲಯಸಿ ತಂ ಜನಮಂಹ ಆಹಂತವ್ಯಂ ದುಃಖಂ ನ ಬಾಧತೇ । ದುರಿತಂ ತತ್ಕಾರಣಂ ಪಾಪಂ ಚ ನ ಬಾಧತೇ । ಅರಾತಯೋ ಹಿಂಸಕಾಸ್ತಂ ಜನಂ ಕುತಶ್ಚನ ಸರ್ವಾಸು ದಿಕ್ಷು ನ ತಿತಿರುಃ ॥ ತಿರತಿರ್ಹಿಂಸಾಕರ್ಮಾ । ಲಿಟ್ ॥ ನ ಹಿಂಸಂತಿ । ತಥಾ ದ್ವಯಾವಿನಃ । ಮನಸ್ಯನ್ಯತ್ಕ್ರಿಯಾಯಾಂ ಚಾನ್ಯದಿತ್ಯೇತದ್ದ್ವಯಂ ಯೇಷಾಮಸ್ತಿ ತೇ ದ್ವಯಾವಿನೋ ವಂಚಕಾಃ । ತೇಽಪಿ ತಂ ಜನಂ ನ ಬಾಧಂತೇ । ಕಿಂಚ ಧ್ವರಸೋ ಹಿಂಸಿಕಾ ವಿಶ್ವಾಃ ಸರ್ವಾಃ ಸೇನಾಸ್ತ್ವದರ್ಥಂ ವಿಬಾಧಸೇ । ವಿಶೇಷೇಣ ಬಾಧಸ ಏವ ॥

ಪ್ರತಿಪದಾರ್ಥ

ಬ್ರಹ್ಮಣಸ್ಪತೇ—ಎಲೈ ಬ್ರಹ್ಮಣಸ್ಪತಿಯೇ । ಸುಗೋಪಾಃ—ಶ್ರೇಷ್ಠವಾದ ರಕ್ಷಕನಾದ ನೀನು । ಯಂ—ಯಾವ ಮಾನವನನ್ನು । ರಕ್ಷಸಿ—ಕಾಪಾಡುತ್ತೀಯೋ । ತಂ—ಆ ಮಾನವನನ್ನು । ಅಂಹಃ—ದುಃಖವು ।

ನ (ಬಾಧತೇ)—ಬಾಧಿಸುವುದಿಲ್ಲ । ದುರಿತಂ—ಪಾಪವು । ನ—ಬಾಧಿಸುವುದಿಲ್ಲ । ಅರಾತಯಃ—ಹಿಂಸಕರಾದ ಶತ್ರುಗಳು । ಕುತಶ್ಚನ—ಯಾವದಿಕ್ಕಿನಲ್ಲೂ । ನ ತಿತಿರುಃ—ಹಿಂಸಿಸಲಾರರು । ದ್ವಯಾವಿನಃ—ವಂಚಕರು । ನ—ಹಿಂಸಿಸಲಾರರು । ಧ್ವರಸಃ—ಹಿಂಸೆಯನ್ನುಂಟುಮಾಡತಕ್ಕ । ವಿಶ್ವಾಃ ಇತ್—ಸಕಲವಾದ ದುಷ್ಟಸಮಾಹವನ್ನೂ । ವಿ ಬಾಧಸೇ—ನೀನು ಹಿಂಸಿಸಿ ಓಡಿಸುತ್ತೀಯೆ.

### ಭಾವಾರ್ಥ

ಎಲೈ ಬ್ರಹ್ಮಣಸ್ಪತಿಯೇ, ಉತ್ತಮವಾದ ರಕ್ಷಕನಾದ ನೀನು ಯಾವ ಮಾನವನನ್ನು ಕಾಪಾಡುತ್ತೀಯೋ ಆ ಮಾನವನನ್ನು ಪಾಪವು ಬಾಧಿಸುವುದಿಲ್ಲ. ಅವನನ್ನು ದುಃಖವಾಗಲಿ, ಹಿಂಸಕರೂ, ವಂಚಕರೂ ಆದ ಶತ್ರುಗಳಾಗಲಿ ಹಿಂಸಿಸಲಾರರು. ಅವನಿಗೆ ಹಿಂಸಕವಾದ ಸಕಲದುಷ್ಟಸಮೂಹವನ್ನೂ ಹಿಂಸಿಸಿ ಓಡಿಸುತ್ತೀಯೆ .

### English Translation

The man whom you, Brahmanaspathi, a kind protector, defend, neither sorrow nor sin, nor adversaries, nor dissemblers ever harm, for you drive away from him all injurious (things).

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಬ್ರಹ್ಮಣಸ್ಪತಿಶಬ್ದಪ್ರಯೋಗವಿರುವುದರಿಂದ ಈ ಋಕ್ಕಿಗೆ ಬ್ರಹ್ಮಣಸ್ಪತಿಯೇ ಪ್ರತಿಪಾದ್ಯನು. ಇವನಿಂದ ರಕ್ಷಿತನಾದ ಮಾನವನಿಗೆ ದುಃಖದಾರಿದ್ರ್ಯಗಳು ಸಂಭವಿಸುವುದಿಲ್ಲ, ಶತ್ರುಗಳು ಇವನನ್ನು ಹಿಂಸಿಸುವುದಿಲ್ಲ, ವಂಚಕರು, ಇತರ ದುಷ್ಟಜನರು ಮೊದಲಾದವರ ಬಾಧೆಗೆ ಒಳಗಾಗುವುದಿಲ್ಲ ಎಂದು ಬ್ರಹ್ಮಣಸ್ಪತಿಯ ಮಹಿಮೆಯನ್ನು ಇಲ್ಲಿ ವರ್ಣಿಸಿದೆ.

ಅಂಹಃ—ಈ ಶಬ್ದದ ಅರ್ಥವಿವರಣೆಯನ್ನು ಹಿಂದಿನ ಋಕ್ಕಿನಲ್ಲಿ ವಿವರಿಸಿದೆ. ಅದನ್ನು ಅಲ್ಲಿ ನೋಡಿ ತಿಳಿದುಕೊಳ್ಳಬಹುದು..

ದುರಿತಂ—ದುರಿತಶಬ್ದಕ್ಕೆ ಯಾಸ್ಕರು, ದುರಿತಂ । ದುರ್ಗತಿಗಮನಾನಿ ಸರ್ವಾಣಿ ಎಂದು ನಿರ್ವಚನವನ್ನು ಹೇಳಿರುವರು (ನಿ. ೬-೧೨). ಎಂದರೆ ದುರ್ಗತಿಪ್ರಾಪಕಾಣಿ ಕರ್ಮಾಣಿ—ದುರ್ಗತಿಯನ್ನು ಉಂಟುಮಾಡುವ ಕರ್ಮಗಳು ಎಂದರೆ ಪಾಪಕೃತ್ಯಗಳು ಎಂದಭಿಪ್ರಾಯವು.

ದ್ವಯಾವಿನಃ— ಮನಸ್ಯನ್ಯತ್ಕ್ರಿಯಾಯಾಂ ಚಾನ್ಯದಿತ್ಯೇತದ್ದ್ವಯಂ ಯೇಷಾಮಸ್ತಿ ತೇ ದ್ವಯಾವಿನೋ ವಂಚಕಾಃ । ಮನಸ್ಸಿನಲ್ಲಿ ಕೆಡಕನ್ನು ಮಾಡಬೇಕೆಂಬ ಕೆಟ್ಟಬುದ್ಧಿಯೂ ಬಾಯಲ್ಲಿ ಮಾತ್ರ ಒಳ್ಳೆಯ ಮಾತುಗಳನ್ನಾಡುತ್ತಾ ಸಜ್ಜನರಂತೆ ನಟಿಸುವ ವಂಚಕರಿಗೆ ದ್ವಯಾವಿನಃ ಎಂದು ಹೆಸರು. ಮನಸ್ಸಿನಲ್ಲಿಯೂ, ಕಾರ್ಯದಲ್ಲಿಯೂ ಒಂದೇ ಭಾವನೆಯುಳ್ಳವರು ಸಜ್ಜನರು ಇದಕ್ಕೆ ವ್ಯತಿರಿಕ್ತವಾಗಿ ನಡೆಯುವವರು ದುಷ್ಟರು, ವಂಚಕರು.

ಧ್ವರಸಃ—ಧ್ವರತಿರ್ಹಿಂಸಾಕರ್ಮಾ (ನಿ. ೧-೮) ಎಂದು ನಿರುಕ್ತವಚನವಿರುವುದರಿಂದ ಧ್ವರಸಃ ಎಂದರೆ ಹಿಂಸೆಗಳು ಅಥವಾ ಹಿಂಸೆಯನ್ನುಂಟುಮಾಡುವವರು.

———— :o: ————

ಸಂಹಿತಾಪಾಠಃ

ತ್ವಂ ನೋ ಗೋಪಾಃ ಪಥಿಕೃದ್ವಿಚಕ್ಷಣಸ್ತವ ವ್ರತಾಯ ಮತಿಭಿರ್ಜರಾಮಹೇ ।
ಬೃಹಸ್ಪತೇ ಯೋ ನೋ ಅಭಿ ಹ್ವರೋ ದಧೇ ಸ್ವಾ ತಂ ಮರ್ಮರ್ತು ದುಚ್ಛುನಾ ಹರಸ್ವತೀ ॥ ೬ ॥

ಪದಪಾಠಃ

ತ್ವಂ । ನಃ । ಗೋಪಾಃ । ಪಥಿಽಕೃತ್ । ವಿಽಚಕ್ಷಣಃ । ತವ । ವ್ರತಾಯ । ಮತಿಽಭಿಃ । ಜರಾಮಹೇ ।
ಬೃಹಸ್ಪತೇ । ಯಃ । ನಃ । ಅಭಿ । ಹ್ವರಃ । ದಧೇ । ಸ್ವಾ । ತಂ । ಮರ್ಮರ್ತು । ದುಚ್ಛುನಾ । ಹರಸ್ವತೀ ॥

ಸಾಯಣಭಾಷ್ಯಂ

ಹೇ ಬೃಹಸ್ಪತೇ ತ್ವಂ ನೋಽಸ್ಮಾಕಂ ಗೋಪಾಃ ಪಾಲಯಿತಾ ಪಥಿಕೃತ್ ಸನ್ಮಾರ್ಗಸ್ಯ ಭವಸಿ ವಿಚಕ್ಷಣೋ ವಿಶೇಷೇಣ ದ್ರಷ್ಟಾ ಸರ್ವಜ್ಞಸ್ತ್ವಂ । ತವ ವ್ರತಾಯ ತ್ವತ್ಸಂಬಂಧಿನೇ ಯಜ್ಞಾಯ ಮತಿಭಿಃ ಸ್ತೋತ್ರೈರ್ಜರಾಮಹೇ । ಸ್ತುಮಃ ॥ ಜರತಿಃ ಸ್ತುತಿಕರ್ಮಾ ॥ ಯಃ ಪುಮಾನ್ ನೋಽಸ್ಮಾನಭಿ ಅಭಿಲಕ್ಷ್ಯ ಹ್ವರಃ ॥ ಹ್ವೃ ಕೌಟಿಲ್ಯೇ । ಭಾವೇಽಸುನ್ ॥ ಕೌಟಿಲ್ಯಂ ದಧೇ ವಿದಧಾತಿ ತಂ ಸ್ವಾ ಸ್ವೀಯಾ ದುಚ್ಛುನಾ ದುರ್ಬುದ್ಧಿರ್ಹರಸ್ವತೀ ವೇಗವತೀ ಸತೀ ಮರ್ಮರ್ತು । ಮೋಚಯತು ॥ ಮೃಙ್ ಪ್ರಾಣತ್ಯಾಗೇ । ಅಂತರ್ಭಾವಿತಣ್ಯರ್ಥಸ್ಯ ಯಙ್‌ಲುಕಿ ಲೋಟಿ ರೂಪಂ ॥

ಪ್ರತಿಪದಾರ್ಥ

ಬೃಹಸ್ಪತೇ—ಎಲೈ ಬೃಹಸ್ಪತಿಯೇ । ತ್ವಂ—ನೀನು । ನಃ—ನಮಗೆ । ಗೋಪಾಃ—ಪಾಲಕನೂ । ಪಥಿಕೃತ್—ಮಾರ್ಗದರ್ಶಕನೂ ಆಗಿದ್ದೀಯೆ । ವಿಚಕ್ಷಣಃ—ನೀನು ಸರ್ವಜ್ಞನು । ತವ—ನಿನ್ನನ್ನುದ್ದೇಶಿಸಿದ । ವ್ರತಾಯ—ಯಜ್ಞಕ್ಕಾಗಿ । ಮತಿಭಿಃ—ಸ್ತೋತ್ರಗಳಿಂದ । ಜರಾಮಹೇ—ಪ್ರಾರ್ಥಿಸುತ್ತೇವೆ । ಯಃ—ಯಾವನು । ನಃ ಅಭಿ—ನಮ್ಮನ್ನು ಕುರಿತು । ಹ್ವರಃ—ಮೋಸವನ್ನು । ದಧೇ—ಆಚರಿಸುವನೋ । ತಂ—ಆ ದುಷ್ಟನನ್ನು । ಸ್ವಾ ದುಚ್ಛುನಾ—ಅವನ ದುರ್ಬುದ್ಧಿಯೇ । ಹರಸ್ವತೀ—ತೀವ್ರವಾದ ಶಕ್ತಿಯುಳ್ಳದ್ದಾಗಿ । ಮರ್ಮರ್ತು—ನಾಶಮಾಡಲಿ.

ಭಾವಾರ್ಥ

ಎಲೈ ಬೃಹಸ್ಪತಿಯೇ, ನೀನು ನಮಗೆ ಪಾಲಕನೂ ಮಾರ್ಗದರ್ಶಕನೂ ಆಗಿದ್ದೀಯೆ. ನೀನು ಸರ್ವಜ್ಞನು. ನಿನ್ನನ್ನುದ್ದೇಶಿಸಿದ ಯಾಗಕ್ಕಾಗಿ ಸ್ತೋತ್ರಗಳಿಂದ ಪ್ರಾರ್ಥಿಸುತ್ತೇವೆ ಯಾವನು ನಮಗೆ ಮೋಸವನ್ನಾಚರಿಸುವನೋ ಆ ದುಷ್ಟನನ್ನು ಅವನ ದುರ್ಬುದ್ಧಿಯೇ ತೀವ್ರವಾದ ಶಕ್ತಿಯುಳ್ಳದ್ದಾಗಿ ನಾಶಮಾಡಲಿ.

## English Translation

You, Brihaspati, are our protector, and the guide of (our) path: (you are) the discerner (of all things): we worship with praises for your adoration: may his own precipitate malice involve him (in destruction) who practises deceit against us.

### ವಿಶೇಷವಿಷಯಗಳು

**ಪಥಿಕೃತ್**—ಸನ್ಮಾರ್ಗಸ್ಯ ಕರ್ತಾ । ಜನರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುವವನು, ಸನ್ಮಾರ್ಗ ದರ್ಶಕನು.

**ವ್ರತಾಯ**—ತ್ವತ್ಸಂಬಂಧಿನೇ ಯಜ್ಞಾಯ ! ನಿನ್ನನ್ನುದ್ದೇಶಿಸಿ ಮಾಡುವ ಯಜ್ಞವೆಂದರ್ಥವು. ವ್ರತ-ಮಿತಿ ಕರ್ಮನಾಮ ವೃಣೋತೀತಿ ಸತಃ (ನಿ. ೨-೧೩) ಎಂದು ನಿರ್ವಚನವಿರುವುದು. ಎಂದರೆ, ವ್ರತಶಬ್ದಕ್ಕೆ ಕರ್ಮವೆಂಬ ಅರ್ಥವಿರುವುದು. ಏಕೆಂದರೆ ಈ ಶಬ್ದವು ವೃಞ್ ವರಣೇ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಆವರಿಸು ವುದು ಎಂಬರ್ಥವನ್ನು ಕೊಡುವುದು. ಒಳ್ಳೆಯಕರ್ಮವಾಗಲಿ, ಕೆಟ್ಟಕರ್ಮವಾಗಲಿ ಕರ್ತೃವನ್ನು ಯಾವಾಗಲೂ ಆವರಿಸಿ (ಅಂಟಿಕೊಂಡು) ಬರುವುದರಿಂದ ವ್ರತಕ್ಕೆ ಕರ್ಮವೆಂದು ಹೆಸರು. ಅಥವಾ—ಅನ್ನಮಪಿ ವ್ರತಮುಚ್ಯತೇ ಯದಾ ವೃಣೋತಿ ಶರೀರಂ । ಅನ್ನಕ್ಕೂ ವ್ರತವೆಂದು ಹೆಸರು. ಏಕೆಂದರೆ ಅನ್ನವು (ಆಹಾರವು) ಶರೀರವನ್ನು ವ್ಯಾಪಿಸಿರುವುದು. ಎಂದರೆ ಆಹಾರವು ರಕ್ತಗತವಾಗಿ ಶರೀರದಲ್ಲೆಲ್ಲಾ ವ್ಯಾಪಿಸಿ ಪುಷ್ಟಿಯನ್ನುಂಟುಮಾಡುವುದು. ಆದ್ದರಿಂದ ವ್ರತಶಬ್ದಕ್ಕೆ ಅನ್ನವೆಂದೂ ಅರ್ಥವು, ಮತ್ತು ಇದಮಪೀತರತ್ ವ್ರತಮೇತಸ್ಮಾದೇವ ನಿವೃತ್ತಿಕರ್ಮ ವಾರಯತೀತಿ ಸತಃ । ವ್ರತಶಬ್ದಕ್ಕೆ ಸಾಧಾರಣ ಕರ್ಮವೆಂಬರ್ಥವಲ್ಲದೆ ನಿವೃತ್ತಿಕರ್ಮವೆಂದೂ ಅರ್ಥವಾಗುವುದು. ಏಕೆಂದರೆ ಈ ಶಬ್ದವು ಈ ಅರ್ಥದಲ್ಲಿ ನಿವಾರಣೆಮಾಡು, ತಡೆಗಟ್ಟು ಎಂಬರ್ಥವಿರುವ ವಾರಯತಿಧಾತುವಿನಿಂದ ನಿಷ್ಪನ್ನವಾಗಿ ಕೆಟ್ಟಕೆಲಸಗಳಲ್ಲಿ ಎಂದರೆ ಸ್ತ್ರೀಮೋಹಾದಿಗಳಲ್ಲಿ ಮನಸ್ಸು ಪ್ರವೃತ್ತವಾಗದಂತೆ ತಡೆಗಟ್ಟುವುದರಿಂದ ವ್ರತವೆಂದರೆ ನಿವೃತ್ತಿಕರ್ಮವೆಂದೂ ಅರ್ಥವು ಎಂದು ವ್ರತಶಬ್ದಕ್ಕೆ ಯಾಸ್ಕರು ಮೂರು ವಿಧವಾದ ಅರ್ಥವಿವರಣೆ ಯನ್ನು ಮಾಡಿರುವರು.

**ಮತಿಭಿಃ**—ಸ್ತೋತ್ರೈಃ । ಮನನರೂಪವಾದ ಮಂತ್ರಗಳಿಂದ ಅಥವಾ ಸ್ತೋತ್ರಗಳಿಂದ ಎಂದಭಿ ಪ್ರಾಯವು.

**ಹ್ವರಃ**—ಹ್ವರಃ ಶಬ್ದವು ಕ್ರೋಧನಾಮಗಳಲ್ಲಿ ಪಠಿತವಾಗಿದೆ (ನಿ. ೩-೯) ಈ ಶಬ್ದವು ಹ್ವೃ ಕೌಟಿಲ್ಯೇ ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಹ್ವರಶಬ್ದಕ್ಕೆ ಕುಟಿಲ (ವಂಚಕ) ಸ್ವಭಾವ, ಕೆಟ್ಟಬುದ್ಧಿ ಕೋಪ ಎಂಬರ್ಥಗಳನ್ನು ಹೇಳಬಹುದು.

ಸಂಹಿತಾಪಾಠಃ

ಉತ ವಾ ಯೋ ನೋ ಮರ್ಚಯಾದನಾಗಸೋಽರಾತೀವಾ ಮರ್ತಃ ಸಾನುಕೋ ವೃಕಃ ।
ಬೃಹಸ್ಪತೇ ಅಪ ತಂ ವರ್ತಯಾ ಪಥಃ ಸುಗಂ ನೋ ಅಸ್ಯೈ ದೇವವೀತಯೇ ಕೃಧಿ ॥ ೭ ॥

ಪದಪಾಠಃ

ಉತ । ವಾ । ಯಃ । ನಃ । ಮರ್ಚಯಾತ್ । ಅನಾಗಸಃ । ಅರಾತಿಽವಾ । ಮರ್ತಃ । ಸಾನುಕಃ । ವೃಕಃ ।
ಬೃಹಸ್ಪತೇ । ಅಪ । ತಂ । ವರ್ತಯ । ಪಥಃ । ಸುಽಗಂ । ನಃ । ಅಸ್ಯೈ । ದೇವಽವೀತಯೇ । ಕೃಧಿ ॥ ೭ ॥

ಸಾಯಣಭಾಷ್ಯಂ

ಉತ ವಾ ಅಪಿ ಚ ಹೇ ಬೃಹಸ್ಪತೇ ಅರಾತೀವಾಭಿಮುಖಮಾಗಮನವಾನ್ ಸಾನುಕಃ ಸಮುಚ್ಛ್ರಿತಃ ॥ ಸಾನು ಸಮುಚ್ಛ್ರಿತಮಿತಿ ಯಾಸ್ಕಃ । ನಿ. ೨-೨೪ ॥ ವೃಕಃ ॥ ವೃಕ ಆದಾನೇ ॥ ಧನಾದೀನಾಮಾದಾತಾ ಯೋ ಮರ್ತೋ ಮನುಷ್ಯೋಽನಾಗಸೋಽಪರಾಧಹೀನಾನ್ನೋಽಸ್ಮಾನ್ ಮರ್ಚಯಾತ್ ॥ ಮರ್ಚಯತಿರ್ಹಿಂಸಾಕರ್ಮಾ ॥ ಹಿಂಸ್ಯಾತ್ । ತಂ ಮರ್ತಂ ಪಥೋ ವೈದಿಕಾನ್ಮಾರ್ಗಾದಪವರ್ತಯ । ನಿವರ್ತಯ । ನೋಽಸ್ಮಾಕಮಸ್ಯೈ ದೇವವೀತಯೇ । ದೇವಾನಾಂ ವೀತಿಂ ಸೋಮ ಭಕ್ಷಣಮರ್ಚಯತೀತಿ ದೇವವೀತಿರ್ಯಜ್ಞಃ । ಅಸ್ಯೈ ದೇವವೀತಯೇಽಸ್ಮೈ ಯಜ್ಞಾಯ ನೋಽಸ್ಮಾಕಂ ಸುಗಂ ಸುಷ್ಠು ಗಂತವ್ಯಂ ಮಾರ್ಗಂ ಕೃಧಿ । ಕುರು । ಯಜ್ಞಾನುಷ್ಠಾನಾಯ ಸುಮತಿಂ ದೇಹೀತ್ಯರ್ಥಃ ॥

ಪ್ರತಿಪದಾರ್ಥ

**ಉತ ವಾ**— ಮತ್ತು । **ಬೃಹಸ್ಪತೇ**— ಎಲೈ ಬೃಹಸ್ಪತಿಯೇ । **ಅರಾತೀವಾ**— ನಮಗೆ ಹಿಂಸಕನಾಗಿ ನಮ್ಮನ್ನು ಎದುರಿಸುವವನೂ । **ಸಾನುಕಃ**— ಆತ್ಮಾಭಿಮಾನಿಯೂ । **ವೃಕಃ**— ಚೋರರೂಪನೂ ಆದ । **ಯಃ ಮರ್ತಃ**— ಯಾವ ಮಾನವನು । **ಅನಾಗಸಃ**— ನಿರಪರಾಧಿಗಳಾಗಿದ್ದರೂ ಸಹ । **ನಃ**— ನಮ್ಮನ್ನು । **ಮರ್ಚಯಾತ್**— ಹಿಂಸಿಸುವನೋ । **ತಂ**— ಅವನನ್ನು । **ಪಥಃ**— ವೈದಿಕಮಾರ್ಗದಿಂದ । **ಅಪ ವರ್ತಯ**— ಹಿಂತಿರುಗಿಸು । **ಅಸ್ಯೈ ದೇವವೀತಯೇ**— ಈ ಯಜ್ಞಕ್ಕೆ । **ನಃ**— ನಮಗೆ । **ಸುಗಂ**— ಶ್ರೇಷ್ಠವಾದ ಮಾರ್ಗವನ್ನು । **ಕೃಧಿ**— ಉಂಟುಮಾಡು

ಭಾವಾರ್ಥ

ಎಲೈ ಬೃಹಸ್ಪತಿಯೇ, ನಮಗೆ ಹಿಂಸಕನಾಗಿ ನಮ್ಮನ್ನು ಎದುರಿಸುವವನೂ, ಆತ್ಮಾಭಿಮಾನಿಯೂ, ಚೋರಪರನೂ ಆದ ಯಾವ ಮಾನವನು ನಿರಪರಾಧಿಗಳಾಗಿದ್ದರೂ ಸಹ ಹಿಂಸಿಸುವನೋ, ಅವನನ್ನು ವೈದಿಕಮಾರ್ಗದಿಂದ ಹಿಂತಿರುಗಿಸು. ಈ ಯಜ್ಞಕ್ಕೆ ನಮಗೆ ಶ್ರೇಷ್ಠವಾದ ಮಾರ್ಗವನ್ನು ಕಲ್ಪಿಸಿಕೊಡು.

## English Translation

Turn aside from (the true) path, Brihaspati, the arrogant and savage man who advances to injure us, although unoffending, and keep us in the right way for (the completion of) this offering to the gods.

### ವಿಶೇಷವಿಷಯಗಳು

ಅರಾತೀವಾ— ನಮಗೆ ಅಭಿಮುಖನಾಗಿ ನಮ್ಮನ್ನು ಎದುರಿಸುವವನು ಅಥವಾ ನಮಗೆ ಶತ್ರುವಾದವನು. ಅರಾತೀಃ ಅಮಿತ್ರಾನ್—ಮಿತ್ರರಲ್ಲದವರು ಶತ್ರುಗಳು ಎಂದು ಅರಾತಿಶಬ್ದಕ್ಕೆ ಯಾಸ್ಕರು ನಿರ್ವಚನವನ್ನು ಹೇಳಿದ್ದಾರೆ (ನಿ. ೧೧-೧) ಮತ್ತು

> ತ್ವಯಾ ವಯಂ ಸುವೃಧಾ ಬ್ರಹ್ಮಣಸ್ಪತೇ ಸ್ಪಾರ್ಹಾ ವಸು ಮನುಷ್ಯಾ ದದೀಮಹಿ ।
> ಯಾ ನೋ ದೂರೇ ತಳಿತೋ ಯಾ ಅರಾತಯೋಽಭಿ ಸಂತಿ ಜಂಭಯಾ ತಾ ಅನಪ್ನಸಃ ॥
>
> (ಋ. ಸಂ ೨-೨೩-೯)

ಎಂಬ ಋಕ್ಕನ್ನುದಾಹರಿಸಿ ಇದರಲ್ಲಿರುವ ಅರಾತಯಃ ಎಂಬ ಶಬ್ದಕ್ಕೆ ಅದಾನಕರ್ಮಾಣೋ ವಾ ಅದಾನಪ್ರಜ್ಞೋ ವಾ ಎಂದು ನಿರ್ವಚನವನ್ನು ಹೇಳಿದ್ದಾರೆ (ನಿ. ೩-೨೩-೧೧) ರಾ—ದಾನೇ ಎಂಬ ಧಾತುವಿನಿಂದ ನಿಷ್ಪನ್ನವಾದ ಅರಾತಿಶಬ್ದಕ್ಕೆ ಏನನ್ನೂ ಕೊಡದಿರುವವನು ಎಂದರ್ಥವು. ಎಂದರೆ ಸ್ನೇಹಿತರಿಗೆ ಏನನ್ನೂ ಕೊಡದಿರುವವನು ಅಥವಾ ದೇವಾದಿಗಳಿಗೆ ಹವಿರಾದಿಗಳನ್ನು ಅರ್ಪಿಸದಿರುವವನು ಎಂದಭಿಪ್ರಾಯವು ಮತ್ತು ಅಸ್ಮಾಕಮಭಿಮತಾನರ್ಥಾನ್ ದದತೋ ಯೇ ನಿವಾರಯಂತಿ ತೇ ಅರಾತಯಃ—ನಮಗೆ ಬೇಕಾದ ಇಷ್ಟಾರ್ಥಗಳನ್ನು ಕೊಡುವವರನ್ನು ಕೊಡದಂತೆ ತಡೆಯುವವರಿಗೆ ಅರಾತಯಃ ಶತ್ರುಗಳೆಂದು ಹೆಸರು ಎಂದೂ ಅರ್ಥವಾಗಬಹುದು ಅಥವಾ ನ ದಾತವ್ಯಮಸ್ಮಾಭಿರೇಭ್ಯ ಇತ್ಯೇವಂ ಯೇಷಾಂ ಪ್ರಜ್ಞಾ ತೇ ಅದಾನಪ್ರಜ್ಞಾಃ—ನಮಗೆ ಏನನ್ನೂ ಕೊಡಬಾರದೆಂಬ ಬುದ್ಧಿಯು ಯಾರಿಗೆ ಇರುವುದೋ ಅವರಿಗೆ ಅದಾನಪ್ರಜ್ಞರು ಅಥವಾ ಅರಾತಯಃ (ಶತ್ರುಗಳು) ಎಂದೂ ಅರ್ಥಮಾಡಬಹುದು ಎಂದು ಅರ್ಥವಿವರಣೆಯನ್ನು ಮಾಡಿರುವರು.

ವೃಕಃ—ವೃಕಶಬ್ದವು ವಜ್ರನಾಮಗಳಲ್ಲಿಯೂ (ನಿ. ೩-೧೧) ಸ್ತೇನನಾಮಗಳಲ್ಲಿಯೂ (ನಿ. ೩-೧೯) ಪಠಿತವಾಗಿದೆ ಇದಲ್ಲದೆ, ವೃಕಶ್ಚಂದ್ರಮಾ ಭವತಿ ವಿವೃತಜ್ಯೋತಿಷ್ಕೋ ವಾ ವಿಕೃತಜ್ಯೋತಿಷ್ಕೋ ವಾ ವಿಕ್ರಾಂತಜ್ಯೋತಿಷ್ಕೋ ವಾ (ನಿ ೫-೨೧) ಎಂಬ ನಿರ್ವಚನಪ್ರಕಾರ ವೃಕಶಬ್ದಕ್ಕೆ ಚಂದ್ರನೆಂದೂ ಅರ್ಥವಾಗುವುದು. ಪ್ರಕೃತಋಕ್ಕಿನಲ್ಲಿ ಕಳ್ಳ, ಚೋರ ಎಂಬ ಅರ್ಥದಲ್ಲಿ ವೃಕಶಬ್ದದ ಪ್ರಯೋಗವಿದೆ. ವೃಕ ಆದಾನೇ ಎಂಬ ಧಾತುವಿನಿಂದ ನಿಷ್ಪನ್ನವಾದ ವೃಕಶಬ್ದಕ್ಕೆ ಧನಾದೀನಾಮಾದಾತಾ—ಧನಾದಿಗಳನ್ನು ಅಪಹರಿಸುವವನು, ಕಳ್ಳನು ಎಂದು ಅರ್ಥವಿವರಣೆ ಇರುವುದು.

ದೇವವೀತಯೇ—ದೇವಾನಾಂ ವೀತಿಂ ಸೋಮಭಕ್ಷಣಮರ್ಚಯತೀತಿ ದೇವವೀತಿರ್ಯಜ್ಞಃ। ದೇವತೆಗಳಿಗೆ ಅಪೇಕ್ಷಿತವಾದ ಸೋಮವು ಇದರಲ್ಲಿ ಅರ್ಪಿಸಲ್ಪಡುವುದರಿಂದ ದೇವವೀತಿ ಎಂದರೆ ಯಜ್ಞವು.

ಸುಗಂ—ಸುಷ್ಠು ಗಂತವ್ಯಂ ಮಾರ್ಗಂ ಕುರು । ಯಜ್ಞಾನುಷ್ಠಾನಾಯ ಸುಮತಿಂ ದೇಹೀತ್ಯರ್ಥಃ । ಚೆನ್ನಾಗಿ ಹೋಗುವ ಮಾರ್ಗವನ್ನು ಉಂಟುಮಾಡು ಎಂದರೆ ಯಜ್ಞಾನುಷ್ಠಾನಾದಿ ಸತ್ಕರ್ಮಗಳಲ್ಲಿ ನಮ್ಮ ಬುದ್ಧಿಯು ಪ್ರವರ್ತಿಸುವಂತೆ ಮಾಡು ಎಂದಭಿಪ್ರಾಯವು.

ಅನಾಗಸಃ—ಆಗ ಆಙ್‌ಪೂರ್ವಾದ್ಗಮೇಃ । ಅವಶ್ಯಮೇನ್ವೈತದಾಗಚ್ಛತಿ ಕರ್ತಾರಮಿತ್ಯಾಗಃ (ನಿ. ೧೧-೨೪). ಆ ಎಂಬ ಉಪಸರ್ಗಸಹಿತವಾದ ಗಮ್ಲೃ ಗತೌ ಎಂಬ ಧಾತುವಿನಿಂದ ಆಗಃ ಎಂಬ ಶಬ್ದವು ನಿಷ್ಪನ್ನವಾಗಿ ಕರ್ತೃವನ್ನು (ಕರ್ಮವನ್ನು ಆಚರಿಸಿದವನನ್ನು) ಎಡಬಿಡದೆ ಅನುಸರಿಸಿಕೊಂಡುಬರುವುದರಿಂದ ಪಾಪ ಎಂಬ ಅರ್ಥವನ್ನು ಕೊಡುವುದು. ಆದ್ದರಿಂದ ಅನಾಗಸಃ ಎಂಬ ಶಬ್ದಕ್ಕೆ ತದ್ವಿರುದ್ಧವಾಗಿ ಪಾಪ ಅಥವಾ ತಪ್ಪನ್ನು ಮಾಡದಿರುವವರು ಎಂಬರ್ಥವಿರುವುದು. ಅನಾಗಾಃ ಅನಪರಾಧಃ (ನಿ. ೧೦-೧೧) ಎಂದು ನಿರ್ವಚನವಿರುವುದರಿಂದ ಅನಾಗಸಃ (ದ್ವಿ. ಬಹುವಚನ) ಎಂದರೆ ಯಾವ ತಪ್ಪನ್ನೂ ಮಾಡದಿರುವ ನಮ್ಮನ್ನು ಎಂದರ್ಥವು.

---

ಸಂಹಿತಾಪಾಠಃ

ತ್ರಾತಾರಂ ತ್ವಾ ತನೂನಾಂ ಹವಾಮಹೇಽವಸ್ಪರ್ತರಧಿವಕ್ತಾರಮಸ್ಮಯುಂ।
ಬೃಹಸ್ಪತೇ ದೇವನಿದೋ ನಿ ಬರ್ಹಯ ಮಾ ದುರೇವಾ ಉತ್ತರಂ ಸುಮ್ನ-
ಮುನ್ನಶನ್ ॥ ೮ ॥

ಪದಪಾಠಃ

ತ್ರಾತಾರಂ । ತ್ವಾ । ತನೂನಾಂ । ಹವಾಮಹೇ । ಅವಽಸ್ಪರ್ತಃ । ಅಧಿಽವಕ್ತಾರಂ । ಅಸ್ಮಽಯುಂ ।
ಬೃಹಸ್ಪತೇ । ದೇವಽನಿದಃ । ನಿ । ಬರ್ಹಯ । ಮಾ । ದುಃಽಏವಾಃ । ಉತ್ಽತರಂ । ಸುಮ್ನಂ । ಉತ್ ।
ನಶನ್ ॥ ೮ ॥

ಸಾಯಣಭಾಷ್ಯಂ

ಅವಸ್ಪರ್ತಃ ಉಪದ್ರವೇಭ್ಯಃ ಪಾರಯಿತಃ । ಯದ್ವಾ ಅವಸಾ ರಕ್ಷಣೇನಾಪದ್ಭ್ಯಃ ಪಾರಯಿತಃ ಹೇ ಬೃಹಸ್ಪತೇ ತನೂನಾಮಂಗಾನಾಂ ಪುತ್ರಾದೀನಾಂ ವಾ ತ್ರಾತಾರಂ ಪಾಲಯಿತಾರಮಧಿವಕ್ತಾರಮಸ್ಮಾಸು ಪಕ್ಷಪಾತೇನಾಧಿಕಂ ವಕ್ತಾರಮಸ್ಮಯುಂ ಹವಿಷ್ಪ್ರದಾನಸ್ಮಾನ್ ಕಾಮಯಮಾನಂ ತ್ವಾಂ ಹವಾಮಹೇ । ಅಸ್ಮಿನ್ಕರ್ಮಣ್ಯಾಹ್ವಯಾಮಃ । ಕಿಂಚ ದೇವನಿದೋ ದೇವನಿಂದಕಾನಸುರಾನ್ ನಿಬರ್ಹಯ । ವಿನಾಶಯ । ದುರೇವಾ ದುಷ್ಟಗಮನಾ ದುರ್ಬುದ್ಧಯಃ ಶತ್ರವ ಉತ್ತರಮುತ್ಕೃಷ್ಟತರಂ ಸುಮ್ನಂ ಸುಖಂ ಮಾ ಉನ್ನಶನ್ । ಮಾ ವ್ಯಾಪ್ನುವಂತು ॥

ಪ್ರತಿಪದಾರ್ಥ

**ಅವಸ್ಪರ್ತಃ**—ಉಪದ್ರವಗಳಿಂದ ರಕ್ಷಿಸತಕ್ಕ । **ಬೃಹಸ್ಪತೇ**—ಎಲೈ ಬೃಹಸ್ಪತಿಯೇ । **ತನೂನಾಂ**—ನಮ್ಮ ದೇಹಗಳ ಅಥವಾ ಪುತ್ರರ । **ತ್ರಾತಾರಂ**—ರಕ್ಷಕನೂ । **ಅಧಿವಕ್ತಾರಂ**—ಪ್ರೀತಿಯಿಂದ ನಮಗೆ ಉತ್ತೇಜಕವಾದ ವಾಕ್ಯವನ್ನಾಡುವವನೂ । **ಅಸ್ಮಯುಂ**—ಹವಿಸ್ಸನ್ನು ಅರ್ಪಿಸುವುದರಿಂದ ನಮ್ಮನ್ನು ಇಚ್ಛಿಸುವವನೂ ಆದ । **ತ್ವಾ**—ನಿನ್ನನ್ನು । **ಹವಾಮಹೇ**—ಕರೆಯುತ್ತೇವೆ । **ದೇವನಿದಃ**—ದೇವನಿಂದಕರಾದ ಅಸುರರನ್ನು । **ನಿಬರ್ಹಯ**—ನಾಶಮಾಡು । **ದುರೇವಾಃ**—ದುರ್ಬುದ್ಧಿಯುಳ್ಳ ಶತ್ರುಗಳು । **ಉತ್ತಮಂ**—ಉತ್ಕೃಷ್ಟವಾದ । **ಸುಮ್ನಂ**—ಸುಖವನ್ನು । **ಮಾ ಉನ್ನಶನ್**—ಹೊಂದದಿರಲಿ

ಭಾವಾರ್ಥ

ಉಪದ್ರವಗಳಿಂದ ತಪ್ಪಿಸತಕ್ಕ ಎಲೈ ಬೃಹಸ್ಪತಿಯೇ, ನಮ್ಮ ಪುತ್ರರನ್ನು ರಕ್ಷಿಸುವವನೂ, ಪ್ರೀತಿಯಿಂದ ನಮಗೆ ಉತ್ತೇಜಕವಾದ ವಾಕ್ಯವನ್ನಾಡುವವನೂ, ಹವಿಸ್ಸನ್ನು ಅರ್ಪಿಸುವುದರಿಂದ ನಮ್ಮನ್ನು ಇಚ್ಛಿಸುವವನೂ ಆದ ನಿನ್ನನ್ನು ಕರೆಯುತ್ತೇವೆ. ದೇವನಿಂದಕರಾದ ಅಸುರರನ್ನು ನೀನು ನಾಶಮಾಡು. ದುರ್ಬುದ್ಧಿಯುಳ್ಳ ಶತ್ರುಗಳು ಉತ್ಕೃಷ್ಟವಾದ ಸುಖವನ್ನು ಹೊಂದದಿರಲಿ.

## English Translation

Brihaspati, defender (from calamity), we invoke you, the protector of our persons, the speaker of encouraging words, and well disposed towards us : do you destroy the revilers of the gods : let not the malevolent attain supreme felicity.

ವಿಶೇಷವಿಷಯಗಳು.

**ತನೂನಾಂ**—**ಅಂಗಾನಾಂ ಪುತ್ರಾದೀನಾಂ ವಾ** । ನಮ್ಮ ಶರೀರಾವಯವಗಳ ಅಥವಾ ನಮ್ಮ ಪುತ್ರರ ಎಂದು ಎರಡು ವಿಧವಾದ ಅರ್ಥವನ್ನು ಹೇಳಬಹುದು.

**ಅವಸ್ಪರ್ತಃ**—**ಉಪದ್ರವೇಭ್ಯಃ ಪಾರಯಿತಃ । ಯದ್ವಾ ಅವಸಾ ರಕ್ಷಣೇನಾಪದ್ಭ್ಯಃ ಪಾರಯಿತಃ** । ಉಪದ್ರವಾದಿಗಳಿಂದ ಪಾರುಮಾಡುವವನು ಅಥವಾ ಅವಸ್ ಶಬ್ದಕ್ಕೆ ರಕ್ಷಣೆ ಅಥವಾ ಅನ್ನವೆಂಬ ಅರ್ಥವಿರುವುದರಿಂದ ನಮಗೆ ಅನ್ನಾದಿಗಳನ್ನು ಅಥವಾ ರಕ್ಷಣೆಗಳನ್ನು ಕೊಟ್ಟು ಆಪತ್ತುಗಳಿಂದ ಕಾಪಾಡುವವನು ಎಂಬ ಅರ್ಥವನ್ನೂ ಹೇಳಬಹುದು.

**ಅಧಿವಕ್ತಾರಂ**—**ಅಸ್ಮಾಸು ಪಕ್ಷಪಾತೇನಾಧಿಕಂ ವಕ್ತಾರಂ** । ಬೃಹಸ್ಪತಿಗೆ ನಮ್ಮಲ್ಲಿ ಅತಿಶಯವಾಗಿ ಪ್ರೀತಿವಿಶ್ವಾಸಗಳಿರುವುದರಿಂದ ನಮ್ಮ ವಿಷಯದಲ್ಲಿ ಉತ್ತೇಜಕವಾದ (ವಿಶೇಷವಾದ) ಮಾತುಗಳನ್ನಾಡುವವನು ಎಂದಭಿಪ್ರಾಯವು.

**ಅಸ್ಮಯುಂ** -- **ಹವಿಷ್ಪ್ರದಾನಸ್ಮಾನ್ ಕಾಮಯಮಾನಂ ತ್ವಾಂ** । ಹವಿಸ್ಸನ್ನು ಅರ್ಪಿಸುವ ನಮ್ಮನ್ನು ಅನುಗ್ರಹಬುದ್ಧಿಯಿಂದ ಅಪೇಕ್ಷಿಸುವ ನಿನ್ನನ್ನು.

**ದುರೇವಾಃ—ದುಷ್ಟಗಮನಾ ದುರ್ಬುದ್ಧಯಃ ಶತ್ರವಃ** । ದುಷ್ಟಮಾರ್ಗದಲ್ಲಿ ಪ್ರವರ್ತಿಸುವವರು, ದುಷ್ಟಬುದ್ಧಿಯುಳ್ಳವರು, ಎಂದರೆ ಶತ್ರುಗಳು ಎಂದರ್ಥವು.

---

ಸಂಹಿತಾಪಾಠಃ

ತ್ವಯಾ ವಯಂ ಸುವೃಧಾ ಬ್ರಹ್ಮಣಸ್ಪತೇ ಸ್ಪಾರ್ಹಾ ವಸು ಮನುಷ್ಯಾ ದದೀಮಹಿ ।
ಯಾ ನೋ ದೂರೇ ತಳಿತೋ ಯಾ ಅರಾತಯೋಽಭಿ ಸನ್ತಿ ಜಮ್ಭಯಾ ತಾ ಅನಪ್ನಸಃ ॥ ೯ ॥

ಪದಪಾಠಃ

ತ್ವಯಾ । ವಯಂ । ಸುಽವೃಧಾ । ಬ್ರಹ್ಮಣಃ । ಪತೇ । ಸ್ಪಾರ್ಹಾ । ವಸು । ಮನುಷ್ಯಾ । ಆ । ದದೀಮಹಿ ।

ಯಾಃ । ನಃ । ದೂರೇ । ತಳಿತಃ ಯಾಃ । ಅರಾತಯಃ । ಅಭಿ । ಸನ್ತಿ । ಜಮ್ಭಯ । ತಾಃ । ಅನಪ್ನಸಃ ॥ ೯ ॥

ಸಾಯಣಭಾಷ್ಯಂ

ಹೇ ಬ್ರಹ್ಮಣಸ್ಪತೇ ಸುವೃಧಾ ಸುಷ್ಠು ವರ್ಧಯಿತ್ರಾ ತ್ವಯಾ ಹೇತುನಾ ವಯಂ ಸ್ಪಾರ್ಹಾ ಸ್ಪೃಹಣೀಯಾನಿ ವಸು ಧನಾನಿ ಮನುಷ್ಯಾ ॥ ಸುಪಾಂ ಸುಲುಗಿತಿ ಚತುರ್ಥೀಬಹುವಚನಸ್ಯಾಕಾರಃ ॥ ಮನುಷ್ಯೇಭ್ಯೋ ದಾತೃಭ್ಯ ಆದದೀಮಹಿ । ಗೃಹ್ಣೀಮಹೇ ॥ ಆಙೋ ದೋಽನಾಸ್ಯವಿಹರಣ ಇತ್ಯಾತ್ಮನೇಪದಂ ॥ ದೂರೇ ದೂರದೇಶೇ ಯಾ ಅರಾತಯಃ ಯಾಶ್ಚ ತಳಿತೋಽಂತಿಕೇಽರಾತಯೋ ನೋಽಸ್ಮಾನಭಿ ಸಂತಿ । ಅಭಿ ಭವಂತಿ । ಅನಪ್ನಸಃ ಕರ್ಮಹೀನಾನ್ ತಾ ಅರಾತೀಸ್ತಾನ್ ಶತ್ರೂನ್ ಜಂಭಯ । ನಾಶಯ ॥ ಜಭಿ ನಾಶನೇ ಚುರಾದಿಃ ॥ ಅತ್ರ ನಿರುಕ್ತಂ । ತ್ವಯಾ ವಯಂ ಸುವರ್ಧಯಿತ್ರಾ ಬ್ರಹ್ಮಣಸ್ಪತೇ ಸ್ಪೃಹಣೀಯಾನಿ ವಸೂನಿ ಮನುಷ್ಯೇಭ್ಯ ಆದದೀಮಹಿ ಯಾಶ್ಚ ನೋ ದೂರೇ ತಳಿತೋ ಯಾಶ್ಚಾಂತಿಕೇಽರಾತಯೋಽದಾನಕರ್ಮಾಣೋ ವಾದಾನಪ್ರಜ್ಞಾ ವಾ ಜಂಭಯ ತಾ ಅನಪ್ನಸೋಽಪ್ನ ಇತಿ ರೂಪನಾಮ । ನಿ. ೩-೧೧ । ಇತಿ ॥

ಪ್ರತಿಪದಾರ್ಥ

ಬ್ರಹ್ಮಣಸ್ಪತೇ—ಎಲೈ ಬ್ರಹ್ಮಣಸ್ಪತಿಯೇ । ಸುವೃಧಾ—(ನಮ್ಮನ್ನು) ವೃದ್ಧಿಗೆ ತರುವವನಾದ । ತ್ವಯಾ—ನಿನ್ನ ಸಹಾಯದಿಂದಲೇ । ವಯಂ—ನಾವು । ಸ್ಪಾರ್ಹಾ—ಅತ್ಯಂತ ಅಪೇಕ್ಷಿತವಾದ । ವಸು—ಧನ

ಗಳನ್ನು | ಮನುಷ್ಯಾ—ದಾತರಾದ ಮಾನವರಿಂದ | ಆ ದದೀಮಹಿ—ಪಡೆಯುತ್ತೇವೆ | ಯಾಃ ಅರಾತಯಃ—ಯಾವ ಶತ್ರುಗಳು | ದೂರೇ—ದೂರದೇಶದಲ್ಲಿದ್ದುಕೊಂಡು, (ಮತ್ತು) | ಯಾಃ—ಯಾವ ಶತ್ರುಗಳು | ತಳಿತಃ—ಹತ್ತಿರದಲ್ಲಿದ್ದು | ನಃ—ನಮ್ಮನ್ನು | ಅಭಿ ಸಂತಿ—ಸೋಲಿಸಿ ಹಿಂಸಿಸುವರೋ | ಅನಪ್ನಸಃ—ಕರ್ಮಹೀನರಾದ | ತಾಃ—ಆ ಶತ್ರುಗಳನ್ನು | ಜಂಭಯ—ನಾಶಮಾಡು.

### ಭಾವಾರ್ಥ

ಎಲೈ ಬ್ರಹ್ಮಣಸ್ಪತಿಯೇ, ನಮ್ಮನ್ನು ವೃದ್ಧಿಗೆ ತರುವವನಾದ ನಿನ್ನ ಸಹಾಯದಿಂದಲೇ, ನಾವು ಅತ್ಯಂತ ಅಪೇಕ್ಷಿತವಾದ ಧನಗಳನ್ನು ದಾತರಾದ ಮಾನವರಿಂದ ಪಡೆಯುತ್ತೇವೆ. ಯಾವ ದೂರದಲ್ಲಿರುವ ಶತ್ರುಗಳಾಗಲಿ, ಹತ್ತಿರದಲ್ಲಿರುವ ಶತ್ರುಗಳಾಗಲಿ ನಮ್ಮನ್ನು ಸೋಲಿಸಿ ಹಿಂಸಿಸುವರೋ ಕರ್ಮಹೀನರಾದ ಆ ಶತ್ರುಗಳನ್ನು ನಾಶ ಮಾಡು.

### English Translation

Through you, Brahmanaspati, (our) benefactor, may we obtain desirable wealth from men: destroy those (our) unrighteous enemies, whether nigh or far off, who prevail against us.

### ವಿಶೇಷವಿಷಯಗಳು

ಸುವೃಧಾ—ಸುಷ್ಠು ವರ್ಧಯಿತ್ರಾ ತ್ವಯಾ | ನಮ್ಮನ್ನು ಚೆನ್ನಾಗಿ ಕಾಪಾಡಿ ಅಭಿವೃದ್ಧಿಯಾಗುವಂತೆ ಮಾಡುವ ನಿನ್ನಿಂದ.

ತಳಿತಃ—ತಳಿತ್ ಶಬ್ದವು ಹನ್ನೊಂದು ಅಂತಿಕನಾಮಗಳಲ್ಲಿ ಪಠಿತವಾಗಿರುವುದರಿಂದ ತಳಿತಃ ಎಂದರೆ ಸಮೀಪದಲ್ಲಿ ಎಂದರ್ಥವು (ನಿ. ೩-೯).

ಅನಪ್ನಸಃ—ಅಪ್ನಃ ಎಂಬ ಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿದೆ (ನಿ. ೩-೧). ಅನಪ್ನಸಃ ಎಂದರೆ ತದ್ವಿರುದ್ಧವಾದ ಕರ್ಮಹೀನಾನ್ ಕರ್ಮಗಳನ್ನು (ಯಜ್ಞಾದಿ ಸತ್ಕರ್ಮಗಳನ್ನು) ಮಾಡದಿರುವ ದುಷ್ಟರು, ಅಸುರರು ಇತ್ಯಾದಿಗಳು.

---

### ಸಂಹಿತಾಪಾಠಃ

ತ್ವಯಾ ವಯಮುತ್ತಮಂ ಧೀಮಹೇ ವಯೋ ಬೃಹಸ್ಪತೇ ಪಪ್ರಿಣಾ ಸಸ್ನಿನಾ ಯುಜಾ |

ಮಾ ನೋ ದುಃಶಂಸೋ ಅಭಿದಿಪ್ಸುರೀಶತ ಪ್ರ ಸುಶಂಸಾ ಮತಿಭಿಸ್ತಾರಿಷೀಮಹಿ ‖ ೧೦ ‖

ಪದಪಾಠಃ

ತ್ವಯಾ । <u>ವ</u>ಯಂ । <u>ಉ</u>ತ್ಽ<u>ತ</u>ಮಂ । <u>ಧೀ</u>ಮ<u>ಹೇ</u> । ವಯಃ । ಬೃಹಸ್ಪತೇ । ಪಪ್ರಿಣಾ । ಸಸ್ನಿನಾ । <u>ಯು</u>ಜಾ ॥

ಮಾ । <u>ನಃ</u> । <u>ದುಃ</u>ಽಶಂಸಃ । <u>ಅ</u>ಭಿ<u>ಽ</u>ದಿಪ್ಸುಃ । <u>ಈಶತ</u> । ಪ್ರ । <u>ಸು</u>ಽಶಂಸಾಃ । <u>ಮ</u>ತಿಽಭಿಃ । <u>ತಾರಿ</u>ಷೀ<u>ಮಹಿ</u> ॥೧೦॥

ಸಾಯಣಭಾಷ್ಯಂ

ಹೇ ಬೃಹಸ್ಪತೇ ಪಪ್ರಿಣಾ ॥ ಪ್ರಾ ಪಾಲನಪೂರಣಯೋಃ । ಆದೃಗಮಹನೇತಿ ಕಿನ್ಪ್ರತ್ಯಯಃ । ಛಾಂದಸೋ ಯಣಾದೇಶಃ ॥ ಕಾಮಾನಾಂ ಪೂರಕೇಣ ಸಸ್ನಿನಾ ಶುದ್ಧೇನ ಯುಜಾ ಸಹಾಯೇನ ತ್ವಯಾ ಹೇತುನೋತ್ತಮಂ ವಯೋ ಹವಿರ್ಲಕ್ಷಣಮನ್ನಂ ವಯಂ ಧೀಮಹೇ । ಧಾರಯಾಮಃ ॥ ಧೀ ಧಾರಣೇ । ದೈವಾದಿಕಃ ॥ ದುಃಶಂಸೋ ದುಃಶಂಸನೀಯೋಽಭಿದಿಪ್ಸುರಭಿದಂಭಿತುಮಭಿಭವಿತುಮಿಚ್ಛುಃ ಪುರುಷೋ ನೋಽಸ್ಮಾಕಂ ಮಾ ಈಶತ । ಮಾ ಈಶಿಷ್ಟ । ಈಶ್ವರೋ ಮಾ ಭವತು ॥ ಈಶ ಐಶ್ವರ್ಯೇ । ಲೇಟ್ಯಡಾಗಮಃ ॥ ವಯಂ ಮತಿಭಿಃ ಸ್ತೋತ್ರೈಃ ಸುಶಂಸಾಃ ಶೋಭನಶಂಸನೋಪೇತಾಃ ಸಂತಃ ಪ್ರತಾರಿಷೀಮಹಿ । ಪ್ರಕರ್ಷೇಣ ವರ್ಧೇಮಹಿ ॥

ಪ್ರತಿಪದಾರ್ಥ

ಬೃಹಸ್ಪತೇ—ಎಲೈ ಬೃಹಸ್ಪತಿಯೇ । ಪಪ್ರಿಣಾ—ನಮಗೆ ಕಾಮಪೂರಕನೂ । ಸಸ್ನಿನಾ—ಶುದ್ಧನಾದವನೂ । ಯುಜಾ—ನಮ್ಮೊಂದಿಗಿದ್ದು ನಮ್ಮ ಸಹಾಯಕನೂ ಆದ । ತ್ವಯಾ—ನಿನ್ನ ಅನುಗ್ರಹದಿಂದಲೇ । ಉತ್ತಮಂ—ಶ್ರೇಷ್ಠವಾದ । ವಯಃ—ಹವಿಸ್ಸಿನ ರೂಪದ ಅನ್ನವನ್ನು । ವಯಂ—ನಾವು । ಧೀಮಹೇ—ಹೊಂದಿದ್ದೇವೆ । ದುಃಶಂಸಃ—ದುಷ್ಟಮನಸ್ಸುಳ್ಳವನೂ । ಅಭಿದಿಪ್ಸುಃ—(ನಮ್ಮನ್ನು) ಕೆಳಕ್ಕೆ ತಳ್ಳಲಿಚ್ಛೆಯುಳ್ಳವನೂ ಆದ ಪುರುಷನು । ನಃ—ನಮ್ಮ ಮೇಲೆ । ಮಾ ಈಶತ—ಪ್ರಭುತ್ವವನ್ನು ತೋರಿಸದಂತಾಗಲಿ । ವಯಂ—ನಾವು । ಮತಿಭಿಃ—ಸ್ತೋತ್ರಗಳಿಂದ । ಸುಶಂಸಾಃ—ಪ್ರಶಸ್ಯವಾದ ವ್ಯವಹಾರವುಳ್ಳವರಾಗಿ । ಪ್ರತಾರಿಷೀಮಹಿ—ವೃದ್ಧಿಯನ್ನು ಹೊಂದುವಂತಾಗಲಿ.

ಭಾವಾರ್ಥಃ

ಎಲೈ ಬೃಹಸ್ಪತಿಯೇ, ನಮಗೆ ಕಾಮಪೂರಕನೂ, ಶುದ್ಧನೂ, ನಮ್ಮೊಂದಿಗಿದ್ದು ನಮಗೆ ಸಹಾಯಮಾಡುವವನೂ ಆದ ನಿನ್ನ ಅನುಗ್ರಹದಿಂದಲೇ ಶ್ರೇಷ್ಠವಾದ ಹವಿಸ್ಸಿನ ರೂಪದ ಅನ್ನವನ್ನು ನಾವು ಹೊಂದಿದ್ದೇವೆ. ದುಷ್ಟಮನಸ್ಸುಳ್ಳವನೂ, ನಮ್ಮನ್ನು ಕೆಳಕ್ಕೆ ತಳ್ಳಲಿಚ್ಛೆಯುಳ್ಳವನೂ ಆದ ಪುರುಷನು ನಮ್ಮಮೇಲೆ ಪ್ರಭುತ್ವವನ್ನು ತೋರಿಸದಂತಾಗಲಿ. ಉತ್ತಮವಾದ ಸ್ತುತಿಗಳಿಂದ ಕೂಡಿದ ನಾವು ಪ್ರಶಸ್ಯವಾದ ವ್ಯವಹಾರವುಳ್ಳವರಾಗಿ ವೃದ್ಧಿಯನ್ನು ಹೊಂದುವಂತಾಗಲಿ.

## English Translation

Through you, Brihaspati, (who are) the fulfiller of our desires, pure, and associated (with us), we possess excellent food : let not the wicked man who wishes to deceive us be our master : but let us, excelling in (pious) praises, attain prosperity.

ವಿಶೇಷವಿಷಯಗಳು

ವಯಃ—ವಯಶ್ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೭). ವಯಃ ಎಂದರೆ ಹವಿರ್ಲಕ್ಷಣರೂಪವಾದ ಅನ್ನವು ಎಂದರೆ ದೇವತೆಗಳಿಗೆ ಅರ್ಪಿಸಲು ಯೋಗ್ಯವಾದ ಹವಿಸ್ಸು ಎಂದಭಿಪ್ರಾಯವು.

ಪಪ್ರಿಣಾ—ಪ್ರಾ ಪಾಲನಪೂರಣಯೋಃ | ಕಾಮಾನಾಂ ಪೂರಕೇಣ | ಇಷ್ಟಾರ್ಥಗಳನ್ನು ಪೂರಯಿಸುವವನಾದ,

ಸಸ್ನಿನಾ—ಶುದ್ಧೇನ | ಶುದ್ಧವಾದ ಸಸ್ನಿಯಿಂದ | ಸಸ್ನಿಶಬ್ದಕ್ಕೆ ಯಾಸ್ಕರು—

ಸಸ್ನಿಮವಿಂದಚ್ಚರಣೇ ನದೀನಾಂ | ಸಸ್ನಿಂ ಸಂಸ್ನಾತಂ ಮೇಘಂ |

(ನಿ. ೫.೧)

ಎಂದು ನಿರ್ವಚನವನ್ನು ಹೇಳಿರುವರು. ಪ್ರಕರಣಾದತ್ರ ಮೇಘಾಭಿಧೇಯಂ | ಪ್ರಕರಣಾನುಕೂಲ್ಯಾಚ್ಛಬ್ದೋಽಪ್ಯರ್ಥಾಂತರಂ ಭಜತೇ | ಎಂದರೆ ಸಸ್ನಿಶಬ್ದಕ್ಕೆ ಮೇಲಿನ ಋಕ್ಕಿನಲ್ಲಿ (ಋ. ಸಂ. ೧೦-೧೩೯-೬) ಮೇಘವೆಂಬ ಅರ್ಥವಿದ್ದರೂ ಸಂದರ್ಭಾನುಸಾರವಾಗಿ ಈ ಶಬ್ದಕ್ಕೆ ಬೇರೆ ಬೇರೆ ಅರ್ಥಗಳನ್ನು ಹೇಳಬೇಕಾಗುವುದು ಎಂದು ನಿರುಕ್ತವ್ಯಾಖ್ಯಾಕಾರರಾದ ದುರ್ಗಾಚಾರ್ಯರು ಹೇಳಿರುವರು. ಸಸ್ನಿಂ ಸಂಸ್ನಾತಂ ಅಸ್ತ್ರಿ—ನೀರಿನಿಂದ ತೊಳೆಯಲ್ಪಡುವುದು ಎಂದರೆ ಶುದ್ಧವಾಗಿರುವುದು ಎಂಬ ಅರ್ಥವು ಪ್ರಕೃತ ಸಂದರ್ಭದಲ್ಲಿ ಸ್ವೀಕೃತವಾಗಿದೆ.

ಮಾ ನಃ ದುಃಶಂಸಃ ಅಭಿದಿಪ್ಸುಃ ಈಶತ—ದುಃಶಂಸೋಽಭಿದಿಪ್ಸುರ್ಹಿಂಸಿತುಮಿಚ್ಛುಃ ಪುರುಷೋ ಅಸ್ಮಾಕಂ ಮಾ ಈಶಿಷ್ಟ | ಈಶ್ವರೋ ಮಾ ಭವತು | ಎಂದರೆ ಅಶುಭ ದುಷ್ಟಮನಸ್ಸುಳ್ಳ ಮತ್ತು ನಮ್ಮನ್ನು ಸೋಲಿಸಲು ಇಚ್ಛಿಸುತ್ತಿರುವ ಪುರುಷನು ನಮ್ಮಮೇಲೆ ಅಧಿಕಾರವುಳ್ಳವನಾಗದಿರಲಿ ಎಂದರೆ ಅಂತಹ ದುಷ್ಟಪುರುಷನ ಅಧೀನಕ್ಕೆ ನಾವು ಒಳಗಾಗದಂತೆ ನಮ್ಮನ್ನು ರಕ್ಷಿಸು ಎಂದಭಿಪ್ರಾಯವು.

ಸುಪ್ರಶಂಸಾಃ ಮತಿಭಿಃ ಪ್ರ ತಾರಿಷೀಮಹಿ—ಶೋಭನಶಂಸನೋಪೇತಾಃ ಸಂತಃ ಪ್ರಕರ್ಷೇಣ ವರ್ಧೇಮಹಿ—ಎಲೈ ಬ್ರಹಸ್ಪತಿಯೇ, ನಾವು ಉತ್ತಮವಾದ ಸ್ತುತಿವಾಕ್ಯಗಳಿಂದ ನಿನ್ನನ್ನು ಸ್ತೋತ್ರಮಾಡುತ್ತಾ ವೃದ್ಧಿಯನ್ನು ಹೊಂದುವಂತಾಗಲಿ, ನಿನ್ನನ್ನು ಸ್ತೋತ್ರಮಾಡುವುದರಿಂದ ನಾವು ಅಭಿವೃದ್ಧಿಯನ್ನು ಪಡೆಯುವಂತಾಗಲಿ ಎಂದಭಿಪ್ರಾಯವು.

---

ಸಂಹಿತಾಪಾಠಃ

ಅ॒ನಾ॒ನು॒ದೋ ವೃ॑ಷ॒ಭೋ ಜಗ್ಮಿ॑ರಾಹ॒ವಂ ನಿಷ್ಟ॑ಪ್ತಾ॒ ಶತ್ರುಂ॒ ಪೃತ॑ನಾಸು ಸಾಸ॒ಹಿಃ |

ಅಸಿ॑ ಸ॒ತ್ಯ ಋ॑ಣ॒ಯಾ ಬ್ರ॑ಹ್ಮಣಸ್ಪತ ಉ॒ಗ್ರಸ್ಯ॑ ಚಿದ್ದಮಿ॒ತಾ ವೀ॑ಳುಹ॒ರ್ಷಿಣಃ॑ ||

## ಪದಪಾಠಃ

ಅನನುಽದಃ । ವೃಷಭಃ । ಜಗ್ಮಿಃ । ಆಽಹವಂ । ನಿಃಽತಪ್ತಾ । ಶತ್ರುಂ । ಪೃತನಾಸು । ಸಸಹಿಃ ।

ಅಸಿ । ಸತ್ಯಃ । ಋಣಽಯಾಃ । ಬ್ರಹ್ಮಣಃ । ಪತೇ । ಉಗ್ರಸ್ಯ । ಚಿತ್ । ದಮಿತಾ । ವೀಳುಽಹರ್ಷಿಣಃ ॥

## ಸಾಯಣಭಾಷ್ಯಂ

ಹೇ ಬ್ರಹ್ಮಣಸ್ಪತೇ ಅನಾನುದಃ । ಅನು ಪಶ್ಚಾದ್ದದಾತೀತ್ಯನುದಃ । ಸ ಯಸ್ಯ ನಾಸ್ತೀತ್ಯನನುದಃ ದಾತ್ರಂತರಶೂನ್ಯ ಇತ್ಯರ್ಥಃ । ಅತ ಏವ ವೃಷಭಃ ಕಾಮಾನಾಂ ವರ್ಷಿತಾ । ಆಹವಂ ॥ ಆಹ್ವಯಂತ್ಯ-ತ್ರೇತ್ಯಾಹವೋ ಯುದ್ಧಂ । ಆಙಿ ಯುದ್ಧೇ । ಪಾ- ೩-೩-೭೩ । ಇತ್ಯಪ್ ಪ್ರತ್ಯಯಃ ಸಂಪ್ರಸಾರಣಂ ಚ ॥ ತದ್ಯುದ್ಧಂ ಜಗ್ಮಿರ್ಗಂತಾ ॥ ಆದೃಗಮಹನೇತಿ ಕಿನ್ಪ್ರತ್ಯಯಃ । ಲಿಡ್ವದ್ಭಾವಾದಾಹವಮಿತ್ಯತ್ರ ಷಷ್ಠೀ-ಪ್ರತಿಷೇಧಃ ॥ ಶತ್ರುಂ ಶಾತಯಿತಾರಂ ನಿಷ್ಟಪ್ತಾ । ನಿತರಾಂ ತಸ್ಯ ತಾಪಕಃ ॥ ತೃನಂತತ್ವಾತ್ಷಷ್ಠೀಪ್ರತಿ-ಷೇಧಃ । ನಿಸಸ್ತಪತಾವನಾಸೇವನೇ । ಪಾ. ೮-೩-೧೦೨ । ಇತಿ ಷತ್ವಂ । ತಾದೌ ಚ ನಿತೀತಿ ಗತೇಃ ಸ್ವರಃ ॥ ಪೃತನಾಸು ಸಂಗ್ರಾಮೇಷು ಸಾಸಹಿಃ ಶತ್ರೂಣಾಮಭಿಭವಿತಾ । ಏತಾದೃಶಸ್ತ್ವಂ ಸತ್ಯಃ ಸತ್ಯಪರಾಕ್ರಮಃ ಸತ್ಯಪ್ರಜ್ಞೋ ವಾಸಿ । ಋಣಯಾ ಋಣಸ್ಯ ಯಾವಯಿತಾಸಿ ॥ ಯು ಮಿಶ್ರಣಾಮಿಶ್ರಣಯೋಃ । ಣ್ಯಂತಸ್ಯ ಕ್ವಿಪಿ ಣಿಲೋಪೇ ಲೋಪೋ ವ್ಯೋರ್ವಲೀತಿ ವಲೋಪಃ ॥ ಕಿಂಚ ಉಗ್ರಸ್ಯ ಚಿತ್ ಓಜಸ್ವಿನೋಽಪಿ ದಮಿತೋಪಶಮಯಿತಾ ವೀಳುಹರ್ಷಿಣೋ ದೃಢಹರ್ಷಸ್ಯ ಕಾಮುಕಸ್ಯ ನಾಸ್ತಿಕಸ್ಯ ಚಿದ್ದಮಿತಾಸಿ ॥

## ಪ್ರತಿಪದಾರ್ಥ

ಬ್ರಹ್ಮಣಸ್ಪತೇ—ಎಲೈ ಬ್ರಹ್ಮಣಸ್ಪತಿಯೇ । ಅನಾನುದಃ—ಅದ್ವಿತೀಯನಾದ ದಾತೃವೂ । ವೃಷಭಃ—ಕಾಮವರ್ಷಕನೂ । ಆಹವಂ—ಯುದ್ಧಕ್ಕೆ । ಜಗ್ಮಿಃ—ಮುನ್ನುಗ್ಗಿ ಹೋಗುವವನೂ । ಶತ್ರುಂ—ಶತ್ರುವನ್ನು ನಿಷ್ಟಪ್ತಾ—ಪೂರ್ಣವಾಗಿ ದಹಿಸುವವನೂ । ಪೃತನಾಸು—ಸಂಗ್ರಾಮಗಳಲ್ಲಿ । ಸಾಸಹಿಃ—ಶತ್ರುಗಳನ್ನು ಸೋಲಿಸುವವನೂ ಆದ ನೀನು । ಸತ್ಯಃ ಅಸಿ—ಸತ್ಯಾತ್ಮಕವಾದ ಪರಾಕ್ರಮಿಯಾಗಿದ್ದೀಯೆ । ಋಣಯಾಃ—ಋಣವನ್ನು ತೀರಿಸುವವನಾಗಿಯೂ ಇದ್ದೀಯೆ । ಉಗ್ರಸ್ಯ ಚಿತ್—ಭಯಂಕರವಾದ ಶಕ್ತಿಯುಳ್ಳವನಾದರೂ ಸಹ । ವೀಳು-ಹರ್ಷಿಣಃ—ತನ್ನ ದುಷ್ಟಶಕ್ತಿಯಿಂದ ತುಷ್ಟನಾದ ಶತ್ರುವನ್ನು । ದಮಿತಾ—ದಮನಮಾಡುತ್ತೀಯೆ.

## ಭಾವಾರ್ಥ

ಎಲೈ ಬ್ರಹ್ಮಣಸ್ಪತಿಯೇ, ಅದ್ವಿತೀಯನಾದ ದಾತೃವೂ, ಕಾಮವರ್ಷಕನೂ, ಯುದ್ಧಕ್ಕೆ ಮುನ್ನುಗ್ಗಿಹೋಗುವವನೂ, ಶತ್ರುವನ್ನು ಪೂರ್ಣವಾಗಿ ದಹಿಸುವವನೂ, ಸಂಗ್ರಾಮಗಳಲ್ಲಿ ಶತ್ರುಗಳನ್ನು ಸೋಲಿಸುವವನೂ ಆದ ನೀನು ಸತ್ಯಾತ್ಮಕವಾದ ಪರಾಕ್ರಮಿಯಾಗಿಯೂ, ಋಣಮೋಚಕನಾಗಿಯೂ ಇದ್ದೀಯೆ. ತನ್ನ ದುಷ್ಟಶಕ್ತಿಯಿಂದ ಹೃಷ್ಟನಾದ ಶತ್ರುವು ಅತ್ಯಂತ ಭಯಂಕರವಾದ ಶಕ್ತಿಯುಳ್ಳವನಾಗಿದ್ದರೂ ಸಹ ಅವನ ದಮನವನ್ನು ಮಾಡುತ್ತೀಯೆ.

### English Translation

You, Brahmanaspati, who have no requiter (of your bounty), who are the showerer (of benefits), the repairer to combat, the consnmer of foes, the victor in battles, you are true, the discharger of debts, the humiliator of the fierce and of the exulting.

### ವಿಶೇಷವಿಷಯಗಳು

**ಅನಾನುದಃ**— ಅನು ಪಶ್ಚಾದ್ದದಾತೀತ್ಯನುದಃ । ಸ ಯಸ್ಯ ನಾಸ್ತೀತ್ಯನನುದಃ । ದಾತ್ರಂತರಶೂನ್ಯ ಇತ್ಯರ್ಥಃ । ಒಬ್ಬರನ್ನನುಸರಿಸಿ ಕೊಡುವವನು ಎಂದರೆ ಒಬ್ಬರು ಕೊಟ್ಟಂತೆ ಕೊಡುವವನಿಗೆ ಅನುದಃ ಎಂದು ಹೆಸರು. ಆರೀತಿ ಇಲ್ಲದವನಿಗೆ ಅನನುದಃ ಎಂದು ಹೆಸರು. ಎಂದರೆ ಯಾರೂ ಕೊಡದಿರುವಷ್ಟು ಕೊಡುವವನು; ಅದ್ವಿತೀಯನಾದ ದಾತೃವು ಎಂದಭಿಪ್ರಾಯವು.

**ಆಹವಂ**—ಆಹವಶಬ್ದವು ಸಂಗ್ರಾಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) ಆಹವವೆಂದರೆ ಯುದ್ಧವು. ಆಹ್ವಯಂತೇಽತ್ರ ಪರಸ್ಪರಂ ಸ್ಪರ್ಧಯಾ ಯೋಧಾ ಇತ್ಯಾಹವಂ—ಇದರಲ್ಲಿ ಭಾಗವಹಿಸುವ ಯುದ್ಧಭಟರು ಒಬ್ಬರನ್ನೊಬ್ಬರು ಯುದ್ಧಮಾಡುವುದಕ್ಕಾಗಿ ಕರೆಯುವುದರಿಂದ ಆಹವವೆಂದರೆ ಯುದ್ಧವು ಎಂದು ಈ ಶಬ್ದದ ಅವಯವಾರ್ಥವು.

**ಪೃತನಾಸು**— ಪೃತನಾಃ ಎಂಬ ಶಬ್ದವು ಸಂಗ್ರಾಮನಾಮಗಳಲ್ಲಿ ಪಠಿತವಾಗಿದೆ (ನಿ. ೩-೯) ಮತ್ತು ಯಾವಾಗಲೂ ಬಹುವಚನದಲ್ಲಿಯೇ ಈ ಶಬ್ದದ ಪ್ರಯೋಗವಿರುವುದು.

**ಋಣಯಾಃ**— ಋಣಸ್ಯ ಯಾವಯಿತಾಸಿ । ಯು ಮಿಶ್ರಣಾಮಿಶ್ರಣಯೋಃ । ಋಣವನ್ನು ಅಥವಾ ಸಾಲವನ್ನು ಪರಿಹರಿಸುವವನು ಎಂದಭಿಪ್ರಾಯವು.

**ವೀಳುಹರ್ಷಿಣಃ**—ವೀಳುಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ (ನಿ. ೩-೯). ದೃಢಹರ್ಷಸ್ಯ ಕಾಮುಕಸ್ಯ ನಾಸ್ತಿಕಸ್ಯ ದಮಿತಾಸಿ । ಅತಿಯಾಗಿ ಹರ್ಷವುಳ್ಳ ಕಾಮುಕನಾದ ಅಥವಾ ನಾಸ್ತಿಕನಾದ ಪುರುಷನನ್ನು ದಮನಮಾಡುವ ಎಂದು ಭಾಷ್ಯಕಾರರ ವಿವರಣೆಯು. ಈ ಶಬ್ದವು ಉಗ್ರಸ್ಯ ಎಂಬ ಶಬ್ದಕ್ಕೆ ವಿಶೇಷಣಪದವೆಂದು ಭಾವಿಸಿದರೆ ಯುದ್ಧದಲ್ಲಿ ತಾನೇ ಜಯಿಸುವೆನೆಂದು ಅತಿಹರ್ಷವುಳ್ಳವನಾಗಿರುವ ಕ್ರೂರನಾದ ಶತ್ರುವನ್ನು ದಮನಮಾಡುವ ಎಂಬ ಅರ್ಥವು ಪ್ರಕೃತೋಚಿತವಾಗಿರುವುದು.

---

### ಸಂಹಿತಾಪಾಠಃ

ಅದೇವೇನ ಮನಸಾ ಯೋ ರಿಷಣ್ಯತಿ ಶಾಸಾಮುಗ್ರೋ ಮನ್ಯಮಾನೋ ಜಿಘಾಂಸತಿ ।

ಬೃಹಸ್ಪತೇ ಮಾ ಪ್ರಣಕ್ತಸ್ಯ ನೋ ವಧೋ ನಿ ಕರ್ಮ ಮನ್ಯುಂ ದುರೇವಸ್ಯ

ಶರ್ಧತಃ ॥ ೧೨ ॥

ಪದಪಾಠಃ

ಅದೇವೇನ । ಮನಸಾ । ಯಃ । ರಿಷಣ್ಯತಿ । ಶಾಸಾಂ । ಉಗ್ರಃ । ಮನ್ಯಮಾನಃ । ಜಿಘಾಂಸತಿ ।

ಬೃಹಸ್ಪತೇ । ಮಾ । ಪ್ರಣಕ್ । ತಸ್ಯ । ನಃ । ವಧಃ । ನಿ । ಕರ್ಮ । ಮನ್ಯುಂ । ದುಃऽಏವಸ್ಯ । ಶರ್ಧತಃ ॥

ಸಾಯಣಭಾಷ್ಯಂ

ಯಃ ಪುಮಾನ್ ಅದೇವೇನ ದೇವಾನಮನ್ಯಮಾನೇನ ಯದ್ವಾ ಆಸುರವೃತ್ತಿವಿಶಿಷ್ಟೇನ ಮನಸಾಸ್ಮಾನ್ ರಿಷಣ್ಯತಿ । ಹಿನಸ್ತಿ ॥ ದುರಸ್ಯುರ್ದ್ರವಿಣಸ್ಯುರ್ವೃಷಣ್ಯತಿ ರಿಷಣ್ಯತೀತಿ ನಿಪಾತಿತಃ ॥ ಯಶ್ಚೋಗ್ರಃ ಪಾಪಚಿತ್ತೋ ಮನ್ಯಮಾನ ಆತ್ಮಾನಂ ಬಹು ಮನ್ಯಮಾನಃ ಪುಮಾನ್ ಶಾಸಾಮುಕ್ಥಸ್ಯ ಶಂಸಿತಾರಂ । ಯದ್ವಾ ಅಸ್ಮಾಕಮಾಶಂಸಾಂ । ಶಾಸಿಶ್ಚೈಷಾಮುಗ್ರ ಇತಿ ವಾ ಯೋಜನೀಯಂ । ಅಸ್ಮಾನ್ ಜಿಘಾಂಸತಿ । ಹಂತುಮಿಚ್ಛತಿ ॥ ಹಂತೇಃ ಸನ್ಯಜ್ಝನಗಮಾಂ ಸನೀತಿ ದೀರ್ಘಃ ॥ ಹೇ ಬೃಹಸ್ಪತೇ ತಸ್ಯ ವಧಃ ॥ ವಧ್ಯತೇऽನೇನೇತಿ ವಧ ಆಯುಧಂ ॥ ನೋऽಸ್ಮಾನ್ಮಾ ಪ್ರಣಕ್ ॥ ಪೃಚೀ ಸಂಪರ್ಕೇ ಶ್ನಮ್ವಿಕರಣೀ । ವ್ಯತ್ಯಯೇನಾಮಾಗಮಃ । ಚಾದಿಲೋಪೇ ಇತಿ ನ ನಿಘಾತಃ । ವ್ಯತ್ಯಯೇನಾದ್ಯುದಾತ್ತಃ ॥ ಕಿಂಚ ದುರೇವಸ್ಯ ದುಷ್ಟಗಮನಸ್ಯ ಶರ್ಧತೋ ಬಲವತಃ । ಯದ್ವಾ ದುಷ್ಟಾಭಿಸಂಧೇರ್ವೇಗಂ ಕುರ್ವತಸ್ತಸ್ಯ ಮನ್ಯುಂ ಕ್ರೋಧಂ ಜ್ಞಾನಂ ವಾ ನಿ ಕರ್ಮ । ತ್ವತ್ಪ್ರಸಾದಾನ್ನಿರಾಕುರ್ಮಶ್ಚ ॥

ಪ್ರತಿಪದಾರ್ಥ

ಬೃಹಸ್ಪತೇ—ಎಲೈ ಬೃಹಸ್ಪತಿಯೇ । ಯಃ—ಯಾವ ಶತ್ರುವು । ಅದೇವೇನ—ದೈವಭಕ್ತಿಯಿಲ್ಲದ ಆಸುರೀ ಸ್ವಭಾವವುಳ್ಳ । ಮನಸಾ—ಮನಸ್ಸಿನಿಂದ । ರಿಷಣ್ಯತಿ—(ನಮ್ಮನ್ನು) ಹಿಂಸಿಸುತ್ತಾನೆಯೋ, (ಯಾರು) ಉಗ್ರಃ—ಭಯಂಕರವಾದ ಪಾಪಬುದ್ಧಿಯುಳ್ಳವನಾಗಿಯೂ । ಮನ್ಯಮಾನಃ—ಆತ್ಮಾಭಿಮಾನವುಳ್ಳವನಾಗಿಯೂ ಇದ್ದು । ಶಾಸಾಂ—ಸ್ತುತಿಕರ್ತರಾದ ನಮ್ಮನ್ನು । ಜಿಘಾಂಸತಿ—ಕೊಲ್ಲಲಿಚ್ಛಿಸುತ್ತಾನೆಯೋ । ತಸ್ಯ—ಅಂತಹ ಶತ್ರುವಿನ । ವಧಃ—(ವಧಸಾಧನವಾದ) ಆಯುಧವು । ನಃ—ನಮ್ಮನ್ನು । ಮಾ ಪ್ರಣಕ್—ಸಮೀಪಿಸದಿರಲಿ । ದುರೇವಸ್ಯ—ದುಷ್ಟವಾದ ಪ್ರವೃತ್ತಿಯುಳ್ಳವನೂ । ಶರ್ಧತಃ—ಬಲಶಾಲಿಯೂ ಆದ ಅವನ । ಮನ್ಯುಂ—ಕ್ರೋಧವನ್ನು । ನಿ ಕರ್ಮ—ನಾವು ಎದುರಿಸಿ ನಾಶಮಾಡುವಂತೆ ಅನುಗ್ರಹಿಸು.

ಭಾವಾರ್ಥ

ಎಲೈ ಬೃಹಸ್ಪತಿಯೇ, ಯಾವ ಶತ್ರುವು ದೈವಭಕ್ತಿಯಿಲ್ಲದ ಆಸುರೀ ಸ್ವಭಾವವುಳ್ಳ ಮನಸ್ಸಿನಿಂದ ನಮ್ಮನ್ನು ಹಿಂಸಿಸುತ್ತಾನೆಯೋ, ಯಾರು ಭಯಂಕರವಾದ ಪಾಪಬುದ್ಧಿಯುಳ್ಳವನಾಗಿಯೂ ಆತ್ಮಾಭಿಮಾನವುಳ್ಳವನಾಗಿಯೂ

ಇದ್ದು ಸ್ತುತಿಕರ್ತರಾದ ನಮ್ಮನ್ನು ಕೊಲ್ಲಲಿಚ್ಛಿಸುತ್ತಾನೆಯೋ ಅಂತಹ ಶತ್ರುವಿನ ವಧಸಾಧನವಾದ ಆಯುಧವು ನಮ್ಮನ್ನು ಸಮೀಪಿಸದಿರಲಿ. ದುಷ್ಟವಾದ ಪ್ರವೃತ್ತಿಯುಳ್ಳವನೂ ಬಲಶಾಲಿಯೂ ಆದ ಅವನ ಕ್ರೋಧವನ್ನು ನಾವು ಎದುರಿಸಿ ನಾಶಮಾಡುವಂತೆ ಅನುಗ್ರಹಿಸು.

## English Translation

Let not, Brihaspati, the murderous (weapon) of that man reach us, who, with unrighteous mind, seeks to harm us: who, fierce and arrogant, designs to kill (your) worshippers: may we baffle the wrath of the strong evildoer.

### ವಿಶೇಷವಿಷಯಗಳು

ಅದೇವೇನ—ದೇವಾನಮನ್ಯಮಾನೇನ ಯದ್ವಾ ಆಸುರವೃತ್ತಿವಿಶಿಷ್ಟೇನ । ದೇವತೆಗಳಲ್ಲಿ ಗೌರವವಿಲ್ಲದ ಎಂದರೆ ಆಸುರಸ್ವಭಾವವುಳ್ಳ, ಕೆಟ್ಟಸ್ವಭಾವವುಳ್ಳ ಎಂದರ್ಥವು.

ಶಾಸಾಂ ಉಗ್ರಃ ಶಾಸಾಮುಕ್ಥಸ್ಯ ಶಂಸಿತಾರಂ । ಯದ್ವಾ ಅಸ್ಮಾಕಮಾಶಂಸಾಂ ಶಾಸಿತ್ಯಾಶಾ-ಮುಗ್ರಃ । ಮಂತ್ರಾದಿಗಳಿಂದ ದೇವತೆಗಳನ್ನು ಸ್ತೋತ್ರಮಾಡುತ್ತಿರುವ ನಮ್ಮ ವಿಷಯದಲ್ಲಿ ಕ್ರೂರಸ್ವಭಾವದಿಂದ ವರ್ತಿಸುತ್ತಿರುವವನು ಎಂದಭಿಪ್ರಾಯವು.

ವಧಃ—ವಧ್ಯತೇಽನೇನೇತಿ ವಧ ಆಯುಧಂ । ಕೊಲ್ಲುವುದಕ್ಕೆ ಸಾಧನವಾಗಿ ಉಪಯೋಗಿಸುವುದರಿಂದ ವಧಶಬ್ದಕ್ಕೆ ಆಯುಧವೆಂದು ಹೆಸರು.

ದುರೇವಸ್ಯ—ದುಷ್ಟಗಮನಸ್ಯ । ಯದ್ವಾ ದುಷ್ಟಾಭಿಸಂಧೇರ್ವೇಗಂ ಕುರ್ವತಸ್ತಸ್ಯ । ಕೆಟ್ಟಬುದ್ಧಿಯಿಂದ ನಮ್ಮನ್ನು ಎದುರಿಸಲು ಮುನ್ನುಗ್ಗುತ್ತಿರುವ ಶತ್ರುವಿನ ಎಂದಭಿಪ್ರಾಯವು.

---

### ಸಂಹಿತಾಪಾಠಃ

ಭರೇಷು ಹವ್ಯೋ ನಮಸೋಪಸದ್ಯೋ ಗನ್ತಾ ವಾಜೇಷು ಸನಿತಾ ಧನಂ-ಧನಂ ।
ವಿಶ್ವಾ ಇದರ್ಯೋ ಅಭಿದಿಪ್ಸ್ವೋ೩ ಮೃಧೋ ಬೃಹಸ್ಪತಿರ್ವಿ ವವರ್ಹಾ ರಥಾಁ ಇವ ॥ ೧೩ ॥

### ಪದಪಾಠಃ

ಭರೇಷು । ಹವ್ಯಃ । ನಮಸಾ । ಉಪಽಸದ್ಯಃ । ಗನ್ತಾ । ವಾಜೇಷು । ಸನಿತಾ । ಧನಂಽಧನಂ ।
ವಿಶ್ವಾಃ । ಇತ್ । ಅರ್ಯಃ । ಅಭಿಽದಿಪ್ಸ್ವಃ । ಮೃಧಃ । ಬೃಹಸ್ಪತಿಃ । ವಿ । ವವರ್ಹ । ರಥಾನ್ಽಇವ ॥

### ಸಾಯಣಭಾಷ್ಯಂ

ಸ ಬೃಹಸ್ಪತಿರ್ಭರೇಷು ಸಂಗ್ರಾಮೇಷು ಹವ್ಯೋ ಯೋದ್ಧೃಭಿಃ ಸ್ವರಕ್ಷಣಾರ್ಥಮಾಹ್ವಾತವ್ಯೋ ನಮಸೋಪಸದ್ಯಃ ಸರ್ವೈರ್ನಮಸೋಪಸದನೀಯಃ । ಕಿಂಚ ವಾಜೇಷು ಗಂತಾ । ಸಂಗ್ರಾಮೇಷು ರಕ್ಷಾರ್ಥಂ ಗಮನಶೀಲಃ । ತಥಾ ಧನಂ ಧನಂ ಸನಿತಾ ಸಂಭಕ್ತಾ ದಾತಾ ॥ ತೃನಂತತ್ವಾತ್ಷಷ್ಠೀಪ್ರತಿಷೇಧಃ ॥ ತಥಾರ್ಯಃ ಸ್ವಾಮೀ ಬೃಹಸ್ಪತಿರಭಿದಿಪ್ಸ್ವೋಽಭಿಭವನೇಚ್ಛಾವತೀರ್ವಿಶ್ವಾ ಇತ್ ಸರ್ವಾ ಏವ ಮೃಧೋ ಹಿಂಸಿಕಾಃ ಸೇನಾ ರಥಾನಿವ ಯುದ್ಧೇ ವೇಗೇನ ಪರಕೀಯಾನ್ರಥಾನಿವ ವಿವವರ್ಹ । ವಿಶೇಷೇಣ ಶಿಥಿಲೀಚಕಾರ । ಯದ್ವಾ ಇವಶಬ್ದಶ್ಚಾರ್ಥೇ । ರಥಾಂಶ್ಚ ವಿವವರ್ಹ ॥ ಲಡರ್ಥೇ ಲಿಟ್ ॥

### ಪ್ರತಿಪದಾರ್ಥ

ಬೃಹಸ್ಪತಿಃ—ಬೃಹಸ್ಪತಿಯು । ಭರೇಷು—ಸಂಗ್ರಾಮಗಳಲ್ಲಿ । ಹವ್ಯಃ—(ಯೋದ್ಧೃಗಳಿಂದ) ಕರೆಯಲ್ಪಡುವವನೂ । ನಮಸಾ—ಭಕ್ತಿಪೂರ್ವಕವಾದ ನಮಸ್ಕಾರದಿಂದ । ಉಪಸದ್ಯಃ—ಸಮೀಪಿಸಲ್ಪಡುವವನೂ । ವಾಜೇಷು—ಸಂಗ್ರಾಮಗಳಲ್ಲಿ । ಗಂತಾ—ಸಹಾಯಕ್ಕಾಗಿ ಹೋಗತಕ್ಕವನೂ । ಧನಂಧನಂ—ಪ್ರಭೂತವಾದ ಧನವನ್ನು । ಸನಿತಾ—(ಪದೇಪದೇ) ಕೊಡತಕ್ಕವನೂ ಆಗಿದ್ದಾನೆ । ಅರ್ಯಃ—ಪ್ರಭುವಾದ ಬೃಹಸ್ಪತಿಯು । ಅಭಿದಿಪ್ಸ್ವಃ—(ನಮ್ಮನ್ನು) ಎದುರಿಸಿ ಸೋಲಿಸಲಿಚ್ಛಿಸುವ । ವಿಶ್ವಾ ಇತ್ ಮೃಧಃ—ಹಿಂಸಕವಾದ ಸಕಲ ಶತ್ರುಸೈನ್ಯವನ್ನೂ । ರಥಾನಿವ—(ಯುದ್ಧದಲ್ಲಿ) ಶತ್ರು ರಥಗಳನ್ನು ಸೀಳಿ ಚೂರ್ಣಮಾಡುವಂತೆ । ವಿ ವವರ್ಹ—ಪೂರ್ಣವಾಗಿ ನಾಶಮಾಡಿದನು.

### ಭಾವಾರ್ಥ

ಬೃಹಸ್ಪತಿಯು ಸಂಗ್ರಾಮಗಳಲ್ಲಿ ಯೋದ್ಧೃಗಳಿಂದ ಕರೆಯಲ್ಪಡುವವನೂ, ಭಕ್ತಿಪೂರ್ವಕವಾದ ನಮಸ್ಕಾರದಿಂದ ಸಮೀಪಿಸಲ್ಪಡುವವನೂ ಸಂಗ್ರಾಮಗಳಲ್ಲಿ ಸಹಾಯಕ್ಕಾಗಿ ಹೋಗತಕ್ಕವನೂ, ಪ್ರಭೂತವಾದ ಧನವನ್ನು ಪದೇಪದೇ ಕೊಡತಕ್ಕವನೂ ಆಗಿದ್ದಾನೆ. ಪ್ರಭುವಾದ ಬೃಹಸ್ಪತಿಯು ನಮ್ಮನ್ನು ಎದುರಿಸುವುದೂ ಹಿಂಸಕವಾದುದೂ ಆದ ಸಕಲಶತ್ರುಸೈನ್ಯಗಳನ್ನೂ ಯುದ್ಧದಲ್ಲಿ ಶತ್ರುರಥಗಳನ್ನೂ ಸೀಳಿ ಪುಡಿಮಾಡುವಂತೆ ನಾಶಮಾಡಿದನು.

### English Translation

Brihaspati is to be invoked in battles : he is to be approached with reverence : he who moves amidst combats, the distributor of repeated wealth; the lord Brihaspati has verily overturned all the assailing malignant (hosts), like chariots (overturned in battle).

### ವಿಶೇಷವಿಷಯಗಳು

ಭರೇಷು, ವಾಜೇಷು—ಈ ಶಬ್ದಗಳು ಸಂಗ್ರಾಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) ಯುದ್ಧಗಳಲ್ಲಿ ಎಂದರ್ಥವು.

ಧನಂಧನಂ— ಇಲ್ಲಿ ಧನಶಬ್ದದ ದ್ವಿರುಕ್ತಿಪ್ರಯೋಗವಿರುವುದರಿಂದ ಅತ್ಯಧಿಕವಾದ, ಅತಿಶಯವಾದ, ಬಹಳ ಹೆಚ್ಚಾದ ಧನವನ್ನು ಎಂದಭಿಪ್ರಾಯವು. ಅಥವಾ ವಾಜೇಷು ಎಂಬ ಬಹುವಚನದ ಶಬ್ದಸಂಬಂಧದಲ್ಲಿ ಈ ಶಬ್ದದ ಪ್ರಯೋಗವಿರುವುದರಿಂದ ಪ್ರತಿ ಯುದ್ಧದಲ್ಲಿಯೂ ನಮಗೆ ಅಧಿಕವಾದ ಧನವನ್ನು ಕೊಡುವವನೆಂದಭಿಪ್ರಾಯವು.

ಅಭಿದಿಪ್ಸ್ವಃ— ಅಭಿಭವನೇಚ್ಛಾವತೀಃ । ನಮ್ಮನ್ನು ಯುದ್ಧದಲ್ಲಿ ಸೋಲಿಸಬೇಕೆಂದು ಅಪೇಕ್ಷಿಸುತ್ತಿರುವ ಶತ್ರುಸೈನ್ಯಗಳನ್ನು ಎಂದರ್ಥವು.

———— :O: ————

ಸಂಹಿತಾಪಾಠಃ

**ತೇಜಿಷ್ಠಯಾ ತಪನೀ ರಕ್ಷಸಸ್ತಪ ಯೇ ತ್ವಾ ನಿದೇ ದಧಿರೇ ದೃಷ್ಟವೀರ್ಯಂ ।**

**ಆವಿಸ್ತತ್ಕೃಷ್ವ ಯದಸತ್ತ ಉಕ್ಥ್ಯಂ೧ಬೃಹಸ್ಪತೇ ವಿ ಪರಿರಾಪೋ ಅರ್ದಯ॥**

ಪದಪಾಠಃ

ತೇಜಿಷ್ಠಯಾ । ತಪನೀ । ರಕ್ಷಸಃ । ತಪ । ಯೇ । ತ್ವಾ । ನಿದೇ । ದಧಿರೇ । ದೃಷ್ಟऽವೀರ್ಯಂ ।

ಆವಿಃ । ತತ್ । ಕೃಷ್ವ । ಯತ್ । ಅಸತ್ । ತೇ । ಉಕ್ಥ್ಯಂ । ಬೃಹಸ್ಪತೇ । ವಿ । ಪರಿऽರಪಃ । ಅರ್ದಯ॥

ಸಾಯಣಭಾಷ್ಯಂ

ಹೇ ಬೃಹಸ್ಪತೇ ತೇಜಿಷ್ಠಯಾತಿಶಯೇನ ತಿಗ್ಮಯಾ ತಪನೀ ತಾಪಕಾರಿಣ್ಯಾ ಹೇತ್ಯಾ ರಕ್ಷಸೋ ರಾಕ್ಷಸಾಂಸ್ತಪ । ತಾಪಯ । ಯೇ ರಾಕ್ಷಸಾ ದೃಷ್ಟವೀರ್ಯಂ ಯುದ್ಧೇಷು ದೃಷ್ಟಪರಾಕ್ರಮಂ ತ್ವಾಂ ನಿದೇ ನಿಂದಾಯಾ ವಿಷಯಂ ದಧಿರೇ । ಕೃತವಂತಃ ತಾನ್ ತಾಪಯೇತಿ ಸಮನ್ವಯಃ । ತೇ ತವ್ಯೋಕ್ಥ್ಯಂ ಸರ್ವೈಃ ಪ್ರಶಂಸನೀಯಂ ಯದ್ವೀರ್ಯಮಸತ್ ಪೂರ್ವಮಾಸೀತ್ ತದೆಧುನಾವಿಷ್ಕೃಷ್ವ । ಪ್ರಕಟೀಕುರು । ತೇನ ಚ ವೀರ್ಯೇಣ ಪರಿರಾಪಃ ಪರಿವದತೋ ನಿಂದಕಾನಸುರಾನ್ ವ್ಯರ್ದಯ । ವಿಶೇಷೇಣ ಬಾಧಸ್ವ ॥

ಪ್ರತಿಪದಾರ್ಥ

ಬೃಹಸ್ಪತೇ—ಎಲೈ ಬೃಹಸ್ಪತಿಯೇ । ಯೇ—ಯಾವ ಅಸುರರು । ದೃಷ್ಟವೀರ್ಯಂ—ಯುದ್ಧದಲ್ಲಿ ನಿನ್ನ ವೀರ್ಯವನ್ನು ನೋಡಿದ್ದರೂ ಸಹ । ತ್ವಾ—ನಿನ್ನನ್ನು । ನಿದೇ—ನಿಂದಾವಿಷಯವನ್ನಾಗಿ । ದಧಿರೇ—ಮಾಡಿದ್ದಾರೆಯೋ ಅಂತಹ । ರಕ್ಷಸಃ—ರಾಕ್ಷಸರನ್ನು । ತೇಜಿಷ್ಠಯಾ—ಅತ್ಯಂತ ತೀಕ್ಷ್ಣವಾದುದೂ । ತಪನೀ—ದಹಿಸ ತಕ್ಕದ್ದೂ ಆದ ನಿನ್ನ ಆಯುಧದಿಂದ । ತಪ—ದಹಿಸಿಬಿಡು । ತೇ—ನಿನ್ನ । ಉಕ್ಥ್ಯಂ—ಪ್ರಶಸ್ಯವಾದ । ಯತ್—ಯಾವ ವೀರ್ಯವು । ಅಸತ್—ಹಿಂದೆ ಪ್ರಸಿದ್ಧವಾಗಿದ್ದಿತೋ । ತತ್—ಅದನ್ನು । ಆವಿಃ ಕೃಷ್ವ—(ಈಗ) ಪ್ರಕಟಿಸು (ಅದೇ ವೀರ್ಯದಿಂದ) । ಪರಿರಾಪಃ—ನಿಂದಕರಾದ ಅಸುರರನ್ನು । ವಿ ಅರ್ದಯ—ಪೂರ್ಣವಾಗಿ ನಾಶಮಾಡು.

### ಭಾವಾರ್ಥ

ಎಲೈ ಬೃಹಸ್ಪತಿಯೇ, ಯಾವ ಅಸುರರು ಯುದ್ಧದಲ್ಲಿ ನಿನ್ನ ಪರಾಕ್ರಮವನ್ನು ನೋಡಿ ತಿಳಿದಿದ್ದರೂ ಸಹ ನಿನ್ನನ್ನು ನಿಂದಿಸುತ್ತಾರೆಯೋ ಅಂತಹ ಅಸುರರನ್ನು ಅತ್ಯಂತ ತೀಕ್ಷ್ಣವಾದುದೂ, ದಹಿಸತಕ್ಕದ್ದೂ ಆದ ನಿನ್ನ ಆಯುಧ ದಿಂದ ದಹಿಸಿಬಿಡು, ಪ್ರಶಸ್ತ್ಯವಾದ ನಿನ್ನ ಯಾವ ವೀರ್ಯವು ಹಿಂದೆ ಪ್ರಸಿದ್ಧವಾಗಿದ್ದಿತೋ ಅದನ್ನು ಈಗ ಪ್ರಕಟಿಸು. ಅದೇ ವೀರ್ಯದಿಂದ ನಿಂದಕರಾದ ಅಸುರರನ್ನು ಪೂರ್ಣವಾಗಿ ನಾಶಮಾಡು.

### English Translation

Consume with your brightest (weapon) the Rakshasas, who have held your witnessed prowess in disdain : manifest, Brihaspati, your glorified (vigour), such as it was (of old), and destory those who speak against you.

### ವಿಶೇಷವಿಷಯಗಳು

**ದುಷ್ಟವೀರ್ಯಂ**—ಯುದ್ಧೇಷು ದುಷ್ಟಪರಾಕ್ರಮಂ ತ್ವಾಂ। ಯುದ್ಧಗಳಲ್ಲಿ ಬೃಹಸ್ಪತಿಯು ಶತ್ರುಗಳ ಮೇಲೆ ತೋರಿಸುವ ಪರಾಕ್ರಮವು ಅತಿಶಯವಾಗಿರುವುದು. ಇಂತಹ ಪರಾಕ್ರಮವುಳ್ಳ ನಿನ್ನನ್ನು ಎಂದರ್ಥವು.

**ಪರಿರಪಃ**—ಸಂಹಿತಾಪಾಠದಲ್ಲಿ ರಕಾರವು ದೀರ್ಘವಾಗಿರುವುದು. ಪರಿವದತೋ ನಿಂದಕಾನ್ ಅಸುರಾನ್। ಕೆಟ್ಟಮಾತುಗಳಿಂದ ದೂಷಣೆಮಾಡುತ್ತಿರುವ ಅಸುರರನ್ನು ಅಥವಾ ಶತ್ರುಗಳನ್ನು ಎಂದಭಿಪ್ರಾಯವು. ಈ ಶಬ್ದದ ಅರ್ಥವಿವರಣೆಯನ್ನು ಇದೇ ಸೂಕ್ತದ ಮೂರನೆಯ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಲಾಗಿದೆ.

---

### ಸಂಹಿತಾಪಾಠಃ

ಬೃಹಸ್ಪತೇ ಅತಿ ಯದರ್ಯೋ ಅರ್ಹಾದ್ದ್ಯುಮದ್ವಿಭಾತಿ ಕ್ರತುಮಜ್ಜನೇಷು ।

ಯದ್ದೀದಯಚ್ಛವಸ ಋತಪ್ರಜಾತ ತದಸ್ಮಾಸು ದ್ರವಿಣಂ ಧೇಹಿ ಚಿತ್ರಂ॥

### ಪದಪಾಠಃ

ಬೃಹಸ್ಪತೇ । ಅತಿ । ಯತ್ । ಅರ್ಯಃ । ಅರ್ಹಾತ್ । ದ್ಯುಽಮತ್ । ವಿಽಭಾತಿ । ಕ್ರತುಽಮತ್ । ಜನೇಷು ।

ಯತ್ । ದೀದಯತ್ । ಶವಸಾ । ಋತಽಪ್ರಜಾತ । ತತ್ । ಅಸ್ಮಾಸು । ದ್ರವಿಣಂ । ಧೇಹಿ । ಚಿತ್ರಂ ॥

## ಸಾಯಣಭಾಷ್ಯಂ

ಬಾರ್ಹಸ್ಪತ್ಯೇ ಪಶಾವೇಷಾ ಹವಿಷೋಽನುವಾಕ್ಯಾ । ಪ್ರದಾನಾನಾಮಿತಿ ಖಂಡೇ ಸೂತ್ರಿತಂ । ಬೃಹಸ್ಪತೇ ಅತಿ ಯದರ್ಯೋ ಅರ್ಹಾತ್ತ್ರಿಮೃತ್ತಿಯಾ ಉಪ ವಾಚಃ ಸಚಂತೇ । ಆ. ೩-೭ । ಇತಿ ॥ ಐಷ್ಟೆವಾಶ್ವಿನಶಸ್ತ್ರೇ ಪರಿಧಾನೀಯಾ । ಸೂತ್ರಿತಂ । ಬೃಹಸ್ಪತೇ ಅತಿ ಯದರ್ಯೋ ಅರ್ಹಾದಿತಿ ಪರಿಧಾನೀಯಾ । ಆ. ೬-೫ । ಇತಿ ॥

ಋತಪ್ರಜಾತ ಸತ್ಯೇನೋತ್ಪನ್ನ ಹೇ ಬೃಹಸ್ಪತೇ ಅರ್ಯಃ ಶ್ರೇಷ್ಠೋ ಬ್ರಾಹ್ಮಣಃ ಸರ್ವಾನ್ ಕಾಮಾನತೀತ್ಯ ಯದ್ಬ್ರಹ್ಮವರ್ಚಸಂ ತೇಜೋಽರ್ಹಾತ್ । ಪೂಜಯೇತ್ ॥ ಅರ್ಹ ಪೂಜಾಯಾಂ । ಲೇಟ್ಯಡಾಗಮಃ ॥ ಜನೇಷು ಬ್ರಾಹ್ಮಣೇಷು ದ್ಯುಮತ್ ದೀಪ್ತಿಯುಕ್ತಂ ಕ್ರತುಮತ್ ಜ್ಞಾನೋಪೇತಂ ಯದ್ಬ್ರಹ್ಮವರ್ಚಸಂ ವಿಭಾತಿ । ವಿಶೇಷೇಣ ದೀಪ್ಯತೇ । ಯಚ್ಚ ಶವಸಾ ಬಲೇನ ಸ್ವಾಶ್ರಯಂ ಜನಂ ದೀದಯತ್ ॥ ದೀದಯತಿರ್ದೀಪ್ತಿಕರ್ಮಾ ॥ ದೀಪಯತಿ । ಚಿತ್ರಂ ಚಾಯನೀಯಂ ತದ್ಬ್ರಹ್ಮವರ್ಚಸರೂಪಂ ದ್ರವಿಣಮಸ್ಮಾಸು ಧೇಹಿ । ನಿಧೇಹಿ ॥ ಯದ್ವಾ ಅರ್ಯ ಉದಾರೋಽಪಿ ತ್ವಯಾ ದತ್ತಂ ಧನಮತೀವಾರ್ಹಾತ್ । ಶ್ರದ್ದಧೀತ । ಯಚ್ಚ ತ್ವದ್ದತ್ತಂ ಧನಂ ಜನೇಷು ತವ ಸ್ತೋತ್ರಂ ಕುರ್ವಾಣೇಷು ದೀಪ್ತಿಯುಕ್ತಂ ಕರ್ಮಸಾಧನಂ ಚ ವಿಭಾತಿ ಯಚ್ಚ ಧನಂ ಶವಸಾನ್ನಾದಿಸಮೃದ್ಧ್ಯಾ ದೀದಯತ್ ಸ್ವಾಶ್ರಯಂ ದೀಪಯತಿ ತಾದೃಶಂ ಧನಮಸ್ಮಾಸು ಧೇಹಿ ॥ ತಥಾ ಚ ಬ್ರಾಹ್ಮಣಂ । ಬೃಹಸ್ಪತೇ ಅತಿ ಯದರ್ಯೋ ಅರ್ಹಾದಿತ್ಯೇತಯಾ ಪರಿದಧ್ಯಾತ್ತೇಜಸ್ಕಾಮೋ ಬ್ರಹ್ಮವರ್ಚಸಕಾಮೋಽತೀವ ವಾನ್ಯಾನ್ಬ್ರಹ್ಮವರ್ಚಸಮರ್ಹತಿ ದ್ಯುಮದಿತಿ ದ್ಯುಮದಿವ ವೈ ಬ್ರಹ್ಮವರ್ಚಸಂ ವಿಭಾತೀತಿ ವೀವ ವೈ ಬ್ರಹ್ಮವರ್ಚಸಂ ಭಾತಿ ಯದ್ದೀದಯಚ್ಛವಸ ಋತಪ್ರಜಾತೇತಿ ದೀದಾಯೇವ ವೈ ಬ್ರಹ್ಮವರ್ಚಸಂ ತದಸ್ಮಾಸು ದ್ರವಿಣಂ ಧೇಹಿ ಚಿತ್ರಮಿತಿ ಚಿತ್ರಮಿವ ವೈ ಬ್ರಹ್ಮವರ್ಚಸಂ ಬ್ರಹ್ಮವರ್ಚಸೀ ಬ್ರಹ್ಮಯಶಸೀ ಭವತಿ । ಐ. ಬ್ರಾ. ೪-೧೧ । ಇತಿ ॥

## ಪ್ರತಿಪದಾರ್ಥ

ಋತಪ್ರಜಾತ—ಸತ್ಯದಿಂದ ಉತ್ಪನ್ನನಾದ । ಬೃಹಸ್ಪತೇ—ಎಲೈ ಬೃಹಸ್ಪತಿಯೇ । ಅರ್ಯಃ—ಶ್ರೇಷ್ಠನಾದ ಯಜಮಾನನು । ಅತಿ—ಉಳಿದದೆಲ್ಲದಕ್ಕಿಂತಲೂ ಹೆಚ್ಚಾಗಿ । ಯತ್—ಯಾವುದನ್ನು । ಅರ್ಹಾತ್—ಪೂಜಿಸುವನೋ, (ಮತ್ತು ಯಾವುದು) । ಜನೇಷು—ಯಜಮಾನರಲ್ಲಿ । ದ್ಯುಮತ್—ಕಾಂತಿಯುತವಾಗಿಯೂ । ಕ್ರತುಮತ್—ಜ್ಞಾನದಿಂದ ಯುಕ್ತವಾಗಿಯೂ । ವಿಭಾತಿ—ವಿಶೇಷವಾಗಿ ಪ್ರಕಾಶಿಸುತ್ತದೆಯೋ । ಯತ್—ಯಾವುದು । ಶವಸಾ—ತನ್ನ ಶಕ್ತಿಯಿಂದ । ದೀದಯತ್—ತನ್ನನ್ನು ಆಶ್ರಯಿಸಿದವರನ್ನು ಪ್ರಕಾಶಿಸುವಂತೆ ಮಾಡುವುದೋ । ಚಿತ್ರಂ—ಅಪೇಕ್ಷಿತವಾದ । ತತ್—ಆ ಬ್ರಹ್ಮವರ್ಚಸರೂಪವಾದ । ದ್ರವಿಣಂ—ಧನವನ್ನು । ಅಸ್ಮಾಸು—ನಮ್ಮಲ್ಲಿ । ಧೇಹಿ—ಸ್ಥಾಪಿಸು.

## ಭಾವಾರ್ಥ

ಸತ್ಯೋತ್ಪನ್ನನಾದ ಎಲೈ ಬೃಹಸ್ಪತಿಯೇ, ಶ್ರೇಷ್ಠನಾದ ಯಜಮಾನನು ಉಳಿದೆಲ್ಲಾ ಸಂಪತ್ತಿಗಿಂತಲೂ ಅಧಿಕವಾಗಿ ಯಾವುದನ್ನು ಪೂಜಿಸುವನೋ ಮತ್ತು ಯಾವುದು ಯಜಮಾನರಲ್ಲಿ ಕಾಂತಿಯುತವಾಗಿಯೂ, ಜ್ಞಾನ

ದಿಂದ ಕೂಡಿಯೂ ವಿಶೇಷವಾಗಿ ಪ್ರಕಾಶಿಸುತ್ತದೆಯೋ, ಯಾವುದು ತನ್ನನ್ನು ಆಶ್ರಯಸಿದವರನ್ನು ತನ್ನ ಶಕ್ತಿಯಿಂದ ಚೈತನ್ಯಯುಕ್ತರನ್ನಾಗಿ ಮಾಡುವುದೋ ಅಂತಹ ಬ್ರಹ್ಮವರ್ಚಸರೂಪವಾದುದೂ ಅಪೇಕ್ಷಿತವಾದುದೂ ಆದ ಧನವನ್ನು ನಮ್ಮಲ್ಲಿ ಸ್ಥಾಪಿಸು.

### English Translation

Brihaspati, born of truth, grant us that wonderful treasure, wherewith the pious man may worship exceedingly ; that (wealth) which shines amongst men : which is endowed with lustre, (is) the means of (performing holy) rites, and invigorates (its possesor) with strength.

### ವಿಶೇಷವಿಷಯಗಳು

ಈ ಋಕ್ಕಿಗೆ ಸಾಯಣರು ಎರಡುವಿಧವಾದ ಅರ್ಥವನ್ನು ವಿವರಿಸಿರುವರು, ಮತ್ತು ಇದರಲ್ಲಿರುವ ದ್ರವಿಣ ಶಬ್ದಕ್ಕೆ ಧನವೆಂಬ ಸಾಧಾರಣವಾದ ಅರ್ಥವನ್ನು ಹೇಳಿರುವರು. ಆದರೆ ಐತರೇಯ ಬ್ರಾಹ್ಮಣದಲ್ಲಿ ಈ ಋಕ್ಕಿನ ಅರ್ಥವನ್ನು ವಿವರಿಸುತ್ತಾ ದ್ರವಿಣಶಬ್ದಕ್ಕೆ ಬ್ರಹ್ಮವರ್ಚಸ್ಸೆಂಬ ಅರ್ಥವನ್ನು ಹೇಳಲಾಗಿದೆ. ಎರಡುವಿಧವಾದ ಅರ್ಥಗಳೂ ಗ್ರಾಹ್ಯವಾಗಿರುವುದರಿಂದ ಅವುಗಳನ್ನು ಇಲ್ಲಿ ವಿಶದವಾಗಿ ವಿವರಿಸಲಾಗಿದೆ.

**ಋತಪ್ರಜಾತ—ಸತ್ಯೇನೋತ್ಪನ್ನ** | ಸತ್ಯದಿಂದ ಎಂದರೆ ವಿಶ್ವನಿಯಮರೂಪವಾದ ಸತ್ಯದಿಂದ ಉತ್ಪನ್ನನಾದ ಎಂದರ್ಥವು. ಋತಶಬ್ದಕ್ಕೆ ನಾನಾರ್ಥಗಳಿರುವುದರಿಂದ ಈ ಶಬ್ದಕ್ಕೆ ನಾನಾವಿಧ ಅರ್ಥಗಳನ್ನು ಹೇಳಬಹುದು. ಇಲ್ಲಿ ಸತ್ಯರೂಪನಾದ ಎಂಬ ಅರ್ಥವು ಅಭಿವ್ಯಕ್ತವಾಗುವುದು. ಎಂದರೆ ಬೃಹಸ್ಪತಿಯಿಂದಲೇ ಮಂತ್ರಗಳು ಉತ್ಪನ್ನವಾಗುವುದೆಂದು (ಹೊರಹೊರಡುವುದೆಂದು) ಹಿಂದೆಯೇ ಹೇಳಿರುವುದರಿಂದ ಮಂತ್ರಗಳೂ ಮಂತ್ರಗಳಲ್ಲಿ ಪ್ರತಿಪಾದಿತವಾದ ವಿಷಯಗಳೂ, ಬೃಹಸ್ಪತಿಯು ನೆರವೇರಿಸುವ ಕಾರ್ಯಗಳೂ ಎಲ್ಲವೂ ಸತ್ಯಾತ್ಮಕವಾಗಿಯೇ ಇರುವವು ಎಂದು ಮುಖ್ಯಾಭಿಪ್ರಾಯವು. **ಋತಪ್ರಜಾತವೆಂಬ** ಶಬ್ದವು ಋಗ್ವೇದದಲ್ಲಿ ಈ ಋಕ್ಕಿನಲ್ಲಿಯೂ—

**ಸೋಮೋ ನ ವೇಧಾ ಋತಪ್ರಜಾತಃ ಪಶುರ್ನ ಶಿಶ್ವಾ ವಿಭುರ್ದೂರೇಭಾಃ |**

(ಋ. ಸಂ. ೧-೬೫-೧೦)

**ಇಮಾಂ ಧಿಯಂ ಸಪ್ತಶೀರ್ಷ್ಣೀಂ ಪಿತಾ ನ ಋತಪ್ರಜಾತಾಂ ಬೃಹತೀಮವಿಂದತ್ |**

(ಋ. ಸಂ. ೧೦-೬೭-೧)

ಎಂಬ ಋಕ್ಕುಗಳಲ್ಲಿಯೂ ಪಠಿತವಾಗಿದೆ. ಮೊದಲನೆಯದರಲ್ಲಿ ಅಗ್ನಿಪರವಾಗಿಯೂ ಎರಡನೆಯ ಋಕ್ಕಿನಲ್ಲಿ ಬೃಹಸ್ಪತಿಪರವಾಗಿಯೂ ಈ ಶಬ್ದದ ಪ್ರಯೋಗವಿದೆ.

**ಬೃಹಸ್ಪತೇ ಅರ್ಯಃ ಅತಿ ಯತ್ ಅರ್ಹಾತ್—ಹೇ ಬೃಹಸ್ಪತೇ ಶ್ರೇಷ್ಠೋ ಬ್ರಾಹ್ಮಣಃ ಸರ್ವಾನ್ಕಾಮಾನತೀತ್ಯ ಯದ್ಬ್ರಹ್ಮವರ್ಚಸಂ ತೇಜಃ ಪೂಜಯೇತ್** | ಎಲೈ ಬೃಹಸ್ಪತಿಯೇ, ವರ್ಣಗಳಲ್ಲಿ ಅಥವಾ ಮನುಷ್ಯರಲ್ಲಿ ಶ್ರೇಷ್ಠನಾದ ಬ್ರಾಹ್ಮಣನು ಸಮಸ್ತಕಾಮಾಭಿಲಾಷೆಗಳನ್ನೂ ತ್ಯಜಿಸಿ ಎಂದರೆ ನಿಕೃಷ್ಟವಾಗಿ ಎಣಿಸಿ ಅತ್ಯುತ್ತಮವಾದ ಬ್ರಹ್ಮವರ್ಚಸ್ಸನ್ನು ಪೂಜಿಸುವನೋ (ಅಪೇಕ್ಷಿಸುವನೋ) ಅಂತಹ ತೇಜೋರೂಪವಾದ ಧನವನ್ನು

ಅನುಗ್ರಹಿಸು ಎಂದು **ತದಸ್ಮಾಸು ದ್ರವಿಣಂ ಧೇಹಿ ಚಿತ್ರಂ** ಎಂಬ ಕೊನೆಯ ವಾಕ್ಯದೊಡನೆ ಸಮನ್ವಯವು. ಬ್ರಹ್ಮವರ್ಚಸ್ಸೆಂದರೆ ಬ್ರಹ್ಮಸ್ವರೂಪವನ್ನು ಚೆನ್ನಾಗಿ ಮನನಮಾಡಿ ತಿಳಿದು ಅದನ್ನು ಅನುಷ್ಠಾನದಲ್ಲಿಯೂ ವ್ಯಕ್ತಪಡಿಸುತ್ತಾ ಇರುವ ಪುರುಷನಲ್ಲಿ ಒಂದುವಿಧವಾದ ಶ್ರೇಷ್ಠವಾದ ಕಳೆ ಇರುವುದು. ಇದನ್ನೇ ಬ್ರಹ್ಮವರ್ಚಸ್ಸೆಂದು ಹೇಳುವರು. ಮತ್ತು ವೇದಾಧ್ಯಯನವನ್ನು ನಿಯಮವಾಗಿ ಮಾಡಿ ವೇದಮಂತ್ರಗಳ ಅರ್ಥವನ್ನು ಚೆನ್ನಾಗಿ ತಿಳಿದು ಯಜ್ಞಯಾಗಾದಿಗಳನ್ನು ವಿಧ್ಯುಕ್ತವಾಗಿ ಆಚರಿಸುತ್ತಾ, ವಿಶ್ವದಲ್ಲಿರುವ ಸಕಲಪದಾರ್ಥಗಳೂ ಪರಬ್ರಹ್ಮಸ್ವರೂಪವೆಂದೂ, ಬ್ರಹ್ಮವಸ್ತುವನ್ನು ಬಿಟ್ಟು ಬೇರೆ ವಸ್ತುವೇ ಇಲ್ಲವೆಂದೂ ಅನುಭವಪೂರ್ವಕವಾಗಿ ಚೆನ್ನಾಗಿ ಮನನಮಾಡಿ ಸರ್ವಸಮಭಾವದಿಂದ ವರ್ತಿಸುತ್ತಾ ಯಾವ ವಿಧವಾದ ಸಂಶಯಗಳೂ ಇಲ್ಲದೆ ಶಾಂತಿಸಮಾಧಾನಗಳಿಂದ ಯಾವಾಗಲೂ ಸಂತೋಷಚಿತ್ತನಾಗಿ ಇರುವ ಪುರುಷನಲ್ಲಿರುವ ಕಳೆಯೇ ಬ್ರಹ್ಮವರ್ಚಸ್ಸೆಂದು ತಿಳಿಯಬೇಕು. ಇಂತಹ ಬ್ರಹ್ಮವರ್ಚಸ್ಸು ಋಷಿಗಳಲ್ಲಿಯೂ ತಪಸ್ವಿಗಳಲ್ಲಿಯೂ ಮಹಾಪುರುಷರಲ್ಲಿಯೂ ಇರುವುದು. ಲೋಕವ್ಯವಹಾರಗಳಲ್ಲಿ ವಿಶೇಷ ಅಭಿಮಾನವಿಡದೆ ವೈದಿಕ ಕರ್ಮಗಳಲ್ಲಿಯೂ ತತ್ತ್ವಜ್ಞಾನಾರ್ಜನೆಯಲ್ಲಿಯೂ ಪ್ರವೃತ್ತರಾಗಿರುವವರಿಗೆ ಮಾತ್ರ ಬ್ರಹ್ಮವರ್ಚಸ್ಸು ಲಭಿಸುವ ಯೋಗವಿರುವುದು. ಇಂತಹ ಬ್ರಹ್ಮವರ್ಚಸ್ಸನ್ನು ಅನುಗ್ರಹಿಸಬೇಕೆಂದು ಋಷಿಯು ಬೃಹಸ್ಪತಿಯನ್ನು ಪ್ರಾರ್ಥಿಸಿರುವನು. ಇಂತಹ ಪ್ರಾರ್ಥನೆಯು ಋಗ್ವೇದದಲ್ಲಿ ವಿಶೇಷವಾಗಿಲ್ಲದಿದ್ದರೂ ಯಜುರ್ವೇದದಲ್ಲಿ ಅಗ್ನಿಯನ್ನೂ ಇತರ ದೇವತೆಗಳನ್ನೂ ಸ್ತುತಿಸುವಾಗ ಬ್ರಹ್ಮವರ್ಚಸ್ಸನ್ನು ಅನುಗ್ರಹಿಸಬೇಕೆಂಬ ಪ್ರಾರ್ಥನೆಯು ವಿಶೇಷವಾಗಿ ಕಂಡುಬರುವುದು-

**ಜನೇಷು ದ್ಯುಮತ್ ಕ್ರತುಮತ್ ವಿಭಾತಿ—ಬ್ರಾಹ್ಮಣೇಷು ದೀಪ್ತಿಯುಕ್ತಂ ಜ್ಞಾನೋಪೇತಂ ಯದ್ಬ್ರಹ್ಮವರ್ಚಸಂ ವಿಭಾತಿ ।** ಈ ವಾಕ್ಯವೂ ಮುಂದಿನ **ಯದ್ದೀದಯಚ್ಛವಸಾ** ಎಂಬ ವಾಕ್ಯವೂ ಸಹ ಹಿಂದಿನ ವಾಕ್ಯದಂತೆ ಕೊನೆಯ ವಾಕ್ಯದೊಡನೆ ಸಮನ್ವಯವು. ಬ್ರಾಹ್ಮಣರಲ್ಲಿ ಪ್ರಕಾಶಮಾನವಾಗಿ ಬೆಳಗುತ್ತಿರುವುದೂ ಜ್ಞಾನವಿಶಿಷ್ಟವಾದುದೂ ಆದ ಯಾವ ಬ್ರಹ್ಮವರ್ಚಸ್ಸು ಪ್ರಕಾಶಿಸುತ್ತಿರುವುವೋ ಅಂತಹ ವರ್ಚಸ್ಸನ್ನು ಅನುಗ್ರಹಿಸು. ಈ ವಾಕ್ಯದಲ್ಲಿಯೂ ಬ್ರಹ್ಮವರ್ಚಸ್ಸಿನ ಸ್ವರೂಪವನ್ನು ವಿವರಿಸಲಾಗಿದೆ. ಈ ಬ್ರಹ್ಮವರ್ಚಸ್ಸು ಸಾಧಾರಣವಾಗಿ ಬ್ರಾಹ್ಮಣರಲ್ಲಿಯೇ ಇರುವುದು. ಈ ವರ್ಚಸ್ಸು ಬ್ರಹ್ಮಜ್ಞಾನದಿಂದ ಕೂಡಿರುವುದರಿಂದ ಬ್ರಹ್ಮವರ್ಚಸ್ಸಿನಿಂದ ಬೆಳಗುವವನು ಸರ್ವಜ್ಞನೆಂದು ಹೇಳಬಹುದು.

**ಯತ್ ದೀದಯತ್ ಶವಸಾ—ಬಲೇನ ಸ್ವಾಶ್ರಯಂ ಜನಂ ದೀಪಯತಿ ।** ಈ ಬ್ರಹ್ಮವರ್ಚಸ್ಸು ತನ್ನ ಸ್ವಸಾಮರ್ಥ್ಯದಿಂದ ತನ್ನನ್ನಾಶ್ರಯಿಸಿರುವ ಜನರಲ್ಲಿ ಅಪೂರ್ವಕಾಂತಿಯನ್ನುಂಟುಮಾಡುವುದು.

**ತತ್ ಅಸ್ಮಾಸು ದ್ರವಿಣಂ ಧೇಹಿ ಚಿತ್ರಂ**—ಮೇಲಿನ ಮೂರು ವಾಕ್ಯಗಳಲ್ಲಿಯೂ ವರ್ಣಿತವಾಗಿರುವ ಮತ್ತು ಆಶ್ಚರ್ಯಕರವಾದ ಬ್ರಹ್ಮವರ್ಚಸ್ಸೆಂಬ ಧನವನ್ನು ನಮ್ಮಲ್ಲಿ ಸ್ಥಾಪಿಸು ಎಂದರೆ ನಮಗೆ ಕೊಡು ಎಂದು ಬೃಹಸ್ಪತಿಯನ್ನು ಪ್ರಾರ್ಥಿಸಲಾಗಿದೆ.

ಮೇಲೆ ಹೇಳಿದ ಅರ್ಥವಿವರಣೆಯು ದ್ರವಿಣಶಬ್ದಕ್ಕೆ ಬ್ರಹ್ಮವರ್ಚಸ್ಸೆಂಬ ಅರ್ಥವನ್ನನುಸರಿಸಿ ಹೇಳಲಾಗಿದೆ. ಇದಲ್ಲದೆ ದ್ರವಿಣಶಬ್ದಕ್ಕೆ ಧನವೆಂಬ ಸಾಮಾನ್ಯಾರ್ಥಮಾಡಿ ಸಾಯಣರು ಮತ್ತೊಂದು ವಿಧವಾದ ಅರ್ಥವಿವರಣೆಯನ್ನೂ ಮಾಡಿರುವರು—

ದಿಂದ ಕೂಡಿಯೂ ವಿಶೇಷವಾಗಿ ಪ್ರಕಾಶಿಸುತ್ತದೆಯೋ, ಯಾವುದು ತನ್ನನ್ನು ಆಶ್ರಯಸಿದವರನ್ನು ತನ್ನ ಶಕ್ತಿಯಿಂದ ಚೈತನ್ಯಯುಕ್ತರನ್ನಾಗಿ ಮಾಡುವುದೋ ಅಂತಹ ಬ್ರಹ್ಮವರ್ಚಸರೂಪವಾದುದೂ ಅಪೇಕ್ಷಿತವಾದುದೂ ಆದ ಧನವನ್ನು ನಮ್ಮಲ್ಲಿ ಸ್ಥಾಪಿಸು.

## English Translation

Brihaspati, born of truth, grant us that wonderful treasure, wherewith the pious man may worship exceedingly; that (wealth) which shines amongst men: which is endowed with lnstre, (is) the means of (performing holy) rites, and invigorates (its possesor) with strength.

## ವಿಶೇಷವಿಷಯಗಳು

ಈ ಋಕ್ಕಿಗೆ ಸಾಯಣರು ಎರಡುವಿಧವಾದ ಅರ್ಥವನ್ನು ವಿವರಿಸಿರುವರು, ಮತ್ತು ಇದರಲ್ಲಿರುವ ದ್ರವಿಣ ಶಬ್ದಕ್ಕೆ ಧನವೆಂಬ ಸಾಧಾರಣವಾದ ಅರ್ಥವನ್ನು ಹೇಳಿರುವರು. ಆದರೆ ಐತರೇಯ ಬ್ರಾಹ್ಮಣದಲ್ಲಿ ಈ ಋಕ್ಕಿನ ಅರ್ಥವನ್ನು ವಿವರಿಸುತ್ತಾ ದ್ರವಿಣಶಬ್ದಕ್ಕೆ ಬ್ರಹ್ಮವರ್ಚಸ್ಸೆಂಬ ಅರ್ಥವನ್ನು ಹೇಳಲಾಗಿದೆ. ಎರಡುವಿಧವಾದ ಅರ್ಥಗಳೂ ಗ್ರಾಹ್ಯವಾಗಿರುವುದರಿಂದ ಅವುಗಳನ್ನು ಇಲ್ಲಿ ವಿಶದವಾಗಿ ವಿವರಿಸಲಾಗಿದೆ.

**ಋತಪ್ರಜಾತ—ಸತ್ಯೇನೋತ್ಪನ್ನ** । ಸತ್ಯದಿಂದ ಎಂದರೆ ವಿಶ್ವನಿಯಮರೂಪವಾದ ಸತ್ಯದಿಂದ ಉತ್ಪನ್ನನಾದ ಎಂದರ್ಥವು. ಋತಶಬ್ದಕ್ಕೆ ನಾನಾರ್ಥಗಳಿರುವುದರಿಂದ ಈ ಶಬ್ದಕ್ಕೆ ನಾನಾವಿಧ ಅರ್ಥಗಳನ್ನು ಹೇಳಬಹುದು. ಇಲ್ಲಿ ಸತ್ಯರೂಪನಾದ ಎಂಬ ಅರ್ಥವು ಅಭಿವ್ಯಕ್ತವಾಗುವುದು. ಎಂದರೆ ಬೃಹಸ್ಪತಿಯಿಂದಲೇ ಮಂತ್ರಗಳು ಉತ್ಪನ್ನವಾಗುವುದೆಂದು (ಹೊರಹೊರಡುವುದೆಂದು) ಹಿಂದೆಯೇ ಹೇಳಿರುವುದರಿಂದ ಮಂತ್ರಗಳೂ ಮಂತ್ರಗಳಲ್ಲಿ ಪ್ರತಿಪಾದಿತವಾದ ವಿಷಯಗಳೂ, ಬೃಹಸ್ಪತಿಯು ನೆರವೇರಿಸುವ ಕಾರ್ಯಗಳೂ ಎಲ್ಲವೂ ಸತ್ಯಾತ್ಮಕವಾಗಿಯೇ ಇರುವವು ಎಂದು ಮುಖ್ಯಾಭಿಪ್ರಾಯವು. **ಋತಪ್ರಜಾತವೆಂಬ** ಶಬ್ದವು ಋಗ್ವೇದದಲ್ಲಿ ಈ ಋಕ್ಕಿನಲ್ಲಿಯೂ—

**ಸೋಮೋ ನ ವೇಧಾ ಋತಪ್ರಜಾತಃ ಪಶುರ್ನ ಶಿಶ್ವಾ ವಿಭುರ್ದೂರೇಭಾಃ ।**

(ಋ. ಸಂ. ೧-೬೫-೧೦)

**ಇಮಾಂ ಧಿಯಂ ಸಪ್ತಶೀರ್ಷ್ಣೀಂ ಪಿತಾ ನ ಋತಪ್ರಜಾತಾಂ ಬೃಹತೀಮವಿಂದತ್ ।**

(ಋ. ಸಂ. ೧೦-೬೭-೧)

ಎಂಬ ಋಕ್ಕುಗಳಲ್ಲಿಯೂ ಪಠಿತವಾಗಿದೆ. ಮೊದಲನೆಯದರಲ್ಲಿ ಅಗ್ನಿಪರವಾಗಿಯೂ ಎರಡನೆಯ ಋಕ್ಕಿನಲ್ಲಿ ಬೃಹಸ್ಪತಿಪರವಾಗಿಯೂ ಈ ಶಬ್ದದ ಪ್ರಯೋಗವಿದೆ.

**ಬೃಹಸ್ಪತೇ ಅರ್ಯಃ ಅತಿ ಯತ್ ಅರ್ಹಾತ್—ಹೇ ಬೃಹಸ್ಪತೇ ಶ್ರೇಷ್ಠೋ ಬ್ರಾಹ್ಮಣಃ ಸರ್ವಾನ್ಕಾಮಾನತೀತ್ಯ ಯದ್ಬ್ರಹ್ಮವರ್ಚಸಂ ತೇಜಃ ಪೂಜಯೇತ್** । ಎಲೈ ಬೃಹಸ್ಪತಿಯೇ, ವರ್ಣಗಳಲ್ಲಿ ಅಥವಾ ಮನುಷ್ಯರಲ್ಲಿ ಶ್ರೇಷ್ಠನಾದ ಬ್ರಾಹ್ಮಣನು ಸಮಸ್ತಕಾಮಾಭಿಲಾಷೆಗಳನ್ನೂ ತ್ಯಜಿಸಿ ಎಂದರೆ ನಿಕೃಷ್ಟವಾಗಿ ಎಣಿಸಿ ಅತ್ಯುತ್ತಮವಾದ ಬ್ರಹ್ಮವರ್ಚಸ್ಸನ್ನು ಪೂಜಿಸುವನೋ (ಅಪೇಕ್ಷಿಸುವನೋ) ಅಂತಹ ತೇಜೋರೂಪವಾದ ಧನವನ್ನು

ಅನುಗ್ರಹಿಸು ಎಂದು **ತದಸ್ಮಾಸು ದ್ರವಿಣಂ ಧೇಹಿ ಚಿತ್ರಂ** ಎಂಬ ಕೊನೆಯ ವಾಕ್ಯದೊಡನೆ ಸಮನ್ವಯವು. ಬ್ರಹ್ಮವರ್ಚಸ್ಸೆಂದರೆ ಬ್ರಹ್ಮಸ್ವರೂಪವನ್ನು ಚೆನ್ನಾಗಿ ಮನನಮಾಡಿ ತಿಳಿದು ಅದನ್ನು ಅನುಷ್ಠಾನದಲ್ಲಿಯೂ ವ್ಯಕ್ತ ಪಡಿಸುತ್ತಾ ಇರುವ ಪುರುಷನಲ್ಲಿ ಒಂದುವಿಧವಾದ ಶ್ರೇಷ್ಠವಾದ ಕಳೆ ಇರುವುದು. ಇದನ್ನೇ ಬ್ರಹ್ಮವರ್ಚಸ್ಸೆಂದು ಹೇಳುವರು. ಮತ್ತು ವೇದಾಧ್ಯಯನವನ್ನು ನಿಯಮವಾಗಿ ಮಾಡಿ ವೇದಮಂತ್ರಗಳ ಅರ್ಥವನ್ನು ಚೆನ್ನಾಗಿ ತಿಳಿದು ಯಜ್ಞಯಾಗಾದಿಗಳನ್ನು ವಿಧ್ಯುಕ್ತವಾಗಿ ಆಚರಿಸುತ್ತಾ, ವಿಶ್ವದಲ್ಲಿರುವ ಸಕಲಪದಾರ್ಥಗಳೂ ಪರಬ್ರಹ್ಮಸ್ವರೂಪ ವೆಂದೂ, ಬ್ರಹ್ಮವಸ್ತುವನ್ನು ಬಿಟ್ಟು ಬೇರೆ ವಸ್ತುವೇ ಇಲ್ಲವೆಂದೂ ಅನುಭವಪೂರ್ವಕವಾಗಿ ಚೆನ್ನಾಗಿ ಮನನಮಾಡಿ ಸರ್ವಸಮಭಾವದಿಂದ ವರ್ತಿಸುತ್ತಾ ಯಾವ ವಿಧವಾದ ಸಂಶಯಗಳೂ ಇಲ್ಲದೆ ಶಾಂತಿಸಮಾಧಾನಗಳಿಂದ ಯಾವಾ ಗಲೂ ಸಂತೋಷಚಿತ್ತನಾಗಿ ಇರುವ ಪುರುಷನಲ್ಲಿರುವ ಕಳೆಯೇ ಬ್ರಹ್ಮವರ್ಚಸ್ಸೆಂದು ತಿಳಿಯಬೇಕು. ಇಂತಹ ಬ್ರಹ್ಮವರ್ಚಸ್ಸು ಋಷಿಗಳಲ್ಲಿಯೂ ತಪಸ್ವಿಗಳಲ್ಲಿಯೂ ಮಹಾಪುರುಷರಲ್ಲಿಯೂ ಇರುವುದು. ಲೋಕವ್ಯವಹಾರಗಳಲ್ಲಿ ವಿಶೇಷ ಅಭಿಮಾನವಿಡದೆ ವೈದಿಕ ಕರ್ಮಗಳಲ್ಲಿಯೂ ತತ್ತ್ವಜ್ಞಾನಾರ್ಜನೆಯಲ್ಲಿಯೂ ಪ್ರವೃತ್ತರಾಗಿರುವವರಿಗೆ ಮಾತ್ರ ಬ್ರಹ್ಮವರ್ಚಸ್ಸು ಲಭಿಸುವ ಯೋಗವಿರುವುದು. ಇಂತಹ ಬ್ರಹ್ಮವರ್ಚಸ್ಸನ್ನು ಅನುಗ್ರಹಿಸಬೇಕೆಂದು ಋಷಿಯು ಬೃಹಸ್ಪತಿಯನ್ನು ಪ್ರಾರ್ಥಿಸಿರುವನು. ಇಂತಹ ಪ್ರಾರ್ಥನೆಯು ಋಗ್ವೇದದಲ್ಲಿ ವಿಶೇಷವಾಗಿಲ್ಲದಿದ್ದರೂ ಯಜುರ್ವೇದ ದಲ್ಲಿ ಅಗ್ನಿಯನ್ನೂ ಇತರ ದೇವತೆಗಳನ್ನೂ ಸ್ತುತಿಸುವಾಗ ಬ್ರಹ್ಮವರ್ಚಸ್ಸನ್ನು ಅನುಗ್ರಹಿಸಬೇಕೆಂಬ ಪ್ರಾರ್ಥನೆಯು ವಿಶೇಷವಾಗಿ ಕಂಡುಬರುವುದು.

**ಜನೇಷು ದ್ಯುಮತ್ ಕ್ರತುಮತ್ ವಿಭಾತಿ**—ಬ್ರಾಹ್ಮಣೇಷು ದೀಪ್ತಿಯುಕ್ತಂ ಜ್ಞಾನೋಪೇತಂ ಯದ್ಬ್ರಹ್ಮವರ್ಚಸಂ ವಿಭಾತಿ। ಈ ವಾಕ್ಯವೂ ಮುಂದಿನ **ಯದ್ದೀದಯಚ್ಛವಸಾ** ಎಂಬ ವಾಕ್ಯವೂ ಸಹ ಹಿಂದಿನ ವಾಕ್ಯದಂತೆ ಕೊನೆಯ ವಾಕ್ಯದೊಡನೆ ಸಮನ್ವಯವು. ಬ್ರಾಹ್ಮಣರಲ್ಲಿ ಪ್ರಕಾಶಮಾನವಾಗಿ ಬೆಳಗುತ್ತಿರು ವುದೂ ಜ್ಞಾನವಿಶಿಷ್ಟವಾದುದೂ ಆದ ಯಾವ ಬ್ರಹ್ಮವರ್ಚಸ್ಸು ಪ್ರಕಾಶಿಸುತ್ತಿರುವುದೋ ಅಂತಹ ವರ್ಚಸ್ಸನ್ನು ಅನುಗ್ರಹಿಸು. ಈ ವಾಕ್ಯದಲ್ಲಿಯೂ ಬ್ರಹ್ಮವರ್ಚಸ್ಸಿನ ಸ್ವರೂಪವನ್ನು ವಿವರಿಸಲಾಗಿದೆ. ಈ ಬ್ರಹ್ಮವರ್ಚಸ್ಸು ಸಾಧಾರಣವಾಗಿ ಬ್ರಾಹ್ಮಣರಲ್ಲಿಯೇ ಇರುವುದು. ಈ ವರ್ಚಸ್ಸು ಬ್ರಹ್ಮಜ್ಞಾನದಿಂದ ಕೂಡಿರುವುದರಿಂದ ಬ್ರಹ್ಮ ವರ್ಚಸ್ಸಿನಿಂದ ಬೆಳಗುವವನು ಸರ್ವಜ್ಞನೆಂದು ಹೇಳಬಹುದು.

**ಯತ್ ದೀದಯತ್ ಶವಸಾ**—ಬಲೇನ ಸ್ವಾಶ್ರಯಂ ಜನಂ ದೀಪಯತಿ। ಈ ಬ್ರಹ್ಮವರ್ಚಸ್ಸು ತನ್ನ ಸ್ವಸಾಮರ್ಥ್ಯದಿಂದ ತನ್ನನ್ನಾಶ್ರಯಿಸಿರುವ ಜನರಲ್ಲಿ ಅಪೂರ್ವಕಾಂತಿಯನ್ನುಂಟುಮಾಡುವುದು.

**ತತ್ ಅಸ್ಮಾಸು ದ್ರವಿಣಂ ಧೇಹಿ ಚಿತ್ರಂ**—ಮೇಲಿನ ಮೂರು ವಾಕ್ಯಗಳಲ್ಲಿಯೂ ವರ್ಣಿತವಾಗಿರುವ ಮತ್ತು ಆಶ್ಚರ್ಯಕರವಾದ ಬ್ರಹ್ಮವರ್ಚಸ್ಸೆಂಬ ಧನವನ್ನು ನಮ್ಮಲ್ಲಿ ಸ್ಥಾಪಿಸು ಎಂದರೆ ನಮಗೆ ಕೊಡು ಎಂದು ಬೃಹ ಸ್ಪತಿಯನ್ನು ಪ್ರಾರ್ಥಿಸಲಾಗಿದೆ.

ಮೇಲೆ ಹೇಳಿದ ಅರ್ಥವಿವರಣೆಯು ದ್ರವಿಣಶಬ್ದಕ್ಕೆ ಬ್ರಹ್ಮವರ್ಚಸ್ಸೆಂಬ ಅರ್ಥವನ್ನನುಸರಿಸಿ ಹೇಳಲಾಗಿದೆ. ಇದಲ್ಲದೆ ದ್ರವಿಣಶಬ್ದಕ್ಕೆ ಧನವೆಂಬ ಸಾಮಾನ್ಯಾರ್ಥಮಾಡಿ ಸಾಯಣರು ಮತ್ತೊಂದು ವಿಧವಾದ ಅರ್ಥವಿವರಣೆ ಯನ್ನೂ ಮಾಡಿರುವರು—

**ಯದ್ವಾ ಅರ್ಯ ಉದಾರೋಽಪಿ ತ್ವಯಾ ದತ್ತಂ ಧನಮತೀವಾರ್ಹಾತ್ ಶ್ರದ್ಧಧೀತ । ಯಚ್ಚ ತ್ವದ್ದತ್ತಂ ಧನಂ ಜನೇಷು ತವ ಸ್ತೋತ್ರಂ ಕುರ್ವಾಣೇಷು ದೀಪ್ತಿಯುಕ್ತಂ ಕರ್ಮಸಾಧನಂ ಚ ವಿಭಾತಿ ಯಚ್ಚ ಧನಂ ಶವಸಾನ್ನಾದಿಸಮೃದ್ಧ್ಯಾ ದೀದಯತ್ ಸ್ವಾಶ್ರಯಂ ದೀಪಯತಿ ತಾದೃಶಂ ಧನಮಸ್ಮಾಸು ಧೇಹಿ ॥**

ಎಂದರೆ ಎಲೈ ಬೃಹಸ್ಪತಿಯೇ ನೀನು ಉದಾರಸ್ವಭಾವದವನಾಗಿದ್ದರೂ ನೀನು ಕೊಡುವ ಧನವನ್ನು ನಾವು ಬಹಳ ಶ್ರದ್ಧೆಯಿಂದ ಸ್ವೀಕರಿಸಬೇಕು. ಮತ್ತು ನೀನು ಕೊಡುವ ಧನವು ನಿನ್ನನ್ನು ಸ್ತೋತ್ರಮಾಡುವ ಜನರಿಗೆ ಶ್ರೇಷ್ಠವಾದ ಯಜ್ಞಾದಿಕರ್ಮಾನುಷ್ಠಾನಗಳಿಗೆ ಸಾಧನಭೂತವಾಗಿಯೂ ಸಮೃದ್ಧಿಯಾದ ಅನ್ನಾದ್ಯಾಹಾರಗಳನ್ನು ಕೊಡುವುದಾಗಿಯೂ, ಸರ್ವಕಾರ್ಯಗಳಿಗೂ ಆಶ್ರಯಭೂತವಾಗಿಯೂ ಇರುವುದು. ಇಂತಹ ಉತ್ತಮವಾದ ಧನವನ್ನು ನಮಗೆ ಕೊಡು ಎಂದು ಮುಖ್ಯಾಭಿಪ್ರಾಯವು.

ಐತರೇಯಬ್ರಾಹ್ಮಣದಲ್ಲಿ ಆಶ್ವಿನಶಸ್ತ್ರಮಂತ್ರಗಳ ಪರಿಸಮಾಪ್ತಿಯಲ್ಲಿ ಹೇಳಿರುವ ಈ ಋಕ್ಕಿನ ವಿವರಣೆಯನ್ನು ಇಲ್ಲಿ ಕೊಟ್ಟಿದೆ—

**ಬೃಹಸ್ಪತೇ ಅತಿ ಯದರ್ಯೋ ಅರ್ಹಾದಿತ್ಯೇತಯಾ ಪರಿದಧ್ಯಾತ್ತೇಜಸ್ಕಾಮೋ ಬ್ರಹ್ಮವರ್ಚಸಕಾಮೋಽತೀವ ವಾನ್ಯಾನ್ಬ್ರಹ್ಮವರ್ಚಸಮರ್ಹತಿ ॥**

ತೇಜಸ್ಸನ್ನೂ ಬ್ರಹ್ಮವರ್ಚಸ್ಸನ್ನೂ ಅಪೇಕ್ಷಿಸುವ ಪುರುಷನು—**ಬೃಹಸ್ಪತೇ ಅತಿ ಯದರ್ಯೋ ಅರ್ಹಾತ್** ಎಂಬ ಈ ಋಕ್ಕನ್ನು (ಆಶ್ವಿನಶಸ್ತ್ರಮಂತ್ರಗಳ ಪಠನಕಾಲದಲ್ಲಿ) ಪಠಿಸುವುದರಿಂದ ಇತರ ಎಲ್ಲಾ ಪುರುಷರಿಗಿಂತಲೂ ಅಧಿಕವಾಗಿ ಬ್ರಹ್ಮವರ್ಚಸ್ಸನ್ನು ಪಡೆಯುವನು. ಇಲ್ಲಿ ಅತಿ ಎಂಬ ಶಬ್ದವು ಇತರ ಎಲ್ಲಾ ಮನುಷ್ಯರಿಗಿಂತಲೂ ಎಂಬ ಅರ್ಥವನ್ನು ಸೂಚಿಸುವುದು.

**ದ್ಯುಮದಿತಿ ದ್ಯುಮದಿವ ವೈ ಬ್ರಹ್ಮವರ್ಚಸಂ ವಿಭಾತೀತಿ ವೀವ ವೈ ಬ್ರಹ್ಮವರ್ಚಸಂ ಭಾತಿ ।**

ಈ ಋಕ್ಕಿನ ಎರಡನೆಯ ಪಾದವಾದ **ದ್ಯುಮದ್ವಿಭಾತಿ ಕ್ರತುಮಜ್ಜನೇಷು** ಎಂಬ ವಾಕ್ಯದಲ್ಲಿರುವ **ದ್ಯುಮತ್** ಎಂಬ ಶಬ್ದವು ಬ್ರಹ್ಮವರ್ಚಸ್ಸಿನ ವಿಶೇಷಗುಣವನ್ನು ಪ್ರಶಂಸಿಸುವುದು. ಶ್ರುತಾಧ್ಯಯನಸಂಪತ್ತಿನಿಂದ ಕೂಡಿದ ಬ್ರಹ್ಮವರ್ಚಸ್ಸು ವಿದ್ವಜ್ಜನರ ಸಭೆಗಳಲ್ಲಿ ವಿಶೇಷವಾಗಿ ಬೆಳಗುತ್ತಿರುವುದೆಂದು ಅದರ ಗುಣವನ್ನು ವರ್ಣಿಸಲಾಗಿದೆ. ಇಲ್ಲಿ **ದ್ಯುಮತ್** ಎಂಬ ಶಬ್ದಕ್ಕೆ ಪ್ರಕಾಶಮಾನವಾದ (ಬ್ರಹ್ಮಜ್ಞಾನ ಪ್ರಾಪ್ತಿರೂಪವಾದ) ಬ್ರಹ್ಮವರ್ಚಸ್ಸೆಂದೂ, ವಿ ಎಂಬ ಶಬ್ದಕ್ಕೆ ವಿಶೇಷವಾಗಿ ಎಂದೂ ಅರ್ಥವು.

**ಯದ್ದೀದಯಚ್ಛವಸ ಋತಪ್ರಜಾತೇತಿ ದೀದಾಯೇವ ವೈ ಬ್ರಹ್ಮವರ್ಚಸಂ ।**

ಮೂರನೆಯ ಪಾದದಲ್ಲಿರುವ **ದೀದಯತ್** ಎಂಬ ಶಬ್ದವು—ಬ್ರಹ್ಮವರ್ಚಸ್ಸು ಬ್ರಾಹ್ಮಣರಲ್ಲಿ ಚೆನ್ನಾಗಿ ಪ್ರಕಾಶಿಸುವುದು ಎಂಬರ್ಥವನ್ನು ಸೂಚಿಸುವುದು.

**ತದಸ್ಮಾಸು ದ್ರವಿಣಂ ಧೇಹಿ ಚಿತ್ರಮಿತಿ ಚಿತ್ರಮಿವ ವೈ ಬ್ರಹ್ಮವರ್ಚಸಂ ।**

ನಾಲ್ಕನೆಯ ಪಾದದಲ್ಲಿರುವ ಚಿತ್ರಶಬ್ದವು ಬ್ರಹ್ಮವರ್ಚಸ್ಸಿಗೆ ವಿಶೇಷಣವಾಗಿ, ವೇದದಿಂದಲೂ ಶಾಸ್ತ್ರಾಚಾರಗಳಿಂದಲೂ ಉಂಟಾಗುವ ಬ್ರಹ್ಮವರ್ಚಸ್ಸು ಅತ್ಯಾಶ್ಚರ್ಯಕರವಾಗಿರುವುದು ಎಂಬರ್ಥವನ್ನು ಸೂಚಿಸುವುದು.

ಬ್ರಹ್ಮವರ್ಚಸೀ ಬ್ರಹ್ಮಯಶಸೀ ಭವತಿ ಯತ್ರೈವಂ ವಿದ್ವಾನೇತಯಾ ಪರಿದಧಾತಿ ತಸ್ಮಾದೇವಂ ವಿದ್ವಾನೇತಯಾ ಪರಿದಧ್ಯಾತ್ ||

(ಐ. ಬ್ರಾ. ೧೭-೫)

ಈ ಋಕ್ಕಿನ ಪಠನದಿಂದ ಪುರುಷನು ಬ್ರಹ್ಮವರ್ಚಸ್ಸನ್ನೂ ಯಶಸ್ಸನ್ನೂ ಪಡೆಯುವನು. ಆದುದರಿಂದ ಬ್ರಹ್ಮವರ್ಚಸ್ಸನ್ನೂ ಕೀರ್ತಿಯನ್ನೂ ಅಪೇಕ್ಷಿಸುವ ಪುರುಷನು ಈ ಋಕ್ಕನ್ನು ಪಠಿಸಬೇಕು.

English Translation of the Brahmana portion quoted above—He who wishes for beauty and acquirement of sacred knowledge ought to conclude with ಬೃಹಸ್ಪತೇ ಅತಿ ಯತ್ (ಋ. ಸಂ. ೨-೨೩-೧೫). Here the word ಅತಿ *i.e.* beyond means that he acquires more of sacred knowledge than other men do. The term ದ್ಯುಮತ್ in the second pada means "acquirement of sacred knowledge" and ವಿಭಾತಿ means, that the sacred knowlodge shines everywhere, as it were. The term ದೀದಯತ್ in the third pada means, that the sacred knowledge has been shining forth (in the Brahmanas). The term ಚಿತ್ರ in the fourth pada means, that the sacred knowledge is, as it were apparent (ಚಿತ್ರಂ). He at whose sacrifice there is Hotar knowing that he must conclude with this verse becomes endowed with sacred knowledge and famous sanctity.

(Martin Haug's Translation of Aitareya Brahmana p. 277).

---

ಸಂಹಿತಾಪಾಠಃ

ಮಾ ನಃ ಸ್ತೇನೇಭ್ಯೋ ಯೇ ಅಭಿ ದ್ರುಹಸ್ಪದೇ ನಿರಾಮಿಣೋ ರಿಪವೋಽನ್ನೇಷು ಜಾಗೃಧುಃ ।
ಆ ದೇವಾನಾಮೋಹತೇ ವಿ ವ್ರಯೋ ಹೃದಿ ಬೃಹಸ್ಪತೇ ನ ಪರಃ ಸಾಮ್ನೋ ವಿದುಃ ॥ ೧೬ ॥

ಪದಪಾಠಃ

ಮಾ । ನಃ । ಸ್ತೇನೇಭ್ಯಃ । ಯೇ । ಅಭಿ । ದ್ರುಹಃ । ಪದೇ । ನಿರಾಮಿಣಃ । ರಿಪವಃ । ಅನ್ನೇಷು । ಜಗೃಧುಃ ।
ಆ । ದೇವಾನಾಂ । ಓಹತೇ । ವಿ । ವ್ರಯಃ । ಹೃದಿ । ಬೃಹಸ್ಪತೇ । ನ । ಪರಃ । ಸಾಮ್ನಃ । ವಿದುಃ ॥೧೬॥

ಸಾಯಣಭಾಷ್ಯಂ

ಹೇ ಬೃಹಸ್ಪತೇ ನೋಽಸ್ಮಾನ್ ಸ್ತೇನೇಭ್ಯಃ । ಸ್ತ್ಯೈನಮಸ್ತಿ ಯೇಷ್ವಿತಿ ಸ್ತೇನಾಶ್ಚೌರಾಃ । ತೇಭ್ಯೋ ಮಾ ದಾಃ । ತಾನ್ ದರ್ಶಯತಿ । ಯೇ ಚೌರಾ ದ್ರುಹಃ ಪ್ರಾಣದ್ರೋಹಸ್ಯ ಪದೇ ಸ್ಥಾನೇ ನಿರಾಮಿಣೋ

ನಿತರಾಂ ರಮಣಶೀಲಾ ರಿಪವೋ ಹಿಂಸಕಾಃ ಸಂತೋಽನ್ನೇಷು ಪರಕೀಯೇಷ್ವಭಿಜಾಗೃಧುಃ । ಅಭಿಕಾಂಕ್ಷಂತಿ ॥ ಗೃಧು ಅಭಿಕಾಂಕ್ಷಾಯಾಂ । ಲಿಟಿ ರೂಪಂ ॥ ಯೇ ಚ ದೇವಾನಾಂ ವಿ ವ್ರಯೋ ವಿಶೇಷೇಣ ವರ್ಜನಂ ॥ ವ್ರೀ ವ್ಲೀ ಇತಿ ಧಾತೂ ವರ್ಜನೇ ವರ್ತೇತೇ । ಯ ಏವಂ ವಿದ್ವಾನ್ ದಕ್ಷಿಣಾಂ ಪ್ರತಿಗೃಹ್ಣಾತಿ ನೈನಂ ದಕ್ಷಿಣಾ ವ್ಲೀನಾತಿ । ತೈ. ಬ್ರಾ. ೨-೨-೫-೧ । ಇತ್ಯೇಕಸ್ಯ ವರ್ಜನಾರ್ಥೇ ದೃಷ್ಟಸ್ಯಾಪಿ ವರ್ಜನಾರ್ಥತ್ವಂ ॥ ತತ್ ಹೃದಿ ಸ್ವಕೀಯೇ ಹೃದಯೇ ಆ ಓಹತೇ । ಆವಹಂತಿ । ದೇವಾನಾಂ ಯಾಗಾನ್ ಸ್ತುತೀಶ್ಚ ನ ಕರವಾಮೇತಿ ಮನ್ಯಂತ ಇತಿ ಯಾವತ್ । ತೇಭ್ಯೋಽಸ್ಮಾನ್ ಮಾ ದಾ ಇತಿ ಸಮನ್ವಯಃ । ಯೇ ಪುಮಾಂಸಃ ಸಾಮ್ನಃ ಸಃಮುಮಯೋತ್ತ್ವತ್ತ್ರಃ ಪರಃ ಪರಸ್ತಾದನ್ಯದುತ್ಕೃಷ್ಟಂ ಸಾಮ ಯದ್ರಕ್ಷೋಘ್ನಂ ಸಾಮ ವೈ ರಕ್ಷೋಹೇತಿ । ನ ವಿದುಃ । ನ ಜಾನಂತಿ । ಕಿಂತು ಸರ್ವಸಾಧಕಂ ಸಾಮ ತ್ವಾಮೇವ ವಿದುಷೋಽಸ್ಮಾನ್ ಸ್ತೇನೇಭ್ಯೋ ಮಾ ದಾಃ ॥

ಪ್ರತಿಪದಾರ್ಥ

ಬೃಹಸ್ಪತೇ—ಎಲೈ ಬೃಹಸ್ಪತಿಯೇ । ಯೇ—ಯಾವ ಚೋರರು । ದ್ರುಹಃ—ದ್ರೋಹರೂಪವಾದ । ಪದೇ— ಪ್ರವೃತ್ತಿಯಲ್ಲಿ । ನಿರಾಮಿಣಃ—ಸಂತೋಷಪಡುವರೋ (ಮತ್ತು) । ರಿಪವಃ—ಹಿಂಸಕರಾಗಿದ್ದುಕೊಂಡು। ಅನ್ನೇಷು—(ಇತರರಿಗೆ ಸಂಬಂಧಿಸಿದ) ಅನ್ನಗಳಲ್ಲಿ । ಅಭಿ ಜಾಗೃಧುಃ—ದುರಾಸೆಯನ್ನು ಬೆಳೆಸುತ್ತಾರೆಯೋ । ಯೇ—ಯಾವ ಚೋರರು । ದೇವಾನಾಂ—ದೇವತೆಗಳ ಪೂಜೆಯಲ್ಲಿ । ವಿ ವ್ರಯಃ—ವಿಶೇಷವಾದ ನಾಸ್ತಿಕ್ಯವನ್ನು । ಹೃದಿ—ತಮ್ಮ ಹೃದಯದಲ್ಲಿ । ಆ ಓಹತೇ—ಪೂರ್ಣವಾಗಿ ತುಂಬಿಕೊಂಡಿದ್ದಾರೆಯೋ (ಅಲ್ಲದೇ) । ಯೇ—ಯಾವ ನಾಸ್ತಿಕರು । ಸಾಮ್ನಃ—ರಾಕ್ಷಸರನ್ನು ನಾಶಮಾಡತಕ್ಕ ನಿನ್ನ ಶಕ್ತಿಯ । ಪರಃ—ಮಹಿಮೆಯನ್ನು। ನ ವಿದುಃ—ತಿಳಿದಿಲ್ಲವೋ ಅಂತಹ । ಸ್ತೇನೇಭ್ಯಃ—ಚೋರರಿಗೆ । ನಃ—ನಮ್ಮನ್ನು । ಮಾ (ದಾಃ)—ವಶವಾಗುವಂತೆ ಬಿಟ್ಟುಕೊಡಬೇಡ.

ಭಾವಾರ್ಥ

ಎಲೈ ಬೃಹಸ್ಪತಿಯೇ, ಯಾವ ಚೋರರು ದ್ರೋಹರೂಪವಾದ ಪ್ರವೃತ್ತಿಯಲ್ಲಿ ಸಂತೋಷಪಡುವರೋ. ಮತ್ತು ಹಿಂಸಕರಾಗಿದ್ದುಕೊಂಡು ಇತರರಿಗೆ ಸಂಬಂಧಿಸಿದ ಅನ್ನಗಳಲ್ಲಿ ದುರಾಸೆಯನ್ನು ಬೆಳೆಸುತ್ತಾರೆಯೋ, ಯಾವ ಚೋರರು ದೇವತೆಗಳ ಪೂಜೆಯಲ್ಲಿ ವಿಶೇಷವಾದ ನಾಸ್ತಿಕ್ಯವನ್ನು ತಮ್ಮ ಹೃದಯದಲ್ಲಿ ಪೂರ್ಣವಾಗಿ ತುಂಬಿಕೊಂಡಿದ್ದಾರೆಯೋ, ಅಲ್ಲದೇ ಯಾವ ನಾಸ್ತಿಕರು ರಾಕ್ಷಸರನ್ನು ನಾಶಮಾಡತಕ್ಕ ನಿನ್ನ ಶಕ್ತಿಯ ಮಹಿಮೆಯನ್ನು ತಿಳಿದಿಲ್ಲವೋ ಅಂತಹ ಚೋರರಿಗೆ ವಶವಾಗುವಂತೆ ನಮ್ಮನ್ನು ಬಿಟ್ಟುಕೊಡಬೇಡ.

## English Translation

Deliver us not to the thieves, the enemies delighting in violence, who seize ever upon the food (of others), those who cherish in their hearts the abandonment (of the gods); (they), Brihaspati, who do not know the extent of (your) power (against evil spirits).

## ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಸ್ತೋತ್ರಮಾಡುವ ನಮ್ಮನ್ನು ಕಳ್ಳರ ಅಧೀನರಾಗುವಂತೆ ಮಾಡಬೇಡವೆಂದು ಬೃಹಸ್ಪತಿಯನ್ನು ಪ್ರಾರ್ಥಿಸಲಾಗಿದೆ. ಮತ್ತು ಆ ಕಳ್ಳರು ಎಂತಹ ದುಷ್ಟಸ್ವಭಾವದವರು ಎಂಬುದನ್ನು ವರ್ಣಿಸಿದೆ.

**ಮಾ ನಃ ಸ್ತೇನೇಭ್ಯಃ**—**ಹೇ ಬೃಹಸ್ಪತೇ ನೋಽಸ್ಮಾನ್ ಸ್ತೇನೇಭ್ಯಃ ಸ್ತ್ಯಾಯನಮಸ್ತಿ ಯೇಷ್ವಿತಿ ಸ್ತೇನಾಶ್ಚೌರಾಃ । ತೇಭ್ಯೋ ಮಾ ದಾಃ ।** ಎಲೈ ಬೃಹಸ್ಪತಿಯೇ ನಮ್ಮನ್ನು ಕಳ್ಳರ ವಶಮಾಡಬೇಡ ಎಂದು ವಾಕ್ಯದ ಅರ್ಥವು. ಇಲ್ಲಿ **ಮಾ** ಎಂಬ ನಿಪಾತಮಾತ್ರವಿರುವುದರಿಂದ **ದಾಃ** ಎಂಬ ಕ್ರಿಯಾಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಸ್ತೇನಶಬ್ದಕ್ಕೆ **ಸ್ತೇನಃ ಕಸ್ಮಾತ್ ಸಂಸ್ತ್ಯಾಯನಮಸ್ಮಿನ್ ಪಾಪಕಮಿತಿ ನೈರುಕ್ತಾಃ** (ನಿ. ೩-೧೯) ಎಂದರೆ ಕಳ್ಳನಿಗೆ ಸ್ತೇನ ಎಂಬ ಹೆಸರು ಏತಕ್ಕಾಗಿ ಬಂದಿತು ಎಂದರೆ, ಇವನಲ್ಲಿ ಪಾಪಸಮೂಹವು ಅಥವಾ ಪಾಪಕರ್ಮವು ಇರುವುದರಿಂದ ಕಳ್ಳನಿಗೆ ಸ್ತೇನನೆಂದು ಹೆಸರು ಎಂದು ನಿರುಕ್ತಕಾರರ ಅಭಿಪ್ರಾಯವೆಂದು ಯಾಸ್ಕರು ಹೇಳಿರುವರು. ಇಂತಹ ಕಳ್ಳರ ದುರ್ಗುಣಗಳೇನು ? ಇವರು ಮಾಡುವ ದುಷ್ಕೃತ್ಯಗಳೇನು ಎಂಬುವುದನ್ನು ಈ ಋಕ್ಕಿನ ಮುಂದಿನ ವಾಕ್ಯಗಳಲ್ಲಿ ಋಷಿಯು ವರ್ಣಿಸಿರುವನು.

**ಯೇ ದ್ರುಹಃ ಪದೇ ನಿರಾಮಿಣಃ**—**ಯೇ ಚೌರಾಃ ಪ್ರಾಣದ್ರೋಹಸ್ಯ ಸ್ಥಾನೇ ನಿತರಾಂ ರಮಣಶೀಲಾಃ ।** ಈ ಕಳ್ಳರು ಇತರರಿಗೆ ದ್ರೋಹವೆಸಗುವುದರಲ್ಲಿ ಅಥವಾ ಪ್ರಾಣಾಪಹಾರರೂಪವಾದ ದುಷ್ಟಕಾರ್ಯಗಳಲ್ಲಿ ವಿಶೇಷವಾಗಿ ಸಂತೋಷಪಡುವವರು. ಇತರರಿಗೆ ದ್ರೋಹಮಾಡುವುದೇ ಕಳ್ಳರ ಸ್ವಭಾವವು.

**ರಿಪವಃ ಅನ್ನೇಷು ಅಭಿ ಜಾಗೃಧುಃ**—**ಹಿಂಸಕಾಃ ಸಂತೋಽನ್ನೇಷು ಪರಕೀಯೇಷ್ವಭಿಕಾಂಕ್ಷಂತಿ ।** ಈ ಕಳ್ಳರು ಜನರನ್ನು ಹಿಂಸೆಮಾಡುವವರು ಮತ್ತು ಇತರರ ಅನ್ನಾದ್ಯಾಹಾರಗಳಲ್ಲಿ ದುರಾಸೆಯುಳ್ಳವರು.

**ಆ ದೇವಾನಾಂ ಓಹತೇ ವಿ ವ್ರಯಃ ಹೃದಿ**—**ಯೇ ಚ ದೇವಾನಾಂ ವಿಶೇಷೇಣ ವರ್ಜನಂ ಸ್ವಕೀಯೇ ಹೃದಯ ಆವಹಂತಿ ।** ಮತ್ತು ಆ ಕಳ್ಳರು ದೇವತೆಗಳನ್ನು ಪೂಜಿಸುವುದನ್ನು ವರ್ಜಿಸಿರುವರು ಎಂದರೆ ನಾವು ದೇವತೆಗಳನ್ನು ಯಾಗಾದಿಕರ್ಮಗಳಿಂದ ಆರಾಧಿಸುವುದಿಲ್ಲ, ಸ್ತುತಿಸುವುದೂ ಇಲ್ಲ ಎಂಬ ಕೆಟ್ಟಭಾವನೆಯನ್ನು ತಮ್ಮ ಹೃದಯದಲ್ಲಿ ಧರಿಸಿರುವರು ಎಂದಭಿಪ್ರಾಯವು. ಇಲ್ಲಿ ಸಾಯಣರು **ವ್ರೀ ವ್ಲೀ ಇತಿ ಧಾತೂ ವರ್ಜನೇ ವರ್ತೇತೇ**—ವರ್ಜನೆಮಾಡು ಎಂಬರ್ಥವಿರುವ **ವ್ರೀ** ಎಂಬ ಧಾತುವಿನಿಂದ ನಿಷ್ಪನ್ನವಾದ **ವ್ರಯಃ** ಎಂಬ ಶಬ್ದಕ್ಕೆ ವರ್ಜನವೆಂಬ ಅರ್ಥವನ್ನು ಹೇಳಿ ಆ ಅರ್ಥಸಮರ್ಥನೆಗಾಗಿ—**ಯ ಏವಂ ದಕ್ಷಿಣಾಂ ಪ್ರತಿಗೃಹ್ಣಾತಿ ನೈನಂ ದಕ್ಷಿಣಾ ವ್ಲೀನಾತಿ ।** (ತೈ. ಬ್ರಾ- ೨-೨-೫-೧) ಎಂಬ ತೈತ್ತಿರೀಯಬ್ರಾಹ್ಮಣ ವಾಕ್ಯವನ್ನು ಉದಾಹರಿಸಿರುವರು.

**ಯೇ ಪರಃ ಸಾಮ್ನಃ ನ ವಿದುಃ**—**ಯೇ ಪುಮಾಂಸಃ ಸಾಮುಮಯಾತ್ಮತ್ರಃ ಪರಃ ಪರಸ್ತಾದನ್ಯದುತ್ಕೃಷ್ಟಂ ಸಾಮ ಯದ್ರಕ್ಷೋಘ್ನಂ । ಸಾಮ ವೈ ರಕ್ಷೋಹೇತಿ । ನ ಜಾನಂತಿ ।** ಆ ಕಳ್ಳರು ರಾಕ್ಷಸರನ್ನು ನಾಶಮಾಡತಕ್ಕ ನಿನ್ನ ಸಾಮರ್ಥ್ಯಾತಿಶಯವನ್ನು ತಿಳಿದಿಲ್ಲ. ಎಂದರೆ ಕಳ್ಳರಿಗೆ ನಿನ್ನ ಮಹಿಮೆಯು ತಿಳಿದಿಲ್ಲ. ಅಂತಹ ಕಳ್ಳರ ವಶಮಾಡಬೇಡ ಎಂದಭಿಪ್ರಾಯವು. ಇಲ್ಲಿ ಸಾಮವೆಂಬ ಶಬ್ದಕ್ಕೆ ರಾಕ್ಷಸರನ್ನು ನಾಶಮಾಡುವ ಸಾಮರ್ಥ್ಯವೆಂದು ಸಾಯಣರು ಅರ್ಥವಿವರಣೆಮಾಡಿ ಅದರ ಸಮರ್ಥನೆಗಾಗಿ **ಸಾಮ ವೈ ರಕ್ಷೋಹಾ** ಎಂಬ ಶ್ರುತಿವಾಕ್ಯದ ಉದಾಹರಣೆಯನ್ನು ಕೊಟ್ಟಿರುವರು. ಯಾಸ್ಕರು **ಸಾಮ** ಎಂಬ ಶಬ್ದದ ನಿರ್ವಚನವನ್ನು ಹೇಳುತ್ತಾ—

ಸಾಮ ಸಂಮಿತಮೃಚಾಸ್ಯತೇರ್ವರ್ಚಾ ಸಮಂ ಮೇನ ಇತಿ ನೈದಾನಾಃ ।

(ನಿ. ೭-೧೨)

ಎಂದು ಹೇಳಿರುವರು. ಎಂದರೆ ಈ ಮಂತ್ರವು (ಸಾಮವೇದದ ಮಂತ್ರವು ಅಥವಾ ಸಾಮವು) ಪರಿಮಾಣದಲ್ಲಿ ಋಕ್ಕಿಗೆ ಸಮನಾಗಿರುವುದರಿಂದ ಇದಕ್ಕೆ ಸಾಮವೆಂದು ಹೆಸರು. ಸಾಧಾರಣವಾಗಿ ಋಗ್ವೇದದ ಋಕ್ಕುಗಳೇ ಸಾಮವೇದದಲ್ಲಿ ಇರುವವು. ಆದರೆ ಅವುಗಳ ಸ್ವರಗಳೂ (ಸಾಮವೇದಕ್ಕೆ ಸಪ್ತ ಸ್ವರಗಳಿವೆ) ಅವುಗಳನ್ನು ಗಾನರೂಪವಾಗಿ ಪಠಿಸುವ ವಿಧಾನವೂ ಬೇರೆಯಾಗಿರುವವು. ಪರಿಮಾಣದಲ್ಲಿ ಒಂದೇ ಆದ್ದರಿಂದ ಆ ಮಂತ್ರಕ್ಕೆ ಸಾಮವೆಂದು ಹೆಸರು. ಅಥವಾ ಸಾಮಮಂತ್ರವು ಋಗ್ವೇದದ ಋಕ್ಕುನಲ್ಲಿಯೇ ಇದ್ದು ಪರಿಮಾಣವೂ ಸಹ ಒಂದೇ ಆಗಿರುವುದರಿಂದ ಈ ಮಂತ್ರಕ್ಕೆ ಸಾಮವೆಂಬ ಹೆಸರು ಬಂದಿತೆಂದು ನಿದಾನಗ್ರಂಥಕಾರರ ಅಭಿಪ್ರಾಯವೆಂದು ಯಾಸ್ಕರು ಸಾಮನ್‌ಶಬ್ದದ ನಿರ್ವಚನವನ್ನು ಹೇಳಿರುವರು.

---

ಸಂಹಿತಾಪಾಠಃ

ವಿಶ್ವೇಭ್ಯೋ ಹಿ ತ್ವಾ ಭುವನೇಭ್ಯಸ್ಪರಿ ತ್ವಷ್ಟಾಜನತ್ಸಾಮ್ನಃಸಾಮ್ನಃ ಕವಿಃ ।
ಸ ಋಣಚಿದೃಣಯಾ ಬ್ರಹ್ಮಣಸ್ಪತಿರ್ದ್ರುಹೋ ಹನ್ತಾ ಮಹ ಋತಸ್ಯ ಧರ್ತರಿ ॥ ೧೭ ॥

ಪದಪಾಠಃ

ವಿಶ್ವೇಭ್ಯಃ । ಹಿ । ತ್ವಾ । ಭುವನೇಭ್ಯಃ । ಪರಿ । ತ್ವಷ್ಟಾ । ಅಜನತ್ । ಸಾಮ್ನಃಽಸಾಮ್ನಃ । ಕವಿಃ ।
ಸಃ । ಋಣಽಚಿತ್ । ಋಣಽಯಾಃ । ಬ್ರಹ್ಮಣಃ । ಪತಿಃ । ದ್ರುಹಃ । ಹನ್ತಾ । ಮಹಃ । ಋತಸ್ಯ ಧರ್ತರಿ ॥ ೧೭ ॥

ಸಾಯಣಭಾಷ್ಯಂ

ಹೇ ಬ್ರಹ್ಮಣಸ್ಪತೇ ತ್ವಷ್ಟಾ ಪ್ರಜಾಪತಿರ್ವಿಶ್ವೇಭ್ಯೋ ಭುವನೇಭ್ಯಸ್ಪರಿ ಸರ್ವೇಭ್ಯೋ ಭೂತಜಾತೇಭ್ಯ ಉತ್ಕೃಷ್ಟಂ ತ್ವಾಮಜನದ್ಧಿ । ಅಜೀಜನತ್ ಖಲು । ತತಸ್ತ್ವಂ ಸಾಮ್ನಃ ಸಾಮ್ನಃ ಸರ್ವಸ್ಯಾಪಿ ಸಾಮ್ನಃ ಕವಿಃ ॥ ಕು ಶಬ್ದೇ । ಅಚ ಇರಿತಿ ಇಪ್ರತ್ಯಯಃ ॥ ಉಚ್ಚಾರಯಿತಾ ಕರ್ತಾಸಿ । ಯದ್ವಾ ಕವಿಃ ಕ್ರಾಂತದರ್ಶೀ ತ್ವಷ್ಟಾ ಸಾಮ್ನಃ ಸಾಮ್ನಃ ಸರ್ವಸ್ಯಾಪಿ ಸಾಮ್ನಃ ಸಾರೇಣ ತ್ವಾಮಜೀಜನತ್ । ಕಿಂಚ ಸ ಬ್ರಹ್ಮಣಸ್ಪತಿರ್ಮಹೋ ಮಹತ ಋತಸ್ಯ ಯಜ್ಞಸ್ಯ ಧರ್ತರಿ ಧಾರಕೇ ಯಜಮಾನೇ ಋಣಚಿತ್ ಸ್ತೋತೃಕಾಮಮೃಣಮಿವ ಚಿನೋತೀತಿ ಋಣಚಿತ್ । ಕಿಂಚ ಋಣಯಾಃ ಪಾಪರೂಪಸ್ಯ ಋಣಸ್ಯ ಯಾಪಯಿತಾ ಪೃಥಕ್ಕರ್ತಾ ಚ ದ್ರುಹಃ ಕರ್ಮಹೋ ದ್ರೋಗ್ಧುರಸ್ಯ ಹಂತಾ ಭವೇತಿ ॥

ಪ್ರತಿಪದಾರ್ಥ

ಬ್ರಹ್ಮಣಸ್ಪತೇ—ಎಲೈ ಬ್ರಹ್ಮಣಸ್ಪತಿಯೇ । ತ್ವಾ—ನಿನ್ನನ್ನು । ತ್ವಷ್ಟಾ—ಪ್ರಜಾಪತಿಯು । ವಿಶ್ವೇಭ್ಯಃ—ಸಮಸ್ತವಾದ । ಭುವನೇಭ್ಯಃ—ಲೋಕಗಳಿಗಿಂತಲೂ । ಪರಿ—ಉತ್ಕೃಷ್ಟವಾಗಿ । ಅಜನತ್ ಹಿ—ಸೃಷ್ಟಿಸಿದಾನಲ್ಲವೇ । ಸಾಮ್ನಃಸಾಮ್ನಃ—ಸಾಮರೂಪವಾದ ಪ್ರತಿಯೊಂದು ಸ್ತೋತ್ರಕ್ಕೂ । ಕವಿಃ—(ನೀನೇ) ಕರ್ತೃವೂ ವಕ್ತೃವೂ ಆಗಿದ್ದೀಯೆ । ಸಃ ಬ್ರಹ್ಮಣಸ್ಪತಿಃ—ಅದೇ ಬ್ರಹ್ಮಣಸ್ಪತಿಯು । ಮಹಃ—ಮಹತ್ತಾದ । ಋತಸ್ಯ—ಯಜ್ಞದ । ಧರ್ತರಿ—ಧಾರಕನಾದ ಯಜಮಾನನ ವಿಷಯದಲ್ಲಿ (ಕೃತಜ್ಞತಾ) । ಋಣಚಿತ್—ಉಪಕಾರವನ್ನು ಮಾಡುವ ಭಾವನೆಯನ್ನಿಟ್ಟಿದ್ದಾನೆ (ಅಲ್ಲದೇ)। ಋಣಯಾಃ— ಪಾಪರೂಪವಾದ ಋಣವನ್ನು ನಾಶಮಾಡುವವನೂ । ದ್ರುಹಃ—ದ್ರೋಹಿಯಾದ ಅಸುರನ । ಹಂತಾ—ನಾಶಕನಾಗಿಯೂ ಆಗಿದ್ದಾನೆ.

ಭಾವಾರ್ಥ

ಎಲೈ ಬ್ರಹ್ಮಣಸ್ಪತಿಯೇ, ಪ್ರಜಾಪತಿಯು ನಿನ್ನನ್ನು ಸಮಸ್ತವಾದ ಭುವನಗಳಿಗಿಂತಲೂ ಉತ್ಕೃಷ್ಟವಾಗಿ ಸೃಷ್ಟಿಸಿದ್ದಾನಲ್ಲವೇ. ಸಾಮರೂಪವಾದ ಪ್ರತಿಯೊಂದು ಸ್ತೋತ್ರಕ್ಕೂ ನೀನೇ ಕರ್ತೃವೂ ವಕ್ತೃವೂ ಆಗಿದ್ದೀಯೆ. ಅದೇ ಬ್ರಹ್ಮಣಸ್ಪತಿಯು ಮಹತ್ತಾದ ಯಜ್ಞದ ಧಾರಕನಾದ ಯಜಮಾನನ ವಿಷಯದಲ್ಲಿ ಉಪಕಾರವನ್ನು ಮಾಡಬೇಕೆಂಬ ಕೃತಜ್ಞತಾ ಭಾವನೆಯನ್ನಿಟ್ಟಿದ್ದಾನೆ. ಅಲ್ಲದೇ, ಪಾಪರೂಪವಾದ ಋಣವನ್ನು ನಾಶಮಾಡುವವನೂ, ದ್ರೋಹಿಯಾದ ಅಸುರನ ನಾಶಕನಾಗಿಯೂ ಆಗಿದ್ದಾನೆ.

English Translation

Twashtri engendered you (chief) amongst all beings, (whence) you are the reciter of many a holy hymn : Brahmanaspati acknowledges a debt to the performer of a sacred rite : he is the acquitter (of the debt), and the destroyer of the oppressor.

ವಿಶೇಷವಿಷಯಗಳು

(ಹೇ ಬ್ರಹ್ಮಣಸ್ಪತೇ) ತ್ವಷ್ಟಾ ವಿಶ್ವೇಭ್ಯಃ ಭುವನೇಭ್ಯಃ ಪರಿ ತ್ವಾ ಅಜನತ್— ಹೇ ಬ್ರಹ್ಮಣಸ್ಪತೇ ಪ್ರಜಾಪತಿರ್ವಿಶ್ವೇಭ್ಯೋ ಭೂತಜಾತೇಭ್ಯ ಉತ್ಕೃಷ್ಟಂ ತ್ವಾಮಜೀಜನತ್ । ಎಲೈ ಬ್ರಹ್ಮಣಸ್ಪತಿಯೇ, ಪ್ರಜಾಪತಿಯು ನಿನ್ನನ್ನು ಸಮಸ್ತಭೂತಜಾತಗಳಲ್ಲಿಯೂ (ಸಮಸ್ತಲೋಕಗಳಲ್ಲಿಯೂ ಸಹ) ಉತ್ಕೃಷ್ಟನನ್ನಾಗಿ ಸೃಷ್ಟಿಸಿದನು ಎಂದರೆ ಪ್ರಜಾಪತಿಯು ಸೃಷ್ಟಿಸಿದ ಸಮಸ್ತಪ್ರಾಣಿಗಳಲ್ಲಿಯೂ ನೀನೇ ಎಲ್ಲರಿಗಿಂತಲೂ ಉತ್ಕೃಷ್ಟನು ಎಂದಭಿಪ್ರಾಯವು. ಇಲ್ಲಿ ತ್ವಷ್ಟಾ ಎಂಬ ಶಬ್ದಕ್ಕೆ ಸಾಯಣರು ಪ್ರಜಾಪತಿಯೆಂದು ಅರ್ಥಮಾಡಿರುವರು. ಅಥವಾ ತ್ವಷ್ಟಾ ಎಂಬ ಶಬ್ದಕ್ಕೆ ತ್ವಷ್ಟೃವೆಂಬ ಅರ್ಥವನ್ನೂ ಹೇಳಿ ಪ್ರಕಾರಾಂತರವಾಗಿಯೂ ವಿವರಣೆಮಾಡಿರುವರು.

ಯದ್ವಾ ಕವಿಃ ತ್ವಷ್ಟಾ ಸಾಮ್ನಃ ಸಾಮ್ನಃ ತ್ವಾಮಜೀಜನತ್—ಕ್ರಾಂತದರ್ಶೀ ತ್ವಷ್ಟಾ ಸರ್ವಸ್ಯಾಪಿ ಸಾಮ್ನಃ ಸಾರೇಣ ತ್ವಾಮಜೀಜನತ್ । ಅಥವಾ ಕ್ರಾಂತದರ್ಶಿಯಾದ ತ್ವಷ್ಟೃದೇವತೆಯು ಸಮಸ್ತ ಸಾಮಮಂತ್ರಗಳ ಸಾರದಿಂದ ನಿನ್ನನ್ನು ನಿರ್ಮಿಸಿದನು ಎಂದು ಇನ್ನೊಂದು ವಿಧವಾದ ಅರ್ಥವಿವರಣೆಯು.

**ಸಾಮ್ನಃ ಸಾಮ್ನಃ ಕವಿಃ—ತತಸ್ತ್ವಂ ಸರ್ವಸ್ಯಾಪಿ ಸಾಮ್ನಃ ಕವಿಃ । ಕು ಶಬ್ದೇ । ಅಚ ಇರಿತಿ ಇಪ್ರತ್ಯಯಃ । ಉಚ್ಚಾರಯಿತಾ ಕರ್ತಾಸಿ ।** ಆದ್ದರಿಂದ ನೀನು ಸಮಸ್ತಸಾಮಮಂತ್ರಗಳನ್ನು ಉಚ್ಚಾರಮಾಡುವವನೂ ಮತ್ತು ಅವುಗಳ ನಿರ್ಮಾಪಕನೂ ಆಗಿದ್ದೀಯೆ. ಇಲ್ಲಿ ಕುಶಬ್ದೇ ಎಂಬ ಧಾತುವಿನಿಂದ ಕವಿಶಬ್ದವು ನಿಷ್ಪನ್ನವಾಗಿದೆಯೆಂದೂ ಆದ್ದರಿಂದ ಕವಿಶಬ್ದಕ್ಕೆ ಮಂತ್ರವನ್ನು ಉಚ್ಚರಿಸುವವನು ಎಂಬರ್ಥವನ್ನು ಭಾಷ್ಯಕಾರರು ಹೇಳಿದ್ದಾರೆ.

**ಸಃ ಬ್ರಹ್ಮಣಸ್ಪತಿಃ ಮಹಃ ಋತಸ್ಯ ಧರ್ತರಿ ಋಣಚಿತ್—ಸ ಬ್ರಹ್ಮಣಸ್ಪತಿಃ ಮಹತೋ ಯಜ್ಞಸ್ಯ ಧಾರಕೇ ಯಜಮಾನೇ ಸ್ತೋತ್ರೈಕಾಮಮೃಣಮಿವ ಚಿನೋತೀತಿ ಋಣಚಿತ್ ।** ಆ ಬ್ರಹ್ಮಣಸ್ಪತಿಯು ಶ್ರೇಷ್ಠವಾದ ಯಜ್ಞವನ್ನು ಮಾಡುತ್ತಿರುವ ಯಜಮಾನನ ವಿಷಯದಲ್ಲಿ ಉಪಕಾರ (ಕೃತಜ್ಞತಾ) ಬುದ್ಧಿಯುಳ್ಳವನಾಗಿರುವನು. ಯಜಮಾನನು ಬ್ರಹ್ಮಣಸ್ಪತಿಯನ್ನುದ್ದೇಶಿಸಿ ಮಾಡುವ ಯಜ್ಞ ಮತ್ತು ಸ್ತೋತ್ರಕ್ಕೆ ಬ್ರಹ್ಮಣಸ್ಪತಿಯು ಋಣಿಯಾಗಿ ಎಂದರೆ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡಬೇಕೆಂಬ ಭಾವನೆಯುಳ್ಳವನಾಗಿ ಇರುವನು. ಯಜಮಾನನು ಬ್ರಹ್ಮಣಸ್ಪತಿಯನ್ನು ಸ್ತುತಿಸುವುದನ್ನೇ ಋಣವೆಂದು ಭಾವಿಸಿ ಆ ಋಣವಿಮೋಚನೆಗಾಗಿ ಬ್ರಹ್ಮಣಸ್ಪತಿಯು ಯಜಮಾನನಿಗೆ ಧನಾದಿಗಳನ್ನು ಕೊಡುವನೆಂದಭಿಪ್ರಾಯವು.

**(ಸಃ) ಋಣಯಾಃ—ಪಾಪರೂಪಸ್ಯ ಋಣಸ್ಯ ಯಾವಯಿತಾ ಪೃಥಕ್ಕರ್ತಾ ।** ಆ ಬ್ರಹ್ಮಣಸ್ಪತಿಯು ಪಾಪರೂಪವಾದ ಋಣವನ್ನು ನಾಶಮಾಡುವವನು. ಇಲ್ಲಿ ಋಣವೆಂದರೆ ಹಿಂದೆ ಮಾಡಿದ ಕರ್ಮದ ಫಲವು. ಆ ಕರ್ಮವು ಕೆಟ್ಟದ್ದಾಗಿದ್ದರೆ ಪಾಪವು. ಅಂತಹ ಪಾಪವನ್ನು ಬ್ರಹ್ಮಣಸ್ಪತಿಯು ನಾಶಮಾಡುತ್ತಾನೆಂದಭಿಪ್ರಾಯವು.

**(ಸಃ) ದ್ರುಹಃ ಹಂತಾ—ಕರ್ಮಣೋ ದ್ರೋಗ್ಧುರಸುರಸ್ಯ ಹಂತಾ ।** ಆ ಬೃಹಸ್ಪತಿಯು ದ್ರೋಹಕರ್ಮವನ್ನೆಸಗುವ ಅಸುರನನ್ನು ಸಂಹರಿಸುವವನು.

---

**ಸಂಹಿತಾಪಾಠಃ**

ತವ ಶ್ರಿಯೇ ವ್ಯಜಿಹೀತ ಪರ್ವತೋ ಗವಾಂ ಗೋತ್ರಮುದಸೃಜೋ ಯದಂಗಿರಃ ।
ಇನ್ದ್ರೇಣ ಯುಜಾ ತಮಸಾ ಪರೀವೃತಂ ಬೃಹಸ್ಪತೇ ನಿರಪಾಮೌಬ್ಜೋ ಅರ್ಣವಂ ॥ ೧೮ ॥

**ಪದಪಾಠಃ**

ತವ । ಶ್ರಿಯೇ । ವಿ । ಅಜಿಹೀತ । ಪರ್ವತಃ । ಗವಾಂ । ಗೋತ್ರಂ । ಉತ್ऽಅಸೃಜಃ । ಯತ್ । ಅಙ್ಗಿರಃ ।
ಇನ್ದ್ರೇಣ । ಯುಜಾ । ತಮಸಾ । ಪರಿऽವೃತಂ । ಬೃಹಸ್ಪತೇ । ನಿಃ । ಅಪಾಂ । ಔಬ್ಜಃ । ಅರ್ಣವಂ ॥

### ಸಾಯಣಭಾಷ್ಯಂ

ಅಂಗಿರ ಆಂಗಿರಸ ಹೇ ಬೃಹಸ್ಪತೇ ಗವಾಮಾವಾರಕೋ ಬಲೇನಾಧಿಷ್ಠಿತಃ ಪರ್ವತಸ್ತವ ಶ್ರಿಯ ಆಶ್ರಯಣಾರ್ಥಂ ವ್ಯಜಿಹೀತ । ವಿವೃತದ್ವಾರತಾಮಗಚ್ಛತ್ । ತತಸ್ತ್ವಂ ಯದ್ಯದಾ ಗೋತ್ರಂ ॥ ಇನಿತ್ರ-ಕಟ್ಯಚಶ್ಚೇತಿ ಸಮೂಹಾರ್ಥೇ ತ್ರಪ್ರತ್ಯಯಃ॥ ಗವಾಂ ಸಮೂಹಮುದಸೃಜಃ। ನಿರಗಮಯಃ। ತದೇಂದ್ರೇಣ ಯುಜಾ ಸಹಾಯೇನ ಯುಕ್ತಸ್ತ್ವಂ ತಮಸಾ ವೃತ್ರಾಸುರೇಣ ಪರೀವೃತಂ ಪರಿತ ಆಕ್ರಾಂತಮಪಾಮು-ರ್ಣವಂ ಸ್ಥಾನಭೂತಂ ಮೇಘಂ ನಿರೌಬ್ಜಃ । ನಿತರಾಮಧೋಮುಖಮಕಾರ್ಷೀಃ ॥

### ಪ್ರತಿಪದಾರ್ಥ

ಅಂಗಿರಃ—ಅಂಗಿರಸ್ಸಿನ ವಂಶದಲ್ಲಿ ಉತ್ಪನ್ನನಾದ । ಬೃಹಸ್ಪತೇ—ಎಲೈ ಬೃಹಸ್ಪತಿಯೇ । ಗವಾಂ—(ವಲನಿಂದ ಬಚ್ಚಿಡಲ್ಪಟ್ಟ) ಗೋವುಗಳುಳ್ಳ । ಪರ್ವತಃ—ಪರ್ವತವು । ತವ ಶ್ರಿಯೇ—ನಿನ್ನ ಆಶ್ರಯಣಕ್ಕಾಗಿ (ಅಥವಾ ನಿನ್ನ ಮಹಿಮೆಗಾಗಿ) । ವ್ಯಜಿಹೀತ—ದಾರಿಯನ್ನು ಬಿಟ್ಟಿತು (ಅನಂತರ) । ಯತ್—ಯಾವಾಗ । ಗೋತ್ರಂ—ಗೋವುಗಳ ಸಮೂಹವನ್ನು । ಉದಸೃಜಃ—ಬಂಧನದಿಂದ ಬಿಡಿಸಿದೆಯೋ, (ಆಗ) । ಇಂದ್ರೇಣ ಯುಜಾ—ಇಂದ್ರನೊಡನೆ ಸೇರಿಕೊಂಡು । ತಮಸಾ—ವೃತ್ರಾಸುರನಿಂದ । ಪರೀವೃತಂ—ಆವೃತವಾದುದೂ । ಅಪಾಂ—ಉದಕಗಳಿಗೆ । ಅರ್ಣವಂ—ಆಶ್ರಯಭೂತವಾದುದೂ ಆದ ಮೇಘವನ್ನು । ನಿಃ ಔಬ್ಜಃ—ಪೂರ್ಣವಾಗಿ ಅಧೋಮುಖವಾಗುವಂತೆ ಮಾಡಿದೆ. (ಉದಕದ ಪ್ರವಾಹವು ಅಧೋಮುಖವಾಗಿ ಹರಿಯುವಂತೆ ಮಾಡಿದೆ).

### ಭಾವಾರ್ಥ

ಅಂಗಿರಸ್ಸಿನ ವಂಶದಲ್ಲಿ ಉತ್ಪನ್ನನಾದ ಎಲೈ ಬೃಹಸ್ಪತಿಯೇ, ವಲನಿಂದ ಬಚ್ಚಿಡಲ್ಪಟ್ಟ ಗೋವುಗಳುಳ್ಳ ಪರ್ವತವು ನಿನ್ನ ಮಹಿಮೆಗಾಗಿ ದಾರಿಯನ್ನು ಬಿಟ್ಟಿತು. ಅನಂತರ, ಯಾವಾಗ ಗೋವುಗಳ ಸಮೂಹವನ್ನು ಬಂಧನದಿಂದ ಬಿಡಿಸಿದೆಯೋ ಆಗ ಇಂದ್ರನೊಡನೆ ಸೇರಿಕೊಂಡು ವೃತ್ರಾಸುರನಿಂದ ಆವೃತವಾದುದೂ ಉದಕಗಳಿಗೆ ಆಶ್ರಯಭೂತವಾದುದೂ ಆದ ಮೇಘವನ್ನು ಪೂರ್ಣವಾಗಿ ಅಧೋಮುಖವಾಗುವಂತೆ ಮಾಡಿ ಉದಕದ ಪ್ರವಾಹವು ಅಧೋಮುಖವಾಗಿ ಹರಿಯುವಂತೆ ಮಾಡಿದೆ.

### English Translation

When Brihaspati, descendant of Angiras, for your glory, Parvata had concealed the herd of cows, you set them free, and with your associate, Indra, sent down the ocean of water which had been enveloped by darkness.

### ವಿಶೇಷವಿಷಯಗಳು

ಅಂಗಿರಃ—ಬೃಹಸ್ಪತಿಯು ಅಂಗಿರಸವಂಶೋತ್ಪನ್ನನೆಂದು ಪ್ರಸಿದ್ಧಿ ಇರುವುದರಿಂದ ಇಲ್ಲಿ ಅಂಗಿರಃ ಎಂಬ ಶಬ್ದದಿಂದಲೇ ಸಂಬೋಧಿಸಲಾಗಿದೆ.

**ಗೋತ್ರಂ—ಗವಾಂ ಸಮೂಹಂ** । ಗೋವುಗಳ ಸಮೂಹವು. ಗೋತ್ರಶಬ್ದಕ್ಕೆ ಮೇಘವೆಂದೂ ಅರ್ಥವಿದ್ದರೂ ಇಲ್ಲಿ ಗೋಸಮೂಹವೆಂದೇ ಅರ್ಥವು. ಇಲ್ಲಿ **ಗವಾಂ ಗೋತ್ರಂ** ಎಂದು ದ್ವಿರುಕ್ತಿಪ್ರಯೋಗವಿರುವುದು. ಇಂತಹ ದ್ವಿರುಕ್ತಿಪ್ರಯೋಗವು ಋಗ್ವೇದದಲ್ಲಿ ಅನೇಕಕಡೆ ಇರುವುದು.

**ಪರ್ವತಃ—** ಪರ್ವತಶಬ್ದವು ಮೇಘನಾಮಗಳಲ್ಲಿಯೂ (ನಿ. ೨-೨೧) ಅದ್ರಿನಾಮಗಳಲ್ಲಿಯೂ ಪಠಿತವಾಗಿರುವುದು. ಇಲ್ಲಿ ಪರ್ವತವೆಂದರೆ ಬೆಟ್ಟವೆಂದರ್ಥವು. ಪರ್ವತಶಬ್ದದ ನಿರ್ವಚನವನ್ನು ನಾವು ಭಾಗ ೧೦ ಪುಟ 18 ರಲ್ಲಿ ಬರೆದಿರುವುದನ್ನು ನೋಡಿ

---

ಸಂಹಿತಾಪಾಠಃ

ಬ್ರಹ್ಮಣಸ್ಪತೇ ತ್ವಮಸ್ಯ ಯನ್ತಾ ಸೂಕ್ತಸ್ಯ ಬೋಧಿ ತನಯಂ ಚ ಜಿನ್ವ ।
ವಿಶ್ವಂ ತದ್ಭದ್ರಂ ಯದವನ್ತಿ ದೇವಾ ಬೃಹದ್ವದೇಮ ವಿದಥೇ ಸುವೀರಾಃ ॥

ಪದಪಾಠಃ

ಬ್ರಹ್ಮಣಃ । ಪತೇ । ತ್ವಂ । ಅಸ್ಯ । ಯನ್ತಾ । ಸುಽಉಕ್ತಸ್ಯ । ಬೋಧಿ । ತನಯಂ । ಚ । ಜಿನ್ವ ।
ವಿಶ್ವಂ । ತತ್ । ಭದ್ರಂ । ಯತ್ । ಅವನ್ತಿ । ದೇವಾಃ । ಬೃಹತ್ । ವದೇಮ । ವಿದಥೇ । ಸುಽವೀರಾಃ ॥
॥ ೧೯ ॥

ಸಾಯಣಭಾಷ್ಯಂ

ಹೇ ಬ್ರಹ್ಮಣಸ್ಪತೇ ಬ್ರಹ್ಮಣಾಂ ಸ್ತೋತ್ರಾಣಾಮಧಿಪತೇ ಅಸ್ಯ ಜಗತೋ ಯಂತಾ ನಿಯಾಮಕಸ್ತ್ವಂ ಸೂಕ್ತಸ್ಯಾಸ್ಮದೀಯಮಿದಂ ಬ್ರಾಹ್ಮಣಸ್ಪತ್ಯಂ ಸೂಕ್ತಂ ಬೋಧಿ। ಬುಧ್ಯಸ್ವ ತ್ವಂ। ತನಯಂ ಪುತ್ರಪೌತ್ರಾದಿಲಕ್ಷಣಂ ಸಂತಾನಂ ಜಿನ್ವ ॥ ಜಿವಿಃ ಪ್ರೀಣನಾರ್ಥಃ । ಲೋಟಿ ರೂಪಂ ॥ ಪ್ರೀಣಯ ಭವಾದೃಶಾ ದೇವಾ ಯದವಂತಿ ರಕ್ಷಂತಿ ತತ್ತಾದೃಶಂ ವಿಶ್ವಂ ಸರ್ವಂ ಭದ್ರಂ ಕಲ್ಯಾಣಂ ಭವತಿ । ಅತೋ ವಯಂ ವಿದಥೇಽಸ್ಮಿನ್ಯಜ್ಞೇ ಸುವೀರಾಃ ಶೋಭನಪುತ್ರಪೌತ್ರಾಃ ಸಂತೋ ಬೃಹತ್ಪ್ರಭೂತಮಿದಂ ಸ್ತೋತ್ರಂ ವದೇಮ । ಬ್ರೂಯಾಮ ॥

ಪ್ರತಿಪದಾರ್ಥ

ಬ್ರಹ್ಮಣಸ್ಪತೇ—ಎಲೈ ಬ್ರಹ್ಮಣಸ್ಪತಿಯೇ । ಅಸ್ಯ—ಈ ಜಗತ್ತಿಗೆ । ಯಂತಾ—ನಿಯಾಮಕನಾದ । ತ್ವಂ—ನೀನು । ಸೂಕ್ತಸ್ಯ—ನಿನ್ನನ್ನುದ್ದೇಶಿಸಿದ ಈ ಸೂಕ್ತವನ್ನು । ಬೋಧಿ—ತಿಳಿ । ತನಯಂ ಚ—ಪುತ್ರಪೌತ್ರಾದಿರೂಪವಾದ (ನಮ್ಮ) ಸಂತಾನವನ್ನೂ । ಜಿನ್ವ—ಸಂತೋಷಪಡಿಸು । ದೇವಾಃ—ನಿನ್ನ ಸದೃಶರಾದ ದೇವತೆಗಳು । ಯದವಂತಿ—ಯಾವ ರಕ್ಷಣೆಯನ್ನು ನೀಡುತ್ತಾರೆಯೋ । ತತ್ ವಿಶ್ವಂ—ಆ ಎಲ್ಲಾ ವಿಧವಾದ ರಕ್ಷಣೆಗಳೂ ಸಹ । ಭದ್ರಂ—ಕಲ್ಯಾಣಾತ್ಮಕವಾಗಿಯೇ ಇರುತ್ತವೆ (ಆದುದರಿಂದ) । ವಿದಥೇ—ಈ ಯಜ್ಞದಲ್ಲಿ । ಸುವೀರಾಃ—ಶ್ರೇಷ್ಠವಾದ ಪುತ್ರಪೌತ್ರಾದಿಗಳಿಂದ ಕೂಡಿದ ನಾವು । ಬೃಹತ್—ಪ್ರಭೂತವಾದ ಸ್ತೋತ್ರವನ್ನು । ವದೇಮ—ಪಠಿಸುವೆವು.

### ಭಾವಾರ್ಥ

ಎಲೈ ಬ್ರಹ್ಮಣಸ್ಪತಿಯೇ, ಈ ಜಗತ್ತಿಗೆ ನಿಯಾಮಕನಾದ ನೀನು ನಿನ್ನನ್ನುದ್ದೇಶಿಸಿದ ಈ ಸೂಕ್ತವನ್ನರಿತು ಸ್ವೀಕರಿಸು. ಪುತ್ರಪೌತ್ರಾದಿರೂಪವಾದ ನಮ್ಮ ಸಂತಾನವನ್ನೂ ಸಂತೋಷಪಡಿಸು, ನಿನ್ನ ಸದೃಶರಾದ ದೇವತೆಗಳು ನೀಡುವ ರಕ್ಷಣೆಗಳೆಲ್ಲವೂ ಕಲ್ಯಾಣಾತ್ಮಕವಾಗಿಯೇ ಇರುತ್ತವೆ. ಆದುದರಿಂದ ಈ ಯಜ್ಞದಲ್ಲಿ ಶ್ರೇಷ್ಠವಾದ ಪುತ್ರ ಪೌತ್ರಾದಿಗಳಿಂದ ಕೂಡಿದ ನಾವು ಪ್ರಭೂತವಾದ ಸ್ತೋತ್ರವನ್ನು ಪಠಿಸುವೆವು.

### English Translation

Brahmanaspati, you are the regulator of this (world), understand (the purport) of (our) hymn, and grant us prosperity: for all is prosperous that the gods protect; (and therefore) may we, blessed with excellent descendants, glorify you at the sacrifice.

### ವಿಶೇಷವಿಷಯಗಳು

ಸೂಕ್ತದ ಉಪಸಂಹಾರರೂಪವಾದ ಈ ಕೊನೆಯ ಋಕ್ಕಿನಲ್ಲಿ ಹಿಂದಿನಂತೆ ರಕ್ಷಣೆಯನ್ನೂ, ಪುತ್ರಪೌತ್ರಾದಿ ಸಂತತಿಯನ್ನೂ, ಧನಾದಿಗಳನ್ನೂ ಕೊಡಬೇಕೆಂದು ಬ್ರಹ್ಮಣಸ್ಪತಿಯನ್ನು ಸ್ತುತಿಸಲಾಗಿದೆ.

**ಬ್ರಹ್ಮಣಸ್ಪತೇ ತ್ವಂ ಅಸ್ಯ ಯಂತಾ**—ಹೇ ಬ್ರಹ್ಮಣಸ್ಪತೇ ಬ್ರಹ್ಮಣಾಂ ಸ್ತೋತ್ರಾಣಾಮಧಿಪತೇ ಅಸ್ಯ ಜಗತೋ ಯಂತಾ ನಿಯಾಮಕಃ । ಎಲೈ ಬ್ರಹ್ಮಣಸ್ಪತಿಯೇ, ನೀನು ಈ ಜಗತ್ತಿಗೆ ನಿಯಾಮಕನು ಎಂದು ಈ ವಾಕ್ಯಕ್ಕೆ ಭಾಷ್ಯಕಾರರ ವಿವರಣೆಯು. ಬ್ರಹ್ಮಶಬ್ದಕ್ಕೆ ಧನವೆಂದೂ ಅರ್ಥವಾಗುವುದರಿಂದ (ನಿ. ೩-೯) ಬ್ರಹ್ಮಣ ಸ್ಪತಿಶಬ್ದಕ್ಕೆ ಧನಗಳಿಗೆ ಅಧಿಪತಿಯೆಂದೂ ಅರ್ಥಮಾಡಬಹುದು. ಆದರೆ ಈ ಋಕ್ಕಿನಲ್ಲಿ **ಸೂಕ್ತಸ್ಯ ಬೋಧಿ** ನಾವು ಮಾಡುತ್ತಿರುವ ಸೂಕ್ತರೂಪವಾದ ಪ್ರಾರ್ಥನೆಯನ್ನು ಕೇಳಿ ತಿಳಿದುಕೋ ಎಂದಿರುವುದರಿಂದ ಬ್ರಹ್ಮಶಬ್ದಕ್ಕೆ ಸ್ತೋತ್ರ ವೆಂಬ ಅರ್ಥವೇ ಸಮಂಜಸವಾಗಿರುವುದು. ಮತ್ತು ಈ ವಾಕ್ಯದಲ್ಲಿರುವ **ಅಸ್ಯ** ಎಂಬ ಶಬ್ದಕ್ಕೆ ಭಾಷ್ಯಕಾರರು **ಜಗತಃ** ಈ ಜಗತ್ತಿಗೆ ಎಂದು ಹೇಳಿರುವ ಅರ್ಥವು ಸಂದರ್ಭೋಚಿತವಾಗಿರುವುದಾದರೂ **ಅಸ್ಯ**—ಈ ಯಜ್ಞದ ಅಥವಾ ಈ ಸ್ತೋತ್ರದ ಎಂಬ ಅರ್ಥವನ್ನೂ ಹೇಳಬಹುದು. ಎಂದರೆ ಎಲೈ ಬ್ರಹ್ಮಣಸ್ಪತಿಯೇ, ನಾವು ಮಾಡುತ್ತಿರುವ ಈ ಯಜ್ಞಕ್ಕೆ ಅಥವಾ ಸ್ತೋತ್ರಕ್ಕೆ ನೀನು ಪ್ರೇರಕನು ಎಂಬ ಅರ್ಥವನ್ನೂ ಹೇಳಬಹುದು.

**ಸೂಕ್ತಸ್ಯ ಬೋಧಿ ತನಯಂ ಚ ಜಿನ್ವ**—ಅಸ್ಮದೀಯಮಿದಂ ಸೂಕ್ತಂ ಬುಧ್ಯಸ್ವ ಪುತ್ರಪೌತ್ರಾದಿ ಲಕ್ಷಣಸಂತಾನಂ ಪ್ರೀಣಯ । ನಾವು ನಿನ್ನ ಅನುಗ್ರಹಕ್ಕಾಗಿ ಪಠಿಸುತ್ತಿರುವ ಸ್ತೋತ್ರರೂಪವಾದ ಈ ಸೂಕ್ತವನ್ನು ತಿಳಿ ಎಂದರೆ ಆದರದಿಂದ ಕೇಳು ಮತ್ತು ಆರೀತಿ ಕೇಳಿ ಅದರಿಂದ ಸಂತುಷ್ಟನಾಗಿ ನಮ್ಮ ಪುತ್ರಪೌತ್ರರೇ ಮೊದಲಾದ ಸಮಸ್ತಬಂಧುಜನರನ್ನು ಸಂತೋಷಪಡಿಸು ಎಂದಭಿಪ್ರಾಯವು. **ತನಯ** ಶಬ್ದವು ಅಪತ್ಯ ನಾಮಗಳಲ್ಲಿ (ನಿ. ೩-೨) ಪಠಿತವಾಗಿರುವುದರಿಂದ **ತನಯಂ** ಎಂದರೆ ಪುತ್ರಪೌತ್ರಾದಿ ಸಂತತಿಯೆಂದರ್ಥವು. ಈ ಶಬ್ದವು **ತನು ವಿಸ್ತಾರೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿ ವಂಶವನ್ನು ವಿಸ್ತಾರಮಾಡುವುದರಿಂದ ಎಂದರೆ ಅಭಿವೃದ್ಧಿಪಡಿಸುವುದರಿಂದ ತನಯಶಬ್ದಕ್ಕೆ ಪುತ್ರ ಮೊದಲಾದ ಸಂತತಿಯೆಂದು ಅವಯವಾರ್ಥವನ್ನು ಹೇಳಬಹುದು.

ವಿಶ್ವಂ ತದ್ಭದ್ರಂ ಯತ್ ಅವಂತಿ ದೇವಾಃ—ಭವಾದೃಶಾ ದೇವಾ ಯದವಂತಿ ರಕ್ಷಂತಿ ತತ್ತಾ-ದೃಶಂ ವಿಶ್ವಂ ಸರ್ವಂ ಭದ್ರಂ ಕಲ್ಯಾಣಂ ಭವತಿ । ಎಲೈ ಬ್ರಹ್ಮಣಸ್ಪತಿಯೇ, ನೀನೂ ನಿನ್ನಂತೆ ನಮ್ಮ ವಿಷಯದಲ್ಲಿ ಅನುಗ್ರಹಬುದ್ಧಿಯುಳ್ಳ ಇತರ ದೇವತೆಗಳೂ, ಯಾವುದನ್ನು ರಕ್ಷಿಸುವರೋ ಅವೆಲ್ಲಾ ಮಂಗಳಕರವಾಗಿಯೇ ಆಗುವುದು. ಎಂದರೆ ದೇವತೆಗಳಿಂದ ರಕ್ಷಿಸಲ್ಪಡುವ ಸಮಸ್ತ ಕರ್ಮವೂ ಮಂಗಳಕರವಾಗಿಯೇ ಸಮಾಪ್ತಿಯನ್ನೈದುವುದು ಎಂದಭಿಪ್ರಾಯವು.

---

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕಭೂಪಾಲಸಾಮ್ರಾಜ್ಯ-ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಋಕ್ಸಂಹಿತಾಭಾಷ್ಯೇ ದ್ವಿತೀಯಾಷ್ಟಕೇ ಷಷ್ಠೋಽಧ್ಯಾಯಃ

॥ ಸಮಾಪ್ತಃ ॥

---

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ದ್ವಿತೀಯಾಷ್ಟಕದಲ್ಲಿ
ಆರನೆಯ ಅಧ್ಯಾಯವು ಸಮಾಪ್ತವಾದುದು.

---



ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ।

ಶುಭಂ ಭೂಯಾತ್

ಮಂಗಳಂ



ಕೆ. ವೆಂಕಟಸುಬ್ಬಯ್ಯ, ಪ್ರಿಂಟರ್, ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್, ಮೈಸೂರು.